

ಋಗ್ವೇದಸಂಹಿತೆ
ಭಾಗ--೧೬
ತೃತೀಯಾಷ್ಟಕದಲ್ಲಿ ಒಂದು, ಎರಡನೆಯ
ಅಧ್ಯಾಯಗಳು
ತೃತೀಯ ಮಂಡಲದ ಸೂಕ್ತಗಳು ೭-೩೯

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೬

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧೬

## ತೃತೀಯಾಷ್ಟಕದಲ್ಲಿ ಒಂದು, ಮತ್ತು ಎರಡನೆಯ ಅಧ್ಯಾಯಗಳು.

ತೃತೀಯ ಮಂಡಲದ ಸೂಕ್ತಗಳು ೭—೩೯



*Translated with Exhaustive Critical Notes and Explanations*

by

**Asthana Mahavidwan**

**H. P. VENKATA RAO**

*Editor*

Printed at
SRI SHAKTHI ELECTRIC PRESS,
MYSORE
1953

Published by the gracious permission of

# His Highness
# Sri Jayachamarajendra Wadiyar Bahadur,
## G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯಕವೈದಿಕವಿದ್ಯಾವರ್ಧಕರೂ ಮೈಸೂರು ದೇಶವನ್ನಾಳುವ
ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ **ಶ್ರೀ ಜಯಚಾಮರಾಜೇಂದ್ರ ಒಡೆಯರ್**
**ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

## ವೇದವಿಮರ್ಶನವಿದ್ವನ್ಮಂಡಲಿ

Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

———

**ಸಹಾಯಕ ವಿದ್ವನ್ಮಂಡಲಿ**

1. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ಸಾಹಿತ್ಯ ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು.
2. ಬ್ರ॥ ಶ್ರೀ॥ G. N. ಚಕ್ರವರ್ತಿ M.A. Professor of Sanskrit St. Philomina's College, Mysore
3. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೋತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು.
4. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತವಿದ್ವಾನ್.
6. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನಪಂಡಿತರು.
7. ಬ್ರ॥ ಶ್ರೀ॥ ವೆಂಕಟರಮಣಾಚಾರ್, M.A., B.T., ಸಾಹಿತ್ಯವಿದ್ವಾನ್.
8. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯವಿದ್ವಾನ್. Govt. Oriental Research Institute, Mysore.
10. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು, Govt. Oriental Research Institute, Mysore.

# ಪೀಠಿಕೆ.

---

**ಅಸ್ಯ ಮಂಡಲಸ್ಯ ದ್ರಷ್ಟಾ ವಿಶ್ವಾಮಿತ್ರಋಷಿಃ** | ವಿಶ್ವಾಮಿತ್ರಋಷಿಯೇ ಈ ಮಂಡಲದ ದ್ರಷ್ಟೃವು ಎಂದು ಸಾಯಣರು ಮೂರನೆಯ ಮಂಡಲದ ಉಪೋದ್ಘಾತದಲ್ಲಿ ತಿಳಿಸಿದ್ದಾರೆ. ಇವರ ಸಂತತಿಯ ಋಷಿಗಳಲ್ಲಿ ಕೆಲವರೂ ಸಹ ಕೆಲವು ಸೂಕ್ತಗಳಿಗೆ ದ್ರಷ್ಟೃಗಳಾಗಿದ್ದರೂ ಸಹ ಒಟ್ಟಿನಲ್ಲಿ ಮೂರನೆಯ ಮಂಡಲವೆಲ್ಲವೂ ವಿಶ್ವಾಮಿತ್ರ ಮಂಡಲವೆಂದೇ ಪ್ರಸಿದ್ಧವಾಗಿದೆ. ವಿಶ್ವಾಮಿತ್ರನು ರಾಜನೇ ಅಥವಾ ಋಷಿಯೇ ಎಂಬ ವಿಷಯದಲ್ಲಿ ಕೆಲವು ಸ್ವಾರಸ್ಯವಾದ ಚರ್ಚೆಗಳಿವೆ. ರಾಜನಾಗಿದ್ದ ವಿಶ್ವಾಮಿತ್ರನು ಋಷಿಯಾದನು ಎಂಬ ಪೌರಾಣಿಕಕಥೆಯು ಪ್ರಸಿದ್ಧವಾಗಿದೆ. ಆದರೆ ಋಕ್ಸಂಹಿತೆಯಲ್ಲೆಲ್ಲಾ ಋಷಿಯೆಂದೇ ವ್ಯವಹಾರವಿರುತ್ತದೆ. ತಾನು ಕುಶಿಕಪುತ್ರನೆಂದು ಮಾತ್ರ ವಿಶ್ವಾಮಿತ್ರನು ಋಕ್ಸಂಹಿತೆಯಲ್ಲಿ ತಿಳಿಸಿರುತ್ತಾನೆ.

**ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯುರಹ್ವೇ ಕುಶಿಕಸ್ಯ ಸೂನುಃ |**

(ಋ. ಸಂ. ೩-೩೩-೫)

ಕುಶಿಕಪುತ್ರನಾದ ನಾನು ರಕ್ಷಣೆಯನ್ನಪೇಕ್ಷಿಸಿದವನಾಗಿ ನನ್ನ ಮುಂದಿರತಕ್ಕ ಶುತುದ್ರೀ ನದಿಯನ್ನು ನಮ್ರತೆಯಿಂದ ಪ್ರಾರ್ಥಿಸಿಕೊಳ್ಳುತ್ತೇನೆ ಎಂದಿರುವ ಮತ್ತು ಇನ್ನೂ ಅಧಿಕವಾದ ಐತಿಹ್ಯವನ್ನು ತೋರಿಸುವ ಸನ್ನಿವೇಶವು ವಿಶ್ವಾಮಿತ್ರನ ದೈವಿಕವಾದ ಸ್ವರೂಪವನ್ನು ತಿಳಿಸುತ್ತದೆ.

**ಆ ತೂ ನ ಇಂದ್ರ ಕೌಶಿಕ ಮಂದಸಾನಃ ಸುತಂ ಪಿಬ |**
**ನವ್ಯಮಾಯುಃ ಪ್ರ ಸೂ ತಿರ ಕೃಧೀ ಸಹಸ್ರಸಾಮೃಷಿಂ ||**

(ಋ. ಸಂ. ೧-೧೦-೧೧)

ಎಲೈ ಕುಶಿಕಪುತ್ರನಾದ ಇಂದ್ರನೇ, ಹರ್ಷಯುಕ್ತವಾದ ಚೇತಸ್ಸಿನಿಂದ ಕೂಡಿದವನಾಗಿ ನಮ್ಮ ಈ ಅಭಿಷ್ಟುತವಾದ ಸೋಮವನ್ನು ಪಾನಮಾಡು ಎಂದು ಇಂದ್ರನನ್ನು ಪ್ರಾರ್ಥಿಸಿದೆ. ಕುಶಿಕಪುತ್ರತ್ವವು ವಿಶ್ವಾಮಿತ್ರನಿಗಲ್ಲವೇ, ಇಂದ್ರನಿಗೆ ಕುಶಿಕಪುತ್ರತ್ವವು ಹೇಗೆ ಎಂಬ ಆಶಂಕೆಯನ್ನು ಸಾಯಣರು ಕೆಳಗಿನ ವಾಕ್ಯಗಳಿಂದ ಪರಿಹರಿಸಿದ್ದಾರೆ.

**ಯದ್ಯಪಿ ವಿಶ್ವಾಮಿತ್ರಃ ಕುಶಿಕಸ್ಯ ಪುತ್ರಸ್ತಥಾಪಿ ತದ್ರೂಪೇಣೇಂದ್ರಸ್ಯೈವೋತ್ಪನ್ನತ್ವಾತ್ ಕುಶಿಕಪುತ್ರತ್ವಮವಿರುದ್ಧಂ | ಅಯಂ ವೃತ್ತಾಂತೋಽನುಕ್ರಮಣಿಕಾಯಾಮುಕ್ತಃ | ಕುಶಿಕಸ್ತ್ವೈಷೀರಥಿರಿಂದ್ರತುಲ್ಯಂ ಪುತ್ರಮಿಚ್ಛನ್ ಬ್ರಹ್ಮಚರ್ಯಂ ಚಚಾರ | ತಸ್ಯೇಂದ್ರ ಏವ ಗಾಥೀಪುತ್ರೋ ಜಜ್ಞೇ ಇತಿ** (ಅನು. ೩-೧)

ಕುಶಿಕಮಹರ್ಷಿಯು ಇಂದ್ರನಿಗೆ ಸಮಾನನಾದ ಪುತ್ರನನ್ನು ಪಡೆಯಬೇಕೆಂದಿಚ್ಛಿಸಿ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದನು. ಆಗ ಇಂದ್ರನೇ ಗಾಥೀಪುತ್ರನಾಗಿ ಜನಿಸಿದನು ಎಂಬ ಅಂಶವು ಅನುಕ್ರಮಣಿಕೆಯಲ್ಲಿ ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ರೂಢಿಯಲ್ಲಿ ಕುಶಿಕಪುತ್ರನೆಂದರೆ ವಿಶ್ವಾಮಿತ್ರನೆಂದೇ ಪ್ರಸಿದ್ಧಿಯಿದ್ದರೂ ಸಹ ಇಂದ್ರನೇ ಆ ರೂಪದಲ್ಲಿ ಜನಿಸಿದುದರಿಂದ ಇಂದ್ರನನ್ನೂ ಕುಶಿಕಪುತ್ರನೆಂದು ನಿರ್ದೇಶಿಸಿದೆಯೆಂದು ಸಮಾಧಾನವನ್ನು ತಿಳಿಸಿದ್ದಾರೆ. ಈ ವಿವರಣೆಯು ವಿಶ್ವಾಮಿತ್ರನ ಕ್ಷತ್ರಿಯತ್ವವನ್ನು ತಿಳಿಸುವುದಾಗಿದೆ. ನಿರುಕ್ತಕಾರರು ಕುಶಿಕನನ್ನು ರಾಜನೆಂದು ತಿಳಿಸಿದ್ದಾರೆ.

ತತ್ರೇತಿಹಾಸಮಾಚಕ್ಷತೇ ವಿಶ್ವಾಮಿತ್ರಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ । ವಿಶ್ವಾಮಿತ್ರಃ ಸರ್ವಮಿತ್ರಃ ಸರ್ವಂ ಸಂಸೃತಂ ಸುದಾಃ ಕಲ್ಯಾಣದಾನಃ ಪೈಜವನಃ ಪಿಜವನಸ್ಯ ಪುತ್ರಃ । ಪಿಜವನಃ ಪುನಃ ಸ್ಪರ್ಧನೀಯಜವೋ ವಾಮಿಶ್ರೀಃ ಭಾವಗತಿರ್ವಾ ॥ ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ । ಅನುಯಯುರಿತರೇ । ಸ ವಿಶ್ವಾಮಿತ್ರೋ ನದೀಸ್ತುಷ್ಟಾವ ಗಾಥಾ ಭವತ ಇತಿ ।

(ನಿ. ೨-೨೪)

ಇಲ್ಲಿ ಒಂದು ಇತಿಹಾಸರೂಪವಾದ ಕಥೆಯಿದೆ. ವಿಶ್ವಾಮಿತ್ರನು ಪಿಜವನಪುತ್ರನಾದ ಸುದಾಸನಿಗೆ ಪುರೋಹಿತನಾಗಿದ್ದನು. ಅಲ್ಲಿ ಅಧಿಕವಾದ ದ್ರವ್ಯವನ್ನು ಸಂಪಾದಿಸಿಕೊಂಡು ಸ್ವಸ್ಥಾನಕ್ಕೆ ಹೋಗುತ್ತಿರುವಾಗ ವಿಪಾಟ್ ಮತ್ತು ಶುತುದ್ರೀ ಎಂಬ ನದಿಗಳ ಸಂಗಮಸ್ಥಾನವನ್ನು ಸೇರಿ ಪ್ರಭೂತವಾದ ಪ್ರವಾಹದಿಂದ ಕೂಡಿದ ಆ ನದಿಗಳನ್ನು ತನಗೆ ದಾಟಲು ಅನುಕೂಲಮಾಡಿಕೊಡಬೇಕೆಂದು ಪ್ರಾರ್ಥಿಸುತ್ತಾನೆ ಎಂದಿದೆ. ಇದೇ ಅಂಶವನ್ನು ಸಾಯಣರೂ ಸಹ ವಿವರಿಸಿದ್ದಾರೆ. ಸಾಯಣರ ವಿವರಣೆಯನ್ನು ಇದೇ ಭಾಗದಲ್ಲಿ ಮುಂದೆ ಮೂವತ್ತಮೂರನೆಯ ಸೂಕ್ತದ ಉಪೋದ್ಘಾತದಲ್ಲಿ ತಿಳಿಸಿದೆ. (ಋ. ಸಂ. ೩-೩೩). ಆದರೆ, ಋಕ್ಸಂಹಿತೆಯಲ್ಲಿ ಎಂದರೆ, ಈ ಸಂದರ್ಭವನ್ನು ಕಥಾರೂಪದಲ್ಲಿ ತಿಳಿಸುವ ೩-೩೩ನೇ ಸೂಕ್ತದಲ್ಲಿ ಸುದಾಸನ ಹೆಸರಿಲ್ಲ. ಕೇವಲ ವಿಶ್ವಾಮಿತ್ರ ಮತ್ತು ಭರತರ ನಾಮನಿರ್ದೇಶವಿದೆ. ಈ ಭರತರಾರು, ಇವರಿಗೂ ಸುದಾಸನಿಗೂ ಯಾವ ಸಂಬಂಧವಿತ್ತು ಎಂಬುದನ್ನು ಪ್ರಕೃತದಲ್ಲೇ ತಿಳಿಸಲಾಗುತ್ತದೆ. ಋ. ಸಂ. ೩-೩೩ನೇ ಸೂಕ್ತದ ಸಾರಾಂಶವನ್ನು ಆ ಸೂಕ್ತದಲ್ಲಿ ತಿಳಿಸಿದೆ. ಅಲ್ಲದೇ ವಿಶ್ವಾಮಿತ್ರನ ಪರಿಚಯವು ಇದೇ ಮಂಡಲದ ೫೩ನೇ ಸೂಕ್ತದಿಂದಲೂ ಸ್ವಲ್ಪ ವಿವೃತವಾಗಿ ತಿಳಿಸಲ್ಪಟ್ಟಿದೆ.

ಇಮೇ ಭೋಜಾ ಅಂಗಿರಸೋ ವಿರೂಪಾ ದಿವಸ್ಪುತ್ರಾಸೋ ಅಸುರಸ್ಯ ವೀರಾಃ ।
ವಿಶ್ವಾಮಿತ್ರಾಯ ದದತೋ ಮಘಾನಿ ಸಹಸ್ರಸಾವೇ ಪ್ರ ತಿರಂತ ಆಯುಃ ॥

(ಋ. ಸಂ. ೩-೫೩-೭)

ಎಲೈ ಇಂದ್ರನೇ, ಅಂಗಿರಾಋಷಿಗಳೇ ಋತ್ವಿಕ್ಕುಗಳಾಗಿ ಉಳ್ಳ ಈ ಭೋಜರೂ ಎಂದರೆ ಸುದಾಸೋತ್ಪನ್ನರಾದ ಕ್ಷತ್ರಿಯರೂ, ಮರುತ್ತುಗಳೂ ಇಲ್ಲಿ ನೆರವೇರತಕ್ಕ ಅಶ್ವಮೇಧವಲ್ಲಿ ವಿಶ್ವಾಮಿತ್ರನಾದ ನನಗೆ ಪ್ರಭೂತವಾದ ಸಂಪತ್ತನ್ನೊದಗಿಸಿದ್ದಾರೆ.

ಮಹಾँ ಋಷಿರ್ದೇವಜಾ ದೇವಜೂತೋಽಸ್ತಭ್ನಾತ್ಸಿಂಧುಮರ್ಣವಂ ನೃಚಕ್ಷಾಃ ।
ವಿಶ್ವಾಮಿತ್ರೋ ಯದವಹತ್ಸುದಾಸಮಪ್ರಿಯಾಯತ ಕುಶಿಕೇಭಿರಿಂದ್ರಃ ॥

(ಋ. ಸಂ. ೩-೫೩-೯)

ಅತಿಶಯವಾದ ಸಾಮರ್ಥ್ಯವುಳ್ಳವನೂ, ಅತೀಂದ್ರಿಯದ್ರಷ್ಟೃವೂ, ಪ್ರಕಾಶಮಾನವಾದ ತೇಜಸ್ಸುಗಳ ಉತ್ಪಾದಕನೂ, ಕರ್ಮಕರ್ತರಿಗೆ ಮಾರ್ಗದರ್ಶಕನೂ ಆದ ವಿಶ್ವಾಮಿತ್ರನೆಂಬ ಮಹರ್ಷಿಯು ವಿಪಾಟ್ಛುತುದ್ರಿಗಳ ಸಂಗಮರೂಪವಾದ ಪ್ರವಾಹದ ವೇಗವನ್ನು ತಡೆಗಟ್ಟಿದನು. ಇದೇ ವಿಶ್ವಾಮಿತ್ರನು ಸುದಾಸನೆಂಬ ರಾಜನಿಗಾಗಿ ಯಜ್ಞವನ್ನು ನಿರ್ವಹಿಸಿದಾಗ ಕುಶಿಕಗೋತ್ರೋತ್ಪನ್ನರಾದ ಋಷಿಗಳೊಂದಿಗೆ ಇಂದ್ರನು ಸಂತೋಷಪಟ್ಟನು.

ಯ ಇಮೇ ರೋದಸೀ ಉಭೇ ಅಹಮಿಂದ್ರಮತುಷ್ಟವಂ ।
ವಿಶ್ವಾಮಿತ್ರಸ್ಯ ರಕ್ಷತಿ ಬ್ರಹ್ಮೇದಂ ಭಾರತಂ ಜನಂ ॥

(ಋ. ಸಂ. ೩-೫೩-೧೨)

ಎಲೈ ಕುಶಿಕಪುತ್ರರೇ, ವಿಶ್ವಾಮಿತ್ರನಾದ ನಾನು ಇಂದ್ರನೊಡಗೂಡಿದ ದ್ಯಾವಾಪೃಥಿವಿಗಳನ್ನು ಪ್ರಾರ್ಥಿಸುತ್ತೇನೆ. ವಿಶ್ವಾಮಿತ್ರಕೃತವಾದ ಈ ಪ್ರಾರ್ಥನೆಯು ಭರತವಂಶದ ಜನರನ್ನೇ ಪೂರ್ಣವಾಗಿ ರಕ್ಷಿಸುತ್ತದೆ. ಅಂತಹ ಇಂದ್ರನ ಅನುಗ್ರಹವನ್ನು ಈ ಸ್ತುತಿಯಿಂದ ಸಂಪಾದಿಸುತ್ತೇನೆ ಎಂದಿರುತ್ತದೆ. ಇದೇ ಸೂಕ್ತದಲ್ಲಿ ಕೊನೆಯ ನಾಲ್ಕು ಮಂತ್ರಗಳೂ ಐತಿಹಾಸಿಕದೃಷ್ಟಿಯಿಂದ ಪ್ರಸಿದ್ಧವಾಗಿವೆ. **ಇಂದ್ರೋತಿಭಿರ್ಬಹುಲಾಭಿರ್ನೋ ಅದ್ಯ** ಎಂಬ ೨೧ನೇ ಮಂತ್ರದಿಂದ **ಇಮ ಇಂದ್ರ ಭರತಸ್ಯ ಪುತ್ರಾಃ** ಎಂಬ ೨೪ ಮಂತ್ರಗಳವರೆಗಿರುವ ಈ ನಾಲ್ಕು ಮಂತ್ರಗಳೂ ವಿಶ್ವಾಮಿತ್ರನಿಗೂ ವಸಿಷ್ಠ ಮತ್ತು ತತ್ಸಂತತಿಯವರಿಗೂ ಇರತಕ್ಕ ಬದ್ಧದ್ವೇಷವನ್ನು ತಿಳಿಸುತ್ತದೆ. ಈ ಮಂತ್ರಗಳ ಸಾರಾಂಶವನ್ನು ಮುಂದೆ ವಸಿಷ್ಠನಿಗೂ ವಿಶ್ವಾಮಿತ್ರನಿಗೂ ಇರತಕ್ಕ ಸಂಬಂಧ ಮತ್ತು ವಿರೋಧಗಳನ್ನು ತಿಳಿಸುವಾಗ ವಿವರಿಸಲಾಗುತ್ತದೆ.

ಅದೇ ವಿಶ್ವಾಮಿತ್ರನಲ್ಲಿ ಬ್ರಹ್ಮ ಮತ್ತು ಕ್ಷಾತ್ರಶಕ್ತಿಗಳೆರಡೂ ಇರುವಂತೆ ಅನೇಕಕಡೆಗಳಲ್ಲಿ ವರ್ಣಿತವಾಗಿರುತ್ತದೆ. ಉದಾಹರಣೆಗೆ—

**ಕುವಿನ್ಮಾ ಗೋಪಾಂ ಕರಸೇ ಜನಸ್ಯ ಕುವಿದ್ರಾಜಾನಂ ಮಘವನ್ನೃಜೀಷಿನ್ ।**
**ಕುವಿನ್ಮ ಋಷಿಂ ಪಪಿವಾಂಸಂ ಸುತಸ್ಯ ಕುವಿನ್ಮೇ ವಸ್ವೋ ಅಮೃತಸ್ಯ ಶಿಕ್ಷಾಃ ॥**

(ಋ. ಸಂ. ೩-೪೩-೫)

ಎಲೈ ಇಂದ್ರನೇ, ನನ್ನನ್ನು ಪ್ರಜೆಗಳಿಗೆ ರಕ್ಷಕನನ್ನಾಗಿ ಮಾಡು. ನನ್ನನ್ನು ಸಕಲರಿಗೂ ರಾಜನಾಗಿರುವಂತೆ ಮಾಡು. ಮತ್ತು ನನಗೆ ಅತೀಂದ್ರಿಯಾರ್ಥದರ್ಶನ ಸಾಮರ್ಥ್ಯವನ್ನು ಕೊಟ್ಟು ನನ್ನನ್ನು ಋಷಿಯನ್ನಾಗಿ ಮಾಡು. ನನಗೂ ಸೋಮಪಾನಾರ್ಹತೆಯನ್ನು ಕೊಡು ಇತ್ಯಾದಿಯಾಗಿ ಉಭಯವಿಧವಾದ ಶಕ್ತಿಯನ್ನೂ ಪ್ರಾರ್ಥಿಸಿದೆ. (ಸುದಾಸನ ಪೌರೋಹಿತ್ಯವನ್ನು ವಹಿಸಿದ್ದನು ಎಂದು ತಿಳಿಸುವ ಪ್ರಕರಣದಲ್ಲಿ ಈ ಅಂಶವು ಸ್ಪಷ್ಟವಾಗಿರುತ್ತದೆ.) ಮೂರನೆಯ ಮಂಡಲದಲ್ಲಿ ವಿಶ್ವಾಮಿತ್ರನು ಅನೇಕ ಸೂಕ್ತಗಳಿಗೆ ದ್ರಷ್ಟೃವಾಗಿರುತ್ತಾನೆ. ಇವನ ಸಂತತಿಯವರು ಉಳಿದ ಸೂಕ್ತಗಳ ದ್ರಷ್ಟೃಗಳು, **ವಿಶ್ವಾಮಿತ್ರ, ಋಷಭ, ಉತ್ಕೀಲ, ಕತ, ದೇವಶ್ರವಸ್, ಪ್ರಜಾಪತಿ, ವಾಚ್ಯ** ಇತ್ಯಾದಿಋಷಿಗಳೆಲ್ಲಾ ಮೂರನೆಯ ಮಂಡಲದ ದ್ರಷ್ಟೃಗಳೆಂದು ವಿದಿತರಾಗಿದ್ದಾರೆ. ಅವರೆಲ್ಲರೂ ವಿಶ್ವಾಮಿತ್ರ ಸಂತತಿಯವರು. ವಿಶ್ವಾಮಿತ್ರನಿಗೆ ಕುಶಿಕನೆಂಬ ಹೆಸರು ಹೇಗೆ ಪ್ರಸಿದ್ಧವಾಗಿದೆಯೋ, ಅದರಂತೆ, ಈ ಋಷಿಗಳೆಲ್ಲರೂ ಸಹ ಕುಶಿಕರೆಂದೇ ಪ್ರಖ್ಯಾತರಾಗಿದ್ದಾರೆ. ಮತ್ತು ತಮ್ಮನ್ನೂ ಸಹ ಅದೇ ಹೆಸರಿನಿಂದಲೇ ನಿರ್ದೇಶಿಸಿಕೊಂಡಿದ್ದಾರೆ. ಇನ್ನು ಕಲವೆಡೆಗಳಲ್ಲಿ ವಿಶ್ವಾಮಿತ್ರರೆಂದೂ ವ್ಯವಹಾರವುಂಟು.

**ವಿಶ್ವಾಮಿತ್ರಾ ಅರಾಸತ ಬ್ರಹ್ಮೇಂದ್ರಾಯ ವಜ್ರಿಣೇ । ಕರದಿನ್ನಃ ಸುರಾಧಸಃ ॥**

(ಋ. ಸಂ. ೩-೫೩-೧೩)

ವಜ್ರಾಯುಧಧಾರಿಯಾದ ಇಂದ್ರನಿಗೆ ವಿಶ್ವಾಮಿತ್ರೋದ್ಭವರು ಸ್ತುತಿಪಾಠಗಳನ್ನು ನಿರ್ಮಿಸಿ ಅರ್ಪಿಸಿದರು. ಇಂದ್ರನು ಅವರಿಗೆ ಅನ್ನದಾತನಾದನು.

**ಜನ್ಮನ್‌ಜನ್ಮನ್ ನಿಹಿತೋ ಜಾತವೇದಾ ವಿಶ್ವಾಮಿತ್ರೇಭಿರಿಧ್ಯತೇ ಅಜಸ್ರಃ ।**

(ಋ. ಸಂ. ೩-೧-೨೧)

ಮರಣರಹಿತನಾದ ಜಾತವೇದೋಽಗ್ನಿಯು ವಿಶ್ವಾಮಿತ್ರನ ಸಂತತಿಯವರಿಂದ ಅನುಸ್ಯೂತವಾಗಿ ಪ್ರಜ್ವಲಿತನಾಗುತ್ತಾನೆ.

**ಉಚ್ಛೋಚಿಷಾ ಸಹಸಸ್ಪುತ್ರ ಸ್ತುತೋ ಬೃಹದ್ವಯಃ ಶಶಮಾನೇಷು ಧೇಹಿ ।**
**ರೇವದಗ್ನೇ ವಿಶ್ವಾಮಿತ್ರೇಷು ಶಂ ಯೋರ್ಮರ್ಮೃಜ್ಮಾ ತೇ ತನ್ವಂ೧ ಭೂರಿ ಕೃತ್ವಃ ॥**

(ಋ. ಸಂ. ೩-೧೮-೪)

ಶಕ್ತಿಪುತ್ರನಾದ ಎಲೈ ಅಗ್ನಿಯೇ, ನೀನು ಸ್ತುತನಾದೊಡನೆಯೇ ನಿನ್ನ ಊರ್ಧ್ವಮುಖವಾದ ಜ್ವಾಲೆಯಿಂದ ಸ್ತೋತೃಜನರಿಗೆ ಉತ್ತೇಜಕನಾಗುತ್ತೀಯೆ. ವಿಶ್ವಾಮಿತ್ರವಂಶಜರಿಗೆ ಅತ್ಯಧಿಕವಾದ ಸಂಪತ್ತನ್ನೂ ಸುಖವನ್ನೂ ಅನುಗ್ರಹಿಸು. ಇತ್ಯಾದಿಯಾದ ಅನೇಕ ಮಂತ್ರಗಳಲ್ಲಿ ವಿಶ್ವಾಮಿತ್ರರೆಂಬ ಬಹುವಚನವು ವಿಶ್ವಾಮಿತ್ರವಂಶೋತ್ಪನ್ನರಾದ ಎಲ್ಲಾ ಋಷಿಗಳನ್ನೂ ನಿರ್ದೇಶಿಸುವುದಾಗಿದೆ.

ಇದೇ ವಿಶ್ವಾಮಿತ್ರನು **ಕುಶಿಕ**ನೆಂದು ಪ್ರಸಿದ್ಧವಾಗಿರುವ ವಿಷಯವನ್ನು ಮೇಲೆ ತಿಳಿಸಿದೆ. ಇದೇ ಕಾರಣದಿಂದಲೇ, ಈ ವಂಶೋತ್ಪನ್ನರಾದ ಋಷಿಗಳೂ ಸಹ **ಕುಶಿಕ**ರೆಂದೇ ತಮ್ಮನ್ನು ನಿರ್ದೇಶಿಸಿಕೊಂಡಿದ್ದಾರೆ.

**ದ್ಯುಮ್ನವದ್ಬ್ರಹ್ಮ ಕುಶಿಕಾಸ ಏರಿರ ಏಕಏಕೋ ದಮೇ ಅಗ್ನಿಂ ಸಮೀಧಿರೇ ।**
(ಋ. ಸಂ. ೩-೨೯-೧೫)

ಕುಶಿಕರು ಉತ್ಸಾಹಪೂರಿತವಾದ ಸ್ತುತಿಯನ್ನರ್ಪಿಸಿದ್ದಾರೆ. ಅವರು ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡಿ ಪ್ರತಿಯೊಂದು ಗೃಹದಲ್ಲೂ ಪ್ರಜ್ವಲಿತನಾದ ಅಗ್ನಿಯನ್ನು ಪೂಜಿಸುತ್ತಾರೆ.

**ಇಮಂ ಕಾಮಂ ಮಂದಯಾ ಗೋಭಿರಶ್ವೈಶ್ಚಂದ್ರವತಾ ರಾಧಸಾ ಪಪ್ರಥಶ್ಚ ।**
**ಸ್ವರ್ಯವೋ ಮತಿಭಿಸ್ತುಭ್ಯಂ ವಿಪ್ರಾ ಇಂದ್ರಾಯ ವಾಹಃ ಕುಶಿಕಾಸೋ ಅಕ್ರನ್ ॥**

ಅಶ್ವಗಳನ್ನೂ ಗೋವುಗಳನ್ನೂ ಅಪೇಕ್ಷಿಸುವ ಈ ನಮ್ಮ ಇಷ್ಟಾರ್ಥಗಳನ್ನು ಸಿದ್ಧಿಗೊಳಿಸು. ಸ್ವರ್ಗಾಪೇಕ್ಷಿಗಳಾದ ಕುಶಿಕರು ನಿನ್ನನ್ನುದ್ದೇಶಿಸಿ ಶ್ರದ್ಧಾಪೂರ್ವಕವಾದ ಸ್ತುತಿಯನ್ನು ನಿರ್ಮಿಸಿದ್ದಾರೆ.

**ತ್ವಾಂ ಸುತಸ್ಯ ಪೀತಯೇ ಪ್ರತ್ನಮಿಂದ್ರ ಹವಾಮಹೇ । ಕುಶಿಕಾಸೋ ಅವಸ್ಯವಃ ॥**
(೩-೪೨-೯)

ಎಲೈ ಇಂದ್ರನೇ, ರಕ್ಷಣಾಪೇಕ್ಷಿಗಳಾದ ಕುಶಿಕರೆಂದು ಪ್ರಸಿದ್ಧರಾದ ನಾವು ನಿನ್ನನ್ನು ಸೋಮಪಾನಕ್ಕಾಗಿ ಪ್ರಾರ್ಥಿಸಿ ಕರೆಯುತ್ತೇವೆ. ಇತ್ಯಾದಿ ಮಂತ್ರಗಳಲ್ಲಿ ವಿಶ್ವಾಮಿತ್ರರೂ ಕುಶಿಕರೂ ತಾವೇ ಅತ್ಯಂತ ಪ್ರಾಚೀನರಾದ ಅಗ್ನಿಪೂಜಕರೆಂದು ಹೇಳಿಕೊಂಡಿರುವುದು ತಿಳಿಯುತ್ತದೆ. ಅಲ್ಲದೇ, ತಾವೇ ಅತ್ಯುತ್ತಮವಾದ ಸ್ತುತಿಕರ್ತೃಗಳೆಂದೂ ಮತ್ತು ಪ್ರಾಜ್ಞರೂ ಅತೀಂದ್ರಿಯಾರ್ಥಜ್ಞಾನವುಳ್ಳವರೂ ಆದ ಋಷಿಗಳೆಂದೂ ಹೇಳಿಕೊಂಡಿದ್ದಾರೆ.

ಮೇಲೆ **ಆ ತೂ ನ ಇಂದ್ರ ಕೌಶಿಕ** (ಋ.ಸಂ. ೧-೧೦-೧೧) ಎಂಬ ಮಂತ್ರವನ್ನುದಾಹರಿಸಿ ಇಂದ್ರನೇ ವಿಶ್ವಾಮಿತ್ರರೂಪದಲ್ಲಿ ಹುಟ್ಟಿದುದರಿಂದ ಇಂದ್ರನೂ ಕುಶಿಕನೆಂದೇ ಸಂಬೋಧಿತನಾಗಿದ್ದಾನೆಂದು ತಿಳಿಸಿದೆ. ವಿಶ್ವಾಮಿತ್ರನಿಗೂ ತದ್ವಂಶೀಯರಿಗೂ ಕುಶಿಕತ್ವವು ಹೇಗೆ ಎಂಬುದನ್ನು ರಾಮಾಯಣದಲ್ಲಿ ಈರೀತಿ ತಿಳಿಸಿದೆ.

ಈ ವಿಶ್ವಾಮಿತ್ರನ ವಂಶವು ಸಾಕ್ಷಾದ್ಬ್ರಹ್ಮನಿಂದಲೇ ಹುಟ್ಟಿದುದು. ಬ್ರಹ್ಮನಿಂದ ಕುಶನೆಂಬ ರಾಜನು ಹುಟ್ಟಿದನು. ಆತನಿಗೆ ಮಹಾಬಲಶಾಲಿಯಾಗಿ ಪರಮಧಾರ್ಮಿಕನಾದ ಕುಶನಾಭನೆಂಬುವನು ಹುಟ್ಟಿದನು. ಆತನಿಂದ **ಗಾಥಿ** ಯೆಂಬುವನು ಹುಟ್ಟಿದನು. ಆ ಗಾಥಿಯ ಪುತ್ರನೇ ಈ ಮಹಾತೇಜಸ್ವಿಯಾದ ವಿಶ್ವಾಮಿತ್ರನು ಎಂದಿದೆ. ಆದರೆ ಈ ಗಾಥಿಪುತ್ರನೆಂಬುದು ವೈದಿಕವಾಕ್ಯಗಳಲ್ಲೂ ಹೇಳಲ್ಪಟ್ಟದೆಯೇ ಎಂಬುದನ್ನು ಪರಿಶೀಲಿಸಬೇಕು.

ಸರ್ವಾನುಕ್ರಮಣಿಯಲ್ಲೂ ಸಹ ಗಾಥಿಯನ್ನು ಕುಶಿಕಪುತ್ರನೆಂದು ತಿಳಿಸಿದೆ. ಆದರೆ ಇದಕ್ಕೆ ವೈದಿಕವಾಕ್ಯಗಳ ಆಧಾರವೇನು, ಪುರಾಣವಾಕ್ಯಗಳಲ್ಲಿ ಹೇಳಿರುವುದಕ್ಕೂ ವೈದಿಕವಾಕ್ಯಗಳಲ್ಲಿ ವರ್ಣಿತವಾಗಿರುವುದಕ್ಕೂ ವ್ಯತ್ಯಾಸವಿದೆಯೇ ಎಂಬ ಅಂಶವು ಗಮನಾರ್ಹವಾದುದು.

**ಪುರ ಏತ್ರಾ ವೀರವಂಶೋ ದೇವರಾತೇನ ಗಾಥಿನಾಃ । ಸರ್ವೆ ರಾಧ್ಯಾಃ ಸ್ಥ ಪುತ್ರಾ ಏಷ ವಃ ಸದ್ವಿವಾಚನಂ । ಏಷ ವಃ ಕುಶಿಕಾ ವೀರೋ ದೇವರಾತಸ್ತಮನ್ವಿತ ॥**

(ಐ. ಬ್ರಾ. ೭-೧೮)

ಎಂಬಲ್ಲಿ ಸಾಯಣರು ವ್ಯಾಖ್ಯಾನವನ್ನು ಹೇಳುತ್ತಾ, **ಗಾಥಿನ** ಶಬ್ದಃ **ವಿಶ್ವಾಮಿತ್ರಸ್ಯ ಪಿತರಮಾಚಷ್ಟೇ । ಹೇ ಗಾಥಿನಾಃ ಗಾಥಿಪೌತ್ರಾಃ** । ಗಾಥಿಯು ವಿಶ್ವಾಮಿತ್ರನ ತಂದೆಯು. ಗಾಥಿಯ ಪೌತ್ರರಾದುದರಿಂದ ವಿಶ್ವಾಮಿತ್ರಪುತ್ರರಿಗೆ ಗಾಥಿನಾಃ ಎಂಬ ಸಂಜ್ಞೆಯು ಎಂದು ಹೇಳಿ ಪುನಃ **ಕುಶಿಕಾಃ** ಎಂಬ ಪದದ ತಾತ್ಪರ್ಯವನ್ನು ವಿವರಿಸುತ್ತಾರೆ. **ಹೇ ಕುಶಿಕಾಃ ಕುಶಿಕನಾಮ್ನಃ ಮತ್ಪಿತಾಮಹಸ್ಯ ಸಂಬಂಧಿನಃ** ಇತ್ಯಾದಿಯಾಗಿ **ಗಾಥಿನಃ; ಕುಶಿಕಃ** ಎಂಬ ಎರಡು ವಿಶೇಷಣಗಳೂ ಒಂದೇ ವ್ಯಕ್ತಿಯನ್ನು ನಿರ್ದೇಶಿಸುತ್ತಿದೆಯೆಂದು ತಿಳಿಸುತ್ತಾರೆ.

ಹೀಗೆ ವಿಶ್ವಾಮಿತ್ರನು ಗಾಥಿಪುತ್ರನೆಂದೂ, ಇಂದ್ರನೇ ವಿಶ್ವಾಮಿತ್ರನ ಉತ್ಪತ್ತಿಗೆ ಮೂಲನಾದುದರಿಂದ ವಿಶ್ವಾಮಿತ್ರನಲ್ಲಿ ದೈವಾಂಶವಿರುತ್ತದೆಂದೂ, ಇಂತಹ ದೈವಾಂಶಸಂಭೂತನಾದ ಮಹರ್ಷಿಯಲ್ಲಿ ಋಷಿತ್ವವೂ ರಾಜತ್ವವೂ ಒಟ್ಟಿಗೆ ಕೂಡಿಕೊಂಡಿರುವುದರಲ್ಲಿ ಏನೂ ಆಶ್ಚರ್ಯವಿಲ್ಲವೆಂದೂ, ವೈದಿಕ ಮತ್ತು ಪೌರಾಣಿಕವಾಕ್ಯಗಳೆಲ್ಲವೂ ಒಂದೇ ರೀತಿಯಲ್ಲಿ ತಿಳಿಸುತ್ತದೆ. ವಿಶ್ವಾಮಿತ್ರನ ಅತ್ಯಂತ ಶ್ರೇಷ್ಠವಾದ ಗುಣಗಳನ್ನು ಒಟ್ಟಿಗೆ ಸೇರಿಸಿ, **ಮಹಾ ಋಷಿರ್ದೇವಜಾ** (ಋ. ಸಂ. ೩-೫೩-೯) ಎಂಬ ಮೇಲೆ ಉದಾಹೃತವಾಗಿರುವ ಮಂತ್ರದಲ್ಲಿ ತಿಳಿಸುವಾಗ **ದೇವಜಾಃ** ಎಂಬ ವಿಶೇಷಣವು ವಿಶ್ವಾಮಿತ್ರನ ಈ ದೈವಾಂಶವನ್ನು ತಿಳಿಸುತ್ತದೆಂದು ಕೆಲವರ ಅಭಿಪ್ರಾಯವಾಗಿರುತ್ತದೆ. ಮಂತ್ರಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ **ತತ್ಸವಿತುರ್ವರೇಣ್ಯಂ** (ಋ. ಸಂ. ೩-೬೨-೧೦) ಎಂಬ ಮಂತ್ರದ್ರಷ್ಟೃವಾದ ವಿಶ್ವಾಮಿತ್ರನು ರಾಜನ್ಯನಾಗಿದ್ದರೂ, ಅವನ ದಿವ್ಯತ್ವವೂ ಅತೀಂದ್ರಿಯಾರ್ಥದರ್ಶನಕ್ಕೆ ಯೋಗ್ಯವಾದ ಋಷಿತ್ವವೂ ಅತ್ಯಧಿಕವಾಗಿದ್ದವು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ಮಹರ್ಷಿಯೇ ರಾಜಪುರೋಹಿತನಾಗಿಯೂ ಆಗಿದ್ದನು ಎಂದು ಋಕ್ಸಂಹಿತಾವಾಕ್ಯಗಳು ತಿಳಿಸುತ್ತವೆ.

ಆದರೆ, ಈ ಸಂದರ್ಭದಲ್ಲಿ ಇನ್ನೊಂದು ಸಮಸ್ಯೆಯು ಉದ್ಭವಿಸುತ್ತದೆ. ವಿಶ್ವಾಮಿತ್ರನ ರಾಜಪೌರೋಹಿತ್ಯವನ್ನು ವರ್ಣಿಸುವಾಗ ಆ ಸಂದರ್ಭದಲ್ಲೇ ವಿಶ್ವಾಮಿತ್ರನಿಗೂ ವಸಿಷ್ಠನಿಗೂ ಇದ್ದ ಸಂಬಂಧವು ಯಾವ ರೀತಿಯದು ಎಂಬ ವಿಷಯವೂ ಇತ್ಯರ್ಥವಾಗಬೇಕಾಗುತ್ತದೆ. ವಿಶ್ವಾಮಿತ್ರನು ಯಾವ ರಾಜನ ಪುರೋಹಿತನೋ, ವಸಿಷ್ಠನೂ ಅದೇ ರಾಜನ ಪುರೋಹಿತನು ಎಂಬುದು ವೈದಿಕವಾಕ್ಯಗಳಿಂದಲೇ ತಿಳಿಯುತ್ತದೆ. ಆದುದರಿಂದ ವಿಶ್ವಾಮಿತ್ರ ಮತ್ತು ವಸಿಷ್ಠ ಇವರಿಬ್ಬರೂ ಒಂದೇ ಕಾಲದಲ್ಲಿ ಒಬ್ಬನೇ ರಾಜನಿಗೆ ಪುರೋಹಿತರಾಗಿದ್ದರೇ, ಅವರಿಬ್ಬರೂ ಸ್ನೇಹಿತರಾಗಿದ್ದರೇ ಅಥವಾ ಪರಸ್ಪರ ವಿರೋಧಿಗಳಾಗಿದ್ದುಕೊಂಡೇ ಒಂದೇ ರಾಜನಲ್ಲಿ ಸಮಕಾಲಿಕವಾದ ಪೌರೋಹಿತ್ಯವನ್ನು ವಹಿಸಿದ್ದರೇ ಇತ್ಯಾದಿ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ತಿಳಿಯಬೇಕಾಗುತ್ತದೆ.

**ಧೇನುಂ ನ ತ್ವಾ ಸೂಯವಸೇ ದುದುಕ್ಷನ್ನುಪ ಬ್ರಹ್ಮಾಣಿ ಸಸೃಜೇ ವಸಿಷ್ಠಃ ।**
**ತ್ವಾಮಿನ್ಮೇ ಗೋಪತಿಂ ವಿಶ್ವ ಆಹಾನ ಇಂದ್ರಃ ಸುಮತಿಂ ಗಂತ್ವಚ್ಛ ॥**

(ಋ. ಸಂ. ೭-೧೮-೪)

ಎಂಬಲ್ಲಿ ವಸಿಷ್ಠನು ಇಂದ್ರನನ್ನು ಪ್ರಾರ್ಥಿಸಿದ ಕ್ರಮವು ವಿವೃತವಾಗಿದೆ. ಎಲೈ ಇಂದ್ರನೇ, ಯವಸ (ಹಲ್ಲು) ಸಂಪತ್ತಿರುವ ಪ್ರದೇಶಗಳಲ್ಲಿ ಗೋವುಗಳು ಪ್ರಭೂತವಾದ ಕ್ಷೀರವನ್ನು ಕರೆಯಲಿಚ್ಛಿಸುವಂತೆ, ನಿನ್ನಿಂದಲೂ ಪ್ರಭೂತವಾದ ವರವನ್ನು ಪಡೆಯಲಿಚ್ಛೆಯಿಂದ ವಸಿಷ್ಠನು ತನ್ನ ಸ್ತುತಿಗಳನ್ನರ್ಪಿಸಿದನು. ನಮ್ಮ ಸ್ತುತಿಗಳು ನಿನ್ನನ್ನು ತೃಪ್ತಿಪಡಿಸಲಿ ಎಂಬ ಈ ಪ್ರಾರ್ಥನೆಯನಂತರ,

**ಅರ್ಣಾಂಸಿ ಚಿತ್ರಪ್ರಥಾನಾ ಸುದಾಸ ಇಂದ್ರೋ ಗಾಧಾನ್ಯಕೃಣೋತ್ಸುಪಾರಾ ॥**

(ಋ. ಸಂ. ೭-೧೮-೫)

ವಸಿಷ್ಠನ ಪ್ರಾರ್ಥನೆಯಿಂದ ಇಂದ್ರನು ಹರ್ಷಿತನಾದಾಗ **ಸುದಾಸನಿಗೆ** ಅತ್ಯಂತ ಉಪಕಾರಕನಾದನು. **ಸುದಾಸನ** ಶತ್ರುಗಳು ಪರುಷ್ಣೀನದಿಯ ಉದಕಪ್ರವಾಹವು ದ್ವೇಷದಿಂದ ಅತ್ಯಧಿಕವಾಗಿ ಉಲ್ಬಣವಾಗುವಂತೆ ಮಾಡಿ ಸುದಾಸನಿಗೆ ತೊಂದರೆಯನ್ನುಂಟುಮಾಡಬೇಕೆಂದುದ್ದೇಶಿಸಿದ್ದರೂ ಸಹ, ವಸಿಷ್ಠನ ಸ್ತುತಿಯಿಂದ ತೃಪ್ತನಾದ ಇಂದ್ರನು ಸುದಾಸನಿಗೆ ಆ ನದಿಯನ್ನು ದಾಟುವ ಶಕ್ತಿಯನ್ನು ಕೊಟ್ಟನು ಎಂಬುದಾಗಿರುತ್ತದೆ.

**ದ್ವೇ ನಪ್ತುರ್ದೇವವತಃ ಶತೇ ಗೋರ್ದ್ವಾ ರಥಾ ವಧೂಮಂತಾ ಸುದಾಸಃ ।**
**ಅರ್ಹನ್ನಗ್ನೇ ಪೈಜವನಸ್ಯ ದಾನಂ ಹೋತೇವ ಸದ್ಮ ಪರ್ಯೇಮಿ ರೇಭನ್ ॥**

(ಋ. ಸಂ. ೭-೧೮-೨೨)

ಇತ್ಯಾದಿ ವಾಕ್ಯಗಳಿಂದ **ಸುದಾಸನು** ದೇವವಂತನ ಪುತ್ರನೆಂದೂ **ಪಿಜವನನ** ಪೌತ್ರನೆಂದೂ ತಿಳಿಯುತ್ತದೆ.

ಮೇಲೆ ಉದಾಹೃತವಾಗಿರುವ ಮಂತ್ರಗಳಿಂದಲೂ, ನಿರುಕ್ತಕಾರರ ವಿವರಣ ವಾಕ್ಯಗಳಿಂದಲೂ ಸಹ **ವಿಶ್ವಾಮಿತ್ರನೂ** ಇದೇ **ಸುದಾಸನ** ಪುರೋಹಿತನಾಗಿದ್ದನೆಂದೂ ಸ್ಪಷ್ಟವಾಗಿ ತಿಳಿಸಿದೆ. ಆದುದರಿಂದ ಈ ಇಬ್ಬರು ಋಷಿಗಳೂ ಸಹ ಸುದಾಸನೆಂಬ ಒಬ್ಬನೇ ರಾಜನಿಗೆ ಪುರೋಹಿತರಾಗಿದ್ದರೆಂಬುದು ಸ್ಪಷ್ಟವಾಗಿದೆ. ಆದರೆ, ಇದಕ್ಕೆ ವಿರುದ್ಧವಾದ ಇನ್ನೊಂದಂಶವನ್ನೂ ಗಮನಿಸಬೇಕು.

**ದಂಡಾ ಇವೇದ್ಗೋಅಜನಾಸ ಆಸನ್ಪರಿಚ್ಛಿನ್ನಾ ಭರತಾ ಅರ್ಭಕಾಸಃ ।**
**ಅಭವಚ್ಚ ಪುರಏತಾ ವಸಿಷ್ಠ ಆದಿತ್ತೃತ್ಸೂನಾಂ ವಿಶೋ ಅಪ್ರಥಂತ ॥**

(ಋ. ಸಂ. ೭-೩೩-೬)

ಎಂಬಲ್ಲಿ ವಸಿಷ್ಠನು ತೃತ್ಸುಗಳಿಗೆ ಪುರೋಹಿತನಾದುದರಿಂದ ಅವರು ವೃದ್ಧಿಯನ್ನು ಹೊಂದಿದರು ಎಂದಿರುತ್ತೆ. ಅಲ್ಲದೇ, ಈ ತೃತ್ಸುಗಳು ಭರತರ ವಿದ್ವೇಷಿಗಳಾಗಿದ್ದರೆಂದೂ ತಿಳಿಯುತ್ತದೆ. ವಿಶ್ವಾಮಿತ್ರನು ಭರತರ ಪುರೋಹಿತನು. ಆದುದರಿಂದ ವಸಿಷ್ಠ ಮತ್ತು ವಿಶ್ವಾಮಿತ್ರ ಇವರಿಬ್ಬರೂ ವಿರುದ್ಧ ಪಂಗಡದವರಲ್ಲಿ ಸೇರಿದ್ದರೆಂಬುದು ಇಂತಹ ಆಧಾರಗಳಿಂದ ತಿಳಿಯುತ್ತದೆ. ಆದುದರಿಂದ ಈ ಇಬ್ಬರೂ ಸುದಾಸನಿಗೆ ಪೌರೋಹಿತ್ಯವನ್ನು ವಹಿಸಲು ಸಾಧ್ಯವಿಲ್ಲ ಎಂದು ಹೇಳಬಹುದೇ ಎಂಬುದೂ ಒಂದು ಪ್ರಶ್ನೆ. ಆದರೆ, ಈ ಇಬ್ಬರೂ ಬೇರೆ ಬೇರೆ ಕಾಲದಲ್ಲಿ ಆ ರಾಜನಿಗೆ ಸಹಾಯಕರಾಗಿದ್ದಿರಲೂ ಸಾಧ್ಯ ಇಬ್ಬರೂ ಒಟ್ಟಿಗೆ ಇದ್ದಿರಲು ಸಾಧ್ಯವೇ ಇಲ್ಲ. ಏತಕ್ಕೆಂದರೆ, ಯಾವ ಭಾಗದಲ್ಲಿ ವಿಶ್ವಾಮಿತ್ರನು ಸುದಾಸನಿಗೆ ಪುರೋಹಿತನೆಂದೂ **ವಿಶ್ವಾಮಿತ್ರೋ ಯದವಹತ್ಸುದಾಸಂ** (ಋ. ಸಂ. ೩-೫೩-೯), ಇವನ ಸಹಾಯದಿಂದಲೇ ಆ ರಾಜನು ಯಜ್ಞಮಾಡಿ ಸಂಪತ್ತನ್ನು ಪಡೆದನು ಎಂದೂ ವರ್ಣಿತವಾಗಿರುತ್ತದೆಯೋ, ಅದೇ ಸೂತ್ರದ ಕೊನೆಯ ಭಾಗವು ವಸಿಷ್ಠನನ್ನೂ ತತ್ಸಂತತಿಯವರನ್ನೂ ಶಪಿಸತಕ್ಕ ಮಂತ್ರಗಳನ್ನು ಒಳಗೊಂಡಿರುತ್ತದೆ. ಆದುದರಿಂದ ಒಂದೇಕಾಲದಲ್ಲಿ ವಸಿಷ್ಠ ವಿಶ್ವಾಮಿತ್ರರಿಬ್ಬರೂ ಆ ಅಧಿಕಾರವನ್ನು ಹೊಂದಲು ಸಾಧ್ಯವಿಲ್ಲ. ಇಬ್ಬರಿಗೂ ಅತ್ಯಧಿಕವಾದ ದ್ವೇಷವಿದ್ದಿತು. ಈ ವಿಷಯದಲ್ಲಿ ಒಂದು ಇತಿಹಾಸರೂಪವಾದ ಕಥೆಯು ಹೇಳಲ್ಪಟ್ಟಿದೆ.

**ಸಸರ್ಪರೀದ್ವ್ಯೃಚೇ ಪ್ರಾಹುರಿತಿಹಾಸಂ ಪುರಾವಿದಃ ।**
**ಸೌದಾಸನೃಪಯಜ್ಞೇ ವೈ ವಸಿಷ್ಠಾತ್ಮಜಶಕ್ತಿನಾ ॥**
**ವಿಶ್ವಾಮಿತ್ರಸ್ಯಾಭಿಭೂತಂ ಬಲಂ ವಾಕ್ಚ ಸಮಂತತಃ ।**
**ವಾಸಿಷ್ಠೇನಾಭಿಭೂತಃ ಸ ಹ್ಯವಾಸೀದಥ ಗಾಧಿಜಃ ॥**
**ತಸ್ಮೈ ಬ್ರಾಹ್ಮೀಂ ತು ಸೌರೀಂ ವಾ ನಾಮ್ನಾ ವಾಚಂ ಸಸರ್ಪರೀಂ ।**

**ಸೂರ್ಯವೇಶ್ಮನ ಆಹೃತ್ಯ ದದುರ್ವ್ಯ ಜಮದಗ್ನಯಃ ||**
**ಕುಶಿಕಾನಾಂ ಮತಿಃ ಸಾ ವಾಗಮತಿಂ ತಾಮಪಾನುದತ್ |**

(ಅನುಕ್ರಮಣಿಕಾ ಭಾಷ್ಯಂ ೩-೫೩)

**ಸಸರ್ಪರೀಃ** ಎಂಬ ಮಂತ್ರದಿಂದಲೂ ಅದರ ಮುಂದಿನ ಮಂತ್ರಗಳಿಂದಲೂ ವರ್ಣಿತವಾಗಿರುವ ಅಂಶದ ವಿಷಯವಾಗಿ ಇತಿಹಾಸರೂಪವಾದ ಒಂದು ಕಥೆಯಿರುತ್ತದೆ. ಅದೇನೆಂದರೆ, ಸುದಾಸನಿಂದ ಆಚರಿಸಲ್ಪಟ್ಟ ಒಂದು ಯಾಗಕಾಲದಲ್ಲಿ ವಸಿಷ್ಠಪುತ್ರನಾದ ಶಕ್ತಿ ಯಿಂದ ವಿಶ್ವಾಮಿತ್ರನ ವಾಕ್ಕೂ ಇತರ ಶಕ್ತಿಯೂ ಸ್ತಂಭಿತವಾಯಿತು. ಆಗ ಗಾಧಿಪುತ್ರನು ಆ ಪ್ರತಿಬಂಧಕದ ಫಲವಾಗಿ ಖಿನ್ನನಾದನು. ಆಗ ಅವನ ಜೊತೆಗಾರನಾದ ಜಮದಗ್ನಿಯು ಸೂರ್ಯಧಾಮದಿಂದ ಬ್ರಹ್ಮ ಪುತ್ರಿಯಾದ (ಅಥವಾ ಸೂರ್ಯಪುತ್ರಿ) **ಸಸರ್ಪರೀ** ಎಂಬ ಸ್ತ್ರೀರೂಪಿಯಾದ ವಾಕ್ಕನ್ನು ಕರೆತಂದು ವಿಶ್ವಾಮಿತ್ರನಿಗೆ ಕೊಟ್ಟನು. ಪ್ರಜ್ಞಾಪೂರಿತವಾದ ಈ ವಾಕ್ಕು ವಿಶ್ವಾಮಿತ್ರನ ಅಂಧಕಾರವನ್ನು ನಾಶಮಾಡಿತು. ಆಗ ವಿಶ್ವಾಮಿತ್ರನು ಕುಶಿಕರನ್ನು **ಉಪಪ್ರೇತ** ಎಂಬ ಮಂತ್ರದಿಂದ ಪ್ರಚೋದಿಸಿದನು. ಆ ದಿವ್ಯವಾಕ್ಕಿನ ಸಹಾಯದಿಂದ ಉಪಕೃತನಾಗಿ ಜಮದಗ್ನಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸಿದನು ಇತ್ಯಾದಿಯಾಗಿರುತ್ತದೆ. ಇದೇ ಪ್ರಕರಣವನ್ನು ಬೃಹದ್ದೇವತೆ ಯಲ್ಲಿ,

**ಸುದಾಸಶ್ಚ ಮಹಾಯಜ್ಞೇ ಶಕ್ತಿನಾ ಗಾಧಿಸೂನವೇ |**
**ನಿಗೃಹೀತಂ ಬಲಾಚ್ಚೇತಃ ಸೋಽವಸೀದದ್ವಿಚೇತನಃ ||**

(ಬೃ. ದೇ. ೪-೧೧೨ ರಿಂದ ೧೧೫)

ಇತ್ಯಾದಿ ವಾಕ್ಯಗಳಿಂದ ತಿಳಿಸಿದೆ. ಈ ವಾಕ್ಯಗಳ ಸಾರಾಂಶವು ಮೇಲಿನ ವಾಕ್ಯಗಳಲ್ಲಿ ಹೇಳಿರುವಂತೆಯೇ ಇರುತ್ತದೆ.

ಈ ಸಂದರ್ಭದಲ್ಲಿಯೇ, **ವಸಿಷ್ಠದ್ವೇಷಿಣೀ** ಎಂಬ ನಾಲ್ಕು ಮಂತ್ರಗಳನ್ನು ಅಭಿಶಾಪರೂಪವಾಗಿ ವಿಶ್ವಾಮಿತ್ರನು ಪಠಿಸಿದನು ಎಂದಿರುತ್ತದೆ. ಈ ಮಂತ್ರಗಳ ತಾತ್ಪರ್ಯವು ಈ ರೀತಿಯಲ್ಲಿರುತ್ತದೆ.—

" ಎಲೈ ಇಂದ್ರನೇ, ನಿನ್ನ ಅತ್ಯುತ್ತಮವಾದ ರಕ್ಷಣೆಗಳೊಡನೆ ನಮ್ಮನ್ನು ಇಂದು ನಮ್ಮ ಶತ್ರುಗಳಿಂದ ರಕ್ಷಿಸು. ನಮ್ಮನ್ನು ದ್ವೇಷಿಸತಕ್ಕ ದುಷ್ಟನು ನಮ್ಮೆದುರಿಗೆ ಉರಿದುಬೀಳಲಿ. ನಾವು ಯಾರನ್ನು ದ್ವೇಷಿಸುವೆವೋ ಅವರೆಲ್ಲರೂ ನಾಶವನ್ನು ಹೊಂದಲಿ. (೨೨)

ಎಲೈ ಇಂದ್ರನೇ, ಕೊಡಲಿಯ ಪತನದಿಂದ (ಏಟನಿಂದ) ವೃಕ್ಷವು ಹೇಗೆ ಕತ್ತರಿಸಲ್ಪಟ್ಟು ಕೆಳಕ್ಕೆ ಬೀಳುವುದೋ ಯಾವ ರೀತಿ ಶಾಲ್ಮಲಿಪುಷ್ಪವು ಪ್ರಯತ್ನವಿಲ್ಲದೆಯೇ ಕೆಳಕ್ಕೆ ಬೀಳುವುದೋ ಆರೀತಿ ನಮ್ಮ ಶತ್ರುವೂ ಸಹ ನನ್ನ ಮಂತ್ರದ ಪ್ರಭಾವದಿಂದ ಉರಿದು ಕೆಳಕ್ಕೆ ಬೀಳಲಿ. (೨೨)

ಎಲೈ ಮಾನವರೇ, ಶತ್ರುವಿನ ನಾಶವನ್ನುಂಟುಮಾಡತಕ್ಕ ವಿಶ್ವಾಮಿತ್ರನ ಮಂತ್ರಸಾಮರ್ಥ್ಯವನ್ನು ನೀವು ಅರಿಯಿರಿ. ಪ್ರಾಜ್ಞರು ಅವಿವೇಕಿಗಳನ್ನು ಅವಹೇಳನಮಾಡಲು ಬಯಸುವುದಿಲ್ಲ. ಗರ್ದಭಕ್ಕೂ ಅಶ್ವಕ್ಕೂ ಇರತಕ್ಕ ವ್ಯತ್ಯಾಸವೇ ವಸಿಷ್ಠನಿಗೂ ವಿಶ್ವಾಮಿತ್ರನಿಗೂ ಇರುತ್ತದೆ. ಆದುದರಿಂದ ಗರ್ದಭಸದೃಶನಾದ ವಸಿಷ್ಠನೊಡನೆ ವಿಶ್ವಾಮಿತ್ರನು ಸ್ಪರ್ಧಿಸುವುದಿಲ್ಲ. (೨೩)

ಎಲೈ ಇಂದ್ರನೇ, ಭರತವಂಶೀಯರಾದ ಈ ವಿಶ್ವಾಮಿತ್ರರು ತಮಗೂ ವಸಿಷ್ಠನಿಗೂ ಇರತಕ್ಕ ಪೂರ್ಣವಾದ ಅಂತರವನ್ನು ಚೆನ್ನಾಗಿ ಅರಿತಿದ್ದಾರೆ. ಅವರೊಂದಿಗೆ ಖಂಡಿತವಾಗಿಯೂ ಯಾವ ವಿಧವಾದ ಸಂಪರ್ಕವನ್ನೂ ಹೊಂದು

ವುದಿಲ್ಲ. ಬದ್ಧದ್ವೇಷಿಗಳಾದ ಅವರನ್ನು ಎದುರಿಸಲು ತಮ್ಮ ಅಶ್ವಗಳನ್ನು ಪ್ರೇರಿಸುತ್ತಾರೆ. ಅವರ ನಾಶಕ್ಕಾಗಿ ಈ ವಿಶ್ವಾಮಿತ್ರರು ಪ್ರಬಲವಾದ ಧನುಸ್ಸನ್ನು ಹೊಂದಿರುತ್ತಾರೆ". (೨೪)

ಇತ್ಯಾದಿಯಾಗಿ ವಸಿಷ್ಠಸಂತತಿಯಮೇಲೆ ಇರುವ ದ್ವೇಷವು ವ್ಯಕ್ತಪಡಿಸಲ್ಪಟ್ಟಿದೆ. ಈ ನಾಲ್ಕುಮಂತ್ರಗಳ ತಾತ್ಪರ್ಯದ ವಿಷಯಲ್ಲಿ ಸಾಯಣರು ತಮ್ಮ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾರೆ.

> **ಇಂದ್ರೋತಿಭಿರಿತ್ಯಾದ್ಯಾಶ್ಚತಸ್ರೋ ವಸಿಷ್ಠದ್ವೇಷಿಣ್ಯಃ । ಪುರಾ ಖಲು ವಿಶ್ವಾಮಿತ್ರಶಿಷ್ಯಃ ಸುದಾ ನಾಮ ರಾಜರ್ಷಿರಾಸೀತ್ । ಸ ಚ ಕೇನಚಿತ್ಕಾರಣೇನ ವಸಿಷ್ಠದ್ವೇಷ್ಯೋಽಭೂತ್ । ವಿಶ್ವಾಮಿತ್ರಸ್ತು ಶಿಷ್ಯಸ್ಯ ರಕ್ಷಾರ್ಥಮಾಭಿರ್ಋಗ್ಭಿರ್ವಸಿಷ್ಠಮಶಪತ್ । ಇಮಾ ಅಭಿಶಾಪಾಃ । ತಾ ಋಚಃ ವಸಿಷ್ಠಾ ನ ಶೃಣ್ವಂತಿ ॥**

(೨೧ನೇ ಮಂತ್ರದ ಪೀಠಿಕೆ)

**ಇಂದ್ರೋತಿಭಿಃ** ಎಂಬ ಮಂತ್ರದಿಂದ ಪ್ರಾರಂಭವಾಗುವ ನಾಲ್ಕು ಮಂತ್ರಗಳೂ ವಸಿಷ್ಠನನ್ನು ದ್ವೇಷಿಸತಕ್ಕವು. ಪೂರ್ವದಲ್ಲಿ ಸುದಾಸನೆಂಬ ಒಬ್ಬ ರಾಜರ್ಷಿ ಇದ್ದನು. ಅವನು ವಿಶ್ವಾಮಿತ್ರನ ಶಿಷ್ಯನಾಗಿದ್ದನು. ಆದರೆ, ಕಾರಣಾಂತರದಿಂದ ಅವನು ವಸಿಷ್ಠನ ದ್ವೇಷವನ್ನು ಸಂಪಾದಿಸಿಕೊಂಡಿದ್ದನು. ತನ್ನ ಶಿಷ್ಯನ ರಕ್ಷಣಾರ್ಥವಾಗಿ ವಿಶ್ವಾಮಿತ್ರನು ಈ ನಾಲ್ಕು ಮಂತ್ರಗಳಿಂದ ವಸಿಷ್ಠನನ್ನು ಶಪಿಸಿದನು. ತಮ್ಮ ಗುರುಗಳನ್ನು ನಿಂದಿಸುವುದರಿಂದ ಈ ನಾಲ್ಕು ಮಂತ್ರಗಳನ್ನೂ ವಸಿಷ್ಠ ವಂಶೋತ್ಪನ್ನರಾಗಲಿ ಅಥವಾ ವಸಿಷ್ಠನ ಶಿಷ್ಯಸಂತತಿಗೆ ಸೇರಿದವರಾಗಲಿ ಪಠಿಸುವುದಿಲ್ಲ. ಇದೇ ವಿಷಯವನ್ನು ಬೃಹದ್ದೇವತಾಕಾರರು ಈ ರೀತಿ ತಿಳಿಸಿದ್ದಾರೆ.

> **ಪರಾಶ್ಚತಸ್ರೋ ಯಾಸ್ತ್ವತ್ರ ವಸಿಷ್ಠದ್ವೇಷಿಣ್ಯಃ ಸ್ಮೃತಾಃ ।**
> **ವಿಶ್ವಾಮಿತ್ರೇಣ ತಾಃ ಪ್ರೋಕ್ತಾ ಅಭಿಶಾಪಾ ಇತಿ ಸ್ಮೃತಾಃ ॥**
> **ದ್ವಿಷದ್ವೇಷಾಸ್ತು ತಾಃ ಪ್ರೋಕ್ತಾ ವಿದ್ಯಾಚ್ಚೈವಾಭಿಚಾರಿಕಾಃ ।**
> **ವಸಿಷ್ಠಾಸ್ತಾ ನ ಶೃಣ್ವಂತಿ ತದಾಚಾರ್ಯಕಸಂಮತಂ ॥**
> **ಕೀರ್ತನಾಚ್ಛ್ರವಣಾದ್ವಾಪಿ ಮಹಾದೋಷಶ್ಚ ಜಾಯತೇ ।**
> **ಶತಧಾ ಭಿದ್ಯತೇ ಮೂರ್ಧಾ ಕೀರ್ತಿತೇನ ಶ್ರುತೇನ ವಾ ॥**
> **ತೇಷಾಂ ಬಾಲಾಃ ಪ್ರಮೀಯಂತೇ ತಸ್ಮಾತ್ತಾಸ್ತು ನ ಕೀರ್ತಯೇತ್ ॥**

(ಬೃ. ದೇ. ೪-೧೧೭ ರಿಂದ ೧೨೦)

ಮೂರನೆಯ ಮಂಡಲದಲ್ಲಿ ೫೩ನೇ ಸೂಕ್ತದ ೨೧ ರಿಂದ ೨೪ ರವರೆಗಿನ ನಾಲ್ಕು ಮಂತ್ರಗಳೂ ವಸಿಷ್ಠವಿದ್ವೇಷಿಗಳೆಂದು ಪ್ರಸಿದ್ಧವಾಗಿವೆ. ಇವು ವಿಶ್ವಾಮಿತ್ರನಿಂದ ಪಠಿತವಾದವು. ಇವುಗಳಿಗೆ **ಅಭಿಶಾಪ** ಗಳೆಂದೂ ಹೆಸರು. ಶತ್ರುಗಳಮೇಲೆ ದ್ವೇಷವನ್ನು ಪ್ರಕಟಿಸುವಾಗಲೂ ಮತ್ತು ಆಭಿಚಾರಿಕಕ್ರಿಯೆಗಳಲ್ಲೂ ಸಹ ಈ ಮಂತ್ರಗಳನ್ನು ಪಠಿಸುತ್ತಾರೆ. ವಸಿಷ್ಠ ಸಂತತಿಯವರು ಈ ಮಂತ್ರಶ್ರವಣವನ್ನು ಮಾಡುವುದಿಲ್ಲ. ಈ ಮಂತ್ರಗಳನ್ನು ಪಠಿಸುವುದರಿಂದಾಗಲಿ ಅಥವಾ ಕೇವಲ ಶ್ರವಣಮಾತ್ರದಿಂದಾಗಲಿ ಮಹತ್ಪಾಪವು ಸಂಭವಿಸುತ್ತದೆಯೆಂಬ ನಂಬಿಕೆಯು ವಸಿಷ್ಠಸಂಪ್ರದಾಯದವರಲ್ಲೆಲ್ಲಾ ಸಾಮಾನ್ಯವೂ ಮತ್ತು ಸಾರ್ವತ್ರಿಕವೂ ಆದ ನಿಯಮವಾಗಿದೆ. ಇವುಗಳನ್ನು ಪಠಿಸುವುದರಿಂದಾಗಲಿ ಅಥವಾ ಕೇಳುವುದರಿಂದಾಗಲಿ ಅಂತಹ ವ್ಯಕ್ತಿಯ ಶಿರಸ್ಸು ನೂರುಪಾಲಾಗಿ ಒಡೆದುಹೋಗುತ್ತದೆ. ಮತ್ತು ಅಂತಹವರ ಸಂತತಿಯೂ ನಾಶವಾಗುತ್ತದೆ. ಆದುದರಿಂದ ಯಾರೂ ಈ ಮಂತ್ರಗಳನ್ನು ಪಠಿಸಬಾರದು ಎಂದು ತಿಳಿಸಿದೆ.

ಇದೇ ವಿಷಯವನ್ನು ದುರ್ಗಾಚಾರ್ಯರು ನಿರುಕ್ತವ್ಯಾಖ್ಯಾನಾವಸರದಲ್ಲಿ ಈ ರೀತಿ ಸೂಚಿಸಿದ್ದಾರೆ.

**ಯಸ್ಮಿನ್ನಿಗಮೋ ಏಷ ಶಬ್ದಃ ಸಾ ವಸಿಷ್ಠದ್ವೇಷಿಣೀ ಋಕ್। ಅಹಂ ಚ ಕಾಪಿಷ್ಠಲೋ ವಾಸಿಷ್ಠಃ।**
**ಅತಸ್ತಾಂ ನ ನಿರ್ಬ್ರವೀಮಿ ॥**

ನಾನು ವಸಿಷ್ಠಗೋತ್ರಕ್ಕೆ ಸೇರಿದ ಕಾಪಿಷ್ಠಲನು. ಆದುದರಿಂದ ಈ ಪ್ರಕರಣಕ್ಕೆ ನಾನು ವ್ಯಾಖ್ಯಾನವನ್ನು ಹೇಳುವುದಿಲ್ಲ ವೆಂದು ಸಂಕಲ್ಪಿಸಿದ್ದಾರೆ.

ವಿಶ್ವಾಮಿತ್ರನು ವಸಿಷ್ಠನನ್ನೂ ತತ್ಸಂತತಿಯವರನ್ನೂ ಶಪಿಸುವಂತೆಯೇ, ವಸಿಷ್ಠರೂ ಸಹ ವಿಶ್ವಾಮಿತ್ರನನ್ನೂ ತತ್ಸಂತತಿಯವರನ್ನೂ ಶಪಿಸುತ್ತಾರೆಂದು ಹೇಳುವ ಸನ್ನಿವೇಶವೂ ಇರುತ್ತದೆ. ಉದಾಹರಣೆಗೆ ಋ. ಸಂ. ೭-೧೦೪. ೧೩ ರಿಂದ ೧೬ ನೇ ಮಂತ್ರದವರೆಗೆ ವಸಿಷ್ಠರು ಯಾತುಧಾನರನ್ನು ಶಪಿಸುತ್ತಾರೆ. ಅವರ ನೂರು ಜನ ಪುತ್ರರೂ ಸಹ ಸುದಾಸನಿಂದಲೂ ಮತ್ತು ತದನುಯಾಯಿಗಳಿಂದಲೂ ಕೊಲ್ಲಲ್ಪಟ್ಟಾಗ ವಸಿಷ್ಠರು ತಮ್ಮ ದುಃಖದಿಂದ ಸುದಾಸನನ್ನು ರಾಕ್ಷಸನಾಗುವಂತೆ ಶಪಿಸಿ ಅವನಿಗೂ ಅವನ ಅನುಯಾಯಿಗಳಿಗೂ ಕೇಡಕಾಗಬೇಕೆಂದು ಪುನಃ ಈ ಅಭಿಶಾಪಮಂತ್ರಗಳಿಂದ ಶಪಿಸಿದರು ಎನ್ನುವ ಸಂದರ್ಭದಲ್ಲಿ, ಸುದಾಸನು ವಿಶ್ವಾಮಿತ್ರರಿಂದ ಪ್ರೇರಿತನಾಗಿ ಈ ದುಃಖಕ್ಕೆ ಕಾರಣನಾದನೆಂದೂ ಆದುದರಿಂದ ಇಲ್ಲಿ ವಿಶ್ವಾಮಿತ್ರನಮೇಲೆ ಆಗ್ರಹವು ವ್ಯಕ್ತವಾಗಿದೆಯೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ, ಉದಾಹೃತವಾಗಿರುವ ಈ ಸಂದರ್ಭದಲ್ಲಿ (೭-೧೦೪) ವಿಶ್ವಾಮಿತ್ರರನ್ನು ನಿರ್ದೇಶಿಸಿದೆಯೋ ಇಲ್ಲವೇ ಎಂಬುದನ್ನು ಆ ಸಂದರ್ಭ ಬಂದಾಗ ವಿಮರ್ಶಿಸಲಾಗುತ್ತದೆ. ಬೃಹದ್ದೇವತೆಯಲ್ಲಿ ಸ್ಪಷ್ಟವಾಗಿ ಸುದಾಸನನ್ನೇ ಶಪಿಸಿದರು ಎಂದಿರುತ್ತದೆ.

**ಪಂಚದಶ್ಯಾಂ ತು ಸೂಕ್ತಸ್ಯ ಅಷ್ಟಮ್ಯಾಂ ಚೈವ ವಾರುಣಿಃ।**
**ದುಃಖಶೋಕಪರೀತಾತ್ಮಾ ಶಪತೇ ವಿಲಪನ್ನಿವ ॥**
**ಹತೇ ಪುತ್ರಶತೇ ತಸ್ಮಿನ್ ವಸಿಷ್ಠೋ ದುಃಖಿತಸ್ತದಾ।**
**ರಕ್ಷೋಭೂತೇನ ಶಾಪಾತ್ತು ಸುದಾಸೇನೇತಿ ವೈ ಶ್ರುತಿಃ ॥**

(ಬೃ. ದೇ. ೬-೩೩-೩೪).

ಋ. ಸಂ. ೭-೧೦೪ನೇ ಸೂಕ್ತದ ಎಂಟು ಮತ್ತು ಹದಿನೈದನೆಯ ಮಂತ್ರಗಳಲ್ಲಿ ವರುಣಪುತ್ರನಾದ ವಸಿಷ್ಠನು ದುಃಖತಪ್ತನಾಗಿ ಅಶ್ರುಧಾರೆಗಳ ಜೊತೆಯಲ್ಲಿ ಶಾಪವನ್ನು ಕೊಡುತ್ತಾನೆ. ಸುದಾಸನಿಂದ ಅವನ ನೂರು ಮಂದಿ ಮಕ್ಕಳೂ ಕೊಲ್ಲಲ್ಪಟ್ಟಾಗ ಅದರ ಪ್ರತಿಕ್ರಿಯೆಯನ್ನು ಶಾಪದ ರೂಪದಲ್ಲಿ ತೋರಿಸಿ ಸುದಾಸನನ್ನು ರಾಕ್ಷಸನಾಗುವಂತೆ ಮಾಡಿ ಪುನಃ ಶಪಿಸಿದನು ಎಂಬುದೇ ಶ್ರುತಿವಾಕ್ಯವು ಎಂದು ಬೃಹದ್ದೇವತಾಕಾರರು ತಿಳಿಸುತ್ತಾರೆ.

ಇಂತಹ ಸಂದರ್ಭಗಳು ವಿಶ್ವಾಮಿತ್ರ ಮತ್ತು ವಸಿಷ್ಠ ಇಬ್ಬರೂ ಒಟ್ಟಿಗೆ ಸುದಾಸನಲ್ಲಿ ಪೌರೋಹಿತ್ಯವನ್ನು ವಹಿಸಿದ್ದರು ಎಂಬ ಅಭಿಪ್ರಾಯಕ್ಕೆ ವಿರುದ್ಧವಾಗಿರುತ್ತದೆ. ಆದರೆ ವಸಿಷ್ಠ ಮತ್ತು ವಿಶ್ವಾಮಿತ್ರರು ಯಾವಾಗಲೂ ಒಟ್ಟಿಗಿರಲಿಲ್ಲ ಎಂದು ಹೇಳುವುದೂ ಸರಿಯಲ್ಲ. ಹೇಗೆಂದರೆ,

**ತಸ್ಯ ಹ ವಿಶ್ವಾಮಿತ್ರೋ ಹೋತಾ ಆಸೀಜ್ಜಮದಗ್ನಿರಧ್ವರ್ಯುರ್ವಸಿಷ್ಠೋ ಬ್ರಹ್ಮಾ ಆಯಾಸ್ಯ ಉದ್ಗಾತಾ।**

(ಐ. ಬ್ರಾ. ೭-೧೬)

ಎಂದು ಶುನಃಶೇಪೋಪಾಖ್ಯಾನಪ್ರಕರಣದಲ್ಲಿ ತಿಳಿಸಿದೆ. ಒಂದೇ ಯಾಗದಲ್ಲಿ ವಿಶ್ವಾಮಿತ್ರನು ಹೋತೃವಾಗಿಯೂ ವಸಿಷ್ಠನು ಬ್ರಹ್ಮನಾಗಿಯೂ ಇರುತ್ತಾರೆ. ಇದು ವಸಿಷ್ಠವಿಶ್ವಾಮಿತ್ರರು ಯಜ್ಞಕಾಲದಲ್ಲಿ ಸಹಚರಿಸುತ್ತಿದ್ದರೆಂಬುದನ್ನು

ತಿಳಿಸುತ್ತದೆ. ಇದಲ್ಲದೇ, ವಸಿಷ್ಠನ ಅನುಗ್ರಹವು ಸುದಾಸನಲ್ಲಿ ಪೂರ್ಣವಾಗಿದ್ದಿತು ಎಂಬುದಕ್ಕೆ ಇನ್ನೊಂದು ಉದಾಹರಣೆಯನ್ನೂ ಪರಿಶೀಲಿಸಬಹುದು.

"ಏತಮು ಹೈವ ಪ್ರೋವಾಚ ವಸಿಷ್ಠಃ ಸುದಾಸೇ ಪೈಜವನಾಯ"

(ಐ. ಬ್ರಾ. ೭-೩೪)

ಎಂದು ವಸಿಷ್ಠನು ಪಿಜವನಪುತ್ರನಾದ ಸುದಾಸನಿಗೆ ಉಪದೇಶವನ್ನು ಮಾಡಿದ ವಿಷಯವೂ ಪ್ರಸಿದ್ಧವಾಗಿದೆ. ಈ ಆಧಾರಗಳಿಂದ ವಸಿಷ್ಠ ಮತ್ತು ವಿಶ್ವಾಮಿತ್ರರಿಬ್ಬರೂ ಸಹ ಪ್ರಥಮತಃ ಸುದಾಸನಲ್ಲಿ ಒಟ್ಟಿಗೆ ಪೌರೋಹಿತ್ಯವನ್ನು ವಹಿಸಿದ್ದಿರಬಹುದು. ಅನಂತರ ಅವರವರಿಗೆ ವೈಮನಸ್ಯವುಂಟಾಗಿರಬಹುದು. ಇದು ಅಸಂಭವವಲ್ಲ. ಯಾವುದೋ ಸಂದರ್ಭದಲ್ಲಿ ಕಾರಣಾಂತರದಿಂದ ದ್ವೇಷವುಂಟಾಗಿ ಅನಂತರ ಆ ದ್ವೇಷವು ಮರೆತು ಪರಸ್ಪರ ಗೌರವವು ವೃದ್ಧಿಯಾಗಿರುವ ಸನ್ನಿವೇಶವೂ ಇರುತ್ತದೆ. ಅದಕ್ಕೆ ವಸಿಷ್ಠವಿಶ್ವಾಮಿತ್ರರೇ ಸಾಕ್ಷಿ. ಪ್ರಾರಂಭದಲ್ಲಿ ವಸಿಷ್ಠವಿಶ್ವಾಮಿತ್ರರಿಗೆ ಮೈತ್ರಿಯಿದ್ದಿತು. ನಂತರ ದ್ವೇಷವುಂಟಾಯಿತು, ಕೊನೆಯಲ್ಲಿ ಒಬ್ಬರನ್ನೊಬ್ಬರು ಗೌರವಿಸಲಾರಂಭಿಸಿದರು ಎಂಬುದು ಪುರಾಣದ ಕಥೆ. ವೈದಿಕವಾಕ್ಯಗಳಲ್ಲಿ ವರ್ಣಿತವಾಗಿರುವುದಕ್ಕೂ ಪುರಾಣವಾಕ್ಯಗಳಲ್ಲಿ ವರ್ಣಿತವಾಗಿರುವುದಕ್ಕೂ ಅನೇಕ ವ್ಯತ್ಯಾಸಗಳಿರುತ್ತವೆ. . .

[ವೈದಿಕವಾಕ್ಯಗಳಲ್ಲಿ ಹೇಳತಕ್ಕ ಸಕಲ ವಿಧವಾದ ಗುಣಗಳೂ ರಾಮಾಯಣದಲ್ಲಿ ವಿಶ್ವಾಮಿತ್ರನ ವರ್ಣನಾವಸರದಲ್ಲಿ ಪ್ರಶಂಸಿತವಾಗಿರುವುದರಿಂದ ಪ್ರಕೃತದಲ್ಲಿ ಆ ಮಹರ್ಷಿಯ ಚರಿತ್ರೆಯು ರಾಮಾಯಣದಲ್ಲಿ ಉಕ್ತವಾಗಿರುವಂತೆ ಸಂಕ್ಷೇಪವಾಗಿ ತಿಳಿಸಲಾಗುತ್ತದೆ. ರಾಮಾಯಣದ ಬಾಲಕಾಂಡದಲ್ಲಿ ೫೧ನೇ ಸರ್ಗದಿಂದ ೬೫ನೇ ಸರ್ಗದವರೆಗೆ ಋಷಿಯ ವಿಷಯವು ಅತಿ ವಿಸ್ತೃತವಾಗಿ ಹೇಳಲ್ಪಟ್ಟಿದೆ. ಇಲ್ಲಿ ಅದರ ಸಾರಾಂಶವನ್ನು ಮಾತ್ರ ಹೇಳಲಾಗುತ್ತದೆ. ಈ ಪ್ರಕರಣವನ್ನು ಮೂರು ವಿಭಾಗವಾಗಿ ವಿಂಗಡಿಸಬಹುದು.

೧. ಮೊದಲನೆಯದಾಗಿ ಪರಸ್ಪರ ಮೈತ್ರಿಯಿಂದಿದ್ದ ವಿಶ್ವಾಮಿತ್ರವಸಿಷ್ಠರಿಗೆ ಸಂಭವಿಸಿದ ಮನಸ್ತಾಪ ಮತ್ತು ಕಲಹ.

೨. ಎರಡನೆಯದಾಗಿ, ವಿಶ್ವಾಮಿತ್ರನು ತ್ರಿಶಂಕುವಿಗೂ ಶುನಃಶೇಫನಿಗೂ ಸಹಾಯಮಾಡುವುದಾಗಿ ಭರವಸೆಯನ್ನು ಕೊಟ್ಟು ತನ್ನ ಪ್ರಭಾವವನ್ನು ವ್ಯಕ್ತಪಡಿಸುವುದು.

೩. ಮೂರನೆಯದಾಗಿ ಬ್ರಹ್ಮಶಕ್ತಿಯ ಮುಂದೆ ಕ್ಷಾತ್ರಶಕ್ತಿಯಲ್ಲಿನ ಅಸಾರವನ್ನು ತಿಳಿದು ತಾನೂ ಸಹ ಮಹಾತಪಸ್ಸನ್ನಾಚರಿಸಿ ವಸಿಷ್ಠನಿಂದ ಬ್ರಹ್ಮರ್ಷಿಯೆನಿಸಿಕೊಂಡು ಅಲ್ಲಿಂದ ವಸಿಷ್ಠನ ಗೌರವವನ್ನು ಸಂಪಾದಿಸಿದುದು.

ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಜನಕನ ಪುತ್ರಿಯಾದ ಸೀತೆಯ ಸ್ವಯಂವರಕಾಲದಲ್ಲಿ ಜನಕನ ಆಸ್ಥಾನಕ್ಕೆ ಕರೆದುಕೊಂಡು ಹೋದಾಗ ಗೌತಮಪುತ್ರನಾದ ಶತಾನಂದನು ತನ್ನ ತಾಯಿಯಾದ ಅಹಲ್ಯೆಯನ್ನುದ್ಧರಿಸಿದ ರಾಮನಿಗೆ ತನ್ನ ಕೃತಜ್ಞತೆಯನ್ನು ತೋರಿಸಿ ಆಗ ಅವನಿಗೆ ಧನುರ್ವಿದ್ಯೆಯನ್ನುಪದೇಶಿಸಿದ ಗುರುತಾದ ವಿಶ್ವಾಮಿತ್ರನ ಪ್ರತಾಪಪೂರಿತವಾದ ಚರಿತ್ರೆಯನ್ನು ಈರೀತಿ ತಿಳಿಸುತ್ತಾನೆ.

**ನಾಸ್ತಿ ಧನ್ಯತರೋ ರಾಮ ತ್ವತ್ತೋಽನ್ಯೋ ಭುವಿ ಕಶ್ಚನ ।**
**ಗೋಪ್ತಾ ಕುಶಿಕಪುತ್ರಸ್ತೇ ಯೇನ ತಪ್ತಂ ಮಹತ್ತಪಃ ॥**

(ರಾಮಾ. ಬಾಲ. ಕಾಂ. ೫೧-೧೫)

ಎಲೈ ರಾಮನೇ, ಈ ವಿಶ್ವಾಮಿತ್ರನನ್ನು ಗುರುವನ್ನಾಗಿಯೂ ರಕ್ಷಕನನ್ನಾಗಿಯೂ ಹೊಂದಿರತಕ್ಕ ನಿನಗಿಂತಲೂ ಧನ್ಯರಾರೂ ಇಲ್ಲ. ಈ ವಿಶ್ವಾಮಿತ್ರನ ಮಹಿಮೆಯನ್ನು ಕ್ರಮವಾಗಿ ತಿಳಿಸುವೆನು, ಕೇಳು. ಈತನು ಮೊದಲು ರಾಜನಾ

ಗಿದ್ದನು. ಎಲ್ಲಾ ಧರ್ಮಗಳನ್ನೂ ತಿಳಿದು ಸಕಲ ಶಸ್ತ್ರವಿದ್ಯಾಪ್ರವೀಣನೂ ಆಗಿ ಪ್ರಜಾರಂಜನೆಯನ್ನು ಊಂಟುಮಾಡುತ್ತಾ ಅನೇಕ ವರ್ಷಗಳು ರಾಜ್ಯಭಾರವನ್ನು ಮಾಡಿದನು. ಇವನು ಬ್ರಹ್ಮನಿಂದ ಸಾಕ್ಷಾತ್ತಾಗಿ ಸೃಷ್ಟವಾದ ವಂಶದಲ್ಲಿ ಹುಟ್ಟಿದವನು. ಬ್ರಹ್ಮನಿಂದ ಕುಶನೂ, ಅವನಿಂದ ಕುಶನಾಭನೂ, ಅವನಿಂದ ಗಾಧಿಯೂ ಹುಟ್ಟಿದರು. ಆ ಗಾಧಿಪುತ್ರನೇ ಈ ವಿಶ್ವಾಮಿತ್ರನು. ಈ ವಿಶ್ವಾಮಿತ್ರನು ಅನೇಕ ವರ್ಷಗಳು ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದು ಒಂದು ಸಲ ತನ್ನ ಸಕಲ ಸೈನ್ಯಗಳೊಡನೆಯೂ ಪ್ರಪಂಚ ಪರ್ಯಟನವನ್ನು ಮಾಡಬೇಕೆಂದು ಹೊರಟನು. ನಾನಾ ದೇಶಗಳನ್ನು ಸುತ್ತಿ ಕೊನೆಗೆ ವಸಿಷ್ಠನ ಆಶ್ರಮವನ್ನು ಸೇರಿದನು. ಆ ಆಶ್ರಮವು ಅತಿಮನೋಹರವಾಗಿದ್ದು ಎಲ್ಲೆಲ್ಲೂ ಬ್ರಹ್ಮರ್ಷಿಗಳೂ, ದೇವರ್ಷಿಗಳೂ ತುಂಬಿದ್ದರು. ವಿಶ್ವಾಮಿತ್ರನ ಕಣ್ಣಿಗೆ ಅದು ಬೇರೊಂದು ಬ್ರಹ್ಮಲೋಕವೋ ಎಂಬಂತಿದ್ದಿತು.

ರಾಜತೇಜಸ್ಸಿನಿಂದ ಕೂಡಿದ ವಿಶ್ವಾಮಿತ್ರನು ವಿನಯದಿಂದ ಬಂದು ವಸಿಷ್ಠನಿಗೆ ನಮಸ್ಕರಿಸಿದನು. ಆಗ ವಸಿಷ್ಠನು ಇವನ ಕುಶಲವೃತ್ತಾಂತಗಳನ್ನು ವಿಚಾರಿಸಿ ಅನೇಕ ವಿಧವಾಗಿ ಸತ್ಕರಿಸಿದನು. ಕುಶಲಪ್ರಶ್ನೆಯಾದನಂತರ ವಸಿಷ್ಠನು ವಿಶ್ವಾಮಿತ್ರನಿಗೂ ಅವನ ಪರಿವಾರಕ್ಕೂ ಒಳ್ಳೆಯ ಆತಿಥ್ಯವನ್ನು ಮಾಡಲಪೇಕ್ಷಿಸಿದನು. ಆಗ ವಿಶ್ವಾಮಿತ್ರನು ವಸಿಷ್ಠನಿಗೆ ಆ ಶಕ್ತಿಯಿದೆಯೆಂದು ನಂಬಲಿಲ್ಲ. ಅವನು ಫಲಪುಷ್ಪಗಳಿಂದ ಮಾಡಿದ ಸತ್ಕಾರವೇ ಸಾಕೆಂದನು. ನಂತರ ಬಹಳ ನಿರ್ಬಂಧಿಸಿದ ಮೇಲೆ ವಿಶ್ವಾಮಿತ್ರನು ಒಪ್ಪಿಕೊಂಡನು. ಆಗ ವಸಿಷ್ಠನು ತನ್ನ ಹೋಮಧೇನು (ಕಾಮಧೇನು) ವನ್ನು ಕುರಿತು ತನ್ನ ಇಷ್ಟಾರ್ಥವನ್ನು ತಿಳಿಸಿದನು. ಆ ಶಬಲೆಯು ತನ್ನ ಪ್ರಭಾವದಿಂದ ಸಕಲ ಸೈನ್ಯಗಳಲ್ಲಿಯೂ ಅವರವರ ಇಷ್ಟಾನುಸಾರವಾಗಿ ಭಕ್ಷ್ಯಭೋಜ್ಯಾದಿಗಳನ್ನು ಸೃಷ್ಟಿಸಿ ಅವರಿಗೆಲ್ಲಾ ಮೃಷ್ಟಾನ್ನಪೂರಿತವಾದ ಔತಣವನ್ನೊದಗಿಸಿತು. ಆಗ ವಿಶ್ವಾಮಿತ್ರನು ಅದರಿಂದ ಸಂತೋಷಗೊಂಡು ತನಗೆ ಆ ಗೋವನ್ನು ಕೊಡಬೇಕೆಂದೂ, ಅದರಿಂದ ವಸಿಷ್ಠನಿಗಿಂತಲೂ ತನಗೇ ಅಧಿಕವಾದ ಪ್ರಯೋಜನವೆಂದೂ ಅದಕ್ಕೆ ಪ್ರತಿಯಾಗಿ ವಸಿಷ್ಠನಿಗೆ ಸಾವಿರಾರು ಗೋವುಗಳನ್ನು ಕೊಡುವುದಾಗಿಯೂ ತಿಳಿಸಿದನು. ಕೋಟ್ಯಂತರ ಗೋವುಗಳನ್ನು ಕೊಟ್ಟರೂ ಕಾಮಧೇನುವನ್ನು ಕೊಡುವುದಿಲ್ಲವೆಂದೂ, ಮನಸ್ವಿಯಾದ ಪುರುಷರಿಗೆ ಕೀರ್ತಿಯು ಹೇಗೋ ಹಾಗೆಯೇ ತಪಸ್ವಿಯಾದ ತನಗೆ ಕಾಮಧೇನುವೇ ಶಾಶ್ವತವಾದ ಧನವೆಂದೂ, ತನ್ನ ಪ್ರಾಣವೇ ಅದೆಂದೂ ಅದನ್ನು ಕೊಡಲು ಸಾಧ್ಯವಿಲ್ಲವೆಂದೂ ನಿಷ್ಕೃಷ್ಟವಾಗಿ ತಿಳಿಸಿದನು.

ಎಷ್ಟು ವಿಧವಾಗಿ ಪ್ರಾರ್ಥಿಸಿದರೂ ವಸಿಷ್ಠನು ಆ ಹೋಮಧೇನುವನ್ನು ಕೊಡಲು ನಿರಾಕರಿಸಿದ್ದರಿಂದ ವಿಶ್ವಾಮಿತ್ರನು ಅಸಮಾಧಾನಗೊಂಡು ಆ ಶಬಲೆಯನ್ನು ಬಲಾತ್ಕಾರದಿಂದ ಹಿಡಿದೆಳೆಯಲಾರಂಭಿಸಿದನು. ಆಗ ಅದು ದೈನ್ಯದಿಂದ ವಸಿಷ್ಠನಿಗೆ ಮೊರೆಯಿಟ್ಟಿತು. ಆಗ ಪ್ರಾರಂಭದಲ್ಲಿ ವಸಿಷ್ಠನು ವಿಶ್ವಾಮಿತ್ರನನ್ನು ಎದುರಿಸಲಿಷ್ಟಪಡಲಿಲ್ಲ. ವಿಶ್ವಾಮಿತ್ರನು ರಾಜನಾದುದರಿಂದಲೂ, ವಸಿಷ್ಠನು ಅವನ ಪ್ರಜೆಯಾದುದರಿಂದಲೂ ಅವನಿಗೆ ವಿರುದ್ಧವಾಗಿ ಆಚರಿಸಲು ಇಷ್ಟಪಡಲಿಲ್ಲ. ಅಲ್ಲದೇ ಬ್ರಹ್ಮಬಲಕ್ಕಿಂತಲೂ ಕ್ಷಾತ್ರಬಲವೇ ಅಧಿಕವಾದುದರಿಂದ ರಾಜನ ಮುಂದೆ ತನ್ನ ಶಕ್ತಿಯು ನಿಲ್ಲಲಾರದೆಂದು ತಿಳಿಸಿದನು. ಆಗ ಕಾಮಧೇನುವು "ಎಲೈ ಮಹರ್ಷಿಯೇ, ಬ್ರಹ್ಮಬಲಕ್ಕಿಂತಲೂ ಕ್ಷತ್ರಬಲವು ಅಧಿಕವಲ್ಲ. ಆದರೂ ನನಗೆ ಅನುಜ್ಞೆಯನ್ನು ಕೊಡು. ನಾನು ವಿಶ್ವಾಮಿತ್ರನ ಸೈನ್ಯವನ್ನು ಸೋಲಿಸಬಲ್ಲೆ" ಎಂದಿತು. ಆಗ ವಸಿಷ್ಠನ ಅನುಜ್ಞೆಯಮೇಲೆ ತಾನೇ ಒಂದು ಸೈನ್ಯವನ್ನು ಸೃಷ್ಟಿಸಿತು. ಮ್ಲೇಚ್ಛ, ಯವನ ಇತ್ಯಾದಿ ಪಂಗಡಗಳ ಆ ಸೈನ್ಯಗಳು ವಿಶ್ವಾಮಿತ್ರನ ಬಲವನ್ನು ಎದುರಿಸಿದವು. ಆಗ ವಿಶ್ವಾಮಿತ್ರನು ಪ್ರಬಲವಾದ ತಪಸ್ಸನ್ನು ಮಾಡಿದನು. ಆ ತಪಸ್ಸಿನಿಂದ ಶಿವನನ್ನು ಒಲಿಸಿ ತನ್ನ ಕ್ಷಾತ್ರಪ್ರಭಾವವು ವೃದ್ಧಿಯಾಗುವಂತೆ ಮಾಡಿಕೊಂಡನು. ಆಗ ಅವನ ಅಸ್ತ್ರಜ್ವಾಲೆಯನ್ನು ತಡೆಯಲಾರದೆ ಆಶ್ರಮದಲ್ಲಿದ್ದ ಸಕಲ ಸೈನ್ಯಗಳೂ ಋಷಿಗಳೂ ಇತರ ಸಮಸ್ತರೂ ದಿಕ್ಕುದಿಕ್ಕಿಗೆ ಓಡಿಹೋಗ

ಲಾರಂಭಿಸಿದರು. ಆ ಆಶ್ರಮವೇ ಶೂನ್ಯವಾಯಿತು. ಆಗ ವಸಿಷ್ಠನು ದೃಢಸಂಕಲ್ಪವನ್ನು ಮಾಡಿ "ಈ ಗಾಧಿಪುತ್ರನನ್ನು ನಿರ್ಮೂಲನಮಾಡುವೆನು" ಎಂದು ನಿಶ್ಚಯಿಸಿದನು. ಆಗ ಹೊಗೆಯಾಡದ ಕಾಲಾಗ್ನಿಯಂತೆಯೂ, ಬೇರೊಂದು ಯಮದಂಡವಂತೆಯೂ ಜಾಜ್ವಲ್ಯಮಾನವಾಗಿ ಹೊಳೆಯುತ್ತಿರುವ ತನ್ನ ಬ್ರಹ್ಮದಂಡವನ್ನು ಮೇಲಕ್ಕೆತ್ತಿದನು. ಈ ಬ್ರಹ್ಮದಂಡಕ್ಕೆ ಪ್ರತಿಯಾಗಿ ವಿಶ್ವಾಮಿತ್ರನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದು ಬ್ರಹ್ಮದಂಡದ ಮೇಲೆ ತನ್ನ ಶಕ್ತಿಯನ್ನು ತೋರಿಸಲಾಗದೆ ನಿಷ್ಫಲವಾಯಿತು. ಅನಂತರ ವಾರುಣಾಸ್ತ್ರ, ರೌದ್ರಾಸ್ತ್ರ, ಇತ್ಯಾದಿ ನಾನಾವಿಧವಾದ ಶಕ್ತಿಗಳನ್ನು ಪ್ರಯೋಗಿಸಿದನು. ಕೊನೆಗೆ ಬ್ರಹ್ಮಾಸ್ತ್ರವನ್ನೂ ಪ್ರಯೋಗಿಸಿದನು. ಇವೆಲ್ಲವನ್ನೂ ವಸಿಷ್ಠನ ಬ್ರಹ್ಮದಂಡವು ಒಂದೊಂದಾಗಿ ನುಂಗಿಕೊಂಡಿತು. ಆ ಕೂಡಲೇ ಆ ವಸಿಷ್ಠನಿಗೆ ಒಂದು ಭಯಂಕರವಾದ ರೂಪವುಂಟಾಯಿತು. ಅವನನ್ನು ನೋಡಿ ಮೂರು ಲೋಕವೂ ಭೀತಿಗೊಂಡಿತು. ಆ ಬ್ರಹ್ಮದಂಡವು ಲೋಕಕ್ಕೆಲ್ಲಾ ಯಮದಂಡದಂತಿತ್ತು. ಆಗ ಅಲ್ಲಿದ್ದ ಋಷಿಗಳೆಲ್ಲರೂ ವಸಿಷ್ಠನ ಮಾಹಾತ್ಮ್ಯವನ್ನು ಕೊಂಡಾಡುತ್ತಾ "ಎಲೈ ವಸಿಷ್ಠನೇ, ವಿಶ್ವಾಮಿತ್ರನನ್ನು ನಿಗ್ರಹಿಸಿದುದಾಯಿತು. ಇನ್ನು ಪ್ರಸನ್ನನಾಗು" ಎಂದು ಪ್ರಾರ್ಥಿಸಿದರು. ಒಡನೆಯೇ ವಸಿಷ್ಠನು ತನ್ನ ತೇಜಸ್ಸನ್ನು ತನ್ನಲ್ಲಿಯೇ ಅಡಗಿಸಿಕೊಂಡನು. ಆಗ ವಿಶ್ವಾಮಿತ್ರನು ತನ್ನಲ್ಲಿಯೇ ಸಂಕಟಪಡುತ್ತಾ,

> **ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಂ ।**
> **ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ ॥**

(ರಾಮಾ. ಬಾಲ. ಕಾಂ. ೫೬–೨೩)

ಈ ಕ್ಷಾತ್ರಬಲಕ್ಕೆ ಧಿಕ್ಕಾರವು. ಬ್ರಹ್ಮಬಲವೇ ನಿಜವಾದ ಬಲವು. ನನ್ನ ಸಕಲ ದಿವ್ಯಾಸ್ತ್ರಗಳೂ ವಸಿಷ್ಠನ ಒಂದು ಬ್ರ[illegible]ದಿಂದ ನಷ್ಟವಾಯಿತು" ಎಂದು ತನ್ನ ಬಲವನ್ನು ಮೂದಲಿಸಿಕೊಂಡನು. ಅನಂತರ ಮನಸ್ಸನ್ನೂ ಇಂದ್ರಿಯಗಳನ್ನೂ ಕೆಡಿಸತಕ್ಕ ಕ್ಷತ್ರಿಯಸ್ವಭಾವವನ್ನು ಬಿಟ್ಟು ಬ್ರಹ್ಮಬಲವನ್ನು ಸಂಪಾದಿಸಲು ಸಾಧನವಾದ ತಪಸ್ಸನ್ನು ಆಚರಿಸಿ ತಾನೂ ಬ್ರಾಹ್ಮಣ್ಯವನ್ನು ಸಂಪಾದಿಸಬೇಕೆಂದು ಪ್ರಯತ್ನಿಸಿದನು.

ಆಗ ವಸಿಷ್ಠನೊಡನೆ ಬದ್ಧದ್ವೇಷವುಳ್ಳವನಾಗಿ ದಕ್ಷಿಣದಿಕ್ಕಿಗೆ ಹೊರಟು ಅಲ್ಲಿ ಘೋರವಾದ ತಪಸ್ಸನ್ನಾಚರಿಸಿದನು. ಆಗ ಬ್ರಹ್ಮನು ಪ್ರತ್ಯಕ್ಷನಾಗಿ ವಿಶ್ವಾಮಿತ್ರನನ್ನು ರಾಜರ್ಷಿಯೆಂದು ಕರೆದನು. ಆದರೆ ಅವನಿಗೆ ಅದರಿಂದ ತೃಪ್ತಿಯಾಗಲಿಲ್ಲ. ತಪಸ್ಸನ್ನು ಇನ್ನೂ ಮುಂದುವರಿಸುತ್ತಲೇ ಇದ್ದನು.

ಇಷ್ಟರಲ್ಲಿಯೇ ತ್ರಿಶಂಕುವೆಂಬ ರಾಜನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕೆಂದಿಚ್ಛಿಸಿದನು. ಅವನಿಗೆ ವಸಿಷ್ಠನು ಕುಲಗುರುವು. ವಸಿಷ್ಠನ ಸಹಾಯವನ್ನು ಕೋರಲಾಗಿ ಆಗಲಾರದೆಂದನು. ಆಗ ವಸಿಷ್ಠನ ನೂರು ಮಂದಿ ಪುತ್ರರ ಸಹಾಯವನ್ನು ಬೇಡಿದನು. ಅವರೂ ತಿರಸ್ಕರಿಸಿದರು. ಆಗ ಅವರನ್ನು ತ್ಯಜಿಸಿ ಬೇರೊಬ್ಬನಲ್ಲಿಗೆ ಹೋಗುವೆನೆಂದು ಅವನು ಸಂಕಲ್ಪಿಸಿದೊಡನೆಯೇ ಅವರು ಅವನಿಗೆ ಚಂಡಾಲನಾಗೆಂದು ಶಪಿಸಿದರು. ಕೂಡಲೇ ಅವನು ವಿಕೃತರೂಪನಾದನು. ಅವನ ಪ್ರಜೆಗಳೆಲ್ಲರೂ ಅವನನ್ನು ತ್ಯಜಿಸಿದರು. ಅವನು ಏಕಾಂಗಿಯಾದನು. ಆ ಕಾಲದಲ್ಲಿ ವಿಶ್ವಾಮಿತ್ರನಿಗೆ ಈ ವಿಷಯವು ತಿಳಿಯಿತು. ಆಗ ಅವನಿಗೆ ಅಭಯಪ್ರದಾನವನ್ನು ಮಾಡಿ ಅವನನ್ನು ಸಶರೀರವಾಗಿ ಸ್ವರ್ಗಕ್ಕೆ ಕಳುಹುವೆನೆಂದು ಮಾತುಕೊಟ್ಟನು. ಆಗ ಶಾಪದ ಫಲವು ನೆರವೇರಿಯೇ ತೀರಬೇಕೆಂದು ತಿಳಿದವನಾಗಿ ಚಂಡಾಲರೂಪದಲ್ಲಿರುವಾಗಲೇ ಸ್ವರ್ಗಕ್ಕೆ ಹೋಗಿ ಸೇರಲು ಸಾಧಕವಾಗಿರುವ ಯಾಗವನ್ನು ಮಾಡಿಸುವೆನೆಂದನು. ಆಗ ಈ ವಿಷಯವನ್ನು ತಿಳಿದ ವಸಿಷ್ಠಪುತ್ರರು ದೂಷಿಸಿದರು. "ಆಹಾ ಇದೆಂತಹ ಯಜ್ಞ! ಕ್ಷತ್ರಿಯನು ಪುರೋಹಿತನು. ಚಂಡಾಲನು ದೀಕ್ಷಿತನು" ಎಂದು ಹಾಸ್ಯಮಾಡಿದ ವಿಷಯವು ವಿಶ್ವಾಮಿತ್ರನಿಗೆ ತಿಳಿದಾಗ ಅವರನ್ನು ಶ್ವಮಾಂಸಭಕ್ಷಕರಾಗುವಂತೆ ಶಪಿಸಿದನು.

ಅನಂತರ ಯಜ್ಞಾರ್ಥವಾಗಿ ಆಹೂತರಾದ ಋಷಿಗಳೆಲ್ಲರೂ ಸಹ ವಿಶ್ವಾಮಿತ್ರನ ಪ್ರಭಾವಕ್ಕೆ ಹೆದರಿ ತಮಗಿಷ್ಟ ವಿಲ್ಲದಿದ್ದರೂ ಆ ಯಜ್ಞನಿರ್ವಹಣೆಗೆ ಸಹಾಯಮಾಡುವುದಾಗಿ ಒಪ್ಪಿಕೊಂಡರು. ಯಜ್ಞಕಾಲದಲ್ಲಿ ಹವಿಸ್ಸನ್ನು ಸ್ವೀಕ ರಿಸಲು ಯಾವ ದೇವತೆಗಳೂ ಬರಲಿಲ್ಲ. ಆಗ ವಿಶ್ವಾಮಿತ್ರನು ಯಜ್ಞವನ್ನು ನಿಲ್ಲಿಸಿ ತನ್ನ ತಪಃಶಕ್ತಿಯಿಂದಲೇ ತ್ರಿಶಂಕು ವನ್ನು ಸ್ವರ್ಗಕ್ಕೆ ಕಳುಹುವ ಏರ್ಪಾಡನ್ನು ಮಾಡಿದನು. ತ್ರಿಶಂಕುವು ಸ್ವರ್ಗಕ್ಕೇರಿದೊಡನೆಯೇ ಚಂಡಾಲತ್ವವನ್ನು ಹೊಂದಿರುವ ಅವನಿಗೆ ಸ್ವರ್ಗಕ್ಕೆ ಪ್ರವೇಶವಿಲ್ಲ ಎಂದು ಇಂದ್ರಾದಿಗಳು ಅವನಿಗೆ ಅಲ್ಲಿ ಅವಕಾಶವನ್ನು ಕೊಡಲಿಲ್ಲ. ಒಡ ನೆಯೇ ಅಲ್ಲಿಂದ ತಲೆಕೆಳಗಾಗಿ ಬೀಳುತ್ತಾ ವಿಶ್ವಾಮಿತ್ರನ ರಕ್ಷಣೆಯನ್ನು ಬೇಡಿದನು. ಆಗ ವಿಶ್ವಾಮಿತ್ರನು ನಡುದಾರಿ ಯಲ್ಲಿಯೇ ಅವನನ್ನು ತಡೆದು ನಿಲ್ಲಿಸಿ ಅಲ್ಲಿಯೇ ನಕ್ಷತ್ರಮಂಡಲವನ್ನೂ ನಿರ್ಮಿಸಿದನು. ಅದಕ್ಕೆ ತ್ರಿಶಂಕುಸ್ವರ್ಗವೆಂದು ಹೆಸರಾಯಿತು. ಇದು ವಿಶ್ವಾಮಿತ್ರನ ತಪಃಪ್ರಭಾವಗಳಲ್ಲಿ ಒಂದು ಅಂಶ.

ವಿಶ್ವಾಮಿತ್ರನು ಶುನಃಶೇಪನನ್ನು ರಕ್ಷಿಸಿದ ಕಥಾವಿವರವನ್ನು ಋ. ಸಂ. ಭಾಗ ೩. ಪುಟ 243-249. ತಿಳಿ ಸಿದೆ. ಆದರೆ ವೈದಿಕವಾಕ್ಯಗಳಲ್ಲಿ ವರ್ಣಿತವಾಗಿರುವ ಕಥೆಗೂ ಪುರಾಣಾದಿಗಳಲ್ಲಿ ವರ್ಣಿತವಾಗಿರುವುದಕ್ಕೂ ಅನೇಕ ವ್ಯತ್ಯಾಸಗಳಿರುತ್ತವೆ. ರಾಮಾಯಣದಲ್ಲಿ ಹೇಳಿರುವ ಪ್ರಕಾರ, ಅಂಬರೀಷನ ಯಜ್ಞಕಾಲದಲ್ಲಿ ಯಜ್ಞಪಶುವನ್ನು ಇಂದ್ರನು ಕದ್ದುದರಿಂದ ಆ ಸ್ಥಾನಕ್ಕೆ ಒಬ್ಬ ಪುರುಷನನ್ನೇ ಪಶುಪ್ರತಿನಿಧಿಯನ್ನಾಗಿ ಇಡಬೇಕಾಯಿತು. ಆಗ ಋಚೀಕ ನೆಂಬ ಬ್ರಾಹ್ಮಣನಲ್ಲಿಗೆ ಬಂದು ಅವನ ಪುತ್ರನನ್ನು ಕಳುಹಬೇಕೆಂದನು. ಆಗ ತಂದೆಯು ಹಿರಿಯ ಮಗನನ್ನೂ ತಾಯಿಯು ಕಿರಿಯ ಮಗನನ್ನೂ ಕಳುಹಲಿಷ್ಟಪಡಲಿಲ್ಲ. ಆಗ ಶುನಃಶೇಪನು ತಾನಾಗಿಯೇ ಒಪ್ಪಿಕೊಂಡನು. ವಿಶ್ವಾ ಮಿತ್ರನು ಶುನಃಶೇಪನ ಮಾವನು. ಆಗ ತಂದೆತಾಯಿಗಳಿಂದ ತ್ಯಜಿಸಲ್ಪಟ್ಟ ಅವನು ಮರಣಭೀತಿಯಿಂದ ವಿಶ್ವಾಮಿತ್ರನ ಮರೆಹೊಕ್ಕನು. ಆಗ ತನ್ನ ಮಕ್ಕಳಲ್ಲಿ ಒಬ್ಬನು ಶುನಃಶೇಪನ ಪ್ರತಿನಿಧಿಯಾಗಿ ಒಪ್ಪಿಕೊಳ್ಳುವಂತೆ ಕೇಳಿದನು. ಅವ ರಲ್ಲಿ ಒಬ್ಬರೂ ಒಪ್ಪಲಿಲ್ಲ. ಅವರನ್ನೆಲ್ಲಾ ಚಂಡಾಲರಾಗುವಂತೆ ಶಪಿಸಿದನು. ಆಗ ಶುನಃಶೇಪನಿಗೆ ರಕ್ಷಕವಾದ ಮಂತ್ರ ವನ್ನುಪದೇಶಿಸಿದನು. ಪಶುಹನನಕಾಲದಲ್ಲಿ ಆ ಮಂತ್ರಗಳನ್ನು ಪಠಿಸಿದುದರ ಫಲವಾಗಿ ಅವನು ರಕ್ಷಿಸಲ್ಪಟ್ಟನು. ಇದು ವಿಶ್ವಾಮಿತ್ರನ ತಪಃಪ್ರಭಾವಗಳಲ್ಲಿ ಇನ್ನೊಂದಂಶವಾಗಿದೆ.

ಪುನಃ ವಿಶ್ವಾಮಿತ್ರನು ಸಾವಿರವರ್ಷಗಳವರೆಗೆ ತಪಸ್ಸನ್ನು ಮಾಡಿದುದರ ಫಲವಾಗಿ ಅವನಿಗೆ ಬ್ರಹ್ಮನು ಪ್ರತ್ಯಕ್ಷ ನಾಗಿ ಮಹರ್ಷಿಯೆಂಬ ಹೆಸರನ್ನು ಕೊಟ್ಟನು. ಮೇನಕಾಸಂದರ್ಭದಲ್ಲಿ ಸಂಭವಿಸಿದ ವಿಘ್ನದನಂತರ ಪುನಃ ಕಠಿಣವಾದ ತಪಸ್ಸನ್ನಾಚರಿಸಿದನು. ಈತನು ಉಚ್ಛ್ವಾಸನಿಶ್ವಾಸಗಳನ್ನು ನಿಲ್ಲಿಸಿ ಘೋರವಾದ ವ್ರತದಲ್ಲಿರುವಾಗ ಈತನ ತಲೆಯಿಂದ ಹೊಗೆಯು ಹೊರಡಲಾರಂಭಿಸಿತು. ಇದನ್ನು ನೋಡಿ ಮೂರು ಲೋಕಗಳೂ ಭೀತಿಗೊಂಡವು. ಪ್ರಪಂಚವೆಲ್ಲವೂ ಉರಿ ಯುವಂತೆ ತೋರಿತು. ಸೂರ್ಯನ ತೇಜಸ್ಸೂ ಸಹ ಇವನ ಪ್ರಭೆಯಿಂದ ಕುಂದಿತು. ಆಗ ಬ್ರಹ್ಮನು ಬಂದು ಅವನನ್ನು ಬ್ರಹ್ಮರ್ಷಿಯೆಂದು ಕರೆದನು. ಅದರಿಂದಲೂ ಅವನು ತೃಪ್ತನಾಗದೇ ವಸಿಷ್ಠನಿಂದಲೇ ಬ್ರಹ್ಮರ್ಷಿಯೆನಿಸಿಕೊಳ್ಳಬೇಕೆಂದು ಆಸೆಪಟ್ಟನು. ಆಗ ವಸಿಷ್ಠನೂ ಸಹ ಇವನ ತಪಃಪ್ರಭಾವಕ್ಕೆ ಮೆಚ್ಚಿ ಇವನನ್ನು ಬ್ರಹ್ಮರ್ಷಿಯೆಂದು ಕರೆದನು. ಇದೇ ವಿಶ್ವಾಮಿತ್ರನ ಮಹತ್ವಪೂರಿತವಾದ ಚರಿತ್ರೆಯು.

ಆದುದರಿಂದ ವಸಿಷ್ಠ ಮತ್ತು ವಿಶ್ವಾಮಿತ್ರರಿಗೆ ಪ್ರಥಮದಲ್ಲಿ ಸಖ್ಯ, ನಂತರ ದ್ವೇಷ, ಕೊನೆಯಲ್ಲಿ ಗೌರವಪೂರಿತ ಸ್ನೇಹ. ಆದುದರಿಂದ ಒಂದುಸಲ ಜೊತೆಯಲ್ಲಿದ್ದವರು ಅನಂತರ ಬೇರೆಯಾಗಬಹುದು. ಮತ್ತು ಪುನಃ ಸೇರಬಹುದು. ಪರಸ್ಪರ ನಾಶಕವಾದ ದ್ವೇಷವನ್ನು ಹೊಂದಿದ್ದ ಅದೇ ವಸಿಷ್ಠವಿಶ್ವಾಮಿತ್ರರಿಗೆ ಪರಸ್ಪರ ಯಾವ ವಿಧವಾದ ಗೌರವ ಬುದ್ಧಿಯು ಬೆಳೆಯಿತೆಂಬುದಕ್ಕೆ ವಿಶ್ವಾಮಿತ್ರನು ದಶರಥನ ಸಭೆಯಲ್ಲಿ ರಾಮನನ್ನು ಸಹಾಯಕ್ಕೆ ಕಳುಹಬೇಕೆಂದು ಕೇಳಿದಾಗ ದಶರಥನು ಖಿನ್ನನಾಗಲು ವಸಿಷ್ಠನು ವಿಶ್ವಾಮಿತ್ರನ ವಿಷಯದಲ್ಲಿ ಹೇಳಿದ ಮಾತೇ ಸಾಕ್ಷಿಯಾಗಿದೆ.

ಭಿಸಿದರು. ಆ ಆಶ್ರಮವೇ ಶೂನ್ಯವಾಯಿತು. ಆಗ ವಸಿಷ್ಠನು ದೃಢಸಂಕಲ್ಪವನ್ನು ಮಾಡಿ "ಈ ಗಾಧಿಪುತ್ರ ನಿರ್ಮೂಲನಮಾಡುವೆನು" ಎಂದು ನಿಶ್ಚಯಿಸಿದನು. ಆಗ ಹೊಗೆಯಾಡದ ಕಾಲಾಗ್ನಿಯಂತೆಯೂ, ಬೇರೊಂದು ದಂಡವಂತೆಯೂ ಜಾಜ್ವಲ್ಯಮಾನವಾಗಿ ಹೊಳೆಯುತ್ತಿರುವ ತನ್ನ ಬ್ರಹ್ಮದಂಡವನ್ನು ಮೇಲಕ್ಕೆತ್ತಿದನು. ಈ ದಂಡಕ್ಕೆ ಪ್ರತಿಯಾಗಿ ವಿಶ್ವಾಮಿತ್ರನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದು ಬ್ರಹ್ಮದಂಡದ ಮೇಲೆ ಶಕ್ತಿಯನ್ನು ತೋರಿಸಲಾಗದೆ ನಿಷ್ಫಲವಾಯಿತು. ಅನಂತರ ವಾರುಣಾಸ್ತ್ರ, ರೌದ್ರಾಸ್ತ್ರ, ಇತ್ಯಾದಿ ನಾನಾವಿಧ ಶಕ್ತಿಗಳನ್ನು ಪ್ರಯೋಗಿಸಿದನು. ಕೊನೆಗೆ ಬ್ರಹ್ಮಾಸ್ತ್ರವನ್ನೂ ಪ್ರಯೋಗಿಸಿದನು. ಇವೆಲ್ಲವನ್ನೂ ವಸಿಷ್ಠನ ದಂಡವು ಒಂದೊಂದಾಗಿ ನುಂಗಿಕೊಂಡಿತು. ಆ ಕೂಡಲೇ ಆ ವಸಿಷ್ಠನಿಗೆ ಒಂದು ಭಯಂಕರವಾದ ರೂಪವುಂಟಾ . ಅವನ್ನು ನೋಡಿ ಮೂರು ಲೋಕವೂ ಭೀತಿಗೊಂಡಿತು. ಆ ಬ್ರಹ್ಮದಂಡವು ಲೋಕಕ್ಕೆಲ್ಲಾ ಯಮದಂಡ ತ್ತು. ಆಗ ಅಲ್ಲಿದ್ದ ಋಷಿಗಳೆಲ್ಲರೂ ವಸಿಷ್ಠನ ಮಾಹಾತ್ಮ್ಯವನ್ನು ಕೊಂಡಾಡುತ್ತಾ "ಎಲೈ ವಸಿಷ್ಠನೇ, ವಿಶ್ವಾ ನಸ್ಸು ನಿಗ್ರಹಿಸಿದುದಾಯಿತು. ಇನ್ನು ಪ್ರಸನ್ನನಾಗು" ಎಂದು ಪ್ರಾರ್ಥಿಸಿದರು. ಒಡನೆಯೇ ವಸಿಷ್ಠನು ತನ್ನ ಸ್ಸನ್ನು ತನ್ನಲ್ಲಿಯೇ ಅಡಗಿಸಿಕೊಂಡನು. ಆಗ ವಿಶ್ವಾಮಿತ್ರನು ತನ್ನಲ್ಲಿಯೇ ಸಂಕಟಪಡುತ್ತಾ,

**ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಂ ।**
**ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ ॥**

(ರಾಮಾ. ಬಾಲ. ಕಾಂ. ೫೬-೨೬)

ಕ್ಷಾತ್ರಬಲಕ್ಕೆ ಧಿಕ್ಕಾರವು. ಬ್ರಹ್ಮಬಲವೇ ನಿಜವಾದ ಬಲವು. ನನ್ನ ಸಕಲ ದಿವ್ಯಾಸ್ತ್ರಗಳೂ ವಸಿಷ್ಠನ ಒಂದು ಬ್ರದಂಡದಿಂದ ನಷ್ಟವಾಯಿತು" ಎಂದು ತನ್ನ ಬಲವನ್ನು ಮೂದಲಿಸಿಕೊಂಡನು. ಅನಂತರ ಮನಸ್ಸನ್ನೂ ಇಂದ್ರಿ ಕೆಡಿಸತಕ್ಕ ಕ್ಷತ್ರಿಯಸ್ವಭಾವವನ್ನು ಬಿಟ್ಟು ಬ್ರಹ್ಮಬಲವನ್ನು ಸಂಪಾದಿಸಲು ಸಾಧನವಾದ ತಪಸ್ಸನ್ನು ಆಚ ತಾನೂ ಬ್ರಾಹ್ಮಣ್ಯವನ್ನು ಸಂಪಾದಿಸಬೇಕೆಂದು ಪ್ರಯತ್ನಿಸಿದನು.

ಆಗ ವಸಿಷ್ಠನೊಡನೆ ಬದ್ಧದ್ವೇಷವುಳ್ಳವನಾಗಿ ದಕ್ಷಿಣದಿಕ್ಕಿಗೆ ಹೊರಟು ಅಲ್ಲಿ ಘೋರವಾದ ತಪಸ್ಸನ್ನಾಚರಿಸಿ . ಆಗ ಬ್ರಹ್ಮನು ಪ್ರತ್ಯಕ್ಷನಾಗಿ ವಿಶ್ವಾಮಿತ್ರನನ್ನು ರಾಜರ್ಷಿಯೆಂದು ಕರೆದನು. ಆದರೆ ಅವನಿಗೆ ಆದರಿಂದ ತೃಪ್ತಿ ಗಲಿಲ್ಲ. ತಪಸ್ಸನ್ನು ಇನ್ನೂ ಮುಂದುವರಿಸುತ್ತಲೇ ಇದ್ದನು.

ಇಷ್ಟರಲ್ಲಿಯೇ ತ್ರಿಶಂಕುವೆಂಬ ರಾಜನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕೆಂದಿಚ್ಛಿಸಿದನು. ಅವನಿಗೆ ಷ್ಠನು ಕುಲಗುರುವು. ವಸಿಷ್ಠನ ಸಹಾಯವನ್ನು ಕೋರಲಾಗಿ ಆಗಲಾರದೆಂದನು. ಆಗ ವಸಿಷ್ಠನ ನೂರು ಮಂದಿ ರ ಸಹಾಯವನ್ನು ಬೇಡಿದನು. ಅವರೂ ತಿರಸ್ಕರಿಸಿದರು. ಆಗ ಅವರನ್ನು ತ್ಯಜಿಸಿ ಬೇರೊಬ್ಬನಲ್ಲಿಗೆ ಹೋಗುವೆ ಅವನು ಸಂಕಲ್ಪಿಸಿದೊಡನೆಯೇ ಅವರು ಅವನಿಗೆ ಚಂಡಾಲನಾಗೆಂದು ಶಪಿಸಿದರು. ಕೂಡಲೇ ಅವನು ವಿಕೃತ ನಾದನು. ಅವನ ಪ್ರಜೆಗಳೆಲ್ಲರೂ ಅವನನ್ನು ತ್ಯಜಿಸಿದರು. ಅವನು ಏಕಾಂಗಿಯಾದನು. ಆ ಕಾಲದಲ್ಲಿ ಮಿತ್ರನಿಗೆ ಈ ವಿಷಯವು ತಿಳಿಯಿತು. ಆಗ ಅವನಿಗೆ ಅಭಯಪ್ರದಾನವನ್ನು ಮಾಡಿ ಅವನನ್ನು ಸಶರೀರವಾಗಿ ಕ್ಕೆ ಕಳುಹುವೆನೆಂದು ಮಾತುಕೊಟ್ಟನು. ಆಗ ಶಾಪದ ಫಲವು ನೆರವೇರಿಯೇ ತೀರಬೇಕೆಂದು ತಿಳಿದವನಾಗಿ ಾಲರೂಪದಲ್ಲಿರುವಾಗಲೇ ಸ್ವರ್ಗಕ್ಕೆ ಹೋಗಿ ಸೇರಲು ಸಾಧಕವಾಗಿರುವ ಯಾಗವನ್ನು ಮಾಡಿಸುವೆನೆಂದನು. ಆಗ ಷಯವನ್ನು ತಿಳಿದ ವಸಿಷ್ಠಪುತ್ರರು ದೂಷಿಸಿದರು. "ಆಹಾ ಇದೆಂತಹ ಯಜ್ಞ! ಕ್ಷತ್ರಿಯನು ಪುರೋಹಿತನು. ಾಲನು ದೀಕ್ಷಿತನು" ಎಂದು ಹಾಸ್ಯಮಾಡಿದ ವಿಷಯವು ವಿಶ್ವಾಮಿತ್ರನಿಗೆ ತಿಳಿದಾಗ ಅವರನ್ನು ಶ್ವಮಾಂಸಭಕ್ಷಕ ವಂತೆ ಶಪಿಸಿದನು.

ಅನಂತರ ಯಜ್ಞಾರ್ಥವಾಗಿ ಆಹೂತರಾದ ಋಷಿಗಳೆಲ್ಲರೂ ಸಹ ವಿಶ್ವಾಮಿತ್ರನ ಪ್ರಭಾವಕ್ಕೆ ಹೆದರಿ ತಮಗಿಷ್ಟವಿಲ್ಲದಿದ್ದರೂ ಆ ಯಜ್ಞನಿರ್ವಹಣೆಗೆ ಸಹಾಯಮಾಡುವುದಾಗಿ ಒಪ್ಪಿಕೊಂಡರು. ಯಜ್ಞಕಾಲದಲ್ಲಿ ಹವಿಸ್ಸನ್ನು ಸ್ವೀಕರಿಸಲು ಯಾವ ದೇವತೆಗಳೂ ಬರಲಿಲ್ಲ. ಆಗ ವಿಶ್ವಾಮಿತ್ರನು ಯಜ್ಞವನ್ನು ನಿಲ್ಲಿಸಿ ತನ್ನ ತಪಃಶಕ್ತಿಯಿಂದಲೇ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹುವ ಏರ್ಪಾಡನ್ನು ಮಾಡಿದನು. ತ್ರಿಶಂಕುವು ಸ್ವರ್ಗಕ್ಕೇರಿದೊಡನೆಯೇ ಚಂಡಾಲತ್ವವನ್ನು ಹೊಂದಿರುವ ಅವನಿಗೆ ಸ್ವರ್ಗಕ್ಕೆ ಪ್ರವೇಶವಿಲ್ಲ ಎಂದು ಇಂದ್ರಾದಿಗಳು ಅವನಿಗೆ ಅಲ್ಲಿ ಅವಕಾಶವನ್ನು ಕೊಡಲಿಲ್ಲ. ಒಡನೆಯೇ ಅಲ್ಲಿಂದ ತಲೆಕೆಳಗಾಗಿ ಬೀಳುತ್ತಾ ವಿಶ್ವಾಮಿತ್ರನ ರಕ್ಷಣೆಯನ್ನು ಬೇಡಿದನು. ಆಗ ವಿಶ್ವಾಮಿತ್ರನು ನಡುದಾರಿಯಲ್ಲಿಯೇ ಅವನನ್ನು ತಡೆದು ನಿಲ್ಲಿಸಿ ಅಲ್ಲಿಯೇ ನಕ್ಷತ್ರಮಂಡಲವನ್ನೂ ನಿರ್ಮಿಸಿದನು. ಅದಕ್ಕೆ ತ್ರಿಶಂಕುಸ್ವರ್ಗವೆಂದು ಹೆಸರಾಯಿತು. ಇದು ವಿಶ್ವಾಮಿತ್ರನ ತಪಃಪ್ರಭಾವಗಳಲ್ಲಿ ಒಂದು ಅಂಶ.

ವಿಶ್ವಾಮಿತ್ರನು ಶುನಃಶೇಪನನ್ನು ರಕ್ಷಿಸಿದ ಕಥಾವಿವರವನ್ನು ಋ. ಸಂ. ಭಾಗ ೩. ಪುಟ 243-249. ತಿಳಿಸಿದೆ. ಆದರೆ ವೈದಿಕವಾಕ್ಯಗಳಲ್ಲಿ ವರ್ಣಿತವಾಗಿರುವ ಕಥೆಗೂ ಪುರಾಣಾದಿಗಳಲ್ಲಿ ವರ್ಣಿತವಾಗಿರುವುದಕ್ಕೂ ಅನೇಕ ವ್ಯತ್ಯಾಸಗಳಿರುತ್ತವೆ. ರಾಮಾಯಣದಲ್ಲಿ ಹೇಳಿರುವ ಪ್ರಕಾರ, ಅಂಬರೀಷನ ಯಜ್ಞಕಾಲದಲ್ಲಿ ಯಜ್ಞಪಶುವನ್ನು ಇಂದ್ರನು ಕದ್ದುದರಿಂದ ಆ ಸ್ಥಾನಕ್ಕೆ ಒಬ್ಬ ಪುರುಷನನ್ನೇ ಪಶುಪ್ರತಿನಿಧಿಯನ್ನಾಗಿ ಇಡಬೇಕಾಯಿತು. ಆಗ ಋಚೀಕನೆಂಬ ಬ್ರಾಹ್ಮಣನಲ್ಲಿಗೆ ಬಂದು ಅವನ ಪುತ್ರನನ್ನು ಕಳುಹಬೇಕೆಂದನು. ಆಗ ತಂದೆಯು ಹಿರಿಯ ಮಗನನ್ನೂ ತಾಯಿಯು ಕಿರಿಯ ಮಗನನ್ನೂ ಕಳುಹಲಿಷ್ಟಪಡಲಿಲ್ಲ. ಆಗ ಶುನಃಶೇಪನು ತಾನಾಗಿಯೇ ಒಪ್ಪಿಕೊಂಡನು. ವಿಶ್ವಾಮಿತ್ರನು ಶುನಃಶೇಪನ ಮಾವನು. ಆಗ ತಂದೆತಾಯಿಗಳಿಂದ ತ್ಯಜಿಸಲ್ಪಟ್ಟ ಅವನು ಮರಣಭೀತಿಯಿಂದ ವಿಶ್ವಾಮಿತ್ರನ ಮರೆಹೊಕ್ಕನು. ಆಗ ತನ್ನ ಮಕ್ಕಳಲ್ಲಿ ಒಬ್ಬನು ಶುನಃಶೇಪನ ಪ್ರತಿನಿಧಿಯಾಗಿ ಒಪ್ಪಿಕೊಳ್ಳುವಂತೆ ಕೇಳಿದನು. ಅವರಲ್ಲಿ ಒಬ್ಬರೂ ಒಪ್ಪಲಿಲ್ಲ. ಅವರನ್ನೆಲ್ಲಾ ಚಂಡಾಲರಾಗುವಂತೆ ಶಪಿಸಿದನು. ಆಗ ಶುನಃಶೇಪನಿಗೆ ರಕ್ಷಕವಾದ ಮಂತ್ರವನ್ನುಪದೇಶಿಸಿದನು. ಪಶುಹನನಕಾಲದಲ್ಲಿ ಆ ಮಂತ್ರಗಳನ್ನು ಪಠಿಸಿದುದರ ಫಲವಾಗಿ ಅವನು ರಕ್ಷಿಸಲ್ಪಟ್ಟನು. ಇದು ವಿಶ್ವಾಮಿತ್ರನ ತಪಃಪ್ರಭಾವಗಳಲ್ಲಿ ಇನ್ನೊಂದಂಶವಾಗಿದೆ.

ಪುನಃ ವಿಶ್ವಾಮಿತ್ರನು ಸಾವಿರವರ್ಷಗಳವರೆಗೆ ತಪಸ್ಸನ್ನು ಮಾಡಿದುದರ ಫಲವಾಗಿ ಅವನಿಗೆ ಬ್ರಹ್ಮನು ಪ್ರತ್ಯಕ್ಷನಾಗಿ ಮಹರ್ಷಿಯೆಂಬ ಹೆಸರನ್ನು ಕೊಟ್ಟನು. ಮೇನಕಾಸಂದರ್ಭದಲ್ಲಿ ಸಂಭವಿಸಿದ ವಿಘ್ನದನಂತರ ಪುನಃ ಕಠಿಣವಾದ ತಪಸ್ಸನ್ನಾಚರಿಸಿದನು. ಈತನು ಉಚ್ಛ್ವಾಸನಿಶ್ವಾಸಗಳನ್ನು ನಿಲ್ಲಿಸಿ ಘೋರವಾದ ವ್ರತದಲ್ಲಿರುವಾಗ ಈತನ ತಲೆಯಿಂದ ಹೊಗೆಯು ಹೊರಡಲಾರಂಭಿಸಿತು. ಇದನ್ನು ನೋಡಿ ಮೂರು ಲೋಕಗಳೂ ಭೀತಿಗೊಂಡವು. ಪ್ರಪಂಚವೆಲ್ಲವೂ ಉರಿಯುವಂತೆ ತೋರಿತು. ಸೂರ್ಯನ ತೇಜಸ್ಸೂ ಸಹ ಇವನ ಪ್ರಭೆಯಿಂದ ಕುಂದಿತು. ಆಗ ಬ್ರಹ್ಮನು ಬಂದು ಅವನನ್ನು ಬ್ರಹ್ಮರ್ಷಿಯೆಂದು ಕರೆದನು. ಅದರಿಂದಲೂ ಅವನು ತೃಪ್ತನಾಗದೇ ವಸಿಷ್ಠನಿಂದಲೇ ಬ್ರಹ್ಮರ್ಷಿಯೆನಿಸಿಕೊಳ್ಳಬೇಕೆಂದು ಆಸೆಪಟ್ಟನು. ಆಗ ವಸಿಷ್ಠನೂ ಸಹ ಇವನ ತಪಃಪ್ರಭಾವಕ್ಕೆ ಮೆಚ್ಚಿ ಇವನನ್ನು ಬ್ರಹ್ಮರ್ಷಿಯೆಂದು ಕರೆದನು. ಇದೇ ವಿಶ್ವಾಮಿತ್ರನ ಮಹತ್ವಪೂರಿತವಾದ ಚರಿತ್ರೆಯು.

ಆದುದರಿಂದ ವಸಿಷ್ಠ ಮತ್ತು ವಿಶ್ವಾಮಿತ್ರರಿಗೆ ಪ್ರಥಮದಲ್ಲಿ ಸಖ್ಯ, ನಂತರ ದ್ವೇಷ, ಕೊನೆಯಲ್ಲಿ ಗೌರವಪೂರಿತ ಸ್ನೇಹ. ಆದುದರಿಂದ ಒಂದುಸಲ ಜೊತೆಯಲ್ಲಿದ್ದವರು ಅನಂತರ ಬೇರೆಯಾಗಬಹುದು. ಮತ್ತು ಪುನಃ ಸೇರಬಹುದು. ಪರಸ್ಪರ ನಾಶಕವಾದ ದ್ವೇಷವನ್ನು ಹೊಂದಿದ್ದ ಅದೇ ವಸಿಷ್ಠವಿಶ್ವಾಮಿತ್ರರಿಗೆ ಪರಸ್ಪರ ಯಾವ ವಿಧವಾದ ಗೌರವಬುದ್ಧಿಯು ಬೆಳೆಯಿತೆಂಬುದಕ್ಕೆ ವಿಶ್ವಾಮಿತ್ರನು ದಶರಥನ ಸಭೆಯಲ್ಲಿ ರಾಮನನ್ನು ಸಹಾಯಕ್ಕೆ ಕಳುಹಬೇಕೆಂದು ಕೇಳಿದಾಗ ದಶರಥನು ಖಿನ್ನನಾಗಲು ವಸಿಷ್ಠನು ವಿಶ್ವಾಮಿತ್ರನ ವಿಷಯದಲ್ಲಿ ಹೇಳಿದ ಮಾತೇ ಸಾಕ್ಷಿಯಾಗಿದೆ.

ತೇನಾಸ್ಯ ಮುನಿಮುಖ್ಯಸ್ಯ ಸರ್ವಜ್ಞಸ್ಯ ಮಹಾತ್ಮನಃ ।
ನ ಕಿಂಚಿದಪ್ಯವಿದಿತಂ ಭೂತಂ ಭವ್ಯಂ ಚ ರಾಘವ ॥

(ರಾಮಾ. ಬಾಲ. ಕಾಂ. ೨೨-೧೯)

ಈತನು ಸರ್ವಜ್ಞನು. ಮಹಾಮುನಿಯು. ಈತನಿಗೆ ತಿಳಿಯದಿರುವುದೇ ಇಲ್ಲ. ಇತ್ಯಾದಿಯಾಗಿ ವಿಶ್ವಾಮಿತ್ರನ ಪ್ರಭಾವವನ್ನು ಪ್ರಶಂಸಿಸಿದ್ದಾನೆ. ಆದುದರಿಂದ ಸುದಾಸನಲ್ಲಿಯಾಗಲಿ ಅಥವಾ ಇತರ ರಾಜಾಸ್ಥಾನದಲ್ಲಿಯಾಗಲಿ ವಸಿಷ್ಠ ಮತ್ತು ವಿಶ್ವಾಮಿತ್ರರಿಬ್ಬರೂ ಒಟ್ಟಿಗೆ ಪೌರೋಹಿತ್ಯವನ್ನು ವಹಿಸಿದ್ದಿರಬಹುದು. ಅದು ಅಸಂಭವವಲ್ಲ. ಅನಂತರ ವಸಿಷ್ಠನಿಗೂ ಸುದಾಸನಿಗೂ ದ್ವೇಷವು ಉತ್ಪನ್ನವಾಗಿರಬಹುದು. ಆದುದರಿಂದಲೇ ಅವನನ್ನು ವಸಿಷ್ಠನು ಶಪಿಸಿದ್ದಾನೆ. (ಋ. ಸಂ. ೭-೧೦೪) ಹಾಗೆಯೇ ವಿಶ್ವಾಮಿತ್ರನಿಗೂ ವಸಿಷ್ಠನಿಗೂ ಪ್ರಬಲವಾದ ವಿರೋಧವುಂಟಾಗಿ ವಿಶ್ವಾಮಿತ್ರನು ತನ್ನ ಸೂಕ್ತಗಳಲ್ಲಿ (೩-೫೩-೨೧-೨೪) ವಸಿಷ್ಠವಿದ್ವೇಷಿಣಿಯೆಂಬ ಮಂತ್ರಗಳನ್ನು ಪಠಿಸಿರಬಹುದು.

ವಸಿಷ್ಠನೊಂದಿಗೂ ವಿಶ್ವಾಮಿತ್ರನೊಂದಿಗೂ ಸಮಾನ ಸಂಬಂಧವನ್ನಿಟ್ಟುಕೊಂಡಿದ್ದ ಸುದಾಸನಾರು ? ಈ ಸುದಾಸನು ಭರತವಂಶದವನೇ, ಅಲ್ಲವೇ ? ಇವನಿಗೂ ತೃತ್ಸುಸಂತತಿಯಲ್ಲಿ ಜನಿಸಿದ ಸುದಾಸ ಮತ್ತು ದಿವೋದಾಸ ಇವರೂ ಭರತಸಂತತಿಯವರೂ ಬೇರೆ ಜನಾಂಗದವರೇ ಇತ್ಯಾದ್ಯಂಶಗಳನ್ನು ಪರಿಶೀಲಿಸಿದರೆ ಆಗ ವಿಶ್ವಾಮಿತ್ರನು ಸುದಾಸನ ಪುರೋಹಿತನಾಗಿ ಅವನಿಗೆ ಸಹಾಯಕನಾಗಿದ್ದ ವಿಷಯದ ವಿವರಗಳು ತಿಳಿಯುತ್ತವೆ.

ಋಕ್ಸಂಹಿತೆಯ ೩ನೇ ಮಂಡಲದ ೩೩ನೇ ಸೂಕ್ತದಲ್ಲಿ ವಿಶ್ವಾಮಿತ್ರನು ಭರತನನ್ನು ಕರೆದುಕೊಂಡು ವಿಪಾಟ್ ಮತ್ತು ಶುತುದ್ರೀನದಿಗಳ ಸಂಗಮಕ್ಕೆ ಬಂದು ಅಲ್ಲಿ ಆ ನದಿಗಳನ್ನು ತನಗೂ ತನ್ನವರಿಗೂ ಸಹಾಯಮಾಡುವಂತೆ ಪ್ರಾರ್ಥಿಸಿರುತ್ತಾನೆ ಈ ಪ್ರಾರ್ಥನೆಯ ವಿವರವನ್ನು ಆ ಸೂಕ್ತದ ಉಪೋದ್ಘಾತದಲ್ಲಿ ತಿಳಿಸಿದೆ. ಈ ಭರತನಾರು ? ಸುದಾಸನು ಭರತವಂಶದವನೇ ? ತೃತ್ಸುವಂಶವೆಂದರಾವುದು ? ತೃತ್ಸುವಂಶವೂ ಭರತವಂಶವೂ ಬೇರೆಬೇರೆಯೋ ? ಹಾಗಾದರೆ ವಿಶ್ವಾಮಿತ್ರನು ಇವರಲ್ಲಿ ಯಾರಿಗೆ ಪುರೋಹಿತನು ? ಇತ್ಯಾದಿ ವಿಷಯಗಳನ್ನು ವಿಮರ್ಶಿಸುವುದು ಸದ್ಯಃ ಆವಶ್ಯವಾಗಿರುತ್ತದೆ.

ತ್ವಾಮೀಳೇ ಅಧ ದ್ವಿತಾ ಭರತೋ ವಾಜಿಭಿಃ ಶುನಂ । ಈಜೇ ಯಜ್ಞೇಷು ಯಜ್ಞಿಯಂ ॥

(ಋ. ಸಂ. ೬-೧೬-೪)

ತ್ವಮಿಮಾ ವಾರ್ಯಾ ಪುರು ದಿವೋದಾಸಾಯ ಸುನ್ವತೇ । ಭರದ್ವಾಜಾಯ ದಾಶುಷೇ ॥

(ಋ. ಸಂ. ೬-೧೬-೫)

ಅಗ್ನಿರಗಾಮಿ ಭಾರತೋ ವೃತ್ರಹಾ ಪುರುಚೇತನಃ । ದಿವೋದಾಸಸ್ಯ ಸತ್ಪತಿಃ ॥

(ಋ. ಸಂ. ೬-೧೬-೧೯)

ಇತ್ಯಾದಿ ಮಂತ್ರಗಳಿಂದ ದಿವೋದಾಸನು ಭರತವಂಶದವನೆಂಬುದು ಸ್ಥಿರವಾಗಿ ಹೇಳಲ್ಪಟ್ಟಿದೆ. ಈ ದಿವೋದಾಸನ ಪುತ್ರನೇ ಸುದಾಸನು. ಆದರೆ ಸುದಾಸನಿಗೆ ಪೈಜವನ ಎಂಬ ವಿಶೇಷಣವಿರುವುದರಿಂದ ಸುದಾಸನು ಪಿಜವನನ ಪುತ್ರನೇ ಅಥವಾ ದಿವೋದಾಸನ ಪುತ್ರನೇ ಎಂಬ ಸಂಶಯಕ್ಕೂ ಅವಕಾಶವಾಗುತ್ತದೆ. ಆದರೆ ಈ ಸಂದೇಹವು ಸಾಯಣರ ವಾಕ್ಯದಿಂದ ನಿವಾರಿತವಾಗುತ್ತದೆ.

ಇಮಂ ನರೋ ಮರುತಃ ಸಶ್ಚತಾನು ದಿವೋದಾಸಂ ನ ಪಿತರಂ ಸುದಾಸಃ ।
ಅವಿಷ್ಟನಾ ಪೈಜವನಸ್ಯ ಕೇತಂ ದೂಣಾಶಂ ಕ್ಷತ್ರಮಜರಂ ದುವೋಯು ॥

(ಋ. ಸಂ. ೭-೧೮-೨೫)

ಎಂಬಲ್ಲಿ ಪಿತರಂ ದಿವೋದಾಸಂ ಎನ್ನುವುದು ಸುದಾಸನ ಪಿತೃವಿಗೆ ಅನ್ವಯಿಸುತ್ತದೆ. ಸುದಾಸನ ಪಿತೃವು ಪಿಜವನ

ನಲ್ಲವೇ; ದಿವೋದಾಸನಿಗೆ ಪಿತೃತ್ವವು ಹೇಗೆ ಎಂದರೆ ಅದಕ್ಕೆ ಉತ್ತರವಾಗಿ ಸಾಯಣರು **ದಿವೋದಾಸ ಇತಿ ಪಿಜವನಸ್ಯೈವ ನಾಮಾಂತರಂ** । ಪಿಜವನನಿಗೆ ದಿವೋದಾಸನೆಂಬ ಬೇರೆ ಹೆಸರೂ ಉಂಟು ಎಂದು ತಿಳಿಸಿದ್ದಾರೆ. ಆದುದರಿಂದ ಸುದಾಸನಿಗೆ ದಿವೋದಾಸಪುತ್ರನೆಂದಾಗಲಿ ಅಥವಾ ಪೈಜವನನೆಂದಾಗಲಿ ವಿಶೇಷಣವಿರಬಹುದು.

**ವಿಶ್ವಾಮಿತ್ರಸ್ಯ ರಕ್ಷತಿ ಬ್ರಹ್ಮೇದಂ ಭಾರತಂ ಜನಂ ॥**

(ಋ. ಸಂ ೩-೫೩-೧೨)

ವಿಶ್ವಾಮಿತ್ರನ ಮಂತ್ರವು ಈ ಭರತವಂಶದ ಜನರನ್ನೆಲ್ಲಾ ರಕ್ಷಿಸುತ್ತದೆ ಎಂದಿರುತ್ತದೆ. ಅದರಂತೆಯೇ ವಸಿಷ್ಠಕೃತವಾದ ಮಂತ್ರವನ್ನು ಪರಿಶೀಲಿಸಿದರೆ,

**ದಂಡಾ ಇವೇದ್ಗೋಅಜನಾಸ ಆಸನ್ಪರಿಚ್ಛಿನ್ನಾ ಭರತಾ ಅರ್ಭಕಾಸಃ ।**
**ಅಭವಚ್ಚ ಪುರಏತಾ ವಸಿಷ್ಠ ಆದಿತ್ತೃತ್ಸೂನಾಂ ವಿಶೋ ಅಪ್ರಥಂತ ॥**

(ಋ. ಸಂ. ೭-೩೩-೬)

ಎಂಬಲ್ಲಿ **ತೃತ್ಸು, ಭರತ** ಎಂಬ ಎರಡು ಹೆಸರುಗಳೂ ನಿರ್ದಿಷ್ಟವಾಗಿವೆ. ಈ ಮಂತ್ರದ ತಾತ್ಪರ್ಯವೇನೆಂದರೆ, ಶತ್ರುಗಳಿಂದ ಎದುರಿಸಲ್ಪಟ್ಟ ಭರತರು ಅಲ್ಪಸಂಖ್ಯೆಯುಳ್ಳವರೂ ದುರ್ಬಲರೂ ಆಗಿದ್ದರು. ವಸಿಷ್ಠನು ತೃತ್ಸುಗಳ ಪೌರೋಹಿತ್ಯವನ್ನು ವಹಿಸಿದೊಡನೆಯೇ, ಅವರು ಪ್ರಜಾಸಂತತಿಯುಳ್ಳವರಾಗಿಯೂ ಬಲಿಷ್ಠರಾಗಿಯೂ ಬೆಳೆದರು ಎಂದಿರುತ್ತದೆ. ಇಲ್ಲಿ ಭರತರು ಬೇರೆ, ತೃತ್ಸುಸಂತತಿಯವರು ಬೇರೆಯೇ ಎಂಬ ಆಶಂಕೆಯುಂಟಾದರೆ, ಅದಕ್ಕೆ ಉತ್ತರವಾಗಿ **ತೃತ್ಸೂನಾಮೇವ ರಾಜ್ಞಾಂ ಭರತಾ ಇತಿ ನಾಮಾಂತರೇಣೋಪಾದಾನಂ** ತೃತ್ಸುಗಳಿಗೇ ಭರತರೆಂದೂ ಬೇರೆ ಹೆಸರಿರುತ್ತದೆಯೆಂದು ಸಾಯಣರು ಸ್ಪಷ್ಟವಾಗಿ ತಿಳಿಸಿದ್ದಾರೆ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ ರಾಜಕುಮಾರಿಯರಿಗೂ, **ಶ್ರೀಕಂಠದತ್ತನೃಸಿಂಹರಾಜ ಒಡೆಯರ್** ಎಂಬ ಶುಭನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ-

**ಮೈಸೂರು**
**ವಿಜಯನಾಮ ಸಂ॥ ಚೈತ್ರ ಶುದ್ಧ ಪೌರ್ಣಮಾಸೀ ಸೋಮವಾರ**
**ತಾ॥ 30-3-1953**

**ಅನುವಾದಕ**
**ಹೆಚ್. ಪಿ. ವೆಂಕಟರಾವ್**
**ಆಸ್ಥಾನ ಮಹಾವಿದ್ವಾನ್**

# ವಿಷಯಾನುಕ್ರಮಣಿಕೆ.

## ಮೂರನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು

## ಮೂರನೆಯ ಮಂಡಲದ ಸೂಕ್ತಗಳು, ೭-೨೧

---

# ಎರಡನೆಯ ಅಧ್ಯಾಯವು

## ಮೂರನೆಯ ಮಂಡಲದ ಸೂಕ್ತಗಳು ೩೦-೫೩

**ವಿಷಯಾನುಕ್ರಮಣಿಕೆ ಸಮಾಪ್ತವು**



## ಸಂಕೇತಾಕ್ಷರಗಳ ವಿವರಣೆಯು.

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಸೂ.—ಜೈಮಿನಿಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾ ವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ.—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತ ಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ.
ಬೃ. ದೇ.—ಬೃಹದ್ದೇವತಾ





ಶ್ರೀ ಗಣೇಶಾಯ ನಮಃ

ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

---

## ತೃತೀಯಾಷ್ಟಕೇ ಪ್ರಥಮೋಽಧ್ಯಾಯಃ

---

ಮೂರನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು

**ತೃತೀಯಮಂಡಲದ ಸೂಕ್ತಗಳು—೭-೨೯**

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ |
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ||
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ |
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ||
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ |
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ||

ಋಗ್ವೇದದ ಮೂರನೆಯ ಮಂಡಲಕ್ಕೆ ಸಪ್ತಋಷಿಗಳಲ್ಲಿ ಒಬ್ಬನಾದ ವಿಶ್ವಾಮಿತ್ರನು ಋಷಿಯು. ಈ ಮಂಡಲಕ್ಕೆ ವಿಶ್ವಾಮಿತ್ರನೇ ಋಷಿಯೆಂದು ಪ್ರಸಿದ್ಧವಾಗಿದ್ದರೂ ಈ ಮಂಡಲದಲ್ಲಿರುವ ೧-೧೨, ಸೂಕ್ತಗಳು (ಒಟ್ಟು ೧೪೦ ಋಕ್ಕುಗಳು) ; ೨೪-೩೨ ಸೂಕ್ತಗಳು (೧೧೭ ಋಕ್ಕುಗಳು) ; ೩೩ ನೆಯ ಸೂಕ್ತದಲ್ಲಿ ೧-೩, ೫, ೭,೯, ೧೧-೧೩ ಋಕ್ಕುಗಳು (ಒಟ್ಟು ೯ ಋಕ್ಕುಗಳು) ; ೩೪-೩೫ ಸೂಕ್ತಗಳು (೨೨ ಋಕ್ಕುಗಳು) ; ೩೬ ನೆಯ ಸೂಕ್ತದಲ್ಲಿ ೧-೯, ೧೧ ಋಕ್ಕುಗಳು (ಒಟ್ಟು ೧೦ ಋಕ್ಕುಗಳು) ; ೩೭-೫೩ ಸೂಕ್ತಗಳು (೧೪೪ ಋಕ್ಕುಗಳು) ; ೫೭-೬೨ ಸೂಕ್ತಗಳು (೫೬ ಋಕ್ಕುಗಳು) ; ಒಂಭತ್ತನೆಯ ಮಂಡಲದ ೬೭ ನೆಯ ಸೂಕ್ತದಲ್ಲಿ ೧೩-೧೫ ಋಕ್ಕುಗಳು ( ೩ ಋಕ್ಕುಗಳು) ಇವೆಲ್ಲವೂ ಸೇರಿ ಆಗುವ ೫೦೧ ಋಕ್ಕುಗಳಿಗೆ ವಿಶ್ವಾಮಿತ್ರನು ಋಷಿಯು. ಈ ಮಂಡಲದಲ್ಲಿ ಉಳಿದಿರುವ ಇತರ ಋಕ್ಕುಗಳಿಗೆ ವಿಶ್ವಾಮಿತ್ರ ವಂಶಸ್ಥರಾದ ಇತರರು ಋಷಿಗಳು. ಪ್ರಸಕ್ತವಾದ ಈ ಭಾಗದಲ್ಲಿ ಈ ಮಂಡಲದ ೭-೨೯ ಸೂಕ್ತಗಳಿರುವುವು.

ವಿಶ್ವಾಮಿತ್ರಋಷಿಯ ವಿಷಯವಾಗಿ ಯಾಸ್ಕರು ತಮ್ಮ ನಿರುಕ್ತದಲ್ಲಿ—

**ವಿಶ್ವಾಮಿತ್ರ ಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ | ವಿಶ್ವಾಮಿತ್ರಃ ಸರ್ವಮಿತ್ರಃ | ಸರ್ವಂ ಸಂಸೃತಂ | ಸುದಾಃ ಕಲ್ಯಾಣದಾನಃ | ಪೈಜವನಃ ಪಿಜವನಸ್ಯ ಪುತ್ರಃ |**

ಪಿಜವನಃ ಪುನಃ ಸ್ಪರ್ಧನೀಯಜವೋ ವಾಮಿಶ್ರೀಭಾವಗತಿರ್ವಾ ॥ ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ । ಅನುಯಯುರಿತರೇ । ಸ ವಿಶ್ವಾಮಿತ್ರೋ ನದೀಸ್ತುಷ್ಟಾವ-ಗಾಧಾ ಭವತ-ಇತಿ । ಅಪಿ ದ್ವಿವದಪಿ ಬಹುವತ್ ತದ್ಯದ್ದ್ವಿವದುಪರಿಷ್ಟಾತ್ತ-ದ್ವ್ಯಾಖ್ಯಾಸ್ಯಾಮಃ ॥

(ನಿ. ೨-೨೪)

ಎಂದು ಒಂದು ಪೂರ್ವೇತಿಹಾಸವನ್ನು ಹೇಳಿರುವರು. ವಿಶ್ವಾಮಿತ್ರನೆಂದರೆ ಈ ಋಷಿಯು ಸಕಲರಿಗೂ ಸ್ನೇಹಿತನು ಅಥವಾ ಸಕಲರೂ ಇವನ ಸ್ನೇಹಿತರು ಎಂದು ವಿಶ್ವಾಮಿತ್ರಶಬ್ದದ ಅವಯವಾರ್ಥವು. ಈ ಋಷಿಯು ಪಿಜವನ ಪುತ್ರನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು. ಒಂದು ಸಮಯದಲ್ಲಿ ಆ ರಾಜನು ಕೊಟ್ಟ ಧನವನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗಬೇಕೆಂದು ಹೊರಟು ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳ (ಪಂಜಾಬಿನಲ್ಲಿರುವ ಈಗಿನ Beas and Sutlej ಎಂಬ ನದಿಗಳು) ಸಂಗಮಸ್ಥಾನಕ್ಕೆ ಬಂದನು. ಇವನಲ್ಲಿದ್ದ ದ್ರವ್ಯವನ್ನು ಅಪಹರಿಸಬೇಕೆಂದು ಕಳ್ಳರು ಇವನನ್ನನುಸರಿಸಿ ಬರುತ್ತಿದ್ದರು. ಇದನ್ನು ತಿಳಿದು ವಿಶ್ವಾಮಿತ್ರನು ಹೇಗಾದರೂ ಮಾಡಿ ದಾರಿಗೆ ಅಡ್ಡಲಾಗಿರುವ ಈ ನದಿಗಳನ್ನು ದಾಟಬೇಕೆಂದು ಪ್ರಯತ್ನಿಸಲು ಅವು ಪ್ರವಾಹದ ನೀರಿನಿಂದ ಬಹಳ ಆಳವಾಗಿದ್ದುದರಿಂದ ಸಾಧ್ಯವಾಗಲಿಲ್ಲ. ಆಗ ಋಷಿಯು ಈ ನದಿಗಳನ್ನು ಪ್ರಾರ್ಥಿಸುತ್ತಾ ತಮ್ಮ ನೀರನ್ನು ಕಡಿಮೆಮಾಡಿಕೊಂಡು ತಾನು ದಾಟುಹೋಗಲು ಅನುಕೂಲವಾಗುವಂತೆ ಮಾಡಬೇಕೆಂದು ಸ್ತೋತ್ರಮಾಡಿದನೆಂದು (ಋ. ಸಂ. ೩-೩೩) ನೆಯ ಸೂಕ್ತದಲ್ಲಿಯೂ ಋ. ಸಂ. ೩-೫೩ರಲ್ಲಿ ೯-೧೧ ಋಕ್ಕುಗಳಲ್ಲಿಯೂ ಹೇಳಿದೆ.

ಈ ವಿಶ್ವಾಮಿತ್ರಋಷಿಯು ಮೇಲಿನ ಸೂಕ್ತದಲ್ಲಿ ಎಂದರೆ ಋ. ಸಂ. ೩-೩೩-೫ರಲ್ಲಿ ತಾನು ಕುಶಿಕನ ಮಗನೆಂದು ಹೇಳಿಕೊಂಡಿದಾನೆ. ವಿಶ್ವಾಮಿತ್ರನಿಗೂ ವಸಿಷ್ಠಋಷಿಗೂ ದ್ವೇಷಾಸೂಯೆಗಳಿದ್ದವೆಂದು ರಾಮಾಯಣ ಭಾರತ ಮತ್ತು ಇತರ ಪುರಾಣಗಳಲ್ಲಿ ಹೇಳಿದೆ. ಇದಕ್ಕೆ ಆಧಾರವೂ ಋಗ್ವೇದದಲ್ಲಿ ಕೆಲವುಕಡೆ ಇದೆ. ಅದನ್ನು ಈ ಭಾಗದ ಪೀಠಿಕೆಯಲ್ಲಿ ಚರ್ಚಿಸಲಾಗುವುದು.

ವಿಶ್ವಾಮಿತ್ರ ಮತ್ತು ಈ ಋಷಿಯ ವಂಶಸ್ಥರ ಹೆಸರು ಋ. ಸಂ. ೩-೧-೨೧ ; ೩-೧೮-೪ ; ೩-೫೩-೧೩; ೧೦-೮೯-೧೭ ; ಅ. ವೇ. ೧೮-೩-೬ ; ೧೮-೪-೫೪ ; ಜೈಮಿನಿಯ ಉಪನಿಷದ್ಬ್ರಾಹ್ಮಣ ೩-೧೫-೧ ಇತ್ಯಾದಿ ಮಂತ್ರಗಳಲ್ಲಿ ಪಠಿತವಾಗಿರುವುದು. ಶುನಶ್ಶೇಫನ ವಿಷಯವಾದ ಇತಿಹಾಸದಲ್ಲಿ ವಿಶ್ವಾಮಿತ್ರನ ಪಾತ್ರವು ಬಹು ಮುಖ್ಯವಾಗಿದೆ. ಅದನ್ನು ನಾವು ಋ. ಸಂ. ೨ ನೆಯ ಭಾಗದಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ವಿಶ್ವಾಮಿತ್ರನು ಒಬ್ಬ ಮುಖ್ಯನಾದ ಋಷಿಯೆಂದು ಐತರೇಯ ಆರಣ್ಯಕ ೨-೨-೧ ; ಐ. ಬ್ರಾ. ೬-೧೮-೧ ; ೬-೨೦-೩ ; ತೈ. ಸಂ. ೨-೨-೧-೨ ; ೩-೧-೭-೩ ; ೫-೨-೩-೪ ; ಕಾಠಕಸಂಹಿತಾ ೧೬-೧೯ ; ೨೦-೯ ; ಮೈತ್ರಾಯಣೀಯ ಸಂಹಿತಾ ೨-೭-೧೯ ; ಕೌಶೀತಕೀ ಬ್ರಾಹ್ಮಣ ೧೫-೧ ; ೨೬-೧೪ ; ೨೮-೧,೨ ; ೨೯-೩ ; ಪಂಚವಿಂಶಬ್ರಾಹ್ಮಣ ೧೪-೩-೧೨ ; ಬೃ. ಉ. ೨-೨-೪. ಜೈಮಿನೀಯ ಉಪನಿಷದ್ಬ್ರಾಹ್ಮಣ ೩-೩-೧೩ ; ೩-೧೫-೧ ಇತ್ಯಾದಿ ಸ್ಥಳಗಳಲ್ಲಿ ವರ್ಣನೆ ಇದೆ.

ಪುರಾಣಾದಿಗಳಲ್ಲಿ ವಿಶ್ವಾಮಿತ್ರನು ಒಬ್ಬ ರಾಜನೆಂದೂ ತಪಸ್ಸನ್ನು ಮಾಡಿ ಬ್ರಾಹ್ಮಣನಾದನೆಂದೂ ಹೇಳಿದೆ. ಋಗ್ವೇದದಲ್ಲಿ ಈ ವಿಷಯಕ್ಕೆ ಯಾವ ಆಧಾರವೂ ಇರುವುದಿಲ್ಲ. ಆದರೆ ನಿರುಕ್ತದಲ್ಲಿ (ನಿ. ೨-೨೪) ವಿಶ್ವಾಮಿತ್ರನು ಕೌಶಿಕನೆಂಬ ರಾಜನ ಮಗನೆಂದು ಹೇಳಿದೆ. ಪಂಚವಿಂಶಬ್ರಾಹ್ಮಣದಲ್ಲಿಯೂ (ಪಂ. ವಿ. ಬ್ರಾ. ೨೧-೧೨-೨) ವಿಶ್ವಾಮಿತ್ರನು ರಾಜನೆಂದೇ ಹೇಳಿದೆ. ಋಗ್ವೇದದಲ್ಲಿ ಮಾತ್ರ ಈ ವಿಷಯಸಮರ್ಥನೆಗೆ ಯಾವ ಆಧಾರವೂ ಇಲ್ಲ.

## ಮೂರನೆಯ ಮಂಡಲದಲ್ಲಿ ಏಳನೆಯ ಸೂಕ್ತವು

**ಸೋಮಸ್ಯೇತ್ಯನುವಾಕೇ ದ್ವಾದಶ ಸೂಕ್ತಾನಿ । ತತ್ರ ಪ್ರ ಯ ಆರುರಿತ್ಯೇಕಾದಶರ್ಚಂ ಸಪ್ತಮಂ ಸೂಕ್ತಂ । ಮಂಡಲದ್ರಷ್ಟಾ ವಿಶ್ವಾಮಿತ್ರ ಋಷಿಃ । ಅನುಕ್ತತ್ವಾತ್ ತ್ರಿಷ್ಟುಪ್ ಛಂದಃ । ಮಂಡಲಾದಿಪರಿಭಾಷಯಾಗ್ನಿರ್ದೇವತಾ । ಪ್ರಾತರನುವಾಕಾಶ್ವಿನಶಸ್ತ್ರಯೋಃ ಸೂಕ್ತತ್ರಯಸ್ಯ ಪ್ರತ್ಯಗ್ನಿರುಷಸಸ್ತ್ರೀಣೀತಿ ವಿನಿಯೋಗ ಉಕ್ತಃ । ತದೇಕಂ ತೃತೀಯಂ ಸೂಕ್ತಂ ॥**

**ಅನುವಾದವು**—ಋಗ್ವೇದಸಂಹಿತೆಯ ಮೂರನೆಯ ಮಂಡಲದಲ್ಲಿ **ಸೋಮಸ್ಯ** ಎಂದು ಪ್ರಾರಂಭವಾಗುವ ಮೊದಲನೆಯ ಅನುವಾಕದಲ್ಲಿ ಹನ್ನೆರಡು ಸೂಕ್ತಗಳಿರುವುವು. ಅವುಗಳಲ್ಲಿ **ಪ್ರ ಯ ಆರುಃ** ಎಂಬ ಈ ಸೂಕ್ತವು ಏಳನೆಯದು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಮೂರನೆಯ ಮಂಡಲಕ್ಕೆಲ್ಲಾ ವಿಶ್ವಾಮಿತ್ರನು ಋಷಿಯಾದ್ದರಿಂದ ಈ ಸೂಕ್ತಕ್ಕೂ ವಿಶ್ವಾಮಿತ್ರನೇ ಋಷಿಯು. ತ್ರಿಷ್ಟುಪ್ ಛಂದಸ್ಸು. ಅಗ್ನಿಯು ದೇವತೆಯು. ಪ್ರಾತರನುವಾಕಮಂತ್ರಗಳ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕ್ಕಾಗಿ **ಪ್ರತ್ಯಗ್ನಿರುಷಸಃ** ಎಂದು ಮೊದಲಾಗುವ ಮೂರು ಸೂಕ್ತಗಳ (೫, ೬, ೭ ನೆಯ ಸೂಕ್ತಗಳು) ವಿನಿಯೋಗವಿರುವುದೆಂದು ಹಿಂದೆಯೇ ಹೇಳಿರುವುದರಿಂದಲೂ ಆ ಮೂರು ಸೂಕ್ತಗಳಲ್ಲಿ ಇದು ಮೂರನೆಯ ಸೂಕ್ತವಾದ್ದರಿಂದಲೂ ಈ ಸೂಕ್ತಕ್ಕೂ ಮೇಲೆ ಹೇಳಿರುವುದೇ ವಿನಿಯೋಗವು.

### ಸೂಕ್ತ—೭

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೭ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧, ೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

ಋಷಿಃ—ವಿಶ್ವಾಮಿತ್ರಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ಯ ಆರುಃ ಶಿತಿಪೃಷ್ಠಸ್ಯ ಧಾಸೇರಾ ಮಾತರಾ ವಿವಿಶುಃ ಸಪ್ತ ವಾಣೀಃ ।
ಪರಿಕ್ಷಿತಾ ಪಿತರಾ ಸಂ ಚರೇತೇ ಪ್ರ ಸರ್ಸ್ರಾತೇ ದೀರ್ಘಮಾಯುಃ ಪ್ರಯಕ್ಷೇ ॥

ಪದಪಾಠಃ

ಪ್ರ । ಯೇ । ಆರುಃ । ಶಿತಿಽಪೃಷ್ಠಸ್ಯ । ಧಾಸೇಃ । ಆ । ಮಾತರಾ । ವಿವಿಶುಃ । ಸಪ್ತ । ವಾಣೀಃ ।
ಪರಿಽಕ್ಷಿತಾ । ಪಿತರಾ । ಸಂ । ಚರೇತೇ ಇತಿ । ಪ್ರ । ಸರ್ಸ್ರಾತೇ ಇತಿ । ದೀರ್ಘಂ । ಆಯುಃ ।
ಪ್ರಽಯಕ್ಷೇ ॥ ೧ ॥

ಸಾಯಣಭಾಷ್ಯಂ

**ಶಿತಿಪೃಷ್ಠಸ್ಯ ನೀಲಪೃಷ್ಠಸ್ಯ ಧಾಸೇಃ ಸರ್ವಸ್ಯ ಧಾರಯಿತುರಗ್ನೇರ್ಯೇ ರಶ್ಮಯಃ ಪ್ರಾರುಃ ಪ್ರಕರ್ಷೇಣೋದ್ಗಚ್ಛಂತಿ ತೇ ರಶ್ಮಯೋ ಮಾತರಾ ಮಾತರಾ ದ್ಯಾವಾಪೃಥಿವ್ಯಾವಾವಿವಿಶುಃ । ಸರ್ವತಃ ಪ್ರವಿಷ್ಟಾಃ । ಸಪ್ತ ಸರ್ಪಣಸ್ವಭಾವಾ ವಾಣೀರ್ವನನೀಯಾ ನದೀಶ್ಚಾವಿವಿಶುಃ । ಪರಿಕ್ಷಿತಾ ಪರಿತೋ ವರ್ತಮಾನೇ ಪಿತರಾ ಪಿತರೌ ದ್ಯಾವಾಪೃಥಿವ್ಯೌ ತೇನಾಗ್ನಿನಾ ಸಂಚರೇತೇ । ಸಮ್ಯಕ್ ವ್ಯವಹರತಃ । ತಥಾ ಪ್ರಯಕ್ಷೇ ಪ್ರಕರ್ಷೇಣ ಯಷ್ಟವ್ಯಂ ದೀರ್ಘಮಾಯುರಗ್ನೇಶ್ಚಿರಂ ಜೀವನಂ ಪ್ರಭೂತಮನ್ನಂ ವಾ ಪ್ರಸಸ್ರಾತೇ । ಪ್ರಸಾರಯತಃ । ಸಂಪಾದಯತ ಇತ್ಯರ್ಥಃ । ಯದ್ವಾ ದ್ಯಾವಾಪೃಥಿವ್ಯೌ ಪ್ರಯಕ್ಷೇ ಪ್ರಕರ್ಷೇಣ ಸತತಂ ಯಷ್ಟವ್ಯಂ ಯಜಮಾನಸ್ಯ ದೀರ್ಘಮಾಯುಃ ಸಂಪಾದಯತಃ ॥** ಪ್ರ। ನಿಪಾತತ್ವೇನಾದ್ಯುದಾತ್ತಃ । ತಸ್ಯ ಛಂದಸಿ ವ್ಯವಹಿತಾಶ್ಚೇತಿ ಆರುರಿತ್ಯನೇನ ಸಂಬಂಧಃ । ಆರುಃ । ಋ ಗತೌ । ಲಿಟ್ಯುಸಿ ರೂಪಂ । ಯದ್ವೃತ್ತಯೋಗಾದನಿಘಾತಃ । ಪ್ರತ್ಯಯಸ್ವರಃ । ಶಿತಿಪೃಷ್ಠಸ್ಯ । ಪೃಷ್ಠಶಬ್ದಸ್ಥಕ್ಪ್ರತ್ಯಯಾಂತೋಽಂತೋದಾತ್ತಃ । ಶಿತೇರ್ನಿತ್ಯಾಬಹ್ವಚ್ ಬಹುವ್ರೀಹಾವಭಸದಿತ್ಯುತ್ತರಪದಪ್ರಕೃತಿಸ್ವರತ್ವಂ । ಧಾಸೇಃ । ಡುಧಾಞ್ ಧಾರಣಪೋಷಣಯೋಃ । ಧೇಟ್ ಪಾನೇ ವಾ । ಧಸ್ಯಾತ್ಕರ್ತರಿಸೌನಾದಿಕಃ ಸಿಃ । ಪ್ರತ್ಯಯಸ್ವರಃ । ಮಾತರಾ । ನಪ್ತೃನೇಷ್ಟೃತ್ವಷ್ಟೃಕ್ಷತ್ತೃಹೋತೃಪೋತೃಪ್ರಶಾಸ್ತೃ ಪಿತೃಜಾಮಾತೃದುಹಿತೃ । ಉ.೨-೯೬ । ಇತಿ ತೃಜಂತತ್ವೇನ ನಿಪಾತನಾದಂತೋದಾತ್ತಃ। ಋತೋ ಙಿಸರ್ವನಾಮಸ್ಥಾನಯೋರಿತಿ ಗುಣಃ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ವಿವಿಶುಃ । ವಿಶ ಪ್ರವೇಶನೇ । ಲಿಟಿ ಅಸಂಯೋಗಾಲ್ಲಿಟ್ ಕಿದಿತಿ ಕಿದ್ವದ್ಭಾವಾದ್ಗುಣಾಭಾವಃ । ನಿಘಾತಃ। ಸಪ್ತ। ಸೃಪ್ಲೃ ಗತೌ। ಸಪ್ಯಶೂಭ್ಯಾಂ ತುಟ್ ಚ। ಉ. ೧-೧೫೭ । ಇತಿ ಸಪೇರ್ವಿಧೀಯಮಾನಃ ಕನಿನ್ ತುಡಾಗಮಶ್ಚ ಬಾಹುಲಕಾದೇತಸ್ಯಾಪಿ ಭವತಿ । ಋಕಾರಸ್ಯಾಕಾರಶ್ಚ । ಪ್ರತ್ಯಯನಿತ್ತ್ವೇಽಪಿ ವ್ಯತ್ಯಯೇನಾಂತೋದಾತ್ತತ್ವಂ । ಪರಿಕ್ಷಿತಾ । ಕ್ಷಿ ನಿವಾಸಗತ್ಯೋಃ । ಕ್ವಿಪ್ ಚೇತಿ ಕ್ವಿಪ್। ಪಿತ್ತ್ವಾತ್ತುಗಾಗಮಃ । ಪ್ರಾದಿಸಮಾಸಃ । ಕೃದುತ್ತರಪದಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ಚರೇತೇ । ಚರ ಗತಿಭಕ್ಷಣಯೋಃ । ಸಂಪೂರ್ವಾಚ್ಚರತೇಃ ಸಮಸ್ತೃತೀಯಾಯುಕ್ತಾತ್ । ಪಾ. ೧-೩-೫೪ । ಇತ್ಯಾತ್ಮನೇಪದಂ । ನಿಘಾತಃ । ಸಸ್ರಾತೇ । ಸೃ ಗತೌ । ಅಯಮಂತರ್ಭಾವಿತಣ್ಯರ್ಥಃ । ರೇಫಶ್ಛಾಂದಸಃ । ಈದೂದೇದಿತಿ ಪ್ರಗೃಹ್ಯಸಂಜ್ಞಾ । ನಿಘಾತಃ । ಆಯುಃ । ಇಣ್ ಗತೌ । ಉಸಿನ್ನಿತ್ಯನುವೃತ್ತೌ ಏತೇರ್ಣಿಚ್ಚೇತ್ಯುಸಿನ್ । ಣಿತ್ತ್ವಾದ್ವೃದ್ಧಿಃ । ನಿತ್ತ್ವಾದಾದ್ಯುದಾತ್ತಃ । ಪ್ರಯಕ್ಷೇ । ಯಜ ದೇವಪೂಜಾಸಂಗತಿಕರಣದಾನೇಷ್ವಿತ್ಯಸ್ಮಾತ್ತುಮರ್ಥೇ ಸೇನ್ಪ್ರತ್ಯಯಃ । ಪ್ರಾದಿಸಮಾಸಃ । ಕೃದುತ್ತರಪದಪ್ರಕೃತಿಸ್ವರತ್ವಂ । ಕೃನ್ಮೇಜಂತ ಇತ್ಯವ್ಯಯಸಂಜ್ಞಾಯಾಂ ಅವ್ಯಯಾದಾಪ್ಸುಪ ಇತಿ ಸುಪೋ ಲುಕ್ ॥

ಪ್ರತಿಪದಾರ್ಥ

ಶಿತಿಪೃಷ್ಠಸ್ಯ— ನೀಲಪೃಷ್ಠನೂ । ಧಾಸೇಃ—ಸರ್ವಾಧಾರನೂ ಆದ ಅಗ್ನಿಯ । **ಯೇ**— ಯಾವ ರಶ್ಮಿಗಳು । **ಪ್ರ ಆರುಃ**—ಹೆಚ್ಚಾಗಿ ಮೇಲಕ್ಕೆ ಹೊರಡುತ್ತವೆಯೋ । (**ತೇ**--ಆ ರಶ್ಮಿಗಳು) । **ಮಾತರಾ**— ಮಾತಾಪಿತೃಭೂತರಾದ ದ್ಯಾವಾಪೃಥಿವಿಗಳನ್ನು। **ಆ ವಿವಿಶುಃ**—ಎಲ್ಲ ಕಡೆಗಳಿಂದಲೂ ಪ್ರವೇಶಿಸಿವೆ; (ಮತ್ತು)। **ಸಪ್ತ**— ಹರಿಯುವ ಸ್ವಭಾವದ । **ವಾಣೀಃ**—ವನನೀಯ (ಪೂಜಾರ್ಹ)ವಾದ ನದಿಗಳೂ । (**ವಿವಿಶುಃ**— ಪ್ರವೇಶಿಸಿವೆ) ; । **ಪರಿಕ್ಷಿತಾ**—ಸುತ್ತಲೂ ಇರುವ । **ಪಿತರಾ**— ಮಾತಾಪಿತೃಸ್ಥಾನೀಯರಾದ ದ್ಯಾವಾಪೃಥಿವಿಗಳು ।

**ಸಂ ಚರೇತೇ**—(ಅಗ್ನಿಯೊಡನೆ) ಚೆನ್ನಾಗಿ ವ್ಯವಹರಿಸುತ್ತವೆ; (ಮತ್ತು) | **ಪ್ರಯಕ್ಷೇ**—ಹೆಚ್ಚಾದ ಯಾಗಾಚರಣೆಗೋಸ್ಕರ | **ದೀರ್ಘಂ ಆಯುಃ**—(ಅಗ್ನಿಗೆ) ದೀರ್ಘಾಯುಷ್ಯವನ್ನು [ಅಥವಾ ಪ್ರಭೂತಾನ್ನವನ್ನು] | **ಪ್ರಯಕ್ಷೇ**—ಹೆಚ್ಚಾಗಿ ಸತತವೂ ಯಾಗಗಳನ್ನು ಮಾಡುವುದಕ್ಕೋಸ್ಕರ | **ದೀರ್ಘಂ ಆಯುಃ**—(ಯಾಗಕರ್ತೃವಿಗೆ) ದೀರ್ಘಾಯುಷ್ಯವನ್ನು (ಅಥವಾ ಪ್ರಭೂತಾನ್ನವನ್ನು] | **ಪ್ರ ಸರ್ಸ್ರಾತೇ**—ಹರಡುತ್ತವೆ (ಒದಗಿಸುತ್ತವೆ).

ಭಾವಾರ್ಥ

ನೀಲಪೃಷ್ಠನೂ ಸರ್ವಾಧಾರನೂ ಆದ ಅಗ್ನಿಯ ರಶ್ಮಿಗಳು ಅಗ್ನಿಯಿಂದ ಹೊರಟು ಪ್ರಪಂಚ ಮಾತಾಪಿತೃಭೂತರಾದ ದ್ಯಾವಾಪೃಥಿವಿಗಳನ್ನು ಎಲ್ಲ ಕಡೆಯಲ್ಲಿಯೂ ವ್ಯಾಪಿಸಿವೆ; ಅದೇ ರೀತಿ ಪ್ರವಹಣಶೀಲಗಳೂ ಮತ್ತು ಪೂಜ್ಯಗಳೂ ಆದ ನದಿಗಳೂ ವ್ಯಾಪಿಸಿವೆ; ವ್ಯಾಪಕವಾದ ದ್ಯಾವಾಪೃಥಿವಿಗಳು, ಯಾಗಗಳು ಹೆಚ್ಚಾಗಿ ನಡೆಯಲೆಂದು, ಅಗ್ನಿಗೆ ದೀರ್ಘಾಯುಷ್ಯವನ್ನೂ ಯಜಮಾನನಿಗೆ ಪ್ರಭೂತಾನ್ನವನ್ನೂ ಅನುಗ್ರಹಿಸಿ, ಆ ಅಗ್ನಿಯೊಡನೆ ಸಹಕರಿಸುತ್ತವೆ.

## English Translation.

The (rays) of the blackbacked, all-sustaining (Agni) have arisen, and pervaded the parents (earth and heaven) and the flowing rivers; the surrounding parents co-operate with him, and bestow long life for the sake of assiduous worship.

ವಿಶೇಷ ವಿಷಯಗಳು

**ಧಾಸೇಃ—ಸರ್ವಸ್ಯ ಧಾರಯಿತುಃ** | ನಿರುಕ್ತಕಾರರು **ಧಾಸಿಃ** ಎಂಬ ಪದವನ್ನು ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೩-೯) ಪಾಠಮಾಡಿದ್ದಾರೆ. ಸಾಯಣರು ಎಲ್ಲವನ್ನೂ ಅಗ್ನಿಯು ಧರಿಸಿರುವನು ಎಂದು ಅರ್ಥವನ್ನು ವಿವರಿಸಿರುತ್ತಾರೆ. ಮತ್ತು ಈ ಅಗ್ನಿಯ ರಶ್ಮಿಗಳು ಬಹಳವಾಗಿ ಪ್ರಕಾಶಿಸುತ್ತವೆ ಎಂದೂ ಅರ್ಥವನ್ನು ಹೇಳಿರುತ್ತಾರೆ.

**ಮಾತರಾ ವಿವಿಶುಃ ಸಪ್ತ ವಾಣೀಃ— ವಾಣೀ** ಎಂಬ ಪದವನ್ನು ನಿರುಕ್ತದಲ್ಲಿ ಇಪ್ಪತ್ತೇಳು ವಾಙ್ನಾಮಗಳಲ್ಲಿ (ನಿ. ೨-೨೩) ಪಾಠಮಾಡಿದೆ. ಇಲ್ಲಿ ನದಿಗಳು ಎಂದು ಅರ್ಥವನ್ನು ಹೇಳಿ, ಅಗ್ನಿಯ ರಶ್ಮಿಗಳು ನದಿಗಳಲ್ಲಿ ವ್ಯಾಪಿಸಿರುತ್ತವೆ ಎಂದು ವಿವರಿಸಿದೆ. ಸಪ್ತ ಎಂಬ ಶಬ್ದವು ಸಂಖ್ಯಾವಾಚಕವಾಗಿರುವುದಿಲ್ಲವೆಂಬ ಅರ್ಥವನ್ನು ಇಲ್ಲಿ ನಿರ್ದೇಶಮಾಡಿ ಸಪ್ತಶಬ್ದಕ್ಕೆ ವ್ಯಾಪಿಸುವ ಸ್ವಭಾವವುಳ್ಳವುಗಳು ಎಂದು ಅರ್ಥಮಾಡಿ ರಶ್ಮಿಗಳ ಸ್ವಭಾವವನ್ನೂ ವಿವರಿಸಿದೆ. ಮಾತರಾ ಎಂಬ ಪದವು ನಿರುಕ್ತದಲ್ಲಿ ದ್ಯಾವಾಪೃಥಿವಿಗಳ ನಾಮಗಳಲ್ಲಿ ಉಕ್ತವಾಗದಿದ್ದರೂ ಇಲ್ಲಿ ದ್ಯಾವಾಪೃಥಿವಿಗಳೆಂದು ಈ ಪದಕ್ಕೆ ಅರ್ಥಮಾಡಿ ಅಗ್ನಿಯ ರಶ್ಮಿಗಳು ದ್ಯಾವಾಪೃಥಿವಿಗಳಲ್ಲಿ (ಭೂಮ್ಯಂತರಿಕ್ಷಗಳಲ್ಲಿ)ಯೂ ವ್ಯಾಪಿಸಿರುತ್ತವೆ ಎಂದು ವರ್ಣಿಸಿದೆ. ಈ ದ್ಯಾವಾಪೃಥಿವಿಗಳು ಎಲ್ಲಕ್ಕೂ ಮಾತಾಪಿತೃಗಳಾಗಿ (ತಾಯಿತಂದೆಗಳಂತೆ) ಎಲ್ಲಕ್ಕೂ ಪೋಷಕರಾಗಿರುವ ವಿಷಯವನ್ನು ಋಕ್ಕುಗಳಲ್ಲಿ ಹೇಳಿದೆ.

**ಪರಿಕ್ಷಿತಾ ಪಿತರಾ—ಪರಿತೋ ವರ್ತಮಾನೇ ಪಿತರೌ ದ್ಯಾವಾಪೃಥಿವ್ಯೌ** | **ಲೋಕಕ್ಕೆ ತಾಯಿತಂದೆಗಳಾಗಿರುವ ದ್ಯಾವಾಪೃಥಿವಿಗಳು (ಭೂಮ್ಯಂತರಿಕ್ಷಗಳು) ಎಲ್ಲವನ್ನೂ ವ್ಯಾಪಿಸಿರುತ್ತವೆ ಮತ್ತು ಇವುಗಳು ಅಗ್ನಿಯೊಡನೆ ಲೋಕದಲ್ಲಿ ಸಹಕರಿಸುತ್ತವೆ ಎಂದು ಅರ್ಥ.**

**ಪ್ರಸರ್ಸ್ರಾತೇ ದೀರ್ಘಮಾಯುಃ ಪ್ರಯಕ್ಷೇ**—ಎಂಬ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ದ್ಯಾವಾಪೃಥಿವಿಗಳು—ಯಜ್ಞವು ವಿಘ್ನವಿಲ್ಲದ ರೀತಿಯಿಂದ ನಡೆಯುವುದಕ್ಕಾಗಿ ಯಜ್ಞಕ್ಕೆ ಬೇಕಾಗುವ ಬಹಳವಾದ ಅನ್ನವನ್ನೂ, ಅಗ್ನಿಯು—ಯಜ್ಞವು ನಡೆಯುತ್ತಿರುವ ಕಾಲದಲ್ಲಿ ಸರಿಯಾದ ಸ್ಥಿತಿಯನ್ನು ಹೊಂದಿ ಇರುವಿಕೆಯನ್ನೂ ಉಂಟುಮಾಡುವರೆಂದು ವರ್ಣಿಸಿದೆ. ಆಯುಃ ಎಂಬ ಪದವು ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇದರಿಂದ ಸಾಯಣರು ಪ್ರಭೂತವಾದ ಅನ್ನವೆಂದು ಅರ್ಥವನ್ನು ಹೇಳಿದ್ದಾರೆ. ಎರಡನೆಯ ಅರ್ಥದಲ್ಲಿ—**ದ್ಯಾವಾಪೃಥಿವ್ಯೌ ಪ್ರಕರ್ಷೇಣ ಸತತಂ ಯುಷ್ಮ್ಯಂ ಯಜಮಾನಸ್ಯ ದೀರ್ಘಮಾಯುಃ ಸಂಪಾದಯತಃ** ದ್ಯಾವಾಪೃಥಿವಿಗಳು ಸರ್ವಕಾಲದಲ್ಲಿಯೂ ಯಜ್ಞವನ್ನು ಆಚರಿಸುವ ಯಜಮಾನನಿಗೆ ಬಹಳಕಾಲದವರಿಗೂ ಜೀವಿಸಿ ಇರುವುದಕ್ಕಾಗಿ ಆಯುಸ್ಸಿನ (ಜೀವಿತಕಾಲದ) ಅಭಿವೃದ್ಧಿಯನ್ನು ಅನುಗ್ರಹಿಸುತ್ತಾರೆಂದು ವಿವರಿಸಿದೆ.

ನಿರುಕ್ತಕಾರರು ದ್ಯಾವಾಪೃಥಿವಿಗಳು ಮಾತಾಪಿತೃಗಳಾಗಿರುವ ವಿಷಯದಲ್ಲಿ—

**ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ ಬಂಧುರ್ಮೇ ಮಾತಾ ಪೃಥಿವೀ ಮಹೀಯಂ ।**
**ಉತ್ತಾನಯೋಶ್ಚಮ್ವೋ ೩ ರ್ಯೋನಿರಂತರತ್ರಾ ಪಿತಾ ದುಹಿತುರ್ಗರ್ಭಮಾಧಾತ್ ॥**

(ಋ. ಸಂ. ೧-೧೬೪-೩೩).

ಎಂಬ ಋಕ್ಕನ್ನು ಉದಹರಿಸಿರುವರು. ದುರ್ಗಾಚಾರ್ಯರು. **ಉದಕಂ ಹಿ ದ್ಯುಲೋಕಾತ್ ಪತಿತಂ ಪಾರ್ಥಿವೇನ ಧಾತುನಾ ಸಂಪೃಕ್ತಂ ಓಷಧೀಭಾವಮಾಗಮ್ಯ ಶರೀರಭಾವೇನ ಅವತಿಷ್ಠತೇ ಇತ್ಯೇತದಪೇಕ್ಷ್ಯ ಸರ್ವಭೂತಾನಾಂ ದ್ಯಾವಾಪೃಥಿವ್ಯೌ ಮಾತಾಪಿತರೌ ಉಚ್ಯೇತೇ ।** ದ್ಯುಲೋಕದಿಂದ (ಅಂತರಿಕ್ಷದಿಂದ) ವೃಷ್ಟಿಯರೂಪದಲ್ಲಿ ಭೂಮಿಗೆ ಬಿದ್ದ ನೀರು ಪೃಥಿವಿಯಿಂದ ಸೇರಿ ಸಸ್ಯಾದಿಗಳ ರೂಪವನ್ನು ಹೊಂದಿ ಪ್ರಾಣಿಗಳ ಶರೀರದ ರೂಪವನ್ನು ಹೊಂದುವುದರಿಂದ ಭೂಮ್ಯಂತರಿಕ್ಷಗಳು (ದ್ಯಾವಾಪೃಥಿವಿಗಳು) ಎಲ್ಲಾ ಪ್ರಾಣಿಗಳಿಗೂ ಮಾತಾಪಿತೃಗಳ ರೀತಿಯನ್ನು ಹೊಂದಿರುವುವು ಎಂದು ಅರ್ಥವನ್ನು ವಿವರಿಸಿ,

**ದ್ವೇ ಸ್ರುತೀ ಅಶೃಣವಂ ಪಿತೄಣಾಮಹಂ ದೇವಾನಾಮುತ ಮರ್ತ್ಯಾನಾಂ ।**
**ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚ ॥**

(ಋ. ಸಂ. ೧೦-೮೮-೧೫).

ಎಂಬ ಋಕ್ಕನ್ನು ಉದಹರಿಸಿ, **ತತ್ಕೃತಸ್ಯ ಉಪಕಾರಸ್ಯಾಭಾವೇ ಸತೀತರೌ ಮಾತಾಪಿತರಾವಕಿಂಚಿತ್ಕರಾವೇವ ಭವತಃ । ತಸ್ಮಾದುಪಪದ್ಯತೇ ದ್ಯಾವಾಪೃಥಿವ್ಯೋಃ ಮಾತಾಪಿತೃಭಾವಃ । ಏವಂ ದ್ಯಾವಾಪೃಥಿವೀಭ್ಯಾಂ ಅಂತರಿಕ್ಷೇಣ ಚ ಅವಕಾಶದಾನೇನ ಅನುಗೃಹ್ಯಮಾಣೇನ ಏತಾನಿ ಅಸ್ಮದಾದೀನಿ ಭೂತಾನ್ಯುತ್ಪದ್ಯಂತ ಇತಿ ಅನೇನ ಮಂತ್ರೇಣ ಮಂತ್ರದೃಶಾ ಸ್ಥಾಪಿತಂ ।** ಲೋಕದಲ್ಲಿ ಈ ದ್ಯಾವಾಪೃಥಿವಿಗಳ ಉಪಕಾರವು ಇಲ್ಲದಿದ್ದರೆ ಪ್ರಾಣಿಗಳ ಜನ್ಮಕ್ಕೆ ಕಾರಣರಾದ ತಾಯಿತಂದೆಗಳು ಯಾವ ವಿಧವಾದ ಕಾರ್ಯಕರ್ತರೂ ಆಗಿರುವುದಿಲ್ಲ. ಈ ದ್ಯಾವಾಪೃಥಿವಿಗಳು ಅವಕಾಶವನ್ನು ಅನುಗ್ರಹಿಸಿರುವುದರಿಂದ ಪ್ರಾಣಿಗಳಾಗಿರುವವರ ಶರೀರವು ಉತ್ಪನ್ನವಾಗುತ್ತವೆ ಎಂಬ ಅರ್ಥವನ್ನು ಬೋಧಿಸುವ ಮಂತ್ರವನ್ನು ಮಂತ್ರದೃಷ್ಟನಾದ ಋಷಿಯು ಪ್ರತ್ಯಕ್ಷವಾಗಿ ತಿಳಿದು ಇಲ್ಲಿ ಹೇಳಿರುವನು ಎಂದು ವಿವರಿಸಿರುವರು.

**ದ್ಯಾವಾಪೃಥಿವ್ಯೌ ಯುಷ್ಮ್ಯಂ (ದೀರ್ಘಮಾಯುಃ) ಜೀವನಂ ಪ್ರಭೂತಂ ಅನ್ನಂ ವಾ (ಪ್ರಸಾರಯತಃ) ಸಂಪಾದಯತಃ ।** ದ್ಯಾವಾಪೃಥಿವಿಗಳು ಯಜ್ಞವು ನಡೆಯುವುದಕ್ಕಾಗಿ ಬಹಳವಾದ ಅನ್ನವನ್ನೂ ಆಯುಸ್ಸನ್ನೂ ಉಂಟುಮಾಡುವುವು ಎಂಬ ಅರ್ಥದಲ್ಲಿ ನಿರುಕ್ತಕಾರರು—

**ದ್ಯಾವಾ ನಃ ಪೃಥಿವೀ ಇಮಂ ಸಿಧ್ರಮದ್ಯ ದಿವಿಸ್ಪೃಶಂ ।**
**ಯಜ್ಞಂ ದೇವೇಷು ಯಚ್ಛತಾಂ ॥** (ಋ. ಸಂ. ೨-೪೧-೨೦).

ಎಂಬ ಋಕ್ಕನ್ನು ಉದಹರಿಸಿ, **ದ್ಯಾವಾಪೃಥಿವ್ಯೌ ನ ಇಮಂ ಸಾಧನಮದ್ಯ ದಿವಿಸ್ಪೃಶಂ ಯಜ್ಞಂ ದೇವೇಷು ನಿಯಚ್ಛತಾಂ** । ಈ ದ್ಯಾವಾಪೃಥಿವಿಗಳು ನಮ್ಮ ಶ್ರೇಯಸ್ಸಾಧನವಾದ ಯಜ್ಞವನ್ನು ದೇವತೆಗಳು ಸಂತೋಷಪಡುವ ಹಾಗೆ ಮಾಡಲಿ ಎಂದು ಅರ್ಥವನ್ನು ವಿವರಿಸಿರುತ್ತಾರೆ. ಈ ಋಕ್ಕಿನಲ್ಲಿ ಅಗ್ನಿಯು ದ್ಯಾವಾಪೃಥಿವಿಗಳನ್ನು ಪ್ರವೇಶಿಸುತ್ತಾನೆಂದು ವರ್ಣಿಸಿರುವುದರಿಂದ ಅಗ್ನಿಯ ರಶ್ಮಿಗಳಿಂದ ವ್ಯಾಪ್ತವಾದ ದ್ಯಾವಾಪೃಥಿವಿಗಳು ಲೋಕೋಪಕಾರಕಗಳಾಗಿರುತ್ತವೆ ಎಂದು ತಾತ್ಪರ್ಯವು ಸೂಚಿತವಾಗಿರುತ್ತದೆ.

ವ್ಯಾಕರಣಪ್ರಕ್ರಿಯಾ

ಪ್ರ—**ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦) ಎಂಬುದರಿಂದ ಇದು ನಿಪಾತವಾದುದರಿಂದ ಆದ್ಯುದಾತ್ತವಾಗುತ್ತದೆ. **ವ್ಯವಹಿತಾಶ್ಚ** (ಪಾ. ಸೂ. ೧-೪-೮೨) ಎಂಬುದರಿಂದ ಛಂದಸ್ಸಿನಲ್ಲಿ ಬಹುವ್ಯವಧಾನವಿದ್ದರೂ ಆರುಃ ಎಂಬ ಕ್ರಿಯಾಪದದೊಡನೆ ಸಂಬಂಧವಿರುತ್ತದೆ. ಆದುದರಿಂದ ಇದಕ್ಕೆ ಉಪಸರ್ಗವೆಂದು ಹೆಸರು.

ಆರುಃ—ಋ ಗತೌ. ಧಾತು. **ಛಂದಸಿ ಲುಙ್ ಲಙ್ ಲಿಟಃ** (ಪಾ. ಸೂ. ೩-೪. ೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮ ಪುರುಷ ಬಹುವಚನದಲ್ಲಿ ಉಸ್ ಆದೇಶ ಬಂದಾಗ ಆರುಃ ಎಂಬ ರೂಪವಾಗುತ್ತದೆ. ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶಿತಿಪೃಷ್ಠಸ್ಯ**—ಪೃಷು ಸೇಚನೇ ಧಾತು. **ತಿಥ ಪೃಷ್ಠ ಗೂಥಯೂಥಪ್ರೋಥಾಃ** (ಉ. ಸೂ. ೨-೧೬೪) ಎಂಬುದರಿಂದ ಪೃಷ್ಠ ಶಬ್ದವು ಥಕ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಶಿತಿ ಪೃಷ್ಠಂ ಯಸ್ಯ ಸಃ. ತಸ್ಯ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರಕ್ಕೆ ಅಪವಾದವಾಗಿ **ಶಿತೇರ್ನಿತ್ಯಾಬಹ್ವಜ್ಬಹುವ್ರೀಹಾವಭಸತ್** (ಪಾ. ಸೂ. ೬-೨-೧೩೮) ಎಂಬುದರಿಂದ ಉತ್ತರಪದ ಪ್ರಕೃತಿಸ್ವರ ಬರುತ್ತದೆ.

**ಧಾಸೇಃ**—ಡುಧಾಞ್ ಧಾರಣಪೋಷಣಯೋಃ ಧಾತು. ಅಥವಾ ಧೇಟ್ ಪಾನೇ ಧಾತು. ಇದಕ್ಕೆ ಕರ್ತರಿಯಲ್ಲಿ ಔಣಾದಿಕ ಸಿ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಮಾತರಾ—ನಪ್ತೃ ನೇಷ್ಟೃ ತ್ವಷ್ಟೃ ಕ್ಷತೃ ಹೋತೃ ಪೋತೃ ಪಿತೃ ಜಾಮಾತೃ ದುಹಿತೃ**—(ಉ. ಸೂ. ೨-೯೫) ಎಂಬುದರಿಂದ ತೃಜಂತವಾಗಿ ನಿಪಾತಿತವಾದುದರಿಂದ ಅಂತೋದಾತ್ತವಾಗುತ್ತದೆ. ದ್ವಿವಚನ (ಔ) ಪರವಾದಾಗ **ಋತೋ ಙಿ ಸರ್ವನಾಮಸ್ಥಾನಯೋಃ** (ಪಾ. ಸೂ. ೭-೩-೧೧೦) ಎಂಬುದರಿಂದ ಋಕಾರಕ್ಕೆ ಗುಣ ರಪರವಾಗಿ ಬರುತ್ತದೆ. **ಸುಪಾಂಸುಲುಕ್**— (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ವಿವಿಶುಃ**—ವಿಶ ಪ್ರವೇಶನೇ ಧಾತು. ಲಿಟ್ ಪ್ರಥಮ ಪುರುಷ ಬಹುವಚನಕ್ಕೆ **ಪರಸ್ಮೈಪದಾನಾಂ**—ಸೂತ್ರದಿಂದ ಉಸಾದೇಶ. ಲಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. **ಅಸಂಯೋಗಾಲ್ಲಿಟ್ ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿದ್ವದ್ಭಾವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಸ್ವರ ಬರುತ್ತದೆ.

**ಸಪ್ತ**— ಷೃಪ್ಲೃ ಗತೌ ಧಾತು. **ಸಪ್ಯ ಶೂಭ್ಯಾಂ ತುಟ್ ಚ** (ಉ. ಸೂ. ೧-೧೫೫) ಎಂಬುದರಿಂದ ವಿಧಿಸಲ್ಪಡುವ ಕನಿನ್ ಪ್ರತ್ಯಯ ಮತ್ತು ತುಟಾಗಮವು ಬಹುಲಗ್ರಹಣದಿಂದ ಈ ಧಾತುವಿಗೂ ಬರುತ್ತವೆ. ಬಹುಲಗ್ರಹಣದಿಂದಲೇ **ಋಕಾರಕ್ಕೆ** ಅಕಾರಾದೇಶ. ಸಪ್ತನ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದರೂ **ವ್ಯತ್ಯಯೋಬಹುಲಮ್** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

**ಪರಿಕ್ಷಿತಾ**— ಪರಿ ಎಂಬುದು ಉಪಸರ್ಗ. ಕ್ಷಿ ನಿವಾಸಗತ್ಯೋಃ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಪಿತ್ತಾದುದರಿಂದ **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೩೦) ಎಂಬುದರಿಂದ ಧಾತುವಿಗೆ ತುಕಾಗಮ. ಪ್ರಾದಿಸಮಾಸ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪರಿಕ್ಷಿತ್‌ಶಬ್ದ. ದ್ವಿವಚನ (ಔ) ಪರವಾದಾಗ **ಸುಪಾಂಸುಲುಕ್**—ಎಂಬುದರಿಂದ ಅದಕ್ಕೆ ಡಾ ದೇಶ.

**ಪಿತರಾ**— ಮಾತರಾ ಎಂಬಲ್ಲಿ ವಿವರಿಸಿದಂತೇ ಪ್ರಕ್ರಿಯಾ ಬರುತ್ತದೆ.

**ಚರೇತೇ**—ಚರ ಗತಿಭಕ್ಷಣಯೋಃ ಧಾತು. ಸಮ್ ಎಂಬ ಉಪಸರ್ಗಸಂಬಂಧವಿರುವುದರಿಂದ **ಸಮಸ್ತೃತೀಯಾ ಯುಕ್ತಾತ್** (ಪಾ. ಸೂ. ೧-೩-೫೪) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಸಸ್ರಾತೇ**—ಸೃ ಗತೌ ಧಾತು. ಪ್ರಯೋಜಕವ್ಯಾಪಾರತೋರುವುದರಿಂದ ಇದು ಅಂತರ್ಭಾವಿತ ಣ್ಯರ್ಥಕವಾದ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ **ಲಿಟ್** ಪ್ರಥಮಪುರುಷದ್ವಿವಚನಾಂತರೂಪ. ಛಾಂದಸವಾಗಿ ಅಭ್ಯಾಸದಲ್ಲಿ ರೇಫವು ಅಧಿಕವಾಗಿ ಬಂದಿದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಏಕಾರಾಂತದ್ವಿವಚನಾಂತವಾದುದರಿಂದ **ಈದೂದೇದ್ವಿವಚನಂಪ್ರಗೃಹ್ಯಂ** ಎಂಬುದರಿಂದ ಪ್ರಗೃಹ್ಯಸಂಜ್ಞಾ ಬರುತ್ತದೆ.

**ಆಯುಃ**—ಇಣ್ ಗತೌ ಧಾತು. **ಉಸಿನ್** ಎಂಬ ಸೂತ್ರವು ಅನುವೃತ್ತವಾಗುವಾಗ **ಏತೇರ್ಣಿಚ್ಚ** (ಉ. ಸೂ. ೨-೨೭೫) ಎಂಬುದರಿಂದ ಈ ಧಾತುವಿಗೆ ಉಸಿನ್ ಪ್ರತ್ಯಯ. ಇದಕ್ಕೆ ಣಿತ್ವ ವಿಧಾನಮಾಡಿರುವುದರಿಂದ **ಅಚೋಞ್ಣಿತಿ** ಎಂಬುದರಿಂದ ಧಾತುವಿಗೆ ವೃದ್ಧಿ. **ಏಚೋಯವಾಯಾವಃ** ಎಂಬುದರಿಂದ ಅದಕ್ಕೆ ಆಯಾದೇಶ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಯಕ್ಷೇ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ತುಮುನ್ ಪ್ರತ್ಯಯಾರ್ಥತೋರುವಾಗ **ತುಮರ್ಥೇಸೇಸೇನಸೇ** (ಪಾ. ಸೂ. ೩-೪-೯) ಎಂಬುದರಿಂದ ಸೇನ್ ಪ್ರತ್ಯಯ. **ವ್ರಶ್ಚಭ್ರಸ್ಜ**—ಸೂತ್ರದಿಂದ ಧಾತು ಜಕಾರಕ್ಕೆ ಷತ್ವ. **ಷಢೋಃಕಃಸಿ** ಎಂಬುದರಿಂದ ಅದಕ್ಕೆ ಕಕಾರಾದೇಶ. **ಆದೇಶಪ್ರತ್ಯಯಯೋಃ** ಸೂತ್ರದಿಂದ ಪ್ರತ್ಯಯಸಕಾರಕ್ಕೆ ಷತ್ವ. ಯಕ್ಷೇ ಎಂದು ರೂಪವಾಗುತ್ತದೆ. ಪ್ರಾದಿಸಮಾಸ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಏಕಾರಾಂತಕೃದಂತಶಬ್ದವಾದುದರಿಂದ **ಕೃನ್ಮೇಜಂತಃ**—(ಪಾ. ಸೂ. ೧-೧-೩೯) ಎಂಬುದರಿಂದ ಅವ್ಯಯಸಂಜ್ಞಾ ಬರುವುದರಿಂದ **ಅವ್ಯಯಾದಾಪ್‌ಸುಪಃ** (ಪಾ. ಸೂ. ೨-೪-೮೨) ಎಂಬುದರಿಂದ ಪರದ ವಿಭಕ್ತಿಗೆ ಲುಕ್ ಬರುತ್ತದೆ.

---

ಸಂಹಿತಾಪಾಠಃ

ದಿವಕ್ಷಸೋ ಧೇನವೋ ವೃಷ್ಣೋ ಅಶ್ವಾ ದೇವೀರಾ ತಸ್ಥೌ ಮಧುಮದ್ವಹಂತೀಃ ।
ಋತಸ್ಯ ತ್ವಾ ಸದಸಿ ಕ್ಷೇಮಯಂತಂ ಪರ್ಯೇಕಾ ಚರತಿ ವರ್ತನಿಂ ಗೌಃ ॥ ೨ ॥

ಪದಪಾಠಃ

ದಿವಕ್ಷಸಃ । ಧೇನವಃ । ವೃಷ್ಣಃ । ಅಶ್ವಾಃ । ದೇವೀಃ । ಆ । ತಸ್ಥೌ । ಮಧುಽಮತ್ । ವಹಂತೀಃ ।
ಋತಸ್ಯ । ತ್ವಾ । ಸದಸಿ । ಕ್ಷೇಮಽಯಂತಂ । ಪರಿ । ಏಕಾ । ಚರತಿ । ವರ್ತನಿಂ । ಗೌಃ ॥ ೨ ॥

ಸಾಯಣಭಾಷ್ಯಂ

ವೃಷ್ಣಃ ಕಾಮಾನಾಂ ವರ್ಷಿತುರಗ್ನೇರಶ್ವಾ ವಾಹನರೂಪಾ ರೋಹಿತಾ ದಿವಕ್ಷಸೋ ದಿವಂ ವ್ಯಾಪ್ಯ ವರ್ತಮಾನಾ ಧೇನವೋಽಗ್ನೇಃ ಪ್ರೀಣಯಿತ್ರ್ಯೋ ಭವಂತಿ । ಸೋಽಯಮಗ್ನಿರ್ಮಧುಮತ್ ಮಾಧುರ್ಯೋಪೇತಮುದಕಂ ವಹಂತೀರ್ದೇವೀರ್ದ್ಯೋತನಶೀಲಾ ನದೀರಾತಸ್ಥೌ । ಆತಿಷ್ಠತಿ । ಪ್ರಾಪ್ನೋತೀತ್ಯರ್ಥಃ । ಗೋಶಬ್ದೋ ಮಾಧ್ಯಮಿಕವಾಗ್ವಾಚೀ ಮಾಧ್ಯಮಿಕಾಂ ವಾಚಮಿತಿ ನೈರುಕ್ತಾ ಇತ್ಯಭಿಧಾನಾತ್ । ಏಕಾ ಗೌಃ ಕಾಚಿದುಕ್ತವಿಧಾ ವಾಕ್ ಋತಸ್ಯೋದಕಸ್ಯ ಸದಸಿ ಸ್ಥಾನೇಽಂತರಿಕ್ಷೇ ಕ್ಷೇಮಯಂತಂ ಕ್ಷೇಮಮಾವಾಸಮಿಚ್ಛಂತಂ ವರ್ತನಿಂ ಜ್ವಾಲಾಃ ಪ್ರವರ್ತಯಂತಂ ತ್ವಾ ಹೇ ಅಗ್ನೇ ತ್ವಾಂ ಪರಿಚರತಿ । ಸೇವತೇ ॥ ದಿವಕ್ಷಸಃ । ಅಕ್ಷೂ ವ್ಯಾಪ್ತೌ । ದಿವಂ ವ್ಯಾಪ್ನುವಂತೀತಿ ದಿವಕ್ಷಸಃ । ವಕ್ಷ ರೋಷೇ । ರೋಷಾರ್ಥೋಽಪ್ಯಯಂ ಧಾತುರತ್ರ ವ್ಯಾಪ್ತೌ ವರ್ತತೇ । ದಿವಂ ವಕ್ಷಂತಿ ವ್ಯಾಪ್ನುವಂತೀತಿ । ಅಸುನ್ನಿತ್ಯಸುನ್ಪ್ರತ್ಯಯಃ । ಲೋಪೋ ವ್ಯೋರ್ವಲೀತಿ ವಲೋಪಃ । ಕೃದುತ್ತರಪದಪ್ರಕೃತಿಸ್ವರತ್ವಂ । ಧೇನವಃ । ನುರಿತ್ಯನುವೃತ್ತೌ ಧೇಟ ಇಚ್ಚೇತಿ ಅನುಪ್ರತ್ಯಯಃ । ಇಕಾರಸ್ಯ ಗುಣಃ । ಪ್ರತ್ಯಯಸ್ವರಃ । ವೃಷ್ಣಃ । ವೃಷ ಸೇಚನೇ । ಕನಿನ್ಯುವೃಷಿತಕ್ಷಿರಾಜೀತ್ಯಾದಿನಾ ಕನಿನ್ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತಃ । ಅಶ್ವಾಃ । ಅಶೂ ವ್ಯಾಪ್ತೌ । ಅಶಿಪ್ರುಷಿಲಟಿಕಣೀತ್ಯಾದಿನಾ ಕ್ವನ್ । ನಿತ್ತ್ವಾದಾದ್ಯುದಾತ್ತಃ । ತಸ್ಥೌ । ಷ್ಠಾ ಗತಿನಿವೃತ್ತೌ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಿಟ್ । ಆತ ಔ ಣಲ ಇತ್ಯೌಕಾರಃ । ನಿಘಾತಃ। ಮಧುಮತ್ । ನಿದಿತ್ಯನುವೃತ್ತೌ ಫಲಿಪಾಟಿನಮಿಮನಿಜನಾಮಿತ್ಯಾದಿನಾ ಮನೇರುಪ್ರತ್ಯಯಃ । ತತ್ಸನ್ನಿಯೋಗೇನ ನಕಾರಸ್ಯ ಧಕಾರಃ ನಿತ್ತ್ವಾದಾದ್ಯುದಾತ್ತಃ । ತ್ವಾ । ಯುಷ್ಮಚ್ಛಬ್ದಸ್ಯ ದ್ವಿತೀಯೈಕವಚನಾಂತಸ್ಯ ತ್ವಾಮಾವಿತಿ ತ್ವಾದೇಶಃ । ಅನುದಾತ್ತಶ್ಚ । ಕ್ಷೇಮಯಂತಂ । ಕ್ಷಿ ನಿವಾಸಗತ್ಯೋಃ । ಅರ್ತಿಸ್ತುಸುಹುಸೃಧೃಕ್ಷೀತ್ಯಾದಿನಾ ಮನ್ । ಕ್ಷೇಮಮಾವಾಸಮಾತ್ಮನ ಇಚ್ಛಂತಂ। ಸುಪ ಆತ್ಮನಃ ಕ್ಯಜಿತಿ ಕ್ಯಚ್ । ಕ್ಯಚಿ ಚೇತೀತ್ತ್ವಂ ಅಕೃತ್ಸಾರ್ವಧಾತುಕಯೋರ್ದೀರ್ಘಃ ಇತಿ ದೀರ್ಘತ್ವಂ ಚ ನ ಛಂದಸ್ಯಪುತ್ರಸ್ಯೇತಿ ಪ್ರತಿಷಿಧ್ಯತೇ । ಕ್ಯಚಶ್ಚಿತ್ತ್ವಾದಂತೋದಾತ್ತಃ । ತದಂತಾಚ್ಛತೃಪ್ರತ್ಯಯಃ । ಶಪ್ । ಶಪಃ ಪಿತ್ತ್ವಾದನುದಾತ್ತತ್ವಂ ಶತುಶ್ಚ ಸಾರ್ವಧಾತುಕಸ್ವರೇಣ । ತಯೋಃ ಕ್ಯಚಾ ಸಹೈಕಾದೇಶೇ ಕೃತೇ ಏಕಾ-

ದೇಶ ಉದಾತ್ತೇನೋದಾತ್ತ ಇತ್ಯೇಕಾದೇಶ ಉದಾತ್ತಃ । ಅಂ । ಸುಸ್ತ್ವಾದನುದಾತ್ತಃ । ಉದಾತ್ತಾ-ದನುದಾತ್ತಸ್ಯೇತ್ಯಮಃ ಸ್ವರಿತತ್ವಂ । ಏಕಾ । ಇಣ್ ಗತೌ । ಇಣ್ಭೀಕಾಪೇತ್ಯಾದಿನಾ ಕನ್ । ಟಪಂತಾ-ದಾಪ್ । ನಿಸ್ವರಃ । ವರ್ತನಿಂ । ವೃತು ವರ್ತನೇ । ಅಂತರ್ಭಾವಿತಣ್ಯರ್ಥಃ । ನೃತೇಶ್ಚ ! ಉ. ೨-೧೦೭ । ಇತ್ಯನಿಃ । ಗುಣಃ । ವ್ಯತ್ಯಯೇನಾಂಶೋದಾತ್ತತ್ವಂ । ಗೌಃ । ಗಮ್ಲೃ ಗತೌ ಗಮೇ-ರ್ಡೋಃ । ಉ. ೨-೬೭ । ಇತಿ ಡೋಪ್ರತ್ಯಯಃ । ಡಿತ್ತ್ವಾಟ್ಟಿಲೋಪಃ । ಗೋತೋ ಣಿದಿತಿ ಸುಪ್ರೋ ಣಿತ್ವಾತ್ತದ್ವೃದ್ಧಿಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ.

**ವೃಷ್ಣಃ**—ಕಾಮವರ್ಷಕನಾದ ಅಗ್ನಿಯ । **ಅಶ್ವಾಃ**—ವಾಹನರೂಪವಾದ ರೋಹಿತವರ್ಣದ ಜ್ವಾಲೆಗಳು । **ದಿವಕ್ಷಸಃ**—ಅಂತರಿಕ್ಷವನ್ನು ವ್ಯಾಪಿಸಿ ಇರುವುವುಗಳಾಗಿ । **ಧೇನವಃ**—ಅಗ್ನಿಗೆ ಪ್ರೀತಿಯುಂಟುಮಾಡುವವುಗಳಾಗುತ್ತವೆ; (ಇಂತಹ ಅಗ್ನಿಯು) । **ಮಧುಮತ್**—ಮಾಧುರ್ಯೋಪೇತವಾದ ಉದಕವನ್ನು । **ವಹಂತೀಃ**—ವಹಿಸುವವುಗಳೂ । **ದೇವೀಃ**—ದ್ಯೋತನಶೀಲಗಳೂ ಆದ ನದಿಗಳನ್ನು ! ಆ ತಸ್ಥೌ—ಆಶ್ರಿತ-ನಾಗುತ್ತಾನೆ । (ಹೇ ಅಗ್ನೇ—ಎಲೈ ಅಗ್ನಿಯೇ) । **ಏಕಾ ಗೌಃ**—ಒಂದು (ಸ್ತುತಿರೂಪವಾದ) ಮಾತು । **ಋತಸ್ಯ**—ಉದಕದ । **ಸದಸಿ**—ಸ್ಥಾನವಾದ ಅಂತರಿಕ್ಷದಲ್ಲಿ । **ಕ್ಷೇಮಯಂತಂ**—ನಿವಾಸವನ್ನಪೇಕ್ಷಿಸುವವನೂ । **ವರ್ತನಿಂ**—ಜ್ವಾಲೆಗಳನ್ನು ಹೊರಡಿಸುವವನೂ ಆದ । **ತ್ವಾ**—ನಿನ್ನನ್ನು । **ಪರಿ ಚರತಿ**—ಸೇವಿಸುತ್ತದೆ ॥

ಭಾವಾರ್ಥ.

ಇಷ್ಟಾರ್ಥಪ್ರದನಾದ ಅಗ್ನಿಯ ವಾಹನರೂಪವಾದ ರೋಹಿತವರ್ಣದ ಜ್ವಾಲೆಗಳು, ಅಂತರಿಕ್ಷವನ್ನೂ ವ್ಯಾಪಿಸಿ, ಅಗ್ನಿಗೆ ಪ್ರೀತಿಯುಂಟುಮಾಡುತ್ತವೆ; ಈ ಅಗ್ನಿಯು ಮಧುರವಾದ ಉದಕ ವಾಹಕಗಳೂ, ಪ್ರಕಾಶ ಯುಕ್ತಗಳೂ ಆದ ನದಿಗಳನ್ನು ಆಶ್ರಯಿಸಿಕೊಂಡಿರುತ್ತಾನೆ; ಹೀಗೆ, ಎಲೈ ಅಗ್ನಿಯೇ ಉದಕಗಳಿಗೆ ಆಶ್ರಯ ವಾದ ಅಂತರಿಕ್ಷದಲ್ಲಿ ವಾಸಮಾಡಲು ಇಚ್ಛಿಸುವವನೂ ಜ್ವಾಲೆಗಳಿಗೆ ಕಾರಣಭೂತನೂ ಆದ ನಿನ್ನನ್ನು ಸ್ತುತಿ ರೂಪವಾದ ವಾಕ್ಕು ಸೇವಿಸುತ್ತದೆ (ನಾವು ನಿನ್ನನ್ನು ಸ್ತುತಿಗಳಿಂದ ಪರಿಚರಿಸುತ್ತೇವೆ).

English Translation.

The sky-traversing steeds of the showerer (of benefits) are the milch cows (of Agni); as he attains the divine (rivers), bearers of sweet (water). One sacred sound glorifies you (Agni), who are desirous of repose, pecifying your flames) in the abode of the water (the firmament),

ವಿಶೇಷ ವಿಷಯಗಳು.

**ವೃಷ್ಣಃ—ಕಾಮಾನಾಂ ವರ್ಷಿತುಃ** । ಅಗ್ನಿಯು ಯಜ್ಞಮಾಡುವವರ ಇಷ್ಟಗಳೆಲ್ಲವನ್ನೂ ಪೂರ್ಣ ಮಾಡುವವನೆಂದು ಅರ್ಥ.

**ಅಶ್ವಾಃ—ವಾಹನರೂಪಾಃ ರೋಹಿತಾಃ** ನಿರುಕ್ತಕಾರರು—

**ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾಃ ಸವಿತುಃ । ವಿಶ್ವ ರೂಪಾ ಬೃಹಸ್ಪತೇಃ । ನಿಯುತೋ ವಾಯೋಃ ।** (ನಿ. ೨-೨೮)

ಎಂದು ಆಯಾಯ ದೇವತೆಗಳ ವಾಹನಗಳನ್ನು ನಿರ್ದೇಶಮಾಡಿರುವುದರಿಂದ ಅಗ್ನಿಯ ವಾಹನವು ರೋಹಿತ ವೆಂದು ಪ್ರಸಿದ್ಧವಾಗಿರುವುದು. ಸಾಯಣರು **ರೋಹಿತಾಃ ಅಶ್ವಾಃ** ಎಂದು ಇಲ್ಲಿ ವಿವರಿಸಿದ್ದಾರೆ.

**ಧೇನವಃ**— ಅಗ್ನೇಃ ಪ್ರೀಣಯಿತ್ರ್ಯಃ । **ಧೇನು**ಶಬ್ದವು ಇಪ್ಪತ್ತೆಂಟು ವಾಙ್ನಾಮಗಳಲ್ಲಿ (ನಿ. ೨-೨೩) ಪಠಿತವಾಗಿದೆ. ವಾಕ್ಕುಗಳು ಲೋಕದಲ್ಲಿ ಸಂತೋಷಪಡಿಸುವಂತೆ ಅಗ್ನಿಯ ವಾಹನಗಳಾದ ರೋಹಿತಾಶ್ವಗಳು ಅಗ್ನಿಯನ್ನು ಸಂತೋಷಪಡಿಸುತ್ತವೆ ಎಂದು (ಔಪಚಾರಿಕವಾದ ಪ್ರಯೋಗವನ್ನು ಆಶ್ರಯಿಸಿ) ಅರ್ಥವನ್ನು ವಿವರಿಸಿದೆ.

**ಋತಸ್ಯ—ಉದಕಸ್ಯ**—ಋತಶಬ್ದವು ಉದಕನಾಮಗಳಲ್ಲಿ (ನಿ. ೨-೨೪)ಯೂ, ಕಾಲವಿಶೇಷ ಎಂಬ ಅರ್ಥದಲ್ಲಿಯೂ, ಪಠಿತವಾಗಿರುತ್ತದೆ. ಇಲ್ಲಿ ಉದಕವೆಂದು ಅರ್ಥವನ್ನು ವಿವರಿಸಿದೆ.

**ಕ್ಷೇಮಯಂತಂ — ಕ್ಷೇಮಂ ಆವಾಸಮಿಚ್ಛಂತಂ.** ಅಗ್ನಿಯು ಮಧುರವಾದ (ರುಚಿಕರವಾದ) ಉದಕಗಳನ್ನು ಹರಿಯುವ ನದಿಗಳಲ್ಲಿ ಸುಖಕರವಾದ ವಾಸಸ್ಥಾನವನ್ನು ಕಲ್ಪಿಸಿಕೊಂಡು (ಉದಕದಲ್ಲಿ ವ್ಯಾಪಿಸಿ) ಇರುವನೆಂದು ಅರ್ಥ. ಆದರಿಂದ ಔರ್ವಾಗ್ನಿಯೂ, ಮೇಘಗಳ ಮಧ್ಯದಲ್ಲಿ ಇರುವ ವೈದ್ಯುತಾಗ್ನಿಯೂ ವಿವೃತ ವಾಗಿರುವುದೆಂದು ಅರ್ಥ.

**ಗೌಃ**—ಮಾಧ್ಯಮಿಕಾ ವಾಕ್ । ಗೋಶಬ್ದವು ಇಪ್ಪತ್ತೊಂದು ಪೃಥಿವೀ ನಾಮಗಳಲ್ಲಿ (ನಿ. ೨-೫) ಉಕ್ತವಾಗಿರುವುದು. **ಗೌರಿತಿ ಪೃಥಿವ್ಯಾ ನಾಮಧೇಯಂ** ಎಂದು ನಿರುಕ್ತವಾಕ್ಯವು, ಈ ಅರ್ಥವನ್ನು ವಿವರಿಸುತ್ತದೆ. **ಅಥಾಪಿ ಪಶುನಾಮೇಹ ಭವತ್ಯೇತಸ್ಮಾದೇವ** । ಗೌಃ ಎಂಬ ಶಬ್ದವು ಗಾಙ್ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಪಶು ಎಂಬ ಅರ್ಥವನ್ನು ಬೋಧಿಸುವುದು. ಗೋವುಗಳೆಂದು ಅರ್ಥ.

**ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಸ್ಸನ್ನದ್ಧಾ ಪತತಿ ಪ್ರಸೂತಾ**
**ಯತ್ರಾ ನರಃ ಸಂ ಚ ವಿ ಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮ ಯಂಸನ್ ॥**
**(ಋ. ಸಂ. ೬-೭೫-೧೧).**

ಈ ಋಕ್ಕಿನಲ್ಲಿ ಗೋ ಶಬ್ದಕ್ಕೆ ಸ್ನಾಯುವೂ ಶ್ಲೇಷ್ಮವೂ ಅರ್ಥವಾಗಿರುವುದೆಂದು ವರ್ಣಿಸಿದೆ.

**ವೃಕ್ಷೇವೃಕ್ಷೇ ನಿಯತಾ ಮೀಮಯದ್ಗೌಸ್ತತೋ ವಯಃ ಪ್ರ ಪತಾನ್ ಪೂರುಷಾದಃ ।**
**ಅಥೇದಂ ವಿಶ್ವಂ ಭುವನಂ ಭಯಾತ ಇಂದ್ರಾಯ ಸುನ್ವದೃಷಯೇ ಚ ಶಿಕ್ಷತ್ ।**
**(ಋ. ಸಂ. ೧೦-೨೭-೨೨)**

ಈ ಋಕ್ಕಿನಲ್ಲಿ ಜ್ಯಾ ಎಂಬ ಅರ್ಥವನ್ನು ಗೋ ಶಬ್ದಕ್ಕೆ ಹೇಳಿದೆ.

ಉತಾದಃ ಪರುಷೇ ಗವಿ **ಸೂರಶ್ಚಕ್ರಂ ಹಿರಣ್ಯಯಂ । ನ್ಯೈರಯದ್ರಥೀತಮಃ ॥**
**(ಋ. ಸಂ. ೬-೫೬-೩)**

ಇಲ್ಲಿ **ಆದಿತ್ಯೋಽಪಿ ಗೌರುಚ್ಯತೇ** ಎಂದು ಅರ್ಥಮಾಡಿರುವುದರಿಂದ ಆದಿತ್ಯನೂ ಗೋ ಶಬ್ದಕ್ಕೆ ಅರ್ಥವೆಂದು ನಿರುಕ್ತಕಾರರು ಹೇಳಿರುತ್ತಾರೆ.

ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ **ಯತ್ರ ಗಾವೋ ಭೂರಿಶೃಂಗಾ ಅಯಾಸಃ ।**
ಅತ್ರಾಹ ತದುರುಗಾಯಸ್ಯ ವೃಷ್ಣಃ **ಪರಮಂ ಪದಮವ ಭಾತಿ ಭೂರಿ ॥** (ಋ. ಸಂ. ೧-೧೫೪-೬).

**ಇಲ್ಲಿ ಸರ್ವೇಽಪಿ ರಶ್ಮಯಃ ಗಾವ ಉಚ್ಯಂತೇ** ಎಂದು ಗೋ ಶಬ್ದಕ್ಕೆ ರಶ್ಮಿ ಎಂದು ಅರ್ಥವನ್ನು ಹೇಳಿದೆ.

ದುರ್ಗಾಚಾರ್ಯರು **ಸುಷುಮ್ನೋ ರಶ್ಮಿರೇಕ ಏವ ಗೌಃ ಇತಿ ಉಚ್ಯತೇ** ಎಂದು ವ್ಯಾಖ್ಯಾನ ಮಾಡಿರುವುದರಿಂದ ಸುಷುಮ್ನಾನಾಡಿಯ ರಶ್ಮಿಯೂ ಗೋ ಶಬ್ದಕ್ಕೆ ಅರ್ಥವು. ಗೋ ಶಬ್ದಕ್ಕೆ ಪೃಥಿವೀ, ಗೋವುಗಳು,

ಸ್ನಾಯು ಶ್ಲೇಷ್ಮ, ಮೌರ್ವೀ, ಆದಿತ್ಯ, ರಶ್ಮಿಗಳು, ಸುಷುಮ್ನಾನಾಡಿಯ ರಶ್ಮಿ ಎಂಬ ಅನೇಕಾರ್ಥಗಳು ಇರುತ್ತವೆ. ಸಾಯಣರು—

**ಗೋಶಬ್ದೋ ಮಾಧ್ಯಮಿಕವಾಗ್ವಾಚೀ ಮಾಧ್ಯಮಿಕಾಂ ವಾಚಮಿತಿ ನೈರುಕ್ತಾ ಇತ್ಯಭಿಧಾನಾತ್ । ಏಕಾ ಗೌಃ ಕಾಚಿದುಕ್ತವಿಧಾ ವಾಕ್ ವರ್ತನಿಂ ಜ್ವಾಲಾಃ ಪ್ರವರ್ತಯಂತಂ ತ್ವಾಂ ಪರಿಚರಿತಿ ಸೇವತೇ ॥**

ಎಂದು ವ್ಯಾಖ್ಯಾನ ಮಾಡಿ ಅಗ್ನಿಯನ್ನು ಮಾಧ್ಯಮಿಕಾ ವಾಕ್ ಸೇವಿಸುವುದು ಎಂದು ಅರ್ಥವನ್ನು ಮಾಡಿರುತ್ತಾರೆ. ವೈಶ್ವಾನರಾಗ್ನಿಯು ಪ್ರಾಣಿಗಳ ವಾಗಭಿವ್ಯಕ್ತಿಯ ವಿಷಯದಲ್ಲಿ ಪ್ರಾಣವಾಯುವಿನಿಂದ ಪ್ರೇರಿತವಾಗಿ ವಾಗಭಿವ್ಯಕ್ತಿಜನಕವಾಗಿರುವುದು ಎಂದು ಕ್ಲಿಷ್ಟವಾದ ರೀತಿಯಿಂದ ಅರ್ಥವನ್ನು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ.

**ದಿವಕ್ಷಸಃ**—ಅಕ್ಷೂ ವ್ಯಾಪ್ತೌ ಧಾತು. ದಿವಂ ವ್ಯಾಪ್ನುವಂತೀತಿ ದಿವಕ್ಷಸಃ ಅಥವಾ ವಕ್ಷ ರೋಷೇ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ವ್ಯಾಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ದಿವಂ ವಕ್ಷಂತಿ ವ್ಯಾಪ್ನುವಂತಿ ಇತಿ ದಿವಕ್ಷಸಃ **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ದಿವ್+ವಕ್ಷ್+ಅಸುನ್ ಎಂದಿರುವಾಗ **ಲೋಪೋವ್ಯೋರ್ವಲಿ** (ಪಾ. ಸೂ. 6-೧-೬೬) ಎಂಬುದರಿಂದ ದಿವ್ ಎಂಬಲ್ಲಿರುವ ವಕಾರಕ್ಕೆ ಲೋಪ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಧೇನವಃ**—ಧೇಟ್ ಪಾನೇ ಧಾತು. ನುಃ ಎಂಬ ಸೂತ್ರವು ಅನುವೃತ್ತವಾಗುವಾಗ ಧೇಟ್ ಇಚ್ಚ (ಉ. ಸೂ. ೩-೩೧೪) ಎಂಬುದರಿಂದ ನು ಪ್ರತ್ಯಯ. ಇಕಾರ ಬಂದಾಗ ಅದಕ್ಕೆ ಪ್ರತ್ಯಯನಿಮಿತ್ತವಾಗಿ ಗುಣ. ಧೇನು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವೃಷ್ಣಃ**—ವೃಷ ಸೇಚನೇ ಧಾತು. **ಕನಿನ್‌ಯುವೃಷಿತಕ್ಷಿ**—(ಉ. ಸೂ. ೧-೧-೧೫೫) ಎಂಬುದರಿಂದ ಕನಿನ್ ಪ್ರತ್ಯಯ. ಇದು ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಶ್ವಾ**—ಅಶೂ ವ್ಯಾಪ್ತೌ ಧಾತು. **ಅಶುಪ್ರುಷಿಲಟಿಕಣಿ**—(ಉ. ಸೂ. ೧-೧೫೧) ಎಂಬುದರಿಂದ ಕ್ವನ್ ಪ್ರತ್ಯಯ. ನಿತ್ತಾದುದರಿಂದ ಹಿಂದಿನಂತೆ ಆದ್ಯುದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ತಸ್ಥೌ**—ಷ್ಠಾ ಗತಿನಿವೃತ್ತೌ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಕ್ಕೆ ಣಲಾದೇಶ ಬಂದಾಗ ಅದಕ್ಕೆ **ಆತಔಣಲಃ** (ಪಾ. ಸೂ. ೭-೧-೩೪) ಎಂಬುದರಿಂದ ಔಕಾರಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಮಧುಮತ್**—ಮನ ಜ್ಞಾನೇ ಧಾತು. **ಫಲಿಪಾಟಿ ನಮಿಮನಿ ಜನಾಮ್** (ಉ. ಸೂ. ೧.೧೮) ಎಂಬುದರಿಂದ ಉ ಪ್ರತ್ಯಯ. ಆದರೊಡನೆ ಧಾತುವಿನ ನಕಾರಕ್ಕೆ ಧಕಾರಾದೇಶ. ಮಧು ಎಂದು ರೂಪ

ವಾಗುತ್ತದೆ. ಪೂರ್ವಸೂತ್ರದಿಂದ ನಿತ್ ಎಂದು ಅನುವೃತ್ತವಾಗುವುದರಿಂದ ಪ್ರತ್ಯಯಕ್ಕೆ ನಿತ್ವವಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ತೆದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಇದರ ಮೇಲೆ ಮತುಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ವಹಂತೀಃ**—ವಹ ಪ್ರಾಪಣೇ ಧಾತು. ಲಟಿಗೆ ಸತ್ರಾದೇಶ. ಸ್ತ್ರೀತ್ವ ವಿವಕ್ಷಾ ಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ **ಙೀಪ್. ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ತ್ವಾ**—ಯುಷ್ಮದ್ ಶಬ್ದ. ದ್ವಿತೀಯಾವಿಭಕ್ತಿ ಏಕವಚನಾಂತಕ್ಕೆ **ತ್ವಾಮೌ**—(ಪಾ. ಸೂ. ೮-೧-೨೩) ಎಂಬುದರಿಂದ ಅನುದಾತ್ತಸ್ವರ ವಿಶಿಷ್ಟವಾದ ತ್ವಾದೇಶ.

**ಸದಸಿ**—ಷದ್ಲ್ ವಿಶರಣಗತ್ಯವಸಾದನೇಷು ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಕ್ಷೇಮಯಂತಂ**—ಕ್ಷಿ ನಿವಾಸಗತ್ಯೋಃ ಧಾತು. **ಅರ್ತಿಸ್ತುಸುಹು ಸೃಧೃಕ್ಷಿ**—( ಉ. ಸೂ. ೧-೩೭) ಎಂಬುದರಿಂದ ಮನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತು ಇಕಾರಕ್ಕೆ ಗುಣ. ಕ್ಷೇಮ ಎಂದು ರೂಪವಾಗುತ್ತದೆ. ಕ್ಷೇಮಂ ಆವಾಸಂ ಆತ್ಮನಃ ಇಚ್ಛನ್, ಕ್ಷೇಮಯನ್ ತಮ್. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಇದು ಪರವಾದಾಗ **ಕ್ಯಚಿಚ** ಎಂಬುದರಿಂದ ಈತ್ವವೂ **ಅಕೃತ್‌ಸಾರ್ವಧಾತುಕಯೋರ್ದೀರ್ಘಃ** ಎಂಬುದರಿಂದ ದೀರ್ಘವೂ ಪ್ರಾಪ್ತವಾದರೆ **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಅವುಗಳಿಗೆ ಪ್ರತಿಷೇಧ ಬರುತ್ತದೆ. ಕ್ಷೇಮಯ ಎಂಬುದು **ಸನಾದ್ಯಂತಾಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ಧಾತು ಸಂಜ್ಞೆಯನ್ನು ಹೊಂದುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಇದರ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ಶಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್‌ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತವಾಗುತ್ತದೆ. ಲಸಾರ್ವಧಾತುಕವು **(ಶತೃ) ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುತ್ತದೆ. **ಅತೋಗುಣೇ** ಸೂತ್ರದಿಂದ ಕ್ಯಚಿನ ಉದಾತ್ತ ಅಕಾರದೊಡನೆ ಏಕಾದೇಶ ಬಂದುದರಿಂದ **ಏಕಾದೇಶಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಅದು ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಪರವಾದಾಗ ಉಗಿತ್ತಾದುದರಿಂದ ನುಮಾಗಮ. ಪ್ರತ್ಯಯವು ಸುಪ್ಪಾದುದರಿಂದ ಅನುದಾತ್ತವಾಗುತ್ತದೆ. ಇದು ಉದಾತ್ತಪರದಲ್ಲಿ ಬಂದುದರಿಂದ **ಉದಾತ್ತಾದನುದಾತ್ತಸ್ಯ ಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತವಾಗುತ್ತದೆ.

**ಏಕಾ**—ಇಣ್ ಗತೌ ಧಾತು. **ಇಣ್ ಭೀ ಕಾಪಾ**—(ಉ. ಸೂ. ೩-೩೨) ಎಂಬುದರಿಂದ ಕನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಾರಕ್ಕೆ ಗುಣ. ಏಕ ಎಂದು ರೂಪವಾಗುತ್ತದೆ. ಸ್ತ್ರೀತ್ವ ವಿವಕ್ಷಾ ಮಾಡಿದಾಗ ಅದಂತವಾದುದರಿಂದ **ಅಜಾದ್ಯತಷ್ಟಾಪ್** ಎಂಬುದರಿಂದ ಟಾಪ್ ಪ್ರತ್ಯಯ. ಕನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚರತಿ**—ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವರ್ತನಿಮ್**—ವೃತು ವರ್ತನೇ ಧಾತು. ಪ್ರೇರಣಾವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ. **ವೃತೇಶ್ಚ** (ಉ. ಸೂ. ೨-೨೬೨) ಎಂಬುದರಿಂದ ಅನಿ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಗೌಃ**—ಗಮ್ಲೃ ಗತೌ ಧಾತು. **ಗಮೇರ್ಡೋಃ** (ಉ. ಸೂ. ೨-೨೬೫) ಎಂಬುದರಿಂದ ಡೋ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ (ಅಮ್) ಲೋಪ. ಗೋ ಶಬ್ದವಾಗುತ್ತದೆ. ಇದಕ್ಕೆ ಸು ಪರವಾದಾಗ **ಗೋತೋಣಿತ್** (ಪಾ. ಸೂ. ೭-೧-೯೦) ಎಂಬುದರಿಂದ ಅದಕ್ಕೆ ಣಿದ್ವದ್ಭಾವವಿರುವುದರಿಂದ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಎಂಬುದರಿಂದ ಓಕಾರಕ್ಕೆ ವೃದ್ಧಿ. ಸಕಾರಕ್ಕೆ ರುತ್ವ, ವಿಸರ್ಗ. ಪ್ರತ್ಯಯಸ್ವರದಿಂದ ಉದಾತ್ತವಾಗುತ್ತದೆ.

ಸಂಹಿತಾಪಾಠಃ

ಆ ಸೀಮರೋಹತ್ಸುಯಮಾ ಭವಂತೀಃ ಪತಿಶ್ಚಿಕಿತ್ವಾನ್ರಯಿವಿದ್ರಯೀಣಾಂ ।
ಪ್ರ ನೀಲಪೃಷ್ಠೋ ಅತಸಸ್ಯ ಧಾಸೇಸ್ತಾ ಅವಾಸಯತ್ಪುರುಧಪ್ರತೀಕಃ ॥ ೨ ॥

ಪದಪಾಠಃ

ಆ । ಸೀಂ । ಅರೋಹತ್ । ಸುಽಯಮಾಃ । ಭವಂತೀಃ । ಪತಿಃ । ಚಿಕಿತ್ವಾನ್ । ರಯಿಽವಿತ್ । ರಯೀಣಾಂ ।
ಪ್ರ । ನೀಲಽಪೃಷ್ಠಃ । ಅತಸಸ್ಯ । ಧಾಸೇಃ । ತಾಃ । ಅವಾಸಯತ್ । ಪುರುಧಽಪ್ರತೀಕಃ ॥ ೨ ॥

ಸಾಯಣಭಾಷ್ಯಂ.

ರಯೀಣಾಂ ರಯಿವಿತ್ ಧನಾನಾಂ ಮಧ್ಯೇ ವಿಶಿಷ್ಟಧನಸ್ಯ ಲಂಭಯಿತಾ ಚಿಕಿತ್ವಾನ್ ಜ್ಞಾನವಾನ್ ಪತಿರಶ್ವಾನಾಂ ಪತಿರಗ್ನಿಃ ಸೀಂ ಸರ್ವತಃ ಸುಯಮಾಃ ಸುಖೇನ ನಿಯಂತುಂ ಶಕ್ಯಾ ಭವಂತೀರ್ಯಾ ವಡವಾ ಆರೋಹತ್ ಆರೋಹಯತಿ ಸ್ಮ ನೀಲಪೃಷ್ಠಃ ಪುರುಧಪ್ರತೀಕೋ ಬಹುಧಾವಿಕ್ಷಿಪ್ತಾಂಗಃ ಸೋಽಗ್ನಿರತಸಸ್ಯ ಸತತಗಮನಸ್ಯ ಧಾಸೇಃ ಪೋಷಣಾರ್ಥಂ ತಾ ಅಶ್ವಾಃ ಪ್ರಾವಾಸಯತ್ । ಪ್ರಕರ್ಷೇಣ ವಾಸಯತಿ ಸ್ಮ । ನಿವಾಸೇನ ಶ್ರಮೋಽಪನೀತೇ ಸತತಗಮನಂ ಪೋಷಯಿತುಂ ಶಕ್ಯಮಿತ್ಯರ್ಥಃ ॥ ಸೀಂ । ಚಾದಯೋಽನುದಾತ್ತಾ ಇತ್ಯನುದಾತ್ತಃ । ಆರೋಹತ್ । ರುಹ ಪ್ರಾದುರ್ಭಾವೇ । ಲಙಿ ರೂಪಂ । ನಿಘಾತಃ । ಸುಯಮಾಃ । ಯಮ ಉಪರಮೇ । ಅಸ್ಮಾಚ್ಛಕ್ಯಾರ್ಥ ಈಷದ್ದುಃಸುಷ್ವಿತಿ ಖಲ್ । ಕೃದುತ್ತರಪದಪ್ರಕೃತಿಸ್ವರತ್ವಂ। ಪತಿಃ । ಪಾ ರಕ್ಷಣೇ । ಪಾತೇರ್ಡತಿರಿತಿ ಡತಿಪ್ರತ್ಯಯಃ ಡಿತ್ತ್ವಾಟ್ಟಿಲೋಪಃ । ಪ್ರತ್ಯಯಸ್ವರಃ । ಚಿಕಿತ್ವಾನ್ । ಚಿತಿ ಸಂಜ್ಞಾನೇ । ಕ್ವಸೌ ರೂಪಂ । ರಯಿವಿತ್ । ವಿದ್ಲೃ ಲಾಭೇ । ಕ್ವಿಪ್ । ರಯೀಣಾಂ । ನಾಮನ್ಯತರಸ್ಯಾಮಿತಿ ವಿಭಕ್ತೇರುದಾತ್ತತ್ವಂ । ನೀಲಪೃಷ್ಠಃ । ನೀಲಶಬ್ದೋ ವೃಷಾದಿತ್ವಾದಾದ್ಯುದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅತಸಸ್ಯ । ಅತ ಸಾತತ್ಯಗಮನ ಇತ್ಯಸ್ಮಾದತ್ಯವಿಚಮಿತಮಿನಮಿರಭಿಲಭಿನಭಿತಪಿಪತಿಪಸಿಪಣಿಮಹಿಭ್ಯಃ । ಉ.೧೧೭ । ಇತ್ಯಸಚ್ । ಚಿತ್ಸ್ವರಃ । ಅವಾಸಯತ್ । ವಸ ನಿವಾಸೇ । ಹೇತುಮತೀತಿ ಣಿಚ್ । ಲುಙ್ಲೃಙ್ಕ್ಷ್ವಡುದಾತ್ತ ಇತ್ಯಡಾಗಮಃ । ತಿಙ್ಙತಿಙ ಇತಿ ನಿಘಾತಃ ।

ಪುರುಧಪ್ರತೀಕಃ । ಪುರುಶಬ್ದ ಇಹ ಸಂಖ್ಯಾವಾಚೀ । ಸಂಖ್ಯಾಯಾ ವಿಧಾರ್ಥೇ ಧೇತಿ ಧಾಪ್ರತ್ಯಯಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಹ್ರಸ್ವಶ್ಛಾಂದಸಃ ॥

ಪ್ರತಿಪದಾರ್ಥ.

ರಯೀಣಾಂ—ಧನಗಳ (ಮಧ್ಯೆ) । ರಯಿವಿತ್—ಶ್ರೇಷ್ಠವಾದ ಧನವನ್ನು ಒದಗಿಸುವವನೂ । ಚಿಕಿತ್ವಾನ್—ಜ್ಞಾನಿಯೂ । ಪತಿಃ—ಅಶ್ವಗಳಿಗೆ ಪತಿಯೂ ಆದ ಅಗ್ನಿಯು । ಸೀಂ—ಎಲ್ಲ ವಿಧದಿಂದಲೂ । ಸುಯಮಾಃ—ಸುಖವಾಗಿ ನಿಯಮಿಸಲು ಶಕ್ಯವಾದ । ಭವಂತೀಃ (ಯೋಃ)—ವಡಬಗಳೆಂಬ ಯಾವ ನಿಮ್ಮನ್ನು (ಎಲೈ ಅಶ್ವಗಳೇ) । ಅ ಅರೋಹತ್—ಹತ್ತುತ್ತಾನೋ । ತಾಃ—ಆ ಅಶ್ವಗಳನ್ನು ! ನೀಲಪೃಷ್ಠಃ—ನೀಲವರ್ಣವಾದ ಪೃಷ್ಠಭಾಗವುಳ್ಳವನೂ । ಪುರುಧಪ್ರತೀಕಃ—ಬಹು ಪ್ರಕಾರವಾಗಿ ವಿಕ್ಷಿಪ್ತವಾದ ಅಂಗಗಳುಳ್ಳವನೂ (ಆದ ಅಗ್ನಿಯು) । ಅತಸಸ್ಯ— ಸತತ ಗಮನನಿಮಿತ್ತಕವಾದ । ಧಾಸೇಃ—ಪೋಷಣಾರ್ಥವಾಗಿ । ಪ್ರ ಅವಾಸಯತ್— ವಿಶ್ರಮಿಸಿಕೊಳ್ಳುವಂತೆ ಮಾಡುತ್ತಾನೆ.

ಭಾವಾರ್ಥ.

ಎಲೈ ಅಗ್ನಿವಾಹನಗಳಾದ ವಡವನಾಮಕ ಅಶ್ವಗಳೇ, ಅತಿಶ್ರೇಷ್ಠವಾದ ಧನವನ್ನನುಗ್ರಹಿಸುವವನೂ, ಜ್ಞಾನಿಯೂ, ಅಶ್ವಗಳಿಗೆ ಪತಿಯೂ ಆದ ಅಗ್ನಿಯು, ಸರ್ವವಿಧದಲ್ಲಿಯೂ ಸುಲಭವಾಗಿ ನಿಯಮ್ಯರಾದ ನಿಮ್ಮನ್ನು ಆರೋಹಿಸುತ್ತಾನೆ; ಆದರೆ, ನೀಲಪೃಷ್ಠನೂ, ವಿಕ್ಷಿಪ್ತಾಂಗನೂ ಆದ ಆ ಅಗ್ನಿಯು ನಿಮ್ಮಿಂದ ಕಾರ್ಯವಾದ ಅವಿಶ್ರಾಂತಗಮನಕ್ಕೆ ಬೇಕಾದ ಪುಷ್ಟಿಯು ನಿಮಗೆ ದೊರೆಯಲೆಂದು, ಪೂರ್ವಭಾವಿಯಾಗಿ ನೀವು ವಿಶ್ರಮಿಸಿಕೊಳ್ಳುವಂತೆ ಮಾಡುತ್ತಾನೆ.

English Translation.

Their lord has mounted on his well-trained mares; the sagacious selector of treasures, the blackbacked, manylimbed (Agni) has granted them a place of rest for the cherising of (their) rapid speed.

ವಿಶೇಷ ವಿಷಯಗಳು.

**ರಯೀಣಾಂ ರಯಿವಿತ್—ಧನಾನಾಂ ಮಧ್ಯೇ ವಿಶಿಷ್ಟಧನಸ್ಯ ಲಂಭಯಿತಾ । ರಯಿ** ಶಬ್ದವು ಉದಕನಾಮಗಳಲ್ಲಿ (ನಿ. ೧-೨೪)ಯೂ, ಧನನಾಮಗಳಲ್ಲಿಯೂ, (ನಿ. ೩-೯), **ನೂಚ ಪುರಾಚ ಸದನಂ ರಯೀಣಾಂ** ಎಂಬಲ್ಲಿ **ರಯಿರಿತಿಧನನಾಮ ರಾತೇರ್ದಾನ ಕರ್ಮಣಃ** (ನಿ. ೪-೧೭) ಎಂದು ಉಕ್ತವಾಗಿರುವುದರಿಂದ ಧನವೆಂದೂ ಅರ್ಥವನ್ನು ಬೋಧಿಸುವುದು. ಅಗ್ನಿಯು ಧನವೆಂದು ಪ್ರಸಿದ್ಧವಾಗಿರುವುದೆಲ್ಲವನ್ನೂ ಯಜ್ಞ ಮಾಡುವವರಿಗೆ ದೊರಕಿಸುವನೆಂದು ಅರ್ಥ.

**ಪುರುಧಪ್ರತೀಕಃ—ಪುರುಶಬ್ದ ಇಹ ಸಂಖ್ಯಾವಾಚೀ । ಬಹುಧಾ ವಿಕ್ಷಿಪ್ತಾಂಗಃ ।** ಅಗ್ನಿಯು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವನೆಂದು ವಿವರಿಸಿದೆ.

**ಧಾಸೇಃ ತಾಃ ಪ್ರ ಅವಾಸಯತ್—ಪೋಷಣಾರ್ಥಂ ಅಶ್ವಾಃ ಪ್ರಕರ್ಷೇಣ ವಾಸಯತಿ ಸ್ಮ.** ಅಗ್ನಿಯು ಅಶ್ವಗಳಿಗೆ ಪತಿಯಾಗಿರುವುದರಿಂದ ಅಶ್ವಗಳು **(ಪೋಷಣೆಗೆ)** ಅಭಿವೃದ್ಧಿಯನ್ನು ಹೊಂದುವುದಕ್ಕೂ,

ಅಶ್ವಗಳು ತಮ್ಮ ಶ್ರಮವನ್ನು ಪರಿಹರಿಸಿಕೊಂಡು ಯಾವಾಗಲೂ ಸಂಚರಿಸುವುದಕ್ಕೂ ಮತ್ತು ಅವುಗಳು ಸುಖದಿಂದ ಇರುವುದಕ್ಕೂ ಸಹಾಯಕನಾಗಿರುವನೆಂದು ವರ್ಣಿಸಿದೆ.

**ಚಿಕಿತ್ವಾನ್—ಜ್ಞಾನವಾನ್** । ಅಗ್ನಿಯು ಆಧ್ಯಾತ್ಮಿಕವಾದ ಜ್ಞಾನವುಳ್ಳವನೆಂದು ಅರ್ಥ.

**ಸೀಂ—ಸರ್ವತ್ರ.** ಎಲ್ಲಾ ಪ್ರದೇಶಗಳಲ್ಲಿ ಎಂದು ಅರ್ಥ. ನಿರುಕ್ತಕಾರರು ಸೀಂ ಎಂಬ ಪದಕ್ಕೆ **ಸೀಮಿತಿ ಪರಿಗ್ರಹಾರ್ಥೀಯೋ ವಾ ಪಾದಪೂರಣೋ ವಾ** । **ಸೀಂ** ಎಂಬ ನಿಪಾತವು ಪರಿಗ್ರಹ ಎಂಬ ಅರ್ಥದಲ್ಲಿಯೂ, ಪಾದಪೂರಣಾರ್ಥದಲ್ಲಿಯೂ ಪ್ರಯುಕ್ತವಾಗಿರುವುದು ಎಂದು ವಿವರಿಸಿ, **ವಿಸೀಮತಃ ಸುರುಚೋವೇನ ಆವಃ ವ್ಯವೃಣೋತ್ ಸರ್ವತ ಆದಿತ್ಯಃ** । ಇಲ್ಲಿ ಸೀಂ ಎಂಬುದಕ್ಕೆ ಸರ್ವತಃ ಎಂದು ಅರ್ಥವನ್ನೂ, **ಸೀಮ್ನಃ ಸೀಮತಃ ಸೀಮತೋ ಮರ್ಯಾದಾತಃ ಸೀಮಾ ಮರ್ಯಾದಾ**, ಎಲ್ಲೆ ಎಂಬ ಅರ್ಥವನ್ನೂ ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ.

**ಸೀಮ್**—ಚಾದಿಗಳಲ್ಲಿ ಇದು ಪಠಿತವಾಗಿರುವುದರಿಂದ **ಚಾದಯೋಽನುದಾತ್ತಾಃ** (ಫಿ. ಸೂ. ೮೪) ಎಂಬುದರಿಂದ ಅನುದಾತ್ತವಾಗುತ್ತದೆ.

**ಆರೋಹತ್**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಸುಯಮಾಃ**—ಯಮ ಉಪರಮೇ ಧಾತು. ಇದರ ಮೇಲೆ ಶಕ್ಯಾರ್ಥ ತೋರುವಾಗ **ಈಷದ್ದುಃಸುಷು**—(ಪಾ. ಸೂ. ೩-೩-೧೨೬) ಎಂಬುದರಿಂದ ಖಲ್ ಪ್ರತ್ಯಯ. ಪ್ರಾದಿಸಮಾಸವಾದಾಗ **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪತಿಃ**—ಪಾ ರಕ್ಷಣೇ ಧಾತು. **ಪಾತೇರ್ಡತಿಃ** (ಉ. ಸೂ. ೪-೫೬) ಎಂಬುದರಿಂದ ಡತಿ ಪ್ರತ್ಯಯ. **ಡಿತ್ವ** ಸಾಮರ್ಥ್ಯದಿಂದ ಭಸಂಜ್ಞಾ ಇಲ್ಲದಿದ್ದರೂ ಧಾತುವಿನ ಟಿಗೆ (ಆ) ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಚಿಕಿತ್ವಾನ್**—ಕಿತ ಜ್ಞಾನೇ ಧಾತು. **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಧಾತುವಿಗೆ ದ್ವಿತ್ವಾದಿ. ಪ್ರಥಮಾವಿಭಕ್ತಿ ಏಕವಚನಾಂತರೂಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಯಿವಿತ್**—ವಿದ್‌ಲೃ ಲಾಭೇ ಧಾತು. **ಕ್ವಿಪ್‌ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ರಯೀಣಾಮ್**—ಷಷ್ಠೀ ಬಹುವಚನಾಂತರೂಪ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನೀಲಪೃಷ್ಠಃ**—ನೀಲಂ ಪೃಷ್ಠಂ ಯಸ್ಯ ಸಃ ನೀಲಪೃಷ್ಠಃ। ನೀಲಶಬ್ದವು **ವೃಷಾದಿಯಲ್ಲಿ** ಪಠಿತವಾದುದರಿಂದ **ವೃಷಾದೀನಾಂಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತವಾಗುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (೬-೨-೧) ಎಂಬುದರಿಂದ ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಧಾಸೇಃ**—ಈ ಶಬ್ದವು ಮೊದಲನೇ ಋಕ್ಕಿನಲ್ಲಿಯೇ ವ್ಯಾಖ್ಯಾತವಾಗಿದೆ.

ಅತಸಸ್ಯ—ಅತ ಸಾತತ್ಯಗಮನೇ. ಅತ್ಯವಿಚಮಿತಮಿನ ಮಿರಭಿ ಲಭಿ ನಭಿ ತಪಿ ಪತಿ ಪನಿ ಪಣಿ ಮಹಿಭ್ಯಃ (ಉ. ಸೂ. ೩-೩೯೭) ಎಂಬುದರಿಂದ ಇದಕ್ಕೆ ಅಸಚ್ ಪ್ರತ್ಯಯ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

ಅವಾಸಯೇತ್—ವಸ ನಿವಾಸೇ ಧಾತು. ಹೇತುಮತಿಚ (ಪಾ. ಸೂ. ೩-೧-೨೬) ಎಂಬುದರಿಂದ ಪ್ರಯೋಜಕ ವ್ಯಾಪಾರ ತೋರುವುದರಿಂದ ಣಿಚ್. ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಣಿಜಂತದ ಮೇಲೆ ಲಙ್. ಪ್ರಥಮಪುರುಷ ಏಕವಚನಾಂತರೂಪ. ಅತಿ ಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

ಪುರುಧಪ್ರತೀಕಃ—ಪುರು ಶಬ್ದವು ಇಲ್ಲಿ ಸಂಖ್ಯೆಯನ್ನು ಹೇಳುತ್ತದೆ. ಆದುದರಿಂದ ಸಂಖ್ಯಾಯಾ-ವಿಧಾರ್ಥೇ ಧಾ (ಪಾ. ಸೂ. ೫-೩-೪೨) ಎಂಬುದರಿಂದ ಪ್ರಕಾರಾರ್ಥದಲ್ಲಿ ಧಾ ಪ್ರತ್ಯಯ. ಬಹುವ್ರೀಹಿ ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪುರುಧಾ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಮಾಸವಾದಾಗ ಪೂರ್ವಪದಕ್ಕೆ ಹ್ರಸ್ವವು ಛಾಂದಸವಾಗಿ ಬರುತ್ತದೆ.

ಸಂಹಿತಾಪಾಠಃ

ಮಹಿ ತ್ವಾಷ್ಟ್ರಮೂರ್ಜಯಂತೀರಜುರ್ಯಂ ಸ್ತಭೂಯಮಾನಂ ವಹತೋ ವಹಂತಿ ।
ವ್ಯಂಗೇಭಿರ್ದಿದ್ಯುತಾನಃ ಸಧಸ್ಥ ಏಕಾಮಿವ ರೋದಸೀ ಆ ವಿವೇಶ ॥ ೪ ॥

ಪದಪಾಠಃ

ಮಹಿ । ತ್ವಾಷ್ಟ್ರಂ । ಊರ್ಜಯಂತೀಃ । ಅಜುರ್ಯಂ । ಸ್ತಭುಽಯಮಾನಂ । ವಹತಃ । ವಹಂತಿ ।
ವಿ । ಅಂಗೇಭಿಃ । ದಿದ್ಯುತಾನಃ । ಸಧಽಸ್ಥೇ । ಏಕಾಂಽಇವ । ರೋದಸೀ ಇತಿ । ಆ । ವಿವೇಶ ॥ ೪ ॥

ಸಾಯಣಭಾಷ್ಯಂ.

ಉರ್ಜಯಂತೀರಬಲಂ ಬಲಿನಂ ಕುರ್ವಂತ್ಯೋ ವಹತೋ ವಹನಪರಾ ನದ್ಯೋ ಮಹಿ ಮಹಾಂತಂ ತ್ವಾಷ್ಟ್ರಂ ತ್ವಷ್ಟುಃ ಸುತಮಜುರ್ಯಂ ಜರಯಿತುಮನರ್ಹಂ ಸ್ತಭೂಯಮಾನಂ ಲೋಕಾನಾಂ ಸ್ತಂಭನಂ ಧಾರಣಮಿಚ್ಛಂತಮಗ್ನಿಂ ವಹಂತಿ। ಧಾರಯಂತಿ । ಸಧಸ್ಥೇಽಪಾಂ ಸಮೀಪೇಽಂ-ಗೇಭಿರವಯವೈರ್ದಿದ್ಯುತಾನೋ ದೀಪ್ಯಮಾನಃ ಸನ್ ಅಗ್ನೀ ರೋದಸೀ ದ್ಯಾವಾಪೃಥಿವ್ಯೌ ವ್ಯಾವಿವೇಶ । ವಿವಿಧಂ ಪ್ರವಿಷ್ಟವಾನ್ । ರೋದಸ್ಯೋರ್ದೃಷ್ಟಾಂತಃ । ಏಕಾಮಿವ । ಯಥಾ ಪುಮಾನೇಕಾಂ ಸ್ತ್ರಿಯಂ ಪ್ರವಿಶತಿ । ತದ್ವತ್ ॥ ತ್ವಾಷ್ಟ್ರಂ । ತ್ವಷ್ಟುರಪತ್ಯಮಿತ್ಯರ್ಥೇ ತಸ್ಯಾಪತ್ಯಮಿತ್ಯಣ್ । ಪ್ರತ್ಯಯಸ್ವರಃ । ಸ್ತಭೂಯಮಾನಂ । ಸ್ತಭು ಸ್ತಂಭನಂ । ತದಿಚ್ಛಂತಂ । ಸುಪ ಆತ್ಮನಃ ಕ್ಯಚ್ । ಅಕೃತ್ಸಾರ್ವಧಾತು-ಕಯೋರಿತಿ ದೀರ್ಘಃ । ತದಂತಾದ್ವ್ಯತ್ಯಯೇನ ಶಾನಚ್ । ಆಕಾರಾಂತತ್ವಾದಾನೇ ಮುಕ್ । ಶಾನಚೋ

ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಕೃತೇ ಕ್ಯಜಂತಾದ್ಧಾತುಸ್ವರಃ ಶಿಷ್ಯತೇ । ಅಂಗೇಭಿಃ । ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವಃ । ಬಹುವಚನೇ ಝಲ್ಯೇದಿತ್ಯೇತ್ವಂ। ದಿದ್ಯುತಾನಃ । ದ್ಯುತ ದೀಪ್ತೌ। ಛಂದಸಿ ಲಿಟ್ । ತಸ್ಯ ಕಾನಜಾದೇಶಃ । ದ್ವಿರ್ವಚನಂ । ಹಲಾದಿಶೇಷೇ ಕೃತೇ ದ್ಯು ಇತ್ಯಸ್ಯಾಭ್ಯಾಸಸ್ಯ ದ್ಯುತಿಸ್ವಾಪ್ಯೋಃ ಸಂಪ್ರಸಾರಣಂ । ಪಾ. ೭-೪-೬೭ । ಇತಿ ಸಂಪ್ರಸಾರಣಂ । ಸಂಪ್ರಸಾರಣಾಚ್ಚೇತಿ ಪೂರ್ವರೂಪತ್ವಂ । ಚಿತಃ ಇತ್ಯಂತೋದಾತ್ತತ್ವಂ । ಏಕಾಮಿವ । ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ವಚನಾತ್ಪೂರ್ವಪದಪ್ರಕೃತಿಸ್ವರಃ । ವಿವೇಶ । ವಿಶ ಪ್ರವೇಶನ ಇತ್ಯಸ್ಮಾಲ್ಲಿಟಿ ರೂಪಂ । ನಿಘಾತಃ ॥

ಪ್ರತಿಪದಾರ್ಥ.

**ಊರ್ಜಯಂತೀಃ**— (ಅಬಲರನ್ನು) ಬಲಿಷ್ಠರನ್ನಾಗಿ ಮಾಡತಕ್ಕವುಗಳೂ । **ವಹತೇಃ**— ವಹಿಸುವುದರಲ್ಲಿ ಆಸಕ್ತಿಯುಳ್ಳವುಗಳೂ ಆದ ನದಿಗಳು । **ಮಹಿ**— ಮಹಾತ್ಮನೂ । **ತ್ವಾಷ್ಟ್ರಂ**— ತ್ವಷ್ಟೃವಿನ ಪುತ್ರನೂ । **ಅಜುರ್ಯಂ**— ಜರಾಪ್ರಾಪ್ತಿಗನರ್ಹನೂ । **ಸ್ತಭೂಯಮಾನಂ**— ಲೋಕವನ್ನು ಧಾರಣಮಾಡಬೇಕೆಂದು ಇಚ್ಛಿಸುವವನೂ ಆದ ಅಗ್ನಿಯನ್ನು । **ವಹಂತಿ**— ಧರಿಸುತ್ತವೆ । **ಸಧಸ್ಥೇ**— ಉದಕ ಸಮೀಪದಲ್ಲಿ । **ಅಂಗೇಭಿಃ**— (ತನ್ನ) ಅವಯವಗಳಿಂದ (ಸಹಿತನಾಗಿ) । **ದಿದ್ಯುತಾನಃ**— ಜ್ವಲಿಸುತ್ತಿರುವ ಅಗ್ನಿಯು । **ರೋದಸೀ**— ದ್ಯಾವಾಪೃಥಿವಿಗಳನ್ನು ।**ಏಕಾಂ ಇವ**— (ಪುರುಷನು) ಒಬ್ಬಳೇ ಸ್ತ್ರೀಯನ್ನು (ನಾನಾ ರೂಪನಾಗಿ ಪ್ರವೇಶಿಸುವಂತೆ) । **ವಿ ಆ ವಿವೇಶ**— ವಿವಿಧರೂಪನಾಗಿ ಪ್ರವೇಶಿಸುತ್ತಾನೆ ॥

ಭಾವಾರ್ಥ.

ಅಬಲರಿಗೆ ಬಲದಾಯಕಗಳೂ ವಹನಕಾರ್ಯದಲ್ಲಿ ಆಸಕ್ತಿಯುಳ್ಳವುಗಳೂ ಆದ ನದಿಗಳು, ಮಹಾತ್ಮನೂ, ತ್ವಷ್ಟೃಪುತ್ರನೂ, ಜರಾಪ್ರಾಪ್ತಿಗನರ್ಹನೂ. ಲೋಕಧಾರಣೇಚ್ಛುವೂ ಆದ ಅಗ್ನಿಯನ್ನು ಧರಿಸುತ್ತವೆ; ಹೀಗೆ ಉದಕ ಸಮೀಪದಲ್ಲಿ ಉದ್ದೀಪ್ತವಾದ ತನ್ನ ಸರ್ವಾಯವಗಳಿಂದ ಪ್ರಕಾಶಿಸುತ್ತಿರುವ ಅಗ್ನಿಯು, ಪುರುಷನೊಬ್ಬನು ಒಬ್ಬಳೇ ಸ್ತ್ರೀಯನ್ನು ಬೇರೆಬೇರೆ ರೂಪಗಳಿಂದ ಸಮೀಪಿಸುವಂತೆ, ದ್ಯಾವಾಪೃಥಿಗಳನ್ನು ನಾನಾ ರೂಪವುಳ್ಳವನಾಗಿ ಪ್ರವೇಶಿಸುತ್ತಾನೆ.

English Translation.

The flowing (rivers) invigorating him, bear along the great son of Twashtri, the undecaying upholder (of the world), radiant with various forms in the vicinity (of the firmament): Agni is associated with heaven and earth, as (a husband with) one only wife.

ವಿಶೇಷವಿಷಯಗಳು.

**ಊರ್ಜಯಂತೀಃ— ಅಬಲಂ ಬಲಿನಂ ಕುರ್ವತ್ಯಃ** । ಊರ್ಕ್ ಎಂಬ ಶಬ್ದವು ಅನ್ನನಾಮಗಳಲ್ಲಿ (ನಿ. ೨-೭) ಪಠಿತವಾಗಿದೆ. ಊರ್ಜ ಶಬ್ದಕ್ಕೆ ಬಲವೆಂಬ ಅರ್ಥದಲ್ಲಿಯೂ ಪ್ರಯೋಗವಿರುತ್ತದೆ. ಉದಾಹರಣೆಗೆ—

**ದೇವೀ ಊರ್ಜಾಹುತೀ ಇಷಮೂರ್ಜಮನ್ಯಾವಕ್ಷತ್ ಸಗ್ಧಿಂ ಸಪೀತಿಮನ್ಯಾ ನವೇನ ಪೂರ್ವಂ ದಯಮಾನಾಃ ಸ್ಯಾಮ ಪುರಾಣೇನ ನವಂ ತಾಮೂರ್ಜಮೂರ್ಜಾಹುತೀ ಊರ್ಜ-ಯಮಾನೇ ಅಧಾತಾಂ ವಸುವನೇ ವಸುಧೇಯಸ್ಯ ವೀತಾಂ ಯಜ |**

**(ಯ. ವಾ. ಸಂ. ೨೮-೧೬)**

ಈ ಮಂತ್ರದಲ್ಲಿ ಊರ್ಜ ಶಬ್ದವು ಬಲ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ದುರ್ಗಾಚಾರ್ಯರು ವ್ಯಾಖ್ಯಾನಮಾಡಿರುವರು. ಸಾಯಣರು ನದಿಗಳು ಬಲವಿಲ್ಲದವರಿಗೂ ಬಲವನ್ನು ಉಂಟುಮಾಡಿಕೊಡುತ್ತವೆ ಎಂದು ಅರ್ಥವನ್ನು ವರ್ಣಿಸಿರುವರು.

**ವಹತಃ ಸ್ರುಭೂಯಮಾನಂ ವಹಂತಿ—ವಹನಪರಾಃ ನದ್ಯಃ ಲೋಕಾನಾಂ ಧಾರಣಮಿಚ್ಛಂತ-ಮಗ್ನಿಂ ಧಾರಯಂತಿ.** ಅತಿಶಯವಾದ ಪ್ರವಾಹಗಳಿಂದ ಯಾವಾಗಲೂ (ಪ್ರವಹಿಸುತ್ತಿರುವ) ಹರಿಯು ತ್ತಿರುವ ನದಿಗಳು ಲೋಕಗಳೆಲ್ಲವನ್ನೂ ವ್ಯಾಪಿಸಿಕೊಂಡು ಎಲ್ಲವನ್ನೂ ರಕ್ಷಿಸಲು ಇಚ್ಛೆಯುಳ್ಳ ಅಗ್ನಿಯನ್ನು ಧರಿಸಿರುತ್ತವೆ. “ಅಗ್ನೇರಾಪಃ” ಎಂದು ಶ್ರುತಿಯಲ್ಲಿ ಉದಕಗಳ ಉತ್ಪತ್ತಿಯು ಅಗ್ನಿಯಿಂದ ಆಗಿರುವ ಕಾರಣ ಅಗ್ನಿಯ ಪ್ರವೇಶವು ಉದಕಗಳಲ್ಲಿ ಇರುತ್ತದೆ ಎಂದು ಅರ್ಥ.

**ಅಜುರ್ಯಂ—ಜರಯಿತುಮನರ್ಹಂ** —ಅಗ್ನಿಯು ಯಾರಿಂದಲೂ ಜೀರ್ಣವಾಗಲು (ಅರಿಸಲು) ಅರ್ಹನಾಗಿರುವುದಿಲ್ಲ ಎಂದು ಅರ್ಥ.

**ರೋದಸೀ ಏಕಾಮಿವ ಆ ವಿವೇಶ—ದ್ಯಾವಾಪೃಥಿವ್ಯೌ ವಿವಿಧಂ ಪ್ರವಿಷ್ಟವಾನ್ ಯಥಾ ಪುಮಾನ್ ಏಕಾಂ ಸ್ತ್ರೀಯಂ ತದ್ವತ್ |** ಉದಕಗಳಲ್ಲಿ ಪ್ರವಿಷ್ಟನಾಗಿರುವ ಅಗ್ನಿಯು ದ್ಯಾವಾಪೃಥಿವಿಗಳಲ್ಲಿ ಅನೇಕ ವಿಧ ದಿಂದ ವ್ಯಾಪಿಸಿರುವನು. ಲೋಕದಲ್ಲಿ ಪುರುಷನು ಸ್ತ್ರೀಯಲ್ಲಿ ಅನುರಕ್ತನಾಗಿ ಬಹಳ ಪ್ರಕಾರಗಳಿಂದಲೂ ಸ್ತ್ರೀಯ ಪ್ರೀತಿಗೆ ಪಾತ್ರನಾಗಿ ಸ್ತ್ರೀಯ ಮನಸ್ಸಿನಲ್ಲಿ ವ್ಯಾಪಿಸಿ ಇರುವಂತೆ ಅಗ್ನಿಯ ಪ್ರವೇಶವು ದ್ಯಾವಾಪೃಥಿವಿ ಗಳಲ್ಲಿ ಇರುವುದೆಂದು ಇಲ್ಲಿ ಉಪಮಾನ ರೀತಿಯಿಂದ ಉಕ್ತವಾಗಿರುತ್ತವೆ. ರೋದಸೀ ಎಂಬ ಪದವು ಇಪ್ಪತ್ತು ನಾಲ್ಕು ದ್ಯಾವಾಪೃಥಿವೀ ನಾಮಗಳಲ್ಲಿ (ನಿ. ೩-೩೦) ಉಕ್ತವಾಗಿರುತ್ತದೆ. ಮತ್ತು—

**ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ |**
**ಆ ಯಸ್ಮಿನ್ ತಸ್ಥೌ ಸುರಣಾನಿಬಿಭ್ರತೀ ಸಚಾ ಮರುತ್ಸು ರೋದಸೀ ||**

(ಋ. ಸಂ. ೫-೬-೮).

ಯಾಸ್ಕರು ಈ ಋಕ್ಕನ್ನು ಉದಾಹರಿಸಿ ಇಲ್ಲಿ **ರೋದಸೀ ರುದ್ರಸ್ಯ ಪತ್ನೀ** ಎಂದೂ ಅರ್ಥವನ್ನು ವಿವರಿಸಿದಾರೆ. ದುರ್ಗಾಚಾರ್ಯರು **ರುದ್ರಸ್ಯ ವಿಭೂತಿಃ** ಎಂದು ವಿವರಿಸಿರುವರು.

ವ್ಯಾಕರಣಪ್ರಕ್ರಿಯಾ.

**ತ್ವಾಷ್ಟ್ರಮ್—ತ್ವಷ್ಟುಃ** ಅಪತ್ಯಂ ಪುಮಾನ್ ತ್ವಾಷ್ಟ್ರಃ ತಮ್. **ತಸ್ಯಾಪತ್ಯಮ್** (ಪಾ. ಸೂ. ೪-೧-೯೨) ಎಂಬುದರಿಂದ ಅಪತ್ಯಾರ್ಥದಲ್ಲಿ ತ್ವಷ್ಟೃಶಬ್ದಕ್ಕೆ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಯಣಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಊರ್ಜಯಂತೀಃ**—ಊರ್ಜ ಬಲಪ್ರಾಣನಯೋಃ ಧಾತು. ಇದಕ್ಕೆ ಣಿಜಂತದ ಮೇಲೆ ಶತೃ ಪ್ರತ್ಯಯ. ಸ್ತ್ರೀತ್ವದಲ್ಲಿ ಉಗಿತ್ತಾದುದರಿಂದ ಙೀಪ್. ಣಿಚ್ ಸ್ವರ ಉಳಿಯುತ್ತದೆ. **ಸುಪಾಂಸುಲುಕ್—** ಸೂತ್ರದಿಂದ ಪೂರ್ವಸವರ್ಣದೀರ್ಘ.

**ಸ್ತಭೂಯಮಾನಮ್**—ಸ್ತಭು ಎಂದರೆ ಸ್ತಂಭನ. ಸ್ತಂಭನಂ ಆತ್ಮನಃ ಇಚ್ಛಂತಂ ಸ್ತಭೂಯಮಾನಂ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಅಕೃತ್ ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಪೂರ್ವದ ಉಕಾರಕ್ಕೆ ದೀರ್ಘ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಕ್ಯಜಂತದ ಮೇಲೆ ಶಾನಚ್ ಪ್ರತ್ಯಯ. ಅಕಾರಾಂತವಾದುದರಿಂದ **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ಅಕಾರಾಂತದ ಪರದಲ್ಲಿ ಶಾನಚ್ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಕ್ಯಜಂತ ಧಾತುಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವಹತಃ**—ವಹ ಪ್ರಾಪಣೇ ಧಾತು. ಲಟಿಗೆ ಶತ್ರಾದೇಶ. **ಬಹುಲಂಛಂದಸಿ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ವಹಂತಿ**—ಪೂರ್ವೋಕ್ತ ಧಾತುವಿನ ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಅಂಗೇಭಿಃ**—ತೃತೀಯಾ ಬಹುವಚನದಲ್ಲಿ ಭಿಸ್ ಬಂದಾಗ **ಬಹುಲಂ ಛಂದಸಿ** ಎಂಬುದರಿಂದ ಅದಕ್ಕೆ ಐಸ್‌ಭಾವ ವಿಕಲ್ಪವಿಧಾನ ಮಾಡಿರುವುದರಿಂದ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ದಿದ್ಯುತಾನಃ**—ದ್ಯುತ ದೀಪ್ತೌ ಧಾತು. ಛಾಂದಸವಾಗಿ ಲಿಟ್. **ಲಿಟಃ ಕಾನಜ್ವಾ** ಎಂಬುದರಿಂದ ಅದಕ್ಕೆ ಕಾನಾಚಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಹಲಾದಿಃ ಶೇಷಃ** ಎಂಬುದರಿಂದ ಆದಿಯ ಹಲಿಗೆ ಶೇಷ ಬಂದಾಗ **ದ್ಯುತಿಸ್ವಾಪ್ಯೋಃ ಸಂಪ್ರಸಾರಣಮ್** (ಪಾ. ಸೂ. ೭-೪-೬೭) ಎಂಬುದರಿಂದ ಯಕಾರಕ್ಕೆ ಸಂಪ್ರಸಾರಣ ಇಕಾರ ಬರುತ್ತದೆ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಏಕಾಮಿವ**—**ಇವೇನ ನಿತ್ಯಸಮಾಸಃ ವಿಭಕ್ತ್ಯಲೋಪಶ್ಚ ಪೂರ್ವಪದಪ್ರಕೃತಿಸ್ವರತ್ವಂ ಚ**—ಎಂಬ ವಚನದಿಂದ ಇವ ಎಂಬುದರೊಡನೆ ಸಮಾಸವಾದಾಗ ವಿಭಕ್ತಿಗೆ ಲೋಪ ಬರುವುದಿಲ್ಲ. ಪೂರ್ವಪದ ಪ್ರಕೃತಿಸ್ವರದಿಂದ ಆದ್ಯುದಾತ್ತವಾಗುತ್ತದೆ.

**ವಿವೇಶ**—ವಿಶ ಪ್ರವೇಶನೇ ಧಾತು. ಲಿಟ್. ಪ್ರಥಮಪುರುಷ ಏಕವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಧಸ್ಥೇ**—ಷ್ಠಾ ಗತಿನಿವೃತ್ತೌ ಧಾತು. **ಸುಪಿಸ್ಥಃ** (ಪಾ. ಸೂ. ೩-೨-೪) ಎಂಬುದರಿಂದ ಕ ಪ್ರತ್ಯಯ. **ಆತೋಲೋಪಇಟಿಚ** ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಸಧಮಾದಸ್ಥಯೋಶ್ಛಂದಸಿ** ಎಂಬುದರಿಂದ ಸಮಾಸದಲ್ಲಿ ಸಹ ಎಂಬುದಕ್ಕೆ ಸಧಾದೇಶ.

———

ಸಂಹಿತಾಪಾಠಃ

ಜಾನಂತಿ ವೃಷ್ಣೋ ಅರುಷಸ್ಯ ಶೇವಮುತ ಬ್ರಧ್ನಸ್ಯ ಶಾಸನೇ ರಣಂತಿ ।
ದಿವೋರುಚಃ ಸುರುಚೋ ರೋಚಮಾನಾ ಇಳಾ ಯೇಷಾಂ ಗಣ್ಯಾ ಮಾಹಿನಾ ಗೀಃ ॥ ೫ ॥

ಪದಪಾಠಃ

ಜಾನಂತಿ । ವೃಷ್ಣಃ । ಅರುಷಸ್ಯ । ಶೇವಂ । ಉತ । ಬ್ರಧ್ನಸ್ಯ । ಶಾಸನೇ । ರಣಂತಿ ।
ದಿವಃಽರುಚಃ । ಸುಽರುಚಃ । ರೋಚಮಾನಾಃ । ಇಳಾ । ಯೇಷಾಂ । ಗಣ್ಯಾ । ಮಾಹಿನಾ । ಗೀಃ ॥೫॥

ಸಾಯಣಭಾಷ್ಯಂ.

ವೃಷ್ಣಃ ಕಾಮಾನಾಂ ವರ್ಷಿತುರರುಷಸ್ಯ । ರುಷಾ ಹಿಂಸಕಾಃ । ತದ್ರಹಿತಸ್ಯ । ಶತ್ರುರಾಹಿತ್ಯೇನ ರೋಚಮಾನಸ್ಯೇತ್ಯರ್ಥಃ । ತಥಾವಿಧಸ್ಯಾಗ್ನೇಃ ಶೇವಮಾಶ್ರಯವಿಷಯಂ ಸುಖಂ ಜನಾ ಜಾನಂತಿ । ಉತ ಅಪಿ ಚ ಜಾನಂತಸ್ತೇ ಬ್ರಧ್ನಸ್ಯ ಮಹತೋಽಗ್ನೇಃ ಶಾಸನ ಆಜ್ಞಾಯಾಂ ಸರ್ವೇ ಜನಾ ರಣಂತಿ । ರಮಂತೇ । ತಥಾ ಚ ಮಂತ್ರಃ । ಮ ೧-೬೦-೨ । ಅಸ್ಯ ಶಾಸುರುಭಯಾಸಃ ಸಚಂತೇ ಹವಿಷ್ಮಂತ ಉಶಿಜೋ ಯೇ ಚ ಮರ್ತಾ ಇತಿ । ಅಪಿ ಚ । ಏಷಾಂ ಮನುಷ್ಯಾಣಾಮಗ್ನಿವಿಷಯಾ ಮಾಹಿನಾ ಮಹತೀಳಾ ಗೀಃ ಸ್ತುತಿರೂಪಾ ವಾಕ್ ಗಣ್ಯಾ ಗಣನೀಯಾ ಪೂಜ್ಯಾ ತೇ ದಿವೋರುಚೋ ದ್ಯುಲೋಕಸ್ಯ ರೋಚಕಾಃ ಸುರುಚಃ ಶೋಭನದೀಪ್ತಯೋ ರೋಚಮಾನಾ ದೇದೀಪ್ಯಮಾನಾ ಭವಂತಿ ॥ ಜಾನಂತಿ । ಜ್ಞಾ ಅವಬೋಧನೇ । ಕ್ರ್ಯಾದಿತ್ವಾತ್ಶ್ನಾ । ಜ್ಞಾಜನೋರ್ಜೇತಿ ಜಾದೇಶಃ । ಪ್ರತ್ಯಯಸ್ವರಃ । ಅರುಷಸ್ಯ । ರುಷ ರಿಷ ಹಿಂಸಾರ್ಥಾಃ । ರೋಷಂತೀತಿ ರುಷಾ ಹಿಂಸಕಾಃ । ಇಗುಪಧಜ್ಞೇತಿ ಕಃ । ನ ಸಂತಿ ರುಷಾ ಯಸ್ಯಾಸಾವರುಷಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಶೇವಂ । ಶೀಙ್ ಸ್ವಪ್ನೇ । ಇಣ್ಶೀಙ್ಭ್ಯಾಂ ವನ್ನಿತಿ ವನ್ । ನಿತ್ಸ್ವರಃ । ಶಾಸನೇ । ಶಾಸು ಅನುಶಿಷ್ಟೌ । ಅಸ್ಮಾದ್ಭಾವೇ ಲ್ಯುಟ್ । ಲಿಟೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ರಣಂತಿ । ನಿಘಾತಃ । ದಿವೋರುಚಃ । ರುಚ ದೀಪ್ತೌ । ಅಸ್ಮಾತ್ಕ್ವಿಪ್ । ತತ್ಪುರುಷೇ ಕೃತಿ ಬಹುಲಮಿತಿ ಷಷ್ಠ್ಯಾ ಅಲುಕ್ । ಕೃದುತ್ತರಪದಪ್ರಕೃತಿಸ್ವರತ್ವಂ । ಸುರುಚಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಇಳಾ । ಈಳ ಸ್ತುತೌ । ಹ್ರಸ್ವಶ್ಛಾಂದಸಃ । ಯಥಾ ವಾಕ್ಯಬ್ರುಷ್ಟಾಬಂತಸ್ತದ್ವತ್ । ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಗಣ್ಯಾ । ಗಣ ಸಂಖ್ಯಾನೇ । ಸ್ವಾರ್ಥೇ ಣ್ಯಂತಾದಚೋ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಮಾಹಿನಾ । ಮಹೇರಿನಣ್ ಚೇತಿ ಇನಣ್ । ಣಿತ್ತ್ವಾದುಪಧಾವೃದ್ಧಿಃ । ವ್ಯತ್ಯಯೇನಾದ್ಯುದಾತ್ತಃ । ಗೀಃ । ಗೄ ಶಬ್ದೇ । ಅಸ್ಮಾತ್ಕ್ವಿಪ್ । ಋತ ಇದ್ಧಾತೋರಿತೀತ್ವಂ । ರ್ವೋರುಪಧಾಯಾ ಇತಿ ದೀರ್ಘಃ । ಪ್ರಾತಿಪದಿಕಸ್ವರಃ ॥

ಪ್ರತಿಪದಾರ್ಥ.

**ವೃಷ್ಣಃ**—ಕಾಮವರ್ಷಕನೂ, । **ಅರುಷಸ್ಯ**—ಶತ್ರುರಹಿತನೂ (ಆದುದರಿಂದಲೇ ಪ್ರಕಾಶಮಾನನಾದ) ಅಗ್ನಿಯ । **ಶೇವಂ**—ಆಶ್ರಯವಿಷಯಕವಾದ ಸುಖವನ್ನು । **ಜಾನಂತಿ**—(ಜನಗಳು) ತಿಳಿದು ಕೊಳ್ಳುತ್ತಾರೆ. । **ಉತ**—ಮತ್ತು (ಸುಖಜ್ಞಾನವುಳ್ಳ ಜನಗಳು) । **ಬ್ರಧ್ನಸ್ಯ**—ಮಹಾಮಹಿಮನಾದ ಅಗ್ನಿಯ । **ಶಾಸನೇ**—ಅಧೀನದಲ್ಲಿ । **ರಣಂತಿ**—ರಮಿಸುತ್ತಾರೆ, (ಮತ್ತು) । **ಯೇಷಾಂ**—ಯಾವಮನುಷ್ಯರಿಗೆ । **ಮಾಹಿನಾ**—ಮಹಿಮಾವಿಶಿಷ್ಟವಾದ । **ಇಳಾ ಗೀಃ**—(ಅಗ್ನಿಯ) ಸ್ತುತಿರೂಪವಾದ ವಾಕ್ಯವು । **ಗಣ್ಯಾ**—ಪೂಜ್ಯವೋ । **ತೇ**—ಅವರು । **ದಿವೋರುಚಃ**—(ಸ್ವರ್ಗಲೋಕಕ್ಕೆ ಪ್ರಿಯರೂ) ಸ್ವರ್ಗಲೋಕವನ್ನು ಪ್ರಕಾಶಕ್ಕೆ ತರುವವರೂ । **ಸುರುಚಃ**—ಒಳ್ಳೆಯಕಾಂತಿವಿಶಿಷ್ಟರೂ । **ರೋಚಮಾನಾಃ**—ದೇದೀಪ್ಯಮಾನರೂ (ಆಗುತ್ತಾರೆ)

ಭಾವಾರ್ಥ.

ಇಷ್ಟಾರ್ಥಪ್ರದನೂ, ಶತ್ರುರಹಿತನೂ ಆದ ಅಗ್ನಿಯ ಆಶ್ರಯಜನ್ಯವಾದ ಸುಖವನ್ನು ಜನಗಳು ತಿಳಿದು, ಮಹಾಮಹಿಮನಾದ ಆ ಅಗ್ನಿಯ ಶಾಸನಕ್ಕೆ ಒಳಪಟ್ಟವರಾಗಿ ಸುಖಿಸುತ್ತಾರೆ. ಮಹಾಮಹಿಮೋಪೇತವಾದ ಅಗ್ನಿಸಂಬಂಧವಾದ ಸ್ತುತಿಯಲ್ಲಿ ಪೂಜ್ಯಬುದ್ಧಿಯುಳ್ಳವರು, ಅತ್ಯಂತ ತೇಜಸ್ವಿಗಳಾಗಿ ಸ್ವರ್ಗಲೋಕಪ್ರಾಪ್ತಿಗೆ ಮಾರ್ಗದರ್ಶಕರಾಗುತ್ತಾರೆ.

English Translation.

Men comprehend the service of the uninjurable showerer (of benefits) and exult in the commands of the mighty (Agni) : their frequent and earnest hymns of praise, bright and radiant, are illuminating heaven.

ವಿಶೇಷವಿಷಯಗಳು.

**ಅರುಷಸ್ಯ—ರೋಷಂತೀತಿ ರುಷಾ ಹಿಂಸಕಾಃ । ತದ್ರಹಿತಸ್ಯ ಶತ್ರುರಾಹಿತ್ಯೇನ ರೋಚಮಾನಸ್ಯ** । ಹಿಂಸೆ ಮಾಡು ಎಂಬ ಅರ್ಥವನ್ನು ಬೋಧಿಸುವ ರುಷಧಾತುವಿನಿಂದ ನಿಷ್ಪನ್ನವಾದ ರುಷಾಃ ಎಂಬ ಪದಕ್ಕೆ ಹಿಂಸೆಯನ್ನು ಮಾಡುವವರೆಂದೂ, ಹಿಂಸೆಪಡಿಸುವವರಾದ ಶತ್ರುಗಳು ಇಲ್ಲದೇ ಇರುವುದರಿಂದ ಅಗ್ನಿಯು ಪ್ರಕಾಶಿಸುತ್ತಿರುವನೆಂದೂ ಅರ್ಥವನ್ನು ವರ್ಣಿಸಿದೆ. ಅರುಷಂ ಎಂಬ ಪದವು ರೂಪನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ ಸಾಯಣರು ಹಿಂಸೆಮಾಡುವವರಿಂದ ರಹಿತನಾದವನು ಎಂದು ಅರ್ಥವನ್ನು ವಿವರಿಸಿದ್ದಾರೆ.

**ಶೇವಂ ಆಶ್ರಯವಿಷಯಂ ಸುಖಂ**-ಶೇವ ಎಂಬ ಪದವು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. **ಶೇವ ಇತಿ ಸುಖನಾಮ ಶಿಷ್ಯತೇರ್ವಕಾರೋ ನಾಮಕರಣೋ ಅಂತಸ್ಥಾಂತರೋಪಲಿಂಗೀ ವಿಭಾಷಿತಗುಣಃ ಶಿವಮಿತ್ಯಪ್ಯಸ್ಯ ಭವತಿ** (ನಿ. ೧೦-೧೭) ಶಿಷ ಧಾತುವಿನಿಂದ ನಿಷ್ಪನ್ನವಾದ ಶಬ್ದ. ಶಿಷ್ ಶಬ್ದಕ್ಕೆ ಷ ಕಾರಕ್ಕೆ ಬದಲಾಗಿ ವಕಾರವು ಬಂದು ಗುಣವು ಪ್ರಾಪ್ತವಾಗಿ ಶೇವ ಎಂದು ರೂಪವಾಗಿರುತ್ತದೆ. ಅಗ್ನಿಯನ್ನು ಆಶ್ರಯಿಸಿರುವವರು ಅಗ್ನ್ಯಾಶ್ರಯದಿಂದ ಉಂಟಾಗುವ ಸುಖವನ್ನು ತಿಳಿದಿರುತ್ತಾರೆ ಎಂದು ಅರ್ಥ.

**ಬ್ರಧ್ನಸ್ಯ ಶಾಸನೇ ರಣಂತಿ—ಮಹತೋ ಅಗ್ನೇಃ ಆಜ್ಞಾಯಾಂ ಸರ್ವೇ ಜನಾಃ ರಮಂತೇ ।** ಬ್ರಧ್ನಶಬ್ದವು ಅಶ್ವನಾಮಗಳಲ್ಲಿ (ನಿ. ೨-೨೭) ಉಕ್ತವಾಗಿದೆ. ಮಹನ್ನಾಮಗಳಲ್ಲಿಯೂ (ನಿ.೩-೧೩) ಉಕ್ತವಾಗಿದೆ.

ಸರ್ವರಿಗೂ ಪೂಜ್ಯನಾಗಿರುವುದಕ್ಕೆ ಅರ್ಹವಾದ ಮಹತ್ವದಿಂದ ಪೂರಿತನಾದ ಅಗ್ನಿಯ ಆಜ್ಞೆಯನ್ನು ಅನುಸರಿಸಿರುವ ಜನರೆಲ್ಲರೂ ಸುಖದಿಂದ ಜೀವಿಸುವರು ಎಂದು ಅರ್ಥವನ್ನು ಸಾಯಣರು ವಿವರಿಸಿ, ಈ (ವಿಷಯವು) ಅಂಶವು.

ಅಸ್ಯ ಶಾಸುರುಭಯಾಸಸ್ಸಚಂತೇ ಹವಿಷ್ಮಂತ ಉಶಿಜೋ ಯೇ ಚ ಮರ್ತಾಃ ।

(ಋ. ಸಂ. ೧-೬೦-೨)

ಎಂಬ ಋಕ್ಕಿನಿಂದಲೂ ಪ್ರತಿಪಾದಿತವಾಗಿರುವುದೆಂದು ವರ್ಣಿಸಿದ್ದಾರೆ

ಯೇಷಾಂ ಮಾಹಿನಾ ಇಳಾ ಗಿರಃ—ಯೇಷಾಂ ಮನುಷ್ಯಾಣಾಂ ಅಗ್ನಿವಿಷಯಾ ಮಹತೀ ಸ್ತೋತಿರೂಪಾ ವಾಕ್, ತೇ ಗೆಣ್ಯಾಃ-- ಅಗ್ನಿಯ (ವಿಷಯದಲ್ಲಿರುವ) ಮಾಹಾತ್ಮ್ಯದಿಂದ ಕೂಡಿರುವ ಸ್ತುತಿಯನ್ನು ಪಠಿಸುವವರು ಪೂಜ್ಯರಾಗಿಯೂ ದ್ಯುಲೋಕವನ್ನೂ ಪ್ರಕಾಶಗೊಳಿಸುವವರಾಗಿಯೂ, ಬಹಳವಾದ ಕಾಂತಿಯುಳ್ಳವರಾಗಿಯೂ ಆಗುವರೆಂಬು ಅಗ್ನಿಯ ಮಹಿಮೆಯು ಪ್ರಕಾಶಿತವಾಗಿರುತ್ತದೆ. ಇಳಾ ಎಂಬ ಶಬ್ದವು ಪೃಥಿವೀನಾಮಗಳಲ್ಲಿ (ನಿ. ೧-೫) ವಾಙ್ನಾಮಗಳಲ್ಲಿ (ನಿ. ೧-೨೩) ಅನ್ನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

ಅಭಿ ನ ಇಳಾ ಯೂಥಸ್ಯ ಮಾತಾಸ್ಮನ್ನದೀಭಿರುರ್ವಶೀ ವಾ ಗೃಣಾತು ।

(ಋ. ಸಂ. ೫-೪೧-೧೯)

ಇಲ್ಲಿ ಇಳಾ, ಅಥವಾ ಇಡಾ ಎಂಬ ಹೆಸರಿನ ಮಧ್ಯಸ್ಥಾನ ದೇವತೆಯೆಂದೂ ನಿರ್ವಚನವಾಡಿದೆ. ಸಾಯಣರು ಸ್ತುತಿರೂಪವಾದ ವಾಕ್ಕೆಂದು ಅರ್ಥವನ್ನು ವಿವರಿಸಿರುವರು.

ವ್ಯಾಕರಣಪ್ರಕ್ರಿಯಾ.

ಜಾನಂತಿ—ಜ್ಞಾ ಅವಬೋಧನೆ ಧಾತು. ಕ್ರ್ಯಾದಿ ಲಟ್. ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. ಇದು ಪರವಾದಾಗ **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಸೂತ್ರದಿಂದ ವಿಕರಣದ ಆಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರ ಉಳಿಯುತ್ತದೆ.

**ಅರುಷಸ್ಯ—ರುಷ** ರಿಷ ಹಿಂಸಾಯಾಂ ಧಾತು. **ರೋಷಂತಿ** ಇತಿ ರುಷಾಃ **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. **ಲಶಕ್ವತದ್ಧಿತೇ** ಸೂತ್ರದಿಂದ ಆದಿಕಕಾರಕ್ಕೆ ಲೋಪ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ನ ಸಂತಿ ರುಷಾಃ ಯಸ್ಯ ಅಸೌ ಅರುಷಃ ತಸ್ಯ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಶೇವಂ**—ಶೀಙ್ ಸ್ವಪ್ನೇ ಧಾತು. **ಇಣ್‌ಶೀಙ್‌ಭ್ಯಾಂವನ್** (ಉ. ಸೂ. ೧-೧೫೦) ಎಂಬುದರಿಂದ ವನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಾರಕ್ಕೆ ಗುಣ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶಾಸನೇ**—ಶಾಸು ಅನುಶಿಷ್ಟೌ ಧಾತು. ಅದಾದಿ. ಇದರ ಮೇಲೆ ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ರಣಂತಿ**—ರಣ ಶಬ್ದೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಿವೋರುಚಃ**—ರುಚ ದೀಪ್ತೌ ಧಾತು- **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ತತ್ಪುರುಷೇ ಕೃತಿ ಬಹುಲಮ್** (ಪಾ. ಸೂ. ೬-೩-೧೪೨) ಎಂಬುದರಿಂದ ಸಮಾಸವಾದಾಗ ದಿವಃ ಎಂಬಲ್ಲಿ ಷಷ್ಠಿಗೆ ಲುಕ್ ಬರುವುದಿಲ್ಲ. **ಗತಿಕಾರಕೋ**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುರುಚಃ**—ಶೋಭನಾಃ ರುಚಃ ಯಾಸಾಂ ತಾಃ ಸುರುಚಃ । ಬಹುವ್ರೀಹಿಯಲ್ಲಿ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ.

**ರೋಚಮಾನಾಃ**—ಪೂರ್ವೋಕ್ತವಾದ ಧಾತುವಿಗೆ ಲಟ್ ಬಂದಾಗ ಅದಕ್ಕೆ ಶಾನಚಾದೇಶ. ಮುಕಾಗಮ. ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

ಇಳಾ—ಈಡ ಸ್ತುತೌ ಧಾತು. ಅಪ್ ಪ್ರತ್ಯಯ. ಟಾಪ್. ವಾಕ್ ಶಬ್ದವು ಹಲಂತವಾದರೂ ವಾಚಾ ಎಂದು ಹೇಗೆ ಟಾಬಂತವಾಗುತ್ತದೆಯೋ ಅದರಂತೆ ಇಲ್ಲಿ ಈಕಾರಕ್ಕೆ ಛಾಂದಸವಾಗಿ ಹ್ರಸ್ವ ಬಂದಿದೆ.

**ಗಣ್ಯಾ**—ಗಣ ಸಂಖ್ಯಾನೇ ಧಾತು. ಯತ್ ಪ್ರತ್ಯಯ. **ಯತೋಽನಾವಃ** (ಪಾ.ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಮಾಹಿನಾ**—ಮಹ ಪೂಜಾಯಾಂ ಧಾತು. **ಮಹೇರಿನಣ್ ಚ** (ಉ. ಸೂ. ೨-೨೧೪) ಎಂಬುದರಿಂದ ಇನಣ್ ಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ** ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಅದಂತವಾದುದರಿಂದ ಟಾಪ್. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

ಗೀಃ—ಗೄ ಶಬ್ದೇ ಧಾತು ಕ್ರ್ಯಾದಿ. ಕ್ವಿಪ್ ಚ ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಋಕಾರಕ್ಕೆ ಇತ್ವ. ರಪರವಾಗಿ ಬರುತ್ತದೆ. **ರ್ವೋರುಪಧಾಯಾ**—ಎಂಬುದರಿಂದ ಉಪಧೆಗೆ ದೀರ್ಘ. ಪ್ರಾತಿಪದಿಕಸ್ವರ (ಉದಾತ್ತ) ಬರುತ್ತದೆ.

ಸಂಹಿತಾಪಾಠಃ

ಉತೋ ಪಿತೃಭ್ಯಾಂ ಪ್ರವಿದಾನು ಘೋಷಂ ಮಹೋ ಮಹದ್ಭ್ಯಾಮನಯಂತ ಶೂಷಂ ।
ಉಕ್ಷಾ ಹ ಯತ್ರ ಪರಿ ಧಾನಮಕ್ತೋರನು ಸ್ವಂ ಧಾಮ ಜರಿತುರ್ವವಕ್ಷ ॥ ೬ ॥

ಪದಪಾಠಃ

ಉತೋ ಇತಿ । ಪಿತೃಽಭ್ಯಾಂ । ಪ್ರಽವಿದಾ । ಅನು । ಘೋಷಂ । ಮಹಃ । ಮಹತ್ಽಭ್ಯಾಂ । ಅನಯಂತ । ಶೂಷಂ ।
ಉಕ್ಷಾ । ಹ । ಯತ್ರ । ಪರಿ । ಧಾನಂ । ಅಕ್ತೋಃ । ಅನು । ಸ್ವಂ । ಧಾಮ । ಜರಿತುಃ । ವವಕ್ಷ ॥ ೬ ॥

ಸಾಯಣಭಾಷ್ಯಂ.

ಉತೋ ಅಪಿ ಚ ಮಹೋ ಮಹದ್ಭ್ಯಾಂ ಮಹತೋ ಮಹದ್ಭ್ಯಾಂ ಪಿತೃಭ್ಯಾಂ ದ್ಯಾವಾಪೃಥಿವೀಭ್ಯಾಂ ಪ್ರವಿದಾ ಪ್ರವೇದನೇನಾನು ಘೋಷಮನು ಘುಷ್ಯಮಾಣಂ ಶೂಷಂ ಸುಖಂ । ಶೂಷಂ ಶುನಮಿತಿ ಸುಖನಾಮಸು ಪಾಠಾತ್ । ತತ್ಸುಖಂ ಯಜಮಾನಾ ಅಗ್ನಿಮನಯಂತ । ಅಗ್ನಿಂ ಪ್ರಾಪಿತವಂತಃ । ಸೋಽಗ್ನಿರ್ಯತ್ರ ಯಜಮಾನೇಷೂಕ್ಷಾ ವೃಷ್ಟ್ಯುತ್ಪಾದನೇನೋದಕಸ್ಯ ಸೇಕ್ತಾಕ್ತೋಃ । ಅಕ್ತುಶಬ್ದೋ ರಾತ್ರಿಮಾಚಷ್ಟೇ । ಶರ್ವರೀ ಅಕ್ತುರಿತಿ ತನ್ನಾಮಸು ಪಾಠಾತ್ ಅಜ್ಯತೇ ಸಿಚ್ಯತೇ ನೀಹಾರೇಣ ಜಗದಸ್ಯಾಮಿತಿ ವ್ಯುತ್ಪತ್ತೇಶ್ಚ । ತಸ್ಯಾ ರಾತ್ರೇಃ ಪರಿ ಧ್ಮಾನಂ ಪರಿತೋ ಧಾರಕಂ ಸ್ವಮಾತ್ಮೀಯಂ ಧಾಮ ತೇಜೋ ಜರಿತುಃ ಸ್ತೋತುಃ ಸ್ತುತಿಶ್ರವಣಾರ್ಥಮನು ವವಕ್ಷ ಹ । ಸಮೀಪೇ ವಹತಿ ಖಲು । ಸನ್ನಿಹಿತಂ ಕರೋತೀತ್ಯರ್ಥಃ ॥ ಉತೋ । ಓದಿತಿ ಪ್ರಗೃಹ್ಯಸಂಜ್ಞಾ । ಏವಮಾದಿತ್ವಾದಂತೋದಾತ್ತಃ । ಘೋಷಂ । ಘುಷಿರ್ ಶಬ್ದೇ ! ಅಸ್ಮಾತ್ಕರ್ಮಣಿ ಘಞ್ । ಲಘೂಪಧಗುಣಃ । ಞಿತ್ಸ್ವರಃ । ಮಹಃ । ಅಕಾರತಕಾರಯೋರ್ಲೋಪಶ್ಛಾಂದಸಃ । ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ಅನಯಂತ । ಣೀಞ್ ಪ್ರಾಪಣ ಇತ್ಯಸ್ಯ ಲಙಿ ರೂಪಂ । ನಿಘಾತಃ । ಉಕ್ಷಾ । ಉಕ್ಷ ಸೇಚನೇ । ಶ್ವನ್ನುಕ್ಷನ್ನಿತ್ಯಾದಿನಾ ಕನಿಪ್ರತ್ಯಯಾಂತತ್ವೇನೋಕ್ಷನ್ಶಬ್ದೋ ನಿಪಾತಿತಃ । ವ್ಯತ್ಯಯೇನಾಂತೋದಾತ್ತಃ । ಹ । ಚಾದಿತ್ವಾದನುದಾತ್ತಃ । ಯತ್ರ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಅಕ್ತೋಃ । ಅಂಜೂ ವ್ಯಕ್ತಿಗತಿಮ್ರಕ್ಷಣೇಷ್ವಿತ್ಯಸ್ಮಾತ್ ಸ್ಯಾಜ್ಯರ್ತಿಭ್ಯಃ ಕ್ತುರಿತಿ ಕ್ತುಃ । ಕಿತ್ತ್ವಾದನಿದಿತಾಮಿತಿ ನಲೋಪಃ । ಪ್ರತ್ಯಯಸ್ವರಃ । ವವಕ್ಷ । ವಹ ಪ್ರಾಪಣೇ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಿಟ್ । ಸಕಾರಶ್ಛಾಂದಸಃ । ತಿಪೋ ಣಲಾದೇಶಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥

ಪ್ರತಿಪದಾರ್ಥ.

ಉತೋ—ಮತ್ತು । ಯತ್ರ—ಯಾವ ಯಜಮಾನರಲ್ಲಿ । ಉಕ್ಷಾ—(ವೃಷ್ಟ್ಯುತ್ಪಾದನ ಮಾಡಿ) ಉದಕ ಸೇಚನ ಮಾಡುವ ಅಗ್ನಿಯು ! ಅಕ್ತೋಃ—ರಾತ್ರಿಗೆ । ಪರಿ ಧ್ಮಾನಂ—(ಆವರಣದಂತಿರುವ) ಧಾರಕವಾದ । ಸ್ವಂ ಧಾಮ—ತನ್ನ ತೇಜಸ್ಸನ್ನು । ಜರಿತುಃ—ಸ್ತೋತೃವಿನ (ಸ್ತುತಿಯನ್ನು ಕೇಳುವುದಕ್ಕೋಸ್ಕರ) । ಅನು ವವಕ್ಷ ಹ—(ಸನ್ನಿಹಿತವನ್ನಾಗಿ ಮಾಡುತ್ತಾನೋ) ಸಮೀಪಕ್ಕೆ ತರುತ್ತಾನೋ । (ತೇ—ಆ ಯಜಮಾನರು) । ಮಹೋ ಮಹದ್ಭ್ಯಾಂ—ದೊಡ್ಡದರಲ್ಲಿ ಅತಿ ದೊಡ್ಡವಾದ । ಪಿತೃಭ್ಯಾಂ—ಮಾತಾಪಿತೃಗಳಾದ ದ್ಯಾವಾಪೃಥಿವಿಗಳಿಗೆ । ಪ್ರವಿದಾ—ತಿಳಿಸುವುದರಿಂದ । ಅನು ಘೋಷಂ—ಘೋಷಿಸಲ್ಪಡುವ । ಶೂಷಂ—ಸುಖವನ್ನು । ಅನಯಂತ—(ಅಗ್ನಿಗೆ) ಸೇರುವಂತೆ ಮಾಡಿದರು.

ಭಾವಾರ್ಥ

ವೃಷ್ಟಿಯ ಮೂಲಕ ಉದಕಸೇಚನಮಾಡಿಸುವ ಅಗ್ನಿಯು ಸ್ತೋತೃವಿನ ಸ್ತುತಿಯನ್ನು ಶ್ರವಣ ಮಾಡುವ ಉದ್ದೇಶದಿಂದ ಆವರಣದಂತಿರುವ ರಾತ್ರ್ಯಾಧಾರಕವಾದ ತನ್ನ ತೇಜಸ್ಸಿನ ರೂಪದಿಂದ ಸನ್ನಿಹಿತನಾಗುತ್ತಾನೆ; ಸ್ತೋತೃಗಳೂ ಕೂಡ, ದೊಡ್ಡದರಲ್ಲಿ ಅತಿ ದೊಡ್ಡವುಗಳಾದ ದ್ಯಾವಾಪೃಥಿವಿಗಳನ್ನು ಸ್ತುತಿಸುವುದರ ಮೂಲಕ, ಅಗ್ನಿಗೆ ಸುಖವನುಂಟುಮಾಡುತ್ತಾರೆ.

## English Translation.

Verily (men) bring great delight to Agni by glorifying aloud the mighty parents (heaven and earth), when the shedder of rain approximates his own radiance to the worshipper, (wherewith) to invest the night.

### ವಿಶೇಷವಿಷಯಗಳು

**ಮಹಃ ಮಹದ್ಭ್ಯಾಂ—ಮಹತೋ ಮಹದ್ಭ್ಯಾಂ** । ಮಹಶ್ಶಬ್ದವು ಉದಕನಾಮಗಳಲ್ಲಿಯೂ (೨೧-೩-೨೪) ಪಠಿತವಾಗಿದೆ.

**ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।**
**ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ॥**

(ಋ. ಸಂ. ೧-೧೮೭-೧).

ಈ ಋಕ್ಕಿನಲ್ಲಿ **ಮಹಃ ಮಹತಃ ಬಲಸ್ಯ ಧಾರಯಿತಾರಂ** ಅತಿಶಯವಾದ ಬಲವನ್ನು ಧರಿಸಿರುವವನೆಂದು ಅರ್ಥವನ್ನು ವಿವರಿಸಿರುವುದರಿಂದ **ಮಹಃ** ಎಂಬ ಶಬ್ದಕ್ಕೆ ಮಹತ್ (ಮಿಗಿಲಾದದ್ದು) ಎಂದು ಅರ್ಥವನ್ನು ವರ್ಣಿಸಿದೆ.

**ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।**
**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥**

(ಋ. ಸಂ. ೧೦-೧೭-೧).

ಈ ಋಕ್ಕಿನಲ್ಲಿಯೂ **ಮಹಃ ಮಹತಃ ಜಾಯಾ ವಿವಸ್ವತಃ** ಮಹತ್ವಪೂರಿತನಾದ ಸೂರ್ಯನ ಪತ್ನಿಯು ಎಂದು ಅರ್ಥವನ್ನು ವರ್ಣಿಸಿರುವುದರಿಂದ ಮಹಶ್ಶಬ್ದವು ಮಹತ್ ಎಂಬರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿದೆ.

**ಪಿತೃಭ್ಯಾಂ—ದ್ಯಾವಾಪೃಥಿವೀಭ್ಯಾಂ** । ಪಿತೃಶಬ್ದವು ಪಿತಾ ಪಾತಾ ವಾ ಪಾಲಯಿತಾ ವಾ ಎಂದು (ನಿ ೪-೨೧) ಯಾಸ್ಕರಿಂದ ರಕ್ಷಿಸುವವನು ಎಂಬರ್ಥವನ್ನು ಬೋಧಿಸುವುದೆಂದು ವ್ಯಾಖ್ಯಾತವಾಗಿದೆ. ಇಲ್ಲಿ ದ್ಯಾವಾಪೃಥಿವಿಗಳೆಂದು ಅರ್ಥವನ್ನು ವರ್ಣಿಸಿದೆ.

**ಶೂಷಂ—ಸುಖಂ** । ಶೂಷಶಬ್ದವು ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿಯೂ (ನಿ. ೨-೯) ಶಿಂಬಾತಾ, ಶತರಾ ಇವೇ ಮೊದಲಾದ ಇಪ್ಪತ್ತು ಸುಖನಾಮಗಳ ಮಧ್ಯದಲ್ಲಿಯೂ (ನಿ. ೩-೧೩) ಉಕ್ತವಾಗಿರುತ್ತದೆ. ಇಲ್ಲಿ ಸುಖವೆಂದು ಅರ್ಥ.

ಇಲ್ಲಿ **ಮಹದ್ಭ್ಯಾಂ ಪಿತೃಭ್ಯಾಂ ಪ್ರವಿದಾ ಅನುಘೋಷಂ ಶೂಷಂ**—ಮಹತ್ತ್ವದಿಂದ ಪೂರ್ಣರಾಗಿರುವ ದ್ಯಾವಾಪೃಥಿವಿಗಳು ಅಗ್ನಿಯಿಂದ ಉಂಟಾಗಿರುವ ಸುಖದ ಅತಿಶಯವನ್ನು ಚೆನ್ನಾಗಿ ತಿಳಿದು ಪ್ರಕಟಿಸುತ್ತಿರುವರು ಎಂದೂ ಅದೇ ಪ್ರಕಾರವಾಗಿ ಇರುವ ಸುಖವನ್ನು ಯಜ್ಞಮಾಡುವ ಯಜಮಾನರು ಅಗ್ನಿಯ ಉಪಾಸನೆಯಿಂದ ಹೊಂದಿ ತಮಗೆ ಸುಖವನ್ನು ಅನುಗ್ರಹಿಸಿದ ಅಗ್ನಿಗೂ ಅದೇ ಸುಖವು ಉಂಟಾಗುವಂತೆ ಆಶಂಸನೆ ಮಾಡಿ, ಅದನ್ನು ಅಗ್ನಿಗೆ ಉಂಟಾಗುವಂತೆ ಮಾಡಿರುವರೆಂದೂ ವರ್ಣಿಸಿದೆ.

**ಉಕ್ಷಾ**—ವೃಷ್ಟ್ಯುತ್ಪಾದನೇನ ಉದಕಸ್ಯ ಸೇಕ್ತಾ. **ಉಕ್ಷಾ** ಎಂಬ ಶಬ್ದವು ಮಹತ್, ಬ್ರಧ್ನಃ, ಎಂಬಿವೇ ಮೊದಲಾದ ಇಪ್ಪತ್ತೈದು ಮಹನ್ನಾಮಗಳ ಮಧ್ಯದಲ್ಲಿ (ನಿ. ೩-೧೩) ಉಕ್ತವಾಗಿದೆ. ಮತ್ತು ಯಾಸ್ಕರು—

**ವೃಷಾಕಪಾಯಿ ರೇವತಿ ಸುಪುತ್ರ ಆದು ಸುಸ್ನುಷೇ ।**
**ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೧೩)

ಈ ಋಕ್ಕನ್ನು ಉದಹರಿಸಿ **ಉಕ್ಷಣಃ-ಉಕ್ಷತೇರ್ವೃದ್ಧಿಕರ್ಮಣಃ, ಉಕ್ಷಂತ್ಯುದಕೇನೇತಿ ವಾ ।** ವೃದ್ಧಿ ಎಂದು ಅರ್ಥವನ್ನು ಬೋಧಿಸುವ ಉಕ್ಷಧಾತುವಿನಿಂದ ನಿಷ್ಪನ್ನವಾದ ಉಕ್ಷಶಬ್ದಕ್ಕೆ ವೃದ್ಧಿಯನ್ನು ಹೊಂದು ಎಂದೂ, ಉದಕಗಳನ್ನು ಸುರಿಸುವುದರಿಂದ ಉಕ್ಷ ಎಂದೂ ಅರ್ಥವನ್ನು ವಿವರಿಷಿದ್ದಾರೆ. ಇಲ್ಲಿ ಸಾಯಣರು ವೃಷ್ಟಿಯನ್ನು ಉಂಟುಮಾಡುವುದರಿಂದ ಅಗ್ನಿಯೂ ಉಕ್ಷಾಶಬ್ದವಾಚ್ಯನಾಗಿರುವನು ಎಂದು ಅರ್ಥ ವನ್ನು ವಿವರಿಸಿದ್ದಾರೆ. ಅಗ್ನಿಯು ಯಜ್ಞವನ್ನು ಆಚರಿಸುವವರಿಗೆ ಅನುಕೂಲವಾಗುವಂತೆ ವೃಷ್ಟಿಯನ್ನು ಉಂಟುಮಾಡುವನೆಂದು ತಾತ್ಪರ್ಯ.

**ಅಕ್ತೋಃ**—ರಾತ್ರೇಃ । ರಾತ್ರಿ ಎಂದು ಅರ್ಥ. **ಶ್ಯಾವೀ, ಕ್ಷಪಾ,** ಎಂಬ ಇಪ್ಪತ್ತುಮೂರು ರಾತ್ರಿನಾಮ ಗಳ ಮಧ್ಯದಲ್ಲಿ ಅಕ್ತುಃ ಎಂಬ ಪದವು (ನಿ. ೨-೧೮) ಉಕ್ತವಾಗಿದೆ. ಸಾಯಣರು **ಅಕ್ತುಶಬ್ದೋ ರಾತ್ರಿ ಮಾಚಷ್ಟೇ ಅಜ್ಯತೇ ಸಿಚ್ಯತೇ ನೀಹಾರೇಣ ಜಗದಸ್ಯಾಮಿತಿ ವ್ಯುತ್ಪತ್ತೇಃ** । ಜಗತ್ತೆಲ್ಲವನ್ನೂ ಹಿಮದಿಂದ ತೋಯಿಸುವುದರಿಂದ ರಾತ್ರಿಗೆ **ಅಕ್ತು** ಎಂದು ಹೆಸರು ಎಂದು ಅರ್ಥವನ್ನು ವಿವರಿಸಿದ್ದಾರೆ.

ಜರಿತುಃ—**ಸ್ತೋತುಃ** । ಸ್ತುತಿ ಮಾಡುವವನ ಎಂದು ಅರ್ಥ.

ಜರಿತೃಶಬ್ದವು ಯಾಸ್ಕರಿಂದ **ಜರಿತಾ**—ಗರಿತಾ (ನಿ. ೧-೭) ಎಂದು ವ್ಯಾಖ್ಯಾತವಾಗಿದೆ. **ರೇಭಃ ಜರಿತಾ** ಎಂದು **ಸ್ತೋತೃನಾಮ**ಗಳಲ್ಲಿ (ನಿ. ೩-೧೯) ಪಠಿತವಾಗಿದೆ.

**ಉಕ್ಷಾ ಅಕ್ತೋಃ ಪರಿಧಾನಂ ಸ್ವಂ ಧಾಮ ಜರಿತುಃ ವವಕ್ಷ** । ಈ ವಾಕ್ಯದಿಂದ ಅಗ್ನಿಯು ರಾತ್ರಿಗೆ ಆವರಕವಾಗಿರುವ ತನ್ನ ತೇಜಸ್ಸನ್ನು ತನ್ನನ್ನು ಸ್ತುತಿಮಾಡುವವರಿಗಾಗಿ (ಸ್ತುತಿಯನ್ನು ಶ್ರವಣ ಮಾಡುವುದ ಕ್ಕಾಗಿ) ಸನ್ನಿಹಿತವಾಗಿರುವಂತೆ (ಪ್ರತ್ಯಕ್ಷವಾಗಿರುವಂತೆ) ಮಾಡುತ್ತಾನೆ ಎಂದು ಅರ್ಥವನ್ನು ವಿವರಿಷಿದೆ.

### ವ್ಯಾಕರಣಪ್ರಕ್ರಿಯಾ

**ಉತೋ ಇತಿ**—ಓತ್ (ಪಾ. ಸೂ. ೧-೧-೧೫) ಎಂಬುದರಿಂದ ಓಕಾರಾಂತವಾದ ನಿಪಾತವಾದುದ ರಿಂದ ಪ್ರಗೃಹ್ಯಸಂಜ್ಞಾ ಬರುತ್ತದೆ. **ಪ್ಲುತಪ್ರಗೃಹ್ಯಾ ಅಚಿನಿತ್ಯಮ್** ಎಂಬುದರಿಂದ ಪ್ರಕೃತಿಭಾವ ಬರುತ್ತದೆ. ಏವಮಾದಿಯಲ್ಲಿ ಸೇರಿರುವುದರಿಂದ **ಏವಾದೀನಾಮಂತಃ** (ಫಿ. ಸೂ. ೮೨) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ.

**ಪ್ರವಿದಾ**—ವಿದ ಜ್ಞಾನೇ ಧಾತು. ಕ್ವಿಪ್ ಪ್ರತ್ಯಯ ಪ್ರಾದಿಸಮಾಸ. ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಘೋಷಮ್**—ಘುಷಿರ್ ಶಬ್ದೇ. ಇದಕ್ಕೆ ಕರ್ಮಣಿಯಲ್ಲಿ ಘಞ್ ಪ್ರತ್ಯಯ. **ಪುಗಂತಲಘೂ-ಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪದಕ್ಕೆ ಗುಣ.

ಪ್ರತ್ಯಯ ಞಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಮಹಃ—ಮಹತಃ** ಎಂದು ರೂಪವಾದಾಗ ಛಾಂದಸವಾಗಿ ಅಕಾರತಕಾರಗಳಿಗೆ ಲೋಪ ಬರುತ್ತದೆ. **ಬೃಹನ್ಮಹತೋರುಪಸಂಖ್ಯಾನಮ್** ಎಂಬ ವಚನದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅನಯಂತಃ**—ಣೀಞ್ ಪ್ರಾಪಣೇ ಧಾತು. ಲಙ್ ಪ್ರಥಮಪುರುಷ ಬಹುವಚನಾಂತರೂಪ. ಅತಿ ಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಉಕ್ಷಾ—**ಉಕ್ಷ ಸೇಚನೇ ಧಾತು. **ಶ್ವನ್ನುಕ್ಷನ್** (ಉ. ಸೂ. ೧-೧೫೭) ಎಂಬುದರಿಂದ ಕನಿನ್ ಪ್ರತ್ಯಯಾಂತದಿಂದ ನಿಪಾತಿತವಾಗಿದೆ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಏಕ ವಚನಾಂತರೂಪ.

**ಹ—**ಚಾದಿಯಲ್ಲಿ ಪಠಿತವಾದುದರಿಂದ **ಚಾದಯೋನುದಾತ್ತಾಃ** (ಫಿ. ಸೂ. ೮೪) ಎಂಬದುರಿಂದ ಅನುದಾತ್ತವಾಗುತ್ತದೆ.

**ಯತ್ರ—ಸಪ್ತಮ್ಯಾಸ್ತ್ರಲ್** ಎಂಬುದರಿಂದ ಯಚ್ಛಬ್ದಕ್ಕೆ ಸಪ್ತಮ್ಯರ್ಥದಲ್ಲಿ ತ್ರಲ್ ಪ್ರತ್ಯಯ. ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಧಾನಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಬಹುಲಗ್ರಹಣದಿಂದ ಕರ್ತರಿಯಲ್ಲಿ ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ಹಿಂದಿನಂತೆ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅಕ್ತೋಃ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. **ಸ್ಯಾಜ್ಯರ್ತಿಭ್ಯಃ** ಎಂಬುದರಿಂದ ಕ್ತು ಪ್ರತ್ಯಯ. ಕಿತ್ತಾದುದರಿಂದ **ಅನಿದಿತಾಂಹಲಉ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪ ಧಾನಕಾರಕ್ಕೆ ಲೋಪ. **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಜಕಾರಕ್ಕೆ ಕುತ್ವ. **ಖರಿಚ** ಎಂಬುದರಿಂದ ಚರ್ತ್ವ. ಅಕ್ತು ಎಂದು ರೂಪವಾಗುತ್ತದೆ. ಷಷ್ಠೀ ಏಕವಚನಾಂತರೂಪ. ಪ್ರತ್ಯಯಸ್ವರ ದಿಂದ ಅಂತೋದಾತ್ತವಾಗುತ್ತದೆ.

**ಧಾಮ—ಆತೋಮನಿನ್ಕ್ವನಿಬ್**—(ಪಾ. ಸೂ. ೩-೨-೭೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜರಿತುಃ**—ಜ್ಯಾಷ್ ವಯೋಹಾನೌ ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ತರಿ ಯಲ್ಲಿ ತೃಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವವಕ್ಷ**—ವಹ ಪ್ರಾಪಣೇ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥ ದಲ್ಲಿ ಲಿಟ್. ಪ್ರಥಮಪುರುಷ ಏಕವಚನಕ್ಕೆ ಣಲಾದೇಶ. ಛಾಂದಸವಾಗಿ ಧಾತುವಿಗೆ ಸಕಾರ ಬರುತ್ತದೆ. ಆಗ ಹಕಾರಕ್ಕೆ ಢತ್ವ, ಕತ್ವ. ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ ಬಂದಾಗ ವವಕ್ಷ ಎಂದು ರೂಪವಾಗು ತ್ತದೆ. ಯತ್ರ ಎಂಬುದರ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ** (ಪಾ. ಸೂ. ೮-೧-೩೦) ಎಂಬುದರಿಂದ **ನಿಘಾತಸ್ವರಪ್ರತಿಷೇಧ** ಬರುವುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

ಅಧ್ವರ್ಯುಭಿಃ ಪಂಚಭಿಃ ಸಪ್ತ ವಿಪ್ರಾಃ ಪ್ರಿಯಂ ರಕ್ಷಂತೇ ನಿಹಿತಂ ಪದಂ ವೇಃ। ಪ್ರಾಂಚೋ ಮದಂತ್ಯುಕ್ಷಣೋ ಅಜುರ್ಯಾ ದೇವಾ ದೇವಾನಾಮನು ಹಿ ವ್ರತಾ ಗುಃ ॥ ೭ ॥

ಪದಪಾಠಃ

ಅಧ್ವರ್ಯುಽಭಿಃ । ಪಂಚಽಭಿಃ । ಸಪ್ತ । ವಿಪ್ರಾಃ । ಪ್ರಿಯಂ । ರಕ್ಷಂತೇ । ನಿಽಹಿತಂ । ಪದಂ । ವೇರಿತಿ ವೇಃ ।

ಪ್ರಾಂಚಃ । ಮದಂತಿ । ಉಕ್ಷಣಃ । ಅಜುರ್ಯಾಃ । ದೇವಾಃ । ದೇವಾನಾಂ । ಅನು । ಹಿ । ವ್ರತಾ । ಗುರಿತಿ ಗುಃ ॥ ೭ ॥

ಸಾಯಣಭಾಷ್ಯಂ

ಉದ್ಗಾತೃವರ್ಗವ್ಯತಿರಿಕ್ತಾ ದ್ವಾದಶರ್ತ್ವಿಜೋ ಭವಂತಿ । ತತ್ರ ಸಪ್ತ ವಷಟ್ಕರ್ತಾರಃ । ಪಂಚಾನ್ಯೇಽಧ್ವರಂ ನಯಂತಿ । ತೈಃ ಪಂಚಭಿರಧ್ವರ್ಯುಭಿಃ ಸಹ ಸಪ್ತ ವಿಪ್ರಾ ಮೇಧಾವಿನೋ ಹೋತ್ರಕಾ ವೇರ್ಗಮನಸ್ವಭಾವಸ್ಯಾಗ್ನೇಃ ಪ್ರಿಯಂ ನಿಹಿತಮಾಹವನೀಯಾಖ್ಯಂ ಪದಂ ರಕ್ಷಂತೇ । ಪಾಲಯಂತಿ । ಪ್ರಾಂಚಃ ಸೋಮಪಾನಾರ್ಥಂ ಪ್ರಾಙ್ಮುಖಾ ಗಚ್ಛಂತೋಽಜುರ್ಯಾ ಜರಯಿತುಮಶಕ್ಯಾ ಉಕ್ಷಣಃ ಸೋಮರಸಸ್ಯ ಸೇಕ್ತಾರೋ ದೇವಾಃ ಸ್ತೋತಾರೋ ಮದಂತಿ । ಹೃಷ್ಯಂತಿ । ಕಿಂಚ ತೇ ದೇವಾ ದೇವಾನಾಂ ಸಂಬಂಧೀನಿ ವ್ರತಾ ವ್ರತಾನಿ ಯಜ್ಞಾನನುಗುಃ । ಅನ್ವಗಚ್ಛನ್ । ಹಿ ಪ್ರಸಿದ್ಧೌ । ಅಗ್ನೇಃ ಪ್ರಸಾದಾದ್ದೇವಾ ಯಜ್ಞಾನ್ ಲಬ್ಧವಂತ ಇತ್ಯರ್ಥಃ॥ ರಕ್ಷಂತೇ । ರಕ್ಷ ಪಾಲನೇ । ವ್ಯತ್ಯಯೇನಾತ್ಮನೇಪದಂ । ನಿಘಾತಃ । ನಿಹಿತಂ । ಡುಧಾಞ್ ಧಾರಣಪೋಷಣಯೋರಿತ್ಯಸ್ಯ ಕರ್ಮಣಿ ನಿಷ್ಠಾಯಾಂ ದಧಾತೇರ್ಹಿರಿತಿ ಹಿರಾದೇಶಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ವೇಃ । ವೀ ಕಾಂತಿಗತ್ಯಾದಿಷು । ಅಸ್ಮಾದ್ವಿಚ್ । ಸಾರ್ವಧಾತುಕಾರ್ಧಧಾತುಕಯೋಃ । ಪಾ. ೭-೩-೮೪ । ಇತಿ ಗುಣಃ । ಜಸಿಜಸೋಶ್ಚೇತಿ ಪೂರ್ವರೂಪತ್ವಂ । ಪ್ರಾಂಚಃ । ಅನಿಗಂತೋಽಂಚತಾವಿತಿ ಪೂರ್ವಪದಪ್ರಕೃತಿಸ್ವರತ್ವಂ । ಮದಂತಿ । ಮದೀ ಹರ್ಷೇ । ನಿಘಾತಃ । ಗುಃ । ಇಣ್ ಗತಾವಿತ್ಯಸ್ಮಾಲ್ಲುಙಿ ರೂಪಂ । ಇಣೋ ಗಾ ಲುಙೀತಿ ಗಾದೇಶಃ । ಆತ ಇತಿ ಝೇರ್ಜುಸಾದೇಶಃ । ಬಹುಲಂ ಛಂದಸೀತ್ಯಡಭಾವಃ । ಹಿಶಬ್ದಯೋಗಾನ್ನ ನಿಹನ್ಯತೇ ॥

ಪ್ರತಿಪದಾರ್ಥ

**ಪಂಚಭಿಃ ಅಧ್ವರ್ಯುಭಿಃ**— ಐದು ಜನ ಅಧ್ವರ್ಯು ವರ್ಗದವರಿಂದ (ಸಹಿತರಾದ) । **ಸಪ್ತ ವಿಪ್ರಾಃ**— ಏಳು ಜನ ಮೇಧಾವಿಗಳಾದ ಹೋತೃವರ್ಗದ ಋತ್ವಿಜರು । **ವೇಃ**— ಗಮನಸ್ವಭಾವದವನಾದ

**ಅಗ್ನಿಗೆ । ಪ್ರಿಯಂ**— ಪ್ರಿಯವಾದ । **ನಿಹಿತಂ ಪದಂ**— ಸಿದ್ಧಪಡಿಸಲ್ಪಟ್ಟಿರುವ (ಆಹವನೀಯಾಖ್ಯ) ಸ್ಥಾನವನ್ನು । **ರಕ್ಷಂತೇ**— ರಕ್ಷಿಸುತ್ತಾರೆ । **ಪ್ರಾಂಚಃ**—(ಸೋಮಪಾನಾರ್ಥವಾಗಿ) ಪೂರ್ವಾಭಿಮುಖರೂ । **ಅಜುರ್ಯಾಃ**— ಮುಪ್ಪಿಗೆ ಸಿಲುಕದವರೂ । **ಉಕ್ಷಣಃ**— ಸೋಮರಸಸೇಚನಮಾಡುವವರೂ ಆದ । **ದೇವಾಃ**— ಸ್ತೋತೃಗಳು (ಋತ್ವಿಜರು) । **ಮದಂತಿ**— ಆನಂದಪಡುತ್ತಾರೆ (ಮತ್ತು ಆ ಋತ್ವಿಜರು) । **ದೇವಾನಾಂ**— ದೇವತೆಗಳಿಗೆ (ಸಂಬಂಧಿಸಿದ) । **ವ್ರತಾ**— ವ್ರತ (ಯಜ್ಞ)ಗಳನ್ನು । **ಅನು ಗುಃ**— ಅನುಸರಿಸುತ್ತಾರೆ । **ಹಿ**— ಅದು ಪ್ರಸಿದ್ಧವಷ್ಟೇ ।

ಭಾವಾರ್ಥ

ಅಧ್ವರ್ಯುವರ್ಗದ ಐದು ಜನ ಋತ್ವಿಜರಿಂದ ಸಹಿತರಾದ, ಹೋತೃವರ್ಗದ ಏಳು ಜನ ಮೇಧಾವಿಗಳಾದ ಋತ್ವಿಜರು ಶೀಘ್ರಗತಿಯುವನಾದ ಅಗ್ನಿಗೆ ಪ್ರಿಯವಾದ ಆಹವನೀಯಾಗ್ನಿಸ್ಥಾನವನ್ನು ರಕ್ಷಿಸುತ್ತಾರೆ ; ಸೋಮಪಾನಾರ್ಥವಾಗಿ ಪ್ರಾಙ್ಮುಖರೂ, ಮುಪ್ಪಿಗೆ ಸಿಲುಕದವರೂ, ಸೋಮರಸಸೇಚನಮಾಡುವವರೂ ಆದ ಋತ್ವಿಜರು ಅಗ್ನಿಯನ್ನು ಸ್ತುತಿಸಿ ಆನಂದಿಸುತ್ತಾರೆ ; ತುಷ್ಟನಾದ ಅಗ್ನಿಯಿಂದ ಅನುಗೃಹೀತವಾದ ಹವಿರಾದಿವಿಶಿಷ್ಟರಾಗಿ ಇತರ ದೇವತಾಕಕರ್ಮಗಳನ್ನು ಕೈಗೊಳ್ಳುತ್ತಾರೆ.

## English Translation.

Seven sages with five ministering priests attend the station that is prepared for the rapid (Agni): the undecaying divine (sages), with their faces to the east, sprinkling (the libations), rejoice as they celebrate the worship of the gods.

ವಿಶೇಷ ವಿಷಯಗಳು

**ಪಂಚಭಿಃ ಅಧ್ವರ್ಯುಭಿಃ ಸಪ್ತ ವಿಪ್ರಾಃ**— ಉದ್ಗಾತೃವರ್ಗವ್ಯತಿರಿಕ್ತಾಃ ದ್ವಾದಶರ್ತ್ವಿಜೋ ಭವಂತಿ । ತತ್ರ ಸಪ್ತವಷಟ್ಕರ್ತಾರಃ । ಪಂಚಾನ್ಯೇ ಅಧ್ವರಂ ನಯಂತಿ । ಸಪ್ತ ಮೇಧಾವಿನೋ ಹೋತ್ರಕಾಃ । ಯಜ್ಞವನ್ನು ಮಾಡುವಾಗ ಯಜ್ಞದಲ್ಲಿ ಅವಶ್ಯಕವಾದ ಕರ್ತವ್ಯಗಳನ್ನು ಆಚರಿಸುವುದಕ್ಕಾಗಿ ನಿಯಮಿತರಾಗುವ ಜನರು ಋತ್ವಿಜರೆನಿಸುವರು. ಯಜ್ಞವು ನಾಲ್ಕು ವೇದಗಳನ್ನು ಅಧ್ಯಯನ ಮಾಡಿರುವ ಆಯಾಯ ಋತ್ವಿಕ್ಕುಗಳಿಂದ ನಡೆಸಲ್ಪಡುವ ಕರ್ಮವಾಗಿರುವ ಕಾರಣ ಆಯಾಯ ವೇದಗಳನ್ನು ಅಧ್ಯಯನ ಮಾಡಿದವರು ಆಯಾಯ ಕರ್ಮಗಳನ್ನು ಆಚರಿಸುವರು. ಇದರಿಂದ ಯಜ್ಞಾಚರಣೆಗೆ ಸಂಬಂಧಿಸಿದ ಋತ್ವಿಜರಲ್ಲಿ ನಾಲ್ಕು ವರ್ಗಗಳಾಗುತ್ತವೆ. ಹೋತೃವರ್ಗ, ಅಧ್ವರ್ಯುವರ್ಗ, ಉದ್ಗಾತೃವರ್ಗ, ಬ್ರಹ್ಮವರ್ಗ ಎಂದು ನಾಲ್ಕು ವರ್ಗಗಳು. ಹೋತೃವರ್ಗಕ್ಕೆ ಸಂಬಂಧಿಸಿದ ಋತ್ವಿಜರು ಋಗ್ವೇದವನ್ನು ಅಧ್ಯಯನ ಮಾಡಿರುವವರು. ಇವರು ಆಯಾಯ ಮಂತ್ರಗಳಿಂದ ಆಯಾಯ ದೇವತೆಗಳನ್ನು ಆಹ್ವಾನಮಾಡುವರು. ಅಧ್ವರ್ಯುವರ್ಗವರು ಯಜುರ್ವೇದವನ್ನು ಅಧ್ಯಯನ ಮಾಡಿದವರು. ಇವರು ಹೋತೃವು ಆಹ್ವಾನಿಸಿರುವ ದೇವತೆಗಳಿಗೆ ಉಕ್ತವಾಗಿರುವ ರೀತಿಯಿಂದ (ಹವಿಸ್ಸು) ಹವಿಸ್ಸಿನ ರೂಪವಾದ ಹೋಮದ್ರವ್ಯಗಳಿಗೆ ಉಕ್ತವಾಗಿರುವ ಕ್ರಮದಂತೆ ಸಂಸ್ಕಾರವನ್ನು ಮಾಡಿ, ಹೋತೃವಿನ ವಷಟ್ಕಾರ ಶ್ರವಣಾನಂತರ ಆಯಾಯ ಹೋಮಗಳನ್ನು ಆಚರಿಸುವರು. ಉದ್ಗಾತೃವರ್ಗದವರು ಸಾಮವೇದವನ್ನು ಅಧ್ಯಯನ ಮಾಡಿರುವವರು. ಇವರು ಆಯಾಯ ಯಾಗದಲ್ಲಿ

ಉಕ್ತವಾಗಿರುವ ಕ್ರಮದಂತೆ ಆಯಾಯ ಸಾಮಗಳನ್ನು ಗಾನಮಾಡುವರು. ಬ್ರಹ್ಮವರ್ಗದ ಋತ್ವಿಜರು ಅಂದರೆ (ಉಪದ್ರಷ್ಟೃ ಮೊದಲಾದವರು) ಯಾಗದ ಆವಶ್ಯಕರ್ತವ್ಯದಲ್ಲಿನ ನ್ಯೂನಾತಿರೇಕಗಳಿಗೆ ಸರಿಯಾದ ಪ್ರಾಯಶ್ಚಿತ್ತಗಳನ್ನು ನಡೆಸಿ ಯಜ್ಞವು ವಿಧ್ಯುಕ್ತವಾದ ಕ್ರಮದಿಂದ ಪೂರ್ಣವಾಗುವಂತೆ ನೋಡಿಕೊಳ್ಳುವರು. ಇವರು ನಾಲ್ಕುವರ್ಗದವರೂ ಸೇರಿ ಹದಿನಾರು ಜನಗಳಾಗುತ್ತಾರೆ. ಈ ಹದಿನಾರು ಜನರಲ್ಲಿಯೂ (ಉದ್ಗಾತೃ ವರ್ಗದ ಋತ್ವಿಜರನ್ನು ಬಿಟ್ಟು ಬ್ರಹ್ಮನನ್ನೂ ಬಿಟ್ಟು ಬ್ರಹ್ಮವರ್ಗದ ಋತ್ವಿಜರನ್ನೂ ಯಜಮಾನನನ್ನೂ ಬಿಟ್ಟರೆ) ಏಳು ಜನ ಋತ್ವಿಜರು ವಷಟ್ಕಾರಮಾಡುವವರ ವರ್ಗದವರು. ಈ ಅಂಶವನ್ನು ಸಾಯಣರು **ಉದ್ಗಾತೃ ವರ್ಗ ವ್ಯತಿರಿಕ್ತಾಃ ದ್ವಾದಶ ಋತ್ವಿಜಃ** ಉದ್ಗಾತೃವರ್ಗದ ಋತ್ವಿಜರಿಂದ ಬೇರೆಯಾಗಿರುವ ಹನ್ನೆರಡು ಋತ್ವಿಜರು ಎಂದು ವರ್ಣಿಸಿದ್ದಾರೆ. ಇವರಲ್ಲಿ ಹೋತೃವರ್ಗದವರೂ ಸೇರಿ ವಷಟ್ಕಾರಮಾಡುವವರು ಏಳು ಋತ್ವಿಜರನ್ನು ಸಪ್ತ ವಷಟ್ಕರ್ತಾರಃ ಎಂದು ವಿವರಿಸಿದ್ದಾರೆ. **ಪಂಚಾಧ್ವರ್ಯವಃ** :—ಅಧ್ವರ್ಯುವಿನ ಕಾರ್ಯವನ್ನು ಆಚರಿಸುವುದರಲ್ಲಿ ಸಹಾಯಕರಾದ ಋತ್ವಿಜರೂ ಸೇರಿ ಐದು ಜನರು ಅಧ್ವರ್ಯುಗಳು ಎಂದು ವರ್ಣಿಸಿದ್ದಾರೆ. ಒಟ್ಟಿನಲ್ಲಿ ಹನ್ನೆರಡು ಜನ ಋತ್ವಿಜರೂ ಯಜ್ಞದ ವಿಧ್ಯುಕ್ತರೀತಿಯಿಂದ ಆಯಾಯ ಕರ್ಮಗಳನ್ನು ಎಡಬಿಡದೆ ಆಚರಿಸುವರು ಎಂದು ವಿವರಿಸಿದ್ದಾರೆ ನಿರುಕ್ತಕಾರರು—

ಗಾಯತ್ರಮೇಕೋ ಗಾಯತಿ ಶಕ್ವರೀಷೂದ್ಗಾತಾ....। ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ। ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ ।....ಯಜ್ಞಸ್ಯ ಮಾತ್ರಾಂ ವಿಮಿಮೀತ ಏಕೋಽಧ್ವರ್ಯುಃ । ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ ।.... ಅಧ್ವರ ಇತಿ ಯಜ್ಞನಾಮ। ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ।

(ನಿ. ೧-೮)

ಧ್ವರ ಎಂಬ ಧಾತುವು ಹಿಂಸೆಮಾಡು ಎಂಬ ಅರ್ಥವನ್ನು ಬೋಧಿಸುವುದು. ಯಜ್ಞದಲ್ಲಿ ನಡೆಯುವ ಹಿಂಸೆಯು ದೇವತೋದ್ದೇಶವಾದುದರಿಂದ ಇದು ಹಿಂಸೆಯಾಗಿರುವುದಿಲ್ಲವೆಂದು ಸಿದ್ಧಾಂತ ಮಾಡಿರುತ್ತಾರೆ. ಇದರಿಂದ ಅಧ್ವರ ಶಬ್ದವು ಯಜ್ಞವಾಚಿಯಾಗಿ ಪವಿತ್ರಕರವಾದ ಯಜ್ಞಕರ್ಮವನ್ನು ಬೋಧಿಸುತ್ತದೆ. ಈ ಕರ್ಮದಲ್ಲಿ ಉದ್ಗಾತೃವೆಂಬುವನು ಗಾಯತ್ರವೆಂಬ ಸಾಮವನ್ನು ಗಾನಮಾಡುವನು. ಬ್ರಹ್ಮನೆಂಬ ಋತ್ವಿಜನು ಯಜ್ಞದಲ್ಲಿ ನಡೆಯುವ ಕರ್ಮಗಳೆಲ್ಲವನ್ನೂ ತಿಳಿದಿರುವವನು. ಇವನು ಆಯಾಯ ಕರ್ಮಗಳೆಲ್ಲವೂ ನಡೆಯುವ ಕ್ರಮವನ್ನು ಇತರ ಋತ್ವಿಜರಿಗೆ ತಿಳಿಸುವನು. ಅಧ್ವರ್ಯು ಎಂಬ ಋತ್ವಿಜನು ಯಜ್ಞದ ಕರ್ಮಗಳನ್ನು ಆಚರಿಸುವವನು, ಅಥವಾ ಯಜ್ಞವನ್ನು ಮುಂದುವರಿಸುವವನು. ಅಥವಾ ಯಜ್ಞವನ್ನು ಪೂರ್ಣವಾಗುವವರಿಗೂ ನಡೆಯುವಂತೆ ಅಪೇಕ್ಷಿಸುವವನು ಎಂದು ಅಧ್ವರ್ಯು, ಬ್ರಹ್ಮಾ, ಉದ್ಗಾತೃ ಎಂಬ ಋತ್ವಿಜರು ಮಾಡಬೇಕಾದ ಯಜ್ಞ ಕರ್ತವ್ಯವನ್ನು ವಿವರಿಸಿದ್ದಾರೆ.

ದುರ್ಗಾಚಾರ್ಯರು—**ಯದೃಚೈವ ಹೌತ್ರಂ ಕ್ರಿಯತೇ** (ಐ. ಬ್ರಾ. ೫-೫-೮) **ಏತತ್ತಾವದೃಗಧ್ಯಯನಕರ್ಮ ತಸ್ಮಿನ್ ಹೋತರಿ ವಿನಿಯುಕ್ತಂ** । ಋಗ್ವೇದದಿಂದಲೇ ಹೋತೃವಾದವನು ಯಜ್ಞದ ಕರ್ಮಗಳನ್ನು ಆಚರಿಸುವನು ಎಂದು ಐತರೇಯ ಬ್ರಾಹ್ಮಣದ ವಾಕ್ಯದಿಂದ ಬೋಧಿಸುವ ಕಾರಣ ಯಜ್ಞದಲ್ಲಿ ನಡೆಯಬೇಕಾದ ಋಗ್ವೇದಕ್ಕೆ ಸಂಬಂಧಿಸಿದ ಕರ್ಮಗಳೆಲ್ಲವೂ ಹೋತೃವೆಂಬ ಋತ್ವಿಜನಿಗೆ ಸಂಬಂಧಪಟ್ಟಿರುವುದು.

**ಸಾಮ್ನೋದ್ಗೀಥಂ** (ಐ. ಬ್ರಾ. ೫-೫-೮)—**ಉದ್ಗಾತಾ । ತಸ್ಮಿನ್ನಪ್ಯೇತತ್ಸಾಮಗಾನಕರ್ಮ ವಿನಿಯುಕ್ತಂ** । ಸಾಮವೇದದಿಂದ ಉದ್ಗೀಥವನ್ನು ಆಚರಿಸಬೇಕು. ಈ ಕರ್ಮವನ್ನು ಆಚರಿಸುವವನು ಉದ್ಗಾತೃವೆನಿಸಿರುವನು. ಇವನಲ್ಲಿ ಯಜ್ಞದ ಸಂಬಂಧವಾದ ಸಾಮಗಾನ ಕರ್ಮವು ವಿಹಿತವಾಗಿರುತ್ತದೆ.

**ಬ್ರಹ್ಮಾ ನಾಮ ಏಕ ಋತ್ವಿಕ್ ಜಾತೇ ಪ್ರಾಯಶ್ಚಿತ್ತೇ ವಿದ್ಯಾಂ ವದತಿ ಇತರೇಭ್ಯಃ ಋತ್ವಿಗ್ಭ್ಯಃ ಇದಮತ್ರ ಕುರುತೇತಿ** । ಬ್ರಹ್ಮಾ ಎಂಬ ಋತ್ವಿಜನು ಯಜ್ಞಕರ್ಮಾಚರಣೆಯಲ್ಲಿ ವ್ಯತ್ಯಾಸವು ಬಂದಾಗ ಅದರ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡುವಕ್ರಮವನ್ನು ಇತರ ಋತ್ವಿಜರಿಗೆ ಉಪದೇಶಮಾಡುವನು. **ತತ್ರಾಪಿ ಹ್ಯೇತತ್‌ಕರ್ಮವಿನಿಯುಕ್ತಂ** । ಯಜ್ಞದ ಕರ್ಮಗಳಲ್ಲಿ ಬ್ರಹ್ಮನಿಗೆ ಈ ಕಾರ್ಯವು ನಿಹಿತವಾಗಿರುವುದು. **ಅಥ ಕೇನ ಬ್ರಹ್ಮತ್ವಂ ಕ್ರಿಯತ ಇತಿ ತ್ರಯ್ಯಾ ವಿದ್ಯಯಾ** (ಐ. ಬ್ರಾ. ೫-೫-೮)-ಬ್ರಹ್ಮನು ಬ್ರಹ್ಮತ್ವವನ್ನು ಮಾಡಲು ಮೂರುವೇದಗಳ ಜ್ಞಾನವೂ ಇರಬೇಕೆಂದು ಐತರೇಯ ಬ್ರಾಹ್ಮಣದಲ್ಲಿ ಉಕ್ತವಾಗಿದೆ.

**ಯಾ ಕಾಚಿದಿತಿ ಕರ್ತವ್ಯತಾ ಯಜ್ಞಸ್ಯ, ತಾಂ ವಿಮಿಮೀತೇ ಅಧ್ವರ್ಯುಃ, ನಾನಾಪ್ರಕಾರಂ ಕರೋತಿ** । ಬ್ರಹ್ಮಾ, ಹೋತೃ, ಉದ್ಗಾತಾ, ಇವರುಗಳು ಆಚರಿಸಬೇಕಾದ ಕರ್ಮಗಳೆಲ್ಲಕ್ಕಿಂತಲೂ ಉಳಿದಿರುವ ಯಜ್ಞದ ಅವಶ್ಯಕರ್ತವ್ಯಗಳೆಲ್ಲವನ್ನೂ ಅಧ್ವರ್ಯುವು ಆಚರಿಸುವನು ಎಂದು ನಿರುಕ್ತವ್ಯಾಖ್ಯಾನದಲ್ಲಿ ವಿವರಿಸಿದಾರೆ.

ಸಾಯಣರು—ದೇವಾಃ ಎಂಬ ಪದವನ್ನು ಆವೃತ್ತಿಮಾಡಿ ದೇವಪದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ-**ಪ್ರಾಂಚಃ ಅಜುರ್ಯಾಃ ಉಕ್ಷಣಃ ದೇವಾಃ ಮದಂತಿ** । ಸೋಮಪಾನಕ್ಕಾಗಿ **ಪೂರ್ವದಿಕ್ಕಿಗೆ** ಅಭಿಮುಖವಾಗಿ ಹೋಗುವವರಾಗಿ ಸ್ತೋತ್ರಮಾಡುವರು ಹರ್ಷದಿಂದ ಇರುತ್ತಾರೆ ಎಂದು ಅರ್ಥವನ್ನು ವಿವರಿಸಿ, **ದೇವಾಃ ಋತ್ವಿಜಃ ದೇವಾನಾಂ ವ್ರತಾನಿ ಅನು ಗುಃ** ದೇವತೆಗಳಿಗೆ (ಸಂಬಂಧಿಸಿದ) ತೃಪ್ತಿಯನ್ನುಂಟುಮಾಡುವ ಹರ್ಷದಾಯಕವಾದ ಯಜ್ಞದ ಕಾರ್ಯಗಳನ್ನು ಆಚರಿಸುವರು ಎಂದು ಎರಡನೆಯ ಅರ್ಥವನ್ನೂ ವರ್ಣಿಸಿದ್ದಾರೆ. ಇದರಿಂದ **ಅಗ್ನೇಃ ಪ್ರಸಾದಾತ್ ಹವಿರ್ಲಕ್ಷಣಾನ್ನವಂತೋ ದೇವಾಃ ಯಜ್ಞಾನ್ ಲಬ್ಧವಂತಃ** । ಅಗ್ನಿಯ ಅನುಗ್ರಹದಿಂದ ಹವಿಸ್ಸಿನರೂಪವಾದ ಅನ್ನವನ್ನು ಹೊಂದತಕ್ಕ ದೇವತೆಗಳು ಯಜ್ಞದ ಮೂಲಕವಾಗಿ ಅದನ್ನು ಹೊಂದುವರು ಎಂಬ ಅರ್ಥವನ್ನು ವಿವರಿಸಿರುವರು.

**ಪ್ರಾಂಚಃ ಮದಂತಿ—ಸೋಮಪಾನಾರ್ಥಂ ಪ್ರಾಙ್ಮುಖಾ ಗಚ್ಛಂತಃ** । ಆಹವನೀಯ ಎಂಬ ಅಗ್ನಿಯನ್ನು ರಕ್ಷಿಸುವವರಾಗಿ ಸಪ್ತ ಹೋತೃಗಳೂ, ಐದು ಅಧ್ವರ್ಯುಗಳೂ, ಸೋಮಪಾನಕ್ಕಾಗಿ ಪೂರ್ವದಿಙ್ಮುಖರಾಗಿ ಹೋಗುವರು ಎಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

ರಕ್ಷಂತೇ—ರಕ್ಷ ಪಾಲನೇ ಧಾತು. **ವ್ಯತ್ಯಯೋ ಬಹುಲಮ್** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನಿಹಿತಮ್**—ನಿ ಉಪಸರ್ಗ. ಡುಧಾಞ್ ಧಾರಣಪೋಷಣಯೋಃ ಧಾತು. **ನಿಷ್ಠಾ** (ಪಾ. ಸೂ. (೩-೨-೧೦೨) ಎಂಬುದರಿಂದ ಕರ್ಮಣಿಯಲ್ಲಿ ಕ್ತಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. ಕರ್ಮಣಕ್ತಾಂತ ಪರದಲ್ಲಿ ಬಂದುದರಿಂದ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ **(ನಿ)** ಗತಿಗೆ ಪ್ರಕೃತಿಸ್ವರ **(ಉದಾತ್ತ)** ಬರುತ್ತದೆ.

**ವೇಃ**—ವೀ ಕಾಂತಿಗತ್ಯಾದಿಷು ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** ಎಂಬುದರಿಂದ ಇದಕ್ಕೆ ವಿಚ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ

ಇಕಾರಕ್ಕೆ ಪ್ರತ್ಯಯನಿಮಿತ್ತವಾಗಿ ಗುಣ. ವೇ ಎಂದು ಏಕಾರಾಂತಶಬ್ದವಾಗುತ್ತದೆ. ಇದಕ್ಕೆ ಷಷ್ಠೀ ಏಕವಚನ ಙಸ್ ಪರವಾದಾಗ ಙಸಿಙಸೋಶ್ಚ (ಪಾ. ಸೂ. ೬-೧-೧೧೦) ಎಂಬುದರಿಂದ ಪೂರ್ವರೂಪ. ಸಕಾರಕ್ಕೆ ರುತ್ವವಿಸರ್ಗ. ಉದಾತ್ತಸ್ವರ ಬರುತ್ತದೆ.

ಪ್ರಾಞ್ಚಃ—ಪ್ರ ಎಂಬುದರೊಡನೆ ಕ್ವಿನ್ನಂತವಾದ ಅಂಚು ಧಾತುವಿನೊಡನೆ ಪ್ರಾದಿಸಮಾಸ. **ಅನಿಗಂತೋಂಚತೌ** (ಪಾ. ಸೂ. ೬-೨-೫೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮದಂತಿ**—ಮದೀ ಹರ್ಷೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

ಉಕ್ಷಣಃ—ಪ್ರಥಮಾ ವಿಭಕ್ತಿ ಬಹುವಚನಾಂತರೂಪ. **ಷಾಷಪೂರ್ವಸ್ಯ ನಿಗಮೇ** (ಪಾ. ಸೂ. ೬-೪-೯) ಎಂಬುದರಿಂದ ಉಪಧಾದೀರ್ಘವಿಕಲ್ಪವಾಗಿ ಬರುತ್ತದೆ.

ವ್ರತಾ—ನಪುಂಸಕ ಬಹುವಚನಕ್ಕೆ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಗುಃ—ಇಣ್ ಗತೌ ಧಾತು. ಅದಾದಿ. ಲುಙ್. **ಇಣೋಗಾಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ಚ್ಲಿಗೆ ಸಿಚ್ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಆತಃ (ಪಾ. ಸೂ. ೩-೪-೧೧೦) ಎಂಬುದರಿಂದ ಝಿಗೆ ಜುಸಾದೇಶ. **ಉಸ್ಯಪದಾಂತಾತ್** ಎಂಬುದರಿಂದ ಪರರೂಪ. **ಬಹುಲಂಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಹಿ ಎಂಬುದರ ಸಂಬಂಧವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ಅನುದಾತ್ತಸ್ವರ ನಿಷೇಧ ಬರುತ್ತದೆ. ಉದಾತ್ತವಾಗುತ್ತದೆ.

ಸಂಹಿತಾಪಾಠಃ

ದೇವ್ಯಾ ಹೋತಾರಾ ಪ್ರಥಮಾ ನ್ಯೃಂಜೇ ಸಪ್ತ ಪೃಕ್ಷಾಸಃ ಸ್ವಧಯಾ ಮದಂತಿ ।
ಋತಂ ಶಂಸಂತ ಋತಮಿತ್ತ ಆಹುರನು ವ್ರತಂ ವ್ರತಪಾ ದೀಧ್ಯಾನಾಃ ॥ ೮ ॥

ಪದಪಾಠಃ

ದೈವ್ಯಾ । ಹೋತಾರಾ । ಪ್ರಥಮಾ । ನಿ । ಋಂಜೇ । ಸಪ್ತ । ಪೃಕ್ಷಾಸಃ । ಸ್ವಧಯಾ । ಮದಂತಿ ।
ಋತಂ । ಶಂಸಂತಃ । ಋತಂ । ಇತ್ । ತೇ । ಆಹುಃ । ಅನು । ವ್ರತಂ । ವ್ರತಪಾಃ । ದೀಧ್ಯಾನಾಃ ॥

ಸಾಯಣಭಾಷ್ಯಂ

ದೈವ್ಯಾ ದೈವ್ಯೌ ದೇವತಾರೂಪೌ ಹೋತಾರಾ ಹೋತಾರೌ ಹೋಮನಿಷ್ಪಾದಕೌ ಪ್ರಥಮಾ ಪ್ರಥಮೌ ಮುಖ್ಯಾವಿಮಂ ಚಾಮುಂ ಚಾಗ್ನೀ ನ್ಯೃಂಜೇ। ಋಂಜತಿಃ ಪ್ರಸಾಧನಕರ್ಮೇತಿ ಯಾಸ್ಕಃ । ಮಂತ್ರದ್ರಷ್ಟಾ ವಿಶ್ವಾಮಿತ್ರೋಽಹಂ ಪ್ರಸಾಧಯಾಮಿ । ಸಪ್ತ ಪೃಕ್ಷಾಸಃ ಸಪ್ತ ಹೋತ್ರಕಾಃ ಸ್ವಧಯಾ ಸೋಮೇನ ಮದಂತಿ । ಹೃಷ್ಯಂತಿ । ಋತಂ ಸ್ತೋತ್ರಂ ಶಂಸಂತೋ ವ್ರತಪಾ ವ್ರತಸ್ಯ ಯಜ್ಞಕರ್ಮಣೋ ರಕ್ಷಿತಾರೋ ದೀಧ್ಯಾನಾ ದೀಪ್ಯಮಾನಾಸ್ತೇ ಹೋತ್ರಕಾ ಅನು ವ್ರತಂ ಯಜ್ಞೇ ಕರ್ಮಣಿ ಋತಮಿತ್ ಸತ್ಯಮೇವಾಗ್ನಿಮಾಹುಃ । ವದಂತಿ ॥ ಋಂಜೇ । ಋಜಿ ಭೃಜೀ ಭರ್ಜನೇ । ನಿಪೂರ್ವೋಽಯಂ ಧಾತುಃ ಪ್ರಸಾಧನೇ ವರ್ತತೇ । ನಿಘಾತಃ । ಸ್ವಧಯಾ । ಸ್ವಂ ಲೋಕಂ ಯಜಮಾನಸ್ಯ ದಧಾತಿ ವಿದಧಾತೀತಿ ಸ್ವಧಾ ಸೋಮಃ । ಆತೋಽನುಪಸರ್ಗೇ ಕ ಇತಿ ಕಃ । ಕೃದುತ್ತರಪದಪ್ರಕೃತಿಸ್ವರತ್ವಂ । ಆಹುಃ । ಬ್ರೂಞ್ ವ್ಯಕ್ತಾಯಾಂ ವಾಚೀತ್ಯಸ್ಯ ಲಟಿ ಬ್ರುವಃ ಪಂಚಾನಾಮಾದಿತ ಆಹೋ ಬ್ರುವ ಇತಿ ಝೇರುಸಾದೇಶೋ ಬ್ರುವಶ್ಚ ಆಹಾದೇಶಃ । ನಿಘಾತಃ । ದೀಧ್ಯಾನಾಃ । ದೀಧೀಙ್ ದೀಪ್ತಿದೇವನಯೋರಿತ್ಯಸ್ಮಾಚ್ಛಾನಚ್ । ತಸ್ಯ ಚಿತ್ತ್ವಾದಂತೋದಾತ್ತತ್ವೇ ಪ್ರಾಪ್ತೇಽಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ.

ದೈವ್ಯಾ— ದೇವತಾರೂಪರೂ । ಹೋತಾರಾ—ಹೋಮನಿಷ್ಪಾದಕರೂ । ಪ್ರಥಮಾ—ಮುಖ್ಯರೂ ಆದ ಎರಡು ಅಗ್ನಿಗಳನ್ನು । ನಿ ಋಂಜೇ—(ನಾನು) ಸ್ತುತಿಸುತ್ತೇನೆ । ಸಪ್ತ ಪೃಕ್ಷಾಸಃ— ಏಳು ಜನ ಹೋತೃಗಳು । ಸ್ವಧಯಾ—ಸೋಮಾಹುತಿಯಿಂದ । ಮದಂತಿ—ತುಷ್ಟಿಪಡಿಸುತ್ತಾರೆ । ಋತಂ—(ಅಗ್ನಿಯ) ಸ್ತುತಿಯನ್ನು । ಶಂಸಂತಃ—ಪ್ರಶಂಸಿಸುತ್ತಿರುವವರೂ । ವ್ರತಪಾಃ—ಯಜ್ಞರಕ್ಷಕರೂ । ದೀಧ್ಯಾನಾಃ—ತೇಜೋವಂತರೂ ಆದ । ತೇ—ಆ ಋತ್ವಿಜರು । ಅನುವ್ರತಂ—ಪ್ರತಿಯೊಂದು ಕರ್ಮದಲ್ಲಿಯೂ । ಋತಂ ಇತ್—ಸತ್ಯಸ್ವರೂಪನಾದ ಅಗ್ನಿಯನ್ನೇ । ಆಹುಃ—(ಯಜ್ಞದ ಗುರಿಯನ್ನಾಗಿ) ಹೇಳುತ್ತಾರೆ.

ಭಾವಾರ್ಥ.

ದೇವತಾರೂಪರೂ, ಹೋಮನಿಷ್ಪಾದಕರೂ ಆದ ಮುಖ್ಯಾಗ್ನಿಗಳೆರಡನ್ನು ನಾನು ಸ್ತುತಿಸುತ್ತೇನೆ; ಏಳು ಜನ ಹೋತೃಗಳೂ ಸೋಮಾಹುತಿಯಿಂದ ಅಗ್ನಿಯನ್ನು ಸಂತೋಷಪಡಿಸುತ್ತಾರೆ; ಅಗ್ನಿಯ ಸ್ತುತಿಶಂಸಕರೂ, ಯಜ್ಞರಕ್ಷಕರೂ, ತೇಜಸ್ವಿಗಳೂ ಆದ ಆ ಋತ್ವಿಜರು ಪ್ರತಿಯೊಂದು ಕರ್ಮದಲ್ಲಿಯೂ ಸತ್ಯಸ್ವರೂಪನಾದ ಅಗ್ನಿಯೇ ಉದ್ದಿಷ್ಟನೆಂದು ಹೇಳುತ್ತಾರೆ.

## English Translation.

I propitiate the two first divine offerers of sacrifice ; the seven (priests) rejoice with the libation ; the illustrious celebrators of holi worship, reciting (his) praises, have called AGNI the true (object) of every rite.

ವಿಶೇಷ ವಿಷಯಗಳು

ದೈವ್ಯಾ ಹೋತಾರಾ—ದೈವ್ಯೌ ದೇವತಾರೂಪೌ ಹೋತಾರೌ ಹೋಮನಿಷ್ಪಾದಕೌ । ಹೋತೃ ಮೈತ್ರಾವರುಣರೆಂಬ ಋತ್ವಿಜರು ಇಬ್ಬರು ಯಜ್ಞಕ್ಕೆ ಸಂಬಂಧಿಸಿದ ಹೋಮಗಳನ್ನು ನೆರವೇರಿಸುವವರು ಎಂದು

ವರ್ಣಿಸಿದೆ. ಹೋತಾರಾ ಎಂಬ ಪದಕ್ಕೆ ದೈವ್ಯಾ ಎಂಬ ಪದವನ್ನು ವಿಶೇಷಣವನ್ನಾಗಿ ಇಲ್ಲಿ ಹೇಳಿದೆ. ಇದರ ಅಭಿಪ್ರಾಯವನ್ನು ನಿರುಕ್ತಕಾರರು—

**ದೈವ್ಯಾ ಹೋತಾರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಮಧ್ಯಮಃ**—ಎಂದು ವರ್ಣಿಸಿರುವರು ಮತ್ತು

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ ।**
**ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ।**

(ಋ. ಸಂ. ೧೦-೧೧೦-೭)

ಎಂಬ ಋಕ್ಕನ್ನು ಉದಹರಿಸಿ ಅವರ ಪ್ರಭಾವವನ್ನು ವಿವರಿಸಿರುವರು. ದುರ್ಗಾಚಾರ್ಯರು ಹೋತಾರಾ ಎಂಬ ಪದಕ್ಕೆ ಹೋತೃ ಮೈತ್ರಾವರುಣರೆಂದು ಅರ್ಥವನ್ನು ವರ್ಣಿಸಿ, ಇದಕ್ಕೆ ದೈವ್ಯಾ ಎಂಬ ಪದವು ವಿಶೇಷಣವಾಗಿ ರುವುದರಿಂದ ಈ ಹೋತೃ ಮೈತ್ರಾವರುಣರು ಮನುಷ್ಯ ಹೋತೃಗಳಾಗಿರುವರು. ದೇವತೆಗಳನ್ನು ಆಹ್ವಾನ ಮಾಡುವ ದೇವಹೋತೃಗಳಾಗಿರುವ ವಾಯ್ವಗ್ನಿಗಳು ಮುಖ್ಯರಾಗಿರುವರು. ಈ ಮೈತ್ರಾವರುಣನೆಂಬ ಋತ್ವಿಜನು ದೇವಹೋತೃವಾದ ವಾಯುವಿನ ತಾದಾತ್ಮ್ಯವನ್ನು ಹೊಂದಿ ಹೋತೃವಿನಂತೆ ಅಗ್ನಿಯನ್ನು ಯಾವಾಗಲೂ ಯಜ್ಞಕ್ಕಾಗಿ ಪ್ರೇರಿಸುತ್ತಿರುವನು. ಆದ್ದರಿಂದ **ತಾವೇವ ದೇವಾನಾವಾಹ್ವಾತಾರೌ ಉಚ್ಯೇತೇ**—ಇವರು ದೇವತೆಗಳನ್ನು ಯಜ್ಞಕ್ಕಾಗಿ ಪ್ರೇರಿಸುವರು ಎಂದು ಅರ್ಥವನ್ನು ವರ್ಣಿಸಿರುವರು.

**ಪ್ರಥಮಾ ನ್ಯೃಂಜೇ — ಪ್ರಥಮೌ ಮುಖ್ಯಾವಿಮಂ ವಾಯುಂ ಚಾಗ್ನೀ ಮಂತ್ರದ್ರಷ್ಟಾ ವಿಶ್ವಾಮಿತ್ರೋಽಹಂ ಪ್ರಸಾಧಯಾಮಿ ।** ದೇವಹೋತೃಗಳಾದ ವಾಯ್ವಗ್ನಿಗಳು ಹೋತೃಪದದಿಂದ ವ್ಯಪದಿಷ್ಟರಾಗಿರುವುದರಿಂದ ಇವರ ತಾದಾತ್ಮ್ಯವನ್ನು ಹೊಂದಿರುವ ಹೋತೃ ಮೈತ್ರಾವರುಣರು ಇಲ್ಲಿ ಉಕ್ತರಾಗಿರುತ್ತಾರೆ. ಈ ಮಂತ್ರದ ಮಾಹಾತ್ಮ್ಯವನ್ನು ಅರಿತಿರುವ ವಿಶ್ವಾಮಿತ್ರ ಋಷಿಯು ಯಜ್ಞವನ್ನು ಆಚರಿಸುವವರಲ್ಲಿ ಮುಖ್ಯ ಋತ್ವಿಜರಾದ ಇವರಿಬ್ಬರ ಅನುಗ್ರಹಸಂಪಾದನೆಗಾಗಿ ಸ್ತುತಿಸುತ್ತಾನೆ ಎಂದು ವರ್ಣಿಸಿದೆ. ನಿರುಕ್ತಕಾರರು— **ಋಂಜತಿಃ ಪ್ರಸಾಧನಕರ್ಮಾ**— (ನಿ. ೬-೨೧) ಋಂಜ ಧಾತುವು ಪ್ರಸಾಧನ ಎಂಬ ಅರ್ಥವನ್ನು (ಸಂತೋಷಗೊಳಿಸು) ಬೋಧಿಸುವುದು ಎಂದು ವಿವರಿಸಿ, ಅವ **ಋಂಜಸೇ ಊರ್ಜಾಂ ವ್ಯುಷ್ಟಿಷು** ಎಂದು ಉದಾಹರಣೆಯನ್ನು ಹೇಳಿರುವರು. ಇಲ್ಲಿ ನಿ ಎಂಬ ಉಪಸರ್ಗದ ಸಂಬಂಧವಿರುವಾಗಲೂ ಅದೇ ಅರ್ಥವನ್ನು ಋಂಜಧಾತುವು ಬೋಧಿಸುತ್ತದೆ.

**ಸಪ್ತ ಪೃಕ್ಷಾಸಃ ಸ್ವಧಯಾ ಮದಂತಿ—ಸಪ್ತಹೋತೃಕಾಃ ಸೋಮೇನ ಹೃಷ್ಯಂತಿ । ಪೃಕ್ಷ** ಶಬ್ದವು (ನಿ. ೩-೯) ಅನ್ನ ನಾಮಗಳಲ್ಲಿ ಪಠಿತವಾಗಿದೆ. ಇಲ್ಲಿ ಹೋತೃಗಳೆಂದು ಅರ್ಥವನ್ನು ವಿವರಿಸಿವೆ. **ಸ್ವಂ ಲೋಕಂ ಯಜಮಾನಸ್ಯ ದಧಾತಿ ವಿದಧಾತಿ ಇತಿ ಸ್ವಧಾ ಸೋಮಃ । ಸೋಮನು ಯಜಮಾನನಿಗೆ ತಾನು ವಾಸಮಾಡುವ ಲೋಕದಲ್ಲಿ ವಾಸವನ್ನು ಅನುಗ್ರಹಿಸುತ್ತಾನಾದ ಕಾರಣ ಸ್ವಧಾ ಎಂಬ ಪದದಿಂದ ಸೋಮನು ಉಕ್ತನಾಗಿರುವನು.** ಏಳು ಜನ ಹೋತೃಗಳೂ ಸೋಮಪಾನದಿಂದ ಹರ್ಷವುಳ್ಳವರಾಗಿ ಇರುತ್ತಾರೆಂದು ಅರ್ಥ.

**ವ್ರತಪಾಃ—ವ್ರತಸ್ಯ ಯಜ್ಞಕರ್ಮಣೋ ರಕ್ಷಿತಾರಃ ।** ನಿರುಕ್ತಕಾರರು **ವ್ರತಮಿತಿ ಕರ್ಮನಾಮ ವೃಣೋತೀತಿ ಸತಃ । ಇದಮಪೀತರತ್ ವ್ರತಮೇತಸ್ಮಾದೇವ ನಿವೃತ್ತಿಕರ್ಮ ವಾರಯತೀತಿ ಸತಃ । ಅನ್ನ**

**ಮಪಿ ವ್ರತಮುಚ್ಯತೇ ಯದಾವೃಣೋತಿ ಶರೀರಂ** । ಎಂದು ವ್ರತಶಬ್ದದ ಅರ್ಥವನ್ನು ಹೇಳಿರುವರು. ವೃಞ್ ವರಣೇ ಎಂಬ ಧಾತುವಿನಿಂದ ವ್ರತಶಬ್ದವು ಕರ್ತರಿಯಲ್ಲಿ ವೃಣೋತೀತಿ ವ್ರತಂ ಶುಭವಾಗಲಿ ಅಶುಭವಾಗಲಿ ಕರ್ಮಮಾಡಿದವನನ್ನು ಹೊಂದುವ ಕಾರಣ ವ್ರತಶಬ್ದಕ್ಕೆ ಕರ್ಮ ಎಂದು ಒಂದು ವಿಧವಾದ ಅರ್ಥವು. ಎರಡನೆಯದಾಗಿ ಅಗ್ನಿಯ (ವೇದಿಯ)ನ್ನು ಇತರರು ಸಮೀಪಿಸದಂತೆ ವಾರಣಮಾಡುವ ಕಾರಣ (ತಡೆಯುವ ಕಾರಣ)ದಿಂದ ವ್ರತವೆಂದೂ ಅರ್ಥವಾಗಬಹುದು ಎಂದೂ ಮತ್ತೂ ಸ್ತ್ರೀಭೋಗಾದಿ ವಿಷಯ ಸುಖಗಳಿಂದ ತಪ್ಪಿಸುವ ಕಾರಣ ವ್ರತವೆಂದೂ ಅಥವಾ, ಶರೀರದ ಸಪ್ತ ಧಾತುಗಳ ವೃದ್ಧಿಗೆ ಕಾರಣವಾದ ಅನ್ನವು ಶರೀರವನ್ನು ಆವರಿಸುವುದರಿಂದ ವ್ರತಕ್ಕೆ ಅನ್ನವೆಂದೂ ಅರ್ಥಮಾಡಿದ್ದಾರೆ. ಸಾಯಣರು ವ್ರತಶಬ್ದಕ್ಕೆ ಯಜ್ಞಕರ್ಮವೆಂದು ಅರ್ಥಮಾಡಿ ಅದನ್ನು ರಕ್ಷಿಸುವ ಋತ್ವಿಜರೆಂದು ವ್ರತಪಾಃ ಎಂಬ ಪದದ ಅರ್ಥವನ್ನು ವಿವರಿಸಿರುವರು.

ವ್ಯಾಕರಣಪ್ರಕ್ರಿಯಾ.

**ದೈವ್ಯಾ—ದೇವಾದ್ಯಞ್ಞೌ** ಎಂಬುದರಿಂದ ದೇವಸಂಬಂಧಾರ್ಥದಲ್ಲಿ ಯಞ್ ಪ್ರತ್ಯಯ. ಞಿತ್ತಾದುದರಿಂದ ಆದಿವೃದ್ಧಿ, ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನ (ಔ) ಪರವಾದಾಗ ಸುಪಾಂಸುಲುಕ್ ಸೂತ್ರದಿಂದ ಅದಕ್ಕೆ ಆಕಾರಾದೇಶ. ಹೋತಾರಾ ಎಂಬಲ್ಲಿಯೂ ಹೀಗೇ ದ್ವಿವಚನಕ್ಕೆ ಆಕಾರಾದೇಶ ಬಂದಿದೆ.

**ಋಂಜೇ—** ಋಜಿ ಭೃಜೀ ಭರ್ಜನೇ ಧಾತು. ಉಪಸರ್ಗದಿಂದ ಧಾತ್ವರ್ಥವು ಬದಲಾಯಿಸುವುದರಿಂದ ನಿ ಎಂಬ ಉಪಸರ್ಗದ ಸಂಬಂಧಬಂದಾಗ ಇದು ಪ್ರಸಾಧನ (ಅಲಂಕರಿಸು) ರೂಪಾರ್ಥವನ್ನು ಕೊಡುತ್ತದೆ. ಇದನ್ನೇ **ಋಂಜತಿಃ ಪ್ರಸಾಧನಕರ್ಮಾ** ಎಂದು ಯಾಸ್ಕರು ಹೇಳಿರುತ್ತಾರೆ. **ಇದಿತೋನುಮ್‌-ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪೃಕ್ಷಾಸಃ—ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ಸ್ವಧಯಾ—** ಸ್ವಂ ಲೋಕಂ ಯಜಮಾನಸ್ಯ ದಧಾತಿ ವಿದಧಾತಿ ಇತಿ ಸ್ವಧಾ ಸೋಮಃ (ಸೋಮವು ಯಜಮಾನನಿಗೆ ತನ್ನ ದಿವ್ಯ ಲೋಕವನ್ನು ಕೊಡುತ್ತದೆ) **ಆತೋನುಪಸರ್ಗೇಕಃ** (ಪಾ. ಸೂ. ೩-೨-೩) ಎಂಬುದರಿಂದ ಧಾಞ್ ಧಾತುವಿಗೆ ಕ ಪ್ರತ್ಯಯ ಬರುತ್ತದೆ. **ಆತೋಲೋಪಇಟಿಚ** ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ ಟಾಪ್. **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಶಂಸಂತಃ—** ಶಂಸು ಸ್ತುತೌ ಧಾತು. ಲಟಿಗೆ ಶತ್ರಾದೇಶ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತು ಸ್ವರ ಉಳಿಯುತ್ತದೆ. ಪ್ರಥಮಾ ಬಹುವಚನಾಂತರೂಪ.

**ಆಹುಃ—** ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಇದಕ್ಕೆ ಲಟ್ ಪ್ರಥಮ ಪುರುಷ ಬಹುವಚನದಲ್ಲಿ ಝಿ ಪ್ರತ್ಯಯ ಬಂದಾಗ **ಬ್ರುವಃ ಪಂಚಾನಾಮಾದಿತ ಆಹೋ ಬ್ರುವಃ** (ಪಾ. ಸೂ. ೩-೪-೮೪) ಎಂಬುದರಿಂದ ಅದಕ್ಕೆ ಉಸಾದೇಶ. ಧಾತುವಿಗೆ ಆಹಾದೇಶ. ಪರರೂಪ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ವ್ರತಪಾಃ—** ವ್ರತಂ ಪಾಂತಿ ಇತಿ ವ್ರತಪಾಃ. ಪಾ ರಕ್ಷಣೇ ಧಾತು. ವಿಚ್ ಪ್ರತ್ಯಯ. ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ.

ದೀ ಧ್ಯಾನಾಃ—ದೀಧೀಙ್ ದೀಪ್ತಿದೇವನಯೋಃ ಧಾತು. ಇದಕ್ಕೆ ಲಟ್ ಬಂದಾಗ ಅದಕ್ಕೆ ಶಾನ ಚಾದೇಶ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಪ್ರಾಪ್ತವಾದರೆ, ಅಭ್ಯಸ್ತಸಂಜ್ಞಾ ಇರುವುದರಿಂದ ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ವೃಷಾಯಂತೇ ಮಹೇ ಅತ್ಯಾಯ ಪೂರ್ವೀರ್ವೃಷ್ಣೇ ಚಿತ್ರಾಯ ರಶ್ಮಯಃ ಸುಯಾಮಾಃ ।
ದೇವ ಹೋತರ್ಮಂದ್ರತರಶ್ಚಿಕಿತ್ವಾನ್ಮಹೋ ದೇವಾನ್ರೋದಸೀ ಏಹ ವಕ್ಷಿ ॥ ೬ ॥

ಪದಪಾಠಃ

ವೃಷ್ಽಯಂತೇ । ಮಹೇ । ಅತ್ಯಾಯ । ಪೂರ್ವೀಃ । ವೃಷ್ಣೇ । ಚಿತ್ರಾಯ । ರಶ್ಮಯಃ । ಸುಽಯಾಮಾಃ ।
ದೇವ । ಹೋತಃ । ಮಂದ್ರಽತರಃ । ಚಿಕಿತ್ವಾನ್ । ಮಹಃ । ದೇವಾನ್ । ರೋದಸೀ ಇತಿ । ಆ । ಇಹ ।
ವಕ್ಷಿ ॥ ೬ ॥

ಸಾಯಣಭಾಷ್ಯಂ

ದೇವ ದೇದೀಪ್ಯಮಾನಾ ಹೋತರ್ದೇವಾನಾಮಾಹ್ವಾತಃ ಹೇ ಅಗ್ನೇ ಮಹೇ ಮಹತೇಽತ್ಯಾಯ ಸರ್ವಾನಪ್ಯತಿಕ್ರಮ್ಯ ವರ್ತಮಾನಾಯ ಚಿತ್ರಾಯ ನಾನಾವಿಧವರ್ಣಾಯ । ಯದ್ವಾ ಚಿತ್ರಾಯ ದೇವೈಶ್ಚಾಯನೀಯಾಯ ಪೂಜ್ಯಾಯ । ವೃಷ್ಣೇ ಕಾಮಾನಾಂ ವರ್ಷಿತ್ರೇ ತುಭ್ಯಂ ತ್ವದರ್ಥಂ ಪೂರ್ವೀಃಪ್ರಭೂತಾಃ ಸುಯಾಮಾ ಅತಿಶಯೇನ ವಿಸ್ತೃತಾ ರಶ್ಮಯಃ ಸರ್ವತೋ ವ್ಯಾಪ್ತಾ ಜ್ವಾಲಾ ವೃಷಯಂತೇ । ವೃಷೇವಾಚರಂತಿ । ಸೇಚಕಾ ಇವ ಭವಂತಿ । ಹೋತಾರೋ ಜ್ವಾಲಾಭಿಃ ಸಮಿದ್ಧಮಗ್ನಿಂ ದೃಷ್ಟ್ವಾ ಸೋಮಾಜ್ಯಪಯಃಪ್ರಭೃತೀನಿ ಹವೀಂಷಿ ತತ್ರ ಪ್ರಕ್ಷಿಪಂತೀತಿ ಜ್ವಾಲಾನಾಂ ವೃಷತ್ವಂ । ಯದ್ವಾ ಷಷ್ಠ್ಯರ್ಥೇ ಚತುರ್ಥೀ । ತಥಾ ಚ ಮಹತೋಽತ್ಯಸ್ಯ ಚಿತ್ರಸ್ಯ ವೃಷ್ಣೋಽಗ್ನೇರ್ಬಹವೋ ರಶ್ಮಯೋ ವೃಷೇವಾಚರಂತಿ । ವೃಷ್ಟ್ಯುತ್ಪಾದನದ್ವಾರಾ ಪರ್ಜನ್ಯವದಾಚರಂತೀತ್ಯರ್ಥಃ । ಅಪಿ ಚ । ಮಂದ್ರತರೋ ಯಜಮಾನಸ್ಯ ಮಾದಯಿತೃತಮಶ್ಚಿಕಿತ್ವಾನ್ ಜ್ಞಾನೋಪೇತಃ ಸ ತ್ವಂ ಮಹೋ ಮಹತಃ ಪೂಜ್ಯಾನ್ ಯಷ್ಟವ್ಯಾನ್ ದೇವಾನ್ ರೋದಸೀ ದ್ಯಾವಾಪೃಥಿವ್ಯೌ ಚೇಹ ವೇದಿಕೇಽಸ್ಮಿನ್ಕರ್ಮಣ್ಯಾವಕ್ಷಿ । ಆವಹ ॥ ವೃಷಾಯಂತೇ । ಉಪಮಾನಾದಿತ್ಯನುವೃತ್ತೌ ಕರ್ತುಃ ಕ್ಯಙ್ ಸಲೋಪಶ್ಚೇತಿ ಕ್ಯಙ್ । ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ । ಪಾದಾದಿತ್ವಾನ್ನ ನಿಘಾತಃ । ಧಾತುಸ್ವರಃ । ಮಹೇ । ಅಕಾರತಕಾರಯೋರ್ಲೋಪಶ್ಛಾಂದಸಃ । ಬೃಹನ್ಮಹತೋರಿತಿ ವಿಭಕ್ತೇರುದಾ-

**ತ್ತ್ವಂ । ಪೂರ್ವೀಃ ।** ಪೄ ಪಾಲನಪೂರಣಯೋರಿತ್ಯಸ್ಮಾತ್ ಕುರಿತ್ಯನುವೃತ್ತೌ ಪೄಭಿದಿವ್ಯಧಿಗೃಧೀ-ತ್ಯಾದಿನಾ ಕುಪ್ರತ್ಯಯಃ । ಕಿತ್ತ್ವಾದ್ಗುಣಪ್ರತಿಷೇಧೇ ಉದೋಷ್ಠ್ಯಪೂರ್ವಸ್ಯೇತ್ಯುತ್ತ್ವಂ । ಉರಣ್ ರಪರಃ । ತಸ್ಮಾದ್ವೋತೋ ಗುಣವಚನಾದಿತಿ ಙೀಷ್ । ಯಣಾದೇಶೇ ಕೃತೇ ಹಲಿ ಚೇತಿ ದೀರ್ಘಃ । ವಾ ಛಂದಸೀತಿ ಸವರ್ಣದೀರ್ಘಃ । ರಶ್ಮಯಃ । ಅಶೂ ವ್ಯಾಪ್ತೌ । ಅಶ್ನುವತೇ ಸರ್ವಂ ಜಗದಿತಿ ಮಿರಿ-ತ್ಯನುವೃತ್ತೌ ಅಶ್ನೋತೇ ರಶ್ಚ । ಉ. ೪-೪೭ । ಇತಿ ಮಿಪ್ರತ್ಯಯೋ ರಶಾದೇಶಶ್ಚ । ಪ್ರತ್ಯಯಸ್ವರಃ । ಸುಯಾಮಾಃ । ಯಮುಸಂ ಯಾಮಃ । ಭಾವೇ ಘಞ್ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂ-ತೋದಾತ್ತತ್ವಂ । ದೇವ । ಅಪಾದಾದಾವಿತಿ ಪರ್ಯುದಾಸಾತ್ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಹೋತಃ । ಹ್ವಯತೇಸ್ತಾಚ್ಛೀಲಿಕಸ್ತೃನ್ । ಬಹುಲಂ ಛಂದಸೀತಿ ಸಂಪ್ರಸಾರಣಂ । ಅಪಾದಾದ್ಯಾಮಂತ್ರಿತತ್ವಾನ್ನಿ-ಘಾತಃ । ಮಂದ್ರತರಃ । ಮದಿ ಸ್ತುತ್ಯಾದಿಷು । ಸ್ಫಾಯಿತಂಚಿವಂಚೀತ್ಯಾದಿನಾ ರಕ್ । ಇದಿತ್ತ್ವಾ-ನ್ನುಮ್ । ತರಪಃ ಪಿತ್ತ್ವಾದನುದಾತ್ತತ್ವೇ ರಕ್ಪ್ರತ್ಯಯಸ್ವರಃ । ವಕ್ಷಿ । ವಹ ಪ್ರಾಪಣ ಇತ್ಯಸ್ಯ ಬಹುಲಂ ಛಂದಸೀತಿ ಶಪೋ ಲುಕ್ । ಢತ್ವಕತ್ವಷತ್ವಾನಿ । ನಿಘಾತಃ ।

ಪ್ರತಿಪದಾರ್ಥ.

**ದೇವ**—ದೇದೀಪ್ಯಮಾನನೂ । **ಹೋತಃ** — ದೇವತೆಗಳನ್ನು ಯಾಗಗಳಿಗೆ ಕರೆಯುವವನೂ ಆದ ಎಲೈ ಅಗ್ನಿಯೇ । **ಮಹೇ** — ಮಹನೀಯನೂ । **ಅತ್ಯಾಯ** — ಸರ್ವರನ್ನೂ ಅತಿಕ್ರಮಿಸಿ ಇರುವವನೂ । **ಚಿತ್ರಾಯ** —ನಾನಾ ವರ್ಣನೂ (ದೇವತೆಗಳಿಂದ ಪೂಜ್ಯನೂ) । **ವೃಷ್ಣೇ**—ಕಾಮವರ್ಷಕನೂ ಆದ (ನಿನ್ನ) । **ಸುಯಾಮಾಃ**—ಅತ್ಯಂತ ವಿಸ್ತೃತವಾದ । **ಪೂರ್ವೀಃ ರಶ್ಮಯಃ**—ಅಸಂಖ್ಯಾತ ರಶ್ಮಿಗಳು । **ವೃಷಾಯಂತೇ**—(ವೃಷ್ಟ್ಯುತ್ಪಾದನದ ಮೂಲಕ) ಪರ್ಜನ್ಯನಂತೆ ಆಚರಿಸುತ್ತವೆ ಮತ್ತು । **ಮಂದ್ರತರಃ**—ತುಷ್ಟಿಪಡಿಸುವವರಲ್ಲಿ ಶ್ರೇಷ್ಠನೂ । **ಚಿಕಿತ್ವಾನ್**—ಜ್ಞಾನೋಪೇತನೂ ಆದ ನೀನು । **ಮಹಃ**—ಪೂಜ್ಯರಾದ । **ದೇವಾನ್**—ದೇವತೆಗಳನ್ನೂ । **ರೋದಸೀ**—ದ್ಯಾವಾಪೃಥಿವಿಗಳನ್ನೂ । **ಇಹ**— ಈ ಕರ್ಮಕ್ಕೆ **ಆ ವಹ**— ಕರೆದುಕೊಂಡು ಬಾ.

ಭಾವಾರ್ಥ

ದೇದೀಪ್ಯಮಾನನೂ, ದೇವತೆಗಳನ್ನು ಯಾಗಗಳಿಗೆ ಕರೆಯುವವನೂ ಆದ ಎಲೈ ಅಗ್ನಿಯೇ! ಮಹಾಮಹಿಮನೂ, ಪರಾಕ್ರಮಿಯೂ, ನಾನಾ ವರ್ಣನೂ (ಪೂಜ್ಯನೂ) ಕಾಮವರ್ಷಕನೂ ಆದ ನಿನಗೆ, ಅತಿ, ವಿಸ್ತೃತವಾದ ಅಸಂಖ್ಯಾತ ಜ್ವಾಲೆಗಳು ಆಜ್ಯಾದಿಹವಿಃಪ್ರಕ್ಷೇಪಕ್ಕೆ ಅವಕಾಶ ಕಲ್ಪಿಸುವುದರ ಮೂಲಕ, ಸೇಚಕಗಳಾಗುತ್ತವೆ ; ಆರಾಧಕರನ್ನು ತುಷ್ಟಿಪಡಿಸುವವರಲ್ಲಿ ಶ್ರೇಷ್ಠನೂ, ಜ್ಞಾನಿಯೂ ಆದ ನೀನು ಯಾಗಗಳಲ್ಲಿ ಪೂಜಾರ್ಹರಾದ ದೇವತೆಗಳನ್ನೂ ದ್ಯಾವಾಪೃಥಿವಿಗಳನ್ನು ಈ ವೈದಿಕಕರ್ಮಕ್ಕೆ ಕರೆದುಕೊಂಡು ಬಾ.

English Translation.

Divine invoker of the gods, the vast and widespreading rays shed (moisture) for you the mighty, the victorious, the wonderful, the showerer (of benefits): you are all-knowing, joy-bestowing; bring hither the great gods, and heaven and earth.

ವಿಶೇಷವಿಷಯಗಳು

**ದೇವ ಹೋತಃ—ದೇದೀಪ್ಯಮಾನ ದೇವಾನಾಮಾಹ್ವಾತಃ |** ಅಗ್ನಿಯು ಪ್ರಭೂತವಾದ ಕಾಂತಿಯಿಂದ ಬೆಳಗುತ್ತಿರುವನೆಂದೂ, ದೇವತೆಗಳನ್ನು ಯಾಗಕ್ಕಾಗಿ ಆಹ್ವಾನಿಸತಕ್ಕವನೆಂದೂ ಇಲ್ಲಿ ವರ್ಣಿಸಿದೆ. **ಅಸ್ಯ ವಾಮಸ್ಯ ಪಲಿತಸ್ಯ ಹೋತುಃ** ಎಂಬಲ್ಲಿ ಆಹ್ವಾನಿಸಲ್ಪಡುವವನೆಂದು ಹೋತೃ ಶಬ್ದಕ್ಕೆ ಅರ್ಥವನ್ನು ವಿವರಿಸಿದೆ. **ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ** ಎಂಬಲ್ಲಿ **ಹೋತುಃ** ಎಂಬ ಪದಕ್ಕೆ **ಹೋತುರಪಿ ಅಗ್ನೇಃ** ಹೋತೃವಾದ ಮನುಷ್ಯರೂಪದಿಂದ ಇರುವ ಅಗ್ನಿಯು ಎಂದು ಅರ್ಥವನ್ನು ದುರ್ಗಾಚಾರ್ಯರು ವಿವರಿಸಿ, ದೇವತೆಗಳ ಮಾಹಾತ್ಮ್ಯವು ನಾಲ್ಕು ವಿಧವಾಗಿ ವರ್ಣಿತವಾಗಿರುವುದು. ಮಂತ್ರಗಳು—**ಪೌರುಷವಿಧ್ಯಂ, ಅಪೌರುಷವಿಧ್ಯಂ, ಕರ್ಮಾರ್ಥಾತ್ಮೋಭಯವಿಧ್ಯಂ, ನಿತ್ಯಪೌಭಯವಿಧ್ಯಂ,** ಎಂಬ ಪ್ರಕಾರಗಳಿಂದ ದೇವತೆಗಳ ಮಹಿಮೆಯು ಪ್ರಕಾಶಿತವಾಗಿರುತ್ತದೆ ಎಂದು ಅವರ ಮಹಿಮೆಯನ್ನು ವಿವರಿಸುತ್ತವೆ. ದೇವತೆಗಳು ಬಹಳವಾದ ಈಶಿತೃತ್ವ (ಐಶ್ವರ್ಯದಲ್ಲಿ) ರೂಪವಾದ ಶಕ್ತಿಯಿಂದ ಕೂಡಿದವರಾಗಿ, ಆಯಾಯ ಕರ್ತವ್ಯಕರ್ಮಾನುಗುಣವಾದ ರೀತಿಯಿಂದ ಇರತಕ್ಕವರೆಂದೂ, ಮಂತ್ರದ್ರಷ್ಟೃಗಳಾದ ಋಷಿಗಳು ಇದನ್ನು ಪ್ರತ್ಯಕ್ಷವಾಗಿ ಕಂಡು ಅವರವರನ್ನು ಆಯಾಯರೀತಿಗಳಿಂದ ಸ್ತುತಿಮಾಡಿರುವರೆಂದೂ ವರ್ಣಿಸಿ, ದೇವತೆಗಳ ಮಹಿಮೆಯು, ಮೂರ್ತಾ (ಆಕಾರದಿಂದ ಇರುವುದು) ಅಮೂರ್ತಾ (ಆಕಾರರಹಿತವಾದುದು) ಏಕಧಾ (ಒಂದೇ ವಿಧವಾಗಿರುವುದು) ದ್ವಿಧಾ (ಎರಡು ವಿಧವಾಗಿರುವುದು) ಬಹುಧಾ (ಅನೇಕವಿಧವಾಗಿರುವುದು) ಎಂದು ವಿವರಿಸಿದಾರೆ. ಇಲ್ಲಿ ಅಗ್ನಿಯು ದೇವತೆಗಳನ್ನು ಆಹ್ವಾನಿಸತಕ್ಕವನಾಗಿ ಇರುವ ಮನುಷ್ಯರೂಪದ ಹೋತೃವಿನ ತಾದಾತ್ಮ್ಯವನ್ನು ಹೊಂದಿರುವನೆಂದು ಅಗ್ನಿಯು ಪ್ರಭಾವವನ್ನು ವರ್ಣಿಸಿದೆ.

**ಚಿತ್ರಾಯ—ನಾನಾವಿಧವರ್ಣಾಯ ಯದ್ವಾ ಚಾಯನೀಯಾಯ ಪೂಜ್ಯಾಯ |** ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಅಗ್ನಿಯು ತನ್ನ ರಶ್ಮಿಗಳಿಂದ ಅನೇಕ ವಿಧವಾದ ವರ್ಣಗಳು ಉಳ್ಳವನೆಂದೂ, ಎರಡನೆಯದಾಗಿ ಅಗ್ನಿಯು ದೇವತೆಗಳಿಂದಲೂ ಹವಿರ್ಭಾಗವನ್ನು ಹೊಂದತಕ್ಕವನಾಗಿ ಪೂಜ್ಯನಾಗಿರುವವನೆಂದೂ ವರ್ಣಿಸಿದಾರೆ.

ನಿರುಕ್ತಕಾರರು ಚಿತ್ರಶಬ್ದಕ್ಕೆ—**ಚಾಯನೀಯಂ ಮಂಹನೀಯಂ ಪೂಜನೀಯಂ** ಎಂದು ವ್ಯಾಖ್ಯಾನಮಾಡಿ ಪೂಜ್ಯವಾದುದು ಗೌರವಾರ್ಹವಾದುದು ಎಂದು ಅರ್ಥವನ್ನು ವಿವರಿಸಿದ್ದಾರೆ. **ಚಿತ್ರಸ್ಯ ರಶ್ಮಯಃ ವೃಷಾಯಂತೇ—ಸರ್ವತಃ ವ್ಯಾಪ್ತಾಃ ಜ್ವಾಲಾಃ ವೃಷೇವಾಚರಂತಿ ಸೇಚಕಾ ಇವ ಭವಂತಿ | ಹೋತಾರಃ ಜ್ವಾಲಾಭಿಃ ಸಮಿದ್ಧಮಗ್ನಿಂ ದೃಷ್ಟ್ವಾ ಸೋಮಾಜ್ಯಪಯಃಪ್ರಭೃತೀನಿ ಹವೀಂಷಿ ತತ್ರ ಪ್ರಕ್ಷಿಪಂತೀತಿ ಜ್ವಾಲಾನಾಂ ವೃಷತ್ವಂ | ಯದ್ವಾ ಷಷ್ಠ್ಯರ್ಥೇ ಚತುರ್ಥೀ | ತಥಾ ಚ ಮಹತೋ ಅತ್ಯಸ್ಯ ಚಿತ್ರಸ್ಯ ವೃಷ್ಣೋ ಅಗ್ನೇಃ ಬಹವೋ ರಶ್ಮಯಃ ವೃಷೇವಾಚರಂತಿ | ವೃಷ್ಟ್ಯುತ್ಪಾದನದ್ವಾರಾ ಪರ್ಜನ್ಯವದಾಚರಂತಿ |**

**ಕಾಳೀ ಕರಾಳೀ ಚ ಮನೋಜವಾ ಚ........................ಸುಧೂಮ್ರವರ್ಣಾ |**
**ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ||**

ಅಗ್ನಿಯ ನಾನಾ ವಿಧವಾದ ಜ್ವಾಲೆಗಳು ಅಥವಾ ಈ ಮಂತ್ರದಲ್ಲಿ ವಿವೃತವಾಗಿರುವ ರಶ್ಮಿಗಳು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿ ಯಜಮಾನರ ಇಷ್ಟಾರ್ಥಗಳನ್ನು ನೆರವೇರಿಸುವುದರಿಂದ ತನ್ನನ್ನು ಸೇವಿಸುವವರ ಇಷ್ಟಗಳನ್ನು ನೆರವೇರಿಸಿ ಕೊಡುವ ಇಂದ್ರನ ಕಾರ್ಯವನ್ನು ಮಾಡುವ ಕಾರಣ ಇಂದ್ರನಂತೆ ಇರುತ್ತನೆ. ಹೋತೃವೇ ಮೊದಲಾದ ಋತ್ವಿಜರು ಚೆನ್ನಾಗಿ ಉದೀಪ್ತವಾಗಿರುವ ಅಗ್ನಿಯಲ್ಲಿ ಸೋಮರಸ, ಆಜ್ಯ (ತುಪ್ಪ) ಹವಿಸ್ಸು, ಇವೇ ಮೊದಲಾದವುಗಳನ್ನು ಹೋಮಮಾಡಿ ತಮ್ಮ ತಮ್ಮ ಇಷ್ಟಗಳನ್ನು ಹೊಂದುವ ಕಾರಣ ಅಗ್ನಿಯ ಜ್ವಾಲೆಗಳು ಇಷ್ಟಾರ್ಥಪ್ರದಗಳೆಂದೂ ಇಂದ್ರನಂತೆ ಕಾಮಪ್ರದಗಳೆಂದೂ ಸಾಯಣರು ಒಂದು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಎರಡನೆಯ ಅರ್ಥದಲ್ಲಿ **ಚಿತ್ರಾಯೆ** ಎಂಬಲ್ಲಿ ಚತುರ್ಥೀ ವಿಭಕ್ತಿಯು ಷಷ್ಠೀವಿಭಕ್ತಿಯ ಅರ್ಥದಲ್ಲಿ ಬಂದಿದೆ. ಇದರಿಂದ ಚಿತ್ರಸ್ಯ ಜ್ವಾಲಾಃ ಎಂದು ಆಗಿರುವ ಕಾರಣ ಪೂಜ್ಯನಾದ ಅಗ್ನಿಯ ಜ್ವಾಲೆಗಳು ಅನೇಕ ವಿಧವಾಗಿ ಬೆಳಗುತ್ತಾ ಯಜಮಾನರು ಅರ್ಪಿಸಿದ ಹವಿರ್ಭಾಗಗಳನ್ನು ಸ್ವೀಕರಿಸಿ (ವೃಷ್ಟಿಯನ್ನು ಸುರಿಸುವ ಕಾರಣವಾಗಿರುವುದರಿಂದ) ವೃಷ್ಟ್ಯುತ್ಪಾದಕಗಳಾಗಿ ಇಂದ್ರನಂತೆಯೇ (ಕಾರ್ಯಗಳನ್ನು) ವೃಷ್ಟ್ಯುತ್ಪಾದನ ಕಾರ್ಯವನ್ನು ಮಾಡುತ್ತವೆ. ಆದ್ದರಿಂದ **ವೃಷಾಯಂತೇ ವೃಷೇವಾಚರಂತಿ** ಎಂದು ಅರ್ಥವನ್ನು ವಿವರಿಸಿದಾರೆ. ಅಗ್ನಿಯ ಜ್ವಾಲೆಗಳು ಉದ್ದೀಪ್ತವಾಗಿ ಬಹಳವಾಗಿ ವ್ಯಾಪಿಸಿರುವುದರಿಂದ ಯಜಮಾನರು ಅರ್ಪಿಸಿದ ಹವಿಸ್ಸುಗಳನ್ನು ಸ್ವೀಕರಿಸಿ ಯಜಮಾನರ ಇಷ್ಟವನ್ನು ನೆರವೇರಿಸುವುದರಿಂದ ಅಥವಾ ಅನೇಕ ವರ್ಣಗಳಿಂದ ಕೂಡಿ ವೃಷ್ಟಿಯನ್ನು ಉಂಟುಮಾಡುವುದರಿಂದ ಅಗ್ನಿಗೂ ಲೋಕಕ್ಕೂ ಇಂದ್ರನ ಕಾರ್ಯವಾದ ಇಷ್ಟಾರ್ಥವನ್ನು ನೆರವೇರಿಸುವುದರ (ಮೂಲಕ) ಕಾರಣ ವೃಷಾಯಂತೇ ಎಂದು ಎರಡು ವಿಧವಾಗಿ ಅರ್ಥವನ್ನು ವರ್ಣಿಸಿದೆ.

**ಮಂದ್ರತರಃ—ಯಜಮಾನಸ್ಯ ಮಾದಯಿತೃತಮಃ** । ಅಗ್ನಿಯು ಯಜಮಾನರ ಇಷ್ಟಗಳನ್ನು ಪೂರ್ತಿಮಾಡಿಕೊಡುವಕಾರಣ ಅವರನ್ನು ಹರ್ಷವುಳ್ಳವರಾಗಿಯೂ ಮತ್ತರಾಗಿಯೂ ಇರುವಂತೆ ಮಾಡುವನೆಂದು ಅರ್ಥವನ್ನು ವಿವರಿಸಿದೆ. **ಮಂದ್ರಾ ಮದನಾ ಹರ್ಷಕರೀ ತರ್ಪಯಿತ್ರೀ ವಾ ಲೋಕಸ್ಯ** ಎಂದು (ನಿ. ೧೧-೩೦) ಉಕ್ತವಾಗಿದೆ.

**ಮಹಃ ದೇವಾನ್, ರೋದಸೀ ಇಹ ಆ ವಹ**—ಈ ವಾಕ್ಯದಿಂದ ಅಗ್ನಿಯೂ ಹೋತೃವಿನ ಕಾರ್ಯವನ್ನು (ದೇವತೆಗಳನ್ನು ಯಜ್ಞಕ್ಕಾಗಿ ಆಹ್ವಾನಮಾಡುವುದನ್ನು) ಆಚರಿಸುವ ಕಾರಣ, ಪೂಜ್ಯರಾಗಿ ಯಾಗಾರ್ಹರಾಗಿರುವ ದೇವತೆಗಳನ್ನು ದ್ಯಾವಾಪೃಥಿವಿಗಳನ್ನೂ ಸಹ ಯಜ್ಞರೂಪವಾದ ಕರ್ಮದಲ್ಲಿ ಅಗ್ನಿಯು ಆಹ್ವಾನಮಾಡಬೇಕು ಎಂದು ಪ್ರಾರ್ಥಿಸಿದೆ. **ರೋದಸೀ** ಎಂಬ ಪದವು ದ್ಯಾವಾಪೃಥಿವೀನಾಮಗಳಲ್ಲಿ (ನಿ. ೩-೨೨) ಉಕ್ತವಾಗಿದೆ.

### ವ್ಯಾಕರಣಪ್ರಕ್ರಿಯಾ

**ವೃಷಾಯಂತೇ**—ವೃಷಾ ಇವ ಆಚರಂತಿ. **ಉಪಮಾನಾದಾಚಾರೇ** ಎಂಬ ಸೂತ್ರದಿಂದ ಉಪಮಾನಾತ್ ಎಂದು ಅನುವೃತ್ತವಾಗುವಾಗ **ಕರ್ತುಃ ಕ್ಯಙ್ ಸಲೋಪಶ್ಚ** (ಪಾ. ಸೂ. ೩-೧-೧೧) ಎಂಬುದರಿಂದ ವೃಷ ಶಬ್ದದ ಮೇಲೆ ಕ್ಯಙ್ ಪ್ರತ್ಯಯ. **ಅಕೃತ್ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಪೂರ್ವಕ್ಕೆ ದೀರ್ಘ. **ಸನಾದ್ಯಂತಾಧಾತವಃ** ಎಂಬುದರಿಂದ ವೃಷಾಯ ಎಂಬುದಕ್ಕೆ ಧಾತುಸಂಜ್ಞಾ ಬರುತ್ತದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಮಹೇ**—ಮಹತೇ ಎಂದು ಚತುರ್ಥೀ ಏಕವಚನದಲ್ಲಿ ರೂಪವಾದಾಗ ತಕಾರಾಕಾರಗಳಿಗೆ ಛಾಂದಸವಾಗಿ ಲೋಪ ಬರುತ್ತದೆ. **ಬೃಹನ್ಮಹತೋರುಪಸಂಖ್ಯಾನಮ್** ಎಂಬ ವಚನದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೂರ್ವೀಃ**—ಪೄ ಪಾಲನಪೂರಣಯೋಃ ಧಾತು. **ಕುಃ** ಎಂಬುದು **ಪೂರ್ವ**ಸೂತ್ರದಿಂದ ಅನುವೃತ್ತವಾಗುವಾಗ ಪೄ ಭಿದಿ ವ್ಯಧಿ ಗೃಧಿ—(ಉ. ಸೂ. ೧-೨೩) ಎಂಬುದರಿಂದ ಕು ಪ್ರತ್ಯಯ. ಕಿತ್ತಾದುದರಿಂದ ಗುಣನಿಷೇಧ ಬರುತ್ತದೆ. **ಉದೋಷ್ಠ್ಯಪೂರ್ವಸ್ಯ** ( ಪಾ. ಸೂ. ೭-೧-೧೦೨ ) ಎಂಬುದರಿಂದ ಧಾತುವಿನ ಋಕಾರಕ್ಕೆ ಉತ್ವ. **ಉರಣ್‌ರಪರಃ** ಸೂತ್ರದಿಂದ ರಪರವಾಗಿ ಬರುತ್ತದೆ. ಪುರು ಎಂಬುದಾಗಿ ರೂಪವಾಗುತ್ತದೆ. ಇದು ಗುಣವಾಚಕವಾದುದರಿಂದ ಸ್ತ್ರೀತ್ವ ವಿವಕ್ಷಾ ಮಾಡಿದಾಗ **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಎಂಬುದರಿಂದ ಙೀಷ್ ಪ್ರತ್ಯಯ. ಯಣಾದೇಶ ಬಂದಾಗ **ಹಲಿಚ** (ಪಾ. ಸೂ. ೮-೨-೭೭) ಎಂಬುದರಿಂದ ರೇಫದ **ಪೂರ್ವ**ಕ್ಕೆ ದೀರ್ಘ. **ವಾಛಂದಸಿ** ಎಂಬುದರಿಂದ ಜಸ್ ಪರವಾದಾಗ **ಪೂರ್ವ**ಸವರ್ಣದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ರಶ್ಮಯಃ—ಅಶೂ ವ್ಯಾಪ್ತೌ ಧಾತು. ಅಶ್ನುವತೇ ಸರ್ವಂ ಜಗತ್ ಇತಿ (ಸರ್ವಲೋಕವನ್ನು ವ್ಯಾಪಿಸುವುದು) ರಶ್ಮಯಃ ಮಿಃ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ ಅಶ್ನೋತೇರಶ್ಚ (ಉ.ಸೂ. (೪-೪೬) ಎಂಬುದರಿಂದ ಮಿ ಪ್ರತ್ಯಯ. ಧಾತುವಿಗೆ ರಶಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

ಸುಯಾಮಾಃ—ಯಮನಂ ಯಾಮಃ ಯಮು ಉಪರಮೇ ಧಾತು. ಭಾವಾರ್ಥದಲ್ಲಿ **ಘಞ್** ಪ್ರತ್ಯಯ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಸೂತ್ರದಿಂದ ಧಾತುವಿನ ಉಪಧೆಗೆ ವೃದ್ಧಿ. ಬಹುವ್ರೀಹಿ ಸಮಾಸವಾದಾಗ **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ದೇವ—ಪಾದಾದಿಯಲ್ಲಿರುವುದರಿಂದ ಅಪಾದಾದೌ ಎಂದು ನಿಷೇಧಮಾಡಿರುವುದರಿಂದ ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಹೋತಃ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ತಚ್ಛೀಲಾರ್ಥ ತೋರುವಾಗ ತೃನ್ ಪ್ರತ್ಯಯ. ಬಹುಲಂ ಛಂದಸಿ ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ. ಉಕಾರಕ್ಕೆ ಪ್ರತ್ಯಯ ನಿಮಿತ್ತವಾಗಿ ಗುಣ. ಸಂಬುದ್ಧ್ಯಂತರೂಪ. ಅಪಾದಾದಿಯಲ್ಲಿರುವುದರಿಂದ ಆಮಂತ್ರಿತ ನಿಘಾತಸ್ವರ ಬರುತ್ತದೆ.

ಮಂದ್ರತರಃ—ಮದಿ ಸ್ತುತಿಮೋದಸ್ವಪ್ನಕಾಂತಿಗತಿಷು. ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೨-೧೩) ಎಂಬುದರಿಂದ ಇದಕ್ಕೆ ರಕ್ ಪ್ರತ್ಯಯ. **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಸೂತ್ರದಿಂದ ಧಾತುವಿನಲ್ಲಿ ಇಕಾರ ಇತ್ತಾದುದರಿಂದ ನುಮಾಗಮ. ಇದರ ಮೇಲೆ ಅತಿಶಯಾರ್ಥದಲ್ಲಿ ತರಪ್ ಪ್ರತ್ಯಯ. ಅದು ಪಿತ್ತಾದುದರಿಂದ ರಕ್ ಪ್ರತ್ಯಯಸ್ವರ ಉಳಿಯುತ್ತದೆ.

**ವಕ್ಷಿ**—ವಹ ಪ್ರಾಪಣೇ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಷಢೋಃಕಃಸಿ** ಸೂತ್ರ

ದಿಂದ ಥಕಾರಕ್ಕೆ ಕತ್ವ. ಆದೇಶಪ್ರತ್ಯಯಯೋಃ ಎಂಬುದರಿಂದ ಪ್ರತ್ಯಯಕ್ಕೆ ಷತ್ವ. ವಕ್ಷಿ ಎಂದು ರೂಪ ವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಪೃಕ್ಷಪ್ರಯಜೋ ದ್ರವಿಣಃ ಸುವಾಚಃ ಸುಕೇತವ ಉಷಸೋ ರೇವದೂಷುಃ ।
ಉತೋ ಚಿದಗ್ನೇ ಮಹಿನಾ ಪೃಥಿವ್ಯಾಃ ಕೃತಂ ಚಿದೇನಃ ಸಂ ಮಹೇ ದಶಸ್ಯ ॥
॥ ೧೦ ॥

ಪದಪಾಠಃ

ಪೃಕ್ಷಃಪ್ರಯಜಃ । ದ್ರವಿಣಃ । ಸುಽವಾಚಃ । ಸುಽಕೇತವಃ । ಉಷಸಃ । ರೇವತ್ । ಊಷುಃ ।
ಉತೋ ಇತಿ । ಚಿತ್ । ಅಗ್ನೇ । ಮಹಿನಾ । ಪೃಥಿವ್ಯಾಃ । ಕೃತಂ । ಚಿತ್ । ಏನಃ । ಸಂ । ಮಹೇ ।
ದಶಸ್ಯ ॥ ೧೦ ॥

ಸಾಯಣಭಾಷ್ಯಂ

ದ್ರವಿಣಃ । ದ್ರವತಿ ಸತತಂ ಗಚ್ಛತೀತಿ ದ್ರವಿಣಃಶಬ್ದೇನಾಗ್ನಿರಭಿಧೀಯತೇ । ದ್ರವಿಣಃ ಸತತ-ಗಮನಸ್ವಭಾವ ಹೇ ಅಗ್ನೇ ಪೃಕ್ಷಪ್ರಯಜಃ ಪೃಕ್ಷಾಣಿ ಹವಿರ್ಲಕ್ಷಣಾನ್ಯನ್ನಾನಿ ಪ್ರಕರ್ಷೇಣ ಯಷ್ಟುಂ ಪ್ರಕ್ರಮ್ಯತೇ ಯಾಸೂಷಃಸು ತಾಃ ಪೃಕ್ಷಪ್ರಯಜಃ । ಸುವಾಚಃ ಪ್ರಾತರನುವಾಕಾದಿಶೋಭನಾ ವಾಚೋ ವಾಸಾಂ ತಾಃ । ಸುಕೇತವೋ ವಯಸಾಂ ಮನುಷ್ಯಾಣಾಂ ಚ ಶಬ್ದೈಃ ಸುಪ್ರಜ್ಞಾನಾಃ । ಏವಂವಿಧಾ ಉಷಸೋ ರೇವತ್ ಅಸ್ಮಾಕಂ ಧನಯುಕ್ತಂ ಯಥಾ ಭವತಿ ತಥೋಷುಃ । ವ್ಯುಚ್ಛಂತಿ । ಉತೋ ಚಿತ್ ಅಪಿ ಚ ಹೇ ಅಗ್ನೇ ಪೃಥಿವ್ಯಾ ವಿಸ್ತೀರ್ಣಯಾ ಜ್ವಾಲಯಾ ಮಹಿನಾ ಮಹತ್ತ್ವೇನ ಕೃತಂ ಸಂಪಾದಿತಂ ಚಿತ್ ಯತ್ಕಿಂಚಿದೇನಃ ಪ್ರಾಣ್ಯುಪಘಾತಾದಿಲಕ್ಷಣಂ ಪಾಪಂ ಮಹೇ ಮಹತೇ ಯಜಮಾನಾಯ ಮಹ್ಯಂ ಮದರ್ಥಂ ಸಂದಶಸ್ಯ । ಸಂಕ್ಷಪಯ ॥ ಪೃಕ್ಷಪ್ರಯಜಃ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಕರ್ಮಣಿ ವಿಚ್ ದೃಶಿಗ್ರಹಣಾದಧಿಕೃತೋ ಭವತೀತ್ಯುಕ್ತಂ । ಬಹುವ್ರೀಹಿತ್ವಾತ್ಪೂರ್ವ-ಪದಪ್ರಕೃತಿಸ್ವರತ್ವಂ । ದ್ರವಿಣಃ । ದ್ರು ಗತಾವಿತ್ಯಸ್ಮಾತ್ ದ್ರುದಕ್ಷಿಭ್ಯಾಮಿನನ್ನಿತೀನಪ್ರತ್ಯಯಃ । ಗುಣಾ-ವಾದೇಶೌ । ಸಂಬುದ್ಧೌ ಸೋರ್ಲೋಪಾಭಾವಶ್ಛಾಂದಸಃ । ಆಮಂತ್ರಿತತ್ವಾನ್ನಿಘಾತಃ । ಸುವಾಚಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ರೇವತ್ । ರಯಿರ್ಧನಮಸ್ಮಿನ್ವಿದ್ಯತ ಇತಿ ಮತುಪ್ । ಹ್ರಸ್ವನುಡ್ಭ್ಯಾಮಿತಿ ಮತುಬುದಾತ್ತಃ । ಛಂದಸೀರ ಇತಿ ವತ್ವಂ । ರಯೇರ್ಮತೌ ಬಹುಲಂ ಛಂದಸೀತಿ ಸಂಪ್ರಸಾರಣಂ । ಪರಪೂರ್ವತ್ವೇ ಗುಣಃ । ಊಷುಃ । ಉಷ ದಾಹೇ । ದಾಹಾರ್ಥೋಽಪ್ಯಯಂ ಧಾತು-ರತ್ರ ಪ್ರಕಾಶನೇ ವರ್ತತೇ । ಛಂದಸಿ ಲುಙ್ಲಿಟಿ ವರ್ತಮಾನೇ ಲಿಟ್ । ಉಸಿ ರೂಪಂ । ನಿಘಾತಃ । ಪೃಥಿವ್ಯಾಃ । ಪ್ರಥ ಪ್ರಖ್ಯಾನ ಇತ್ಯಸ್ಮಾತ್ಪ್ರಥೇಃ ಷಿವನ್ ಸಂಪ್ರಸಾರಣಂ ಚೇತಿ ಷಿವನ್ಪ್ರತ್ಯಯಃ । ತತ್ಸ-

ನ್ನಿಯೋಗೇನ ಧಾತೋಃ ಸಂಪ್ರಸಾರಣಂ । ಷಿದ್ಗೌರಾದಿಭ್ಯಶ್ಚೇತಿ ಙೀಷ್ । ಪ್ರತ್ಯಯಸ್ವರೇಣಾಂತೋದಾತ್ತಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ದಹಶಸ್ಯ । ನಿಘಾತಃ ॥

ಪ್ರತಿಪದಾರ್ಥ

(ಹೇ) **ದ್ರವಿಣಃ**—ಸತತಗಮನಸ್ವಭಾವನಾದ ಎಲೈ ಅಗ್ನಿಯೇ । **ಪೃಕ್ಷಪ್ರಯಜಃ**—ಹೆಚ್ಚಾಗಿ ಅಗ್ನಿಯಲ್ಲಿ ಅರ್ಪಿಸಲ್ಪಡುತ್ತಿರುವ ಹವಿರಾದಿಗಳುಳ್ಳವುಗಳೂ । **ಸುವಾಚಃ**—ಪ್ರಾತರನುವಾಕಾದಿ ಶೋಭನವಾಗ್ವಿಶಿಷ್ಟಗಳೂ । **ಸುಕೇತವಃ**—ಪ್ರಕ್ಷ್ವಾದಿ ಶಬ್ದಗಳಿಂದ ಪ್ರಜ್ಞಾಪಕಗಳೂ ಆದ । **ಉಷಸಃ**—ಉಷಸ್ಸುಗಳು । **ರೇವತ್**—(ನಮಗೆ ದೇಯವಾದ) ಧನವಿಶಿಷ್ಟವಾಗಿ । **ಊಷುಃ**—ಉದಯಿಸುತ್ತವೆ । **ಉತೋ ಚಿತ್**—ಮತ್ತೂ । (ಹೇ) **ಅಗ್ನೇ**—ಎಲೈ ಅಗ್ನಿಯೇ । **ಮಹೇ**—ಮಾನ್ಯನಾದ (ಯಜಮಾನನಿಗೋಸ್ಕರ) ನನಗೋಸ್ಕರ । **ಪೃಥಿವ್ಯಾಃ**—ಅತ್ಯಂತ ವಿಸ್ತೃತವಾದ ಜ್ವಾಲೆಯ । **ಮಹಿನಾ**—ಮಹತ್ತ್ವದಿಂದ । **ಕೃತಂ**—ಸಂಪಾದಿತವಾದ । **ಚಿತ್ ಏನಃ**—ಪ್ರಾಣ್ಯುಪಘಾತಾದಿ ಯತ್ಕಿಂಚಿತ್ಪಾಪವನ್ನು । **ಸಂ ದಹಶಸ್ಯ**—ಚೆನ್ನಾಗಿ ನಾಶಮಾಡು.

ಭಾವಾರ್ಥ.

ಸತತಗಮನನಾದ ಎಲೈ ಅಗ್ನಿಯೇ, ಪ್ರಾತರನುವಾಕಾದಿ ಸ್ತುತಿಗಳು, ಅಗ್ನಿಯಲ್ಲಿ ಅರ್ಪಿತವಾಗುವ ಹವಿರಾದಿಗಳು, ಪ್ರಬೋಧಕಗಳಾದ ಪ್ರಕ್ಷ್ವಾದಿಶಬ್ದಗಳು ಇವುಗಳಿಂದ ಯುಕ್ತವಾದ ಉಷಸ್ಸುಗಳು ನಮಗೆ ಧನಾದಿದಾಯಕವಾಗಿ ಉದಿಸಲಿ; ಮತ್ತು ಎಲೈ ಅಗ್ನಿಯೇ, ನಮ್ಮಿಂದ ಸಂಪಾದಿತವಾದ ಪ್ರಾಣ್ಯುಪಘಾತಾದಿಯತ್ಕಿಂಚಿತ್ಪಾಪವನ್ನು, ಮಹಾವಿಸ್ತೃತವಾದ ಜ್ವಾಲೆಯಿಂದ, ಮಾನ್ಯನಾದ ನನಗೋಸ್ಕರ, ನಾಶಮಾಡು.

English Translation.

Ever-moving (Agni) may the mornings rise for us, abounding with oblations, with pious prayers, and with auspicious signs, and conferring wealth; and with the might of your (diffusive flame), consume all sin on behalf of your respectable (worshipper).

ವಿಶೇಷ ವಿಷಯಗಳು.

**ದ್ರವಿಣಃ**—ದ್ರವತಿ ಸತತಂ ಗಚ್ಛತಿ ಇತಿ ದ್ರವಿಣಶಬ್ದೇನ ಅಗ್ನಿರಭಿಧೀಯತೇ । ಗತ್ಯರ್ಥಕವಾದ (ಗಮನ ಎಂದು ಅರ್ಥವನ್ನು ಬೋಧಿಸುವ) ದ್ರುಧಾತುವಿನಿಂದ ನಿಷ್ಪನ್ನವಾದ ದ್ರವಿಣಶಬ್ದಕ್ಕೆ ಯಾವಾಗಲೂ ಸಂಚರಿಸುವವನು ಎಂದು ಅರ್ಥವಾಗುತ್ತದೆಯಾಗಿ ಅಗ್ನಿಯು ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವನೆಂದು ಇಲ್ಲಿ ಅರ್ಥವನ್ನು ಹೇಳಿದೆ. ನಿರುಕ್ತಕಾರರು ದ್ರವಿಣಶಬ್ದವನ್ನು ಬಲನಾಮಗಳಲ್ಲಿ ಮತ್ತು ಧನ ನಾಮಗಳಲ್ಲಿಯೂ (ನಿ. ೩-೯) ಪಾಠಮಾಡಿದ್ದಾರೆ.

**ಪೃಕ್ಷಪ್ರಯಜಃ**—ಪೃಕ್ಷಾಣಿ ಹವಿರ್ಲಕ್ಷಣಾನ್ನಾನಿ ಪ್ರಕರ್ಷೇಣ ಯಷ್ಟುಂ ಪ್ರಕ್ರಮ್ಯಂತೇ ಯಾಸು ಉಷಸ್ಸು ತಾಃ । ನಿರುಕ್ತಕಾರರು ಪೃಕ್ಷ ಶಬ್ದವನ್ನು ಅನ್ನನಾಮಗಳಲ್ಲಿ (ನಿ. ೩-೯) ಪಠಿಸಿದ್ದಾರೆ. ಸಾಯಣರು ಪೃಕ್ಷಶಬ್ದಕ್ಕೆ ಹವಿಸ್ಸಿನರೂಪವಾದ ಅನ್ನವೆಂದು ಅರ್ಥವನ್ನು ವರ್ಣಿಸಿ, ಈ ಹವಿಸ್ಸಿನರೂಪವಾದ ಅನ್ನವನ್ನು (ಅತಿಶಯವಾಗಿ) ಪ್ರಭೂತವಾಗಿ ಹೋಮ ಮಾಡುವ ಕಾಲವು ಉಷಃಕಾಲವೆಂದು ಅರ್ಥವನ್ನು ವಿವರಿಸಿದ್ದಾರೆ.

**ಸುವಾಚಃ—ಪ್ರಾತರನುವಾಕಾದಿಶೋಭನಾ ವಾಚೋ ಯಾಸಾಂ ತಾಃ** | ಋತ್ವಿಜರು ಯಜ್ಞದಲ್ಲಿ ಪಠಿಸಬೇಕಾದ ಪ್ರಾತಃಕಾಲಕ್ಕೆ ಸಂಬಂಧಿಸಿದ ಮಂತ್ರಗಳನ್ನೂ ಅಗ್ನಿಯನ್ನು ಉದ್ಬೋಧನಮಾಡುವುದಕ್ಕಾಗಿ ಪಠಿಸುವ ಕಾಲವು (ಶುಭಕರವಾದ) ಮಂಗಳಕರವಾದ ಅರ್ಥವುಳ್ಳ ವಾಕ್ಕುಗಳಿಂದ ಕೂಡಿರುತ್ತದೆಯಾಗಿ **ಸುವಾಚಃ** ಎಂಬ ಪದವನ್ನು ಉಷಃಕಾಲಕ್ಕೆ ವಿಶೇಷಣವಾಗಿ ಪ್ರಯೋಗಿಸಿದೆ.

**ಸುಕೇತವಃ—ಕೇತುಶಬ್ದವು** ಪ್ರಜ್ಞಾನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. **ಅಹ್ನಾಂ ಕೇತುಃ** ಎಂಬಲ್ಲಿ ಕೇತು ಶಬ್ದವು ಲಕ್ಷಣಂ (ಸೂಚಕವು) ಎಂಬ ಅರ್ಥವನ್ನು (ನಿ. ೧೧-೭) ಬೋಧಿಸುವುದು. **ಕೇತುನಾ ಕರ್ಮಣಾ ಪ್ರಜ್ಞಯಾ ವಾ** (ನಿ. ೧೧-೨೭) ಎಂದು ಕೇತು ಶಬ್ದದಿಂದ ಕರ್ಮ ಅಥವಾ ಪ್ರಜ್ಞಾ ಎಂಬ ಅರ್ಥವು ಬೋಧಿತವಾಗುವುದು. **ದೇವಂ ವಹಂತಿ ಕೇತವಃ** ಎಂಬಲ್ಲಿ ಕೇತವಃ ರಶ್ಮಯಃ (ನಿ. ೧೨-೧೭) ಎಂದು ಕೇತು ಶಬ್ದಕ್ಕೆ ರಶ್ಮಿ ಎಂದು ಅರ್ಥವನ್ನು ಹೇಳಿದೆ. ಹೀಗೆ ಕೇತು ಶಬ್ದಕ್ಕೆ ಪ್ರಜ್ಞಾ, ಕರ್ಮ, ಲಕ್ಷಣ, ರಶ್ಮಿ ಎಂಬ ಅನೇಕಾರ್ಥಗಳು ಇರುತ್ತವೆ. ಸಾಯಣರು **ಸುಕೇತವಃ** ಎಂಬ ಶಬ್ದವನ್ನು ಉಷಸ್ಸಿಗೆ ವಿಶೇಷಣವನ್ನಾಗಿ ಹೇಳಿ **ವಯಸಾಂ ಮನುಷ್ಯಾಣಾಂ ಚ ಶಬ್ದೈಃ ಸುಪ್ರಜ್ಞಾನಾಃ**—ಉಷಃಕಾಲದಲ್ಲಿ ಮನುಷ್ಯರೂ ಮತ್ತು ಪಕ್ಷಿಗಳೂ (ಶಬ್ದವನ್ನು) ಧ್ವನಿಯನ್ನು ಮಾಡುವುದರಿಂದ ಲೋಕವೆಲ್ಲವೂ ಎಚ್ಚರಗೊಳ್ಳುವುದು. ಆದ್ದರಿಂದ ಲೋಕಕ್ಕೆಲ್ಲಕ್ಕೂ ವ್ಯವಹಾರ ಜ್ಞಾನವನ್ನು ಉಂಟುಮಾಡುವ ಕಾಲವು ಎಂದು ಅರ್ಥವನ್ನು ವಿವರಿಸಿದ್ದಾರೆ.

**ಉಷಸಃ ರೇವತ್ ಊಷುಃ—ಏವಂವಿಧಾಃ ಉಷಸಃ ಅಸ್ಮಾಕಂ ಧನಯುಕ್ತಂ ಯಥಾ ಭವತಿ ತಥಾ ವ್ಯುಚ್ಛಂತಿ. ಉಷಾಃ** ಎಂಬ ಪದವು (ನಿ. ೨-೧೮) **ಉಷಾಃ** ಕಸ್ಮಾದುಚ್ಛತೀತಿ, ಸತ್ಯಾ **ರಾತ್ರೇರಪರಃ ಕಾಲಃ** ಎಂದು ವ್ಯಾಖ್ಯಾತವಾಗಿದೆ. ವಿವಾಸನ (ಹೊರಡಿಸು) ಎಂಬ ಅರ್ಥವುಳ್ಳ ಉಚ್ಛೀ ಎಂಬ ಧಾತುವಿನಿಂದ ನಿಷ್ಪನ್ನವಾದ ಉಷಾಃ ಎಂಬ ಪದಕ್ಕೆ ಕತ್ತಲೆಯನ್ನು ನಾಶಮಾಡುವ ರಾತ್ರಿಯ ಕೊನೆಯ ಭಾಗದ ಕಾಲವೆಂದು ಅರ್ಥವನ್ನು ವಿವರಿಸಿದೆ. ಇಲ್ಲಿ ಹೇಳಿರುವ ವಿಶೇಷಣಗಳ ಅರ್ಥಕ್ಕನುಸಾರವಾಗಿರುವ ಉಷಸ್ಸುಗಳು ಯಜ್ಞಮಾಡುವವರು ಧನವುಳ್ಳವರಾಗುವಂತೆ ವರ್ತಿಸುತ್ತವೆ ಎಂದು ವರ್ಣಿಸಿದೆ.

**ಪೃಥಿವ್ಯಾಃ—ವಿಸ್ತೀರ್ಣಾಯಾಃ ಜ್ವಾಲಾಯಾಃ** ಪೃಥ್ವೀ ಶಬ್ದವು ಪೃಥಿವೀನಾಮಗಳಲ್ಲಿಯೂ (ನಿ. ೨-೫) ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ಪಠಿತವಾಗಿದೆ. ಇಲ್ಲಿ ಗುಣವಾಚಕವಾದ ಪೃಥು ಶಬ್ದದಿಂದ ನಿಷ್ಪನ್ನವಾದ ಪೃಥ್ವೀ ಶಬ್ದವು ಛಾಂದಸವಾದ ಪ್ರಯೋಗದಿಂದ ಪೃಥಿವ್ಯಾಃ ಎಂದು ಉಕ್ತವಾಗಿದೆ. ಅಗ್ನಿಯ ಜ್ವಾಲೆಯು ಎಲ್ಲಾ ಕಡೆಯಲ್ಲಿಯೂ ಹರಡಿರುವಂತೆ ಪ್ರಭೂತವಾಗಿರುವುದು ಎಂದು ಅರ್ಥವನ್ನು ವಿವರಿಸಬಹುದಾಗಿದೆ.

**ಏನಃ—ಪ್ರಾಣ್ಯುಪಘಾತಲಕ್ಷಣಂ ಪಾಪಂ.** ನಿರುಕ್ತಕಾರರು ಕಿಲ್ಬಿಷಂ ಏನಃ ಎಂಬ ಪದಗಳ ಅರ್ಥವನ್ನು ವಿವರಿಸುವಾಗ **ಸುಕೃತಕರ್ಮಣೋ ಭಯಂ** ಏನಃ ಎಂದು ಪುಣ್ಯಕರ್ಮಗಳನ್ನು ನಾಶಪಡಿಸುವುದು. ಏನಃ ಏತೇಃ (ನಿ. ೧೧-೨೪) ಇಣ್ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಏನಃ ಎಂಬ ಪದಕ್ಕೆ ಅವಶ್ಯವಾಗಿ ಆ ಕಾಲಕ್ಕೆ ಸರಿಯಾಗಿ ಬಂದು ಸೇರುವುದು ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಇದಕ್ಕನುಸಾರವಾಗಿ ಪಾಪವು ಪುಣ್ಯಕರ್ಮದ ವೇಗವನ್ನು ತಡೆದು ಪ್ರಾಣಿಯನ್ನು ತೊಂದರೆಗೆ ಸಿಲುಕಿಸುವುದು ಎಂದು ಅರ್ಥವನ್ನು ವಿವರಿಸಿದ್ದಾರೆ.

**ಅಗ್ನೇ—ಪೃಥಿವ್ಯಾಃ ಜ್ವಾಲಾಯಾಃ ಮಹಿನಾ ಚಿತ್ ಏನಃ ಮಹೇ ಸಂದೇಶಸ್ಯ ವಿಸ್ತೀರ್ಣಾಯಾಃ ಜ್ವಾಲಾಯಾಃ ಮಹತ್ತ್ವೇನ ಯತ್ಕಿಂಚಿತ್ ಪಾಪಂ ಮಹತೇ ಯಜಮಾನಾಯ ಮಹ್ಯಂ ಸಂಕ್ಷಪಯ**

ಅಗ್ನಿಯನ್ನು ಸಂಬೋಧಿಸಿ, ಯಜಮಾನನ ಪಾಪಗಳನ್ನು ಅಗ್ನಿಯು ತನ್ನ ಪ್ರಭೂತವಾದ ಜ್ವಾಲೆಗಳ ಮಹತ್ತ್ವದಿಂದ ನಾಶಪಡಿಸಲಿ ಎಂದು ಪ್ರಾರ್ಥಿಸಿದೆ.

ನಿರುಕ್ತಕಾರರು— **ಅಗ್ನಿಃ ಕಸ್ಮಾತ್ ಅಗ್ರಣೀರ್ಭವತಿ ಅಗ್ರಂ ಯಜ್ಞೇಷು ಪ್ರಣೀಯತೇ ಅಂಗಂ ನಯತಿ ಸನ್ನಮಮಾನಃ** ಎಂದು ಅಗ್ನಿ ಶಬ್ದಾರ್ಥವನ್ನು ವಿವರಿಸಿರುವರು. ದುರ್ಗಾಚಾರ್ಯರು **ಅಗ್ರಂ** ನಯತಿ ಅಗ್ರಣೀಃ ಭವತಿ ಎಂದು ವಿಗ್ರಹ ವಾಕ್ಯವನ್ನು ವಿವರಿಸಿ ಅಗ್ರ ಶಬ್ದವು ಪ್ರಧಾನವಾಚಕವಾಗಿರುವುದು. **ಸರ್ವೇಷ್ವರ್ಥೇಷು ಆತ್ಮಾನಂ ಅಗ್ರಂ ನಯತಿ ಸೇನಾಂ ವಾ ಅಗ್ರೇ ನಯತಿ ಅಗ್ನಿರ್ವೈ ದೇವಾನಾಂ ಸೇನಾನೀಃ ಇತಿ ಶ್ರುತೇಃ** । ಎಲ್ಲಾ ಅವಶ್ಯ ಕರ್ತವ್ಯಗಳಲ್ಲಿಯೂ ಮೊದಲಾಗಿ ಮೊದಲನೆಯ ಸ್ಥಾನವನ್ನು ಹೊಂದುವನು. ಅಥವಾ ದೇವತೆಗಳ ಸೇನೆಗಳಿಗೆ ಅಧಿಪತಿಯಾಗಿರುವುದರಿಂದ ದೇವತೆಗಳ ಸೇನೆಯನ್ನು ನಡೆಯಿಸುವವನು ಅಗ್ನಿಯು ಎಂದು ಒಂದು ವಿಧವಾದ ಅರ್ಥವನ್ನು ಮಾಡಿರುವರು. ಎರಡನೆಯದಾಗಿ ಯಜ್ಞಗಳಲ್ಲಿ (ಮೊದಲು) ಅವಶ್ಯ ಕರ್ತವ್ಯಗಳೆಲ್ಲಕ್ಕಿಂತಲೂ ಪ್ರಾರಂಭದಲ್ಲಿ ಅಗ್ನಿಯನ್ನು ಸಿದ್ಧಮಾಡುವರು. ಇದರಿಂದ **ಅಗ್ರಂ ಪ್ರಣೀಯತೇ ಇತಿ ಅಗ್ನಿಃ** ಎಂದು ಅರ್ಥವನ್ನು ಹೇಳಿದ್ದಾರೆ. ಮೂರನೆಯದಾಗಿ ಇವನು ತಾನು ಪ್ರವೇಶಿಸಿದ ಕಡೆಯಲ್ಲಿ ತಾನು ಮುಖ್ಯನಾಗಿರುತ್ತಾ ಇತರವೆಲ್ಲವನ್ನೂ ತನ್ನ ಅಧೀನದಲ್ಲಿ ಇರುವಂತೆ ಮಾಡುವನು. ಅದ್ದರಿಂದ **ಅಂಗಂ ನಯತೀತಿ ಅಗ್ನಿಃ** ಲೌಕಿಕವಾದ ಮತ್ತು ವೈದಿಕವಾದ ಕಾರ್ಯಗಳಿಲ್ಲದರಲ್ಲಿಯೂ, ಅಥವಾ ತೃಣಕಾಷ್ಠಾದಿಗಳಲ್ಲಿಯೂ ಸಹ ಅಗ್ನಿಯು (ತಾನು ಪ್ರವಿಷ್ಟನಾದಾಗ) ತನ್ನ ಸಂಬಂಧವಿರುವಾಗ ತಾನು ಮುಖ್ಯವಾಗಿರುವ ರೀತಿಯನ್ನೇ ಹೊಂದಿರುವನು. ಅಗ್ನಿಯ ಸಂಬಂಧವನ್ನು ಹೊಂದಿರುವುವುಗಳು ಅಗ್ನಿಗೆ ಅಧೀನವಾಗಿ ಗುಣಭಾವದಿಂದಲೇ ಇರುತ್ತವೆ ಎಂದು ತಾತ್ಪರ್ಯವು.

ಸ್ಥೌಲಾಷ್ಠೀವಿ ಎಂಬ ಆಚಾರ್ಯರು **ಅಕ್ನೋಪನೋ ಭವತಿ ನ ಸ್ನೇಹಯತಿ** । ಅಗ್ನಿಯು ತಾನು ಸೇರಿದ (ತನ್ನ ಸಂಬಂಧವುಳ್ಳ) ವಸ್ತುವನ್ನು ಬೇರೆಯ ರೂಪವುಳ್ಳದ್ದನ್ನಾಗಿ ಮಾಡುವನು ಎಂದು ಅಗ್ನಿಯ ಗುಣವನ್ನು ವಿವರಿಸಿದ್ದಾರೆ. **ಶಾಕಪೂಣಿ** ಎಂಬ ಆಚಾರ್ಯರು ಅಗ್ನಿ ಶಬ್ದವು **ಇತಾತ್, ಅಕ್ತಾದ್ವಾ ದಗ್ಧಾದ್ವಾ ನೀತಾತ್**, ಇಣ್ ಗತೌ, ಅಂಜೂ ವ್ಯಕ್ತಿಮ್ರಕ್ಷಣಯೋಃ, ದಹ ಭಸ್ಮೀಕರಣೇ ಎಂಬ ಮೂರು ಧಾತುಗಳಿಂದಲೂ ಣೀಞ್ ಪ್ರಾಪಣೇ ಎಂಬ ಧಾತುವಿನಿಂದ ನೀಕಾರವು ಸೇರಿ ಅಗ್ನಿಶಬ್ದದ ರೂಪವು ಸಿದ್ಧವಾಗುತ್ತದೆ ಎಂದು ಅಗ್ನಿ ಶಬ್ದರೂಪನಿಷ್ಪತ್ತಿಕ್ರಮವನ್ನು ವಿವರಿಸಿರುವರು. ನಿರುಕ್ತಕಾರರು—

**ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ।**
**ಹೋತಾರಂ ರತ್ನಧಾತಮಂ ॥**

(ಋ. ಸಂ. ೧-೧-೧)

ಎಂಬ ಋಕ್ಕನ್ನು ಉದಹರಿಸಿ ಈ ಅಗ್ನಿಯು ಪಾರ್ಥಿವಾಗ್ನಿಯು ಎಂದು ವ್ಯವಹರಿಸಲ್ಪಡುತ್ತದೆ ಎಂದೂ, ಇದಕ್ಕಿಂತ ವ್ಯತಿರಿಕ್ತವಾದ ಜಾತವೇದಾಗ್ನಿಯೇ ಮೊದಲಾದ ಅಗ್ನಿಯ ಪ್ರಭೇದಗಳು ಮಧ್ಯಮೋತ್ತಮಭಾವದಿಂದ ವ್ಯವಹರಿಸಲ್ಪಡುವುವು ಎಂದು ವರ್ಣಿಸಿದ್ದಾರೆ. ಈ ಪಾರ್ಥಿವಾಗ್ನಿಯಲ್ಲಿ ಯಾಜ್ಞಿಕರು ತಮ್ಮ ಯಾಗಕ್ಕನುಕೂಲವಾಗುವಂತೆ ಆಯಾಯ ಕರ್ಮಗಳಿಗೆ ಅನುಗುಣವಾಗಿ ಇತರ ಅಗ್ನಿಗಳನ್ನು ಆವಾಹನೆ ಮಾಡುತ್ತಾರೆ. ಇದರಿಂದ ಅಗ್ನಿಯು ಸರ್ವ ದೇವತೆಗಳ ತಾದಾತ್ಮ್ಯವನ್ನೂ ಹೊಂದಿರುವನು, **ಅಗ್ನಿಃ ಸರ್ವಾ ದೇವತಾಃ** ಎಂಬ ಬ್ರಾಹ್ಮಣವಾಕ್ಯವೂ,

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**

(ಋ. ಸಂ. ೧-೧೬೪-೪೬)

ಎಂಬ ಈ ಮಂತ್ರವೂ ಕೂಡ ಅಗ್ನಿಯ ಸರ್ವದೇವತಾತ್ಮಭಾವವನ್ನು ವ್ಯಕ್ತಗೊಳಿಸುತ್ತವೆ ಎಂದು ವಿವರಿಸಿದ್ದಾರೆ.

ಆದರೆ-**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇ ಅಯಮೇವ ಸೋಽಗ್ನಿಃ। ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥** (ನಿ. ೭-೭-೧೮) ಆಯಾಯ ಕರ್ಮಗಳಲ್ಲಿ ಪ್ರಧಾನಭಾವದಿಂದ ಸ್ತುತ್ಯನಾಗಿರುವನೋ ವೈದಿಕ ಮಂತ್ರಗಳಿಂದ ಹವಿಸ್ಸುಗಳನ್ನು ಯಾವ ಅಗ್ನಿಗಾಗಿ ಸಿದ್ಧಮಾಡುವರೋ ಆ ಅಗ್ನಿಯು ಪಾರ್ಥಿವಾಗ್ನಿ ಎಂದು ವ್ಯವಹರಿಸಲ್ಪಡುವುದು. ಇತರವಾದ ಅಗ್ನಿಗಳು ಉತ್ತಮ ಮಧ್ಯಮಭಾವದಲ್ಲಿರುವುವುಗಳಾದರೂ, (ವೈದ್ಯುತಾಗ್ನಿ, ಜಾತವೇದಾಗ್ನಿ) ಲೋಕದಲ್ಲಿ ಅವುಗಳನ್ನು ಅಗ್ನಿಮಾನಯ ಇತ್ಯಾದಿ ವಾಕ್ಯಗಳಿಂದ ವ್ಯವಹರಿಸುವುದಿಲ್ಲ. ಮತ್ತು **ಆಗ್ನೇಯೇಷು ಸೂಕ್ತೇಷು ಹವಿಃ ಸಂಪ್ರದಾನೇಷು ಸ್ತುತ್ಯತ್ವೇನ ಭೋಕ್ತೃತ್ವೇನ ಚೈತದೇವೋಪಾಸೀತ ।** ಅಗ್ನಿಯನ್ನು ವರ್ಣಿಸುವ ಸೂಕ್ತಗಳಿಂದ ಸ್ತುತ್ಯನಾಗಿಯೂ, ಹವಿಸ್ಸುಗಳನ್ನು ಸ್ವೀಕರಿಸುವ ವಿಷಯದಲ್ಲಿ ಭೋಕ್ತೃವಾಗಿಯೂ ಇರುವ ಈ ಪಾರ್ಥಿವಾಗ್ನಿಯನ್ನು ಉಪಾಸನೆ ಮಾಡತಕ್ಕದ್ದು ಎಂದು ವಿಧಿವಾಕ್ಯದಲ್ಲಿ ಉಕ್ತವಾಗಿರುತ್ತದೆ.

**ತಸ್ಮಾದಗ್ನಿಶಬ್ದೇನ ಪಾರ್ಥಿವಸ್ಯ ಜ್ಯೋತಿಷಃ ಮುಖ್ಯಸ್ಸಂಬಂಧಃ ಗೌಣ ಇತರಯೋರ್ಮಧ್ಯಮೋತ್ತಮಯೋಃ ।**

ಆದ್ದರಿಂದ ಅಗ್ನಿ ಶಬ್ದದಿಂದ ಪಾರ್ಥಿವಾಗ್ನಿಯನ್ನು ಉಪಾಸನೆ ಮಾಡುವುದೆಂದು ಮುಖ್ಯವಾದ ಅಭಿಪ್ರಾಯವು. ಅಗ್ನಿಯು ಸರ್ವಾತ್ಮಭಾವದಿಂದ ವ್ಯಪದಿಷ್ಟರಾಗುವ ಇತರ ದೇವತೆಗಳ ಉತ್ತಮಮಧ್ಯಮಭಾವವು ಇಲ್ಲಿ ಗೌಣವಾಗಿರುತ್ತದೆ ಎಂದು ದುರ್ಗಾಚಾರ್ಯರು ವಿವರಿಸಿದ್ದಾರೆ.

**ಚಿತ್**— ನಿರುಕ್ತಕಾರರು– ಅಪ್ಯುಪಮಾರ್ಥೇಽಪಿ ಕರ್ಮೋಪಸಂಗ್ರಹಾರ್ಥೇಽಪಿ ಪದಪೂರಣಾಃ ಎಂದು ನಿಪಾತಗಳಿಗೆ ಉಪಮಾರ್ಥವನ್ನು ಬೋಧಿಸುವುದು, ಅಥವಾ ಯಾವುದಾದರೂ ಒಂದು ಅರ್ಥವನ್ನು ಬೋಧಿಸುವುದು, ಅಥವಾ ವಾಕ್ಯವನ್ನು ಪೂರ್ತಿಮಾಡುವುದು ಎಂದು ಮೂರು ವಿಧವಾದ ಪ್ರಯೋಜನವನ್ನು ಹೇಳಿ, **ಚಿದಿತ್ಯೇಷೋ ಅನೇಕಕರ್ಮಾ, ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ, ದಧಿಚಿದಿತ್ಯುಪಮಾರ್ಥೇ, ಕುಲ್ಮಾಷಾಂಶ್ಚಿದಾಹರೇತಿ ಅವಕುತ್ಸಿತೇ.** ಚಿತ್ ಎಂಬ ನಿಪಾತವು ಅನೇಕ ಅರ್ಥಗಳನ್ನು ಬೋಧಿಸುವುದು. ದದಿ ಚಿತ್ ಎಂಬಲ್ಲಿ ಉಪಮಾರ್ಥವನ್ನೂ ಆಚಾರ್ಯಶ್ಚಿತ್ ಎಂಬಲ್ಲಿ ಗೌರವವನ್ನೂ ಕುಲ್ಮಾಷಾಂಶ್ಚಿತ್ ಎಂಬಲ್ಲಿ ನಿಂದೆ ಅಥವಾ ಕುತ್ಸಿತ ಎಂಬ ಅರ್ಥವನ್ನೂ ಬೋಧಿಸುವುದು. ಇದಕ್ಕಿಂತಲೂ ವ್ಯತಿರಿಕ್ತವಾದ ಕಡೆಗಳಲ್ಲಿ ಸಾಮಾನ್ಯ ಪದಪೂರಣಮಾತ್ರವಾದ ಅರ್ಥವನ್ನು ಬೋಧಿಸುವುದು ಎಂದು ವಿವರಿಸಿರುವರು. ಇಲ್ಲಿ ಪದಪೂರಣಫಲಕವಾಗಿ ಅನರ್ಥಕವಾಗಿರುವುದು.

ವ್ಯಾಕರಣಪ್ರಕ್ರಿಯಾ.

**ಪೃಕ್ಷಪ್ರಯಜಃ**— ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬಲ್ಲಿರುವ ದೃಶಿಗ್ರಹಣಸಾಮರ್ಥ್ಯದಿಂದ ಈ ಧಾತುವಿಗೆ ಕರ್ಮಣಿಯಲ್ಲಿ ವಿಚ್

ಪ್ರತ್ಯಯ. ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದ್ರವಿಣಃ**—ದ್ರು ಗತೌ ಧಾತು. **ದ್ರುದಕ್ಷಿಭ್ಯಾಮಿನನ್** (ಉ. ಸೂ. ೨-೨೦೮) ಎಂಬುದರಿಂದ ಇನನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತು ಉಕಾರಕ್ಕೆ ಗುಣ, ಅವಾದೇಶ. ಅಟ್‌ಕುಪ್ವಾಙ್ ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. ಸಂಬುದ್ಧಿಯಲ್ಲಿ ಸು ಬಂದಾಗ ಛಾಂದಸವಾಗಿ ಅದಕ್ಕೆ ಲೋಪ ಬರುವುದಿಲ್ಲ. **ಆಮಂತ್ರಿತಸ್ಯಚ** (ಪಾ. ಸೂ. ೮-೧೯೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸುವಾಚಃ**—ಶೋಭನಾಃ ವಾಚಃ ಯಾಸಾಂ ತಾಃ ಸುವಾಚಃ **ನಞ್‌ಸುಭ್ಯಾಮ್**—(ಪಾ. ಸೂ. ೬-೨-೧೬೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಸುಕೇತವಃ**—ಹಿಂದಿನಂತೇ ಬಹುವ್ರೀಹಿಸಮಾಸವಾದಾಗ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ರೇವತ್**—ರಯಿಃ — ಧನಂ ಅಸ್ಮಿನ್ ವಿದ್ಯತೇ ಇತಿ ರೇವತ್. **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. **ರಯೇರ್ಮತೌ ಬಹುಲಮ್** ಎಂಬ ವಚನದಿಂದ ಯಕಾರಕ್ಕೆ ಸಂಪ್ರಸಾರಣ (ಇ) ಬರುತ್ತದೆ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ ಗುಣ. ಇಕಾರದ ಪರದಲ್ಲಿ ಮತುಪ್ ಬಂದುದರಿಂದ **ಛಂದಸೀರಃ** ( ಪಾ ಸೂ. ೮-೧-೧೫ ) ಎಂಬುದು ಮತುಪಿನ ಮಕಾರಕ್ಕೆ ವತ್ವ. ರೇವತ್ ಎಂದು ರೂಪವಾಗುತ್ತದೆ. **ಹ್ರಸ್ವನುಡ್ಭ್ಯಾಂಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಊಷುಃ**—ಉಷ ದಾಹೇ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಪ್ರಕಾಶನಾರ್ಥದಲ್ಲಿ ಪ್ರಯುಕ್ತವಾಗಿದೆ. **ಛಂದಸಿಲುಙ್** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪೃಥಿವ್ಯಾಃ**—ಪ್ರಥ ಪ್ರಖ್ಯಾನೇ ಧಾತು. **ಪ್ರಥೇಃ ಷಿವನ್ ಸಂಪ್ರಸಾರಣಂ ಚ** (ಉ. ಸೂ. ೧-೧೪೮) ಎಂಬುದರಿಂದ ಷಿವನ್ ಪ್ರತ್ಯಯ. ಧಾತುವಿನ ರೇಫಕ್ಕೆ ಸಂಪ್ರಸಾರಣ ಪೂರ್ವರೂಪ. **ಷಿತ್** ಪ್ರತ್ಯಯಾಂತವಾದುದರಿಂದ ಸ್ತ್ರೀತ್ವವಿವಕ್ಷಾ ಮಾಡಿದಾಗ **ಷಿದ್ಗೌರಾದಿಭ್ಯಶ್ಚ** (ಪಾ. ಸೂ. ೪-೧-೪೧) ಎಂಬುದರಿಂದ ಙೀಷ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಪೃಥಿವೀ ಶಬ್ದವು ಅಂತೋದಾತ್ತವಾಗುತ್ತದೆ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್ ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿ ಉದಾತ್ತವಾಗುತ್ತದೆ.

**ಮಹೇ**—ಮಹ ಪೂಜಾಯಾಂ ಧಾತು. **ಕ್ವಿಪ್‌ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿ ಉದಾತ್ತವಾಗುತ್ತದೆ.

**ದಶಸ್ಯ**—ದಶಸ್ ಎಂಬುದು ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. ಕಂಡ್ವಾದಿಗಣದಲ್ಲಿ ಸೇರಿದೆ. **ಕಂಡ್ವಾದಿಭ್ಯೋಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಇದಕ್ಕೆ ಸ್ವಾರ್ಥದಲ್ಲಿ ಯಕ್ ಪ್ರತ್ಯಯ

ಬರುತ್ತದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಅತೋಹೇಃ (ಪಾ. ಸೂ. ೬-೪-೧೦೫) ಸೂತ್ರದಿಂದ ಅದಕ್ಕೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।
ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥ ೧೧ ॥

ಪದಪಾಠಃ

ಇಳಾಂ । ಅಗ್ನೇ । ಪುರುಽದಂಸಂ । ಸನಿಂ । ಗೋಃ । ಶಶ್ವತ್ಽತಮಂ । ಹವಮಾನಾಯ । ಸಾಧ ।
ಸ್ಯಾತ್ । ನಃ । ಸೂನುಃ । ತನಯಃ । ವಿಜಾಽವಾ । ಅಗ್ನೇ । ಸಾ । ತೇ । ಸುಽಮತಿಃ । ಭೂತು ।
ಅಸ್ಮೇ ಇತಿ ॥ ೧೧ ॥

ಸಾಯಣಭಾಷ್ಯಂ.

ಹೇ ಅಗ್ನೇ ಪುರುದಂಸಂ । ಅಪೋಽಪ್ನೋ ದಂಸೋ ವೇಷ ಇತಿ ಕರ್ಮನಾಮಸು ಪಠಿತತ್ವಾದ್ದಂಸಃಶಬ್ದಃ ಕರ್ಮವಾಚೀ । ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ತಾಂ ಬಹುಕರ್ಮಾಣಂ ಗೋಃ ಸನಿಂ ಗವಾದಿಪಶೂನ್ಸಂಪಾದಯಿತ್ರೀಮಿಳಾಮೇತನ್ನಾಮಿಕಾಂ ಗೋರೂಪಾಂ ದೇವತಾಂ ಶಶ್ವತ್ತಮಂ ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧ । ಸಾಧಯ । ಕಿಂಚ ನೋಽಸ್ಮಾಕಂ ಸೂನುಃ ಪುತ್ರಸ್ತನಯಃ ಪೌತ್ರಃ ಸ್ಯಾದ್ಭವತ್ವಿತಿ ತೇ ತವ ಯಾ ಸುಮತಿಃ ಶೋಭನಾ ಬುದ್ಧಿಃ ಸಾ ವಿಜಾವಾಬಂಧ್ಯಾ ಸತ್ಯಸ್ಮೇ ಅಸ್ಮಾಕಂ ಭೂತು । ಭವತು ॥ ಶಶ್ವತ್ತಮಂ । ಉಙ್ಛಾದಿಷು ಪಾಠಾದಂತೋದಾತ್ತತ್ವಂ । ಸಾಧ । ರಾಧ ಸಾಧ ಸಂಸಿದ್ಧೌ । ಅಂತರ್ಭಾವಿತಣ್ಯರ್ಥೋಽಯಂ । ಲೋಟಿ ವ್ಯತ್ಯಯೇನ ಶಪ್ । ಸೇರ್ಹ್ಯಪಿಚ್ಚೇತಿ ಹಿರಾದೇಶಃ । ತಸ್ಯಾತೋ ಹೇರಿತಿ ಲುಕ್ । ನಿಘಾತಃ । ವಿಜಾವಾ । ಜನೀ ಪ್ರಾದುರ್ಭಾವೇ । ಅಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಲಿಂಗವ್ಯತ್ಯಯಃ । ಭೂತು । ಭೂ ಸತ್ತಾಯಾಂ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥

ಪ್ರತಿಪದಾರ್ಥ.

(ಹೇ) ಅಗ್ನೇ—ಎಲೈ ಅಗ್ನಿಯೇ । ಪುರುದಂಸಂ—ಅನೇಕ ಕರ್ಮವಿಶಿಷ್ಟವೂ । ಗೋಃ ಸನಿಂ—ಗವಾದಿ ಪಶುಗಳನ್ನು ಒದಗಿಸುವವಳೂ (ಆದ) । ಇಳಾಂ—ಗೋರೂಪಳಾದ ಇಳಾನಾಮಕ ದೇವತೆಯನ್ನು । ಶಶ್ವತ್ತಮಂ—ನಿರಂತರವೂ । ಹವಮಾನಾಯ—ಯಾಗಾನುಷ್ಠಾನ ಮಾಡುತ್ತಿರುವ ನನಗೆ । ಸಾಧ—

ಸಾಧಿಸು (ಅನುಗ್ರಹಿಸು) ; (ಮತ್ತು) । ನಃ—ನಮಗೆ । ಸೂನುಃ—ಪುತ್ರನೂ । ತನಯಃ—ಪೌತ್ರನೂ । ಸ್ಯಾತ್—ಆಗಲಿ (ಎಂಬುದಾಗಿ) । (ಹೇ) ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನ । (ಯಾ) ಸುಮತಿಃ—। ಯಾವ ಶೋಭನವಾದ ಬುದ್ಧಿಯಿದೆಯೋ । ಸಾ—ಅದು । ಅಸ್ಮೇ—ನಮಗೋಸ್ಕರ । ಭಿಜಾವಾ—ಅವಂಧ್ಯವು । ಭೂತು—ಆಗಲಿ.

ಭಾವಾರ್ಥ

ಎಲೈ ಅಗ್ನಿಯೇ, ಅನೇಕ ಕರ್ಮಗಳಿಗೆ ಸಹಾಯಕವಾಗುವ ಗವಾದಿ ಪಶುಗಳನ್ನು ಕೊಡುವವಳೂ, ಇಳಾನಾಮಕಳೂ, ಗೋರೂಪಳೂ ಆದ ಭೂಮಿಯು, ನಿರಂತರ ಯಾಗಾಚರಣೆಯಲ್ಲಿ ನಿರತರಾದ ನಮಗೆ ಅನುಕೂಲಿಸುವಂತೆ ಮಾಡು ; ಮತ್ತು ಎಲೈ ಅಗ್ನಿಯೇ, ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನನುಗ್ರಹಿಸಬೇಕೆಂಬ ನಿನ್ನ ಶುಭವಾದ ಮತಿಯು ನಮಗೆ ಯಾವಾಗಲೂ ಅವಂಧ್ಯವಾಗಲಿ. (ಸಫಲವಾಗಲಿ)

English Translation.

Grant, Agni, to the offerer of the oblation, earth the bestower of cattle, the means of many (pious rites), such that it may be perpetual : may there be to us sons and grandsons, and may your good-willl ever be productive of benefits to us.

ವಿಶೇಷವಿಷಯಗಳು

ಪುರುದಂಸಂ—ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ಅಪ್ನಃ ದಂಸಃ ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩-೨) ದಂಸ ಶಬ್ದವು ಉಕ್ತವಾಗಿರುತ್ತದೆ. ಬಹಳ ಕರ್ಮಗಳುಳ್ಳದ್ದೆಂದು ಅರ್ಥ.

ಗೋಃ ಸನಿಂ—ಗವಾದಿಪಶೂನ್ ಸಂಪಾದಯಿತ್ರೀಂ । ಗೋಶಬ್ದಕ್ಕೆ ಪೃಥಿವೀ. ವಾಕ್ಕು, ಪಶು, ರಶ್ಮಿ ಎಂದು ಅನೇಕಾರ್ಥಗಳು ಇರುವುವು. ಗೋಃ ಸನಿಂ ಎಂಬ ಪದಗಳು ಇಳಾ ಎಂಬ ಪದಕ್ಕೆ ವಿಶೇಷಣವಾಗಿರುವುದರಿಂದ ಇಳಾ ದೇವತೆಯು ಗೋವುಗಳೇ ಮೊದಲಾದವುಗಳೆಲ್ಲವನ್ನೂ ಅನುಗ್ರಹಿಸುವಳೆಂದು ಅರ್ಥವನ್ನು ವರ್ಣಿಸಿದೆ.

ಇಳಾಂ—ಏತನ್ನಾಮಿಕಾಂ ಗೋರೂಪಾಂ ದೇವತಾಂ । ಪೃಥಿವೀನಾಮಗಳಲ್ಲಿ ಇಳಾ ಪದವು (ನಿ. ೨-೫) ಉಕ್ತವಾಗಿದೆ. ವಾಙ್ನಾಮಗಳಲ್ಲಿಯೂ, (ನಿ. ೨-೨೩) ಅನ್ನನಾಮಗಳಲ್ಲಿಯೂ, (ನಿ. ೩-೯) ಗೋನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಮತ್ತು ಇಳಾ ಎಂಬ ಪದವು ಈಶ ಧಾತುವಿನಿಂದ ನಿಷ್ಪನ್ನವಾಗಿದೆ.

ಅಭಿನ ಇಳಾ ಯೂಥಸ್ಯ ಮಾತಾಸ್ಮನ್ನದೀಭಿರುರ್ವಶೀ ವಾ ಗೃಣಾತು ।
ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾಯೋಃ ।
ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ ॥ (ಋ. ಸಂ. ೫-೪೧-೧೯, ೨೦)

ಈ ಋಕ್ಕುಗಳಲ್ಲಿ ಇಳಾ ಅಥವಾ ಇಡಾ ಎಂಬ ದೇವಿಯು ಮಧ್ಯಮಸ್ಥಾನದೇವತೆಯೆಂದು ವಿವೃತವಾಗಿದೆ. ಸಾಯಣರು ಗೋವಿನ ಆಕಾರವನ್ನು ಧರಿಸಿರುವ ಇಳಾಎಂದುಹೆಸರುಳ್ಳ ದೇವತೆಯೆಂದು ಅರ್ಥವನ್ನು ವಿವರಿಸಿದಾರೆ.

7

**ಶಶ್ವತ್ತಮಂ ಹವಮಾನಾಯ ಸಾಧ**—ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ **ಸಾಧಯ** । ಅಗ್ನಿಯನ್ನು ಯಾವಾಗಲೂ ಹವಿಸ್ಸುಗಳಿಂದ ತೃಪ್ತಿಪಡಿಸುತ್ತಿರುವ ಯಜಮಾನನಿಗೆ ಬೇಕಾದ ಇಷ್ಟಾರ್ಥಗಳನ್ನು ನೆರವೇರಿಸುವ, ಪ್ರಭೂತವಾದ ಮಹಾತ್ಮ್ಯದಿಂದ ಪೂರಿತವಾಗಿರುವ, ಗೋಗೂಪದಿಂದ ಇರುವ, ಇಳಾ ದೇವತೆಯ ಅನುಗ್ರಹವು ಉಂಟಾಗುವಂತೆ ಅಗ್ನಿಯನ್ನು ಪ್ರಾರ್ಥಿಸಿದೆ.

**ಸೂನುಃ—ಪುತ್ರಃ, ತನಯಃ ಪೌತ್ರಃ** । ತುಕ್, ತೋಕಂ ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೩-೨) ತನಯ ಶಬ್ದವೂ, ಸೂನು ಶಬ್ದವೂ ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**
(ಋ. ಸಂ. ೧೦-೫೦-೬)

ಎಂಬ ಈ ಋಕ್ಕಿನಲ್ಲಿ ಸೂನೋ ಎಂಬ ಶಬ್ದಕ್ಕೆ ಪುತ್ರನೆಂದು ಅರ್ಥವನ್ನುಹೇಳಿ ಅಗ್ನಿಯನ್ನು (ಸಹಸಸ್ಪುತ್ರ) **ಸಹಸಸ್ಸೂನೋ,** ಬಲಸ್ಯ ಪುತ್ರ ಎಂದು ಹೇಳಿದೆ. ಸಾಯಣರು ಸೂನುಶಬ್ದಕ್ಕೆ ಪುತ್ರನೆಂದೂ, ತನಯ ಶಬ್ದಕ್ಕೆ ಪೌತ್ರ (ಪುತ್ರನ ಪುತ್ರ) ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಸುಮತಿಃ—ಶೋಭನಾ ಬುದ್ಧಿಃ.** । ನಿರುಕ್ತಕಾರರು **ದೇವಸುಮತಿಂ** ಎಂಬಲ್ಲಿ **ದೇವಾನಾಂ ಕಲ್ಯಾಣೀಂ ಮತಿಂ.** ದೇವತೆಗಳ ಶುಭಕರವಾದ ಬುದ್ಧಿ ಎಂದೂ, ವೈಶ್ವಾನರಸ್ಯ ಸುಮತೌ ಸ್ಯಾಮ ಎಂಬಲ್ಲಿ **ಕಲ್ಯಾಣ್ಯಾಂ ಮತೌ** ಎಂದೂ **ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ** ಎಂಬಲ್ಲಿಯೂ **ಕಲ್ಯಾಣೀಂ ಮತಿಂ** ಎಂಬ ಇದೇ ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಅಗ್ನಿಯನ್ನು ಹವಿಸ್ಸಿಗಳಿಂದ ತೃಪ್ತಿಗೊಳಿಸಿದ ಯಜಮಾನರ ವಿಷಯದಲ್ಲಿ ಅಗ್ನಿಯು ಅನುಗ್ರಹಿಸಬಹುದಾದ ಪುತ್ರ ಪೌತ್ರಾದಿಗಳ ಉತ್ಪತ್ತಿ ಮತ್ತು ಅಭಿವೃದ್ಧಿಯೇ ಮೊದಲಾದ ಅಗ್ನಿಯ ಕಲ್ಯಾಣಕರವಾದ ಬುದ್ಧಿಯು ಉಂಟಾಗಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ.

**ಪುರುದಂಸಮ್**—ಪುರೂಣಿ ದಂಸಾಂಸಿ ಯಸ್ಯಾಃ ಸಾ. **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಶಶ್ವತ್ತಮಮ್**—ಉಂಛಾದಿಯಲ್ಲಿ ಪಠಿತವಾದುದರಿಂದ **ಉಂಛಾದೀನಾಂಚ** (ಪಾ. ಸೂ. ೬-೧-೧೬೦) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಾಧ**—ರಾಧ ಸಾಧ ಸಂಸಿದ್ಧೌ ಧಾತು. ಪ್ರಯೋಜಕ ವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಶಪ್ ವಿಕರಣ ಬರುತ್ತದೆ. **ಅತೋ ಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಅದಂತದ ಪರದಲ್ಲಿರುವುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಯಾತ್**—ಅಸ ಭುವಿ ಧಾತು. ಲಿಙ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ಅನುದಾತ್ತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವೆಂದುದರಿಂದ ಉದಾತ್ತವಾಗುತ್ತದೆ.

ವಿಜಾವಾ—ಜನೀ ಪ್ರಾದುರ್ಭಾವೇ ಧಾತು. ಅನ್ಯೇಭ್ಯೋಽಪಿದೃಶ್ಯಂತೇ (ಪಾ. ಸೂ. ೩-೨-೭೫) ಎಂಬುದರಿಂದ ಇದಕ್ಕೆ ವನಿಪ್ ಪ್ರತ್ಯಯ. ಇದು ಪರವಾದಾಗ ವಿಡ್ವನೋರನುನಾಸಿಕಸ್ಯಾತ್ (ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿಗೆ ಆತ್ವ. ವಿ ಎಂಬುದರೊಡನೆ ಪ್ರಾದಿಸಮಾಸ. ವಿಜಾವನ್ ಶಬ್ದವಾಗುತ್ತದೆ. ಪ್ರಥಮಾ ಏಕವಚನಾಂತರೂಪ. ವ್ಯತ್ಯಯೋಬ—ಎಂಬುದರಿಂದ ಲಿಂಗವ್ಯತ್ಯಯ (ಸ್ತ್ರೀಲಿಂಗಕ್ಕೆ ಪುಲ್ಲಿಂಗ) ಬಂದಿದೆ. ಗತಿಕಾರಕೋಪಪದಾತ್—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಸುಮತಿಃ—ಮನ ಜ್ಞಾನೇ ಧಾತು. ಕ್ತಿನ್ ಪ್ರತ್ಯಯ. ಮಂತ್ರೇ ವೃಷೇಷ—(೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಭೂತು—ಭೂ ಸತ್ತಾಯಾಂ ಧಾತು ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಏರುಃ ಎಂಬುದರಿಂದ ಇಕಾರಕ್ಕೆ ಉತ್ವ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ (ಶಪ್) ಲುಕ್. ಭೂಸುವೋಸ್ತಿಙಿ ಎಂಬುದರಿಂದ ಗುಣನಿಷೇಧ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ಅಸ್ಮೇ—ಸುಪಾಂ ಸುಲುಕ್—ಎಂಬುದರಿಂದ ಷಷ್ಠೀ ಬಹುವಚನಕ್ಕೆ ಶೇ ಆದೇಶ.

———

# ಎಂಟನೆಯ ಸೂಕ್ತವು

## ಪೀಠಿಕೆ

ಈ ಸೂಕ್ತದಲ್ಲಿ ಯೂಪವನ್ನು ಸ್ತುತಿಸಲಾಗಿರುವುದು. ಯೂಪಸ್ಥಾಪನವೂ ಅದರ ಸಂಸ್ಕಾರಗಳೂ ಯಜ್ಞದಲ್ಲಿ ವಿಶೇಷ ಪ್ರಾಮುಖ್ಯತೆಯನ್ನು ಪಡೆದಿರುವುದರಿಂದ ಅವುಗಳನ್ನು ಇಲ್ಲಿ ವಿಶೇಷ ರೀತಿಯಿಂದ ವಿವರಿಸಲಾಗುವುದು. ಯೂಪವೆಂದರೆ ಯಜ್ಞದಲ್ಲಿ ಪಶುವನ್ನು ಕಟ್ಟುವುದಕ್ಕಾಗಿ ನೆಟ್ಟಿರುವ ಮರದ ಕಂಭವು. ಇದನ್ನು ವನಸ್ಪತಿಯೆಂತಲೂ ಕರೆಯುವರು. ಋಗ್ವೇದದಲ್ಲಿ ವನಸ್ಪತಿಶಬ್ದವೇ ಹೆಚ್ಚು ಬಳಕೆಯಲ್ಲಿರುವುದು. ಯೂಪಶಬ್ದವು ಕೆಲವು ಋಕ್ಕುಗಳಲ್ಲಿ ಎಂದರೆ ಯೂಪಃ (ಋ. ಸಂ. ೧-೫೧-೧೪); ಯೂಪವಾಹಾಃ (ಋ. ಸಂ. ೧-೧೬೨-೬); ಯೂಪವ್ರಸ್ಕಾಃ (ಋ. ಸ. ೧-೧೬೨-೬); ಯೂಪೇವ (ಋ ಸಂ. ೪-೩೩-೩); ಯೂಪಾತ್ (ಋ. ಸಂ. ೫-೨-೭) ಎಂಬ ಐದು ಋಕ್ಕುಗಳಲ್ಲಿ ಮಾತ್ರ ಯೂಪಶಬ್ದ ಪ್ರಯೋಗವಿರುವುದು. ಇನ್ನೆಲ್ಲಿಯೂ ಇರುವುದಿಲ್ಲ. ಯಜುರ್ವೇದಾದಿಗಳಲ್ಲಿ ಯೂಪಶಬ್ದದ ಪ್ರಯೋಗವು ವಿಶೇಷವಾಗಿರುವುದು. ಯಾಸ್ಕರು ಸಹ ಯೂಪಶಬ್ದಕ್ಕೆ ನಿರ್ವಚನ ಮಾಡಿರುವುದಿಲ್ಲ. ವನಸ್ಪತಿ ಶಬ್ದದ ವಿಷಯವಾಗಿ ಮೇಧ್ಯಂತು ತೇ ವಹ್ನಯೋ ಯೇಭಿರೀಯಸೇ (ಋ. ಸಂ. ೨-೩೭-೩) ಎಂಬ ಋಕ್ಕಿನ ನಿರ್ವಚನವನ್ನು ಹೇಳುವಾಗ—

> ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ। ವನಂ ವನೋತೇಃ ।
>
> (ನಿ. ೮-೩)

ಎಂದು ಹೇಳಿರುವರು. ಇದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನ ಮಾಡುವಾಗ—

**ಯಸ್ಮಾದೇಷಃ ವನಾನಾಂ ವೃಕ್ಷಾದೀನಾಂ ಅಂತರ್ಗತೋಽಪಿ ಸಮರ್ಥೋಽಪಿ ದಗ್ಧುಂ ನ ತಾನಿ ದಹತಿ ತಸ್ಮಾದಯಂ ತೇಷಾಂ ಪಾತಾ ರಕ್ಷಿತಾ ಪಾಲಯಿತಾ ವೇತಿ ।**

ಎಂದರೆ ಅಗ್ನಿಯು **ವೃಕ್ಷಾದಿಗಳಲ್ಲಿ** ಅಂತರ್ಗತನಾಗಿದ್ದರೂ ಅವುಗಳನ್ನು ಸುಡುವುದಿಲ್ಲವಾದ್ದರಿಂದ ಅವುಗಳ ರಕ್ಷಕನೆಂದು ಹೇಳಲ್ಪಡುವನು. ಇಲ್ಲಿ ವನಸ್ಪತಿಯೆಂದರೆ ಅಗ್ನಿಯೆಂದು ಅರ್ಥಮಾಡಿರುವರು. ಈ ವಿಷಯವಾದ ವಿವರಣೆಯನ್ನು ನಾವು **ಸುಸಮಿದ್ಧೋ ನ ಆ ವಹ** ( ಋ. ಸಂ. ೧-೧೩ ) ಎಂಬ ಆಪ್ರೀಸೂಕ್ತವನ್ನು ವ್ಯಾಖ್ಯಾನ ಮಾಡುವಾಗ ವಿಸ್ತಾರವಾಗಿ ವಿವರಿಸಿರುವೆವು. (ಋಗ್ವೇದಸಂಹಿತಾಭಾಗ ೨. ಪೇಜು 576-577 ಗಳನ್ನು ನೋಡಿ). ಅಥವಾ **ವನಂ ವನೋತೇಃ** ಎಂದು ವನಶಬ್ದದ ನಿಷ್ಪತ್ತಿಯಂತೆ ಮರವನ್ನು (ವೃಕ್ಷವನ್ನು) ನಾನಾವಿಧ ಕಾರ್ಯಗಳಿಗಾಗಿ ಉಪಯೋಗಿಸುವರು ಎಂದು ವನತಿ-ಸಂಭಜತಿ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ವಿಷಯವನ್ನು ಹೇಳಿರುವರು.

ಯೂಪದ ವಿಷಯವಾಗಿ ಐತರೇಯ ಬ್ರಾಹ್ಮಣದಲ್ಲಿ ಒಂದು ಪೂರ್ವೇತಿಹಾಸವಿರುವುದು. (ಐ. ಬ್ರಾ. ೨-೧) ಅದರ ವಿವರಣೆಯನ್ನು ಇಲ್ಲಿ ಕೊಟ್ಟಿರುವೆವು—

**ಯಜ್ಞೇನ ವೈ ದೇವಾ ಊರ್ಧ್ವಾಃ ಸ್ವರ್ಗಂ ಲೋಕಮಾಯಂಸ್ತೇಽಬಿಭಯುರಿದಂ ನೋ ದೃಷ್ಟ್ವಾ ಮನುಷ್ಯಾಶ್ಚ ಋಷಯಶ್ಚಾನು ಪ್ರಜ್ಞಾಸ್ಯಂತೀತಿ ತಂ ವೈ ಯೂಪೇನೈವಾಯೋಪಯಂಸ್ತಂ ಯದ್ಯೂಪೇನೈವಾಯೋಪಯಂಸ್ತದ್ಯೂಪಸ್ಯ ಯೂಪತ್ವಂ ತಮವಾಚೀನಾಗ್ರಂ ನಿಮಿತ್ಯೋರ್ಧ್ವಾ ಉದಾಯಂಸ್ತತೋ ವೈ ಮನುಷ್ಯಾಶ್ಚ ಋಷಯಶ್ಚ ದೇವಾನಾಂ ಯಜ್ಞವಾಸ್ತ್ವಭ್ಯಾಯನ್ಯಜ್ಞಸ್ಯ ಕಿಂಚಿದೇಷಿಷ್ಯಾಮಃ ಪ್ರಜ್ಞಾತ್ಯಾ ಇತಿ ತೇ ವೈ ಯೂಪಮೇವಾವಿಂದನ್ನವಾಚೀನಾಗ್ರಂ ನಿಮಿತಂ ತೇ ವಿದುರನೇನ ವೈ ದೇವಾ ಯಜ್ಞಮಯೂಯುಪನ್ನಿತಿ ತಮುತ್ಖಾಯೋರ್ಧ್ವಂ ನ್ಯಮಿನ್ವಂಸ್ತತೋ ವೈ ತೇ ಪ್ರ ಯಜ್ಞಮಜಾನನ್ಪ್ರ ಸ್ವರ್ಗಂ ಲೋಕಂ । ತದ್ಯದ್ಯೂಪ ಊರ್ಧ್ವೋ ನಿಮೀಯತೇ ಯಜ್ಞಸ್ಯ ಪ್ರಜ್ಞಾತ್ಯೈ ಸ್ವರ್ಗಸ್ಯಲೋಕಸ್ಯಾನುಖ್ಯಾತ್ಯೈ ॥**

ಪೂರ್ವದಲ್ಲಿ ದೇವತೆಗಳು ಜ್ಯೋತಿಷ್ಟೋಮವೆಂಬ ಯಜ್ಞವನ್ನು ಮಾಡಿ ಆದರ ಪ್ರಭಾವದಿಂದ ಸ್ವರ್ಗಲೋಕಕ್ಕೆ ಹೋದರು. ದೇವತೆಗಳು ಮಾಡಿದ ಈ ಯಜ್ಞಕ್ರಮವನ್ನು ನೋಡಿ ಮನುಷ್ಯರೂ ಋಷಿಗಳೂ ಸಹ ಅದೇ ರೀತಿ ಯಜ್ಞಮಾಡಿ ಸ್ವರ್ಗಲೋಕಕ್ಕೆ ಬರಬಹುದೆಂದು ದೇವತೆಗಳು ಹೆದರಿ ಅದಕ್ಕಾಗಿ ಒಂದುಪಾಯವನ್ನು ಮಾಡಿದರು. ಮನುಷ್ಯರನ್ನೂ ಋಷಿಗಳನ್ನು ಮೋಹಪಡಿಸುವುದಕ್ಕಾಗಿ ದೇವತೆಗಳು ತಮ್ಮ ಯಜ್ಞದಲ್ಲಿ ಒಂದು ಯೂಪಸ್ತಂಭವನ್ನು ನೆಟ್ಟರು. ಯಜ್ಞವನ್ನು ಸಾಂಗವಾಗಿ ಮಾಡಿದಂತಾಗಲೆಂದು ಈ ಯೂಪವನ್ನು ನೆಟ್ಟದ್ದರಿಂದ ಇದಕ್ಕೆ ಯೂಪವೆಂಬ ಹೆಸರು ಬಂದಿತು. (ಯೂಪವೆಂದರೆ ತಡೆಗಟ್ಟು, ಬರದಂತೆ ಮಾಡು ಎಂದರ್ಥವು). ದೇವತೆಗಳು ಸ್ವರ್ಗಕ್ಕೆ ಹೋಗುವಾಗ ಯೂಪದ ಅಗ್ರಭಾಗವನ್ನು (ತುದಿಯನ್ನು) ತಲೆಗೆಳಗೆ ಆಗುವಂತೆ ಮಾಡಿ ನೆಟ್ಟರು. ಬಳಿಕ ಮಮುಷ್ಯರೂ ಋಷಿಗಳೂ ಅಲ್ಲಿಗೆ ಬಂದು ನೋಡಲಾಗಿ ತಲೆಗೆಳಗಾಗಿ ನೆಟ್ಟಿರುವ ಯೂಪಮಾತ್ರ ಕಂಡುಬಂದಿತು. ಇದರ ಉಪಯೋಗವೇನು? ಇದನ್ನು ಏತಕ್ಕಾಗಿ ನೆಟ್ಟರು? ಇವೇ ಮೊದಲಾದ ಯಜ್ಞದ ವಿವರಗಳೇನೂ ತಿಳಿಯಲಿಲ್ಲ. ತಮ್ಮನ್ನು ವಂಚಿಸುವುದಕ್ಕೋಸ್ಕರ ಎಂದರೆ ಯಜ್ಞದ ವಿವರಗಳು ತಮಗೆ ತಿಳಿಯದಂತೆ ಮಾಡುವುದಕ್ಕಾಗಿ ದೇವತೆಗಳು ಈ ಯೂಪವನ್ನು ತಲೆಕೆಳಗಾಗಿ ನೆಟ್ಟಿರಬೇಕೆಂದು ಯೋಚಿಸಿ ಅದನ್ನು ಕಿತ್ತು ಅಗ್ರಭಾಗವು ಮೇಲಕ್ಕೆ ಬರುವಂತೆ ಸರಿಯಾಗಿ ನೆಟ್ಟರು. ಆದರಿಂದ

ಮನುಷ್ಯರಿಗೂ ಋಷಿಗಳಿಗೂ ಯಜ್ಞಕ್ರಮಾದಿಗಳು ಗೊತ್ತಾಗಿ ಅವರೂ ಯಜ್ಞವನ್ನು ಯಥಾವಿಧಿಯಾಗಿ ಮಾಡಿ ಸ್ವರ್ಗಲೋಕವನ್ನು ಪಡೆದರು. ಆದುದರಿಂದ ಯಜ್ಞವಿಧಿಯು ಸರಿಯಾಗಿ ನಡೆಯುವುದಕ್ಕೂ ಆದರಿಂದ ಸ್ವರ್ಗ ಲೋಕಪ್ರಾಪ್ತಿಗಾಗಿಯೂ ಯೂಪವನ್ನು ಊರ್ಧ್ವಾಗ್ರವಾಗಿ ನೆಡಬೇಕೆಂಬ ವಿಧಿ ಇರುವುದು.

> ವಜ್ರೋ ವಾ ಏಷ ಯದ್ಯೂಪಃ ಸೋಽಷ್ಟಾಶ್ರಿಃ ಕರ್ತವ್ಯೋಽಷ್ಟಾಶ್ರಿರ್ವೈ ವಜ್ರಸ್ತಂ ತಂ ಪ್ರಹರತಿ ದ್ವಿಷತೇ ಭ್ರಾತೃವ್ಯಾಯ ವಧಂ ಯೋಽಸ್ಯ ಸ್ತೃತ್ಯಸ್ತಸ್ಮೈ ಸ್ತರ್ತವೈ । ವಜ್ರೋ ವೈ ಯೂಪಃ ಸ ಏಷ ದ್ವಿಷತೋ ವಧ ಉದ್ಯತಸ್ತಿಷ್ಠತಿ ತಸ್ಮಾದ್ಧಾಪ್ಯೇತರ್ಹಿ ಯೋ ದ್ವೇಷ್ಟಿ ತಸ್ಯಾಪ್ರಿಯಂ ಭವತ್ಯಮುಷ್ಯಾಯಂ ಯೂಪೋಽಮುಷ್ಯಾಯಂ ಯೂಪ ಇತಿ ದೃಷ್ಟ್ವಾ ।

ಯೂಪವು ವಜ್ರಾಯುಧದ ಅಂಶವೆಂದು ಹೇಳಲ್ಪಡುವುದು. ಈ ವಿಷಯದಲ್ಲಿ ಇಂದ್ರೋ ವೃತ್ರಾಯ ವಜ್ರಂ ಪ್ರಾಹರತ್ಸ ತ್ರೇಧಾ ವ್ಯಭವತ್ಸ್ಫ್ಯಸ್ತೃತೀಯಂ ಯೂಪಸ್ತೃತೀಯಂ ಎಂದು ಯಜುರ್ವೇದದ ತೈತ್ತಿರೀಯ ಶ್ರುತಿ ವಾಕ್ಯವಿರುವುದು. ವಜ್ರಾಯುಧಕ್ಕೆ ಎಂಟು ಅಲಗುಗಳಿರುವವು. ಆದುದರಿಂದ ಯೂಪವನ್ನು ಎಂಟು ಎಂಟು ಅಲಗು (ಮೂಲೆ ಅಥವಾ ಕೋಣ)ಗಳುಳ್ಳಂತೆ ನಿರ್ಮಿಸಬೇಕು. ವಜ್ರಾಯುಧದಿಂದ ತನ್ನ ಶತ್ರು ವನ್ನು ಸಂಹರಿಸುವಂತೆ ಯೂಪವೂ ಶತ್ರುನಾಶಕ್ಕೆ ಕಾರಣವಾಗಿರುವುದು. ಯೂಪವು ಶತ್ರುವಧಕ್ಕಾಗಿ ನೆಟ್ಟಗೆ ಊರ್ಧ್ವಾಭಿಮುಖವಾಗಿ ಎದ್ದು ನಿಂತಿರುವುದು. ಆದುದರಿಂದ ಯಜ್ಞಮಾಡುವ ಯಜಮಾನನಿಗೆ ಶತ್ರುವಾದ ವನು ನೆಟ್ಟಗೆ ನಿಂತಿರುವ ಯೂಪವನ್ನು ನೋಡಿದ್ದಾದರೆ ಅವನಿಗೆ ಖಂಡಿತವಾಗಿಯೂ ಕೆಡಕಾಗುವುದು.

> ಖಾದಿರಂ ಯೂಪಂ ಕುರ್ವೀತ ಸ್ವರ್ಗಕಾಮಃ ಖಾದಿರೇಣ ವೈ ಯೂಪೇನ ದೇವಾಃ ಸ್ವರ್ಗಂ ಲೋಕಮಜಯಂಸ್ತಥೈವೈತದ್ಯಜಮಾನಃ ಖಾದಿರೇಣ ಯೂಪೇನ ಸ್ವರ್ಗಂ ಲೋಕಂ ಜಯತಿ ॥

ಈ ಯೂಪವನ್ನು ನಾನಾವಿಧ ವೃಕ್ಷಗಳಿಂದ ಮಾಡುವ ರೂಢಿ ಇರುವುದು. ಇಂತಹ ವೃಕ್ಷದಿಂದ ಮಾಡಿದರೆ ಇಂತಹ ಫಲಪ್ರಾಪ್ತಿಯೆಂದು ನಿಯಮವಿರುವುದು. ಅದನ್ನು ಇಲ್ಲಿ ವಿವರಿಸುವರು. ಸ್ವರ್ಗವನ್ನು ಅಪೇಕ್ಷಿಸುವ ಯಜಮಾನರು ಖಾದಿರವೆಂಬ ವೃಕ್ಷವಿಶೇಷದಿಂದ ಯೂಪವನ್ನು ನಿರ್ಮಿಸಬೇಕು. ದೇವತೆಗಳು ತಮ್ಮ ಯಜ್ಞ ದಲ್ಲಿ ಖಾದಿರವೃಕ್ಷದಿಂದ ಯೂಪವನ್ನು ಮಾಡಿಯೇ ಸ್ವರ್ಗಲೋಕವನ್ನು ಪಡೆದರು. ಆದುದರಿಂದ ಸ್ವರ್ಗಾಪೇಕ್ಷಿ ಗಳಾದ ಯಜಮಾನರು ಖಾದಿರಯೂಪದಿಂದ ಯಜ್ಞಮಾಡಿದರೆ ಸ್ವರ್ಗಲೋಕವನ್ನು ಪಡೆಯುವರು.

> ಬೈಲ್ವಂ ಯೂಪಂ ಕುರ್ವೀತಾನ್ನಾದ್ಯಕಾಮಃ ಪುಷ್ಟಿಕಾಮಃ ಸಮಾಂ ಸಮಾಂ ವೈ ಬಿಲ್ವೋ ಗೃಭೀತಸ್ತದನ್ನಾದ್ಯಸ್ಯ ರೂಪಮಾಮೂಲಾಚ್ಛಾಖಾಭಿರನುಚಿತಸ್ತತ್ಪುಷ್ಟೇಃ ಪುಷ್ಯತಿ ಪ್ರಜಾಂ ಚ ಪಶೂಂಶ್ಚ ಯ ಏವಂ ವಿದ್ವಾನ್ಬೈಲ್ವಂ ಯೂಪಂ ಕುರುತೇ ॥

ಅನ್ನವನ್ನೂ (ಆಹಾರವನ್ನೂ) ಪುಷ್ಟಿಯನ್ನೂ ಅಪೇಕ್ಷಿಸುವವನು ಬಿಲ್ವವೃಕ್ಷದಿಂದ ಯೂಪವನ್ನು ನಿರ್ಮಿಸ ಬೇಕು. ಏಕೆಂದರೆ ಬಿಲ್ವವೃಕ್ಷವು ಪ್ರತಿವರ್ಷವೂ ಫಲವನ್ನು ಬಿಡುವುದು. ಬಿಲ್ವವೃಕ್ಷವು ಆಹಾರಕ್ಕೂ ಪುಷ್ಟಿಗೂ ಚಿಹ್ನೆಯಾಗಿರುವುದು. ಬೇರಿನಿಂದ ತುದಿಯವರೆಗೆ ಶಾಖೆಗಳೆಲ್ಲವೂ ಪ್ರತಿವರ್ಷವೂ ಅಭಿವೃದ್ಧಿಯನ್ನೈದುತ್ತಿರು ವುದು ಎಂದರೆ ದೊಡ್ಡದಾಗಿ ಬೆಳೆಯುತ್ತಿರುವುದು ಆದುದರಿಂದ ಈ ವೃಕ್ಷವು ಪುಷ್ಟಿಗೆ ಚಿಹ್ನೆಯಾಗಿರುವುದು.

ಆದುದರಿಂದ ಈ ವಿಷಯವನ್ನು ಚೆನ್ನಾಗಿ ತಿಳಿದ ಯಾವ ಮನುಷ್ಯನು ಬಿಲ್ವವೃಕ್ಷದಿಂದ ಯೂಪವನ್ನು ನಿರ್ಮಿಸಿ ಯಜ್ಞವನ್ನು ಮಾಡುವನೋ ಅವನ ಪ್ರಜೆಗಳೂ (ಮಕ್ಕಳು ಮುಂತಾದವರು) ಪಶುಗಳೂ ಪುಷ್ಟಿಯಿಂದ ಯುಕ್ತವಾಗಿರುವವು.

**ಯದೇವ ಬೈಲ್ವಾಂ ೩ ಬಿಲ್ವಂ ಜ್ಯೋತಿರಿತಿ ವಾ ಆಚಕ್ಷತೇ ಜ್ಯೋತಿಃ ಸ್ವೇಷು ಭವತಿ ಶ್ರೇಷ್ಠಃ ಸ್ವಾನಾಂ ಭವತಿ ಯ ಏವಂ ವೇದ ॥**

ಈ ಬಿಲ್ವವೃಕ್ಷಗಳಲ್ಲಿ ಶ್ರೀವೃಕ್ಷ ಅಥವಾ ಜ್ಯೋತಿರ್ವೃಕ್ಷ ಎಂದು ವಿಶೇಷಜಾತಿಯ ವೃಕ್ಷವಿರುವುದು. ಇಂತಹ ವೃಕ್ಷದಿಂದ ಯೂಪವನ್ನು ನಿರ್ಮಿಸಿ ಯಜ್ಞಮಾಡಿದಲ್ಲಿ ತೇಜಸ್ಸುಂಟಾಗುವುದು. ಈ ವಿಷಯವನ್ನು ತಿಳಿದ ಯಜಮಾನನು ಈ ವೃಕ್ಷವಿಶೇಷದಿಂದ ಯೂಪವನ್ನು ನಿರ್ಮಿಸಿ ಯಜ್ಞಮಾಡಿದಲ್ಲಿ ಅವನು ತೇಜಸ್ವಿಯೂ ಸ್ವಜನರಲ್ಲಿ ಶ್ರೇಷ್ಠನೂ (ಗಣ್ಯನೂ) ಆಗುವನು.

**ಪಾಲಾಶಂ ಯೂಪಂ ಕುರ್ವೀತ ತೇಜಸ್ಕಾಮೋ ಬ್ರಹ್ಮವರ್ಚಸಕಾಮಸ್ತೇಜೋ ವೈ ಬ್ರಹ್ಮ-ವರ್ಚಸಂ ವನಸ್ಪತೀನಾಂ ಪಲಾಶಸ್ತೇಜಸ್ವೀ ಬ್ರಹ್ಮವರ್ಚಸೀ ಭವತಿ ಯ ಏವಂ ವಿದ್ವಾನ್ಪಾಲಾಶಂ ಯೂಪಂ ಕುರುತೇ ಯದೇವ ಪಾಲಾಶಾಂ ೩ ಸರ್ವೇಷಾಂ ವಾ ಏಷ ವನಸ್ಪತೀನಾಂ ಯೋನಿರ್ಯತ್ಪಲಾಶಸ್ತಸ್ಮಾತ್ಪಲಾಶಸ್ಯೈವ ಪಲಾಶೇನಾಚಕ್ಷತೇಽಮುಷ್ಯ ಪಲಾಶಮಮುಷ್ಯ ಪಲಾಶಮಿತಿ ಸರ್ವೇಷಾಂ ಹಾಸ್ಯ ವನಸ್ಪತೀನಾಂ ಕಾಮ ಉಪಾಪ್ತೋ ಭವತಿ ಯ ಏವಂ ವೇದ ॥**

ತೇಜಸ್ಸನ್ನೂ ಬ್ರಹ್ಮವರ್ಚಸ್ಸನ್ನೂ ಅಪೇಕ್ಷಿಸುವವನು ಪಾಲಾಶ (ಮುತ್ತುಗ) ವೃಕ್ಷದಿಂದ ಯೂಪವನ್ನು ನಿರ್ಮಿಸ ಬೇಕು. ಪಲಾಶವೃಕ್ಷವು ವನಸ್ಪತಿಗಳಿಗೆಲ್ಲಾ ಕಾರಣಭೂತವಾದುದೂ ವನಸ್ಪತಿಗಳಲ್ಲೆಲ್ಲಾ ತೇಜೋಯುಕ್ತವೂ, ಬ್ರಹ್ಮವರ್ಚಸ್ಸಿನಿಂದ ಕೂಡಿರುವುದೂ ಆಗಿರುವುದು. ಆದುದರಿಂದ ಈ ವಿಷಯವನ್ನು ತಿಳಿದುಕೊಂಡ ಯಾವ ಮನುಷ್ಯನಾಗಲಿ ಪಾಲಾಶವೃಕ್ಷದಿಂದ ಮಾಡಿದ ಯೂಪವನ್ನು ಯಜ್ಞದಲ್ಲಿ ಉಪಯೋಗಿಸಿದಲ್ಲಿ ಅವನು ತೇಜೋ ಯುಕ್ತನಾಗಿಯೂ ಬ್ರಹ್ಮವರ್ಚಸ್ವಿಯಾಗಿಯೂ ಆಗುವನು.

ಈ ಯೂಪವನ್ನು ಘೃತ (ತುಪ್ಪ)ದಿಂದ ಸವರಿ ಮಂತ್ರಪೂರ್ವಕವಾಗಿ ಕೆಲವು ಸಂಸ್ಕಾರಗಳನ್ನು ಮಾಡುವರು. ಈ ಕ್ರಮವು ಐತರೇಯ ಬ್ರಾಹ್ಮಣದಲ್ಲಿ (ಐ. ಬ್ರಾ. ೨-೨) ಈರೀತಿ ವಿವರಿಸಲ್ಪಟ್ಟಿರುವುದು—

**ಅಂಜ್ಮೋ ಯೂಪಮನುಬ್ರೂಹೀತ್ಯಾಹಾಧ್ವರ್ಯುಃ। ಅಂಜಂತಿ ತ್ವಾಮಧ್ವರೇ ದೇವಯಂತ ಇತ್ಯನ್ವಾಹಾಧ್ವರೇ ಹ್ಯೇನಂ ದೇವಯಂತೋಽಞ್ಜಂತಿ । ವನಸ್ಪತೇ ಮಧುನಾ ದೈವ್ಯೇ-ನೇತ್ಯೇತದ್ವೈ ಮಧು ದೈವ್ಯಂ ಯದಾಜ್ಯಂ ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾ-ದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥ ಇತಿ ಯದಿ ಚ ತಿಷ್ಠಾಸಿ ಯದಿ ಚ ಶಯಾಸೈ ದ್ರವಿಣಮೇವಾಸ್ಮಾಸು ಧತ್ತಾದಿತ್ಯೇವ ತದಾಹ ॥**

ಯೂಪಕ್ಕೆ ಘೃತಾಂಜನವೆಂಬ ಸಂಸ್ಕಾರಮಾಡುವಾಗ ಅಧ್ವರ್ಯುವೆಂಬ ಋತ್ವಿಜನು ಹೋತೃವನ್ನುದ್ದೇಶಿಸಿ ಎಲೈ ಹೋತೃವೇ, ಈಗ ನಾವು ಯೂಪವನ್ನು ಘೃತದಿಂದ ಅಂಜನಮಾಡೋಣ. ಅದಕ್ಕಾಗಿ ಯೂಪಾ ಭ್ಯಂಜನ ಮಂತ್ರವನ್ನು ಪಠಿಸು ಎಂದು ಪ್ರೈಷಮಂತ್ರವನ್ನು ಹೇಳುವನು. ಈ ವಿಷಯವು ಆಪಸ್ತಂಬಶ್ರೌತ ಸೂತ್ರದಲ್ಲಿ—**ಯೂಪಾಯಾಜ್ಯಮಾನಾಯಾನುಬ್ರೂಹೀತಿ ಸಂಪ್ರೇಷ್ಯತೇ, ಆಜ್ಯಮಾನಾಯಾನುಬ್ರೂಹೀತಿ,**

**ಅಂಜ್ಮೋ ಯೂಪಮನುಬ್ರೂಹೀತಿ** ವಾ ಎಂಬ ಸೂತ್ರದಿಂದ ವಿವೃತವಾಗಿರುವುದು. ಮತ್ತು ಅಂಜನ ಮಾಡುವ ಕ್ರಮವನ್ನೂ—**ಅಥೈನಮುಸಂಸ್ಕೃತೇನಾಜ್ಯೇನ ಯಜಮಾನೋಽಗ್ರತಃ ಶಕಲೇನಾನಕ್ತ್ಯೈಂದ್ರಮಸೀತಿ ಚಷಾಲಮುಂಕ್ತ್ವಾ ಸುಪಿಪ್ಪಲಾಭ್ಯಸ್ತ್ವೌಷಧೀಭ್ಯ** ಇತಿ **ಪ್ರತಿಮುಚ್ಯ ದೇವಸ್ತ್ವಾ ಸವಿತಾ ಮಧ್ವಾನಕ್ತ್ವಿತಿ** ಸ್ರುವೇಣ ಸಂತತಮವಿಚ್ಛಿಂದಸ್ನಗ್ನಿಷ್ಠಾಮುಶ್ರಿಮೇನಕ್ತಿ ಎಂದು ಅಲ್ಲಿಯೇ ಹೇಳಿರುವುದು. ಈರೀತಿ ಅಧ್ವರ್ಯುವು ಪ್ರೈಷವನ್ನು ಹೇಳಿದ ಕೂಡಲೇ ಹೋತೃವು ಆಜ್ಯಲೇಪನಕ್ಕನುಸಾರವಾದ **ಅಂಜಂತಿ ತ್ವಾಮಧ್ವರೇ ದೇವಯಂತಃ** (ಋ. ಸಂ. ೩-೮-೧) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನ ಅರ್ಥವು—ಎಲೈ ಯೂಪವೇ, ಋತ್ವಿಜರು ನಿನ್ನನ್ನು ದೇವಯೋಗ್ಯವಾದ ತುಪ್ಪದಿಂದ ಲೇಪನ ಮಾಡುವರು. ಈಗ ನೀನು ಈ ಯಜ್ಞಭೂಮಿಯಲ್ಲಿ ನೆಟ್ಟಗೆ ನಿಂತಿದ್ದರೂ ಅಥವಾ ಭೂಮಿಯ ಮೇಲೆಬಿದ್ದಿದ್ದರೂ ಸಹ ನಮಗೆ ಅತಿಶಯವಾದ ಧನವನ್ನು ಸಂಪಾದಿಸಿಕೊಡು ಎಂದಿರುವುದು.

> **ಉಚ್ಛ್ರಯಸ್ವ ವನಸ್ಪತ ಇತ್ಯುಚ್ಛ್ರೀಯಮಾಣಾಯಾಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ವರ್ಷ್ಮನ್ಪೃಥಿವ್ಯಾ ಅಧೀತ್ಯೇತದ್ವೈ ವರ್ಷ್ಮ ಪೃಥಿವ್ಯೈ ಯತ್ರ ಯೂಪಮುನ್ಮಿನ್ವಂತಿ ಸುಮಿತೀ ಮೀಯಮಾನೋ ವರ್ಚೋಧಾ ಯಜ್ಞವಾಹಸ ಇತ್ಯಾಶಿಷಮಾಶಾಸ್ತೇ ॥**

ಅನಂತರ ಹೋತೃವು—**ಉಚ್ಛ್ರಯಸ್ವ ವನಸ್ಪತೇ** (ಋ. ಸಂ ೩-೮-೩) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕು ಯೂಪವನ್ನು ನೆಡುವಾಗ ಪಠಿಸಬೇಕಾಗಿರುವುದರಿಂದ ಆ ಕಾರ್ಯಕ್ಕೆ ಅನುಸಾರವಾಗಿರುವುದು. ಇದರ ಅರ್ಥವು—ಎಲೈ ಯೂಪವೇ, ಭೂಮಿಯ ಮೇಲೆ ಎದ್ದು ನಿಲ್ಲು. ಇದುವರೆಗೂ ನೀನು ಭೂಮಿಯ ಮೇಲೆ ಮಲಗಿದ್ದೆಯಷ್ಟೆ. ಈಗ ನೀನು ಮೇಲೆ ಎದ್ದುನಿಂತು ಯಜ್ಞವು ಮುಂದುವರೆಯುವಂತೆ ಮಾಡಿ ನಮಗೆ ವರ್ಚಸ್ಸನ್ನು ಅನುಗ್ರಹಿಸು, ಎಂದಿರುವುದು. ಈ ಋಕ್ಕಿನಲ್ಲಿ **ಉಚ್ಛ್ರಯಸ್ವ**—ಎದ್ದು ನಿಲ್ಲು ಎಂಬ ಶಬ್ದವಿರುವುದರಿಂದ ಈ ಋಕ್ಕನ್ನು ಪಠಿಸುವುದು ಸಮಯೋಚಿತವಾಗಿರುವುದು. ಇಂತಹ ಸಮಯೋಚಿತವಾದ ಅರ್ಥವುಳ್ಳ ಮಂತ್ರಪಠನೆಯಿಂದ ಯಜ್ಞವು ಚೆನ್ನಾಗಿ ನೆರವೇರುವುದು. **ಪೃಥಿವ್ಯಾ ಅಧಿ** ಎಂಬ ಶಬ್ದಗಳು ಇದುವರೆಗೆ ನೆಡದೆ ಭೂಮಿಯ ಮೇಲೆ ಅಡ್ಡಲಾಗಿ ಬಿದ್ದಿದ್ದ ಯೂಪದ ಸ್ಥಿತಿಯನ್ನು ಸೂಚಿಸುವವು. **ಸುಮತೀ ಮೀಯಮಾನೋ ವರ್ಚೋಧಾ ಯಜ್ಞವಾಹಸೇ** ಎಂಬ ವಾಕ್ಯವು ಯಜ್ಞಮಾಡುವ ಯಜಮಾನನಿಗೆ ವರ್ಚಸ್ಸುಂಟಾಗಲಿ ಎಂಬ ಶ್ರೇಯಃಪ್ರಾರ್ಥನೆಯನ್ನು ಸೂಚಿಸುವುದಾಗಿದೆ.

> **ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾದಿತಿ ಸಮಿದ್ಧಸ್ಯ ಹ್ಯೇಷ ಏತತ್ಪುರಸ್ತಾಚ್ಛ್ರಯತೇ ಬ್ರಹ್ಮ ವನ್ವಾನೋ ಅಜರಂ ಸುವೀರಮಿತ್ಯಾಶಿಷಮೇವಾಶಾಸ್ತೇ । ಆರೇ ಅಸ್ಮದಮತಿಂ ಬಾಧಮಾನ ಇತ್ಯಶನಾಯಾ ವೈ ಪಾಪ್ಮಾಮತಿಸ್ತಾಮೇವ ತದಾರಾನ್ನುದತೇ ಯಜ್ಞಾಚ್ಚ ಯಜಮಾನಾಚ್ಚ ಉಚ್ಛ್ರಯಸ್ವ ಮಹತೇ ಸೌಭಗಾಯೇತ್ಯಾಶಿಷಮೇವಾಶಾಸ್ತೇ ॥**

ಬಳಿಕ ಹೋತೃವು **ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾತ್** (ಋ. ಸಂ. ೩-೮-೨) ಎಂಬ ಋಕ್ಕನ್ನು ಪಠಿಸುವನು. ಇದರ ಅರ್ಥವು—ಇಲ್ಲಿ ಪ್ರಜ್ವಲಿಸುತ್ತಿರುವ ಅಗ್ನಿಯ ಮುಂದುಗಡೆ ಶೋಭಿಸುತ್ತಿರುವ ನೀನು ಉತ್ತಮ ಪುತ್ರಾದಿಗಳನ್ನೂ, ನಾಶರಹಿತವಾದ ಅಪರಿಮಿತ ಶಕ್ತಿಯನ್ನೂ ಉಂಟುಮಾಡುವ ಈ ಯಜ್ಞಕರ್ಮವನ್ನು ನೆರವೇರುವಂತೆ ಮಾಡು. ಎತ್ತರವಾಗಿ ನೆಟ್ಟಗೆ ನಿಂತು ನಮ್ಮ ಶತ್ರುಗಳನ್ನು ಓಡಿಸಿ ನಮಗೆ ಶುಭವನ್ನುಂಟುಮಾಡು, ಎಂದಿರು

ವುದು. **ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾತ್** ಎಂಬ ವಾಕ್ಯವು ಯೂಪಸ್ತಂಭವು ಯಜ್ಞವೇದಿಯಲ್ಲಿ ಆಗ ತಾನೇ ಹೊತ್ತಿಸಿ ಧಗಧಗನೆ ಉರಿಯುತ್ತಿರುವ ಅಗ್ನಿಯ ಮುಂದುಗಡೆ ಇರುವುದನ್ನು ಸೂಚಿಸುವುದು. **ಬ್ರಹ್ಮ ವನ್ವಾನೋ ಅಜರಂ ಸುವೀರಂ** ಎಂಬ ವಾಕ್ಯವು ಯಜಮಾನನಿಗೆ ಮಂಗಳವನ್ನು ಕೋರುವುದಾಗಿರುವುದು. **ಆರೇ ಅಸ್ಮದಮತಿಂ ಬಾಧಮಾನಃ** ಎಂಬ ವಾಕ್ಯವು ನಮ್ಮ ಶತ್ರುಗಳನ್ನು ದೂರ ಓಡಿಸ ಬೇಕೆಂಬ ಪ್ರಾರ್ಥನೆ ಯನ್ನು ಸೂಚಿಸುವುದು. ಇಲ್ಲಿ ಅಮತಿಂ ಎಂಬ ಶಬ್ದಕ್ಕೆ ಹಸಿವು ಎಂಬ ಅರ್ಥವನ್ನು ಭಾಷ್ಯಕಾರರು ಹೇಳಿರು ವರು. **ಯಜ್ಞಾಚ್ಛೆ ಯಜಮಾನಾಚ್ಛೆ** ಎಂಬ ಶಬ್ದಗಳು ಯಜ್ಞ ನಡೆಯುತ್ತಿರುವ ಸ್ಥಳದಲ್ಲಿ ಯಜಮಾನ ಮುಂತಾದವರಿಗೆ ಶತ್ರುಗಳ ಭಯವಿಲ್ಲದಂತೆ ಮಾಡಬೇಕೆಂಬ ಪ್ರಾರ್ಥನೆಯನ್ನು ಸೂಚಿಸುವವು.

> **ಊರ್ಧ್ವ ಊ ಷು ಣ ಊತಯೇ ತಿಷ್ಠಾ ದೇವೋ ನ ಸವಿತೇತಿ ಯಥೈವ ದೇವಾನಾಂ ನೇತಿ ತದೇಷಾಮೋಮಿತಿ ತಿಷ್ಠ ದೇವ ಇವ ಸವಿತೇತ್ಯೇವ ತದಾಹ ಊರ್ಧ್ವೋ ವಾಜಸ್ಯ ಸನಿತೇತಿ ವಾಜಸನಿಮೇವೈನಂ ತದ್ಧನಸಾಂ ಸನೋತಿ ಯದಂಜಿಭಿರ್ವಾಘದ್ಭಿರ್ವಿಹ್ವಯಾಮಹ ಇತಿ ಛಂದಾಂಸಿ ವಾ ಅಂಜಯೋ ವಾಘತಸ್ತೈರೇತದ್ದೇವಾನ್ಯಜಮಾನಾ ವಿಹ್ವಯಂತೇ ಮಮ ಯಜ್ಞಮಾಗಚ್ಛತ ಮಮ ಯಜ್ಞಮಿತಿ ಯದಿ ಹ ವಾ ಅಪಿ ಬಹವ ಇವ ಯಜಂತೇಽಥ ಹಾಸ್ಯ ದೇವಾ ಯಜ್ಞಮೇವ ಗಚ್ಛಂತಿ ಯತ್ರೈವಂ ವಿದ್ವಾನೇತಾಮನ್ವಾಹ ॥**

ಅನಂತರ ಹೋತೃವು **ಊರ್ಧ್ವ ಊ ಷು ಣ ಊತಯೇ** (ಋ.ಸಂ. ೧-೩೬-೧೩) ಎಂಬ ಋಕ್ಕನ್ನು ಪಠಿಸುವನು. ಇದರ ಅರ್ಥವು–ಎಲೈ ಯೂಪನೇ, ಸೂರ್ಯದೇವನಂತೆ ಮೇಲೆ ಎದ್ದು ನೆಟ್ಟನೆ ನಿಲ್ಲು. ಎದ್ದು ನಿಂತಮೇಲೆ ನಾವು ನಾನಾವಿಧ ಛಂದಸ್ಸುಗಳಿಂದ ನಿನ್ನನ್ನು ಆಹ್ವಾನ ಮಾಡುತ್ತಲೂ, ಋತ್ವಿಕ್ಕುಗಳು ಘೃತಲೇಪನವನ್ನು ಮಾಡುತ್ತ ಯಜ್ಞವನ್ನು ನೆರವೇರಿಸುತ್ತಲೂ ಇರುವಾಗ ನೀನು ನಮಗೆ ಅನ್ನಾದ್ಯಾಹಾರವನ್ನು ಅನುಗ್ರಹಿಸು. ಇಲ್ಲಿ **ದೇವೋ ನ ಸವಿತಾ** ಎಂಬ ವಾಕ್ಯದಲ್ಲಿರುವ ನ ಎಂಬ ಶಬ್ದವು **ಇವ** ಎಂಬ ಅರ್ಥವನ್ನು ಹೇಳುವ ಉಪ ಮಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು. **ದೇವೋ ನ ಸವಿತಾ** ಎಂದರೆ **ದೇವ ಇವ** ಸವಿತಾ ಸೂರ್ಯದೇವ ನಂತೆ ಎಂದರ್ಥವು. ಹಾಗೆಯೇ ತದೇಷಾಮೋಮಿತಿ ಎಂಬ ವಾಕ್ಯದಲ್ಲಿರುವ ಓಂ ಎಂಬ ಶಬ್ದಕ್ಕೂ ಅರ್ಥಮಾಡ ಬೇಕು. **ಊರ್ಧ್ವೋ ವಾಜಸ್ಯ ಸನಿತಾ** ಎಂಬ ವಾಕ್ಯವು—ಎದ್ದು ನಿಂತು ನಮಗೆ ಅನ್ನಾದ್ಯಾಹಾರವನ್ನು ಕೊಡುವವನಾಗು ಎಂಬರ್ಥವನ್ನು **ಸೂಚಿಸುವುದು**. ಏಕೆಂದರೆ ಯೂಪವು ಆಹಾರವನ್ನು ಅನುಗ್ರಹಿಸಿಕೊಡು ವುದು ಎಂದು ಪ್ರಾರ್ಥಿಸಲಾಗಿದೆ. **ಯದಂಜಿಭಿರ್ವಾಘದ್ಭಿರ್ವಿಹ್ವಯಾಮಹೇ** ಎಂಬ ವಾಕ್ಯದಿಂದ ಆಜ್ಯಲೇಪನ ಮಾಡುತ್ತಿರುವ ಋತ್ವಿಕ್ಕುಗಳು ನಾನಾವಿಧ ಛಂದಸ್ಸುಗಳಿಂದ ಆಹ್ವಾನ ಮಾಡುವರೆಂಬ ಅರ್ಥವು ಸೂಚಿತವಾಗು ವುದು. ಇಲ್ಲ **ಅಂಜಯಃ—ಛಂದಾಂಸಿ** ಎಂದರೆ ನಾನಾವಿಧ ಛಂದಸ್ಸಿನ ಋಕ್ಕುಗಳು ಎಂದೂ **ವಾಘದ್ಭಿಃ—ವಾಘತಸ್ತೈರೇತದ್ದೇವಾನ್ಯಜಮಾನಾ ವಿಹ್ವಯಂತೇ, ಮಮ ಯಜ್ಞಮಾಗಚ್ಛತ ಮಮ ಯಜ್ಞಮಿತಿ**- ಎಂದರೆ ಯಜ್ಞಾನುಷ್ಠಾನ ಕರ್ಮಗಳಿಂದ ನಮ್ಮ (ನನ್ನ, ಯಜಮಾನನ) ಯಜ್ಞಕ್ಕೆ ಬರಬೇಕೆಂದು ಪದೇ ಪದೇ ಆಹ್ವಾನಮಾಡುತ್ತಿರುವ ಋತ್ವಿಕ್ಕುಗಳೆಂದಭಿಪ್ರಾಯವು. **ಏಕೆಂದರೆ** ಯಜ್ಞಮಾಡುವ ಯಜಮಾನರು ಅನೇಕ ರಿರುವರು. ಆದುದರಿಂದ ನನ್ನ ಯಜ್ಞಕ್ಕೆ ಬರಬೇಕು, ತನ್ನ ಯಜ್ಞಕ್ಕೆ ಬರಬೇಕು ಎಂದು ಯಾರು ಆಹ್ವಾನಮಾಡು ವರೋ ಅವರ ಯಜ್ಞಕ್ಕೆ ಮಾತ್ರ ದೇವತೆಗಳು ಹೋಗುವರು. ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಹೋತೃ ಗಳು ಮಂತ್ರಾದಿಗಳಿಂದ ಆಹ್ವಾನ ಮಾಡುವ ಯಜ್ಞಗಳಿಗೆ ದೇವತೆಗಳು ಹೋಗುವರೆಂದಭಿಪ್ರಾಯವು.

**ಊರ್ಧ್ವೋರ್ ನಃ ಪಾಹ್ಯಂಹಸೋ ನಿ ಕೇತುನಾ ವಿಶ್ವಂ ಸಮತ್ರಿಣಂ ದಹೇತಿ ರಕ್ಷಾಂಸಿ ವೈ ಪಾಪ್ಮಾತ್ರಿಣೋ ರಕ್ಷಾಂಸಿ ಪಾಪ್ಮಾನಂ ದಹೇತ್ಯೇವ ತದಾಹ ಕೃಧೀ ನ ಊರ್ಧ್ವಾಂ ಚರಥಾಯ ಜೀವಸ ಇತಿ ಯದಾಹ ಕೃಧೀ ನ ಊರ್ಧ್ವಾಂ ಚರಣಾಯ ಜೀವಸ ಇತ್ಯೇವ ತದಾಹ ಯದಿ ಹವಾ ಅಪಿ ನೀತ ಇವ ಯಜಮಾನೋ ಭವತಿ ಪರಿ ಹೈವೈನಂ ತತ್ಸಂವತ್ಸರಾಯ ದದಾತಿ ವಿದಾ ದೇವೇಷು ನೋ ದುವ ಇತ್ಯಾಶಿಷಮೇವಾಶಾಸ್ತೇ ॥**

ಅನಂತರ ಹೋತೃವು ಊರ್ಧ್ವೋರ್ ನಃ ಪಾಹ್ಯಂಹಸೋ ನಿ ಕೇತುನಾ (ಋ. ಸಂ. ೧-೩೬-೧೪) ಎಂಬ ಋಕ್ಕನ್ನು ಪಠಿಸುವನು. ಇದರ ಅರ್ಥವು—ಎಲೈ ಯೂಪವೇ, ನೀನು ಮೇಲೆದ್ದು ನಿಂತು ನಮ್ಮನ್ನು ತೊಂದರೆಯಿಂದ ಕಾಪಾಡು. ನಿನ್ನ ಕಿರಣಗಳಿಂದ (ಸಾಮರ್ಥ್ಯದಿಂದ) ರಾಕ್ಷಸಾದಿಗಳನ್ನು ದಹಿಸಿ ಭಸ್ಮಮಾಡು. ನಾವೂ ಎದ್ದು ತಿರುಗಾಡುವಂತೆ ಮಾಡು. ದೇವತೆಗಳ ದೂತನಾಗಿ ನಮ್ಮ ಹವಿರಾದಿಗಳನ್ನೂ ನಾವು ಅರ್ಪಿಸುವ ಪರಿಚರಣಾದಿಗಳನ್ನೂ ದೇವತೆಗಳಿಗೆ ತಿಳಿಯಪಡಿಸು. ಇಲ್ಲಿ ರಕ್ಷಾಂಸಿ ಎಂದರೆ ರಾಕ್ಷಸರು ಅಥವಾ ಪಾಪಗಳು, ದುಷ್ಕೃತಗಳು. ಇವುಗಳು ನಮ್ಮನ್ನು ಪೀಡಿಸದಂತೆ ದಹಿಸಿ ಭಸ್ಮಮಾಡು. **ಚರಥಾಯ ಜೀವಸೇ** ಎಂದರೆ ಸಂಚಾರ ಮಾಡುವುದಕ್ಕಾಗಿ ಮತ್ತು ಜೀವಿಸುವುದಕ್ಕಾಗಿ. ಒಂದು ವೇಳೆ ಯಜಮಾನನು ರಾಕ್ಷಸಾದಿಗಳಿಂದ ಆಗಲೇ ಬಾಧಿತನಾಗಿದ್ದರೆ ಆಗ ಆ ಬಾಧೆಯನ್ನು ಪರಿಹರಿಸಿ ಸಂವತ್ಸರಪೂರ್ತಿಯಾಗುವವರೆಗೂ ಎಂದರೆ ಅನೇಕಕಾಲದವರೆಗೆ ಜೀವಿಸಿರುವಂತೆ ಆಯುಷ್ಪ್ರದಾನಮಾಡಿ ರಕ್ಷಿಸಬೇಕೆಂದು ಆಶೀರ್ವಚನವನ್ನು ಪ್ರಾರ್ಥಿಸಲಾಗಿದೆ.

**ಜಾತೋ ಜಾಯತೇ ಸುದಿನತ್ವೇ ಅಹ್ನಾಮಿತಿ ಜಾತೋ ಹ್ಯೇಷ ಏತಜ್ಜಾಯತೇ ಸಮರ್ಯ ಆ ವಿದಥೇ ವರ್ಧಮಾನ ಇತಿ ವರ್ಧಯಂತ್ಯೇವೈನಂ ತತ್ಪುನಂತಿ ಧೀರಾ ಅಪಸೋ ಮನೀಷೇತಿ ಪುನಂತ್ಯೇವೈನಂ ತದ್ದೇವಯಾ ವಿಪ್ರ ಉದಿಯರ್ತಿ ವಾಚಮಿತಿ ದೇವೇಭ್ಯ ಏವೈನಂ ತನ್ನಿವೇದಯತಿ ।**

ಬಳಿಕ ಹೋತೃವು-ಜಾತೋ ಜಾಯತೇ ಸುದಿನತ್ವೇ ಅಹ್ನಾಂ (ಋ. ಸಂ. ೩-೮-೫) ಎಂಬ ಋಕ್ಕನ್ನು ಪಠಿಸುವನು. ಇದರ ಅರ್ಥವು—ಈ ಯೂಪವು ಹುಟ್ಟಿದ ಮೇಲೆ ಚೆನ್ನಾಗಿ ಬೆಳೆದು ಮನುಷ್ಯರು ಆಚರಿಸುವ ಯಜ್ಞಗಳಿಗೆ ಸಹಾಯಕನಾಗಿರುವುದು. ವಿವೇಕಿಗಳಾದವರು ಈ ಯೂಪವನ್ನು ಚತುರತೆಯಿಂದ ಅಲಂಕರಿಸುತ್ತಿರುವರು. ಈ ಯೂಪವು ದೇವದೂತನಂತೆ ತನ್ನ ಧ್ವನಿಯನ್ನು ಎತ್ತರಿಸಿ ದೇವತೆಗಳು ಕೇಳುವಂತೆ ಮಾಡುವುದು. ಇಲ್ಲಿ **ಜಾತೋ ಜಾಯತೇ ಸುದಿನತ್ವೇ ಅಹ್ನಾಂ** ಎಂಬ ವಾಕ್ಯದಿಂದ ಈ ಯೂಪವು ಮೊದಲು ಸಂಬೋಧಿತವಾಗುವುದರಿಂದ ಅದು ಈಗ ಉತ್ಪನ್ನವಾಯಿತೆಂದಭಿಪ್ರಾಯವು. **ಸಮರ್ಯ ಆ ವಿದಥೇ ವರ್ಧಮಾನಃ** ಎಂಬ ವಾಕ್ಯದಲ್ಲಿರುವ **ವರ್ಧಮಾನ** ಎಂಬ ಶಬ್ದವು ಈ ಯೂಪವು ಮೇಲಕ್ಕೆ ಎತ್ತಲ್ಪಟ್ಟು ನಿಲ್ಲಿಸಿರುವುದನ್ನು ಸೂಚಿಸುವುದು. **ಪುನಂತಿ ಧೀರಾ ಅಪಸೋ ಮನೀಷಾ** ಎಂಬ ವಾಕ್ಯವು ಈ ಯೂಪವನ್ನು ಬುದ್ಧಿವಂತರಾದ ಋತ್ವಿಜರು ಶುದ್ಧವಾಗುವಂತೆ ಮಾಡಿ ಆಜ್ಯಲೇಪನಾದಿಗಳಿಂದ ಸಂಸ್ಕರಿಸುವರು ಎಂಬಭಿಪ್ರಾಯವನ್ನು ಸೂಚಿಸುವುದು. **ದೇವಯಾ ವಿಪ್ರ ಉದಿಯರ್ತಿ ವಾಚಂ** ಎಂಬ ವಾಕ್ಯವು, ಈ ಯೂಪವು ದೇವತೆಗಳ ಕಾರ್ಯಕ್ಕಾಗಿ ಇಲ್ಲಿ ಸಿದ್ಧವಾಗಿರುವುದು ಎಂಬಭಿಪ್ರಾಯವನ್ನು **ವಾಚಮುದಿಯರ್ತಿ** ಎಂಬ ಶಬ್ದಗಳಿಂದ ತಿಳಿಯಪಡಿಸುವುದು.

**ಯುವಾ ಸುವಾಸಾಃ ಪರಿವೀತ ಅಗಾದಿತ್ಯುತ್ತಮಯಾ ಪರಿದಧಾತಿ ಸ ಉ ಶ್ರೇಯಾನ್ಭವತಿ ಜಾಯಮಾನ ಇತಿ ಶ್ರೇಯಾಂಚ್ಛ್ರೇಯಾನ್ ಹ್ಯೇಷ ಏತದ್ಭವತಿ ಜಾಯಮಾನಸ್ತಂ**

**ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ ಮನಸಾ ದೇವಯಂತ ಇತಿ ಯೇ ವಾ ಅನೂ-ಚಾನಾಸ್ತೇ ಕವಯಸ್ತ ಏವೈನಂ ತದುನ್ನಯಂತಿ ॥**

ಅನಂತರ ಹೋತೃವು ಕೊನೆಯದಾದ **ಯುವಾ ಸುವಾಸಾಃ ಪರಿವೀತ ಆಗಾತ್** (ಋ. ಸಂ. ೩-೮-೪) ಎಂಬ ಏಳನೆಯ ಋಕ್ಕನ್ನು ಪಠಿಸುವನು. ಈ ಋಕ್ಕಿನ ಪಠನದಿಂದ ಯೂಪಾಭ್ಯಂಜನ ಕರ್ಮವು ಸಮಾಪ್ತಿಗೊಳ್ಳುವುದು. ಈ ಋಕ್ಕಿನ ಅರ್ಥವು—ಈ ಯುವಕನು (ಯೂಪವು) ವಸ್ತ್ರಾದಿಗಳಿಂದ ಅಲಂಕೃತನಾಗಿ ಇಲ್ಲಿಗೆ ಬಂದಿರುವನು. ಈ ಯೂಪವು ಹುಟ್ಟಿ ಬೆಳೆಯುತ್ತಿರುವ ವೃಕ್ಷಗಳೆಲ್ಲೆಲ್ಲಾ ಶ್ರೇಷ್ಠವಾಗಿರುವುದು. ಬುದ್ಧಿವಂತರಾದ ಋತ್ವಿಕ್ಕುಗಳು ತಾವು ಮನಃಪೂರ್ವಕವಾಗಿಯೂ ಚೆನ್ನಾಗಿಯೂ ಪಠಿಸುವ ಮಂತ್ರಗಳ ಉಚ್ಚಾರಣೆಯಿಂದ ಈ ಯೂಪವನ್ನು ಎತ್ತಿ ನೆಟ್ಟಗೆ ನಿಲ್ಲಿಸುವರು. ಇಲ್ಲಿ **ಯುವಾ ಸುವಾಸಾಃ**— ವಸ್ತ್ರಾಲಂಕಾರಗಳಿಂದ ಶೋಭಿಸುವ ಯುವಕನೆಂದರೆ ಪ್ರಾಣವು. (ಜೀವವು) ಇದು ಶರೀರಾದ್ಯವಯವಗಳಿಂದ ಆಚ್ಛಾದಿತವಾಗಿರುವುದು. **ಸ ಉಶ್ರೇಯಾನ್ ಭವತಿ** ಎಂಬ ವಾಕ್ಯದಿಂದ ಈ ಯೂಪವು ಮಂತ್ರಪೂರ್ವವಾಗಿ ಚೆನ್ನಾಗಿ ಕಂಗೊಳಿಸುತ್ತಿರುವುದೆಂಬ ಅಭಿಪ್ರಾಯವು ಸೂಚಿತವಾಗುವುದು. **ಕವಯಃ** ಎಂದರೆ ಮಂತ್ರಗಳನ್ನು ಪಠಿಸುತ್ತಿರುವ ಬುದ್ಧಿವಂತರಾದ ಋತ್ವಿಗ್ಜನರು. ಇವರು ಈ ಮಂತ್ರಪಠನಪೂರ್ವಕವಾಗಿ ಈ ಯೂಪವನ್ನು ಎತ್ತಿ ನಿಲ್ಲಿಸುವರೆಂದಭಿಪ್ರಾಯವು.

**ತಾ ಏತಾಃ ಸಪ್ತಾನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸ-ಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ ತಾ ಏಕಾದಶ ಸಂಪದ್ಯಂತ ಏಕಾದಶಾಕ್ಷರಾ ವೈ ತ್ರಿಷ್ಟುಪ್ತ್ರಿಷ್ಟು-ಬಿಂದ್ರಸ್ಯ ವಜ್ರ ಇಂದ್ರಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾ-ಯಾವಿಸ್ರಂಸಾಯ ॥**

ಹೋತೃವು ಈ ಏಳು ಮಂತ್ರಗಳನ್ನು ಪಠಿಸುವನು. ಅದರಿಂದ ಈ ಯೂಪಾಂಜನಕರ್ಮವು ಯಥಾವಿಧಿಯಾಗಿ ನೆರವೇರಿದಂತಾಯಿತು. ಆಯಾ ಕಾಲದಲ್ಲಿ ಆಯಾ ಋಕ್ಕನ್ನು ಪಠಿಸುವುದರಿಂದ ಸಮಯೋಚಿತವಾದ ಮಂತ್ರಗಳು ಪಠಿಸಿದಂತಾಗಿ ಯಜ್ಞಕರ್ಮವು ಯಶಸ್ವಿಯಾಗಿ ನೆರವೇರಿಸಲ್ಪಡುವುದು. ಈ ಏಳು ಋಕ್ಕುಗಳಲ್ಲಿ ಹೋತೃವು ಮೊದಲನೆಯ ಋಕ್ಕನ್ನೂ ಕೊನೆಯ ಋಕ್ಕನ್ನೂ ಮೂರು ಮೂರು ಸಲ ಪಠಿಸುವನು ಇದರಿಂದ ಒಟ್ಟು ಹನ್ನೊಂದು ಋಕ್ಕುಗಳನ್ನು ಪಠಿಸಿದಂತಾಗುವುದು. ಏಕೆಂದರೆ ತ್ರಿಷ್ಟುಪ್ ಛಂದಸ್ಸಿನ ಪಾದದಲ್ಲಿ ಹನ್ನೊಂದಕ್ಷರಗಳಿರುವವು. ತ್ರಿಷ್ಟುಪ್ ಛಂದಸ್ಸೇ ಇಂದ್ರನ ವಜ್ರಾಯುಧವು. ಈ ಮಂತ್ರಗಳು ಇಂದ್ರನಲ್ಲಿ ಅಧಿಷ್ಠಿತಗಳಾಗಿರುವುದು. ಆದುದರಿಂದ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಯಾವ ಪುರುಷನು ಈ ಏಳು ಋಕ್ಕುಗಳಲ್ಲಿ ಮೊದಲನೆಯ ಮತ್ತು ಏಳನೆಯ (ಕೊನೆಯ) ಋಕ್ಕುಗಳನ್ನು ಮೂರು ಮೂರಾವರ್ತಿ ಪಠಿಸುವನೋ ಅವನು ತನ್ನ ಕೈಯಿಂದ ಯಜ್ಞಕರ್ಮವು ಜಾರಿಹೋಗದಂತೆಯೂ ಸ್ಥಿರವಾಗಿ ನಿಲ್ಲುವಂತೆಯೂ ಬಂಧಿಸುವನು ಎಂದರೆ ಯಜ್ಞಕರ್ಮವು ನಿರ್ವಿಘ್ನವಾಗಿ ನಡೆಯುವುದು ಎಂದಭಿಪ್ರಾಯವು.

ಯಜ್ಞಸಮಾಪ್ತಿಯಾದನಂತರ ಯೂಪವು ಹಾಗೆಯೇ ನಿಂತಿರಬೇಕೇ ಅಥವಾ ಅದನ್ನೂ ಅಗ್ನಿಯಲ್ಲಿ ಹಾಕಬೇಕೇ ಎಂಬ ವಿಷಯದಲ್ಲಿ ಕೆಲವರು—ಪಶುವನ್ನಪೇಕ್ಷಿಸುವ ಯಜಮಾನರು ಅದನ್ನು ಅಗ್ನಿಯಲ್ಲಿ ಹಾಕದೆ ಹಾಗೆಯೇ ನಿಂತಿರುವಂತೆ ಬಿಡಬೇಕೆಂದು ಹೇಳುವರು. ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು.

ಮತ್ತು ಯೂಪವನ್ನು ಯಾವರೀತಿ ವಿನಿಯೋಗಿಸಬೇಕೆಂಬ ವಿಷಯದಲ್ಲಿ ಜಿಜ್ಞಾಸೆಯು ಇರುವುದರಿಂದ ಅದನ್ನು ಈ ಐತರೇಯ ಬ್ರಾಹ್ಮಣದಲ್ಲಿ (ಐ. ಬ್ರಾ. ೨-೩) ವಿಶದಪಡಿಸಿರುವುದು—

ದೇವೇಭ್ಯೋ ವೈ ಪಶವೋಽನ್ನಾದ್ಯಾಯಾಲಂಭಾಯ ನಾತಿಷ್ಠಂತ ತೇಽಪಕ್ರಮ್ಯ ಪ್ರತಿ-ವಾವದತೋಽತಿಷ್ಠನ್ನಾಸ್ಮಾನಾಲಪ್ಸ್ಯಧ್ವೇ ನಾಸ್ಮಾನಿತಿ ತತೋ ವೈ ದೇವಾ ಏತಂ ಯೂಪಂ ವಜ್ರಮಪಶ್ಯಂಸ್ತಮೇಭ್ಯ ಉದಶ್ರಯಂಸ್ತಸ್ಮಾದ್ಬಿಭ್ಯತ ಉಪಾವರ್ತಂತ ತಮೇವಾದ್ಯಾಪ್ಯುಪಾವೃತ್ತಾಸ್ತತೋ ವೈ ದೇವೇಭ್ಯಃ ಪಶವೋಽನ್ನಾದ್ಯಾಯಾಲಂ-ಭಾಯಾತಿಷ್ಠಂತ ತಿಷ್ಠಂತೇಽಸ್ಮೈ ಪಶವೋಽನ್ನಾದ್ಯಾಯಾಲಂಭಾಯ ಯ ಏವಂ ವೇದ ಯಸ್ಯ ಚೈವಂ ವಿದುಷೋ ಯೂಪಸ್ತಿಷ್ಠತಿ ಅನು ಪ್ರಹರೇತ್ಸ್ವರ್ಗಕಾಮಸ್ಯ ತಮು ಹ ಸ್ಮೈತಂ ಪೂರ್ವೇಽನ್ವೇವ ಪ್ರಹರಂತಿ ।

ಒಂದಾನೊಂದು ಕಾಲದಲ್ಲಿ ದೇವತೆಗಳು ತಮಗೆ ಇಷ್ಟಬಂದಂತೆ ಪಶುಗಳನ್ನು ಸ್ವೀಕರಿಸಲು ಸಾಧ್ಯವಾಗದಂತೆ ಪಶುಗಳು ದೇವತೆಗಳಿಂದ ದೂರ ಓಡಿಹೋದವು. ಸ್ವಲ್ಪದೂರ ಹೋಗಿ, ಅಲ್ಲಿ ನಿಂತುಕೊಂಡು ದೇವತೆಗಳನ್ನು ದ್ದೇಶಿಸಿ ಎಲೈ ದೇವತೆಗಳೇ, ನೀವು ನಮ್ಮನ್ನು ಹೊಂದಲಾರಿರಿ ಎಂದರೆ ನಾವು ನಿಮಗೆ ಸಿಕ್ಕುವವರಲ್ಲ ಎಂದು ನುಡಿದವು. ಅದನ್ನು ಕೇಳಿ ದೇವತೆಗಳಿಗೆ ಯಜ್ಞದಲ್ಲಿ ತಾವು ನೆಟ್ಟಿದ್ದ ಯೂಪಸ್ತಂಭದ ಜ್ಞಾಪಕಬಂದು ಅದನ್ನು ನೋಡಿದರು. ಇದರಿಂದ ಪಶುಗಳು ಹೆದರಿ ದೇವತೆಗಳಿಗೆ ಅಭಿಮುಖವಾಗಿ ಬಂದು ನಿಂತುಕೊಂಡವು ಈ ಕಾರಣಕ್ಕಾಗಿಯೇ ಈಗಲೂ ಕೂಡ ಯಜ್ಞದಲ್ಲಿ ಪಶುಗಳನ್ನು ಯೂಪಾಭಿಮುಖವಾಗಿ ನಿಲ್ಲುವಂತೆ ಕಟ್ಟು ವುದು ರೂಢಿಯಲ್ಲಿದೆ. ಹೀಗೆ ತಮ್ಮೆದುರಿಗೆ ಓಡಿಹೋಗದೆ ಸುಮ್ಮನೆ ನಿಂತುಕೊಂಡ ಪಶುಗಳನ್ನು ದೇವತೆಗಳು ತಮ್ಮ ಆಹಾರಕ್ಕಾಗಿ ಸ್ವೀಕರಿಸಿದರು. ಈ ವಿಷಯವನ್ನು ಚೆನ್ನಾಗಿ ತಿಳಿದ ಯಜಮಾನನ ಪಶುಗಳು ಎತ್ತರ ವಾಗಿ ನೆಟ್ಟಿರುವ ಯೂಪದ ಬಳಿ ತಂಟೆಮಾಡದೆ ದೇವತೆಗಳ ಸ್ವೀಕಾರಕ್ಕಾಗಿ ಸುಮ್ಮನೆ ನಿಂತಿರುವವು. ಆದು ದರಿಂದ ಪಶುಗಳು ಬೇಕೆಂದು ಅಪೇಕ್ಷಿಸುವ ಯಜಮಾನನು ಯಜ್ಞದ ಯೂಪಸ್ತಂಭವನ್ನು ಕೀಳದೆ ಹಾಗೆಯೇ ನಿಂತಿರುವಂತೆ ಬಿಟ್ಟಿರಬೇಕು. ಆದರೆ ಸ್ವರ್ಗವನ್ನು ಅಪೇಕ್ಷಿಸುವ ಯಜಮಾನನ ಪರವಾಗಿ ಅಧ್ವರ್ಯುವು ಯೂಪಸ್ತಂಭವನ್ನು ಕಿತ್ತು ಅಗ್ನಿಯಲ್ಲಿ ಹಾಕುವನು. ಏಕೆಂದರೆ ಹಿಂದೆ ಅನೇಕ ಯಜಮಾನರು ಯಜ್ಞದಲ್ಲಿ ಪಶುವನ್ನು ಕಟ್ಟುವ ಕರ್ಮವು ಪೂರ್ತಿಯಾದ ಮೇಲೆ ಅವುಗಳನ್ನು ಕಿತ್ತು ಅಗ್ನಿಯಲ್ಲಿ ಹಾಕುತ್ತಿದ್ದರು. ಏಕೆಂದರೆ, ಯಜಮಾನನೇ ಯೂಪವು, ಯಜಮಾನನೇ ಪ್ರಸ್ತರವೆಂಬ ದರ್ಭೆಗಳು, ಅಗ್ನಿಯು ದೇವತೆಗಳ ಯೋನಿಯು (ಉತ್ಪತ್ತಿಸ್ಥಾನವು) ಎಂದು ಹೇಳಲ್ಪಟ್ಟಿರುವುದು. ಈರೀತಿ ಆಹುತಿಯನ್ನು ಅರ್ಪಿಸುವುದರಿಂದ ಯಜಮಾನನು ಸ್ವರ್ಣಶರೀರಧಾರಿಯಾಗಿ ದೇವತೆಗಳ ಸ್ಥಾನವಾದ ಸ್ವರ್ಗಲೋಕಕ್ಕೆ ಹೋಗುವನು.

ಅಥ ಯೋ ತೇಭ್ಯೋಽವರ ಅಸಂಸ್ತ ಏತಂ ಸ್ವರುಮಪಶ್ಯನ್ಯೂಪಶಕಲಂ ತಂ ತಸ್ಮಿನ್ಕಾಲೇಽ-ನುಪ್ರಹರೇತ್ತತ್ರ ಸ ಕಾಮ ಉಪಾಪ್ತೋ ಯೋಽನುಪ್ರಹರಣೇ ತತ್ರ ಸ ಕಾಮ ಉಪಾ-ಪ್ತೋ ಯಃ ಸ್ಥಾನೇ ॥

ಪೂರ್ವಕಾಲದಲ್ಲಿದ್ದ ಯಜ್ಞಮಾಡುವ ಯಜಮಾನರು ಎಂದರೆ ಪ್ರಸಿದ್ಧರಾದ ಋಷಿಗಳಲ್ಲದೆ ಯಜ್ಞಮಾಡುವ ಇತರ ಯಜಮಾನರು ಯೂಪಸ್ತಂಭಕ್ಕೆ ಬದಲಾಗಿ ಯೂಪದ ಒಂದು ಸಣ್ಣ ಚೂರು ಅಥವಾ ಚಕ್ಕೆಯೇ ಯೂಪದ ಪ್ರತಿನಿಧಿಯಾಗಿರುವುದೆಂದೂ ಆದುದರಿಂದ ದೊಡ್ಡದಾಗಿರುವ ಯೂಪಕ್ಕೆ ಬದಲಾಗಿ ಯೂಪದ

ಒಂದು ಸಣ್ಣಚಕ್ಕೆಯನ್ನೇ ಹೋಮಮಾಡದಲ್ಲಿ ಪೂರ್ತಾ ಯೂಪವನ್ನೇ ಹೋಮಮಾಡಿದಂತೆ ಆಗುವುದೆಂದೂ ತಿಳಿದಿದ್ದರು. ಆದುದರಿಂದ ಅಗ್ನಿಯಲ್ಲಿ ಯೂಪಪ್ರಹರಣಮಾಡುವುದರಿಂದ ಯಾವ ಯಾವ ಇಷ್ಟಾರ್ಥಗಳು ಸಿದ್ಧಿಸುವವೋ ಅವೆಲ್ಲವೂ ಯೂಪದ ಒಂದು ಸಣ್ಣ ತುಂಡನ್ನೇ ಹೋಮಮಾಡುವುದರಿಂದ ಉಂಟಾಗುವುದು. ಆದುದರಿಂದ ಯೂಪಪ್ರಹರಣಕ್ಕೆ ಬದಲಾಗಿ ಸ್ವರು ಅಥವಾ ಯೂಪಶಕಲವನ್ನು (ಯೂಪದ ಒಂದು ಸಣ್ಣ ತುಂಡು) ಹೋಮ ಮಾಡುವುದೇ ರೂಢಿಯಲ್ಲಿ ಬಂದಿತು. ಈ ವಿಷಯದಲ್ಲಿ ಯಜುರ್ವೇದದ ತೈತ್ತಿರೀಯ ಸಂಹಿತೆಯು—

> ದೇವಾ ವೈ ಸಗ್ಂಸ್ಥಿತೇ ಸೋಮೇ ಪ್ರಸ್ರುಚೋಽಹರನ್ಪ್ರ ಯೂಪಂ ತೇಽಮನ್ಯಂತ ಯಜ್ಞವೇಶಸಂ ವಾ ಇದಂ ಕುರ್ಮ ಇತಿ ತೇ ಪ್ರಸ್ತರಗ್ಂಸ್ರುಚಾಂ ನಿಷ್ಕ್ರಯಣಮಪಶ್ಯನ್ ಸ್ವರುಂ ಯೂಪಸ್ಯ ಸಗ್ಂಸ್ಥಿತೇ ಸೋಮೇ ಪ್ರ ಪ್ರಸ್ತರಗ್ಂ ಹರತಿ ಜುಹೋತಿ ಸ್ವರುಮ-ಯಜ್ಞವೇಶಸಾಯ. (ತೈ. ಸಂ. ೬-೩-೪-೯).

ಎಂದು ಹೇಳಿರುವುದು. ಯೂಪಪ್ರಹರಣದ ವಿಷಯದಲ್ಲಿ ಆಪಸ್ತಂಬಶ್ರೌತ ಸೂತ್ರದಲ್ಲಿ ಜುಹ್ವಾಂ ಸ್ವರುಮವ-ದಾಯಾನೂಯಾಜಾಂತೇ ಜುಹೋತಿ ದ್ಯಾಂ ತೇ ಧೂಮೋ ಗಚ್ಛತು ಎಂದರೆ ಅನೂಯಾಜಮಂತ್ರಪಠನಾನಂತರ ಸ್ವರು ಅಥವಾ ಯೂಪಶಕಲವನ್ನು ಜುಹೂನಲ್ಲಿ (ಹೋಮ ಮಾಡುವ ಮರದ ಸೌಟು) ಇಟ್ಟು ದ್ಯಾಂ ತೇ ಧೂಮೋ ಗಚ್ಛತು ಎಂದು ಪಠಿಸಿ ಹೋಮಮಾಡಬೇಕು ಎಂದು ಹೇಳಿರುವುದು. ಆದುದರಿಂದ ಸ್ವರು ಅಥವಾ ಯೂಪಶಕಲವನ್ನು ಹೋಮ ಮಾಡುವುದರಿಂದ ಯೂಪವನ್ನು ಪೂರ್ತಾ ಹೋಮ ಮಾಡಿದ ಫಲವೂ ಮತ್ತು ಯೂಪವನ್ನು ಹೋಮ ಮಾಡದೆ ಹಾಗೇಯೇ ಬಿಟ್ಟಿದ್ದರೆ ಉಂಟಾಗುವ ಪಶುಪ್ರಾಪ್ತಿ ಮೊದಲಾದ ಫಲವೂ ಸಹ ಲಭಿಸುವುದೆಂದು ತಾತ್ಪರ್ಯವು.

ಇದುವರೆಗೂ ಹೇಳಿದ ವಿಷಯಗಳೆಲ್ಲವೂ ಹೋತೃ ಅಥವಾ ಹೋತೃವರ್ಗದ ಋತ್ವಿಕ್ಕುಗಳು ನೆರವೇರಿಸಬೇಕಾದ ಯೂಪಪ್ರತಿಷ್ಠಾಪನಾ ಕ್ರಮವು. ಇದಲ್ಲದೆ ಅಧ್ವರ್ಯು ಮೊದಲಾದವರು ಯೂಪಸ್ಥಾಪನವಿಷಯದಲ್ಲಿ ನೆರವೇರಿಸಬೇಕಾದ ಇನ್ನೂ ಕೆಲವು ವಿಧಿಗಳಿರುವವು. ಅವುಗಳು ತೈ. ಸಂ. ೧-೩-೫ ಮತ್ತು ೧-೩-೬; ೬-೩-೩; ೬-೩-೪ ಎಂಬ ಅನುವಾಕಗಳಲ್ಲಿ ಉಕ್ತವಾಗಿರುವುದು. ಇವುಗಳಲ್ಲಿ ಮೊದಲನೆಯ ಅನುವಾಕವು ಎಂದರೆ ೧-೩-೫ ಯೂಪಚ್ಛೇದವನ್ನೂ ೧-೩-೬ ಯೂಪಸ್ಥಾಪನವನ್ನೂ ೬-೩-೩ ಯೂಪವಿಧಿಯನ್ನೂ ೬-೩-೪ ಯೂಪಪ್ರೋಕ್ಷಣಾದಿ ವಿಧಿಗಳನ್ನೂ ವಿವರಿಸುವವು. ಮೊದಲಿನ ಎರಡು ಅನುವಾಕಗಳಲ್ಲಿ ಯೂಪವಿಧಿಯ ಮಂತ್ರಗಳು ಮಾತ್ರವಿರುವವು. ಕೊನೆಯ ಎರಡು ಅನುವಾಕಗಳಲ್ಲಿ ಮೊದಲನೆಯ ಅನುವಾಕಗಳ ಬ್ರಾಹ್ಮಣವಿರುವುದು ಎಂದರೆ ಆ ಮಂತ್ರಗಳಿಗೆ ವಿನಿಯೋಗವನ್ನೂ ಅವುಗಳ ಅರ್ಥವನ್ನೂ ಹೇಳಿರುವುದು. ಆದುದರಿಂದ ಮೊದಲಿನ ಎರಡು ಅನುವಾಕಗಳ ಮೂಲವನ್ನು ಮಾತ್ರ ಹೇಳಿ ಕೊನೆಯ ಎರಡು ಅನುವಾಕಗಳಿಗೆ ಅರ್ಥವನ್ನು ವಿವರಿಸುವೆವು.

ಯೂಪಚ್ಛೇದ ಮತ್ತು ಯೂಪಸ್ಥಾಪನ ಮಂತ್ರಗಳು.

> ಅತ್ಯನ್ಯಾನಗಾನ್ನಾನ್ಯಾನುಪಾಗಾಮರ್ವಾಕ್ತ್ವಾ ಪರೈರವಿದಂ ಪರೋವರೈಸ್ತಂ ತ್ವಾ ಜುಷೇ ವೈಷ್ಣವಂ ದೇವಯಜ್ಯಾಯೈ ದೇವಸ್ತ್ವಾ ಸವಿತಾ ಮಧ್ವಾನಕ್ತ್ವೋಷಧೇ ತ್ರಾಯಸ್ವೈನಗ್ಂ ಸ್ವಧಿತೇ ಮೈನಗ್ಂ ಹಿಗ್ಂಸೀರ್ದಿವಮಗ್ರೇಣ ಮಾ ಲೇಖೀರಂತರಿಕ್ಷಂ

ಮಧ್ಯೇನ ಮಾ ಹಿಗ್ಂಸೀಃ ಪೃಥಿವ್ಯಾ ಸಂಭವ ವನಸ್ಪತೇ ಶತವಲ್ಶೋ ವಿ ರೋಹ ಸಹಸ್ರವಲ್ಶಾ ವಿ ವಯಗ್ಂ ರುಹೇಮ ಯಂ ತ್ವಾ ಯಗ್ಂಸ್ವಧಿತಿಸ್ತೇತಿಜಾನಃ ಪ್ರಣಿನಾಯ ಮಹತೇ ಸೌಭಗಾಯಾಚ್ಛಿನ್ನೋ ರಾಯಸ್ಸುವೀರಃ ॥

(ತೈ. ಸಂ. ೧-೩-೫)

ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವಾ ಶುಂಧತಾಂ ಲೋಕಃ ಪಿತೃಷದನೋ ಯವೋಽಸಿ ಯವಯಾಸ್ಮದ್ದ್ವೇಷೋ ಯವಯಾರಾತೀಃ ಪಿತೃಣಾಗ್ಂ ಸದನಮಸಿ ಸ್ವಾವೇಶೋಽಸ್ಯಗ್ರೇಗಾ ನೇತೃಣಾಂ ವನಸ್ಪತಿರಧಿ ತ್ವಾ ಸ್ಥಾಸ್ಯತಿ ತಸ್ಯ ವಿತ್ತಾದ್ದೇವಸ್ತ್ವಾ ಸವಿತಾ ಮಧ್ವಾನಕ್ತು ಸುಪಿಪ್ಪಲಾಭ್ಯಸ್ತ್ವೌಷಧೀಭ್ಯ ಉದ್ದಿವಗ್ಂ ಸ್ತಭಾನಾಂತರಿಕ್ಷಂ ಪೃಣ ಪೃಥಿವೀಮುಪರೇಣ ದೃಗ್ಂಹ ತೇ ತೇ ಧಾಮಾನ್ಯುಶ್ಮಸಿ ಗಮಧ್ಯೇ ಗಾವೋ ಯತ್ರ ಭೂರಿಶೃಂಗಾ ಅಯಾಸಃ । ಅತ್ರಾಹ ತದುರುಗಾಯಸ್ಯ ವಿಷ್ಣೋಃ ಪರಮಂ ಪದಮವ ಭಾತಿ ಭೂರೇಃ । ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ । ಇಂದ್ರಸ್ಯ ಯುಜ್ಯಸ್ಸಖಾ । ತದ್ವಿಷ್ಣೋಃ ಪರಮಂ ಪದಗ್ಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ । ಬ್ರಹ್ಮವನಿಂ ತ್ವಾ ಕ್ಷತ್ರವನಿಗ್ಂ ಸುಪ್ರಜಾವನಿಗ್ಂ ರಾಯಸ್ಪೋಷವನಿಂ ಪರ್ಯೂಹಾಮಿ ಬ್ರಹ್ಮ ದೃಗ್ಂಹ ಕ್ಷತ್ರಂ ದೃಗ್ಂಹ ಪ್ರಜಾಂ ದೃಗ್ಂಹ ರಾಯಸ್ಪೋಷಂ ದೃಗ್ಂಹ ಪರಿವೀರಸಿ ಪರಿ ತ್ವಾ ದೈವೀರ್ವಿಶೋ ವ್ಯಯಂತಾಂ ಪರೀಮಗ್ಂ ರಾಯಸ್ಪೋಷೋ ಯಜಮಾನಂ ಮನುಷ್ಯಾ ಅಂತರಿಕ್ಷಸ್ಯ ತ್ವಾ ಸಾನಾವವ ಗೂಹಾಮಿ ॥

(ತೈ. ಸಂ. ೧-೩-೬).

ಮೇಲಿನ ಮಂತ್ರಗಳಿಗೆ ಬ್ರಾಹ್ಮಣರೂಪದಲ್ಲಿರುವ ಎಂದರೆ ಅರ್ಥವಿನಿಯೋಗಾದಿಗಳನ್ನು ವಿವರಿಸುವ ಎರಡು ಅನುವಾಕಗಳು ತೈ. ಸಂ. ಆರನೆಯ ಕಾಂಡದ ಮೂರನೆಯ ಪ್ರಪಾಠಕದಲ್ಲಿರುವುದನ್ನು ಇಲ್ಲಿ ಅರ್ಥಸಹಿತವಾಗಿ ವಿವರಿಸಲಾಗಿರುವುದು—

ವೈಷ್ಣವ್ಯರ್ಚಾ ಹುತ್ವಾ ಯೂಪಮಚ್ಛೈತಿ ವೈಷ್ಣವೋ ವೈ ದೇವತಯಾ ಯೂಪಃ ಸ್ವಯೈವೈನಂ ದೇವತಯಾಚ್ಛೈತ್ಯತ್ಯನ್ಯಾನಗಾಂ ನಾನ್ಯಾನುಪಾಗಾಮಿತ್ಯಾಹಾತಿ ಹ್ಯನ್ಯಾನೇತಿ ನಾನ್ಯಾನುಪೈತ್ಯರ್ವಾಕ್ತ್ವಾ ಪರೈರವಿದಂ ಪರೋವರೈರಿತ್ಯಾಹಾರ್ವಾಗ್ಘ್ಯೇನಂ ಪರೈರ್ವಿಂದತಿ ಪರೋವರೈ ಸ್ತಂ ತ್ವಾ ಜುಷೇ ವೈಷ್ಣವಂ ದೇವಯಜ್ಯಾಯಾ ಇತ್ಯಾಹ ದೇವಯಜ್ಯಾಯೈ ಹ್ಯೇನಂ ಜುಷತೇ ದೇವಸ್ತ್ವಾ ಸವಿತಾ ಮಧ್ವಾನಕ್ತ್ವಿತ್ಯಾಹ ತೇಜಸೈವೈನಮನಕ್ತ್ಯೋಷಧೇ ತ್ರಾಯಸ್ವೈನಗ್ಂ ಸ್ವಧಿತೇ ಮೈನಗ್ಂ ಹಿಗ್ಂಸೀರಿತ್ಯಾಹ ವಜ್ರೋ ವೈ ಸ್ವಧಿತಿಃ ಶಾಂತ್ಯೈ ಸ್ವಧಿತೇರ್ವೃಕ್ಷಸ್ಯ ಬಿಭ್ಯತಃ ಪ್ರಥಮೇನ ಶಕಲೇನ ಸಹ ತೇಜಃ ಪರಾ ಪತತಿ ಯಃ ಪ್ರಥಮಃ ಶಕಲಃ ಪರಾಪತೇತ್ತಮಪ್ಯಾ ಹರೇತ್ಸತೇಜಸಮೇವೈನಮಾ ಹರತೀಮೇ ವೈ ಲೋಕಾ ಯೂಪಾತ್ಪ್ರಯತೋ ಬಿಭ್ಯತಿ ದಿವಮಗ್ರೇಣ ಮಾ ಲೇಖೀರಂತರಿಕ್ಷಂ ಮಧ್ಯೇನ ಮಾ ಹಿಗ್ಂಸೀರಿತ್ಯಾಹೈಭ್ಯ ಏವೈನಂ ಲೋಕೇಭ್ಯಃ ಶಮಯತಿ ವನಸ್ಪತೇ ಶತವಲ್ಶೋ ವಿ ರೋಹೇತ್ಯಾವ್ರಶ್ಚನೇ ಜುಹೋತಿ ತಸ್ಮಾದಾವ್ರಶ್ಚನಾದ್ವೃಕ್ಷಾಣಾಂ

ಭೂಯಾಗ್ಂಸ ಉತ್ತಿಷ್ಠಂತಿ ಸಹಸ್ರವಲ್ಶಾ ವಿ ವಯಗ್ಂ ರುಹೇಮೇತ್ಯಾಹಾಶಿಷಮೇ-
ವೈತಾಮಾ ಶಾಸ್ತೇಽನಕ್ಷಸಂಗಂ ವೃಶ್ಚೇದ್ಯದಕ್ಷಸಂಗಂ ವೃಶ್ಚೇದಧ ಈಷಂ ಯಜಮಾನಸ್ಯ
ಪ್ರಮಾಯುಕಗ್ಂ ಸ್ಯಾದ್ಯಂ ಕಾಮಯೇತಾಪ್ರತಿಷ್ಠಿತಃ ಸ್ಯಾದಿತ್ಯಾರೋಹಂ ತಸ್ಮೈ
ವೃಶ್ಚೇದೇಷ ವೈ ವನಸ್ಪತೀನಾಮಪ್ರತಿಷ್ಠಿತೋಽಪ್ರತಿಷ್ಠಿತ ಏವ ಭವತಿ ಯಂ ಕಾಮ-
ಯೇತಾಪಶುಃ ಸ್ಯಾದಿತ್ಯಪರ್ಣಂ ತಸ್ಮೈ ಶುಷ್ಕಾಗ್ರಂ ವೃಶ್ಚೇದೇಷ ವೈ ವನಸ್ಪತೀನಾಮ
ಪಶವ್ಯೋಽಪಶುರೇವ ಭವತಿ ಯಂ ಕಾಮಯೇತ ಪಶುಮಾನ್ಸ್ಯಾದಿತಿ ಬಹುಪರ್ಣಂ
ತಸ್ಮೈ ಬಹುಶಾಖಂ ವೃಶ್ಚೇದೇಷ ವೈ ವನಸ್ಪತೀನಾಂ ಪಶವ್ಯಃ ಪಶುಮಾನೇವ ಭವತಿ
ಪ್ರತಿಷ್ಠಿತಂ ವೃಶ್ಚೇತ್ಪ್ರತಿಷ್ಠಾಕಾಮಸ್ಯೈಷ ವೈ ವನಸ್ಪತೀನಾಂ ಪ್ರತಿಷ್ಠಿತೋ ಯಃ
ಸಮೇ ಭೂಮ್ಯೈ ಸ್ವಾದ್ಯೋನೇರೂಢಃ ಪ್ರತ್ಯೇವ ತಿಷ್ಠತಿ ಯಃ ಪ್ರತ್ಯಙ್ಙುಪನತಸ್ತಂ
ವೃಶ್ಚೇತ್ಸ ಹಿ ಮೇಧಮಭ್ಯುಪನತಃ ಪಂಚಾರತ್ನಿಂ ತಸ್ಮೈ ವೃಶ್ಚೇದ್ಯಂ ಕಾಮಯೇ-
ತೋಪೈನಮುತ್ತರೋ ಯಜ್ಞೋ ನಮೇದಿತಿ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞ
ಉಪೈನಮುತ್ತರೋ ಯಜ್ಞೋ ನಮತಿ ಷಡರತ್ನಿಂ ಪ್ರತಿಷ್ಠಾಕಾಮಸ್ಯ ಷಡ್ವಾ ಋತವ
ಋತುಷ್ವೇವ ಪ್ರತಿ ತಿಷ್ಠತಿ ಸಪ್ತಾರತ್ನಿಂ ಪಶುಕಾಮಸ್ಯ ಸಪ್ತಪದಾ ಶಕ್ವರೀ ಪಶವಃ
ಶಕ್ವರೀ ಪಶೂನೇವಾವ ರುಂಧೇ ನವಾರತ್ನಿಂ ತೇಜಸ್ಕಾಮಸ್ಯ ತ್ರಿವೃತಾ ಸ್ತೋಮೇನ
ಸಂಮಿತಂ ತೇಜಸ್ತ್ರಿವೃತ್ತೇಜಸ್ವ್ಯೇವ ಭವತ್ಯೇಕಾದಶಾರತ್ನಿಮಿಂದ್ರಿಯಕಾಮಸ್ಯೈಕಾದ-
ಶಾಕ್ಷರಾ ತ್ರಿಷ್ಟುಗಿಂದ್ರಿಯಂ ತ್ರಿಷ್ಟುಗಿಂದ್ರಿಯಾವ್ಯೇವ ಭವತಿ ಪಂಚದಶಾರತ್ನಿಂ ಭ್ರಾತೃ-
ವ್ಯವತಃ ಪಂಚದಶೋ ವಜ್ರೋ ಭ್ರಾತೃವ್ಯಾಭಿಭೂತ್ಯೈ ಸಪ್ತದಶಾರತ್ನಿಂ ಪ್ರಜಾಕಾಮಸ್ಯ
ಸಪ್ತದಶಃ ಪ್ರಜಾಪತಿಃ ಪ್ರಜಾಪತೇರಾಪ್ತ್ಯೈ ಏಕವಿಗ್ಂಶತ್ಯರತ್ನಿಂ ಪ್ರತಿಷ್ಠಾಕಾಮ-
ಸ್ಯೈಕವಿಗ್ಂಶಃ ಸ್ತೋಮಾನಾಂ ಪ್ರತಿಷ್ಠಾ ಪ್ರತಿಷ್ಠಿತ್ಯಾ ಅಷ್ಟಾಶ್ರಿರ್ಭವತ್ಯಷ್ಟಾಕ್ಷರಾ
ಗಾಯತ್ರೀ ತೇಜೋ ಗಾಯತ್ರೀ ಗಾಯತ್ರೀ ಯಜ್ಞಮುಖಂ ತೇಜಸೈವ ಗಾಯತ್ರಿಯಾ
ಯಜ್ಞಮುಖೇನ ಸಂಮಿತಃ ॥ (ತೈ. ಸಂ. ೬-೩-೩).

### ಯೂಪಸ್ಥಾಪನವಿಧಿಯು

ಪ್ರಾರಂಭದಲ್ಲಿ ಅಧ್ವರ್ಯುವೆಂಬ ಋತ್ವಿಜನು—ಉರು ವಿಷ್ಣೋ ವಿಕ್ರಮಸ್ವೋರು ಕ್ಷಯಾಯ ನಃ ಕೃಧಿ । ಘೃತಂ ಘೃತಯೋನೇ ಪಿಬ ಪ್ರಪ್ರ ಯಜ್ಞಪತಿಂ ತಿರ ॥ (ತೈ. ಸಂ. ೧-೩-೪-೧) ಎಂಬ ವಿಷ್ಣುದೇವತಾಕವಾದ ಮಂತ್ರದಿಂದ ಅಗ್ನಿಯಲ್ಲಿ ಆಹುತಿಯನ್ನು ಅರ್ಪಿಸಿ ಅನಂತರ ಯೂಪದ ಬಳಿಗೆ ಬರುವನು. ಏಕೆಂದರೆ ಯೂಪವು ವಿಷ್ಣುದೇವತಾಕವಾದುದು. ಆದುದರಿಂದ ವಿಷ್ಣುಪರವಾದ ಮಂತ್ರದಿಂದ ಹೋಮಮಾಡಿ ಯೂಪದ ಸಮೀಪಕ್ಕೆ ಬರಬೇಕು.

ಅನಂತರ ಯೂಪಕ್ಕಾಗಿ ವೃಕ್ಷದ ಬಳಿ ನಿಂತು ಅತ್ಯನ್ಯಾನಗಾಂ ನಾನ್ಯಾನುಪಾಗಾಮಿತ್ಯಾಹ- ಅನೇಕ ವೃಕ್ಷಗಳಿದ್ದರೂ ಅವುಗಳನ್ನೆಲ್ಲಾ ಬಿಟ್ಟು ನಿನ್ನ ಬಳಿಗೇ ಬಂದಿರುವೆನು ಎಂದು ಉಪಸ್ಥಾನ (ಪ್ರಾರ್ಥನೆ) ಮಾಡುವನು. ಆದರಂತೆಯೇ ಇತರ ವೃಕ್ಷಗಳನ್ನು ಬಿಟ್ಟು ಯೂಪಾರ್ಥವಾಗಿ ತಾನು ಆರಿಸಿಕೊಂಡಿರುವ ವೃಕ್ಷದ ಸಮೀಪಕ್ಕೆ ಹೋಗುವನು. ಅರ್ವಾಕ್ತ್ವಾ ಪರೈರವಿದಂ ಪರೋವರೈರಿತ್ಯಾಹಾರ್ವಾಗ್ಘ್ಯೇನಂ ಪರೈರ್ವಿಂದತಿ ಪರೋವರೈಃ—ಉತ್ಕೃಷ್ಟ ಗುಣಗಳಿಂದ ಯುಕ್ತನಾದ ನೀನು ದೂರದಲ್ಲಿರುವೆ, ಆದರೂ ಅಷ್ಟೇನೂ ದೂರವಿಲ್ಲದೆ ಸಮೀಪದಲ್ಲಿಯೇ ಇರುವೆ ಎಂದು ಹೇಳುವನು.

**ತಂ ತ್ವಾ ಜುಷೇ ವೈಷ್ಣವಂ ದೇವಯಜ್ಯಾಯಾ ಇತ್ಯಾಹ ದೇವಯಜ್ಯಾಯೈ ಹ್ಯೇನಂ ಜುಷತೇ**—ನೀನು ವಿಷ್ಣುವಿನ ಅಂಶವಾಗಿದ್ದೀಯೆ. ಆದ್ದರಿಂದ ನಿನ್ನನ್ನು ದೇವತೆಗಳನ್ನುದ್ದೇಶಿಸಿ ಯಜ್ಞ ಮಾಡುವುದಕ್ಕಾಗಿ ಸ್ವಾಗತಿಸುವೆನು ಎಂದು ಹೇಳಿ ಯೂಪಕ್ಕೆ ಸ್ವಾಗತವನ್ನು ಬಯಸುವನು.

**ದೇವಸ್ತ್ವಾ ಸವಿತಾ ಮಧ್ವಾನಕ್ತ್ವಿತ್ಯಾಹ ತೇಜಸೈವೈನಮನಕ್ತಿ**—ಸವಿತೃದೇವನು ನಿನಗೆ (ಘೃತದಿಂದ) ಲೇಪನಮಾಡಲಿ ಎಂದು ಹೇಳಿ ಯೂಪದ ಶಕ್ತಿಸಾಮರ್ಥ್ಯಗಳನ್ನು ಪ್ರಶಂಸಿಸುವನು

**ಓಷಧೇ ತ್ರಾಯಸ್ವೈನಗ್ಂ ಸ್ವಧಿತೇ ಮೈನಗ್ಂ ಹಿಗ್ಂಸೀರಿತ್ಯಾಹ**—ಎಲೈ ವನಸ್ಪತಿಯೇ, (ಯಜಮಾನನ್ನು) ರಕ್ಷಿಸು, ಎಲೈ ಕೊಡಲಿಯೇ, ಈ ವೃಕ್ಷವನ್ನು ಹಿಂಸಿಸಬೇಡ ಎಂದು ಆಯುಧವನ್ನು ಸ್ತುತಿಸುವನು.

**ವಜ್ರೋ ವೈ ಸ್ವಧಿತಿಃ ಶಾಂತ್ಯೈ**—ಈ ಕೊಡಲಿಯು ವಜ್ರಾಯುಧರೂಪವಾದುದು. ಶಾಂತ್ಯರ್ಥವಾಗಿ ಈ ವೃಕ್ಷವನ್ನು ಹಿಂಸಿಸಬೇಡ ಎಂದು ಪ್ರಾರ್ಥಿಸುವನು.

**ಸ್ವಧಿತೇರ್ವೃಕ್ಷಸ್ಯ ಬಿಭ್ಯತಃ ಪ್ರಥಮೇನ ಶಕಲೇನ ಸಹ ತೇಜಃ ಪರಾ ಪತತಿ ಯಃ ಪ್ರಥಮಃ ಶಕಲಃ ಪರಾಪತೇತ್ತಮಪ್ಯಾ ಹರೇತ್ಸತೇಜಸಮೇವೈನಮಾಹರತಿ**—ಕೊಡಲಿಗೆ ವೃಕ್ಷವು ಹೆದರುವುದು. ಕೊಡಲಿಯ ಏಟಿನಿಂದ ಕತ್ತರಿಸಿದ ಮೊದಲನೆಯ ಚೂರು (ಚಕ್ಕೆ)ನೊಡನೆ ವೃಕ್ಷದ ತೇಜಸ್ಸು ಕೆಳಗೆ ಬೀಳುವುದು. ಆದುದರಿಂದ (ಯೂಪದೊಡನೆ) ಮೊದಲನೆಯ ಚಕ್ಕೆಯನ್ನು ತೆಗೆದುಕೊಳ್ಳಬೇಕು ಎಂದು ಹೇಳಿ ತೇಜಸ್ಸಿನಿಂದ ಯುಕ್ತವಾದ ಮೊದಲ ಚಕ್ಕೆಯನ್ನೂ ಯೂಪವನ್ನೂ ತೆಗೆದುಕೊಂಡುಬರುವನು.

**ಇಮೇ ವೈ ಲೋಕಾ ಯೂಪಾತ್ಪ್ರಯತೋ ಬಿಭ್ಯತಿ ದಿವಮಗ್ರೇಣ ಮಾ ಲೇಖೀರಂತರಿಕ್ಷಂ ಮಧ್ಯೇನ ಮಾ ಹಿಗ್ಂಸೀರಿತ್ಯಾಹೈಭ್ಯ ಏವೈನಂ ಲೋಕೇಭ್ಯಃ ಶಮಯತಿ**—ಕಡಿಯಲ್ಪಡುತ್ತಿರುವ ವೃಕ್ಷವು ತಮ್ಮ ಮೇಲೆ ಬೀಳುವುದೆಂದು ಈ ಲೋಕಗಳು (ಭೂಮಿ ಅಂತರಿಕ್ಷ ಆಕಾಶ) ಭಯಪಡುತ್ತಿರುವವು. ಆದುದರಿಂದ ಎಲೈ ವೃಕ್ಷವೇ, ನೀನು ಕೆಳಕ್ಕೆ ಬೀಳುವಾಗ ಆಕಾಶವನ್ನು ನಿನ್ನ ತುದಿಯಿಂದ ಗೀರಬೇಡ, ನಿನ್ನ ಮಧ್ಯಭಾಗ (ಕಾಂಡ)ದಿಂದ ಅಂತರಿಕ್ಷವನ್ನು ಹಿಂಸಿಸಬೇಡ ಎಂದು ಹೇಳಿ ಭೂಮ್ಯಂತರಿಕ್ಷಾಕಾಶಗಳಿಗೆ ತೊಂದರೆಯನ್ನು ಮಾಡದಿರುವಂತೆ ವೃಕ್ಷವನ್ನು ಪ್ರಾರ್ಥಿಸುವನು.

**ವನಸ್ಪತೇ ಶತವಲ್ಶೋ ವಿ ರೋಹೇತ್ಯಾವ್ರಶ್ಚನೇ ಜುಹೋತಿ ತಸ್ಮಾದಾವ್ರಶ್ಚನಾದ್ವೃಕ್ಷಾಣಾಂ ಭೂಯಾಗ್ಂಸ ಉತ್ತಿಷ್ಠಂತಿ**—ಎಲೈ ವೃಕ್ಷಶ್ರೇಷ್ಠವೇ, ನೀನು ನೂರಾರು ಚಿಗುರುಗಳಿಂದ ಬೆಳೆದು ವೃದ್ಧಿಹೊಂದು ಎಂದು ಹೇಳಿ, **ವನಸ್ಪತೇ ಶತವಲ್ಶೋ ವಿ ರೋಹ ಸಹಸ್ರವಲ್ಶಾ ವಿ ವಯಗ್ ರುಹೇಮ** (ತೈ. ಸಂ. ೧-೩-೫-೧) ಎಂಬ ಮಂತ್ರದಿಂದ ಹಿರಣ್ಯವನ್ನು ವೃಕ್ಷದ ಬುಡದಲ್ಲಿಟ್ಟು ಅದರ ಸುತ್ತಲೂ ಪರಿಸ್ತರಣ ಮಾಡಿ ಹೋಮಮಾಡುವನು. ಈರೀತಿ ಮಾಡುವುದರಿಂದ ಕಡಿಯಲ್ಪಟ್ಟ ವೃಕ್ಷವು ನೂರಾರು ಚಿಗುರುಗಳಿಂದ ಕೂಡಿ ದೊಡ್ಡದಾಗಿ ಬೆಳೆಯುವುದು.

**ಸಹಸ್ರವಲ್ಶಾ ವಿ ವಯಗ್ಂ ರುಹೇಮೇತ್ಯಾಹಾಶಿಷಮೇವೈತಾಮಾಶಾಸ್ತೇ**—ಸಾವಿರಾರು ಚಿಗುರುಗಳಿಂದ ಕೂಡಿ ಬೆಳೆದು ಪ್ರವೃದ್ಧರಾಗೋಣ ಎಂದು ಹೇಳಿ ಶ್ರೇಯಃಪ್ರಾರ್ಥನೆಯನ್ನು ಮಾಡುವನು.

ಅನಂತರ ವೃಕ್ಷಚ್ಛೇದನವನ್ನು ಮಾಡುವನು—**ಅನಕ್ಷಸಂಗಂ ವೃಶ್ಚೇದಥ ಈಷಂ ಯಜಮಾನಸ್ಯ ಪ್ರಮಾಯುಕಗ್ಂ ಸ್ಯಾತ್**—ವೃಕ್ಷವನ್ನು ಕಡಿಯುವಾಗ ಅದರ ಪರಿಮಾಣವು ಗಾಡಿಯ ಅಚ್ಚನ್ನು ಸೋಕದಿರು

ವಂತೆ ಇರಬೇಕು. ಒಂದು ವೇಳೆ ಪರಿಮಾಣವು ಹೆಚ್ಚಾಗಿದ್ದು ಗಾಡಿಯ ಅಚ್ಚನ್ನು ಸ್ಪರ್ಶಿಸುವಂತಿದ್ದರೆ ಅದರಿಂದ ಯಜಮಾನನ ಪಶ್ವಾದಿಗಳು ವೃತಿಯನ್ನೈದುವವು. ಆದುದರಿಂದ ಸರಿಯಾದ ಪ್ರಮಾಣಕ್ಕೆ ಇರುವಂತೆ ವೃಕ್ಷವನ್ನು ಕತ್ತರಿಸಬೇಕು.

**ಯಂ ಕಾಮಯೇತಾಪ್ರತಿಷ್ಠಿತಃ ಸ್ಯಾದಿತ್ಯಾರೋಹಂ ತಸ್ಮೈ ವೃಕ್ಷೇದೇಷ ವೈ ವನಸ್ಪತೀನಾಮಪ್ರತಿಷ್ಠಿತೋಽಪ್ರತಿಷ್ಠಿತ ಏವ ಭವತಿ**—ಯಜ್ಞಮಾಡುವವನಿಗೆ ಆಧಾರವಿಲ್ಲದಿರುವಂತೆ (ಗಣ್ಯನಾದ ವ್ಯಕ್ತಿಯಾಗದಿರುವಂತೆ) ಆಗಬೇಕೆಂದು ಇಷ್ಟಪಟ್ಟರೆ ವೃಕ್ಷಚ್ಛೇದನ ಮಾಡುವವನು ವೃಕ್ಷದ ಮೇಲಿರುವ (ಭೂಮಿಗೆ ಸೋಕದಿರುವ) ಒಂದು ಕೊಂಬೆಯನ್ನು ಯೂಪಕ್ಕಾಗಿ ಕಡಿಯಬೇಕು. ಗಿಡಗಳಲ್ಲಿ ಗಿಡದ ಬುಡ ಅಥವಾ ಪ್ರಧಾನಭಾಗವು ಶ್ರೇಷ್ಠವೇ ಹೊರತು ಅದರ ಕೊಂಬೆಗಳು ಅಷ್ಟು ಮುಖ್ಯವಲ್ಲ. ಆದುದರಿಂದ ಮುಖ್ಯವಲ್ಲದ ಕೊಂಬೆಯನ್ನು ಕಡಿದು ಯೂಪವನ್ನು ನಿರ್ಮಿಸುವುದರಿಂದ ಯಜಮಾನನ ಪ್ರತಿಷ್ಠೆಯು ಹೆಚ್ಚುವುದಿಲ್ಲ, ಕನಿಷ್ಠ ಯಾಗುವುದು.

**ಯಂ ಕಾಮಯೇತ ಪಶುಮಾನ್ತ್ಸ್ಯಾದಿತಿ ಬಹುಪರ್ಣಂ ತಸ್ಮೈ ಬಹುಶಾಖಂ ವೃಕ್ಷೇದೇಷ ವೈ ವನಸ್ಪತೀನಾಂ ಪಶವ್ಯಃ ಪಶುಮಾನೇವ ಭವತಿ**—ಯಜಮಾನನು ಗವಾದಿಪಶುಗಳಿಂದ ಯುಕ್ತನಾಗಿರಬೇಕೆಂದು ಬಯಸುವವನು ಬಹಳವಾದ ಎಲೆಗಳಿಂದಲೂ ಕೊಂಬೆಗಳಿಂದಲೂ ಪುಷ್ಟವಾಗಿ ಬೆಳೆದಿರುವ ವೃಕ್ಷವನ್ನು ಯೂಪಕ್ಕಾಗಿ ಕಡಿಯಬೇಕು. ಏಕೆಂದರೆ ಪಶುಗಳಿಗೆ ಹಸಿಯಾಗಿಯೂ ತುಂಬಾ ಎಲೆಗಳಿಂದ ಕೂಡಿರುವುದೂ ಆದ ವೃಕ್ಷವನ್ನು ಕಂಡರೆ ತುಂಬಾ ಇಷ್ಟವು. ಆದುದರಿಂದ ಪಶುಗಳನ್ನು ಅಪೇಕ್ಷಿಸುವವನು ತುಂಬಾ ಎಲೆಗಳು ಕೊಂಬೆಗಳು ಉಳ್ಳ ವೃಕ್ಷವನ್ನು ಕಡಿಯಬೇಕು. ಇಂತಹ ವೃಕ್ಷವನ್ನು ಕಡಿದರೆ ಯಜಮಾನನು ಪಶುಸಮೃದ್ಧಿಯುಳ್ಳವನಾಗುವನು.

**ಪ್ರತಿಷ್ಠಿತಂ ವೃಕ್ಷೇತ್ಪ್ರತಿಷ್ಠಾಕಾಮಸ್ಯೈಷ ವೈ ವನಸ್ಪತೀನಾಂ ಪ್ರತಿಷ್ಠಿತೋ ಯಃ ಸಮೇ ಭೂಮ್ಯೈ ಸ್ವಾದ್ಯೋನೇರೂಢಃ ಪ್ರತ್ಯೇವ ತಿಷ್ಠತಿ**—ಪ್ರತಿಷ್ಠೆ ಅಥವಾ ಗೌರವವನ್ನು ಅಪೇಕ್ಷಿಸುವವನು, ಹಳ್ಳದಿಣ್ಣೆಗಳಿಲ್ಲದೆ ಸಮನಾಗಿರುವ ಭೂಮಿಯಲ್ಲಿ ದೃಢವಾಗಿ ಬೆಳೆದಿರುವ ವೃಕ್ಷವು ವನದಲ್ಲಿರುವ ವೃಕ್ಷಗಳಲ್ಲೆಲ್ಲಾ ಶ್ರೇಷ್ಠವೆನಿಸಿರುವುದು. ಮತ್ತು ಈ ವೃಕ್ಷವು ತನ್ನ ಸ್ವಂತ ಯೋನಿಯಿಂದ ಎಂದರೆ ಬೀಜದಿಂದ ಮೊಳಕೆಯಾಗಿ ಬೆಳೆದಿರಬೇಕು. ಮರದ ಕೊಂಬೆಯನ್ನು ಕಡಿದು ನೆಟ್ಟಿರುವುದರಿಂದ ಚಿಗುರಿ ಮರವಾಗಿರಬಾರದು. ಇಂತಹ ಸ್ವತಂತ್ರವಾಗಿ ಬೀಜದಿಂದ ಮೊಳೆತು ದೊಡ್ಡದಾಗಿ ಬೆಳೆದಿರುವ ವೃಕ್ಷವನ್ನು ಯೂಪಕ್ಕಾಗಿ ಕಡಿಯುವವನು ಮನುಷ್ಯರಲ್ಲಿ ಗೌರವವನ್ನೂ ಗಣ್ಯತೆಯನ್ನೂ ಪಡೆಯುವನು.

**ಯಃ ಪ್ರತ್ಯಙ್ಙುಪನತಸ್ತಂ ವೃಕ್ಷೇತ್ಸ ಹಿ ಮೇಧಮಭ್ಯುಪನತಃ**—ಯೂಪಕ್ಕಾಗಿ ಕಡಿಯಬೇಕಾಗಿರುವ ವೃಕ್ಷವು ಪೂರ್ವದಿಕ್ಕಿನ ಕಡೆಗೆ ವಾಲಿದಂತಿರಬೇಕು. ಏಕೆಂದರೆ ಆರೀತಿ ಇದ್ದರೆ ಅದು ಯಜ್ಞಕ್ಕೆ ಸಹಾಯಕವಾಗಿಯೂ ಯಜ್ಞಾರ್ಹವಾಗಿಯೂ ಇರುವುದು.

**ಪಂಚಾರತ್ನಿಂ ತಸ್ಮೈ ವೃಕ್ಷೇದ್ಯಂ ಕಾಮಯೇತೋಪೈನಮುತ್ತರೋ ಯಜ್ಞೋ ನಮೇದಿತಿ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞ ಉಪೈನಮುತ್ತರೋ ಯಜ್ಞೋ ನಮತಿ**—ಇಲ್ಲಿಂದ ಮುಂದೆ ಯೂಪದ ಪರಿಮಾಣವನ್ನು (ಉದ್ದವನ್ನು) ವಿವರಿಸುವರು. ಸಾಧಾರಣವಾಗಿ ಎಲ್ಲರೂ ಮಾಡುವ ಯಜ್ಞಗಳಲ್ಲಿ ಯೂಪವು ಯಾವ ಪರಿಮಾಣದ್ದಾದರೂ ಆಗಿರಬಹುದೆಂದೂ ಕಾಮ್ಯೇಷ್ಟಿಗಳಲ್ಲಿ (ಇಂತಹ ಫಲಪ್ರಾಪ್ತಿಯೇ

ಆಗಬೇಕೆಂದು ಉದ್ದೇಶಿಸಿ ಮಾಡುವ ಯಜ್ಞಗಳು) ಮಾತ್ರ ಆಯಾ ಫಲಕ್ಕನುಸಾರವಾಗಿ ಆಯಾ ಪ್ರಮಾಣದ ಯೂಪವಿರಬೇಕೆಂದೂ ಕೆಲವರ ಮತವು. ಇಲ್ಲಿ ಯೂಪದ ಪರಿಮಾಣವನ್ನು ಅರತ್ನಿಯೆಂಬ ಶಬ್ದದಿಂದ ನಿರ್ದೇಶಿಸಲಾಗಿದೆ. ಅರತ್ನಿ ಎಂದರೆ **ಚತುರ್ವಿಂಶತ್ಯಂಗುಲಯೋಽರತ್ನಿಃ** ಇಪ್ಪತ್ತನಾಲ್ಕು ಬೆರಳುಗಳ ಪ್ರಮಾಣವು ಎಂದರೆ ಸಾಮಾನ್ಯವಾಗಿ ಒಂದು ಮೊಳ ಉದ್ದವೆಂದು ಅರ್ಥವಾಗುವುದು. ಯಜ್ಞವು ಶ್ರೇಷ್ಠ ರೀತಿಯಿಂದ ಸಾಂಗವಾಗಿ ನೆರವೇರಿ ಯಜಮಾನನಿಗೆ ಇಷ್ಟಫಲಪ್ರಾಪ್ತಿಯಾಗಬೇಕೆಂದು ಅಪೇಕ್ಷಿಸುವವನು **ಪಂಚಾರತ್ನಿ** ಎಂದರೆ ಯೂಪವು ಐದು ಮೊಳ ಉದ್ದವಿರುವಂತೆ ವೃಕ್ಷವನ್ನು ಕತ್ತರಿಸಬೇಕು. ಏಕೆಂದರೆ ಪಂಕ್ತಿ ಎಂಬ ಛಂದಸ್ಸಿನಲ್ಲಿ ಒಂದೊಂದು ಪಾದದಲ್ಲಿ ಐದು ಅಕ್ಷರಗಳಿರುವವು. ಯಜ್ಞವೂ ಸಹ ಐದು ವಿಧ ಕರ್ಮಗಳುಳ್ಳದ್ದಾಗಿರುವುದು. ಆದುದರಿಂದ ಐದು ಮೊಳ ಉದ್ದವಿರುವಂತೆ ವೃಕ್ಷವನ್ನು ಕತ್ತರಿಸಬೇಕು. ಆದುದರಿಂದ ಐದು ಮೊಳ ಉದ್ದವಿರುವಂತೆ ಯೂಪವನ್ನು ಕತ್ತರಿಸಿದ ಯಜಮಾನನ ಯಜ್ಞವು ಯಶಸ್ವಿಯಾಗಿ ನೆರವೇರಿ ಉದ್ದಿಷ್ಟಫಲಪ್ರಾಪ್ತಿಯಾಗುವುದು.

**ಷಡರತ್ನಿಂ ಪ್ರತಿಷ್ಠಾಕಾಮಸ್ಯ ಷಡ್ವಾ ಋತವ ಋತುಷ್ವೇವ ಪ್ರತಿ ತಿಷ್ಠತಿ**—ಪ್ರತಿಷ್ಠೆಯನ್ನು (ಗೌರವವನ್ನು) ಅಪೇಕ್ಷಿಸುವವನು ಆರು ಮೊಳ ಉದ್ದವಿರುವಂತೆ ಯೂಪವನ್ನು ಕತ್ತರಿಸಬೇಕು. ಏಕೆಂದರೆ ಆರು ಋತುಗಳಿರುವವು. ಯಜ್ಞವು ಈ ಋತುಗಳಲ್ಲಿ ಪ್ರತಿಷ್ಠಿತವಾಗಿರುವುದು. ಅದರಿಂದ ಅವನಿಗೆ ಪ್ರತಿಷ್ಠೆಯು ಉಂಟಾಗುವುದು.

**ಸಪ್ತಾರತ್ನಿಂ ಪಶುಕಾಮಸ್ಯ ಸಪ್ತಪದಾ ಶಕ್ವರೀ ಪಶವಃ ಶಕ್ವರೀ ಪಶೂನೇವಾವರುಂಧೇ**—ಪಶುಸಮೃದ್ಧಿಯನ್ನಪೇಕ್ಷಿಸುವವನು ಏಳು ಮೊಳ ಉದ್ದವಿರುವ ಯೂಪವನ್ನು ಕತ್ತರಿಸಬೇಕು. ಏಕೆಂದರೆ ಶಕ್ವರೀ ಛಂದಸ್ಸಿನಲ್ಲಿ ಏಳು ಪಾದಗಳಿರುವವು. ಶಕ್ವರೀ ಛಂದಸ್ಸಿಗೂ ಪಶುಗಳಿಗೂ ಅನ್ಯೋನ್ಯ ಸಂಬಂಧವಿರುವುದು. ಶಕ್ವರಿಯೇ ಪಶುಗಳೆಂದು ಹೇಳಲ್ಪಡುವುದು. ಆದುದರಿಂದ ಏಳು ಮೊಳ ಉದ್ದವಿರುವ ಯೂಪವನ್ನು ನಿರ್ಮಿಸಿದ ಯಜಮಾನನು ಪಶುಸಮೃದ್ಧಿಯನ್ನು ಪಡೆಯುವನು.

**ನವಾರತ್ನಿಂ ತೇಜಸ್ಕಾಮಸ್ಯ ತ್ರಿವೃತಾ ಸ್ತೋಮೇನ ಸಂಮಿತಂ ತೇಜಸ್ತ್ರಿವೃತ್ತೇಜಸ್ವ್ಯೇವ ಭವತಿ**—ತೇಜಸ್ಸನ್ನಪೇಕ್ಷಿಸುವವನು ಒಂಭತ್ತು ಮೊಳ ಉದ್ದವಿರುವ ಯೂಪವನ್ನು ಕತ್ತರಿಸಿ ತ್ರಿವೃತ್ಸ್ತೋಮದಿಂದ ಅದನ್ನು ಸ್ತುತಿಸಬೇಕು. ಏಕೆಂದರೆ ತೇಜಸ್ಸು ತ್ರಿವೃತ್ಸ್ತೋಮಾನುರೂಪವಾಗಿರುವುದು. ಹೀಗೆ ಮಾಡಿದರೆ ತೇಜಸ್ವಿಯಾಗುವನು.

**ಏಕಾದಶಾರತ್ನಿಮಿಂದ್ರಿಯಕಾಮಸ್ಯೈಕಾದಶಾಕ್ಷರಾ ತ್ರಿಷ್ಟುಗಿಂದ್ರಿಯಂ ತ್ರಿಷ್ಟುಗಿಂದ್ರಿಯಾವ್ಯೇವ ಭವತಿ**—ಶಕ್ತಿಸಾಮರ್ಥ್ಯಗಳನ್ನಪೇಕ್ಷಿಸುವವನು ಹನ್ನೊಂದು ಮೊಳದ ಯೂಪವನ್ನು ಕತ್ತರಿಸಬೇಕು. ಏಕೆಂದರೆ ತ್ರಿಷ್ಟುಪ್ ಛಂದಸ್ಸಿನ ಪಾದದಲ್ಲಿ ಹನ್ನೊಂದಕ್ಷರಗಳಿರುವವು. ತ್ರಿಷ್ಟುಪ್ ಛಂದಸ್ಸು ಇಂದ್ರಿಯ ಅಥವಾ ಬಲವನ್ನು ಸೂಚಿಸುವುದಾಗಿರುವುದು. ಆದುದರಿಂದ ಈರೀತಿ ಮಾಡಿದವನು ಬಲಶಾಲಿಯಾಗುವನು.

**ಪಂಚದಶಾರತ್ನಿಂ ಭ್ರಾತೃವ್ಯವತಃ ಪಂಚದಶೋ ವಜ್ರೋ ಭ್ರಾತೃವ್ಯಾಭಿಭೂತ್ಯೈ**—ಶತ್ರುಗಳಿಂದ ಪೀಡಿತನಾದವನು ಹದಿನೈದು ಮೊಳದುದ್ದವಿರುವ ಯೂಪವನ್ನು ಕತ್ತರಿಸಿ ನೆಡಬೇಕು. ಏಕೆಂದರೆ ವಜ್ರಾಯುಧವು ಹದಿನೈದು ಪರಿಮಿತಿಯುಳ್ಳದ್ದಾಗಿರುವುದು. ವಜ್ರಾಯುಧವು ಶತ್ರುಗಳನ್ನು ನಾಶಮಾಡಲು ಸಮರ್ಥ

ವಾಗಿರುವುದು. ಆದುದರಿಂದ ವಜ್ರಾಯುಧಸಂಕೇತವಾದ ಹದಿನೈದು ಅರತ್ನಿ ಪರಿಮಾಣವುಳ್ಳ ಯೂಪವನ್ನು ಕತ್ತರಿಸಿ ನೆಡುವ ಯಜಮಾನನು ಶತ್ರುಬಾಧಾರಹಿತನಾಗುವನು.

**ಸಪ್ತದಶಾರತ್ನಿಂ ಪ್ರಜಾಕಾಮಸ್ಯ ಸಪ್ತದಶಃ ಪ್ರಜಾಪತಿಃ ಪ್ರಜಾಪತೇರಾಪ್ತ್ಯೈ**— ಪುತ್ರಪೌತ್ರಾದಿ ಪ್ರಜಾಸಂತತಿಯನ್ನಪೇಕ್ಷಿಸುವವನು ಹದಿನೇಳು ಮೊಳದುದ್ದವಿರುವ ಯೂಪವನ್ನು ನಿರ್ಮಿಸಬೇಕು. ಏಕೆಂದರೆ ಪ್ರಜಾಪತಿಯು ಸಪ್ತದಶವೆಂದು ಹೇಳಲ್ಪಡುವನು. ಆ ಪ್ರಜಾಪತಿಯನ್ನು ಒಲಿಸಿಕೊಳ್ಳುವುದರಿಂದ ಯಜಮಾನನು ಪ್ರಜಾವಂತನಾಗುವನು.

**ಏಕವಿಗ್ಂಶತ್ಯರತ್ನಿಂ ಪ್ರತಿಷ್ಠಾಕಾಮಸ್ಯೈಕವಿಗ್ಂಶಃ ಸ್ತೋಮಾನಾಂ ಪ್ರತಿಷ್ಠಾ ಪ್ರತಿಷ್ಠಿತ್ಯೈ**— ಪ್ರತಿಷ್ಠೆಯನ್ನೂ ಗೌರವವನ್ನೂ ಅಪೇಕ್ಷಿಸುವವನು ಇಪ್ಪತ್ತೊಂದು ಮೊಳದುದ್ದದ ಯೂಪವನ್ನು ಕತ್ತರಿಸಬೇಕು. ಏಕೆಂದರೆ ಸ್ತೋಮಗಳ ಪ್ರತಿಷ್ಠೆಯು ಅಥವಾ ಶ್ರೇಷ್ಠತೆಯು ಇಪ್ಪತ್ತೊಂದರಿಂದ ಸೂಚಿತವಾಗಿರುವುದು. (ಇಪ್ಪತ್ತೊಂದು ಸ್ತೋಮಗಳ ಸಂಖ್ಯೆಯಿಂದಾದರೂ ಹೇಳಬಹುದು). ಆದುದರಿಂದ ಪ್ರತಿಷ್ಠೆಯನ್ನಪೇಕ್ಷಿಸುವ ಯಜಮಾನನು ಇಪ್ಪತ್ತೊಂದು ಮೊಳದುದ್ದದ ಯೂಪವನ್ನು ಕತ್ತರಿಸಿ ನೆಡಬೇಕು.

**ಅಷ್ಟಾಶ್ರಿರ್ಭವತ್ಯಷ್ಟಾಕ್ಷರಾ ಗಾಯತ್ರೀ ತೇಜೋ ಗಾಯತ್ರೀ ಗಾಯತ್ರೀ ಯಜ್ಞಮುಖಂ ತೇಜಸೈವ ಗಾಯತ್ರಿಯಾ ಯಜ್ಞಮುಖೇನ ಸಂಮಿತಃ**— ಈ ಯೂಪವು ಎಂಟು ಕೋಣಗಳು (ಮೂಲೆಗಳು ಅಥವಾ ಅಲಗುಗಳು) ಉಳ್ಳದ್ದಾಗಿರುವುದು. ಏಕೆಂದರೆ ಗಾಯತ್ರೀಛಂದಸ್ಸಿನ ಪಾದದಲ್ಲಿ ಎಂಟು ಅಕ್ಷರಗಳಿರುವವು. ಗಾಯತ್ರಿಯು ತೇಜೋರೂಪವಾದುದು. ಗಾಯತ್ರೀ ಛಂದಸ್ಸಿನ ಮಂತ್ರಗಳಿಂದಲೇ ಯಜ್ಞವಾರಂಭವಾಗುವುದು. ಅಥವಾ ಗಾಯತ್ರಿಯೇ ಯಜ್ಞಕ್ಕೆ ಶಿರಸ್ಸಿನಂತೆ ಪ್ರಧಾನಭೂತವಾದುದು. ಗಾಯತ್ರೀ ಛಂದಸ್ಸಿನ ಹವಿರ್ಧಾನದಿಂದ ಯಜ್ಞದ ಪ್ರಧಾನ ಅಥವಾ ಮುಖ್ಯಭಾಗವು ಕೂಡಿರುವುದು. **ಶಿರೋ ವಾ ಏತದ್ಯಜ್ಞಸ್ಯ ಯದ್ಧವಿರ್ಧಾನಂ** (ತೈ. ಸಂ. ೬-೨-೧೧-೧) ಎಂದು ಶ್ರುತಿವಾಕ್ಯವಿರುವುದು. ತೇಜೋರೂಪವಾದ ಗಾಯಿತ್ರಿಯಿಂದಲೇ ಪ್ರಾರಂಭವಾಗುವ ಯಜ್ಞವು ತೇಜೋಯುಕ್ತವಾಗಿರುವಂತೆ ಎಂಟು ಮೂಲೆಗಳುಳ್ಳ ಯೂಪಸ್ತಂಭವೂ ಯಜ್ಞಾರ್ಹವಾಗಿರುವುದು.

## ॥ ಯೂಪಪ್ರೋಕ್ಷಣಾದಿವಿಧಿಃ ॥

**ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವೇತ್ಯಾಹೈಭ್ಯ ಏವೈನಂ ಲೋಕೇಭ್ಯಃ ಪ್ರೋಕ್ಷತಿ ಪರಾಂಚಂ ಪ್ರೋಕ್ಷತಿ ಪರಾಙಿವ ಹಿ ಸುವರ್ಗೋ ಲೋಕಃ ಕ್ರೂರಮಿವ ವಾ ಏತತ್ಕರೋತಿ ಯತ್ಖನತ್ಯಪೋಽವ ನಯತಿ ಶಾಂತ್ಯೈ ಯವಮತೀರವ ನಯತ್ಯೂರ್ಗ್ವೈ ಯವೋ ಯಜಮಾನೇನ ಯೂಪಃ ಸಂಮಿತೋ ಯಾವಾನೇವ ಯಜಮಾನಸ್ತಾವತೀಮೇವಾಸ್ಮಿನ್ನೂರ್ಜಂ ದಧಾತಿ ಪಿತೃಣಾಗ್ಂ ಸದನಮಸೀತಿ ಬರ್ಹಿರವ ಸ್ತೃಣಾತಿ ಪಿತೃದೇವತ್ಯಾ ೨ ಗ್ಂ ಹ್ಯೇತದ್ಯನ್ನಿಖಾತಂ ಯದ್ಬರ್ಹಿರನವಸ್ತೀರ್ಯ ಮಿನುಯಾತ್ಪಿತೃದೇವತ್ಯೋ ನಿಖಾತಃ ಸ್ಯಾದ್ಬರ್ಹಿರವಸ್ತೀರ್ಯ ಮಿನೋತ್ಯಸ್ಯಾಮೇವೈನಂ ಮಿನೋತಿ ಯೂಪಶಕಲಮವಾಸ್ಯತಿ ಸತೇಜಸಮೇವೈನಂ ಮಿನೋತಿ ದೇವಸ್ತ್ವಾ ಸವಿತಾ ಮಧ್ವಾನಕ್ತ್ವಿತ್ಯಾಹ ತೇಜಸೈವೈನಮನಕ್ತಿ ಸುಪಿಪ್ಪಲಾಭ್ಯಸ್ತ್ವೌಷಧೀಭ್ಯ ಇತಿ ಚಷಾಲಂ ಪ್ರತಿ ಮುಂಚತಿ ತಸ್ಮಾಚ್ಛೀರ್ಷತ ಓಷಧಯಃ ಫಲಂ ಗೃಹ್ಣಂತ್ಯನಕ್ತಿ ತೇಜೋ ವಾ ಆಜ್ಯಂ**

ಯಜಮಾನೇನಾಗ್ನಿಷ್ಠಾಶ್ರಿಃ ಸಂಮಿತಾ ಯದಗ್ನಿಷ್ಠಾಮಶ್ರಿಮನಕ್ತಿ ಯಜಮಾನಮೇವ ತೇಜಸಾನಕ್ತ್ಯಂತಮನಕ್ತ್ಯಂತಮೇವ ಯಜಮಾನಂ ತೇಜಸಾನಕ್ತಿ ಸರ್ವತಃ ಪರಿ ಮೃಶತ್ಯಪರಿವರ್ಗಮೇವಾಸ್ಮಿನ್ ತೇಜೋ ದಧಾತ್ಯುದ್ದಿವಗ್ಂ ಸ್ತಭಾನಾಂತರಿಕ್ಷಂ ಪೃಣೇ-ತ್ಯಾಹೈಷಾಂ ಲೋಕಾನಾಂ ವಿಧೃತ್ಯೈ ವೈಷ್ಣವ್ಯರ್ಚಾ ಕಲ್ಪಯತಿ ವೈಷ್ಣವೋ ವೈ ದೇವತ-ಯಾ ಯೂಪಃ ಸ್ವಯೈವೈನಂ ದೇವತಯಾ ಕಲ್ಪಯತಿ ದ್ವಾಭ್ಯಾಂ ಕಲ್ಪಯತಿ ದ್ವಿಪಾ-ದ್ಯಜಮಾನಃ ಪ್ರತಿಷ್ಠಿತ್ಯೈ ಯಂ ಕಾಮಯೇತ ತೇಜಸೈನಂ ದೇವತಾಭಿರಿಂದ್ರಿಯೇಣ ವ್ಯರ್ಧಯೇಯಮಿತ್ಯಗ್ನಿಷ್ಠಾಂ ತಸ್ಯಾಶ್ರಿಮಾಹವನೀಯಾದಿತ್ಥಂ ವೇತ್ಥಂ ವಾತಿ ನಾಮಯೇ-ತ್ತೇಜಸೈವೈನಂ ದೇವತಾಭಿರಿಂದ್ರಿಯೇಣ ವ್ಯರ್ಧಯತಿ ಯಂ ಕಾಮಯೇತ ತೇಜಸೈನಂ ದೇವತಾಭಿರಿಂದ್ರಿಯೇಣ ಸಮರ್ಧಯೇಯಮಿತ್ಯಗ್ನಿಷ್ಠಾಂ ತಸ್ಯಾಶ್ರಿಮಾಹವನೀಯೇನ ಸಂ ಮಿನುಯಾತ್ತೇಜಸೈವೈನಂ ದೇವತಾಭಿರಿಂದ್ರಿಯೇಣ ಸಮರ್ಧಯತಿ ಬ್ರಹ್ಮವನಿಂ ತ್ವಾ ಕ್ಷತ್ರವನಿಮಿತ್ಯಾಹ ಯಥಾಯಜುರೇವೈತತ್ಪರಿ ವ್ಯಯತ್ಯೂರ್ಗ್ವೈ ರಶನಾ ಯಜಮಾನೇನ ಯೂಪಸ್ಸಂಮಿತೋ ಯಜಮಾನಮೇವೋರ್ಜಾ ಸಮರ್ಧಯತಿ ನಾಭಿದಘ್ನೇ ಪರಿ ವ್ಯಯತಿ ನಾಭಿದಘ್ನ ಏವಾಸ್ಮಾ ಊರ್ಜಂ ದಧಾತಿ ತಸ್ಮಾನ್ನಾಭಿ-ದಘ್ನ ಊರ್ಜಾ ಭುಂಜತೇ ಯಂ ಕಾಮಯೇತೋರ್ಜೈನಂ ವ್ಯರ್ಧಯೇಯಮಿತ್ಯೂ-ರ್ಧ್ವಾಂ ವಾ ತಸ್ಯಾವಾಚೀಂ ವಾವೋಹೇದೂರ್ಜೈವೈನಂ ವ್ಯರ್ಧಯತಿ ಯದಿ ಕಾಮ-ಯೇತ ವರ್ಷುಕಃ ಪರ್ಜನ್ಯಃ ಸ್ಯಾದಿತ್ಯವಾಚೀಮವೋಹೇದ್ವೃಷ್ಟಿಮೇವ ನಿಯಚ್ಛತಿ ಯದಿ ಕಾಮಯೇತಾವರ್ಷುಕಃ ಸ್ಯಾದಿತ್ಯೂರ್ಧ್ವಾಮುದೂಹೇದ್ವೃಷ್ಟಿಮೇವೋದ್ಯಚ್ಛತಿ ಪಿತೄಣಾಂ ನಿಖಾತಂ ಮನುಷ್ಯಾಣಾಮೂರ್ಧ್ವಂ ನಿಖಾತಾದಾ ರಶನಾಯಾ ಓಷಧೀನಾಗ್ಂ ರಶನಾ ವಿಶ್ವೇಷಾಂ ದೇವಾನಾಮೂರ್ಧ್ವಗ್ಂ ರಶನಾಯಾ ಆ ಚಷಾಲಾದಿಂದ್ರಸ್ಯ ಚಷಾ-ಲಗ್ಂ ಸಾಧ್ಯಾನಾಮತಿರಿಕ್ತಗ್ಂ ಸ ವಾ ಏಷ ಸರ್ವದೇವತ್ಯೋ ಯದ್ಯೂಪೋ ಯದ್ಯೂಪಂ ಮಿನೋತಿ ಸರ್ವಾ ಏವ ದೇವತಾಃ ಪ್ರೀಣಾತಿ ಯಜ್ಞೇನ ವೈ ದೇವಾಃ ಸುವರ್ಗಂ ಲೋಕಮಾಯನ್ತೇಽಮನ್ಯಂತ ಮನುಷ್ಯಾ ನೋಽನ್ವಾಭವಿಷ್ಯಂತೀತಿ ತೇ ಯೂಪೇನ ಯೋಪಯಿತ್ವಾ ಸುವರ್ಗಂ ಲೋಕಮಾಯನ್ತಮೃಷಯೋ ಯೂಪೇನೈ-ವಾನು ಪ್ರಾಜಾನನ್ತದ್ಯೂಪಸ್ಯ ಯೂಪತ್ವಂ ಯದ್ಯೂಪಂ ಮಿನೋತಿ ಸುವರ್ಗಸ್ಯ ಲೋಕಸ್ಯ ಪ್ರಜ್ಞಾತ್ಯೈ ಪುರಸ್ತಾನ್ಮಿನೋತಿ ಪುರಸ್ತಾದ್ಧಿ ಯಜ್ಞಸ್ಯ ಪ್ರಜ್ಞಾಯತೇಽ-ಪ್ರಜ್ಞಾತಗ್ಂ ಹಿ ತದ್ಯದತಿಪನ್ನ ಆಹುರಿದಂ ಕಾರ್ಯಮಾಸೀದಿತಿ ಸಾಧ್ಯಾ ವೈ ದೇವಾ ಯಜ್ಞಮತ್ಯಮನ್ಯಂತ ತಾನ್ ಯಜ್ಞೋ ನಾಸ್ಪೃಶತ್ತಾನ್ ಯದ್ಯಜ್ಞಸ್ಯಾತಿರಿಕ್ತಮಾ-ಸೀತ್ತದಸ್ಪೃಶದತಿರಿಕ್ತಂ ವಾ ಏತದ್ಯಜ್ಞಸ್ಯ ಯದಗ್ನಾವಗ್ನಿಂ ಮಥಿತ್ವಾ ಪ್ರಹರತ್ಯತಿ-ರಿಕ್ತಮೇತದ್ಯೂಪಸ್ಯ ಯದೂರ್ಧ್ವಂ ಚಷಾಲಾತ್ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ದೇವಾ ವೈ ಸಗ್ಂಸ್ಥಿತೇ ಸೋಮೇ ಪ್ರ ಸ್ರುಚೋಽಹರನ್ಪ್ರ ಯೂಪಂ ತೇಽಮನ್ಯಂತ ಯಜ್ಞವೇಶಸಂ ವಾ ಇದಂ ಕುರ್ಮ ಇತಿ ತೇ ಪ್ರಸ್ತರಗ್ಂ ಸ್ರುಚಾಂ ನಿಷ್ಕ್ರಯಣಮಪಶ್ಯನ್ಸ್ವರುಂ ಯೂಪಸ್ಯ ಸಗ್ಂಸ್ಥಿತೇ ಸೋಮೇ ಪ್ರ ಪ್ರಸ್ತರಗ್ಂ ಹರತಿ ಜುಹೋತಿ ಸ್ವರುಮಯಜ್ಞವೇಶಸಾಯ ॥

(ತೈ. ಸಂ. ೬-೩-೪).

ಇದುವರೆಗೆ ಯೂಪಚ್ಛೇದನ ವಿಧಿನಿಯಮಗಳನ್ನು ಹೇಳಿ ಈಗ ಯೂಪಸಂಸ್ಕಾರಕ್ರಮವನ್ನು ಹೇಳುವರು. ಮೊದಲು ಯೂಪಪ್ರೋಕ್ಷಣ ಪ್ರಕಾರವನ್ನು ವಿವರಿಸಲಾಗಿರುವುದು—

**ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವೇತ್ಯಾಹೈಭ್ಯ ಏವೈನಂ ಲೋಕೇಭ್ಯಃ ಪ್ರೋಕ್ಷತಿ ಪರಾಂಚಂ ಪ್ರೋಕ್ಷತಿ ಪರಾಙಿವ ಹಿ ಸುವರ್ಗೋ ಲೋಕಃ**— ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವಾ ಎಂಬ ಮಂತ್ರವನ್ನು ಉಚ್ಚರಿಸಿ, ಎಲೈ ಯೂಪವೇ, ಭೂಮ್ಯಂತರಿಕ್ಷ ಸ್ವರ್ಗಲೋಕಗಳ ಸ್ಥಿತ್ಯರ್ಥವಾಗಿ ನಿನ್ನನ್ನು ಪ್ರೋಕ್ಷಿಸುವೆನು ಎಂದು ಹೇಳಿ ಯೂಪದ ಮೂಲಭಾಗ, ಮಧ್ಯಭಾಗ, ಊರ್ಧ್ವಭಾಗಗಳನ್ನು ಕ್ರಮವಾಗಿ ಪ್ರೋಕ್ಷಿಸುವನು. ಮೂಲದಿಂದ ಕ್ರಮವಾಗಿ ಮೇಲುಭಾಗದ ತುದಿಯವರೆಗೆ ಏಕೆ ಪ್ರೋಕ್ಷಿಸಬೇಕೆಂದರೆ ಸ್ವರ್ಗವು ಮೇಲು ಭಾಗದಲ್ಲಿರುವುದು. ಅಂತಹ ಸ್ವರ್ಗಲೋಕ ಪ್ರಾಪ್ತಿಗಾಗಿ ಕೆಳಗಿನಿಂದ ಮೇಲಿನವರೆಗೂ ಪ್ರೋಕ್ಷಿಸಬೇಕು.

**ಕ್ರೂರಮಿವ ವಾ ಏತತ್ಕರೋತಿ ಯತ್ಖನತ್ಯಪೋಽವ ನಯತಿ ಶಾಂತ್ಯೈ ಯವಮತೀರವ ನಯ-ತ್ಯೂರ್ಗ್ವೈ ಯವಃ**— ಯೂಪಸ್ತಂಭವನ್ನು ಹೂಳುವುದಕ್ಕಾಗಿ ಹಳ್ಳವನ್ನು ತೆಗೆಯುವಾಗ (ಅಗಿಯುವಾಗ) ಭೂಮಿಯನ್ನು ಈ ರೀತಿ ಪ್ರಾರ್ಥಿಸುವನು.—ಎಲೈ ಭೂಮಿಯೇ, ನಿನ್ನನ್ನು ಗುದ್ದಲಿಯೇ ಮೊದಲಾದ ಸಾಧನ ಗಳಿಂದ ಅಗೆಯುವಾಗ ಹಾಗೆ ಅಗೆಯುವುದು ಕ್ರೂರವೆಂದು ಕಂಡುಬರುವುದಾದರೂ ಆ ದೋಷಪರಿಹಾರಕ್ಕಾಗಿ ಅಗೆದಿರುವ ಈ ಹಳ್ಳದಲ್ಲಿ ನೀರನ್ನು ಹುಯ್ಯುವೆನೆಂದು ಹೇಳಿ ದೋಷ ಶಾಂತಿಗಾಗಿ ಹಳ್ಳದಲ್ಲಿ ಯವಧಾನ್ಯ ಮಿಶ್ರಿತವಾದ ನೀರನ್ನು ಹುಯ್ಯುವನು. ಯವಧಾನ್ಯವು ಅನ್ನವನ್ನು (ಆಹಾರವನ್ನು) ಸೂಚಿಸುವುದು. ಅದರ ಪ್ರಾಪ್ತಿಗಾಗಿ ಯವಮಿಶ್ರಿತವಾದ ನೀರನ್ನು ಹಳ್ಳದಲ್ಲಿ ಹುಯ್ಯುವನು.

**ಯಜಮಾನೇನ ಯೂಪಃ ಸಂಮಿತೋ ಯಾವಾನೇವ ಯಜಮಾನಸ್ತಾವತೀರೇವಾಸ್ಮಿನ್ನೂರ್ಜಂ ದಧಾತಿ**— ಈ ಯೂಪವು ಯಜಮಾನನಷ್ಟು ಎತ್ತರವಾಗಿರುವುದು. ಯಜಮಾನನು ಅನ್ನಾದ್ಯಾಹಾರವನ್ನು ಅಪೇಕ್ಷಿಸುವುದರಿಂದ ಅದಕ್ಕೆ ಸಾಧನಭೂತವಾದ ಅನ್ನವನ್ನು (ಯವವನ್ನು) ಇದರಲ್ಲಿ ಹಾಕುವನು. ಅಥವಾ ಯಜಮಾನನು ಜೀವಿಸಿರುವವರೆಗೂ ಅವನಿಗೆ ಅನ್ನ ಪ್ರಾಪ್ತಿಗಾಗಿ ಯವವನ್ನು ಇದರಲ್ಲಿ ಹಾಕುವನು.

**ಪಿತೃಣಾಗ್ಂ ಸದನಮಸೀತಿ ಬರ್ಹಿರವ ಸ್ತೃಣಾತಿ ಪಿತೃ ದೇವತ್ಯಾ ೩ ಗ್ಂ ಹ್ಯೇತದ್ಯನ್ನಿಖಾತಂ ಯದ್ಬರ್ಹಿರನವಸ್ತೀರ್ಯ ಮಿನುಯಾತ್ಪಿತೃದೇವತ್ಯೋ ನಿಖಾತಃ ಸ್ಯಾದ್ಬರ್ಹಿರವಸ್ತೀರ್ಯ ಮಿನೋತ್ಯಸ್ಯಾ-ಮೇವೈನಂ ಮಿನೋತಿ**— ಎಲೈ ಹಳ್ಳವೇ, ನೀನು ಪಿತೃದೇವತೆಗಳ ಸ್ಥಾನವು ಎಂದು ಹೇಳಿ ಬರ್ಹಿಃ ಎಂಬ ಕತ್ತರಿಸಿದ ತುಂಡು ದರ್ಭೆಗಳನ್ನು ಹರಡುವನು. ಈ ರೀತಿ ದರ್ಭೆಯನ್ನು ಹರಡದೆ ಹಳ್ಳದಲ್ಲಿ ಯೂಪವನ್ನು ನೆಟ್ಟರೆ ಅದು ಪಿತೃದೇವತೆಗಳಿಗೆ ಸೇರುವುದು. ಆದುದರಿಂದ ದರ್ಭೆಗಳನ್ನು ಹಳ್ಳದಲ್ಲಿ ಹರಡದೆ ಅದರ ಪಕ್ಕದಲ್ಲಿ ಭೂಮಿಯ ಮೇಲೆ ಹರಡುವನು. ಅನಂತರ ಯೂಪವನ್ನು ಹಳ್ಳದಲ್ಲಿ ನೆಡುವನು.

**ಯೂಪಶಕಲಮವಾಸ್ಯತಿ ಸತೇಜಸಮೇವೈನಂ ಮಿನೋತಿ**— ಮೊದಲು ಕತ್ತರಿಸಿದ ಯೂಪವೃಕ್ಷದ ಚಕ್ಕೆಯನ್ನು ಆ ಹಳ್ಳದಲ್ಲಿ ಹಾಕುವನು. ಆ ಚಕ್ಕೆಯು ತೇಜೋಯುಕ್ತವಾದುದು. ವೃಕ್ಷದ ತೇಜಸ್ಸೆಲ್ಲವೂ ಆ ಪ್ರಥಮ ಶಕಲ (ಮೊದಲು ತುಂಡಾದ ಚಕ್ಕೆ) ದಲ್ಲಿಯೇ ಇರುವುದರಿಂದ ತೇಜಃ ಪ್ರಾಪ್ತಿಗಾಗಿ ಅದನ್ನು ಅವಶ್ಯಕವಾಗಿ ಹಾಕಲೇಬೇಕು. ಪ್ರಥಮ ಶಕಲವು ತೇಜಸ್ಸಿನಿಂದ ಕೂಡಿರುವುದೆಂಬ ವಿಷಯವನ್ನು ಹಿಂದೆಯೇ (ಪ್ರಥಮೇನ ಶಕಲೇನ ಸಹ ತೇಜಃ ಪರಾ ಪತತಿ—(ತೃ. ಸಂ. ೬-೩-೩ ಪೇಜು ನೋಡಿ) ತಿಳಿಸಿರುವುದು.

**ದೇವಸ್ತ್ವಾ ಸವಿತಾ ಮಧ್ವಾನಕ್ತ್ವಿತ್ಯಾಹ ತೇಜಸೈವೈನಮನಕ್ತಿ**— **ದೇವಸ್ತ್ವಾ ಸವಿತಾ ಮಧ್ವಾ-ನಕ್ತು**—(ಸವಿತೃ ದೇವನು ನಿನ್ನನ್ನು ದೇವಯೋಗ್ಯವಾದ ಆಜ್ಯದಿಂದ ಲೇಪನ ಮಾಡಲಿ) ಎಂಬ ಮಂತ್ರವನ್ನು

ಚ್ಚರಿಸಿ ಯೂಪದ ಅಗ್ರಭಾಗವನ್ನು ಆಜ್ಯ (ತುಪ್ಪದಿಂದ) ಲೇಪನ ಮಾಡುವನು. ತೇಜೋ ವಾ ಆಜ್ಯಂ-ಎಂದರೆ ತೇಜಸ್ಸೇ ಆಜ್ಯವು ಎಂದು ಹೇಳಿರುವುದರಿಂದ ಆಜ್ಯದಿಂದ ಲೇಪನ ಮಾಡಿದರೆ ತೇಜಸ್ಸಿನಿಂದ ಲೇಪನ ಮಾಡಿದಂತಾಗುವುದು.

**ಸುಪಿಪ್ಪಲಾಭ್ಯಸ್ತ್ವೌಷಧೀಭ್ಯ ಇತಿ ಚಷಾಲಂ ಪ್ರತಿ ಮುಂಚತಿ ತಸ್ಮಾಚ್ಛೀರ್ಷತ ಓಷಧಯಃ ಫಲಂ ಗೃಹ್ಣಂತಿ**— ಸುಪಿಪ್ಪಲಾಭ್ಯಸ್ತ್ವೌಷಧೀಭ್ಯಃ— ಉತ್ತಮವಾದ ಫಲಗಳನ್ನು ಬಿಡುವ ವೃಕ್ಷಗಳ ಪ್ರಾಪ್ತಿಗಾಗಿ ಎಂಬ ಮಂತ್ರವನ್ನು ಹೇಳಿ ಯೂಪದ ತುದಿಯಲ್ಲಿ ಯೂಪದ ಪ್ರಥಮ ಶಕಲವನ್ನು ಸೇರಿಸುವನು. ಏಕೆಂದರೆ ವೃಕ್ಷಗಳು ತಮ್ಮ ತುದಿಯಲ್ಲಿ (ಅಗ್ರಭಾಗದಲ್ಲಿ) ಯೇ ಹಣ್ಣನ್ನು ಬಿಡುವವು. ಆದ್ದರಿಂದ ಯಜ್ಞಫಲ ಪ್ರಾಪ್ತಿಗಾಗಿ ಯೂಪದ ತುದಿಯಲ್ಲಿಯೇ ಸೇರಿಸಬೇಕು.

**ಅನಕ್ತಿ ತೇಜೋ ವಾ ಆಜ್ಯಂ ಯಜಮಾನೇನಾಗ್ನಿಷ್ಠಾಮಶ್ರಿಸ್ಸಂಮಿತಾ ಯದಗ್ನಿಷ್ಠಾಮಶ್ರಿಮನಕ್ತಿ ಯಜಮಾನಮೇವ ತೇಜಸಾನಕ್ತಿ**—ಅದನ್ನು ಆಜ್ಯದಿಂದ ಲೇಪನ ಮಾಡುವನು. ಆಜ್ಯವೇ ತೇಜಸ್ಸು. ಯೂಪವು ಯಜ್ಞಮಾಡುವ ಯಜಮಾನನಷ್ಟೇ ಎತ್ತರವಿರುವುದು. ಅಗ್ನಿಗೆ ಅಭಿಮುಖವಾಗಿರುವ (ಹತ್ತಿರವಿರುವ) ಯೂಪದ ಭಾಗವನ್ನು (ಕೋಣವನ್ನು) ಲೇಪನಮಾಡುವನು ಇದರಿಂದ ಯಜಮಾನನನ್ನೇ ತೇಜಸ್ಸಿನಿಂದ ಲೇಪನ ಮಾಡಿದಂತಾಗುವುದು.

**ಅಂತಮನಕ್ತ್ಯಂತಮೇವ ಯಜಮಾನಂ ತೇಜಸಾನಕ್ತಿ ಸರ್ವತಃ ಪರಿಮೃಶತ್ಯಪರಿವರ್ಗಮೇವಾಸ್ಮಿನ್ ತೇಜೋ ದಧಾತಿ**— ಯೂಪವನ್ನು ತುದಿಯವರೆಗೂ ಆಜ್ಯದಿಂದ ಲೇಪನಮಾಡುವನು. ಇದರಿಂದ ಯಜಮಾನನ್ನು ತೇಜಸ್ಸಿನಿಂದ ಲೇಪನಮಾಡಿದಂತೆ ಆಗುವುದು. ಅನಂತರ ಯೂಪವೆಲ್ಲವನ್ನೂ ಸುತ್ತಲೂ ಚೆನ್ನಾಗಿ ಲೇಪನಮಾಡುವನು. ಇದರಿಂದ ಯಜಮಾನನಲ್ಲಿ ತೇಜಸ್ಸನ್ನು ಸಂಪೂರ್ಣವಾಗಿ ಸ್ಥಾಪಿಸಿದಂತೆ ಆಗುವುದು.

**ಉದ್ದಿವಗ್‌ಂಸ್ತಭಾನಾಂತರಿಕ್ಷಂ ಪೃಣೇತ್ಯಾಹೈಷಾಂ ಲೋಕಾನಾಂ ವಿಧೃತ್ಯೈ**— ಅನಂತರ ಯೂಪವನ್ನು ಎತ್ತಿ ನಿಲ್ಲಿಸುವಾಗ ಉದ್ದಿವಗ್‌ಂಸ್ತಭಾನಾಂತರಿಕ್ಷಂ ಪೃಣ— ಎಲೈ ಯೂಪವೇ, ಸ್ವರ್ಗವನ್ನು ಅಥವಾ ಆಕಾಶವನ್ನು ಧರಿಸು, ಅಂತರಿಕ್ಷವನ್ನು ನಿನ್ನ ಆಕಾರದಿಂದ ತುಂಬು, ಭೂಮಿಯನ್ನು ದೃಢವಾಗುವಂತೆ ಮಾಡು ಎಂಬ ಮಂತ್ರವನ್ನು ಹೇಳುವನು ಮತ್ತು ಈ ಭೂಮ್ಯಂತರಿಕ್ಷಸ್ವರ್ಗಗಳ ದೃಢವಾದ ಸ್ಥಾಪನೆಗಾಗಿ ಈರೀತಿ ಮಾಡಬೇಕೆಂದು ಹೇಳುವನು.

**ವೈಷ್ಣವ್ಯರ್ಚಾ ಕಲ್ಪಯತಿ ವೈಷ್ಣವೋ ವೈ ದೇವತಯಾ ಯೂಪಃ ಸ್ವಯೈವೈನಂ ದೇವತಯಾ ಕಲ್ಪಯತಿ ದ್ವಾಭ್ಯಾಂ ಕಲ್ಪಯತಿ ದ್ವಿಪಾದ್ಯಜಮಾನಃ ಪ್ರತಿಷ್ಠಿತ್ಯೈ** — ಅನಂತರ ವಿಷ್ಣುದೇವತಾಕವಾದ ಋಕ್ಕನ್ನು ಪಠಿಸಿ ಯೂಪವನ್ನು ನಿಲ್ಲಿಸುವನು ಏಕೆಂದರೆ ಯೂಪಕ್ಕೆ ವಿಷ್ಣುವೇ ದೇವತೆಯು. ಆದುದರಿಂದ ಅದರ ಸ್ವಂತದೇವತಾಕವಾದ ಮಂತ್ರದಿಂದ ಸ್ಥಾಪಿಸುವನು. ಹೀಗೆ ಸ್ಥಾಪಿಸುವಾಗ ವಿಷ್ಣುದೇವತಾಕವಾದ **ತೇ ತೇ ಧಾಮಾನ್ಯುಶ್ಮಸಿ ಗಮಧ್ಯೇ ಗಾವೋ ಯತ್ರ ಭೂರಿಶೃಂಗಾ ಅಯಾಸಃ । ಅತ್ರಾಹ ತದುರುಗಾಯಸ್ಯ ವಿಷ್ಣೋಃ ಪರಮಂ ಪದಮವ ಭಾತಿ ಭೂರೇಃ ॥** (ತೈ. ಸಂ. ೧-೩-೬-೨) ಎಂಬ ಮಂತ್ರವನ್ನೂ, **ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ॥ ಇಂದ್ರಸ್ಯ ಯುಜ್ಯಃ ಸಖಾ॥** (ತೈ. ಸಂ. ೧-೩-೬-೨) ಎಂಬ ಮಂತ್ರವನ್ನೂ ಎಂದರೆ ಎರಡು ಮಂತ್ರಗಳನ್ನೂ ಪಠಿಸುವನು. ಏಕೆಂದರೆ ಯಜಮಾನನಿಗೆ ಎರಡು ಪಾದಗಳಿರುವವು. ಅಂತಹ ಯಜಮಾನನ ಶ್ರೇಯಸ್ಸಿಗಾಗಿ ಎರಡು ಮಂತ್ರಗಳನ್ನು ಪಠಿಸುವನು.

ಇದುವರೆಗೆ ಯೂಪಚ್ಛೇದನ ವಿಧಿನಿಯಮಗಳನ್ನು ಹೇಳಿ ಈಗ ಯೂಪಸಂಸ್ಕಾರಕ್ರಮವನ್ನು ಹೇಳುವರು. ಮೊದಲು ಯೂಪಪ್ರೋಕ್ಷಣ ಪ್ರಕಾರವನ್ನು ವಿವರಿಸಲಾಗಿರುವುದು—

**ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವೇತ್ಯಾಹೈಭ್ಯ ಏವೈನಂ ಲೋಕೇಭ್ಯಃ ಪ್ರೋಕ್ಷತಿ ಪರಾಂಚಂ ಪ್ರೋಕ್ಷತಿ ಪರಾಙಿವ ಹಿ ಸುವರ್ಗೋ ಲೋಕಃ**— ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವಾ ಎಂಬ ಮಂತ್ರವನ್ನು ಉಚ್ಚರಿಸಿ, ಎಲೈ ಯೂಪವೇ, ಭೂಮ್ಯಂತರಿಕ್ಷ ಸ್ವರ್ಗಲೋಕಗಳ ಸ್ಥಿತ್ಯರ್ಥವಾಗಿ ನಿನ್ನನ್ನು ಪ್ರೋಕ್ಷಿಸುವೆನು ಎಂದು ಹೇಳಿ ಯೂಪದ ಮೂಲಭಾಗ, ಮಧ್ಯಭಾಗ, ಊರ್ಧ್ವಭಾಗಗಳನ್ನು ಕ್ರಮವಾಗಿ ಪ್ರೋಕ್ಷಿಸುವನು. ಮೂಲದಿಂದ ಕ್ರಮವಾಗಿ ಮೇಲುಭಾಗದ ತುದಿಯವರೆಗೆ ಏಕೆ ಪ್ರೋಕ್ಷಿಸಬೇಕೆಂದರೆ ಸ್ವರ್ಗವು ಮೇಲು ಭಾಗದಲ್ಲಿರುವುದು. ಅಂತಹ ಸ್ವರ್ಗಲೋಕ ಪ್ರಾಪ್ತಿಗಾಗಿ ಕೆಳಗಿನಿಂದ ಮೇಲಿನವರೆಗೂ ಪ್ರೋಕ್ಷಿಸಬೇಕು.

**ಕ್ರೂರಮಿವ ವಾ ಏತತ್ಕರೋತಿ ಯತ್ಖನತ್ಯಪೋಽವ ನಯತಿ ಶಾಂತ್ಯೈ ಯವಮತೀರವ ನಯತ್ಯೂರ್ಗ್ವೈ ಯವಃ**— ಯೂಪಸ್ತಂಭವನ್ನು ಹೂಳುವುದಕ್ಕಾಗಿ ಹಳ್ಳವನ್ನು ತೆಗೆಯುವಾಗ (ಅಗಿಯುವಾಗ) ಭೂಮಿಯನ್ನು ಈ ರೀತಿ ಪ್ರಾರ್ಥಿಸುವನು.— ಎಲೈ ಭೂಮಿಯೇ, ನಿನ್ನನ್ನು ಗುದ್ದಲಿಯೇ ಮೊದಲಾದ ಸಾಧನಗಳಿಂದ ಅಗೆಯುವಾಗ ಹಾಗೆ ಅಗೆಯುವುದು ಕ್ರೂರವೆಂದು ಕಂಡುಬರುವುದಾದರೂ ಆ ದೋಷಪರಿಹಾರಕ್ಕಾಗಿ ಅಗೆದಿರುವ ಈ ಹಳ್ಳದಲ್ಲಿ ನೀರನ್ನು ಹುಯ್ಯುವೆನೆಂದು ಹೇಳಿ ದೋಷ ಶಾಂತಿಗಾಗಿ ಹಳ್ಳದಲ್ಲಿ ಯವಧಾನ್ಯ ಮಿಶ್ರಿತವಾದ ನೀರನ್ನು ಹುಯ್ಯುವನು. ಯವಧಾನ್ಯವು ಅನ್ನವನ್ನು (ಆಹಾರವನ್ನು) ಸೂಚಿಸುವುದು. ಅದರ ಪ್ರಾಪ್ತಿಗಾಗಿ ಯವಮಿಶ್ರಿತವಾದ ನೀರನ್ನು ಹಳ್ಳದಲ್ಲಿ ಹುಯ್ಯುವನು.

**ಯಜಮಾನೇನ ಯೂಪಃ ಸಂಮಿತೋ ಯಾವಾನೇವ ಯಜಮಾನಸ್ತಾವತೀರೇವಾಸ್ಮಿನ್ನೂರ್ಜಂ ದಧಾತಿ**— ಈ ಯೂಪವು ಯಜಮಾನನಷ್ಟು ಎತ್ತರವಾಗಿರುವುದು. ಯಜಮಾನನು ಅನ್ನಾದ್ಯಾಹಾರವನ್ನು ಅಪೇಕ್ಷಿಸುವುದರಿಂದ ಅದಕ್ಕೆ ಸಾಧನಭೂತವಾದ ಅನ್ನವನ್ನು (ಯವವನ್ನು) ಇದರಲ್ಲಿ ಹಾಕುವನು. ಅಥವಾ ಯಜಮಾನನು ಜೀವಿಸಿರುವವರೆಗೂ ಅವನಿಗೆ ಅನ್ನ ಪ್ರಾಪ್ತಿಗಾಗಿ ಯವವನ್ನು ಇದರಲ್ಲಿ ಹಾಕುವನು.

**ಪಿತೃಣಾಗ್ಂ ಸದನಮಸೀತಿ ಬರ್ಹಿರವ ಸ್ತೃಣಾತಿ ಪಿತೃ ದೇವತ್ಯಾ ೩ ಗ್ಂ ಹ್ಯೇತದ್ಯನ್ನಿಖಾತಂ ಯದ್ಬರ್ಹಿರನವಸ್ತೀರ್ಯ ಮಿನುಯಾತ್ಪಿತೃದೇವತ್ಯೋ ನಿಖಾತಃ ಸ್ಯಾದ್ಬರ್ಹಿರವಸ್ತೀರ್ಯ ಮಿನೋತ್ಯಸ್ಯಾಮೇವೈನಂ ಮಿನೋತಿ**— ಎಲೈ ಹಳ್ಳವೇ, ನೀನು ಪಿತೃದೇವತೆಗಳ ಸ್ಥಾನವು ಎಂದು ಹೇಳಿ ಬರ್ಹಿಃ ಎಂಬ ಕತ್ತರಿಸಿದ ತುಂಡು ದರ್ಭೆಗಳನ್ನು ಹರಡುವನು. ಈ ರೀತಿ ದರ್ಭೆಯನ್ನು ಹರಡದೆ ಹಳ್ಳದಲ್ಲಿ ಯೂಪವನ್ನು ನೆಟ್ಟರೆ ಅದು ಪಿತೃದೇವತೆಗಳಿಗೆ ಸೇರುವುದು. ಆದುದರಿಂದ ದರ್ಭೆಗಳನ್ನು ಹಳ್ಳದಲ್ಲಿ ಹರಡದೆ ಅದರ ಪಕ್ಕದಲ್ಲಿ ಭೂಮಿಯ ಮೇಲೆ ಹರಡುವನು. ಅನಂತರ ಯೂಪವನ್ನು ಹಳ್ಳದಲ್ಲಿ ನೆಡುವನು.

**ಯೂಪಶಕಲಮವಾಸ್ಯತಿ ಸತೇಜಸಮೇವೈನಂ ಮಿನೋತಿ**— ಮೊದಲು ಕತ್ತರಿಸಿದ ಯೂಪವೃಕ್ಷದ ಚಕ್ಕೆಯನ್ನು ಆ ಹಳ್ಳದಲ್ಲಿ ಹಾಕುವನು. ಆ ಚಕ್ಕೆಯು ತೇಜೋಯುಕ್ತವಾದುದು. ವೃಕ್ಷದ ತೇಜಸ್ಸೆಲ್ಲವೂ ಆ ಪ್ರಥಮ ಶಕಲ (ಮೊದಲು ತುಂಡಾದ ಚಕ್ಕೆ) ದಲ್ಲಿಯೇ ಇರುವುದರಿಂದ ತೇಜಃ ಪ್ರಾಪ್ತಿಗಾಗಿ ಅದನ್ನು ಅವಶ್ಯಕವಾಗಿ ಹಾಕಲೇಬೇಕು. ಪ್ರಥಮ ಶಕಲವು ತೇಜಸ್ಸಿನಿಂದ ಕೂಡಿರುವುದೆಂಬ ವಿಷಯವನ್ನು ಹಿಂದೆಯೇ (ಪ್ರಥಮೇನ ಶಕಲೇನ ಸಹ ತೇಜಃ ಪರಾ ಪತತಿ—(ತೈ. ಸಂ. ೬-೩-೩ ಪೇಜು ನೋಡಿ) ತಿಳಿಸಿರುವುದು.

**ದೇವಸ್ತ್ವಾ ಸವಿತಾ ಮಧ್ವಾನಕ್ತ್ವಿತ್ಯಾಹ ತೇಜಸೈವೈನಮನಕ್ತಿ**— **ದೇವಸ್ತ್ವಾ ಸವಿತಾ ಮಧ್ವಾನಕ್ತು**—(ಸವಿತೃ ದೇವನು ನಿನ್ನನ್ನು ದೇವಯೋಗ್ಯವಾದ ಆಜ್ಯದಿಂದ ಲೇಪನ ಮಾಡಲಿ) ಎಂಬ ಮಂತ್ರವನ್ನು

ಚ್ಚರಿಸಿ ಯೂಪದ ಅಗ್ರಭಾಗವನ್ನು ಆಜ್ಯ (ತುಪ್ಪದಿಂದ) ಲೇಪನ ಮಾಡುವನು. ತೇಜೋ ವಾ ಆಜ್ಯಂ-ಎಂದರೆ ತೇಜಸ್ಸೇ ಆಜ್ಯವು ಎಂದು ಹೇಳಿರುವುದರಿಂದ ಆಜ್ಯದಿಂದ ಲೇಪನ ಮಾಡಿದರೆ ತೇಜಸ್ಸಿನಿಂದ ಲೇಪನ ಮಾಡಿದಂತಾಗುವುದು.

ಸುಪಿಪ್ಪಲಾಭ್ಯಸ್ತ್ವೌಷಧೀಭ್ಯ ಇತಿ ಚಷಾಲಂ ಪ್ರತಿ ಮುಂಚತಿ ತಸ್ಮಾಚ್ಛೀರ್ಷತ ಓಷಧಯಃ ಫಲಂ ಗೃಹ್ಣಂತಿ— ಸುಪಿಪ್ಪಲಾಭ್ಯಸ್ತ್ವೌಷಧೀಭ್ಯಃ— ಉತ್ತಮವಾದ ಫಲಗಳನ್ನು ಬಿಡುವ ವೃಕ್ಷಗಳ ಪ್ರಾಪ್ತಿಗಾಗಿ ಎಂಬ ಮಂತ್ರವನ್ನು ಹೇಳಿ ಯೂಪದ ತುದಿಯಲ್ಲಿ ಯೂಪದ ಪ್ರಥಮ ಶಕಲವನ್ನು ಸೇರಿಸುವನು. ಏಕೆಂದರೆ ವೃಕ್ಷಗಳು ತಮ್ಮ ತುದಿಯಲ್ಲಿ (ಅಗ್ರಭಾಗದಲ್ಲಿ) ಯೇ ಹಣ್ಣನ್ನು ಬಿಡುವವು. ಆದ್ದರಿಂದ ಯಜ್ಞಫಲ ಪ್ರಾಪ್ತಿಗಾಗಿ ಯೂಪದ ತುದಿಯಲ್ಲಿಯೇ ಸೇರಿಸಬೇಕು.

ಅನಕ್ತಿ ತೇಜೋ ವಾ ಆಜ್ಯಂ ಯಜಮಾನೇನಾಗ್ನಿಷ್ಠಾಮಶ್ರಿಸ್ಸಂಮಿತಾ ಯದಗ್ನಿಷ್ಠಾಮಶ್ರಿಮನಕ್ತಿ ಯಜಮಾನಮೇವ ತೇಜಸಾನಕ್ತಿ—ಅದನ್ನು ಆಜ್ಯದಿಂದ ಲೇಪನ ಮಾಡುವನು. ಆಜ್ಯವೇ ತೇಜಸ್ಸು. ಯೂಪವು ಯಜ್ಞಮಾಡುವ ಯಜಮಾನನಷ್ಟೇ ಎತ್ತರವಿರುವುದು. ಅಗ್ನಿಗೆ ಅಭಿಮುಖವಾಗಿರುವ (ಹತ್ತಿರವಿರುವ) ಯೂಪದ ಭಾಗವನ್ನು (ಕೋಣವನ್ನು) ಲೇಪನಮಾಡುವನು ಇದರಿಂದ ಯಜಮಾನನನ್ನೇ ತೇಜಸ್ಸಿನಿಂದ ಲೇಪನ ಮಾಡಿದಂತಾಗುವುದು.

ಅಂತಮನಕ್ತ್ಯಂತಮೇವ ಯಜಮಾನಂ ತೇಜಸಾನಕ್ತಿ ಸರ್ವತಃ ಪರಿಮೃಶತ್ಯಪರಿವರ್ಗಮೇವಾಸ್ಮಿನ್ ತೇಜೋ ದಧಾತಿ—ಯೂಪವನ್ನು ತುದಿಯವರೆಗೂ ಆಜ್ಯದಿಂದ ಲೇಪನಮಾಡುವನು. ಇದರಿಂದ ಯಜಮಾನನ್ನು ತೇಜಸ್ಸಿನಿಂದ ಲೇಪನಮಾಡಿದಂತೆ ಆಗುವುದು. ಅನಂತರ ಯೂಪವೆಲ್ಲವನ್ನೂ ಸುತ್ತಲೂ ಚೆನ್ನಾಗಿ ಲೇಪನಮಾಡುವನು. ಇದರಿಂದ ಯಜಮಾನನಲ್ಲಿ ತೇಜಸ್ಸನ್ನು ಸಂಪೂರ್ಣವಾಗಿ ಸ್ಥಾಪಿಸಿದಂತೆ ಆಗುವುದು.

ಉದ್ದಿವಗ್‌ಂಸ್ತಭಾನಾಂತರಿಕ್ಷಂ ಪೃಣೇತ್ಯಾಹೈಷಾಂ ಲೋಕಾನಾಂ ವಿಧೃತ್ಯೈ—ಅನಂತರ ಯೂಪವನ್ನು ಎತ್ತಿ ನಿಲ್ಲಿಸುವಾಗ ಉದ್ದಿವಗ್‌ಂಸ್ತಭಾನಾಂತರಿಕ್ಷಂ ಪೃಣ—ಎಲೈ ಯೂಪವೇ, ಸ್ವರ್ಗವನ್ನು ಅಥವಾ ಆಕಾಶವನ್ನು ಧರಿಸು, ಅಂತರಿಕ್ಷವನ್ನು ನಿನ್ನ ಆಕಾರದಿಂದ ತುಂಬು, ಭೂಮಿಯನ್ನು ದೃಢವಾಗುವಂತೆ ಮಾಡು ಎಂಬ ಮಂತ್ರವನ್ನು ಹೇಳುವನು ಮತ್ತು ಈ ಭೂಮ್ಯಂತರಿಕ್ಷಸ್ವರ್ಗಗಳ ದೃಢವಾದ ಸ್ಥಾಪನೆಗಾಗಿ ಈರೀತಿ ಮಾಡಬೇಕೆಂದು ಹೇಳುವನು.

ವೈಷ್ಣವ್ಯರ್ಚಾ ಕಲ್ಪಯತಿ ವೈಷ್ಣವೋ ವೈ ದೇವತಯಾ ಯೂಪಃ ಸ್ವಯೈವೈನಂ ದೇವತಯಾ ಕಲ್ಪಯತಿ ದ್ವಾಭ್ಯಾಂ ಕಲ್ಪಯತಿ ದ್ವಿಪಾದ್ಯಜಮಾನಃ ಪ್ರತಿಷ್ಠಿತ್ಯೈ — ಅನಂತರ ವಿಷ್ಣುದೇವತಾಕವಾದ ಋಕ್ಕನ್ನು ಪಠಿಸಿ ಯೂಪವನ್ನು ನಿಲ್ಲಿಸುವನು ಏಕೆಂದರೆ ಯೂಪಕ್ಕೆ ವಿಷ್ಣುವೇ ದೇವತೆಯು. ಆದುದರಿಂದ ಅದರ ಸ್ವಂತದೇವತಾಕವಾದ ಮಂತ್ರದಿಂದ ಸ್ಥಾಪಿಸುವನು. ಹೀಗೆ ಸ್ಥಾಪಿಸುವಾಗ ವಿಷ್ಣುದೇವತಾಕವಾದ ತೇ ತೇ ಧಾಮಾನ್ಯುಶ್ಮಸಿ ಗಮಧ್ಯೇ ಗಾವೋ ಯತ್ರ ಭೂರಿಶೃಂಗಾ ಅಯಾಸಃ । ಅತ್ರಾಹ ತದುರುಗಾಯಸ್ಯ ವಿಷ್ಣೋಃ ಪರಮಂ ಪದಮವ ಭಾತಿ ಭೂರೇಃ ॥ (ತೈ. ಸಂ. ೧-೩-೬-೨) ಎಂಬ ಮಂತ್ರವನ್ನೂ, ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ॥ ಇಂದ್ರಸ್ಯ ಯುಜ್ಯಃ ಸಖಾ॥ (ತೈ. ಸಂ. ೧-೩-೬-೨) ಎಂಬ ಮಂತ್ರವನ್ನೂ ಎಂದರೆ ಎರಡು ಮಂತ್ರಗಳನ್ನೂ ಪಠಿಸುವನು. ಏಕೆಂದರೆ ಯಜಮಾನನಿಗೆ ಎರಡು ಪಾದಗಳಿರುವವು. ಅಂತಹ ಯಜಮಾನನ ಶ್ರೇಯಸ್ಸಿಗಾಗಿ ಎರಡು ಮಂತ್ರಗಳನ್ನು ಪಠಿಸುವನು.

**ಯಂ ಕಾಮಯೇತ ತೇಜಸ್ವೈನಂ ದೇವತಾಭಿರಿಂದ್ರಿಯೇಣ ವ್ಯರ್ಧಯೇಯಮಿತ್ಯಗ್ನಿಷ್ಠಾಂ ತಸ್ಯಾಶ್ರಿಮಾಹವನೀಯಾದಿತ್ಥಂ ವೇತ್ಥಂ ವಾತಿ ನಾವಯೇತ್ತೇಜಸೈವೈನಂ ದೇವತಾಭಿರಿಂದ್ರಿಯೇಣ ವ್ಯರ್ಧಯತಿ**— ಯಾವ ಮನುಷ್ಯನನ್ನಾದರೂ ಉದ್ದೇಶಿಸಿ ಅವನನ್ನು ದೇವತಾಸಂಬಂಧವಾದ ತೇಜಸ್ಸಿನಿಂದ ರಹಿತನನ್ನಾಗಿ ಮಾಡಬೇಕೆಂದು ಅಪೇಕ್ಷಿಸಿದರೆ ಆಗ ಅಗ್ನಿಗೆ ಅಭಿಮುಖವಾಗಿರುವ ಯೂಪದ ಅಂಚನ್ನು (ಎಂಟು ಮೂಲೆಗಳಲ್ಲಿ ಅಗ್ನಿಗೆ ಹತ್ತಿರವಿರುವ ಮೂಲೆ) ಆಹವನೀಯಾಗ್ನಿಗೆ ದೂರವಾಗಿರುವಂತೆ ಎಡಕ್ಕಾಗಲಿ ಬಲಕ್ಕಾಗಲಿ ಬೇರೆ ಪಾರ್ಶ್ವಕ್ಕೆ ಬರುವಂತೆ ತಿರುಗಿಸಬೇಕು. ಹೀಗೆ ಮಾಡಿದರ ಅವನಿಗೆ ದೇವತಾಸಂಬಂಧವಾದ ತೇಜಸ್ಸು ಉಂಟಾಗುವುದಿಲ್ಲ. (ಯೂಪವು ಆಹವನೀಯಾಗ್ನಿಗೆ ಪೂರ್ವಾಭಿಮುಖವಾಗಿ ಉತ್ತರವೇದಿಯಲ್ಲಿ ನೆಡಲ್ಪಡುವುದು. ಇಲ್ಲಿ ಅಗ್ನಿಷ್ಠಾಂ ಎಂದರ ಅಗ್ನಿಗೆ ಸಮೀಪವಾಗಿರುವ ಮೂಲೆ ಎಂದರೆ ಆಹವನೀಯಾಗ್ನಿಗೆ ಎದುರಾಗಿರುವ ಅಂಚನ್ನು ಬೇರೆ ಕಡೆಗೆ ಬರುವಂತೆ ಮಾಡುವುದೆಂದಭಿಪ್ರಾಯವು.)

**ಯಂ ಕಾಮಯೇತ ತೇಜಸ್ವೈನಂ ದೇವತಾಭಿರಿಂದ್ರಿಯೇಣ ಸಮರ್ಧಯೇಯಮಿತ್ಯಗ್ನಿಷ್ಠಾಂ ತಸ್ಯಾಶ್ರಿಮಾಹವನೀಯೇನ ಸಂ ಮಿನುಯಾತ್ತೇಜಸೈವೈನಂ ದೇವತಾಭಿರಿಂದ್ರಿಯೇಣ ಸಮರ್ಧಯತಿ**— ಯಾವ ಒಬ್ಬ ಪುರುಷನಿಗೆ ದೇವತಾಕವಾದ ತೇಜಸ್ಸು ಉಂಟಾಗಬೇಕೆಂದು ಬಯಸಿದರೆ ಆಗ ಅಗ್ನಿಗೆ ಸಮೀಪವಾಗಿರುವ ಯೂಪದ ಮೂಲೆಯನ್ನು ಆಹವನೀಯಾಗ್ನಿಗೆ ಅಭಿಮುಖವಾಗಿರುವಂತೆ ಮಾಡಬೇಕು. ಹೀಗೆ ಮಾಡುವುದರಿಂದ ಆ ಯಜಮಾನನಿಗೆ ದೇವತಾಸಂಬಂಧವಾದ ತೇಜಸ್ಸು ಲಭಿಸುವುದು.

**ಬ್ರಹ್ಮವನಿಂ ತ್ವಾ ಕ್ಷತ್ರವನಿಮಿತ್ಯಾಹ ಯಥಾಯಜುರೇವೈತತ್**— ಎಲೈ ಯೂಪವೇ, ನೀನು ಬ್ರಹ್ಮವರ್ಚಸ್ಸನ್ನೂ ಕ್ಷತ್ರಿಯ ಬಲವನ್ನೂ ದೊರಕಿಸಿಕೊಡುವವನು ಎಂದು ಹೇಳಿ ಪುರೀಷವನ್ನು ಪ್ರದಕ್ಷಿಣಾಕಾರವಾಗಿ ಸುತ್ತಲೂ ಹರಡುವನು. ಈರೀತಿ ಮಾಡುವುದು— **ಬ್ರಹ್ಮವನಿಂ ತ್ವಾ ಕ್ಷತ್ರವನಿಗ್ಂ ಸುಪ್ರಜಾವನಿಗ್ಂ ರಾಯಸ್ಪೋಷವನಿಂ ಪರ್ಯೂಹಾಮಿ** (ತೈ. ಸಂ. ೧-೩-೬-೨) ಎಂಬ ಯಜುರ್ಮಂತ್ರಕ್ಕೆ ಅನುಸಾರವಾಗಿರುವುದು.

**ಪರಿ ವ್ಯಯತ್ಯೂರ್ಗ್ವೈ ರಶನಾ ಯಜಮಾನೇನ ಯೂಪಃ ಸಂಮಿತೋ ಯಜಮಾನಮೇವೋರ್ಜಾ ಸಮರ್ಧಯತಿ ನಾಭಿದಘ್ನೇ ಪರಿ ವ್ಯಯತಿ ನಾಭಿದಘ್ನ ಏವಾಸ್ಮಾ ಊರ್ಜಂ ದಧಾತಿ ತಸ್ಮಾನ್ನಾಭಿದಘ್ನ ಊರ್ಜಾ ಭುಂಜತೇ**— ರಶನವೆಂಬ ದರ್ಭೆಯಿಂದ ಹೊಸೆದ ಹಗ್ಗವನ್ನು ಯೂಪಕ್ಕೆ ಸುತ್ತುವನು. ರಶನವೇ ಬಲವು, ಯೂಪವು ಯಜಮಾನನಷ್ಟೇ ಎತ್ತರವಿರುವುದು. ಹೀಗೆ ಸುತ್ತುವುದರಿಂದ ಯಜಮಾನನಿಗೆ ಬಲವನ್ನು ಸೇರಿಸಿದಂತೆ ಆಗುವುದು. ಹೀಗೆ ಸುತ್ತುವಾಗ ಯೂಪದ ಮಧ್ಯಭಾಗದಲ್ಲಿ ನಾಭಿಪ್ರದೇಶಕ್ಕೆ ಸರಿಯಾದ ಎತ್ತರದಲ್ಲಿ ಸುತ್ತಬೇಕು. ಹೀಗೆ ಮಾಡುವುದರಿಂದ ಯಜಮಾನನಿಗೆ ಶಕ್ತಿಯುಂಟಾಗುವುದು. ಏಕೆಂದರೆ ಮನುಷ್ಯರಿಗೆ ನಾಭಿಪ್ರದೇಶದಲ್ಲಿಯೇ ಶಕ್ತಿಯಿರುವುದು. ಯೂಪವು ಯಜಮಾನನಷ್ಟೇ ಎತ್ತರವಿರುವುದರಿಂದ ಯಜಮಾನನ ನಾಭಿಯ ಮಟ್ಟಕ್ಕೆ ಇರುವ ಭಾಗದಲ್ಲಿ ದರ್ಭೆಯನ್ನು ಸುತ್ತುವುದರಿಂದ ಯಜಮಾನನ ಬಲವು ಅಭಿವೃದ್ಧಿಗೊಳ್ಳುವುದೆಂಭಿಪ್ರಾಯವು.

**ಯಂ ಕಾಮಯೇತೋರ್ಜೈನಂ ವ್ಯರ್ಧಯೇಯಮಿತ್ಯೂರ್ಧ್ವಾಂ ವಾ ತಸ್ಯಾವಾಚೀಂ ವಾವೋಹೇದೂರ್ಜೈವೈನಂ ವ್ಯರ್ಧಯತಿ**— ಒಂದುವೇಳೆ ಯಾವನಿಗಾದರೂ ಬಲವಿಲ್ಲದಂತೆ ಮಾಡಬೇಕೆಂದು ಅಪೇಕ್ಷಿಸಿದರೆ ಆಗ ದರ್ಭೆಯ ಹಗ್ಗವನ್ನು ನಾಭಿಪ್ರದೇಶದ ಮಟ್ಟದ ಮೇಲಕ್ಕಾಗಲೀ, ಕೆಳಕ್ಕಾಗಲಿ ಬರುವಂತೆ ಯೂಪಕ್ಕೆ ಸುತ್ತಬೇಕು. ಇದರಿಂದ ಆ ಮನುಷ್ಯನು ಬಲವಿಲ್ಲದವನಾಗುವನು

**ಯದಿ ಕಾಮಯೇತ ವರ್ಷುಕಃ ಪರ್ಜನ್ಯಃ ಸ್ಯಾದಿತ್ಯರ್ವಾಚೀಮುಪೋಹೇದ್ವೃಷ್ಟಿಮೇವ ನಿಯಚ್ಛತಿ ಯದಿ ಕಾಮಯೇತಾವರ್ಷುಕಃ ಸ್ಯಾದಿತ್ಯೂರ್ಧ್ವಾಮುದೂಹೇದ್ವೃಷ್ಟಿಮೇವೋದ್ಯಚ್ಛತಿ**— ಪರ್ಜನ್ಯನು ಮಳೆಯನ್ನು ಹುಯ್ಯಬೇಕೆಂದು ಅಪೇಕ್ಷಿಸಿದರೆ ದರ್ಭೆಯನ್ನು ಕೆಳಭಾಗಕ್ಕೆ ಸುತ್ತಬೇಕು. ಅದರಿಂದ ಪರ್ಜನ್ಯನು ಮಳೆಯನ್ನು ಹುಯ್ಯುವಂತೆ ಮಾಡುವನು. ಮಳೆ ಹುಯ್ಯಬಾರದೆಂದು ಇಷ್ಟಪಟ್ಟರೆ ದರ್ಭೆಯನ್ನು ಮೇಲುಭಾಗಕ್ಕೆ ಸುತ್ತಬೇಕು ಆಗ ಮಳೆ ಬರುವುದಿಲ್ಲ.

**ಪಿತೃಣಾಂ ನಿಖಾತಂ ಮನುಷ್ಯಾಣಾಮೂರ್ಧ್ವಂ ನಿಖಾತಾದಾ ರಶನಾಯಾ ಓಷಧೀನಾಗ್ಂ ರಶನಾ ವಿಶ್ವೇಷಾಂ ದೇವಾನಾಮೂರ್ಧ್ವಗ್ಂ ರಶನಾಯಾ ಆ ಚಷಾಲಾದಿಂದ್ರಸ್ಯ ಚಷಾಲಗ್ಂ ಸಾಧ್ಯಾನಾಮತಿರಿಕ್ತಗ್ಂ ಸ ವಾ ಏಷ ಸರ್ವದೇವತ್ಯೋ ಯದ್ಯೂಪೋ ಯದ್ಯೂಪಂ ಮಿನೋತಿ ಸರ್ವಾ ಏವ ದೇವತಾಃ ಪ್ರೀಣಾತಿ**— ಯೂಪವು ಸರ್ವದೇವತಾಕವೆಂಬ ವಿಷಯವನ್ನು ಸಮರ್ಥಿಸುವರು. ಭೂಮಿಯನ್ನು ಅಗೆದು ಹಳ್ಳಮಾಡಿ ಅದರಲ್ಲಿ ನೆಟ್ಟಿರುವ ಎಂದರೆ ಸೇರಿಹೋಗಿರುವ ಯೂಪದ ಭಾಗವು (ಭೂಮಿಯ ಮಟ್ಟದಿಂದ ಕೆಳಗಿರುವ ಭಾಗವು) ಪಿತೃದೇವತೆಗಳಿಗೆ ಸೇರಿದುದು; ಭೂಮಿಯ ಮಟ್ಟದಿಂದ ರಶನವನ್ನು ಸುತ್ತಿರುವ ಪರ್ಯಂತರ ಭಾಗವು ಮನುಷ್ಯರಿಗೆ ಸೇರಿದ್ದು. ರಶನವನ್ನು ಸುತ್ತಿರುವ ಭಾಗವು ಔಷಧಿಗಳಿಗೆ ಸೇರಿದ್ದು; ರಶನದಿಂದ ಮೇಲುಭಾಗದವರೆಗೆ ಎಂದರೆ ಚಷಾಲದವರೆಗಿನ ಭಾಗವು ವಿಶ್ವೇದೇವತೆಗಳಿಗೆ ಸೇರಿದ್ದು; ಚಷಾಲಸ್ಥಾನವು ಎಂದರೆ ಮೇಲುಭಾಗವು (ತುದಿಯು) ಇಂದ್ರನಿಗೆ ಸೇರಿದ್ದು. ಉಳಿದ ಭಾಗವು ಸಾಧ್ಯರಿಗೆ ಸೇರಿದ್ದು. ಈರೀತಿ ಯೂಪದ ಭಾಗಗಳೆಲ್ಲವೂ ನಾನಾ ದೇವತೆಗಳಿಗೆ ಸೇರಿರುವುದರಿಂದ ಯೂಪವನ್ನು ಸ್ಥಾಪಿಸಿದರೆ ಎಲ್ಲಾ ದೇವತೆಗಳನ್ನು ತೃಪ್ತಿಪಡಿಸಿದಂತೆ ಆಗುವುದು.

**ಯಜ್ಞೇನ ವೈ ದೇವಾಃ ಸುವರ್ಗಂ ಲೋಕಮಾಯನ್ತೇಽಮನ್ಯಂತ ಮನುಷ್ಯಾ ನೋಽನ್ವಾಭವಿಷ್ಯಂತೀತಿ ತೇ ಯೂಪೇನ ಯೋಪಯಿತ್ವಾ ಸುವರ್ಗಂ ಲೋಕಮಾಯನ್ತಮೃಷಯೋ ಯೂಪೇನೈವಾನು ಪ್ರಾಜಾನನ್ತದ್ಯೂಪಸ್ಯ ಯೂಪತ್ವಂ ಯದ್ಯೂಪಂ ಮಿನೋತಿ ಸುವರ್ಗಸ್ಯ ಲೋಕಸ್ಯ ಪ್ರಜ್ಞಾತ್ಯೈ**— ಯಜ್ಞವನ್ನು ಮಾಡಿ ಅದರಿಂದ ದೇವತೆಗಳು ಸ್ವರ್ಗಲೋಕಕ್ಕೆ ಹೋದರು. ಹೋಗುವಾಗ ಮನುಷ್ಯರೂ ಯಜ್ಞಮಾಡಿ ಅದರಿಂದ ತಮ್ಮನ್ನನುಸರಿಸಿ ಸ್ವರ್ಗಕ್ಕೆ ಬಂದು ಅಲ್ಲಿ ತಮಗೆ ಸರಿಸಮಾನರಾಗುವರೆಂದು ಯೋಚಿಸಿ ಅವರು ಬರದಿರುವುದಕ್ಕಾಗಿ ಯೂಪವನ್ನು ನೆಟ್ಟರು. ಅದರ ರಹಸ್ಯವನ್ನು ಮನುಷ್ಯರು ತಿಳಿದಿಲ್ಲವಾದ್ದರಿಂದ ಅವರು ಯಜ್ಞಮಾಡಿ ಸ್ವರ್ಗಕ್ಕೆ ಹೋಗುವುದು ಸಾಧ್ಯವಿಲ್ಲವೆಂದು ಈರೀತಿ ಯೂಪವನ್ನು ನೆಟ್ಟು ತಾವು ಸ್ವರ್ಗಕ್ಕೆ ಹೋದರು. ಮನುಷ್ಯರನ್ನು ಸ್ವರ್ಗಕ್ಕೆ ಬರದಂತೆ ತಡೆಗಟ್ಟುವುದಕ್ಕಾಗಿ ಯೂಪವನ್ನು ನೆಟ್ಟರಷ್ಟೆ. ಈ ಕಾರಣಕ್ಕಾಗಿ ತಡೆಗಟ್ಟು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾದ ಶಬ್ದವು ಯೂಪವನ್ನು ಸೂಚಿಸುವುದಾದ್ದರಿಂದ ಯೂಪಕ್ಕೆ ಆ ಹೆಸರು ಬರಲು ಕಾರಣವಾಯಿತು. ಆದರೆ ಋಷಿಗಳು ಆ ಯೂಪಸ್ತಂಭದಿಂದ ಸ್ವರ್ಗಲೋಕಕ್ಕೆ ಹೋಗುವ ಸಾಧನವನ್ನು ಕಂಡುಕೊಂಡರು. ಈ ಯೂಪದಿಂದ ಯಜ್ಞಮಾಡಿ ಸ್ವರ್ಗಲೋಕಕ್ಕೆ ಹೋಗುವುದು ಸಾಧ್ಯವಾಗುವುದರಿಂದ, ಸ್ವರ್ಗಲೋಕಪ್ರಾಪ್ತಿಗಾಗಿ ಯಜ್ಞದಲ್ಲಿ ಯೂಪವನ್ನು ನೆಡುವರು.

**ಪುರಸ್ತಾನ್ಮಿನೋತಿ ಪುರಸ್ತಾದ್ಧಿ ಯಜ್ಞಸ್ಯ ಪ್ರಜ್ಞಾಯತೇಽಪ್ರಜ್ಞಾತಗ್ಂ ಹಿ ತದ್ಯದತಿಪನ್ನ ಆಹುರಿದಂ ಕಾರ್ಯಮಾಸೀದಿತಿ**— ಯೂಪವನ್ನು ಆಹವನೀಯಾಗ್ನಿಯ ಮುಂದುಗಡೆ ನೆಡಬೇಕು. ಏಕೆಂದರೆ ಎದುರಿಗೆ ಇದ್ದರೆ ಯಜ್ಞಮಾಡುವ ವಿಧಾನವು ತಿಳಿಯುವುದು. ಎದುರಿಗಿಲ್ಲದಿದ್ದರೆ ತಿಳಿಯುವುದಿಲ್ಲ. ಲೋಕದಲ್ಲಿ ಮನುಷ್ಯರು ವ್ಯವಹರಿಸುವಾಗ ಹೀಗೆ ಮಾಡಬಾರದಾಗಿತ್ತು ಎಂದು ತಿಳಿಯದ ವಿಷಯದಲ್ಲಿ ಪ್ರವರ್ತಿಸು

ವಾಗ ಹೇಳುವುದು ರೂಢಿಯಾಗಿರುವುದು. ಆದುದರಿಂದ ಯಜ್ಞವನ್ನು ಮಾಡುವ ವಿಧಾನವು ತಿಳಿಯದೆ ಕಾರ್ಯವು ಕೆಟ್ಟುಹೋಗದಿರುವುದಕ್ಕಾಗಿ ಯೂಪವನ್ನು ಆಹವನೀಯಾಗ್ನಿಯ ಮುಂಭಾಗದಲ್ಲಿಯೇ (ಪೂರ್ವಾಭಿಮುಖವಾಗಿ) ನೆಡಬೇಕು. ಹೀಗೆ ಮಾಡಿದರೆ ಯಜ್ಞದ ವಿಷಯವು ಸರಿಯಾಗಿ ತಿಳಿದು ಸಾಂಗವಾಗಿ ನೆರವೇರುವುದು.

**ಸಾಧ್ಯಾ ವೈ ದೇವಾ ಯಜ್ಞಮತ್ಯಮನ್ಯಂತ ತಾನ್ ಯಜ್ಞೋ ನಾಸ್ಪೃಶತ್ತಾನ್ ಯಜ್ಞಸ್ಯಾತಿರಿಕ್ತಮಾಸೀತ್ತದಸ್ಪೃಶದತಿರಿಕ್ತಂ ವಾ ಏತದ್ಯಜ್ಞಸ್ಯ ಯದಗ್ನಾವಗ್ನಿಂ ಮಥಿತ್ವಾ ಪ್ರಹರತ್ಯತಿರಿಕ್ತಮೇತದ್ಯೂಪಸ್ಯ ಯದೂರ್ಧ್ವಂ ಚಷಾಲಾತ್ತೇಷಾಂ ತದ್ಭಾಗಧೇಯಂ ತಾನೇವ ತೇನ** ಪ್ರೀಣಾತಿ—ಸಾಧ್ಯರೆಂಬ ದೇವತೆಗಳು ಯಜ್ಞವಿಷಯವನ್ನು ತಪ್ಪಾಗಿ ತಿಳಿದುಕೊಂಡರು. ಎಂದರೆ ಹಿಂದೆ ಹೇಳಿದಂತೆ ಯೂಪದಲ್ಲಿ ಪಿತೃಗಳು, ಮನುಷ್ಯರು, ಓಷಧಿಗಳು, ವಿಶ್ವೇದೇವತೆಗಳು, ಇಂದ್ರ ಇವರ ಭಾಗಗಳನ್ನು ಬಿಟ್ಟು ಉಳಿದ ಭಾಗವೆಲ್ಲಾ ಸಾಧ್ಯರಿಗೆ ಸೇರಿದ್ದೆಂದು ಹೇಳಿರುವುದನ್ನು ತಿಳಿಯದೆ ಎಲ್ಲವೂ ತಮಗೆ ಸೇರಬೇಕೆಂದು ತಪ್ಪಾಗಿ ಅರ್ಥಮಾಡಿಕೊಂಡರು ಅದರಿಂದ ಅವರಿಗೆ ಯಜ್ಞವು (ಭಾಗವು) ಸಿಕ್ಕಲಿಲ್ಲ. ಅವರಿಗೆ ಯೂಪದಲ್ಲಿ ಇತರ ದೇವತೆಗಳಿಗೆ ನಿರ್ದೇಶಿಸಿದ ಭಾಗವನ್ನು ಬಿಟ್ಟು ಅತಿರಿಕ್ತಭಾಗವು ಎಂದರೆ ಚಷಾಲದ ಮೇಲುಭಾಗವು ಮಾತ್ರ ದೊರೆಯಿತು. ಅದೇ ಅವರ ಭಾಗವು. ಅದರಿಂದಲೇ ಅವರನ್ನು ಯಜಮಾನನು ತೃಪ್ತಿಪಡಿಸುವನು.

**ದೇವಾ ವೈ ಸಗ್ಂಸ್ಥಿತೇ ಸೋಮೇ ಪ್ರ ಸ್ರುಚೋಽಹರನ್ಪ್ರ ಯೂಪಂ ತೇಽಮನ್ಯಂತ ಯಜ್ಞವೇಶಸಂ ವಾ ಇದಂ ಕುರ್ಮ ಇತಿ ತೇ ಪ್ರಸ್ತರಗ್ಂ ಸ್ರುಚಾಂ ನಿಷ್ಕ್ರಯಣಮಪಶ್ಯನ್ತ್ಸ್ವರುಂ ಯೂಪಸ್ಯ ಸಗ್ಂಸ್ಥಿತೇ ಸೋಮೇ ಪ್ರ ಪ್ರಸ್ತರಗ್ಂ ಹರತಿ ಜುಹೋತಿ ಸ್ವರುಮಯಜ್ಞವೇಶಸಾಯ**—ದೇವತೆಗಳು ತಾವು ಮಾಡುತ್ತಿದ್ದ ಸೋಮ ಯಾಗವನ್ನು ಪೂರ್ತಿಗೊಳಿಸಿದನಂತರ ತಾವು ಹೋಮಮಾಡುವುದಕ್ಕಾಗಿ ಉಪಯೋಗಿಸಿದ ಸ್ರುಕ್ಕುಗಳನ್ನು (ಹೋಮಮಾಡುವ ಮರದ ಸೌಟುಗಳನ್ನು) ಮತ್ತು ಯೂಪ ಸ್ತಂಭವನ್ನು ಅಗ್ನಿಯಲ್ಲಿ ಹಾಕಿದರು. ಅನಂತರ ತಾವು ಈರೀತಿ ಮಾಡಿದ ಕಾರ್ಯವು ತಪ್ಪೆಂದೂ ಯಜ್ಞವು ನಷ್ಟವಾಯಿತೆಂದೂ ಅವರಿಗೆ ತಿಳಿಯಿತು. ಆಗ ಅವರು ಸ್ರುಕ್ಕುಗಳನ್ನು ಇಡುವುದಕ್ಕಾಗಿ ಇಟ್ಟಿದ್ದ ಪ್ರಸ್ತರವನ್ನೂ (ದರ್ಭೆಯ ಕಂತೆ) ಯೂಪದ ಮೇಲು ಭಾಗದಲ್ಲಿದ್ದ ಸ್ವರುವನ್ನೂ (ಯೂಪವನ್ನು ಕತ್ತರಿಸುವಾಗ ಬಿದ್ದ ಪ್ರಥಮ ಶಕಲ ಅಥವಾ ಚಕ್ಕೆ) ನೋಡಿದರು. ಸ್ರುಕ್ಕುಗಳಿಗೆ ಬದಲಾಗಿ ಪ್ರಸ್ತರವನ್ನೂ ಯೂಪಕ್ಕೆ ಬದಲಾಗಿ ಸ್ವರು ಅಥವಾ ಪ್ರಥಮಶಕಲವನ್ನು ಹೋಮಮಾಡಿದರೆ ಯಜ್ಞವು ವಿಘಾತವಾಗುವುದಿಲ್ಲವೆಂದು ಅವರಿಗೆ ತಿಳಿಯಿತು. ಆದುದರಿಂದ ಮನುಷ್ಯರು ಯಜ್ಞಮಾಡುವಾಗ ಯಜ್ಞವು ನಷ್ಟವಾಗದಿರುವುದಕ್ಕಾಗಿ ಸ್ರುಕ್ಕುಗಳಿಗೆ ಪ್ರತಿನಿಧಿಯಾಗಿ ಪ್ರಸ್ತರವನ್ನು ಅಗ್ನಿಯಲ್ಲಿ ಹಾಕುವರು. ಯೂಪಕ್ಕೆ ಬದಲಾಗಿ ಸ್ವರುವನ್ನು ಹೋಮಮಾಡುವರು. ಹೀಗೆ ಮಾಡುವುದರಿಂದ ಯಜ್ಞವು ನಿರ್ವಿಘ್ನವಾಗಿ ನೆರವೇರಿದಂತಾಗುವುದು.

ಯೂಪಸಂಸ್ಕರಣವಿಧಿಯು ಸಮಾಪ್ತವು.

———

# ಎಂಟನೆಯ ಸೂಕ್ತವು

ಸಾಯಣಭಾಷ್ಯಂ.

ಅಂಜಂತೀತ್ಯಷ್ಟಮಂ ವೈಶ್ವಾಮಿತ್ರಮೇಕಾದಶರ್ಚಂ ಸೂಕ್ತಂ । ಅತ್ರಾನುಕ್ರಮಣಿಕಾ । ಅಂಜಂತಿ ಯೂಪಸ್ತುತಿಃ ಷಷ್ಠ್ಯಾದ್ಯಾಭಿರ್ಬಹವೋಽಂತ್ಯಾ ವ್ರಶ್ಚಿನ್ಯಷ್ಟಮೀ ವೈಶ್ವದೇವೀ ವಾ ತೃತೀಯಾಸಪ್ತಮ್ಯಾವನುಷ್ಟುಭಾವಿತಿ । ಉಚ್ಛ್ರಯಸ್ವ ವನಸ್ಪತೇ ಯೋ ವೃಕ್ಣಾಸ ಇತ್ಯೇತೇ ತೃತೀಯಾಸಪ್ತಮ್ಯಾವನುಷ್ಟುಭೌ ಶಿಷ್ಟಾಸ್ತ್ರಿಷ್ಟುಭಃ । ಕೃತ್ಸ್ನಸ್ಯ ಸೂಕ್ತಸ್ಯ ಯೂಪೋ ದೇವತಾ । ವನಸ್ಪತೇ ಶತವಲ್ಶ ಇತ್ಯಸ್ಯಾಶ್ಛಿನ್ನಯೂಪಸ್ಯ ಮೂಲಭೂತಃ ಸ್ಥಾಣುರ್ದೇವತಾ । ಆದಿತ್ಯಾ ರುದ್ರಾ ವಸವ ಇತ್ಯಷ್ಟಮೀ ವೈಶ್ವದೇವೀ ಯೌಪೀ ವಾ । ಅತ್ರ ಷಷ್ಠ್ಯಾದೀನಾಂ ಬಹವೋ ಯೂಪಾ ದೇವತಾ ಬಹೂನಾಂ ಸ್ತೂಯಮಾನತ್ವಾತ್ । ಶಿಷ್ಟಾ ಏಕಯೂಪದೇವತ್ಯಾಃ ॥ ಯೂಪಾಂಜನೇಽಞ್ಜಂತಿ ತ್ವಾಮಿತ್ಯೇಷಾ । ಪ್ರೇಷಿತೋ ಯೂಪಾಯಾಜ್ಯಮಾನಾಯಾಂಜಂತಿ ತ್ವಾಮಧ್ವರೇ ದೇವಯಂತಃ । ಅ. ೩-೧ । ಇತಿ ॥ ಯೂಪೋಚ್ಛ್ರಯಣೇ ಸಮಿದ್ಧಸ್ಯೇತಿ ದ್ವೇ ಋಚೌ । ಉಚ್ಛ್ರಯಸ್ವ ವನಸ್ಪತೇ ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾತ್ । ಅ. ೩-೧ । ಇತಿ ಸೂತ್ರಿತತ್ವಾತ್ ॥ ಯೂಪಪರಿವ್ಯಯಣೇ ಯುವಾ ಸುವಾಸಾಃ ಪರಿವೀತ ಆಗಾದಿತಿ ಪರಿಧಾನೀಯಾ । ಅ. ೩-೧ । ಇತಿ ಸೂತ್ರಿತತ್ವಾತ್ ॥ ಯೂಪೋಚ್ಛ್ರಯಣೇ ಜಾತೋ ಜಾಯತೇ ಸುದಿನತ್ವೇ ಅಹ್ನಾಮಿತ್ಯರ್ಧರ್ಚ ಆರಮೇದಿತಿ ಸೂತ್ರಿತಂ । ಯೂಪೈಕಾದಶಿನ್ಯಾಮನ್ಯತ್ರಾಪಿ ಬಹುಯೂಪಯುಕ್ತೇ ಕರ್ಮಣಿ ಯಾನ್ವೋ ನರ ಇತ್ಯಾದಿಭಿಃ ಷಡ್ಭಿಃ ಪಂಚಭಿರ್ವಾ ಸಂಸ್ತುಯಾತ್ । ಸಂಸ್ತುಯಾದನಭಿಹಿಂಕೃತ್ಯ ಯಾನ್ವೋ ನರೋ ದೇವಯಂತೋ ನಿ ಮಿಮ್ಯುರಿತಿ ಷಡ್ಭಿಃ ಪಂಚಭಿರ್ವಾ । ಅ. ೩-೧ । ಇತಿ ॥

ಅನುವಾದವು-ಅಂಜಂತಿ ಎಂಬ ಈ ಸೂಕ್ತವು ಮೂರನೆಯ ಮಂಡಲದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು. ಅನುಕ್ರಮಣಿಕೆಯಲ್ಲಿ **ಅಂಜಂತಿ ಯೂಪಸ್ತುತಿಃ ಷಷ್ಠ್ಯಾದ್ಯಾಭಿರ್ಬಹವೋಽಂತ್ಯಾವ್ರಶ್ಚಿನ್ಯಷ್ಟಮೀ ವೈಶ್ವದೇವೀ ವಾ ತೃತೀಯಾಸಪ್ತಮ್ಯಾವನುಷ್ಟುಭಾವಿತಿ**—ಎಂದು ಹೇಳಿರುವುದು. **ಉಚ್ಛ್ರಯಸ್ವ ವನಸ್ಪತೇ** ಎಂಬ ಋಕ್ಕೂ **ಯೋ ವೃಕ್ಣಾಸಃ** ಎಂಬ ಮೂರು ಮತ್ತು ಏಳನೆಯ ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು. ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಒಟ್ಟು ಸೂಕ್ತಕ್ಕೆಲ್ಲಾ ಯೂಪವೇ ದೇವತೆಯು. ವನಸ್ಪತೇ ಶತವಲ್ಶ ಎಂಬ ಋಕ್ಕಿನಿಂದ ಯೂಪವನ್ನು ಕತ್ತರಿಸಿದ ಮೇಲೆ ಭೂಮಿಯಲ್ಲಿ ನಿಂತಿರುವ ವೃಕ್ಷದ ಬುಡಭಾಗವನ್ನು ಸ್ತುತಿಸುವುದರಿಂದ ಆ ಋಕ್ಕಿಗೆ ಮೂಲಭೂತ ಸ್ಥಾಣು ಎಂಬುದು ದೇವತೆಯು. ಎಂಟನೆಯ ಋಕ್ಕಿಗೆ ಆದಿತ್ಯರು, ರುದ್ರರು, ವಸುಗಳು ಎಂಬುವರು ದೇವತೆಯು. ಅಥವಾ ಯೂಪವೇ ದೇವತೆಯು. ಏಕೆಂದರೆ **ಷಷ್ಠ್ಯಾದೀನಾಂ ಬಹವೋ ಯೂಪಾ ದೇವತಾ ಬಹೂನಾಂ ಸ್ತೂಯಮಾನತ್ವಾತ್** ಎಂದು ಹೇಳಿರುವಂತೆ ೬, ೭, ೮, ೯, ೧೦ ನೆಯ ಋಕ್ಕುಗಳಿಗೆ ಅನೇಕ ಯೂಪಗಳೇ ದೇವತೆಯು. ಉಳಿದ ಋಕ್ಕುಗಳು ಏಕ ಯೂಪದೇವತಾಕಗಳು. ಯೂಪವನ್ನು ಘೃತದಿಂದ ಲೇಪನ ಮಾಡುವಾಗ **ಅಂಜಂತಿ ತ್ವಾಂ** ಎಂಬ ಮೊದಲನೆಯ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ **ಪ್ರೇಷಿತೋ ಯೂಪಾಯಾಜ್ಯಮಾನಾಯಾಂಜಂತಿ** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು (ಆ ೩-೧) ಯೂಪವನ್ನು ಎತ್ತಿ ನಿಲ್ಲಿಸುವಾಗ **ಸಮಿದ್ಧಸ್ಯ ಶ್ರಯಮಾಣಃ** ಎಂಬ ಋಕ್ಕೂ **ಉಚ್ಛ್ರಯಸ್ವ ವನಸ್ಪತೇ**—ಎಂಬ ಋಕ್ಕೂ ಸಹ ಪಠಿಸಲ್ಪಡಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ

**ಉಚ್ಛ್ರಯಸ್ವ ವನಸ್ಪತೇ ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು. ಆ. ೩-೧) ಯೂಪ ಪರಿಧಾನಕಾಲದಲ್ಲಿ **ಯುವಾ ಸುವಾಸಾಃ ಪರಿವೀತ ಆಗಾತ್** ಎಂಬ ಋಕ್ಕನ್ನು ಪಠಿಸ ಬೇಕೆಂದು ಆ ಸೂತ್ರದಲ್ಲಿಯೇ ಹೇಳಿದೆ (ಆ. ೩-೧) ಯೂಪವನ್ನು ಎತ್ತಿ ನೆಡುವಾಗ **ಜಾತೋ ಜಾಯತೇ ಸುದಿನತ್ವೇ ಅಹ್ನಾಂ** ಎಂಬ ಋಕ್ಕಿನಲ್ಲಿ ಅರ್ಧ ಋಕ್ಕನ್ನು ಮಾತ್ರ ಪಠಿಸಿ ನಿಲ್ಲಿಸಬೇಕೆಂದು ಸೂತ್ರವಿರುವುದು. ಯೂಪೈಕಾದಶಿನೀ ಎಂಬ ಕರ್ಮದಲ್ಲಿಯೂ ಅನೇಕ ಯೂಪಗಳನ್ನು ನೆಡಬೇಕಾದ ಇತರ ಕರ್ಮಗಳಲ್ಲಿಯೂ **ಯಾನ್ವೋ ನರೋ ದೇವಯಂತೋ ನಿ ಮಿಮ್ಯುಃ** ಎಂಬ ಋಕ್ಕನ್ನು ಪ್ರಾರಂಭಿಸಿ ಮುಂದಕ್ಕೆ ಐದಾರು ಋಕ್ಕುಗಳಿಂದ ಯೂಪಗಳನ್ನು ಸ್ತುತಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸಂಸ್ತುಯಾದನಭಿಹಿಂಕೃತ್ಯ ಯಾನ್ವೋ ನರೋ ದೇವಯಂತೋ ನಿ ಮಿಮ್ಯುರಿತಿ ಷಡ್ಭಿಃ ಪಂಚಭಿರ್ವಾ** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು. (ಆ. ೩-೧).

## ಸೂಕ್ತ—೮

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೮ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೩, ೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೧೧

ಋಷಿಃ—ವಿಶ್ವಾಮಿತ್ರಃ ॥

ದೇವತಾ—೧-೫ ಯೂಪಃ । ೬, ೭, ೯, ೧೦ ಯೂಪಾಃ । ೮. ವಿಶ್ವೇ ದೇವಾ ಯೂಪಾ ವಾ । ೧೧ ಛಿನ್ನಯೂಪಸ್ಯ ಮೂಲಭೂತಃ ಸ್ಥಾಣುಃ ॥

ಛಂದಃ—೧, ೨, ೪-೬, ೮-೧೧ ತ್ರಿಷ್ಟುಪ್ । ೩, ೭ ಅನುಷ್ಟುಪ್ ॥

ಸಂಹಿತಾಪಾಠಃ

**ಅಂಜಂತಿ ತ್ವಾ ಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ।**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉ-**
**ಪಸ್ಥೇ ॥ ೧ ॥**

ಪದಪಾಠಃ

**ಅಂಜಂತಿ । ತ್ವಾಂ । ಅಧ್ವರೇ । ದೇವಽಯಂತಃ । ವನಸ್ಪತೇ । ಮಧುನಾ । ದೈವ್ಯೇನ ।**
**ಯತ್ । ಊರ್ಧ್ವಃ । ತಿಷ್ಠಾಃ । ದ್ರವಿಣಾ । ಇಹ । ಧತ್ತಾತ್ । ಯತ್ । ವಾ । ಕ್ಷಯಃ । ಮಾತುಃ । ಅಸ್ಯಾಃ । ಉಪಽಸ್ಥೇ ॥ ೧ ॥**

ಸಾಯಣಭಾಷ್ಯಂ.

ವನಸ್ಪತೇ ಖದಿರಪಲಾಶಾದಿಲಕ್ಷಣ ಹೇ ಯೂಪ ಅಧ್ವರೇ ಯಜ್ಞೇ ದೇವಯಂತೋ ದೇವಾನ್ ಕಾಮಯಮಾನಾ ಅಧ್ವರ್ಯ್ವಾದಯೋ ದೈವ್ಯೇನ ಮಧುನಾ ದೇವಸಂಬಂಧಿನಾ ಮಧುನಾ ಘೃತೇನ । ಏತದ್ವೈ ಮಧು ದೈವ್ಯಂ ಯದಾಜ್ಯಮಿತ್ಯಾಮ್ನಾನಾತ್ । ಐ. ಬ್ರಾ. ೨-೨। ತೇನ ಘೃತೇನ ತ್ವಾಮಂಜಂತಿ । ತ್ವಯಿ ಘೃತಂ ಸಿಂಚಂತೀತ್ಯರ್ಥಃ । ಯತ್ ಯದಿ ತ್ವಮೂರ್ಧ್ವಸ್ತಿಷ್ಠಾಃ । ಉನ್ನತಸ್ತಿಷ್ಠಸಿ । ಯದ್ವಾ ಯದಿ ವಾ ಮಾತುರಸ್ಯಾ ಮಾತೃಭೂತಾಯಾಃ ಪೃಥಿವ್ಯಾ ಉಪಸ್ಥ ಉತ್ಸಂಗೇ ತೇ ಕ್ಷಯೋ ನಿವಾಸಃ । ಯದ್ಯೂರ್ಧ್ವಸ್ತಿಷ್ಠಸಿ ಯದಿ ವಾ ಭೂಮೌ ಶಯಾನೋ ವರ್ತಸೇ ಉಭಯಥಾಪಿ ತ್ವಮಿಹಾಸ್ಮಾಸು ದ್ರವಿಣಾ ಧನಾನಿ ಧತ್ತಾತ್ । ಧೇಹಿ ॥ ಬ್ರಾಹ್ಮಣೇನೇಯಮೃಗ್ವ್ಯಾಖ್ಯಾತಾ । ಅಂಜಂತಿ ತ್ವಾಮಧ್ವರೇ ದೇವಯಂತ ಇತ್ಯನ್ವಾಹಾಧ್ವರೇ ಹ್ಯೇನಂ ದೇವಯಂತೋಽಂಜಂತಿ ವನಸ್ಪತೇ ಮಧುನಾ ದೈವ್ಯೇನೇತ್ಯೇತದ್ವೈ ಮಧು ದೈವ್ಯಂ ಯದಾಜ್ಯಂ ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥ ಇತಿ ಯದಿ ಚ ತಿಷ್ಠಾಸಿ ಯದಿ ಚ ಶಯಾಸೈ ದ್ರವಿಣಮೇವಾಸ್ಮಾಸು ಧತ್ತಾದಿತ್ಯೇವ ತದಾಹ । ಐ. ಬ್ರಾ. ೨-೨ । ಇತಿ । ತಥಾ ಚ ನಿರುಕ್ತಮಪಿ । ಅಂಜಂತಿ ತ್ವಾಮಧ್ವರೇ ದೇವಾನ್ಕಾಮಯಮಾನಾ ವನಸ್ಪತೇ ಮಧುನಾ ದೈವ್ಯೇನ ಚ ಘೃತೇನ ಚ ಯದೂರ್ಧ್ವಃ ಸ್ಥಾಸ್ಯಸಿ ದ್ರವಿಣಾನಿ ಚ ನೋ ದಾಸ್ಯಸಿ ಯದ್ವಾ ತೇ ಕೃತಃ ಕ್ಷಯೋ ಮಾತುರಸ್ಯಾ ಉಪಸ್ಥ ಉಪಸ್ಥಾನೇ । ನಿ. ೮-೧೮ । ಇತಿ ॥ ಅಂಜಂತಿ । ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು । ರುಧಾದಿತ್ವಾತ್ ಶ್ನಂ । ತಸ್ಯ ಲಟಿ ಝೋಽಂತಾದೇಶಃ । ಅನಿದಿತಾಮಿತ್ಯುಪಧಾಲೋಪಃ । ಶ್ನಸೋರಲ್ಲೋಪ ಇತ್ಯಲ್ಲೋಪಃ । ಪ್ರತ್ಯಯಸ್ವರೇಣ ಮಧ್ಯೋದಾತ್ತಃ । ತ್ವಾಂ । ಅಮಿ ಯುಷ್ಮಚ್ಛಬ್ದಸ್ಯ ತ್ವಮಾವೇಕವಚನ ಇತಿ ತ್ವಾದೇಶಃ । ದ್ವಿತೀಯಾಯಾಂ ಚೇತ್ಯಾಕಾರಃ । ಏಕಾದೇಶ ಉದಾತ್ತೇನೋದಾತ್ತ ಇತ್ಯೇಕಾದೇಶಸ್ಯೋದಾತ್ತತ್ವಂ । ಅಧ್ವರೇ । ನ ವಿದ್ಯತೇ ಧ್ವರೋ ಹಿಂಸಾ ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾಂತೋದಾತ್ತತ್ವಂ । ದೇವಯಂತಃ । ದೇವಾನಾತ್ಮನ ಇಚ್ಛಂತಃ । ಸುಪ ಆತ್ಮನಃ ಕ್ಯಚ್ । ಕ್ಯಚಿ ಚೇತೀತ್ವಂ ಅಕೃತ್ಸಾರ್ವಧಾತುಕಯೋರಿತಿ ದೀರ್ಘತ್ವಂ ಚ ನ ಛಂದಸ್ಯಪುತ್ರಸ್ಯೇತ್ಯನೇನ ಪ್ರತಿಷಿಧ್ಯತೇ । ತದಂತಾಚ್ಛತೃಪ್ರತ್ಯಯಃ । ಶಪಃ ಪಿತ್ತ್ವಾಲ್ಲಸಾರ್ವಧಾತುಕಸ್ವರೇಣ ಚಾನುದಾತ್ತತ್ವೇ ಕೃತೇ ತಯೋರೇಕಾದೇಶ ಉದಾತ್ತೇನೋದಾತ್ತ ಇತಿ ಕ್ಯಚ ಏವ ಸ್ವರಃ । ವನಸ್ಪತೇ । ಆಮಂತ್ರಿತಸ್ಯ ಚೇತ್ಯಾದ್ಯುದಾತ್ತತ್ವಂ । ಮಧುನಾ । ಫಲಿಪಾಟಿನಮಿಮನಿಜನಾಂ ಗುಕ್ಪಟಿನಾಕಿಧತಶ್ಚೇತ್ಯಾದಿನಾ ಉಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ದೈವ್ಯೇನ । ದೇವಾದ್ಯಞಞಾವಿತಿ ಯಞ್ । ಞಿತ್ತ್ವಾದ್ವೃದ್ಧಿಃ । ಯಸ್ಯೇತಿ ಲೋಪಃ । ಞಿತ್ತ್ವಾದಾದ್ಯುದಾತ್ತಃ । ತಿಷ್ಠಾಃ । ಷ್ಠಾ ಗತಿನಿವೃತ್ತೌ । ಲೇಟಿ ಸಿಪ್ । ಇತಶ್ಚ ಲೋಪ ಇತೀಕಾರಲೋಪಃ । ಶಪ್ । ಶಿತ್ತ್ವಾತ್ ಪಾಘ್ರೇತ್ಯಾದಿನಾ ತಿಷ್ಠಾದೇಶಃ । ಲೇಟೋಽಡಾಟಾವಿತ್ಯಡಾಗಮಃ । ಯಚ್ಛಬ್ದಯೋಗಾನ್ನಿಘಾತಾಭಾವಃ । ತಿಷ್ಠಾದೇಶಸ್ಯಾದ್ಯುದಾತ್ತತ್ವೇನ ನಿಪಾತಿತತ್ವಾದಾದ್ಯುದಾತ್ತಃ । ದ್ರವಿಣಾ । ದ್ರುದಕ್ಷಿಭ್ಯಾಮಿನನ್ನಿತೀನನ್ಪ್ರತ್ಯಯಃ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ನಿತ್ತ್ವಾದಾದ್ಯುದಾತ್ತಃ । ಇಹ । ಇದಂಶಬ್ದಾತ್ಸಪ್ತಮ್ಯರ್ಥೇ ಇದಮೋ ಹ ಇತಿ ಹಃ । ಇದಮ ಇಶಿತೀಶಾದೇಶಃ । ಶಿತ್ತ್ವಾತ್ಸರ್ವಾದೇಶಃ । ಪ್ರತ್ಯಯಸ್ವರಃ । ಧತ್ತಾತ್ । ಡುಧಾಞ್ ಧಾರಣಪೋಷಣಯೋರಿತ್ಯಸ್ಯ ಪ್ರಾರ್ಥನೇ ಲೋಟ್ । ಸಿಪ್ । ತಸ್ಯ ಸೇರ್ಹ್ಯಪಿಚ್ಚೇತಿ ಹಿರಾದೇಶಃ । ತುಹ್ಯೋಃ । ಪಾ. ೭-೧-೩೫ । ಇತಿ ತಾತಙಾದೇಶಃ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ದಧಸ್ತಥೋಶ್ಚ । ಪಾ. ೮-೨-೩೮ । ಇತಿ ಭಷ್‌ಭಾವಃ । ಜಶ್ತ್ವಚರ್ತ್ವೇ । ನಿಘಾತಃ ।

ವಾ । ಚಾದಿತ್ವಾದನುದಾತ್ತಃ । ಕ್ಷಯಃ । ಕ್ಷಿಯಂತಿ ನಿವಸಂತ್ಯಸ್ಮಿನ್ನಿತ್ಯಧಿಕರಣೇ ಘಃ । ಕ್ಷಯೋ ನಿವಾಸ ಇತ್ಯಾದ್ಯುದಾತ್ತತ್ವಂ । ಮಾತುಃ । ನಪ್ತೃನೇಷ್ಟೃ ಇತ್ಯಾದಿನಾ ತೃಜಂತತ್ವೇನ ನಿಪಾತನಾದಂತೋದಾತ್ತಃ । ಋತಉದಿತಿ ಜಸಃ ಪೂರ್ವಪದಯೋರುಕಾರಃ ಅಸ್ಯಾಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಉಪಸ್ಥೇ । ಷ್ಠಾ ಗತಿನಿವೃತ್ತೌ । ಆತಶ್ಚೋಪಸರ್ಗ ಇತಿ ಕಃ । ತತ್ಪುರುಷೇ ತುಲ್ಯಾರ್ಥೇತಿ ಮುದುಷ್ಟೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ ॥

ಪ್ರತಿಪದಾರ್ಥ

**ವನಸ್ಪತೇ**—ಪಲಾಶಖದಿರಾದಿಲಕ್ಷಣವಾದ ಎಲೈಯೂಪವೇ । **ಅಧ್ವರೇ**—ಯಜ್ಞದಲ್ಲಿ । **ದೇವಯಂತಃ**—ದೇವತೆಗಳನ್ನು ಕಾಮಿಸುವವರಾದ ಅಧ್ವರ್ಯು ಮೊದಲಾದವರು। **ದೈವ್ಯೇನ**—ದಿವ್ಯವಾದ । **ಮಧುನಾ**—ಘೃತದಿಂದ । **ತ್ವಾಂ**—ನಿನ್ನನ್ನು । **ಅಜಂತಿ**—ಲೇಪಿಸುತ್ತಾರೆ (ಎಲೈ ಯೂಪವೇ ನೀನು) । **ಯತ್ ಊರ್ಧ್ವಃ ತಿಷ್ಠಾಃ**—ನೇರವಾಗಿ ನಿಂತಿದ್ದರೂ । **ವಾ**—ಅಥವಾ । **ಮಾತುಃ**—ನಿನಗೆ ಮಾತೃಭೂತಳಾದ । **ಅಸ್ಯಾಃ**—ಈ ಭೂದೇವಿಯ । **ಉಪಸ್ಥೇ**—ಅಂಕದಲ್ಲಿ । **ಯತ್** (ತೇ) **ಕ್ಷಯಃ**—ನಿನ್ನ ನಿವಾಸವಾದರೂ । **ಇಹ**—ಈ (ನಮ್ಮಲ್ಲಿ) । **ದ್ರವಿಣಾ**—ಧನಗಳನ್ನು । **ಧತ್ತಾತ್**—ಇಡು. (ಕೊಡು)

ಭಾವಾರ್ಥ

ಎಲೈ ಯೂಪವೇ, ದೇವತೆಗಳು ಯಜ್ಞಕ್ಕೆ ಆಗಮಿಸಬೇಕೆಂದು ಇಚ್ಛಿಸುವ ಅಧ್ವರ್ಯು ಮೊದಲಾದ ಋತ್ವಿಜರು ನಿನಗೆ ದಿವ್ಯವಾದ ಘೃತವನ್ನು ಲೇಪಿಸುತ್ತಾರೆ ; ಎಲೈ ಯೂಪವೇ, ನೀನು ಉನ್ನತನಾಗಿ ನಿಂತಿರುವಾಗಲೂ, ನಿನಗೆ ಮಾತೃಸ್ವರೂಪಳಾದ ಭೂಮಿಯ ಮೇಲೆ ಬಿದ್ದಿರುವಾಗಲೂ, ನಮಗೆ ಧನಾದಿಗಳನ್ನು ಅನುಗ್ರಹಿಸು.

English Translation.

Vanaspati, the devout anoint you with sacred butter at the sacrifice ; and whether you stand erect, or your abode be on the lap of this your mother (earth), grant us riches.

ವಿಶೇಷ ವಿಷಯಗಳು

**ವನಸ್ಪತೇ—ಖದಿರಪಲಾಶಾದಿಲಕ್ಷಣ ಯೂಪ** ಈ ಋಕ್ಕಿನಲ್ಲಿ ಯೂಪದ ವಿಷಯವನ್ನು ವಿವರಿಸಿದೆ. ಯಜ್ಞಮಾಡುವ ಯಜಮಾನರು ಋತ್ವಿಜರೊಡನೆ ಕಾಡಿಗೆ ಹೋಗಿ ತಮ್ಮ ವೇದಶಾಖೆಯಲ್ಲಿ ಉಕ್ತವಾಗಿರುವ ಪ್ರಕಾರ ಯೂಪಯೋಗ್ಯವಾದ ಮರವನ್ನು ಗೊತ್ತುಮಾಡಿ ಅನಂತರ ಅದನ್ನು ಆಯಾಯ ಮಂತ್ರಗಳಿಂದ ಸಂಸ್ಕರಿಸಿದನಂತರ ಕತ್ತರಿಸಿತಂದು ಯಾಗಶಾಲೆಯಲ್ಲಿ ನೆಡುವರು. ಇದಕ್ಕೆ ಯಾಗದಲ್ಲಿ ಉಪಯೋಗಿಸುವ ಪಶುವನ್ನು ಕಟ್ಟುವುದಕ್ಕೆ ಮುಂಚಿತವಾಗಿ ಇದನ್ನೂ ಪೂಜಿಸುವರು. ಈ ಮರವು ಕಗ್ಗಲಿ, ಅಥವಾ ಮುತ್ತುಗದಮರ, ಎಂಬ ಜಾತಿಗೆ ಸೇರುದುದೂ, ಅಥವಾ ಇತರ ವಿಧವಾಗಿರುವುದೂ ಆಗಬಹುದೆಂದು ಸಾಯಣರು ವರ್ಣಿಸಿದಾರೆ.

**ಅಧ್ವರೇ ದೇವಯಂತಃ ದೈವ್ಯೇನ ಮಧುನಾ ತ್ವಾಂ ಅಂಜಂತಿ**—ಯಜ್ಞೇ ದೇವಾನ್ ಕಾಮಯಮಾನಾಃ ಋತ್ವಿಜಃ ಅಧ್ವರ್ಯ್ವಾದಯಃ ಘೃತೇನ ತ್ವಯಿ ಸಿಂಚಂತಿ ದೇವತೆಗಳ ಅನುಗ್ರಹವನ್ನು ಅಪೇಕ್ಷಿಸುವ

ಅಧ್ವರ್ಯುವೇ ಮೊದಲಾದ ಋತ್ವಿಕ್ಕುಗಳು ಯಜ್ಞದಲ್ಲಿ ಯೂಪದಮರಕ್ಕೆ ತುಪ್ಪವೇ ಮೊದಲಾದವುಗಳನ್ನು ಬಳಿದು ಪೂಜಿಸುವರು. ಇದನ್ನು ಇಲ್ಲಿ ಯೂಪವನ್ನೇ ಸಂಬೋಧಿಸಿ ಹೇಳಿದೆ. ಇದರಿಂದ ಯೂಪದ ಮಹಾತ್ಮ್ಯವು ಪ್ರಕಟಿತವಾಗುತ್ತದೆ. ಇಲ್ಲಿ ಮಧುಶಬ್ದಕ್ಕೆ ದೈವ್ಯೇನ ಎಂದು ವಿಶೇಷಣವನ್ನು ಹೇಳಿರುವುದ ರಿಂದಲೂ. ಮಧುಪದದ ಅರ್ಥವು **ಏತದ್ವೈ ಮಧು ದೈವ್ಯಂ ಯದಾಜ್ಯಂ** (ಐ. ಬ್ರಾ. ೨-೨) ಎಂಬ ಐತರೇಯ ಬ್ರಾಹ್ಮಣದಲ್ಲಿ ಹೇಳಿರುವ ಪ್ರಕಾರ ಘೃತ (ತುಪ್ಪ)ವಾಗಿರುತ್ತದೆ ಎಂದು ವರ್ಣಿಸಿದೆ.

**ಯದೂರ್ಧ್ವಸ್ತಿಷ್ಠಾಃ ಯದ್ವಾ ಮಾತುರಸ್ಯಾ ಉಪಸ್ಥೇ ಕ್ಷಯಃ ಇಹ ದ್ರವಿಣಾನಿ ಧೇಹಿ**—ಎಂಬ ವಾಕ್ಯಕ್ಕೆ ಸಾಯಣರು ಯೂಪವನ್ನು ಸಂಬೋಧಿಸಿದೆ ಎಂದು ವರ್ಣಿಸಿ ಯೂಪವು ಭೂಮಿಯಲ್ಲಿ ನೆಟ್ಟಿರುವುದರಿಂದ ನಿಂತಿರುವುದೂ, ಅಥವಾ ಪೃಥ್ವಿಯಲ್ಲಿ ಮಲಗಿರುವುದೂ ಎಂದರೆ ಬಿದ್ದಿರುವುದೂ ಸಹ ಯೂಪದ ಸ್ಥಿತಿಯನ್ನು ವಿವರಿಸುತ್ತದೆ. ಇಂತಹ ಈ ಯೂಪವು ನಮಗೆ ಕರ್ತವ್ಯಕ್ಕೆ ಅನುರೂಪವಾದ ಧನವನ್ನು ಅನುಗ್ರಹಿಸಲಿ ಎಂದು ವರ್ಣಿಸಿರುವರು.

ಐತರೇಯ ಬ್ರಾಹ್ಮಣದಲ್ಲಿ ಇದೇ ಅಭಿಪ್ರಾಯವನ್ನು ವಿವರಿಸುವ ವಾಕ್ಯವೂ ಇಲ್ಲಿ ಉದಾಹೃತವಾಗಿ ರುವುದು.

> ಅಂಜಂತಿ ತ್ವಾಮಧ್ವರೇ ದೇವಯಂತ ಇತ್ಯನ್ವಾಹ ಅಧ್ವರೇ ಹ್ಯೇನಂ ದೇವಯಂತೋಽಂಜಂತಿ ವನಸ್ಪತೇ ಮಧುನಾ ದೈವ್ಯೇನೇತ್ಯೇತದ್ವೈ ಮಧು ದೈವ್ಯಂ ಯದಾಜ್ಯಂ, ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾತ್ ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥ ಇತಿ ಯದಿ ಚ ತಿಷ್ಠಾಸಿ ಯದಿ ಚ ಶಯಾಸೈ ದ್ರವಿಣಮೇವಾಸ್ಮಾಸು ಧತ್ತಾದಿತ್ಯೇವ ತದಾಹ ।
>
> (ಐ. ಬ್ರಾ. ೨-೨)

ಸಾಯಣರು ಈ ಬ್ರಾಹ್ಮಣದ ವಾಕ್ಯದ ಅರ್ಥವನ್ನೇ ಅನುಸರಿಸಿ ವ್ಯಾಖ್ಯಾನ ಮಾಡಿರುತ್ತಾರೆ. ನಿರುಕ್ತಕಾರರೂ ಕೂಡ ಇದೇ ಮಂತ್ರವನ್ನು ನಿರುಕ್ತದಲ್ಲಿ ಪಾಠಮಾಡಿ—**ಅಂಜಂತಿ ತ್ವಾಮಧ್ವರೇ ದೇವಾಃ ಕಾಮಯಮಾನಾ ವನಸ್ಪತೇ ಮಧುನಾ ದೈವ್ಯೇನ ಚ ಘೃತೇನ ಚ ಯದೂರ್ಧ್ವಃಸ್ಥಾಸ್ಯಸಿ ದ್ರವಿಣಾನಿ ಚ ನೋ ದಾಸ್ಯಸಿ ಯದ್ವಾ ತೇ ಕೃತಃ ಕ್ಷಯೋ ಮಾತುರಸ್ಯಾ ಉಪಸ್ಥೇ ಉಪಸ್ಥಾನೇ** ಎಂದು ಅರ್ಥವನ್ನು ವಿವರಿಸಿದ್ದಾರೆ. ಈ ಮೂರು ಗ್ರಂಥಗಳ ಅಭಿಪ್ರಾಯವೂ ಒಂದೇ ವಿಧವಾಗಿರುತ್ತದೆ. ಆದರೆ ನಿರುಕ್ತಕಾರರು ವನಸ್ಪತಿಶಬ್ದದ ಅರ್ಥವನ್ನು ವಿವರಿಸುವುದರಲ್ಲಿ ವಿಮರ್ಶೆಮಾಡಿದ್ದಾರೆ.

**ವನಸ್ಪತಿಃ ವನಾನಾಂ ಪಾತಾ ವಾ ಪಾಲಯಿತಾ ವಾ**—ವನಗಳನ್ನು ರಕ್ಷಿಸುವವನು ಎಂದು ದುರ್ಗಾಚಾರ್ಯರು ವಿವರಿಸಿದ್ದಾರೆ. ವನಗಳನ್ನು ರಕ್ಷಿಸುವವನು ಯಾರು ಎಂದರೆ—

**(ತತ್ಕೋ ವನಸ್ಪತಿಃ) ಅಗ್ನಿರ್ವಾ, ಯೂಪೋ ವಾ ಅನ್ಯ ಏವ ಕಶ್ಚಿತ್** ಇವನು ಅಗ್ನಿಯಾಗಿರುವನೆ? ಅಥವಾ ಯೂಪವೇ? ಅಥವಾ ಇವೆರಡಕ್ಕಿಂತಲೂ ಬೇರೆಯಾದವನು ಯಾರು ವನಸ್ಪತಿಶಬ್ದವಾಚ್ಯನು ಎಂದು ಪ್ರಶ್ನೆಮಾಡಿ, **ಯೂಪ ಇತಿ ಕಾತ್ಥಕ್ಯಃ** ಯೂಪವು ವನಸ್ಪತಿಶಬ್ದಾರ್ಥವು ಎಂದು ಕಾತ್ಥಕ್ಯರ ಅಭಿಪ್ರಾಯವು. **ಅಗ್ನಿರಿತಿ ಶಾಕಪೂಣಿಃ** ಅಗ್ನಿಯು ವನಸ್ಪತಿ ಶಬ್ದಾರ್ಥವು ಎಂದು ಶಾಕಪೂಣಿ ಆಚಾರ್ಯರ ಮತವು.

ಉಪಾವಸೃಜತ್ಮನ್ಯಾ ಸಮಂಜನ್ ದೇವಾನಾಂ ಪಾಥ ಋತುಥಾ ಹವೀಂಷಿ ।
ವನಸ್ಪತಿಃ ಶಮಿತಾ ದೇವೋ ಅಗ್ನಿಃ ಸ್ವದಂತು ಹವ್ಯಂ ಮಧುನಾ ಘೃತೇನ ॥

(ಋ. ಸಂ. ೧೦-೧೧೦-೧೦)

ಎಂಬ ಈ ಋಕ್ಕಿನಲ್ಲಿ ದೇವತೆಗಳಿಗೆ ಆಯಾಯ ಕಾಲಗಳಲ್ಲಿ ಸಂಸ್ಕೃತವಾದ ಪಶುರೂಪವಾದ ಅನ್ನವನ್ನು ಒದಗಿಸಿಕೊಡುವಾಗ ಪಶುವಿಗೆ ನಡೆಯಬೇಕಾದ ಸಂಸ್ಕಾರಗಳನ್ನು ತನ್ನ ಮೂಲಕವಾಗಿರುವಂತೆ ಅಭಿವ್ಯಕ್ತಿಗೊಳಿಸುವ ವನಸ್ಪತಿಯೂ ವರ್ಣಿತವಾಗಿದೆ. ಇಲ್ಲಿ ಶಮಿತಾ ದೇವಃ, ವನಸ್ಪತಿಃ, ಅಗ್ನಿಃ ಎಂದು ಮೂರು ಪದಗಳು ಉಪಾತ್ತವಾಗಿವೆ. ದೇವ ಎಂಬ ಶಬ್ದವು ಅಗ್ನಿಗೆ ವಿಶೇಷಣವಾಗಿದೆ. ಅಗ್ನಿಯೇ ವನಸ್ಪತಿ ಶಬ್ದಾರ್ಥವೆಂದು ಸ್ಪಷ್ಟವಾದರೂ ಅಪ್ರತ್ಯಕ್ಷವಾಗಿರುವ ವನಸ್ಪತಿ ಶಮಿತಾ ಎಂಬ ಪದಗಳ ಸಮಭಿವ್ಯಾಹಾರದಿಂದ ವಿಮರ್ಶೆಗೆ ಅವಕಾಶವು ಎಂದು ವಿವರಿಸಿದೆ. ಕಾತ್ಥಕ್ಯರು ಯೂಪವು ವನಸ್ಪತಿಯು ಎಂದು ಹೇಳುವುದಕ್ಕೆ ಅಂಜಂತಿ ತ್ವಾಮಧ್ವರೇ ದೇವಯಂತಃ ಎಂಬ (ಋ. ಸಂ. ೩-೮-೧) ಈ ಮಂತ್ರವು ಸಾಧಕವಾಗಿರುತ್ತದೆ ಎಂದು ಹೇಳಿದ್ದಾರೆ.

ಅಂಜಂತಿ ತ್ವಾ ಎಂಬ ಋಕ್ಕಿನಲ್ಲಿಯೂ, ಉಪಾವಸೃಜತ್ಮನ್ಯಾ ಎಂಬ ಋಕ್ಕಿನಲ್ಲಿಯೂ ಅಗ್ನಿಯು ವನಸ್ಪತಿ ಶಬ್ದಾರ್ಥವೆಂದು ಸಂದೇಹಕ್ಕವಕಾಶವಾಗಿರುವುದರಿಂದ ಅಗ್ನಿಯೇ ವನಸ್ಪತಿ ಶಬ್ದಾರ್ಥವೆಂದು ಹೇಳುವ ಶಾಕಪೂಣಿ ಆಚಾರ್ಯರ ಮತಕ್ಕೆ ಸಾಧಕವಾದ ಋಕ್ಕುಗಳು ಉದಾಹೃತಗಳಾಗಿವೆ.

ದೇವೇಭ್ಯೋ ವನಸ್ಪತೇ ಹವೀಂಷಿ ಹಿರಣ್ಯಪರ್ಣಪ್ರದಿವಸ್ತೇ ಅರ್ಥಮ್ ।
ಪ್ರದಕ್ಷಿಣಿದ್ರಶನಯಾ ನಿಯೂಯ ಋತಸ್ಯ ವಕ್ಷಿ ಪಥಿಭೀ ರಜಿಷ್ಠೈಃ ॥

ದುರ್ಗಾಚಾರ್ಯರು ಏವಮೇತಸ್ಮಿನ್ ಮಂತ್ರೇ ಹವಿರ್ವಹನ ಸಂಯೋಗಾತ್ ವನಸ್ಪತಿಶಬ್ದಸ್ಯಾಗ್ನಿರಭಿಧೇಯಃ ಈ ಮಂತ್ರದಲ್ಲಿ ವನಸ್ಪತೆ ವಕ್ಷಿ ಎಂದು ಹವಿಸ್ಸನ್ನು ವಹಿಸುವುದು ಎಂದು ಉಕ್ತವಾಗಿರುವುದರಿಂದ ವನಸ್ಪತಿ ಶಬ್ದಕ್ಕೆ ಅಗ್ನಿ ಎಂದು ಅರ್ಥವನ್ನು ವಿವರಿಸಿದ್ದಾರೆ.

ವನಸ್ಪತೇ ರಶನಯಾ ನಿಯೂಯ ಪಿಷ್ಟತಮಯಾ ವಯುನಾನಿ ವಿದ್ವಾನ್ ।
ವಹಾ ದೇವತ್ರಾ ದಿಧಿಷೋ ಹವೀಂಷಿ ಪ್ರ ಚ ದಾತಾರಮಮೃತೇಷು ವೋಚಃ ॥

ಇಲ್ಲಿಯೂ ವನಸ್ಪತೆ ಎಂದು ಸಂಬೋಧಿಸಿ ಪ್ರಜಾನನ್ ದೇವಾನ್ ಯಜ್ಞೇ ದಾತುರ್ಹವೀಂಷಿ ವಹ, ದಾತಾರಮಮೃತೇಷು ದೇವೇಷು ಪ್ರಬ್ರೂಹಿ. ದೇವತೆಗಳಿಗೆ ಯಜಮಾನರು ಅರ್ಪಿಸಿದ ಹವಿಸ್ಸುಗಳನ್ನು ವಹಿಸಿ ಅರ್ಪಿಸು, ದೇವತೆಗಳ ಹತ್ತಿರ, ಯಜಮಾನರನ್ನು ದೇವತೆಗಳ ಹತ್ತಿರದಲ್ಲಿ ಜ್ಞಾಪಿಸು ಎಂದು ಅರ್ಥವನ್ನು ವಿವರಿಸಿ ವನಸ್ಪತಿ ಶಬ್ದಕ್ಕೆ ಅಗ್ನಿಯೇ ಅರ್ಥವೆಂದು ಹೇಳಿದೆ.

ಮೇದ್ಯಂತು ತೇ ವಹ್ನಯೋ ಯೇಭಿರೀಯಸೇಽರಿಷಣ್ಯನ್ ವೀಳಯಸ್ವಾ ವನಸ್ಪತೇ ।
ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ-
ಋತುಭಿಃ ॥

(ಋ. ಸಂ. ೨-೩೭-೩)

ವನಸ್ಪತ ಇತ್ಯೇನಮಾಹ ಎಂದು ನಿರುಕ್ತದ ವಾಕ್ಯಕ್ಕೆ ದುರ್ಗಾಚಾರ್ಯರು ತಸ್ಮಾದಗ್ನಿರಿತ್ಯಭಿಪ್ರಾಯಃ ಎಂದು ವ್ಯಾಖ್ಯಾನ ಮಾಡಿರುವರು. ಮತ್ತು—ಅಗ್ನಿರೇವಾಸೌ ಯೂಪಾಂತರ್ಗತೋ ಯೂಪಾತ್ಮನಾ ವರ್ತಮಾನೋ

**ಯೂಪಾಂಜನೀಯಾಯಾಂ ವನಸ್ಪತಿಶಬ್ದೇನೋಚ್ಯತೇ ತದುಕ್ತಂ ''ಏಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ'' ಇತಿ । ಯಸ್ಮಾದಂತರ್ಗತೋ ವನಾನಿ ನ ದಹತಿ। ಉಕ್ತಂ ಚ "ಯೋಽಯಮ್ಯಬೀಸೇ ಪೃಥಿವ್ಯಾಮಗ್ನಿರಂತರೋಷಧಿವನಸ್ಪತಿಷು ಅಪ್ಸು ತಮುನ್ನಿನ್ಯಥುಃ ಸರ್ವಗಣಂ ಸರ್ವನಾಮಾನಂ'' ಇತಿ ತಸ್ಮಾದೇಷ ವನಸ್ಪತಿಃ ।** ಅಗ್ನಿಯು ವನದಲ್ಲಿರುವ ವೃಕ್ಷಗಳಲ್ಲಿ ವ್ಯಾಪಿಸಿ ಇರುವವನಾದರೂ ಅವುಗಳನ್ನು ದಹಿಸದೆ ರಕ್ಷಿಸುತ್ತಿರುವನು. ಪೃಥಿವಿಯಲ್ಲಿಯೂ, ಮೂಲಿಕೆಗಳು, ವನಸ್ಪತಿಗಳು ( ವೃಕ್ಷಗಳು ) ಉದಕ, ಇವುಗಳಲ್ಲಿ ಅಗ್ನಿಯು ಅಂತಃಪ್ರವಿಷ್ಟನಾಗಿ ಇರುವನು. ಈ ಪ್ರಕಾರದಿಂದ ಇರುವ ಈ ಅಗ್ನಿಯನ್ನು ಪ್ರಣಯನಾದಿಗಳಿಂದ ಪ್ರಕಟ ಮಾಡುವರು ಎಂದು, ಅನೇಕ ಶಬ್ದಗಳಿಂದ ವಾಚ್ಯನಾಗಿರುವ ಈ ಅಗ್ನಿಯನ್ನು ಆಯಾಯ ವಿಧ್ಯುಕ್ತಕ್ರಮದಿಂದ ಪೂಜಿಸುವರು ಎಂದು ಉಕ್ತವಾಗಿರುವುದರಿಂದ **ವನಸ್ಪತಿ**ಶಬ್ದದಿಂದ ಅಗ್ನಿಯೇ ಅಭಿಧೇಯನಾಗಿರುವನು ಎಂದು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಅಂಜಂತಿ**—ಅಂಜೂ ವ್ಯಕ್ತಿಕಾಂತಿಗತಿಮ್ರಕ್ಷಣೇಷು ಧಾತು ರುಧಾದಿ. **ಲಟ್** ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅದಕ್ಕೆ ಅಂತಾದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಅದಕ್ಕೆ ಙಿತ್ವಾತಿದೇಶವಿರುವುದರಿಂದ **ಅನಿದಿತಾಂಹಲ**—ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅದರ ಅಕಾರಕ್ಕೆ ಲೋಪ. ಅಂಜಂತಿ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ತ್ವಾಮ್**—ಯುಷ್ಮದ್ ಶಬ್ದ. ದ್ವಿತೀಯಾ ಏಕವಚನ ಅಮ್ ಪ್ರತ್ಯಯ ಬಂದಾಗ **ತ್ವಮಾವೇಕವಚನೇ** ಎಂಬುದರಿಂದ ಮಪರ್ಯಂತಕ್ಕೆ ತ್ವಾದೇಶ. **ದ್ವಿತೀಯಾಯಾಂಚ** (ಪಾ. ಸೂ. ೭-೨-೮೭) ಎಂಬುದರಿಂದ ಆಕಾರಾಂತಾದೇಶ ಪೂರ್ವರೂಪ. **ಏಕಾದೇಶಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶ ಉದಾತ್ತವಾಗುತ್ತದೆ.

**ಅಧ್ವರೇ**—ನ ವಿದ್ಯತೇ ಧ್ವರಃ ಹಿಂಸಾ ಯಸ್ಯ ಸಃ ಅಧ್ವರಃ । **ಪೂರ್ವಪದ ಪ್ರಕೃತಿಸ್ವರ**ಕ್ಕೆ ಅಪವಾದವಾಗಿ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ **ಉತ್ತರಪದಾಂತೋದಾತ್ತಸ್ವರ ಬರುತ್ತದೆ.**

**ದೇವಯಂತಃ**—ದೇವಾನ್ ಆತ್ಮನಃ ಇಚ್ಛಂತಃ. **ಸುಪಆತ್ಮನಃಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಕ್ಯಚಿಚ, ಅಕೃತ್ಸಾರ್ವಧಾತುಕಯೋಃ** ಎಂಬ ಸೂತ್ರಗಳಿಂದ ಈತ್ವವೂ, ದೀರ್ಘವೂ ಪ್ರಾಪ್ತವಾದರೆ **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಅವುಗಳಿಗೆ ನಿಷೇಧ ಬರುತ್ತದೆ. **ಸನಾದ್ಯಂತಾಧಾತವಃ** ಸೂತ್ರದಿಂದ ದೇವಯ ಎಂಬ ಕ್ಯಜಂತಕ್ಕೆ ಧಾತುಸಂಜ್ಞಾ ಬಂದಾಗ **ಲಟ್.** ಅದಕ್ಕೆ ಶತ್ರಾದೇಶ. ಶಪ್ **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಪರರೂಪ ಏಕಾದೇಶ ಬಂದಾಗ **ಏಕಾದೇಶ ಉದಾತ್ತೇ**—(ಪಾ. ಸೂ. ೮-೨-೫) ಎಂಬುದರಿಂದ ಕ್ಯಚ್‌ಸ್ವರ ಉಳಿಯುತ್ತದೆ.

**ವನಸ್ಪತೇ**—**ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಸಂಬುದ್ಧಿಯಲ್ಲಿ ಸರ್ವಾನುದಾತ್ತಸ್ವರ ಬರುತ್ತದೆ.

**ಮಧುನಾ**—ಮನ ಜ್ಞಾನೇ ಧಾತು. **ಫಲಿಪಾಟಿನಮಿ**—(ಉ. ಸೂ. ೧-೧೮) ಎಂಬುದರಿಂದ ಉ ಪತ್ಯಯ. ಧಾತುನಕಾರಕ್ಕೆ ಧಕಾರಾದೇಶ. ನಿತ್ ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುವುರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ದೈವ್ಯೇನ**—**ದೇವಾದ್ಯ** ಞಞೌ (ಪಾ. ಸೂ. ೯-೧-೮೫-೨) ಎಂಬುದರಿಂದ ಯಞ್ ಪ್ರತ್ಯಯ. ಞಿತ್ತಾದುದರಿಂದ ಆದಿವೃದ್ಧಿ. **ಯಸ್ಯೇತಿಚ** ಸೂತ್ರದಿಂದ ಅಕಾರಕ್ಕೆ ಲೋಪ. ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತಿಷ್ಠಾಃ**—ಷ್ಠಾ ಗತಿನಿವೃತ್ತೌ ಧಾತು. ಲೇಟ್ ಮಧ್ಯಮಪುರುಷದಲ್ಲಿ ಸಿಪ್. ಇತಶ್ಚ ಲೋಪಃ (ಪಾ. ಸೂ. ೩-೪-೯೭) ಎಂಬುದರಿಂದ ಇಕಾರ ಲೋಪ. ಶಪ್. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಸೂತ್ರದಿಂದ ಧಾತುವಿಗೆ ತಿಷ್ಠಾದೇಶ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಪ್ರತ್ಯಯಕ್ಕೆ ಅಡಾಗಮ. ಸಕಾರಕ್ಕೆ ರುತ್ವವಿಸರ್ಗ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಷ್ಠಾದೇಶವನ್ನು ಆದ್ಯುದಾತ್ತವಾಗಿ ನಿಪಾತ ಮಾಡಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದ್ರವಿಣಾ**—ದ್ರು ಗತೌ ಧಾತು. **ದ್ರುದಕ್ಷಿಭ್ಯಾಮಿನನ್** ಎಂಬುದರಿಂದ ಇನನ್ ಪ್ರತ್ಯಯ. **ಸುಪಾಂಸುಲುಕ್** ಸೂತ್ರದಿಂದ ಸುಪಿಗೆ ಡಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಇಹ—ಇದಮ್ ಶಬ್ದ. ಸಪ್ತಮ್ಯರ್ಥ ತೋರುವಾಗ **ಇದಮೋ ಹಃ** (ಪಾ. ಸೂ. ೫-೩-೧೨) ಎಂಬುದರಿಂದ ಹ ಪ್ರತ್ಯಯ. **ಇದಮ ಇಶ್** (ಪಾ. ಸೂ. ೫-೩-೩) ಎಂಬುದರಿಂದ ಇದಮ್ ಶಬ್ದಕ್ಕೆ ಇಶಾದೇಶ. **ಅನೇಕಾಲ್‌ಶಿತ್** ಸೂತ್ರದಿಂದ ಶಿತ್ತಾದುದರಿಂದ ಸರ್ವಾದೇಶ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಧತ್ತಾತ್**—ಡುಧಾಞ್ ಧಾರಣಪೋಷಣಯೋಃ ಧಾತು. ಪ್ರಾರ್ಥನಾರ್ಥತೋರುವಾಗ ಲೋಟ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಅದಕ್ಕೆ ಹಿ ಆದೇಶ ಬಂದಾಗ **ತುಹ್ಯೋಸ್ತಾತಙ್**—(ಪಾ. ಸೂ. ೭-೧-೩೫) ಎಂಬುದರಿಂದ ತಾತಙಾದೇಶ. ಇದು ಙಿತ್ತಾದುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ದಧಸ್ತಥೋಶ್ಚ** (ಪಾ. ಸೂ. ೮-೨-೩೮) ಎಂಬುದರಿಂದ ದಕಾರಕ್ಕೆ ಧಕಾರಾದೇಶ. ಪರದ ಧಕಾರಕ್ಕೆ ಜಸ್ತ್ವ, ಚರ್ತ್ವ. ಧತ್ತಾತ್ ಎಂದು ರೂಪವಾಗುತ್ತದೆ. **ತಿಙಂತನಿಘಾತಸ್ವರ** ಬರುತ್ತದೆ.

**ವಾ**—**ಚಾದಯೋಽನುದಾತ್ತಾಃ** ಎಂಬುದರಿಂದ ಚಾದಿಯಲ್ಲಿ ಪಠಿತವಾದುದರಿಂದ ಅನುದಾತ್ತವಾಗುತ್ತದೆ.

**ಕ್ಷಯಃ**—ಕ್ಷಿಯಂತಿ **ನಿವಸಂತಿ** ಅಸ್ಮಿನ್ **ಇತಿ** ಕ್ಷಯಃ. ಕ್ಷಿ ನಿವಾಸಗತ್ಯೋಃ ಧಾತು. ಅಧಿಕರಣಾರ್ಥದಲ್ಲಿ ಘ ಪ್ರತ್ಯಯ. **ಸಾರ್ವಧಾತುಕಾರ್ಧ**—ಎಂಬುದರಿಂದ ಇಕಾರಕ್ಕೆ ಗುಣ, ಅಯಾದೇಶ. **ಕ್ಷಯೋ ನಿವಾಸೇ** ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಮಾತುಃ**—ನಪ್ತೃನೇಷ್ಟೃ—(ಉ. **ಸೂ.** ೨-೨೫೨) ಎಂಬುದರಿಂದ ತೃಜಂತವಾಗಿ ನಿಪಾತಮಾಡಿರುವುದರಿಂದ ಅಂತೋದಾತ್ತವಾಗುತ್ತದೆ. ಙಸ್ ಪರವಾದಾಗ **ಋತಉತ್** (ಪಾ. ಸೂ. ೬-೧-೧೧೧) ಎಂಬುದ

ರಿಂದ ವಿಭಕ್ತಿ ಅಕಾರಕ್ಕೂ ಋಕಾರಕ್ಕೂ ಉತ್ವ ರಪರವಾಗಿ ಬರುತ್ತದೆ. **ರಾತ್ಸಸ್ಯ** ಸೂತ್ರದಿಂದ ಸಕಾರಕ್ಕೆ ಲೋಪ.

**ಅಸ್ಮಾಃ—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಉಪಸ್ಥೇ**—ಷ್ಠಾ ಗತಿನಿವೃತ್ತೌ ಧಾತು. ಉಪ ಎಂಬ ಉಪಸರ್ಗ ಪೂರ್ವದಲ್ಲಿರುವಾಗ **ಆತಶ್ಚೋಪಸರ್ಗೇ** ಕಃ (ಪಾ. ಸೂ. ೩-೧-೧೩೬) ಎಂಬುದರಿಂದ ಕ ಪ್ರತ್ಯಯ. **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಮರುದ್ವೃಧಾದಿಯಲ್ಲಿ ಪಠಿತವಾದುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಸಮಿಂದ್ಧಸ್ಯ ಶ್ರಯಮಾಣಃ ಪುರಸ್ತಾದ್ಬ್ರಹ್ಮ ವನ್ವಾನೋ ಅಜರಂ ಸುವೀರಂ।
ಆರೇ ಅಸ್ಮದಮತಿಂ ಬಾಧಮಾನ ಉಚ್ಛ್ರಯಸ್ವ ಮಹತೇ ಸೌಭಗಾಯ
॥ ೨ ॥

ಪದಪಾಠಃ

ಸಂಽಇದ್ಧಸ್ಯ । ಶ್ರಯಮಾಣಃ । ಪುರಸ್ತಾತ್ । ಬ್ರಹ್ಮ । ವನ್ವಾನಃ । ಅಜರಂ । ಸುಽವೀರಂ ।
ಆರೇ । ಅಸ್ಮತ್ । ಅಮತಿಂ । ಬಾಧಮಾನಃ । ಉತ್ । ಶ್ರಯಸ್ವ । ಮಹತೇ । ಸೌಭಗಾಯ ॥ ೨ ॥

ಸಾಯಣಭಾಷ್ಯಂ.

ಹೇ ಯೂಪ ಸಮಿದ್ಧಸ್ಯ ದೀಪ್ಯಮಾನಸ್ಯಾಹವನೀಯಾಖ್ಯಸ್ಯಾಗ್ನೇಃ ಪುರಸ್ತಾತ್ ಪ್ರಾಚ್ಯಾಂ ದಿಶಿ ಶ್ರಯಮಾಣಸ್ತತ್ರ ವರ್ತಮಾನೋ ಬ್ರಹ್ಮಾನ್ನಂ । ಬ್ರಹ್ಮ ವರ್ಚ ಇತ್ಯನ್ನನಾಮಸು ಪಾಠಾತ್ । ಅಜರಂ ಜರಾರಹಿತಂ ಸಮೃದ್ಧಂ ಸುವೀರಂ ಶೋಭನಾಪತ್ಯಯುಕ್ತಂ ಬ್ರಹ್ಮಾನ್ನಂ ವನ್ವಾನಃ ಪ್ರಯಚ್ಛನ್ ಅಸ್ಮದಮತಿಮಸ್ಮಾಕಂ ಶತ್ರುಭೂತಾಮಶನಾಯಾಂ । ಅಶನಾಯಾ ವೈ ಪಾಪ್ಮಾಮತಿರಿತಿ ಶ್ರವಣಾತ್ । ತಾದೃಶಂ ಶತ್ರುಮಾರೇ ದೂರೇ ಬಾಧಮಾನೋಽಪನುದಂಸ್ತ್ವಂ ಮಹತೇ ಸೌಭಗಾಯ ಧನಾದಿಸಂಪತ್ತ್ಯರ್ಥಮುಚ್ಛ್ರಯಸ್ವ । ಉಚ್ಛ್ರಿತೋ ಭವ । ಉಕ್ತಾರ್ಥೇ ಬ್ರಾಹ್ಮಣಂ । ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾದಿತಿ ಸಮಿದ್ಧಸ್ಯ ಹ್ಯೇಷ ಏತತ್ಪುರಸ್ತಾಚ್ಛ್ರಯತೇ ಬ್ರಹ್ಮ ವನ್ವಾನೋ ಅಜರಂ ಸುವೀರಮಿತ್ಯಾಶಿಷಮೇವಾಶಾಸ್ತ ಆರೇ ಅಸ್ಮದಮತಿಂ ಬಾಧಮಾನ ಇತ್ಯಶನಾಯಾ ವೈ ಪಾಪ್ಮಾಮತಿಸ್ತಾಮೇವ ತದಾರಾನ್ನುದತೇ ಯಜ್ಞಾಚ್ಚ ಯಜಮಾನಾಚ್ಚೋಚ್ಛ್ರಯಸ್ವ ಮಹತೇ ಸೌಭಗಾಯೇತ್ಯಾಶಿಷಮೇವಾಶಾಸ್ತೇ । ಐ. ಬ್ರಾ. ೨-೨ । ಇತಿ ॥ ಸಮಿದ್ಧಸ್ಯ । ಞಿಇಂಧೀ ದೀಪ್ತೌ । ಕರ್ಮಣಿ ನಿಷ್ಠಾಯಾಂ ಶ್ವೀದಿತೋ ನಿಷ್ಠಾ-

ಯಾಮಿತೀಟ್ಪ್ರತಿಷೇಧಃ । ಸಮ್ಯಗಿದ್ಧ ಇತಿ ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಶ್ರಯ-ಮಾಣಃ । ಶ್ರಿಞ್ ಸೇವಾಯಾಮಿತ್ಯಸ್ಯ ಲಟಃ ಶಾನಚ್ । ತಸ್ಯ ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಕೃತೇ ಧಾತುಸ್ವರಃ ಶಿಷ್ಯತೇ। ಪುರಸ್ತಾತ್। ಪೂರ್ವಶಬ್ದಸ್ಯ ದಿಕ್ಶಬ್ದೇಭ್ಯಃ ಸಪ್ತಮೀಪಂಚಮೀತ್ಯಾದಿನಾ । ಪಾ. ೫-೩-೨೭ । ಅಸ್ತಾತಿಪ್ರತ್ಯಯಃ । ಅಸ್ತಾತಿ ಚ । ಪಾ. ೫-೩-೪೦ । ಇತಿ ಪೂರ್ವಸ್ಯ ಪುರಾದೇಶಃ । ಪ್ರತ್ಯಯಸ್ವರಃ । ಬ್ರಹ್ಮ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತಃ । ವನ್ವಾನಃ । ವನು ಯಾಚನೇ । ಅತ್ರಾಯಂ ಧಾತುರ್ದಾನಾರ್ಥೇ ವರ್ತತೇ । ಲಟಃ ಶಾನಚ್ಪ್ರತ್ಯಯಃ । ಚಿತ್ತ್ವಾದಂತೋದಾತ್ತಃ । ಅಜ-ರಂ । ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಸುವೀರಂ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ಆರೇ । ಏವಮಾದಿತ್ವಾದಂತೋದಾತ್ತಃ । ಅಸ್ಮತ್ । ಯುಷ್ಮದಸ್ಮದ್ಭ್ಯಾಂ ಮದಿಗಿತಿ ಮದಿಕ್ಪ್ರತ್ಯಯಸ್ವರಃ । ಸುಪಾಂ ಸುಲುಗಿತಿ ಸುಪೋ ಲುಕ್ ಮದಿಕ್ಪ್ರತ್ಯಯಸ್ವರಃ ಅಮತಿಂ। ತತ್ಪುರುಷ ಇತಿ ಪೂರ್ವಪದಪ್ರಕೃತಿಸ್ವರತ್ವಂ। ಉತ್ । ನಿಪಾತತ್ವೇನಾದ್ಯುದಾತ್ತಃ । ಶ್ರಯಸ್ವ । ಶ್ರಿಞ್ ಸೇವಾಯಾಮಿತ್ಯಸ್ಯ ಲೋಣ್ಮಧ್ಯಮೈಕವಚನೇ ಥಾಸ್ । ಥಾಸಃ ಸ ಇತ್ಯಾದೇಶಃ । ಸವಾಭ್ಯಾಂ ವಾಮಾವಿತ್ಯೇಕಾರಸ್ಯ ವಕಾರಃ । ನಿಘಾತಃ । ಮಹತೇ । ವರ್ತಮಾನೇ ಪೃಷದ್ಬೃಹನ್ಮಹದಿತಿ ನಿಪಾತ-ನಾದಂತೋದಾತ್ತಃ । ಬೃಹನ್ಮಹತೋರುಪಸ್ಯಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ಸೌಭಗಾಯ। ಪ್ರಾಣ-ಭೃಜ್ಜಾತಿವಯೋವಚನೇತ್ಯಞ್ । ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚೇತಿ ವೃದ್ಧಿಃ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದಿತ್ಯುತ್ತರಪದಸ್ಯ ವೃದ್ಧಿರ್ನ ಭವತಿ । ಞಿತ್ಸ್ವರಃ ॥

ಪ್ರತಿಪದಾರ್ಥ.

(ಹೇ ಯೂಪ—ಎಲೈ ಯೂಪವೇ) । ಸಮಿದ್ಧಸ್ಯ—ದೀಪ್ಯಮಾನವಾದ ಆಹವನೀಯಗ್ನಿಯ । ಪುರಸ್ತಾತ್—ಮುಂದೆ ಪೂರ್ವಕ್ಕೆ । ಶ್ರಯಮಾಣಃ—ಇರುವವನಾಗಿ । ಅಜರಂ—ಜರಾ (ಕ್ಷಯ) ರಹಿತವೂ । ಸುವೀರಂ—ಶೋಭನವಾದ ಪುತ್ರಾದಿಯುಕ್ತವೂ ಆದ । ಬ್ರಹ್ಮ—ಅನ್ನವನ್ನು । ವನ್ವಾನಃ—ಕೊಡುವವನೂ । ಅಸ್ಮದಮತಿಂ—ನಮ್ಮ ಶತ್ರುವನ್ನು । ಆರೇ—ದೂರದಲ್ಲಿ । ಬಾಧಮಾನಃ—ಬಾಧಿಸುವವನೂ (ಆಗಿ) । ಮಹತೇ—ಹೆಚ್ಚಾದ । ಸೌಭಗಾಯ—ಧನಾದಿ ಸಂಪತ್ತ್ಯರ್ಥವಾಗಿ । ಉತ್ ಶ್ರಯಸ್ವ—ಉಚ್ಛ್ರಿತನಾಗು ॥ (ಎದ್ದು ನಿಲ್ಲು)

ಭಾವಾರ್ಥ.

ಎಲೈ ಯೂಪವೇ, ಸಮಿದ್ಧವಾದ ಆಹವನೀಯಾಗ್ನಿಗೆ ಪೂರ್ವದಲ್ಲಿ ಸ್ಥಾಪಿತನಾಗಿ, ಅಕ್ಷಯವೂ, ಒಳ್ಳೆಯ ಸಂತತಿಯುಕ್ತವೂ ಆದ ಅನ್ನವನ್ನನುಗ್ರಹಿಸಿ, ನಮ್ಮ ಶತ್ರುವನ್ನು ದೂರದಲ್ಲಿ ಇಟ್ಟು, (ಅವನನ್ನು) ಅಲ್ಲಿಯೇ ಹಿಂಸಿಸಿ, ನಮಗೆ ಹೆಚ್ಚಾದ ಸಂಪದಾದಿ ದಾತೃವಾಗಿ ಉಚ್ಛ್ರಿತನಾಗಿರು. (ಎದ್ದು ನಿಲ್ಲು)

English Translation.

Standing on the east of the kindled (fire), dispensing food (as the source) of undecaying (health) and excellent progeny, keeping off our enemy at a distance, stand up for great auspiciousness.

ವಿಶೇಷವಿಷಯಗಳು.

ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾತ್—ದೀಪ್ಯಮಾನಸ್ಯಾಹವನೀಯಾಗ್ನೇಃ ಪ್ರಾಚ್ಯಾಂ ದಿಶಿ ವರ್ತಮಾನಃ—ಯಾಗಶಾಲೆಯಲ್ಲಿ ಅಗ್ನಿಯನ್ನು ಮೂರು ಪ್ರದೇಶಗಳಲ್ಲಿ ವಿಂಗಡಿಸಿ ಇಡುವರು. ಗಾರ್ಹಪತ್ಯ.

ಆಹವನೀಯ, ದಕ್ಷಿಣಾಗ್ನಿ ಎಂದು ಈ ಮೂರು ಅಗ್ನಿಗಳಿಗೆ ಹೆಸರು. ಇವುಗಳಲ್ಲಿ ಆಹವನೀಯ ಎಂಬ ಅಗ್ನಿಯು ವೇದಿಯ ಪೂರ್ವಭಾಗದಲ್ಲಿ ಚೆನ್ನಾಗಿ ಉದ್ದೀಪ್ತವಾಗಿರುವುದು. ಆದಕ್ಕೆ ಪೂರ್ವದಲ್ಲಿ ಯೂಪವು ಇರುವುದೆಂದು ಅರ್ಥ.

ಅಜರಂ—ಜರಾರಹಿತಂ ಸಮೃದ್ಧಂ. ನಿರುಕ್ತಕಾರರು ಅಜರ ಶಬ್ದಕ್ಕೆ **ಅಜರಣಧರ್ಮಾಣಂ** ಮುಪ್ಪಿಲ್ಲದುದು ಎಂದು (ನಿ. ೪-೨೭) ಅರ್ಥವನ್ನು ವಿವರಿಸಿದ್ದಾರೆ. ಸಾಯಣರೂ ಕೂಡ ಮುಪ್ಪಿಲ್ಲದುದೂ ಅಭಿವೃದ್ಧಿಯನ್ನು ಹೊಂದಿರುವುದೂ ಆದುದು ಎಂಬ ಅರ್ಥವನ್ನು ಹೇಳಿದ್ದಾರೆ.

**ಸುವೀರಂ**— ನಿರುಕ್ತಕಾರರು ವೀರ ಶಬ್ದಕ್ಕೆ **ವೀರವಂತಃ ಕಲ್ಯಾಣವೀರಾ ವಾ ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣಃ ವೀರಯತೇರ್ವಾ** (ನಿ. ೧-೭). ಶತ್ರುಗಳನ್ನು ಅನೇಕ ವಿಧವಾಗಿ ಹಿಂಸೆಪಡಿಸುವರು, ಶತ್ರುಗಳಿಗೆ ಅಭಿಮುಖವಾಗಿ ಪ್ರಯಾಣ ಮಾಡುವವನು, ಶೌರ್ಯದಿಂದ ಕೂಡಿರುವವನು ಎಂದು ಅರ್ಥವನ್ನು ವಿವರಿಸಿರುವರು.

**ವನಸ್ಪತೆ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಸ್ಸುವೀರಃ ।**

(ಋ. ಸಂ. ೬-೪೭-೨೬)

ಇಲ್ಲಿ ಸುವೀರಃ ಕಲ್ಯಾಣವೀರಃ ಎಂಬ ಅರ್ಥವನ್ನು ವಿವರಿಸಿದ್ದಾರೆ- ದುರ್ಗಾಚಾರ್ಯರು **ಅವಿಕ್ಲವಾನವಖಂಡಿತಾಧಿಷ್ಠಾತಾ**— ಹೇಡಿತನವಿಲ್ಲದಿರುವ, ಇತರರ ಅಧೀನಕ್ಕೆ ಸಿಕ್ಕದಿರುವ ಸ್ವಭಾವದವನು ಎಂದು ವಿವರಿಸಿದ್ದಾರೆ. ಸಾಯಣರು ಈ ಪದವನ್ನು ಬ್ರಹ್ಮ ಎಂಬ ಪದಕ್ಕೆ ಇಲ್ಲಿ ವಿಶೇಷಣವನ್ನಾಗಿ ಹೇಳಿ **ಶೋಭನಾಪತ್ಯಯುಕ್ತಂ**— ಉತ್ತಮವಾದ ಪುತ್ರರನ್ನು ಉಂಟುಮಾಡುವ ಅನ್ನವು ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ಬ್ರಹ್ಮ—ಅನ್ನಂ.** ಬ್ರಹ್ಮನ್ ಎಂಬ ಪದವು ಅನ್ನ ನಾಮಗಳಲ್ಲಿಯೂ (ನಿ. ೩-೭) ಧನನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಇಲ್ಲಿ ಅನ್ನವೆಂದು ಅರ್ಥವನ್ನು ಹೇಳಿ ಈ ಪ್ರಕಾರವಾದ ಅನ್ನವನ್ನು ವನಸ್ಪತಿ ಶಬ್ದದಿಂದ ಉಕ್ತವಾಗಿರುವ ಯೂಪಾಂತರ್ಗತವಾದ ಅಗ್ನಿಯು ಉಂಟುಮಾಡಲಿ ಎಂದು ಪ್ರಾರ್ಥಿಸಿದೆ. ಮತ್ತೂ **ಅಸ್ಮದಮತಿಂ ಬಾಧಮಾನಃ** ಯಜ್ಞಮಾಡುವವರ ಹಸಿವು ಎಂಬ ಶತ್ರುವನ್ನು ನಾಶಪಡಿಸಿ, **ಮಹತೇ ಸೌಭಗಾಯ**— ಅತಿಶಯವಾದ ಸಂಪತ್ತನ್ನು ಉಂಟುಮಾಡುವುದರಲ್ಲಿ ಸಮರ್ಥನಾಗಿರಲಿ ಎಂದು ಆಶಂಸಿಸಿದೆ. ಈ ಐತರೇಯ ಬ್ರಾಹ್ಮಣದ ವಾಕ್ಯದಲ್ಲಿ ಈ ಋಕ್ಕಿನ ಅಭಿಪ್ರಾಯವನ್ನು ವಿವರಿಸಿದೆ.

> **ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾದಿತಿ ಸಮಿದ್ಧಸ್ಯ ಹ್ಯೇಷ ಏತತ್ ಪುರಸ್ತಾಚ್ಛ್ರಯತೇ ಬ್ರಹ್ಮವನ್ವಾನೋ ಅಜರಂ ಸುವೀರಮಿತ್ಯಾಶಿಷಮೇವಾಶಾಸ್ತ ಆರೇ ಅಸ್ಮದಮತಿಂ ಬಾಧಮಾನ ಇತ್ಯಶನಾಯಾ ವೈ ಪಾಪ್ಮಾಮತಿಸ್ತಾಮೇವ ತದಾರಾನ್ನುದತೇ ಯಜ್ಞಾಚ್ಚ ಯಜಮಾನಾಚ್ಚ ಉಚ್ಛ್ರಯಸ್ವ ಮಹತೇ ಸೌಭಗಾಯ ಇತ್ಯಾಶಿಷಮೇವಾಶಾಸ್ತೇ ಇತಿ ॥**

(ಐ. ಬ್ರಾ. ೨-೨).

ವ್ಯಾಕರಣಪ್ರಕ್ರಿಯಾ.

**ಸಮಿದ್ಧಸ್ಯ**—ಸಮ್ ಉಪಸರ್ಗ. ಞಿಇಂಧೀ ದೀಪ್ತೌ ಧಾತು ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದು ಕ್ತ ಪ್ರತ್ಯಯ. ಧಾತುವಿನಲ್ಲಿ ಈಕಾರ ಇತ್ತಾದುದರಿಂದ **ಶ್ವೀದಿತೋನಿಷ್ಠಾಯಾಂ**

(ಪಾ. ಸೂ. ೭-೨-೧೪) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. **ಅನಿದಿತಾಂಹಲ**—ಎಂಬುದರಿಂದ ಧಾತು ನಕಾರಕ್ಕೆ ಲೋಪ. **ಝಷಸ್ತಥೋ**—ಸೂತ್ರದಿಂದ ಪ್ರತ್ಯಯ ತಕಾರಕ್ಕೆ ಧತ್ವ. ಸಮ್ಯಕ್ ಇದ್ಧಃ ಸಮಿದ್ಧಃ ತಸ್ಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಉದಾತ್ತಸ್ವರ ಬರುತ್ತದೆ.

**ಶ್ರಯಮಾಣಃ**—ಶ್ರಿಞ್ ಸೇವಾಯಾಮ್. ಧಾತು. ಲಟಿಗೆ ಶಾನಚಾದೇಶ. ಶಪ್ ವಿಕರಣ. **ಸಾರ್ವಧಾತುಕಾರ್ಧ**—ಸೂತ್ರದಿಂದ ಧಾತುವಿನ ಇಕಾರಕ್ಕೆ ಗುಣ. ಅಯಾದೇಶ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಕ್ಕೆ ಮುಕಾಗಮ. **ಅಟ್‌ಕುಪ್ವಾಙ್**-ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. **ತಾಸ್ಯನು ದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪುರಸ್ತಾತ್**—ಪೂರ್ವಶಬ್ದ. ಸಪ್ತಮ್ಯಂತಾರ್ಥ ತೋರುವಾಗ ದಿಕ್ ಶಬ್ದೇಭ್ಯಃ ಸಪ್ತಮೀ **ಪಂಚಮೀ**—(ಪಾ. ಸೂ. ೫-೩-೨೭) ಎಂಬುದರಿಂದ ಅಸ್ತಾತಿ ಪ್ರತ್ಯಯ. ಇದು ಪರವಾದಾಗ ಅಸ್ತಾತಿಚ (ಪಾ. ಸೂ. ೫-೩-೪೦) ಎಂಬುದರಿಂದ ಪೂರ್ವಶಬ್ದಕ್ಕೆ ಪುರಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಬ್ರಹ್ಮ—ನಪುಂಸಕದಲ್ಲಿ **ನಬ್ವಿಷಯಸ್ಯಾನಿಸಂತಸ್ಯ** (ಫಿ. ಸೂ. ೨೯) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ವನ್ವಾನಃ**—ವನು ಯಾಚನೇ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ದೀಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಟಿಗೆ ಶಾನಚಾದೇಶ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ.

ಅಜರಮ್—ನ ವಿದ್ಯತೇ ಜರಾ ಯಸ್ಯ ತಮ್. **ನಞೋ** ಜರಮರ ಮಿತ್ರಮೃತ-(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಸುವೀರಮ್**—**ವೀರವೀರ್ಯೌಚ** (ಪಾ. ಸೂ. ೬-೨-೧೨೦) ಎಂಬುದರಿಂದ ಸು ಸ್ವರಕ್ಕೆ ಅಪವಾದವಾಗಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ಆರೇ—ಏವಮಾದಿ ಗಣದಲ್ಲಿ ಪಠಿತವಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

ಅಸ್ಮತ್—**ಯುಷ್ಯಸಿಭ್ಯಾಮದಿಕ್** (ಉ. ಸೂ. ೧-೧೩೬) ಎಂಬುದರಿಂದ ಅಸಧಾತುವಿಗೆ ಮದಿಕ್ ಪ್ರತ್ಯಯ. **ಸುಪಾಂಸುಲುಕ್** ಎಂಬುದರಿಂದ ವಿಭಕ್ತಿಗೆ ಲುಕ್. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅಮತಿಮ್**—ನಞ್‌ತತ್ಪುರುಷಸಮಾಸ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಉತ್**—ನಿಪಾತಸಂಜ್ಞೆ ಇರುವುದರಿಂದ **ನಿಪಾತಾ ಆದ್ಯುದಾತ್ತಾಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶ್ರಯಸ್ವ**—ಶ್ರಿಞ್ ಸೇವಾಯಾಂ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ** (ಪಾ. ಸೂ. ೩-೪-೮೦) ಎಂಬುದರಿಂದ ಅದಕ್ಕೆ ಸೇ ಆದೇಶ. **ಸವಾಭ್ಯಾಂ ವಾಮೌ**

(ಪಾ. ಸೂ. ೩-೪-೯೧) ಎಂಬುದರಿಂದ ಸೇ ಎಂಬಲ್ಲಿರುವ ಏಕಾರಕ್ಕೆ ವತ್ವ. ಶಪ್ ನಿಮಿತ್ತವಾಗಿ ಧಾತುವಿನ ಇಕಾರಕ್ಕೆ ಗುಣ. ಅಯಾದೇಶ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಮಹಕೇ—ಮಹ ಪೂಜಾಯಾಂ ಧಾತು. ವರ್ತಮಾನಾರ್ಥದಲ್ಲಿ **ಸೃಷನ್ ಮಹತ್ ಜಗತ್** (ಉ ಸೂ. ೨-೨-೪೧) ಎಂಬುದರಿಂದ ಮಹತ್ ಎಂದು ನಿಪಾತಮಾಡಿರುವುದರಿಂದ ಅಂತೋದಾತ್ತವಾದ ಶಬ್ದ ವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಬೃಹನ್ಮಹತೋರುಪಸಂಖ್ಯಾನಮ್ ಎಂಬ ವಚನದಿಂದ ವಿಭಕ್ತಿಯು ಉದಾತ್ತವಾಗುತ್ತದೆ.

ಸೌಭಗಾಯ—ಪ್ರಾಣಭೃಜ್ಜಾತಿವಯೋವಚನ—(ಪಾ. ಸೂ. ೫-೧-೧೨೯) ಎಂಬುದರಿಂದ ಅಣ್ ಪ್ರತ್ಯಯ. **ಹೃದ್ಭಗಸಿಂಧ್ವಂತೇ ಪೂರ್ವಪದಸ್ಯಚ** (ಪಾ. ಸೂ. ೭-೩-೧೯) ಎಂಬುದರಿಂದ ಪೂರ್ವೋತ್ತರ ಪದಗಳ ಆದಿಗೆ ವೃದ್ಧಿ ಬರುತ್ತದೆ. ಆದರೆ ಸರ್ವಕಾರ್ಯಗಳೂ ಛಂದಸ್ಸಿನಲ್ಲಿ ವಿಕಲ್ಪವಾದುದರಿಂದ ಉತ್ತರ ಪದಾದಿಗೆ ಇಲ್ಲಿ ವೃದ್ಧಿ ಬರುವುದಿಲ್ಲ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದಿಗೆ ಉದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

ಸಂಹಿತಾಪಾಠಃ

ಉಚ್ಛ್ರಯಸ್ವ ವನಸ್ಪತೇ ವರ್ಷ್ಮನ್ಪೃಥಿವ್ಯಾ ಅಧಿ ।
ಸುಮಿತೀ ಮೀಯಮಾನೋ ವರ್ಚೋ ಧಾ ಯಜ್ಞವಾಹಸೇ ॥ ೩ ॥

ಪದಪಾಠಃ

ಉತ್ । ಶ್ರಯಸ್ವ । ವನಸ್ಪತೇ । ವರ್ಷ್ಮನ್ । ಪೃಥಿವ್ಯಾಃ । ಅಧಿ ।
ಸುಽಮಿತೀ । ಮೀಯಮಾನಃ । ವರ್ಚಃ । ಧಾಃ । ಯಜ್ಞಽವಾಹಸೇ ॥ ೩ ॥

ಸಾಯಣಭಾಷ್ಯಂ.

ಹೇ ವನಸ್ಪತೇ ಯೂಪ ಪೃಥಿವ್ಯಾ ಅಧಿ ಪೃಥಿವ್ಯಾಂ ವರ್ಷ್ಮನ್ ಉತ್ಕೃಷ್ಟೇ ದೇವಯಜನಾಖ್ಯೇ ದೇಶ ಉಚ್ಛ್ರಯಸ್ವ । ಉಚ್ಛ್ರಿತೋ ಭವ । ಸುಮಿತೀ ಶೋಭನಮಾನಯಾ ಬುದ್ಧ್ಯಾ ಅಥವಾ ಶೋಭನೇನ ಪರಿಮಾಣೇನ ಮೀಯಮಾನ ಇಯತ್ತಯಾ ಪರಿಚ್ಛಿದ್ಯಮಾನಸ್ತ್ವಂ ಯಜ್ಞವಾಹಸೇ ಯಜ್ಞನಿರ್ವಾಹಕಾಯ ಯಜಮಾನಾಯ ವರ್ಚೋ ಧಾಃ । ಅನ್ನಂ ಧೇಹಿ । ಆಯಮೇವಾರ್ಥೋ ಬ್ರಾಹ್ಮಣೇನ ದರ್ಶಿತಃ । ಉಚ್ಛ್ರಯಸ್ವ ವನಸ್ಪತ ಇತ್ಯುಚ್ಛ್ರೀಯಮಾಣಾಯಾಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ । ವರ್ಷ್ಮನ್ಪೃಥಿವ್ಯಾ ಅಧೀತ್ಯೇತದ್ವೈ ವರ್ಷ್ಮ ಪೃಥಿವ್ಯೈ ಯತ್ರ ಯೂಪಮುನ್ಮಿನ್ವಂತಿ ಸುಮಿತೀ ಮೀಯಮಾನೋ ವರ್ಚೋ ಧಾ ಯಜ್ಞವಾಹಸ ಇತ್ಯಾಶಿಷಮಾಶಾಸ್ತೇ । ಐ ಬ್ರಾ. ೨-೨ ॥ ವನಸ್ಪತೇ । ಆಮಂತ್ರಿತತ್ವಾದಾಷ್ಟಮಿಕಮನುದಾತ್ತತ್ವಂ । ಪೃಥಿವ್ಯಾಃ । ಉದಾತ್ತಯಣೋ

**ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ಸುಮಿತೀ । ಮಾಙ್ ಮಾನ ಇತ್ಯಸ್ಯ ಕ್ತಿನಿ ದ್ಯತಿಸ್ಯತಿಮಾಸ್ಥೇತೀಕಾರಾದೇಶಃ । ಶೋಭನಯಾ ಮಿತ್ಯಾ । ತಾದೌ ಚ ನಿತಿ ಕೃತ್ಯತಾವಿತಿ ಗತೇಃ ಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ಸವರ್ಣದೀರ್ಘಃ । ಮಿಮಾಯಮಾನಃ । ಮಾಙ್ ಮಾನ ಇತ್ಯಸ್ಯ ಕರ್ಮಣಿ ಯಕ್ । ಘುಮಾಸ್ಥೇತೀತ್ವಂ । ಪ್ರತ್ಯಯಸ್ವರಃ । ಧಾಃ । ಧಾಞೋ ಲೋಡರ್ಥೇ ಛಂದಸಿ ಲುಙ್ಲಙ್ಲಿಟ ಇತಿ ಲುಙ್ । ಇತಶ್ಚೇತಿ ಸಿಪ ಇಕಾರಲೋಪಃ । ಗಾತಿಸ್ಥೇತಿ ಸಿಚೋ ಲೋಪಃ । ಬಹುಲಂ ಛಂದಸೀತ್ಯಡಭಾವಃ । ನಿಘಾತಃ । ಯಜ್ಞವಾಹಸೇ । ಯಜ್ಞಂ ವಹತಿ ಪ್ರಾಪ್ನೋತಿ । ವಹ ಪ್ರಾಪಣ ಇತ್ಯಸ್ಯ ವಹಿಹಾಧಾಞ್ಭ್ಯಶ್ಛಂದಸೀತ್ಯಸುನ್ । ಣಿದಿತ್ಯನುವೃತ್ತೇರುಪಧಾವೃದ್ಧಿಃ । ಗತಿಕಾರಕಯೋರಿತಿ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ಪೂರ್ವಪದಪ್ರಕೃತಿಸ್ವರಃ । ಉ. ೪-೨೨೬ ॥**

ಪ್ರತಿಪದಾರ್ಥ

**ಹೇ ವನಸ್ಪತೇ**—ಎಲೈ ಯೂಪವೇ (ನೀನು) । **ಪೃಥಿವ್ಯಾ ಅಧಿ**—ಭೂಮಿಯ ಮೇಲೆ । **ವರ್ಷ್ಮನ್**—ಉತ್ಕೃಷ್ಟವಾದ ಯಾಗಶಾಲೆಯಲ್ಲಿ । **ಉಚ್ಛ್ರಯಸ್ವ**—ಎದ್ದು ನಿಂತಿರು । **ಸುಮಿತೀ**—ಶುಭಾವಹವಾದ ಬುದ್ಧಿಯಿಂದ (ಅಥವಾ ಒಳ್ಳೆಯ ಪರಿಮಾಣದಿಂದ) । **ಮೀಯಮಾನಃ**—(ಇಷ್ಟೇ ಇರಬೇಕೆಂದು) ಅಳೆಯಲ್ಪಟ್ಟವನಾಗಿ । **ಯಜ್ಞವಾಹಸೇ**—ಯಜ್ಞನಿರ್ವಾಹಕನಾದ ಯಜಮಾನನಿಗೆ । **ವರ್ಚಃಧಾಃ**—ಅನ್ನವನ್ನು ಅನುಗ್ರಹಿಸು.

ಭಾವಾರ್ಥ.

ಎಲೈ ಯೂಪವೇ, ಭೂಮಿಯಲ್ಲಿ ಉತ್ಕೃಷ್ಟವಾದ ಈ ಯಜ್ಞಗೃಹದಲ್ಲಿ ಎದ್ದು ನಿಂತಿರು. ಸರಿಯಾದ ಅಳತೆಗೆ ಕತ್ತರಿಸಲ್ಪಟ್ಟ ನೀನು ಯಾಗ ಕರ್ತೃವಿಗೆ ಅನ್ನಾದಿಗಳನ್ನು ಅನುಗ್ರಹಿಸು.

English Translation.

Be exalted, VANASPATI, upon this sacred spot of earth, being measured with careful measurement, and bestow food upon the offerer of the sacrifice.

ವಿಶೇಷ ವಿಷಯಗಳು.

**ವರ್ಷ್ಮನ್—ಉತ್ಕೃಷ್ಟೇ ದೇವಯಜನಾಖ್ಯೇ ದೇಶೇ**—ಸಾಯಣರು ಈ ಪದವನ್ನು ಸಪ್ತಮ್ಯಂತವಾಗಿರುವ ಕಾರಣ, ಪೃಥ್ವಿಯಲ್ಲಿ (ಮೇಲುಗಡೆಯಲ್ಲಿ) ಉತ್ತಮವಾದ ಯಜ್ಞವೇದಿಯ ಪ್ರದೇಶದಲ್ಲಿ ಎಂಬ ಅರ್ಥಬೋಧಕವಾಗಿರುವುದೆಂದು ಅರ್ಥವನ್ನು ವಿವರಿಸಿದ್ದಾರೆ. ದೇವತೆಗಳನ್ನು ಉದ್ದೇಶಮಾಡಿಕೊಂಡು ಹವಿಸ್ಸನ್ನು ಅವರಿಗಾಗಿ ಅರ್ಪಿಸುವ ಪ್ರದೇಶವು ದೇವಯಜನದೇಶವೆಂದು ಪ್ರಸಿದ್ಧವಾಗಿರುವುದು. ಈ ಪ್ರದೇಶದಲ್ಲಿ ಯೂಪವು ಉನ್ನತವಾಗಿ ತನ್ನ ಎತ್ತರದಿಂದ ಪ್ರಕಾಶಿಸುತ್ತಿರುವುದು ಎಂದು ಅರ್ಥ.

**ಸುಮಿತೀ ಮೀಯಮಾನಃ—ಶೋಭನಯಾ ಬುದ್ಧ್ಯಾ ಅಥವಾ ಶೋಭನೇನ ಪರಿಮಾಣೇನ ಇಯತ್ತಯಾ ಪರಿಚ್ಛಿದ್ಯಮಾನಃ**—ಸಾಯಣರು ಇಲ್ಲಿ ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ ಸುಮಿತಿ ಎಂಬ ಶಬ್ದಕ್ಕೆ ಸುಮತಿ ಮಂಗಳಕರವಾದ ಬುದ್ಧಿ ಎಂದೂ, ಎರಡನೆಯದಾಗಿ ಉತ್ತಮವಾದ ಔನ್ನತ್ಯರೂಪವಾದ ಪ್ರಮಾಣ ಎಂದೂ ಅರ್ಥಮಾಡಿ, ಈ ಎರಡು ಪ್ರಕಾರದಿಂದಲೂ ಯೂಪವು ಪರಿಮಿತವಾಗಿರುತ್ತದೆ ಎಂದು ವರ್ಣಿಸಿದ್ದಾರೆ.

**ಯಜ್ಞವಾಹಸೇ ವರ್ಚೋಧಾಃ**—**ಯಜ್ಞನಿರ್ವಾಹಕಾಯ ಯಜಮಾನಾಯ ಅನ್ನಂ ಧೇಹಿ** ಯಜ್ಞವನ್ನು ನೆರವೇರಿಸುವ ಯಜಮಾನನಿಗೆ **ಯೂಪಾಂತರ್ಗತವಾದ** ಅಗ್ನಿಯು ಅನ್ನವನ್ನು (ಕೊಡಲಿ) ಅನುಗ್ರಹಿಸಲಿ ಎಂದು ಆಶಿಸಿದೆ. ವರ್ಚಃ ಎಂಬ ಪದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಮತ್ತು ಸಾಯಣರು ಈ ಅರ್ಥವನ್ನು ಬೋಧಿಸುವ—

> ಉಚ್ಛ್ರಯಸ್ವ ವನಸ್ಪತ ಇತ್ಯುಚ್ಛ್ರೀಯಮಾಣಾಯಾಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ವರ್ಷ್ಮನ್ ಪೃಥಿವ್ಯಾ ಅಧೀತ್ಯೈತದ್ವೈ ವರ್ಷ್ಮ ಪೃಥಿವ್ಯೈ ಯತ್ರ ಯೂಪಮುನ್ಮಿನ್ವಂತಿ ಸುಮಿತೀ ಮೀಯಮಾನೋ ವರ್ಚೋ ಧಾ ಯಜ್ಞವಾಹಸ ಇತ್ಯಾಶಿಷಮಾಶಾಸ್ತೇ ॥ (ಐ. ಬ್ರಾ. ೨-೨)

ಈ ಬ್ರಾಹ್ಮಣವಾಕ್ಯವನ್ನು ಉದಹರಿಸಿರುವರು.

ಅಧಿ ಪೃಥಿವ್ಯಾಂ—ಪೃಥಿವೀ ಶಬ್ದವು ಭೂಮಿ ಎಂಬ ಅರ್ಥದಲ್ಲಿಯೂ (ನಿ. ೨-೫) ಅಂತರಿಕ್ಷವೆಂಬ ಅರ್ಥದಲ್ಲಿಯೂ (ನಿ. ೨-೧೦) ಉಕ್ತವಾಗಿದೆ.

> ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ ।
> ಪ್ರ ಯಾ ಭೂಮಿಂ ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ ।
>
> (ಋ. ಸಂ. ೫-೮೪-೧)

ಈ ಋಕ್ಕನ್ನು ಉದಹರಿಸಿ, ನಿರುಕ್ತಕಾರರು—

> ಸತ್ಯಂ ತ್ವಂ ಪರ್ವತಾನಾಂ ಮೇಘಾನಾಂ ಖೇದನಂ ಛೇದನಂ ಭೇದನಂ ಬಲಮುಮುತ್ರ ಧಾರಯಸಿ ಪೃಥಿವಿ ಪ್ರಜಿನ್ವಸಿ ಯಾ ಭೂಮಿಂ ಪ್ರವಣವತಿ ಮಹತ್ತ್ವೇನ ಮಹತೀತ್ಯುದಕವತೀತಿ ವಾ॥ (ನಿ. ೧೧-೩೭)

ಪೃಥಿವೀ ಎಂಬುವ ಮಧ್ಯಸ್ಥಾನ ದೇವತೆಯು ಪರ್ವತಗಳ ಮತ್ತು ಮೇಘಗಳ ಛೇದನವನ್ನು ಸಹಿಸುತ್ತದೆ. ಅಧಿಕವಾದ ಶಕ್ತಿಯಿಂದ ಕೂಡಿರುವುದಲ್ಲದೆ ಭೂಮಿಯನ್ನು ಬಹಳ ಉದಕವುಳ್ಳದ್ದನ್ನಾಗಿಮಾಡಿ ಮಾಹಾತ್ಮ್ಯದಿಂದ ಪೂರ್ಣವಾಗಿರುತ್ತದೆ ಎಂದು ಅರ್ಥವನ್ನು ವಿವರಿಸಿದ್ದಾರೆ.

## ವ್ಯಾಕರಣಪ್ರಕ್ರಿಯಾ.

ವನಸ್ಪತೇ—ಪಾರಸ್ಕರ ಗಣದಲ್ಲಿ ಪಠಿತವಾದುದರಿಂದ ಸುಡಾಗಮ ಬರುತ್ತದೆ. ಸಂಬುದ್ಧಿಯಲ್ಲಿ ಪಾದಾದಿಯಲ್ಲಿಲ್ಲದಿರುವುದರಿಂದ ಆಮಂತ್ರಿತ ನಿಘಾತಸ್ವರ ಬರುತ್ತದೆ.

ವರ್ಷ್ಮನ್—ವೃಷು ಸೇಚನೇ ಧಾತು. ಮನಿನ್ ಪ್ರತ್ಯಯ. **ಪುಗಂತಲಘೂಪಧಸ್ಯಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮೀ ವಿಭಕ್ತಿಗೆ ಲುಕ್.

**ಪೃಥಿವ್ಯಾಃ—ಉದಾತ್ತಯಣೋ ಹಲ್‌ಪೂರ್ವಾತ್ ( ಪಾ. ಸೂ. ೬-೧-೧೭೪ ) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.**

**ಸುಮಿತಿ**—ಮಾಙ್ ಮಾನೇ ಧಾತು. **ಸ್ತ್ರಿಯಾಂಕ್ತಿನ್ (ಪಾ. ಸೂ. ೩-೩-೯೪)** ಎಂಬುದರಿಂದ ಕ್ತಿನ್ ಪ್ರತ್ಯಯ. **ದ್ಯತಿಸ್ಯತಿಮಾಸ್ಥಾ**—(ಪಾ. ಸೂ. ೭-೪-೪೦) ಎಂಬುದರಿಂದ ತಕಾರಾದಿಯಾದ ಕಿತ್ತಾದ

ಪ್ರತ್ಯಯ ಪರದಲ್ಲಿರುವುದರಿಂದ ಧಾತುವಿನ ಆಕಾರಕ್ಕೆ ಇಕಾರಾದೇಶ. ಶೋಭನಾ ವ್ಯಿತಿಃ ಸುವ್ಯಿತಿಃ ತಾದೌಚ ನಿತಿ ಕೃತ್ಯತೌ (ಪಾ. ಸೂ. ೬-೨-೫೦) ಎಂಬುದರಿಂದ ಪೂರ್ವದಲ್ಲಿರುವ ಗತಿ (ಸು) ಯ ಉದಾತ್ತಸ್ವರ ಉಳಿಯುತ್ತದೆ. ತೃತೀಯಾ ಏಕವಚನ ಪರವಾದಾಗ ಸುಪಾಂಸುಲುಕ್ ಸೂತ್ರದಿಂದ ಪೂರ್ವಸವರ್ಣ ದೀರ್ಘ ಏಕಾದೇಶವಾಗಿ ಬರುತ್ತದೆ.

**ಮೀಯಮಾನಃ**—ಮಾಙ್ ಮಾನೇ ಧಾತು. ಕರ್ಮಣಿಯಲ್ಲಿ ಲಟ್ ಬಂದಾಗ ಅದಕ್ಕೆ ಶಾನಚಾದೇಶ. **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಕಿತ್ತಾದ ಪ್ರತ್ಯಯ ಪರವಾದುದರಿಂದ **ಘುಮಾಸ್ಥಾಗಾಪಾ**—(ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿನ ಆಕಾರಕ್ಕೆ ಈಕಾರಾದೇಶ. **ಆನೇಮುಕ್** ಎಂಬುದರಿಂದ ಅದಂತಕ್ಕೆ ಮುಕಾಗಮ. **ತಾಸ್ಯನುದಾತ್ತೇತ್**—ಸೂತ್ರದಿಂದ ಶಾನಚ್ ಅನುದಾತ್ತವಾಗುವುದರಿಂದ ಯಕ್ ಸ್ವರ ಉಳಿಯುತ್ತದೆ.

**ಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಛಂದಸಿಲುಙ್‌ಲಙ್‌ಲಿಟಃ ಎಂಬುದರಿಂದ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷಏಕವಚನದಲ್ಲಿ ಸಿಪ್. ಇತಶ್ಚ ( ಪಾ. ಸೂ. ೩-೪-೧೦೦ ) ಎಂಬುದರಿಂದ ಅದರ ಇಕಾರಕ್ಕೆ ಲೋಪ. ಧಾತುವಿಗೆ ಘುಸಂಜ್ಞಾ ಇರುವುದರಿಂದ ಗಾತಿಸ್ಥಾಘುಪಾ—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲೋಪ. **ಬಹುಲಂ ಛಂಧಸಿ**(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಜ್ಞವಾಹಸೇ**—ಯಜ್ಞಂ ವಹತಿ (ಪ್ರಾಪ್ನೋತಿ) ಯಜ್ಞವಾಹಾಃ ತಸ್ಮೈ. ವಹ ಪ್ರಾಪಣೇ ಧಾತು. **ವಹಿಹಾಧಾಞ್‌ಭ್ಯಶ್ಛಂದಸಿ** ( ಉ. ಸೂ. ೪-೬೬೦ ) ಎಂಬುದರಿಂದ ಅಸುನ್ ಪ್ರತ್ಯಯ. ಣಿತ್ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವುದರಿಂದ ಪ್ರತ್ಯಯಕ್ಕೆ ಣಿದ್ವದ್ಭಾವ ಬರುತ್ತದೆ. ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. ಗತಿಕಾರಕೋಪಪದ—(ಉ. ಸೂ. ೪-೬೬೬) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

ಸಂಹಿತಾಪಾಠಃ

ಯುವಾ ಸುವಾಸಾಃ ಪರಿವೀತ ಆಗಾತ್ಸ ಉ ಶ್ರೇಯಾನ್ಭವತಿ ಜಾಯಮಾನಃ
ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವಯಂತಃ
॥ ೪ ॥

ಪದಪಾಠಃ

ಯುವಾ । ಸುಽವಾಸಾಃ । ಪರಿಽವೀತಃ । ಆ । ಅಗಾತ್ । ಸಃ । ಊಂ ಇತಿ । ಶ್ರೇಯಾನ್ । ಭವತಿ । ಜಾಯಮಾನಃ ।
ತಂ । ಧೀರಾಸಃ । ಕವಯಃ । ಉತ್ । ನಯಂತಿ । ಸುಽಆಧ್ಯಃ । ಮನಸಾ । ದೇವಽಯಂತಃ ॥ ೪ ॥

ಸಾಯಣಭಾಷ್ಯಂ.

ಯುವಾ ದೃಢಾಂಗೋಽಷ್ಟಾಶ್ರ್ಯಾದಿಲಕ್ಷಣಲಕ್ಷಿತ ಇತ್ಯರ್ಥಃ । ಸುವಾಸಾಃ ಶೋಭನೇನ ವಾಸಸಾ ರಶನಯಾ ಯುಕ್ತಃ । ಪರಿವೀತಸ್ತಯಾ ರಶನಯಾ ವೇಷ್ಟಿತಃ । ಏವಂವಿಧೋ ಯೂಪ ಆಗಾತ್ । ಆಗಚ್ಛತಿ । ಸ ಉ ಸ ಏವ ಯೂಪಃ ಶ್ರೇಯಾನ್ ಜಾಯಮಾನಃ ಸರ್ವೇಭ್ಯೋ ವನಸ್ಪತಿಭ್ಯ ಉತ್ಕೃಷ್ಟತಯಾ ಸಂಪದ್ಯಮಾನೋ ಭವತಿ । ತಮೇವಂವಿಧಂ ಯೂಪಂ ಧೀರಾಸಃ ಪ್ರಾಜ್ಞಾ ಮನಸಾ ದೇವಯಂತೋ ದೇವಾನ್ ಕಾಮಯಮಾನಾಃ ಸ್ವಾಧ್ಯಃ ಸುಷ್ಠು ಸರ್ವತೋ ಧ್ಯಾನಯುಕ್ತಾಃ ಕವಯಃ ಕ್ರಾಂತದರ್ಶಿನೋಽಧ್ವರ್ಯ್ವಾದಯ ಉನ್ನಯಂತಿ । ಉನ್ನತಂ ಕುರ್ವಂತಿ । ಏತಸ್ಮಿನ್ನರ್ಥೇ ಬ್ರಾಹ್ಮಣಂ । ಯುವಾ ಸುವಾಸಾಃ ಪರಿವೀತ ಆಗಾದಿತ್ಯುತ್ತಮಯಾ ಪರಿದಧಾತಿ ಪ್ರಾಣೋ ವೈ ಯುವಾ ಸುವಾಸಾಃ ಸೋಽಯಂ ಶರೀರೈಃ ಪರಿವೃತಃ ಸ ಉ ಶ್ರೇಯಾನ್ಭವತಿ ಜಾಯಮಾನ ಇತಿ ಶ್ರೇಯಾಞ್ಛ್ರೇಯಾನ್ಹ್ಯೇಷ ಏತದ್ಭವತಿ ಜಾಯಮಾನಸ್ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ ಮನಸಾ ದೇವಯಂತ ಇತಿ ಯೇ ವಾ ಅನೂಚಾನಾಸ್ತೇ ಕವಯಸ್ತ ಏವೈನಂ ತದುನ್ನಯಂತಿ । ಐ. ಬ್ರಾ. ೨-೨ । ಇತಿ ॥ ಯುವಾ । ಯೌತೇಃ ಕನಿನ್ಯುವೃಷಿತಕ್ಷೀತ್ಯಾದಿನಾ ಕನಿನ್ಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಉವಙಾದೇಶಃ । ನಿತ್ತ್ವಾದಾದ್ಯುದಾತ್ತತ್ವಂ । ಸುವಾಸಾಃ । ವಸ ಆಚ್ಛಾದನೇ । ಅಸುನ್ನಿತ್ಯನುವೃತ್ತೌ ವಸೇರ್ಣಿದಿತ್ಯಸುನ್ಪ್ರತ್ಯಯಃ । ಣಿತ್ತ್ವಾದುಪಧಾವೃದ್ಧಿಃ । ಸೋರ್ಮನಸೀ ಇತ್ಯುತ್ತರಪದಾದ್ಯುದಾತ್ತತ್ವಂ । ಪರಿವೀತಃ । ವ್ಯೇಞ್ ಸಂವರಣೇ । ಕರ್ಮಣಿ ಕ್ತಃ । ಯಜಾದಿತ್ವಾತ್ಸಂಪ್ರಸಾರಣಂ । ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಆಗಾತ್ । ಇಣ್ ಗತಾವಿತ್ಯಸ್ಯ ಲುಙಿ ಇಣೋ ಗಾ ಲುಙೀತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲೋಪಃ । ಆಡಾಗಮಃ । ಶ್ರೇಯಾನ್ । ಪ್ರಶಸ್ಯಸ್ಯ ದ್ವಿವಚನವಿಭಜ್ಯೋಪಪದ ಇತೀಯಸುನ್ಪ್ರತ್ಯಯಃ । ತಸ್ಮಿನ್ಪ್ರಶಸ್ಯಸ್ಯ ಶ್ರ ಇತಿ ಶ್ರಾದೇಶಃ । ಗುಣಃ । ನಿತ್ತ್ವಾದಾದ್ಯುದಾತ್ತತ್ವಂ । ಏಕಾದೇಶ ಆದ್ಯುದಾತ್ತಃ । ಸ್ವಾಧ್ಯಃ । ಧ್ಯೈ ಚಿಂತಾಯಾಂ । ಸ್ವಾಙೋರುಪಸರ್ಗಯೋಃ ಪ್ರಾಕ್ಪ್ರಯೋಗಃ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಕ್ವಿಪ್ । ದೃಶಿಗ್ರಹಣಾತ್ಸಂಪ್ರಸಾರಣಂ । ಸಂಪ್ರಸಾರಣಾಚ್ಚೇತಿ ಪೂರ್ವರೂಪತ್ವಂ । ಹಲ ಇತಿ ದೀರ್ಘಃ । ಜಸಿ ಏರನೇಕಾಚ ಇತಿ ಯಣಾದೇಶಃ । ಕೃದುತ್ತರಪದಪ್ರಕೃತಿಸ್ವರತ್ವಂ । ಉದಾತ್ತಸ್ವರಿತಯೋರ್ಯಣ ಇತಿ ಜಸಃ ಸ್ವರಿತತ್ವಂ । ದೇವಯಂತಃ । ಸುಪ ಆತ್ಮನಃ ಕ್ಯಜಿತಿ ಕ್ಯಚ್ । ಚಿತ್ತ್ವಾದಂತೋದಾತ್ತಃ ।

ಪ್ರತಿಪದಾರ್ಥ.

**ಯುವಾ**—ದೃಢಾಂಗವೂ । **ಸುವಾಸಾಃ**—ಒಳ್ಳೆಯ ಬಟ್ಟೆ (ಹಗ್ಗ)ಯುಳ್ಳದ್ದೂ । **ಪರಿವೀತಃ**—(ಅದರಿಂದಲೇ) ಸುತ್ತುವರೆಯಲ್ಪಟ್ಟದ್ದೂ ಆದ ಯೂಪವು। **ಆಗಾತ್**—ಬರುತ್ತದೆ। **ಸಃ ಉ**—ಅದೇ ಯೂಪವು। **ಶ್ರೇಯಾನ್ ಜಾಯಮಾನಃ ಭವತಿ**—(ಸಮಸ್ತ ವನಸ್ಪತಿಗಳಿಗಿಂತ) ಶ್ರೇಷ್ಠವಾಗಿರುತ್ತದೆ । **ತಂ**—ಆ ಯೂಪವನ್ನು । **ಧೀರಾಸಃ**—ಪ್ರಾಜ್ಞರೂ । **ಮನಸಾ**—ಮನಸ್ಸಿನಿಂದ । **ದೇವಯಂತಃ**—ದೇವತೆಗಳನ್ನು ಇಚ್ಛಿಸುವವರೂ । **ಸ್ವಾಧ್ಯಃ**—ಚೆನ್ನಾಗಿ ಧ್ಯಾನಿಸುವವರೂ । **ಕವಯಃ**—ಕ್ರಾಂತದರ್ಶಿಗಳೂ ಆದ ಅಧ್ವರ್ಯ್ವಾದಿಗಳು । **ಉತ್ ನಯಂತಿ**—ಮೇಲಕ್ಕೆ ಎತ್ತುತ್ತಾರೆ ।

ಭಾವಾರ್ಥ.

ದೃಢವಾದ ಯೂಪವು ಒಳ್ಳೆಯ ಬಟ್ಟೆಯಿಂದ ಆವೃತವಾಗಿ ಆಗಮಿಸುತ್ತದೆ, ಆದೇ ಯೂಪವೇ ಎಲ್ಲಾ ವನಸ್ಪತಿಗಳಿಗಿಂತ ಉತ್ಕೃಷ್ಟವೆಂದು ಪರಿಗಣಿತವಾಗುತ್ತದೆ, ಇಂತಹ ಯೂಪವನ್ನೇ, ಪ್ರಾಜ್ಞರೂ,

ದೇವತೆಗಳನ್ನು ಯಾಗಕ್ಕೆ ಬರಬೇಕೆಂದು ಇಚ್ಛಿಸುವವರೂ, ಧ್ಯಾನಾಸಕ್ತರೂ, ಕ್ರಾಂತದರ್ಶಿಗಳೂ ಆದ ಅಧ್ವರ್ಯು ಮೊದಲಾದವರು ಮೇಲಕ್ಕೆ ಎತ್ತುತ್ತಾರೆ.

English Translation.

Well clad and hung with wreaths comes the youthful (pillar): most excellent it is as soon as generated : steadfast and wise venerators of the gods, meditating piously in their minds raise it up.

ವಿಶೇಷವಿಷಯಗಳು

**ಯುವಾ—ದೃಢಾಂಗಃ ಅಷ್ಟಾಶ್ರ್ಯಾದಿಲಕ್ಷಣಲಕ್ಷಿತಃ**—ಯೂಪಕ್ಕಾಗಿ ಕಾಡಿನಿಂದ ತಂದ ಮರವನ್ನು ಎಂಟು ಮೂಲೆಗಳು ಬರುವಂತೆ ಕೆತ್ತಿ ನೆಡುವರು. ಇದನ್ನೇ ಸಾಯಣರು ಬಲವುಳ್ಳ (ಅಂಗ) ಅವಯವಗಳುಳ್ಳದ್ದೆಂದೂ ಎಂಟು ಅಂಚುಗಳುಳ್ಳ ವಿಧ್ಯುಕ್ತವಾದ ರೀತಿಯಿಂದ ಇರುವುದೆಂದೂ ಅರ್ಥವನ್ನು ವಿವರಿಸಿದ್ದಾರೆ.

**ಸುವಾಸಾಃ—ಶೋಭನೇನ ವಾಸಸಾ ರಶನಯಾ ಯುಕ್ತಃ** | ಉತ್ತಮವಾದ ವಸ್ತ್ರದಿಂದಲೂ ಹಗ್ಗದಿಂದಲೂ ಸುತ್ತುವರಿಯಲ್ಪಟ್ಟದ್ದಾಗಿರುವ ಯೂಪವು **ಸರ್ವೇಭ್ಯೋ ವನಸ್ಪತಿಭ್ಯ ಉತ್ಕೃಷ್ಟತಯಾ ಸಂಪದ್ಯಮಾನೋ ಭವತಿ.** ಕಾಡಿನಲ್ಲಿರುವ ಎಲ್ಲಾ ವೃಕ್ಷಗಳಿಗಿಂತಲೂ ಉತ್ತಮವಾಗಿರುವುದು ಎಂದು ಅರ್ಥವನ್ನು ವರ್ಣಿಸಿದೆ.

**ಕವಯಃ ಮನಸಾ ದೇವಯಂತಃ ಸ್ವಾಧ್ಯಃ ಉನ್ನಯಂತಿ**—ಈ ವಾಕ್ಯದಿಂದ ಮೇಧಾವಿಗಳಾದ ಅಧ್ವರ್ಯುವೇ ಮೊದಲಾದ ಋತ್ವಿಜರು ದೇವತೆಗಳನ್ನು ಧ್ಯಾನಮಾಡಿ ಯಜ್ಞಕ್ಕಾಗಿ ಆಹ್ವಾನಿಸುತ್ತಾ ಈ ಯೂಪವನ್ನು ಬಹಳ ಉತ್ತಮವನ್ನಾಗಿ ತಿಳಿದು ನೆಡುವುದಕ್ಕಾಗಿ ಮೇಲಕ್ಕೆತ್ತುವರು ಎಂದು ಅರ್ಥವನ್ನು ವಿವರಿಸಿದೆ. ಕವಿಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. **ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ** ಎಂದು ಕವಿ ಶಬ್ದವು (ನಿ. ೧೨-೧೩). ವ್ಯಾಖ್ಯಾತವಾಗಿದೆ. ಸಾಯಣರು—

> **ಏತಸ್ಮಿನ್ನರ್ಥೇಬ್ರಾಹ್ಮಣಂ ಭವತಿ—ಯುವಾ ಸುವಾಸಾಃ ಪರಿವೀತ ಆಗಾದಿತ್ಯುತ್ತಮಯಾ ಪರಿದಧಾತಿ ಪ್ರಾಣೋ ವೈ ಯುವಾ ಸುವಾಸಾಃ ಸೋಽಯಂ ಶರೀರೈಃ ಪರಿವೃತಃ ಸ ಉ ಶ್ರೇಯಾನ್ ಭವತಿ ಜಾಯಮಾನ ಇತಿ ಶ್ರೇಯಾಞ್ಛ್ರೇಯಾನ್ಹ್ಯೇಷ ಏತದ್ಭವತಿ ಜಾಯಮಾನಸ್ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ ಮನಸಾ ದೇವಯಂತ ಇತಿ ಯೇ ವಾ ಅನೂಚಾನಾಸ್ತೇ ಕವಯಸ್ತ ಏವೈನಂ ತದುನ್ನಯಂತಿ ||**
>
> (ಐ. ಬ್ರಾ. ೨-೨)

ಎಂಬ ಐತರೇಯಬ್ರಾಹ್ಮಣದ ಈ ವಾಕ್ಯವನ್ನು ಉದಹರಿಸಿರುತ್ತಾರೆ.

ವ್ಯಾಕರಣಪ್ರಕ್ರಿಯಾ

**ಯುವಾ**—ಯು ಮಿಶ್ರಣಾಮಿಶ್ರಣಯೋಃ ಧಾತು. **ಕನಿನ್ಯುವೃಷಿ** (ಉ. ಸೂ. ೧-೧೫೬) ಎಂಬುದರಿಂದ ಕನಿನ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಉಕಾರಕ್ಕೆ ಗುಣ ಬರುವುದಿಲ್ಲ. **ಅಚಿಶ್ನುಧಾತು**—(ಪಾ. ಸೂ. ೬-೪-೭೭) ಎಂಬುದರಿಂದ ಉಕಾರಕ್ಕೆ ಉವಙಾದೇಶ. ಯುವನ್ ಶಬ್ದವಾಗುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸುವಾಸಾಃ**—ವಸ ಆಚ್ಛಾದನೇ ಧಾತು. **ಅಸುನ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ವಸೇರ್ಣಿತ್** (ಉ. ಸೂ. ೪-೬೫೭) ಎಂಬುದರಿಂದ ಈ ಧಾತುವಿಗೆ ಅಸುನ್ ಬಂದಾಗ ಅದು ಣಿತ್ತಿನಂತಾಗುತ್ತದೆ. ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಸಮಾಸವಾದಾಗ ಅಸಂತವಾದುದರಿಂದ **ಸೋರ್ಮನಸೀ**—(ಉ. ಸೂ. ೬-೨-೧೧೭) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಪರಿವೀತಃ**—ವ್ಯೇಞ್ ಸಂವರಣೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಯಜಾದಿಯಲ್ಲಿ ಸೇರಿರುವುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ ದೀರ್ಘ. **ಗತಿರನಂತರಃ** (ಪಾ ಸೂ. ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ.

**ಅಗಾತ್**—ಇಣ್ ಗತೌ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಸೂತ್ರದಿಂದ ಇಕಾರ ಲೋಪ. **ಇಣೋಗಾಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಚ್ಲಿಗೆ ಬಂದ ಸಿಚಿಗೆ ಲೋಪ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಶ್ರೇಯಾನ್**—ಅತಿಶಯೇನ ಪ್ರಶಸ್ಯಃ ಎಂದು ಅರ್ಥವಿವಕ್ಷಾ ಮಾಡಿದಾಗ **ದ್ವಿವಚನವಿಭಜ್ಯೋಪಪದೇ** (ಪಾ. ಸೂ. ೫-೩-೫೭) ಎಂಬುದರಿಂದ ಈಯಸುನ್ ಪ್ರತ್ಯಯ. ಇದು ಪರವಾದಾಗ **ಪ್ರಶಸ್ಯಸ್ಯ ಶ್ರ**—(ಪಾ. ಸೂ. ೫-೩-೬೦) ಎಂಬುದರಿಂದ ಪ್ರಕೃತಿಗೆ ಶ್ರಾದೇಶ. ಗುಣ. ಪ್ರತ್ಯಯ **ನಿತ್ತಾದುದರಿಂದ** ಆದ್ಯುದಾತ್ತಸ್ವರ ಬರುತ್ತದೆ.

**ಧೀರಾಸಃ**—ಪ್ರಥಮಾ ಬಹುವಚನ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ನಯಂತಿ**—ಣೀಞ್ ಪ್ರಾಪಣೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸಾಧ್ಯಃ**—ಧ್ಯೈ ಚಿಂತಾಯಾಂ ಧಾತು. ಸು ಮತ್ತು ಆಙ್ ಉಪಸರ್ಗಗಳು ಪೂರ್ವದಲ್ಲಿರುವಾಗ **ಅನ್ಯೇಭ್ಯೋಪಿದೃಶ್ಯತೇ** (ಪಾ. ಸೂ. ೩-೨-೧೭೮) ಎಂಬುದರಿಂದ ಕ್ವಿಪ್ ಪ್ರತ್ಯಯ. ದೃಶಿಗ್ರಹಣಸಾಮರ್ಥ್ಯದಿಂದ ಧಾತುವಿನ ಯಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಇಕಾರಕ್ಕೆ ಪೂರ್ವರೂಪ. **ಹಲಃ** (ಪಾ. ಸೂ. ೬-೪-೨) ಎಂಬುದರಿಂದ ಇಕಾರಕ್ಕೆ ದೀರ್ಘ. ಸ್ವಾಧೀ ಎಂಬುದಕ್ಕೆ ಜಸ್ ಪರವಾದಾಗ **ಏರನೇಕಾಚೋ** (ಪಾ. ಸೂ. ೬-೪-೮೨) ಎಂಬುದರಿಂದ ಯಣಾದೇಶ. ಕೃದುತ್ತರಪದ ಪ್ರಕೃತಿಸ್ವರಬರುತ್ತದೆ. ಯಣಾದೇಶ ಬಂದು ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ** (ಪಾ. ಸೂ. ೮-೨-೪) ಎಂಬುದರಿಂದ ಅದಕ್ಕೆ ಸ್ವರಿತಸ್ವರ ಬರುತ್ತದೆ.

**ದೇವಯಂತಃ**—ದೇವಂ ಆತ್ಮನಃ ಇಚ್ಛಂತಃ ದೇವಯಂತಃ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಕ್ಯಜಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. **ತಾಸ್ಯನುದಾತ್ತೇತ್**—ಸೂತ್ರದಿಂದ ಅದು ಅನುದಾತ್ತವಾಗುವುದರಿಂದ ಕ್ಯಚ್ ಸ್ವರ ಉಳಿಯುತ್ತದೆ. ಪ್ರಥಮಾ ಬಹುವಚನಾಂತರೂಪ.

ಸಂಹಿತಾಪಾಠಃ

ಜಾತೋ ಜಾಯತೇ ಸುದಿನತ್ವೇ ಅಹ್ನಾಂ ಸಮರ್ಯ ಆ ವಿದಥೇ ವರ್ಧಮಾನಃ ।
ಪುನಂತಿ ಧೀರಾ ಅಪಸೋ ಮನೀಷಾ ದೇವಯಾ ವಿಪ್ರ ಉದಿಯರ್ತಿ ವಾಚಂ ॥ ೫ ॥

ಪದಪಾಠಃ

ಜಾತಃ । ಜಾಯತೇ । ಸುದಿನಽತ್ವೇ । ಅಹ್ನಾಂ । ಸಽಮರ್ಯೇ । ಆ । ವಿದಥೇ । ವರ್ಧಮಾನಃ ।
ಪುನಂತಿ । ಧೀರಾಃ । ಅಪಸಃ । ಮನೀಷಾ । ದೇವಽಯಾಃ । ವಿಪ್ರಃ । ಉತ್ । ಇಯರ್ತಿ । ವಾಚಂ ॥ ೫ ॥

ಸಾಯಣಭಾಷ್ಯಂ.

ಜಾತಃ ಪೃಥಿವ್ಯಾಂ ಪ್ರಥಮಮುತ್ಪನ್ನೋ ಯೂಪಃ ಸಮರ್ಯೇ । ಮರ್ಯ ಇತಿ ಮನುಷ್ಯನಾಮ । ತೈಃ ಸಹಿತೇ ವಿದಥೇ ವರ್ಧಮಾನಃ । ವಿದಥ ಇತಿ ಯಜ್ಞನಾಮ ವಿದಥಃ ಸವನಮಿತಿ ಯಜ್ಞನಾಮಸು ಪಾಠಾತ್ । ತಸ್ಮಿನ್ಯಜ್ಞ ಆ ವರ್ಧಮಾನೋ ಘೃತಾಂಜನರಶನಾಪರಿವ್ಯಯಣಾದಿನಾ ಸರ್ವತಃ ಶೋಭಮಾನಃ ಸನ್ ಅಹ್ನಾಂ ಸುದಿನತ್ವೇ ಜಾಯತೇ । ಪಶುನಿಯೋಜನಾದಿದ್ವಾರೇಣ ಯಜ್ಞನಿರ್ವಾಹಕತಯಾಹಾನಿ ಸುದಿನಾನಿ ಕರೋತೀತ್ಯರ್ಥಃ । ಅಪಸಃ ಕರ್ಮವಂತೋ ಧೀರಾಃ ಸುಪ್ರಜ್ಞಾ ಅಧ್ವರ್ಯ್ವಾದಯೋ ಮನೀಷಾ ಬುದ್ಧ್ಯಾ ತಂ ಯೂಪಂ ಪುನಂತಿ । ಪ್ರಕ್ಷಾಲನಾದಿಭಿಃ ಶೋಧಯಂತಿ । ದೇವಯಾ ದೇವಾನಾಂ ಯಷ್ಟಾ ದೇವಾನಾಂ ಹವೀಂಷಿ ಪ್ರಾಪಯಿತಾ ವಾ ವಿಪ್ರೋ ಮೇಧಾವೀ ಹೋತಾ ಚ ವಾಚಂ ಯೂಪವಿಷಯಾಂ ಸ್ತುತಿಲಕ್ಷಣಾಂ ವಾಚಮುದಿಯರ್ತಿ । ಪ್ರೇರಯತಿ । ಉಚ್ಚಾರಯತೀತ್ಯರ್ಥಃ ॥ ಉಕ್ತಾರ್ಥೇ ಬ್ರಾಹ್ಮಣಂ । ಜಾತೋ ಜಾಯತೇ ಸುದಿನತ್ವೇ ಅಹ್ನಾಮಿತಿ ಜಾತೋ ಹ್ಯೇಷ ಏತಜ್ಜಾಯತೇ ಸಮರ್ಯ ಆ ವಿದಥೇ ವರ್ಧಮಾನ ಇತಿ ವರ್ಧಯಂತ್ಯೇವೈನಂ ತತ್ಪುನಂತಿ ಧೀರಾ ಅಪಸೋ ಮನೀಷೇತಿ ಪುನಂತ್ಯೇವೈನಂ ತದ್ದೇವಯಾ ವಿಪ್ರ ಉದಿಯರ್ತಿ ವಾಚಮಿತಿ ದೇವೇಭ್ಯ ಏವೈನಂ ತನ್ನಿವೇದಯತಿ । ಐ. ಬ್ರಾ. ೨-೨ ॥ ಸುದಿನತ್ವೇ । ಸುದಿನಾನಾಂ ಭಾವ ಇತಿ ತಸ್ಯ ಭಾವಸ್ತ್ವತಲಾವಿತಿ ತ್ವಃ । ಪ್ರತ್ಯಯಸ್ವರಃ । ಸಮರ್ಯೇ । ಮೃಙ್ ಪ್ರಾಣತ್ಯಾಗ ಇತ್ಯಸ್ಮಾಚ್ಛಂದಸಿ ನಿಷ್ಟರ್ಕ್ಯೇತಿ ಕ್ಯಪ್ರತ್ಯಯಾಂತತ್ವೇನ ನಿಪಾತನಾದ್ಗುಣಃ । ಸಮಾಸಸ್ಯೇತ್ಯಂತೋದಾತ್ತತ್ವಂ । ಪುನಂತಿ । ಪೂಞ್ ಪವನೇ । ಕ್ರ್ಯಾದಿಭ್ಯಃ ಶ್ನಾ । ಪ್ವಾದೀನಾಂ ಹ್ರಸ್ವಃ । ಪ್ರತ್ಯಯಸ್ವರಃ । ದೇವಯಾಃ । ಯಾ ಪ್ರಾಪಣೇ । ಅತೋ ಮನಿನ್ಕ್ವನಿಬ್ವನಿಪಶ್ಚ ವಿಚ್ಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವಂ । ಇಯರ್ತಿ । ಋ ಗತೌ । ಜುಹೋತ್ಯಾದಿಃ । ಅಭ್ಯಾಸಸ್ಯಾರ್ತಿಪಿಪರ್ತ್ಯೋಶ್ಚೇತೀತ್ವಂ । ಅಭ್ಯಾಸಸ್ಯಾಸವರ್ಣ ಇತೀಯಙಾದೇಶಃ । ನಿಘಾತಃ ॥

ಪ್ರತಿಪದಾರ್ಥ

ಜಾತಃ—(ಪೃಥಿವಿಯಲ್ಲಿ ಮೊದಲು) ಉತ್ಪನ್ನವಾಗಿ (ಯೂಪವು) | **ಸಮರ್ಯೇ**—(ಋತ್ವಿಗಾದಿ) ಮನುಷ್ಯರಿಂದ ಸಹಿತವಾದ | ವಿದಥೇ—ಯಜ್ಞದಲ್ಲಿ | **ಆ ವರ್ಧಮಾನಃ**—(ಘೃತಾಂಜನಾದಿಗಳಿಂದ) ಸರ್ವತಃ ವರ್ಧಿತವಾಗಿ | **ಅಹ್ನಾಂ**—ದಿನಗಳ | **ಸುದಿನತ್ವೇ**—( ಪಶುನಿಯೋಜನಾದಿದ್ವಾರಾ ಯಜ್ಞನಿರ್ವಾಹಕವಾಗಿ ) ಸುದಿನತ್ವದಲ್ಲಿ | **ಜಾಯತೇ**—(ಕಾರಣವಾಗಿ) ಆಗುತ್ತದೆ. | **ಅಪಸಃ**—ಕರ್ಮನಿಷ್ಠರೂ | **ಧೀರಾಃ**—ಪ್ರಾಜ್ಞರೂ ಆದ ಅಧ್ವರ್ಯ್ವಾದಿಗಳು | **ಮನೀಷಾ**—ಬುದ್ಧಿವಂತಿಕೆಯಿಂದ | **ಪುನಂತಿ**—(ಪ್ರಕ್ಷಾಲನಾದಿಗಳಿಂದ) ಪೂತವನ್ನಾಗಿ ಮಾಡುತ್ತಾರೆ. | **ದೇವಯಾಃ**—ದೇವತೆಗಳನ್ನು ಪೂಜಿಸುವವನಾದ (ಅಥವಾ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವವನಾದ) | **ವಿಪ್ರಃ**—ಮೇಧಾವಿಯಾದ ಹೋತೃವೂ | **ವಾಚಂ**—(ಯೂಪವಿಷಯಕ ಸ್ತುತಿಲಕ್ಷಣ) ವಾಕ್ಕನ್ನು | **ಉತ್ ಇಯರ್ತಿ**—ಪ್ರೇರಿಸುತ್ತಾನೆ (ಉಚ್ಚರಿಸುತ್ತಾನೆ.)

ಭಾವಾರ್ಥ.

ಯೂಪವು ಭೂಮಿಯಲ್ಲಿ ಉತ್ಪನ್ನವಾಗಿ ಮನುಷ್ಯರಿಂದ ಆಚರಿತವಾದ ಯಾಗಗಳಲ್ಲಿ ಘೃತಾಂಜನಾದಿ ಗಳಿಂದ ಅಲಂಕೃತವಾಗಿ ಯಾಗದಿನಗಳ ಪಾವಿತ್ರ್ಯಕ್ಕೆ ಕಾರಣವಾಗುತ್ತದೆ; ಕರ್ಮನಿಷ್ಠರೂ ಪ್ರಾಜ್ಞರೂ ಆದ ಅಧ್ವರ್ಯ್ವಾದಿಗಳು ಬುದ್ಧಿವಂತಿಕೆಯಿಂದ ಪ್ರಕ್ಷಾಲನಾದಿಗಳ ಮೂಲಕ ಅದನ್ನು ಪವಿತ್ರವನ್ನಾಗಿ ಮಾಡುತ್ತಾರೆ; ಶ್ರದ್ಧಾಳುವಾದ ಹೋತೃವು ಅದನ್ನು ಸ್ತುತಿಸುತ್ತಾನೆ.

## English Translation.

5. Born (in the forest), and beautiful in the sacrifice celebrated by men, it is (again) engendered for the sanctification of the days (of sacred rites); steadfast, active, and intelligent (priests) consecrate it with intelligence, and the devout worshipper recites its praise.

ವಿಶೇಷ ವಿಷಯಗಳು

**ಸಮರ್ಯೇ**—ಮರ್ಯ ಇತಿ ಮನುಷ್ಯನಾಮ | ತೈಸ್ಸಹಿತೇ | ಮರ್ಯ ಶಬ್ದವು ಮನುಷ್ಯನಾಮ ಗಳಲ್ಲಿ (ನಿ. ೨-೮) ಉಕ್ತವಾಗಿ, **ಮರ್ಯೋ ಮನುಷ್ಯೋ ಮರಣಧರ್ಮಾ** ಎಂದು (ನಿ. ೩-೧೫) ವ್ಯಾಖ್ಯಾನ ಮಾಡಲ್ಪಟ್ಟಿದೆ ಮತ್ತು—

**ಕೋನು ಮರ್ಯಾ ಅಮಿಥಿತಃ ಸಖಾ ಸಖಾಯಮಬ್ರವೀತ್ | ಜಹಾ ಕೋ ಅಸ್ಮದೀಷತೇ ||**
(ಋ. ಸಂ. ೬-೪೫-೨೭)

ಎಂಬಲ್ಲಿ **ಮರ್ಯಾಃ ಇತಿ ಮನುಷ್ಯನಾಮ ಮರ್ಯಾದಾಭಿಧಾನಂ ವಾಸ್ಯಾತ್ | ಮರ್ಯಾದಾ ಮರ್ಯೈ ರಾದೀಯತೇ ಮರ್ಯಾದಾ ಮರ್ಯಾದಿನೋರ್ವಿಭಾಗಃ** | (ನಿ. ೪-೨) ಮರ್ಯಾ ಎಂಬ ಶಬ್ದವು ಮನುಷ್ಯ ವಾಚಕವಾಗಿದೆ ಅಥವಾ ಎಲ್ಲೆಯಿಂದಾದರೂ ಆಗಬಹುದು. ಮನುಷ್ಯರು ಎಲ್ಲೆಯನ್ನು ವಿಂಗಡಿಸುವರು. ಆದ್ದ ರಿಂದ ಮರ್ಯಾದಾ ಎಂಬ ಪದಕ್ಕೂ ಮರ್ಯಾದೆ ಉಳ್ಳವರು ಎಂಬ ಪದಕ್ಕೂ ಅರ್ಥವ್ಯತ್ಯಾಸವು ಹೀಗೆ ಇರು ತ್ತದೆ ಎಂದು ನಿರುಕ್ತಕಾರರು ವ್ಯಾಖ್ಯಾನಮಾಡಿದ್ದಾರೆ. ಸಾಯಣರು ಮನುಷ್ಯನೆಂಬ ಅರ್ಥವನ್ನು ಹೇಳಿ ಯಜ್ಞವು ಮನುಷ್ಯರಿಂದ ಕೂಡಿರುತ್ತದೆ ಎಂಬ ಅರ್ಥವನ್ನು ವಿವರಿಸಿದಾರೆ.

**ವಿದಥೇ ಆ ವರ್ಧಮಾನಃ**—ವಿದಥ ಎಂಬ ಪದವು ಯಜ್ಞನಾಮಗಳಲ್ಲಿಯೂ (ನಿ.೩-೧೯) **ವಿದಥೇಷು ಯಜ್ಞೇಷು** (ನಿ. ೮-೧೨) ಎಂದೂ **ಯಜ್ಞೇ ವಿದಥೇ** (ನಿ. ೯-೩) ಎಂದೂ ಯಜ್ಞ ಎಂಬ ಅರ್ಥದಲ್ಲಿಯೂ

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ । ವಿದಥಾನಿ ಪ್ರ ಚೋದಯನ್ ।**
(ಋ. ಸಂ. ೩-೨೭-೭)

ಎಂಬಲ್ಲಿ ವಿದಥಾನಿ ವಿಜ್ಞಾನಾನಿ ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ. ಸಾಯಣರು ಯಜ್ಞದಲ್ಲಿ ಎಂದು ಅರ್ಥವನ್ನು ವಿವರಿಸಿ ಯೂಪವು **ಘೃತಾಂಜನರಶನಾಪರಿವ್ಯಯಣಾದಿನಾ ಸರ್ವತಶ್ಶೋಭಮಾನಃ**—ಘೃತವನ್ನು ಲೇಪಿಸುವುದು, ಹಗ್ಗವನ್ನು ಸುತ್ತಿರುವುದು ಇವೇ ಮೊದಲಾದ ಯಾಜ್ಞಿಕಸಂಸ್ಕಾರಗಳಿಂದ ಶೋಭಿಸುತ್ತಿರುವುದು ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು ಈ ಯೂಪವು **ಪಶುನಿಯೋಜನಾದಿದ್ವಾರೇಣ ಯಜ್ಞನಿರ್ವಾಹಕತಯಾ ಅಹ್ನಾನಿ ಸುದಿನಾನಿ ಕರೋತಿ ।** ಯಜ್ಞದ ಪಶುವನ್ನು ಕಟ್ಟುವುದೇ ಮುಂತಾದ ಕಾರ್ಯಗಳಿಗೆ ಸಾಧಕವಾಗಿರುವುದರಿಂದ ಯಜಮಾನರಿಗೆ ಯಜ್ಞವು ನಡೆಯುವ ದಿನಗಳನ್ನು ಉತ್ತಮವಾದ ದಿನಗಳನ್ನಾಗಿ ಸಾರ್ಥಕಗೊಳಿಸುತ್ತದೆ ಎಂದು ಅರ್ಥವನ್ನು ಹೇಳಿ ಯೂಪದ ಪ್ರಾಶಸ್ತ್ಯವನ್ನು ವರ್ಣಿಸಿದೆ.

**ಅಪಸಃ ಧೀರಾಃ ಪುನಂತಿ**—**ಅಪಃ ಅಪ್ನಃ ದಂಸಃ** ಎಂಬ ಇಪ್ಪತ್ತಾರು ಕರ್ಮಗಳಲ್ಲಿ ಅಪಸ್ ಎಂಬ ಪದವು (ನಿ. ೩-೨) ಉಕ್ತವಾಗಿದೆ. **ಧೀರಃ** ಎಂಬ ಪದವು ಮೇಧಾವಿನಾಮಗಳಲ್ಲಿ (ನಿ. ೩-೧೯) ಉಕ್ತವಾಗಿ, **ಧೀರೋ ಧೀಮಾನ್** (ನಿ. ೩-೧೨) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಸಾಯಣರು ಧೀರಶಬ್ದಕ್ಕೆ (ತಿಳುವಳಿಕೆಯುಳ್ಳ) ಪ್ರಜ್ಞಾವಂತರೆಂದು ಅರ್ಥಮಾಡಿ ಅಧ್ವರ್ಯುವೇ ಮೊದಲಾದ ಜ್ಞಾನಿಗಳಾದ ಋತ್ವಿಜರು ಯಜ್ಞಕರ್ಮಗಳಲ್ಲಿ ಯೂಪವನ್ನು ಆಯಾಯ ಸಂಸ್ಕಾರಗಳಿಂದ (ಪರಿಶುದ್ಧ) ಪವಿತ್ರವನ್ನಾಗಿ ಮಾಡುವರು ಎಂದು ವಿವರಿಸಿದ್ದಾರೆ.

**ದೇವಯಾಃ ವಿಪ್ರಃ ವಾಚಮುದಿಯರ್ತಿ**—ವಿಪ್ರಶಬ್ದವು ಮೇಧಾವಿ ನಾಮಗಳಲ್ಲಿ (ನಿ. ೩-೧೨) ಉಕ್ತವಾಗಿದೆ. **ದೇವಯಾಃ** ಎಂಬ ಪದಕ್ಕೆ **ದೇವಾನಾಂ ಯಷ್ಟಾ** ದೇವತೆಗಳನ್ನು ಉದ್ದೇಶಮಾಡಿ ಯಾಗ ಮಾಡುವವನು ಅಥವಾ **ದೇವಾನಾಂ ಹವೀಂಷಿ ಪ್ರಾಪಯಿತಾ ವಾ** ದೇವತೆಗಳಿಗೆ ಹವಿಸ್ಸನ್ನು ಅಗ್ನಿಯ ಮೂಲಕವಾಗಿ ಅರ್ಪಿಸುವವನು ಎಂದು ಎರಡು ವಿಧವಾಗಿ ಅರ್ಥಮಾಡಿದೆ. ಮೇಧಾವಿಯಾದ ಯಜ್ಞಮಾಡುವವನು ಯೂಪವಿಷಯವಾದ **ಸ್ತುತಿ**ಯನ್ನು ಪಠಿಸುವನೆಂದು ವರ್ಣಿಸಿದೆ. ಸಾಯಣರು—

> **ಜಾತೋ ಜಾಯತೇ ಸುದಿನತ್ವೇ ಅಹ್ನಾಮಿತಿ ಜಾತೋ ಹ್ಯೇಷ ಏತಜ್ಜಾಯತೇ ಸಮರ್ಯ ಆ ವಿದಥೇ ವರ್ಧಮಾನ ಇತಿ ವರ್ಧಯಂತ್ಯೇವೈನಂ ತತ್ಪುನಂತಿ ಧೀರಾ ಅಪಸೋ ಮನೀಷೇತಿ ಪುನಂತ್ಯೇವೈನಂ ತದ್ದೇವಯಾ ವಿಪ್ರ ಉದಿಯರ್ತಿ ವಾಚಮಿತಿ ದೇವೇಭ್ಯ ಏವೈನಂ ತನ್ನಿವೇದಯತಿ ।** (ಐ. ಬ್ರಾ. ೨-೨)

ಎಂಬ ಐತರೇಯಬ್ರಾಹ್ಮಣದ ವಾಕ್ಯವನ್ನು ಈ ಅರ್ಥವನ್ನೇ ಬೋಧಿಸುವುದು ಎಂದು ಉದಹರಿಸಿರುತ್ತಾರೆ

**ಮನೀಷಾ**—ಬುದ್ಧ್ಯಾ । ಮನೀಷಾ ಎಂಬ ಪದವು **ಮನೀಷಯಾ ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ವಾ** ಎಂದು (ನಿ. ೨-೨೫) (ನಿ ೯-೧೧) ಮನಸ್ಸಿನ ಸಂಕಲ್ಪ, ಸ್ತುತಿ, ಪ್ರಜ್ಞಾ ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿದೆ. ಸಾಯಣರು ಪ್ರಜ್ಞಾ ಎಂಬ ಅರ್ಥವನ್ನು ಸ್ವೀಕರಿಸಿದಾರೆ.

ವ್ಯಾಕರಣಪ್ರಕ್ರಿಯಾ.

ಜಾಯತೇ—ಜನೀ ಪ್ರಾದುರ್ಭಾವೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಜ್ಞಾಜನೋರ್ಜಾ (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. ತಿಙಂತನಿಘಾತಸ್ವರಬರುತ್ತದೆ.

ಸುದಿನತ್ವೇ—ಸುದಿನಾನಾಂ ಭಾವಃ ಸುದಿನತ್ವಂ ತಸ್ಯಭಾವಸ್ತ್ವತಲೌ (ಪಾ. ಸೂ. ೫-೧ ೧೧೯) ಎಂಬುದರಿಂದ ಭಾವಾರ್ಥದಲ್ಲಿ ತ್ವ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸಮರ್ಯೇ—ಮೃಙ್ ಪ್ರಾಣತ್ಯಾಗೇ ಧಾತು. ಛಂದಸಿ ನಿಷ್ಟರ್ಕ್ಯದೇವ— (ಪಾ. ಸೂ. ೩-೧-೧೨೩) ಎಂಬುದರಿಂದ ಕ್ಯ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿಪಾತಸಾಮರ್ಥ್ಯದಿಂದಲೇ ಪ್ರತ್ಯಯ ಕಿತ್ತಾದರೂ ಧಾತುವಿನ ಋಕಾರಕ್ಕೆ ಗುಣ ಬರುತ್ತದೆ. ಮರ್ಯೈಃ ಸಹಿತಃ (ಸಹವರ್ತತೇ) ಸಮರ್ಯಃ ಸಮಾಸಸ್ಯ (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

ಪುನಂತಿ—ಪೂಙ್ ಪವನೇ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಬಹುವಚನದ ಝಿಗೆ ಅಂತಾದೇಶ. ಕ್ರ್ಯಾದಿಭ್ಯಃ ಶ್ನಾ (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. ಪ್ವಾದಿನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ವಿಕರಣ ಪರವಾದಾಗ ಧಾತುವಿಗೆ ಹ್ರಸ್ವ. ಶ್ನಾಭ್ಯಸ್ತಯೋರಾತಃ (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಮನೀಷಾ—ಸುಪಾಂ ಸುಲುಕ್—ಸೂತ್ರದಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬರುತ್ತದೆ.

ದೇವಯಾಃ—ದೇವಾನ್ ಯಾಪಯತೀತಿ ದೇವಯಾಃ ಯಾ ಪ್ರಾಪಣೇ ಧಾತು. ಆತೋ ಮನಿನ್ ಕ್ವನಿಬ್—(ಪಾ. ಸೂ. ೩-೨-೭೪) ಎಂಬುದರಿಂದ ವಿಚ್ ಪ್ರತ್ಯಯ. ಸರ್ವಲೋಪವಾಗುತ್ತದೆ. ಗತಿಕಾರಕೋಪಪದಾತ್ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾವಿಭಕ್ತಿ ಏಕವಚನಾಂತರೂಪ.

ಇಯರ್ತಿ—ಋ ಗತೌ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್. ಶ್ಲು ವಿಕರಣ ಬಂದಾಗ ಧಾತುವಿಗೆ ದ್ವಿತ್ವ. ಅರ್ತಿಪಿಪರ್ತ್ಯೋಶ್ಚ (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಅದಕ್ಕೆ ಅಸವರ್ಣವಾದ ಅಚ್ (ಋ) ಪರವಾದುದರಿಂದ ಅಭ್ಯಾಸಸ್ಯಾಸವರ್ಣೇ (ಪಾ. ಸೂ. ೬-೪-೭೮) ಎಂಬುದರಿಂದ ಇಯಙಾದೇಶ. ಧಾತು ಋಕಾರಕ್ಕೆ ತಿಪ್ ನಿಮಿತ್ತವಾಗಿ ಗುಣ ರಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.



ಸಂಹಿತಾಪಾಠಃ

ಯಾನ್ವೋ ನರೋ ದೇವಯಂತೋ ನಿಮಿಮ್ಯುರ್ವನಸ್ಪತೇ ಸ್ವಧಿತಿರ್ವಾ ತತಕ್ಷ ।
ತೇ ದೇವಾಸಃ ಸ್ವರವಸ್ತಸ್ಥಿವಾಂಸಃ ಪ್ರಜಾವದಸ್ಮೇ ದಿಧಿಷಂತು ರತ್ನಂ ॥ ॥ ೬ ॥

ಪದಪಾಠಃ

ಯಾನ್ । ವಃ । ನರಃ । ದೇವಽಯಂತಃ । ನಿಽಮಿಮ್ಯುಃ । ವನಸ್ಪತೇ । ಸ್ವಽಧಿತಿಃ । ವಾ । ತತಕ್ಷ ।
ತೇ । ದೇವಾಸಃ । ಸ್ವರವಃ । ತಸ್ಥಿಽವಾಂಸಃ । ಪ್ರಜಾಽವತ್ । ಅಸ್ಮೇ ಇತಿ । ದಿಧಿಷಂತು । ರತ್ನಂ ॥ ೬ ॥

ಸಾಯಣಭಾಷ್ಯಂ.

ಹೇ ಯೂಪಾ ದೇವಯಂತೋ ದೇವಾನ್ಕಾಮಯಮಾನಾ ನರಃ ಕರ್ಮಣಾಂ ನೇತಾರೋಽಧ್ವರ್ಯವೋ ಯಾನ್ವೋ ಯೂಯುಷ್ಮಾನ್ನಿಮಿಮ್ಯುಃ । ಅವಟೇಷು ಪ್ರಚಿಕ್ಷಿಪುಃ । ವಾ ಅಪಿ ಚ ಹೇ ವನಸ್ಪತೇ ಸ್ವಧಿತಿಃ ಪರಶುಸ್ತ್ವದೀಯಾನ್ಯೂಪಾಂಸ್ತತಕ್ಷ ಚಿಚ್ಛೇದ ದೇವಾಸೋ ದೀಪ್ಯಮಾನಾಃ ಸ್ವರವಃ । ಸ್ವರುಶಬ್ದಃ ಸ್ವಶಕಲವಾಚೀ । ತದ್ವಂತಃ । ಲುಪ್ತಮತ್ವರ್ಥೀಯಃ । ತಸ್ಥಿವಾಂಸಸ್ತಿಷ್ಠಂತಸ್ತೇ ತಾದೃಶಾ ಯೂಪಾ ಅಸ್ಮೇ ಅಸ್ಮೈ ಯಜಮಾನಾಯ ಪ್ರಜಾವತ್ ಅಪತ್ಯಸಹಿತಂ ರತ್ನಮುತ್ತಮಂ ಧನಂ ದಿಧಿಷಂತು । ಧಾರಯಂತು । ಪ್ರಯಚ್ಛಂತ್ವಿತ್ಯರ್ಥಃ ॥ ನಿಮಿಮ್ಯುಃ । ಡುಮಿಞ್ ಪ್ರಕ್ಷೇಪಣ ಇತ್ಯಸ್ಯ ಲಿಟ್ಯುಸಿ ಅಸಂಯೋಗಾಲ್ಲಿಟ್ ಕಿದಿತಿ ಕಿದ್ವದ್ಭಾವಾದ್ಗುಣಾಭಾವಃ । ಯದ್ವೃತ್ತಯೋಗಾದನಿಘಾತಃ । ಸತಿ ಶಿಷ್ಟಃ ಸ್ವರೋ ಬಲೀಯಾನಿತಿ ವಚನಾತ್ಪ್ರತ್ಯಯಸ್ವರಃ । ಸ್ವಧಿತಿಃ । ಸ್ವಶಬ್ದೋಪಪದಾದ್ಧಾ ಧಾರಣ ಇತ್ಯಸ್ಮಾತ್ ಕ್ತಿನ್ । ಸ್ವಾ ಸ್ವಕೀಯಾ ನಿಶಿತಧಾರಾ ಧೀಯತೇ ಪ್ರಕ್ಷಿಪ್ಯತೇಽನೇನೇತಿ ಸ್ವಧಿತಿಃ ಖಡ್ಗಃ । ತತಕ್ಷ । ತಕ್ಷೂ ತ್ವಕ್ಷೂ ತನೂಕರಣ ಇತ್ಯಸ್ಮಾಲ್ಲಿಟಿ ಣಲಿ ರೂಪಾದನಿಘಾತಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಸ್ವರವಃ । ಸ್ವೃ ಶಬ್ದೋಪತಾಪಯೋರಿತ್ಯಸ್ಮಾನ್ನಿದಿತ್ಯನುವೃತ್ತೌ ಶೃಸ್ವೃಸ್ನಿಹಿತ್ರಪೀತ್ಯಾದಿನಾ ಉ ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ತಸ್ಥಿವಾಂಸಃ । ಷ್ಠಾ ಗತಿನಿವೃತ್ತಾವಿತ್ಯಸ್ಮಾಚ್ಛಂದಸಿ ಲಿಟ್ । ತಸ್ಯ ಕ್ವಸುಃ । ವಸ್ವೇಕಾಜಾದ್ಘಸಾಮಿತೀಡಾಗಮಃ । ಪ್ರತ್ಯಯಸ್ವರಃ । ಪ್ರಜಾವತ್ । ಜನೀ ಪ್ರಾದುರ್ಭಾವ ಇತ್ಯಸ್ಮಾದುಪಸರ್ಗೇ ಚ ಸಂಜ್ಞಾಯಾಮಿತಿ ಡಃ । ತತಷ್ಟಾಪ್ । ತದಸ್ಯಾಸ್ತೀತಿ ಮತುಪ್ । ತಸ್ಯ ಪಿತ್ತ್ವಾದನುದಾತ್ತತ್ವಂ । ಏಕಾದೇಶಸ್ವರಃ । ಅಸ್ಮೇ । ಅಸ್ಮಚ್ಛಬ್ದಸ್ಯ ಸುಪಾಂ ಸುಲುಗಿತಿ ಶೇ ಆದೇಶಃ । ದಿಧಿಷಂತು । ಧಿಷ ಧಾರಣೇ । ಜುಹೋತ್ಯಾದಿಃ । ನಿಘಾತಃ ॥

ಪ್ರತಿಪದಾರ್ಥ

(ಹೇ **ಯೂಪಾಃ**—ಎಲೈ ಯೂಪಗಳೇ) । **ಯಾನ್ ವಃ**—ಯಾವ ನಿಮ್ಮನ್ನು । **ದೇವಯಂತಃ**—ದೇವತೆಗಳನ್ನು ಅಪೇಕ್ಷಿಸುವವರೂ । **ನರಃ**—ಯಾಗನೇತೃಗಳೂ ಆದ ಅಧ್ವರ್ಯ್ವಾದಿಗಳು । **ನಿಮಿಮ್ಯುಃ**—ಕತ್ತರಿಸಿದರೋ । **ವಾ**—ಮತ್ತು । (ಹೇ) **ವನಸ್ಪತೇ**—ಎಲೈ ವನಸ್ಪತಿಯೇ । **ಸ್ವಧಿತಿಃ**—ಕೊಡಲಿಯು । **ತತಕ್ಷ**—(ನಿನ್ನ ಸಂಬಂಧವಾದ ಯೂಪಗಳನ್ನು) ಅಚ್ಚುಕಟ್ಟುಮಾಡಿದೆಯೋ । **ತೇ**—ಅಂತಹ । **ದೇವಾಸಃ**—(ಪ್ರಕಾಶಯುಕ್ತಗಳೂ) । **ಸ್ವರವಃ**—ತಮ್ಮ ಭಾಗಗಳಿಂದ ಸಹಿತಗಳೂ (ಪೂರ್ಣವಾದವೂ) । **ತಸ್ಥಿವಾಂಸಃ**—ನಿಂತಿರತಕ್ಕವುಗಳೂ (ಆದ ಯೂಪಗಳು) । **ಅಸ್ಮೇ**—ಈ ಯಜಮಾನನಿಗೆ । **ಪ್ರಜಾವತ್**—ಅಪತ್ಯಸಹಿತವಾದ । **ರತ್ನಂ**—ರತ್ನಾದಿಗಳನ್ನು । **ದಿಧಿಷಂತು**—ಧರಿಸಲಿ (ಅನುಗ್ರಹಿಸಲಿ).

ಭಾವಾರ್ಥ

ಎಲೈ ಯೂಪಗಳೇ, ಯಜ್ಞನಿರ್ವಾಹಕರೂ, ಶ್ರದ್ಧಾಳುಗಳೂ ಆದ ಅಧ್ವರ್ಯು ಮೊದಲಾದವರು ನಿಮ್ಮನ್ನು ವನಸ್ಪತಿಗಳಿಂದ ಛೇದಿಸಿ, ಕೊಡಲಿಯಿಂದ ಅಣಿಮಾಡಿದರು ; ತಮ್ಮ ಎಲ್ಲಾ ಭಾಗಗಳಿಂದ ಯುಕ್ತವಾಗಿ (ಸಮಗ್ರವಾಗಿ) ತೇಜಸ್ವಿಗಳಾಗಿ ನಿಂತಿರುವ ನೀವು ಈ ಯಜಮಾನನಿಗೆ ಅಪತ್ಯಸಹಿತವಾದ ಧನಾದಿಗಳನ್ನನುಗ್ರಹಿಸಿ.

English Translation.

May those (posts) which devout men have cut down, or which, Vanaspati, the axe has trimmed, may they standing resplendent with all their parts (entire) bestow upon us wealth with progeny.

ವಿಶೇಷ ವಿಷಯಗಳು.

**ನರಃ**—ಈ ಶಬ್ದವು ಮನುಷ್ಯನಾಮಗಳಲ್ಲಿ (ನಿ. ೩-೭) ಉಕ್ತವಾಗಿ, **ನರಾಃ ಮನುಷ್ಯಾಃ ನೃತ್ಯಂತಿ** ಕರ್ಮಸು ಎಂದು ವ್ಯಾಖ್ಯಾತವಾಗಿದೆ. ಸಾಯಣರು **ಕರ್ಮಣಾಂ ನೇತಾರೋ ಅಧ್ವರ್ಯ್ವಾದಯಃ** ಯಜ್ಞದ ಕರ್ಮಗಳನ್ನು ನ್ಯೂನಾತಿರೇಕಗಳಿಲ್ಲದಂತೆ ಆಚರಿಸುವ ಅಧ್ವರ್ಯುವೇ ಮೊದಲಾದ ಋತ್ವಿಜರು ಎಂದು ಅರ್ಥವನ್ನು ವಿವರಿಸಿದ್ದಾರೆ.

**ಸ್ವಧಿತಿಃ**—**ಸ್ವಾ ಸ್ವಕೀಯಾ ನಿಶಿತಧಾರಾ ಧೀಯತೇ ಪ್ರಕ್ಷಿಪ್ಯತೇ ಅನೇನೇತಿ ಸ್ವಧಿತಿಃ ಖಡ್ಗಃ** । ಇದರ (ಹರಿತವಾದ) ಚೂಪಾದ ಧಾರೆಯು (ಅಲಗು) ಇನ್ನೊಂದು ವಸ್ತುವಿನಲ್ಲಿ ಛೇದನಕ್ಕಾಗಿ ಪ್ರೇರಿಸಲ್ಪಡುತ್ತದೆಯಾಗಿ ಇದಕ್ಕೆ ಸ್ವಧಿತಿ-ಕತ್ತಿ ಎಂದು ಹೆಸರು ಎಂದು ಸಾಯಣರು ವಿವರಿಸಿ ಪರಶು ಎಂಬ ಅರ್ಥವನ್ನು ಹೇಳಿದಾರೆ ಸ್ವಧಿತಿಶಬ್ದವು **ದಿದ್ಯುತ್ ನೇಮಿಃ** ಎಂಬ ಹದಿನೆಂಟು ವಜ್ರನಾಮಗಳಲ್ಲಿ (ನಿ. ೩-೧೧) ಉಕ್ತವಾಗಿದೆ.

**ದೇವಾಸಃ ಸ್ವರವಃ**—**ಸ್ವರು ಶಬ್ದಃ ಸ್ವಶಕಲವಾಚೀ** । **ಲುಪ್ತಮತ್ವರ್ಥೀಯಃ** । ವನಸ್ಪತಿ (ವೃಕ್ಷ) ಸಂಬಂಧವಾದ ಅಂಶವಾಗಿರುವ ಕಾರಣ ಯೂಪವು ಇಲ್ಲಿ ಶಕಲ (ಚೂರು, ತುಂಡು) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ಪದಕ್ಕೆ ದೇವಾಸಃ ಎಂದು ವಿಶೇಷಣವನ್ನು ಹೇಳಿರುವುದರಿಂದ ಈ ಶಕಲವು—ದೇವತೆಗಳಂತೆ ಪ್ರಕಾಶಿಸುತ್ತಿರುವುದು. (ದೇವಾ ಇವ ದೀಪ್ಯಮಾನಾಃ) ಎಂದು ಅರ್ಥವನ್ನು ವಿವರಿಸಿದೆ. ಮಹಾ ಕ್ರತುಗಳಲ್ಲಿ

ಅನೇಕ ಯೂಪಗಳನ್ನು ಉಪಯೋಗಿಸುವ ಕಾರಣ ಇಲ್ಲಿ **ತೇ** ಎಂಬ ಬಹುವಚನ ಪದದಿಂದ ಈ ಅಂಶವನ್ನು **ಸೂಚಿಸಿದೆ.** ಯೂಪಶಕಲವೆಂಬುದಾಗಿಯೂ ಯೂಪವನ್ನು ವ್ಯವಹಾರಮಾಡುವಕಾರಣ ಇಲ್ಲಿ ಶಕಲವಾಚಿಯಾದ **ಸ್ವರು** ಎಂಬ ಶಬ್ದದಿಂದ ಹೇಳಿದೆ.

**ರತ್ನಮ್**— ಈ ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಪ್ರಜಾವದಸ್ಮೇ ಧಿಧಿಷನ್ತು **ರತ್ನಂ** ಎಂಬ ವಾಕ್ಯದಿಂದ ಈ ಯೂಪಗಳು ಯಾಗವನ್ನು ಆಚರಿಸುವ ಯಜಮಾನನಿಗೆ ಉತ್ತಮವಾದ ಪುತ್ರರನ್ನೂ, ಧನವನ್ನೂ ಅನುಗ್ರಹಿಸಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ.

**ನಿಮಿಮ್ಯುಃ**—ಡುಮಿಞ್ ಪ್ರಕ್ಷೇಪಣೇ ಧಾತು. ಲಿಟ್ ಪ್ರಥಮಪುರುಷ ಬಹುವಚನಕ್ಕೆ ಪರಸ್ಮೈಪದಾನಾಂ—(ಪಾ. ಸೂ. ೩-೪-೮೨) ಎಂಬುದರಿಂದ ಉಸಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಅಸಂಯೋಗಾಲ್ಲಿಟ್‌ಕಿತ್** (೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಸತಿಶಿಷ್ಟಃಸ್ವರ ಬಲೀಯಸ್ತ್ವಮ್ ಎಂಬ ಪರಿಭಾಷೆಯಿಂದ ಪ್ರತ್ಯಯಸ್ವರಕ್ಕೆ ಪ್ರಾಬಲ್ಯವಿರುವುದರಿಂದ ಅಂತೋದಾತ್ತವಾಗುತ್ತದೆ. ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ನಿ) ಅನುದಾತ್ತಸ್ವರ ಬರುತ್ತದೆ.

**ಸ್ವಧಿತಿಃ**— ಧಿ ಧಾರಣೇ ಧಾತು. ಸ್ವ ಎಂಬುದು ಉಪಪದವಾಗಿರುವಾಗ ಸ್ತ್ರಿಯಾಂಕ್ತಿನ್ ಎಂಬುದರಿಂದ ಕ್ತಿನ್ ಪ್ರತ್ಯಯ. ಸ್ವಾ ಸ್ವಕೀಯಾ ನಿಶಿತಧಾರಾ ಧೀಯುತೇ ಪ್ರಕ್ಷಿಪ್ಯತೇ ಅನೇನ ಇತಿ ಸ್ವಧಿತಿಃ=ಖಡ್ಗ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತತಕ್ಷ**—ತಕ್ಷೂ ತ್ವಕ್ಷೂ ತನೂಕರಣೇ ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ವಾ ಎಂಬುದರ ಸಂಬಂಧವಿರುವುದರಿಂದ **ಚವಾ**—(ಪಾ. ಸೂ. ೮-೧-೫೯) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸ್ವರವಃ**—ಸ್ವೃ ಶಬ್ದೋಪತಾಪಯೋಃ ಧಾತು. **ಶೃ ಸ್ವೃಸ್ನಿಹಿತ್ರಪಿ**—(ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ಸ್ವರು ಎಂದು ರೂಪವಾಗುತ್ತದೆ. **ನಿತ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾವಿಭಕ್ತಿ ಬಹುವಚನಾಂತರೂಪ.

**ತಸ್ಥಿವಾಂಸಃ**—**ಷ್ಠಾ** ಗತಿನಿವೃತ್ತೌ ಧಾತು. **ಛಂದಸಿಲುಙ್**—ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. **ಕ್ವಸುಶ್ಚ** (ಪಾ. ಸೂ. ೩-೨-೧೦೭) ಸೂತ್ರದಿಂದ ಅದಕ್ಕೆ ಕ್ವಸುರಾದೇಶ. ಧಾತುವು ಏಕಾಚಾದುದರಿಂದ **ವಸ್ವೇಕಾಜಾ**—(ಪಾ. ಸೂ. ೭-೨-೬೭) ಎಂಬುದರಿಂದ ಪರದ ಪ್ರತ್ಯಯಕ್ಕೆ ಇಡಾಗಮ. ಧಾತುವಿಗೆ **ದ್ವಿತ್ವಾದಿ.** ಪ್ರತ್ಯಯ ಸ್ವರದಿಂದ ಆಕಾರ ಉದಾತ್ತವಾಗುತ್ತದೆ. ಪ್ರಥಮಾವಿಭಕ್ತಿ ಬಹುವಚನಾಂತರೂಪ.

ಪ್ರಜಾವತ್—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಪ್ರ ಎಂಬ ಉಪಸರ್ಗ ಪೂರ್ವದಲ್ಲಿರುವಾಗ ಉಪಸರ್ಗೇ ಚಸಂಜ್ಞಾಯಾಮ್ (ಪಾ. ಸೂ. ೩-೨-೯೯) ಎಂಬುದರಿಂದ ಡ ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ. ಇದಕ್ಕೆ ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. ಪ್ರಜಾ ಎಂದು ರೂಪವಾಗುತ್ತದೆ. ಇದರ ಮೇಲೆ ತದಸ್ಯಾಸ್ತಿ—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಅದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

ಅಸ್ಮೇ—ಅಸ್ಮದ್ ಶಬ್ದ. ಸುಪಾಂಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ಚತುರ್ಥೀ ವಿಭಕ್ತಿ ಬಂದಾಗ ಅದಕ್ಕೆ ಶೇ ಆದೇಶ.

ದಿಧಿಷಂತು—ಧಿಷ ಧಾರಣೇ ಧಾತು. ಜುಹೋತ್ಯಾದಿ. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಯೇ ವೃಕ್ಣಾಸೋ ಅಧಿ ಕ್ಷಮಿ ನಿಮಿತಾಸೋ ಯತಸ್ರುಚಃ ।
ತೇ ನೋ ವ್ಯಂತು ವಾರ್ಯಂ ದೇವತ್ರಾ ಕ್ಷೇತ್ರಸಾಧಸಃ ॥ ೭ ॥

ಪದಪಾಠಃ

ಯೇ । ವೃಕ್ಣಾಸಃ । ಅಧಿ । ಕ್ಷಮಿ । ನಿಽಮಿತಾಸಃ । ಯತಽಸ್ರುಚಃ ।
ತೇ । ನಃ । ವ್ಯಂತು । ವಾರ್ಯಂ । ದೇವಽತ್ರಾ । ಕ್ಷೇತ್ರಽಸಾಧಸಃ ॥ ೭ ॥

ಸಾಯಣಭಾಷ್ಯಂ.

ಅಧಿ ಕ್ಷಮಿ ಕ್ಷಮಾಯಾಂ ಭೂಮೌ ವೃಕ್ಣಾಸಃ ಪರಶುನಾ ಛಿನ್ನಾ ಯೇ ಯೂಪಾಃ । ಯತಸ್ರುಚ ಇತಿ ಋತ್ವಿಗ್ನಾಮ । ಯತಸ್ರುಚೋ ಮರುತ ಇತಿ ಋತ್ವಿಙ್ನಾಮಸು ಪಠಿತತ್ವಾತ್ । ಯತಾಃ ಸ್ರುಚೋ ಯೈಸ್ತೇ ಯತಸ್ರುಚಃ । ತೈರೃತ್ವಿಗ್ಭಿರ್ನಿಮಿತಾಸೋಽವಟೇಷು ನಿತರಾಂ ಪ್ರಕ್ಷಿಪ್ತಾಃ ಕ್ಷೇತ್ರಸಾಧಸಃ ಕ್ಷೇತ್ರಸ್ಯ ಯಜ್ಞಸ್ಯ ಸಾಧಕಾಃ । ಯಥಾ ಕ್ಷೇತ್ರಂ ಸಸ್ಯಾದಿದ್ವಾರಾ ಫಲಂ ಪ್ರಯಚ್ಛತಿ ತಥಾ ಯಜ್ಞೋಽಪ್ಯಪೂರ್ವದ್ವಾರಾ ಸ್ವರ್ಗಾದಿಫಲಂ ದದಾತೀತಿ ಕ್ಷೇತ್ರಂ ಯಜ್ಞಃ । ಏವಂವಿಧಾಸ್ತೇ ಯೂಪಾ ನೋಽಸ್ಮದೀಯಂ ವಾರ್ಯಂ ವಾರಣೀಯಂ ಸಂಭಜನೀಯಂ ಹವಿರ್ದೇವತ್ರಾ ದೇವೇಷು ವ್ಯಂತು । ಗಮಯಂತು । ಅಸ್ಮದೀಯಂ ಹವಿರ್ದೇವಾಧೀನಂ ಕುರ್ವಂತ್ವಿತ್ಯರ್ಥಃ ॥ ವೃಕ್ಣಾಸಃ । ಓವ್ರಶ್ಚೂ ಛೇದನ ಇತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಗ್ರಹಿಜ್ಯಾವಯಿ... ಇತ್ಯಾದಿನಾ ಸಂಪ್ರಸಾರಣಂ । ಓದಿತಶ್ಚೇತಿ ನಿಷ್ಠಾನತ್ವಂ । ಕ್ಷಮಿ । ಆತೋ ಧಾತೋರಿತ್ಯತ್ರ ಆತ ಇತಿ ಯೋಗವಿಭಾಗಾದಾಕಾರಲೋಪಃ । ನಿಮಿತಾಸಃ । ಡುಮಿಞ್ ಪ್ರಕ್ಷೇಪಣೇ । ಕರ್ಮಣಿ ಕ್ತಃ । ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಯತಸ್ರುಚಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ವ್ಯಂತು । ಇಣ್ ಗತಾವಿತ್ಯಸ್ಯ ಲೋಟಿ ರೂಪಂ । ಇಕಾರಲೋಪಶ್ಛಾಂದಸಃ । ಅಯಮಂತರ್ಭಾವಿತಣ್ಯರ್ಥಃ । ವಾರ್ಯಂ ।

ವೃಜ್ ಸಂಭಕ್ತಾವಿತ್ಯಸ್ಮಾದೃಹಲೋರ್ಣ್ಯದಿತಿ ಕರ್ಮಣಿ ಣ್ಯತ್ । ಈಡವಂದವೃಶಂಸದುಹಾಂ ಣ್ಯತ ಇತ್ಯಾದಿನಾದ್ಯು-ದಾತ್ತತ್ವಂ । ದೇವತ್ರಾ । ತ್ರೇತ್ಯನುವೃತ್ತೌ ದೇವಮನುಷ್ಯಪುರುಷಪುರುಮರ್ತ್ಯೇಭ್ಯ ಇತ್ಯಾದಿನಾಧಿಕರಣೇ ತ್ರಾಪ್ರತ್ಯಯಃ । ಕ್ಷೇತ್ರಸಾಧಸಃ । ಷಾಧ ಸಾಧ ಸಂಸಿದ್ಧಾವಿತ್ಯಸ್ಮಾದೌಣಾದಿಕೋಽಸುನ್ । ಕೃದುತ್ತರ-ಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ.

**ಯೇ**—ಯಾವ ಯೂಪಗಳು । **ಅಧಿ ಕ್ಷಮಿ**—ಭೂಮಿಯ ಮೇಲೆ । **ವೃಕ್ಣಾಸಃ**—ಕೊಡಲಿಯಿಂದ ಕತ್ತರಿಸಲ್ಪಟ್ಟವುಗಳೂ । **ಯತಸ್ರುಚಃ**—ಸ್ರುಚಗಳನ್ನು ಸಿದ್ಧಪಡಿಸಿಕೊಂಡಿರುವ ಋತ್ವಿಜರಿಂದ । **ನಿಮಿತಾಸಃ**—(ಹಳ್ಳಗಳಲ್ಲಿ) ಎಸೆಯಲ್ಪಟ್ಟಿರುವವುಗಳೂ (ಅಥವಾ) ರಚಿಸಲ್ಪಟ್ಟಿರುವವುಗಳೂ । **ಕ್ಷೇತ್ರಸಾಧಸಃ**—ಯಜ್ಞಸಾಧಕಗಳೂ (ಆಗಿವೆಯೋ) । **ತೇ**—ಆ ಯೂಪಗಳು । **ನಃ**—ನಮ್ಮ । **ವಾರ್ಯಂ**—ವರಣೀಯವಾದ ಹವಿರಾದಿಗಳನ್ನು । **ದೇವತ್ರಾ**—ದೇವತೆಗಳಲ್ಲಿ । **ವ್ಯಂತು**—(ಸೇರುವಂತೆ) ಹೋಗುವಂತೆ ಮಾಡಲಿ ।

ಭಾವಾರ್ಥ.

ಕೊಡಲಿಯಿಂದ ಛೇದಿಸಿ ಭೂಮಿಯಲ್ಲಿ ಬೀಳಿಸಲ್ಪಟ್ಟು, ಅನಂತರ ಋತ್ವಿಜರಿಂದ (ಯೂಪಾಕಾರವಾಗಿ) ರಚಿಸಲ್ಪಟ್ಟು ಯಜ್ಞಸಾಧಕಗಳಾಗಿರುವ ಯೂಪಗಳು ನಮ್ಮಿಂದ ಅರ್ಪಿತವಾಗುವ ಶ್ರೇಷ್ಠವಾದ ಹವಿರಾದಿಗಳನ್ನು ದೇವತೆಗಳಿಗೆ ತಲುಪಿಸಲಿ.

## English Translation.

May those posts which have been cut down upon the earth, and which have been fabricated by the priests. those which are the accomplishers of the sacrifice, convey our acceptable (offering) to the gods.

ವಿಶೇಷವಿಷಯಗಳು.

**ಅಧಿ ಕ್ಷಮಿ– ಕ್ಷಮಾಯಾಂ ಭೂಮೌ** । **ಕ್ಷಮಾ** ಶಬ್ದವು ಇಪ್ಪತ್ತೊಂದು ಪೃಥಿವೀನಾಮಗಳಲ್ಲಿ (ನಿ. ೨-೫) ಉಕ್ತವಾಗಿದೆ. ಭೂಮಿಯಲ್ಲಿ ಪರಶು (ಕೊಡಲಿ) ನೇ ಮೊದಲಾದ ಆಯುಧಗಳಿಂದ ಕತ್ತರಿಸಲ್ಪಟ್ಟು ಯೂಪಗಳು ಯಜ್ಞದಲ್ಲಿ ಉಪಯುಕ್ತವಾಗಿವೆ ಎಂದು ಅರ್ಥವನ್ನು ವಿವರಿಸಿದೆ.

**ಯತಸ್ರುಚಃ**— ಈ ಪದವು **ಭಾರತಾಃ ಕುರವಃ** ಎಂಬ ಎಂಟು ಋತ್ವಿಜ್ನಾಮಗಳಲ್ಲಿ(ನಿ. ೩-೧೮) ಉಕ್ತವಾಗಿದೆ. **ಯತಾಃ ಸ್ರುಚಃ ಯೈಸ್ತೇ**— ಯಜ್ಞದಲ್ಲಿ ಹವಿಸ್ಸನ್ನು ಹೋಮ ಮಾಡುವುದಕ್ಕಾಗಿ ಸ್ರುಕ್ಕುಗಳನ್ನು ಸಿದ್ಧಪಡಿಸಿ ಹಿಡಿದಿರುವ ಋತ್ವಿಕ್ಕುಗಳು ಎಂದು ಅರ್ಥವನ್ನುಮಾಡಿ, ಋತ್ವಿಜರಿಂದ ಯೂಪಗಳು ಭೂಮಿಯಲ್ಲಿ ನೆಡಲ್ಪಟ್ಟವೆ ಎಂದು ಅರ್ಥಮಾಡಿದೆ.

**ಕ್ಷೇತ್ರಸಾಧಸಃ**— **ಕ್ಷೇತ್ರಸ್ಯ ಯಜ್ಞಸ್ಯ ಸಾಧಕಾಃ** । **ಯಥಾ ಕ್ಷೇತ್ರಂ ಸಸ್ಯಾದಿದ್ವಾರಾ ಫಲಂ ಪ್ರಯಚ್ಛತಿ ತಥಾ ಯಜ್ಞೋಽಪಿ ಅಪೂರ್ವದ್ವಾರಾ ಸ್ವರ್ಗಾದಿಫಲಂ ದದಾತೀತಿ ಕ್ಷೇತ್ರಂ** । ನಿರುಕ್ತಕಾರರು **ಕ್ಷೇತ್ರಂ ಕ್ಷಿಯತೇಃ ನಿವಾಸಕರ್ಮಣಃ** । **ಕ್ಷಿಜ್ ಕ್ಷಯೇ** ಎಂಬ ವಾಸಮಾಡು ಎಂಬ ಅರ್ಥವುಳ್ಳ **ಕ್ಷಿ** ಧಾತುವಿ

ನಿಂದ ನಿಷ್ಪನ್ನವಾದ ಕ್ಷೇತ್ರ ಶಬ್ದಕ್ಕೆ ವಾಸಸ್ಥಾನವೆಂದು ಅರ್ಥವನ್ನು ವಿವರಿಸಿದಾರೆ. ಸಾಯಣರು ಇಲ್ಲಿ ಕ್ಷೇತ್ರವು (ಭೂಮಿಯು) ಸಸ್ಯಾದಿಗಳನ್ನು ವೃದ್ಧಿಗೊಳಿಸಿ ಜನಗಳಿಗೆ ಅನುಕೂಲವಾಗುವ ಕಾರ್ಯವನ್ನು ಆಚರಿಸುವಂತೆ ಯಜ್ಞಮಾಡುವ ಯಜಮಾನರಿಗೆ ಯಜ್ಞಫಲವಾದ ಸ್ವರ್ಗಾದಿಗಳನ್ನು ಅಪೂರ್ವವೆಂಬುದರ ಮೂಲಕವಾಗಿ ಉಂಟುಮಾಡುವ ಕಾರಣಕ್ಷೇತ್ರ ಶಬ್ದವು ಯಜ್ಞವೆಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿ, ಯೂಪಗಳು ಯಜ್ಞವನ್ನು ನೆರವೇರಿಸುವುವುಗಳಾದುದರಿಂದ ಯಜ್ಞಸಾಧಕಗಳೆಂದು ಅರ್ಥವನ್ನು ವಿವರಿಸಿದ್ದಾರೆ.

ವಾರ್ಯಂ— ವರಣೀಯಂ ಸಂಭಜನೀಯಂ ಹವಿಃ । ನಿರುಕ್ತಕಾರರು ವಾರ್ಯ ಶಬ್ದಕ್ಕೆ ವೃಣೋತೇರಥಾಪಿ ವರತಮಮ್ ಎಂದು ವ್ಯಾಖ್ಯಾನ ಮಾಡಿದ್ದಾರೆ. ದುರ್ಗಾಚಾರ್ಯರು ಯದ್ವರಯಿತವ್ಯಂ ಭವತಿ ತದ್ವಾರ್ಯಮಿತ್ಯುಚ್ಯತೇ। ಅಥಾಪಿ ಕದಾಚಿತ್— ವಾರ್ಯಶಬ್ದೇನ ಯತ್ ವರತಮಂ ಶ್ರೇಷ್ಠತಮಂ ಕಿಂಚಿದ್ಭವತಿ ತದುಚ್ಯತೇ ವರಿಸು ಎಂಬ ಅರ್ಥವನ್ನು ಬೋಧಿಸುವ ವೃಞ್ ಧಾತುವಿನಿಂದ ನಿಷ್ಪನ್ನವಾದ ವಾರ್ಯ ಶಬ್ದಕ್ಕೆ ಅಭಿಲಷಣೀಯವಾದದ್ದು ಎಂಬ ಅರ್ಥವನ್ನು ವಿವರಿಸಿದ್ದಾರೆ. ಮತ್ತು ಕೆಲವುಕಡೆಯಲ್ಲಿ ವಾರ್ಯಪದದಿಂದ ಶ್ರೇಷ್ಠತಮವಾದುದು ಎಂಬ ಅರ್ಥವೂ ಸೂಚಿತವಾಗಬಹುದು ಎಂದೂ ಹೇಳಿದ್ದಾರೆ. ಸಾಯಣರು ವರಣೀಯವಾದ (ದೇವತೆಗಳಿಗೆ ಅತ್ಯಂತ ಪ್ರೀತಿಕರವಾದ) ಹವಿಸ್ಸೆಂಬ ಅರ್ಥವನ್ನು ವರ್ಣಿಸಿದಾರೆ.

ದೇವತ್ರಾ ವ್ಯಂತು— ದೇವೇಷು ಗಚ್ಛಂತು. ಯೂಪಗಳು ಯಜಮಾನರಿಂದ ಅರ್ಪಿತವಾದ ವರಣೀಯವಾದ ಹವಿಸ್ಸುಗಳನ್ನು ದೇವತೆಗಳು ಹೊಂದುವಂತೆ ಅನುಗ್ರಹಿಸಲಿ ಎಂದು ಅರ್ಥವನ್ನು ವಿವರಿಸಿದೆ. ದೇವತ್ರಾ ಎಂಬ ಶಬ್ದಕ್ಕೆ ನಿರುಕ್ತಕಾರರು,

ವನಸ್ಪತೇ ರಶನಯಾ ನಿಯೂಯ ಪಿಷ್ಟತಮಯಾ ವಯುನಾನಿ ವಿದ್ವಾನ್ ।
ವಹಾ ದೇವತ್ರಾ ದಿಧಿಷೋ ಹವೀಂಷಿ ಪ್ರ ಚ ದಾತಾರಮಮೃತೇಷು ವೋಚಃ ॥

ಎಂಬ ಋಕ್ಕನ್ನು ಉದಹರಿಸಿ ದೇವತ್ರಾ ದೇವಾನ್ ಎಂಬ ಅರ್ಥವನ್ನು ವಿವರಿಸಿದಾರೆ. ಸಾಯಣರು ಅಸ್ಮದೀಯಂ ಹವಿಃ ದೇವಾಧೀನಂ ಕುರ್ವಂತು ಎಂದು ಯಜಮಾನರ ಅಭಿಲಾಷೆಯ ಆಶಂಸಾಪರವಾಗಿ ವಿರ್ಣಿಸಿದಾರೆ.

ವ್ಯಾಕರಣಪ್ರಕ್ರಿಯಾ

ವೃಕ್ಣಾಸಃ— ಓವ್ರಶ್ಚೂ ಛೇದನೇ ಧಾತು. ಊದಿತ್ತಾದುದರಿಂದ ಇಡ್ವಿಕಲ್ಪ. ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. ಇದು ಕಿತ್ತಾದುದರಿಂದ ಗ್ರಹಿಜ್ಯಾವಯಿ—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿನ ರೇಫಕ್ಕೆ (ಋಕಾರ) ಸಂಪ್ರಸಾರಣ. ಪೂರ್ವರೂಪ. ಸ್ಕೋಃಸಂಯೋ—ಎಂಬುದರಿಂದ ಸಂಯೋಗದ ಆದಿಯಾದ ಸಕಾರಕ್ಕೆ ಲೋಪ. ಚೋಃಕುಃ ಎಂಬುದರಿಂದ ಚಕಾರಕ್ಕೆ ಕಕಾರಾದೇಶ. ಧಾತು ಓದಿತ್ತಾದುದರಿಂದ ಓದಿತಶ್ಚ (ಪಾ. ಸೂ. ೮-೨-೪೫) ಎಂಬುದರಿಂದ ಪರದ ನಿಷ್ಠಾ ತಕಾರಕ್ಕೆ ನತ್ವ. ಯಸ್ಯವಿಭಾಷಾ (ಪಾ. ಸೂ. ೭-೨-೧೫) ಎಂಬುದರಿಂದ ನಿಷ್ಠಾಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ಋಕಾರದ ಪರದಲ್ಲಿ ಬಂದುದರಿಂದ ನಕಾರಕ್ಕೆ ಣತ್ವ ವೃಕ್ಣ ಎಂದು ರೂಪವಾಗುತ್ತದೆ. ಜಸ್ ಪರವಾದಾಗ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ.

ಕ್ಷಮಿ— ಕ್ಷಮಾ ಶಬ್ದ. ಇದಕ್ಕೆ ಸಪ್ತಮೀ ಏಕವಚನ ಪರವಾದಾಗ ಆತೋಧಾತೋಃ (ಪಾ. ಸೂ. ೬-೪-೧೪೦) ಎಂಬಲ್ಲಿ ಆತಃ ಎಂದು ಯೋಗವಿಭಾಗ ಮಾಡಿಕೊಂಡಿರುವುದರಿಂದ ಧಾತುವಾಗದಿದ್ದರೂ ಆಕಾರಾಂತವಾದುದರ ಆಕಾರಕ್ಕೆ ಭ ಸಂಜ್ಞಾ ಇರುವುದರಿಂದ ಲೋಪ.

**ನಿಮಿತಾಸಃ**—ಡುಮಿಞ್ ಪ್ರಕ್ಷೇಪಣೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕರ್ಮಣಿ ಕ್ತಾಂತಪರವಾದುದರಿಂದ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ನಿ) ಉದಾತ್ತಸ್ವರ ಬರುತ್ತದೆ. ಜಸ್‌ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅಸುಗಾಗಮ.

**ಯತಸ್ರುಚಃ**—ಯತಾಃ ಸ್ರುಚಃ ಯೈಸ್ತೇ ಯತಸ್ರುಚಃ । ಬಹುವ್ರೀಹೌ **ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವ್ಯಂತು**—ವಿ ಉಪಸರ್ಗ. ಇಣ್ ಗತೌ ಧಾತು. ಲೋಟ್ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ ಬಂದಾಗ ಉತ್ವ. **ಇಣೋಯಣ್** ಎಂಬುದರಿಂದ ಧಾತು ಇಕಾರಕ್ಕೆ ಯಣ್. ಉಪಸರ್ಗದ ಇಕಾರಕ್ಕೆ ಛಾಂದಸವಾಗಿ ಲೋಪಬರುತ್ತದೆ. ನಿಘಾತಸ್ವರ ಬರುತ್ತದೆ. ಪ್ರಯೋಜಕ ವ್ಯಾಪಾರ ತೋರುವುದರಿಂದ ಇದು ಅಂತರ್ಭಾವಿತಣ್ಯರ್ಥಕವಾದ ಧಾತು.

**ವಾರ್ಯಮ್**—ವೃಙ್ ಸಂಭಕ್ತೌ ಧಾತು. ಇದಕ್ಕೆ **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಕರ್ಮಣಿಯಲ್ಲಿ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಧಾತು ಋಕಾರಕ್ಕೆ ವೃದ್ಧಿರಪರವಾಗಿ ಬರುತ್ತದೆ. **ಈಡವಂದ ವೃ ಶಂಸದುಹಾಂ**—(ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದೇವತ್ರಾ**—ತ್ರಾ ಎಂದು ಅನುವೃತ್ತವಾಗುವಾಗ **ದೇವಮನುಷ್ಯಪುರುಷಪುರುಮರ್ತ್ಯೇಭ್ಯಃ** (ಪಾ. ಸೂ. ೫-೪-೫೬) ಎಂಬುದರಿಂದ ಅಧಿಕರಣಾರ್ಥದಲ್ಲಿ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕ್ಷೇತ್ರಸಾಧಸಃ**—ರಾಧ ಸಾಧ ಸಂಸಿದ್ಧೌ ಧಾತು. **ಸರ್ವಧಾತುಭ್ಯೋ ಅಸುನ್** (ಉ. ಸೂ. ೪-೬೬೬) ಎಂಬುದರಿಂದ ಅಸುನ್ ಪ್ರತ್ಯಯ. **ಗತಿಕಾರಕೋಪಪ—**ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾವಿಭಕ್ತಿ ಬಹುವಚನಾಂತರೂಪ.

ಸಂಹಿತಾಪಾಠಃ

ಆದಿತ್ಯಾ ರುದ್ರಾ ವಸವಃ ಸುನೀಥಾ ದ್ಯಾವಾಕ್ಷಾಮಾ ಪೃಥಿವೀ ಅಂತರಿಕ್ಷಂ।
ಸಜೋಷಸೋ ಯಜ್ಞಮವಂತು ದೇವಾ ಊರ್ಧ್ವಂ ಕೃಣ್ವಂತ್ವಧ್ವರಸ್ಯ
ಕೇತುಂ ॥ ೮ ॥

ಪದಪಾಠಃ

ಆದಿತ್ಯಾಃ । ರುದ್ರಾಃ । ವಸವಃ । ಸುಽನೀಥಾಃ । ದ್ಯಾವಾಕ್ಷಾಮಾ । ಪೃಥಿವೀ । ಅಂತರಿಕ್ಷಂ ।
ಸಽಜೋಷಸಃ । ಯಜ್ಞಂ । ಅವಂತು । ದೇವಾಃ । ಊರ್ಧ್ವಂ । ಕೃಣ್ವಂತು । ಅಧ್ವರಸ್ಯ । ಕೇತುಂ ॥

## ಸಾಯಣಭಾಷ್ಯಂ.

ಸುನೀಥಾ ಯಜ್ಞಸ್ಯ ಸುಷ್ಠು ನೇತಾರ ಆದಿತ್ಯಾ ದ್ವಾದಶಾದಿತ್ಯಾ ರುದ್ರಾ ಏಕಾದಶರುದ್ರಾ ವಸವೋಽಷ್ಟೌ ವಸವಃ । ಯದ್ವಾ ಶುಷ್ಠು ನೀಥಾಃ ಸುಷ್ಟುತಯಃ । ಸ್ತುತಶಸ್ತ್ರಾಣಿ ನೀಥಾನಿ ಚೋಕ್ಥ್ಯಾ ಮುದಾನಿ ಚ । ಐ. ಬ್ರಾ. ೬-೩೪ । ಇತಿ ಹಿ ಶ್ರೂಯತೇ । ದ್ಯಾವಾಕ್ಷಾಮಾ ದ್ಯಾವಾಪೃಥಿವ್ಯೌ । ಪೃಥಿವೀ । ಸುಬ್ವ್ಯತ್ಯಯಃ । ಪೃಥು ವಿಸ್ತೀರ್ಣಮಂತರಿಕ್ಷಂ ಚ । ಸಜೋಷಸ ಏತೇ ಸರ್ವೇ ದೇವಾ ಐಕಮತ್ಯೇನ ಪರಸ್ಪರಂ ಸಂಗತಾ ಭೂತ್ವೇಮಮಸ್ಮದೀಯಂ ಯಜ್ಞಮವಂತು । ರಕ್ಷಂತು । ಕಿಂಚ । ಅಧ್ವರಸ್ಯ ಯಜ್ಞಸ್ಯ ಕೇತುಂ ಧ್ವಜಭೂತಂ ಪ್ರಜ್ಞಾಪಕಂ ನೇಮಂ ಯೂಪಮೂರ್ಧ್ವಂ ಕೃಣ್ವಂತು । ಉಚ್ಛ್ರಿತಂ ಕುರ್ವಂತು ॥ ಆದಿತ್ಯಾಃ । ಅದಿತೇರಪತ್ಯಾನಿ । ದಿತ್ಯದಿತ್ಯಾದಿತ್ಯಪತ್ಯುತ್ತರಪದಾದಿತಿ ಣ್ಯಃ । ಣಿತ್ತ್ವಾದಾದಿವೃದ್ಧಿಃ । ಪ್ರತ್ಯಯಸ್ವರಃ । ರುದ್ರಾಃ । ರೋದಯಂತಿ ಸರ್ವಾನಂತಕಾಲೇ । ರೋದೇರ್ಣಿಲುಕ್ ಚೇತಿ ರಕ್ಪ್ರತ್ಯಯಃ । ತತ್ಸಂನಿಯೋಗೇ ಣಿಲೋಪಃ । ಪ್ರತ್ಯಯಸ್ವರಃ । ಜಸಃ ಸುಪ್ತ್ವಾದನುದಾತ್ತತ್ವೇ ಏಕಾದೇಶ ಉದಾತ್ತೇನೋದಾತ್ತ ಇತ್ಯೇಕಾದೇಶಸ್ಯಾಪ್ಯುದಾತ್ತತ್ವಂ । ವಸವಃ । ವಸ ನಿವಾಸೇ । ನಿದಿತ್ಯನುವೃತ್ತೌ ಶೃಸ್ವೃಸ್ನಿಹಿತ್ರಪ್ಯಸಿವಸೀತ್ಯಾದಿನೋಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಸುನೀಥಾಃ । ಣೀಞ್ ಪ್ರಾಪಣೇ । ಹನಿಕುಷಿನೀರಮಿಕಾಶಿಭ್ಯ ಇತಿ ಕ್ಥನ್ । ಕಿತ್ತ್ವಾದಗುಣಃ । ಥಾಥಘಞ್ಕ್ತೇತ್ಯುತ್ತರಪದಾಂತೋದಾತ್ತತ್ವಂ । ದ್ಯಾವಾಕ್ಷಾಮಾ । ದ್ಯೌಶ್ಚ ಕ್ಷಾಮಾ ಚ । ದಿವೋ ದ್ಯಾವೇತಿ ದ್ಯಾವಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಪೃಥಿವೀ । ಪ್ರಥ ಪ್ರಖ್ಯಾನೇ । ಪ್ರಥೇಃ ಷಿವನ್ ಸಂಪ್ರಸಾರಣಂ ಚೇತಿ ಷಿವನ್ ಸಂಪ್ರಸಾರಣಂ ಚ । ಷಿದ್ಗೌರಾದಿಭ್ಯಶ್ಚೇತಿ ಙೀಷ್ । ಪ್ರತ್ಯಯಸ್ವರೇಣಾಂತೋದಾತ್ತಃ । ಅವಂತು । ಅವ ರಕ್ಷಣೇ । ನಿಘಾತಃ । ಕೃಣ್ವಂತು । ಕೃವಿ ಹಿಂಸಾಕರಣಯೋಶ್ಚೇತ್ಯಸ್ಮಾಲ್ಲೋಟಿ ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಅಕಾರಶ್ಚಾಂತಾದೇಶಃ । ನಿಘಾತಃ ॥

## ಪ್ರತಿಪದಾರ್ಥ.

ಸುನೀಥಾಃ—(ಯಾಗಗಳನ್ನು) ಶುಭಪ್ರದವಾಗಿ ನಿರ್ವಹಿಸುವ । ಆದಿತ್ಯಾಃ—ದ್ವಾದಶಾದಿತ್ಯರು । ರುದ್ರಾಃ—ಏಕಾದಶರುದ್ರರು । ವಸವಃ—ಅಷ್ಟವಸುಗಳು । (ಸುನೀಥಾಃ—ಒಳ್ಳೆಯ ಸ್ತುತಿಗಳು) । ದ್ಯಾವಾಕ್ಷಾಮಾ—ದ್ಯಾವಾಪೃಥಿವಿಗಳು । ಪೃಥಿವೀ—ವಿಸ್ತೃತವಾದ । ಅಂತರಿಕ್ಷಂ—ಅಂತರಿಕ್ಷವು, (ಮೊದಲಾದ) । **ದೇವಾಃ**—ದೇವತೆಗಳು । **ಸಜೋಷಸಃ**—ಸಮಾನಪ್ರೀತಿವಿಶಿಷ್ಟರಾಗಿ (ಪರಸ್ಪರ ಸಂಗತರಾಗಿ) । **ಯಜ್ಞಂ**—ಈ ನಮ್ಮ ಯಜ್ಞವನ್ನು । **ಅವಂತು**—ರಕ್ಷಿಸಲಿ; (ಮತ್ತು) । **ಅಧ್ವರಸ್ಯ**—ಯಜ್ಞದ । **ಕೇತುಂ**—ಧ್ವಜಪ್ರಾಯವಾದ (ಪ್ರಜ್ಞಾಪಕವಾದ) ಈ ಯೂಪವನ್ನು । **ಊರ್ಧ್ವಂ ಕೃಣ್ವಂತು**—ಎತ್ತಿ ಹಿಡಿಯಲಿ (ಉಚ್ಛ್ರಿತವಾಗಿ ಮಾಡಲಿ).

## ಭಾವಾರ್ಥ.

ಯಾಗನೇತೃಗಳಾದ, ದ್ವಾದಶಾದಿತ್ಯರು, ಏಕಾದಶರುದ್ರರು, ಅಷ್ಟವಸುಗಳು, ದ್ಯಾವಾಪೃಥಿವಿಗಳು, ವಿಸ್ತಾರವಾದ ಅಂತರಿಕ್ಷ ಮೊದಲಾದ ದೇವತೆಗಳೆಲ್ಲರೂ ಐಕಮತ್ಯದಿಂದ ಪರಸ್ಪರಸಂಗತರಾಗಿ ನಮ್ಮ ಯಜ್ಞವನ್ನು ರಕ್ಷಿಸಲಿ ಮತ್ತು ಯಜ್ಞದ ಧ್ವಜಪ್ರಾಯವಾದ ಈ ಯೂಪಸ್ತಂಬವನ್ನು ಎತ್ತಿ ಹಿಡಿಯಲಿ.

## English Translation.

May the leaders of the rite, the divine *Adityas, Rudras, Vasus,* Heaven and Earth, the Earth, the firmament, well pleased, protect our sacrifice: let them raise aloft the standard of the ceremony.

ವಿಶೇಷ ವಿಷಯಗಳು.

**ಸುನೀಥಾಃ-ಸುಷ್ಠು ಯಜ್ಞಸ್ಯ ನೇತಾರಃ** । ಯಜ್ಞವು ಯಾವ ವಿಘ್ನವೂ ಇಲ್ಲದಂತೆ ವಿಧ್ಯುಕ್ತವಾದ ಕ್ರಮದಿಂದ ಪೂರ್ಣವಾಗುವವರೆಗೂ ಯಜ್ಞವನ್ನು ನೆರವೇರಿಸುವವರು ಎಂಬ ಅರ್ಥವನ್ನು ಸಾಯಣರು ವಿವರಿಸಿದಾರೆ.

**ತ್ವಾಮಿಂದ್ರ ಮತಿಭಿಸ್ಸುತೇ ಸುನೀಥಾಸೋ ವಸೂಯವಃ ।**
**ಗೋಭಿಃ ಕ್ರಾಣಾ ಅನೂಷತ ॥**

ಎಂಬ ಋಕ್ಕಿನಲ್ಲಿ ದುರ್ಗಾಚಾರ್ಯರು (ನಿ. ೪-೧೯). **ಸುಷ್ಠು ಸ್ತೋತುಂ ಯೇ ಶಕ್ನುವಂತಿ ತೇ ಸುನೀಥಾಃ** ಚೆನ್ನಾಗಿ ಸ್ತೋತ್ರಮಾಡಲು ನಿಪುಣರಾದವರು ಎಂದು ಅರ್ಥ ಮಾಡಿದ್ದಾರೆ. ಮತ್ತು ಸುನೀಥಃ ಎಂಬ ಪದವು **ಅಸ್ರೇಮಾಃ ಆನ್ನೇಮಾಃ** ಎಂಬ ಹತ್ತು ಪ್ರಶಸ್ಯನಾಮಗಳಲ್ಲಿ (ನಿ. ೩-೧೩-) ಉಕ್ತವಾಗಿ ಶ್ರೇಷ್ಠವೆಂಬ ಅರ್ಥವನ್ನು ಬೋಧಿಸುವುದು ಎಂದು ನಿರುಕ್ತದಲ್ಲಿ ಹೇಳಿದೆ.

**ಆದಿತ್ಯಾಃ**—ದ್ವಾದಶಾದಿತ್ಯಾಃ । ನಿರುಕ್ತಕಾರರು—**ಆದಿತ್ಯಃ ಕಸ್ಮಾತ್ ಆದತ್ತೇ ರಸಾನ್, ಆದತ್ತೇ ಭಾಸಂ, ಜ್ಯೋತಿಷಾಮಾದೀಪ್ತೋ ಭಾಸೇತಿ ವಾ ಅದಿತೇಃ ಪುತ್ರ ಇತಿ ವಾ । ಅಲ್ಪಪ್ರಯೋಗಂ ತಸ್ಯೈತದಾರ್ಚಾಭ್ಯಾಮ್ನಾಯೇ ಸೂಕ್ತಭಾಕ್ ಸೂರ್ಯಮಾದಿತೇಯಮದಿತೇಃ ಪುತ್ರಂ।** ಆದಿತ್ಯನೆಂಬ ಪದದ ಅರ್ಥವನ್ನು ವಿಶದಪಡಿಸುವಾಗ ಭೂಮಿಯಲ್ಲಿರುವ ಉದಕಗಳನ್ನು ಹೀರುವುದೂ, ಇತರ ಎಲ್ಲಾ ಕಾಂತಿಗಳನ್ನೂ ತಾನು ಹೊಂದಿರುವುದೂ, ಇತರ ತೇಜಸ್ಸುಗಳಿಗೆ ಪ್ರಕಾಶವನ್ನುಂಟುಮಾಡುವುದೂ, ಕಾಂತಿಯಿಂದ ಎಲ್ಲವನ್ನೂ ಮೀರಿ ಇರುವುದೂ, ಅಥವಾ ಅದಿತಿದೇವಿಗೆ ಪುತ್ರನಾಗಿರುವುದೂ ಆದಿತ್ಯಶಬ್ದಾರ್ಥವಾಗಿರುತ್ತದೆ ಎಂದು ವಿವರಿಸಿ, ಈ ಆದಿತ್ಯನನ್ನು ಸ್ತುತಿಸುವ ಋಕ್ಕುಗಳು ಅಲ್ಪವಾಗಿರುತ್ತವೆ, ಸವಿತೃ, ಭಗ, ಪೂಷ ಎಂಬ ಆದಿತ್ಯಪ್ರಭೇದದ ಸ್ತೋತ್ರಗಳು ಬಹಳವಾಗಿರುತ್ತವೆ ಎಂದು ವರ್ಣಿಸಿ,

**ಏವಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ ಭವಂತಿ । ತದ್ಯಥೈ-**
**ತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇತಿ ॥**

(ನಿ. ೨-೧೩)

ಹೀಗೆಯೇ ಇತರ ದೇವತೆಗಳ ವಿಷಯದಲ್ಲಿಯೂ ಅಂದರೆ ಮಿತ್ರ, ವರುಣ, ಅರ್ಯಮಾ, ದಕ್ಷ, ಭಗ, ಅಂಶ, ಎಂಬ ಈ ದೇವತೆಗಳ ವಿಷಯದಲ್ಲಿಯೂ ಆದಿತ್ಯನೆಂಬ ಪ್ರಯೋಗವೂ ಸ್ತುತಿಯೂ ಇರುವುದು ಎಂದು ಹೇಳಿ—ಈ ದೇವತಾಪರವಾದ ಋಕ್ಕುಗಳಲ್ಲಿ ಆದಿತ್ಯನೆಂಬ ಪ್ರಯೋಗವಿರುವುದಕ್ಕೆ ಉದಾಹರಣೆಯನ್ನು ಕೊಟ್ಟಿದ್ದಾರೆ.

**ತಾ ಸಮ್ರಾಜಾ ಘೃತಾಸುತೀ ಆದಿತ್ಯಾ ದಾನುನಸ್ಪತೀ । ಸಚೇತೇ ಅನವಹ್ವರಂ ॥**

(ಋ. ಸಂ. ೨-೪೧-೬)

ಈ ಋಕ್ಕಿನಲ್ಲಿ ಮಿತ್ರಾವರುಣರು ಆದಿತ್ಯಪದದಿಂದ ಸ್ತುತರಾಗಿದಾರೆ ಎಂದೂ,

ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ಯಸ್ತ ಆದಿತ್ಯ ಶಿಕ್ಷತಿ ವ್ರತೇನ ।
ನ ಹನ್ಯತೇ ನ ಜೀಯತೇ ತ್ವೋತೋ ನೈನಮಂಹೋ ಅಶ್ನೋತ್ಯಂತಿತೋ ನ ದೂರಾತ್

(ಋ. ಸಂ. ೩-೫೯-೨)

ಇಲ್ಲಿ ಮಿತ್ರ ಎಂಬ ದೇವನು ಆದಿತ್ಯ ಶಬ್ದದಿಂದ ಸ್ತುತನಾಗಿದ್ದಾನೆ ಎಂದೂ,

ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿ ಮಧ್ಯಮಂ ಶ್ರಥಾಯ ।
ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ॥

(ಋ. ಸಂ. ೧-೨೪-೧೫)

ಈ ಋಕ್ಕಿನಲ್ಲಿ ವರುಣನನ್ನು ಆದಿತ್ಯಪದದಿಂದ ಸಂಬೋಧಿಸಿದೆ ಎಂದೂ ಆದಿತ್ಯಪದದ ಅರ್ಥವನ್ನು ಹೇಳಿ—

ಸ್ವರಾದಿತ್ಯೋ ಭವತಿ । ಪೃಶ್ನಿರಾದಿತ್ಯೋ ಭವತಿ । ನಾಕ ಆದಿತ್ಯೋ ಭವತಿ । ಗೌರಾದಿತ್ಯೋ ಭವತಿ । ವಿಷ್ಟಪಾದಿತ್ಯೋ ಭವತಿ । ನಭ ಆದಿತ್ಯೋ ಭವತಿ ॥

(ನಿ. ೨-೧೩).

ಎಂದು ಆದಿತ್ಯಪದಾಭಿಧೇಯವಾದ ಅರ್ಥವಿಷಯಗಳಲ್ಲಿ ಗೌಣವಾದ ಪ್ರವೃತ್ತಿನಿಮಿತ್ತವನ್ನೂ ಉದಾಹರಿಸಿರುವರು. ಸ್ವಃ, ಪೃಶ್ನಿಃ, ನಾಕಃ, ಗೌಃ, ವಿಷ್ಟಪ್, ಎಂಬ ಶಬ್ದಗಳಿಂದ ದ್ಯೌಃ (ಅಂತರಿಕ್ಷವು) ಆದಿತ್ಯಪದದಿಂದ ಉಕ್ತವಾಗಿದೆ ಎಂದು ಅರ್ಥ.

ಯದೇದೇನಮದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿತೇಯಂ ।
ಯದಾ ಚರಿಷ್ಣೂ ಮಿಥುನಾವಭೂತಾಮಾದಿತ್ಪ್ರಾಪಶ್ಯನ್ ಭುವನಾನಿ ವಿಶ್ವಾ ॥

(ಋ. ಸಂ. ೧೦-೮೮-೧೧)

ಈ ಋಕ್ಕಿನಲ್ಲಿ ಯದೇನಸ್ಯ ದಿವಿ ತೃತೀಯಂ ತದಸಾವಾದಿತ್ಯ ಇತಿ ಹಿ ಬ್ರಾಹ್ಮಣಂ । ಎಂಬ ಈ ವಾಕ್ಯದಲ್ಲಿ ಉಕ್ತವಾಗಿರುವುದರಿಂದ ಅಗ್ನಿಗೂ ಆದಿತ್ಯನೆಂಬ ಪ್ರಯೋಗವು ಇರುತ್ತದೆ.

ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।
ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥

(ಋ. ಸಂ. ೨-೨೭-೧)

ಎಂಬ ಋಕ್ಕಿನಲ್ಲಿ ಆದಿತ್ಯೇಭ್ಯಃ ಜುಹ್ವಾ ಜುಹೋಮಿ ಎಂಬ ವಾಕ್ಯದಿಂದ—

ಅಥಾತೋ ದ್ಯುಸ್ಥಾನಾ ದೇವಗಣಾಃ ತೇಷಾಮಾದಿತ್ಯಾಃ ಪ್ರಥಮಾಗಾಮಿನೋ ಭವಂತಿ ।

(ನಿ. ೧೨-೩೫)

ದ್ಯುಸ್ಥಾನದಲ್ಲಿರುವ ದೇವಗಣಗಳಲ್ಲಿ ಆದಿತ್ಯರು ಮುಖ್ಯರಾಗಿರುವರು ಎಂದು ಹೇಳಿರುವುದರಿಂದ ದೇವತೆಗಳೆಲ್ಲರಿಗೂ ಆದಿತ್ಯರೆಂಬ ಹೆಸರು ಗೌಣವಾಗಿರುತ್ತದೆ ಎಂದು ಅರ್ಥವನ್ನು ಹೇಳಿದೆ. ಸಾಯಣರು ಇಲ್ಲಿ ಆದಿತ್ಯರು ಮಿತ್ರನೇ ಮೊದಲಾದ ಹನ್ನೆರಡು (ಜನರೆಂದು) ದೇವತೆಗಳೆಂದೂ ಅವರೆಲ್ಲರೂ ಆದಿತ್ಯನ ಪ್ರಭೇದಗಳೆಂದೂ ಅರ್ಥವನ್ನು ವಿವರಿಸಿದ್ದಾರೆ.

**ರುದ್ರಾಃ**—ಏಕಾದಶರುದ್ರಾಃ । ರುದ್ರ ಶಬ್ದವು ಸ್ತೋತೃನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. **ರುದ್ರೋ ರೌತೀತಿ ಸತಃ, ರೋರೂಯಮಾಣೋ ದ್ರವತೀತಿ ವಾ "ಯದರುದತ್ ತದ್ರುದ್ರಸ್ಯ ರುದ್ರತ್ವಮ್" ಇತಿ ಹಾರಿದ್ರವಿಕಮ್** । ಕಾಠಕಬ್ರಾಹ್ಮಣದಲ್ಲಿ "**ಸ ಶಿಖಿ ಪಿತರಂ ಪ್ರಜಾಪತಿಮಿಷುಣಾ ವಿಧ್ಯಂತಮನುಶೋಚನ್ನರುದತ್ ತದ್ರುದ್ರಸ್ಯ ರುದ್ರತ್ವಂ**" ತನ್ನ ತಂದೆಯಾದ ಪ್ರಜಾಪತಿಗೆ ಬಾಣದಿಂದ ಪೆಟ್ಟು ಬಿದ್ದಿರುವುದನ್ನು ನೋಡಿ ಅತ್ತಕಾರಣ ಇವನಿಗೆ ರುದ್ರನೆಂಬ ಹೆಸರು ಎಂದು ಹೇಳಿದೆ ಎಂದೂ, ಮೈತ್ರಾಯಣಶಾಖೆಗೆ ಹಾರಿದ್ರವ ಎಂಬ ಹೆಸರು ಇರುತ್ತದೆಯಾಗಿ ಅದರಲ್ಲಿಯೂ ಕೂಡ ಇದೇ ರೀತಿಯಾಗಿ ರುದ್ರಶಬ್ದಾರ್ಥನಿರ್ವಚನವೂ ಉಕ್ತವಾಗಿದೆ ಎಂದೂ ನಿರುಕ್ತಕಾರರು ವಿವರಿಸಿ,

**ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।**
**ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥**

(ಋ. ಸಂ. ೭-೪೬-೧).

ಈ ಋಕ್ಕನ್ನು ಉದಹರಿಸಿ ರುದ್ರನ ಗುಣ ಮತ್ತು ಮಹಿಮೆಯನ್ನು ವರ್ಣಿಸಿದ್ದಾರೆ. ಸಾಯಣರು ಈ ರುದ್ರರು ಹನ್ನೊಂದು ಜನ ದೇವತೆಗಳೆಂದು ವಿವರಿಸಿದ್ದಾರೆ. ಮತ್ತು **ರೋದಯಂತಿ ಸರ್ವಮಂತಕಾಲೇ** ಪ್ರಳಯ ಕಾಲದಲ್ಲಿ ಎಲ್ಲರೂ ಅಳುವಹಾಗೆ ಮಾಡುತ್ತಾರಾದ್ದರಿಂದ ಇವರು ರುದ್ರರು ಎಂದು ಅರ್ಥವನ್ನು ವರ್ಣಿಸಿದಾರೆ-

**ವಸವಃ**— **ಅಷ್ಟೌ ವಸವಃ** । ನಿರುಕ್ತಕಾರರು **ವಸವೋ ಯದ್ವಿವಸತೇ ಸರ್ವಮಗ್ನಿಃ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ ಪೃಥಿವೀಸ್ಥಾನಾಃ । ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ ಮಧ್ಯಮಸ್ಥಾನಾಃ । ವಸವ ಆದಿತ್ಯರಶ್ಮಯಃ ವಿವಾಸನಾತ್ತಸ್ಮಾತ್ ದ್ಯುಸ್ಥಾನಾಃ** ।

ವಸ ನಿವಾಸೇ ಎಂಬ ಧಾತುವಿನಿಂದ ನಿಷ್ಪನ್ನವಾದ ವಸುಶಬ್ದಕ್ಕೆ ವಾಸಮಾಡು, ವಾಸಮಾಡುವಂತೆ ಸುಖವಾಗಿರಿಸು ಎಂದು ಎರಡು ವಿಧವಾದ ಅರ್ಥವು. ಇದರಿಂದ ಪಾರ್ಥಿವಾಗ್ನಿಯು ಲೋಕವೆಲ್ಲವನ್ನೂ ಸುಖವಾಗಿರುವಂತೆ ಪೋಷಿಸುವ ಕಾರಣ ವಸುಶಬ್ದಕ್ಕೆ ಅರ್ಥವೆಂದೂ, ಈ ಅಗ್ನಿಯು ಪೃಥಿವಿಯಲ್ಲಿ ಮಾತ್ರವೇ ವ್ಯಾಪಿಸಿರುವ ಕಾರಣ ಪೃಥಿವೀಸ್ಥಾನವುಳ್ಳದ್ದೆಂದೂ ಒಂದು ಅರ್ಥವು. ಇಂದ್ರನು ತನ್ನ ಧನ (ಐಶ್ವರ್ಯ) ಇವುಗಳಿಂದ ವಿಶ್ವವೆಲ್ಲವನ್ನೂ ವಾಸಮಾಡುವಂತೆ ಸುಖವಾಗಿರಿಸಿರುವುದರಿಂದ ವಸುವೆನಿಸಿ ಮಧ್ಯಮಸ್ಥಾನದೇವನೆಂದು ಎರಡನೆಯ ಅರ್ಥ, ಸೂರ್ಯನ ಕಿರಣಗಳೂ ಪ್ರಪಂಚವೆಲ್ಲವನ್ನೂ ಸುಖದಿಂದ ರಕ್ಷಿಸುವ ಕಾರಣ ಇವು ದ್ಯುಸ್ಥಾನ ದೇವತೆಗಳೆಂದು ಮೂರನೆಯ ಅರ್ಥವೆಂದು ವಸವಃ ಎಂಬ ಪದದ ಅರ್ಥವನ್ನು ಅಗ್ನಿ, ಇಂದ್ರ, ಸೂರ್ಯರಶ್ಮಿಗಳು ಎಂದು ಮೂರು ವಿಧವಾಗಿ ಹೇಳಿ—

**ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ।**
**ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥**

(ಋ. ಸಂ. ೭-೩೯-೩).

ಈ ಋಕ್ಕನ್ನು ಉದಹರಿಸಿ, ಅಗ್ನಿಯು ಭೂಮಿಯಲ್ಲಿ ಯಜ್ಞಾದಿಕರ್ಮಗಳ ಅಭಿವೃದ್ಧಿಗೆ ಪ್ರಾಧಾನ್ಯದೇವನಾಗಿ ಭೂಮಿಯಲ್ಲಿ ಇರುವುದರಿಂದ ಪೃಥಿವೀಸ್ಥಾನದಲ್ಲಿ ವ್ಯಾಪಿಸಿರುವವನೆಂದೂ ಇದರಂತೆಯೇ ಇಂದ್ರನು ಸಕಲವನ್ನೂ ರಕ್ಷಿಸುವ ಕಾರಣ ಮಧ್ಯಮಸ್ಥಾನ ದೇವನೆಂದೂ, ಆದಿತ್ಯರಶ್ಮಿಗಳೂ ಅಂತರಿಕ್ಷದಲ್ಲಿರುತ್ತಾ ಪ್ರಕಾಶವನ್ನುಂಟು ಮಾಡುವುದರಿಂದ ದ್ಯುಸ್ಥಾನ ದೇವತೆಗಳೆಂದೂ ವಿವರಿಸಿದ್ದಾರೆ. ಮತ್ತು,

**ಸುಗಾವೋ ದೇವಾಃ ಸುಪಥಾ ಅಕರ್ಮ ಯ ಆಜಗ್ಮುಃ ಸವನಮಿದಂ ಜುಷಾಣಾಃ ।**
**ಜಕ್ಷಿವಾಂಸಃ ಪಪಿವಾಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ॥**
(ವಾ. ಸಂ ೮-೧೮)

ಎಂಬ ಋಕ್ಕಿನಲ್ಲಿ ವಸುಶಬ್ದವಾಚ್ಯರಾದ ಈ ದೇವತೆಗಳು ವಸುವನ್ನು ಎಂದರೆ ಧನವನ್ನು ಅನುಗ್ರಹಿಸಲಿ ಎಂದು ಅರ್ಥವನ್ನು ಹೇಳಿ ಇವರ ಮಹಿಮೆಯನ್ನು ವಿವರಿಸಿದ್ದಾರೆ. ಇದರಿಂದ ವಸು ಶಬ್ದಕ್ಕೆ ಧನ ಎಂಬ ಅರ್ಥವೂ ನಿರುಕ್ತದಲ್ಲಿ (ನಿ. ೩-೯) ಹೇಳಿದೆ. **ವಸವಃ** ಎಂದು ಆದಿತ್ಯರಶ್ಮಿಗಳೂ (ನಿ. ೨-೧೫) ಉಕ್ತವಾಗಿದೆ.

**ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।**
**ಯಸ್ತ್ವಾಯಂತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿನಾತಿ ॥**
(ಋ. ಸಂ. ೧-೧೨೫-೨).

ಇಲ್ಲಿ **ವಸುನಾ ಅನ್ನೇನ** ಅನ್ನದಿಂದ ಎಂದು ದುರ್ಗಾಚಾರ್ಯರು ವ್ಯಾಖ್ಯಾನ ಮಾಡಿರುತ್ತಾರೆ. ಇದರಿಂದ ವಸು ಶಬ್ದಕ್ಕೆ ಅನ್ನವೆಂದೂ ಅರ್ಥ. ನಿರುಕ್ತಕಾರರಿಂದ ನಿರುಕ್ತದಲ್ಲಿ ಉಕ್ತವಾಗದೆ ಇರುವ ಅರ್ಥವು ಇತರ ವೇದಗಳಲ್ಲಿ ಹೇಳಿದೆ. ಅದನ್ನು ಅನುಸರಿಸಿ ಸಾಯಣರು ಆದಿತ್ಯರು ಹನ್ನೆರಡು ಜನರು. ರುದ್ರರು (**ಏಕಾದಶ**) ಹನ್ನೊಂದು ಜನರು, ವಸುಗಳು ಎಂಟು ಜನಗಳೆಂದು ವಿವರಿಸಿದ್ದಾರೆ. ಈ ಅಂಶವು ಈ ಋಗ್ವೇದದ ಮೊದಲನೆಯ (Vol. 1) ಭಾಗದಲ್ಲಿ ವಿವೃತವಾಗಿದೆ. ಇವರು **ಸುನೀಥಾಃ ಸುಷ್ಟುತಯಃ** ಉತ್ತಮವಾದ ಸ್ತುತಿಗಳುಳ್ಳವರು, ಅಥವಾ ಬಹಳವಾಗಿ ಸ್ತೋತ್ರಮಾಡಲ್ಪಟ್ಟವರು ಎಂದು ಹೇಳಿ ಸ್ತುತಶಸ್ತ್ರಾಣಿ **ನೀಥಾನಿ ಚೋಕ್ಥಾಮದಾನಿ ಚ** (ಐ ಬ್ರಾ. ೨-೮) ಎಂಬ ಐತರೇಯಬ್ರಾಹ್ಮಣದ ವಾಕ್ಯವನ್ನು ಸಾಯಣರು ಉದಹರಿಸಿ ಇವರ ಮಾಹಾತ್ಮ್ಯವನ್ನು ವರ್ಣಿಸಿದ್ದಾರೆ.

**ದ್ಯಾವಾಕ್ಷಾಮಾ—ದ್ಯೌಶ್ಚ ಕ್ಷಾಮಾ ಚ** । ಅಂತರಿಕ್ಷ ಮತ್ತು ಭೂಮಿಎಂದು ಅರ್ಥ. ಈ ಪದವೂ ದ್ಯಾವಾಪೃಥಿವೀಪದಗಳಲ್ಲಿ ನಿರುಕ್ತವಾಗದಿದ್ದರೂ, ಸಾಯಣರು ದ್ಯಾವಾಪೃಥಿವಿಗಳೆಂಬ ಅರ್ಥವನ್ನು ವಿವರಿಸಿದ್ದಾರೆ.

**ಪೃಥಿವೀ**— ಈ ಪದಕ್ಕೆ **ಪೃಥು ವಿಸ್ತೀರ್ಣಂ** ವಿಸ್ತಾರವಾಗಿರುವುದು ಅಥವಾ ದೊಡ್ಡದಾಗಿರುವುದು ಎಂದು ಅರ್ಥವನ್ನು ಹೇಳಿ ಇದನ್ನು **ಅಂತರಿಕ್ಷಂ** ಎಂಬ ಪದಕ್ಕೆ ವಿಶೇಷಣವನ್ನಾಗಿ ಸಾಯಣರು ವಿವರಿಸಿದ್ದಾರೆ.

**ಸಜೋಷಸಃ— ಸಂಗತಾಃ** ಒಟ್ಟಿಗೆ ಸೇರಿರುವರೆಂದು ಅರ್ಥ.

**ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ ।**
**ಇಯಂ ವೋ ಅಸ್ಮತ್ಪ್ರತಿ ಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ॥**
(ಋ ಸಂ. ೫-೫೭-೧).

ಇಲ್ಲಿ **ಸಜೋಷಸಃ** ಸಹ ಜೋಷಣಾಃ ಎಂದು ನಿರುಕ್ತಕಾರರ ವಿವರಣೆ ಇದೆ. ದುರ್ಗಾಚಾರ್ಯರು **ಪರಮೈಶ್ವರ್ಯೇಣ ನಿತ್ಯಮಾಸೇವಿತಾಃ**- ಉತ್ತಮವಾದ ಐಶ್ವರ್ಯದಿಂದ ಯಾವಾಗಲೂ ಸೇವಿಸಲ್ಪಟ್ಟವರು ಎಂದು ಅರ್ಥವನ್ನು ವರ್ಣಿಸಿದಾರೆ.

**ಆಜುಹ್ವಾನ ಈಡ್ಯೋ ವಂದ್ಯಶ್ಚಾ ಯಾಹ್ಯಗ್ನೇ ವಸುಭಿಃ ಸಜೋಷಾಃ ॥**
(ಋ. ಸಂ. ೧೦-೧೧೦-೩)

ಎಂಬಲ್ಲಿ **ಸಜೋಷಾಃ ಸಹಜೋಷಣಃ ಸಮಾನಪ್ರೀತಿಃ** ಒಂದೇ ಸಮನಾದ ಪ್ರೀತಿಯುಳ್ಳವನು ಎಂದು ಅರ್ಥ ಮಾಡಿದೆ. ಆದಿತ್ಯರೂ, ರುದ್ರರೂ, ವಸುಗಳೂ, ಅಂತರಿಕ್ಷವೂ ಮತ್ತು ಈ ದೇವತೆಗಳೆಲ್ಲರೂ, ಏಕಮತ್ಯೇನ

**ಪರಸ್ಪರಂ ಸಂಗತಾಃ** ಒಟ್ಟಾಗಿ ಸೇರಿ ಯಜಮಾನನ್ನೂ ಋತ್ವಿಜರು ಸಹಕರಿಸಿ ಆಚರಿಸುವ ಯಜ್ಞವನ್ನೂ ರಕ್ಷಿಸಲಿ ಎಂದು ವರ್ಣಿಸಿದೆ.

**ಅಧ್ವರಸ್ಯ ಕೇತುಂ— ಯಜ್ಞಸ್ಯ ಧ್ವಜಭೂತಂ ಪ್ರಜ್ಞಾಪಕಂ ವಾ ಇಮಂ ಯೂಪಂ.** ಕೇತು ಶಬ್ದವು (ನಿ. ೩-೧೩) ಪ್ರಜ್ಞಾನಾಮಗಳಲ್ಲಿ ಉಕ್ತವಾಗಿದೆ.

> **ನವೋ ನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ ।**
> **ಭಾಗಂ ದೇವೇಭ್ಯೋ ವಿದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥**
> (ಋ. ಸಂ. ೧೦-೮೫-೧೯)

ಇಲ್ಲಿ **ಕೇತುಃ ಲಕ್ಷಣಂ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

> **ಮಹೋ ಅರ್ಣಃ ಸರಸ್ವತೀ ಪ್ರ ಚೇತಯತಿ ಕೇತುನಾ । ಧಿಯೋ ವಿಶ್ವಾ ವಿ ರಾಜತಿ ॥**
> (ಋ. ಸಂ. ೧-೩-೧೨)

ಇಲ್ಲಿ ಕೇತುನಾ **ಕರ್ಮಣಾ ಪ್ರಜ್ಞಯಾ ವಾ** ಎಂದು ಕರ್ಮ, ಅಥವಾ ಪ್ರಜ್ಞಾ ಎಂಬ ಅರ್ಥವನ್ನು ವಿವರಿಸಿದೆ.

> **ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ॥**
> (ಋ. ಸಂ. ೧-೫೦-೧)

ಇಲ್ಲಿ—**ಕೇತವಃ ರಶ್ಮಯಃ** ಎಂದು ಅರ್ಥವನ್ನು ವರ್ಣಿಸಿದೆ. ಕೇತು ಶಬ್ದಕ್ಕೆ ಪ್ರಜ್ಞಾ, ರಶ್ಮಿ, ಲಕ್ಷಣ, ಕರ್ಮ ಎಂಬ ಅರ್ಥಗಳು ನಿರುಕ್ತದಲ್ಲಿ ಉಕ್ತವಾಗಿದ್ದರೂ, ಸಾಯಣರು ಇಲ್ಲಿ ಧ್ವಜ, ಮತ್ತು ಸೂಚಕ ಎಂಬ ಅರ್ಥವನ್ನು ವಿವರಿಸಿ, ಯಜ್ಞದ ಸೂಚಕವಾದ ಯೂಪವನ್ನು ದೇವತೆಗಳು ಉತ್ಕೃಷ್ಟವಾಗಿ ಔನ್ನತ್ಯದಿಂದ ಪ್ರಕಾಶಿಸುವಂತೆ ಮಾಡಲಿ ಎಂದು ಆಶಂಸನೆಯನ್ನು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ.

**ಆದಿತ್ಯಾಃ**— ಅದಿತೇಃ ಅಪತ್ಯಾನಿ ಪುಮಾಂಸಃ ಆದಿತ್ಯಾಃ। **ದಿತ್ಯದಿತ್ಯಾದಿತ್ಯಪತ್ಯುತ್ತರಪದಾತ್ ಣ್ಯಃ** (ಉ. ಸೂ. ೪-೧-೮೫) ಎಂಬುದರಿಂದ ಅಪತ್ಯಾರ್ಥದಲ್ಲಿ ಣ್ಯ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಪ್ರತ್ಯಯ ಣಿತ್ತಾದುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರುದ್ರಾಃ**—ರೋದಯಂತಿ ಸರ್ವಾನ್ ಅಂತಕಾಲೇ ಇತಿ ರುದ್ರಾಃ । ರುದಿರ್ ಅಶ್ರುವಿಮೋಚನೇ ಧಾತು. ಣಿಜಂತದ ಮೇಲೆ **ರೋದೇರ್ಣಿಲುಕ್ ಚ** (ಉ. ಸೂ. ೨-೧೭೯) ಎಂಬುದರಿಂದ ರಕ್ ಪ್ರತ್ಯಯ. ಣಿಚಿಗೆ ಲೋಪ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರ ಉಳಿಯುತ್ತದೆ. ಜಸ್ ಸುಪ್ಪಾದುದರಿಂದ ಅನುದಾತ್ತವಾದಾಗ **ಏಕಾದೇಶಉದಾತ್ತೇನೋದಾತ್ತಃ** ಎಂಬುದರಿಂದ ಅದೂ ಉದಾತ್ತವಾಗುತ್ತದೆ.

**ವಸವಃ**— ವಸ ನಿವಾಸೇ ಧಾತು. **ಶೃ ಸ್ವೃ ಸ್ನಿಹಿ ತ್ರಪ್ಯಸಿ**—(ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. **ನಿತ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸುನೀಥಾಃ— ಣೀಞ್ ಪ್ರಾಪಣೇ ಧಾತು. ಹನಿಕುಷಿನೀರಮಿಕಾಶಿಭ್ಯಃ— (ಉ. ಸೂ. ೨-೧೫೯) ಎಂಬುದರಿಂದ ಕ್ಥನ್ ಪ್ರತ್ಯಯ. ಕಿತ್ತ್ವಾದುದರಿಂದ ಧಾತುವಿನ ಈಕಾರಕ್ಕೆ ಗುಣ ಬರುವುದಿಲ್ಲ. ಥಾಥಘಞ್ಕ್ತಾ- (ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

ದ್ಯಾವಾಕ್ಷಾಮಾ— ದ್ಯೌಶ್ಚ ಕ್ಷಾಮಾ ಚ. ದಿವೋದ್ಯಾವಾ ಎಂಬುದರಿಂದ ದಿವ್ ಶಬ್ದಕ್ಕೆ ದ್ಯಾವಾ ದೇಶ. ದೇವತಾದ್ವಂದ್ವೇಚ (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ. ಸುಪಾಂಸುಲುಕ್ ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

ಪೃಥಿವೀ— ಪ್ರಥ ಪ್ರಖ್ಯಾನೇ ಧಾತು. ಪ್ರಥೇಃ ಷಿವನ್ ಸಂಪ್ರಸಾರಣಂಚ (ಉ. ಸೂ. ೧-೧೫೦) ಎಂಬುದರಿಂದ ಷಿವನ್ ಪ್ರತ್ಯಯ. ಧಾತುವಿನ ರೇಫಕ್ಕೆ ಸಂಪ್ರಸಾರಣ. ಷಿತ್ತ್ವಾದುದರಿಂದ ಷಿದ್ಗೌರಾದಿಭ್ಯಶ್ಚ (ಪಾ. ಸೂ. ೪-೧-೪೧) ಎಂಬುದರಿಂದ ಙೀಷ್. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅವಂತು— ಅವ ರಕ್ಷಣೇ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

ಕೃಣ್ವಂತು— ಕೃವಿ ಹಿಂಸಾಕರಣಯೋಶ್ಚ ಧಾತು. ಲೋಟ್ ಪ್ರಥಮಪುರುಷ ಬಹುವಚನಕ್ಕೆ ಅಂದೇಶ ಉತ್ವ. ಧಿನ್ವಿಕೃಣ್ವ್ಯೋರಚ (ಪಾ. ಸೂ. ೩-೧-೮೦) ಎಂಬುದರಿಂದ ಅಕಾರಲೋಪ. ಧಾತು ಇದಿತ್ತ್ವಾದುದರಿಂದ ನುಮಾಗಮ. ಝಕಾರದ ಪರದಲ್ಲಿ ಬಂದುದರಿಂದ ಣತ್ವ. ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಹಂಸಾ ಇವ ಶ್ರೇಣಿಶೋ ಯತಾನಾಃ ಶುಕ್ರಾ ವಸಾನಾಃ ಸ್ವರವೋ ನ ಆಗುಃ ।
ಉನ್ನೀಯಮಾನಾಃ ಕವಿಭಿಃ ಪುರಸ್ತಾದ್ದೇವಾ ದೇವಾನಾಮಪಿ ಯಂತಿ ಪಾಥಃ ॥ ೯

ಪದಪಾಠಃ

ಹಂಸಾಃ ऽಇವ । ಶ್ರೇಣಿಽಶಃ । ಯತಾನಾಃ । ಶುಕ್ರಾ । ವಸಾನಾಃ । ಸ್ವರವಃ । ನಃ । ಆ । ಅಗುಃ ।
ಉತ್ऽನೀಯಮಾನಾಃ । ಕವಿಽಭಿಃ । ಪುರಸ್ತಾತ್ । ದೇವಾಃ । ದೇವಾನಾಂ । ಅಪಿ । ಯಂತಿ । ಪಾಥಃ ॥

॥ ೯ ॥

ಸಾಯಣಭಾಷ್ಯಂ.

ಶುಕ್ರಾ ಶುಕ್ರಾಣಿ ದೀಪ್ತಾನಿ ವಾಸಾಂಸಿ ವಸಾನಾ ಆಚ್ಛಾದಯಂತಃ ಸ್ವರವಃ ಸ್ವರುನುಂತಃ ಶ್ರೇಣಿಶಃ ಪಂಕ್ತಿಶೋ ಯತಾನಾಃ ಪ್ರವರ್ತಮಾನಾಃ । ಅತ್ರ ದೃಷ್ಟಾಂತಃ । ಹಂಸಾ ಇವೇತಿ । ಯಥಾ ನಭಸಿ ಪಂಕ್ತಿಶಃ ಪತಂತೋ ಹಂಸಾಃ ಶೋಭಂತೇ ತದ್ವತ್ ಶೋಭಮಾನಾಸ್ತೇ ಯೂಪಾ ನೋಽಸ್ಮಾನಾಗುಃ । ಪ್ರಾಪುಃ । ಅಪಿ ಚ ಕವಿಭಿರ್ಮೇಧಾವಿಭಿರಧ್ವರ್ಯ್ವಾದಿಭಿಃ ಪುರಸ್ತಾದಾಹವನೀಯಸ್ಯ ಪೂರ್ವಭಾಗ ಉನ್ನೀಯಮಾನಾ ಉಚ್ಛ್ರೀಯಮಾಣಾ ದೇವಾ ದೀಪ್ಯಮಾನಾಸ್ತೇ ಯೂಪಾ ದೇವಾನಾಂ ಪಾಥೋ ದೇವಾನಾಂ ಸ್ಥಾನಮಂತರಿಕ್ಷಂ । ಪಾಥೋಽನ್ತರಿಕ್ಷಂ ಪಥಾ ವ್ಯಾಖ್ಯಾತಮಿತಿ ಯಾಸ್ಕಃ । ಪಾಥೋನದೀಭ್ಯಾಂ ಡ್ಯಣ್ । ಪಾ. ೪-೪-೧೧೧ । ಇತಿ ಸೂತ್ರೇ ಪಾಥೋಽನ್ತರಿಕ್ಷಮಿತಿ ವೃತ್ತಿಕಾರೋಽಪ್ಯವಾದೀತ್ । ತಾದೃಶಮಂತರಿಕ್ಷಮಪಿಯಂತಿ । ಪ್ರಾಪ್ನುವಂತಿ । ಅಧ್ವರ್ಯ್ವಾದಿಭಿರುಚ್ಛ್ರೀಯಮಾಣಾ ಯೂಪಾ ಅತಿದೈರ್ಘ್ಯಾದಂತರಿಕ್ಷಂ ವ್ಯಾಪ್ಯ ವರ್ತಂತ ಇತ್ಯರ್ಥಃ ॥ ಹಂಸಾ ಇವ । ಇವೇನ ವಿಭಕ್ತ್ಯಲೋಪ ಇತಿ ವಚನಾತ್ಪೂರ್ವಪದಪ್ರಕೃತಿಸ್ವರಃ । ಶ್ರೇಣಿಶಃ । ಬಹ್ವಲ್ಪಾರ್ಥಾದಿತಿ ಶಸ್ । ಪ್ರತ್ಯಯಸ್ವರಃ । ಶ್ರೇಣಿಶಃ । ಬಹುಲ್ಪಾರ್ಥಾದಿತಿ ಶಸ್ । ಪ್ರತ್ಯಯಸ್ವರಃ । ಶುಕ್ರಾ । ಶುಚ ದೀಪ್ತಾವಿತ್ಯಸ್ಮಾದೃಜ್ರೇಂದ್ರಾಗ್ರೇತ್ಯಾದಿನಾ ರನ್ಪ್ರತ್ಯಯಾಂತತ್ವೇನ ನಿಪಾತನಾದಂತೋದಾತ್ತಃ । ಆಗುಃ । ಇಣ್ ಗತೌ । ಅಸ್ಮಾಲ್ಲುಙಿ ರೂಪಂ । ನಿಘಾತಃ ॥

ಪ್ರತಿಪದಾರ್ಥ.

ಶುಕ್ರಾ—ಶುಭ್ರವಾದ (ರಶನಾಖ್ಯ ವಸ್ತ್ರಗಳನ್ನು) । ವಸಾನಾಃ—ಧರಿಸಿರತಕ್ಕವುಗಳೂ । ಸ್ವರವಃ—ತಮ್ಮ ಭಾಗಗಳಿಂದ ಸಹಿತವೂ । ಶ್ರೇಣಿಶಃ—ಸಾಲಾಗಿ । ಯತಾನಾಃ—ಚಲಿಸುತ್ತಿರುವ । ಹಂಸಾ ಇವ—ಹಂಸಗಳು (ಶೋಭಿಸುವಂತೆ ಶೋಭಿಸುತ್ತಾ) । ಶ್ರೇಣಿಶಃ—ಸಾಲುಸಾಲಾಗಿ । (ಯತಾನಾಃ—ಪ್ರವರ್ತಿಸುವವುಗಳೂ ಆದ ಯೂಪಗಳು) । ನಃ—ನಮ್ಮನ್ನು । ಆಗುಃ—ಪ್ರಾಪ್ತವಾಗಿವೆ ; (ಮತ್ತು) । ಕವಿಭಿಃ—ಮೇಧಾವಿಗಳಾದ ಅಧ್ವರ್ಯ್ವಾದಿ ಋತ್ವಿಜರಿಂದ । ಪುರಸ್ತಾತ್—ಆಹವನೀಯಾಗ್ನಿಯ ಪೂರ್ವಭಾಗದಲ್ಲಿ । ಉತ್ ನೀಯಮಾನಾಃ—ಸ್ಥಾಪಿತವಾಗಿ । ದೇವಾಃ—ಪ್ರಕಾಶಿಸುತ್ತಿರುವ ಆ ಯೂಪಗಳು । ದೇವಾನಾಂ—ದೇವತೆಗಳ । ಪಾಥಃ—ಸ್ಥಾನವಾದ ಅಂತರಿಕ್ಷವನ್ನು । ಅಪಿ ಯಂತಿ—ವ್ಯಾಪಿಸುತ್ತವೆ ॥

ಭಾವಾರ್ಥ.

ಶುಭ್ರವಾದ ರಶನಾಖ್ಯ ವಸ್ತ್ರಾವೃತವಾಗಿ, ತಮ್ಮ ಸರ್ವಾವಯವ (ಭಾಗ) ವಿಶಿಷ್ಟವಾಗಿ, ಹಂಸಗಳ ಶ್ರೇಣಿಗಳಂತೆ ಸಾಲುಸಾಲಾಗಿ ಶೋಭಿಸುತ್ತಾ ಇರುವ ಯೂಪಗಳು ಪ್ರಾಪ್ತವಾಗಿವೆ (ಶೋಭಿಸುತ್ತಿವೆ) ; ಇವು ಮೇಧಾವಿಗಳಾದ ಅಧ್ವರ್ಯ್ವಾದಿ ಋತ್ವಿಜರಿಂದ ಆಹವನೀಯಾಗ್ನಿಯ ಪುರೋಭಾಗದಲ್ಲಿ ಸ್ಥಾಪಿತವಾಗಿ, ಬೆಳಗುತ್ತಾ, ದೇವತೆಗಳ ಸ್ಥಾನವಾದ ಅಂತರಿಕ್ಷವನ್ನೂ ಮುಟ್ಟುತ್ತವೆ.

## English Translation.

Arrayed in bright (garments), entire (in their parts), these pillars ranging in rows like swans, have come to us erected by pious sages on the east (of the fire); they proceed resplendent on the path of the gods.

ವಿಶೇಷವಿಷಯಗಳು.

ಹಂಸಾ ಇವ ಶ್ರೇಣಿಶೋ ಯತಾನಾಃ । ಪಙ್ಕ್ತಿಶಃ ಪ್ರವರ್ತಮಾನಾಃ ಹಂಸಾ ಇವ । ಯಥಾ ನಭಸಿ ಪಙ್ಕ್ತಿಶಃ ಪತಂತೋ ಹಂಸಾಃ ಶೋಭಂತೇ ತದ್ವತ್ ಶೋಭಮಾನಾಸ್ತೇ ಯೂಪಾಃ । ನಿರುಕ್ತ ಕಾರರು ಅಶ್ವ ನಾಮಗಳಲ್ಲಿ ಹಂಸಾಸಃ (ನಿ. ೨-೨೭) ಎಂಬ ಪದವನ್ನು ಹೇಳಿದ್ದಾರೆ. ಮತ್ತು

ಈರ್ಮಾಂತಾಸಃ ಸಿಲಿಕಮಧ್ಯಮಾಸಃ ಸಂ ಶೂರಣಾಸೋ ದಿವ್ಯಾಸೋ ಅತ್ಯಾಃ ।
ಹಂಸಾ ಇವ ಶ್ರೇಣಿಶೋ ಯತಂತೇ ಯದಾಕ್ಷಿಷುರ್ದಿವ್ಯಮಜ್ಮಮಶ್ವಾಃ ॥

(ಋ. ಸಂ. ೧-೧೬೩-೧೦)

ಈ ಋಕ್ಕನ್ನು ಉದಹರಿಸಿ ಹಂಸಾಃ ಹಂತೇರ್ಘ್ನಂತ್ಯಧ್ವಾನಂ । ಗಮನಾರ್ಥವುಳ್ಳ ಹನಧಾತುವಿನಿಂದ ನಿಷ್ಪನ್ನ ವಾದ ಹಂಸ ಶಬ್ದಕ್ಕೆ ದಾರಿಯನ್ನು ನಡೆಯುವುದು ಎಂದು ವ್ಯಾಖ್ಯಾನಮಾಡಿದ್ದಾರೆ. ಮತ್ತು ಶ್ರೇಣಿಶಃ ಎಂಬಲ್ಲಿ ಶ್ರೇಣಿ ಎಂಬ ಪದವು ಶ್ರಿಞ್ ಧಾತುವಿನಿಂದ ನಿಷ್ಪನ್ನವಾಗಿ ಸಾಲಾಗಿ ಇರುವುದು ಎಂಬ ಅರ್ಥವನ್ನೂ ವರ್ಣಿಸಿದ್ದಾರೆ. ಸಾಯಣರು ಯೂಪಗಳು ಅಂತರಿಕ್ಷದಲ್ಲಿ ಹಾರುತ್ತಿರುವ ಸಾಲುಸಾಲಾಗಿರುವ ಹಂಸ ಪಕ್ಷಿಗಳ ಹಾಗೆ ಪ್ರಕಾಶಿಸುತ್ತವೆ ಎಂದು ಹೋಲಿಸಿ ಅರ್ಥಮಾಡಿದ್ದಾರೆ.

ಶುಕ್ರಾ ವಸಾನಾಃ—ಶುಕ್ರಾಣಿ ದೀಪ್ತಾನಿ ರಶನಾಖ್ಯಾನಿ ವಾಸಾಂಸಿ ಆಚ್ಛಾದಯಂತಃ । ಶುಕ್ರ ಶಬ್ದವು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿದೆ.

ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।
ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥

(ಋ. ಸಂ. ೧೦-೧೧೦-೬)

ಇಲ್ಲಿ ಶುಕ್ರಂ ಶೋಚತೇರ್ಜ್ವಲತಿಕರ್ಮಣಃ । ದೀಪ್ತ್ಯರ್ಥವನ್ನು ಬೋಧಿಸುವ ಶುಚಧಾತುವಿನಿಂದ ನಿಷ್ಪನ್ನ ವಾದ ಶುಕ್ರ ಶಬ್ದಕ್ಕೆ ಕಾಂತಿಯುಳ್ಳದ್ದು ಎಂಬ ಅರ್ಥವನ್ನು ವಿವರಿಸಿದೆ. ದುರ್ಗಾಚಾರ್ಯರು ಶುಕ್ಲರೂಪಾಂ ಶ್ರಿಯಂ ಎಂದು ಅರ್ಥವನ್ನು ವರ್ಣಿಸಿದಾರೆ.

ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।
ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥

(ಋ. ಸಂ. ೬-೫೮-೧)

ಇಲ್ಲಿ ಶುಕ್ರಮ್ ಎಂಬ ಪದಕ್ಕೆ ಶುಕ್ಲ ಎಂಬ ಅರ್ಥವನ್ನು ಹೇಳಿದೆ. ಯೂಪಗಳು ಶುಕ್ಲವರ್ಣವುಳ್ಳ (ಬಿಳಿಯ ಬಣ್ಣದ) ಕಾಂತಿಯುಳ್ಳದ್ದಾದ ರಶನಾ ಎಂಬ ವಸ್ತ್ರಗಳನ್ನು ಧರಿಸಿ ಪ್ರಕಾಶಿಸುತ್ತವೆ ಎಂದು ಅರ್ಥ.

ಕವಿಭಿಃ ಪುರಸ್ತಾದುನ್ನಿಯಮಾನಾಃ—ಕವಿ ಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತ ವಾಗಿದೆ. ಅಧ್ವರ್ಯುವೇ ಮೊದಲಾದ ಋತ್ವಿಜರು ಯಾಗಶಾಲೆಯಲ್ಲಿ ಆಹವನೀಯಾಗ್ನಿಯ ಪೂರ್ವಭಾಗದಲ್ಲಿ ಯೂಪಗಳನ್ನು ಪ್ರಕಾಶಿಸುವಂತೆ ನೆಟ್ಟಿರುವರು ಎಂದು ಅರ್ಥ.

ದೇವಾನಾಂ ಪಾಥಃ ಅಪಿಯಂತಿ । ದೇವಾನಾಂ ಸ್ಥಾನಮಂತರಿಕ್ಷಂ ಪ್ರಾಪ್ನುವಂತಿ । ನಿರುಕ್ತ ಕಾರರು—

**ಯತ್ರಾ ಚಕ್ರುರಮೃತಾ ಗಾತುಮಸ್ಮೈ ಶ್ಯೇನೋ ನ ದೀಯನ್ನನ್ವೇತಿ ಪಾಥಃ ।**
**ಪ್ರತಿ ವಾಂ ಸೂರ ಉದಿತೇ ವಿಧೇಮ ನಮೋಭಿರ್ಮಿತ್ರಾವರುಣೋತ ಹವ್ಯೈಃ ॥**

(ಋ. ಸಂ. ೭-೬೩-೫)

**ಈ** ಋಕ್ಕನ್ನು ಉದಹರಿಸಿ **ಪಾಥಃ ಅಂತರಿಕ್ಷಂ ಪಥಾ ವ್ಯಾಖ್ಯಾತಂ** ಎಂದು ವ್ಯಾಖ್ಯಾನಮಾಡಿ ದಾರಿ ಎಂಬ ಅರ್ಥವನ್ನು ಹೇಳಿ,

**ವನಸ್ಪತೇ ರಶನಯಾ ನಿಯೂಯಾ ದೇವಾನಾಂ ಪಾಥ ಉಪ ವಕ್ಷಿ ವಿದ್ವಾನ್ ।**
**ಸ್ವದಾತಿ ದೇವಃ ಕೃಣವದ್ಧವೀಂಷ್ಯವತಾಂ ದ್ಯಾವಾಪೃಥಿವೀ ಹವಂ ಮೇ ॥**

(೧೦-೭೦-೧೦)

**ಈ** ಋಕ್ಕಿನಲ್ಲಿರುವ ಪಾಥಃ ಎಂಬ ಪದಕ್ಕೆ ಅನ್ನಮಪಿ ಪಾಥ ಉಚ್ಯತೇ ಪಾನಾದೇವ ಎಂದು ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು ಹವನಸಂಬಂಧಾದನ್ನಂ ಪಾಥ ಉಚ್ಯತೇ ಪಾನಾದೇವ ಎಂದು ಅರ್ಥವನ್ನು ವಿವರಿಸಿದ್ದಾರೆ.

ಉಪಾವಸೃಜ ತ್ಮನ್ಯಾ ಸಮಂಜನ್ ದೇವಾನಾಂ ಪಾಥ ಋತುಥಾ ಹವೀಂಷಿ ।
ವನಸ್ಪತಿಃ ಶಮಿತಾ ದೇವೋ ಅಗ್ನಿಃ ಸ್ವದಂತು ಹವ್ಯಂ ಮಧುನಾ ಘೃತೇನ ॥

(ಋ. ಸಂ. ೧೦-೧೧೦-೧೦)

**ಈ** ಋಕ್ಕಿನಲ್ಲಿಯೂ ಪಾಥ ಶಬ್ದಕ್ಕೆ ಅನ್ನವೆಂದು ಅರ್ಥವನ್ನು ವರ್ಣಿಸಿದೆ. ಸಾಯಣರು ಅಧ್ವರ್ಯ್ವಾದಿಭಿಃ **ಉಚ್ಛ್ರೀಯಮಾಣಾ ಯೂಪಾ ಅತಿದೈರ್ಘ್ಯಾದಂತರಿಕ್ಷಂ ವ್ಯಾಪ್ಯ ವರ್ತಂತೇ** । ಯೂಪಗಳು ಅಧ್ವರ್ಯುವೇ ಮೊದಲಾದ ಋತ್ವಿಜರಿಂದ ಸಂಸ್ಕೃತಗಳಾಗಿ ದೇವತೆಗಳ ಸ್ಥಾನವಾದ ಅಂತರಿಕ್ಷದಲ್ಲಿ ತಮ್ಮ ಔನ್ನತ್ಯದಿಂದ ಪ್ರಕಾಶಿಸುತ್ತವೆ ಎಂದು ವಿವರಿಸಿದ್ದಾರೆ.

ವ್ಯಾಕಣಪ್ರಕ್ರಿಯಾ.

**ಹಂಸಾ ಇವ**—ಹಸೇ ಹಸನೇ ಧಾತು. ಅಚ್ ಪ್ರತ್ಯಯ. ಪೃಷೋದರಾದಿಯಲ್ಲಿ ಸೇರಿರುವುದರಿಂದ ಅನುಸ್ವಾರಾಗಮ ಬರುತ್ತದೆ. **ಇವೇನಸಮಾಸೋ ವಿಭಕ್ತ್ಯಲೋಪಶ್ಚ** ಎಂಬ ವಚನದಿಂದ ಸಮಾಸವಾದಾಗ ವಿಭಕ್ತಿಗೆ ಲೋಪ ಬರುವುದಿಲ್ಲ. ಪೂರ್ವಪದಪ್ರಕೃತಿಸ್ವರವು ಬರುತ್ತದೆ.

**ಶ್ರೇಣಿಶಃ**—ಬಹ್ವಲ್ಪಾರ್ಥಾತ್ ಶಸ್ ಕಾ—(ಪಾ. ಸೂ. ೫-೪-೪೨) ಎಂಬುದರಿಂದ ಶಸ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯತಾನಾಃ**—ಯತೀ ಪ್ರಯತ್ನೇ ಧಾತು. ಲಿಟಿಗೆ ಶಾನಚಾದೇಶ. ಬಹುಲಂಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಧಾತುವು ಅನುದಾತ್ತೇತ್ತಾದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಶಾನಚ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಶುಕ್ರಾ**—ಶುಚ ದೀಪ್ತೌ ಧಾತು. **ಋಜ್ರೇಂದ್ರಾಗ್ರ**—(ಉ. ಸೂ. ೨-೧೮೦) ಎಂಬುದರಿಂದ ರನ್ ಪ್ರತ್ಯಯಾಂತವಾಗಿ ನಿಪಾತಮಾಡಿರುವುದರಿಂದ ಅಂತೋದಾತ್ತವಾಗುತ್ತದೆ.

**ಸ್ವರವಃ**—ಇದೇ ಋಕ್ಕಿನ ಆರನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

ಅಗುಃ—ಇಣ್ ಗತೌ ಧಾತು ಲುಙ್. ಇಣೋಗಾಲುಙಿ (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ಗಾತಿಸ್ಥಾಘುಪಾ—(ಪಾ. ಸೂ. ೨-೪-೭೭) ಎಂಬುದರಿಂದ ಚ್ಲಿಗೆ ಸಿಚಾದೇಶ ಬಂದಾಗ ಅದಕ್ಕೆ ಲೋಪ. ಸಿಜ್‌ಲುಕ್ಕಾಗಿ ಆದಂತವಾದುದರಿಂದ ಆತಃ (ಪಾ. ಸೂ. ೩-೪-೧೧೦) ಎಂಬುದರಿಂದ ಪರದ ಝಿ ಪ್ರತ್ಯಯಕ್ಕೆ ಉಸಾದೇಶ. ಪರರೂಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

ಉನ್ನೀಯಮಾನಾಃ—ಣೀಞ್ ಪ್ರಾಪಣೇ ಧಾತು. ಕರ್ಮಣಿಯಲ್ಲಿ ಲಟ್ ಬಂದಾಗ ಅದಕ್ಕೆ ಶಾನ ಚಾದೇಶ. ಸಾರ್ವಧಾತುಕೇ ಯಕ್ ಎಂಬುದರಿಂದ ಯಕ್. ಆನೇಮುಕ್ ಎಂಬುದರಿಂದ ಮುಕಾಗಮ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಯಕ್ ಸ್ವರ ಉಳಿಯುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ.

ಯಂತಿ—ಇಣ್ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಪಾಥಃ—ಪಾ ರಕ್ಷಣೇ ಧಾತು. ಅಸ್ನೇಚ (ಉ ಸೂ. ೪-೬೪೪) ಎಂಬುದರಿಂದ ಅಸುನ್ ಪ್ರತ್ಯಯವೂ ಥುಡಾಗಮವೂ ನಿಪಾತಿತವಾಗಿದೆ. ಇಲ್ಲಿ ಅಂತರಿಕ್ಷ ಎಂಬ ಅರ್ಥವನ್ನು ಹೇಳುತ್ತದೆ.

ಸಂಹಿತಾಪಾಠಃ

ಶೃಂಗಾಣೀವೇಚ್ಛೃಂಗಿಣಾಂ ಸಂ ದದೃಶ್ರೇ ಚಷಾಲವಂತಃ ಸ್ವರವಃ ಪೃಥಿವ್ಯಾಂ ।
ವಾಘದ್ಭಿರ್ವಾ ವಿಹವೇ ಶ್ರೋಷಮಾಣಾ ಅಸ್ಮಾಁ ಅವಂತು ಪೃತನಾಜ್ಯೇಷು ॥ ೧೦ ॥

ಪದಪಾಠಃ

ಶೃಂಗಾಣಿಇವ । ಇತ್ । ಶೃಂಗಿಣಾಂ । ಸಂ । ದದೃಶ್ರೇ । ಚಷಾಲ್ಽವಂತಃ । ಸ್ವರವಃ । ಪೃಥಿವ್ಯಾಂ । ವಾಘತ್ಽಭಿಃ । ವಾ । ವಿಽಹವೇ । ಶ್ರೋಷಮಾಣಾಃ । ಅಸ್ಮಾನ್ । ಅವಂತು । ಪೃತನಾಜ್ಯೇಷು ॥ ೧೦ ॥

ಸಾಯಣಭಾಷ್ಯಂ.

**ಸ್ವರವಃ ಸ್ವರುಮಂತಶ್ಚಷಾಲವಂತಃ ಪ್ರತಿಮುಕ್ತಕಂಟಕಾಃ । ಏವಂವಿಧಾ ಯೂಪಾಃ ಪೃಥಿವ್ಯಾಂ ಶೃಂಗಿಣಾಂ ಮಹಿಷಾದೀನಾಂ ಶೃಂಗಾಣೀವೇತ್ ವಿಷಾಣಾನೀವ ಸಂದದೃಶ್ರೇ । ಸಮ್ಯಕ್ ದೃಶ್ಯಂತ ಏವ । ವಾ ಅಪಿ ಚ ವಿಹವೇ । ವಿವಿಧಂ ಹೂಯಂತೇ ಹವೀಂಷ್ಯತ್ರೇತಿ ವಿಹವೋ ಯಜ್ಞಃ । ತಸ್ಮಿನ್ಯಜ್ಞೇ ವಾಘ-**

**ದ್ಭಿರ್ಋತ್ವಿಗ್ಭಿಃ । ವಾಘತೋ ವೃಕ್ತಬರ್ಹಿಷ ಇತ್ಯೃತ್ವಿಙ್ನಾಮಸು ಪಾಠಾತ್ । ಶ್ರೋಷಮಾಣಾಸ್ತೈಃ ಕ್ರಿಯಮಾಣಂ ಸ್ತುತಿಲಕ್ಷಣಂ ಶಬ್ದಂ ಶೃಣ್ವಂತಃ । ತಾದೃಶಾ ಯೂಪಾಃ ಪೃತನಾಜ್ಯೇಷು । ಪೃತನಾಜ್ಯಶಬ್ದಃ ಸಂಗ್ರಾಮವಾಚೀ । ಆಜೌ ಪೃತನಾಜ್ಯಮಿತಿ ಸಂಗ್ರಾಮನಾಮಸು ಪಠಿತತ್ವಾತ್ । ಪೃತನಾಜ್ಯೇಷು ಸಂಗ್ರಾಮೇಷು । ವಧಸ್ಥಲೇಷ್ವಿತಿ ಯಾವತ್ । ಅಸ್ಮಾನ್ಯಜಮಾನಾನವಂತು । ರಕ್ಷಂತು ॥ ಶೃಂಗಾಣಿ । ಶೄ ಹಿಂಸಾಯಾಮಿತ್ಯಸ್ಮಾಚ್ಛೃಣಾತೇರ್ಹ್ರಸ್ವಶ್ಚ । ಉ. ೧-೧೨೫ । ಇತಿ ಗನ್ ನುಡಾಗಮೋ ಧಾತೋರ್ಹ್ರಸ್ವಶ್ಚ । ನಿತ್ಸ್ವರಃ । ದದೃಶ್ರೇ । ಛಂದಸಿ ಲುಙ್ಲಙ್ಲಿಟ ಇತಿ ಲಡರ್ಥೇ ಲಿಟ್ । ಇರಯೋ ರ ಇತೀರೇಚೋ ರೇ ಇತ್ಯಾದೇಶಃ । ನಿಘಾತಃ ॥**

ಪ್ರತಿಪದಾರ್ಥ.

**ಸ್ವರವಃ**—ಅವಯವವಿಶಿಷ್ಟಗಳೂ । **ಚಷಾಲವಂತಃ**—ಮುಳ್ಳುಗಳಿಲ್ಲದವೂ ಆದ ಯೂಪಗಳು । **ಪೃಥಿವ್ಯಾಂ**—ಭೂಮಿಯಮೇಲೆ । **ಶೃಂಗಿಣಾಂ**—ಶೃಂಗವಿಶಿಷ್ಟಗಳಾದ ಮಹಿಷಾದಿಗಳ । ಶೃಂಗಾಣಿ ಇವ ಇತ್—ಕೊಂಬುಗಳಂತೆಯೇ । **ಸಂ ದದೃಶ್ರೇ**—ಚೆನ್ನಾಗಿ ಕಾಣಿಸುತ್ತಿವೆ । **ವಾ**—ಮತ್ತು । **ವಿಹವೇ**—ವಿವಿಧ ರೂಪವಾದ ಹವಿಸ್ಸುಗಳು ಅರ್ಪಿತವಾಗುವ ಯಾಗದಲ್ಲಿ । **ವಾಘದ್ಭಿಃ**—ಋತ್ವಿಜರಿಂದ (ಕೃತವಾದ ಸ್ತುತಿರೂಪ ಶಬ್ದವನ್ನು) । **ಶ್ರೋಷಮಾಣಾಃ**—ಶ್ರವಣಮಾಡುವ (ಯೂಪಗಳು) । **ಪೃತನಾಜ್ಯೇಷು**—ಸಂಗ್ರಾಮಗಳಲ್ಲಿ (ಯುದ್ಧಗಳಲ್ಲಿ) । **ಅಸ್ಮಾನ್**—ಯಾಗಕರ್ತೃಗಳಾದ ನಮ್ಮನ್ನು । **ಅವಂತು**—ರಕ್ಷಿಸಲಿ ॥

ಭಾವಾರ್ಥ.

ಸ್ವಾವಯವ ಪೂರ್ಣಗಳೂ, ಕಂಟಕಾದಿ ರಹಿತಗಳೂ ಆದ ಯೂಪಗಳು ಮಹಿಷಾದಿಗಳ ಶೃಂಗಗಳಂತೆ ಭೂಮಿಯ ಮೇಲೆ ಕಾಣಿಸುತ್ತಿವೆ. ಮತ್ತು ಯಾಗಗಳಲ್ಲಿ ಋತ್ವಿಜರಿಂದ ಉಚ್ಚರಿತವಾಗುವ ಸ್ತುತಿಯನ್ನು ಕೇಳುವ ಈ ಯೂಪಗಳು ನಮ್ಮನ್ನು ಸಂಗ್ರಾಮಗಳಲ್ಲಿ ರಕ್ಷಿಸಲಿ.

English Translation.

Entire in all parts and girded with rings, they appear upon the earth like the horns of horned cattle; hearing (their praises) by the priests: may they protect us in battles.

ವಿಶೇಷ ವಿಷಯಗಳು.

**ಸ್ವರವಃ—ಸ್ವರುಮಂತಃ**—ಅಷ್ಟಾಶ್ರಗಳಾಗಿರುವಂತೆ (ಎಂಟು ಮೂಲೆ) ಯೂಪಗಳು ಸಿದ್ಧಮಾಡಲ್ಪಟ್ಟಿರುತ್ತವೆ ಎಂದು ಅರ್ಥ.

**ಚಷಾಲವಂತಃ—ಪ್ರತಿಮುಕ್ತಕಂಟಕಾಃ** ಕಂಟಕಗಳು (ಮುಳ್ಳುಗಳು) ಇಲ್ಲದಿರುವಂತೆ ನುಣುಪಾಗಿರುವುವು ಎಂದು ಅರ್ಥ.

**ಶೃಂಗಾಣೀವೇತ್**—ಇಲ್ಲಿ ಶೃಂಗಾಣಿ ಇವ ಇತ್ ಎಂದು ಮೂರು ಪದಗಳಲ್ಲಿ ಇತ್ ಎಂಬ ಪದವು ಪಾದಪೂರಣ (ಮಾತ್ರ) ಅರ್ಥದಲ್ಲಿ ಪ್ರಯುಕ್ತವಾಗಿದೆ. ನಿರುಕ್ತಕಾರರು **ಅಥ ಯೇ ಪ್ರವೃತ್ತೇರ್ಥೇ ಅಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷು ಅನರ್ಥಕಾಃ ಕಮೀಮಿ-**

**ದ್ವಿತಿ** । ವಾಕ್ಯ ಗ್ರಂಥಗಳಲ್ಲಿ ಕಂ, ಈಂ, ಇತ್, ಉ, ಎಂಬ ನಿಪಾತಗಳು ವಾಕ್ಯಪೂರ್ತಿಗಾಗಿಯೂ ಛಂದೋಬದ್ಧವಾದ ಗ್ರಂಥಗಳಲ್ಲಿ ಪಾದಪೂರಣಾರ್ಥದಲ್ಲಿಯೂ ಪ್ರಯುಕ್ತವಾಗಿರುತ್ತವೆ ಎಂದು **ವಿವರಿಸಿದ್ದಾರೆ**.

**ಪೃಥಿವ್ಯಾಂ ಶೃಂಗಿಣಾಂ ಶೃಂಗಾಣೀವ ಸಂದದೃಶ್ರೇ**. ಯೂಪಗಳು ಕೊಂಬುಗಳುಳ್ಳ **ಮಹಿಷವೇ** ಮೊದಲಾದ ಪ್ರಾಣಿಗಳ ಕೊಂಬುಗಳ ಹಾಗೆ ಶೋಭಿಸುತ್ತವೆ ಎಂದು ಅರ್ಥವನ್ನು ವಿವರಿಸಿದೆ.

ವಿಹವೇ—ವಿವಿಧಂ **ಜುಹ್ವಯಂತೇ ಹವೀಂಷ್ಯತ್ರೇತಿ ವಿಹವೋ ಯಜ್ಞಃ** । ಅಗ್ನಿಗೆ ಅರ್ಪಿತವಾಗುವ ಅನೇಕ ವಿಧವಾದ ಹವಿಸ್ಸುಗಳು ಅನೇಕ ವಿಧದಿಂದ ಹೋಮಮಾಡಲ್ಪಡುವ ಕರ್ಮವು ಯಜ್ಞವೆಂದು ಹೇಳಲ್ಪಡುವುದು ಎಂಬ ಅರ್ಥವನ್ನು ಇಲ್ಲಿ ವಿವರಿಸಿದೆ.

**ವಾಘದ್ಭಿಃ**—ವಾಘತ್ ಎಂಬ ಪದವು ಋತ್ವಿಙ್ನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. ಯಜ್ಞ ಕರ್ಮಗಳನ್ನು ಆಚರಿಸುವ ಋತ್ವಿಜರು ಎಂದು ಅರ್ಥ.

ಪೃತನಾಜ್ಯೇಷು—ಪೃತನಾಜ್ಯ ಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ ಮತ್ತು ನಿರುಕ್ತಕಾರರು—

**ಇಮಂ ತಂ ಪಶ್ಯ ವೃಷಭಸ್ಯ ಯುಂಜಂ ಕಾಷ್ಠಾಯಾ ಮಧ್ಯೇ ದ್ರುಘಣಂ ಶಯಾನಂ ।**
**ಯೇನ ಜಿಗಾಯ ಶತವತ್ಸಹಸ್ರಂ ಗವಾಂ ಮುದ್ಗಲಃ ಪೃತನಾಜ್ಯೇಷು ॥**
(ಋ. ಸಂ. ೧೦-೧೦೨-೯)

ಎಂದು ಪೃತನಾಜ್ಯಮಿತಿ ಸಂಗ್ರಾಮನಾಮ ಪೃತನಾನಾಮ ಜನಾದ್ವಾ ಜಯನಾದ್ವಾ । ಈ ಋಕ್ಕನ್ನು ಉದಹರಿಸಿ ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು—ಪೃತನಃ-ಮನುಷ್ಯರು- ಅಂಜಂತಿ ಗಚ್ಛಂತಿ- ಎಲ್ಲಿ ನಾಶವಾಗುವರೋ ಅಥವಾ ಪೃತನಃ ಮನುಷ್ಯರು ಜಯಂತಿ ಜಯಶೀಲರಾಗುವರೋ ಅದು ಎಂದು ಅರ್ಥವನ್ನು ವಿವರಿಸಿ ಮನುಷ್ಯರು ನಾಶವಾಗುವ-ಅಥವಾ ಮನುಷ್ಯರು ಇನ್ನೊಬ್ಬರನ್ನು ಜಯಿಸುವ ಸನ್ನಿವೇಶವು—ಯುದ್ಧವಾಗುವ ಕಾರಣ ಪೃತನಾಜ್ಯ ಶಬ್ದದಿಂದ ಸಂಗ್ರಾಮವು ಉಕ್ತವಾಗುವುದೆಂದು ಹೇಳಿದ್ದಾರೆ. ಸಾಯಣರು **ಪೃತನಾಜ್ಯಶಬ್ದಃ ಸಂಗ್ರಾಮವಾಚೀ ಪೃತನಾಜ್ಯೇಷು ಸಂಗ್ರಾಮೇಷು ವಧಸ್ಥಲೇಷ್ವಿತಿ ಯಾವತ್** ಎಂದು ಅರ್ಥವನ್ನು ವರ್ಣಿಸಿ ಯೂಪಗಳು ಯಜ್ಞಮಾಡುವ ಯಜಮಾನರನ್ನು ಈ ವಧಸ್ಥಲಗಳಲ್ಲಿ ರಕ್ಷಿಸಲಿ ಎಂದು ಅರ್ಥವನ್ನು ಹೇಳಿರುವರು.

ವ್ಯಾಕರಣಪ್ರಕ್ರಿಯಾ

**ಶೃಂಗಾಣಿ**—ಶೄ ಹಿಂಸಾಯಾಂ ಧಾತು. **ಶೃಣಾತೇಃ ಹ್ರಸ್ವಶ್ಚ** (ಉ. ಸೂ. ೧-೧೨೬) ಎಂಬುದರಿಂದ ಗನ್ ಪ್ರತ್ಯಯ. ನುಡಾಗಮ, ಧಾತುವಿಗೆ ಹ್ರಸ್ವ ಶೃಂಗ ಎಂದು ರೂಪವಾಗುತ್ತದೆ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಇವ** ಎಂಬುದರೊಡನೆ ಸಮಾಸವಾದಾಗ ಹಿಂದಿನಂತೆ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ದದೃಶ್ರೇ**—ದೃಶಿರ್ ಪ್ರೇಕ್ಷಣೇ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಕರ್ಮಣಿಯಲ್ಲಿ ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ-

**ಲಿಟಸ್ತ್ರಝಯೋ**—ಸೂತ್ರದಿಂದ ಇರೇಚ್ ಆದೇಶ ಬಂದಾಗ ಇರಯೋರೇ (ಪಾ. ಸೂ. ೬-೪-೭೬) ಎಂಬುದರಿಂದ ಅದಕ್ಕೆ ರೇ ಆದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಹವೇ**—ಹು ದಾನಾದನಯೋಃ ಧಾತು. ಅಧಿಕರಣಾರ್ಥದಲ್ಲಿ ಘ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ ಅವಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಾದಿ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಶೋಶುಚಾನಾಃ**— ಶುಚ ಶ್ರವಣೇ ಧಾತು. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಲಿಟಿಗೆ ಶಾನಚಾದೇಶ. ವ್ಯತ್ಯಯದಿಂದ ಶಪ್ ವಿಕರಣ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬಲ್ಲಿ ಬಹುಳಗ್ರಹಣಸಾಮರ್ಥ್ಯದಿಂದ ಇಲ್ಲಿಯೂ ಸಿಪ್ ಬರುತ್ತದೆ. ಅದನ್ನು ನಿಮಿತ್ತೀಕರಿಸಿ ಉಕಾರಕ್ಕೆ ಗುಣ. ಸಿಪಿಗೆ ಅದನ್ನು ನಿಮಿತ್ತೀಕರಿಸಿ ಷತ್ವ. ಮುಕಾಗಮ. ಲಸಾರ್ವಧಾತುಕವು ತಾಸ್ಯನುದಾತ್ತೇತ್ ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅವಂತು**— ಅವ ರಕ್ಷಣೇ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ ತಿಙಂತ ನಿಘಾತಸ್ವರ ಬರುತ್ತದೆ.

ವನಸ್ಪತೇ ಶತವಲ್ಶೋ ವಿ ರೋಹ ಸಹಸ್ರವಲ್ಶಾ ವಿ ವಯಂ ರುಹೇಮ ।
ಯಂ ತ್ವಾಮಯಂ ಸ್ವಧಿತಿಸ್ತೇಜಮಾನಃ ಪ್ರಣಿನಾಯ ಮಹತೇ ಸೌಭ-
ಗಾಯ ॥ ೧೧ ॥

ವನಸ್ಪತೇ । ಶತಽವಲ್ಶಃ । ವಿ । ರೋಹ । ಸಹಸ್ರಽವಲ್ಶಾಃ । ವಿ । ವಯಂ । ರುಹೇಮ ।
ಯಂ । ತ್ವಾಂ । ಅಯಂ । ಸ್ವಽಧಿತಿಃ । ತೇಜಮಾನಃ । ಪ್ರಽನಿನಾಯ । ಮಹತೇ । ಸೌಭಗಾಯ ॥ ೧೧ ॥

ಸಾಯಣಭಾಷ್ಯಂ.

ಹೇ ವನಸ್ಪತೇ ಛಿನ್ನಮೂಲ ಸ್ಥಾಣೋ ಶತವಲ್ಶಃ ಶತಶಾಖಃ ಸನ್ ವಿರೋಹ । ವಿಶೇಷೇಣ ಪ್ರಾದುರ್ಭೂತೋ ಭವ । ವಯಮಪಿ ಸಹಸ್ರವಲ್ಶಾಃ ಪುತ್ರಪೌತ್ರಾದಿಸಂತಾನಪರಂಪರಯಾ ಸಹಸ್ರಶಾಖಾಃ ಸಂತೋ ವಿರುಹೇಮ । ವಿಶೇಷೇಣ ಪ್ರಾದುರ್ಭೂತಾ ಭವೇಮ । ತೇಜಮಾನೋ ನಿಶಿತಧಾರೋಽಯಂ ಸ್ವಧಿತಿಃ ಪರಶುಃ ಹೇ ಸ್ಥಾಣೋ ಯಂ ತ್ವಾಂ ಮಹತೇ ಸೌಭಗಾಯ ಮಹತ್ಸೌಭಾಗ್ಯಂ ಬಹುಶಾಖತ್ವ-ಲಕ್ಷಣಂ ಪ್ರಣಿನಾಯ । ಪ್ರಕರ್ಷೇಣ ಪ್ರಾಪಯಾಮಾಸ ॥ ಸಹಸ್ರವಲ್ಶಾಃ । ಸಹಸ್ರಶಬ್ದಃ ಕರ್ದಮಾದಿ-ತ್ವಾನ್ಮಧ್ಯೋದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ರುಹೇಮ । ರುಹ ಪ್ರಾದುರ್ಭಾವ ಇತ್ಯ.

**ಸ್ಯಾದಾಶೀರ್ಲಿಙಿ ಕಿದಾಶಿಷೀತಿ ಯಾಸುಡಾಗಮಃ । ಸ್ಕೋಃ ಸಂಯೋಗಾದ್ಯೋರಂತೇ ಚೇತಿ ಸಲೋಪಃ । ಲಿಙ್ಯಾಶಿಷ್ಯಙ್ಙಿತ್ಯಙ್ಪ್ರತ್ಯಯಃ । ಅತೋ ಯೇಯ ಇತಿ ಇಯಾದೇಶಃ । ಲೋಪೋ ವ್ಯೋರ್ವಲೀತಿ ಯಲೋಪಃ । ಗುಣಃ । ಪ್ರಣಿನಾಯ । ಣೀಞ್ ಪ್ರಾಪಣೇ ಇತ್ಯಸ್ಮಾಲ್ಲಿಟಿ ಣಲಿ ರೂಪಂ । ಪಾದಾದಿತ್ವಾದನಿಘಾತಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥**

ಪ್ರತಿಪದಾರ್ಥ.

(ಹೇ) **ವನಸ್ಪತೇ**—ಛಿನ್ನಮೂಲವಾದ ಎಲೈ ಸ್ಥಾಣುವೆ, । **ಯಂ ತ್ವಾಂ**—ಯಾವ ನಿನ್ನನ್ನು । **ತೇಜಮಾನಃ**—ನಿಶಿತಧಾರೆಯುಳ್ಳ । **ಅಯಂ ಸ್ವಧಿತಿಃ**—ಈ ಕೊಡಲಿಯು । **ಮಹತೇ**—ಹೆಚ್ಚಾದ । **ಸೌಭಗಾಯ**—ಸೌಭಾಗ್ಯಕ್ಕೋಸ್ಕರ । **ಪ್ರ ನಿನಾಯ**—ಕತ್ತರಿಸಿ ತಂದಿದೆಯೋ । (**ಸಃ**—ಅಂತಹ ನೀನು) । **ಶತವಲ್ಶಃ**—ನೂರಾರು ಶಾಖೆಯುಳ್ಳವನಾಗಿ । **ವಿರೋಹ**—ಪ್ರಾದುರ್ಭೂತನಾಗು (ಬೆಳೆ) । **ವಯಂ** (ಅಪಿ)—ನಾವೂ ಕೂಡ । **ಸಹಸ್ರವಲ್ಶಾಃ**—ಪುತ್ರಪೌತ್ರಾದಿ ಸಹಸ್ರಸಂತಾನಗಳುಳ್ಳವರಾಗಿ । **ವಿ ರುಹೇಮ**—ಅಭಿವೃದ್ಧರಾಗೋಣ.

ಭಾವಾರ್ಥ.

ಎಲೈ ಛಿನ್ನಮೂಲವಾದ ಯೂಪರೂಪಸ್ಥಾಣುವೇ, ಈ ಹರಿತವಾದ ಅಲುಗಿನ ಕೊಡಲಿಯು ನಿನ್ನನ್ನು ಕತ್ತರಿಸಿ ಯಾಗದಲ್ಲಿ ಸೌಭಾಗ್ಯಪ್ರದನಾಗಲೆಂದು ತಂದಿದೆ; ಇಂತಹ ನೀನು ನೂರಾರು ಶಾಖೆಗಳುಳ್ಳವನಾಗಿ ಅಭಿವೃದ್ಧಿಹೊಂದಿ, ನಮ್ಮನ್ನೂ ಪುತ್ರಪೌತ್ರಾದಿರೂಪ ಸಾವಿರಾರು ಶಾಖಾವಿಶಿಷ್ಟರಾಗಿ ಅಭಿವೃದ್ಧರಾಗುವಂತೆ ಅನುಗ್ರಹಿಸು.

## English Translation.

VANASPATI, mount up (grow) with a hundred branches, that we may mount with a thousand, you whom the sharpened hatchet has brought for great auspiciousness.

ವಿಶೇಷವಿಷಯಗಳು.

**ವನಸ್ಪತೇ ಶತವಲ್ಶೋ ವಿರೋಹ**—ವನಸ್ಪತಿ ಶಬ್ದದ ಅರ್ಥವನ್ನು ವಿವರಿಸಿದೆ. ಇಲ್ಲಿ ಛಿನ್ನಮೂಲ ಸ್ಥಾಣೋ. ಎಂದು ವೃಕ್ಷವನ್ನು ಕತ್ತರಿಸಿದಮೇಲೆ ಬೇರುಸಹಿತವಾಗಿ ಉಳಿದಿರುವ ಬುಡ ಅಥವಾ ಮೋಟುಮರವನ್ನು ವನಸ್ಪತಿ ಎಂಬ ಶಬ್ದದಿಂದ ಸಂಬೋಧಿಸಿದೆ. ಮತ್ತು ಬೇರುಸಹಿತವಾದ ಈ ಬುಡವು ಅನೇಕ ಶಾಖೆಗಳುಳ್ಳದ್ದಾಗಿ ದೊಡ್ಡ ವೃಕ್ಷದ ಸ್ಥಿತಿಯನ್ನು ಹೊಂದಲಿ ಎಂದು ಆಶಂಸಿಸಿದೆ.

ಯಜ್ಞಮಾಡುವ ಯಜಮಾನರು ಯೂಪಾಂತರ್ಗತವಾದ ಅಗ್ನಿಯ ಅನುಗ್ರಹದಿಂದ **ಸಹಸ್ರವಲ್ಶಾಃ ವಿ ರುಹೇಮ ಪುತ್ರಪೌತ್ರಾದಿಸಂತಾನಪರಂಪರಯಾ ಸಹಸ್ರಶಾಖಾಃ ಸಂತಃ ವಿಶೇಷೇಣ ಪ್ರಾದುರ್ಭೂತಾ ಭವೇಮ**—(ಪುತ್ರರೂ) ಮಕ್ಕಳೂ ಮೊಮ್ಮಕ್ಕಳೂ ಎಂಬ ಕ್ರಮದಿಂದ ಅನೇಕ ರೀತಿಯಾಗಿ ಅಭಿವೃದ್ಧಿಯನ್ನು ಹೊಂದೋಣ ಎಂದು ಆಶಿಸಿದೆ.

**ತೇಜಮಾನಃ ಸ್ವಧಿತಿಃ ಮಹತೇ ಸೌಭಗಾಯ ಪ್ರಣಿನಾಯ**—ವನಸ್ಪತಿಸಂಬಂಧಿಯಾದ ಯೂಪವನ್ನು ಹರಿತವಾದ ಪರಶುವು ಕತ್ತರಿಸಿ ನಮಗೆ ಬಹಳವಾಗಿ ಕಲ್ಯಾಣವನ್ನುಂಟುಮಾಡುವುದಕ್ಕಾಗಿ ಇಲ್ಲಿಗೆ

ತಂದಿರುವುದು ಎಂಬ ಅರ್ಥವನ್ನು **ನಿಶಿತಧಾರಃ ಪರಶುಃ ಮಹತ್ಸೌಭಾಗ್ಯಂ ಬಹುಶಾಖತ್ವಲಕ್ಷಣಂ ಪ್ರಕರ್ಷೇಣ ಪ್ರಾಪಯಾಮಾಸ** ಎಂಬ ವಿವರಣೆಯಿಂದ ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ರೋಹ**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಹಸ್ರವಲ್ಶಾಃ**—ಸಹಸ್ರ ಶಬ್ದವು ಕರ್ದಮಾದಿಯಲ್ಲಿ ಪಠಿತವಾದುದರಿಂದ ಮಧ್ಯೋದಾತ್ತವಾಗುತ್ತದೆ. **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಬಹುವ್ರೀಹಿಸಮಾಸದಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ರುಹೇಮ**—ರುಹ ಪ್ರಾದುರ್ಭಾವೇ ಧಾತು. ಆಶೀರ್ಲಿಙಿನಲ್ಲಿ ಉತ್ತಮಪುರುಷ ಬಹುವಚನದಲ್ಲಿ ಮಸ್. **ನಿತ್ಯಂಙಿತಃ** ಎಂಬುದರಿಂದ ಸಕಾರಕ್ಕೆ ಲೋಪ. **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುದರಿಂದ ಅಙ್‌ಪ್ರತ್ಯಯ. ಲಿಙಿಗೆ ಯಾಸುಟಾಗಮ. **ಅತೋಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಅದಕ್ಕೆ ಇಯಾದೇಶ. ಗುಣ. **ಲೋಪೋವ್ಯೋರ್ವಲಿ** ಎಂಬುದರಿಂದ ಇಯಿನ ಯಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಪ್ರಣಿನಾಯ**—ಪ್ರ ಉಪಸರ್ಗ. ಣೀಞ್ ಪ್ರಾಪಣೇ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಬಂದಾಗ ಅದಕ್ಕೆ ಣಲ್ ಆದೇಶ. ಧಾತುವಿಗೆ ದ್ವಿತ್ವ. ಪ್ರತ್ಯಯ ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಧಾತುವಿನ ಇಕಾರಕ್ಕೆ ವೃದ್ಧಿ. ಆಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಉದಾತ್ತವುಳ್ಳ ತಿಙಂತ ಪರವಾದುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ.

**ಮಹಕೇ**—**ಬೃಹನ್ಮಹತೋರುಪಸಂಖ್ಯಾನಮ್** ಎಂಬುದರಿಂದ ಚತುರ್ಥೀವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

## ಒಂಭತ್ತನೆಯ ಸೂಕ್ತವು.

**ಸಖಾಯಸ್ತ್ವೇತಿ ನವರ್ಚಂ ನವಮಂ ಸೂಕ್ತಂ ವೈಶ್ವಾಮಿತ್ರಂ । ಅತ್ರೇಯಮನುಕ್ರಮಣಿಕಾ । ಸಖಾಯೋ ನವ ಬಾರ್ಹತಂ ತ್ರಿಷ್ಟುಬಂತಮಿತಿ । ಅಂತ್ಯಾ ತ್ರಿಷ್ಟುಪ್ । ಶಿಷ್ಟಾ ಅಷ್ಟೌ ಬೃಹತ್ಯಃ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಬಾರ್ಹತೇ ಛಂದಸ್ಯಸ್ಯ ಸೂಕ್ತಸ್ಯ ವಿನಿಯೋಗಃ । ಅಥೈತಸ್ಯಾ ಇತಿ ಖಂಡೇ ಸೂತ್ರಿತಂ । ಸಖಾಯಸ್ತ್ವಾಯಮಗ್ನಿರಗ್ನ ಆ ಯಾಹಿ । ಆ. ೪-೧೩ । ಇತಿ ॥**

ಅನುವಾದವು—**ಸಖಾಯಸ್ತ್ವಾ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು. ಅನುಕ್ರಮಣಿಕೆಯಲ್ಲಿ—**ಸಖಾಯೋ ನವ ಬಾರ್ಹತಂ ತ್ರಿಷ್ಟುಬಂತಮಿತಿ** ಎಂದು ಹೇಳಿರುವುದು. ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಎಂಟು ಋಕ್ಕುಗಳು ಬೃಹತೀಛಂದಸ್ಕವು. ಪ್ರಾತರನುವಾಕಮಂತ್ರಗಳ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಬೃಹತೀಛಂದಸ್ಸಿನ ಋಕ್ಕುಗಳ ಪಠನಕ್ಕಾಗಿ ಈ ಸೂಕ್ತದ

ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಅಥೈತಸ್ಯಾ ಎಂಬ ಖಂಡದ **ಸಖಾಯಸ್ತ್ವಾಯೆವಮಗ್ನಿ-ರಗ್ನ ಆ ಯಾಹಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೨).

## ಸೂಕ್ತ—೯

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೯ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೫, ೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೯
ಋಷಿಃ—ವಿಶ್ವಾಮಿತ್ರಃ ॥
ದೇವತಾ—ಅಗ್ನಿಃ ॥
ಛಂದಃ—೧—೮, ಬೃಹತೀ । ೯ ತ್ರಿಷ್ಟುಪ್ ॥

ಸಂಹಿತಾಪಾಠಃ

ಸಖಾಯಸ್ತ್ವಾ ವವೃಮಹೇ ದೇವಂ ಮರ್ತಾಸ ಊತಯೇ ।
ಅಪಾಂ ನಪಾತಂ ಸುಭಗಂ ಸುದೀದಿತಿಂ ಸುಪ್ರತೂರ್ತಿಮನೇಹಸಂ ॥ ೧ ॥

ಪದಪಾಠಃ

ಸಖಾಯಃ । ತ್ವಾ । ವವೃಮಹೇ । ದೇವಂ । ಮರ್ತಾಸಃ । ಊತಯೇ ।
ಅಪಾಂ । ನಪಾತಂ । ಸುಽಭಗಂ । ಸುಽದೀದಿತಿಂ । ಸುಽಪ್ರತೂರ್ತಿಂ । ಅನೇಹಸಂ ॥ ೧ ॥

ಸಾಯಣಭಾಷ್ಯಂ.

ವಿಶ್ವಾಮಿತ್ರಃ ಸ್ತೌತಿ । ಹೇ ಅಗ್ನೇ ಸಖಾಯಃ ಸೋಮಾಜ್ಯಾದಿಹವಿಷ್ಪ್ರದಾನೇನೋಪಕಾರಕತ್ವಾನ್ಮಿತ್ರಾಣಿ ಮರ್ತಾಸೋ ಮನುಷ್ಯಾ ಋತ್ವಿಜೋ ವಯಮಪಾಂ ನಪಾತಮಪಾಂ ನಪ್ತಾರಂ ಸುಭಗಂ ಶೋಭನಧನಯುಕ್ತಂ ಸುದೀದಿತಿಂ ಶೋಭನದೀಪ್ತಿಂ ಸುಪ್ರತೂರ್ತಿಂ ಶೋಭನಪ್ರತರಣಂ ಕರ್ಮಾನುಷ್ಠಾತೃಭಿಃ ಸುಖೇನ ಗಂತವ್ಯಮನೇಹಸಮುಪದ್ರವರಹಿತಮೇತಾದೃಶಂ ದೇವಂ ತ್ವಾಮೂತಯೇ ರಕ್ಷಣಾಯ ವವೃಮಹೇ । ವೃಣೀಮಹೇ ॥ ಸಖಾಯಃ । ಖ್ಯಾ ಪ್ರಕಥನೇ । ಸಮಾನೇ ಖ್ಯಃ ಸ ಚೋದಾತ್ತ ಇತಿ ಸಮಾನ ಉಪಪದೇ ಡಿದಿತ್ಯನುವೃತ್ತೌ ಖ್ಯಾತೇರಿಣ್ । ತಸ್ಯ ಡಿತ್ವಾತ್ಟಿಲೋಪಃ । ತತ್ಸಂನಿಯೋಗೇನ ಯಲೋಪಃ । ಸಮಾನಸ್ಯ ಛಂದಸ್ಯಮೂರ್ಧೇತಿ ಸಭಾವಃ । ಉಪಪದಸ್ಯೋದಾತ್ತತ್ವಂ । ಣಿದಿತ್ಯನುವೃತ್ತೌ ಸಖ್ಯುರಸಂಬುದ್ಧೌ । ಪಾ. ೭-೧-೯೨ । ಇತಿ ಣಿದ್ವದ್ಭಾವಃ । ವೃದ್ಧ್ಯಾಯಾದೇಶೌ । ಆದ್ಯುದಾತ್ತಃ । ವವೃಮಹೇ । ವೃಙ್ ಸಂಭಕ್ತೌ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಿಟ್ । ಕ್ರಾದಿನಿಯಮಾದಿಡಭಾವಃ । ನಿಘಾತಃ । ಊತಯೇ । ಅವ ರಕ್ಷಣ ಇತ್ಯಸ್ಯ ಉದಾತ್ತ ಇತ್ಯನುವೃತ್ತಾವೂತಿಯೂತೀ-

**ತ್ಯಾದಿನಾ ಕ್ತಿನಂತತ್ವೇನ ನಿಪಾತನಾದಂತೋದಾತ್ತಃ । ಅಪಾಂ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಸುಭಗಂ । ಆದ್ಯುದಾತ್ತಂ ದ್ವ್ಯಚ್ ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಸುಪ್ರತೂರ್ತಿಂ । ಕ್ರತ್ವಾದ-ಯಶ್ಚೇತ್ಯುತ್ತರಪದಾದ್ಯುದಾತ್ತತ್ವಂ ॥**

ಪ್ರತಿಪದಾರ್ಥ

**(ಹೇ ಅಗ್ನೇ**—ಎಲೈ ಅಗ್ನಿಯೇ) । **ಸಖಾಯಃ**—(ಸೋಮಾಜ್ಯಾದಿಹವಿಸ್ಸುಗಳನ್ನು ಹೋಮಮಾಡುವುದರಿಂದ) ಮಿತ್ರರಾದ । **ಮರ್ತಾಸಃ**—(ಋತ್ವಿಗ್ರೂಪ) ಮನುಜರಾದ (ನಾವು) । **ಅಪಾಂ ನಪಾತಂ**—ಉದಕಗಳ ಪೌತ್ರನೂ । **ಸುಭಗಂ**—ಶೋಭನಧನವಿಶಿಷ್ಟನೂ । **ಸುದೀಧಿತಿಂ**—ಒಳ್ಳೆಯ ಕಾಂತಿಯುಕ್ತನೂ । **ಸುಪ್ರತೂರ್ತಿಂ**—ಶುಭಕರದಾನ ಮಾಡುವವನೂ (ಅಥವಾ ಕರ್ಮಾನುಷ್ಠಾತೃಗಳಿಂದ ಸುಖವಾಗಿ ಪ್ರಾಪ್ಯನೂ) । **ಅನೇಹಸಂ**—ಉಪದ್ರವರಹಿತನೂ ಆದ । **ದೇವಂ ತ್ವಾಂ**—ದೇವತಾರೂಪನಾದ ನಿನ್ನನ್ನು । **ಊತಯೇ**—ರಕ್ಷಣೆಗೋಸ್ಕರ । **ವವೃಮಹೇ**— ಕರೆಯುತ್ತೇವೆ ॥

ಭಾವಾರ್ಥ.

ಎಲೈ ಅಗ್ನಿಯೇ, ಉದಕಪೌತ್ರನೂ, ಶೋಭನಧನಾಢ್ಯನೂ, ಸುಪ್ರಕಾಶನೂ, ಒಳ್ಳೆಯ ದಾನಿಯೂ, (ಕರ್ಮಮಾಡುವವರಿಗೆ ಸುಲಭಪ್ರಾಪ್ಯನೂ) ಉಪದ್ರವರಹಿತನೂ, ದೇವತಾರೂಪನೂ ಆದ ನಿನ್ನನ್ನು ಹವಿಷ್ಪ್ರದಾನರೂಪ ಉಪಕಾರಕರ್ತೃಗಳೂ ಋತ್ವಿಗ್ರೂಪಮನುಜರೂ ಆದ ನಾವು ರಕ್ಷಣಾರ್ಥಿಗಳಾಗಿ ನಿನ್ನನ್ನು ಕರೆಯುತ್ತೇವೆ.

English Translation.

We your mortal friends have recourse for our protection to you the divine, the grandson of the waters, the auspicious, the resplendent, the accessible, the sinless.

ವಿಶೇಷ ವಿಷಯಗಳು.

**ಸಖಾಯಃ— ಸೋಮಾಜ್ಯಾದಿಹವಿಷ್ಪ್ರದಾನೇನ ಉಪಕಾರತ್ವಾತ್ ಮಿತ್ರಾಣಿ**— ಯಾಸ್ಕರು ಈ ಪದಕ್ಕೆ **ಸಮಾನಖ್ಯಾನಾಃ ಋತ್ವಿಜಃ** ಎಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಅಗ್ನಿಗೆ ಸೋಮ ಆಜ್ಯ ಇವೇ ಮೊದಲಾದ ಹವಿಸ್ಸುಗಳನ್ನು ಅರ್ಪಿಸುವುದರಿಂದ ಋತ್ವಿಜರು ಮಿತ್ರರ ಕಾರ್ಯವನ್ನು (ರಕ್ಷಣೆಯನ್ನು) ಆಚರಿಸುವ ಕಾರಣ ಅಗ್ನಿಗೆ ಮಿತ್ರರಾಗಿರುತ್ತಾರೆ ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಮರ್ತಾಸಃ—ಮನುಷ್ಯಾಃ ಋತ್ವಿಜಃ । ಮರ್ತ** ಶಬ್ದವು (ನಿ. ೩-೮) ಮನುಷ್ಯನಾಮಗಳಲ್ಲಿ ಉಕ್ತವಾಗಿರುವುದರಿಂದ **ಮನುಷ್ಯಾಃ ಋತ್ವಿಜಃ ವಯಂ** ಮನುಷ್ಯರಾದ ಋತ್ವಿಕ್ಕುಗಳು (ನಾವು) ಎಂದು ಅರ್ಥವನ್ನು ಹೇಳಿದ್ದಾರೆ.

**ಅಪಾಂನಪಾತಂ—ಅಪಾಂ ನಪ್ತಾರಂ** ಉದಕಗಳಿಗೆ ಮೊಮ್ಮಗನೆಂದು ಅರ್ಥ. **ಅಪಾನ್ನಪಾತ್ ತನೂನಪ್ತ್ರಾ ವ್ಯಾಖ್ಯಾತಃ** ಎಂದು ಯಾಸ್ಕರು ವಿವರಿಸಿ,

ಯೋ ಅನಿಧ್ಮೋ ದೀದಯದಪ್ಸ್ವ೧ ನ್ತರ್ಯಂ ವಿಪ್ರಾಸ ಈಳತೇ ಅಧ್ವರೇಷು ।
ಅಪಾಂ ನಪಾನ್ಮಧುಮತೀರಪೋ ದಾ ಯಾಭಿರಿಂದ್ರೋ ವಾವೃಧೇ ವೀರ್ಯಾಯ ॥
(ಋ. ಸಂ. ೧೦-೩೦-೪)

ಈ ಋಕ್ಕನ್ನು ಉದಹರಿಸಿ,

ತನೂನಪಾತ್ ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ ।
ಮನ್ಮಾನಿ ಧೀಭಿರುತ ಯಜ್ಞಮೃಂಧನ್ ದೇವತ್ರಾ ಚ ಕೃಣುಹ್ಯಧ್ವರಂ ನಃ ॥
(ಋ. ಸಂ. ೧೦-೧೧೦-೨)

ಈ ಋಕ್ಕಿನಲ್ಲಿರುವ ತನೂನಪಾತ್ ಎಂಬ ಪದಕ್ಕೆ ಯಾಸ್ಕರು **ತನೂನಪಾದಾಜ್ಯಮಿತಿ ಕಾತ್ಥಕ್ಯಃ ಅಗ್ನಿ ರಿತಿಶಾಕಪೂಣಿಃ** ಎಂದು ಕಾತ್ಥಕ್ಯರು ಮತ್ತು ಶಾಕಪೂಣಿ ಆಚಾರ್ಯರೆಂಬ ಇಬ್ಬರ ಮತಗಳನ್ನೂ ಹೇಳಿ **ಗೌರತ್ರ ತನುರುಚ್ಯತೇ, ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ।** ತನು ಎಂಬ ಪದಕ್ಕೆ **ಗೌಃ** (ಗೋವು) ಎಂದೂ ಗೋವಿನಿಂದ ಆಜ್ಯವು ಪಯಸ್ಸಿನ ಮೂಲಕ ಉತ್ಪನ್ನವಾಗುತ್ತದೆಯಾದ ಕಾರಣ ತನೂನಪಾತ್ ಎಂಬ ಪದಕ್ಕೆ ಆಜ್ಯವೆಂಬ ಅರ್ಥವನ್ನು ಹೇಳುವ ಕಾತ್ಥಕ್ಯರ ಮತದಲ್ಲಿ ಅಸ್ವಾರಸ್ಯವನ್ನು ಸೂಚಿಸಿ, **ಆಪೋಽತ್ರ ತನ್ವ ಉಚ್ಯಂತೇ, ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತೇ ಓಷಧಿವನಸ್ಪತಿಭ್ಯಃ ಏಷ ಜಾಯತೇ** ಎಂದು ವಿವರಿಸಿದ್ದಾರೆ. ದುರ್ಗಾಚಾರ್ಯರು **ನಪಾತ್ ಇತಿ ಅನನ್ತರಾಯಾಃ ಪ್ರಜಾಯಾಃ ನಾಮಧೇಯಂ**—ಪಿತೃವಿನಿಂದ ಉತ್ಪನ್ನನಾದವನು ಪುತ್ರನು, ಪುತ್ರನಿಂದ ಉತ್ಪನ್ನನಾದವನು ಅನಂತರನಾಗಿ ಪುತ್ರನಿಗಿಂತಲೂ ನಿಕೃಷ್ಟನಾಗಿರುವನು. ಆದ್ದರಿಂದ ತನು ಶಬ್ದಕ್ಕೆ ಗೋವು ಎಂದು ಅರ್ಥಮಾಡಿರುವವರ ಮತದಲ್ಲಿ ಗೋವಿನಿಂದ ಆಜ್ಯಾದಿಗಳೂ, ಆಜ್ಯಾದಿಗಳಿಂದ ಅಗ್ನಿಯೂ ಉತ್ಪನ್ನವಾಗುವುದೆಂಬ ಕಾತ್ಥಕ್ಯರ ಮತವನ್ನು ಯಾಸ್ಕರಿಗೆ ಸಮ್ಮತವಲ್ಲವೆಂದು ವರ್ಣಿಸಿ, ಉದಕಗಳು ಅಪ್ ಶಬ್ದಕ್ಕೆ ಅರ್ಥವಾಗಿರುವುದರಿಂದ ಉದಕಗಳು ಅಂತರಿಕ್ಷದಲ್ಲಿ ಹರಡಿರುತ್ತವೆ. ಈ ಉದಕಗಳಿಂದ ಓಷಧಿವನಸ್ಪತಿಗಳೂ ಇವುಗಳಿಂದ ಅಗ್ನಿಯೂ ಉಂಟಾಗುವ ಕಾರಣ ಅಗ್ನಿಯು ತನೂನಪಾತ್ ಎಂಬ ಶಬ್ದದಿಂದಲೂ ಅಪಾನ್ನಪಾತ್ ಎಂಬ ಶಬ್ದದಿಂದಲೂ ವ್ಯಪದಿಷ್ಟನಾಗುತ್ತಾನೆಂಬ ಶಾಕಪೂಣಿ ಆಚಾರ್ಯರ ಮತವನ್ನೂ ವಿವರಿಸಿದ್ದಾರೆ. ಇದರಿಂದ ಅಗ್ನಿಯು **ಅಪಾಂ ಪೌತ್ರ,** (ಮೊಮ್ಮಗನು) ಎಂದು ಅರ್ಥವು.

**ಸುಪ್ರತೂರ್ತಿಂ**—ಅಗ್ನಿಯು ಯಜ್ಞಾದಿಕರ್ಮಗಳನ್ನು ಆಚರಿಸುವವರಿಂದ ಸುಖವಾಗಿ ಉಪಾಸನೆ ಮಾಡಲು ಅರ್ಹನಾಗಿರುವಕಾರಣ **ಸುಪ್ರತರಣ**—ಯಜಮಾನರ ತೊಂದರೆಗಳನ್ನು ಪರಿಹರಿಸುವವನಾಗಿರುವನು ಎಂದು ವರ್ಣಿಸಿದೆ.

**ಸುಭಗಂ ಅನೇಹಸಂ ಸುದೀದಿತಿಂ ದೇವಂ ಊತಯೇ ವವೃಮಹೇ—ಶೋಭನಧನಯುಕ್ತಂ ಶೋಭನದೀಪ್ತಿಂ, ಉಪದ್ರವರಹಿತಂ ರಕ್ಷಣಾಯ ವೃಣೀಮಹೇ**—ಉತ್ತಮವಾದ ಧನವನ್ನು ಹೊಂದಿ ಅದನ್ನು ಯಜಮಾನರಿಗೆ ಕೊಡುವವನಾದ, ಮಂಗಳಕರವಾದ ಕಾಂತಿಯನ್ನು ಹೊಂದಿ ಪ್ರಕಾಶಿಸುವ, ಯಾವ ತೊಂದರೆಯೂ ಇಲ್ಲದಿರುವವನಾದ, ದೇವನಾದ ಅಗ್ನಿಯು ನಮ್ಮನ್ನು ರಕ್ಷಿಸುವುದಕ್ಕಾಗಿ ಋತ್ವಿಜರಾದ ನಾವುಗಳು ಅಗ್ನಿಯನ್ನು ವರಿಸುತ್ತೇವೆ ಎಂದು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ.

**ಸಖಾಯಃ**—ಖ್ಯಾ ಪ್ರಕಥನೇ ಧಾತು. **ಸಮಾನೇ ಖ್ಯಶ್ಚೋದಾತ್ತಃ** (ಉ. ಸು. ೪-೫೭೭) ಎಂಬುದರಿಂದ ಸಮಾನವೆಂಬುದು ಉಪಪದವಾಗಿರುವ ಈ ಧಾತುವಿಗೆ ಇಣ್ ಪ್ರತ್ಯಯ. **ಡಿತ್** ಎಂದು ಪೂರ್ವ

ಸೂತ್ರದಿಂದ ಅನುವೃತ್ತವಾಗುವುದರಿಂದ ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಅದರೊಡನೆ ಯಕಾರಕ್ಕೂ ಲೋಪ. **ಸಮಾನಸ್ಯ ಛಂದಸಿ** (ಪಾ. ಸೂ. ೬-೩-೭೪) ಎಂಬುದರಿಂದ ಸಮಾನವೆಂಬುದಕ್ಕೆ ಸಭಾವ. ಸಖ ಶಬ್ದವಾಗುತ್ತದೆ. ಉಪಪದಕ್ಕೆ ಉದಾತ್ತಸ್ವರ ಬರುತ್ತದೆ. ಇದಕ್ಕೆ ಜಸ್ ಪರವಾದಾಗ **ಸುಖ್ಯುರಸಂಬುದ್ಧೌ** (ಪಾ. ಸೂ. ೭-೧-೯೨) ಎಂಬುದರಿಂದ ಅದಕ್ಕೆ ಣಿದ್ವದ್ಭಾವ. **ಅಚೋಞ್ಣಿತಿ** ಎಂಬುದರಿಂದ ಇಕಾರಕ್ಕೆ ವೃದ್ಧಿ. ಅಯಾದೇಶ. ಆದ್ಯುದಾತ್ತವಾದ ಶಬ್ದವಾಗುತ್ತದೆ.

**ವವೃಮಹೇ**—ವೃಞ್ ಸಂಭಕ್ತೌ ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತಆತ್ಮನೇಪದೇ**—ಎಂಬುದರಿಂದ ಟಿಗೆ ಏತ್ವ. **ಕೃಸೃಭೃವೃ**—(ಪಾ. ಸೂ. ೭-೨-೧೩) ಎಂಬುದರಿಂದ ಇಡಾಗಮ ನಿಷೇಧಬರುತ್ತದೆ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮರ್ತಾಸಃ**—ಮೃಙ್ ಪ್ರಾಣತ್ಯಾಗೇ ಧಾತು. ಔಣಾದಿಕ ತನ್ ಪ್ರತ್ಯಯ ಬಂದಾಗ ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ ರಪರವಾಗಿ ಬರುತ್ತದೆ. **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ಊತಯೇ**—ಅವ ರಕ್ಷಣೇ ಧಾತು. **ಉದಾತ್ತ**—ಎಂದು ಅನುವೃತ್ತವಾಗುವಾಗ **ಊತಿಯೂತಿಜೂತಿ**—( ಪಾ. ಸೂ. ೩-೦-೯೭ ) ಕ್ತಿನ್ನಂತವಾಗಿ ನಿಪಾತಮಾಡಿರುವುದರಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಅಪಾಂ**—ಷಷ್ಠೀ ಬಹುವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸುಭಗಂ**—ಬಹುವ್ರೀಹಿಸಮಾಸವಾದಾಗ **ಆದ್ಯುದಾತ್ತಂ ದ್ವ್ಯಚ್‌ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತಸ್ವರ ಬರುತ್ತದೆ.

**ಸುಪ್ರತೂರ್ತಿಂ**—ಇಲ್ಲಿಯೂ ಬಹುವ್ರೀಹಿಸಮಾಸ. ಇದು ಕ್ರತ್ವಾದಿ ಗಣದಲ್ಲಿ ಸೇರಿರುವುದರಿಂದ **ಕ್ರತ್ವಾದಯಶ್ಚ**—(ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

ಕಾಯಮಾನೋ ವನಾ ತ್ವಂ ಯನ್ಮಾತೄರಜಗನ್ನಪಃ ।
ನ ತತ್ತೇ ಅಗ್ನೇ ಪ್ರಮೃಷೇ ನಿವರ್ತನಂ ಯದ್ದೂರೇ ಸನ್ನಿಹಾಭವಃ ॥ ೨ ॥

ಪದಪಾಠಃ

ಕಾಯಮಾನಃ । ವನಾ । ತ್ವಂ । ಯತ್ । ಮಾತೃಃ । ಅಜಗನ್ । ಅಪಃ ।

ನ । ತತ್ । ತೇ । ಅಗ್ನೇ । ಪ್ರಮೃಷೇ । ನಿವರ್ತನಂ । ಯತ್ । ದೂರೇ । ಸನ್ । ಇಹ । ಅಭವಃ ॥

ಸಾಯಣಭಾಷ್ಯಂ.

ಹೇ ಅಗ್ನೇ ವನಾ ಕಾನನಾನಿ ಕಾಯಮಾನಃ ಕಾಮಯಮಾನಸ್ತ್ವಂ ಯದ್ಯಸ್ಮಾತ್ಕಾರಣಾತ್ತಾನಿ ವಿಹಾಯ ಮಾತೃಃ ರಪೋ ಮಾತೃಭೂತಾ ಅಪೋಽಜಗನ್ । ಅಗಮಃ । ಗತವಾನಸಿ । ಅಪ್ಸು ಪ್ರವಿಷ್ಟತ್ವಾಚ್ಛಾಂತೋ ವರ್ತಸೇ । ತತ್ತಸ್ಮಾತ್ತೇ ತವ ನಿವರ್ತನಂ । ನಿತರಾಂ ತತ್ರೈವ ವರ್ತನಂ । ತೇನ ಚ ವಿನಾಶೋ ಲಕ್ಷ್ಯತೇ । ನ ವಿನಾಶೋ ನ ಪ್ರಮೃಷೇ । ನ ಪ್ರಮೃಷ್ಯತೇ । ನ ಸಹ್ಯತೇ । ಕಿಂತ ಇತ್ಯತ ಆಹ । ಯದ್ಯಸ್ಮಾತ್ಕಾರಣಾದ್ದೂರೇ ಸನ್ ಅದೃಶ್ಯತಯಾ ವರ್ತಮಾನಸ್ತ್ವಮಿಹಾಸ್ಮತ್ಸಂಬಂಧಿಷ್ವರಣಿರೂಪೇಷು ಕಾಷ್ಠೇಷ್ವಭವಃ । ಮಂಥನಾತ್ ಕ್ಷಣಮಾತ್ರೇಣಾಸ್ಮಾಕಂ ಸಮೀಪೇ ಭವಸಿ । ತಸ್ಮಾತ್ತವ ದೂರತೋ ವರ್ತನಮಸ್ಮಭ್ಯಂ ನ ರೋಚತೇ । ಅಸ್ಮಿನ್ನರ್ಥೇ ಯಾಸ್ಕಃ । ಕಾಯಮಾನಶ್ಚಾಯಮಾನಃ ಕಾಮಯಮಾನ ಇತಿ ವಾ । ವನಾನಿ ತ್ವಂ ಯನ್ಮಾತೃರಪೋಽಗಮ ಉಪಶಾಮ್ಯನ್ । ನ ತತ್ತೇ ಅಗ್ನೇ ಪ್ರಮೃಷ್ಯತೇ ನಿವರ್ತನಂ ದೂರೇ ಯತ್ಸನ್ನಿಹ ಭವಸಿ ಜಾಯಮಾನಃ । ನಿ. ೪-೧೪ । ಇತಿ ॥ ಕಾಯಮಾನಃ । ಕಮು ಕಾಂತೌ । ಕಮೇರ್ಣಿಙ್ ಲಟಃ ಶಾನಚ್ । ಮಕಾರಲೋಪಶ್ಛಾಂದಸಃ । ಅಜಗನ್ । ಗಮ್ಲೃ ಗತಾವಿತ್ಯಸ್ಯ ಲಙಿ ಬಹುಲಂ ಛಂದಸೀತಿ ಶಪಃ ಶ್ಲುಃ । ಹಲ್ಙ್ಯಾದಿನಾ ಸಿಲೋಪಃ । ಮೋ ನೋ ಧಾತೋರಿತಿ ನಕಾರಃ । ಯಚ್ಛಬ್ದಯೋಗಾದನಿಘಾತಃ । ಅಡಾಗಮಸ್ವರಃ । ಪ್ರಮೃಷೇ । ಮೃಷ ತಿತಿಕ್ಷಾಯಾಂ । ವ್ಯತ್ಯಯೇನ ಕರ್ಮಣಿ ತಙ್ಪ್ರತ್ಯಯಃ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಧಾತುಸ್ವರಃ । ಅಭವಃ । ಛಂದಸಿ ಲುಙ್ಲಙ್ಲಿಟ ಇತಿ ಲಡರ್ಥೇ ಲಙ್ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ.

(ಹೇ) ಅಗ್ನೇ—ಎಲೈ ಅಗ್ನಿಯೇ । ವನಾ—ವನಗಳನ್ನು । ಕಾಯಮಾನಃ—ಇಚ್ಛಿಸುವ । ತ್ವಂ—ನೀನು । ಯತ್—ಯಾವ ಕಾರಣದಿಂದ । ಮಾತೃಃ—(ನಿನಗೆ) ಮಾತೃಭೂತವಾದ । ಅಪಃ—ಉದಕಗಳನ್ನು (ಕುರಿತು) । ಅಜಗನ್—ಗಮಿಸಿದೆಯೋ (ಮತ್ತು) । ಯತ್—ಯಾವ ಕಾರಣದಿಂದ । ದೂರೇ ಸನ್—ದೂರದಲ್ಲಿ (ಉದಕದೊಳಗಡೆ ಅದೃಶ್ಯನಾಗಿ) ಇರುವ (ನೀನು) । ಇಹ ಇಲ್ಲಿ—(ನಮ್ಮ ಸಂಬಂಧವಾದ ಅರಣಿರೂಪ ಕಾಷ್ಠಗಳಲ್ಲಿ) । ಅಭವಃ—ಇರುತ್ತೀಯೋ । ತತ್—ಆ ಕಾರಣದಿಂದ । ತೇ—ನಿನ್ನ । ನಿವರ್ತನಂ—(ಉದಕದಲ್ಲಿ) ನಿತ್ಯವಾದ ಇರುವಿಕೆಯು (ವಿನಾಶವು) । ನ ಪ್ರಮೃಷೇ—ಸಹಿಸಲ್ಪಡುವುದಿಲ್ಲ.

ಭಾವಾರ್ಥ

ಎಲೈ ಅಗ್ನಿಯೇ, ವನದಲ್ಲಿರಬೇಕೆಂಬ ಇಚ್ಛೆಯುಳ್ಳ ನೀನು ಅವುಗಳನ್ನು ಬಿಟ್ಟು, ಉದಕವನ್ನು ಸೇರಿ ಶಾಂತನಾದೆ ಮತ್ತು ಹಾಗೆ ಉದಕದಲ್ಲಿ ಅದೃಶ್ಯನಾಗಿದ್ದರೂ, ನಮ್ಮ ಅರಣಿಗಳಲ್ಲಿ (ಮಥಿತನಾದಕೂಡಲೇ) ಕಾಣಿಸಿಕೊಳ್ಳುತ್ತೀಯೆ; ಆದುದರಿಂದ ನಿನ್ನ ಆ ದೂರದ (ಉದಕ ಮಧ್ಯದಲ್ಲಿ) ವಾಸವು ನಮಗೆ ರುಚಿಸುವುದಿಲ್ಲ.

## English Translation.

Desirous as you are of the forests since you have repaired to the maternal waters, Agni, your tarrying so far away is not to be endured; (in a moment) you are here with us.

### ವಿಶೇಷ ವಿಷಯಗಳು.

**ವನಾ—ಕಾನನಾನಿ ।** ವನಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨ ೧೫) ಉಕ್ತವಾಗಿದೆ. ಮತ್ತು— **ನಿಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ ।** ಇಲ್ಲಿ ವನಾ ಎಂಬ ಪದಕ್ಕೆ **ವನಾನಿ ಇತಿ ವಾ ವಧೇನೇತಿ ವಾ** ಎಂದು ಯಾಸ್ಕರು ವ್ಯಾಖ್ಯಾನವನ್ನು ಮಾಡಿರುವುದರಿಂದ ವನಾನಿ ಕಾಡುಗಳು ಎಂದು ಅರ್ಥವನ್ನು ಸಾಯಣರು ವಿವರಿಸಿ, **ಕಾಯಮಾನಃ** ಎಂಬ ಪದಕ್ಕೆ **ಕಾಮಯಮಾನಃ** ಅಪೇಕ್ಷಿಸುವವನು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಅಪಃ ಅಜಗನ್—ಮಾತೃಭೂತಾಃ ಅಪಃ ಗತವಾನಸಿ । ಅಪಾಂನಪಾತ್**—ಎಂಬ ಪದದಿಂದ ಅಗ್ನಿಗೆ ಉದಕವು ಮಾತೃಸ್ಥಾನವಾಗಿರುವುದನ್ನು ವಿವರಿಸಿದೆ. ಆದುದರಿಂದ ಅಗ್ನಿಯು ತನಗೆ ಮಾತೃವಿನಂತೆ ಉದಕದಿಂದ ಉತ್ಪನ್ನವಾದ ಓಷಧಿವನಸ್ಪತಿಗಳ ಮೂಲಕ ಪೋಷಕವಾಗಿರುವ ಉದಕಗಳನ್ನು ಪ್ರವೇಶಿಸಿರುವನು ಎಂದೂ **ಅಪ್ಸು ಪ್ರವಿಷ್ಟತ್ವಾತ್ ಶಾಂತೋಽಸಿ** ಉದಕಗಳಲ್ಲಿ ಅಗ್ನಿಯು ಇರುವವನಾದ್ದರಿಂದ ಉಪಶಾಂತಭಾವದಿಂದ ಇರುವನು ಎಂಬ ಅರ್ಥವನ್ನು ವಿವರಿಸಿದೆ.

**ನಿವರ್ತನಂ ನ ಪ್ರಮೃಷೇ—ನಿತರಾಂ ತತ್ರೈವ ವರ್ತನಂ ತೇನ ಚ ವಿನಾಶೋ ಲಕ್ಷ್ಯತೇ । ಸವಿನಾಶಃ ನ ಪ್ರಮೃಷ್ಯತೇ ನ ಸಹ್ಯತೇ ।** ವರ್ತನ ಶಬ್ದವು ವೃತು ಧಾತುವಿನಿಂದ ನಿಷ್ಪನ್ನವಾಗಿ ನಿ ಎಂಬ ಉಪಸರ್ಗದೊಡನೆ ಇಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ **ಉಪಸರ್ಗೇಣ ಧಾತ್ವರ್ಥೋ ಬಲಾದನ್ಯತ್ರ ನೀಯತೇ । ಪ್ರಹಾರಾಹಾರಸಂಹಾರವಿಹಾರಪರಿಹಾರವತ್ ।** ಎಂಬಲ್ಲಿ ಉಕ್ತವಾಗಿರುವಂತೆ ಇಲ್ಲಿ ನಿ ಎಂಬ ಉಪಸರ್ಗದೊಡನೆ ಇರುವ ವರ್ತನ ಶಬ್ದದಿಂದ ವಿನಾಶ ಎಂಬ ಅರ್ಥವೂ, ವಿನಾಶಕ್ಕೆ ಪೂರ್ವಭಾವಿಯಾಗಿ ಸ್ಥಿತಿಯೂ ಬೋಧಿತವಾಗುತ್ತದೆ. ಇದರಿಂದ ಅಗ್ನಿಯು ಉದಕಗಳಲ್ಲಿ ಇರುವಿಕೆಯು ಯಾಜ್ಞಿಕರಿಂದ ಸಹಿಸಲ್ಪಡುವುದಿಲ್ಲ ಎಂದರೆ ಅಗ್ನಿಯು ಅದೃಶ್ಯನಾಗುವುದು ಸಹಿಸತಕ್ಕದ್ದಾಗಿರುವುದಿಲ್ಲ.

**ಯತ್ ದೂರೇ ಸನ್ ಇಹ ಅಭವಃ । ಅದೃಶ್ಯತಯಾ ವರ್ತಮಾನಃ ಅಗ್ನಿಃ ಅಸ್ಮತ್ಸಂಬಂಧಿಷು ಅರಣಿರೂಪೇಷು ಕಾಷ್ಠೇಷು ಮಂಥನಾತ್ ಕ್ಷಣಮಾತ್ರೇಣ ಅಸ್ಮಾಕಂ ಸಮೀಪೇ ಭವತಿ ತಸ್ಮಾತ್ ಅಗ್ನೇಃ ದೂರತಃ ವರ್ತನಂ ಅಸ್ಮಾಕಂ ನ ರೋಚತೇ ।** ಅಗ್ನಿಯು ಉದಕಗಳಲ್ಲಿ ಅದೃಶ್ಯರೂಪದಿಂದ (ಕಣ್ಣಿಗೆ ಕಾಣದಿರುವ ರೀತಿಯಿಂದ) ಇರುವುದು ದೂರದಲ್ಲಿರುವ ಪ್ರಕಾರವೆಂದೂ- ಯಜ್ಞಮಾಡುವವರ ಅರಣಿಗಳಲ್ಲಿ ಮಥನ ಮಾಡುವುದರಿಂದ ಆಕ್ಷಣದಲ್ಲಿಯೇ ಪ್ರತ್ಯಕ್ಷವಾಗಿ ಕಾಣಿಸುವುದು, ಅಗ್ನಿಯು ಸಮೀಪದಲ್ಲಿ ಇರತಕ್ಕ ರೀತಿಯೆಂದೂ ಅರ್ಥಮಾಡಿದೆ. ಇವೆರಡರಲ್ಲಿ ಅಗ್ನಿಯು ದೂರದಲ್ಲಿರುವುದಕ್ಕಿಂತ ಸಮೀಪಗತನಾಗಿರುವುದು ಯಜ್ಞಮಾಡುವವರಿಗೆ ಇಷ್ಟವೆಂದು ವಿವರಿಸಿದೆ. ಯಾಸ್ಕರು ಇದೇ ಋಕ್ಕನ್ನು ನಿರುಕ್ತದಲ್ಲಿ ಉದಹರಿಸಿ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

ಶಾಯಮಾನಶ್ಶಾಯಮಾನಃ ಕಾಮಯಮಾನ ಇತಿ ವಾ ವನಾನಿ ತ್ವಂ ಯೇನ್ನಾತ್ವಾರ-
ಪೋಽಗಮ ಉಪಶಾಮ್ಯನ್ ನ ತತ್ತೇ ಅಗ್ನೇ ಪ್ರಮೃಷ್ಯತೇ ನಿವರ್ತನಂ ದೂರೇ
ಯತ್ಸನ್ನಿಹ ಭವಸಿ ಜಾಯಮಾನಃ ||

(ನಿ. ೪-೧೪)

ಸಾಯಣರು ನಿರುಕ್ತದಲ್ಲಿ ಉಕ್ತವಾಗಿರುವ ಈ ಅಭಿಪ್ರಾಯವನ್ನೇ ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಶಾಯಮಾನಃ**— ಶಮು ಉಪಶಮೇ ಧಾತು. **ಕಮೇರ್ಣಿಙ್** (ಪಾ. ಸೂ. ೩-೧-೩೦) ಎಂಬುದರಿಂದ ಇದಕ್ಕೆ ಸ್ವಾರ್ಥದಲ್ಲಿ ಣಿಙ್ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತು ಉಪಧೆಗೆ ವೃದ್ಧಿ. **ಸನಾದ್ಯಂತಾಧಾತವಃ** ಎಂಬುದರಿಂದ ಣಿಜಂತಕ್ಕೆ ಧಾತುಸಂಜ್ಞಾ. ಇದರಮೇಲೆ **ಲಟ್** ಬಂದಾಗ ಅದಕ್ಕೆ ಶಾನಚಾದೇಶ. ಶಪ್ ನಿಮಿತ್ತವಾಗಿ ಣಿಜಿನ ಇಕಾರಕ್ಕೆ ಗುಣ, ಅಯಾದೇಶ. **ಆನೇ-ಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಛಾಂದಸವಾಗಿ ಧಾತು ಮಕಾರಕ್ಕೆ ಲೋಪ. **ತಾಸ್ಯನುದಾತ್ತೇತ್**— ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತು-ಸ್ವರ ಉಳಿಯುತ್ತದೆ.

**ವನಾ**— ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ

**ಅಜಗನ್**— ಗಮ್ಲೃ ಗತೌ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಹಲಂತದ ಪರದಲ್ಲಿ ತಿಪ್ ಬಂದುದರಿಂದ **ಹಲ್ಙ್ಯಾಭ್ಯೋ ದೀರ್ಘಾತ್**— ಎಂಬುದರಿಂದ ಅದಕ್ಕೆ ಲೋಪ. ಆಗ ಪದಾಂತದಲ್ಲಿ ಮಕಾರ ಬಂದುದರಿಂದ **ಮೋನೋ ಧಾತೋಃ** (ಪಾ. ಸೂ. ೮-೨-೬೪) ಎಂಬುದರಿಂದ ಅದಕ್ಕೆ ನಕಾರಾದೇಶ. ಅಂಗಕ್ಕೆ ಅಡಾಗಮ. ಅಜಗನ್ ಎಂದು ರೂಪವಾಗುತ್ತದೆ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಪ್ರಮೃಷ್ಯತೇ**— ಮೃಷ ತಿತಿಕ್ಷಾಯಾಂ ಧಾತು. ಕರ್ಮಣಿಯಲ್ಲಿ **ಲಟ್** ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. **ಟಿತ ಆತ್ಮನೇ**— ಎಂಬುದರಿಂದ ಏತ್ವ. ವ್ಯತ್ಯಯದಿಂದ ಯಕ್ ಬರುವುದಿಲ್ಲ. **ಲೋಪಸ್ತ ಆ-ತ್ಮನೇ ಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯದ ಅಕಾರಕ್ಕೆ ಲೋಪ. ನ ಎಂಬುದರ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ** (ಪಾ ಸೂ. ೮-೧-೭೧) ಎಂಬುದರಿಂದ ಗತಿಗೆ (ಪ್ರ) ಅನುದಾತ್ತಸ್ವರ ಬರುತ್ತದೆ.

**ನಿವರ್ತನಂ**— ವೃತು ವರ್ತನೇ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಭವಃ**— ಭೂ ಸತ್ತಾಯಾಂ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬು

**ದರಿಂದ ವರ್ತಮಾನಾರ್ಥದಲ್ಲಿ ಲಙ್.** ಮಧ್ಯಮಪುರುಷ ಏಕವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಟ್‌ಸ್ವರದಿಂದ ಆದ್ಯುದಾತ್ತವಾಗುತ್ತದೆ.

ಸಂಹಿತಾಪಾಠಃ

ಅತಿ ತೃಷ್ಟಂ ವವಕ್ಷಿಥಾಥೈವ ಸುಮನಾ ಅಸಿ ।

ಪ್ರಪ್ರಾನ್ಯೇ ಯಂತಿ ಪರ್ಯನ್ಯ ಆಸತೇ ಯೇಷಾಂ ಸಖ್ಯೇ ಅಸಿ ಶ್ರಿತಃ ॥

ಪದಪಾಠಃ

**ಅತಿ । ತೃಷ್ಟಂ । ವವಕ್ಷಿಥ । ಅಥ । ಏವ । ಸುಽಮನಾಃ । ಅಸಿ ।**

**ಪ್ರಽಪ್ರ । ಅನ್ಯೇ । ಯಂತಿ । ಪರಿ । ಅನ್ಯೇ । ಆಸತೇ । ಯೇಷಾಂ । ಸಖ್ಯೇ । ಅಸಿ । ಶ್ರಿತಃ ॥ ೩ ॥**

ಸಾಯಣಭಾಷ್ಯಂ.

ಹೇ ಅಗ್ನೇ ತೃಷ್ಟಂ ಸ್ತೋತುಸ್ತೃಷ್ಣಾಭಿಲಾಷಂ ತದುಚಿತಫಲಪ್ರದಾನೇನ ಸಫಲಂ ಕರ್ತುಮತಿವವಕ್ಷಿಥ । ಅತಿಶಯೇನ ವೋಢುಮಿಚ್ಛಸಿ । ಅಥೈವ ಅಥಾಪಿ ತ್ವಂ ಸುಮನಾ ಅಸಿ । ಸಂತುಷ್ಟಮನಸ್ಕೋ ವರ್ತಸೇ । ಕಿಂಚ । ತ್ವಂ ಯೇಷಾಂ ಷೋಡಶಾನಾಮೃತ್ವಿಜಾಂ ಸಖ್ಯೇ ಮೈತ್ರೇ ಶ್ರಿತೋಽಸಿ ವರ್ತಸೇ ತೇಷಾಂ ಮಧ್ಯೇಽನ್ಯೇಽಧ್ವರ್ಯುಪ್ರಭೃತಯೋ ದ್ವಾದಶರ್ತ್ವಿಜಃ ಪ್ರಪ್ರಯಂತಿ । ಪ್ರಕರ್ಷೇಣ ಹೋತುಂ ಗಚ್ಛಂತಿ । ಅನ್ಯ ಉದ್ಗಾತೃಪ್ರಭೃತಯಶ್ಚತ್ವಾರಃ ಪರ್ಯಾಸತೇ । ಪರಿತ ಆಸೀನಾ ವರ್ತಂತೇ ॥ ವವಕ್ಷಿಥ । ವಹ ಪ್ರಾಪಣ ಇತ್ಯಸ್ಯ ಸನಿ ರೂಪಂ । ಅಭ್ಯಾಸಸ್ಯ ಸನ್ಯತ ಇತೀತ್ವಾಭಾವಶ್ಛಾಂದಸಃ । ತಸ್ಮಾದ್ವರ್ತಮಾನೇ ಲಿಟ್ । ಥಲ ಆರ್ಧಧಾತುಕಸ್ಯೇಡ್ವಲಾದೇರಿತೀಟ್ । ಕಾಸ್ಪ್ರತ್ಯಯಾದಾಮಿತ್ಯಾಮ್ ನ ಭವತಿ ಮಂತ್ರತ್ವಾತ್ । ನಿಘಾತಃ । ಪ್ರಪ್ರ । ಪ್ರಸಮುಪೋದ ಇತಿ ದ್ವಿರ್ವಚನಂ । ಯಂತಿ । ಇಣ್ ಗತಾವಿತ್ಯಸ್ಯ ಲಟಿ ರೂಪಂ । ಏಕಾನ್ಯಾಭ್ಯಾಂ ಸಮರ್ಥಾಭ್ಯಾಮಿತ್ಯನ್ಯಶಬ್ದಯೋಗಾತ್ಪೂರ್ವಸ್ಯ ನಿಘಾತಾಭಾವಃ । ಆಸತೇ । ಆಸ ಉಪವೇಶನೇ । ಉತ್ತರತ್ವಾನ್ನಿಘಾತಃ । ಅಸಿ । ಅಸ ಭುವಿ । ತಾಸಸ್ತ್ಯೋರ್ಲೋಪ ಇತಿ ಸಕಾರಲೋಪಃ । ಯದ್ವೃತ್ತಯೋಗಾನ್ನ ನಿಹನ್ಯತೇ ॥

ಪ್ರತಿಪದಾರ್ಥ

(ಹೇ ಅಗ್ನೇ—ಎಲೈ ಅಗ್ನಿಯೇ) । **ತೃಷ್ಟಂ**—ಸ್ತೋತೃವಿನ ತೃಷ್ಣೆ (ಅಭಿಲಾಷೆ)ಯನ್ನು ಸಫಲ ಮಾಡಲು) । **ಅತಿ ವವಕ್ಷಿಥ**—ಹೆಚ್ಚಾಗಿ ವಹಿಸಿ ತರಲು ಇಚ್ಛಿಸುತ್ತೀಯೆ । **ಅಥ ಏವ**—ಅದೇ ಕಾರಣದಿಂದಲೇ । **ಸುಮನಾಃ ಅಸಿ**—ಸಂತುಷ್ಟಮನಸ್ಕನಾಗಿದ್ದೀಯೇ ; (ಮತ್ತು) । **ಯೇಷಾಂ**—ಯಾವ ಷೋಡಶ ಋತ್ವಿಜರ । **ಸಖ್ಯೇ**—ಮಿತ್ರತ್ವದಲ್ಲಿ । **ಶ್ರಿತಃ ಅಸಿ**—ಆಶ್ರಯಿಸಿಕೊಂಡು ಇದ್ದೀಯೋ । (**ತೇಷಾಂ**—ಅವರಲ್ಲಿ)

ಅನ್ಯೇ—ಕೆಲವರು (ಅಧ್ವರ್ಯುರ್ಪ್ರಭೃತಿ ದ್ವಾದಶ ಋತ್ವಿಜರು) । ಪ್ರ ಪ್ರ ಯಂತಿ—(ಹೋಮ ಮಾಡಲು) ಗಮಿಸುತ್ತಾರೆ । ಅನ್ಯೇ—(ಮತ್ತೆ) ಕೆಲವರು (ಉದ್ಗಾತ್ರಾದಿ ನಾಲ್ವರು) । ಪರಿ ಆಸತೇ—ಸುತ್ತಲೂ ಆಸೀನ ರಾಗಿದಾರೆ.

ಭಾವಾರ್ಥ.

ಎಲೈ ಅಗ್ನಿಯೇ, ಸ್ತೋತೃವಿನ ಅಭಿಲಾಷೆಯನ್ನು ಪೂರ್ಣಮಾಡುವುದಕ್ಕೋಸ್ಕರಲೇ ಸಂತುಷ್ಟಮನಸ್ಕನಾಗಿದ್ದೀಯೆ ; ನಿನ್ನಿಂದ ಮಿತ್ರರೆಂದು ಪರಿಗಣಿತರಾದ ಷೋಡಶಋತ್ವಿಜರಲ್ಲಿ ಅಧ್ವರ್ಯ್ವಾದಿ ದ್ವಾದಶಋತ್ವಿಜರು ಹೆಚ್ಚಾಗಿ ಹೋಮಮಾಡಲು ಹೊರಟಿದ್ದಾರೆ. ಮತ್ತು ಉಳಿದ (ಉದ್ಗಾತ್ರಾದಿ) ನಾಲ್ವರು ಸುತ್ತಲೂ ಆಸೀನರಾಗಿದಾರೆ. (ಕುಳಿತಿದ್ದಾರೆ)

English Translation.

you wish exceedingly to convey satisfaction (to your worshipper) and are thereto well-disposed ; of those in whose friendship you are cherished some precede whilst others sit around.

ವಿಶೇಷ ವಿಷಯಗಳು.

ತೃಷ್ಟಂ ವವಕ್ಷಿಥ— ಈ ವಾಕ್ಯದಿಂದ ಅಗ್ನಿಯನ್ನು ಸಂಬೋಧಿಸಿ, ಅಗ್ನಿಯು—ಸ್ತೋತುಃ ತೃಷ್ಣಾಭಿಲಾಷಂ ಸಫಲಂ ಕರ್ತುಂ ತತ್ತದುಚಿತಫಲಪ್ರದಾನೇನ ಅತಿಶಯೇನ ವೋಢುಮಿಚ್ಛಸಿ । ತನ್ನನ್ನು ಸ್ತುತಿಮಾಡುವ ಯಜಮಾನನ ಅಭಿಲಾಷೆಗೆ ಅನುಸಾರವಾದ ಫಲವನ್ನು ಕೊಡುವುದಕ್ಕಾಗಿಯೂ, ಯಜಮಾನನನ್ನು ಪ್ರಯೋಜನವುಳ್ಳವನಾಗಿರುವಂತೆ ಮಾಡುವುದಕ್ಕಾಗಿಯೂ, ಯಜಮಾನನ ವಿಷಯದಲ್ಲಿರುವ ತನ್ನ ಪ್ರೀತಿಯನ್ನು ತೋರಿಸುವುದಕ್ಕಾಗಿಯೂ, ಪ್ರಭೂತವಾದ ಹವಿಸ್ಸನ್ನು ಅವನಿಂದ ವಹಿಸಲು ಇಚ್ಛೆಯುಳ್ಳವನಾಗಿ ಇರುವವನು ಎಂದು ವರ್ಣಿಸಿದೆ. ಮತ್ತು ಸುಮನಾ ಅಸಿ ಯಜಮಾನನ ವಿಷಯದಲ್ಲಿ ಸಂತೋಷದಿಂದ ಇರುವ ಮನಸ್ಸುಳ್ಳವನಾಗಿರುವನು ಎಂದೂ ವಿವರಿಸಿದೆ.

ಅನ್ಯೇ ಪ್ರಯಂತಿ ಅನ್ಯೇ ಪರಿ ಆಸತೇ—ಅಗ್ನಿಯು ಯಜ್ಞದಲ್ಲಿ ಋತ್ವಿಜರಾದ ಹೋತೃವೇ ಮೊದಲಾದ ಹದಿನಾರು ಜನರಲ್ಲಿಯೂ ತನ್ನನ್ನು ಸೇವಿಸುವ ಕಾರಣದಿಂದ ಪ್ರೀತಿಯುಳ್ಳವನಾಗಿರುತ್ತಾನೆ. ಅವರಲ್ಲಿ ಅಧ್ವರ್ಯುರ್ಪ್ರಭೃತಯೋ ದ್ವಾದಶ ಋತ್ವಿಜಃ ಪ್ರಕರ್ಷೇಣ ಹೋತುಂ ಗಚ್ಛಂತಿ—ಅಧ್ವರ್ಯುವೇ ಮೊದಲಾದ ಹನ್ನೆರಡು ಜನ ಋತ್ವಿಜರು ಅಗ್ನಿಗೆ ತೃಪ್ತಿಯನ್ನುಂಟುಮಾಡಲು ಹೋಮಮಾಡಿ, ಹವಿಸ್ಸನ್ನು ಅರ್ಪಿಸಲು ಸಿದ್ಧರಾಗಿರುತ್ತಾರೆ. ಅನ್ಯೇ ಉದ್ಗಾತೃಪ್ರಭೃತಯಃ ಚತ್ವಾರಃ ಪರಿತ ಆಸೀನಾ ವರ್ತಂತೇ-ಉದ್ಗಾತೃವೇ ಮೊದಲಾದ ನಾಲ್ಕು ಜನ ಋತ್ವಿಜರು ಅಗ್ನಿಯನ್ನು ಸ್ತುತಿಸುವವರಾಗಿ ಯಾಗಶಾಲೆಯಲ್ಲಿ ಅಗ್ನಿಯ ಸುತ್ತಲೂ ಕುಳಿತು ಸ್ತುತಿಸಲು ಸಿದ್ಧರಾಗಿದ್ದಾರೆ ಎಂದು ಯಜ್ಞಕ್ಕೆ ಸಂಬಂಧಿಸಿದ ಋತ್ವಿಕ್ಕುಗಳು ಆಚರಿಸುವ ಕರ್ತವ್ಯವನ್ನೂ ಇಲ್ಲಿ ಸಂಕ್ಷೇಪವಾಗಿ ಸೂಚಿಸಿದೆ.

ಸಖ್ಯೇ—ಮಿತ್ರತ್ವೇ । ಸ್ನೇಹಭಾವವೆಂದು ಅರ್ಥ. ನಿರುಕ್ತಕಾರರು—

ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।
ಅತ್ರಾ ಸಖಾಯಸ್ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥
(ಋ. ಸಂ. ೧೦-೭೧-೨)

ಈ ಋಕ್ಕಿನಲ್ಲಿ ಸಖಾಯಃ ಸಖ್ಯಾನಿ ಸಂಜಾನತೇ -ಸ್ನೇಹಿತರು ಸ್ನೇಹಭಾವವನ್ನು ತಿಳಿಯುವರು ಎಂದು ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು— ಸಮಾನಖ್ಯಾನಾಃ ಸಮಾನಖ್ಯಾನಾನಾಮೇವ ಸಖಾಯಃ, ವೈಯಾಕರಣಾನಾಂ ವೈಯಾಕರಣಾ ಏವ ನೈರುಕ್ತಾನಾಂ ನೈರುಕ್ತಾ ಏವ ಸಖಿಭಾವಾನ್ ಸಂಜಾನತೇ ವಿಜ್ಞಾನಾನಿ ಸಂಜಾನತೇ ಇತರೇತರಸ್ಯ ಯೋ ವಿಜ್ಞಾನಪ್ರಕರ್ಷಃ ತಂ ಜಾನತೇ । ಒಂದೇ ವಿಧವಾದ ಜ್ಞಾನವನ್ನು ಹೊಂದಿರುವವರು ಅವರಂತೆಯೇ ನಿಪುಣರಾದವರಲ್ಲಿ ಸ್ನೇಹದಿಂದ ಇರುವರು. ವ್ಯಾಕರಣ ಶಾಸ್ತ್ರವನ್ನು ತಿಳಿದವರು ವ್ಯಾಕರಣವನ್ನು ತಿಳಿದವರಲ್ಲಿಯೂ ನಿರುಕ್ತವನ್ನು ಬಲ್ಲವರು ನಿರುಕ್ತವನ್ನು ತಿಳಿದಿರುವವರಲ್ಲಿಯೂ ಅವರವರ ಜ್ಞಾನಪ್ರಕರ್ಷವನ್ನು ತಿಳಿಯುವರು. ಇದರಿಂದ ಅವರವರಲ್ಲಿ ಪ್ರೀತಿಯು ಉಂಟಾಗಿರುವುದು. ಇದರಂತೆಯೇ ಅಗ್ನಿಯೂ ಹೋತೃವೆಂದು ಪ್ರಸಿದ್ಧನಾಗಿರುವುದರಿಂದ ಋತ್ವಿಜರಲ್ಲಿ ಸ್ನೇಹದಿಂದ ಇರುವನು ಎಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

**ವವಕ್ಷಿಥ**— ವಹ ಪ್ರಾಪಣೇ ಧಾತು. **ಧಾತೋಃ ಕರ್ಮಣಃ**—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. ಛಾಂದಸವಾಗಿ ಸನ್ಯತಃ ಎಂಬುದರಿಂದ ಬರಬೇಕಾದ ಇತ್ವವು ಇಲ್ಲಿ ಅಭ್ಯಾಸಕ್ಕೆ ಬರುವುದಿಲ್ಲ. **ಹೋಢಃ** ಸೂತ್ರದಿಂದ ಹಕಾರಕ್ಕೆ ಢತ್ವ **ಷಢೋಃ ಕಃಸಿ** ಎಂಬುದರಿಂದ ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ. ವವಕ್ಷ ಎಂಬ ಸನ್ನಂತವು **ಸನಾದ್ಯಂತಾಧಾತವಃ** ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದಿದಾಗ ಅದಕ್ಕೆ ಲಿಟ್. ಮಧ್ಯಮ ಪುರುಷ ಏಕವಚನದ ಸಿಪಿಗೆ **ಪರಸ್ಮೈಪದಾನಾಂ** ಎಂಬುದರಿಂದ ಅದಕ್ಕೆ ಥಲಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಅದಕ್ಕೆ ಇಡಾಗಮ. ಪ್ರತ್ಯಯಾಂತವಾದರೂ **ಕಾಸ್-ಪ್ರತ್ಯಯಾದಾಮಮಂತ್ರೇಲಿಟಿ** (ಪಾ. ಸೂ. ೩-೧-೩೫) ಎಂಬಲ್ಲಿ ಅಮಂತ್ರೇ ಎಂದು ಛಂದಸ್ಸಿನಲ್ಲಿ ನಿಷೇಧ ಮಾಡಿರುವುದರಿಂದ ಆಮ್ ಬರುವುದಿಲ್ಲ. **ಅತೋಲೋಪಃ** ಎಂಬುದರಿಂದ ಸನಿನ ಅಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಮನಾಃ**—ಶೋಭನಂ ಮನಃ ಯಸ್ಯ ಸಃ. ಅಸಂತವಾದ ಉತ್ತರಪದವಿರುವುದರಿಂದ **ಸೋರ್ಮನಸೀ**—(ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಪ್ರಪ್ರ** – ಪಾದಪೂರಣದಲ್ಲಿ ಪ್ರ ಎಂಬುವಕ್ಕೆ **ಪ್ರಸಮುಪೋದಃ** (ಪಾ. ಸೂ. ೮-೧-೬) ಎಂಬುದರಿಂದ ದ್ವಿರ್ವಚನ ಬರುತ್ತದೆ. **ಅನುದಾತ್ತಂಚ** (ಪಾ. ಸೂ. ೮-೧-೩) ಎಂಬುದರಿಂದ ಪರಕ್ಕೆ ಆಮ್ರೇಡಿತಸಂಜ್ಞೆ ಬರುವಾಗ ಅದು ಉದಾತ್ತವಾಗುತ್ತದೆ.

**ಯಂತಿ**— ಇಣ್ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. ಶಪಿಗೆ ಲುಕ್. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ. ಅನ್ಯ ಶಬ್ದದ ಯೋಗವಿರುವುದರಿಂದ **ಏಕಾನ್ಯಾಭ್ಯಾಂಸಮರ್ಥಾಭ್ಯಾಮ್** (ಪಾ. ಸೂ. ೮-೧-೬೫) ಎಂಬುದರಿಂದ ತಿಙಂತನಿಘಾತಸ್ವರಪ್ರತಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಆಸತೇ**—ಆಸ ಉಪವೇಶನೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅನ್ಯ ಶಬ್ದಯೋಗವಿದ್ದರೂ ಉತ್ತರದಲ್ಲಿರುವುದರಿಂದ ನಿಘಾತಪ್ರತಿಷೇಧ ಬರುವುದಿಲ್ಲ. **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

ಅಸಿ—ಅಸ ಭುವಿ ಧಾತು ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಎಂಬುದರಿಂದ ಧಾತುವಿನ ಸಕಾರಕ್ಕೆ ಲೋಪ. ಯಚ್ಛಬ್ದಸಂಬಂಧವಿರುವುದರಿಂದ ಸರ್ವಾನುದಾತ್ತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ಸಂಹಿತಾಪಾಠಃ

ಈಯಿವಾಂಸಮತಿ ಸ್ರಿಧಃ ಶಶ್ವತೀರತಿ ಸಶ್ಚತಃ ।
ಅನ್ವೀಮವಿಂದನ್ನಿಚಿರಾಸೋ ಅದ್ರುಹೋಽಪ್ಸು ಸಿಂಹಮಿವ ಶ್ರಿತಂ ॥೪॥

ಪದಪಾಠಃ

ಈಯಿಽವಾಂಸಂ । ಅತಿ । ಸ್ರಿಧಃ । ಶಶ್ವತೀಃ । ಅತಿ । ಸಶ್ಚತಃ ।
ಅನು । ಈಂ । ಅವಿಂದನ್ । ನಿಽಚಿರಾಸಃ । ಅದ್ರುಹಃ । ಅಪ್ಽಸು । ಸಿಂಹಂಽಇವ । ಶ್ರಿತಂ ॥

ಸಾಯಣಭಾಷ್ಯಂ.

ಹೇ ಅಗ್ನೇ ಅದ್ರುಹೋಽದ್ರೋಗ್ಧಾರೋ ನಿಚಿರಾಸೋ ನಿತರಾಂ ಚಿರಾಸಶ್ಚಿರಂತನಾ ವಿಶ್ವೇ ದೇವಾಃ ಸ್ರಿಧಃ ಶೋಷಕಾಞ್ಛತ್ರೂನ್ಬಲೇನಾತಿಕ್ರಮ್ಯೇಯಿವಾಂಸಂ ಗಚ್ಛಂತಂ ಶಶ್ವತೀರ್ಬಹ್ವೀಃ ಸಶ್ಚತಃ ಸಂಗತಿಕಾರಿಣೀಃ ಸೇನಾಶ್ಚಾತ್ಯತಿಕ್ರಮ್ಯ ಗಚ್ಛಂತಮಪ್ಸು ಶ್ರಿತಂ ತಿರೋಹಿತಮತ ಏವ ಸಿಂಹಮಿವ ಗುಹಾಪ್ರವಿಷ್ಟಂ ಸಿಂಹಮಿವ ಭೀಮಮೀಮೇನಂ ತ್ವಾಮನ್ವವಿಂದನ್ । ಅನುಗಮ್ಯಾಲಭಂತ ॥ ಈಯಿವಾಂಸಂ । ಇಣ್ ಗತಾವಿತ್ಯಸ್ಯ ಕ್ವಸಾವುಪೇಯಿವಾನನಾಶ್ವಾನನೂಚಾನಶ್ಚ । ಪಾ. ೩-೨-೧೦೯ । ಇತಿ ನಿಪಾತಿತಃ । ಪ್ರತ್ಯಯಸ್ವರಃ । ಸ್ರಿಧಃ । ಸ್ರಿಧೇಃ ಕ್ಷಯಾರ್ಥಸ್ಯ ಶೋಷಣಾರ್ಥಸ್ಯ ವಾ ಕ್ವಿಪ್ ಚೇತಿ ಕ್ವಿಪ್ । ಧಾತುಸ್ವರಃ । ಸಶ್ಚತಃ । ಷಸ್ಜ ಗತೌ । ಜಕಾರಸ್ಯ ವ್ಯತ್ಯಯೇನ ಚಕಾರಃ । ಲಟಃ ಶತ್ರಾದೇಶಃ । ಪ್ರತ್ಯಯಸ್ವರಃ । ಅವಿಂದನ್ । ವಿದ್ಲೃ ಲಾಭ ಇತ್ಯಸ್ಯ ಲಙಿ ರೂಪಂ । ನಿಚಿರಾಸಃ । ನಿತರಾಂ ಚಿರಾಃ । ಆಜ್ಜಸೇರಸುಗಿತ್ಯಸುಕ್ । ಸಮಾಸಸ್ವರಃ । ಅದ್ರುಹಃ । ದ್ರುಹ ಜಿಘಾಂಸಾಯಾಂ । ಸಂಪದಾದಿತ್ವಾದ್ಭಾವೇ ಕ್ವಿಪ್ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಶ್ರಿತಂ । ಶ್ರಿಞ್ ಸೇವಾಯಾಮಿತ್ಯಸ್ಯ ಶ್ರ್ಯುಕಃ ಕಿತೀತೀಟ್ಪ್ರತಿಷೇಧಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ.

**(ಹೇ ಅಗ್ನೇ**—ಎಲೈ ಅಗ್ನಿಯೇ) । **ಅದ್ರುಹಃ**—ದ್ವೇಷಿಗಳಲ್ಲದಿರುವವರೂ (ಉಪಕಾರಿಗಳೂ) । **ನಿಚಿರಾಸಃ**—ಚಿರಂತನರೂ ಆದ ದೇವತೆಗಳು । **ಸ್ರಿಧಃ**—ಶೋಷಕರಾದ ಶತ್ರುಗಳನ್ನು । **ಈಯಿವಾಂಸಂ**—(ಬಲದಿಂದ ಅತಿಕ್ರಮಿಸಿ)ಹೋಗುವವನೂ । **ಶಶ್ವತೀಃ**—ಅಸಂಖ್ಯಾತವಾದ ಮತ್ತು ।**ಸಶ್ಚತಃ**—(ಏಕತ್ರ)ಸಂಗತವಾದ ಸೇನೆಗಳನ್ನೂ । **ಅತಿ**—ಅತಿಕ್ರಮಿಸಿ ಹೋಗುವವನೂ । **ಅಪ್ಸು**—ಉದಕಗಳಲ್ಲಿ । **ಶ್ರಿತಂ**—ನೆಲೆಸಿರುವವನೂ । **ಸಿಂಹಂ ಇವ**— (ಆದುದರಿಂದಲೇ ಗುಹಾಶ್ರಿತವಾದ) ಸಿಂಹದಂತೆ ಇರುವವನೂ ಆದ । **ಈಂ**—ನಿನ್ನನ್ನು । **ಅನು ಅವಿಂದನ್**—ಹಿಂಬಾಲಿಸಿ ಬಂದು ಪಡೆದರು.

ಭಾವಾರ್ಥ,

ಎಲೈ ಅಗ್ನಿಯೇ, ಉಪಕಾರಿಗಳೂ, ಚಿರಂತನರೂ ಆದ ದೇವತೆಗಳೆಲ್ಲರೂ, ಏಕತ್ರಸಂಗತವಾದ ಶತ್ರುಗಳ ಅಸಂಖ್ಯಾತ ಸೇನೆಗಳನ್ನು ಎದುರಿಸುವವನೂ, ಸಿಂಹವು ಗುಹೆಯನ್ನಾಶ್ರಯಿಸಿರುವಂತೆ, ಉದಕಗಳಲ್ಲಿ ನಿಗೂಢನೂ ಆದ ನಿನ್ನನ್ನು ಹುಡುಕಿ, ಕಡೆಗೆ ಪ್ರಾಪ್ತರಾದರು. (ನಿನ್ನ ಸಮೀಪಕ್ಕೆ ಬಂದರು).

English Translation.

The benignant and long-lived deities have discovered you, Agni, when required to go against their constant and assembled foes, hidden in the waters like a lion (in a cave).

ವಿಶೇಷವಿಷಯಗಳು

**ಅದ್ರುಹಃ**—**ಅದ್ರೋಗ್ಧಾರಃ** ಇತರರಿಗೆ ಕೆಡಕನ್ನು ಮಾಡುವ ಬುದ್ಧಿಯಿಲ್ಲದವರೆಂದು ಅರ್ಥ. ನಿರುಕ್ತಕಾರರು,

**ಆ ವಾಮುಪಸ್ಥಮದ್ರುಹಾ ದೇವಾಃ ಸೀದಂತು ಯಜ್ಞಿಯಾಃ ।**
**ಇಹಾದ್ಯ ಸೋಮಪೀತಯೇ ॥**

ಎಂಬ ಈ ಋಕ್ಕಿನಲ್ಲಿ **ಅದ್ರುಹಃ ಅದ್ರೋಗ್ಧವ್ಯೇ** ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ನಿಚಿರಾಸಃ**—**ನಿತರಾಂ ಚಿರಾಸಃ ಚಿರಂತನಾಃ ವಿಶ್ವೇದೇವಾಃ** । ಸಾಯಣರು—ಈ ಪದಕ್ಕೆ ಬಹಳ ಪೂರ್ವಿಕರಾದ ಸಮಸ್ತ ದೇವತೆಗಳು, ಅಥವಾ ವಿಶ್ವೇದೇವರು, ಶತ್ರುಗಳನ್ನು ತನ್ನ ಬಲದಿಂದ ಎದುರಿಸುವ, ಅಥವಾ ಸೇನೆಗಳನ್ನು ತನ್ನ ಸಾಮರ್ಥ್ಯದಿಂದ ಎದುರಿಸುವ ಅಗ್ನಿಯನ್ನು ಆರಾಧಿ(ಸುತ್ತಿರುವರು)ಸಿದರು ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಶಶ್ವತೀಃ**—**ಬಹ್ವೀಃ**--ಶಶ್ವತ್ ಎಂಬ ಪದವು ಬಹುನಾಮಗಳ ಮಧ್ಯದಲ್ಲಿ (ನಿ. ೩-೧೩) ಉಕ್ತವಾಗಿದೆ. ಇಲ್ಲಿ ಬಹಳ ಸೇನೆಗಳನ್ನು ಎಂದು ಅರ್ಥವನ್ನು ಹೇಳಿದೆ.

**ಅಪ್ಸು ಶ್ರಿತಂ ಸಿಂಹಮಿವ**—**ಅಪ್ಸು ತಿರೋಹಿತಂ ಗುಹಾಪ್ರವಿಷ್ಟಂ ಸಿಂಹಮಿವ ಭೀಮಂ** । ಅಗ್ನಿಯು ಉದಕಗಳಲ್ಲಿ ಅದೃಶ್ಯರೂಪದಿಂದ ಇರುವಕಾರಣ ಗುಹೆಯಲ್ಲಿ ಅಡಗಿರುವ ಸಿಂಹದಂತೆ ನೀರಿನಲ್ಲಿ ಅಡಗಿಕೊಂಡಿರುವನೆಂದು ಸಿಂಹಕ್ಕೆ ಹೋಲಿಸಿದೆ.

ಈಂ ಎಂಬ ನಿಪಾತವು ಪಾದಪೂರಣಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು (ನಿ. ೧-೯) ಪಠಿತವಾಗಿದೆ. ಮತ್ತು, ಪರಿ, ಈಂ, ಸೀಂ, ಎಂಬ ನಿಪಾತಗಳೂ ಪಾದಪೂರಣಾರ್ಥಗಳೆಂದು (ನಿ. ೫-೧೨) ವ್ಯಾಖ್ಯಾತವಾಗಿವೆ. ಸಾಯಣರು **ಅಥ ನಿಪಾತಾಃ ಉಚ್ಚಾವಚೇಷ್ವರ್ಥೇಷು ನಿಪತಂತಿ । ಅನೇಕಪ್ರಕಾರೇಷ್ವರ್ಥೇಷು ನಿಪತಂತಿ** ನಿಪಾತಗಳಿಗೆ ಅನೇಕ ವಿಧವಾದ ಅರ್ಥವನ್ನು ಬೋಧಿಸುವ ಸಾಮರ್ಥ್ಯವೂ ಇರುವುದು ಎಂದು ವ್ಯಾಖ್ಯಾನ ಮಾಡಿರುವುದರಿಂದ (ನಿ. ೧-೪) ಇಲ್ಲಿ ಈಂ ಎಂಬ ಪದಕ್ಕೆ **ಏನಂ**-ಈ ಅಗ್ನಿಯನ್ನು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ.

**ಈಯಿವಾಂಸಮ್**—ಇಣ್ ಗತೌ ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. **ಉಪೇಯಿವಾನನಾಶ್ವಾನನೂಚಾನಶ್ಚ** (ಪಾ. ಸೂ. ೩-೨-೧೦೯) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರತ್ಯಯಸ್ವರ ಬರುತ್ತದೆ. ದ್ವಿತೀಯಾಏಕವಚನದಲ್ಲಿ ಈಯಿವಾಂಸಮ್ ಎಂದು ರೂಪವಾಗುತ್ತದೆ.

**ಸ್ರಿಧಃ**—ಸ್ರಿಧ ಕ್ಷಯೇ (ಶೋಷಣೇ) ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಧಾತುಸ್ವರ ಉಳಿಯುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸಶ್ಚತಃ**—ಷಸ್ಜ ಗತೌ ಧಾತು. **ವ್ಯತ್ಯಯೋ ಬಹುಲಮ್** ಎಂಬುದರಿಂದ ಧಾತು ಜಕಾರಕ್ಕೆ ಚಕಾರಾದೇಶ. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಇದಕ್ಕೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅವಿಂದನ್**—ವಿದ್‌ಲೃ ಲಾಭೇ ಧಾತು. ಲಙ್ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ. **ಇತಶ್ಚ** ಎಂಬುದರಿಂದ ಅಂತ್ಯ ಇಕಾರ ಲೋಪವಾದಾಗ ಸಂಯೋಗಾಂತಲೋಪದಿಂದ ತಕಾರಲೋಪ. ಶ ವಿಕರಣ. **ಶೇಮುಚಾದೀನಾಮ್** ಎಂಬುದರಿಂದ ಧಾತುವಿಗೆ ನುಮಾಗಮ. ಅದಕ್ಕೆ ಅನುಸ್ವಾರ, ಪರಸವರ್ಣ. ಅಂಗಕ್ಕೆ ಅಡಾಗಮ. ಸರ್ವಾನುದಾತ್ತಸ್ವರ ಬರುತ್ತದೆ.

**ನಿಚಿರಾಸಃ**—ನಿತರಾಂ ಚಿರಾಃ ನಿಚಿರಾಃ ಪ್ರಾದಿಸಮಾಸ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಸಮಾಸಸ್ವರದಿಂದ ರೇಫೋತ್ತರಾಕಾರ ಉದಾತ್ತವಾಗುತ್ತದೆ.

**ಅದ್ರುಹಃ**—ದ್ರುಹ ಜಿಘಾಂಸಾಯಾಂ ಧಾತು ಸಂಪದಾದಿಗಣದಲ್ಲಿ ಸೇರಿರುವುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. ಬಹುವ್ರೀಹಿಸಮಾಸದಲ್ಲಿ **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಶ್ರಿತಮ್**—ಶ್ರಿಞ್ ಸೇವಾಯಾಮ್ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಶ್ರಿಞಾನ ಪರದಲ್ಲಿ ಬಂದುದರಿಂದ **ಶ್ರ್ಯುಕಃ ಕಿತಿ** (ಪಾ. ಸೂ. ೭-೨-೧೧) ಎಂಬುದರಿಂದ ಇಡಾಗಮ ನಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಿಂಹಮಿವ**—ಹಿಸಿ ಹಿಂಸಾಯಾಂ ಧಾತು. ಇದಿತ್ತ್ವಾದುದರಿಂದ ನುಮಾಗಮ. ಅಚ್ ಪ್ರತ್ಯಯ. ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ವರ್ಣ ವ್ಯತ್ಯಾಸ ಬರುತ್ತದೆ. ಇವ ಎಂಬುದರೊಡನೆ ಸಮಾಸ ವಾದಾಗ ವಿಭಕ್ತಿಗೆ ಲೋಪ ಬರುವುದಿಲ್ಲ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ಸಸ್ರುವಾಂಸಮಿವ ತ್ಮನಾಗ್ನಿಮಿತ್ಥಾ ತಿರೋಹಿತಂ ।
ಐನಂ ನಯನ್ಮಾತರಿಶ್ವಾ ಪರಾವತೋ ದೇವೇಭ್ಯೋ ಮಥಿತಂ ಪರಿ ॥೫॥

ಪದಪಾಠಃ

ಸಸ್ರುವಾಂಸಂಽಇವ । ತ್ಮನಾ । ಅಗ್ನಿಂ । ಇತ್ಥಾ । ತಿರಃಽಹಿತಂ ।
ಆ । ಏನಂ । ನಯತ್ । ಮಾತರಿಶ್ವಾ । ಪರಾಽವತಃ । ದೇವೇಭ್ಯಃ । ಮಥಿತಂ । ಪರಿ ॥ ೫ ॥

ಸಾಯಣಭಾಷ್ಯಂ.

ಮಾತರಿಶ್ವಾ ವಾಯುರಿತ್ಥೇತ್ಥಂ ತ್ಮನಾ ಸ್ವೇಚ್ಛಯಾಪ್ಸು ಪ್ರವೇಶೇನ ತಿರೋಹಿತಂ ನಿಲೀನಂ ಪರಿ ಪರಿತೋ ಮಥಿತಂ ಮಂಥನೇನ ನಿಷ್ಪಾದಿತಮೇನಮಗ್ನಿಂ ದೇವೇಭ್ಯಃ । ತಾದರ್ಥ್ಯೇ ಚತುರ್ಥೀ । ದೇವಾರ್ಥಂ ಪರಾವತೋ ದೂರದೇಶಾದಾನಯತ್ । ಆನೀತವಾನ್ । ತತ್ರ ದೃಷ್ಟಾಂತಃ । ಸಸ್ರುವಾಂಸಮಿವ । ಯಥಾ ಸ್ವಾಚ್ಛಂದ್ಯೇನ ಸಸ್ರುವಾಂಸಂ ಸರಂತಂ ಗಚ್ಛಂತಂ ಪುತ್ರಂ ಪಿತಾ ಬಲಾದಾನಯತಿ ತದ್ವತ್ ॥ ಸಸ್ರುವಾಂಸಮಿವ । ಸೃ ಗತಾವಿತ್ಯಸ್ಮಾಲ್ಲಿಟ್ । ತಸ್ಯ ಕ್ವಸುಃ । ಇವೇನ ವಿಭಕ್ತ್ಯಲೋಪಃ ಇತ್ಯುಕ್ತತ್ವಾತ್ಪ್ರತ್ಯಯಸ್ವರಃ । ತ್ಮನಾ । ಆತ್ಮನ್ಶಬ್ದಸ್ಯ ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ । ಇತ್ಥಾ । ಥಾ ಹೇತೌ ಚ ಛಂದಸೀತಿ ವ್ಯತ್ಯಯೇನ ಥಾಪ್ರತ್ಯಯಃ । ಪ್ರತ್ಯಯಸ್ವರಃ । ಏನಂ । ಅನ್ವಾದೇಶೇ ದ್ವಿತೀಯಾಟೌಃಸ್ವೇನ ಇತ್ಯೇನಾದೇಶಃ । ಅನುದಾತ್ತಶ್ಚ । ನಯತ್ । ಣೀಞ್ ಪ್ರಾಪಣ ಇತ್ಯಸ್ಯ ಲಙಿ ರೂಪಂ । ಅಡಭಾವಶ್ಛಾಂದಸಃ । ಮಾತರಿಶ್ವಾ । ಮಾತರ್ಯಂತರಿಕ್ಷೇ ಶ್ವಸಿತೀತಿ ಶ್ವನ್ನುಕ್ಷನ್ನಿತ್ಯಾದಿನಾ ನಿಪಾತಿತಃ ॥

ಪ್ರತಿಪದಾರ್ಥ

**ಮಾತರಿಶ್ವಾ**—ವಾಯುವು । **ಇತ್ಥಾ**—ಈ ಹಿಂದೆ ಹೇಳಿದ ರೀತಿ । **ತ್ಮನಾ**—ಸ್ವೇಚ್ಛೆಯಿಂದ । **ತಿರೋಹಿತಂ**—(ಉದಕ ಪ್ರವೇಶಮಾಡಿ) ತಿರೋಹಿತನೂ । **ಪರಿ ಮಥಿತಂ**—ಚೆನ್ನಾಗಿ ಮಥನ ಮಾಡುವುದರಿಂದ ಉತ್ಪಾದ್ಯನೂ ಆದ । **ಏನಂ ಅಗ್ನಿಂ**—ಈ ಅಗ್ನಿಯನ್ನು । **ದೇವೇಭ್ಯಃ**—ದೇವತೆಗಳಿಗೋಸ್ಕರ । **ಸಸ್ರುವಾಂಸಮಿವ**—ಸ್ವಚ್ಛಂದವಾಗಿ ಸಂಚರಿಸುತ್ತಿರುವ ಪುತ್ರನನ್ನು (ತಂದೆಯು ಬಲಾತ್ಕಾರವಾಗಿ ಕರೆತರುವಂತೆ) **ಪರಾವತಃ**—ಬಹಳ ದೂರಪ್ರದೇಶದಿಂದ । **ಆ ನಯತ್**—ತಂದಿದಾನೆ.

ಭಾವಾರ್ಥ.

ವಾಯುವು, ಈ ಹಿಂದೆ ಹೇಳಿದಂತೆ ಸ್ವೇಚ್ಛೆಯಿಂದಲೇ ಉದಕಗಳಲ್ಲಿ ಲೀನನಾಗಿರುವವನೂ ಮಥನದಿಂದ ಉತ್ಪಾದ್ಯನೂ ಆದ ಈ ಅಗ್ನಿಯನ್ನು, ಸ್ವೇಚ್ಛೆಯಾಗಿ ಸಂಚರಿಸುತ್ತಿರುವ ಮಗನನ್ನು ತಂದೆಯು ಬಲಾತ್ಕಾರವಾಗಿ ಹಿಡಿದುತರುವಂತೆ, ದೇವತೆಗಳಿಗೋಸ್ಕರ ಇಲ್ಲಿಗೆ ತಂದಿದಾನೆ.

English Translation.

Matarishwan therefore brought for the gods from afar, Agni, hiding of himself, and generated by attrition, as (a father brings back) a fugitive (son).

ವಿಶೇಷವಿಷಯಗಳು.

ಮಾತರಿಶ್ವಾ—ವಾಯುಃ । ಸಾಯಣರು ಈ ಪದಕ್ಕೆ ವಾಯು ಎಂಬ ಅರ್ಥವನ್ನು ವಿವರಿಸಿದ್ದಾರೆ. ನಿರುಕ್ತಕಾರರು—

ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪ ತಸ್ಥುರ್ಋಗ್ಮಿಯಮ್ ।
ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ॥

(ಋ. ಸಂ. ೬-೮-೪)

ಈ ಋಕ್ಕನ್ನು ಉದಹರಿಸಿ, ಮಾತರ್ಯಂತರಿಕ್ಷೇ ಶ್ವಸಿತಿ,—ಲೋಕದಲ್ಲಿರುವ ಎಲ್ಲಾ ಪ್ರಾಣಿಗಳಿಗೂ ತಾಯಿಯಾಗಿರುವ ಅಂತರಿಕ್ಷದಲ್ಲಿ ಯಾವ ತಡೆಯೂ ಇಲ್ಲದೆ ಸಂಚರಿಸುವ ಕಾರಣದಿಂದಲೂ, ಅಥವಾ ಮಾತರಿ ಆಶು ಅನಿತಿ—ಅಂತರಿಕ್ಷದಲ್ಲಿ ವೇಗವಾಗಿ ಸಂಚರಿಸುವ ಕಾರಣದಿಂದಲೂ ವಾಯುವು ಮಾತರಿಶ್ವಾ ಎಂಬ ಪದದಿಂದ ಬೋಧ್ಯನಾಗಿರುವನೆಂದು ವಿವರಿಸಿದ್ದಾರೆ.

ತ್ಮನಾ—ಸ್ವೇಚ್ಛಯಾ ಅಪ್ಸು ಪ್ರವೇಶೇನ । ಆತ್ಮನ್ ಶಬ್ದದ ತೃತೀಯಾ ಏಕವಚನರೂಪ । ಇದರಲ್ಲಿ ಆಕಾರವನ್ನು ಉಳಿದು ಛಾಂದಸವಾಗಿ ಪ್ರಯುಕ್ತವಾಗಿರುವ ತ್ಮನಾ ಎಂಬ ಪದಕ್ಕೆ ತನ್ನ ಇಚ್ಛೆಯಿಂದ ಎಂದು ಅರ್ಥಮಾಡಿದೆ. ಅಗ್ನಿಯು ತನ್ನ ಇಷ್ಟದಂತೆ ಉದಕಗಳಲ್ಲಿ ಪ್ರವೇಶಿಸಿರುವನು ಎಂಬ ಅರ್ಥವನ್ನು ಹೇಳಿದೆ. ಇದೇ ಅರ್ಥದಲ್ಲಿಯೇ ಈ ಪದದ ಪ್ರಯೋಗವನ್ನು ನಿರುಕ್ತಕಾರರು ಉದಹರಿಸಿದ್ದಾರೆ. ಉದಾಹರಣೆಗೆ—

ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿ ವೇದ ।
ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿ ವರ್ತೇತೇ ಅಹನೀ ಚಕ್ರಿಯೇವ ॥

(ಋ. ಸಂ. ೧-೧೮೫-೧)

ಇಲ್ಲಿ ತ್ಮನಾ ಎಂಬುದಕ್ಕೆ ಆತ್ಮನಾ ಎಂದು ಅರ್ಥಮಾಡಿದೆ. ಇದೇ ರೀತಿಯಾದ ಉದಾಹರಣೆಗಳು ಬೇರೆ ಬೇರೆಯಾಗಿ ಉದಾಹರಿಸಲ್ಪಟ್ಟಿವೆ.

ಪರಾವತಃ—ದೂರದೇಶಾತ್ । ಆಕೇ, ಪರಾಕೇ, ಪರಾಚೈಃ, ಮೊದಲಾದ ಐದು ದೂರನಾಮಗಳಲ್ಲಿ ಪರಾವತಃ ಎಂಬ ಶಬ್ದವು (ನಿ. ೪-೨೦) ಉಕ್ತವಾಗಿದೆ.

**ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಶ್ಯಾ । ಸಸಾರ ಸೀಂ ಪರಾವತಃ ॥**

(ಋ. ಸಂ. ೪-೩೦-೧೧)

ಇಲ್ಲಿ ಪರಾವತಃ **ಪ್ರೇರಿತವತಃ ಪರಾಗತಾದ್ವಾ** ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ದುರ್ಗಾಚಾರ್ಯರು ದೂರಾದ್ದೂರತರಂ ಎಂದು ಅರ್ಥವನ್ನೂ ವರ್ಣಿಸಿದ್ದಾರೆ. ಅಗ್ನಿಯು ಉದಕಗಳಲ್ಲಿ ಪ್ರವೇಶಿಸಿರುವುದರಿಂದ ದೂರದಲ್ಲಿರುವ ಕಾರಣ ಇವನನ್ನು ದೇವತೆಗಳ ಸಂತೋಷಕ್ಕಾಗಿ ದೂರಪ್ರದೇಶದಿಂದ ಅರಣಿಗಳಿಂದ ಮಥನಮಾಡಿ ಉತ್ಪನ್ನನಾದಕಾರಣ ಯಜ್ಞ (ಮಾಡುವುದ)ಕ್ಕಾಗಿ ಕರೆದು ತಂದನು ಎಂಬ ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಈ ವಿಷಯದಲ್ಲಿ **ಸಸೃವಾಂಸಮಿವ** ಎಂದು ಉಪಮಾನವನ್ನು ಹೇಳಿದೆ. ಈ ಪದಕ್ಕೆ **ಯಥಾ ಸ್ವಾಚ್ಛಂದ್ಯೇನ ಸರಂತಂ ಗಚ್ಛಂತಂ ಪುತ್ರಂ ಪಿತಾ ಬಲಾದಾನಯತಿ ತದ್ವತ್**—ತನ್ನ ಇಷ್ಟಾನುಸಾರವಾಗಿ ತಿರುಗಾಡುತ್ತಿರುವ (ಅಲೆದಾಡುವ) ಮಗನನ್ನು ತಂದೆಯು ಬಲಾತ್ಕರಿಸಿ ಕರದುಕೊಂಡು ಬಂದು ಸರಿಯಾದ ರೀತಿಯಲ್ಲಿರುವಂತೆ ಮಾಡುವನೆಂದು ಹೋಲಿಸಿ ಹೇಳಿದೆ. **ವಾಯೋರಗ್ನಿಃ** ಎಂಬ ಶ್ರುತಿವಚನದಿಂದ ಅಗ್ನಿಯು ವಾಯುವಿನಿಂದ ಉತ್ಪನ್ನವಾಗಿರುವಕಾರಣ ವಾಯ್ವಗ್ನಿಗಳ ಪಿತಾಪುತ್ರಭಾವವು, (ಜನ್ಯ ಜನಕಭಾವವು) ದೃಷ್ಟಾಂತವಾಕ್ಯದಲ್ಲಿ ಸಮಂಜಸವಾಗಿರುತ್ತದೆ.

ವ್ಯಾಕರಣಪ್ರಕ್ರಿಯಾ.

**ಸಸೃವಾಂಸಮಿವ**—ಸೃ ಗತೌ ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. ಪ್ರತ್ಯಯಸ್ವರ ಉಳಿಯುತ್ತದೆ. ಇವೇನ **ಸಮಾಸೋ ವಿಭಕ್ತ್ಯಲೋಪಶ್ಚ** ಎಂಬ ವಚನದಿಂದ ಇವ ಎಂಬುದರೊಡನೆ ಸಮಾಸವಾದಾಗ **ಸುಪೋಧಾತುಪ್ರಾದಿಪದಿಕಯೋಃ** ಎಂಬುದರಿಂದ ವಿಭಕ್ತಿಗೆ ಲೋಪ ಬರುವುದಿಲ್ಲ. ಪೂರ್ವಪದ ಪ್ರಕೃತಿಸ್ವರವೆಂದುದರಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ.

**ತ್ಮನಾ**—ಆತ್ಮನಾ ಎಂದು ರೂಪವಾದಾಗ **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಆಕಾರಕ್ಕೆ ಲೋಪ.

ಇತ್ಥಾ—ಇದಮ್ ಶಬ್ದ. **ಥಾಹೇತೌಚ ಛಂದಸಿ** (ಪಾ. ಸೂ. ೫-೩-೨೬) ಎಂಬುದರಿಂದ ವಿಹಿತವಾದ **ಥಾ** ಪ್ರತ್ಯಯವು ವ್ಯತ್ಯಯದಿಂದ ಇಲ್ಲಿಯೂ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಏನಮ್—ಮೊದಲು ಒಂದು ಸಾರಿ ಉಪಾತ್ತನಾದವನನ್ನು ಪುನಃ ಕಾರ್ಯಾಂತರಕ್ಕೆ ಅವನನ್ನೇ ತೆಗೆದುಕೊಳ್ಳುವುದಕ್ಕೆ ಅನ್ವಾದೇಶವೆಂದು ಹೆಸರು. ಹೀಗೆ ಅನ್ವಾದೇಶ ತೋರುವಾಗ ಇದಮ್ ಶಬ್ದಕ್ಕೆ **ದ್ವಿತೀಯಾಟೌಸ್ವೇನಃ** (ಪಾ. ಸೂ. ೨-೪-೩೪) ಎಂಬುದರಿಂದ ದ್ವಿತೀಯಾ ಏಕವಚನ ಪರವಾದಾಗ ಏನಾದೇಶ. ಅದು ಸರ್ವಾನುದಾತ್ತವಾಗುತ್ತದೆ.

**ನಯತ್**—ಣೀಞ್ ಪ್ರಾಪಣೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರ ಲೋಪ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತು ಇಕಾರಕ್ಕೆ ಗುಣ. ಅಯಾದೇಶ. **ಬಹುಲಂಛಂದಸ್ಯಮಾಙ್ಯೋಗೇऽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಮಾತರಿಶ್ವಾ**—ಮಾತರಿ ಅಂತರಿಕ್ಷೇ ಶ್ವಸಿತಿ ಇತಿ ಮಾತರಿಶ್ವಾ. **ಶ್ವನ್ನುಕ್ಷನ್**—(ಉ. ಸೂ. ೧-೧-೫೭) ಎಂಬುದರಿಂದ ಕನಿಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರಥಮಾ ಏಕವಚನಾಂತರೂಪ.

ಮಥಿತಮ್—ಮಂಥ ವಿಲೋಡನೇ ಧಾತು. ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. ಇಡಾಗಮ. ಅನಿದಿತಾಂಹಲ—ಎಂಬುದರಿಂದ ಉಪಧಾ ನಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸಂಹಿತಾಪಾಠಃ

ತಂ ತ್ವಾ ಮರ್ತಾ ಅಗೃಭ್ಣತ ದೇವೇಭ್ಯೋ ಹವ್ಯವಾಹನ ।
ವಿಶ್ವಾನ್ಯದ್ಯಜ್ಞಾँ ಅಭಿಪಾಸಿ ಮಾನುಷ ತವ ಕ್ರತ್ವಾ ಯವಿಷ್ಠ್ಯ ॥ ೬ ॥

ಪದಪಾಠಃ

ತಂ । ತ್ವಾ । ಮರ್ತಾಃ । ಅಗೃಭ್ಣತ । ದೇವೇಭ್ಯಃ । ಹವ್ಯऽವಾಹನ ।
ವಿಶ್ವಾನ್ । ಯತ್ । ಯಜ್ಞಾನ್ । ಅಭಿऽಪಾಸಿ । ಮಾನುಷ । ತವ । ಕ್ರತ್ವಾ । ಯವಿಷ್ಠ್ಯ ॥ ೬ ॥

ಸಾಯಣಭಾಷ್ಯಂ.

ಹೇ ಹವ್ಯವಾಹನ ಹವ್ಯಾನಾಂ ವೋಢರ್ಹೇ ಅಗ್ನೇ ಮರ್ತಾ ಮನುಷ್ಯಾ ಅಧ್ವರ್ಯುಪ್ರಭೃತಯಸ್ತಂ ತಾದೃಶಮಪ್ಸು ತಿರೋಹಿತಂ ತ್ವಾ ತ್ವಾಂ ದೇವೇಭ್ಯೋ ಯಷ್ಟವ್ಯದೇವತಾರ್ಥಮಗೃಭ್ಣತ । ಅಗೃಹ್ಣತ । ಮಾನುಷ ಮನುಷ್ಯಾಣಾಂ ಹಿತಕಾರನ್ಯವಿಷ್ಠ್ಯ ಯುವತಮ ಹೇ ಅಗ್ನೇ ತವ ಕ್ರತ್ವಾ ತವ ಕರ್ಮಣಾ ಮಾಹಾತ್ಮ್ಯೇನ ವಿಶ್ವಾನ್ಸರ್ವಾನಸ್ಮಾಭಿಃ ಕ್ರಿಯಮಾಣಾನ್ಯಜ್ಞಾನ್ಯದ್ಯಸ್ಮಾತ್ಕಾರಣಾದಭಿಪಾಸಿ। ಸರ್ವತಃ ಪಾಲಯಸಿ ತಸ್ಮಾತ್ತ್ವಾಮಗೃಭ್ಣತೇತಿ ಪೂರ್ವತ್ರಾನ್ವಯಃ ॥ ಅಗೃಭ್ಣತ । ಗ್ರಹ ಉಪಾದಾನೇ ಕ್ರ್ಯಾದಿಭ್ಯಃ ಶ್ನಾ । ಗ್ರಹಿಜ್ಯಾವಯಿಧಾತಿ ಸಂಪ್ರಸಾರಣಂ। ಹೃಗ್ರಹೋರ್ಭಶ್ಛಂದಸೀತಿ ಹಕಾರಸ್ಯ ಭಕಾರಃ। ತಿಙ್ಙತಿಙ ಇತಿ ನಿಘಾತಃ । ಹವ್ಯವಾಹನ । ವಹ ಪ್ರಾಪಣೇ ಇತಿ ಧಾತೋರ್ಲ್ಯುಡಿತ್ಯನುವೃತ್ತೌ । ಹವ್ಯೇಽನಂತಃಪಾದಮಿತಿ ಞ್ಯುಟ್ । ಉಪಧಾವೃದ್ಧಿಃ । ಯೋರನಾದೇಶಃ । ಆಮಂತ್ರಿತಸ್ಯ ಚೇತಿ ಸರ್ವಮನುದಾತ್ತತ್ವಂ । ವಿಶ್ವಾನ್ । ವಿಶ ಪ್ರವೇಶನ ಇತ್ಯಸ್ಮಾದಶಿಪ್ರುಷಿಲಟಿಕಣಿಕಣಿಖಟಿವಿಶಿಭ್ಯಃ ಕ್ವನ್ನಿತಿ ಕ್ವನ್ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತತ್ವಂ । ಅಭಿಪಾಸಿ । ಪಾ ರಕ್ಷಣೇ । ಅಸ್ಯ ಧಾತೋ ರಕ್ಷಣಾರ್ಥತ್ವಾನ್ನ ಪಿಬಾದೇಶಃ । ಯಚ್ಛಬ್ದಯೋಗಾನ್ನ ನಿಘಾತಃ । ಧಾತುಸ್ವರಃ । ಕ್ರತ್ವಾ । ಟಾ । ಜಸಾದಯಶ್ಛಂದಸಿ ವಿಕಲ್ಪ್ಯಂತ ಇತ್ಯತ್ರ ನಾದೇಶಾಭಾವಃ । ಯಣಾದೇಶಃ । ಪ್ರತ್ಯಯಸ್ವರಃ । ಯವಿಷ್ಠ್ಯ । ಯುವಶಬ್ದಾದತಿಶಾಯನೇ ತಮಬಿಷ್ಠನಾವಿತೀಷ್ಠನ್ । ಸ್ಥೂಲದೂರಯುವೇತಿ ಯಣಾದಿಪರಂ ಲುಪ್ಯತೇ ಪೂರ್ವಸ್ಯ ಚ ಗುಣಃ । ವಸ್ತ್ವಾದಿತ್ವಾತ್ಸ್ವಾರ್ಥಿಕೋ ಯಪ್ರತ್ಯಯಃ ॥

ಪ್ರತಿಪದಾರ್ಥ.

ಮಾನುಷ—ಮನುಷ್ಯರಿಗೆ ಹಿತಕರನೂ । ಯವಿಷ್ಠ್ಯ— ಅತ್ಯಂತ ಯುವಕನೂ ಆದ ಎಲೈ ಅಗ್ನಿಯೇ । ತವ ಕ್ರತ್ವಾ—ನಿನ್ನ ಕರ್ಮದಿಂದ (ಮಹಾತ್ಮ್ಯೆಯಿಂದ) । ವಿಶ್ವಾನ್—(ನಮ್ಮಿಂದ ಕ್ರಿಯಮಾಣ

ವಾದ) ಸಮಸ್ತ | **ಯಜ್ಞಾನ್**—ಯಾಗಗಳನ್ನು | **ಯತ್**—ಯಾವ ಕಾರಣದಿಂದ | ಅಭಿಪಾಸಿ—ಸರ್ವವಿಧ ದಿಂದಲೂ ರಕ್ಷಿಸುತ್ತೀಯೋ | (**ತತ್**—ಆ ಕಾರಣದಿಂದ) | (ಹೇ) **ಹವ್ಯವಾಹನ**—ದೇವತೆಗಳಿಗೆ ಹವಿರ್ವಾಹಕ ನಾದ ಎಲೈ ಅಗ್ನಿಯೇ | **ಮರ್ತಾಃ**—ಅಧ್ವರ್ಯ್ವಾದಿ ಮನುಷ್ಯರು | **ಶಂ ತ್ವಾ**—ಉದಕದಲ್ಲಿ ಲೀನನಾದ ಆ ನಿನ್ನನ್ನು | **ದೇವೇಭ್ಯಃ**—ಪೂಜನೀಯರಾದ ದೇವತೆಗಳಿಗೋಸ್ಕರ | **ಅಗೃಭ್ಣತ**—ಗ್ರಹಿಸಿದರು ||

ಭಾವಾರ್ಥ.

ಮನುಷ್ಯರಿಗೆ ಹಿತಕರನೂ, ಯುವಕರಲ್ಲಿ ಶ್ರೇಷ್ಠನೂ ಆದ ಎಲೈ ಅಗ್ನಿಯೇ, ನೀವು ಮಾಡುವ ಸಮಸ್ತ ಯಜ್ಞಗಳೂ ನಿನ್ನ ಮಹಿಮೆಯಿಂದ ಸರ್ವ ವಿಧದಲ್ಲಿಯೂ ರಕ್ಷಿತವಾಗಿವೆ; ಆದುದರಿಂದಲೇ ಅಧ್ವರ್ಯುಗ ಮೊದಲಾದವರು, ದೇವತೆಗಳಿಗೆ ಹವಿರ್ವಾಹಕನಾದ ಉದಕದಲ್ಲಿ ಲೀನನಾಗಿದ್ದ ನಿನ್ನನ್ನು ದೇವತೆಗಳ ಪೂಜೆ ಗೋಸ್ಕರ ಸ್ವೀಕರಿಸುತ್ತಾರೆ. (ಸ್ವಾಗತಿಸುತ್ತಾರೆ)

English Translation·

Bearer of oblations, men apprehend you (thus concealed) for the service of the gods, and that you, youngest (of the deities) and friendly to mankind, may recompense by the acts all their pious rites·

ವಿಶೇಷವಿಷಯಗಳು.

ಹವ್ಯವಾಹನ—ಹವ್ಯಾನಾಂ ವೋಢರ್ಹೇ ಅಗ್ನೇ | ನಿರುಕ್ತಕಾರರು—

ಪ್ರ ತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ |

(ಋ. ಸಂ. ೧-೧೨೯-೬)

ಇಲ್ಲಿ ಹವ್ಯೋ ನ ಎಂಬ ಪದಕ್ಕೆ ಹವನಾರ್ಹ ಇವ ಎಂದು ವಾಖ್ಯಾನ ಮಾಡಿದ್ದಾರೆ- ದುರ್ಗಾಚಾರ್ಯರು— **ಯಃ ಯಜ್ಞೇನ ಚ ಪುನರಾಹೂಯತೇ** ಅಯಷರ್ಭಾಕ್ತ್ವಾದೇವ—ಅಗ್ನಿಯು ಯಜ್ಞನಿಮಿತ್ತವಾಗಿ ಅನೇಕ ಸಾರಿ ಯಜಮಾನರಿಂದ ತಾನು ಹವಿರ್ಭಾಗಿಯಲ್ಲದಿದ್ದರೂ, ಹವಿಸ್ಸನ್ನು ಹೊಂದುವ ದೇವತೆಗಳನ್ನು ಆಹ್ವಾನಿಸುವ ಹಾಗೆ ಆಹೂತನಾಗಿರುವನು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ** ಎಂಬ ಋಕ್ಕಿ ನಲ್ಲಿ **ಹವ್ಯಾ** ಎಂಬ ಪದಕ್ಕೆ **ಹವೀಂಷಿ** ಎಂದು ಅರ್ಥವನ್ನು ಹೇಳಿದೆ. ದೇವತೆಗಳಿಗಾಗಿ ಯಜ್ಞಮಾಡುವವರು ಅರ್ಪಿಸುವ ಹವಿಸ್ಸುಗಳನ್ನು ಸ್ವೀಕರಿಸಿ ಅವರಿಗೆ ಒಪ್ಪಿಸುವವನೆಂದು ಅಗ್ನಿಯನ್ನು ಸಂಬೋಧಿಸಿದೆ.

**ಮರ್ತಾಃ**—ಈ ಪದವು ಮನುಷ್ಯ ನಾಮಗಳಲ್ಲಿ (ನಿ. ೩-೮) ಉಕ್ತವಾಗಿದೆಯಾಗಿ **ಮನುಷ್ಯಾಃ ಅಧ್ವರ್ಯುಪ್ರಭೃತಯಃ**—ಅಧ್ವರ್ಯುವೇ ಮೊದಲಾದ ಋತ್ವಿಜರು ಎಂದು ಅರ್ಥವನ್ನು ಹೇಳಿದೆ. ಈ ಋತ್ವಿಕ್ಕುಗಳು, ಉದಕಗಳಲ್ಲಿ ಪ್ರವಿಷ್ಟನಾಗಿ ಅದೃಶ್ಯವಾದ ರೂಪದಿಂದ ಇರುವ ಅಗ್ನಿಯನ್ನು ಯಾಗದಲ್ಲಿ (ಆಹುತಿಗಳನ್ನು) ಹವಿಸ್ಸುಗಳನ್ನು ಸ್ವೀಕರಿಸುವ ದೇವತೆಗಳನ್ನು ಆಹ್ವಾನಮಾಡಿ ಯಜ್ಞಕ್ಕೆ ಕರೆತರುವುದಕ್ಕಾಗಿ ಸ್ವೀಕರಿಸಿರುವರು ಎಂದುವರ್ಣಿಸಿದೆ.

**ಮಾನುಷ—ಮನುಷ್ಯಾಣಾಂ ಹಿತಕಾರಿನ್** ಅಗ್ನಿಯು ಮನುಷ್ಯರಿಗೆ ಹಿತವನ್ನು ಉಂಟುಮಾಡುವವನೆಂದು ಸಂಬೋಧಿಸಿದೆ.

**ಯವಿಷ್ಠ್ಯ—ಯುವತಮ.** ಅಗ್ನಿಯು ಯಾವಾಗಲೂ ಬಾಲ್ಯ, ಮತ್ತು ಮುದುಕತನ ಇವುಗಳು ಇಲ್ಲದಿರುವವನಾಗಿ ಯೌವ್ವನದಲ್ಲಿಯೇ ಇರುವ ಸಾಮರ್ಥ್ಯವನ್ನೇ ಸರ್ವದಾ ಹೊಂದಿರುವ ಕಾರಣ ಯುವಕರಲ್ಲಿಯೂ ಶ್ರೇಷ್ಠನೆಂದು ಇಲ್ಲಿ ಸಂಬೋಧಿಸಿದೆ.

**ಕ್ರತ್ವಾ—ಕರ್ಮಣಾ ಮಾಹಾತ್ಮ್ಯೇನ.** ಅಗ್ನಿಯು ತನ್ನ ಮಹಿಮೆಯಿಂದಲೂ, ಯಜಮಾನಂಗೆ ಅನುಗ್ರಹವನ್ನು ಆಚರಿಸುವುದರಿಂದಲೂ, ಯಜ್ಞಮಾಡುವವರೇ ಮೊದಲಾದವರೆಲ್ಲರನ್ನೂ ಮತ್ತು ಯಜ್ಞಗಳನ್ನೂ ರಕ್ಷಿಸುವಕಾರಣ ಋತ್ವಿಜರು ಅಗ್ನಿಯು ದೂರಪ್ರದೇಶದಲ್ಲಿರುವವನಾದರೂ ಅವನನ್ನು ಕರದುಕೊಂಡು ಬರುವರು ಎಂದು ವಿವರಿಸಿದ್ದಾರೆ. ಈ ಅಂಶದಲ್ಲಿ ಸಾಯಣರ ವ್ಯಾಖ್ಯಾನವು—

> **ಸರ್ವಾನಸ್ಮಾಭಿಃ ಕ್ರಿಯಮಾಣಾನ್ ಯಜ್ಞಾನ್ ಯಸ್ಮಾತ್ ಕಾರಣಾತ್ ಸರ್ವತಃ ಪಾಲಯಸಿ ತಸ್ಮಾದಗೃಭ್ಣತ ॥**

ಎಂದು ಇರುತ್ತದೆ.

ವ್ಯಾಕರಣಪ್ರಕ್ರಿಯಾ.

**ಮರ್ತಾಃ—**ಮೃಙ್ ಪ್ರಾಣತ್ಯಾಗೇ ಧಾತು. ಔಣಾದಿಕತನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಋಕಾರಕ್ಕೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಗೃಭ್ಣತ**—ಗ್ರಹ ಉಪಾದಾನೇ ಧಾತು ಕ್ರ್ಯಾದಿ. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅದಕ್ಕೆ ಅತಾದೇಶ. **ಕ್ರ್ಯಾದಿಭ್ಯಃಶ್ನಾ** (ಪಾ. ಸೂ ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಅದು ಪರವಾದಾಗ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಶ್ನಾ ವಿಕರಣಕ್ಕೂ ಙಿತ್ವವಿರುವುದರಿಂದ ಅದು ಪರವಾದಾಗ **ಗ್ರಹಿಜ್ಯಾವಯಿವ್ಯಧಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿನ ರೇಫಕ್ಕೆ (ಋಕಾರ) ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಹವ್ಯವಾಹನ**—ವಹ ಪ್ರಾಪಣೇ ಧಾತು. ಹಿಂದಿನ ಸೂತ್ರದಿಂದ **ಞ್ಯುಟ್** ಎಂದು ಅನುವೃತ್ತವಾಗುವಾಗ **ಹವ್ಯೇಽನಂತಃ ಪಾದಮ್** (ಪಾ. ಸೂ. ೩-೨-೬೬) ಎಂಬುದರಿಂದ **ಹವ್ಯ**ಶಬ್ದ ಉಪಪದವಾಗಿರುವಾಗ ಈ ಧಾತುವಿಗೆ ಞ್ಯುಟ್ ಪ್ರತ್ಯಯ. ಇದು ಞಿತ್ತಾದುದರಿಂದ **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ಹವ್ಯವಾಹನ ಎಂದು ರೂಪವಾಗುತ್ತದೆ. ಸಂಬುದ್ಧಿಯಲ್ಲಿ ಪಾದಾದಿಯಲ್ಲಿಲ್ಲದಿರುವುದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ವಿಶ್ವಾನ್**— ವಿಶ ಪ್ರವೇಶನೇ ಧಾತು. **ಅಶಿಪ್ರುಷಿಲಟಿರಣಿಕಣಿಖಟಿವಿಶಿಭ್ಯಃ ಕ್ವನ್** (ಉ. ಸೂ. ೧-೧೪೯) ಎಂಬುದರಿಂದ ಇದಕ್ಕೆ ಕ್ವನ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಅಭಿಪಾಸಿ**— ಪಾ ರಕ್ಷಣೇ ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ. ರಕ್ಷಣಾರ್ಥಕ ಧಾತುವಾದುದರಿಂದ ಪಿಬಾದೇಶ ಬರುವುದಿಲ್ಲ. ಯಚ್ಛಬ್ದ ಸಂಬಂಧವಿರುವುದರಿಂದ ಸರ್ವಾನುದಾತ್ತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಉದಾತ್ತವುಳ್ಳ **ತಿಙಂತ** ಪರದಲ್ಲಿರುವುದರಿಂದ **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಅಭಿ ಎಂಬುದಕ್ಕೆ ಸರ್ವಾನುದಾತ್ತಸ್ವರ ಬರುತ್ತದೆ.

**ಕ್ರತ್ವಾ**— **ಕೃಞಃ ಕ್ರತುಃ** (ಉ. ಸೂ. ೧-೭೭) ಎಂಬುದರಿಂದ ಕೃಞ್ ಧಾತುವಿಗೆ ಕ್ರತು ಪ್ರತ್ಯಯ ಬಂದು ಕ್ರತು ಎಂದು ರೂಪವಾಗುತ್ತದೆ. ಇದಕ್ಕೆ ತೃತೀಯಾ ವಿಭಕ್ತಿ ಏಕವಚನಪರವಾದಾಗ **ಜಸಾದಿಷು ಛಂದಸಿ ವಾ ವಚನಮ್** ಎಂಬುದರಿಂದ ವಿಭಕ್ತಿಗೆ ನಾಭಾವ ಬರುವುದಿಲ್ಲ. ಯಣಾದೇಶ. ಪ್ರತ್ಯಯಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಯವಿಷ್ಠ್ಯ**— ಅತಿಶಯೇನ ಯುವಾ ಯವಿಷ್ಠಃ. **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಅತಿಶಯಾರ್ಥಕತೋರುವಾಗ ಯುವನ್ ಶಬ್ದಕ್ಕೆ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ಸ್ಥೂಲದೂರಯುವ**— (ಪಾ. ಸೂ. ೬-೪-೧೫೬) ಎಂಬುದರಿಂದ ಯುವನ್ ಶಬ್ದದಲ್ಲಿರುವ ಯಣಾದಿಗಿಂತ ಪರವಾದುದಕ್ಕೆ (ವನ್) ಲೋಪ. ಪೂರ್ವದ ಉಕಾರಕ್ಕೆ ಗುಣ, ಅವಾದೇಶ. ವನ್ಯಾದಿಗಣದಲ್ಲಿ ಪಠಿತವಾದುದರಿಂದ ಸ್ವಾರ್ಥದಲ್ಲಿ ಯ ಪ್ರತ್ಯಯ. ಯವಿಷ್ಠ್ಯ ಎಂದು ರೂಪವಾಗುತ್ತದೆ. ಆಮಂತ್ರಿತ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ತದ್ಭದ್ರಂ ತವ ದಂಸನಾ ಪಾಕಾಯ ಚಿಚ್ಛದಯತಿ ।
ತ್ವಾಂ ಯದಗ್ನೇ ಪಶವಃ ಸಮಾಸತೇ ಸಮಿದ್ಧಮಪಿಶರ್ವರೇ ॥ ೭ ॥

ಪದಪಾಠಃ

ತತ್ । ಭದ್ರಂ । ತವ । ದಂಸನಾ । ಪಾಕಾಯ । ಚಿತ್ । ಛದಯತಿ ।
ತ್ವಾಂ । ಯತ್ । ಅಗ್ನೇ । ಪಶವಃ । ಸಂऽಆಸತೇ । ಸಂऽಇದ್ಧಂ । ಅಪಿऽಶರ್ವರೇ ॥ ೭ ॥

### ಸಾಯಣಭಾಷ್ಯ.

ಹೇ ಅಗ್ನೇ ತವ ಸಂಬಂಧಿ ತದಿದಂ ಭದ್ರಂ ಶೋಭನಂ ದಂಸನಾಗ್ನಿಹೋತ್ರಾದಿಕಂ ಕರ್ಮ ಪಾಕಾಯ ಚಿತ್ । ಚಿಚ್ಛಬ್ದೋಽಪ್ಯರ್ಥೇ । ಪಾಕಾಯೇತಿ ಕರ್ಮಣಿ ಚತುರ್ಥೀ । ಪಾಕೋಽರ್ಭಕಃ । ತದ್ವದಜ್ಞಮಪಿ ಯಜಮಾನಂ ಭಜಯತಿ । ಸ್ವಫಲಪ್ರದಾನೇನ ಪೂಜಯತಿ । ಪಶುಪುತ್ರಾದಿಭಿಃ ಪರಿವೃತಂ ಕರೋತೀತ್ಯರ್ಥಃ । ಭಜಯತಿಶಬ್ದೋಽರ್ಚತಿಕರ್ಮಾ ಭಂದಯತಿ ಭಜಯತೀತಿ ತನ್ನಾಮಸು ಪಾಠಾತ್ । ಯದ್ವಾ । ಪಾಕಶಬ್ದಃ ಪ್ರಶಸ್ಯಂ ವಕ್ತಿ ಪಾಕೋ ವಾಮ ಇತಿ ಪ್ರಶಸ್ಯನಾಮಸು ಪಠಿತತ್ವಾತ್ । ತದ್ಭದ್ರಂ ಪ್ರಶಸ್ಯಂ ಯಜಮಾನಮಭಿಮತಫಲಪ್ರದಾನೇನ ಪೂಜಯತೀತ್ಯರ್ಥಃ । ಯದ್ಯಸ್ಮಾತ್ಕಾರಣಾದಪಿಶರ್ವರೇ ಶರ್ವರೀಷು ಮುಖೇಽಗ್ನಿವಿಹರಣಕಾಲ ಏವ ಸಮಿದ್ಧಂ ದೀಪ್ಯಮಾನಂ ತ್ವಾಂ ಪಶವೋ ದ್ವಿಪದಾಶ್ಚತುಷ್ಪದಾಶ್ಚೋಭಯೇ ಪಶವಃ ಸಮಾಸತೇ । ಸಮ್ಯಗಾಸತೇ । ಪರ್ಯುಪಾಸತ ಇತ್ಯರ್ಥಃ । ತದಿದಂ ಪಶ್ವಾದಿಲಕ್ಷಣಂ ಫಲಂ ಯಜಮಾನಾಯ ಪ್ರಯಚ್ಛತೀತ್ಯರ್ಥಃ ॥ ಭದ್ರಂ । ಭದಿ ಕಲ್ಯಾಣ ಇತ್ಯಸ್ಮಾದ್ಧಾತೋರುಪರಿ ರಕ್ಪ್ರತ್ಯಯೇನ ನಿಷ್ಪನ್ನಾದಂತೋದಾತ್ತತ್ವಂ । ಪಾಕಾಯ । ಪಾ ರಕ್ಷಣ ಇತ್ಯಸ್ಮಾದಿಣ್ಭೀಕಾಪಾಶಲೀತ್ಯಾದಿನಾ ಕನ್ । ಪಾಯತೇ ರಕ್ಷ್ಯತೇ ರಾಜಾದಿನೇತಿ ಪಾಕಃ । ನಿತ್ತ್ವಾದಾದ್ಯುದಾತ್ತಃ । ಭಜಯತಿ । ಭಜ ಅಪವರಣೇ । ಸ್ವಾರ್ಥೇ ಣಿಚ್ । ಅದಂತತ್ವಾದ್ವೃದ್ಧ್ಯಭಾವಃ । ನಿಘಾತಃ । ಸಮಾಸತೇ । ಆಸ ಉಪವೇಶನೇ । ಅದಾದಿತ್ವಾಚ್ಛಪೋ ಲುಕ್ । ಅನಕಾರಾಂತತ್ವಾಜ್ ಝಸ್ಯಾದೇಶಃ । ಯದ್ಯೋಗಾದನಿಘಾತಃ । ತಿಙಿ ಚೋದಾತ್ತವತೀತಿ ಗತೇರ್ನಿಘಾತಃ । ಧಾತುಸ್ವರಃ ॥

### ಪ್ರತಿಪದಾರ್ಥ.

(ಹೇ) **ಅಗ್ನೇ**—ಎಲೈ ಅಗ್ನಿಯೇ । **ಯತ್**—ಯಾವಕಾರಣದಿಂದ । **ಅಪಿಶರ್ವರೇ**—ರಾತ್ರ್ಯಾರಂಭಕಾಲದಲ್ಲಿ (ಅಗ್ನಿವಿಹರಣ ಕಾಲದಲ್ಲಿ) । **ಸಮಿದ್ಧಂ**—ದೀಪ್ಯಮಾನನಾದ । **ತ್ವಾಂ**—ನಿನ್ನನ್ನು । **ಪಶವಃ**—(ದ್ವಿಪಾದ ಚತುಷ್ಪಾದ) ಪ್ರಾಣಿಗಳೆಲ್ಲವೂ । **ಸಂ ಆಸತೇ**—ಚೆನ್ನಾಗಿ ಉಪಾಸನೆ ಮಾಡುತ್ತವೆಯೋ । (**ತತ್**—ಆದುದರಿಂದ) । **ತವ**—ನಿನ್ನ ಸಂಬಂಧವಾದ (ಮತ್ತು) । **ಭದ್ರಂ**—ಮಂಗಳಕರವಾದ । **ದಂಸನಾ**—ಈ ಅಗ್ನಿಹೋತ್ರಾದಿ ಕರ್ಮವು । **ಪಾಕಾಯಚಿತ್**—(ಬಾಲಕನಂತೆ) ಅಜ್ಞನಾದ ಅಥವಾ ಪ್ರಶಸ್ಯನಾದ ಯಜಮಾನನನ್ನು । **ಭಜಯತಿ**—(ಫಲಪ್ರದಾನದಿಂದ) ಪೂಜಿಸುತ್ತದೆ.

### ಭಾವಾರ್ಥ.

ಎಲೈ ಅಗ್ನಿಯೇ, ರಾತ್ರ್ಯಾರಂಭಕಾಲದಲ್ಲಿ (ಅಗ್ನಿವಿಹರಣಕಾಲದಲ್ಲಿ) ಉದ್ದೀಪ್ತನಾದ ನಿನ್ನನ್ನು ದ್ವಿಪದಾದಿ ಸಮಸ್ತ ಪಶುಗಳೂ ಉಪಾಸನೆ ಮಾಡುತ್ತವೆ; ಆದುದರಿಂದಲೇ ನಿನ್ನನ್ನುದ್ದೇಶಿಸಿ ಮಾಡಲ್ಪಡುವ ಅಗ್ನಿಹೋತ್ರಾದಿ ಶುಭಕರ್ಮಗಳು ಅಜ್ಞನಾದವನಿಗೂ ಪಶುಪುತ್ರಾದಿ ಫಲಪ್ರದಾನ ಮಾಡುತ್ತವೆ.

### English Translation·

Auspicious is yuro worship for it prospers the ignorant (worshipper), wherefore animals reverence you Agni, kindled in the beginning of the night.

ವಿಶೇಷವಿಷಯಗಳು.

**ಶತ್ ಭದ್ರಂ ದಂಸನಾ ಪಾಕಾಯ ಚಿತ್ ಛದಯತಿ—ಹೇ ಅಗ್ನೇ ತವ ಸಂಬಂಧಿ ಇದಂ ಶೋಭನಂ ಅಗ್ನಿಹೋತ್ರಾದಿಕಂ ಕರ್ಮ ಅರ್ಭಕಂ ಪಶುಪುತ್ರಾದಿಭಿಃ ಪರಿವೃತಂ ಕರೋತಿ । ಯದ್ವಾ । ಪಾಕಶಬ್ದಃ ಪ್ರಶಸ್ಯಂ ವಕ್ತಿ । ಪಾಕಃ ವಾಮಃ ಇತಿ ತನ್ನಾಮಸು ಪಠಿತತ್ವಾತ್ । ತಚ್ಛದಂ ಪ್ರಶಸ್ಯಂ ಯಜಮಾನವಾಭಿಮತಫಲ-ಪ್ರದಾನೇನ ಪೂಜಯತಿ ॥**

**ದಂಸ** ಶಬ್ದವು ಕರ್ಮನಾಮಗಳಲ್ಲಿ (ನಿ. ೩-೨) ಉಕ್ತವಾಗಿದೆ. ಅಗ್ನಿಹೋತ್ರಾದಿ ಕರ್ಮಗಳೆಂಬ ಅರ್ಥವನ್ನು ವಿವರಿಸಿದೆ. **ಭದ್ರ** ಶಬ್ದವು (ನಿ. ೪-೯) ಭಜನೀಯಂ ಭೂತಾನಾಮಭಿದ್ರವಣೀಯಂ ಭವದ್ರಮ ಮಯತೀತಿ ವಾ ಭಾಜನವದ್ವಾ । ಪ್ರಾಣಿಗಳಿಂದ ಹೊಂದಲು ಅರ್ಹವಾದುದು ಎಂದೂ, ಪ್ರಾಣಿಗಳಿಗೆ ಸಂತೋಷಪಡಿಸುವುದೂ, ಮತ್ತು ಪ್ರಾಣಿಗಳ ಮನಸ್ಸನ್ನು ಆಕರ್ಷಿಸುವುದೂ ಎಂದು ಭದ್ರಶಬ್ದಾರ್ಥವನ್ನು ವಿವರಿಸಿದೆ. **ಪಾಕಃ** ಎಂಬ ಪದವು **ಪ್ರಶಸ್ಯ** ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಪ್ರಶಸ್ಯವೆಂಬ ಅರ್ಥವನ್ನು ಇಲ್ಲಿ ವಿವರಿಸಿದೆ. ಮತ್ತು **ಧೀರಃ ಪಾಕಮತ್ರಾವಿವೇಶ** ಎಂಬಲ್ಲಿ **ಪಾಕಃ** ಪಕ್ತವ್ಯೋ ಭವತಿ ಯಾವುದನ್ನೂ ತಿಳಿಯದಿರುವ ಮೂಢನು ಎಂಬ ಅರ್ಥವನ್ನು ಪಾಕ ಶಬ್ದಕ್ಕೆ ಹೇಳಿದೆ. ಇಲ್ಲಿ ಸಾಯಣರು ಎರಡು ವಿಧವಾಗಿ ಅರ್ಥವನ್ನು ವರ್ಣಿಸಿದ್ದಾರೆ. ಮೊದಲನೆಯದಾಗಿ ಅಗ್ನಿಯನ್ನು ಸಂಬೋಧಿಸಿ (ಅಗ್ನಿಯಲ್ಲಿ ಹೋಮಮಾಡುವ) ಅಗ್ನಿಹೋತ್ರರೂಪವಾದ ಕರ್ಮವು ಪೂಜ್ಯವಾಗಿರುತ್ತಾ ಮಂದಾಧಿಕಾರಿಗಳಾದ ಅಜ್ಞಾನಿಗಳಿಗೆ ಪುತ್ರಪೌತ್ರಾದಿಗಳ ಅಭಿವೃದ್ಧಿಯನ್ನು ಉಂಟುಮಾಡುತ್ತದೆ ಎಂದು ಅರ್ಥಮಾಡಿದೆ. ಎರಡನೆಯದಾಗಿ ಪಾಕಶಬ್ದವನ್ನು ಭದ್ರಶಬ್ದಕ್ಕೆ ವಿಶೇಷಣಮಾಡಿ ಪ್ರಶಸ್ಯವೆಂಬ ಅರ್ಥವನ್ನು ಅಂಗೀಕರಿಸಿರುವುದರಿಂದ ಯಜ್ಞಮಾಡುವ ಯಜಮಾನರಿಗೆ ಅಭಿಮತವಾದ ಪ್ರಶಸ್ಯವಾದ ಕಲ್ಯಾಣವನ್ನು ಅಗ್ನಿಹೋತ್ರಾದಿಗಳು ಉಂಟುಮಾಡುತ್ತವೆಯಾದಕಾರಣ ಯಜಮಾನರಿಗೆ ಗೌರವವನ್ನು ಉಂಟುಮಾಡುತ್ತವೆ ಎಂದು ವರ್ಣಿಸಿದೆ.

**ಆಪಿಶರ್ವರೇ ಸಮಿದ್ಧಂ ಪಶವಃ ಸಮುಪಾಸತೇ ಶರ್ವರೀಮುಖೇ ಅಗ್ನಿವಿಹರಣಕಾಲ ಏವ ದೀಪ್ಯಮಾನಂ ತ್ವಾಂ ದ್ವಿಪದಾಶ್ಚತುಷ್ಪದಾಶ್ಚೋಭಯೇ ಪಶವಃ ಪರ್ಯುಪಾಸತೇ** । **ಶರ್ವರೀ** ಶಬ್ದವು ರಾತ್ರಿನಾಮಗಳಲ್ಲಿ (ನಿ ೧-೭) ಉಕ್ತವಾಗಿದೆ. ಇಲ್ಲಿ ಶರ್ವರ ಪದಕ್ಕೆ ಶರ್ವರೀ (ರಾತ್ರಿ) ಎಂಬ ಅರ್ಥವನ್ನು ಮಾಡಿ ಅಗ್ನಿಯು ರಾತ್ರಿಯ ಪ್ರಾರಂಭದಲ್ಲಿ ಉದ್ದೀಪ್ತನಾಗಿರುವನೆಂತಲೂ, ಆಗ ಮಾನವರೂ (ಮನುಷ್ಯರೂ) ಇತರ ಪ್ರಾಣಿಗಳೂ ಸಹ ಅವನನ್ನು ಸೇವಿಸುತ್ತಾರೆಂದೂ ವರ್ಣಿಸಿ, **ತದಿದಂ ಪಶ್ವಾದಿಲಕ್ಷಣಂ ಫಲಂ ಯಜಮಾನಾಯ ಪ್ರಯಚ್ಛತಿ**-ಅಗ್ನಿಯು ಸರ್ವರಿಂದಲೂ **ಪೂಜ್ಯ**ನಾಗಿ ಯಜಮಾನರಿಗೆ ದಾಸೀ ದಾಸರೇ ಮೊದಲಾದ ಮತ್ತು ಗವಾದಿಗಳರೂಪವಾದ ಫಲವನ್ನು ಅನುಗ್ರಹಿಸುವನೆಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

**ಭದ್ರಮ್**— ಭದಿ ಕಲ್ಯಾಣೇ ಸುಖೇಚ ಧಾತು **ಸ್ಫಾಯಿತಂಚಿ**—(ಉ ಸೂ. ೧-೧೮೬) ಎಂಬುದರಿಂದ **ರಕ್** ಪ್ರತ್ಯಯಾಂತವಾಗಿ ನಿಪಾತಿತವಾಗಿರುವುದರಿಂದ ಅಂತೋದಾತ್ತವಾಗುತ್ತದೆ.

**ಪಾಕಾಯ**— ಪಾ ರಕ್ಷಣೇ ಧಾತು. **ಇಣ್ ಭೀಕಾಪಾಶಲಿ**—(ಉ. ಸೂ. ೩-೩೨) ಎಂಬುದರಿಂದ **ಕನ್** ಪ್ರತ್ಯಯ. ಪಾಯತೇ ರಕ್ಷ್ಯತೇ ರಾಜಾದಿಭಿಃ ಇತಿ ಪಾಕಃ (ರಾಜರೇ ಮುಂತಾದವರಿಂದ **ರಕ್ಷಿಸಲ್ಪ**

ಡುವುದು) ನಿತ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಛದಯತಿ**—ಛದ ಅಪವಾರಣೇ ಧಾತು. ಸ್ವಾರ್ಥದಲ್ಲಿ ಣಿಚ್. ಅದಂತವಾದ ಧಾತುವಾದುದರಿಂದ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರ ಲೋಪ. **ಅಚಃಪರಸ್ಮಿನ್ಪೂರ್ವವಿಧೌ** (ಪಾ. ಸೂ. ೧-೧-೫೭) ಎಂಬುದರಿಂದ ಅದಕ್ಕೆ ಸ್ಥಾನಿವದ್ಭಾವ ಬರುವುದರಿಂದ ಣಿಚ್ ನಿಮಿತ್ತವಾಗಿ ಉಪಧಾವೃದ್ಧಿ ಬರುವುದಿಲ್ಲ. ಣಿಜಂತದ ಮೇಲೆ ಲಟ್. ಪ್ರಥಮಪುರುಷ ಏಕವಚನದಲ್ಲಿ ತಿಪ್. ಶಪ್- ಶಪ್ ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಮಾಸತೇ**—ಸಮ್ ಉಪಸರ್ಗ. ಆಸ ಉಪವೇಶನೇ ಧಾತು ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ( ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. ಸಕಾರದ ಪರದಲ್ಲಿ ಪ್ರತ್ಯಯ ಬಂದುದರಿಂದ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅದಕ್ಕೆ ಅತಾದೇಶ. ಯುದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತೇತ್ತಾದ ಧಾತುವಿನ ಪರದಲ್ಲಿ ವಿಭಕ್ತಿ ಬಂದುದರಿಂದ ಅನುದಾತ್ತವಾಗುತ್ತದೆ. ಧಾತುಸ್ವರ ಉಳಿಯುತ್ತದೆ. ಉದಾತ್ತವುಳ್ಳ ತಿಙಂತ ಪರವಾದುದರಿಂದ ಗತಿಗೆ (ಸಮ್) **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಅನುದಾತ್ತಸ್ವರ ಬರುತ್ತದೆ.

**ಸಮಿದ್ಧಮ್**—ಞಿಇಂಧೀ ದೀಪ್ತೌ ಧಾತು. ಕ್ತ ಪ್ರತ್ಯಯ. **ಅನಿದಿತಾಂಹಲ**—ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. **ಝಷಸ್ತಥೋ**—ಎಂಬುದರಿಂದ ಪ್ರತ್ಯಯಕ್ಕೆ ಧತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸಮ್) ಉದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಆ ಜುಹೋತಾ ಸ್ವಧ್ವರಂ ಶೀರಂ ಪಾವಕಶೋಚಿಷಂ ।

ಆಶುಂ ದೂತಮಜಿರಂ ಪ್ರತ್ನಮೀಡ್ಯಂ ಶ್ರುಷ್ಟೀ ದೇವಂ ಸಪರ್ಯತ ॥

ಪದಪಾಠಃ

ಆ । ಜುಹೋತ । ಸುಽಅಧ್ವರಂ । ಶೀರಂ । ಪಾವಕಽಶೋಚಿಷಂ ।

ಆಶುಂ । ದೂತಂ । ಅಜಿರಂ । ಪ್ರತ್ನಂ । ಈಡ್ಯಂ । ಶ್ರುಷ್ಟೀ । ದೇವಂ । ಸಪರ್ಯತ ॥ ೮ ॥

ಸಾಯಣಭಾಷ್ಯಂ.

ಋತ್ವಿಜೋ ಯಜಮಾನಃ ಪ್ರೇರಯತಿ । ಹೇ ಋತ್ವಿಜಃ ಪಾವಕಶೋಚಿಷಂ ಶೋಧಕದೀಪ್ತಿಂ ಶೀರಂ ಕಾಷ್ಠೇಷ್ವೋಷಧೀಷು ಚಾನುಶಾಯಿನಂ ಸ್ವಧ್ವರಂ ಶೋಭನಯಜ್ಞೋಪೇತಮಿಮಮಗ್ನಿಮಾ ಜುಹೋತ । ಆಹುತಿಭಿರಾ ಸಮಂತಾತ್ತರ್ಪಯತ । ಅಪಿ ಚ । ಆಶುಂ ಕರ್ಮಣಿ ವ್ಯಾಪ್ತಂ ದೂತಮಾಹ್ವಾನಕಾರಿತ್ವೇನ ದೇವಾನಾಂ ದೂತಮಜಿರಂ ಕ್ಷಿಪ್ರಂ ಗಂತಾರಂ ಪ್ರತ್ನಂ ಪುರಾತನಮೀಡ್ಯಂ ಸ್ತೋತವ್ಯಂ ದೇವಂ ದ್ಯೋತಮಾನಮಿಮಮಗ್ನಿಂ ಶ್ರುಷ್ಟೀ ಸಪರ್ಯತ । ಶ್ರುಷ್ಟೀತಿ ಕ್ಷಿಪ್ರನಾಮೇತಿ ಯಾಸ್ಕಃ । ಕ್ಷಿಪ್ರಂ ಪೂಜಯತ ॥ ಜುಹೋತ । ಹು ದಾನಾದನಯೋಃ । ಅಸ್ಮಾದ್ಧಾತೋರ್ಲೋಟ್ । ಜುಹೋತ್ಯಾದಿಭ್ಯಃ ಶ್ಲುರಿತಿ ಶಪಃ ಶ್ಲುಃ । ಶ್ಲಾವಿತಿ ದ್ವಿರ್ವಚನಂ । ಲೋಟೋ ಲಙ್ವದಿತಿ ಲಙ್ವದ್ಭಾವೇ ತಸ್ಥಸ್ಥಮಿಪಾಮಿತಿ ಥಸ್ಯ ತಾದೇಶಃ । ಛಂದಸೀತ್ಯನುವೃತ್ತೌ ತಸ್ಯ ತಪ್ತನಪ್ತನಥನಾಶ್ಚೇತಿ ತಬಾದೇಶಃ । ಪಿತ್ತ್ವಾದ್ಗುಣಃ । ನಿಘಾತಃ । ಸ್ವಧ್ವರಂ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಶೀರಂ । ಶೀಙ್ ಸ್ವಪ್ನೇ । ಅಸ್ಮಾದ್ಧಾತೋಃ ಸ್ಫಾಯಿತಂಚಿವಂಚೀತ್ಯಾದಿನಾ ರಕ್ಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಪ್ರತ್ಯಯಸ್ವರಃ । ಪಾವಕಶೋಚಿಷಮಿತ್ಯತ್ರ ಪವನಂ ಪಾವಃ ಶುದ್ಧಿಃ । ತಂ ಕಾಯತೀತಿ ಪಾವಕಃ । ಆತೋಽನುಪಸರ್ಗೇ ಕಃ । ಪ್ರತ್ಯಯಸ್ವರಃ । ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮಿತಿ ಪೂರ್ವಪದಪ್ರಕೃತಿಸ್ವರತ್ವಂ । ಆಶುಂ । ಅಶೂ ವ್ಯಾಪ್ತೌ । ಅಸ್ಮಾದ್ಧಾತೋಃ ಕೃವಾಪಾಜಿಮಿತ್ಯಾದಿನಾ ಉಣ್ । ಉಪಧಾವೃದ್ಧಿಃ । ಪ್ರತ್ಯಯಸ್ವರಃ । ಅಜಿರಂ । ಅಜ ಗತಿಕ್ಷೇಪಣಯೋರಿತ್ಯಸ್ಮಾದ್ಧಾತೋರಜಿರಶಿಶಿರಶಿಥಿಲೇತಿ ಕಿರಚ್‌ಪ್ರತ್ಯಯಾಂತತ್ವೇನ ನಿಪಾತನಾದಂತೋದಾತ್ತತ್ವಂ । ಪ್ರತ್ನಂ । ಪ್ರಗಸ್ಯ ಛಂದಸಿ ಗಲೋಪಶ್ಚ । ಪಾ. ೪-೩-೨೩-೨ । ಇತಿ ಗಲೋಪಃ । ಚಕಾರಾತ್ ತ್ನಪ್ರತ್ಯಯಃ । ಪ್ರತ್ಯಯಸ್ವರಃ । ಈಡ್ಯಂ । ಈಡ ಸ್ತುತೌ । ಅಸ್ಮಾಣ್ಣ್ಯತ್ । ಈಡವಂದೇತ್ಯಾದಿನಾದ್ಯುದಾತ್ತತ್ವಂ । ಸಪರ್ಯತ । ಸಪರಶಬ್ದಾತ್ಕಂಡ್ವಾದಿಭ್ಯೋ ಯಕ್ ಪೂಜಾಯಾಂ ವರ್ತತೇ । ಲೋಣ್ಮಧ್ಯಮಪುರುಷಬಹುವಚನಂ । ಶಪ್ । ಅತೋ ಗುಣ ಇತಿ ಪೂರ್ವರೂಪತ್ವಂ । ನಿಘಾತಃ ॥

ಪ್ರತಿಪದಾರ್ಥ.

(**ಹೇ ಋತ್ವಿಜಃ**—ಎಲೈ ಋತ್ವಿಜರೇ) । **ಪಾವಕಶೋಚಿಷಂ**— ಪವಿತ್ರೀಕರಿಸುವ ಜ್ವಾಲೆಯುಳ್ಳವನೂ । **ಶೀರಂ**—(ಕಾಷ್ಠ ಮತ್ತು ಓಷಧಿಗಳಲ್ಲಿ) ಅಡಗಿರುವವನೂ । **ಸ್ವಧ್ವರಂ**—ಶುಭಾವಹವಾದ ಯಜ್ಞವಿಶಿಷ್ಟನೂ ಆದ ಈ ಅಗ್ನಿಯನ್ನು । **ಆ ಜುಹೋತ**—(ಆಹುತಿಗಳಿಂದ) ಚೆನ್ನಾಗಿ ತೃಪ್ತಿಪಡಿಸಿ; (ಮತ್ತು) **ಆಶುಂ**— ಕರ್ಮವನ್ನು ವ್ಯಾಪಿಸುವವನೂ । **ದೂತಂ**—(ದೇವತೆಗಳ ಆಹ್ವಾನಕಾರಿಯಾದುದರಿಂದ) ದೂತನೂ । **ಅಜಿರಂ**— ಶೀಘ್ರವಾಗಿ (ಆಗಮಿಸುವವನೂ) **ಪ್ರತ್ನಂ**—ಪುರಾತನನೂ । **ಈಡ್ಯಂ**— ಸ್ತುತ್ಯನೂ । **ದೇವಂ**—ದ್ಯೋತಮಾನನೂ ಆದ ಈ ಅಗ್ನಿಯನ್ನು । **ಶ್ರುಷ್ಟೀ**—ಕ್ಷಿಪ್ರವಾಗಿ । **ಸಪರ್ಯತ**—ಪೂಜಿಸಿರಿ ॥

ಭಾವಾರ್ಥ.

ಎಲೈ ಋತ್ವಿಜರೇ, ಶುದ್ಧಿಕಾರಕವಾದ ಜ್ವಾಲಾವಿಶಿಷ್ಟನೂ, ಕಾಷ್ಠಾದಿಸನ್ನಿಹಿತನೂ ಆದ ಅಗ್ನಿಯನ್ನು ಆಹುತಿಗಳಿಂದ ಚೆನ್ನಾಗಿ ತೃಪ್ತಿಪಡಿಸಿ ಮತ್ತು ಕರ್ಮಗಳನ್ನು ವ್ಯಾಪಿಸುವವನೂ, ದೇವತೆಗಳನ್ನು ಕರೆಯುವವ

ನಾದುದರಿಂದ ದೂತಶಬ್ದವಾಚ್ಯನೂ, ಶೀಘ್ರವಾಗಿ ಯಾಗಗಳಿಗೆ ಬರುವವನೂ, ಪುರಾತನನೂ, ಸ್ತೋತ್ರಾರ್ಹನೂ, ಪ್ರಶಾತಿಸುತ್ತಿರುವವನೂ ಆದ ಅಗ್ನಿಯನ್ನು ಕ್ಷಿಪ್ರವಾಗಿ ಪೂಜಿಸಿರಿ.

## English Translation.

Offer oblations to the object of holy sacrifice, the brilliant purifier, who is dormant (in fuel): worship quietly the pervader (of the rite) the messenger (of the gods), the rapid, the ancient deity who is entitled to laudation.

ವಿಶೇಷವಿಷಯಗಳು.

**ಪಾವಕಶೋಚಿಷಂ— ಶೋಚಿಷಮಿತ್ಯತ್ರ ಪವನಂ ಪಾವಃ ಶುದ್ಧಿಃ ತಂ ಕಾಯತೀತಿ ಪಾವಕಃ । ಶೋಥಕದೀಪ್ತಿಂ ।** ಅಗ್ನಿಯು ಪರಿಶುದ್ಧಿಯನ್ನು ಉಂಟುಮಾಡುವ (ಜ್ವಾಲೆಗಳು) ಕಾಂತಿಯುಳ್ಳವನೆಂಬ ಅರ್ಥವನ್ನು ವಿವರಿಸಿದೆ.

**ಶೀರಂ— ಕಾಷ್ಠೇಷ್ವೋಷಧೀಷು ಚಾನುಶಾಯಿನಂ.** ಅಗ್ನಿಯು ಕಟ್ಟಿಗೆಗಳಲ್ಲಿಯೂ, ಮೂಲಿಕೆಗಳಲ್ಲಿಯೂ, ವ್ಯಾಪಿಸಿರುವನೆಂದು ಅರ್ಥ. ನಿರುಕ್ತಕಾರರು—

**ಶೀರಂ ಪಾವಕಶೋಚಿಷಂ ಜ್ಯೇಷ್ಠೋ ಯೋ ದಮೇಷ್ವಾ ।**
**ದೀದಾಯ ದೀರ್ಘಶ್ರುತ್ತಮಃ ॥**

(ಋ. ಸಂ. ೮-೧೦೨-೧೧)

ಈ ಋಕ್ಕನ್ನು ಉದಹರಿಸಿ ಪಾವಕದೀಪ್ತಂ **ಅನುಶಾಯಿನಮಿತಿ ವಾಶಿನಮಿತಿ ವಾ ।** ಅನುಶಾಯಿ, ಆಶಿ ಶಬ್ದಗಳಿಗೆ ವ್ಯಾಪಿಸುವವನು ಎಂದೂ, **ಪಾವಯಿತ್ರೀ ಯಸ್ಯ ಶೋಚಿಃ ದೀಪ್ತಿಃ—** ಅಗ್ನಿಯ ಕಾಂತಿಯು ಪರಿಶುದ್ಧಿಯನ್ನು ಉಂಟುಮಾಡುವುದರಿಂದ ಅಗ್ನಿಯು ಶುದ್ಧಿಮಾಡತಕ್ಕವನೆಂದೂ ಅರ್ಥವನ್ನು ವಿವರಿಸಿದೆ.

**ಸ್ವಧ್ವರಂ— ಶೋಭನಯಜ್ಞೋಪೇತಂ ।** ಅಗ್ನಿಯು ಉತ್ತಮವಾದ ಮತ್ತು ಮಂಗಳಕರವಾದ ಫಲವನ್ನುಂಟುಮಾಡುವ ಯಜ್ಞಗಳಿಗೆ ಸಾಧಕನಾಗಿರುವುದರಿಂದ ಯಜ್ಞಗಳಿಂದ ಕೂಡಿರುವವನೆಂದು ವರ್ಣಿಸಿದೆ.

**ದೂತಂ— ದೇವಾನಾಂ ಆಹ್ವಾನಕಾರಿತ್ವೇನ ದೂತಂ** ಯಜ್ಞಕ್ಕಾಗಿ ದೇವತೆಗಳನ್ನು ಆಹ್ವಾನ ಮಾಡುವುದರಿಂದಲೂ ಆವರವರ ಹವಿರ್ಭಾಗಗಳನ್ನು ಆವರವರಿಗೆ ತಲುಪಿಸುವುದರಿಂದಲೂ ಅಗ್ನಿಯು ದೇವತೆಗಳಿಗೆ ದೂತನಾಗಿ ಇರುವನೆಂದು ವರ್ಣಿಸಿದೆ.

**ಅಜಿರಂ— ಕ್ಷಿಪ್ರಂ ಗಂತಾರಂ.** ಅಜಿರ ಶಬ್ದವು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಅಗ್ನಿಯು (ವೇಗವಾಗಿ) ಅಥವಾ ಜಾಗ್ರತೆಯಾಗಿ ಸಂಚರಿಸುವವನೆಂದು ಅರ್ಥಮಾಡಿದೆ.

**ಈಡ್ಯಂ ದೇವಂ ಶ್ರುಷ್ಟೀ ಸಪರ್ಯತ—** ಶ್ರುಷ್ಟೀ ಎಂಬ ಪದವು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಬಹಳವಾದ ಕಾಂತಿಯುಳ್ಳವನಾಗಿಯೂ ಎಲ್ಲರ ಸ್ತುತಿಗೂ ಪಾತ್ರನಾಗಿರುವ ಅಗ್ನಿಯನ್ನು ಬೇಗನೆ ಪೂಜಿಸಿರಿ, ಮತ್ತು ಆ ಜುಹೋತ ಆಹುತಿಗಳಿಂದ ತೃಪ್ತಿಪಡಿಸಿರಿ ಎಂದು ಮಂತ್ರದ್ರಷ್ಟಾರದ ಋಷಿಯು ಆದೇಶರೂಪದಿಂದ ಅಗ್ನಿಯ ಪ್ರಭೂತವಾದ ಮಾಹಾತ್ಮ್ಯವನ್ನು ವಿವರಿಸಿದ್ದಾನೆ.

ವ್ಯಾಕರಣಪ್ರಕ್ರಿಯಾ.

**ಜುಹೋತ**—ಹು ದಾನಾದನಯೋಃ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ಥ** ಪ್ರತ್ಯಯ. **ತಸ್ಥಸ್ಥಮಿಪಾಂ** (ಪಾ. ಸೂ. ೩-೪-೧೦೧) ಎಂಬುದರಿಂದ, ಲೋಟಿಗೆ ಲಙ್ವದ್ಭಾವವಿರುವು ದರಿಂದ ಪ್ರತ್ಯಯಕ್ಕೆ ತಾದೇಶ. **ಜುಹೋತ್ಯಾದಿಭ್ಯಃ ಶ್ಲುಃ** (ಪಾ ಸೂ. ೨-೪-೭೫) ಎಂಬುದರಿಂದ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಛಂದಸಿ** ಎಂದು ಅನುವೃತ್ತವಾಗುವಾಗ **ತಪ್ತನಪ್ತನಥ-ನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಪ್ರತ್ಯಯಕ್ಕೆ ತಪ್ ಆದೇಶ. ಇದು ಪಿತ್ತಾದುದರಿಂದ **ಸಾರ್ವ-ಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಅದನ್ನು ನಿಮಿತ್ತೀಕರಿಸಿ ಅಂಗದ ಉಕಾರಕ್ಕೆ ಗುಣ. ಜುಹೋತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ವಧ್ವರಮ್**—ಶೋಭನಃ ಅಧ್ವರಃ ಯಸ್ಯ ಸಃ ಸ್ವಧ್ವರಃ ತಮ್. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶೀರಮ್**—ಶೀಙ್ ಸ್ವಪ್ನೇ ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೨-೧೪೬) ಎಂಬುದರಿಂದ ಇದಕ್ಕೆ ರಕ್ ಪ್ರತ್ಯಯ. ಇದು ಕಿತ್ತಾದುದರಿಂದ ಧಾತುವಿನ ಇಕಾರಕ್ಕೆ ಗುಣ ಬರುವುದಿಲ್ಲ. ಪ್ರತ್ಯಯಸ್ವರ ದಿಂದ ಅಂತೋದಾತ್ತವಾಗುತ್ತದೆ.

**ಪಾವಕಶೋಚಿಷಮ್**—ಪವನಂ ಪಾವಃ ಶುದ್ಧಿಃ. ತಂ ಕಾಯತೀತಿ ಪಾವಕಃ. **ಆತೋಽನುಪ-ಸರ್ಗೇಕಃ** (ಪಾ. ಸೂ. ೩-೨-೩) ಎಂಬುದರಿಂದ ಕ ಪ್ರತ್ಯಯ. **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪಾವಕಂ ಶೋಚಿಃ ಯಸ್ಯ ಸಃ ತಮ್. **ಬಹುವ್ರೀಹೌಪ್ರ-ಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪೂರ್ವಪದವು ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಆಕುಂ**—ಅಶೂ ವ್ಯಾಪ್ತೌ ಧಾತು. **ಕೃವಾಪಾಜಿ**—(ಉ. ಸೂ. ೧-೧) ಎಂಬದರಿಂದ ಉಣ್ ಪ್ರತ್ಯಯ. ಅತ **ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಪ್ರತ್ಯಯ ಣಿತ್ತಾದುದರಿಂದ ಧಾತುವಿನ ಉಪಧೆಗೆ ವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ

**ಅಜಿರಂ**—ಅಜ ಗತಿಕ್ಷೇಪಣಯೋಃ ಧಾತು. **ಅಜಿರಶಿಶಿರಶಿಥಿಲ**—(ಉ. ಸೂ. ೧-೫೩) ಎಂಬುದ ರಿಂದ ಇದು ಕಿರಚ್ ಪ್ರತ್ಯಯಾಂತವಾಗಿ ನಿಪಾತಿತವಾದುದರಿಂದ ಅಂತೋದಾತ್ತವಾಗುತ್ತದೆ.

**ಪ್ರತ್ನಂ**—**ಪ್ರಗಸ್ಯ ಛಂದಸಿ ಗಲೋಪಶ್ಚ** (ಕಾ. ೪-೩-೨೩-೨) ಎಂಬುದರಿಂದ ಪ್ರಗ ಶಬ್ದದ ಗಕಾ ರಕ್ಕೆ ಲೋಪ. ಚಕಾರದಿಂದ ತ್ನ ಪ್ರತ್ಯಯ. ಪ್ರತ್ನ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಈಡ್ಯಮ್**—ಈಡ ಸ್ತುತೌ ಧಾತು. ಹಲಂತಧಾತುವಾದುದರಿಂದ **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. **ಈಡವಂದ ವೃಶಂಸ**—(ಪಾ. ಸೂ. ೬-೧-೨೧೪) ಎಂಬುದ ರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಪರ್ಯಥ**—ಸಪರ ಪೂಜಾಯಾಮ್ ಧಾತು, ಕಂಡ್ವಾದಿ. **ಕಂಡ್ವಾದಿಭ್ಯೋಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಇದಕ್ಕೆ ಸ್ವಾರ್ಥದಲ್ಲಿ ಯಕ್. **ಸನಾದ್ಯಂತಾಧಾತವಃ** ಎಂಬುದರಿಂದ ಯಗಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಯಗಂತದ ಮೇಲೆ ಲೋಣ್ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ ಬಂದಾಗ ಅದಕ್ಕೆ ತಾದೇಶ. ಶಪ್ ವಿಕರಣ. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರ. ರೂಪ. ಸಪರ್ಯತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।
ಔಕ್ಷನ್ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥ ೯ ॥

ಪದಪಾಠಃ

ತ್ರೀಣಿ । ಶತಾ । ತ್ರೀ । ಸಹಸ್ರಾಣಿ । ಅಗ್ನಿಂ । ತ್ರಿಂಶತ್ । ಚ । ದೇವಾಃ । ನವ । ಚ । ಅಸಪರ್ಯನ್ । ಔಕ್ಷನ್ । ಘೃತೈಃ । ಅಸ್ತೃಣನ್ । ಬರ್ಹಿಃ । ಅಸ್ಮೈ । ಆತ್ । ಇತ್ । ಹೋತಾರಂ । ನಿ । ಅಸಾದಯಂತ ॥ ೯ ॥

ಸಾಯಣಭಾಷ್ಯಂ.

ತ್ರೀಣಿ ಶತಾ ತ್ರೀಣಿ ಶತಾನಿ ತ್ರೀ ಸಹಸ್ರಾಣಿ ತ್ರೀಣಿ ಸಹಸ್ರಾಣಿ ತ್ರಿಂಶಚ್ಚ ನವ ಚೈಕೋನಚತ್ವಾರಿಂಶದಧಿಕಶತತ್ರಯೋಪೇತತ್ರಿಸಹಸ್ರಸಂಖ್ಯಾಕಾ ದೇವಾ ಇಮಮಗ್ನಿಮಸಪರ್ಯನ್ । ಅಪೂಜಯನ್ । ಕಿಂಚ ತೇ ದೇವಾ ಘೃತೈರಿಮಮಗ್ನಿಮೌಕ್ಷನ್ । ಅಸಿಂಚನ್ । ತಥಾಸ್ಮಾ ಅಗ್ನಯೇ ತದರ್ಥಂ ಬರ್ಹಿರಸ್ತೃಣನ್ । ಬರ್ಹಿಷಾಸ್ತರಣಂ ವೇದ್ಯಾಚ್ಛಾದನಮಕುರ್ವನ್ । ಆದಿದನಂತರಮೇವ ತೇ ದೇವಾಸ್ತಸ್ಮಿನ್ಬರ್ಹಿಷ್ಯೇನಮಗ್ನಿಂ ಹೋತಾರಂ ಕೃತ್ವಾ ನ್ಯಸಾದಯಂತ । ಉಪಾವೇಶಯನ್ । ದೇವೈಃ ಪೂಜ್ಯಮಿಮಮಗ್ನಿಂ ಸಪರ್ಯತೇತಿ ಪೂರ್ವೇಣಾನ್ವಯಃ । ದೇವಸಂಖ್ಯಾ ಚ ಬೃಹದಾರಣ್ಯಕೇಽಭಿಹಿತಾ । ಮಹಿಮಾನ ಏವೈಷಾಮೇತೇ ತ್ರಯಸ್ತ್ರಿಂಶತ್ತ್ವೇವ ದೇವಾ ಇತಿ । ಕತಮೇ ತೇ ತ್ರಯಸ್ತ್ರಿಂಶದಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾ । ಬೃ. ಆ. ೩-೯ । ಇತಿ ॥ ಶತಾ । ದಶಾನಾಂ ದಶತಾಂ ಶಭಾವಸ್ತಶ್ಚ ಪ್ರತ್ಯಯಃ । ದಶ ದಶತಃ ಪರಿಮಾಣಮೇಷಾಂ ಶತಾನಿ । ಸುಪಾಂ ಸುಲುಗಿತ್ಯಾದಿನಾ ಸುಪೋ ಡಾದೇಶಃ । ಪ್ರತ್ಯಯಸ್ವರಃ । ತ್ರೀ । ಸುಪಾಂ ಸುಲುಗಿತಿ ಪೂರ್ವಸವರ್ಣದೀರ್ಘಃ । ಫಿಟ್ಸ್ವರಃ । ಸಹಸ್ರಾಣಿ । ಕರ್ದಮಾದಿತ್ವಾನ್ಮಧ್ಯೋದಾತ್ತಃ । ತ್ರಿಂಶತ್ । ತ್ರಯಾಣಾಂ ದಶತಾಂ ತ್ರಿನ್ಭಾವಃ ಶಚ್ಚ ಪ್ರತ್ಯಯಃ । ತ್ರಯೋ ದಶತಃ ಪರಿಮಾಣಮಸ್ಯ ತ್ರಿಂಶತ್ ।

ಪ್ರತ್ಯಯಸ್ವರಃ । ನವ । ಕನಿನ್ನಿತ್ಯನುವೃತ್ತೌ ಞು ಸ್ತುತಾವಿತ್ಯಸ್ಮಾದ್ಧಾತೋರ್ಣುದಂಶೋರ್ನುದಶ್ಚೇತಿ ಕನಿನ್ । ಗುಣಃ । ನಿತ್ತ್ವಾದಾದ್ಯುದಾತ್ತಃ । ಅಸಪರ್ಯನ್ । ಲಙಿ ರೂಪಂ । ನಿಘಾತಃ । ಔಕ್ಷನ್ । ಉಕ್ಷ ಸೇಚನೇ । ಆಡಜಾದೀನಾಮಿತ್ಯಾಡಾಗಮಃ । ವೃದ್ಧಿಃ । ಪಾದಾದಿತ್ವಾನ್ನ ನಿಹನ್ಯತೇ । ಆಗಮುಸ್ವರಃ । ಅಸ್ತೃಣನ್ । ಸ್ತೃಞ್ ಆಚ್ಛಾದನೇ । ಲಙ್ಬಹುವಚನೇ ಕ್ರ್ಯಾದಿಭ್ಯಃಶ್ನಾ । ಝೋಽನ್ತಾದೇಶಃ । ನಿತ್ಯಂ ಙಿತ ಇತೀಕಾರಲೋಪಃ । ಸಂಯೋಗಾಂತಲೋಪಃ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಲುಙ್ಲಙ್ಲೃಙ್ಕ್ಷ್ವಡಿತ್ಯಡಾಗಮಃ । ಸ ಚೋದಾತ್ತಃ । ಆಗಮುಸ್ವರಃ । ವಾಕ್ಯೇಽತ್ಯನುವೃತ್ತೌ ಚಾದಿತ್ವಾನ್ನಿಘಾತಾಭಾವಃ । ಬರ್ಹಿಃ । ಇಸಿರಿತ್ಯನುವೃತ್ತೌ ವೃಂಹೇರ್ನಲೋಪಶ್ಚೇತೀಸಿಃ । ತತ್ಸಂನಿಯೋಗೇನ ನಲೋಪಃ । ಪ್ರತ್ಯಯಸ್ವರಃ । ಅಸಾದಯಂತ । ಷದ್ಲೃ ವಿಶರಣಗತ್ಯವಸಾದನೇಷು । ಅಸ್ಮಾದ್ಧೇತುಮತಿ ಚೇತಿ ಣಿಚ್ । ಉಪಧಾವೃದ್ಧಿಃ । ಣಿಚಶ್ಚೇತ್ಯಾತ್ಮನೇಪದಂ । ಲಙಿ ಬಹುವಚನೇ ರೂಪಂ । ನಿಘಾತಃ ॥

### ಪ್ರತಿಪದಾರ್ಥ.

ತ್ರೀಣಿಶತಾ—ಮುನ್ನೂರು । ತ್ರೀ ಸಹಸ್ರಾ—ಮೂರುಸಾವಿರ । ತ್ರಿಂಶತ್ ಚ—ಮೂವತ್ತು, ಮತ್ತು । ನವ ಚ—ಒಂಭತ್ತು । ದೇವಾಃ—(ಹೀಗೆ ಮೂರುಸಾವಿರದ ಮುನ್ನೂರ ಮೂವತ್ತೊಂಬತ್ತು ದೇವತೆಗಳು । (ಇಮಂ) ಅಗ್ನಿಂ—ಈ ಅಗ್ನಿಯನ್ನು । ಅಸಪರ್ಯನ್—ಪೂಜಿಸಿದರು; (ಮತ್ತು ಆ ದೇವತೆಗಳು) । ಘೃತೈಃ—ಘೃತದಿಂದ । ಔಕ್ಷನ್—(ಅಗ್ನಿಯನ್ನು) ಸಿಂಚಿಸಿದರು; (ತಥಾ—ಹಾಗೆಯೇ) । ಅಸ್ಮೈ—ಈ ಅಗ್ನಿಗೋಸ್ಕರ । ಬರ್ಹಿಃ—ದರ್ಭೆಯನ್ನು । ಅಸ್ತೃಣನ್—ಹರಡಿದರು । ಆತ್ ಇತ್—ಅನಂತರವೇ (ದೇವತೆಗಳು ಅಗ್ನಿಯನ್ನು) । ಹೋತಾರಂ—ಹೋತೃವನ್ನಾಗಿ (ಮಾಡಿ) । ನಿ ಅಸಾದಯಂತ—ಕೂಡಿಸಿದರು

### ಭಾವಾರ್ಥ.

ಮೂರುಸಾವಿರದಮುನ್ನೂರಮೂವತ್ತೊಂಬತ್ತು ದೇವತೆಗಳು ಈ ಅಗ್ನಿಯನ್ನು ಪೂಜಿಸಿ, ಅವನಿಗೆ ಘೃತಸೇಚನಮಾಡಿ, ಅವನಿಗಾಗಿ (ವೇದಿಯಮೇಲೆ) ದರ್ಭಾಸನವನ್ನು ಕಲ್ಪಿಸಿ, ಅನಂತರ, ಅವನನ್ನು ಹೋತೃವನ್ನಾಗಿ ನಿಯಮಿಸಿ, ಆಸನದ ಮೇಲೆ ಕೂಡಿಸಿದರು. (ಆದುದರಿಂದ ದೇವತೆಗಳಿಂದಲೇ ಪೂಜಿತನಾದ ಇವನನ್ನು, ಎಲೈ ಋತ್ವಿಜರೇ, ನೀವೂ ಪೂಜಿಸಿರಿ).

### English Translation.

Three thousand three hundred and thirty-nine divinities have worshipped Agni: they have sprinkled him with melted butter; they have spread for him the sacred grass; and have seated him upon it as their ministrant priest.

### ವಿಶೇಷ ವಿಷಯಗಳು.

ತ್ರೀಣಿ ಶತಾ ತ್ರೀ ಸಹಸ್ರಾಣಿ ತ್ರಿಂಶಚ್ಚ ನವ ಚ ದೇವಾಃ— ಏಕೋನಚತ್ವಾರಿಂಶದಧಿಕಶತತ್ರಯೋಪೇತತ್ರಿಸಹಸ್ರಸಂಖ್ಯಾಕಾಃ—ದೇವತೆಗಳು ಮೂರುಸಾವಿರದ ಮುನ್ನೂರಮೂವತ್ತೊಂಭತ್ತು ಜನಗಳಿರುವರು

ಎಂದು ವ್ಯಷ್ಟಿಯಿಂದ (ವಿವರಣೆಯಿಂದ) ಹೇಳಿದೆ. ಈ ದೇವತೆಗಳೆಲ್ಲರೂ ಅಗ್ನಿಯನ್ನು ಪೂಜಿಸುವರು ಎಂದೂ ವಿವರಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಸಮಷ್ಟಿರೂಪದಿಂದ ದೇವತೆಗಳ ವಿವರಣೆಯು ಉಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ.

**ದೇವಸಂಖ್ಯಾಚ ಬೃಹದಾರಣ್ಯಕೇ ಅಭಿಹಿತಾ—ಮಹಿಮಾನ ಏವೈಷಾಮೇತೇ ತ್ರಯ-ಸ್ತ್ರಿಂಶತ್ತ್ವೇವ ದೇವಾ ಇತಿ । ಕತಮೇ ತೇ ತ್ರಯಸ್ತ್ರಿಂಶದಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾ ॥** (ಬೃ. ಆ. ೩-೯) ಇತಿ.

ದೇವತೆಗಳ ಸಂಖ್ಯೆಯು ಮೂವತ್ತುಮೂರೇ ಆಗಿರುವುದು. ಎಂಟು ವಸುಗಳು, ಹನ್ನೊಂದು ಜನ ರುದ್ರರು, ಹನ್ನೆರಡು ಜನ ಆದಿತ್ಯರು, ಇಂದ್ರನು, ಮತ್ತು ಪ್ರಜಾಪತಿಯು ಎಂದು. ಇವರು ಒಟ್ಟಿನಲ್ಲಿ ಮೂವತ್ತುಮೂರು ದೇವತೆಗಳಾಗಿರುವರು. ಇವರ ಮಹಿಮೆಯಿಂದ ಮೂರುಸಾವಿರದಮೂರುನೂರಮೂವತ್ತೊಂಭತ್ತು ಆಗಿರುವರು ಎಂದು ವಿವರಿಸಿದೆ. ಈ ವಿಷಯದಲ್ಲಿ—ಯೇ ದೇವಾಸೋ ದಿವ್ಯೇಕಾದಶಸ್ಥ (ಋ. ಸಂ. ೧ ೧೩೯-೧೧) ಎಂಬ ಋಕ್ಕಿನಲ್ಲಿ—

**ತೇ ದೇವಾಸೋ ಯಜ್ಞಮಿಮಂ ಜುಷಧ್ವಂ**—ಸಕಲದೇವತೆಗಳೂ ಆದ ನೀವು ನಮ್ಮ ಈ ಯಜ್ಞವನ್ನು ಸೇವಿಸಿ ಎಂದು ಮೂರುಲೋಕಗಳ ದೇವತೆಗಳನ್ನೂ ಉದ್ದೇಶಿಸಿದೆ. **ದಿವಿ ಏಕಾದಶ, ಪೃಥಿವ್ಯಾಂ ಏಕಾದಶ, ಅಪ್ಸುಕ್ಷಿತೋ ಏಕಾದಶ** ಎಂದು ಮೂರುಲೋಕಗಳಿಂದಲೂ ಒಟ್ಟು ದೇವತೆಗಳ ಸಂಖ್ಯೆಯು ಮೂವತ್ತುಮೂರೆಂದು ಹೇಳಿದೆ. ಸಾಯಣರು-ಯದ್ಯಪಿ ತಿಸ್ರ ಏವ ದೇವತಾಃ (ನಿ. ೭-೫) ಎಂಬ ನಿರುಕ್ತ ವಚನವನ್ನುದಹರಿಸಿ **ಕ್ಷಿತ್ಯಾದ್ಯಭಿಮಾನಿನ್ಯೋ ದೇವತಾಸ್ತಿಸ್ರ ಏವ ತಥಾಪಿ ಮಹಿತಾ ಮಹತ್ತ್ವೇನ ಸ್ವಸ್ವ-ವಿಭೂತ್ಯಾ ತ್ರಯಸ್ತ್ರಿಂಶತ್ಸಂಖ್ಯಾಕಾ ಭವಂತಿ । ತತ್ತತ್ಸ್ಥಾನಾ ಅನ್ಯಾಸ್ತದ್ವಿಭೂತಯ ಇತ್ಯುಕ್ತತ್ವಾತ್ ।** ಪೃಥಿವೀ ಅಂತರಿಕ್ಷ ಮತ್ತು ದ್ಯುಲೋಕಾಭಿಮಾನಿದೇವತೆಗಳ ಸಂಖ್ಯೆಯು ಮೂರೇ ಆದರೂ ಸಹ ಅವರು ಅವರವರ ಮಹಿಮೆಯಿಂದ ೩೩ ಸಂಖ್ಯೆಯುಳ್ಳವರಾಗಿ ಕಾಣುತ್ತಾರೆ. ಆಯಾ ಲೋಕಗಳಲ್ಲಿರುವ ಉಳಿದ ದೇವತೆಗಳೆಲ್ಲಾ ಇವರ ವಿಭೂತಿಗಳು ಎಂದು ವಿವರಿಸಿದ್ದಾರೆ. ನಿರುಕ್ತಕಾರರೂ ಸಹ—

**ತಿಸ್ರ ಏವ ದೇವತಾ ಇತಿ ನೈರುಕ್ತಾಃ । ಅಗ್ನಿಃ ಪೃಥಿವೀಸ್ಥಾನಃ । ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ । ಸೂರ್ಯೋ ದ್ಯುಸ್ಥಾನಃ । ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ । ಅಪಿ ವಾ ಕರ್ಮಪೃಥಕ್ತ್ವಾತ್** (ನಿ. ೭-೫) ।

ನೈರುಕ್ತಕಾರರ ಮತದಂತೆ, **ಅಗ್ನಿ ವಾಯು** ಅಥವಾ **ಇಂದ್ರ** ಮತ್ತು **ಸೂರ್ಯ** ಈ ಮೂರು ದೇವತೆಗಳೂ ಸಹ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳ ಅಧಿದೇವತೆಗಳು. ಈ ದೇವತೆಗಳಿಗೇ ಅವರವರ ಮಹತ್ವಕ್ಕನುಗುಣವಾಗಿಯಾಗಲಿ, ಕ್ರಿಯಾವೈವಿಧ್ಯಗಳ ದೆಸೆಯಿಂದಾಗಲಿ ಅನೇಕವಿಧವಾದ ನಾಮಧೇಯಗಳಿರುತ್ತವೆಯೆಂದು ಹೇಳಿ, **ಅಥಾತೋಽನುಕ್ರಮಿಷ್ಯಾಮ ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ ।** ಎಂದು ನಿ. ೭-೧೪ ರಿಂದ ೯-೪೩ನೇ ಖಂಡದವರೆಗೆ ಪೃಥಿವೀಸ್ಥರಾದ ದೇವತೆಗಳ ಸ್ವರೂಪವನ್ನೂ, **ಅಥಾತೋ ಮಧ್ಯಸ್ಥಾನಾ ದೇವತಾಃ । ತಾಸಾಂ ವಾಯುಃ ಪ್ರಥಮಾಗಾಮೀ ಭವತಿ ।** ಎಂದು ೧೦-೧ರಿಂದ ೧೧-೫೦ನೇ ಖಂಡದವರೆಗೆ ಮಧ್ಯಮಸ್ಥಾನವಾದ ಅಂತರಿಕ್ಷಸ್ಥದೇವತೆಗಳ ಸ್ವರೂಪವನ್ನೂ ಹೇಳಿದೆ. ಹೀಗೆ ವಿಭಾಗಿಸಿರುವ ಈ ದೇವತೆಗಳ ಸಂಖ್ಯೆಯೆಷ್ಟು ಎಂಬ ವಿಷಯದಲ್ಲಿ ಮತಭೇದಗಳಿವೆಯಾದರೂ ಋಕ್ಸಂಹಿತೆಯು ಅನೇಕಕಡೆಗಳಲ್ಲಿ ಒಂದೇ ವಿಧವಾದ ಅಭಿಪ್ರಾಯವು ಕಾಣುತ್ತದೆ.

ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ ।
ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ॥

(ಋ. ಸಂ. ೧-೩೪-೧೧)

(೧೧×೩ ) ಮೂವತ್ತುಮೂರು ದೇವತೆಗಳೊಂದಿಗೂ ಮಧುಪಾನವನ್ನಪೇಕ್ಷಿಸಿ ಇಲ್ಲಿಗೆ ಬನ್ನಿರಿ ಎಂದು ಅಶ್ವಿನೀ ದೇವತೆಗಳನ್ನೂ,

ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ ।
ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ ॥

(ಋ. ಸಂ. ೧-೪೫-೨)

ಮುವತ್ತುಮೂರು ದೇವತೆಗಳನ್ನು ಕರೆದುಕೊಂಡು ಬಾ ಎಂದು ಅಗ್ನಿಯನ್ನೂ ಪ್ರಕೃತವಾದ ಋಕ್ಕಿನಲ್ಲಿ ಪ್ರಾರ್ಥಿಸಿರುವಂತೆಯೇ ಪ್ರಾರ್ಥಿಸಿದೆ. ಇದರಂತೆಯೇ,

ಏಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾ ವಿಭವೋ ಹ್ಯಶ್ವಾಃ ।
ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ ।

(ಋ. ಸಂ. ೩-೬-೯)

ಇತಿ ಸ್ತುತಾಸೋ ಅಸಥಾ ರಿಶಾದಸೋ ಯೇ ಸ್ಥ ತ್ರಯಶ್ಚ ತ್ರಿಂಶಚ್ಚ ।
ಮನೋರ್ದೇವಾ ಯಜ್ಞಿಯಾಸಃ ।

(ಋ. ಸಂ. ೮-೩೦-೨)

ವಿಶ್ವೈರ್ದೇವೈಸ್ತ್ರಿಭಿರೇಕಾದಶೈರಿಹಾದ್ಭಿರ್ಮರುದ್ಭಿರ್ಭೃಗುಭಿಃ ಸಚಾಭುವಾ ।

(ಋ. ಸಂ. ೮-೩೫-೩)

ತವ ತ್ಯೇ ಸೋಮ ಪವಮಾನ ನಿಣ್ಯೇ ವಿಶ್ವೇ ದೇವಾಸ್ತ್ರಯ ಏಕಾದಶಾಸಃ ।
ದಶ ಸ್ವಧಾಭಿರಧಿ ಸಾನೋ ಅವ್ಯೇ ಮೃಜಂತಿ ತ್ವಾ ನದ್ಯಃ ಸಪ್ತ ಯಹ್ವೀಃ ॥

(ಋ. ಸಂ. ೯-೯೨-೪)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ದೇವತೆಗಳ ಸಂಖ್ಯೆಯು ಮೂವತ್ತುಮೂರೆಂಬುದು ಸ್ಪಷ್ಟವಾಗಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ

ಅಷ್ಟೌ ವಸವಃ । ಏಕಾದಶ ರುದ್ರಾಃ । ದ್ವಾದಶಾದಿತ್ಯಾ ಇಮೇ ಏವ ದ್ಯಾವಾಪೃಥಿವೀ ತ್ರಯಸ್ತ್ರಿಂಶದ್ವೈ ದೇವಾಃ ಪ್ರಜಾಪತಿಶ್ಚತುಸ್ತ್ರಿಂಶಃ ॥

(ಶ. ಬ್ರಾ. ೪-೫-೭-೨)

ಎಂಟು ವಸುಗಳೂ, ಹನ್ನೊಂದು ರುದ್ರರೂ, ಹನ್ನೆರಡು ಆದಿತ್ಯರೂ ಮತ್ತು ದ್ಯಾವಾಪೃಥಿವಿಗಳೂ ಸೇರಿ ಮೂವತ್ತುಮೂರು ದೇವತೆಗಳು. ಪ್ರಜಾಪತಿಯು ಇವರಲ್ಲದೇ ಮೂವತ್ತನಾಲ್ಕನೆಯವನು ಎಂದು ಒಂದು ಕಡೆ ಹೇಳಿದೆ. ಆದರೆ ಇನ್ನೊಂದು ಸ್ಥಳದಲ್ಲಿ ಅದೇ ಮೂವತ್ತುಮೂರು ಸಂಖ್ಯೆಯಿದ್ದರೂ ಸಹ ದ್ಯಾವಾಪೃಥಿವಿಗಳಿಗೆ ಬದಲಾಗಿ ಇಂದ್ರನನ್ನೂ ಪ್ರಜಾಪತಿಯನ್ನೂ ಸೇರಿಸಿದೆ.

ಕೇ ತ್ರಯಸ್ತ್ರಿಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರ-
ಶ್ಚೈವ ಪ್ರಜಾಪ್ರತಿಶ್ಚ ತ್ರಯಸ್ತ್ರಿಂಶಾವಿತಿ ।

(ಶ. ಬ್ರಾ. ೧೧-೬-೩-೫)

ಐತರೇಯ ಬ್ರಾಹ್ಮಣದಲ್ಲೂ ಸಹ,

ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದಸೋಮಪಾ ಅಷ್ಟೌ ವಸವ ಏಕಾದಶ
ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾಃ ಸೋಮಪಾಃ ।

(ಐ. ಬ್ರಾ. ೨-೧೮)

ಸೋಮಪಾನವನ್ನು ದೂಡತಕ್ಕವರು ಮೂವತ್ತುಮೂರು ದೇವತೆಗಳು. ಅವರು ಅಷ್ಟವಸುಗಳು, ಏಕಾದಶ ರುದ್ರರು, ಮತ್ತು ದ್ವಾದಶಾದಿತ್ಯರು, ಇವರೊಂದಿಗೆ ಪ್ರಜಾಪತಿ ಮತ್ತು ವಷಟ್ಕಾರ. ಹೀಗೆ ಸಂಹಿತೆಯಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಈ ಸಂಖ್ಯೆಯ ವಿಷಯದಲ್ಲಿ ಒಂದೇ ಅಭಿಪ್ರಾಯವಿದೆ. ಆದರೆ,

ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।
ಔಕ್ಷನ್ ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥

(ಋ. ಸಂ. ೩-೯-೯)

ಎಂಬ ಪ್ರಕೃತಋಕ್ಕಿನಲ್ಲಿಯೂ ಇದರಂತೆಯೇ ಋ. ಸಂ. ೧೦-೫೨-೬ ನೇ ಋಕ್ಕಿನಲ್ಲಿಯೂ ಸಹ ಮೂರುಸಾವಿರದ ಮುನ್ನೂರ ಮೂವತ್ತುಒಂಭತ್ತು ದೇವತೆಗಳು ಅಗ್ನಿಯನ್ನು ಪೂಜಿಸಿದರೆಂದು ಹೇಳಿದೆ. ವಾಜಸನೇಯಸಂಹಿತೆಯಲ್ಲಿಯೂ (೩೩-೭) ಇದೇ ಆನುಪೂರ್ವಿಯಿದೆ. ಇದೂ ಅಲ್ಲದೇ,

ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ ।
ಯಜಾಮ ದೇವಾನ್ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ।

(ಋ. ಸಂ. ೧-೨೭-೧೩)

ಅತ್ಯಧಿಕವಾದ ಗುಣವುಳ್ಳವರೂ, ನ್ಯೂನವಾದ ಗುಣವುಳ್ಳವರೂ, ತರುಣರೂ ವೃದ್ಧರೂ ಆದ ಸಕಲ ವಿಧವಾದ ದೇವತೆಗಳಿಗೂ ನಮಸ್ಕಾರವೆಂದು ಹೇಳುವಾಗ ದೇವತೆಗಳಲ್ಲಿ ಸ್ವರೂಪವೈವಿಧ್ಯವಿದೆಯೆಂದು ತಿಳಿಯುತ್ತದೆ. ಈ ಋಕ್ಕನ್ನೇ ಐತರೇಯಬ್ರಾಹ್ಮಣದಲ್ಲೂ ಸಹ (೭-೧೬) ಶುನಶ್ಶೇಪೋಪಾಖ್ಯಾನದಲ್ಲಿ ವಿಶ್ವೇದೇವ ಪ್ರಾರ್ಥನಾಸಂದರ್ಭದಲ್ಲಿ ಪಠಿಸಿದೆ. ಆದರೆ,

ನಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ । ವಿಶ್ವೇ ಸತೋಮಹಾಂತ ಇತ್ ।

(ಋ. ಸಂ. ೮-೩೦-೧)

ಎಂಬಲ್ಲಿ ದೇವತೆಗಳ ಮಧ್ಯೆ ದೊಡ್ಡವರು ಚಿಕ್ಕವರು ಎಂಬ ಭೇದವೇ ಇಲ್ಲ. ಸಕಲದೇವತೆಗಳೂ ಮಹಾತ್ಮರೇ ಆಗಿದ್ದಾರೆ ಎಂಬ ಪ್ರಶಂಸೆಯಿದೆ. ಇಂತಹ ಮಾಹಾತ್ಮ್ಯವುಳ್ಳ ಸಕಲ ದೇವತೆಗಳನ್ನೂ ಉದ್ದೇಶಿಸಿ ಪ್ರಕೃತವಾದ ಋಕ್ಕಿನಲ್ಲಿ ಋಷಿಯು ಪ್ರಾರ್ಥಿಸಿದ್ದಾನೆ—

ಆದಿತ್ ಹೋತಾರಂ ಕೃತ್ವಾ ನ್ಯಸಾದಯಂತ—ಅನಂತರಮೇವ ತೇ ದೇವಾಸ್ತಸ್ಮಿನ್ ಬರ್ಹಿಷಿ ವಿಶಮಗ್ನಿಂ ಹೋತಾರಂ ಕೃತ್ವಾ ಉಪಾವೇಶಯನ್ । ಹೋತಾರಂ—ದೇವತಾನಾಂ ಹ್ವಾತಾರಂ ಎಂದೂ

**ಜುಹೋತೇರ್ಹೋತಾ**—ದಾನಾರ್ಥವನ್ನು ಬೋಧಿಸುವ ಹುಧಾತುವಿನಿಂದ ನಿಷ್ಪನ್ನವಾದ ಹೋತೃಪದಕ್ಕೆ ದೇವತೆಗಳಿಗೆ ಹವಿಸ್ಸನ್ನು ದಾನಮಾಡುವವನು ಎಂದೂ ನಿರುಕ್ತಕಾರರು ಅರ್ಥಮಾಡಿದ್ದಾರೆ. ಸಾಯಣರೂ ಇಲ್ಲಿ ಅಗ್ನಿಯನ್ನು ಹೋತೃವನ್ನಾಗಿ ಮಾಡಿಕೊಂಡು ದೇವತೆಗಳು ಬರ್ಹಿಸ್ಸಿನಲ್ಲಿ ಕೂರಿಸಿದರು ಎಂಬ ಅರ್ಥವನ್ನು ವಿವರಿಸಿದ್ದಾರೆ. ಮತ್ತು **ಬರ್ಹಿಃ ಅಸ್ತೃಣನ್** ಎಂಬ ಪದಕ್ಕೆ **ಬರ್ಹಿಷಾ ಅಸ್ತರಣಂ**—ಯಜ್ಞವೇದಿಯಲ್ಲಿ ಆಚ್ಛಾದನವನ್ನು ಮಾಡಿದರು ಎಂದು ಅರ್ಥಹೇಳಿದೆ. ಅಗ್ನಿಗಾಗಿ ಪೀಠವನ್ನು ಕಲ್ಪಿಸಿದೆ ಎಂದು ಅರ್ಥ.

ವ್ಯಾಕರಣಪ್ರಕ್ರಿಯಾ.

**ಶತಾ**—ದಶಾನಾಂ ದಶತಾಂ ಶಭಾವಃ ಎಂಬರ್ಥದಲ್ಲಿ ತ ಪ್ರತ್ಯಯ. ದಶ ದಶತಃ ಪರಿಮಾಣಂ ಯೇಷಾಂ ಶತಾನಿ (ಹತ್ತು ಹತ್ತು ಉಳ್ಳದ್ದು) **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಸುಪಿಗೆ ಡಾದೇಶ. ಶತಾ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರ ಉಳಿಯುತ್ತದೆ.

**ತ್ರೀ**—ಇದಕ್ಕೂ ಜಸ್ ಪರವಾದಾಗ **ಸುಪಾಂಸುಲುಕ್** ಎಂಬುದರಿಂದ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬರುತ್ತದೆ. ಫಿಟ್ (ಪ್ರಾದಿಪದಕ) ಸ್ವರದಿಂದ ಉದಾತ್ತವಾಗುತ್ತದೆ.

**ಸಹಸ್ರಾಣಿ**—ಇದು ಅರ್ಧರ್ಚಾದಿಗಣದಲ್ಲಿ ಪಠಿತವಾದುದರಿಂದ ಮಧ್ಯೋದಾತ್ತವಾಗುತ್ತದೆ.

**ತ್ರಿಂಶತ್**—ತ್ರಿ ದಶ ಎಂಬುದಕ್ಕೆ ತ್ರಿನ್‌ಭಾವ. ಶತ್ ಪ್ರತ್ಯಯ. ತಯೋರ್ದಶತಃ ಪರಿಮಾಣಂ ಅಸ್ಯ ತ್ರಿಂಶತ್. ಪ್ರತ್ಯಯಸ್ವರ ಉಳಿಯುತ್ತದೆ.

**ನವ**—**ಕನಿನ್** ಎಂದು ಅನುವೃತ್ತವಾಗುವ ಣುಸ್ತುತೌ ಎಂಬ ಧಾತುವಿಗೆ **ಣುದಂಶೋರ್ನುಡಿಚ್ಚ** ಎಂಬುದರಿಂದ ಕನಿನ್ ಪ್ರತ್ಯಯ, ಧಾತುವಿಗೆ ಗುಣ, ಅವಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನವನ್ ಶಬ್ದವಾಗುತ್ತದೆ.

**ಅಸಪರ್ಯನ್**—ಸಪರ ಪೂಜಾಯಾಂ ಧಾತು ಕಂಡ್ವಾದಿ. **ಕಂಡ್ವಾದಿಭ್ಯೋಯಕ್** ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಲಙ್ ಪ್ರಥಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಔಕ್ಷನ್**—ಉಕ್ಷ ಸೇಚನೇ ಧಾತು. ಲಙ್ ಪ್ರಥಮಪುರುಷಬಹುವಚನಾಂತರೂಪ. **ಆಡಜಾದೀನಾಮ್** (ಪಾ. ಸೂ. ೬-೪-೭೨) ಎಂಬುದರಿಂದ ಆಡಾಗಮ. ಆಟಶ್ಚ ಎಂಬುದರಿಂದ ವೃದ್ಧಿ. ಪಾದಾದಿಯಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಸ್ತೃಣನ್**—ಸ್ತೃಞ್ ಆಚ್ಛಾದನೇ ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರಲೋಪ. ಝೋಂತಃ ಎಂಬುದರಿಂದ ಅಂತಾದೇಶ. ಸಂಯೋಗಾಂತಲೋಪ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೩) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. **ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಎಂಬುದರಿಂದ ಅಂಗಕ್ಕೆ ಅಡಾಗಮ. ಇದು ಉದಾತ್ತವಾಗುತ್ತದೆ. ಇದು ವಾಕ್ಯಾಂತರಸಂಬದ್ಧವಾದುದರಿಂದ ಸಮಾನವಾಕ್ಯದಲ್ಲಿಲ್ಲದಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತಸ್ವರ ಬರುವುದಿಲ್ಲ. ಋಕಾರದ ಪರದಲ್ಲಿ ನಕಾರ ಬಂದುದರಿಂದ ಣತ್ವ ಬರುತ್ತದೆ.

ಬರ್ಹಿಃ—ಇಸಿಃ ಎಂದು **ಪೂರ್ವಸೂತ್ರದಿಂದ** ಅನುವೃತ್ತವಾಗುವಾಗ **ಬೃಂಹೇರ್ನಲೋಪಶ್ಚ** (ಉ. ಸೂ. ೨-೨೬೬) ಎಂಬುದರಿಂದ ಇಸಿ ಪ್ರತ್ಯಯ. ಧಾತುವಿನ ನಕಾರಕ್ಕೆ ಲೋಪ. ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಸಾದಯಂತ—ಷದಲೃ ವಿಶರಣಗತ್ಯವಸಾದನೇಷು. ಧಾತು. **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವುದರಿಂದ ಣಿಚ್. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. **ಣಿಚಶ್ಚ** (ಪಾ. ಸೂ. ೧-೩-೭೪) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಣಿಜಂತದ ಮೇಲೆ ಲಙ್. ಪ್ರಥಮಪುರುಷ ಬಹುವಚನಾಂತರೂಪ. **ಅತಿ** ಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

---

# ಹತ್ತನೆಯ ಸೂಕ್ತವು.

**ತ್ವಾಮಗ್ನ ಇತಿ ನವರ್ಚಂ ದಶಮಂ ಸೂಕ್ತಂ ವೈಶ್ವಾಮಿತ್ರಮೌಷ್ಣಿಹಮಾಗ್ನೇಯಂ । ತ್ವಾಮಗ್ನ ಔಷ್ಣಿಹಮಿತ್ಯನುಕ್ರಾಂತತ್ವಾತ್ ॥ ಪ್ರಾತರನುವಾಕಾಶ್ವಿನಶಸ್ತ್ರಯೋರೌಷ್ಣಿಹೇ ಛಂದಸ್ಯಸ್ಯ ಸೂಕ್ತಸ್ಯ ವಿನಿಯೋಗಃ । ಅಥೈತಸ್ಯಾ ಇತಿ ಖಂಡೇ ಸೂತ್ರಿತಂ । ಪುರು ತ್ವಾ ತ್ವಾಮಗ್ನೇ । ಆ. ೪-೧೩ । ಇತಿ ॥**

**ಅನುವಾದವು**—**ತ್ವಾಮಗ್ನೇ ಮನೀಷಿಣಃ** ಎಂಬ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು. ಅಗ್ನಿಯು ದೇವತೆಯು. ಉಷ್ಣಿಕ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ತ್ವಾಮಗ್ನ ಔಷ್ಣಿಹಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಲ್ಲಿ ಉಷ್ಣಿಕ್‌ಛಂದಸ್ಸಿನ ಋಕ್ಕುಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಥೈತಸ್ಯಾ** ಎಂಬ ಖಂಡದ **ಪುರು ತ್ವಾ ತ್ವಾಮಗ್ನೇ** ಎಂಬ ಸೂತ್ರದಿಂದ ವಿವೃತವಾಗಿರುವುದು. ( ಆ. ೪-೧೩)

## ಸೂಕ್ತ—೧೦

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೧೦ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೭, ೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ವಿಶ್ವಾಮಿತ್ರಃ ॥
ದೇವತಾ—ಅಗ್ನಿಃ ॥
ಛಂದಃ—ಉಷ್ಣಿಕ್ ॥

ಸಂಹಿತಾಪಾಠಃ

**ತ್ವಾಮಗ್ನೇ ಮನೀಷಿಣಃ ಸಮ್ರಾಜಂ ಚರ್ಷಣೀನಾಂ ।**
**ದೇವಂ ಮರ್ತಾಸ ಇಂಧತೇ ಸಮಧ್ವರೇ ॥ ೧ ॥**

ಪದಪಾಠಃ

ತ್ವಾಂ । ಅಗ್ನೇ । ಮನೀಷಿಣಃ । ಸಂಽರಾಜಂ । ಚರ್ಷಣೀನಾಂ ।

ದೇವಂ । ಮರ್ತಾಸಃ । ಇಂಧತೇ । ಸಂ । ಅಧ್ವರೇ ॥ ೧ ॥

ಸಾಯಣಭಾಷ್ಯಂ.

ಹೇ ಅಗ್ನೇ ಮನೀಷಿಣೋ ಧೀಮಂತೋಽಧ್ವರ್ಯುಪ್ರಭೃತಯೋ ಮರ್ತಾಸೋ ಮನುಷ್ಯಾಶ್ಚರ್ಷಣೀನಾಂ ಪ್ರಜಾನಾಂ ಸಮ್ರಾಜಮಧಿಪತಿಂ ದೇವಂ ದ್ಯೋತಮಾನಂ ತ್ವಾಮಧ್ವರೇ ಯಜ್ಞೇ ಸಮಿಂಧತೇ । ಸೋಮಾಜ್ಯಪಯಃಪ್ರಭೃತಿಭಿರಾಹುತಿಭಿಃ ಸಮ್ಯಗ್ದೀಪಯಂತಿ ॥ ಮನೀಷಿಣಃ । ಮನೀಷೈಷಾಮಸ್ತೀತಿ ವ್ರೀಹ್ಯಾದಿಭ್ಯಶ್ಚೇತಿ ಇನಿಃ । ಯಸ್ಯೇತಿ ಚೇತ್ಯವರ್ಣಲೋಪಃ । ಪ್ರತ್ಯಯಸ್ವರಃ । ಸಮ್ರಾಜಂ । ರಾಜೃ ದೀಪ್ತೌ । ಸಂಪೂರ್ವಾದಸ್ಮಾದ್ಧಾತೋಃ ಸತ್ಸೂದ್ವಿಷೇತಿ ಕ್ವಿಪ್ । ಕ್ವಿಲೋಪಃ । ಸಮೋ ಮಕಾರಸ್ಯ ಮೋಽನುಸ್ವಾರ ಇತ್ಯನುಸ್ವಾರೇ ಪ್ರಾಪ್ತೇ ಮೋ ರಾಜಿ ಸಮಃ ಕ್ವಾವಿತಿ ಸಮೋ ಮಕಾರಃ । ಕೃದುತ್ತರಪದಪ್ರಕೃತಿಸ್ವರತ್ವಂ । ಚರ್ಷಣೀನಾಂ । ನಾಮನ್ಯತರಸ್ಯಾಮಿತಿ ವಿಭಕ್ತೇರುದಾತ್ತತ್ವಂ । ಇಂಧತೇ । ಞಿಇಂಧೀ ದೀಪ್ತೌ । ಅಸ್ಮಾದ್ಧಾತೋರ್ಹೇತುಮತಿ ಚೇತಿ ಣಿಚ್ ।ಲಟಿ ಝಸ್ಯಾತ್ಮನೇಪದೇಷ್ವನತ ಇತ್ಯದಾದೇಶಃ । ಛಂದಸ್ಯುಭಯಥೇತಿ ಝಸ್ಯಾರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ನಿಘಾತಃ ॥

ಪ್ರತಿಪದಾರ್ಥ.

(ಹೇ) ಅಗ್ನೇ—ಎಲೈ ಅಗ್ನಿಯೇ । ಮನೀಷಿಣಃ—ಜ್ಞಾನಿಗಳಾದ ಅಧ್ವರ್ಯು ಮೊದಲಾದ । ಮರ್ತಾಸಃ—ಮನುಷ್ಯರು । ಚರ್ಷಣೀನಾಂ—ಪ್ರಜೆಗಳಿಗೆ । ಸಂರಾಜಂ—ಅಧಿಪತಿಯೂ । ದೇವಂ—ದ್ಯೋತಮಾನನೂ ಆದ । ತ್ವಾಂ—ನಿನ್ನನ್ನು । ಅಧ್ವರೇ—ಯಜ್ಞದಲ್ಲಿ । ಸಂ ಇಂಧತೇ—(ಸೋಮಾಜ್ಯಾದಿ ಆಹುತಿಗಳಿಂದ) ಚೆನ್ನಾಗಿ ಉದ್ದೀಪನಗೊಳಿಸುತ್ತಾರೆ.

ಭಾವಾರ್ಥ.

ಎಲೈ ಅಗ್ನಿಯೇ, ಮೇಧಾವಿಗಳಾದ ಅಧ್ವರ್ಯ್ವಾದಿ ಮನುಜರು ಸಮಸ್ತ ಪ್ರಜೆಗಳಿಗೆ ಅಧಿಪತಿಯೂ, ಪ್ರಕಾಶಮಾನನೂ ಆದ ನಿನ್ನನ್ನು ಯಾಗಗಳಲ್ಲಿ ಸೋಮಾಜ್ಯಾದ್ಯಾಹುತಿಗಳಿಂದ ಉದ್ದೀಪನಗೊಳಿಸುತ್ತಾರೆ, (ಪ್ರಕಾಶಿಸುವಂತೆ ಮಾಡುತ್ತಾರೆ).

English Translation.

You, the king of men ; Agni, the divine : prudent mortals kindle you at the sacrifice.

ವಿಶೇಷವಿಷಯಗಳು.

ಮನೀಷಿಣಃ—ಮನೀಷೈಷಾಮಸ್ತೀತಿ । ಯುಕ್ತಾಯುಕ್ತವನ್ನು ವಿವೇಚನೆ ಮಾಡುವ ಬುದ್ಧಿಯುಳ್ಳವರು ಎಂದೂ, ಅಧ್ವರ್ಯುಪ್ರಭೃತಯೋ ಋತ್ವಿಜಃ-ಅಧ್ವರ್ಯುವೇ ಮೊದಲಾದ ಐದು ಜನ ಋತ್ವಿಕ್ಕುಗಳು ಎಂದೂ ಅರ್ಥವನ್ನು ಹೇಳಿದೆ. ಮನೀಷೀ ಎಂಬ ಪದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ.

**ಮರ್ತಾಸಃ**—ಮರ್ತಾಃ ಎಂಬ ಪದವು ಮನುಷ್ಯನಾಮಗಳಲ್ಲಿ (ನಿ. ೩-೮) ಉಕ್ತವಾಗಿದೆ. ಮರಣಕ್ಕೀಡಾಗುವ ಮನುಷ್ಯರೆಂದು ಅರ್ಥ.

**ಚರ್ಷಣೀನಾಂ ಸಮ್ರಾಜಂ**—**ಚರ್ಷಣಿ** ಎಂಬ ಪದವು ಮನುಷ್ಯನಾಮಗಳಲ್ಲಿ (ನಿ. ೩-೮) ಉಕ್ತವಾಗಿದೆ ಮತ್ತು ಪಿತಾ ಕುಟಸ್ಯ ಚರ್ಷಣಿಃ ಎಂಬಲ್ಲಿ **ಕೃತಸ್ಯ ಕರ್ಮಣಃ ಚಾಯಿತಾ ಬುದ್ಧ್ಯಧಿದೇವತಾಭಾವೇನ ಕೃತಸ್ಯ ಕರ್ಮಣಃ ದ್ರಷ್ಟೃತ್ವಂ ಆದಿತ್ಯಸ್ಯ ಉಪಪಾದ್ಯತೇ** ಎಂದು ದುರ್ಗಾಚಾರ್ಯರು ವ್ಯಾಖ್ಯಾನ ಮಾಡಿದ್ದಾರೆ. ಬುದ್ಧಿಗೆ ಅಧಿದೇವನಾಗಿ ಆಚರಿಸಿದ ಕರ್ಮಗಳಿಗೆ ಆದಿತ್ಯನು ದ್ರಷ್ಟೃವಾಗಿರುವನು. ಆದ್ದರಿಂದ ಚರ್ಷಣಿಪದಕ್ಕೆ ಆದಿತ್ಯನೆಂದೂ ಅರ್ಥವನ್ನು ಹೇಳಬಹುದು. ಇಲ್ಲಿ ಸಾಯಣರು ಪ್ರಜೆಗಳೆಂಬ ಅರ್ಥವನ್ನು ವಿವರಿಸಿ ಅಗ್ನಿಯು ಪ್ರಜೆಗಳಿಗೆ ಅಧಿಪತಿಯಾಗಿರುವನು ಎಂದು ಹೇಳಿದಾರೆ.

**ಅಧ್ವರೇ ಸಮಿಂಧತೇ**—**ಅಧ್ವರಶಬ್ದವು ಅಧ್ವರ ಇತಿ ಯಜ್ಞನಾಮ** ಎಂದು (ನಿ. ೧-೮) ವ್ಯಾಖ್ಯಾನ ಮಾಡಲ್ಪಟ್ಟಿದೆ. ಯಜ್ಞದಲ್ಲಿ ಮನುಷ್ಯರಾದ ಮತ್ತು **ವಿವೇಕಿಗಳಾದ ಅಧ್ವರ್ಯುವೇ** ಮೊದಲಾದ ಋತ್ವಿಜರ ಕಾಂತಿಯಿಂದ ಪ್ರಕಾಶಿಸುತ್ತಿರುವ ಅಗ್ನಿಯನ್ನು ಸೋಮ, ಆಜ್ಯ, ಹಾಲು, ಇವುಗಳೇ ಮೊದಲಾದ ಹವಿರ್ದ್ರವ್ಯಗಳಿಂದ ಹೋಮಮಾಡಿ ಬಹಳ ಕಾಂತಿಯುಳ್ಳವನನ್ನಾಗಿ ಮಾಡುತ್ತಾರೆ ಎಂದು ವಿವರಿಸಿದೆ-

ವ್ಯಾಕರಣಪ್ರಕ್ರಿಯಾ.

**ಮನೀಷಿಣಃ**—ಮನೀಷಾ ಏಷಾಮಸ್ತಿ (ಬುದ್ಧಿಯುಳ್ಳವರು) ಎಂದು ಅರ್ಥವಿವಕ್ಷಾಮಾಡಿದಾಗ ಮನೀಷಾ ಶಬ್ದವು ವ್ರೀಹ್ಯಾದಿಯಲ್ಲಿ ಪಠಿತವಾದುದರಿಂದ **ವ್ರೀಹ್ಯಾದಿಭ್ಯಶ್ಚ** (ಪಾ. ಸೂ. ೫-೨-೧೧೬) ಎಂಬುದರಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಈಕಾರವೂ ತದ್ಧಿತವೂ ಪರವಾದಾಗ ಭ ಸಂಜ್ಞಾವುಳ್ಳ ಅಂಗದ ಇಕಾರ ಅಕಾರಗಳಿಗೆ **ಲೋಪ** ಬರುತ್ತದೆ ಎಂಬುದರಿಂದ ಮನೀಷಾ ಎಂಬಲ್ಲಿರುವ ಆಕಾರಕ್ಕೆ **ಲೋಪ**. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸಮ್ರಾಜಮ್**—ರಾಜೃ ದೀಪ್ತೌ ಧಾತು. ಸಂ ಎಂಬುದು ಪೂರ್ವದಲ್ಲಿರುವಾಗ **ಸತ್ಸೂದ್ವಿಷದ್ರುಹ**—(ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ. ಇದರಲ್ಲಿ ಸರ್ವಲೋಪವಾಗುತ್ತದೆ. ಸಮಿನ ಮಕಾರಕ್ಕೆ **ಮೋನುಸ್ವಾರಃ** (ಪಾ. ಸೂ. ೮-೩-೨೩) ಎಂಬುದರಿಂದ ಆದಕ್ಕೆ ಅಪವಾದವಾಗಿ ಮಕಾರಕ್ಕೆ ಮಕಾರವೇ ಬರುತ್ತದೆ. (ಅನುಸ್ವಾರ ಬರುವುದಿಲ್ಲವೆಂದರ್ಥ) **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಚರ್ಷಣೀನಾಮ್**—ಷಷ್ಠೀ ಬಹುವಚನಾಂತರೂಪ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೫೦) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮರ್ತಾಸಃ**—ಮೃಜ್ ಪ್ರಾಣತ್ಯಾಗೇ ಧಾತು. ತನ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ಇಂಧತೇ**—ಞಿಇಂಧೀ ದೀಪ್ತೌ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ **ಣಿಚ್**. ಣಿಜಂತದ ಮೇಲೆ **ಲಟ್**. ಪ್ರಥಮಪುರುಷ ಬಹು

ವಚನದಲ್ಲಿ ಝು ಪ್ರತ್ಯಯು. **ಆತ್ಮನೇಪದೇಷ್ವನಃ** (ಪಾ. ಸೂ. ೭-೧-೫) ಎಂಬುದರಿಂದ ಅದಕ್ಕೆ ಅತಾದೇಶ. **ಟಿತಆತ್ಮನೇಪದಾನಾಂ**—(ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ** (ಪಾ. ಸೂ. ೬-೪-೫೧) ಅನಿಡಾದಿಯಾದ ಆರ್ಧಧಾತುಕವು ಪರವಾದಾಗ ಣಿಚಿಗೆ ಲೋಪ ಬರುತ್ತದೆ ಎಂಬುದರಿಂದ ಇಲ್ಲಿ ಣಿಚಿಗೆ ಲೋಪ ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ತ್ವಾಂ ಯಜ್ಞೇಷ್ವೃತ್ವಿಜಮಗ್ನೇ ಹೋತಾರಮೀಳತೇ ।
ಗೋಪಾ ಋತಸ್ಯ ದೀದಿಹಿ ಸ್ವೇ ದಮೇ ॥ ೨ ॥

ಪದಪಾಠಃ

ತ್ವಾಂ । ಯಜ್ಞೇಷು । ಋತ್ವಿಜಂ । ಅಗ್ನೇ । ಹೋತಾರಂ । ಈಳತೇ ।
ಗೋಪಾಃ । ಋತಸ್ಯ । ದೀದಿಹಿ । ಸ್ವೇ । ದಮೇ ॥ ೨ ॥

ಸಾಯಣಭಾಷ್ಯಂ.

ಹೇ ಅಗ್ನೇಽಧ್ವರ್ಯ್ವಾದಯೋ ಯಜ್ಞೇಷ್ವಗ್ನಿಷ್ಟೋಮಾದಿಷು ತ್ವಾಂ ಹೋತಾರಮೃತ್ವಿಜಂ ಹೋತೃನಾಮಕಮೃತ್ವಿಜಮೀಳತೇ । ಸ್ತುವಂತಿ । ತಾದೃಶಸ್ತ್ವಮೃತಸ್ಯ ಸತ್ಯಸ್ಯ ಯಜ್ಞಸ್ಯ ಗೋಪಾ ಗೋಪಾಯಿತಾ ಸನ್ ಸ್ವೇ ದಮೇ ಸ್ವಕೀಯೇ ಗೃಹೇ ಯಜ್ಞಶಾಲಾಯಾಂ ದೀದಿಹಿ । ದೀಪ್ಯಸ್ವ ॥ ದೀದಿಹಿ । ದಿವು ಕ್ರೀಡಾದೌ । ಯಙ್‌ಲುಕ್ । ಲೋಟ್ । ತುಜಾದಿತ್ವಾದಭ್ಯಾಸದೀರ್ಘತ್ವಂ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತ್ಯಭ್ಯಾಸಸ್ಯ ಗುಣಾಭಾವೇ ಲೋಪೋ ವ್ಯೋರ್ವಲೀತಿ ವಲೋಪಃ ॥

ಪ್ರತಿಪದಾರ್ಥ.

(ಹೇ) **ಅಗ್ನೇ**—ಎಲೈ ಅಗ್ನಿಯೇ । **ಯಜ್ಞೇಷು**—ಅಗ್ನಿಷ್ಟೋಮಾದಿಯಜ್ಞಗಳಲ್ಲಿ (ಅಧ್ವರ್ಯ್ವಾದಿ ಋತ್ವಿಜರು) । **ತ್ವಾಂ**—ನಿನ್ನನ್ನು । **ಹೋತಾರಂ ಋತ್ವಿಜಂ**—ಹೋತೃನಾಮಕ ಋತ್ವಿಜನನ್ನಾಗಿ। **ಈಳತೇ**—ಸ್ತುತಿಸುತ್ತಾರೆ; (ಅಂತಹ ನೀನು) । **ಋತಸ್ಯ**—ಯಜ್ಞದ । **ಗೋಪಾಃ**—ರಕ್ಷಕನಾಗಿ । **ಸ್ವೇ ದಮೇ**—(ನಿನ್ನ ಸ್ವಗೃಹವಾದ ಯಾಗಶಾಲೆಯಲ್ಲಿ । **ದೀದಿಹಿ**—ದೇದೀಪ್ಯಮಾನನಾಗಿರು ।

ಭಾವಾರ್ಥ.

ಎಲೈ ಅಗ್ನಿಯೇ, ಅಧ್ವರ್ಯ್ವಾದಿ ಋತ್ವಿಜರು ನಿನ್ನನ್ನು ಅಗ್ನಿಷ್ಟೋಮಾದಿ ಯಾಗಗಳಲ್ಲಿ ಹೋತೃನಾಮಕಋತ್ವಿಜನೆಂದು ಸ್ತುತಿಸುತ್ತಾರೆ; ಹೀಗೆ ಸ್ತುತನಾದ ನೀನು ಯಾಗರಕ್ಷಕನಾಗಿ ಸ್ವಗೃಹವಾದ ಯಾಗಶಾಲೆಯಲ್ಲಿ ಪ್ರಕಾಶಮಾನನಾಗಿರು.

English Translation.

They praise you as the priest, the invoker (of the gods) at sacrifices: shine forth the protector of the pious rite in your own abode.

ವಿಶೇಷವಿಷಯಗಳು

**ಯಜ್ಞೇಷು ಹೋತಾರಂ ಋತ್ವಿಜಂ ಈಳತೇ—ಅಗ್ನಿಷ್ಟೋಮಾದಿಷು ಹೋತೃನಾಮಕಮೃತ್ವಿಜಂ ಸ್ತುವಂತಿ** । ಯಜ್ಞಶಬ್ದವು ಸಾಮಾನ್ಯವಾಗಿ ಯಾಗವೆಂಬ ಕರ್ಮವನ್ನು ಬೋಧಿಸುವುದಾದರೂ ಇಲ್ಲಿ ಅಗ್ನಿಷ್ಟೋಮವೇ ಮೊದಲಾದ ಕ್ರತುವಾಚಕವಾಗಿ ಸಾಯಣರಿಂದ ವಿವರಿಸಲ್ಪಟ್ಟಿದೆ. ಈ ಯಜ್ಞಗಳಲ್ಲಿ ಅಗ್ನಿಯು ದೇವತೆಗಳನ್ನು ಯಜ್ಞಕ್ಕಾಗಿ ಕರೆದುತರುವ ಹೋತೃವಾಗಿರುವನು ಎಂದು ಹೋತೃತಾದಾತ್ಮ್ಯವನ್ನು ಅಗ್ನಿಗೆ ವಿವರಿಸಿ ಋತ್ವಿಜರು ಈ ಅಗ್ನಿಯನ್ನು ದೇವತೆಗಳ ಹೋತೃವಾಗಿರುವ ಕಾರಣ ಸ್ತುತಿಸುವರೆಂದು ಅರ್ಥ ಮಾಡಿದೆ

ನಿರುಕ್ತಕಾರರು ಯಜ್ಞಪದವನ್ನು ಯಜ್ಞನಾಮಗಳಲ್ಲಿ (ನಿ. ೩-೧೯) ಪಾಠಮಾಡಿ—

> **ಯಜ್ಞಃ ಕಸ್ಮಾತ್ ಪ್ರಖ್ಯಾತಂ ಯಜತಿ ಕರ್ಮೇತಿ ನೈರುಕ್ತಾಃ । ಯಾಚ್ಞೋ ಭವತೀತಿವಾ ಯಜುರುನ್ನೋ ಭವತೀತಿ ವಾ ಬಹುಕೃಷ್ಣಾಜಿನ ಇತ್ಯೌಪಮನ್ಯವೋ ಯಜೂಂಷ್ಯೇನಂ ನಯಂತೀತಿ ವಾ** ।

ಲೋಕದಲ್ಲಿಯೂ, ವೇದಗಳಲ್ಲಿಯೂ ಪ್ರಸಿದ್ಧವಾದ ಯಜ್ಞಶಬ್ದವು ಯಜಧಾತುವಿನಿಂದ ನಿಷ್ಪನ್ನವಾಗಿ ಯಜನಂ (ಪೂಜನಂ) ಎಂದು ಭಾವಾರ್ಥದಲ್ಲಿ ಯಜ್ಞವೆಂಬ ಅರ್ಥವನ್ನು ಬೋಧಿಸುವುದು. ಆದ್ದರಿಂದ ಯಜ್ಞವೆಂದರೆ ಪೂಜಿಸುವುದು ಎಂದು (ನಿರುಕ್ತದ) ಪ್ರಸಿದ್ಧವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂಬ ಒಂದು ವಿಧವಾದ ಅರ್ಥವನ್ನು ವಿವರಿಸಿದ್ದಾರೆ.

ಉಪಮನ್ಯು ಎಂಬ ಆಚಾರ್ಯರ ವರ್ಗದವರು ಯಜ್ಞಶಬ್ದಾರ್ಥವನ್ನು ಮೂರು ವಿಧವಾಗಿ ಹೇಳಿದ್ದಾರೆ. ಮೊದಲನೆಯದಾಗಿ **ಯಜ್ಞೋ ವೈ ದೇವಾನಾಮನ್ನಂಸಮಭೂತ್ ತಂ ಭೃತ್ಯಾಃ ಸಮಭಾವಯನ್ನಿತಿ ಹ ವಿಜ್ಞಾಯತೇ** ಎಂಬ ವಾಕ್ಯದಲ್ಲಿ ಉಕ್ತವಾಗಿರುವುದರಿಂದ **ಯಾಚನಾತ್ಯಜ್ಞಃ**—ಯಾಚನೆ ಮಾಡುವುದರಿಂದ ಯಜ್ಞವು ಎಂದೂ, ಯಜುರ್ವೇದದ ಮಂತ್ರಗಳು ಈ ಕರ್ಮದಲ್ಲಿ ಬಹಳವಾಗಿ ಉಪಯುಕ್ತವಾಗುವ ಕಾರಣ **ಯಜುರ್ಭಿಃ ಉನ್ನಃ ಯಜ್ಞಃ** ಎಂದೂ, ಕೃಷ್ಣಾಜಿನ (ಜಿಂಕೆಯ ಚರ್ಮ)ಗಳನ್ನು ಈ ಕರ್ಮದಲ್ಲಿ ಬಹಳವಾಗಿ ಉಪಯೋಗಿಸುವಕಾರಣ **ಬಹುಕೃಷ್ಣಾಜಿನಃ ಯಜ್ಞಃ** (ಸೋಮವನ್ನು ಇರಿಸಲು ಎರಡು ಅಜಿನಗಳು, ಹವಿಸ್ಸುಗಳನ್ನು ಇರಿಸುವಾಗ ಅಜಿನಗಳು, ಯಜಮಾನನಿಗೆ ಎರಡು ಅಜಿನಗಳು, ಧರ್ಮಾಪಾತ್ರೆಗಾಗಿ ಅಜಿನ ಎಂದು ಕೃಷ್ಣಾಜಿನವನ್ನು ಈ ಕರ್ಮದಲ್ಲಿ ಹೆಚ್ಚಾಗಿ ಉಪಯೋಗಿಸುವರು ಆದ್ದರಿಂದ) ಎಂದು ಈ ಪದದ ವಿವರಣೆಯನ್ನು ಹೇಳುತ್ತಾರೆ. ಇದಲ್ಲದೆ ಈ ಕರ್ಮವು ಉಪಕ್ರಮವಾಗಿ ಸಮಾಪ್ತಿಯಾಗುವವರಿಗೂ ಯಜುರ್ವೇದದ ಮಂತ್ರಗಳೇ ಹೆಚ್ಚಾಗಿ ಹರಿಸತಕ್ಕವುಗಳಾದುದರಿಂದ **ಯಜೂಂಷಿ ಏನಂ ನಯಂತಿ ಇತಿ ಯಜ್ಞಃ** ಎಂಬ ವಿವರಣೆಯನ್ನು ದುರ್ಗಾಚಾರ್ಯರು ವರ್ಣಿಸಿದ್ದಾರೆ.

**ಋತ್ವಿಜಂ**—**ಋ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾಗಿ (**ಈರಯಿತಾ**) ಈರಯಿತ ಸ್ತುತಿಗಳನ್ನು ಪಠಿಸುತ್ತಾನೆಯಾದಕಾರಣದಿಂದ ಋತ್ವಿಜನಾಗಿರುವನು ಎಂದು ಒಂದು ವಿಧವಾದ ಅರ್ಥದಲ್ಲಿ **ಋತ್ವಿಕ್ ಕಸ್ಮಾ-ದೀರಣಃ** ಎಂದು ನಿರುಕ್ತದ ವ್ಯಾಖ್ಯಾನವಿದೆ. **ಋಗ್ಯಷ್ಟಾ ಭವತೀತಿ ಶಾಕಪೂಣಿಃ ಋತುಯಾಜೀ ಭವತೀತಿ-ವಾ ।** ಶಾಕಪೂಣಿ ಎಂಬುವರು ಋಕ್ಕುಗಳಿಂದ ಯಾಗವನ್ನು ನಿರ್ವಹಿಸುವಕಾರಣ ಋತ್ವಿಕ್ಕಾಗಿರುವನು. ಅಥವಾ ವಿಧ್ಯುಕ್ತವಾದ ಕಾಲಗಳಲ್ಲಿ ಎಂದರೆ ಋತುಗಳನ್ನು ಅನುಸರಿಸಿ ಆಯಾಯಕಾಲಗಳಲ್ಲಿ ಮಾತ್ರವೇ ದೇವತೆಗಳ ಉದ್ದೇಶದಿಂದ ಯಾಗವನ್ನು ಆಚರಿಸುವುದರಿಂದ ಋತ್ವಿಜನಾಗಿರುವನು ಎಂದು ಋತ್ವಿಕ್ ಪದದ ಅರ್ಥವನ್ನು ವಿವರಿಸಿದೆ.

**ಋತಸ್ಯ ಗೋಪಾಃ**—ಋತಶಬ್ದವು **ಸತ್ಯಂ ವಾ ಯಜ್ಞಂ ವಾ** ಎಂದು (ನಿ. ೪-೧೯) ವ್ಯಾಖ್ಯಾತವಾಗಿದೆ. ಅಗ್ನಿಯು ಸತ್ಯವನ್ನೂ ಅಥವಾ ಯಜ್ಞವನ್ನೂ ರಕ್ಷಿಸುವವನೆಂದು ಅರ್ಥ.

**ದೀದಿಹಿ ಸ್ವೇ ದಮೇ**—ದಮ ಇತಿ ಗೃಹನಾಮ(ನಿ. ೪-೪) **ದಮೇ** ಎಂದು ಗೃಹನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. **ದಮೇ** ಎಂಬ ಪದಕ್ಕೆ ಯಜ್ಞಶಾಲೆ ಎಂಬ ಅರ್ಥವನ್ನು ವರ್ಣಿಸಿ, ಅಗ್ನಿಯು ಯಜ್ಞಶಾಲೆಯಲ್ಲಿ ಕಾಂತಿಯುಳ್ಳವನಾಗಿ ಪ್ರಕಾಶಿಸಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ಋತ್ವಿಜಮ್**—ಋತು ಎಂಬುದು ಉಪಪದವಾಗಿರುವಾಗ ಯಜದೇವಪೂಜಾಸಂಗತಿಕರಣದಾನೇಷು, ಈ ಧಾತುವಿಗೆ **ಋತ್ವಿಕ್‌ದಧೃಕ್** (ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ ಬಂದು ಋತ್ವಿಜ್ ಎಂದು ನಿಪಾತಿತವಾಗಿದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಈಳತೇ**—ಈಡ ಸ್ತುತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಗೋಪಾಃ**—ಗುಪೂ ರಕ್ಷಣೇ ಧಾತು. **ಗುಪೂಧೂಪವಿಚ್ಛಿಪಣಿ**—(ಪಾ. ಸೂ. ೩-೧-೨೮) ಎಂಬುದರಿಂದ ಆಯ ಪ್ರತ್ಯಯ. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ. ಆಯಪ್ರತ್ಯಯಾಂತದ ಮೇಲೆ ಕ್ವಿಪ್. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಯಕಾರೋತ್ತರ ಅಕಾರಕ್ಕೆ ಲೋಪ. ಅಪೃಕ್ತವಕಾರಲೋಪಕ್ಕಿಂತಲೂ ವಲ್‌ನಿಮಿತ್ತಲೋಪವು ಪ್ರಬಲವೆಂದುದರಿಂದ ಯಕಾರಕ್ಕೆ ಲೋಪ. ಗೋಪಾ ಎಂದು ಉಳಿಯುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ವಿಭಕ್ತಿ ಏಕವಚನಾಂತರೂಪ.

**ದೀದಿಹಿ**—ದಿವು ಕ್ರೀಡಾದೌ ಧಾತು. **ಧಾತೋರೇಕಾಚಃ**—ಎಂಬುದರಿಂದ ಯಙ್ ಬಂದಾಗ **ಯಙೋಽಚಿಚ** ಎಂಬುದರಿಂದ ಅದಕ್ಕೆ ಲುಕ್. ಯಙ್ ಲುಗಂತದಮೇಲೆ ಲೋಟ್. ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ತುಜಾದಿಯಲ್ಲಿ ಪಠಿತವಾದುದರಿಂದ **ತುಜಾದೀನಾಂದೀರ್ಘೋರ್**—(ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಯಙ್‌ಲುಕಿನಲ್ಲಿ ಅಭ್ಯಾಸಕ್ಕೆ ಬರಬೇಕಾದ ಗುಣವು ಬರುವುದಿಲ್ಲ. **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಧಾತುವಿನ ವಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಸ ಘಾ ಯಸ್ತೇ ದದಾಶತಿ ಸಮಿಧಾ ಜಾತವೇದಸೇ ।
ಸೋ ಅಗ್ನೇ ಧತ್ತೇ ಸುವೀರ್ಯಂ ಸ ಪುಷ್ಯತಿ ॥ ೩ ॥

ಪದಪಾಠಃ

ಸಃ । ಘ । ಯಃ । ತೇ । ದದಾಶತಿ । ಸಮ್ಽಇಧಾ । ಜಾತಽವೇದಸೇ ।
ಸಃ । ಅಗ್ನೇ । ಧತ್ತೇ । ಸುಽವೀರ್ಯಂ । ಸಃ । ಪುಷ್ಯತಿ ॥ ೩ ॥

ಸಾಯಣಭಾಷ್ಯಂ.

ಹೇ ಅಗ್ನೇ ಯೋ ಯಜಮಾನೋ ಜಾತವೇದಸೇ ಜಾತಪ್ರಜ್ಞಾಯ ತೇ ತುಭ್ಯಂ ಸಮಿಧಾ ಸಮಿಂಧನಕಾರಿಣ್ಯಾಜ್ಯಪುರೋಡಾಶಾದಿಹವೀಂಷಿ ದದಾಶತಿ ದದಾತಿ ಸ ಘ ಸ ಖಲು ಸುವೀರ್ಯಂ ಶೋಭನಸಾಮರ್ಥ್ಯೋಪೇತಂ ಪುತ್ರಂ ಧತ್ತೇ । ಧಾರಯತಿ । ಅಪಿ ಚ ಸಃ ಸ ಏವ ಪುಷ್ಯತಿ । ಪಶುಪುತ್ರಾದಿಭಿಃ ಸಮೃದ್ಧೋ ಭವತಿ ॥ ಘ । ಚಾದಯೋಽನುದಾತ್ತಾ ಇತ್ಯನುದಾತ್ತಃ । ದದಾಶತಿ । ದಾಶೃ ದಾನ ಇತ್ಯಸ್ಮಾದ್ಧಾತೋಃ ಕರ್ತರಿ ಶಪ್ । ತಿಪ್ । ದ್ವಿರ್ವಚನಂ ಛಾಂದಸಂ । ಯದ್ವೃತ್ತಯೋಗಾದನಿಘಾತಃ । ಅಭ್ಯಸ್ತಾನಾಮಾದಿರಿತ್ಯುದಾತ್ತಃ । ಸಮಿಧಾ । ಞಿಇಂಧೀ ದೀಪ್ತೌ । ಅಸ್ಮಾತ್ ಕ್ವಿಪ್ ಚೇತಿ ಕ್ವಿಪ್ । ಉಪಧಾಲೋಪಃ । ಸುಪಾಂ ಸುಲುಗಿತಿ ಶಸೋ ಡಾದೇಶಃ । ಕೃದುತ್ತರಪದಪ್ರಕೃತಿಸ್ವರತ್ವಂ । ಜಾತವೇದಸೇ । ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮಿತಿ ಪ್ರಕೃತಿಸ್ವರತ್ವಂ । ಸುವೀರ್ಯಂ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ। ಪುಷ್ಯತಿ । ಪುಷ ಪುಷ್ಟೌ। ಅಸ್ಮಾತ್ ಶ್ಯನ್ । ಙಿತ್ತ್ವಾದ್ಗುಣಾಭಾವಃ ! ನಿಘಾತಃ ॥

ಪ್ರತಿಪದಾರ್ಥ.

(ಹೇ) ಅಗ್ನೇ—ಎಲೈ ಅಗ್ನಿಯೇ । ಯಃ—ಯಾವ ಯಜಮಾನನು । ಜಾತವೇದಸೇ—ಜಾತಪ್ರಜ್ಞನಾದ (ಸಮಸ್ತವನ್ನೂ ತಿಳಿದಿರುವ) । ತೇ—ನಿನಗೆ । ಸಮಿಧಾ—(ನಿನಗೆ) ಉದ್ದೀಪನಕಾರಿಗಳಾದ ಆಜ್ಯಾದಿಹವಿಸ್ಸುಗಳನ್ನು । ದದಾಶತಿ—ಕೊಡುತ್ತಾನೆಯೋ (ಹೋಮ ಮಾಡುತ್ತಾನೆಯೋ) । ಸ ಘ—ಅವನೇ ಅಲ್ಲವೇ । ಸುವೀರ್ಯಂ—ಒಳ್ಳೆಯವೀರನಾದ ಪುತ್ರನನ್ನು । ಧತ್ತೇ—ಧರಿಸುತ್ತಾನೆ (ಪಡೆಯುತ್ತಾನೆ. ಮತ್ತು) ಸಃ—ಅವನೇ । ಪುಷ್ಯತಿ—(ಪಶುಪುತ್ರಾದಿಗಳಿಂದ) ಸಮೃದ್ಧನಾಗುತ್ತಾನೆ ॥

ಭಾವಾರ್ಥ

ಎಲೈ ಅಗ್ನಿಯೇ, ಸಮಸ್ತಪದಾರ್ಥಗಳ ವಿಷಯಕಜ್ಞಾನವುಳ್ಳ ನಿನಗೆ ಉದ್ದೀಪನಕಾರಿಗಳಾದ ಆಜ್ಯಾದಿಹವಿಸ್ಸನ್ನು ಅರ್ಪಿಸುವ ಯಜಮಾನನೇ (ನಿನ್ನನುಗ್ರಹದಿಂದ) ವೀರರಾದ ಪುತ್ರರನ್ನು ಪಡೆಯುತ್ತಾನೆ ಮತ್ತು ಪಶುಪುತ್ರಾದಿ ಸಮೃದ್ಧಿಯನ್ನೂ ಹೊಂದುತ್ತಾನೆ.

## English Translation.

He verily who presents oblations to you the knower of all things, he acquires (Agni) excellent progeny: he prospers.

ವಿಶೇಷವಿಷಯಗಳು.

**ಜಾತವೇದಸೇ ಸಮಿಧಾ ದದಾಶತಿ**—ಜಾತಪ್ರಜ್ಞಾಯ ಸಮಿಂಧನಕಾರೀಃಆಜ್ಯಪುರೋಡಾಶಾದಿಹವೀಂಷಿ ದದಾತಿ । ಜಾತವೇದಶ್ಶಬ್ದವು ನಿರುಕ್ತಕಾರರಿಂದ ಐದು ವಿಧವಾದ ಅರ್ಥವನ್ನು ಬೋಧಿಸುವುದಾಗಿ ವ್ಯಾಖ್ಯಾತವಾಗಿದೆ—

> **ಜಾತಾನಿ ವೇದ । ಜಾತಾನಿ ವೈನಂ ವಿದುಃ । ಜಾತೇ ಜಾತೇ ವಿದ್ಯತ ಇತಿವಾ । ಜಾತವಿತ್ತೋ ವಾ ಜಾತಧನಃ । ಜಾತವಿದ್ಯೋ ವಾ ಜಾತಪ್ರಜ್ಞಾನಃ । ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ।**
>
> (ನಿ ೭-೨೦)

ಅಗ್ನಿಯು (ಸೃಷ್ಟಿಯಲ್ಲಿ) ಲೋಕದಲ್ಲಿ ಉತ್ಪನ್ನವಾದವುಗಳೆಲ್ಲವನ್ನೂ ತಿಳಿದಿರುವಕಾರಣ ಸರ್ವಜ್ಞನಾಗಿರುವನು. ಆದುದರಿಂದ ಅಗ್ನಿಗೆ ಜಾತವೇದಸ್ ಎಂದು ಹೆಸರು ಎಂದು ಒಂದು ವಿಧವಾದ ಅರ್ಥ. ಉತ್ಪನ್ನವಾದವುಗಳೆಲ್ಲವೂ ಅಗ್ನಿಯನ್ನು ತಿಳಿದುಇರುತ್ತವೆ ಎಂದು ಎರಡನೆಯ ಅರ್ಥ. ವಿತ್ತಶಬ್ದವು ಧನವಾಚಿಯಾಗಿರುವುದರಿಂದ ಧನವಂತನೆಂದು ಮೂರನೆಯ ಅರ್ಥ. ಉತ್ಪನ್ನವಾದ ಪ್ರಾಣಿಗಳೆಲ್ಲದರಲ್ಲಿಯೂ ಇರುವವನು ಎಂದು ನಾಲ್ಕನೆಯ ಅರ್ಥ. ಸ್ವಭಾವದಿಂದಲೂ ಅಗ್ನಿಯು ಪ್ರಜ್ಞಾವಂತನಾಗಿರುವನು ಎಂದು ಐದನೆಯ ಅರ್ಥ. ಈ ವಿಷಯದಲ್ಲಿ ಬ್ರಾಹ್ಮಣವಾಕ್ಯವನ್ನು ಉದಹರಿಸಿದೆ. ಈಪ್ರಕಾರವಾದ ಮಾಹಾತ್ಮ್ಯಪೂರಿತನಾದ ಅಗ್ನಿಯ ಸಂತೋಷಕ್ಕಾಗಿಯೂ, ಅಗ್ನಿಯನ್ನು ಕಾಂತಿಯುಳ್ಳವನನ್ನಾಗಿ ಮಾಡುವುದಕ್ಕಾಗಿಯೂ ಋತ್ವಿಜರು ಆಜ್ಯಪುರೋಡಾಶ ಮೊದಲಾದ ಹವಿಸ್ಸುಗಳನ್ನು ಅರ್ಪಿಸುತ್ತಾರೆ ಎಂದು ವರ್ಣಿಸಿದೆ.

**ಸಃ ಸುವೀರ್ಯಂ ಧತ್ತೇ ಪುಷ್ಯತಿ**—ಅಗ್ನಿಯನ್ನು ಸಮಿದಾಜ್ಯಾದಿಗಳಿಂದ ತೃಪ್ತಿಪಡಿಸುವ ಯಜಮಾನನು ಪ್ರಭೂತವಾದ ಸಾಮರ್ಥ್ಯದಿಂದ ಕೂಡಿದ ಪುತ್ರರುಳ್ಳವನಾಗಿಯೂ, ಪಶುಪುತ್ರಾದಿಗಳಿಂದ ಉತ್ತಮವಾದ ಅಭಿವೃದ್ಧಿಯನ್ನು ಹೊಂದಿರುವವನಾಗಿಯೂ ಆಗುತ್ತಾನೆಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

**ಘ—ಋಚಿತುನುಘ**—ಎಂಬುದರಿಂದ ಸಂಹಿತಾದಲ್ಲಿ ದೀರ್ಘ. ಚಾದಿಯಲ್ಲಿ ಪಠಿತವಾದುದರಿಂದ **ಚಾದಯೋಽನುದಾತ್ತಾಃ** ಎಂಬುದರಿಂದ ಅನುದಾತ್ತವಾಗುತ್ತದೆ.

ದದಾಶತಿ—ದಾಶೃ ದಾನೇ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಶಪ್ ವಿಕರಣ. ಛಾಂದಸವಾಗಿ ಧಾತುವಿಗೆ ದ್ವಿತ್ವ ಬರುತ್ತದೆ. ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಭ್ಯಸ್ತ ಸಂಜ್ಞಾ ಇರುವುದರಿಂದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಮಿಧಾ**— ಞಿಇಂಧೀ ದೀಪ್ತೌ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಅನಿದಿತಾಂಹಲ**—(ಪಾ. ಸೂ. ೬-೪-೨೪) ಎಂಬುದರಿಂದ ಉಪಧಾನಕಾರಕ್ಕೆ ಲೋಪ. ಸಮಿಧ್ ಶಬ್ದವಾಗುತ್ತದೆ. **ಗತಿಕಾರಕೋ**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಶಸ್ ವಿಭಕ್ತಿ ಪರವಾದಾಗ **ಸುಪಾಂಸುಲುಕ್** (ಪಾ ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ಸಮಿಧಾ ಎಂದು ರೂಪವಾಗುತ್ತದೆ.

**ಜಾತವೇದಸೇ**—ಜಾತಂ ವೇದಃ (ಜ್ಞಾನಂ) ಯಸ್ಯ ತಸ್ಮೈ **ಬಹುವ್ರೀಹೌಪ್ರಕೃತ್ಯಾಪೂರ್ವ-ಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಧತ್ತೇ**—ಡುಧಾಞ್ ಧಾರಣಪೋಷಣಯೋಃ ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸುವೀರ್ಯಮ್**—ಶೋಭನಂ ವೀರ್ಯಂ ಯಸ್ಯ ಸಃ ತಮ್. ಸುಸ್ವರಕ್ಕೆ ಬಾಧಕವಾಗಿ **ವೀರ-ವೀರ್ಯೌಚ** (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಪುಷ್ಯತಿ**—ಪುಷ ಪುಷ್ಟೌ ಧಾತು. ದಿವಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. **ದಿವಾ-ದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ ಬಂದಿರುತ್ತದೆ. **ಅತಿಙಂತದ ಪರದಲ್ಲಿರು**ವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಸ ಕೇತುರಧ್ವರಾಣಾಮಗ್ನಿರ್ದೇವೇಭಿರಾ ಗಮತ್ ।
ಅಂಜಾನಃ ಸಪ್ತ ಹೋತೃಭಿರ್ಹವಿಷ್ಮತೇ ॥ ೪ ॥

ಪದಪಾಠಃ

ಸಃ । ಕೇತುಃ । ಅಧ್ವರಾಣಾಂ । ಅಗ್ನಿಃ । ದೇವೇಭಿಃ । ಆ । ಗಮತ್ ।
ಅಂಜಾನಃ । ಸಪ್ತ । ಹೋತೃಭಿಃ । ಹವಿಷ್ಮತೇ ॥ ೪ ॥

ಸಾಯಣಭಾಷ್ಯಂ.

ಅಧ್ವರಾಣಾಂ ಯಜ್ಞಾನಾಂ ಕೇತುಃ ಪ್ರಜ್ಞಾಪಕಃ ಸೋಽಗ್ನಿಃ ಸಪ್ತ ಸಪ್ತಭಿರ್ಹೋತೃಭಿರ್ವಷ-ಟ್ಕರ್ತೃಭಿರಂಜಾನಃ ಸೋಮಾಜ್ಯಾಹುತಿಭಿರಜ್ಯಮಾನಃ ಸನ್ ಹವಿಷ್ಮತೇ ಯಜಮಾನಾರ್ಥಂ ದೇವೇಭಿ-ರ್ಹವ್ಯದೇವೈಃ ಸಹಾಗಮತ್ । ಆಗಚ್ಛತು ॥ ಗಮತ್ । ಲೋಡರ್ಥೇ ಛಂದಸಿ ಲುಙ್ಲಙ್ಲಿಟ ಇತಿ ಲುಙ್ । ಲೃದಿತ್ತ್ವಾದಙ್ । ಬಹುಲಂ ಛಂದಸ್ಯಮಾಙ್ಯೋಗೇ ಇತ್ಯಡಭಾವಃ । ನಿಘಾತಃ । ಅಂಜಾನಃ ।

**ಅಂಜೂ ವ್ಯಕ್ತಿಮ್ರಕ್ಷಣಗತಿಷು । ವ್ಯತ್ಯಯೇನ ಕರ್ಮಣಿ ಶಾನಚ್ । ಚಿತ್ತ್ವಾದಂತೋದಾತ್ತತ್ವಂ । ಹವಿಷ್ಕೃತೇ । ಜುಹೋತೇರರ್ಚಿಶುಚೀತ್ಯಾದಿನಾ ಇಸಿಪ್ರತ್ಯಯಾಂತೋ ಹವಿಃಶಬ್ದೋಽನ್ತೋದಾತ್ತಃ । ಸ್ವರವಿಧೌ ವ್ಯಂಜನಮವಿದ್ಯಮಾನವದಿತಿ ಪರಿಭಾಷಾನಾಶ್ರಯಣಾನ್ಕೃತುಪಿ ಉದಾತ್ತತ್ವಾಭಾವಃ। ಇಸಿಪ್ರತ್ಯಯಸ್ವರಃ ॥**

ಪ್ರತಿಪದಾರ್ಥ

**ಅಧ್ವರಾಣಾಂ**—ಯಾಗಗಳ। **ಕೇತುಃ**—ಪ್ರಜ್ಞಾಪಕನಾದ (ಧ್ವಜಪ್ರಾಯನಾದ) । **ಸಃ ಅಗ್ನಿಃ**—ಆ ಅಗ್ನಿಯು । **ಸಪ್ತ ಹೋತೃಭಿಃ**—(ವಷಟ್ಕರ್ತೃಗಳಾದ) ಏಳುಜನ ಹೋತೃಗಳಿಂದ (ಋತ್ವಿಕ್ಕುಗಳಿಂದ) । **ಅಂಜಾನಃ**—ಸೋಮಾಜ್ಯಾದಿಗಳಿಂದ ಹುತನಾಗಿ । **ಹವಿಷ್ಕೃತೇ**—ಹವಿರಾದಿವಿಶಿಷ್ಟನಾದ ಯಜಮಾನನಿಗೋಸ್ಕರ । **ದೇವೇಭಿಃ**—(ಯಷ್ಟವ್ಯರಾದ) ದೇವತೆಗಳೊಡನೆ । **ಆ ಗಮತ್**—ಆಗಮಿಸಲಿ (ಬರಲಿ).

ಭಾವಾರ್ಥ.

ಯಾಗಗಳ ಜ್ಞಾಪಕನಾದ (ಯಾಗಗಳಿಗೆ ಧ್ವಜಪ್ರಾಯನಾದ) ಅಗ್ನಿಯು ವಷಟ್ಕರ್ತೃಗಳಾದ ಏಳು ಜನ ಹೋತೃಗಣದ ಋತ್ವಿಜರಿಂದ ಅರ್ಪಿತವಾದ ಸೋಮಾಜ್ಯಾದ್ಯಾಹುತಿಗಳನ್ನು ಸ್ವೀಕರಿಸುವವನಾಗಿ, ಯಷ್ಟವ್ಯರಾದ ಇತರ ದೇವತೆಗಳೊಡನೆ ನಮ್ಮ ಯಾಗಕ್ಕೆ ಆಗಮಿಸಲಿ.

English Translation.

May (Agni), the banner of sacrifices, offering oblations on the part of the worshipper through (the ministry of) the seven officiating priests, come hither with the gods.

ವಿಶೇಷ ವಿಷಯಗಳು.

**ಕೇತುಃ—ಪ್ರಜ್ಞಾಪಕಃ ।** ಕೇತುಶಬ್ದವು ಧ್ವಜ, ಸೂಚಕ, ಪ್ರಜ್ಞಾ, ಕರ್ಮ ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿದೆ ಅಗ್ನಿಯು **ಅಧ್ವರಾಣಾಂ ಕೇತುಃ**-ಯಜ್ಞಗಳು ಆಚರಿಸಲ್ಪಡುವುದಕ್ಕೆ (ಸೂಚಕನಾಗಿರುವನು) ಪ್ರಜ್ಞಾಪಕನಾಗಿರುವನು ಎಂಬ ಅರ್ಥವನ್ನು ವಿವರಿಸಿದೆ.

**ಸಪ್ತಹೋತೃಭಿರಂಜಾನಃ—ಸಪ್ತಭಿಃ ವಷಟ್ಕರ್ತೃಭಿಃ ಸೋಮಾಜ್ಯಾಹುತಿಭಿರಜ್ಯಮಾನಃ ।** ಯಜ್ಞದಲ್ಲಿ ವಷಟ್ಕಾರವನ್ನು ಪಠಿಸುವ ಹೋತೃವೇ ಮೊದಲಾದ ಏಳುಜನ ಋತ್ವಿಗ್ಜನರಿಂದ ಅಗ್ನಿಯು ಸೋಮ, ಆಜ್ಯ, ಹವಿಸ್ಸು ಇವೇ ಮೊದಲಾದವುಗಳಿಂದ ಉಪಚರಿಸಲ್ಪಟ್ಟಿರುವನೆಂದು ಅರ್ಥವನ್ನು ಸಾಯಣರು **ಸಪ್ತಹೋತೃಭಿಃ** ಎಂಬ ಪದಕ್ಕೆ **ಸಪ್ತಭಿಃ ಹೋತೃಭಿಃ** ಎಂದು ಎರಡು ಪದಗಳನ್ನು ವಿಂಗಡಿಸಿ ವಿವರಿಸಿದ್ದಾರೆ. ನಿರುಕ್ತಕಾರರು—

**ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।**
**ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪೇಷು ಜನ್ಮಸು ॥**
**(ಋ. ಸಂ. ೧೦-೬೪-೫)**

ಇಲ್ಲಿ ಸಪ್ತಹೋತೃಶಬ್ದಕ್ಕೆ ಸಪ್ತಾಸ್ಯೈ ರಶ್ಮಯೋ ರಸಾನಭಿಸನ್ನಮಯಂತಿ, ಸಪ್ತೈನಮೃಷಯಃ ಸ್ತುವಂತೀತಿ ವಾ—ಏಳು ರಶ್ಮಿಗಳೂ ಉದಕಗಳನ್ನು ಹೀರುತ್ತವೆಯಾದಕಾರಣ ಅಥವಾ ಏಳು ಋಷಿಗಳೂ ಸ್ತುತಿಸುವ ಕಾರಣ ಆದಿತ್ಯನು ಸಪ್ತಹೋತೃವಾಗಿರುವನು ಎಂಬ ಅರ್ಥವನ್ನು ವಿವರಿಸಿದ್ದಾರೆ.

ಹವಿಷ್ಮತೇ ದೇವೇಭಿರಾಗಮುಕ್—ಯಜಮಾನಾರ್ಥಂ ಯಷ್ಟವ್ಯದೇವೈಸ್ಸಹಾಗಚ್ಛತು ॥ ಹವಿಸ್ಸುಗಳನ್ನು ಅಗ್ನಿಗೋಸ್ಕರವಾಗಿ ಸಿದ್ಧಮಾಡಿಕೊಂಡಿರುವ ಕಾರಣ ಯಜಮಾನನು ಹವಿಷ್ಮಾನ್ ಎಂದು ವ್ಯಪ ನಾಗಿರುವನು. ಯಾಗದಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸುವವರಾದ ದೇವತೆಗಳೊಡನೆ ಅಗ್ನಿಯು ಯಜಮ ನಿಗಾಗಿ ಅನುಗ್ರಹಿಸಿ ಬರಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ.

ದೇವೇಭಿಃ—ಅತೋ ಭಿಸ ಐಸ್ ಎಂಬಲ್ಲಿ ವಾ ಛಂದಸಿ ಎಂಬುದರಿಂದ ಭಿಸ್ ಪ್ರತ್ಯಯಕ್ಕೆ ಐಸಾದೇಶ ಬರುವುದಿಲ್ಲ. ಬಹುವಚನೇಝಲ್ಯೇತ್ ಎಂಬುದರಿಂದ ಏತ್ವ.

ಗಮುಕ್—ಗಮ್ಲೃ ಗತೌ ಧಾತು. ಛಂದಸಿಲುಙ್‌ಲಙ್‌ಲಿಟಃ (ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲುಙ್. ಧಾತುವಿನಲ್ಲಿ ಲೃಕಾರ ಇತ್ತಾದುದರಿಂದ ಪುಷಾದಿದ್ಯುತಾದಿ—(ಪಾ ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. ಇತಶ್ಚ ಎಂಬುದರಿಂದ ತಿಪಿನ ಇಕಾರಲೋಪ. ಬಹುಲಂಛಂದಸ್ಯಮಾಙ್—(ಪಾ. ಸೂ. ೬-೪-೭೫) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

ಅಂಜಾನಃ—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ವ್ಯತ್ಯಯೋಬಹುಲಂ ಎಂಬುದರಿಂದ ಕರ್ಮಣಿಯಲ್ಲಿ ಲಟಿಗೆ ಶಾನಚಾದೇಶ. ಚಿತ್ತಾದುದರಿಂದ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಹೋತೃಭಿಃ—ಹು ದಾನಾದನಯೋಃ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತು ಉಕಾರಕ್ಕೆ ಗುಣ. ಅಂತೋದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

ಹವಿಷ್ಮತೇ—ಪೂರ್ವೋಕ್ತವಾದ ಧಾತುವಿಗೆ ಅರ್ಚಿಶುಚಿ—(ಉ. ಸೂ. ೨-೨೬೫) ಇಸಿಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣಬಂದಾಗ ಅವಾದೇಶ. ಹವಿಃ ಎಂದು ರೂಪವಾಗುತ್ತದೆ. ಹವಿಃ ಅಸ್ಯ ಅಸ್ತಿ ಇತಿ ಹವಿಷ್ಮಾನ್ ತದಸ್ಯಾಸ್ತಿ—(ಪಾ ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಸ್ವರವಿಧಿಯಲ್ಲಿ ವ್ಯಂಜನವಿದ್ದರೂ ಇಲ್ಲದಂತೆ ಎಂದು ಸ್ವರವಿಧೌವ್ಯಂಜನಮವಿದ್ಯಮಾನವತ್ (ಪರಿ. ೮೧) ಎಂಬುದರಿಂದ ಬೋಧಿತವಾದರೂ ಅದು ಅನಿತ್ಯವಾದುದರಿಂದ ಇಲ್ಲಿ ಅದು ಆಶ್ರಯಿಸಲ್ಪಡುವುದಿಲ್ಲ. ಆದುದರಿಂದ ಹ್ರಸ್ವನುಡ್ಭ್ಯಾಂ ಮತುಪ್ (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುವುದಿಲ್ಲ. ಇಸಿ ಪ್ರತ್ಯಯದ ಸ್ವರ ಉಳಿಯುತ್ತದೆ. ಚತುರ್ಥೀ ಏಕವಚನಾಂತರೂಪ.

———

ಸಂಹಿತಾಪಾಠಃ

ಪ್ರ ಹೋತ್ರೇ ಪೂರ್ವ್ಯಂ ವಚೋಽಗ್ನಯೇ ಭರತಾ ಬೃಹತ್ ।
ವಿಪಾಂ ಜ್ಯೋತೀಂಷಿ ಬಿಭ್ರತೇ ನ ವೇಧಸೇ ॥ ೫ ॥

ಪದಪಾಠಃ

ಪ್ರ । ಹೋತ್ರೇ । ಪೂರ್ವ್ಯಂ । ವಚಃ । ಅಗ್ನಯೇ । ಭರತ । ಬೃಹತ್ ।
ವಿಪಾಂ । ಜ್ಯೋತೀಂಷಿ । ಬಿಭ್ರತೇ । ನ । ವೇಧಸೇ ॥ ೫ ॥

ಸಾಯಣಭಾಷ್ಯಂ.

ಯಜಮಾನೋ ಹೋತ್ರಾದೀನ್ಪ್ರತಿ ಬ್ರೂತೇ । ಹೇ ಹೋತ್ರಾದಯೋ ವಿಪಾಂ ವಿಪ್ರಾಣಾಂ ಮೇಧಾವಿನಾಮಧ್ವರ್ಯ್ವಾದೀನಾಂ ಜ್ಯೋತೀಂಷಿ ಸತ್ಕರ್ಮಾನುಷ್ಠಾನಸಂಪಾದ್ಯಾನಿ ತೇಜಾಂಸಿ ಬಿಭ್ರತೇ ನಿಮಿತ್ತತಯಾ ಕುರ್ವಾಣಾಯ ವೇಧಸೇ ಜಗತೋ ವಿಧಾತ್ರೇ ಹೋತ್ರೇ ದೇವಾನಾಮಾಹ್ವಾತ್ರೇಽಗ್ನಯೇ ಬೃಹನ್ಮಹತ್ಪೂರ್ವ್ಯಂ ಪೂರ್ವೈಃ ಕೃತಂ ಪುರಾತನಂ ವಚಃ ಸ್ತೋತ್ರಶಸ್ತ್ರಾದಿಕಂ ವಾಕ್ಯಂ ಪ್ರಭರತ। ಸಂಪಾದಯತ । ನೇತ್ಯಯಂ ಪಾದಪೂರಣೋಽನ್ವಯಾಭಾವಾತ್ । ಯದ್ವಾ ವೇಧಸೇ ನ । ಯಥಾ ವೇಧಾ ಜಗದ್ವಿಧಾತಾ ಪರಮೇಶ್ವರ ಆದಿತ್ಯಾದೀನಿ ಜ್ಯೋತೀಂಷಿ ಕರೋತಿ ತದ್ವದಿತಿ ॥ ಪ್ರಶಬ್ದಸ್ಯ ಛಂದಸಿ ವ್ಯವಹಿತಾಶ್ಚೇತಿ ಭರತೇತ್ಯನೇನ ಸಂಬಂಧಃ । ಪೂರ್ವ್ಯಂ ಪೂರ್ವೈಃ ಕೃತಮಿತ್ಯರ್ಥಃ । ಪೂರ್ವೈಃ ಕೃತಮಿನಿಯೌ ಚೇತಿ ಯಪ್ರತ್ಯಯಃ । ಭಸಂಜ್ಞಕತ್ವಾದವರ್ಣಲೋಪಃ । ಪ್ರತ್ಯಯಸ್ವರಃ । ಭರತ । ಭೃಞ್ ಭರಣೇ ಭೌವಾದಿಕಃ । ನಿಘಾತಃ । ಬೃಹತ್ । ವರ್ತಮಾನೇ ಪೃಷದ್ಬೃಹದಿತಿ ನಿಪಾತನಾದಂತೋದಾತ್ತಃ । ಬಿಭ್ರತೇ । ಭೃಞ್ ಭರಣೇ । ಜುಹೋತ್ಯಾದಿಭ್ಯಃ ಶ್ಲುಃ । ಭೃಞಾಮಿದಿತೀತ್ವಂ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ.

(ಹೇ ಹೋತ್ರಾದಯಃ— ಎಲೈ ಹೋತ್ರಾದಿಋತ್ವಿಜರೇ) ವಿಪಾಂ— ಮೇಧಾವಿಗಳಾದ ಅಧ್ವರ್ಯ್ವಾದಿ ಋತ್ವಿಜರ । ಜ್ಯೋತೀಂಷಿ—(ಸತ್ಕರ್ಮಾನುಷ್ಠಾನದಿಂದ ಪ್ರಾಪ್ಯವಾದ) ತೇಜಸ್ಸುಗಳನ್ನು । ಬಿಭ್ರತೇ— ಉಂಟುಮಾಡುವವನೂ। ವೇಧಸೇ— ಜಗದ್ಧಾತೃವೂ। ಹೋತ್ರೇ— ದೇವತೆಗಳನ್ನು ಕರೆಯುವವನೂ (ಆದ) । ಅಗ್ನಯೇ— (ಈ) ಅಗ್ನಿಗೆ । ಬೃಹತ್— ಮಹಿಮೋಪೇತವೂ । ಪೂರ್ವ್ಯಂ— ಪುರಾತನರಿಂದ ಕೃತವಾದುದೂ ಆದ । ವಚಃ— ಸ್ತೋತ್ರಶಸ್ತ್ರಾದಿಸ್ತುತಿವಾಕ್ಯಗಳನ್ನು। ವೇಧಸೇ ನ— ಜಗತ್ಕರ್ತೃವಾದ ಬ್ರಹ್ಮನಿಗೆ ಅರ್ಪಿಸುವಂತೆ। ಪ್ರ ಭರತ— ಹೆಚ್ಚಾಗಿ ಸಂಪಾದಿಸಿರಿ (ಅರ್ಪಿಸಿರಿ, ಸ್ತೋತ್ರಮಾಡಿರಿ).

ಭಾವಾರ್ಥ.

ಎಲೈ ಹೋತ್ರಾದಿಋತ್ವಿಜರೇ, ಮೇಧಾವಿಗಳಾದ ಅಧ್ವರ್ಯು ಮೊದಲಾದ ಋತ್ವಿಜರ ತೇಜಸ್ಸಿಗೆ ಕಾರಣನೂ, ಜಗದ್ಧಾತೃವೂ, ದೇವತೆಗಳನ್ನು ಯಾಗಗಳಿಗೆ ಕರತರುವವನೂ ಆದ ಅಗ್ನಿಯನ್ನು, ಪುರಾತನವೂ ಮಹಾಮಹಿಮೋಪೇತವೂ ಆದ ಸ್ತೋತ್ರಶಸ್ತ್ರಾದಿ ಮಂತ್ರಗಳಿಂದ ಚೆನ್ನಾಗಿ ಸ್ತುತಿಸಿ.

English Translation.

Offer to the ministering Agni as if to the Creator (of the world), the great praise recited of old, for the sake of animating the energies of the pious (worshippers).

ವಿಶೇಷವಿಷಯಗಳು.

ವಿಶಾಂ—ವಿಪ್ರಾಣಾಂ ಮೇಧಾವಿನಾಮಧ್ವರ್ಯ್ವಾದೀನಾಂ । ವಿಶ ಎಂಬ ಪದವು ಮೇಧಾವಿ ನಾಮಗಳಲ್ಲಿ (ನಿ ೩-೧೫) ಉಕ್ತವಾಗಿದೆ. ಮೇಧಾವಿಗಳಾದ ಅಧ್ವರ್ಯು ಮೊದಲಾದ ಋತ್ವಿಜರಿಗಾಗಿ ಎಂದು ಅರ್ಥವನ್ನು ವಿವರಿಸಿದೆ.

ಜ್ಯೋತೀಂಷಿ ಬಿಭ್ರತೇ ವೇಧಸೇ ವಚಃ ಪ್ರಭರತ—ಅಧ್ವರ್ಯು ಮೊದಲಾದವರಿಗೆ ಅವರವರ ಸತ್ಕರ್ಮಾನುಷ್ಠಾನದಿಂದ ಅವರಿಗುಚಿತವಾದ ತೇಜಸ್ಸುಗಳನ್ನು ಆಯಾಯ ನಿಮಿತ್ತಾನುಗುಣವಾಗಿ ಅನುಗ್ರಹಿಸುವ ಅಗ್ನಿಯು ಜಗತ್ತನ್ನು ಸೃಷ್ಟಿಮಾಡುವ ಸಾಮರ್ಥ್ಯವುಳ್ಳವನಾಗಿರುವನು. ಈ ಅಗ್ನಿಗಾಗಿ ಪೂರ್ವಿಕರಾದ ಋಷಿಗಳು ಉಪದೇಶಮಾಡಿರುವ ಸ್ತೋತ್ರ ಮತ್ತು ಶಸ್ತ್ರ ಮಂತ್ರಗಳನ್ನು ಪಠಿಸಿರಿ ಎಂದು ಯಜಮಾನನು ಋತ್ವಿಜರಿಗೆ ಆದೇಶಮಾಡುವನೆಂದು ವರ್ಣಿಸಿದೆ.

ವೇಧಸೇ ನ— ಎಂಬಲ್ಲಿ ನ ಇತ್ಯಯಂ ಪಾದಪೂರಣಃ ಅನ್ವಯಾಭಾವಾತ್ ಯದ್ವಾ । ಯಥಾ ವೇಧಾ ಜಗದ್ವಿಧಾತಾ ಪರಮೇಶ್ವರಃ ಆದಿತ್ಯಾದೀನಿ ಜ್ಯೋತೀಂಷಿ ಕರೋತಿ ತದ್ವತ್ । ಇಲ್ಲಿ ನ ಎಂಬ ಪದಕ್ಕೆ ಇತರ ಪದದೊಡನೆ ಅನ್ವಯವು ಇಲ್ಲದಕಾರಣ ಪಾದಪೂರಣಾರ್ಥಕವಾಗಿರುವುದು ಎಂದು ಒಂದು ವಿಧ ಅರ್ಥ. ಅಥವಾ ಜಗತ್ತುಗಳನ್ನು ಸೃಷ್ಟಿಮಾಡಿರುವ ಪರಮೇಶ್ವರನು ಆದಿತ್ಯನೇ ಮೊದಲಾದ ತೇಜಸ್ಸುಗಳನ್ನು ಸೃಷ್ಟಿಮಾಡಿರುವಹಾಗೆ ಅಗ್ನಿಯೂ ಅಧ್ವರ್ಯು ಮೊದಲಾದವರಿಗ ತೇಜಸ್ಸುಗಳನ್ನು ಅನುಗ್ರಹಿಸುತ್ತಿರುವನೆಂದು ಉಪಮಾನಾರ್ಥವನ್ನೂ ವರ್ಣಿಸಿದೆ.

ಬೃಹತ್—ಈ ಪದವು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಮಹತ್ತ್ವಪೂರಿತವಾದ ವಾಕ್ಕೆಂಬದಾಗಿ ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

ಹೋತ್ರೇ—ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಬಹುಲಂ-ಛಂದಸಿ ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಪ್ರತ್ಯಯನಿಮಿತ್ತವಾಗಿ ಸಂಪ್ರಸಾರಣ ಉಕಾರಕ್ಕೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

ಪ್ರ—ಧಾತುವಿನ ಅವ್ಯವಹಿತ ಪೂರ್ವದಲ್ಲಿ ಉಪಸರ್ಗವನ್ನು ಪ್ರಯೋಗಿಸಬೇಕೆಂದು ನಿಯಮವಿದ್ದರೂ **ವ್ಯವಹಿತಾಶ್ಚ** (ಪಾ. ಸೂ. ೧-೪-೮೨) ಎಂಬುದರಿಂದ ಛಂದಸ್ಸಿನಲ್ಲಿ ವ್ಯವಧಾನವಿದ್ದರೂ ಬರುತ್ತದೆ ಎಂದುದರಿಂದ ಇಲ್ಲಿ ವ್ಯವಧಾನವಿರುವ ಭರತ ಎಂಬುದರೊಡನೆ ಸಂಬಂಧ ಬರುತ್ತದೆ.

**ಪೂರ್ವ್ಯಮ್**—ಪೂರ್ವೈಃ ಕೃತಮ್ ಪೂರ್ವ್ಯಮ್. **ಪೂರ್ವೈಃಕೃತಮಿನಯೌಚ** (ಪಾ. ಸೂ. ೪-೪-೧೩೩) ಎಂಬುದರಿಂದ ಯ ಪ್ರತ್ಯಯ. **ಯಚಿಭಮ್** ಎಂಬುದರಿಂದ ಪೂರ್ವಕ್ಕೆ ಭಸಂಜ್ಞಾ ಇರುವುದರಿಂದ **ಯಸ್ಯೇತಿಚ** ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತನಾಗುತ್ತದೆ.

**ಭರತ**—ಭೃಞ್ ಭರಣೇ ಧಾತು. ಲೋಟ್ ಮಧ್ಯಮಪುರುಷಬಹುವಚನಕ್ಕೆ ತಸ್ಥಸ್ಥ—ಎಂಬುದರಿಂದ ತಾದೇಶ. **ಕರ್ತರಿಶಪ್** ಎಂಬುದರಿಂದ ಶಪ್. ತನ್ನಿಮಿತ್ತವಾಗಿ ಧಾತು ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. **ಅತಿಙಂತದ** ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಬೃಹತ್**—ಬೃಹಿ ವೃದ್ಧೌ. **ವರ್ತಮಾನೇ ಪೃಷದ್ಬೃಹತ್**—(ಉ. ಸೂ. ೨-೨೪೧) ಎಂಬುದರಿಂದ ಬೃಹತ್ ಎಂದು ನಿಪಾತಮಾಡಿರುವುದರಿಂದ ಅಂತೋದಾತ್ತವಾಗುತ್ತದೆ.

**ಬಿಭ್ರತೇ**—ಡುಭೃಞ್ ಭರಣೇ ಧಾತು ಜುಹೋತ್ಯಾದಿ. ಲಟಿಗೆ ಶತೃ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದರಿಂದ ಧಾತುವಿನ ಅಭ್ಯಾಸಕ್ಕೆ ಇತ್ವ. ರಪರವಾಗಿ ಬಂದಾಗ ಆದಿಹಲ್‌ಶೇಷ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಧಾತು ಋಕಾರಕ್ಕೆ ಗುಣ ಬರುವುದಿಲ್ಲ. ಯಣಾದೇಶ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

ಸಂಹಿತಾಪಾಠಃ

**ಅಗ್ನಿಂ ವರ್ಧಂತು ನೋ ಗಿರೋ ಯತೋ ಜಾಯತ ಉಕ್ಥ್ಯಃ ।**
**ಮಹೇ ವಾಜಾಯ ದ್ರವಿಣಾಯ ದರ್ಶತಃ ॥ ೬ ॥**

ಪದಪಾಠಃ

**ಅಗ್ನಿಂ । ವರ್ಧಂತು । ನಃ । ಗಿರಃ । ಯತಃ । ಜಾಯತೇ । ಉಕ್ಥ್ಯಃ ।**
**ಮಹೇ । ವಾಜಾಯ । ದ್ರವಿಣಾಯ । ದರ್ಶತಃ ॥ ೬ ॥**

ಸಾಯಣಭಾಷ್ಯಂ.

**ಯೋಽಯಮಗ್ನಿರ್ಯತೋ ಯಾಭಿಃ ಸ್ತುತಿರೂಪಾಭಿರ್ಗೀರ್ಭಿರುಕ್ಥ್ಯೋ ಜಾಯತೇ। ಉಕ್ಥ್ಯಶಬ್ದಃ ಪ್ರಶಸ್ಯವಾಚೀ । ಅನಭಿಶಸ್ತ್ಯ ಉಕ್ಥ್ಯ ಇತಿ ತನ್ನಾಮಸು ಪಾಠಾತ್ । ಅತಿಶಯೇನ ಸ್ತುತ್ಯೋ**

ಭವತೀತ್ಯರ್ಥಃ । ಯದ್ವಾಯಮಗ್ನಿರ್ಮಹೇ ಮಹತೇ ವಾಜಾಯಾನ್ನಾಯ ದ್ರವಿಣಾಯ ಧನಾಯ ಚ ದರ್ಶತೋ ದರ್ಶನೀಯೋ ಭವತಿ ತಮಿಮಮಗ್ನಿಂ ನೋ ಗಿರೋಽಸ್ಮಾಕಂ ಸ್ತುತಿರೂಪಾಸ್ತಾ ವಾಚೋ ವರ್ಧಂತು । ವರ್ಧಯಂತು । ಪೂಜಯಂತ್ವಿತ್ಯರ್ಥಃ ॥ ವರ್ಧಂತು । ವೃಧು ವರ್ಧನೇ । ಅಸ್ಮಾಣ್ಣಿಚ್ । ಲಘೂಪಧಗುಣಃ । ಛಂದಸ್ಯುಭಯಥೇತ್ಯಾರ್ಧಧಾತುಕತ್ವಾಣ್ಣಿಲೋಪಃ । ಝೋಽಂತಾದೇಶಃ । ಏರುಃ । ಪಾ. ೩-೪-೮೬ । ಇತ್ಯುಕಾರಃ । ನಿಘಾತಃ । ಉಕ್ಥ್ಯಃ । ವಚ ಪರಿಭಾಷಣೇ । ಅಸ್ಮಾತ್ಪಾತೃತುದಿವಚಿರಿಚೀತ್ಯಾದಿನಾ ಥಕ್ । ವಚಿಸ್ವಪಿಯಜಾದೀನಾಂ ಕಿತೀತ್ಯಾದಿನಾ ಸಂಪ್ರಸಾರಣಂ । ಉಕ್ಥಂ ಶಸ್ತ್ರಂ । ತೇನ ಸ್ತುತ್ಯತ್ವೇನ ತತ್ರ ಭವ ಉಕ್ಥ್ಯಃ । ಭವೇ ಛಂದಸೀತಿ ಯತ್ । ಯಸ್ಯೇತಿ ಲೋಪಃ । ತಿತ್ಸ್ವರಿತಮಿತಿ ಸ್ವರಿತಃ । ದರ್ಶತಃ । ಭೃಮೃದೃಶಿಯಜೀತ್ಯತಚ್ ಪ್ರತ್ಯಯಃ । ಚಿತ್ತ್ವಾದಂತೋದಾತ್ತಃ ॥

ಪ್ರತಿಪದಾರ್ಥ.

(ಯಃ—ಯಾವ ಅಗ್ನಿಯು) | ಯತಃ—ಯಾವಸ್ತುತಿರೂಪವಾಕ್ಯಗಳಿಂದ | ಉಕ್ಥ್ಯಃಜಾಯತೇ—ಅತ್ಯಂತಸ್ತುತ್ಯನಾಗುತ್ತಾನೆಯೋ | (ಯಃ—ಯಾವ ಅಗ್ನಿಯು) | ಮಹೇ—ಹೆಚ್ಚಾದ | ವಾಜಾಯ—ಅನ್ನಕ್ಕೋಸ್ಕರಲೂ | ದ್ರವಿಣಾಯ—ಧನಕ್ಕೋಸ್ಕರಲೂ | ದರ್ಶತಃ—ದರ್ಶನೀಯನು (ಅಪೇಕ್ಷಿಸಲ್ಪಡುವನು ಆಗುತ್ತಾನೆಯೋ) | (ತಂ ಇಮಂ—ಅಂತಹ ಈ) ಅಗ್ನಿಂ—ಅಗ್ನಿಯನ್ನು | ನಃ ಗಿರಃ—ನಮ್ಮ ಸ್ತುತಿರೂಪವಾಕ್ಯಗಳು | ವರ್ಧಂತು—ವರ್ಧಿಸುವಂತೆ ಮಾಡಲಿ (ಸ್ತುತಿಸಲಿ) ||

ಭಾವಾರ್ಥ.

ನಮ್ಮ ಸ್ತುತಿಗಳು ಅಗ್ನಿಯನ್ನು ಪೂಜಿಸಲಿ ; ಹಾಗೆ ಪೂಜಿತನಾದ ಅಗ್ನಿಯು ಇನ್ನೂ ಹೆಚ್ಚು ಸ್ತುತ್ಯನಾಗುತ್ತಾನೆ ಮತ್ತು ನಮಗೆ ಹೆಚ್ಚಾಗಿ ಅನ್ನ ಮತ್ತು ಧನಗಳನ್ನು ಅನುಗ್ರಹಿಸುವವನಾಗುತ್ತಾನೆ. ನಮ್ಮ ಸ್ತುತಿಗಳು ಅಗ್ನಿಯನ್ನು ಚೆನ್ನಾಗಿ ಅಭಿವೃದ್ಧಿಯಾಗುವಂತೆ ಮಾಡಲಿ ಎಂದರೆ ಅಗ್ನಿಯ ಗುಣಗಳು ನಮ್ಮ ಸ್ತುತಿಗಳಿಂದ ಚೆನ್ನಾಗಿ ಪ್ರಕಾಶಿಸುವಂತಾಗಲಿ.

English Translation.

May our hymns exalt Agni, so that he may be born more worthy of praise, and may become manifest for (the purpose of bestowing) abundant food and riches.

ವಿಶೇಷವಿಷಯಗಳು.

**ಯತಃ ಉಕ್ಥ್ಯಃ ಜಾಯತೇ—ಅಯಮಗ್ನಿಃ ಯಾಭಿಃ ಸ್ತುತಿರೂಪಾಭಿಃ ಗೀರ್ಭಿಃ ಅತಿಶಯೇನ ಸ್ತುತ್ಯೋ ಭವತಿ । ಉಕ್ಥಶಬ್ದಃ ಪ್ರಶಸ್ಯವಾಚೀ । ಅನಭಿಶಸ್ಯಃ ಉಕ್ಥ್ಯಃ ಇತಿ ತನ್ನಾಮಸು ಪಾಠಾತ್ । ಅತಿಶಯೇನ ಸ್ತುತ್ಯೋ ಭವತೀತ್ಯರ್ಥಃ** । ಉಕ್ಥ್ಯಶಬ್ದವು ಪ್ರಶಸ್ಯನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. **ಉಕ್ಥಂ ಶಸ್ತ್ರಂ ತೇನ ಸ್ತುತ್ಯತ್ವೇನ ತತ್ರ ಭವ ಉಕ್ಥ್ಯಃ** । ಶಸ್ತ್ರವೆಂದರೆ ಗುಣವನ್ನು ಪ್ರಕಟಮಾಡುವ ಸ್ತುತಿರೂಪವಾದ ವಾಕ್ಯಂದೂ ಅದನ್ನು ಉಕ್ಥ ಎಂಬ ಶಬ್ದದಿಂದ ವ್ಯವಹರಿಸುತ್ತಾರಾಗಿ ಉಕ್ಥಶಬ್ದದ ಮೇಲೆ ಭವಾರ್ಥದಲ್ಲಿ ಯತ್ ಪ್ರತ್ಯಯವು ಬಂದು ಉಕ್ಥ್ಯ ಎಂಬ ಶಬ್ದವು ನಿಷ್ಪನ್ನನಾಗಿದೆ. ಅಗ್ನಿಯು ಪ್ರಶಸ್ತವಾದ ಸ್ತುತಿರೂಪವಾದ ವಾಕ್ಯಗಳಿಂದ ಸ್ತುತಿಸಲ್ಪಡುವವನೆಂದು ಅರ್ಥ.

**ಮಹೇ ವಾಜಾಯ ದ್ರವಿಣಾಯ ದರ್ಶತಃ**— ವಾಜಶಬ್ದವು ಅನ್ನನಾಮಗಳಲ್ಲಿಯೂ (ನಿ. ೩-೯) ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ದ್ರವಿಣಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. **ಮಹೇ** ಎಂಬ ಪದವು ಮಹನ್ನಾಮಗಳಲ್ಲಿ ಪಠಿತವಾಗಿಲ್ಲದಿದ್ದರೂ **ಮಹೇ ರಣಾಯ ಚಕ್ಷಸೇ** ಎಂಬಿವೇ ಮೊದಲಾದ ಋಕ್ಕುಗಳಲ್ಲಿ ಮಹೇ ಎಂಬ ಪದವು **ಮಹತೇ** ಪ್ರಬಲವಾದ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅಗ್ನಿಯು ಪ್ರಭೂತವಾದ ಅನ್ನವನ್ನೂ ಧನವನ್ನೂ ಅನುಗ್ರಹಿಸುವುದರಿಂದ ದರ್ಶನೀಯನಾಗಿರುವನೆಂದು ಅರ್ಥವನ್ನು ಹೇಳಿದೆ.

**ನಃ ಗಿರಃ ಅಗ್ನಿಂ ವರ್ಧಂತು**— ಸ್ತುತಿರೂಪವಾಗಿರುವ ನಮ್ಮ ವಾಕ್ಕುಗಳು ಯಜಮಾನರು ಸ್ತುತಿ ಮಾಡುವ ಅಗ್ನಿಯನ್ನು ಅಥವಾ ಅಗ್ನಿಯ ಗುಣಗಳನ್ನು ಅತಿಶಯವಾಗಿರುವಂತೆ ಮಾಡಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ.

**ವರ್ಧಂತು**— ವೃಧು ವೃದ್ಧೌ ಧಾತು. **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಪ್ರೇರಣಾರ್ಥತೋರುವುದರಿಂದ ಣಿಚ್. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಣಿಜಂತವು ಉಭಯಪದಿಯಾದುದರಿಂದ ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ** ಎಂಬುದರಿಂದ ಅದಕ್ಕೆ ಅಂತಾದೇಶ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಏರುಃ** ಎಂಬುದರಿಂದ ಪ್ರತ್ಯಯದ ಇಕಾರಕ್ಕೆ ಉತ್ವ. ವರ್ಧಂತು ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಾಯತೇ**— ಜನೀ ಪ್ರಾದುರ್ಭಾವೇ ಧಾತು ದಿವಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ. **ನಿಪಾತೈರ್ಯದ್ಯದಿ**— (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ವಿಕರಣ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಉಕ್ಥ್ಯಃ**— ವಚ ಪರಿಭಾಷಣೇ ಧಾತು. **ಪಾತೃತುದಿವಚಿರುಚಿ**— (ಉ. ಸೂ. ೨-೧೬೪) ಎಂಬುದರಿಂದ ಇದಕ್ಕೆ ಥಕ್ ಪ್ರತ್ಯಯ. ಕಿತ್ತಾದುದರಿಂದ **ವಚಿಸ್ವಪಿಯಜಾದೀನಾಂಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ (ಉ) **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಚೋಃಕುಃ** ಎಂಬುದರಿಂದ ಧಾತು ಚಕಾರಕ್ಕೆ ಕಕಾರಾದೇಶ. ಉಕ್ಥವೆಂಬುದು ಶಸ್ತ್ರದ ಹೆಸರು. ಅದು ಸ್ತುತ್ಯವಾದುದರಿಂದ ತತ್ರ ಭವಃ ಎಂದು ಅರ್ಥವಿವಕ್ಷೆಮಾಡಿದಾಗ **ಭವೇಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಯತ್ ಪ್ರತ್ಯಯವು ತಿತ್ತಾದುದರಿಂದ **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಮಹೇ— ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ (ಚತುರ್ಥೀ) ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದರ್ಶತಃ**— ದೃಶಿರ್ ಪ್ರೇಕ್ಷಣೇ ಧಾತು. **ಭೃಮೃದೃಶಿಯಜಿ**—(ಉ. ಸೂ. ೩-೩೯೦) ಎಂಬುದರಿಂದ ಇದಕ್ಕೆ ಅತಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನೇ ಯಜಿಷ್ಠೋ ಅಧ್ವರೇ ದೇವಾನ್ದೇವಯತೇ ಯಜ ।
ಹೋತಾ ಮಂದ್ರೋ ವಿ ರಾಜಸ್ಯತಿ ಸ್ರಿಧಃ ॥ ೭ ॥

ಪದಪಾಠಃ

ಅಗ್ನೇ । ಯಜಿಷ್ಠಃ । ಅಧ್ವರೇ । ದೇವಾನ್ । ದೇವಯತೇ । ಯಜ ।
ಹೋತಾ । ಮಂದ್ರಃ । ವಿ । ರಾಜಸಿ । ಅತಿ । ಸ್ರಿಧಃ ॥ ೭ ॥

ಸಾಯಣಭಾಷ್ಯಂ.

ಹೇ ಅಗ್ನೇ ಯಜಿಷ್ಠೋ ಯಷ್ಟೃತಮಸ್ತ್ವಮಧ್ವರೇ ಯಜ್ಞೇ ದೇವಯತೇ ದೇವಾನಾತ್ಮನ ಇಚ್ಛತೇ ಯಜಮಾನಾಯ ದೇವಾನ್ಯಜ । ತದರ್ಥಂ ಯಷ್ಟವ್ಯಾಗ್ನ್ಯಾದೀನ್ದೇವಾನ್ಪೂಜಯ । ಕಿಂಚ । ಹೋತಾ ದೇವಾನಾಮಾಹ್ವಾತಾ ಮಂದ್ರೋ ಯಜಮಾನಸ್ಯ ಮಾದಯಿತಾ ಸ ತ್ವಂ ಸ್ರಿಧಃ ಕ್ಷಪಯಿತ್ರೀಃ ಶತ್ರುಸೇನಾ ಅತಿಕ್ರಮ್ಯ ವಿ ರಾಜಸಿ । ವಿಶೇಷೇಣ ಶೋಭಸೇ ॥ ಯಜಿಷ್ಠಃ । ತುಶ್ಛಂದಸೀತೀಷ್ಠನ್ । ತುರಿಷ್ಠೇಮೇಯಸ್ಸ್ವಿತಿ ತೃಚೋ ಲೋಪಃ । ನಿತ್ತ್ವಾದಾದ್ಯುದಾತ್ತಃ । ದೇವಯತೇ । ಕ್ಯಚಶ್ಚಿತ್ತ್ವಾದಂತೋದಾತ್ತತ್ವಂ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ತಯೋಃ ಕ್ಯಚಾ ಸಹೈಕಾದೇಶ ಏಕಾದೇಶ ಉದಾತ್ತೇನೋದಾತ್ತ ಇತ್ಯಂತೋದಾತ್ತೋ ದೇವಯಚ್ಛಬ್ದಃ । ತತಃ ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಯಜ । ಯಜ ದೇವಪೂಜಾಸಂಗತಿಕರಣದಾನೇಷು । ಅಸ್ಮಾಲ್ಲೋಟ್ । ಸಿಪ್ । ಸಿಪೋ ಹಿರಾದೇಶಃ । ಅತೋ ಹೇರಿತಿ ಹೇರ್ಲುಕ್ । ನಿಘಾತಃ । ರಾಜಸಿ । ರಾಜೃ ದೀಪ್ತೌ । ನಿಘಾತಃ ॥

ಪ್ರತಿಪದಾರ್ಥ.

(ಹೇ) **ಅಗ್ನೇ**—ಎಲೈ ಅಗ್ನಿಯೇ । **ಯಜಿಷ್ಠಃ**—ಯಾಗಕರ್ತೃಗಳಲ್ಲಿ ಶ್ರೇಷ್ಠನಾದ (ನೀನು) । **ಅಧ್ವರೇ**—ಯಾಗದಲ್ಲಿ । **ದೇವಯತೇ**—ದೇವತೆಗಳನ್ನು (ಬರಮಾಡಿಕೊಳ್ಳಲು) ಇಚ್ಛಿಸುವ (ಯಜಮಾನನಿಗೋಸ್ಕರ) । **ದೇವಾನ್**—ಯಷ್ಟವ್ಯರಾದ ದೇವತೆಗಳನ್ನು । **ಯಜ**—ಪೂಜಿಸು; (ಮತ್ತು) । **ಹೋತಾ**—ದೇವತೆಗಳನ್ನು ಕರೆಯುವವನೂ । **ಮಂದ್ರಃ**—(ಯಜಮಾನನಿಗೆ) ಸಂತೋಷಕರನೂ ಆದ ನೀನು । **ಸ್ರಿಧಃ**—ಶತ್ರುಗಳನ್ನು । **ಅತಿ**—ಅತಿಕ್ರಮಿಸಿ । **ವಿರಾಜಸಿ**—ವಿಶೇಷವಾಗಿ ಪ್ರಕಾಶಿಸುತ್ತೀಯೆ ।

ಭಾವಾರ್ಥ.

ಎಲೈ ಅಗ್ನಿಯೇ, ಯಾಗಕರ್ತೃಗಳಲ್ಲಿ ಅತಿಶ್ರೇಷ್ಠನಾದ ನೀನು ಯಾಗಗಳಿಗೆ ದೇವತೆಗಳನ್ನು ಬರಮಾಡಿಕೊಳ್ಳಲಿಚ್ಛಿಸುವ ಯಜಮಾನನಿಗೋಸ್ಕರ ಯಷ್ಟವ್ಯರಾದ ದೇವತೆಗಳನ್ನು ಪೂಜಿಸು ಮತ್ತು ದೇವತೆಗಳನ್ನು

ಕರೆಯುವವನೂ, ಯಜಮಾನನಿಗೆ ಸಂತೋಷವನ್ನುಂಟುಮಾಡುವವನೂ ಆದ ನೀನು (ನಮ್ಮ) ಶತ್ರುಗಳನ್ನತಿಕ್ರಮಿಸಿ ವಿಶೇಷವಾಗಿ ಪ್ರಕಾಶಿಸು.

English Translation·

Agni, you are to be especially worshipped at the sacrifice: worship the gods (on behalf of) the devout (worshipper): you shine the invoker (o : gods) the exhilarator (of the pious) overcoming the foes·

ವಿಶೇಷವಿಷಯಗಳು.

**ಯಜಿಷ್ಠಃ ದೇವಯಶೇ ದೇವಾನ್ ಯಜ—ಯಷ್ಟೃತಮಸ್ತ್ವಂ ಯಜ್ಞೇ ದೇವಾನ್ ಆತ್ಮನ ಇಚ್ಛತೇ ಯಜಮಾನಾಯ ದೇವಾನ್ ಪೂಜಯ |** ಅಗ್ನಿಯು ಯಾಗಮಾಡುವವರಲ್ಲಿ (ಪ್ರಶಸ್ತನಾಗಿ) ಶ್ರೇಷ್ಠನಾಗಿರುವವನೆಂದು ಹೇಳಿ ಈ ಪ್ರಕಾರವಾದ ಮಾಹಾತ್ಮ್ಯದಿಂದ ಪೂರಿತನಾದ ಅಗ್ನಿಯು, ದೇವತೆಗಳನ್ನು ತನಗಾಗಿ ಬರಬೇಕೆಂದು ಅಪೇಕ್ಷಿಸುವ ಯಜಮಾನನ್ನು ಅನುಗ್ರಹಿಸಲು ದೇವತೆಗಳನ್ನು ಹವಿಸ್ಸಿನ ಅರ್ಪಣೆಯಿಂದ (ಪೂಜಿಸಲಿ) ತೃಪ್ತಿಪಡಿಸಲಿ ಎಂದು ಆಶಿಸಿದೆ.

**ಮಂದ್ರಃ—ಯಜಮಾನಾಯ ಮದಯಿತಾ |** ಮಂದ್ರಾ ಶಬ್ದವು ವ್ಯಾಖ್ಯಾನಗಳಲ್ಲಿ (೨-೩) ಉಕ್ತವಾಗಿದೆ ಮತ್ತು—

ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ |
ಸಾ ನೋ ಮಂದ್ರೇಷಮೂರ್ಜಂ ದುಹಾನಾ ಧೇನುರ್ವಾಗಸ್ಮಾನುಪ ಸುಷ್ಟುತೈತು ||
(ಋ. ಸಂ. ೮-೧೦೦-೧೧)

ಎಂಬಲ್ಲಿ **ಮಂದ್ರಾ ಮದನಾ**—ಮದವನ್ನು ಉಂಟುಮಾಡುವುದು ಎಂದು ವ್ಯಾಖ್ಯಾನಮಾಡಿದೆ. ಸಾಯಣರ ಅಗ್ನಿಯು ಯಜಮಾನನಿಗೆ ಮದವನ್ನು(ಸಂತೋಷವನ್ನು) ಉಂಟುಮಾಡುವವನೆಂದು ಅರ್ಥವಿವರಣೆಮಾಡಿದಾರೆ.

**ಹೋತಾ—ದೇವಾನಾಮಾಹ್ವಾತಾ |** ಅಗ್ನಿಯು ದೇವತೆಗಳನ್ನು ಯಾಗಕ್ಕಾಗಿ ಆಹ್ವಾನಮಾಡುವವನೆಂದು ಅರ್ಥ. **ಅಸ್ಯ ವಾಮಸ್ಯ ಪಲಿತಸ್ಯ ಹೋತುಃ** ಎಂಬ ಋಕ್ಕಿನಲ್ಲಿ **ಹೋತುಃ ಹ್ವಾತವ್ಯಸ್ಯ**- ಆಹ್ವಾನಮಾಡಲು ಅರ್ಹನಾಗಿರುವನೆಂದು ಅರ್ಥವನ್ನು ಹೇಳಿದೆ. ಅಗ್ನಿಯು ಇತರ ದೇವತೆಗಳನ್ನು ಆಹ್ವಾನಮಾಡುವುದರಿಂದ ಹೋತೃವಾಗಿರುವನು. ಇದರಂತೆಯೇ ಯಜ್ಞದಲ್ಲಿ ದೇವತೆಗಳೆಲ್ಲರನ್ನೂ ಆಯಾಯ ಮಂತ್ರಗಳಿಂದ ಆಹ್ವಾನಮಾಡುವ ಹೋತೃವೆಂಬ ಋತ್ವಿಜನಿಂದ ಇವನು ಕರೆಯಲ್ಪಡುವನು ಎಂದು ಇನ್ನೊಂದು ವಿಧವಾಗಿ ಹೋತೃಪದದ ಅರ್ಥವನ್ನು ವಿವರಿಸಬಹುದು. ಸಾಯಣರು ದೇವಾನಾಮಾಹ್ವಾತಾ ಎಂದು ವ್ಯಾಖ್ಯಾನಮಾಡಿ ಯಾಗವನ್ನು ನೆರವೇರಿಸುವ ಪ್ರಸಿದ್ಧನಾದ ಹೋತೃವಿನ ತಾದಾತ್ಮ್ಯವನ್ನು ಸೂಚಿಸುವ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಈ ಅಭಿಪ್ರಾಯವು ತೈತ್ತಿರೀಯ ಬ್ರಾಹ್ಮಣಾದಿ ಗ್ರಂಥಗಳಲ್ಲಿ ವಿವೃತವಾಗಿದೆ.

**ಸ್ರಿಧಃ ಅತಿ ವಿರಾಜಿಸಿ—ಕ್ಷಪಯಿತ್ರೂನ್ ಶತ್ರೂನ್ ಅತಿಕ್ರಮ್ಯ ವಿಶೇಷೇಣ ಶೋಭಸೇ |** ಅಗ್ನಿಯನ್ನು ಸಂಬೋಧಿಸಿ, ನೀನು ಶತ್ರುಗಳನ್ನು ಮೀರಿ ಎಂದರೆ ನಾಶಮಾಡಿ ಅತಿಶಯವಾಗಿ ಪ್ರಕಾಶಿಸುತ್ತೀಯೆ ಎಂದು ಅಗ್ನಿಯ ಮಾಹಾತ್ಮ್ಯವನ್ನೂ, ಶಕ್ತಿಯನ್ನೂ ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ.

**ಯಜಿಷ್ಠಃ**— ಯಜ ಧಾತುವಿಗೆ ಕರ್ತರಿಯಲ್ಲಿ ತೃಚ್ ಬಂದಾಗ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಅದರಮೇಲೆ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃಚಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದೇವಯತೇ**— ದೇವಾನ್ ಆತ್ಮನಃ ಇಚ್ಛತಿ ಇತಿ ದೇವಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. **ಸನಾದ್ಯಂತಾಧಾತವಃ** ಎಂಬುದರಿಂದ ಧಾತುಸಂಜ್ಞಾ. ಕ್ಯಜಂತದ ಮೇಲೆ ಲಟಿಗೆ ಶತ್ರಾದೇಶ. ಶಪ್ ವಿಕರಣ. ಲಸಾರ್ವಧಾತುಕಸ್ವರದಿಂದ ಶತೃ ಅನುದಾತ್ತ. ಶಪ್ ಪಿತ್ತಾದುದರಿಂದ ಅನುದಾತ್ತ. ಕ್ಯಚ್ ಚಿತ್ತಾದುದರಿಂದ ಉದಾತ್ತವಾಗುತ್ತದೆ. **ಅತೋಗುಣೇ** ಎಂಬುದರಿಂದ ಅದರೊಡನೆ ಏಕಾದೇಶ ಬಂದಾಗ **ಏಕಾದೇಶಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶವೂ ಉದಾತ್ತವಾಗುತ್ತದೆ. ಇದರಿಂದ ದೇವಯತ್ ಶಬ್ದವು ಅಂತೋದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನು-ಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದು ಉದಾತ್ತವಾಗುತ್ತದೆ.

**ಯಜ**— ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬಂದಾಗ **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಅದಕ್ಕೆ ಹಿ ಆದೇಶ. ಶಪ್ ವಿಕರಣ. ಅದಂತದ ಪರದಲ್ಲಿ ಹಿ ಬಂದುದರಿಂದ **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಮಂದ್ರಃ**— ಮದಿ ಸ್ತುತ್ಯಾದಿಷು ಧಾತು. **ಋಜ್ರೇಂದ್ರ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

ರಾಜಸಿ— ರಾಜೃ ದೀಪ್ತೌ ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ. **ತಿಙಂತನಿಘಾತ** ಸ್ವರ ಬರುತ್ತದೆ.

ಸಂಹಿತಾಪಾಠಃ

ಸ ನಃ ಪಾವಕ ದೀದಿಹಿ ದ್ಯುಮದಸ್ಮೇ ಸುವೀರ್ಯಂ ।
ಭವಾ ಸ್ತೋತೃಭ್ಯೋ ಅಂತಮಃ ಸ್ವಸ್ತಯೇ ॥ ೮ ॥

ಪದಪಾಠಃ

**ಸಃ । ನಃ । ಪಾವಕ । ದೀದಿಹಿ । ದ್ಯುಮತ್ । ಅಸ್ಮೇ ಇತಿ । ಸುವೀರ್ಯಂ ।**
**ಭವ । ಸ್ತೋತೃಽಭ್ಯಃ । ಅಂತಮಃ । ಸ್ವಸ್ತಯೇ ॥ ೮ ॥**

ಸಾಯಣಭಾಷ್ಯಂ.

ನಃ ಪಾವಕಾಸ್ಮತ್ಸಂಬಂಧಿನಃ ಪಾಪಸ್ಯ ಶೋಧಕ ಹೇ ಅಗ್ನೇ ಸ ಪೂರ್ವಮಂತ್ರೇ ಪ್ರತಿಪಾದಿತಸ್ತ್ವಂ ದ್ಯುಮತ್ಕಾಂತಿಯುಕ್ತಂ ಸುವೀರ್ಯಂ ಶೋಭನಸಾಮರ್ಥ್ಯೋಪೇತಂ ದಾನಭೋಗಾರ್ಹಂ ಧನಮಸ್ಮೇ ಅಸ್ಮಭ್ಯಂ ದೀದಿಹಿ । ಯದ್ವಾ ದ್ಯುಮತ್ತೇಜೋಯುಕ್ತಂ ಸುವೀರ್ಯಂ ಶೋಭನವೀರ್ಯೋಪೇತಂ ಚ ಯಥಾ ಭವತಿ ತಥಾಸ್ಮೇ ಅಸ್ಮದರ್ಥಂ ತ್ವಂ ದೀದಿಹಿ । ದೀಪ್ಯಸ್ವ । ಕಿಂಚ ಸ್ತೋತೃಭ್ಯಃ । ಷಷ್ಠ್ಯರ್ಥೇ ಚತುರ್ಥೀ । ತ್ವದ್ವಿಷಯಸ್ತುತಿಕಾರಿಣಾಂ ಹೋತ್ರಾದೀನಾಂ ಸ್ವಸ್ತಯೇಽವಿನಾಶನಾಯ ಕ್ಷೇಮಾಯಾಂತಮೋಽನ್ತಿಕತಮಸ್ತೇಷಾಮತಿಶಯೇನ ಸಮೀಪವರ್ತೀ ಭವ ॥ ಪಾವಕ । ಪೂಞ್ ಪವನೇ। ಅಸ್ಮಾದ್ಧಾತೋರ್ಣ್ವುಲ್ । ಣಿತ್ತ್ವಾದ್ವೃದ್ಧಿಃ । ವೋರಕಾದೇಶಃ । ಆಮಂತ್ರಿತತ್ವಾತ್ಪಾಷ್ಠಿಕಮನುದಾತ್ತತ್ವಂ । ದೀದಿಹಿ । ದಿವು ಕ್ರೀಡಾದೌ । ಅಸ್ಮಾಲ್ಲೋಟ್ । ಜುಹೋತ್ಯಾದಿತ್ವಾತ್ ... ಲೋಟಿ ಸಿಪ್ । ... ದೇಶಃ । ಲೋಪೋ ವ್ಯೋರ್ವಲೀತಿ ವಲೋಪಃ । ಹೇರಪಿತ್ತ್ವಾದಗುಣಃ । ನಿಘಾತಃ । ದ್ಯುಮತ್ । ಅತ್ರ ಉದಿತ್ತ್ವಕಾರಃ । ಹ್ರಸ್ವನುಡ್ಭ್ಯಾಂಮತುಪ್ ಇತಿ ಮತುಪ ಉದಾತ್ತತ್ವಂ । ಸುವೀರ್ಯಂ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ಅಂತಮಃ । ಅಂತೋಽಸ್ಯಾಸ್ತೀತ್ಯಂತಿಕಃ । ಅತ ಇನಿಠನಾವಿತಿ ಠನ್ । ಅತಿಶಯೇನಾಂತಿಕ ಇತ್ಯತಿಶಾಯನೇ ತಮಬಿಷ್ಠನಾವಿತಿ ತಮಪ್ । ತಮೇ ತಾದೇಶ್ಚೇತಿ ತಾದಿಲೋಪಃ । ನಿತ್ತ್ವಾದಾದ್ಯುದಾತ್ತಃ । ಸ್ವಸ್ತಯೇ । ಪ್ರಾತಿಪದಿಕಸ್ವರಃ ॥

ಪ್ರತಿಪದಾರ್ಥ.

**ನಃ**—ನಮ್ಮ (ಸಂಬಂಧವಾದ ಪಾಪದ) । **ಪಾವಕ**—ಶೋಧಕನಾದ ಎಲೈ ಅಗ್ನಿಯೇ । **ಸಃ**—(ಪೂರ್ವಮಂತ್ರ ಪ್ರತಿಪಾದಿತನಾದ) ಅಂತಹ ನೀನು । **ದ್ಯುಮತ್**—ಕಾಂತಿವಿಶಿಷ್ಟವೂ । **ಸುವೀರ್ಯಂ**—ಒಳ್ಳೆಯ (ದಾನಭೋಗಾದಿಯೋಗ್ಯ) ಸಾಮರ್ಥ್ಯೋಪೇತವಾದ ಧನವನ್ನು । **ಅಸ್ಮೇ**—ನಮಗೆ । **ದೀದಿಹಿ**—ದಾನಮಾಡು (ಕೊಡು) [ಅಥವಾ । **ದ್ಯುಮತ್**—ತೇಜೋವಿಶಿಷ್ಟನೂ । **ಸುವೀರ್ಯಂ**—ಒಳ್ಳೆಯ ಸಾಮರ್ಥ್ಯೋಪೇತನೂ ಆಗಿ । **ಅಸ್ಮೇ**—ನಮಗೋಸ್ಕರ । **ದೀದಿಹಿ**—ಪ್ರಕಾಶಿಸು;] (ಮತ್ತು) । **ಸ್ತೋತೃಭ್ಯಃ**—ಸ್ತೋತೃಗಳಾದ ಹೋತ್ರಾದಿಗಳ । **ಸ್ವಸ್ತಯೇ**—ಕ್ಷೇಮಕ್ಕೋಸ್ಕರ । **ಅಂತಮಃ**—(ಅವರಿಗೆ) ಅತ್ಯಂತ ಸಮೀಪವರ್ತಿಯಾಗಿ । **ಭವ**—ಆಗಿರು.

ಭಾವಾರ್ಥ.

ನಮ್ಮ ಪಾಪಗಳನ್ನು ಪರಿಹಾರಮಾಡಿ ನಮ್ಮನ್ನು ಶುದ್ಧರನ್ನಾಗಿ ಮಾಡುವ ಎಲೈ ಅಗ್ನಿಯೇ, ಕಾಂತಿವಿಶಿಷ್ಟವೂ, ದಾನಭೋಗಾದಿಯೋಗ್ಯವೂ ಆದ ಧನವನ್ನು ನಮಗೆ ಅನುಗ್ರಹಿಸು ಮತ್ತು ನಿನ್ನನ್ನು ಸ್ತುತಿಸುವ ಹೋತ್ರಾದಿಗಳ ಕ್ಷೇಮದೃಷ್ಟಿಯಿಂದ ಯಾವಾಗಲೂ ಅವರ ಸಮೀಪದಲ್ಲಿಯೇ ಇರು.

English Translation.

Do you, our purifier, light up for us a brilliant progeny: be ever nigh to you who praise you for their well-being.

ವಿಶೇಷವಿಷಯಗಳು.

**ಪಾವಕ**— ಪರಿಶುದ್ಧಿಯನ್ನು ಉಂಟುಮಾಡು, ಶೋಧಿಸು ಎಂಬ ಅರ್ಥವನ್ನು ಬೋಧಿಸುವ ಪಾವಕ ಶಬ್ದಕ್ಕೆ ಯಜ್ಞಮಾಡುವ ಯಜಮಾನನೇ ಮೊದಲಾದ ಋತ್ವಿಜರ ಪಾಪಗಳನ್ನು ಅಗ್ನಿಯು ನಾಶಗೊಳಿಸಿ ಅವರನ್ನು ಪರಿಶುದ್ಧರನ್ನಾಗಿ ಮಾಡುವನೆಂದು ವರ್ಣಿಸಿದೆ.

**ದ್ಯುಮತ್ ಸುವೀರ್ಯಂ ಅಸ್ಮೇ ದೀದಿಹಿ.**— ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ **ಕಾಂತಿಯುಕ್ತಂ ಶೋಭನಸಾಮರ್ಥ್ಯೋಪೇತಂ ದಾನ-ಭೋಗಾರ್ಹಂ ಧನಂ ಅಸ್ಮಭ್ಯಂ ದೇಹಿ**-ಕಾಂತಿಯುಳ್ಳದ್ದಾಗಿಯೂ ದಾನಮಾಡುವುದಕ್ಕೂ ಭೋಗಕ್ಕೂ ಅರ್ಹವಾದ ಪ್ರಭೂತವಾದ ಸಾಮರ್ಥ್ಯವನ್ನು (ಶಕ್ತಿಯನ್ನು) ಉಂಟುಮಾಡುವ ಧನವನ್ನು (ಯಜ್ಞವನ್ನು ಆಚರಿಸುವ) ನಮಗೆ ಅಗ್ನಿಯು ಅನುಗ್ರಹಿಸಲಿ ಎಂದು ವರ್ಣಿಸಿದೆ. ಎರಡನೆಯ ಅರ್ಥದಲ್ಲಿ—**ಯದ್ವಾ ದ್ಯುಮತ್ತೇಜೋಯುಕ್ತಂ ಶೋಭನವೀರ್ಯೋಪೇತಂ ಚ ಯಥಾ ಭವತಿ ತಥಾ ಅಸ್ಮೇ ಅಸ್ಮದರ್ಥಂ ತ್ವಂ ದೀಪ್ಯಸ್ವ** ಯಜ್ಞವನ್ನು ಆಚರಿಸುವ ನಮಗಾಗಿ ಅಗ್ನಿಯು ಅತಿಶಯವಾದ ತೇಜಸ್ಸನ್ನು ಹೊಂದಿ ಪ್ರಭೂತವಾದ ಮಾಹಾತ್ಮ್ಯದಿಂದ ಪ್ರಕಾಶಿಸಲಿ ಎಂದು ಕೋರಿದೆ.

ಅಸ್ಮೇ— ಅಸ್ಮಭ್ಯಂ । **ಅಸ್ಮದರ್ಥಂ** ಎಂದು ವ್ಯಾಖ್ಯಾನಮಾಡಿದೆ. ನಿರುಕ್ತಕಾರರು **ಅಸ್ಮೇ ಇತ್ಯೇತತ್ ಪದಂ ಸರ್ವವಿಭಕ್ತ್ಯಂತಂ ತಸ್ಮಾದನೇಕಾರ್ಥಂ**-ಅಸ್ಮೇ ಎಂಬ ಪದವು ಎಲ್ಲಾ ವಿಭಕ್ತಿಗಳಲ್ಲಿಯೂ ಒಂದೇ ವಿಧವಾದ ರೂಪವನ್ನು ಹೊಂದಿರುತ್ತದೆಯಾದುದರಿಂದ ಅನೇಕಾರ್ಥವನ್ನು ಬೋಧಿಸುವುದು ಎಂದು ವಿವರಿಸಿ ಏಳು ವಿಭಕ್ತಿಗಳಿಗೂ ಉದಾಹರಣೆಯನ್ನು ಹೇಳಿರುವರು.

" **ಅಸ್ಮೇ ತೇ ಬಂಧುಃ**— ಎಂಬಲ್ಲಿ **ವಯಂ** ನಾವು ಎಂಬರ್ಥದಲ್ಲಿ **ಅಸ್ಮೇ** ಎಂಬ ಪದವು ಪ್ರಥಮಾ ವಿಭಕ್ತಿಯ ಅರ್ಥದಲ್ಲಿ ಪ್ರಯುಕ್ತವಾಗಿದೆ.

" **ಅಸ್ಮೇ ಯಾತಂ ನಾಸತ್ಯಾ ಸಜೋಷಾಃ** " ಇಲ್ಲಿ ಅಸ್ಮೇ ಎಂಬ ಪದಕ್ಕೆ "**ಅಸ್ಮಾನ್** " ನಮ್ಮನ್ನು ಎಂಬುದಾಗಿ ದ್ವಿತೀಯಾ ವಿಭಕ್ತಿಯ ಅರ್ಥಮಾಡಿದೆ.

" **ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ** " ಇಲ್ಲಿ **ಅಸ್ಮಾಭಿಃ** ನಮ್ಮಿಂದ ಎಂದು ತೃತೀಯಾ ವಿಭಕ್ತಿಯ ಅರ್ಥವನ್ನು ಹೇಳಿದೆ.

**ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।**
**ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥**
(ಋ. ಸಂ. ೩-೩೬-೧೦)

ಇಲ್ಲಿ ಅಸ್ಮೇ ಎಂಬುದಕ್ಕೆ **ಅಸ್ಮಭ್ಯಂ** ನಮಗೋಸ್ಕರವಾಗಿ ಎಂದು ಚತುರ್ಥೀವಿಭಕ್ತಿಯ ಅರ್ಥವನ್ನು ವಿವರಿಸಿದೆ.

" **ಅಸ್ಮೇ ಆರಾತ್ ಚಿತ್ ದ್ವೇಷಃ ಸನುತರ್ಯುಯೋತು** " ಇಲ್ಲಿ **ಅಸ್ಮತ್** ನಮ್ಮ ದೆಸೆಯಿಂದ ಎಂದು ಪಂಚಮೀ ವಿಭಕ್ತಿಯ ಅರ್ಥವನ್ನು ವರ್ಣಿಸಿದೆ.

" **ಊರ್ವ ಇವ ಪ್ರಪಥೇ ಕಾಮೋ ಅಸ್ಮೇ** " ಇಲ್ಲಿ **ಅಸ್ಮಾಕಂ** ನಮ್ಮ (ನಮಗೆ) ಎಂಬುದಾಗಿ **ಷಷ್ಠೀ** ವಿಭಕ್ತಿಯ ಅರ್ಥವನ್ನು ಹೇಳಿದೆ.

" **ಅಸ್ಮೇ ಧತ್ತ ವಸವೋ ವಸೂನಿ** " ಇಲ್ಲಿ **ಅಸ್ಮಾಸು** ನಮ್ಮ ವಿಷಯದಲ್ಲಿ ಎಂದು ಸಪ್ತಮೀ ವಿಭಕ್ತಿಯ ಅರ್ಥವನ್ನು ವಿವರಿಸಿದೆ. ಮತ್ತು **ಏಕಮೇವ ಹ್ಯೇತತ್ ಶಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ** । ಅಸ್ಮೇ ಎಂಬ ಶಬ್ದರೂಪವು ಏಳು ವಿಭಕ್ತಿಯ ಅರ್ಥವನ್ನು ಬೋಧಿಸುವಾಗಲೂ ಒಂದೇ ವಿಧವಾಗಿರುತ್ತದೆ. ಆದರೆ ಆಯಾಯ ಪ್ರಕರಣಗಳಿಗನು ಸಾರವಾಗಿ ಆಯಾಯ ವಿಭಕ್ತಿಯ ಅರ್ಥವನ್ನು ಊಹಿಸಬಹುದು ಎಂದು ದುರ್ಗಾಚಾರ್ಯರು ನಿರುಕ್ತದ ಉದಾಹರಣೆಗಳನ್ನು ವಿವರಿಸಿ ವ್ಯಾಖ್ಯಾನಮಾಡಿರುತ್ತಾರೆ.

**ಅಂತಮಃ**—**ಅಂತೋ ಅಸ್ಯಾಸ್ತೀತ್ಯಂತಿಕಃ ಅತಿಶಯೇನ ಅಂತಿಕಃ ಅಂತಿಕತಮಃ** । ಅಂತ ಎಂದರೆ ಕೊನೆಯು. ಅಥವಾ ಸಮೀಪವು ಇದರಲ್ಲಿ ಅತಿಶಯವು ಅಂತಿಕತಮವೆನಿಸಿರುವುದು. ಆದುದರಿಂದ ಇಲ್ಲಿ ಅಂತಮಃ ಎಂಬ ಈ ಪದಕ್ಕೆ ಅತ್ಯಂತಸಮೀಪವೆಂಬ ಅರ್ಥವನ್ನು ವಿವರಿಸಿದೆ.

**ಸ್ತೋತೃಭ್ಯಃ ಸ್ವಸ್ತಯೇ ಅಂತಮಃ**—ಹೋತೃವೇ ಮೊದಲಾದ ಋತ್ವಿಜರು ಅಗ್ನಿಯನ್ನು ಸ್ತುತಿಸುವ ಕಾರಣ ಅಗ್ನಿಯು ಅವರ ಕ್ಷೇಮಕ್ಕಾಗಿ ಅವರ ಸಮೀಪದಲ್ಲಿಯೇ ಇರುವನೆಂದು ಅರ್ಥವನ್ನು ವಿವರಿಸಿದೆ. ಮತ್ತು **ಸ್ವಸ್ತೀತ್ಯವಿನಾಶಿನಾಮ ಅಸ್ತಿರಭಿಪೂಜಿತಃ ಸುಅಸ್ತೀತಿ** (ನಿ. ೩-೨೧) ಸ್ವಸ್ತಿ ಎಂಬ ಪದವು. **ಸು**- ಚೆನ್ನಾಗಿ ಅಸ್ತಿ-ಇರುವುದು ಎಂಬ ಅರ್ಥವನ್ನು ಬೋಧಿಸುವುದರಿಂದ ಸ್ವಸ್ತಿ ಎಂಬುದು ಕ್ಷೇಮವಾಗಿರುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ.

**ಪಾವಕ**—**ಪೂಞ್ ಪವನೇ** ಧಾತು. ಕರ್ತರಿಯಲ್ಲಿ ಣ್ವುಲ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅಕಾದೇಶ. ಪ್ರತ್ಯಯ ಣಿತ್ತಾದುದರಿಂದ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಎಂಬುದರಿಂದ ಧಾತು ಊಕಾರಕ್ಕೆ ವೃದ್ಧಿ. (ಔ) **ಏಚೋಽಯವಾಯಾವಃ** ಎಂಬುದರಿಂದ ಅಚ್ ಪರವಾದುದರಿಂದ ಆವಾದೇಶ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ದೀದಿಹಿ**—ದಿವು ಕ್ರೀಡಾದೌ ಧಾತು. **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. **ತುಜಾದೀನಾಂದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಅಭ್ಯಾಸಕ್ಕೆ ಗುಣ ಬರುವುದಿಲ್ಲ. **ಬಹುಲಂಛಂದಸಿ** ಎಂಬುದರಿಂದ ಯಙಿಗೆ ಲುಕ್. ದೀದಿವ್ ಎಂಬ ಯಙ್ ಲುಗಂತದ ಮೇಲೆ ಲೋಟ್. **ಚರ್ಕರೀತಂ ಪರಸ್ಮೈಪದಮದಾದಿವಚ್ಚ.** ಚರ್ಕರೀತವೆಂದರೆ ಯಙ್‌ಲುಗಂತಕ್ಕೆ ಸಂಜ್ಞಾ. ಇದು ಅದಾದಿಯಲ್ಲಿ ಸೇರಿದ್ದು ಪರಸ್ಮೈಪದಿಯಾಗುತ್ತದೆ. ಆಗ ಶಪ್ ವಿಕರಣಬಂದಾಗ ಅದಕ್ಕೆ ಲುಕ್. **ಸೇರ್ಹ್ಯಪಿಚ್ಚ** ಎಂಬುದರಿಂದ ಸಿಪಿಗೆ ಹಿ ಆದೇಶ. ವಲ್ ಪರವಾದುದರಿಂದ **ಲೋಪೋ-ವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಧಾತು ವಕಾರಕ್ಕೆ ಲೋಪ. ಹಿಗೆ ಅಪಿತ್ವ ವಿಧಾನಮಾಡಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತು ಇಕಾರಕ್ಕೆ ಗುಣ ಬರುವುದಿಲ್ಲ. **ಅತಿಙಂತದ** ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ದ್ಯುಮತ್**—ದ್ಯೌಃ ಅಸ್ಯ ಅಸ್ತಿ ಇತಿ. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಪದಸಂಜ್ಞಾ ಇರುವುದರಿಂದ **ದಿವಉತ್** (ಪಾ. ಸೂ. ೬-೧-೧೩೧) ಎಂಬುದರಿಂದ ಉತ್ವ ಯಣಾದೇಶ. ಹ್ರಸ್ವದ

ಪರದಲ್ಲಿ ಮತುಪ್ ಬಂದುದರಿಂದ ಹ್ರಸ್ವನುಡ್ಭ್ಯಾಂಮತುಪ್ (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪ್ ಉದಾತ್ತವಾಗುತ್ತದೆ.

ಅಸ್ಮೇ—ಸುಪಾಂಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ಚತುರ್ಥೀ ಬಹುವಚನಕ್ಕೆ ಶೇ ಆದೇಶ.

ಸುವೀರ್ಯಸ್ಯ—ಸುಸ್ವರಕ್ಕೆ ಅಪವಾದವಾಗಿ ವೀರವೀರ್ಯೌಚ (ಪಾ. ಸೂ. ೬-೨-೧೨೦) ಎಂಬುದರಿಂದ ಬಹುವ್ರೀಹಿಯಲ್ಲಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ಭವ—ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವ್ಯಚೋಽತಸ್ತಿಙಃ (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಅಂತಮಃ—ಅಂತಃ ಅಸ್ಯ ಅಸ್ತಿ ಇತಿ ಅಂತಿಕಃ. ಅತಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಠನ್ ಪ್ರತ್ಯಯ. ಠಸ್ಯೇಕಃ (ಪಾ. ಸೂ. ೭-೩-೫೦) ಎಂಬುದರಿಂದ ಅದಕ್ಕೆ ಇಕಾದೇಶ. ಅತಿಶಯೇನ ಅಂತಿಕಃ ಎಂದು ಅರ್ಥವಿವಕ್ಷಾ ಮಾಡಿದಾಗ ಅತಿಶಾಯನೇ ತಮಬಿಷ್ಠನೌ (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ. ತಮೇ ತಾದೇಶ್ಚ ಎಂಬುದರಿಂದ ಪೂರ್ವದಲ್ಲಿರುವ ತಾದಿಗೆ (ತಿಕ) ಲೋಪ ಬರುತ್ತದೆ. ತಮಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಠನ್ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸ್ವಸ್ತಯೇ—ಫಿಷೋಽಂತಉದಾತ್ತಃ—(ಫಿ. ೧) ಎಂಬುದರಿಂದ ಸ್ವಸ್ತಿಶಬ್ದ ಪ್ರಾತಿಪದಿಕಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ.

ಸಂಹಿತಾಪಾಠಃ

ತಂ ತ್ವಾ ವಿಪ್ರಾ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ।
ಹವ್ಯವಾಹಮಮರ್ತ್ಯಂ ಸಹೋವೃಧಂ ॥ ೯ ॥

ತಂ । ತ್ವಾ । ವಿಪ್ರಾಃ । ವಿಪನ್ಯವಃ । ಜಾಗೃವಾಂಸಃ । ಸಂ । ಇಂಧತೇ ।
ಹವ್ಯಽವಾಹಂ । ಅಮರ್ತ್ಯಂ । ಸಹಃಽವೃಧಂ ॥ ೯ ॥

ಸಾಯಣಭಾಷ್ಯಂ.

ಹೇ ಅಗ್ನೇ ವಿಪ್ರಾಃ ಸ್ತುತೀನಾಂ ಪ್ರೇರಕಾ ಜಾಗೃವಾಂಸೋಽಗ್ನಿಹೋತ್ರಾದಿಕರ್ಮಣ್ಯಪ್ರಮತ್ತ-ತಯಾ ಪ್ರಬುದ್ಧಾ ವಿಪನ್ಯವಃ । ವಿಪನ್ಯುಶಬ್ದೋ ಮೇಧಾವಿನಾಮಚೇಷ್ವೇ । ವಿಪಶ್ಚಿದ್ವಿಪನ್ಯುರಿತಿ ತನ್ನಾ-

" **ಅಸ್ಮೇ ಧತ್ತ ವಸವೋ ವಸೂನಿ** " ಇಲ್ಲಿ **ಅಸ್ಮಾಸು** ನಮ್ಮ ವಿಷಯದಲ್ಲಿ ಎಂದು ಸಪ್ತಮೀ ವಿಭಕ್ತಿಯ ಅರ್ಥವನ್ನು ವಿವರಿಸಿದೆ. ಮತ್ತು **ಏಕಮೇವ ಹ್ಯೇತತ್ ಶಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ ।** ಅಸ್ಮೇ ಎಂಬ ಶಬ್ದರೂಪವು ಏಳು ವಿಭಕ್ತಿಯ ಅರ್ಥವನ್ನು ಬೋಧಿಸುವಾಗಲೂ ಒಂದೇ ವಿಧವಾಗಿರುತ್ತದೆ. ಆದರೆ ಆಯಾಯ ಪ್ರಕರಣಗಳಿಗನು ಸಾರವಾಗಿ ಆಯಾಯ ವಿಭಕ್ತಿಯ ಅರ್ಥವನ್ನು ಊಹಿಸಬಹುದು ಎಂದು ದುರ್ಗಾಚಾರ್ಯರು ನಿರುಕ್ತದ ಉದಾಹರಣೆಗಳನ್ನು ವಿವರಿಸಿ ವ್ಯಾಖ್ಯಾನಮಾಡಿರುತ್ತಾರೆ.

**ಅಂತಮಃ**—**ಅಂತೋ ಅಸ್ಯಾಸ್ತೀತ್ಯಂತಿಕಃ ಅತಿಶಯೇನ ಅಂತಿಕಃ ಅಂತಿತಮಃ ।** ಅಂತ ಎಂದರೆ ಕೊನೆಯು. ಅಥವಾ ಸಮೀಪವು ಇದರಲ್ಲಿ ಅತಿಶಯವು ಅಂತಿಕತಮವೆನಿಸಿರುವುದು. ಆದುದರಿಂದ ಇಲ್ಲಿ ಅಂತಮಃ ಎಂಬ ಈ ಪದಕ್ಕೆ ಅತ್ಯಂತಸಮೀಪವೆಂಬ ಅರ್ಥವನ್ನು ವಿವರಿಸಿದೆ.

**ಸ್ತೋತೃಭ್ಯಃ ಸ್ವಸ್ತಯೇ ಅಂತಮಃ**—ಹೋತೃವೇ ಮೊದಲಾದ ಋತ್ವಿಜರು ಅಗ್ನಿಯನ್ನು ಸ್ತುತಿಸುವ ಕಾರಣ ಅಗ್ನಿಯು ಅವರ ಕ್ಷೇಮಕ್ಕಾಗಿ ಅವರ ಸಮೀಪದಲ್ಲಿಯೇ ಇರುವನೆಂದು ಅರ್ಥವನ್ನು ವಿವರಿಸಿದೆ. ಮತ್ತು **ಸ್ವಸ್ತೀತ್ಯವಿನಾಶಿನಾಮ ಅಸ್ತಿರಭಿಪೂಜಿತಃ ಸುಅಸ್ತೀತಿ** (ನಿ. ೩-೨೧) ಸ್ವಸ್ತಿ ಎಂಬ ಪದವು. **ಸು**-ಚೆನ್ನಾಗಿ ಅಸ್ತಿ-ಇರುವುದು ಎಂಬ ಅರ್ಥವನ್ನು ಬೋಧಿಸುವುದರಿಂದ ಸ್ವಸ್ತಿ ಎಂಬುದು ಕ್ಷೇಮವಾಗಿರುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ.

**ಪಾವಕ**—**ಪೂಞ್ ಪವನೇ** ಧಾತು. ಕರ್ತರಿಯಲ್ಲಿ ಣ್ವುಲ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅಕಾದೇಶ. ಪ್ರತ್ಯಯ ಣಿತ್ತಾದುದರಿಂದ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಎಂಬುದರಿಂದ ಧಾತು ಉಕಾರಕ್ಕೆ ವೃದ್ಧಿ. (ಔ) **ಏಚೋಽಯವಾಯಾವಃ** ಎಂಬುದರಿಂದ ಅಚ್ ಪರವಾದುದರಿಂದ ಆವಾದೇಶ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ದೀದಿಹಿ**—**ದಿವು ಕ್ರೀಡಾದೌ** ಧಾತು. **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. **ತುಜಾದೀನಾಂದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಅಭ್ಯಾಸಕ್ಕೆ ಗುಣ ಬರುವುದಿಲ್ಲ. **ಬಹುಲಂಛಂದಸಿ** ಎಂಬುದರಿಂದ ಯಙಿಗೆ ಲುಕ್. ದೀದಿವ್ ಎಂಬ ಯಙ್ ಲುಗಂತದ ಮೇಲೆ ಲೋಟ್. **ಚರ್ಕರೀತಂ ಪರಸ್ಮೈಪದಮದಾದಿವಚ್ಚ.** ಚರ್ಕರೀತವೆಂದರೆ ಯಙ್ಲುಗಂತಕ್ಕೆ ಸಂಜ್ಞಾ. ಇದು ಅದಾದಿಯಲ್ಲಿ ಸೇರಿದ್ದು ಪರಸ್ಮೈಪದಿಯಾಗುತ್ತದೆ. ಆಗ ಶಪ್ ವಿಕರಣಬಂದಾಗ ಅದಕ್ಕೆ ಲುಕ್. **ಸೇರ್ಹ್ಯಪಿಚ್ಚ** ಎಂಬುದರಿಂದ ಸಿಪಿಗೆ ಹಿ ಆದೇಶ. ವಲ್ ಪರವಾದುದರಿಂದ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಧಾತು ವಕಾರಕ್ಕೆ ಲೋಪ. ಹೀಗೆ ಅಪಿತ್ವ ವಿಧಾನಮಾಡಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತು ಇಕಾರಕ್ಕೆ ಗುಣ ಬರುವುದಿಲ್ಲ. **ಅತಿಙಂತದ** ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ದ್ಯುಮತ್**—ದ್ಯೌಃ ಅಸ್ಯ ಅಸ್ತಿ ಇತಿ. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಪದಸಂಜ್ಞಾ ಇರುವುದರಿಂದ **ದಿವಉತ್** (ಪಾ. ಸೂ. ೬-೧-೧೩೧) ಎಂಬುದರಿಂದ ಉತ್ವ ಯಣಾದೇಶ. ಹ್ರಸ್ವದ

ಪರದಲ್ಲಿ ಮತುಪ್ ಬಂದುದರಿಂದ ಹ್ರಸ್ವನುಡ್ಭ್ಯಾಂಮತುಪ್ (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪ್ ಉದಾತ್ತವಾಗುತ್ತದೆ.

ಅಸ್ಮೇ—ಸುಪಾಂಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ಚತುರ್ಥೀ ಬಹುವಚನಕ್ಕೆ ಶೇ ಆದೇಶ.

ಸುವೀರ್ಯಂ—ಸುಸ್ವರಕ್ಕೆ ಅಪವಾದವಾಗಿ ವೀರವೀರ್ಯೌಚ (ಪಾ. ಸೂ. ೬-೨-೧೨೦) ಎಂಬುದರಿಂದ ಬಹುವ್ರೀಹಿಯಲ್ಲಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ಭವ—ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವ್ಯಚೋತಸ್ತಿಙಃ (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಅಂತಮಃ—ಅಂತಃ ಅಸ್ಯ ಅಸ್ತಿ ಇತಿ ಅಂತಿಕಃ. ಅತಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಠನ್ ಪ್ರತ್ಯಯ. ಠಸ್ಯೇಕಃ (ಪಾ. ಸೂ. ೭-೩-೫೦) ಎಂಬುದರಿಂದ ಅದಕ್ಕೆ ಇಕಾದೇಶ. ಅತಿಶಯೇನ ಅಂತಿಕಃ ಎಂದು ಅರ್ಥವಿವಕ್ಷಾ ಮಾಡಿದಾಗ ಅತಿಶಾಯನೇ ತಮಬಿಷ್ಠನೌ (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ. ತಮೇ ತಾದೇಶ್ಚ ಎಂಬುದರಿಂದ ಪೂರ್ವದಲ್ಲಿರುವ ತಾದಿಗೆ (ತಿಕ) ಲೋಪ ಬರುತ್ತದೆ. ತಮಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಠನ್ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸ್ವಸ್ತಯೇ—ಫಿಷೋಂತಉದಾತ್ತಃ—(ಫಿ. ೧) ಎಂಬುದರಿಂದ ಸ್ವಸ್ತಿಶಬ್ದ ಪ್ರಾತಿಪದಿಕಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ.

ಸಂಹಿತಾಪಾಠಃ

ತಂ ತ್ವಾ ವಿಪ್ರಾ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ।
ಹವ್ಯವಾಹಮಮರ್ತ್ಯಂ ಸಹೋವೃಧಂ ॥ ೯ ॥

ತಂ । ತ್ವಾ । ವಿಪ್ರಾಃ । ವಿಪನ್ಯವಃ । ಜಾಗೃಽವಾಂಸಃ । ಸಂ । ಇಂಧತೇ ।
ಹವ್ಯಽವಾಹಂ । ಅಮರ್ತ್ಯಂ । ಸಹಃಽವೃಧಂ ॥ ೯ ॥

ಸಾಯಣಭಾಷ್ಯಂ.

ಹೇ ಅಗ್ನೇ ವಿಪ್ರಾಃ ಸ್ತುತೀನಾಂ ಪ್ರೇರಕಾ ಜಾಗೃವಾಂಸೋಽಗ್ನಿಹೋತ್ರಾದಿಕರ್ಮಣ್ಯಪ್ರಮತ್ತತಯಾ ಪ್ರಬುದ್ಧಾ ವಿಪನ್ಯವಃ । ವಿಪನ್ಯುಶಬ್ದೋ ಮೇಧಾವಿನಾಮಚೆಸ್ವೇ ।. ವಿಪಶ್ಚಿದ್ವಿಪನ್ಯುರಿತಿ ತನ್ನಾ-

**ಮಸು ಪಾಠಾತ್ । ವಿಪನ್ಯವೋ ಮೇಧಾವಿನಃ ಸ್ತೋತಾರೋ ಹವ್ಯವಾಹಂ ಹವ್ಯಾನಾಂ ವೋಢಾರಮಮರ್ತ್ಯಂ ಮರಣಧರ್ಮರಹಿತಂ ಸಹೋವೃಧಂ ಸಹಸಾ ಮಥನರೂಪೇಣ ಬಲೇನ ವರ್ಧಮಾನಂ ತಾದೃಶಂ ತ್ವಾ ತ್ವಾಂ ಸಮಿಂಧತೇ । ಸೋಮಾದ್ಯಾಹುತಿಭಿಃ ಸಮ್ಯಗ್ದೀಪಯಂತಿ ॥ ವಿಪ್ರಾಃ । ಟುವಪ ಬೀಜಸಂತಾನೇ । ಆಸ್ಮಾದ್ಧಾತೋಃ ಋಜ್ರೇಂದ್ರಾಗ್ರವಜ್ರವಿಪ್ರೇತಿ ರನ್ಪ್ರತ್ಯಯೇ ತ್ವಯೋರ್ನಿಪಾತನಾದಾದ್ಯುದಾತ್ತತ್ವಂ । ವಿಪನ್ಯವಃ । ವಿವಿಧಂ ಪನಂ ಪನನಂ ಸ್ತುತಿಂ ಯಾತೀತಿ ವಿಪನ್ಯುಃ । ಮೃಗಯ್ವಾದಯಶ್ಚೇತಿ ಕುಃ । ಅಕಾರಲೋಪಶ್ಛಾಂದಸಃ । ಪ್ರತ್ಯಯಸ್ವರಃ । ಜಾಗೃವಾಂಸಃ । ಜಾಗೃ ನಿದ್ರಾಕ್ಷಯೇ । ಆಸ್ಮಾಲ್ಲಿಟ್ । ತಸ್ಯ ಕ್ವಸುಃ । ಉಗಿದಚಾಮಿತಿ ನುಮ್ । ದ್ವಿರ್ವಚನಾಭಾವಶ್ಛಾಂದಸಃ । ವಸ್ವೇಕಾಜಾದ್ಘಸಾಮಿತಿ ನಿಯಮಾದಿಡಭಾವಃ । ಜಾಗ್ರೋಽವಿಚಿಣ್ಣಲ್ಙಿತ್ಸು । ಪಾ. ೭-೩-೮೫ । ಇತಿ ಗುಣೋ ನ ಭವತಿ ತತ್ರ ವಿರಿತ್ಯತ್ರ ಕ್ವಸೋರಪಿ ಗೃಹೀತತ್ವಾತ್ । ಪ್ರತ್ಯಯಸ್ವರಃ । ಇಂಧತೇ । ಞಿಇಂಧೀ ದೀಪ್ತೌ । ಅಂತರ್ಭಾವಿತಣ್ಯರ್ಥೋಽಯಂ । ನಿಘಾತಃ । ಹವ್ಯವಾಹಂ । ವಹ ಪ್ರಾಪಣೇ । ವಹಶ್ಚೇತಿ ಣ್ವಿಃ । ಉಪಧಾವೃದ್ಧಿಃ । ಕೃದುತ್ತರಪದಪ್ರಕೃತಿಸ್ವರತ್ವಂ । ಸಹೋವೃಧಂ । ವೃಧು ವರ್ಧನೇ । ಕ್ವಿಪ್ ಚೇತಿ ಕ್ವಿಪ್ ॥**

### ಪ್ರತಿಪದಾರ್ಥ.

(**ಹೇ ಅಗ್ನೇ**—ಎಲೈ ಅಗ್ನಿಯೇ)। **ವಿಪ್ರಾಃ**—ಸ್ತುತಿಪ್ರೇರಕರೂ । **ಜಾಗೃವಾಂಸಃ**—(ಅಗ್ನಿಹೋತ್ರಾದಿ ಕರ್ಮಗಳಲ್ಲಿ ಅಪ್ರಮತ್ತರಾಗದೇ) ಜಾಗರೂಕರಾಗಿರುವವರೂ । **ವಿಪನ್ಯವಃ**—ಮೇಧಾವಿಗಳೂ ಆದ ಸ್ತೋತೃಗಳು। **ಹವ್ಯವಾಹಂ**—(ದೇವತೆಗಳಿಗೆ) ಹವಿರ್ವಾಹಕನೂ। **ಅಮರ್ತ್ಯಂ**—ಮರಣವಿಲ್ಲದವನೂ । **ಸಹೋವೃಧಂ**—(ಮಥನಕಾಲದಲ್ಲಿ) ಬಲದಿಂದ **ವರ್ಧಿತನಾಗುವವನೂ** ಆದ । **ತಂ ತ್ವಾ**—(ಪ್ರಸಿದ್ಧನಾದ) ಆ ನಿನ್ನನ್ನು । **ಸಂ ಇಂಧತೇ**—(ಆಜ್ಯಾದಿ ಆಹುತಿಗಳಿಂದ) ಉದ್ದೀಪನಗೊಳಿಸುತ್ತಾರೆ.

### ಭಾವಾರ್ಥ.

ಅಗ್ನಿಹೋತ್ರಾದಿಕರ್ಮಗಳಲ್ಲಿ ಅಪ್ರಮತ್ತರೂ, ಮೇಧಾವಿಗಳೂ ಆದ ಸ್ತೋತೃಗಳು (ಋತ್ವಿಕ್ಕುಗಳು) ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ, ಅಮರನೂ, ಬಲವಾದ ಮಥನದಿಂದ ಉತ್ಪಾದ್ಯನೂ ಆದ ನಿನ್ನನ್ನು ಸೋಮಾಜ್ಯಾದ್ಯಾಹುತಿಗಳಿಂದ ಉದ್ದೀಪನಗೊಳಿಸುತ್ತಾರೆ (ಪ್ರಕಾಶಿಸುವಂತೆ ಮಾಡುತ್ತಾರೆ)

### English Translation.

The wise, intelligent, and vigilant (worshippers) kindle you such as you (have been described), the bearer of oblations, the immortal, generated by strength.

### ವಿಶೇಷ ವಿಷಯಗಳು.

**ವಿಪ್ರಾಃ ವಿಪನ್ಯವಃ**— ಈ ಎರಡು ಪದಗಳೂ ಮೇಧಾವಿನಾಮಗಳಲ್ಲಿ (ನಿ. ೩-೧೯) ಪಠಿತವಾಗಿವೆ. **ಸಾಯಣರು** ವಿಪ್ರಪದಕ್ಕೆ ಸ್ತುತೀನಾಂ ಪ್ರೇರಕಾಃ—ಸ್ತುತಿಗಳನ್ನು ಪಠಿಸುವಂತೆ ಪ್ರೇರಿಸುವವರು ಎಂದು ಅರ್ಥ ಮಾಡಿ, **ವಿಪನ್ಯುಶಬ್ದೋ ಮೇಧಾವಿನಮಾಚಷ್ಟೇ । ವಿಪಶ್ಚಿತ್ ವಿಪನ್ಯುಃ** ಎಂದು ಮೇಧಾವಿನಾಮಗಳಲ್ಲಿ ಪಾಠಮಾಡಿರುವುದರಿಂದ ವಿಪನ್ಯು ಎಂದರೆ ಮೇಧಾವಿಗಳಾದ ಸ್ತೋತೃಗಳು ಎಂದೂ ಅರ್ಥವನ್ನು ವಿವರಿಸಿದ್ದಾರೆ.

**ಜಾಗೃವಾಂಸಃ**— ಅಗ್ನಿಹೋತ್ರಾದಿಕರ್ಮಣ್ಯಪ್ರಮತ್ತತಯಾ ಪ್ರವೃದ್ಧಾಃ । ನಿದ್ರಾಕ್ಷಯ (ಎಚ್ಚರವಾಗಿ ನಿದ್ರೆ ಇಲ್ಲದಿರುವುದು) ಎಂಬ ಅರ್ಥವನ್ನು ಬೋಧಿಸುವ ಜಾಗೃಧಾತುವಿನಿಂದ ನಿಷ್ಪನ್ನವಾದ **ಜಾಗರೂಕ**, **ಜಾಗೃವಿ** ಎಂಬ ಪದಗಳಂತೆ ಈ ಪದವೂ ಪ್ರಮಾದವಿಲ್ಲದಿರುವಿಕೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅಗ್ನಿಹೋತ್ರವೇ ಮೊದಲಾದ ಯಜ್ಞಕರ್ಮಗಳಲ್ಲಿ (ಆಲಸ್ಯವಿಲ್ಲದೆ) ತಪ್ಪದೆ ಆಯಾಯ ಕರ್ಮಗಳನ್ನು ಆಯಾಯ ಕಾಲಗಳಲ್ಲಿ ಆಚರಿಸುತ್ತಾ ಅಭಿವೃದ್ಧಿಯನ್ನು ಹೊಂದುತ್ತಿರುವವರೆಂದು ಅರ್ಥವನ್ನು ವರ್ಣಿಸಿದೆ.

**ಸಹೋವೃಧಂ**—**ಸಹಃ** ಎಂಬ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಬಲನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಅಗ್ನಿಯು, **ಸಹಸಾ ಬಲೇನ ಮಥನರೂಪೇಣ ವರ್ಧಮಾನಂ**---ಅರಣಿಗಳನ್ನು ಮಥನಮಾಡುವಾಗ ಬಲವನ್ನು ಉಪಯೋಗಿಸುವುದರಿಂದಲೂ, ಅರಣಿಗಳಲ್ಲಿ ಉತ್ಪತ್ತಿಯನ್ನು ಹೊಂದಿ ವೃದ್ಧಿಯಾಗುವುದರಿಂದಲೂ ಸಹೋವೃಧನೆಂಬ ಪದದಿಂದ ಉಕ್ತವಾಗಿದ್ದಾನೆ. ನಿರುಕ್ತಕಾರರು—

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**
(ಋ. ಸಂ. ೧೦-೫೦-೬.

ಈ ಋಕ್ಕನ್ನು ಉದಹರಿಸಿ **ಸಹಸಸ್ಪುತ್ರನೆಂದು** ಅಥವಾ **ಬಲಸ್ಯಸೂನುಃ** ಎಂದೂ ಅಗ್ನಿಯನ್ನು ಸಂಬೋಧಿಸಿದ್ದಾರೆ.

**ಅಮರ್ತ್ಯಂ ಹವ್ಯವಾಹಂ ಸಮಿಂಧತೇ**—ಮರಣಧರ್ಮವಿಲ್ಲದವನಾಗಿ, ಹವಿಸ್ಸುಗಳನ್ನು ದೇವತೆಗಳಿಗೋಸ್ಕರ ವಹಿಸುವ ಅಗ್ನಿಯನ್ನು ಸೋಮ, ಆಜ್ಯ, ಮೊದಲಾದ ಹವಿರ್ಭಾಗಗಳಿಂದ ಉದ್ದೀಪ್ತನನ್ನಾಗಿ ಋತ್ವಿಜರು ಮಾಡುತ್ತಾರೆ ಎಂದು ಅರ್ಥವನ್ನು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ.

**ವಿಪ್ರಾಃ**—ಡುವಪ್ ಬೀಜಸಂತಾನೇ ಧಾತು. ಇದಕ್ಕೆ **ಋಜ್ರೇಂದ್ರಾಗ್ರವಜ್ರ ವಿಪ್ರ**—(ಉ. ಸೂ) ೨-೧೮೬) ಎಂಬುದರಿಂದ ರನ್ ಪ್ರತ್ಯಯ. ವಕಾರಕ್ಕೆ ಇತ್ವ. ಪ್ರತ್ಯಯವು ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ವಿಪನ್ಯವಃ**—ಯಾ ಪ್ರಾಪಣೇ ಧಾತು. ವಿವಿಧಂ ಪನಂ ಪನನಂ ಸ್ತುತಿಂ ಯಾತೀತಿ ವಿಪನ್ಯುಃ **ಮೃಗಯ್ವಾದಯಶ್ಚ** (ಉ. ಸೂ. ೧-೩೭) ಎಂಬುದರಿಂದ ಕು ಪ್ರತ್ಯಯ. **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಪ್ರತ್ಯಯ ಕಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಆಕಾರಕ್ಕೆ ಲೋಪ. ಛಾಂದಸವಾಗಿ ಪನ ಎಂಬಲ್ಲಿರುವ ನಕಾರೋತ್ತರ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ವಿಪನ್ಯು ಶಬ್ದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ

**ಜಾಗೃವಾಂಸಃ**—ಜಾಗೃ ನಿದ್ರಾಕ್ಷಯೇ ಧಾತು. ಇದಕ್ಕೆ **ಲಿಟ್** ಬಂದಾಗ **ಕ್ವಸುಶ್ಚ** ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಛಾಂದಸವಾಗಿ ಧಾತುವಿಗೆ ದ್ವಿತ್ವ ಬರುವುದಿಲ್ಲ. ಏಕಾಚಾದ ಧಾತುವಿನ ಪರದಲ್ಲಿರುವ ವಸುವಿಗೆ ಇಡಾಗಮವೆಂದು **ವಸ್ವೇಕಾಜಾದ್ಘಸಾಮ್** (ಪಾ. ಸೂ. ೭-೨-೬೭) ಎಂಬುದರಿಂದ ನಿಯಮಮಾಡಿರುವುದರಿಂದ ಇಲ್ಲಿ ಅನೇಕಾಚಾದುದರಿಂದ ಪರದ ವಸುವಿಗೆ ಇಡಾಗಮ ಬರುವುದಿಲ್ಲ **ಜಾಗ್ರೋಽವಿಚಿಣ್ಣಲ್**

**ಜಾಙಿತ್ಸು** (ಪಾ. ಸೂ. ೭-೩-೮೫) ಎಂಬಲ್ಲಿ ಖಿ ಎಂಬುದರಿಂದ ಕ್ವಸು ಪ್ರತ್ಯಯವೂ ಗೃಹೀತವಾಗಿರುವುದರಿಂದ ಅದನ್ನು ನಿಮಿತ್ತೀಕರಿಸಿ ಗುಣವೂ ಬರುವುದಿಲ್ಲ. ಜಸ್ ಪರವಾದಾಗ **ಉಗಿದಚಾಂ ಸ**—(ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. **ಅತ್ವಸಂತಸ್ಯ**—(ಪಾ. ಸೂ. ೬-೪-೧೪) ಎಂಬುದರಿಂದ ದೀರ್ಘ. ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಇಂಧತೇ**—ಞಿಇಂಧೀ ದೀಪ್ತೌ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಹವ್ಯವಾಹಮ್**—ವಹ ಪ್ರಾಪಣೇ ಧಾತು. **ವಹಶ್ಚ** (ಪಾ. ಸೂ. ೩-೨-೬೪) ಎಂಬುದರಿಂದ ಛಾಂದಸವಾಗಿ ಣ್ವಿ ಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಹವ್ಯವಾಹ್ ಶಬ್ದ. ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಸಹೋವೃಧಮ್**—ವೃಧು ವರ್ಧನೇ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಸಹಸಾ ಬಲೇನ ವರ್ಧತೇ ಇತಿ ಸಹೋವೃಧ್ ತಮ್. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಮರ್ತ್ಯಮ್**—**ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

---

## ಹನ್ನೊಂದನೆಯ ಸೂಕ್ತವು

**ಅಗ್ನಿರ್ಹೋತೇತಿ ನವರ್ಚಮೇಕಾದಶಂ ಸೂಕ್ತಂ ವೈಶ್ವಾಮಿತ್ರಂ ಗಾಯತ್ರಮಾಗ್ನೇಯಂ । ಅಗ್ನಿರ್ಹೋತಾ ಗಾಯತ್ರಮಿತ್ಯನುಕ್ರಾಂತತ್ವಾತ್ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಗಾಯತ್ರೇ ಛಂದಸೀದಂ ಸೂಕ್ತಂ । ಸೂತ್ರಿತಂ ಹಿ । ಅಗ್ನಿರ್ಹೋತಾಗ್ನ ಇಳೇತಿ ಚತಸ್ರಃ । ಆ. ೪-೧೩ । ಇತಿ ॥ ಅಥಾನೇ ಪ್ರಥಮಾಯಾಂ ಪವಮಾನೇಷ್ಟೌ ಸ್ವಿಷ್ಟಕೃತೋ ಯಾಜ್ಯಾಗ್ನಿರ್ಹೋತೇತ್ಯೇಷಾ ಸ ಹವ್ಯವಾಳಮರ್ತ್ಯ ಇತಿ ಪುರೋಽನುವಾಕ್ಯಾ । ದ್ವಿತೀಯಪವಮಾನೇಷ್ಟೌ ಸ್ವಿಷ್ಟಕೃತೋಽನುವಾಕ್ಯಾ ಸಾಹ್ವಾನಿತಿ । ಸೂತ್ರಿತಂ ಚ । ಸಾಹ್ವಾನ್ವಿಶ್ವಾ ಅಭಿಯುಜೋಽಗ್ನಿಮೀಳೇ ಪುರೋಹಿತಮಿತಿ ಸಂಯಾಜ್ಯೇ । ಆ. ೨-೧ । ಇತಿ ॥ ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಮೈತ್ರಾವರುಣಶಸ್ತ್ರೇಽಭಿ ಪ್ರಯಾಂಸೀತಿ ವೈಕಲ್ಪಿಕೋಽನುರೂಪಸ್ತೃಚಃ । ಅತ್ರ ಸೂತ್ರಂ । ಪ್ರ ವೋ ವಾಜಾ ಅಭಿದ್ಯವೋಽಭಿ ಪ್ರಯಾಂಸಿ ವಾಹಸಾ । ಆ. ೭-೮ । ಇತಿ ॥**

ಅಗ್ನಿರ್ಹೋತಾ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು. ಅಗ್ನಿಯು ದೇವತೆಯು. ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅಗ್ನಿರ್ಹೋತಾ ಗಾಯತ್ರಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ

ವಿನಿಯೋಗವಿರುವುದು. ಆಶ್ವಲಾಯನಶ್ರೌತಸೂತ್ರದಲ್ಲಿ ಈ ವಿಷಯವಾಗಿ **ಅಗ್ನಿರ್ಹೋತಾಗ್ನೇ ಇಳೀಶಿ ಚಿತೇಸ್ತ್ರಃ** ಎಂದು ಸೂತ್ರವಿರುವುದು (ಆ. ೪-೧೩). ಆಧಾನೇಷ್ಟಿಯ ಪ್ರಥಮಪವಮಾನೇಷ್ಟಿಯಲ್ಲಿಯೂ ಸ್ವಿಷ್ಟಕೃದ್ಧೋಮ ಮಾಡುವಾಗ ಅಗ್ನಿರ್ಹೋತಾ ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿಯೂ **ಸ ಹವ್ಯವಾಳ್-ಮರ್ತ್ಯಃ** ಎಂಬ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿಯೂ ದ್ವಿತೀಯಪವಮಾನೇಷ್ಟಿಯ ಸ್ವಿಷ್ಟಕೃದ್ಧೋಮದಲ್ಲಿ ಸಾಹ್ವಾನ್ ಎಂಬ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಸಾಹ್ವಾನ್ವಿಶ್ವಾ ಅಭಿಯುಜೋಽಗ್ನಿಮೀಳೇ **ಪುರೋಹಿತಮಿತಿ ಸಂಯಾಜ್ಯೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧) ಮತ್ತು ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ತೃತೀಯ ಸವನಕಾಲದಲ್ಲಿ ಮೈತ್ರಾವರುಣಶಸ್ತ್ರಮಂತ್ರಪಠನಮಾಡುವಾಗ **ಆಭಿಪ್ರಯಾಂಸಿ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವಿಕಲ್ಪವಾಗಿ ಅನುರೂಪಋಕ್ಕುಗಳಂತೆ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದಲ್ಲಿ ಪ್ರ **ವೋ ವಾಜಾ ಅಭಿದ್ಯವೋಽಭಿ ಪ್ರಯಾಂಸಿ ವಾಹಸಾ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭-೮).

## ಸೂಕ್ತ—೧೧

ಮಂಡಲ—೩ ‖ ಅನುವಾಕ—೧ ‖ ಸೂಕ್ತ—೧೧ ‖
ಅಷ್ಟಕ—೩ ‖ ಅಧ್ಯಾಯ—೧ ‖ ವರ್ಗ—೯, ೧೦ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ‖
ಋಷಿಃ—ವಿಶ್ವಾಮಿತ್ರಃ ‖
ದೇವತಾ—ಅಗ್ನಿಃ ‖
ಛಂದಃ—ಗಾಯತ್ರೀ ‖

ಸಂಹಿತಾಪಾಠಃ

ಅಗ್ನಿರ್ಹೋತಾ ಪುರೋಹಿತೋಽಧ್ವರಸ್ಯ ವಿಚರ್ಷಣಿಃ ।
ಸ ವೇದ ಯಜ್ಞಮಾನುಷಕ್ ‖ ೧ ‖

ಪದಪಾಠಃ

ಅಗ್ನಿಃ । ಹೋತಾ । ಪುರಃऽಹಿತಃ । ಅಧ್ವರಸ್ಯ । ವಿऽಚರ್ಷಣಿಃ ।
ಸಃ । ವೇದ । ಯಜ್ಞಂ । ಆನುಷಕ್ ‖ ೧ ‖

ಸಾಯಣಭಾಷ್ಯ.

**ವಿಶ್ವಾಮಿತ್ರಃ ಸ್ತೌತಿ । ಹೋತಾ ದೇವಾನಾಮಾಹ್ವಾತಾ ಪುರೋಹಿತಃ ಪುರತ ಏವಾಭಿಮತಫಲ-ಸಂಪಾದಕತ್ವೇನ ಹಿತಕಾರೀ । ಯದ್ವಾ ಪುರಃ ಪೂರ್ವಭಾಗ ಆಹವನೀಯರೂಪೇಣ ಹಿತೋ ನಿಹಿತ ಇತಿ**

**ಪುರೋಹಿತಃ । ಅಧ್ವರಸ್ಯ ಯಜ್ಞಸ್ಯ ವಿಚರ್ಷಣಿರ್ವಿಶೇಷೇಣ ದ್ರಷ್ಟಾ ವಿಚರ್ಷಣಿರ್ವಿಶ್ವಚರ್ಷಣಿರಿತಿ ತನ್ನಾಮಸು ಪಾಠಾತ್ । ಸ ತಥಾವಿಧೋಽಗ್ನಿರಾನುಷಗಾನುಪೂರ್ವ್ಯೇಣ ಸಕ್ತಂ ಯಜ್ಞಮಗ್ನಿಷ್ಟೋಮಾದಿಕಂ ವೇದ । ಜಾನಾತಿ ॥ ವೇದ । ವಿದ ಜ್ಞಾನೇ । ವಿದೋ ಲಟೋ ವೇತಿ ತಿಪೋ ಣಲಾದೇಶಃ । ಲಘೂಪಧಗುಣಃ । ನಿಘಾತಃ । ಆನುಷಕ್ । ಆ ಸಮಂತಾದನುಷಜತೀತ್ಯಾನುಷಕ್ । ಷಸ್ಜ ಸಂಗೇ । ಧಾತುಷಕಾರಸ್ಯ ಸಕಾರಃ । ಕ್ವಿಪ್ ಚೇತಿ ಕ್ವಿಪ್ । ಅನಿದಿತಾಮಿತ್ಯುಪಧಾಲೋಪಃ । ಉಪಸರ್ಗಸ್ಯ ಛಾಂದಸೋ ದೀರ್ಘಃ ॥**

ಪ್ರತಿಪದಾರ್ಥ.

**ಹೋತಾ**—ದೇವತೆಗಳ ಆಹ್ವಾನಕರ್ತೃವೂ । **ಪುರೋಹಿತಃ**— ದೇವತೆಗಳ ಪುರೋಹಿತನೂ ಅಥವಾ ಮೊದಲೇ ಅಭಿಮತಫಲದಾತೃವಾಗಿ ಹಿತವನ್ನುಂಟುಮಾಡುವವನೂ ಅಥವಾ ಮುಂಬಗಡೆ (ಪೂರ್ವಭಾಗದಲ್ಲಿ) ಆಹವನೀಯರೂಪದಿಂದ ಸ್ಥಾಪಿತನೂ । **ಅಧ್ವರಸ್ಯ**—ಯಜ್ಞದ । **ವಿಚರ್ಷಣಿಃ**—ವಿಶೇಷದ್ರಷ್ಟೃವೂ ಆದ । **ಸಃ ಅಗ್ನಿಃ**—ಅಂತಹ ಅಗ್ನಿಯು । **ಆನುಷಕ್**—ಕ್ರಮವನ್ನನುಸರಿಸಿ ಆಚರಿತವಾದ । **ಯಜ್ಞಂ**—ಅಗ್ನಿಷ್ಟೋಮಾದಿಯಜ್ಞವನ್ನು । **ವೇದ**— ತಿಳಿದಿರುತ್ತಾನೆ ॥

ಭಾವಾರ್ಥ.

ದೇವತೆಗಳನ್ನು ಯಾಗಗಳಿಗೆ ಕರೆತರುವವನೂ, ದೇವತೆಗಳಿಗೆ ಪುರೋಹಿತನೂ (ಪೂರ್ವಭಾವಿಯಾಗಿಯೇ ಅಭಿಮತದಾನಮಾಡಿ ಜನಗಳಿಗೆ ಹಿತಕಾರಿಯೂ ಅಥವಾ ಯಾಗಶಾಲೆಯಲ್ಲಿ ಪೂರ್ವಭಾಗದಲ್ಲಿ ಆಹವನೀಯರೂಪದಿಂದ ಸ್ಥಾಪಿತನೂ), ಯಜ್ಞವಿಷಯಕವಿಶೇಷಜ್ಞಾನವುಳ್ಳವನೂ ಆದ ಅಗ್ನಿಯು ಅಗ್ನಿಷ್ಟೋಮಾದಿ ಯಜ್ಞಗಳನ್ನು ಕ್ರಮವಾಗಿ ತಿಳಿದಿರುತ್ತಾನೆ.

English Translation.

Agni, the invoker of the gods, the minister (of the gods), the supervisor of the sacrifice, understands the solemn rite in its due course.

ವಿಶೇಷ ವಿಷಯಗಳು.

**ಪುರೋಹಿತಃ**—**ಪುರತ ಏವಾಭಿಮತಫಲಸಂಪಾದಕತ್ವೇನ ಹಿತಕಾರೀ ಯದ್ವಾ ಪುರಃ ಪೂರ್ವಭಾಗೇ ಆಹವನೀಯರೂಪೇಣ ನಿಹಿತ ಇತಿ ಪುರೋಹಿತಃ** । ಯಾಸ್ಕರು ಪುರ ಏನಂ **ದಧಾತಿ** (ನಿ. ೨-೧೨) ಎಂದು ವ್ಯಾಖ್ಯಾನಮಾಡಿರುತ್ತಾರೆ. ಸಾಯಣರು ಯಜಮಾನರಿಗೆ ಇಷ್ಟಗಳನ್ನು ಅನುಗ್ರಹಿಸುವುದರಿಂದ ಮುಂದೆ (ಭವಿಷ್ಯತ್ಕಾಲದಲ್ಲಿ) ಹಿತವನ್ನು ಅಗ್ನಿಯು ಉಂಟುಮಾಡುವವನಾಗಿದ್ದಾನೆ ಎಂದೂ, ಅಥವಾ, ಯಜ್ಞಶಾಲೆಯ ಪೂರ್ವಭಾಗದಲ್ಲಿ ಆಹವನೀಯ ಎಂಬ ಹೆಸರಿನಿಂದ (ಪ್ರತಿಷ್ಠಿತ) ಇಡಲ್ಪಟ್ಟಿರುವನೆಂದೂ ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ.

**ಅಧ್ವರಸ್ಯ ವಿಚರ್ಷಣಿಃ**—**ಅಧ್ವರ** ಶಬ್ದವು ಯಜ್ಞನಾಮಗಳಲ್ಲಿಯೂ (ನಿ. ೩-೧೭) ಅಂತರಿಕ್ಷನಾಮಗಳಲ್ಲಿಯೂ(ನಿ. ೨-೧೦) ಉಕ್ತವಾಗಿದೆ. **ವಿಚರ್ಷಣಿ** ಎಂಬ ಪದವು **ಚಿಕ್ಯತ್**, **ಚಾಕನತ್** ಎಂಬ ಎಂಟು

ಪಶ್ಯತಿಕರ್ಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ದೇವತೆಗಳಿಗೂ, ಜನಗೂ, ಹವಿಸ್ಸನ್ನೂ ಅರ್ಪಿಸುವ ಕರ್ಮವಾದ ಕಾರಣದಿಂದಲೂ, ವೃಷ್ಟ್ಯಾದಿಗಳಿಂದ ಲೋಕಾಭಿವೃದ್ಧಿಗೆ ಕಾರಣವಾಗಿರುವುದರಿಂದಲೂ ಅಗ್ನಿಯು ಯಜ್ಞವನ್ನು ವಿಶೇಷವಾಗಿ ನೋಡುವವನೆಂದು ಅರ್ಥವನ್ನು ವರ್ಣಿಸಿದೆ.

ಅಗ್ನಿರಾನುಷಕ್—ಆ ಸಮಂತಾತ್ ಅನುಷಜತೀತಿ। ಯಜ್ಞದಲ್ಲಿ ಆಚರಿಸಬೇಕಾದ ಕರ್ಮಗಳೆಲ್ಲವೂ ವಿಧ್ಯುಕ್ತವಾದ ಕ್ರಮದಿಂದ ಸರಿಯಾಗಿ ನಡೆಯುವುದರ ವಿಷಯದಲ್ಲಿ ಪೂರ್ಣವಾದ ಜ್ಞಾನವನ್ನು ಹೊಂದಿರುವ ಅಗ್ನಿಯು ಅಗ್ನಿಷ್ಟೋಮವೇ ಮೊದಲಾದ ಕ್ರತುಗಳನ್ನು ಆಚರಿಸುವ ಜ್ಞಾನವನ್ನು ಹೊಂದಿರುವನು ಎಂದು ಅರ್ಥವನ್ನು ಹೇಳಿದೆ.

ಹೋತಾ—ದೇವಾನಾಂ ಆಹ್ವಾತಾ—ದೇವತೆಗಳನ್ನು ಅಗ್ನಿಯು ಯಜ್ಞಕ್ಕಾಗಿ ಆಹ್ವಾನಮಾಡುವವನೆಂದು ಹಿಂದೆ ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

ಪುರೋಹಿತಃ—ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪುರಃ) ಪ್ರಕೃತಿಸ್ವರ ಬರುತ್ತದೆ.

ವೇದ—ವಿದ ಜ್ಞಾನೇ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ವಿದೋಲಟೋವಾ** (ಪಾ. ಸೂ. ೩-೪-೮೩) ಎಂಬುದರಿಂದ ಅದಕ್ಕೆ ಣಲಾದೇಶ. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ವೇದ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಆನುಷಕ್—ಆ ಸಮಂತಾತ್ ಅನುಷಜತಿ ಇತಿ ಆನುಷಕ್. ಷಞ್ಜ ಸಂಗೇ ಧಾತು. **ಧಾತ್ವಾದೇಃ ಷಃಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರಾದೇಶ. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಅನಿದಿತಾಂಹಲಉಪಧಾ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಸಜ್ ಎಂದು ರೂಪವಾಗುತ್ತದೆ. **ಉಪಸರ್ಗಾತ್ಸುನೋತಿ** (ಪಾ. ಸೂ. ೮-೩-೬೫) ಎಂಬುದರಿಂದ ಉಪಸರ್ಗದಲ್ಲಿರುವ ನಿಮಿತ್ತದಪರದಲ್ಲಿ ಸಕಾರ ಬಂದುದರಿಂದ ಷತ್ವ. ಪ್ರಥಮಾ ಏಕವಚನದಲ್ಲಿ ಸು ಬಂದಾಗ **ಹಲ್ ಙ್ಯಾಭ್ಯೋ**—ಸೂತ್ರದಿಂದ ಅದಕ್ಕೆ ಲೋಪ. **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಜಕಾರಕ್ಕೆ ಗಕಾರಾದೇಶ. **ವಾವಸಾನೇ** (ಪಾ. ಸೂ. ೮-೪-೫೬) ಎಂಬುದರಿಂದ ವಿಕಲ್ಪವಾಗಿ ಚರ್ತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ಸ ಹ॒ವ್ಯ॒ವಾಳಮ॑ರ್ತ್ಯ ಉ॒ಶಿಗ್ದೂ॒ತಶ್ಚನೋ॑ಹಿತಃ ।

ಅ॒ಗ್ನಿರ್ಧಿ॒ಯಾ ಸಮೃ॑ಣ್ವತಿ ॥ ೨ ॥

ಪದಪಾಠಃ

ಸಃ । ಹವ್ಯಽವಾಟ್ । ಅಮರ್ತ್ಯಃ । ಉಶಿಕ್ । ದೂತಃ । ಚನಃಽಹಿತಃ ।

ಅಗ್ನಿಃ । ಧಿಯಾ । ಸಂ । ಋಣ್ವತಿ ॥ ೨ ॥

ಸಾಯಣಭಾಷ್ಯಂ.

ಸ ಹವ್ಯವಾಟ್ ಹವಿಷೋ ವೋಢಾಮರ್ತ್ಯೋ ಮರಣಧರ್ಮರಹಿತ ಉಶಿಕ್ ಹವೀಂಷಿ ಕಾಮಯಮಾನೋ ದೂತೋ ದೇವಾನಾಂ ದೂತಶ್ಚನಸೋ ಹವಿರ್ಲಕ್ಷಣಾಯಾನ್ನಾಯ ಹಿತೋ ನಿಹಿತಃ । ಯದ್ವಾ ಚನೋಹಿತಃ । ಚನೋಽನ್ನಂ ಹವಿರ್ಲಕ್ಷಣಂ ಹಿತಮಸ್ಯೇತಿ ಚನೋಹಿತಃ। ಸ ತಥಾವಿಧೋಽಗ್ನಿರ್ಧಿಯಾ ಪ್ರಜ್ಞಯಾ ಸಮೃಣ್ವತಿ । ಸಂಗಚ್ಛತೇ । ಕರ್ಮವಿಷಯಪ್ರಜ್ಞಾನ್ವಿತೋಽಗ್ನಿರಸ್ಮಾನಪಿ ತತ್ಪ್ರಜ್ಞಾನ್ವಿತಾನ್ಕರೋತ್ವಿತ್ಯಾಶಾಸ್ತೇ ॥ ಹವ್ಯವಾಟ್ । ವಹ ಪ್ರಾಪಣೇ । ವಹಶ್ಚೇತಿ ಣ್ವಿಃ । ಛನ್ದಸಿ ಸಹ ಇತಿ ವರ್ತಮಾನೇ । ಕೃದುತ್ತರಪದಪ್ರಕೃತಿಸ್ವರತ್ವಂ । ಉಶಿಕ್ । ವಶ ಕಾಂತೌ । ಇಜಿರಿತ್ಯನುವೃತ್ತೌ ವಶೇಃ ಕಿಚ್ಚೇತೀಜಿಪ್ರತ್ಯಯಃ । ತಸ್ಯ ಕಿತ್ತ್ವಾತ್ ಗ್ರಹಿಜ್ಯೇತಿ ಸಂಪ್ರಸಾರಣಂ । ಪ್ರತ್ಯಯಸ್ವರಃ । ಚನೋಹಿತಃ । ಚನಃಶಬ್ದಶ್ಛಾಯತೇರನ್ನೇ ಹ್ರಸ್ವಶ್ಚೇತ್ಯಸುನಂತಃ । ಚಕಾರಾದಾನ್ನುಡಾಗಮಃ । ತಸ್ಮಿನ್ನನ್ಯಲೋಪಃ । ನಿತ್ತ್ವಾದಾದ್ಯುದಾತ್ತಃ । ಪುನಶ್ಚನಸೋಽಛಂದಸಿ ಗತಿಸಂಜ್ಞಾ ವಕ್ತವ್ಯಾ । ಪಾ. ೧-೪-೬೦-೩ । ಇತಿ ಗತಿಸಂಜ್ಞಾಯಾಂ ಗತಿರನಂತರ ಇತಿ ಪ್ರಕೃತಿಸ್ವರತ್ವಂ । ಬಹುವ್ರೀಹೌ ತು ಪೂರ್ವಪದಪ್ರಕೃತಿಸ್ವರತ್ವಂ । ಧಿಯಾ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಋಣ್ವತಿ । ಋಣು ಗತೌ । ಲೇಟಿ ತನಾದಿತ್ವಾದುಪ್ರತ್ಯಯಃ । ಲೇಟೋಽಡಾಟಾವಿತ್ಯಡಾಗಮಃ ॥

ಪ್ರತಿಪದಾರ್ಥ.

ಹವ್ಯವಾಟ್—(ದೇವತೆಗಳಿಗೆ) ಹವಿರ್ವಾಹಕನೂ । **ಅಮರ್ತ್ಯಃ**—ಮರಣರಹಿತನೂ । **ಉಶಿಕ್**—(ಹವಿಸ್ಸನ್ನು) ಅಪೇಕ್ಷಿಸುವವನೂ । **ದೂತಃ**—(ದೇವತೆಗಳ) ದೂತನೂ । **ಚನಃ ಹಿತಃ**—ಹವೀರೂಪಾನ್ನಕ್ಕೋಸ್ಕರ ಸ್ಥಾಪಿತನೂ ಅಥವಾ ಹವೀರೂಪಾನ್ನಪ್ರಿಯನೂ ಆದ । **ಸಃ ಅಗ್ನಿಃ**—ಆ ಅಗ್ನಿಯು । **ಧಿಯಾ**—(ಕರ್ಮವಿಷಯ) ಜ್ಞಾನದಿಂದ । **ಸಂ ಋಣ್ವತಿ**—ಸಂಗತನಾಗುತ್ತಾನೆ.

ಭಾವಾರ್ಥ.

ಹವಿರ್ವಾಹಕನೂ, ಮರಣರಹಿತನೂ, ಹವಿಃಕಾಮನೂ, ದೇವತೆಗಳ ದೂತನೂ, ಹವಿರ್ಲಕ್ಷಣಾನ್ನವನ್ನು ಸ್ವೀಕರಿಸಲೆಂದೇ ಸ್ಥಾಪಿತನೂ ಆದ ಅಗ್ನಿಯು ಅಗ್ನಿಷ್ಟೋಮಾದಿ ಕರ್ಮವಿಷಯಕಜ್ಞಾನಯುಕ್ತನಾಗುತ್ತಾನೆ. (ಅಂತಹ ಅಗ್ನಿಯು ನಮಗೂ ಕರ್ಮವಿಷಯಕಜ್ಞಾನದಾಯಕನಾಗಲಿ).

English Translation·

That Agni, who is the bearer of oblations, the immortal, the desirer (of offerings), the messenger (of the gods), and is the receiver of sacrificial viands, is associated with understanding·

### ವಿಶೇಷವಿಷಯಗಳು

ಉಶಿಕ್—ಹವಿಃಕಾಮಯಮಾನಃ | ಉಶಿಕ್ ಎಂಬ ಪದವು **ವಶ್ಮಿ ಉಶ್ಮಸಿ** ಎಂಬ ಹದಿನೆಂಟು ಕಾಂತಿಕರ್ಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಕಾಂತಿ ಎಂಬ ಅರ್ಥವನ್ನು ಬೋಧಿಸುವ ವಶಧಾತುವಿನಿಂದ ಉಶಿಕ್ ಎಂಬ ಪದವು ನಿಷ್ಪನ್ನವಾಗಿದೆ. ಇಲ್ಲಿ ಅಗ್ನಿಯು ಹವಿಸ್ಸನ್ನು ಅಪೇಕ್ಷಿಸುವವನೆಂದು ಅರ್ಥವನ್ನು ವರ್ಣಿಸಿದೆ.

ದೂತಃ, ದೇವಾನಾಂ ದೂತಃ—ಅಗ್ನಿಯು ದೇವತೆಗಳನ್ನು ಯಜ್ಞಕ್ಕಾಗಿ ಆಹ್ವಾನಮಾಡಿ ಅವರವರ ಹವಿರ್ಭಾಗಗಳನ್ನು ಅವರವರಿಗೆ ಒಯ್ಯುವುದರಿಂದ ದೇವತೆಗಳಿಗೆ ದೂತ (ಸೇವಕ) ಎಂದು ವರ್ಣಿಸಿದೆ.

ಚನೋಹಿತಃ—ಚನಸೇ ಹವಿರ್ಲಕ್ಷಣಾಯಾನ್ನಾಯ ಹಿತಃ | **ಯದ್ವಾ ಚನೋಽನ್ನಂ ಹವಿರ್ಲಕ್ಷಣಂ ಹಿತಮಸ್ಯೇತಿ** | ಚನಸ್ ಎಂಬ ಪದವು ಚನ್ನೋಽನಂ ಎಂದು ಸಾಯಣರಿಂದ **ವ್ಯಾಖ್ಯಾತ**ವಾಗಿದೆ. **ಚಿತ ಇತ್ಯನ್ನನಾಮ** (ನಿ. ೬-೧೬) ಎಂದು ಯಾಸ್ಕರ ವಿವರಣೆ ಇದೆ. ದೂತಃ ಚನೋಹಿತಃ ಎಂಬ ಎರಡು ಪದಗಳನ್ನೂ ಸೇರಿಸಿ ಅಗ್ನಿಯು ದೇವತೆಗಳಿಂದ (ಅನ್ನಕ್ಕಾಗಿ) ಇಡಲ್ಪಟ್ಟ ದೂತನೆಂದು ಒಂದು ವಿಧವಾದ ಅರ್ಥವನ್ನೂ, ಹವಿಸ್ಸಿನರೂಪವಾದ ಅನ್ನವು ಅಗ್ನಿಗೆ ಪೋಷಕವಾಗಿ ಹಿತಕರವಾಗಿರುವುದರಿಂದ ಈ ಶಬ್ದದಿಂದ ಅಗ್ನಿಯು ವ್ಯಪದಿಷ್ಟನಾಗಿರುವನೆಂದೂ ಎರಡು ವಿಧವಾದ ಅರ್ಥವನ್ನು ಇಲ್ಲಿ ಹೇಳಿದೆ.

ಧಿಯಾ ಸಮೃಣ್ವತಿ—ಪ್ರಜ್ಞಯಾ ಸಂಗಚ್ಛತೇ | **ಕರ್ಮವಿಷಯಪ್ರಜ್ಞಾನ್ವಿತೋ ಅಗ್ನಿರಸ್ಮಾನಪಿ ತಾದೃಶ್ ಪ್ರಜ್ಞಾನ್ವಿತಾನ್ ಕರೋತ್ವಿತ್ಯಾಶಾಸ್ತೇ** | ಧೀ ಶಬ್ದವು ಕರ್ಮನಾಮಗಳಲ್ಲಿಯೂ (ನಿ. ೨-೧) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೪) ಉಕ್ತವಾಗಿದೆ. ಇಲ್ಲಿ ಕರ್ಮವಿಷಯವಾದ ಪ್ರಜ್ಞೆಯೆಂದು ಅರ್ಥವನ್ನು ವಿವರಿಸಿ, ಅಗ್ನಿಯು ಕರ್ಮಗಳ ಪ್ರಜ್ಞೆಯಿಂದ ಕೂಡಿದವನಾಗಿ ಯಜ್ಞಮಾಡುವ ಯಜಮಾನರನ್ನು ಅದೇ ರೀತಿಯಾದ ಪ್ರಜ್ಞಾವಂತರನ್ನಾಗಿ ಮಾಡಲಿ ಎಂದು ಆಶಂಸಿಸಿದೆ.

### ವ್ಯಾಕರಣಪ್ರಕ್ರಿಯಾ.

ಹವ್ಯವಾಟ್—ಹವ್ಯಂ ವಹತಿ ಇತಿ ಹವ್ಯವಾಟ್. **ವಹಶ್ಚ** (ಪಾ. ಸೂ. ೩-೨-೬೪) ಎಂಬುದರಿಂದ ಣ್ವಿ ಪ್ರತ್ಯಯ. ಅತಉಪಧಾಯಾಃ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಲಾಂಜಶೋಽಂತೇ** (ಪಾ. ಸೂ. ೮-೨-೩೯) ಎಂಬುದರಿಂದ, ಪದಾಂತದಲ್ಲಿ ಅದಕ್ಕೆ ಡಕಾರಾದೇಶ. **ವಾವಸಾನೇ** ಎಂಬುದರಿಂದ **ಟಕಾರಾ**ದೇಶ. ಕಾರಕ**ಪೂರ್ವ**ಪದವಾಗಿರುವುದರಿಂದ ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ.

ಉಶಿಕ್—ವಶ ಕಾಂತೌ ಧಾತು. ಇಜಿಃ ಎಂದು **ಪೂರ್ವಸೂತ್ರ**ದಿಂದ ಅನುವೃತ್ತವಾಗುವಾಗ **ವಶೇಃ ಕಿಚ್ಚ** (ಉ. ಸೂ. ೨-೭೯) ಎಂಬುದರಿಂದ ಇದಕ್ಕೆ ಇಜಿ ಪ್ರತ್ಯಯ. ಕಿತ್ವ ವಿಧಾನಮಾಡಿರುವುದರಿಂದ **ಗ್ರಹಿಜ್ಯಾವಯಿವ್ಯಧಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ (ಉ) **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಉಶಿಜ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ. ಪದಾಂತಜಕಾರಕ್ಕೆ ಕುತ್ವ, ಚರ್ತ್ವ.

**ಚನೋಹಿತಃ**—ಚನಃ ಎಂಬುದು **ಚಾಯತೇರನ್ನೇ ಹ್ರಸ್ವಶ್ಚ** (ಉ. ಸೂ. ೪-೬೩೯) ಎಂಬುದರಿಂದ ಚಾಯೃ (ಪೂಜಾನಿಶಾಮನಯೋಃ) ಎಂಬ ಧಾತುವಿಗೆ ಅನ್ನರೂಪಾರ್ಥ ತೋರುವಾಗ ಅಸುನ್ ಪ್ರತ್ಯಯದೊಡನೆ ನುಡಾಗಮವು, ಧಾತುವಿಗೆ ಹ್ರಸ್ವ ಇವುಗಳು ಬಂದು ರೂಪವಾಗಿದೆ. ಪ್ರತ್ಯಯವು ಬಂದಾಗ ಧಾತುವಿನ ಯಕಾರ ಲೋಪ. ಅಸುನ್ ನಿತ್ತಾದುದರಿಂದ ಚನಃ ಎಂಬುದು ಆದ್ಯುದಾತ್ತವಾಗುತ್ತದೆ. ಹಿತಃ ಎಂಬುದು ಧಾ ಧಾತುವಿಗೆ ಕ್ತ ಪ್ರತ್ಯಯ ಬಂದಾಗ **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ ಬಂದು ಆಗಿದೆ. **ಪುನಶ್ಚನಸೋಶ್ಛಂದಸಿ ಗತಿಸಂಜ್ಞಾವಕ್ತವ್ಯಾ** (ಪಾ. ಸೂ. ೧-೪-೬೦.೩) ಎಂಬ ವಚನದಿಂದ ಚನಃ ಎಂಬುದಕ್ಕೆ ಗತಿಸಂಜ್ಞಾ ಬರುವುದರಿಂದ ಕ್ತಾಂತಪದವು ಉತ್ತರಪದವಾದುದರಿಂದ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಚನಃ ಎಂಬುದಕ್ಕೆ ಪ್ರಕೃತಿಸ್ವರ ಬರುತ್ತದೆ. ಇದರಿಂದ ಚನೋಹಿತಃ ಎಂಬುದು ಆದ್ಯುದಾತ್ತವಾಗುತ್ತದೆ. ಎರಡನೇ ವ್ಯಾಖ್ಯಾನದಲ್ಲಿ ಬಹುವ್ರೀಹಿಸಮಾಸವಾಗಿರುವುದರಿಂದ **ಬಹುವ್ರೀಹೌ ಪ್ರಕೃತ್ಯಾ**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಧಿಯಾ**—ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಋಣ್ವತಿ**—ಋಣು ಗತೌ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ತನಾದಿಕೃಞ್ಭ್ಯ ಉಃ** ಎಂಬುದರಿಂದ ಉ ವಿಕರಣ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನಿರ್ಧಿಯಾ ಸ ಚೇತತಿ ಕೇತುರ್ಯಜ್ಞಸ್ಯ ಪೂರ್ವ್ಯಃ ।
ಅರ್ಥಂ ಹ್ಯಸ್ಯ ತರಣಿ ॥ ೨ ॥

ಪದಪಾಠಃ

ಅಗ್ನಿಃ । ಧಿಯಾ । ಸಃ । ಚೇತತಿ । ಕೇತುಃ । ಯಜ್ಞಸ್ಯ । ಪೂರ್ವ್ಯಃ ।
ಅರ್ಥಂ । ಹಿ । ಅಸ್ಯ । ತರಣಿ ॥ ೨ ॥

ಸಾಯಣಭಾಷ್ಯಂ.

ಯಜ್ಞಸ್ಯಾಗ್ನಿಷ್ಟೋಮಾದೇಃ ಕೇತುಃ ಪ್ರಜ್ಞಾಪಕಃ ಪೂರ್ವ್ಯಃ ಪೂರ್ವೇ ಭವಶ್ಚಿರಂತನಃ ಸ ತಥಾವಿಧೋಽಗ್ನಿರ್ಧಿಯಾ ಪ್ರಜ್ಞಯಾ ಚೇತತಿ । ಸರ್ವಂ ಜಾನೀತೇ । ಅಸ್ಯೈತಾದೃಶಸ್ಯಾಗ್ನೇರರ್ಥಂ ಗಮನಸ್ವಭಾವಂ । ತೇಜೋಽಸ್ಯಾಕಾಶೇ ದೃಶ್ಯಮಾನಸ್ಯ ತಮಸಸ್ತರಣಿ ಹಿ । ತಾರಕಂ ಖಲು । ನಿವರ್ತಕಮಿತಿ ಯಾವತ್ ॥ ಚೇತತಿ । ಚಿತೀ ಸಂಜ್ಞಾನೇ । ನಿಘಾತಃ । ಅರ್ಥಂ । ಋ ಗತೌ । ಉಷಿ-

ಕುಹಿಗರ್ತಿಭ್ಯಸ್ತನ್ನಿತಿ ಥನ್ | ಗುಣಃ | ನಿತ್ತ್ವಾದಾದ್ಯುದಾತ್ತಃ | ತರಣಿ | ತೄ ಪ್ಲವನತರಣಯೋಃ | ಅರ್ತಿಸೃಭೃಧೃಧಮ್ಯಶ್ಯಾದಿನಾಽನಿಪ್ರತ್ಯಯಃ | ಗುಣಃ | ಪ್ರತ್ಯಯಸ್ವರಃ ||

ಪ್ರತಿಪದಾರ್ಥ

ಯಜ್ಞಸ್ಯ—ಅಗ್ನಿಷ್ಟೋಮಾದಿಯಜ್ಞಗಳ | ಕೇತುಃ—ಜ್ಞಾನದಾಯಕನೂ | ಪೂರ್ವ್ಯಃ—ಚಿರಂತನನೂ ಆದ | ಸಃ ಅಗ್ನಿಃ—ಆ ಅಗ್ನಿಯು | ಧಿಯಾ—(ತನ್ನ) ಗ್ರಹಣಶಕ್ತಿಯಿಂದ | ಚೇತತಿ—(ಸರ್ವವನ್ನೂ) ತಿಳಿಯುತ್ತಾನೆ; (ಇಂತಹ ಅಗ್ನಿಯ) | ಅರ್ಥಂ—ಗಮನಸ್ವಭಾವದಿಂದ ಕೂಡಿದ ತೇಜಸ್ಸು | ಅಸ್ಯ—ಈ (ದೃಶ್ಯಮಾನವಾದ) ತಮಸ್ಸಿನ | ತರಣಿ ಹಿ—ತಾರಕವಷ್ಟೇ ||

ಭಾವಾರ್ಥ.

ಯಾಗಗಳ ವಿಷಯಕವಾದ ಜ್ಞಾನದಾಯಕನೂ, ಪುರಾತನನೂ ಆದ ಅಗ್ನಿಯು ತನ್ನ ಗ್ರಹಣಸಾಮರ್ಥ್ಯದಿಂದ ಸರ್ವವನ್ನೂ ತಿಳಿಯಬಲ್ಲನು; ಇಂತಹ ಅಗ್ನಿಯ ತೇಜಸ್ಸು ತಮಃ ಸಂಹಾರಕವೇ ಆಗಿರುತ್ತದೆ.

English Translation.

Agni, the ancient banner of sacrifice, knows (all things) through understanding: his radiance traverses (the darkness).

ವಿಶೇಷವಿಷಯಗಳು.

ಯಜ್ಞಸ್ಯ ಕೇತುಃ—ಅಗ್ನಿಷ್ಟೋಮಾದೇಃ ಪ್ರಜ್ಞಾಪಕಃ | ಯಜ್ಞಶಬ್ದವು ವೇನಃ ಅಧ್ವರಃ ಮೊದಲಾದ ಹದಿನೈದು ಯಜ್ಞನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. ಕೇತುಶಬ್ದಕ್ಕೆ ಶರ್ಮ, ಧ್ವಜ, ಇವೇ ಮೊದಲಾದ ಅರ್ಥಗಳು ಇದ್ದಾಗ್ಯೂ ಇಲ್ಲಿ ಸೂಚಕ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ ಅಗ್ನಿಯು ಅಗ್ನಿಷ್ಟೋಮವೇ ಮೊದಲಾದ (ಕ್ರತುಗಳೂ) ಪ್ರಜ್ಞಾಪಕನಾಗಿರುವನು. ಅಗ್ನಿಷ್ಟೋಮವೇ ಮೊದಲಾದ ಕ್ರತುಗಳನ್ನು ಆಚರಿಸುವಂತೆ ಪ್ರೇರಿಸುವನೆಂದು ಅರ್ಥವನ್ನು ವಿವರಿಸಿದೆ.

ಪೂರ್ವ್ಯಃ—ಪೂರ್ವೇ ಭವಃ ಚಿರಂತನಃ | ಪ್ರತ್ನಂ, ಪ್ರದಿವಃ ಮೊದಲಾದ ಆರು ಪುರಾಣನಾಮಗಳಲ್ಲಿ (ನಿ. ೩-೨೦) ಪೂರ್ವ್ಯ ಎಂಬ ಪದವು ಪಠಿತವಾಗಿದೆ. ಅಗ್ನಿಯು ಸೃಷ್ಟಿಯ ಆದಿಯಲ್ಲಿ ಉತ್ಪನ್ನನಾದ ಕಾರಣ; ಚಿರಂತನ—ಬಹಳ ಕಾಲದಿಂದಲೂ ಇರುವವನೆಂದು ವರ್ಣಿಸಿದೆ.

ಧಿಯಾ ಚೇತತಿ—ಧೀಶಬ್ದವು ಕರ್ಮನಾಮಗಳಲ್ಲಿಯೂ ( ನಿ. ೩-೨ ) ಪ್ರಜ್ಞಾನಾಮಗಳಲ್ಲಿಯೂ ಉಕ್ತವಾಗಿದೆ. ಇಲ್ಲಿ ಅಗ್ನಿಯು ತನ್ನ ಪ್ರಕೃಷ್ಟವಾದ ಜ್ಞಾನದಿಂದ ಎಲ್ಲವನ್ನೂ ತಿಳಿದು ಸರ್ವಜ್ಞನಾಗಿರುವ ಸ್ಥಿತಿಯನ್ನು ಹೊಂದಿರುವನು ಎಂದು ಅರ್ಥ.

ಅರ್ಥಂ—ಗಮನಸ್ವಭಾವಂ ತೇಜಃ | ನಿರುಕ್ತಕಾರರು—

ಸ್ಥಾಣುರಯಂ ಭಾರಹರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ |
ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ |

ಎಂಬ ವಾಕ್ಯದಲ್ಲಿ ಅರ್ಥೋಽರ್ತೇರರಣಸ್ಥೋ ವಾ ಎಂದು ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು ಗಮನಾರ್ಥವನ್ನು ಬೋಧಿಸುವ ಋಧಾತುವಿನಿಂದ ನಿಷ್ಪನ್ನವಾದ ಅರ್ಥಶಬ್ದಕ್ಕೆ ಅರ್ಯತೇ ದ್ರವ್ಯಕಾಮೈರರ್ಥಿಭಿಃ— ಯಾಚಕರಿಂದ ಹೊಯ್ಯಲ್ಪಡುವುದಾದಕಾರಣ ಅರ್ಥವೆನಿಸಿರುವ ದೀನಾರಾದಿಗಳು (ಚಿನ್ನದನಾಣ್ಯಗಳು) ಅರ್ಥಶಬ್ದದಿಂದ ಉಕ್ತವಾಗಿರುತ್ತವೆ. ಸಾಯಣರು ಗಮನಸ್ವಭಾವವು ತೇಜಸ್ಸಿನಲ್ಲಿಯೂ ಇರುವುದರಿಂದ ಅಗ್ನಿಯ ತೇಜಸ್ಸು ಎಂದು ಅರ್ಥವನ್ನು ವಿವರಿಸಿದ್ದಾರೆ.

**ತರಣಿ—ತಾರಕಂ । ತರಣಿಶಬ್ದವು** ಕ್ಷಿಪ್ರನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ದಾಟುವುದು, ತೇಲುವುದು ಎಂಬ ಅರ್ಥವನ್ನು ಬೋಧಿಸುವ ತೄಧಾತುವಿನಿಂದ ನಿಷ್ಪನ್ನವಾದ ತರಣಿ ಶಬ್ದಕ್ಕೆ ತಾರಕ ಎಂದು ಅರ್ಥವನ್ನು ವರ್ಣಿಸಿದೆ. ಅಗ್ನಿಯು ವ್ಯಾಪನಸ್ವಭಾವದ ತೇಜಸ್ಸು ಅಂತರಿಕ್ಷದಲ್ಲಿ ಹರಡಿರುವ ಕತ್ತಲೆಯನ್ನು ನಾಶಮಾಡುವುದೆಂದು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

**ಚೇತತಿ**—ಚಿತೀ ಸಂಜ್ಞಾನೇ ಧಾತು. **ಲಟ್** ಪ್ರಥಮಪುರುಷಏಕವಚನದಲ್ಲಿ ಚೇತತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಅರ್ಥಮ್**—ಋ ಗತೌ ಧಾತು. **ಉಷಿಕುಷಿಗಾರ್ತಿಭ್ಯಸ್ಥನ್** (ಉ. ಸೂ. ೨-೧೬೧) ಎಂಬುದರಿಂದ ಇದಕ್ಕೆ ಥನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ ರಪರವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತರಣಿ**—ತೄ ಪ್ಲವನತರಣಯೋಃ ಧಾತು. **ಅರ್ತಿಸೃಧೃಧಮಿ**—(ಉ. ಸೂ. ೨-೨೪೯) ಎಂಬುದರಿಂದ ಇದಕ್ಕೆ ಅನಿ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತು ಋಕಾರಕ್ಕೆ ಗುಣ. **ಅಟ್ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ

ಸಂಹಿತಾಪಾಠಃ

ಅಗ್ನಿಂ ಸೂನುಂ ಸನಶ್ರುತಂ ಸಹಸೋ ಜಾತವೇದಸಂ ।
ವಹ್ನಿಂ ದೇವಾ ಅಕೃಣ್ವತ ॥ ೪ ॥

ಪದಪಾಠಃ

ಅಗ್ನಿಂ । ಸೂನುಂ । ಸನತ್ಽಶ್ರುತಂ । ಸಹಸಃ । ಜಾತಽವೇದಸಂ ।
ವಹ್ನಿಂ । ದೇವಾಃ । ಅಕೃಣ್ವತ ॥ ೪ ॥

ಸಾಯಣಭಾಷ್ಯಂ.

ಸಹಸಃ ಸೂನುಂ ಬಲಸ್ಯ ಪುತ್ರಂ ಮಥನರೂಪೇಣ ಬಲೇನ ನಿಷ್ಪಾದ್ಯಮಾನತ್ವಾತ್ ಸನಶ್ರುತಂ ಸನಾತನತ್ವೇನ ಪ್ರಸಿದ್ಧಂ ಜಾತವೇದಸಂ ಜಾತಪ್ರಜ್ಞಂ ತಮಿಮಮಗ್ನಿಂ ದೇವಾ ಹವಿರ್ಭುಜೋ ದೇವಾ ವಹ್ನಿಂ ಹವಿಷಾಂ ವೋಢಾರಮಕೃಣ್ವತ । ಅಕುರ್ವತ ॥ ಸನತ್ರುತಂ । ಶು ಶ್ರವಣೇ । ಕರ್ಮಣಿ ಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ವಹ್ನಿಂ । ವಹ ಪ್ರಾಪಣೇ । ನಿಂತ್ಯನುವೃತ್ತೌ ವಹಿಶ್ರಿಶ್ರ್ಯಾದಿನಾ ನಿಪ್ರತ್ಯಯಃ । ಅಕೃಣ್ವತ । ಕೃವಿ ಹಿಂಸಾಕರಣಯೋಃ । ಇದಿತ್ತ್ವಾನ್ನುಮ್ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಅಕಾರಶ್ಚಾಂತಾದೇಶಃ । ಲಙಿ ವ್ಯತ್ಯಯೇನಾತ್ಮನೇಪದಂ । ನಿಘಾತಃ ॥

ಪ್ರತಿಪದಾರ್ಥ.

ಸಹಸಃ ಸೂನುಂ—(ಮಥನಕಾಲದಲ್ಲಿ ಬಲದಿಂದ ಉತ್ಪಾದ್ಯಮಾನನಾದುದರಿಂದ) ಬಲದ ಪುತ್ರನೂ। ಸನಶ್ರುತಂ—ಸನಾತನನೆಂದು ಪ್ರಸಿದ್ಧನೂ । ಜಾತವೇದಸಂ—(ಸಮಸ್ತ ಪದಾರ್ಥಗಳ ವಿಷಯಕ)ಜ್ಞಾನವುಳ್ಳವನೂ ಆದ । ಅಗ್ನಿಂ—ಅಗ್ನಿಯನ್ನು । ದೇವಾಃ—ಹವಿರ್ಭಕ್ಷಕರಾದ ದೇವತೆಗಳು । ವಹ್ನಿಂ—ಹವಿರ್ವಾಹಕನನ್ನಾಗಿ । ಅಕೃಣ್ವತ—ಮಾಡಿದರು ॥

ಭಾವಾರ್ಥ

(ಮಥನಕಾಲದಲ್ಲಿ ಬಲದಿಂದ ಉತ್ಪಾದ್ಯಮಾನನಾದುದರಿಂದ) ಬಲದಮಗನೆಂದೂ ಸನಾತನನೆಂದೂ ಪ್ರಸಿದ್ಧನಾದ ಮತ್ತು ಉತ್ಪನ್ನನಾದ ಸಮಸ್ತ ಪದಾರ್ಥಗಳ ಜ್ಞಾನವುಳ್ಳವನೂ ಆದ ಅಗ್ನಿಯನ್ನು ಹವಿರ್ಭುಜರಾದ ದೇವತೆಗಳು, ತಮಗೆ ಹವಿರ್ವಾಹಕನನ್ನಾಗಿ ಮಾಡಿಕೊಂಡರು.

## English Translation.

The gods have made Agni, who is the son of strength, the eternally-renowned, the knower of all that is born, the bearer (of oblations).

ವಿಶೇಷವಿಷಯಗಳು.

ಅರಣಿಗಳಲ್ಲಿ ಮಥನಮಾಡುವುದರಿಂದ ಅಗ್ನಿಯು ಉತ್ಪನ್ನವಾಗುವಕಾರಣ **ಸಹಸಃಸೂನು**—ಬಲದ ಪುತ್ರನು ಎಂದು ವ್ಯವಹರಿಸಲ್ಪಡುವನು. ಬಹಳಕಾಲದಿಂದಲೂ ಇರುವಕಾರಣ **ಸನಶ್ರುತ** ಎಂದರೆ ಯಾವಾಗಲೂ ಇರತಕ್ಕವನು. ಉತ್ಪತ್ತಿಯನ್ನು ಹೊಂದಿರುವುದೆಲ್ಲವನ್ನೂ ತಿಳಿದುಕೊಂಡಿರುವುದರಿಂದ ಜಾತಪ್ರಜ್ಞನಾಗಿ ಜಾತವೇದಶ್ಶಬ್ದ ಅಭಿಧೇಯನಾಗಿರುವನು. ಈಪ್ರಕಾರದಿಂದ ಇರುವ ಪ್ರಭೂತವಾದ ಮಹಿಮೆಯುಳ್ಳ ಅಗ್ನಿಯನ್ನು ದೇವತೆಗಳು ತಮ್ಮ ತಮ್ಮ ಹವಿಸ್ಸುಗಳನ್ನು ವಹಿಸುವವನನ್ನಾಗಿ ಮಾಡಿರುತ್ತಾರೆ ಎಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

**ಸನಶ್ರುತಮ್**—ಶ್ರು ಶ್ರವಣೇ ಧಾತು. ನಿಷ್ಠಾ (ಪಾ. ಸೂ. ೩-೨-೧೦೨) ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ತೃತೀಯಾಕರ್ಮಣಿ** (ಪಾ. ಸೂ ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ವಹ್ನಿರ್ಮ್—ವಹ ಪ್ರಾಪಣೇ ಧಾತು. ನಿಃ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ ವಹಿಶ್ರಿಶ್ರುಯು—(ಉ. ಸೂ. ೪-೪೯೧) ಎಂಬುದರಿಂದ ಇದಕ್ಕೆ ನಿ ಪ್ರತ್ಯಯ. ನಿತ್ ಅನುವೃತ್ತವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಆಕೃಣ್ವತ—ಕೃವಿ ಹಿಂಸಾಕರಣಯೋಶ್ಚ ಧಾತು. ಇದಿತೋನುಮ್‌ಧಾತೋಃ (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಙ್ ಪ್ರಥಮಪುರುಷ ಬಹುವಚನದಲ್ಲಿ ವ್ಯತ್ಯಯದಿಂದ ಝ ಪ್ರತ್ಯಯ. ಆತ್ಮನೇಪದೇಷ್ವನತಃ ಎಂಬುದರಿಂದ ಅದಕ್ಕೆ ಅತಾದೇಶ. ಧಿನ್ವಿಕೃಣ್ವ್ಯೋರಚ (ಪಾ. ಸೂ. ೩-೧-೮೦) ಎಂಬುದರಿಂದ ಉ ಪ್ರತ್ಯಯ, ಅಕಾರಾಂತಾದೇಶ. ಅತೋಲೋಪಃ ಎಂಬುದರಿಂದ ಅಕಾರಕ್ಕೆ ಲೋಪ. ಅದಕ್ಕೆ ಸ್ಥಾನಿವದ್ಭಾವ ಬರುವುದರಿಂದ ಲಘೂಪಧಗುಣ ಬರುವುದಿಲ್ಲ. ಋಕಾರದ ಪರದಲ್ಲಿರುವುದರಿಂದ ನುಮಿನ ನಕಾರಕ್ಕೆ ಣತ್ವ. ಯಣಾದೇಶ. ಅತಿಙಂತದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಅದಾಭ್ಯಃ ಪುರಏತಾ ವಿಶಾಮಗ್ನಿರ್ಮಾನುಷೀಣಾಂ ।
ತೂರ್ಣೀ ರಥಃ ಸದಾ ನವಃ ॥ ೫ ॥

ಪದಪಾಠಃ

ಅದಾಭ್ಯಃ । ಪುರಃಽಏತಾ । ವಿಶಾಂ । ಅಗ್ನಿಃ । ಮಾನುಷೀಣಾಂ ।
ತೂರ್ಣಿಃ । ರಥಃ । ಸದಾ । ನವಃ ॥ ೫ ॥

ಸಾಯಣಭಾಷ್ಯಂ.

ಮಾನುಷೀಣಾಂ ಮನೋರ್ಜಾತಾನಾಂ ವಿಶಾಂ ಪ್ರಜಾನಾಂ ಪುರಏತಾ ಸೇನಾಗ್ರಪ್ರದರ್ಶನೇನಾಗ್ರತೋ ಗಂತಾತ ಏವ ತೂರ್ಣಿಸ್ತಾಃ ಪ್ರಜಾ ವೈದಿಕಕರ್ಮಪ್ರವರ್ತಕತ್ವೇನಾನುಗ್ರಹೀತುಂ ತ್ವರಾಯುಕ್ತ ಆಲಸ್ಯರಹಿತೋ ರಥೋ ಹವಿಷಾಂ ವಹನಾದ್ರಥಸದೃಶಃ ಸದಾ ಸರ್ವದಾ ತತ್ಕರ್ಮಣಿ ನವೋ ನೂತನಃ ಪುನರ್ಮಥನಾದಭಿನವ ಏವಂವಿಧೋಽಗ್ನಿರದಾಭ್ಯಃ । ಅಹಿಂಸ್ಯಃ । ನ ಕೇನಾಪಿ ತಿರಸ್ಕಾರ್ಯ ಇತ್ಯರ್ಥಃ ॥ ಅದಾಭ್ಯಃ । ದಂಭು ದಂಭೇ । ದಭೇಶ್ಚೇತಿ ವಕ್ತವ್ಯಮಿತಿ ಕರ್ಮಣಿ ಣ್ಯತ್ । ಉಪಧಾವೃದ್ಧಿಃ । ನ ದಾಭ್ಯೋಽದಾಭ್ಯಃ । ನಞ್ಸಮಾಸೇ ತತ್ಪುರುಷೇ ತುಲ್ಯಾರ್ಥೇತಿ ಪೂರ್ವಪದಪ್ರಕೃತಿಸ್ವರತ್ವಂ । ಪುರಏತಾ । ಇಣ್ ಗತೌ । ಣ್ವುಲ್ತೃಚಾವಿತಿ ತೃಚ್ । ಗುಣಃ । ಚಿತ್ತ್ವಾದಂತೋದಾತ್ತಃ । ಮಾನುಷೀಣಾಂ । ಮನೋರ್ಜಾತಾವಞ್ಯತೌ ಷುಕ್ ಚೇತ್ಯಞ್ । ಟಿಡ್ಢಾಣಞಿತಿ ಙೀಪ್ । ಞಿತ್ತ್ವಾದಾದ್ಯುದಾತ್ತಃ । ತೂರ್ಣಿಃ । ಞಿತ್ವರಾ ಸಂಭ್ರಮ ಇತಿ ಧಾತೋರ್ನಿರಿತ್ಯನುವೃತ್ತೌ ವಹಿಶ್ರಿಶ್ರುಯುದ್ರುಗ್ಲಾಹಾತ್ವರಿಭ್ಯೋ ನಿದಿತಿ ನಿಪ್ರತ್ಯಯಃ । ಜ್ವರತ್ವರೇತ್ಯಾದಿನಾ ಊಠ್ । ತಸ್ಯ ನಿತ್ತ್ವಾದಾದ್ಯುದಾತ್ತಃ । ಸಂಹಿತಾಯಾಂ ಢ್ರಲೋಪೇ ಪೂರ್ವಸ್ಯೇತಿ ದೀರ್ಘಃ । ರಥಃ । ಹನಿಕುಷಿನೀರಮಿಕಾಶಿಭ್ಯ ಇತಿ ಕ್ಥನ್ಪ್ರತ್ಯಯಃ । ಕಿತ್ತ್ವಾದನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ನಿತ್ತ್ವಾದಾದ್ಯುದಾತ್ತಃ । ಸದಾ । ಸ್ವರಾದಿಷ್ಪಾದ್ಯುದಾತ್ತತ್ವೇನ ಪಠಿತತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ.

**ಮಾನುಷೀಣಾಂ**—ಮನುವಿನಿಂದ ಉತ್ಪನ್ನರಾದ । **ವಿಶಾಂ**—ಪ್ರಜೆಗಳಿಗೆ । **ಪುರಃ ಏತಾ**—(ಸನ್ಮಾರ್ಗಪ್ರದರ್ಶಕನಾಗಿ) ಅಗ್ರಗಾಮಿಯೂ । **ತೂರ್ಣಿಃ**—(ಆದುದರಿಂದಲೇ ಅವರನ್ನು ವೈದಿಕಕರ್ಮಪ್ರವರ್ತಕರನ್ನಾಗಿ ಮಾಡಲು) ತ್ವರಾಯುಕ್ತನೂ (ಆಲಸ್ಯರಹಿತನೂ) । **ರಥಃ**—(ಹವಿರ್ವಹನದಿಂದ) ರಥಸದೃಶನೂ । **ಸದಾ**—ಸರ್ವಕಾಲಗಳಲ್ಲಿಯೂ । **ನವಃ**—(ಪುನಃ ಪುನಃ ಮಥಿತನಾಗಿ ಉದ್ಭವಿಸುವುದರಿಂದ) ನೂತನನೂ ಆದ । **ಅಗ್ನಿಃ**—ಅಗ್ನಿಯು । **ಅದಾಭ್ಯಃ**—(ಯಾರಿಂದಲೂ) ಹಿಂಸ್ಯನಲ್ಲ (ಯಾರಿಂದಲೂ ತಿರಸ್ಕೃತನಾಗುವುದಿಲ್ಲ).

ಭಾವಾರ್ಥ.

ಮನುವಂಶೋತ್ಪನ್ನರಾದ ಪ್ರಜೆಗಳಿಗೆಲ್ಲಾ ಸನ್ಮಾರ್ಗಪ್ರವರ್ತಕನಾಗಿ ಅಗ್ರಗಾಮಿಯೂ, (ಆದುದರಿಂದಲೇ ಆ ಕರ್ಮಮಾಡಬೇಕೆಂಬ) ತ್ವರಾಯುಕ್ತನೂ, ಹವಿರ್ವಹನಕಾರ್ಯದಿಂದ ರಥಸದೃಶನೂ, ಪುನಃ ಪುನಃ ಮಥಿತನಾಗಿ ಜನಿಸುವುದರಿಂದ ಯಾವಾಗಲೂ ನೂತನನೂ ಆದ ಅಗ್ನಿಯನ್ನು ಯಾರೂ ತಿರಸ್ಕರಿಸಲಾರರು (ಸರ್ವರಿಂದಲೂ ಪೂಜ್ಯನು)

English Translation.

Agni, the preceder of human beings, (ever) alert, the vehicle of their offerings, is ever new, is unsusceptible of harm.

ವಿಶೇಷವಿಷಯಗಳು

**ಮಾನುಷೀಣಾಂ ವಿಶಾಂ ಪುರ ಏತಾ**—**ಮನೋರ್ಜಾತಾನಾಂ ಪ್ರಜಾನಾಂ ಸನ್ಮಾರ್ಗಪ್ರದರ್ಶನೇನ ಅಗ್ರತೋ ಗಂತಾ** । ವಿಶಃ ಎಂಬ ಪದವು ಮನುಷ್ಯನಾಮಗಳಲ್ಲಿ (ನಿ. ೩-೭) ಉಕ್ತವಾಗಿದೆ. ನಿರುಕ್ತಕಾರರು **ಮನೋರಪತ್ಯಂ ಮನುಷೋ ವಾ** (ನಿ.೩-೭) ಎಂದು ಮನುಷ್ಯನಾಮಾರ್ಥವನ್ನು ನಿರ್ವಚನಮಾಡಿರುತ್ತಾರೆ. ಮತ್ತು—

**ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯ ದೃಶೀಕಂ ॥**
**(ಋ. ಸಂ ೧-೨೭-೧೦)**

ಎಂಬಲ್ಲಿ ವಿಶೇವಿಶೇ ಎಂಬ ಪದಕ್ಕೆ ಮನುಷ್ಯಸ್ಯ ಮನುಷ್ಯಸ್ಯ ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಈ ಪುನರುಕ್ತಿಯನ್ನು ಪರಿಹರಿಸುವುದಕ್ಕಾಗಿ ವಿಶಾಂ ಎಂಬ ಪದಕ್ಕೆ ಪ್ರಜಾನಾಂ ಎಂದು ಅರ್ಥವನ್ನು ಹೇಳಿ, ಮನುವಿನಿಂದ ಉತ್ಪನ್ನರಾದ ಪ್ರಜೆಗಳಿಗೆ ಅಗ್ನಿಯು ಸನ್ಮಾರ್ಗವನ್ನು ಉಪದೇಶಮಾಡುವುದರಿಂದ ಅವರ ಅಗ್ರಗಾಮಿಯಾಗಿರುವವನು ಎಂದು ವರ್ಣಿಸಿದ್ದಾರೆ.

**ತೂರ್ಣಿಃ**—ಈ ಪದವನ್ನು ನಿರುಕ್ತಕಾರರು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಪಾಠಮಾಡಿ **ತ್ವರಮಾಣಃ** (ನಿ. ೭-೧೮) ಎಂದು ಅರ್ಥವನ್ನು ವಿವರಿಸಿದ್ದಾರೆ. ಅಗ್ನಿಯು ಮನುವಿನ ಪ್ರಜೆಗಳನ್ನು ವೇದೋಕ್ತವಾದ ಕರ್ಮಗಳಲ್ಲಿ ಪ್ರವೃತ್ತರಾಗುವಂತೆ ಅನುಗ್ರಹಮಾಡುವುದರಲ್ಲಿ ಆಸಕ್ತಿಯಿಂದ ಇರುವನು ಎಂದು ವಿವರಿಸಿದೆ.

**ರಥಃ**—ಹವಿಷಾಂ ವಹನಾತ್ ರಥಸದೃಶಃ ರಥೋ ರಂಹತೇರ್ಗತಿಕರ್ಮಣಃ ಸ್ಥಿರತೇರ್ವಾ ವಿಪರೀತಸ್ಯ ರಮಮಾಣೋಽಸ್ಮಿನ್ ತಿಷ್ಠತೀತಿ ವಾ ರಪತೇರ್ವಾ ರಸತೇರ್ವಾ (ನಿ. ೯-೧೨) ಗಮನ (ನಡೆಯುವುದು) ಎಂಬ ಅರ್ಥವನ್ನು ಬೋಧಿಸುವ ರಂಹಧಾತುವಿನಿಂದಾಗಲಿ, ಸ್ಥಿರಸ್ಸ್ವ ರಥ ಇತ್ಯುಕ್ತಃ ಎಂದು ಹೇಳುವ ಅಭಿಯುಕ್ತವಾಕ್ಯದಂತೆ ಸ್ಥಿರ ಎಂಬ ಶಬ್ದದ ವೈಪರೀತ್ಯವು ರಥವು ಎಂದೂ ಸಂತೋಷದಿಂದ ರಮಿಸುವ ಸಾಧನವೆಂದೂ, ರಪಧಾತುವಿನಿಂದಾಗಲಿ, ರಸಧಾತುವಿನಿಂದಾಗಲಿ ರಥಶಬ್ದವು ನಿಷ್ಪನ್ನವಾಗುವುದೆಂದು ಯಾಸ್ಕರು ಅರ್ಥವಿವರಣೆಸಹಿತವಾಗಿ ವರ್ಣಿಸಿದ್ದಾರೆ. ಅಗ್ನಿಯು ದೇವತೆಗಳ ಹವಿರ್ಭಾಗಗಳನ್ನು ವಹಿಸುವುದರಿಂದ ವಸ್ತುವಾಹಕರಣವಾದ ರಥಕ್ಕೆ ಸದೃಶವಾಗಿರುವನು ಎಂಬ ಅರ್ಥವನ್ನು ಗೌಣವಾದರೀತಿಯಿಂದ ವರ್ಣಿಸಿದ್ದಾರೆ.

**ಸದಾ ನವಃ ಅದಾಭ್ಯಃ**—ಸರ್ವದಾ ತತ್ಕರ್ಮಣಿ ನವಃ ನೂತನಃ ಪುನರ್ಮಥನಾದಭಿನವಃ। ಅಹಿಂಸ್ಯಃ ನ ಕೇನಾಪಿ ತಿರಸ್ಕಾರ್ಯಃ। ದೇವತೆಗಳಿಗೆ ಹವಿಸ್ಸುಗಳನ್ನು ಒಯ್ಯುವ ಕಾರ್ಯದಲ್ಲಿ ಅಗ್ನಿಯು ಯಾವಾಗಲೂ ಉತ್ಸಾಹದಿಂದ ಇರುವನು ಎಂದೂ, ಅರಣಿಗಳಲ್ಲಿ ಮಥನಮಾಡುವುದರಿಂದ ಉತ್ಪನ್ನನಾಗುವ ಕಾರಣ ಯಾವಾಗಲೂ ಹೊಸಬನಾಗಿರುವನೆಂದೂ, ಸದಾನವ ಶಬ್ದಕ್ಕೆ ಎರಡುವಿಧವಾದ ಅರ್ಥವನ್ನು ವಿವರಿಸಿದೆ. ಮತ್ತು ಅಗ್ನಿಯು ಯಾರಿಂದಲೂ ಹಿಂಸೆಮಾಡುವದಕ್ಕೆ ಅಸಾಧ್ಯನಾಗಿ, ತಿರಸ್ಕಾರಾರ್ಹನಾಗಿ ಇರತಕ್ಕವನಲ್ಲವೆಂದೂ ಅಗ್ನಿಯ ಸ್ವರೂಪವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಅದಾಭ್ಯಃ**—ದಂಭು ದಂಭನೇ ಧಾತು. **ದಭೇಶ್ಚೇತಿವಕ್ತವ್ಯಮ್** ಎಂಬ ವಚನದಿಂದ ಇದಕ್ಕೆ ಕರ್ಮಣಿಯಲ್ಲಿ ಣ್ಯತ್ ಪ್ರತ್ಯಯ. ಉಪಧಾ ನಕಾರಕ್ಕೆ ಲೋಪಬಂದಾಗ **ಅತಉಪಧಾಯಾಃ** ಎಂಬುದರಿಂದ ವೃದ್ಧಿ. ದಾಭ್ಯ ಎಂದು ರೂಪವಾಗುತ್ತದೆ. ನ ದಾಭ್ಯಃ ಅದಾಭ್ಯಃ ನಞ್ ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಪುರಏತಾ**—ಇಣ್ ಗತೌ ಧಾತು. **ಣ್ವುಲ್‌ತೃಚೌ** (ಪಾ. ಸೂ. ೩-೧-೧೩೩) ಎಂಬುದರಿಂದ ಕರ್ತರಿಯಲ್ಲಿ ತೃಚ್‌ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿಗೆ ಗುಣ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಿಶಾಮ್**—ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಾನುಷೀಣಾಮ್**—ಮನೋರ್ಜಾತಾಃ ಮಾನುಷ್ಯಃ. **ಮನೋರ್ಜಾತಾವಞ್ಯತೌಷುಕ್ ಚ** (ಪಾ. ಸೂ. ೪-೧-೧೬೧) ಎಂಬುದರಿಂದ ಮನುಶಬ್ದಕ್ಕೆ ಅಞ್ ಪ್ರತ್ಯಯ, ಷುಕಾಗಮ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಅಞಂತವಾದುದರಿಂದ ಸ್ತ್ರೀತ್ವದಲ್ಲಿ **ಟಿಡ್ಢಾಣಞ್**—(ಪಾ. ಸೂ. ೪-೧-೧೫) ಎಂಬುದರಿಂದ ಙೀಪ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ **ಪೂರ್ವದಲ್ಲಿ**ರುವ ಅಕಾರಕ್ಕೆ ಲೋಪ. ಙೀಪ್, ಸುಪ್ ಪಿತ್ತಾದುದರಿಂದ ಅನುದಾತ್ತ. ಅಞ್ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀಬಹುವಚನಾಂತರೂಪ.

ತೂರ್ಣಿಃ—ಞಿತ್ವರಾ ಸಂಭ್ರಮೇ ಧಾತು. ನಿಃ ಎಂದು ಅನುವೃತ್ತವಾಗುವಾಗ ವಹಿಶ್ರಿಶ್ರುಯುದ್ರುಗ್ಲಾಹಾತ್ವರಿಭ್ಯೋನಿತ್ (ಉ. ಸೂ. ೪-೪೯೧) ಎಂಬುದರಿಂದ ನಿಪ್ರತ್ಯಯ. ಜ್ವರತ್ವರಸ್ರಿವ್ಯವಿ—(ಪಾ. ಸೂ. ೬-೪-೨೦) ಎಂಬುದರಿಂದ ವಕಾರ ಉಪಧೆಗಳಿಗೆ ಊಠಾದೇಶ. ರಷಾಭ್ಯಾಂಣೋನಃ ಸಮಾನಪದೇ ಎಂಬುದರಿಂದ ಪ್ರತ್ಯಯಕ್ಕೆ ಣತ್ವ. ತೂರ್ಣಿ ಎಂದು ರೂಪವಾಗುತ್ತದೆ. ಪ್ರತ್ಯಯಕ್ಕೆ ನಿತ್ವವಿಧಾನಮಾಡಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದಕ್ಕೆ ಸು ಬಂದಾಗ ಪದಾಂತದಲ್ಲಿ ರುತ್ವ. ರೋರಿ ಎಂಬುದರಿಂದ ಪರದಲ್ಲಿ ರೇಫವಿರುವುದರಿಂದ ಪೂರ್ವದ ರೇಫಕ್ಕೆ ಲೋಪ. ಢ್ರಲೋಪೇಪೂರ್ವಸ್ಯದೀರ್ಘೋಽಣಃ (ಪಾ. ಸೂ. ೬-೩-೧೧೧) ಎಂಬುದರಿಂದ ಪೂರ್ವದ ಇಕಾರಕ್ಕೆ ದೀರ್ಘ.

ರಥಃ—ರಮು ಕ್ರೀಡಾಯಾಂ ಧಾತು. ಹನಿಕುಷಿನೀರಮಿಕಾಶಿಭ್ಯಃ—(ಉ. ಸೂ. ೨-೧೫೯) ಎಂಬುದರಿಂದ ಇದಕ್ಕೆ ಕ್ಥನ್ ಪ್ರತ್ಯಯ. ಕಿತ್ತ್ವಾದುದರಿಂದ ಅನುದಾತ್ತೋಪದೇಶವನತಿ—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಮಕಾರಕ್ಕೆ ಲೋಪ. ಪ್ರತ್ಯಯ ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸದಾ—ಸ್ವರಾದಿಗಣದಲ್ಲಿ ಇದು ಆದ್ಯುದಾತ್ತವಾಗಿ ಪಠಿತವಾದುದರಿಂದ ಆದ್ಯುದಾತ್ತವಾಗುತ್ತದೆ.

ಸಂಹಿತಾಪಾಠಃ

ಸಾಹ್ವಾನ್ವಿಶ್ವಾ ಅಭಿಯುಜಃ ಕ್ರತುರ್ದೇವಾನಾಮಮೃಕ್ತಃ ।
ಅಗ್ನಿಸ್ತುವಿಶ್ರವಸ್ತಮಃ ॥ ೬ ॥

ಪದಪಾಠಃ

ಸಹ್ವಾನ್ । ವಿಶ್ವಾಃ । ಅಭಿಽಯುಜಃ । ಕ್ರತುಃ । ದೇವಾನಾಮ್ । ಅಮೃಕ್ತಃ ।
ಅಗ್ನಿಃ । ತುವಿಶ್ರವಃಽತಮಃ ॥ ೬ ॥

ಸಾಯಣಭಾಷ್ಯಂ.

ಅಭಿಯುಜೋಽಭಿಯೋಕ್ತ್ರೀರ್ವಿಶ್ವಾಃ ಸರ್ವಾಃ ಸೇನಾಃ ಸಾಹ್ವಾನ್ಸಹಮಾನಃ ಸ್ವಬಲೇನ ತಿರಸ್ಕುರ್ವಾಣೋಽತ ಏವಾಮೃಕ್ತಃ ಶತ್ರುಭಿರಹಿಂಸಿತೋ ದೇವಾನಾಂ ಕ್ರತುಃ ಕರ್ತಾ ಹವಿಷ್ಪ್ರದಾನೇನ ಪೋಷಕ ಏವಂಭೂತೋಽಗ್ನಿಸ್ತುವಿಶ್ರವಸ್ತಮಃ । ತುವಿಶಬ್ದೋ ಬಹುವಾಚೀ । ತುವಿ ಪುರು ಇತಿ ತನ್ನಾಮಸು ಪಾಠಾತ್ । ಶ್ರವಃಶಬ್ದೋಽನ್ನವಾಚೀ । ಶ್ರವ ಇತ್ಯನ್ನನಾಮ ಶ್ರೂಯತೇ । ನಿ. ೧೦-೩ । ಇತಿ ನಿರುಕ್ತೇಽಭಿಧಾನಾತ್ । ಅತಿಶಯೇನ ಬಹುವಿಧಾನ್ನೋಪೇತೋ ವರ್ತತೇ । ಯಸ್ಮಾದೇವಂ ತಸ್ಮಾದಸ್ಮಾನಪಿ ಬಹುವಿಧಾನ್ನೋಪೇತಾನ್ಕರೋತ್ವಿತಿ ಭಾವಃ ॥ ಸಾಹ್ವಾನ್ । ಷಹ ಮರ್ಷಣ ಇತ್ಯಸ್ಯ ಕ್ವಸೌ ದಾಶ್ವಾನ್ಸಾಹ್ವಾನ್ಮೀಢ್ವಾಂಶ್ಚೇತಿ ನಿಪಾತನಾದ್ದ್ವಿರ್ವಚನಮಿಡಾಗಮಶ್ಚ ನ ಭವತಿ ಪರಸ್ಮೈಪದಂ ಚ ಭವತಿ । ಕ್ವಸುಸ್ವರಃ । ಕ್ರತುಃ । ಕೃಞಃ ಕತುಃ । ಕಿತ್ತ್ವಾದ್ಗುಣಾಭಾವಃ । ಪ್ರತ್ಯಯಸ್ವರಃ । ತುವಿಶ್ರವಸ್ತಮಃ ।

**ತು ವೃತ್ತಿಹಿಂಸಾಪೂರ್ತಿಷು । ಅಸ್ಮಾದೌಣಾದಿಕಃ ಕಿಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಉವಙಾದೇಶಃ । ಅಂತೋದಾತ್ತಃ । ಶ್ರವಃ । ಶ್ರು ಶ್ರವಣೇ । ಶ್ರೂಯತೇಽನ್ನಮಿತಿ ಕರ್ಮಣ್ಯಸುನ್ಪ್ರತ್ಯಯಃ । ಅತಿಶಯೇನ ತುವಿಶ್ರವಾ ಇತ್ಯತಿಶಾಯನೇ ತಮಬಿತಿ ತಮಪ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥**

ಪ್ರತಿಪದಾರ್ಥ.

**ಅಭಿಯುಜಃ**—ಎದುರಿಸಿಬರುವ (ಶತ್ರುಗಳ) । **ವಿಶ್ವಾಃ**—ಸಮಸ್ತ ಸೇನೆಗಳನ್ನೂ । **ಸಾಹ್ವಾನ್**—(ಸ್ವಸಾಮರ್ಥ್ಯದಿಂದ) ಸಹಿಸುವವನೂ । **ಅಮೃಕ್ತಃ**—(ಆದುದರಿಂದಲೇ) ಅಹಿಂಸಿತನೂ । **ದೇವಾನಾಂ**—ದೇವತೆಗಳಿಗೆ । **ಕ್ರತುಃ**—(ಹವಿಷ್ಪ್ರದಾನದಿಂದ ಪುಷ್ಟಿಯನ್ನು) ಉಂಟುಮಾಡುವವನೂ (ಆದ) । **ಅಗ್ನಿಃ**—ಅಗ್ನಿಯು । **ತುವಿಶ್ರವಸ್ತಮಃ**—ಬಹುವಿಧಾನ್ನೋಪೇತನಾಗಿರುತ್ತಾನೆ.

ಭಾವಾರ್ಥ.

ತನ್ನನ್ನೆದುರಿಸಿಬರುವ ಶತ್ರುಸೇನೆಗಳೆಲ್ಲವನ್ನೂ ಸ್ವಸಾಮರ್ಥ್ಯದಿಂದ ತಿರಸ್ಕರಿಸಬಲ್ಲವನೂ, (ಆದುದರಿಂದಲೇ ಯಾರಿಂದಲೂ) ಅಹಿಂಸಿತನೂ, ಹವಿಷ್ಪ್ರದಾನದಿಂದ ದೇವತೆಗಳಿಗೆ ಪುಷ್ಟಿಕಾರಕನೂ ಆದ ಅಗ್ನಿಯು ಬಹುವಿಧಾನ್ನೋಪೇತನು. (ಆದುದರಿಂದ ಅಂತಹ ಅಗ್ನಿಯು ನಮಗೂ ನಾನಾವಿಧಾನ್ನವನ್ನನುಗ್ರಹಿಸಲಿ).

English Translation.

Agni, the most liberal contributor of food, is able to resist all assailants unharmed, the nourisher of the gods.

ವಿಶೇಷವಿಷಯಗಳು

**ಅಭಿಯುಜಃ ವಿಶ್ವಾಃ ಸಾಹ್ವಾನ್, ಅಮೃಕ್ತಃ**—**ಅಭಿಯೋಕ್ತ್ರೀಃ ಸರ್ವಾಃ ಸೇನಾಃ ಸಹಮಾನಃ ಅತ ಏವ ಶತ್ರುಭಿರಹಿಂಸಿತಃ** । ಇತರರನ್ನು ವಧೆಮಾಡುವ ಉದ್ದೇಶದಿಂದ ಎದುರಾಗಿ ಬರುವವನು ಶತ್ರುವೆನಿಸುವನು. ಈ ಪ್ರಕಾರವಾಗಿರುವ ಶತ್ರುವನ್ನು ಅಭಿಯುಜಃ ಎಂಬ ಶಬ್ದದಿಂದ ಇಲ್ಲಿ ವ್ಯವಹರಿಸಿದೆ. ಶತ್ರುಸೇನೆಗಳೆಲ್ಲವನ್ನೂ ಅಗ್ನಿಯು ತನ್ನ ಶಕ್ತಿಯಿಂದ ತಿರಸ್ಕರಿಸುವನು ಮತ್ತು ಶತ್ರುಗಳಿಂದ ಹಿಂಸೆಯನ್ನು ಹೊಂದದೆ ಇರುವವನು ಎಂದು ವರ್ಣಿಸಿದೆ.

**ದೇವಾನಾಂ ಕ್ರತುಃ ತುವಿಶ್ರವಸ್ತಮಃ**—ತುವಿ ಎಂಬ ಪದವು ಬಹುನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಶ್ರವಃ ಎಂಬ ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ, ಮತ್ತು "ಅತೋರ್ಣೋ ರಾಜಾ ಶ್ರವ ಇಚ್ಛಮಾನಃ" ಎಂಬಲ್ಲಿ ಪ್ರಶಂಸಾ ಎಂಬ ಅರ್ಥದಲ್ಲಿ (ನಿ. ೯-೧೧) ಪ್ರಯುಕ್ತವಾಗಿದೆ. **ಶ್ರವ ಇತ್ಯನ್ನನಾಮ ಶ್ರೂಯತ ಇತಿಸತಃ** (ನಿ. ೧೦-೩) ಎಂದು ಅನ್ನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಸಾಯಣರು, ಅಗ್ನಿಯು ದೇವತೆಗಳನ್ನು ಹವಿಷ್ಪ್ರದಾನದಿಂದ ಪೋಷಿಸುವವನು ಮತ್ತು ಪ್ರಭೂತವಾದ ಅನೇಕವಿಧವಾದ ಅನ್ನದಿಂದ ಕೂಡಿದವನಾಗಿರುವನು ; ಆದ್ದರಿಂದ ಯಜ್ಞಮಾಡುವ ಯಜಮಾನರನ್ನೂ ಬಹುವಿಧವಾದ ಅನ್ನದಿಂದ ಕೂಡಿದವರನ್ನಾಗಿ ಮಾಡಲಿ ಎಂದು ಆಶಿಸಿದೆ ಎಂದು ಅರ್ಥವನ್ನು ಬೋಧಿಸುವ **ಅತಿಶಯೇನ ಬಹುವಿಧಾನ್ನೋಪೇತೋ ವರ್ತತೇ। ಯಸ್ಮಾದೇವಂ ತಸ್ಮಾದಸ್ಮಾನಪಿ ಬಹುವಿಧಾನ್ನೋಪೇತಾನ್ ಕರೋತು** ಎಂದು ವ್ಯಾಖ್ಯಾನವನ್ನು ಮಾಡಿರುವರು

ವ್ಯಾಕರಣಪ್ರಕ್ರಿಯಾ

ಸಾಹ್ವಾನ್— ಷಹ ಮರ್ಷಣೇ ಧಾತು. ಇದರಮೇಲೆ ಬಂದ ಲಿಟಿಗೆ ಕ್ವಸು ಆದೇಶಬಂದಾಗ ದಾಶ್ವಾನ್ಸಾಹ್ವಾನ್ಮೀಢ್ವಾಂಶ್ಚ (ಪಾ. ಸೂ. ೬-೧-೧೨) ಎಂಬುದರಿಂದ ಸಾಹ್ವಾನ್ ಎಂದು ನಿಪಾತಿತವಾದು ದರಿಂದ ಪರಸ್ಮೈಪದಿಯಾಗುತ್ತದೆ. ಇಡಾಗಮದ್ವಿತ್ವಗಳೂ ಬರುವುದಿಲ್ಲ. ಪ್ರತ್ಯಯಸ್ವರ ಉಳಿಯುತ್ತದೆ.

ಅಭಿಯುಜಃ— ಯುಜಿರ್ ಯೋಗೇ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

ಕ್ರತುಃ— ಡುಕೃಞ್ ಕರಣೇ ಧಾತು. ಕೃಞಃಕ್ರತುಃ (ಉ. ಸೂ. ೧-೭೭) ಎಂಬುದರಿಂದ ಸಿದ್ಧವಾ ಗಿದೆ. ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ತುವಿಶ್ರವಸ್ತಮಃ— ತು ವೃತ್ತಿಹಿಂಸಾಪೂರ್ತಿಷು ಧಾತು. ಇದಕ್ಕೆ ಔಣಾದಿಕ ಕಿ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಉಕಾರಕ್ಕೆ ಗುಣ ಬರುವುದಿಲ್ಲ. ಅಚಿಶ್ನುಧಾತುಭ್ರುವಾಂ—ಎಂಬುದರಿಂದ ಉವ ಙಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಶ್ರವಃ ಶ್ರು ಶ್ರವಣೇ ಧಾತು. ಶ್ರೂಯತೇ ಅನ್ನ ಮಿತಿ ಶ್ರವಃ. ಔಣಾದಿಕ ಅಸುನ್ ಪ್ರತ್ಯಯವು ಬಹುಲಗ್ರಹಣದಿಂದ ಕರ್ಮಣಿಯಲ್ಲಿ ಬರುತ್ತದೆ. ಅತಿಶ ಯೇನ ತುವಿಶ್ರವಾಃ ತುವಿಶ್ರವಸ್ತಮಃ ಅತಿಶಾಯನೇ ತಮಪ್ ಎಂಬುದರಿಂದ ತಮಪ್ ಪ್ರತ್ಯಯ. ಬಹು ವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ಅಭಿ ಪ್ರಯಾಂಸಿ ವಾಹಸಾ ದಾಶ್ವಾ ಅಶ್ನೋತಿ ಮರ್ತ್ಯಃ ।
ಕ್ಷಯಂ ಪಾವಕಶೋಚಿಷಃ ॥ ೭ ॥

ಪದಪಾಠಃ

ಅಭಿ । ಪ್ರಯಾಂಸಿ । ವಾಹಸಾ । ದಾಶ್ವಾನ್ । ಅಶ್ನೋತಿ । ಮರ್ತ್ಯಃ ।
ಕ್ಷಯಂ । ಪಾವಕಽಶೋಚಿಷಃ ॥ ೭ ॥

ಸಾಯಣಭಾಷ್ಯಂ.

ದಾಶ್ವಾನ್ ಹವಿಷಾಂ ದಾತಾ ಮರ್ತ್ಯೋ ಮನುಷ್ಯೋ ಯಜಮಾನೋ ವಾಹಸಾ ಹವಿಷಾಂ ವಾಹಕೇನಾಗ್ನಿನಾ ಪ್ರಯಾಂಸ್ಯನ್ನಾನ್ಯಭ್ಯಶ್ನೋತಿ। ಅಭಿತಃ ಸರ್ವತಃ ಪ್ರಾಪ್ನೋತಿ । ಕಿಂಚ ಪಾವಕಶೋ- ಚಿಷಃ ಶೋಧಕದೀಪ್ತೇರಗ್ನೇಃ ಸಕಾಶಾತ್ ಕ್ಷಯಂ ಗೃಹಂ ಚಾಭ್ಯಶ್ನೋತಿ ॥ ಪ್ರಯಾಂಸಿ । ಪ್ರೀಞ್ ತ- ರ್ಪಣೇ । ಅಸ್ಮಾದ್ಧಾತೋರಂತರ್ಭಾವಿತಣ್ಯರ್ಥಾದಸುನ್ಪ್ರತ್ಯಯಃ । ಪ್ರೀಣಯಂತಿ ಭಕ್ಷಮಿತಿ ಪ್ರಯಾಂ-

ಸ್ಯನ್ನಾನಿ | ವಿತ್ತಾತ್ತದಾದ್ಯುದಾತ್ತಃ | ವಾಹಸಾ | ಣಿದಿತ್ಯನುವೃತ್ತೌ ವಹಿಹಾಧಾಞ್ಭ್ಯಶ್ಛಂದಸೀತ್ಯಸುನ್ | ಣಿತ್ತ್ವಾದುಪಧಾವೃದ್ಧಿಃ | ನಿತ್ಸ್ವರಃ | ದಾಶ್ವಾನ್ | ದಾಶೃ ದಾನ ಇತ್ಯಸ್ಯ ಕ್ವಸೌ ದಾಶ್ವಾನ್ಸಾಹ್ವಾನಿತಿ ನಿಪಾತನಾದಿಡಾಗಮೋ ದ್ವಿರ್ವಚನಂ ಚ ನ ಭವತಿ | ಕ್ವಸುನ್ಪ್ರತ್ಯಯಸ್ವರಃ | ಅಶ್ನೋತಿ | ಅಶೂ ವ್ಯಾಪ್ತೌ | ವ್ಯತ್ಯಯೇನ ಪರಸ್ಮೈಪದಂ | ನಿಘಾತಃ ||

ಪ್ರತಿಪದಾರ್ಥ.

**ದಾಶ್ವಾನ್**—ಹವಿರ್ದಾತೃವಾದ | **ಮರ್ತ್ಯಃ**—ಯಜಮಾನರೂಪವಾದ ಮನುಷ್ಯನು | **ವಾಹಸಾ**—ಹವಿರ್ವಾಹಕನಾದ ಅಗ್ನಿಯಿಂದ | **ಪ್ರಯಾಂಸಿ**—ಅನ್ನಗಳನ್ನು | **ಅಭಿ ಅಶ್ನೋತಿ**—ಸರ್ವವಿಧದಿಂದಲೂ ಪಡೆಯುತ್ತಾನೆ; (ಮತ್ತು) | **ಪಾವಕಶೋಚಿಷಃ**—ಶುದ್ಧಿಕಾರಕವಾದ ತೇಜಸ್ಸುಳ್ಳ ಅಗ್ನಿಯ (ಪ್ರಸಾದದಿಂದ) | **ಕ್ಷಯಂ**—ಗೃಹವನ್ನೂ | (**ಅಭಿ ಅಶ್ನೋತಿ**—ಪಡೆಯುತ್ತಾನೆ).

ಭಾವಾರ್ಥ.

ದೇವತೆಗಳಿಗಾಗಿ ಹವಿರಾದಿಗಳನ್ನು ಅರ್ಪಿಸುವ ಯಜಮಾನನು ಹವಿರ್ವಾಹಕನೂ, ಶುದ್ಧಿಕಾರಕತೇಜೋವಿಶಿಷ್ಟನೂ ಆದ ಅಗ್ನಿಯ ಪ್ರಸಾದದಿಂದ ಅನ್ನಗಳನ್ನೂ ಮತ್ತು ಗೃಹವನ್ನೂ ಪಡೆಯುತ್ತಾನೆ.

## English Translation.

From Agni, of purifying radiance the mortal presenter (of offerings) obtains by his conveyance (of them to the gods) abundant viands and a dwelling.

ವಿಶೇಷವಿಷಯಗಳು.

**ದಾಶ್ವಾನ್—ಹವಿಷಾಂ ದಾತಾ** | ದೇವತೆಗಳಿಗೆ ಹವಿಸ್ಸಿನರೂಪವಾದ ಅನ್ನವನ್ನು ಅಗ್ನಿಯು ಕೊಡ (ವಹಿಸ)ತಕ್ಕವನೆಂದು ಅರ್ಥವನ್ನು ಹೇಳಿದೆ. ನಿರುಕ್ತಕಾರರು—

**ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆ ಗತ | ದಾಶ್ವಾಂಸೋ ದಾಶುಷಸ್ಸುತಂ |**
(ಋ ಸಂ. ೧-೩-೭)

ಈ ಋಕ್ಕನ್ನು ಉದಹರಿಸಿ **ದಾಶ್ವಾಂಸಃ**—ದತ್ತವಂತಃ ದಾನಮಾಡುವ ದಾನಶೀಲರು ಎಂದೂ, **ದಾಶುಷಃ**—**ದತ್ತವತಃ**—ದಾನಶೀಲರಿಗೆ ಎಂದೂ ಅರ್ಥವನ್ನು ವಿವರಿಸಿದ್ದಾರೆ.

**ಮರ್ತ್ಯಃ—ಮನುಷ್ಯಃ ಯಜಮಾನಃ** | ಮರ್ತ್ಯಶಬ್ದವು ಮನುಷ್ಯನಾಮಗಳಲ್ಲಿ (ನಿ.೩-೭) ಪಠಿತವಾಗಿದ್ದರೂ, ಇಲ್ಲಿ ಯಜ್ಞಮಾಡುವ ಯಜಮಾನನೆಂಬ ಅರ್ಥವು ವಿವೃತವಾಗಿದೆ.

**ವಾಹಸಾ ಪ್ರಯಾಂಸಿ ಅಭ್ಯಶ್ನೋತಿ**—ಪ್ರಯಶ್ಶಬ್ದವು **ಪ್ರೀಣಯಂತಿ ಭೋಕ್ತೄನಿತಿ ಪ್ರಯಾಂಸಿ ಅನ್ನಾನಿ** | ಭೋಜನಮಾಡುವವರನ್ನು ಸಂತೋಷಗೊಳಿಸುವುದರಿಂದ ಅನ್ನಗಳಿಗೆ ಈ ಹೆಸರು ಬಂದಿರುವುದು ಎಂದೂ, ಮತ್ತು ಅನ್ನನಾಮಗಳಲ್ಲಿ **ಪ್ರಯಸ್** ಎಂಬ ಶಬ್ದವು (ನಿ. ೩-೯) ಪಠಿತವಾಗಿರುವುದು ಎಂದೂ, ಸಾಯಣರು—**ಯಜಮಾನಃ ಹವಿಷಾಂ ವಾಹಕೇನ ಅಗ್ನಿನಾ ಅಭಿತಃ ಸರ್ವತಃ ಪ್ರಾಪ್ನೋತಿ**—ಯಜ್ಞಮಾಡುವ

ಯಜಮಾನನು ಹವಿಸ್ಸುಗಳನ್ನು ದೇವತೆಗಳಿಗಾಗಿ ಒಯ್ಯುವ ಅಗ್ನಿಯಿಂದ ಅನೇಕ ವಿಧದಿಂದ ಅನ್ನವನ್ನು ಹೊಂದುವನು ಎಂಬ ಅರ್ಥವನ್ನು ವಿವರಿಸಿದ್ದಾರೆ.

ಪಾವಕಶೋಚಿಷಃ ಕ್ಷಯಂ—ಶೋಧಕದೀಪ್ತೇಃ ಅಗ್ನೇಃ ಸಕಾಶಾತ್ ಗೃಹಂ ಚ ಅಭ್ಯಶ್ನೋತಿ। ಕ್ಷಯಶಬ್ದವು ಗೃಹನಾಮಗಳಲ್ಲಿ ಉಕ್ತವಾಗಿಲ್ಲದಿದ್ದರೂ ವಾಸಸ್ಥಾನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಯಜ್ಞಮಾಡುವ ಯಜಮಾನನು ಪರಿಶುದ್ಧಿಯನ್ನು ಉಂಟುಮಾಡುವ ಕಾಂತಿಯುಳ್ಳ ಅಗ್ನಿಯ ಅನುಗ್ರಹದಿಂದ ಶಾಶ್ವತವಾದ ವಾಸಸ್ಥಾನವನ್ನು ಪಡೆಯುತ್ತಾನೆ ಎಂದು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

ಪ್ರಯಾಂಸಿ—ಪ್ರೀಞ್ ತರ್ಪಣೇ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಸರ್ವಧಾತುಭ್ಯೋ ಅಸುನ್ ಎಂಬುದರಿಂದ ಅಸುನ್ ಪ್ರತ್ಯಯ. ಪ್ರೀಣಯಂತಿ ಭೋಕ್ತ್ರೄನಿತಿ ಪ್ರಯಾಂಸಿ ಅನ್ನಾನಿ (ತಿನ್ನುವವರನ್ನು ತೃಪ್ತಿಪಡಿಸುವುದು ಅನ್ನ). ಪ್ರತ್ಯಯವು ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ವಾಹಸಾ—ವಹ ಪ್ರಾಪಣೇ ಧಾತು. ವಹಿಹಾಧಾಞ್ಭ್ಯಶ್ಛಂದಸಿ (ಉ. ಸೂ. ೪-೬೬೦) ಎಂಬುದರಿಂದ ಅಸುನ್ ಪ್ರತ್ಯಯ. ಣಿತ್ ಎಂದು ಅನುವೃತ್ತವಾಗುವುದರಿಂದ ಇದು ಣಿತ್ತಾಗುತ್ತದೆ. ಅತಉಪಧಾಯಾಃ ಎಂಬುದರಿಂದ ಉಪಧಾವೃದ್ಧಿ. ವಾಹಸ್ ಶಬ್ದವಾಗುತ್ತದೆ. ಪ್ರತ್ಯಯವು ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

ದಾಶ್ವಾನ್—ದಾಶೃ ದಾನೇ ಧಾತು. ಇದಕ್ಕೆ ಕ್ವಸುಪ್ರತ್ಯಯವು ಬಂದಾಗ ದಾಶ್ವಾನ್ ಸಾಹ್ವಾನ್—(ಪಾ. ಸೂ. ೬-೧-೧೨) ಎಂಬುದರಿಂದ ನಿಪಾತನಮಾಡಿರುವುದರಿಂದ ದ್ವಿತ್ವ ಇಡಾಗಮ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತದೆ.

ಅಶ್ನೋತಿ—ಅಶೂ ವ್ಯಾಪ್ತೌ ಧಾತು. ವ್ಯತ್ಯಯೋಬಹುಲಂ ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಪರಿ ವಿಶ್ವಾನಿ ಸುಧಿತಾಗ್ನೇರಶ್ಯಾಮ ಮನ್ಮಭಿಃ ।
ವಿಪ್ರಾಸೋ ಜಾತವೇದಸಃ ॥ ೮ ॥

ಪದಪಾಠಃ

ಪರಿ । ವಿಶ್ವಾನಿ । ಸುऽಧಿತಾ । ಅಗ್ನೇಃ । ಅಶ್ಯಾಮ । ಮನ್ಮऽಭಿಃ ।
ವಿಪ್ರಾಸಃ । ಜಾತऽವೇದಸಃ ॥ ೮ ॥

ಸಾಯಣಭಾಷ್ಯಂ.

ಜಾತವೇದಸೋ ಜಾತಪ್ರಜ್ಞಾ ವಿಪ್ರಾಸೋ ಮೇಧಾವಿನೋ ಹೋತ್ರಾದಯೋ ವಯಮಗ್ನೇಸ್ತವ ಸಂಬಂಧಿಭಿರ್ಮನ್ಮಭಿರ್ಮನನೀಯೈಃ ಸ್ತೋಮೈರ್ವಿಶ್ವಾನಿ ಸರ್ವಾಣಿ ಸುಧಿತಾ ಸುಹಿತಾನಿ ಸುಷ್ಠು ಹಿತಾನ್ಯಭಿಲಷಿತಾನಿ ವಸೂನಿ ಪರ್ಯಶ್ಯಾಮ । ಸರ್ವತಃ ಪ್ರಾಪ್ನುಯಾಮ । ಜಾತವೇದಸ ಇತ್ಯಗ್ನೇರ್ವಾ ವಿಶೇಷಣಂ। ಜಾತಾನಿ ಸರ್ವಾಣಿ ವೇತ್ತೀತಿ ಜಾತವೇದಾಃ ಸರ್ವಜ್ಞ ಇತ್ಯರ್ಥಃ । ಏತಾದೃಶಂ ಜಾತವೇದಸ್ತ್ವಮಗ್ನೇರೇವೋಚಿತಮಿತಿ ತದ್ವಿಶೇಷಣತ್ವಂ ಯುಕ್ತಂ ॥ ಸುಧಿತಾ । ಡುಧಾಞ್ ಧಾರಣಪೋಷಣಯೋರಿತ್ಯಸ್ಮಾದ್ಧಾತೋರ್ನಿಷ್ಠಾಯಾಂ ಛಂದಸೀತ್ಯನುವೃತ್ತೌ ಸುಧಿತವಸುಧಿತೇತ್ಯಾದಿನಾ ನಿಪಾತಿತಃ । ಶೇಶ್ಛಂದಸಿ ಬಹುಲಮಿತಿ ಶೇರ್ಲುಕ್ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಅಶ್ಯಾಮ । ಅಶೂ ವ್ಯಾಪ್ತೌ । ಬಹುಲಂ ಛಂದಸೀತಿ ಶ್ನುಪ್ರತ್ಯಯಸ್ಯ ಲುಕ್ । ವ್ಯತ್ಯಯೇನ ಪರಸ್ಮೈಪದಂ । ಯಾಸುಟ್ ಪರಸ್ಮೈಪದೇಷೂದಾತ್ತ ಇತಿ ಯಾಸುಟ್ । ಲಿಙಃ ಸಲೋಪ ಇತಿ ಸಲೋಪಃ । ಅದಂತತ್ವಾಭಾವಾದಿಯೋದೇಶೋ ನ ಭವತಿ । ಸುಟಃ ಸಕಾರಸ್ಯ ನಿತ್ಯಂ ಙಿತ ಇತಿ ಲೋಪಃ । ನಿಘಾತಃ । ಮನ್ಮಭಿಃ । ಮನು ಅವಬೋಧನೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ನಿತ್ಸ್ವರಃ ॥

ಪ್ರತಿಪದಾರ್ಥ.

(ಜಾತವೇದಸಃ—ಜಾತಪ್ರಜ್ಞರೂ)। ವಿಪ್ರಾಸಃ—ಮೇಧಾವಿಗಳೂ ಆದ (ಹೋತ್ರಾದಿಗಳು) ನಾವು । ಜಾತವೇದಸಃ—ಸರ್ವಜ್ಞನಾದ । ಅಗ್ನೇಃ—ಅಗ್ನಿಯ । **ಮನ್ಮಭಿಃ**—ಸ್ತೋತ್ರಗಳಿಂದ । ವಿಶ್ವಾಣಿ—ಸಮಸ್ತವಾದ । ಸುಧಿತಾ—ಹೆಚ್ಚು ಹಿತವಾದ ಅಭಿಲಷಿತ ಧನಗಳನ್ನು । ಪರಿ ಅಶ್ಯಾಮ—ಪಡೆಯೋಣ ॥

ಭಾವಾರ್ಥ.

ಎಲೈ ಅಗ್ನಿಯೇ, ಹೋತ್ರಾದಿಲಕ್ಷಣರಾದ ಮತ್ತು ಮೇಧಾವಿಗಳಾದ ನಾವು ಸರ್ವಜ್ಞನಾದ ನಿನ್ನನ್ನು ಸ್ತುತಿಸಿ, ಅಭಿಲಷಿತವಾದ ಸಮಸ್ತ ಧನಾದಿವಸ್ತುಗಳನ್ನೂ ಪಡೆಯಲಿಚ್ಛಿಸುತ್ತೇವೆ.

English Translation.

May we, endowed with intelligence, obtaiu all good things by our praises of Agni, to whom all is known.

ವಿಶೇಷವಿಷಯಗಳು.

ಇಲ್ಲಿ ಜಾತವೇದಶ್ಶಬ್ದಕ್ಕೆ **ಜಾತಪ್ರಜ್ಞಃ ಜಾತಾನಿ ಸರ್ವಾಣಿ ವೇತ್ತಿ** ಎಂದು ಒಂದು ವಿಧವಾದ ಅರ್ಥವನ್ನು ಮಾಡಿ ಜಾತಪ್ರಜ್ಞಾಃ ವಿಪ್ರಾಃ ಎಂದು ಇನ್ನೊಂದು ವಿಧವಾದ ಅರ್ಥವನ್ನೂ **ಮಾಡಿ ಜಾತವೇದಸಃ ಅಗ್ನೇಃ** ಎಂದು ಜಾತವೇದಶ್ಶಬ್ದವನ್ನು ಅಗ್ನಿ ಪದಕ್ಕೆ ವಿಶೇಷಣಮಾಡಿರುವುದರಿಂದ ಎರಡನೆಯ ಅರ್ಥವನ್ನು ವಿವರಿಸಿದೆ. ವಿಪ್ರಾಃ ಎಂಬ ಪದವು ಮೇಧಾವಿನಾಮಗಳಲ್ಲಿ ಉಕ್ತವಾಗಿರುವುದರಿಂದ ಮೇಧಾವಿಗಳಾದ ಹೋತೃವೇ ಮೊದಲಾದ ಋತ್ವಿಜರು ಎಂಬ ಅರ್ಥವನ್ನು ವಿವರಿಸಿದೆ. ಮತ್ತು

**ಮನ್ಮಭಿಃ**— ಮನನೀಯೈಃ ಸ್ತೋಮೈಃ । ನಿರುಕ್ತಕಾರರು—

ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।
ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥
(ಋ ಸಂ. ೧-೧೬೨-೭)

ಎಂಬ ಋಕ್ಕಿನಲ್ಲಿ ಮನ್ಮ ಶಬ್ದಕ್ಕೆ ಮನನೀಯಮರ್ಥಜಾತಂ ಧ್ಯಾನಾರ್ಹವಾದವುಗಳು ಎಂದೂ,

ತಮೂ ಷು ಸಮನಾ ಗಿರಾ ಪಿತೄಣಾಂ ಚ ಮನ್ಮಭಿಃ ।
ನಾಭಾಕಸ್ಯ ಪ್ರಶಸ್ತಿಭಿರ್ಯಃ ಸಿಂಧೂನಾಮುಪೋದಯೇ ಸಪ್ತಸ್ವಸಾ ಸ ಮಧ್ಯಮೋ ನಭಂ-
ತಾಮನ್ಯಕೇ ಸಮೇ ॥ (ಋ. ಸಂ. ೮-೪೧-೨)

ಎಂಬಲ್ಲಿ ಮನನೀಯೈಃ ಮನನಾರ್ಹೈಃ ಬಹುಮತೈಃ ಸ್ತೋತ್ರೈಃ—ಧ್ಯಾನಮಾಡಿ ಪೂಜಿಸಲು ಅರ್ಹವಾದ ಸ್ತುತ್ಯವಾದ ಪ್ರಶಂಸೆಗಳಿಂದೂ ಮನ್ಮಶಬ್ದಕ್ಕೆ ಅರ್ಥವನ್ನು ಮಾಡಿದಾರೆ. ಇವರಿಂದ ದೇವತಾವಿಷಯವಾದ ಕರ್ಮಗಳನ್ನು ಆಚರಿಸುವುದರಲ್ಲಿ ಕುಶಲವಾದ ಜ್ಞಾನವನ್ನು ಹೊಂದಿರುವ ಮೇಧಾವಿಗಳಾದ ಹೋತೃವೇ ಮೊದಲಾದ ಋತ್ವಿಜರಾದ ನಾವು ಅಗ್ನಿಯ ಪೂಜ್ಯವಾದ ಮತ್ತು ಪ್ರಶಂಸಾರ್ಹವಾದ ಮಹಿಮೆಗಳಿಂದ ಅವನನ್ನು ಧ್ಯಾನ ಮಾಡಿ ಮತ್ತು ಪೂಜಿಸಿ ನಮಗೆ ಅಭಿಲಷಣೀಯವಾದ ಮತ್ತು ಹಿತವನ್ನು ಉಂಟುಮಾಡುವವುಗಳೆಲ್ಲವನ್ನೂ ಎಲ್ಲಾ ವಿಧಗಳಿಂದಲೂ ಹೊಂದೋಣ ಎಂದು ಆಶಿಸಿದೆ. ಇದು ಮೊದಲನೆಯ ಅರ್ಥ.

ಜಾತವೇದಸಃ ಎಂಬ ಪದವನ್ನು ಅಗ್ನಿಗೆ ವಿಶೇಷಣವನ್ನಾಗಿ ಹೇಳಿರುವ ಎರಡನೆಯ ಅರ್ಥದಲ್ಲಿ ಸರ್ವಜ್ಞನಾದ ಅಗ್ನಿಯು, ತನ್ನ ಮಹಿಮೆಗಳನ್ನು ತಿಳಿದು ತನ್ನನ್ನು ಪೂಜಿಸಿ ಧ್ಯಾನಮಾಡುವವರಾದ ಹೋತೃವೇ ಮೊದಲಾದ ಋತ್ವಿಜರ ಸರ್ವ (ಎಲ್ಲಾ) ವಿಧವಾದ ಇಷ್ಟಗಳನ್ನು ಸರ್ವಪ್ರಕಾರದಿಂದಲೂ ನೆರವೇರಿಸುವ ಅನುಗ್ರಹವುಳ್ಳವನಾಗಿರುವನು. ಆದ್ದರಿಂದ ಮೇಧಾವಿಗಳಾದ ಋತ್ವಿಜರಾದ ನಾವು ಅಗ್ನಿಯ ಅನುಗ್ರಹವನ್ನು ಸಂಪಾದಿಸುವುದರ ಮೂಲಕ ಇದನ್ನು ಹೊಂದೋಣ ಎಂದು ಅರ್ಥವನ್ನು ವಿವರಿಸಿ, **ಏತಾದೃಶಂ ಜಾತವೇದಸ್ತ್ವಂ ಅಗ್ನೇರೇವೋಚಿತಮಿತಿ ತದ್ವಿಶೇಷಣತ್ವಂ ಯುಕ್ತಂ**-ಈ ಪ್ರಕಾರವಾದ ಮಹಿಮೆಯುಳ್ಳ ಸರ್ವಜ್ಞತ್ವವು ಅಗ್ನಿಗೆ ಅನುರೂಪವಾಗಿರುವುದರಿಂದ ಈ ಪದವನ್ನು ಅಗ್ನಿಗೆ ವಿಶೇಷಣವನ್ನಾಗಿ ಹೇಳುವುದು ಯುಕ್ತವು ಎಂದು ಅರ್ಥವನ್ನು ವರ್ಣಿಸಿದೆ,

ವ್ಯಾಕರಣಪ್ರಕ್ರಿಯಾ.

**ಸುಧಿತಾ**—ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ **ನಿಷ್ಠಾ** ಎಂಬುದರಿಂದ **ಕ್ತ** ಪ್ರತ್ಯಯ. ಇದು ಪರವಾದಾಗ **ಛಂದಸಿ** ಎಂದು ಪೂರ್ವದಿಂದ ಅನುವೃತ್ತವಾಗುವಾಗ **ಸುಧಿತವಸುಧಿತ**—(ಪಾ. ಸೂ. ೭-೪-೪೫) ಎಂಬುದರಿಂದ ನಿಪಾತಿತವಾಗಿದೆ. ನಪುಂಸಕ ಬಹುವಚನದಲ್ಲಿ ಸುಧಿತಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಕ್ತಾಂತವಾದ ಉತ್ತರಪದ ಪರದಲ್ಲಿರುವಾಗ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸು) ಪ್ರಕೃತಿಸ್ವರ ಬರುತ್ತದೆ.

**ಅಶ್ಯಾಮ**—ಅಶೂ ವ್ಯಾಪ್ತೌ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿ ಮಸ್ ಪ್ರತ್ಯಯ ಬರುತ್ತದೆ. **ನಿತ್ಯಂಙಿತಃ** ಎಂಬುದರಿಂದ ಸಕಾರಲೋಪ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ನು) ಲುಕ್. **ಯಾಸುಟ್ಪರಸ್ಮೈಪದೇಷು** (ಪಾ. ಸೂ. ೩-೪-೧೦೩) ಎಂಬುದರಿಂದ ಪ್ರತ್ಯಯಕ್ಕೆ ಯಾಸುಟಾಗಮ. **ಲಿಙಃಸಲೋ**–

ಲೋಪೋಽನಂತ್ಯಸ್ಯ (ಪಾ. ಸೂ. ೭-೨-೨೯) ಎಂಬುದರಿಂದ ಸಕಾರಕ್ಕೆ ಲೋಪ. ಅದಂತದ ಪರದಲ್ಲಿ ಬಾರದಿರುವುದರಿಂದ ಯಾ ಎಂಬುದಕ್ಕೆ ಇಯಾದೇಶ ಬರುವುದಿಲ್ಲ. ಅಶ್ಯಾಮ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಮನ್ಮಭಿಃ— ಮನು ಅವಬೋಧನೇ ಧಾತು. ಅನ್ಯೇಭ್ಯೋಽಪಿದೃಶ್ಯಂತೇ (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

ವಿಪ್ರಾಸಃ— ಜಸ್ ಪರವಾದಾಗ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

ಸಂಹಿತಾಪಾಠಃ

ಅಗ್ನೇ ವಿಶ್ವಾನಿ ವಾರ್ಯಾ ವಾಜೇಷು ಸನಿಷಾಮಹೇ ।
ತ್ವೇ ದೇವಾಸ ಏರಿರೇ ॥ ೯ ॥

ಪದಪಾಠಃ

ಅಗ್ನೇ । ವಿಶ್ವಾನಿ । ವಾರ್ಯಾ । ವಾಜೇಷು । ಸನಿಷಾಮಹೇ ।
ತ್ವೇ ಇತಿ । ದೇವಾಸಃ । ಆ । ಈರಿರೇ ॥ ೯ ॥

ಸಾಯಣಭಾಷ್ಯಂ.

ಹೇ ಅಗ್ನೇ ವಾರ್ಯಾ ವರಣೀಯಾನಿ ಸಂಭಜನೀಯಾನಿ ವಿಶ್ವಾನಿ ಸರ್ವಾಣಿ ಧನಾನಿ ವಾಜೇಷು ಯುದ್ಧೇಷು ಸನಿಷಾಮಹೇ । ವಯಂ ಸಂಭಜಾಮಹೇ । ಯತಃ ಕಾರಣಾದ್ದೇವಾಸಃ ಪೂರ್ವಮಸ್ಮಾಭಿರಿಷ್ಟಾ ದೇವಾ ಅಸ್ಮದಭಿಮತಫಲಪ್ರದಾನಾಯ ತ್ವೇ ತ್ವಯ್ಯೈರಿರೇ । ಆ ಸಮಂತಾದಗಮನ್ । ತ್ವಯಿ ಪ್ರವಿಷ್ಟಾ ಇತ್ಯರ್ಥಃ । ಸರ್ವಥಾಪಿ ತ್ವತ್ಸಕಾಶಾತ್ ಫಲಂ ಲಭೇಮಹೀತಿ ಭಾವಃ ॥ ವಾರ್ಯಾ । ವೃಞ್ ಸಂಭಕ್ತೌ । ಋಹಲೋರ್ಣ್ಯದಿತಿ ಣ್ಯತ್ । ಶೇಶ್ಛಂದಸಿ ಬಹುಲಮಿತಿ ಶೇರ್ಲುಕ್ । ಈಡವಂದೇತ್ಯಾದಿನಾದ್ಯುದಾತ್ತಃ । ವಾಜೇಷು । ವೃಷಾದಿತ್ವಾದಾದ್ಯುದಾತ್ತಃ । ಸನಿಷಾಮಹೇ । ವನಷಣ ಸಂಭಕ್ತೌ । ಧಾತ್ವಾದೇಃ ಷಃ ಸಃ । ಲೇಟಿ ಸಿಬ್ಬಹುಲಮಿತಿ ಸಿಪ್ । ಸಿಪ ಆರ್ಧಧಾತುಕತ್ವಾದಿಡಾಗಮಃ । ಲೇಟೋಽಡಾಟಾವಿತ್ಯಡಾಗಮಃ । ವ್ಯತ್ಯಯೇನಾತ್ಮನೇಪದಂ । ನಿಘಾತಃ । ತ್ವೇ । ಯುಷ್ಮಚ್ಛಬ್ದಸ್ಯ ಸಪ್ತಮ್ಯಾಂ ತ್ವಾದೇಶಃ । ಸುಪಾಂ ಸುಲುಗಿತಿ ಶೇಆದೇಶಃ । ಶೇ । ಪಾ. ೧-೧-೧೩ । ಇತಿ ಪ್ರಗೃಹ್ಯಸಂಜ್ಞಾ । ಈರಿರೇ । ಈರ ಗತಾವಿತ್ಯಸ್ಮಾತ್ಪರಸ್ಯ ಲಿಟೋ ಝಸ್ಯ ಇರೇಜಾದೇಶಃ । ಇಜಾದೇಶ್ಚ ಗುರುಮತ ಇತ್ಯಾಮ್ನ ಭವತಿ ಮಂತ್ರತ್ವಾತ್ । ನಿಘಾತಃ ॥

### ಪ್ರತಿಪದಾರ್ಥ.

(ಹೇ) ಅಗ್ನೇ—ಎಲೈ ಅಗ್ನಿಯೇ । ದೇವಾಸಃ—(ನಮ್ಮಿಂದ ಪೂಜಿತರಾದ) ದೇವತೆಗಳೆಲ್ಲರೂ । ತ್ವೇ—ನಿನ್ನಲ್ಲಿ । ಆ ಈರಿರೇ—(ನಮಗೆ ಅಭಿಮತದಾನಮಾಡುವುದಕ್ಕೋಸ್ಕರ) ಪ್ರಾಪ್ತರಾದರು; (ಆದುದರಿಂದ) । ವಾರ್ಯಾ—(ಅಪೇಕ್ಷಣೀಯಗಳಾದ) ಶ್ರೇಷ್ಠವಾದ । ವಿಶ್ವಾನಿ—ಸಮಸ್ತಧನಗಳನ್ನೂ । ವಾಜೇಷು—ಯುದ್ಧಗಳಲ್ಲಿ । ಸನಿಷಾಮಹೇ—ಪಡೆಯೋಣ ॥

### ಭಾವಾರ್ಥ.

ಎಲೈ ಅಗ್ನಿಯೇ, ನಮ್ಮಿಂದ ಪೂಜಿತರಾದ ದೇವತೆಗಳೆಲ್ಲರೂ ನಿನ್ನಲ್ಲಿಯೇ ಸಂಗತರಾಗಿದಾರೆ; ಆದುದರಿಂದ, ಶ್ರೇಷ್ಠವಾದ ಧನಾದಿವಸ್ತುಗಳೆಲ್ಲವನ್ನೂ (ನಿನ್ನನುಗ್ರಹದಿಂದಲೇ) ಯುದ್ಧಗಳಲ್ಲಿ ಪಡೆಯಲಿಚ್ಛಿಸುತ್ತೇವೆ.

### English Translation.

May we obtain, Agni, all precious things (as booty) in battles, since the gods concentrated in you.

### ವಿಶೇಷವಿಷಯಗಳು.

**ವಾರ್ಯಾ—ವರಣೀಯಾನಿ ಸಂಭಜನೀಯಾನಿ**—ಈ ಪದವು ವಿಶ್ವಾ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ಸರ್ವರಿಂದಲೂ ಅಭಿಲಷಣೀಯವಾದುದೂ, ಅವಶ್ಯವಾಗಿ ಹೊಂದಲರ್ಹವಾದುದೂ ಆದ ಎಲ್ಲಾವಿಧವಾದ ಧನವನ್ನೂ ಅಗ್ನಿಯ ಅನುಗ್ರಹದಿಂದ ಋತ್ವಿಜರಾದ ನಾವುಗಳು ಯುದ್ಧಗಳಲ್ಲಿ ಹೊಂದುತ್ತೇವೆ ಎಂದು ಅರ್ಥವನ್ನು ಹೇಳಿದೆ.

**ವಾಜೇಷು—ಯುದ್ಧೇಷು** । ವಾಜಶಬ್ದವು ಅನ್ನನಾಮಗಳಲ್ಲಿ (ನಿ. ೨-೭)ಯೂ, ವಾಜೇ ಎಂದು ಸಂಗ್ರಾಮನಾಮಗಳಲ್ಲಿ (೨-೧೭)ಯೂ, **ವಾಜೇ ಸಂಸ್ಕೃತೇ ಹವಿಷಿ** (ನಿ. ೧೦-೩೪) ಸಂಸ್ಕಾರಮಾಡಿದ ಶುದ್ಧವಾದ ಹವಿಸ್ಸು ಎಂದೂ, ವಾಜ ಎಂದು ಒಬ್ಬನ ಹೆಸರೆಂದೂ, (ನಿ. ೧೧-೧೭) **ವಾಜಿನೀವತೀ—ಹವಿಷಾ ಉದಕೇನ ವಾ ತದ್ವತೀ** (ನಿ. ೧೧-೨೭) ಹವಿಸ್ಸು ಉದಕ ಎಂದೂ (**ನಾನಾರ್ಥ**) ಅನೇಕಾರ್ಥಗಳನ್ನು ಬೋಧಿಸುವುದಾಗಿ ಪಠಿತವಾಗಿದೆ. ಇಲ್ಲಿ ಯುದ್ಧವೆಂಬ ಅರ್ಥವನ್ನು ಸಾಯಣರು ವರ್ಣಿಸಿದ್ದಾರೆ.

**ದೇವಾಸಃ ಏರಿರೇ — ಪೂರ್ವಮಸ್ಮಾಭಿರಿಷ್ಟಾ ದೇವಾಃ ಅಸ್ಮದಭಿಮತಫಲಪ್ರದಾನಾಯ ಸಮಂತಾದಾಗಮನ್ ತ್ವಯಿ ಪ್ರವಿಷ್ಟಾಃ ಸರ್ವಥಾಪಿ ತ್ವತ್ಸಕಾಶಾತ್ ಫಲಂ ಲಭೇಮಹಿ.** ಈ ವಾಕ್ಯದಲ್ಲಿರುವ ದೇವಾಃ ಎಂಬ ಪದಕ್ಕೆ ಋತ್ವಿಜರಾದವರಿಗೆ ಇಷ್ಟಗಳನ್ನು ನೆರವೇರಿಸಿಕೊಡುವ ದೇವತೆಗಳು ಎಂದು ಅರ್ಥವನ್ನು ಮಾಡಿ, ಆ ದೇವತೆಗಳೆಲ್ಲರೂ, ಇಷ್ಟವನ್ನು ಅನುಗ್ರಹಿಸುವುದಕ್ಕಾಗಿ ಯಾಗಮಾಡುವ ಪೂರ್ವದಲ್ಲಿಯೇ ಅಗ್ನಿಯನ್ನು ಪ್ರವೇಶಿಸಿರುವಕಾರಣ ಅಗ್ನಿಯೇ ಸರ್ವದೇವತಾತ್ಮಕನಾಗಿರುವನೆಂದು ವಿವರಿಸಿದೆ. ಈ ವಿಧವಾದ ಪ್ರಭೂತವಾದ ಮಾಹಾತ್ಮ್ಯಪೂರಿತನಾದ ಅಗ್ನಿಯ ಅನುಗ್ರಹದಿಂದಲೇ ಯಜಮಾನರೇ ಮೊದಲಾದ ಋತ್ವಿಜರಿಗೆ ಸರ್ವವಿಧವಾದ ಫಲವೂ ಲಭಿಸುವುದಾಗಿರುವಕಾರಣ ಅದನ್ನು ಹೊಂದುತ್ತೇವೆ ಎಂದು ಆಶಿಸಿದೆ.

### ವ್ಯಾಕರಣಪ್ರಕ್ರಿಯಾ.

**ವಾರ್ಯಾ**—ವೃಙ್ ಸಂಭಕ್ತೌ ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಇದಕ್ಕೆ **ಣ್ಯತ್** ಪ್ರತ್ಯಯ. ಇದು ಣಿತ್ತಾಗುದರಿಂದ **ಅಚೋಞ್ಣಿತಿ** ಎಂಬುದರಿಂದ ಪೂರ್ವಕ್ಕೆ ವೃದ್ಧಿ,

ರಪರವಾಗಿ ಬರುತ್ತದೆ. ನಪುಂಸಕ ಬಹುವಚನದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಈಡವಂದವೃ—(ಪಾ. ಸೂ. ೬-೨-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ವಾಜೇಷು—ಇದು ವೃಷಾದಿಯಲ್ಲಿ ಸೇರಿರುವುದರಿಂದ ವೃಷಾದೀನಾಂಚ (ಪಾ. ಸೂ ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸನಿಷಾಮಹೇ—ವನ ಷಣ ಸಂಭಕ್ತೌ ಧಾತು. ಧಾತ್ವಾದೇಃಷಃಸಃ (ಪಾ. ಸೂ. ೬-೧-೬೪) ಎಂಬುದರಿಂದ ಆದಿಯ ಷಕಾರಕ್ಕೆ ಸತ್ವ. ಲೇಟ್. ವ್ಯತ್ಯಯೋಬಹುಲಮ್ ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಉತ್ತಮಪುರುಷಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿತಆತ್ಮನೇಪದಾನಾಂ ಟೇರೇ ಎಂಬುದರಿಂದ ಟಿಗೆ (ಇ) ಏತ್ವ. ಲೇಟೋಽಡಾಟೌ (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಸಿಬ್ಬಹುಲಂ ಲೇಟಿ (ಪಾ. ಸೂ. ೩-೪-೩೪) ಎಂಬದರಿಂದ ಅದಕ್ಕೆ ಸಿಪ್. ಇದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ ಆರ್ಧಧಾತುಕಸ್ಯೇಡ್ವಲಾದೇಃ ಎಂಬುದರಿಂದ ಇಡಾಗಮ. ಆದೇಶಪ್ರತ್ಯಯಯೋಃ ಎಂಬುದರಿಂದ ಅದಕ್ಕೆ ಷತ್ವ. ಸನಿಷಾಮಹೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

ತ್ವೇ—ಯುಷ್ಮದ್ ಶಬ್ದ. ಸಪ್ತಮೀಏಕವಚನಾಂತವಾದಾಗ ಸುಪಾಂಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಶೇ ಆದೇಶ. ಮಪರ್ಯಂತಕ್ಕೆ ತ್ವಾದೇಶ. ಶೇ (ಪಾ. ಸೂ. ೧-೧-೧೩) ಎಂಬುದರಿಂದ ಪ್ರಗೃಹ್ಯ ಸಂಜ್ಞಾ ಬರುತ್ತದೆ.

ಈರಿರೇ—ಈರ ಗತೌ ಧಾತು. ಲಿಟ್ ಪ್ರಥಮಪುರುಷಬಹುವಚನಕ್ಕೆ ಲಿಟಸ್ತಝಯೋರೇಶಿರೇಚ್ (ಪಾ. ಸೂ. ೩-೪-೮೧) ಎಂಬುದರಿಂದ ಇರೇಚ್ ಆದೇಶ. ಮಂತ್ರದಲ್ಲಿ ನಿಷೇಧಮಾಡಿರುವುದರಿಂದ ಇಜಾದೇಶ್ಚಗುರುಮ—(ಪಾ. ಸೂ. ೩-೧-೩೬) ಎಂಬುದರಿಂದ ಆಮ್ ಬರುವುದಿಲ್ಲ. ದ್ವಿತ್ವ, ದೀರ್ಘಾದಿ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಹನ್ನೊಂದನೆಯ ಸೂಕ್ತವು ಸಮಾಪ್ತವು

---

# ಹನ್ನೆರಡನೆಯ ಸೂಕ್ತವು

ಸಾಯಣಭಾಷ್ಯಂ.

ಇಂದ್ರಾಗ್ನೀ ಇತಿ ನವರ್ಚಂ ದ್ವಾದಶಂ ಸೂಕ್ತಂ ವೈಶ್ವಾಮಿತ್ರಸ್ಯೈಂದ್ರಾಗ್ನಂ । ತಥಾ ಚಾನುಕ್ರಮ್ಯತೇ । ಇಂದ್ರಾಗ್ನೀ ಐಂದ್ರಾಗ್ನಮಿತಿ । ಗಾಯತ್ರಂ ತ್ವಿತಿ ತುಶಬ್ದಾದಿದಮಪಿ ಸೂಕ್ತಂ ಗಾಯತ್ರಂ । ಇಂದ್ರಾಗ್ನೀ ದೇವತಾ ॥ ಅಭಿಪ್ಲವಿಕೇಷ್ವಹಃಸು ಪ್ರಾತಃಸವನೇಽಚ್ಛಾವಾಕಶಸ್ತ್ರ ಆನಾಪಾರ್ಥಮಿದಂ ಸೂಕ್ತಂ । ಅಭಿಪ್ಲವಪೃಷ್ಠ್ಯಾಹಾನೀತಿ ಖಂಡೇ ಸೂತ್ರಿತಂ । ಇಂದ್ರಾಗ್ನೀ ಆ ಗತಂ ತಾ ಹುವೇ ಯಯೋರಿದಂ । ಆ. ೭-೫ । ಇತಿ ॥ ಅಗ್ನಿಷ್ಟೋಮೇಽಚ್ಛಾವಾಕಶಸ್ತ್ರ ಇಂದ್ರಾಗ್ನೀ ಆ ಗತಮಿತಿ ಸ್ತೋತ್ರಿಯಸ್ತೃಚಃ । ತಸ್ಯೈವಾಚ್ಛಾವಾಕಸ್ಯಾದ್ಯಾ ಶಸ್ತ್ರಯಾಜ್ಯಾ । ಇಂದ್ರಾಗ್ನೀ ಆ ಗತಂ ಸುತಮಿತಿ ಯಾಜ್ಯಾ ।

ಆ. ೫.೧೦ । ಇತಿ ಸೂತ್ರಿತತ್ವಾತ್ ॥ ಚತುರ್ವಿಂಶೇಽಹನಿ ಪ್ರಾತಃಸವನೇಽಚ್ಛಾವಾಕಶಸ್ತ್ರ ಇಂದ್ರಾಗ್ನೀ ಆ ಗತಂ ಸುತಮಿತಿ ಷಳಹಸ್ತೋತ್ರಿಯಃ ಇಂದ್ರಾಗ್ನೀ ಆ ಗತಮಿಂದ್ರೇ ಅಗ್ನಾ ನಮೋ ಬೃಹತ್ । ಆ. ೭.೨ । ಇತಿ ಸೂತ್ರಿತಂ ॥ ಅಗ್ನಿಷ್ಟೋಮಾಚ್ಛಾವಾಕಶಸ್ತ್ರೇ ತೋಶಾ ವೃತ್ರಹಣಾ ಹುವ ಇತ್ಯಾದ್ಯಾಸ್ತಿಸ್ರಃ । ಸೂತ್ರಿತಂ ಚ । ತೋಶಾ ವೃತ್ರಹಣಾ ಹುವ ಇತ್ಯಾದ್ಯಾಸ್ತಿಸ್ರಃ । ಆ. ೫-೧೦ । ಇತಿ ॥ ಅಗ್ನಿಷ್ಟೋಮೇಽಚ್ಛಾವಾಕಶಸ್ತ್ರ ಇಂದ್ರಾಗ್ನೀ ಅಪಸಸ್ಪರೀತ್ಯನುರೂಪಃ । ಸೂತ್ರಿತಂ ಚ । ಇಂದ್ರಾಗ್ನೀ ಆ ಗತಂ ಸುತಮಿಂದ್ರಾಗ್ನೀ ಅಪಸಸ್ಪರಿ । ಆ ೫.೧೦ । ಇತಿ ॥

ಅನುವಾದವು— ಇಂದ್ರಾಗ್ನೀ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರ ಮತ್ತು ಅಗ್ನಿಯು ದೇವತೆಗಳು; ಅನುಕ್ರಮಣಿಕೆಯಲ್ಲಿ— ಇಂದ್ರಾಗ್ನೀ ಐಂದ್ರಾಗ್ನಂ ಎಂದು ಹೇಳಿರುವುದು. ತು ಶಬ್ದಪ್ರಯೋಗವಿರುವುದರಿಂದ ಹಿಂದಿನ ಸೂಕ್ತದಂತೆ ಈಸೂಕ್ತವೂ ಗಾಯತ್ರೀಛಂದಸ್ಕವೆಂದು ಸೂಚಿತವಾಗುವುದು. ಅಭಿಪ್ಲವಸಂಬಂಧವಾದ ಯಾಗದಿವಸಗಳಲ್ಲಿ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ-ಶಸ್ತ್ರಮಂತ್ರಗಳ ಆವಾಪಾರ್ಥವಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ ಅಭಿಪ್ಲವಸ್ಯಷ್ಷ್ಯಹಾನಿ ಎಂಬ ಖಂಡದ ಇಂದ್ರಾಗ್ನೀ ಆ ಗತಂ ತಾ ಹುವೇ ಯಯೋರಿದಂ ಎಂಬ ಸೂತ್ರದಿಂದ ವಿವೃತವಾಗಿರುವುದು(ಆ. ೭-೫); ಅಗ್ನಿಷ್ಟೋಮ ಯಾಗದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಇಂದ್ರಾಗ್ನೀ ಆ ಗತಂ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಸ್ತೋತ್ರಿಯಸ್ತೃಚವನ್ನಾಗಿಯೂ ಮತ್ತು ಇಂದ್ರಾಗ್ನೀ ಆ ಗತಂ ಎಂಬ ಋಕ್ಕನ್ನು ಶಸ್ತ್ರಮಂತ್ರದ ಮೊದಲನೇ ಯಾಜ್ಯಾಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನಶ್ರೌತ್ರಸೂತ್ರದ ಇಂದ್ರಾಗ್ನೀ ಆ ಗತಂ ಸುತಮಿತಿ ಯಾಜ್ಯಾ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೧೦); ಮತ್ತು ಯಾಗದ ಇಪ್ಪತ್ತನಾಲ್ಕನೆಯ ದಿವಸದಲ್ಲಿ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಇಂದ್ರಾಗ್ನೀ ಆ ಗತಂ ಸುತಂ ಎಂಬ ಋಕ್ಕನ್ನು ಷಳಹ ಸ್ತೋತ್ರೀಯಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶೌತ್ರಸೂತ್ರದ ಇಂದ್ರಾಗ್ನೀ ಆ ಗತಮಿಂದ್ರೇ ಅಗ್ನಾ ನಮೋ ಬೃಹತ್ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭.೨); ಮತ್ತು ಅಗ್ನಿಷ್ಟೋಮ ಯಾಗದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಈ ಸೂಕ್ತದ ತೋಶಾ ವೃತ್ರಹಣಾ ಹುವೇ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಶಸ್ತ್ರಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶೌತ್ರಸೂತ್ರದ ತೋಶಾ ವೃತ್ರಹಣಾ ಹುವಾ ಇತ್ಯಾದ್ಯಾಸ್ತಿಸ್ರಃ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೧೦) ಮತ್ತು ಅಗ್ನಿಷ್ಟೋಮ ಯಾಗದಲ್ಲಿ ಅಚ್ಛಾವಾಕಋತ್ವಿಜನು ಶಸ್ತ್ರಮಂತ್ರಪಠನಕಾಲದಲ್ಲಿ ಇಂದ್ರಾಗ್ನೀ ಆ ಗತಂ ಸುತಂ ಎಂಬ ಸೂಕ್ತದ ಮೊದಲನೆಯ ಋಕ್ಕನ್ನೂ ಇಂದ್ರಾಗ್ನೀ ಅಪಸಸ್ಪರಿ ಎಂಬ ಏಳನೆಯಋಕ್ಕನ್ನೂ ಅನುರೂಪಋಕ್ಕುಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಇಂದ್ರಾಗ್ನೀ ಆಗತಂ ಸುತಮಿಂದ್ರಾಗ್ನೀ ಅಪಸಸ್ಪರಿ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೧೦).

## ಸೂಕ್ತ—೧೨

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೧೨ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧೧, ೧೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

ಋಷಿಃ—ವಿಶ್ವಾಮಿತ್ರಃ ॥

ದೇವತಾ—ಇಂದ್ರಾಗ್ನೀ ॥

ಛಂದಃ—ಗಾಯತ್ರೀ ॥

ಸಂಹಿತಾಪಾಠಃ

ಇಂದ್ರಾಗ್ನೀ ಆ ಗತಂ ಸುತಂ ಗೀರ್ಭಿರ್ನಭೋ ವರೇಣ್ಯಂ ।
ಅಸ್ಯ ಪಾತಂ ಧಿಯೇಷಿತಾ ॥ ೧ ॥

ಪದಪಾಠಃ

ಇಂದ್ರಾಗ್ನೀ ಇತಿ । ಆ । ಗತಂ । ಸುತಂ । ಗೀಃಭಿಃ । ನಭಃ । ವರೇಣ್ಯಂ ।
ಅಸ್ಯ । ಪಾತಂ । ಧಿಯಾ । ಇಷಿತಾ ॥ ೧ ॥

ಸಾಯಣಭಾಷ್ಯಂ.

ಇಂದ್ರಶ್ಚಾಗ್ನಿಶ್ಚೇಂದ್ರಾಗ್ನೀ ಹೇ ಇಂದ್ರಾಗ್ನೀ ದೇವೌ ಸುತಮಭಿಷವಾದಿಸಂಸ್ಕಾರೈಃ ಸಂಸ್ಕೃತಮತ ಏವ ವರೇಣ್ಯಂ ವರಣೀಯಂ ಸಂಭಜನೀಯಮಿಮಂ ಸೋಮಂ ಪ್ರತಿ ಗೀರ್ಭಿರಸ್ಮದೀಯಾಭಿಃ ಸ್ತುತಿರೂಪಾಭಿರ್ವಾಗ್ಭಿರಾಹುತೌ ಸಂತೌ ನಭೋ ನಭಸಃ ಸ್ವರ್ಗಸ್ಥಾನಾದಾಗತಂ । ಆಗಚ್ಛತಂ । ಆಗತ್ಯ ಚ ಧಿಯಾಸ್ಮಾಭಿಃ ಕ್ರಿಯಮಾಣೇ ಕರ್ಮಣೇಷಿತಾ ಪ್ರೇರಿತೌ ಯುವಾಮಸ್ಯ ಪಾತಂ । ಇಮಂ ಸೋಮಂ ಪಿಬತಂ । ಯದ್ವಾ ಧಿಯಾಸ್ಮದೀಯಯಾ । ಬುದ್ಧ್ಯೇಷಿತೌ ಪ್ರಾಪ್ತಾವಸ್ಮದ್ಭಕ್ತ್ಯಾ ಪ್ರೇರಿತೌ ಯುವಾಮಿಮಂ ಸೋಮಂ ಪಿಬತಂ ॥ ಇಂದ್ರಾಗ್ನೀ । ಇಂದ್ರಶ್ಚಾಗ್ನಿಶ್ಚ ದ್ವಂದ್ವೇ ಘಿ । ಪಾ. ೨-೨-೩೨ । ಇತ್ಯಗ್ನಿಶಬ್ದಸ್ಯ ಪೂರ್ವನಿಪಾತೇ ಪ್ರಾಪ್ತೇ ಅಜಾದ್ಯದಂತಂ । ಪಾ. ೨-೨-೩೩ । ಇತೀಂದ್ರಶಬ್ದಸ್ಯ ಪೂರ್ವನಿಪಾತಃ । ಪಾದಾದಿತ್ವಾನ್ನಿಘಾತಪ್ರತಿಷೇಧಃ । ಷಾಷ್ಠಿಕಸ್ವರಃ । ಗತಂ । ಗಮ್ಲೃ ಸೃಪ್ಲೃ ಗತೌ । ಬಹುಲಂ ಛಂದಸೀತಿ ಶಪೋ ಲುಕಿ ಅನುದಾತ್ತೋಪದೇಶೇತ್ಯಾದಿನಾ ಮಕಾರಲೋಪಃ । ನಿಘಾತಃ । ವರೇಣ್ಯಂ । ವೃಙ್ ಸಂಭಕ್ತೌ । ವೃಞ ಏಣ್ಯಃ । ವೃಷಾದಿತ್ವಾದಾದ್ಯುದಾತ್ತಃ । ಪಾತಂ । ಪಾ ಪಾನೇ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ನ ಪಿಬಾದೇಶಃ । ಇಷಿತಾ । ಇಷ ಗತಾವಿತ್ಯಸ್ಮಾದ್ಧಾತೋರ್ನಿಷ್ಠಾಯಾಂ ತೀಷಸಹೇತೀಡಾಗಮಃ । ಅಗವಾ ಅನುದಾತ್ತಾ ಇತೀಟೋಽನುದಾತ್ತತ್ವಾತ್ ಕ್ತಸ್ವರಃ ಶಿಷ್ಯತೇ ॥

### ಪ್ರತಿಪದಾರ್ಥ.

(ಹೇ) ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ | **ಸುತಂ**—ಅಭಿಷವಾದಿ ಸಂಸ್ಕಾರಗಳಿಂದ ಸಂಸ್ಕೃತವೂ | **ವರೇಣ್ಯಂ**—(ಆದುದರಿಂದಲೇ) ಗ್ರಾಹ್ಯವಾದುದೂ (ಆದ ಈ ಸೋಮರಸವನ್ನುದ್ದೇಶಿಸಿ) | **ಗೀರ್ಭಿಃ**—(ನಮ್ಮ ಸ್ತುತಿರೂಪವಾದ) ಈ ವಾಕ್ಯಗಳಿಂದ (ಆಹೂತರಾಗಿ) | **ನಭಃ**—(ಸ್ವಸ್ಥಾನವಾದ) ಸ್ವರ್ಗಲೋಕದಿಂದ | **ಆ ಗತಂ**—ಆಗಮಿಸಿ; (ಅನಂತರ) | **ಧಿಯಾ**—ನಮ್ಮಿಂದ ಕೃತವಾದ ಕರ್ಮದಲ್ಲಿ | ಅಥವಾ ನಮ್ಮ ಬುದ್ಧಿಯಿಂದ (ಭಕ್ತಿಯಿಂದ) | **ಇಷಿತಾ**—ಪ್ರೇರಿತರಾಗಿ (ನೀವಿಬ್ಬರೂ) | **ಅಸ್ಯ**—ಈ ಸೋಮರಸವನ್ನು | **ಪಾತಂ**—ಪಾನಮಾಡಿ ||

### ಭಾವಾರ್ಥ.

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಅಭಿಷವಾದಿ ಸಂಸ್ಕಾರಗಳಿಂದ ಸಂಸ್ಕೃತವಾದುದರಿಂದ ಗ್ರಾಹ್ಯವಾದ ಈ ಸೋಮರಸವನ್ನುದ್ದೇಶಿಸಿ, ನಮ್ಮ ಸ್ತುತಿಗಳಿಂದ ಆಹೂತರಾಗಿ ನಿಮ್ಮ ಸ್ಥಾನವಾದ ಸ್ವರ್ಗಲೋಕದಿಂದ ಆಗಮಿಸಿ, ನಮ್ಮ ಭಕ್ತಿಗೆ ಮೆಚ್ಚಿ, ಈ ಸೋಮರಸವನ್ನು ಪಾನಮಾಡಿ.

### English Translation.

Indra and Agni, come to this acceptable libation, (brought) by our praises from heaven, and induced by (our) devotion to drink of it.

### ವಿಶೇಷವಿಷಯಗಳು.

**ಸುತಂ**—ಅಭಿಷವಾದಿಸಂಸ್ಕಾರೈಃ ಸಂಸ್ಕೃತಂ—ಯಜ್ಞವನ್ನು ಆಚರಿಸುವವರು ಸೋಮಲತೆಯನ್ನು ಯಜ್ಞಕ್ಕಾಗಿ ತರುವಾಗ ಅದನ್ನು ಮಂತ್ರಗಳಿಂದ ಸಂಸ್ಕರಿಸುವರು. ಅದನ್ನು ತಂದನಂತರ ಅದರಿಂದ ರಸವನ್ನು ಕಲ್ಲುಗಳಿಂದ ಜಜ್ಜಿ ತೆಗೆಯುವಾಗ ಮಂತ್ರಗಳನ್ನು ಹೇಳಿ ರಸವನ್ನು ಹಿಂಡುವರು. ಇದರಿಂದ ಸೋಮರಸವು ಸಂಸ್ಕೃತವಾಗಿರುವುದೆಂದು ಇಲ್ಲಿ ವರ್ಣಿತವಾಗಿದೆ.

**ವರೇಣ್ಯಂ**—ವರಣೀಯಂ ಸಂಭಜನೀಯಂ—ಅಭಿಲಷಣೀಯವಾದುದು ಅಥವಾ ಅವಶ್ಯವಾಗಿ ಹೊಂದಲರ್ಹವಾದುದು ಎಂದರ್ಥ. ನಿರುಕ್ತಕಾರರು—

**ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ |**
**ವಿ ನಾಕಮಖ್ಯತ್ ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ||**
**(ಋ. ಸಂ. ೫-೮೧-೨)**

ಎಂಬಲ್ಲಿ ವರೇಣ್ಯಂ ಎಂಬ ಪದಕ್ಕೆ ವರಣೀಯಂ ಎಂದು ಅರ್ಥವನ್ನು ವಿವರಿಸಿದ್ದಾರೆ.

ಗೀರ್ಭಿಃ—ಅಸ್ಮದೀಯಾಭಿಃ ಸ್ತುತಿರೂಪಾಭಿರ್ವಾಗ್ಭಿರಾಹೂತೌ | ಗೀಃ ಎಂಬ ಶಬ್ದವು ವಾङ್ನಾಮಗಳಲ್ಲಿ (ನಿ. ೨-೨೩) ಉಕ್ತವಾಗಿದೆ.

**ಮಾ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ |**
**ಭೂರ್ಣಿಂ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್ ||**
**(ಋ. ಸಂ. ೮-೧-೨೦)**

ಇಲ್ಲಿ ಸ್ತುತ್ಯಾ ಗೀತ್ಯಾ-ಸ್ತುತಿಯಿಂದ ಅಥವಾ ಗಾನದಿಂದ ಎಂದು ಅರ್ಥವನ್ನು ವರ್ಣಿಸಿದೆ. ಮತ್ತು—

**ತಮಿದ್ವರ್ಧಂತು ನೋ ಗಿರೋ ವತ್ಸಂ ಸಂಶಿಶ್ವರೀರಿವ ।**
**ಯ ಇಂದ್ರಸ್ಯ ಹೃದಂಸನಿಃ ॥**

(ಋ. ಸಂ ೯-೬೧-೧೪)

ಎಂಬಲ್ಲಿ ಸ್ತುತಯಃ **ಗಿರೋ ಗೃಣಾತೇಃ**—ಗಿರಃ ಎಂಬ ಪದವು ಗೄ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಸ್ತುತಿಗಳು ಎಂದು ಅರ್ಥವನ್ನು ನಿರುಕ್ತಕಾರರು ವರ್ಣಿಸಿರುವುದರಿಂದ ಇಂದ್ರಾಗ್ನಿಗಳು ನಮ್ಮ ಸ್ತುತಿಗಳಿಂದ ಆಹೂತರಾಗಿ ನಮ್ಮ ಯಜ್ಞಕ್ಕೆ ಸ್ವರ್ಗದಿಂದ ಬರಲಿ ಎಂದು ಆಶಿಸಿದೆ.

**ಧಿಯಾ ಇಷಿತಾ ಅಸ್ಯ ಪಾತಂ—ಅಸ್ಮಾಭಿಃ ಕ್ರಿಯಮಾಣೇ ಕರ್ಮಣಿ ಪ್ರೇರಿತಾ ಯುವಾಂ ಇಮಂ ಸೋಮಂ ಪಿಬತಂ । ಯದ್ವಾ ಧಿಯಾ ಅಸ್ಮದೀಯಯಾ ಬುದ್ಧ್ಯಾ ಇಷಿತಾ ಪ್ರಾಪ್ತಾ ಅಸ್ಮದ್ಭಕ್ತ್ಯಾ ಪ್ರೇರಿತಾ ಯುವಾಮಿಮಂ ಸೋಮಂ ಪಿಬತಂ ॥** ಧೀ ಶಬ್ದಕ್ಕೆ ಕರ್ಮ, ಪ್ರಜ್ಞಾ ಎಂಬ ಎರಡು ಅರ್ಥಗಳಲ್ಲಿಯೂ ಪ್ರಯೋಗವು ಇರುವುದರಿಂದ ಇಲ್ಲಿ ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಋತ್ವಿಜರ ಸ್ತುತಿವಾಕ್ಯಗಳಿಂದ ಆಹೂತರಾಗಿರುವ ಇಂದ್ರಾಗ್ನಿಗಳು ಕರ್ಮಗಳಲ್ಲಿ ನಮ್ಮ ಸ್ತುತಿಗಳಿಂದ ಪ್ರೇರಿತರಾಗಿ ಯಜ್ಞಕ್ಕೆ ಬಂದು ಸೋಮರಸವನ್ನು ಪಾನಮಾಡಿರಿ ಎಂದು ಮೊದಲನೆಯ ಅರ್ಥ. ಅಥವಾ ಋತ್ವಿಜರಿಂದ ನಮ್ಮ ಧ್ಯಾನಕ್ಕೆ ವಿಷಯರಾಗಿ ಇಂದ್ರಾಗ್ನಿಗಳು ನಮ್ಮ ಭಕ್ತಿಯಿಂದ ಅಥವಾ ಧ್ಯಾನದಿಂದ ಪ್ರೇರಿತರಾಗಿ ಯಾಗಕ್ಕೆ ಬಂದು ಸೋಮರಸವನ್ನು ಪಾನಮಾಡಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ.

ಇಂದ್ರಾಗ್ನೀ—ಇಂದ್ರಶ್ಚ ಅಗ್ನಿಶ್ಚ ಇಂದ್ರಾಗ್ನೀ. **ದ್ವಂದ್ವೇಘಿ** (ಪಾ. ಸೂ. ೨-೨-೩೨) ದ್ವಂದ್ವಸಮಾಸದಲ್ಲಿ ಇಕಾರಾಂತಶಬ್ದವನ್ನು ಪೂರ್ವದಲ್ಲಿ ಪ್ರಯೋಗಿಸಬೇಕು ಎಂಬುದರಿಂದ ನಿಯಮ ಮಾಡಿದರೂ **ಅಜಾದ್ಯದಂತಂ** ( ಪಾ. ಸೂ. ೨-೨-೩೩ ) ಸ್ವರಾದಿಯಾಗಿಯೂ ಹ್ರಸ್ವಾಕಾರಾಂತವಾಗಿಯೂ ಇರುವ ಶಬ್ದವನ್ನು ಮೊದಲು ಹೇಳಬೇಕು ಎಂಬ ನಿಯಮವಿರುವುದರಿಂದ ಇಂದ್ರಶಬ್ದಕ್ಕೆ ಪೂರ್ವನಿಪಾತ ಬಂದಿರುತ್ತದೆ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗತಮ್**—ಗಮ್ಲೃ ಗತೌ ಧಾತು. **ಲೋಟ್** ಮಧ್ಯಮಪುರುಷದ್ವಿವಚನದಲ್ಲಿ ಛಂದಸ್ಸಿನಲ್ಲಿ ಥಸ್ ಗೆ ತಮಾದೇಶ. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಮಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ವರೇಣ್ಯಮ್**—ವೃಙ್ ಸಂಭಕ್ತೌ ಧಾತು. **ವೃಞ ಏಣ್ಯಃ** (ಉ. ಸೂ. ೨-೩೭೮) ಎಂಬುದರಿಂದ ಏಣ್ಯ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತು ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ವೃಷಾದಿಗಣದಲ್ಲಿ ಪಠಿತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪಾತಮ್**—ಪಾ. ಪಾನೇ ಧಾತು. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ತಮಾದೇಶ. **ಸರ್ವೇವಿಧಯಃಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ ಧಾತುವಿಗೆ ಪಿಬಾದೇಶ ಬರುವುದಿಲ್ಲ. **ತಿಙಂತನಿಘಾತ**ಸ್ವರ ಬರುತ್ತದೆ.

ಇಷಿತಾ— ಇಷ ಗತೌ ಧಾತು. ನಿಷ್ಠಾ (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ತೀಷಸಹಲುಭ—(ಪಾ. ಸೂ. ೭-೨-೪೮) ಎಂಬುದರಿಂದ ತಾದಿಯಾದ ಆರ್ಧಧಾತುಕವಾದುದರಿಂದ ಇಡಾಗಮ. ಆಗಮಾ ಅನುದಾತ್ತಾಃ ಎಂಬ ವಚನದಿಂದ ಇಟ್ ಅನುದಾತ್ತವಾಗುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿವಚನ (ಔ) ಪರವಾದಾಗ **ಸುಪಾಂಸುಲುಕ್** ಎಂಬುದರಿಂದ ಅದಕ್ಕೆ ಆಕಾರಾದೇಶ.

ಸಂಹಿತಾಪಾಠಃ

ಇಂದ್ರಾಗ್ನೀ ಜರಿತುಃ ಸಚಾ ಯಜ್ಞೋ ಜಿಗಾತಿ ಚೇತನಃ ।

ಅಯಾ ಪಾತಮಿಮಂ ಸುತಂ ॥ ೨ ॥

ಪದಪಾಠಃ

ಇಂದ್ರಾಗ್ನೀ ಇತಿ । ಜರಿತುಃ । ಸಚಾ । ಯಜ್ಞಃ । ಜಿಗಾತಿ । ಚೇತನಃ ।

ಅಯಾ । ಪಾತಂ । ಇಮಂ । ಸುತಂ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಜರಿತುಃ ಸ್ತೋತುಃ ಸಚಾ ಸ್ವರ್ಗಾದಿಲಕ್ಷಣಫಲಪ್ರಾಪ್ತೌ ಸಹಾಯಭೂತೋ ಯಜ್ಞೋ ಜ್ಯೋತಿಷ್ಟೋಮಾದಿಯಜ್ಞಸಾಧನಭೂತಶ್ಚೇತನ ಇಂದ್ರಿಯಾಣಾಂ ಚೇತಯಿತಾಪ್ಯಾಯನಕಾರೀ ಸನ್ ಅಸೌ ಸೋಮೋ ಜಿಗಾತಿ । ಯುವಾಮಭಿಗಚ್ಛತಿ । ಅಯಾಸ್ಮದೀಯಯಾ ಸ್ತುತಿಲಕ್ಷಣಯಾನಯಾ ವಾಚಾಹೂತೌ ಸಂತೌ ಸುತಮಭಿಷವಾದಿಸಂಸ್ಕಾರೋಪೇತಮಿಮಂ ಸೋಮಂ ಪಾತಂ । ಪಿಬತಂ ॥ ಜಿಗಾತಿ । ಗಾ ಸ್ತುತಾವಿತ್ಯಯಂ ಧಾತುರತ್ರ ಗಮನೇ ವರ್ತತೇ । ಛಂದಸಿ ಜುಹೋತ್ಯಾದಿಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ನಿಘಾತಃ । ಚೇತನಃ । ಚಿತೀ ಸಂಜ್ಞಾನೇ । ಕರ್ತರಿ ಬಹುಲವಚನಾಲ್ಲ್ಯುಟ್ । ಲಿತೀತ್ಯಾದ್ಯುದಾತ್ತತ್ವಂ । ಅಯಾ । ಇದಂಶಬ್ದಸ್ಯ ತೃತೀಯಾಯಾಃ ಸುಪಾಂ ಸುಲುಗಿತಿ ಯಾಜಾದೇಶಃ । ಅನಾದೇಶಪ್ರಾಪ್ತೌ ಹಲಿ ಲೋಪಃ । ಪಾತಂ । ಪಾ ಪಾನೇ । ನಿಘಾತಃ ॥

ಪ್ರತಿಪದಾರ್ಥ.

**(ಹೇ) ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಜರಿತುಃ**—ಸ್ತೋತೃವಿಗೆ । **ಸಚಾ**—(ಸ್ವರ್ಗಾದಿಫಲಪ್ರಾಪ್ತಿಗೆ) ಸಹಾಯಭೂತವೂ । **ಯಜ್ಞಃ**—ಜ್ಯೋತಿಷ್ಟೋಮಾದಿಯಜ್ಞಸಾಧನಭೂತವೂ । **ಚೇತನಃ**—ಇಂದ್ರಿಯಗಳಿಗೆ ಉತ್ಸಾಹ (ಆಪ್ಯಾಯನ)ಕಾರಿಯೂ (ಆದ ಈ ಸೋಮರಸವು) । **ಜಿಗಾತಿ**—(ನಿಮ್ಮನ್ನುದ್ದೇಶಿಸಿ) ಹೊರಡುತ್ತದೆ । **ಅಯಾ**—(ಅಸ್ಮದೀಯಸ್ತುತಿಲಕ್ಷಣವಾದ) ಈ ವಾಕ್ಯದಿಂದ (ಆಹೂತರಾಗಿ) । **ಸುತಂ**—ಸುಸಂಸ್ಕೃತವಾದ । **ಇಮಂ**—ಈ ಸೋಮರಸವನ್ನು । **ಪಾತಂ**—ಪಾನಮಾಡಿ ।

### ಭಾವಾರ್ಥ.

ಎಲೈ ಇಂದ್ರಾಗ್ನಿಗಳೇ, ಸ್ತೋತೃವಿಗೆ ಸ್ವರ್ಗಾದಿಫಲಪ್ರಾಪ್ತಿಗೆ ಸಹಾಯಭೂತವೂ ಜ್ಯೋತಿಷ್ಟೋಮಾದಿಯಜ್ಞಸಾಧನವೂ, ಇಂದ್ರಿಯಗಳಿಗೆ ಉತ್ಸಾಹದಾಯಕವೂ, ನಿಮ್ಮನ್ನೇ ಉದ್ದೇಶಿಸಿ ಹೊರಡುತ್ತಿರುವುದೂ, ಅಭಿಷವಾದಿಸಂಸ್ಕಾರಗಳಿಂದ ಸುಸಂಸ್ಕೃತವೂ ಆದ ಈ ಸೋಮರಸವನ್ನು ನಮ್ಮ ಸ್ತುತಿವಾಕ್ಯಗಳಿಂದ ಆಹೂತರಾಗಿ ಬಂದು ಪಾನಮಾಡಿ.

### English Translation·

Indra and Agni, the conscious sacrifice associated with the worshipper proceeds to you : (summoned) by this (invocation), drink the libation.

### ವಿಶೇಷವಿಷಯಗಳು

**ಜರಿತುಃ ಸಚಾ**—ಸ್ತೋತುಃ ಸ್ವರ್ಗಾದಿಲಕ್ಷಣಫಲಪ್ರಾಪ್ತೌ ಸಹಾಯಭೂತಃ । ಜರಿತಾ ಎಂಬ ಪದವು ಸ್ತೋತೃನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. ತತ್ರ ನೂನಂ ಸಾತೇ ಪ್ರತಿ ವರಂ ಜರಿತ್ರೇ (ಋ. ಸಂ. ೨-೧೧-೨೧) ಎಂಬಲ್ಲಿ ಜರಿತಾ, ಗರಿತಾ, ಎಂದರೆ ಸ್ತುತಿಮಾಡುವವನೆಂದು ಅರ್ಥ. ಸಚಾ— ಈ ಪದವು. **ಸಚಾ ಸಹೇತ್ಯರ್ಥಃ** ಎಂದು ಯಾಸ್ಕರಿಂದ (ನಿ. ೫-೫) ವ್ಯಾಖ್ಯಾನಮಾಡಲ್ಪಟ್ಟು,

> ಅಗ್ನಿನೇಂದ್ರೇಣ ವರುಣೇನ ವಿಷ್ಣುನಾದಿತ್ಯೈ ರುದ್ರೈರ್ವಸುಭಿಸ್ಸಚಾ ಭುವಾ ।
> ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಪಿಬತಮಶ್ವಿನಾ ॥
>
> (ಋ. ಸಂ. ೮-೩೫-೧)

ಎಂಬ ಋಕ್ಕಿನಲ್ಲಿ ವಸುಭಿಸ್ಸಹಭುವಾ—ವಸುಗಳೊಡನೆ ಇರತಕ್ಕವರೆಂದು ಸಹಾರ್ಥವನ್ನು ಬೋಧಿಸುವುದಾಗಿದೆ. ಸಾಯಣರು, ಸೋಮವು ದೇವತೆಗಳನ್ನು ಯಜ್ಞದಲ್ಲಿ ಸ್ತುತಿಮಾಡುವ ಋತ್ವಿಜರಿಗೆ ದೇವತೆಗಳ (ತೃಪ್ತಿಸಂಪಾದಕವಾಗಿರುವಕಾರಣ ಸ್ವರ್ಗವೇ ಮೊದಲಾದ ಫಲವು ಉಂಟಾಗುವಂತೆ) ಅನುಗ್ರಹವನ್ನು ಸಾಧಿಸಿಕೊಡುವುದರಲ್ಲಿ ಸಹಾಯವನ್ನು ಮಾಡುವುದೆಂದು ಅರ್ಥವನ್ನು ವಿವರಿಸಿದ್ದಾರೆ.

**ಯಜ್ಞಃ ಚೇತನಃ ಜಿಗಾತಿ**— ಈ ವಾಕ್ಯದಲ್ಲಿರುವ ಯಜ್ಞಪದವು ಯಜ್ಞನಾಮಗಳಲ್ಲಿ (ನಿ. ೩-೧೯) ಉಕ್ತವಾಗಿ ವಿವೃತವಾಗಿದ್ದರೂ, ಸಾಯಣರು **ಜ್ಯೋತಿಷ್ಟೋಮಾದಿಯಜ್ಞಸಾಧನಭೂತಃ**— ಸೋಮಲತೆಯು ಜ್ಯೋತಿಷ್ಟೋಮವೇ ಮೊದಲಾದ ಯಜ್ಞಗಳನ್ನು ಆಚರಿಸುವಾಗ ಆ ಯಜ್ಞವನ್ನು ನೆರವೇರಿಸಲು ಸಾಧನವಾಗಿರುವುದೆಂಬ ಅರ್ಥವನ್ನು ವಿವರಿಸಿ, **ಚೇತನಃ** ಎಂಬ ಪದಕ್ಕೆ **ಇಂದ್ರಿಯಾಣಾಂ ಚೇತಯಿತಾ ಆಪ್ಯಾಯನಕಾರೀ ಸನ್ ಅಸೌ ಸೋಮಃ**— ಸೋಮವು (ರಸವು) ಇಂದ್ರಿಯಗಳಿಗೆ ಪಾಟವವನ್ನು ಉಂಟುಮಾಡಿ ಮನಸ್ಸಿಗೆ ಹಿತವನ್ನು ಉಂಟುಮಾಡುವುದಾಗಿ ಇಂದ್ರಾಗ್ನಿಗಳಿಗೆ ಅರ್ಪಿತವಾಗುತ್ತದೆ ಎಂದು ಅರ್ಥವನ್ನು ವಿವರಿಸಿದ್ದಾರೆ.

**ಅಯಾ**— ಈ ಪದವು **ಅನಯಾ** ಎಂಬುದರ ಛಾಂದಸವಾದ ಶಬ್ದರೂಪವೆಂದು ದುರ್ಗಾಚಾರ್ಯರಿಂದ ವ್ಯಾಖ್ಯಾನಮಾಡಲ್ಪಟ್ಟಿದೆ. **ಅಯೇನೇತ್ಯುಪದೇಶಸ್ಯ** ಎಂದು ಯಾಸ್ಕರು (ನಿ. ೩-೨೧) ಪಾಠಮಾಡಿ, ಅಯಾ, ಏನಾ ಎಂಬ ಶಬ್ದಗಳು ಮೂರು ಲಿಂಗಗಳಲ್ಲಿಯೂ ಪ್ರಯುಕ್ತವಾಗಿವೆ ಎಂದು ಹೇಳಿದ್ದಾರೆ. **ಅಸ್ಮದೀಯಸ್ತುತಿಲಕ್ಷಣಯಾ ಅನಯಾ ವಾಚಾ ಆಹೂತೌ**—ಋತ್ವಿಜರಾದ ನಮ್ಮ ಸ್ತುತಿರೂಪವಾದ ಈ ವಾಕ್ಯಗ

ಳಿಂದ ಆಹ್ವಾನಮಾಡಲ್ಪಟ್ಟವರಾಗಿ ಎಂದು ಅರ್ಥವನ್ನು ಮಾಡಿ, ಇಂದ್ರಾಗ್ನಿಗಳು, ಅಭಿಷವ (ಹಿಂಡುವುದು) ಎಂಬಿವೇ ಮೊದಲಾದ ಸಂಸ್ಕಾರಗಳಿಂದ ಕೂಡಿದ ಸೋಮರಸವನ್ನು ಪಾನಮಾಡಲಿ ಎಂದು ಆಶಿಸಿದೆ ಎಂಬ ಅರ್ಥವನ್ನು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ.

ಜರಿತುಃ—ಜೄಷ್ ವಯೋಹಾನೌ ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಇಡಾಗಮ. ಪ್ರತ್ಯಯನಿಮಿತ್ತವಾಗಿ ಗುಣ. ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ. ಷಷ್ಠೀಏಕವಚನಾಂತರೂಪ.

ಜಿಗಾತಿ—ಗಾ ಸ್ತುತೌ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಗಮನಾರ್ಥದಲ್ಲಿ ಪ್ರಯುಕ್ತವಾಗಿದೆ. ಛಂದೋಮಾತ್ರಪ್ರಯುಕ್ತವಾದ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್. ಶ್ಲು ವಿಕರಣನಿಮಿತ್ತನಾಗಿ ಧಾತುವಿಗೆ ದ್ವಿತ್ವಾದಿ. ಬಹುಲಂಛಂದಸಿ ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಜಿಗಾತಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ಚೇತನಃ—ಚಿತೀ ಸಂಜ್ಞಾನೇ ಧಾತು. ಬಹುಲಗ್ರಹಣದಿಂದ ಕರ್ತರಿಯಲ್ಲಿ ಲ್ಯುಟ್ ಪ್ರತ್ಯಯ. ಪುಗಂತಲಘೂಪಧಸ್ಯಚ ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

ಆಯಾ—ಇದಂಶಬ್ದ. ಇದಕ್ಕೆ ತೃತೀಯಾ ಏಕವಚನ ಬಂದಾಗ ಸುಪಾಂಸುಲುಕ್—ಎಂಬುದರಿಂದ ಯಾಜಾದೇಶ. ಪ್ರಕೃತಿಗೆ ಅನಾದೇಶ ಪ್ರಾಪ್ತವಾದರೆ ಪ್ರತ್ಯಯ ಹಲಾದಿಯಾದುದರಿಂದ ಹಲಿಲೋಪಃ ಎಂಬುದರಿಂದ ಇದ್ ಎಂಬುದಕ್ಕೆ ಲೋಪ. ತ್ಯದಾದಿಯಿಂದ ಬಂದ ಅಕಾರ ಉಳಿಯುತ್ತದೆ. ಪ್ರತ್ಯಯ ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

ಪಾತಮ್—ಪಾ ಪಾನೇ ಧಾತು. ಪೂರ್ವಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ತಿಙಂತನಿಘಾತಸ್ವರ ಬರುತ್ತದೆ.

ಸುತಮ್—ಷುಞ್ ಅಭಿಷವೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಧಾತ್ವಾದಿಗೆ ಸತ್ವ. ಪ್ರತ್ಯಯ ಕಿತ್ತ್ವಾದುದರಿಂದ ಗುಣ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

ಸಂಹಿತಾಪಾಠಃ

ಇಂದ್ರಮಗ್ನಿಂ ಕವಿಚ್ಛದಾ ಯಜ್ಞಸ್ಯ ಜೂತ್ಯಾ ವೃಣೇ ।
ತಾ ಸೋಮಸ್ಯೇಹ ತೃಂಪತಾಂ ॥ ೩ ॥

### ಪದಪಾಠಃ

ಇಂದ್ರಂ । ಅಗ್ನಿಂ । ಕವಿಽಛದಾ । ಯಜ್ಞಸ್ಯ । ಜೂತ್ಯಾ । ವೃಣೇ ।
ತಾ । ಸೋಮಸ್ಯ । ಇಹ । ತೃಂಪತಾಂ ॥ ೩ ॥

### ಸಾಯಣಭಾಷ್ಯಂ.

ಅಸ್ಯ ಯಜ್ಞಸ್ಯ ಸಾಧನಭೂತಸ್ಯ ಸೋಮಸ್ಯ ಜೂತ್ಯಾ । ಜೂತಿಃ ಪ್ರೇರಣಂ । ಸೋಮಸ್ತಾವದ್ಯಜಮಾನಂ ಪ್ರೇರಯತಿ । ಸಾಧನಮುಪಲಭ್ಯ ತತ್ಸಾಧ್ಯಂ ಕ್ರತುಂ ಯಜಮಾನಃ ಪ್ರವರ್ತತ ಇತಿ ಹಿ ತಸ್ಯ ಪ್ರೇರಕತ್ವಂ । ತಯಾ ಪ್ರೇರಣರೂಪಯಾ ಜೂತ್ಯಾ ಪ್ರೇರಿತೋಽಹಂ ಕವಿಚ್ಛದಾ ಕವೀನಾಂ ಸ್ತೋತೄಣಾಮುಚಿತಫಲಪ್ರದಾನೇನೋಪಚ್ಛಂದಕಾವಿಂದ್ರಮಗ್ನಿಂ ಚ ಯುವಾಂ ವೃಣೇ । ಸೋಮಪಾನಾರ್ಥಮಿಹ ಕರ್ಮಣ್ಯಾಗಚ್ಛತಮಿತಿ ಸಂಭಜೇ । ತಾ ಆಗತೌ ಚ ತಾವಿಂದ್ರಾಗ್ನೀ ಇಹ ಕರ್ಮಣಿ ಸೋಮಸ್ಯ ಸೋಮಪಾನೇನ ತೃಂಪತಾಂ । ತೃಪ್ಯತಂ ॥ ಇಂದ್ರಂ । ಇದಿ ಪರಮೈಶ್ವರ್ಯೇ ಇತ್ಯಸ್ಮಾದ್ಧಾತೋಃ ಋಜ್ರೇಂದ್ರಾಗ್ರೇತಿ ರನ್ಪ್ರತ್ಯಯಾಂತತ್ವೇನ ನಿಪಾತನಾದಾದ್ಯುದಾತ್ತತ್ವಂ । ಕವಿಚ್ಛದಾ । ಛದಿ ಅಪವಾರಣೇ । ಅಸ್ಮಾತ್ ಕ್ವಿಪ್ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ಕೃದುತ್ತರಪದಪ್ರಕೃತಿಸ್ವರತ್ವಂ । ಜೂತ್ಯಾ । ಜೂ ಇತಿ ಸೌತ್ರೋ ಧಾತುಃ । ಅಸ್ಮಾದುದಾತ್ತ ಇತ್ಯನುವೃತ್ತಾವೂತಿಯೂತಿಜೂತೀತ್ಯಾದಿನಾ ನಿಪಾತನಾದಂತೋದಾತ್ತತ್ವಂ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ವೃಣೇ । ವೃಙ್ ಸಂಭಕ್ತೌ । ಶ್ನಾಪ್ರತ್ಯಯಃ । ಟಿತ ಆತ್ಮನೇಪದಾನಾಮಿತಿ ಟೇರೇತ್ವಂ । ನಿಘಾತಃ । ತಾ । ಸುಪಾಂ ಸುಲುಗಿತಿ ಡಾದೇಶಃ । ಸೋಮಸ್ಯ । ಷುಞ್ ಅಭಿಷವೇ । ಅಸ್ಮಾದರ್ತಿಸ್ತುಸುಹುಸೃಧೃಕ್ಷೀತ್ಯಾದಿನಾ ಮನ್ಪ್ರತ್ಯಯಃ । ನಿತ್ಸ್ವರಃ । ತೃಂಪತಾಂ । ತೃಪ ಪ್ರೀಣನೇ । ಲೋಟಿ ಮುಚಾದಿತ್ವಾನ್ನುಮಾಗಮಃ । ನಿಘಾತಃ ॥

### ಪ್ರತಿಪದಾರ್ಥ.

ಯಜ್ಞಸ್ಯ—ಯಜ್ಞಸಾಧನಭೂತವಾದ ಸೋಮರಸದ । ಜೂತ್ಯಾ—ಪ್ರೇರಣೆಯಿಂದ (ಪ್ರೇರಿತನಾದ ನಾನು) । ಕವಿಚ್ಛದಾ—ಸ್ತೋತೃಗಳ ರಕ್ಷಕರಾದ । ಇಂದ್ರಂ ಅಗ್ನಿಂ(ಚ)—ಇಂದ್ರ ಮತ್ತು ಅಗ್ನಿ ನಾಮಕರಾದ ನಿಮ್ಮಿಬ್ಬರನ್ನು । ವೃಣೇ—(ಸೋಮಪಾನಾರ್ಥವಾಗಿ ಆಗಮಿಸಿ ಎಂದು) ಪ್ರಾರ್ಥಿಸುತ್ತೇನೆ । ತಾ—(ಆರೀತಿ ಪ್ರಾರ್ಥಿತರಾಗಿ ಆಗತರಾದ) ಇಂದ್ರಾಗ್ನಿಗಳು । ಇಹ—ಈ ಕರ್ಮದಲ್ಲಿ । ಸೋಮಸ್ಯ—ಸೋಮರಸದ (ಪಾನದಿಂದ) । ತೃಂಪತಾಂ—ತೃಪ್ತಿಪಡಲಿ ॥

### ಭಾವಾರ್ಥ.

ಯಜ್ಞಸಾಧನಭೂತವಾದ ಸೋಮರಸದ ಪ್ರೇರಣೆಯಿಂದ ಉತ್ಸಾಹಿತನಾಗಿ, ನಾನು, ಸ್ತೋತೃಗಳನ್ನು ರಕ್ಷಿಸುವ ಇಂದ್ರಾಗ್ನಿ ನಾಮಕರಾದ ನಿಮ್ಮಿಬ್ಬರನ್ನು ಸೋಮಪಾನಮಾಡುವುದಕ್ಕೆ ಬರಬೇಕೆಂದು ಬೇಡುತ್ತೇನೆ. ಆಗತರಾದ ನೀವಿಬ್ಬರು ನಮ್ಮ ಈ ಯಾಗದಲ್ಲಿ ಸೋಮಪಾನಮಾಡಿ ತೃಪ್ತರಾಗಿ.

## English Translation.

Urged by the energy of the sacrifice, I have recourse to Indra and Agni, the protectors of the pious: may they be satiated with the *Soma* here presented.

### ವಿಶೇಷ ವಿಷಯಗಳು.

ಯಜ್ಞಸ್ಯ ಜೂತ್ಯಾ—ಯಜ್ಞಸಾಧನಭೂತಸ್ಯ ಸೋಮಸ್ಯ ಜೂತ್ಯಾ ಜೂತಾಃ ಪ್ರೇರಣಂ । ನಿರುಕ್ತಕಾರರು—

ತ್ಯಮೂ ಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಮ್ ।
ಅರಿಷ್ಟನೇಮಿಂ ಪೃತನಾಜಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹಾ ಹುವೇಮ ॥
(ಋ. ಸಂ. ೧೦-೧೭೮-೧)

ಎಂಬ ಋಕ್ಕನ್ನು ಉದಹರಿಸಿ ಜೂತಿರ್ಗತಿಃ ಪ್ರೀತಿರ್ವಾ ದೇವಜೂತಂ-ದೇವಗತಂ ದೇವಪ್ರೀತಂ ವಾ — ಜೂತಿ ಶಬ್ದಕ್ಕೆ ಗಮನ ಅಥವಾ ಪ್ರೀತಿ ಎಂಬ ಅರ್ಥವನ್ನು ಮಾಡಿ, ದೇವಜೂತ ಎಂದರೆ ದೇವತೆಗಳ ಗಮನ ಅಥವಾ ಪ್ರೀತಿ ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಪ್ರೇರಣ-ಪ್ರೇರಿಸುವುದು ಎಂಬ ಅರ್ಥವನ್ನು ಹೇಳಿ, ಸೋಮಸ್ತಾವತ್ ಯಜಮಾನಂ ಪ್ರೇರಯತಿ ಸಾಧನಮುಪಕ್ಲೃಪ್ತ್ಯ ತತ್ಸಾಧ್ಯಕ್ರಿಯಾ ಯಜಮಾನಃ ಪ್ರವರ್ತತ ಇತಿ ಹಿ ತಸ್ಯ ಪ್ರೇರಕತ್ವಮ್ । ಸೋಮವು ದೇವತೆಗಳಿಗೆ ಹರ್ಷವನ್ನು ಉಂಟುಮಾಡುವಕಾರಣ ಯಜ್ಞಮಾಡುವುದಕ್ಕಾಗಿ ಯಜಮಾನನನ್ನು ಪ್ರೇರಿಸುತ್ತದೆ. ಯಜ್ಞಕ್ಕೆ ಬೇಕಾಗಿರುವ ಸಾಮಗ್ರಿಗಳು ಸಿದ್ಧವಾಗಿರುವಾಗ ಅವುಗಳಿಂದಲೇ ನೆರವೇರುವ ಯಜ್ಞಾಚರಣೆಯಲ್ಲಿ ಯಜಮಾನನು ಪ್ರವೃತ್ತನಾಗುವುದರಿಂದ ಸೋಮವು ಯಜ್ಞಪ್ರೇರಕವಾಗಿರುವುದು. ಇದರಿಂದ ಯಜಮಾನನು ಪ್ರೇರಿತನಾಗಿರುವನು ಎಂಬ ಅರ್ಥವನ್ನು ವಿವರಿಸಿದ್ದಾರೆ.

ಕವಿಚ್ಛದಾ—ಕವೀನಾಂ ಸ್ತೋತೄಣಾಮುಚಿತಫಲಪ್ರದಾನೇನ ಉಪಚ್ಛಂದಕೌ । ಕವಿಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ.

ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ॥
ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ॥
(ಋ. ಸಂ. ೫-೮೧-೨)

ಇಲ್ಲಿ ಕವಿಃ ಮೇಧಾವೀ ಕ್ರಾಂತದರ್ಶನೋ ಭವತಿ ಕವತೇರ್ವಾ (ನಿ. ೧೨-೧೩) ಕುಧಾವಿನಿಂದ ನಿಷ್ಪನ್ನವಾದ ಕವಿಶಬ್ದಕ್ಕೆ ಕ್ರಾಂತದರ್ಶೀ (ಜ್ಞಾನದ ಕೊನೆಯನ್ನು ತಿಳಿದವನು.) ಎಂದೂ ಅವನು ಮೇಧಾವಿಯಾಗಿರುವನು ಎಂದೂ ಅರ್ಥವನ್ನು ವರ್ಣಿಸಿರುವಕಾರಣ ಕವಿಗಳೆಂದರೆ ಮೇಧಾವಿಗಳಾದ ಸ್ತೋತೃಗಳೆಂದು ಸಾಯಣರು ಅರ್ಥಮಾಡಿದ್ದಾರೆ. ಇಂದ್ರನೂ ಮತ್ತೂ ಅಗ್ನಿಯೂ, ತಮ್ಮನ್ನು ಸ್ತುತಿಮಾಡುವವರಿಗೆ, ಅನುರೂಪವಾದ ಫಲವನ್ನು ಅನುಗ್ರಹಿಸುವುದರಿಂದ ಅವರಿಗೆ ಉತ್ಸಾಹವನ್ನು ಹೆಚ್ಚಿಸುತ್ತಿರುವರೆಂದು ವರ್ಣಿಸಿದೆ. ಮತ್ತು ಈ ಪ್ರಕಾರವಾದ ಮಹಿಮೆಯುಳ್ಳ ಇಂದ್ರಾಗ್ನಿಗಳನ್ನು ಋತ್ವಿಜರು ಯಾಗಕ್ಕೆ ಬರಲೆಂದೂ, ಸೋಮಪಾನಾರ್ಥ-

ಮಿಹಕರ್ಮಣಿ ಆಗಚ್ಛತಮಿತಿ ಸಂಭಜೇ। ಆಗತೌ ಚ ತೌ ಇಹ ಕರ್ಮಣಿ ಸೋಮಪಾನೇನ ತೃಪ್ಯತಾಂ— ಯಜ್ಞಕ್ಕೆ ಬಂದಿರುವ ಇಂದ್ರಾಗ್ನಿಗಳು ಸೋಮಪಾನವನ್ನು ಮಾಡಿ ತೃಪ್ತರಾಗಲಿ ಎಂದೂ ಮಂತ್ರದೃಕ್ಕಾದ ಋಷಿಯ ಆಶಂಸನೆಯನ್ನು ವರ್ಣಿಸಿದೆ.

ಸೋಮಸ್ಯ—ನಿರುಕ್ತಕಾರರು, ಓಷಧಿಸ್ಸೋಮಃ ಸುನೋತೇರ್ಯದೇನಮಭಿಷುಣ್ವಂತಿ--ಸೋಮ ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಮೂಲಿಕೆಯು. ಇದನ್ನು

ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾ ಅಯುತಂ ಚ ಸಾಕಂ ।
ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥

(ಋ. ಸಂ. ೪-೨೬-೭)

ಗಾಯಿತ್ರೀ ಛಂದಸ್ಸು ಶ್ಯೇನಪಕ್ಷಿಯ ರೂಪವನ್ನು ಧರಿಸಿ ಸ್ವರ್ಗದಿಂದ ಭೂಮಿಗೆ ತಂದಿರುವುದೆಂದೂ, ಇಂದ್ರನು ಈ ಸೋಮವನ್ನು ಪಾನಮಾಡುವ ಸನ್ನಿವೇಶಗಳಿಂದ ಸಹಸ್ರಸಂಖ್ಯೆಗಳುಳ್ಳ ಯಜ್ಞಗಳನ್ನು ನೆರವೇರಿಸಿ ಯಜಮಾನರು ಅಯುತಸಂಖ್ಯಾಕವಾದ ದಕ್ಷಿಣೆಯನ್ನು ದಾನಮಾಡಿರುವರೆಂದೂ ಸೋಮದ ಮಹಾತ್ಮ್ಯವನ್ನು ವಿವರಿಸಿದ್ದಾರೆ. ಮತ್ತು ಬಹುಲಮಸ್ಯ ನೈಘಂಟುಕಂ ವೃತ್ತಂ ಆಶ್ಚರ್ಯಮಿವ ಪ್ರಾಧಾನ್ಯೇನ—ಈ ಸೋಮದ ಸ್ತುತಿಯೂ ಇದರ ಪ್ರಾಮುಖ್ಯತೆಯನ್ನು ಸೂಚಿಸುವುದಾಗಿರುತ್ತದೆ. ಮತ್ತು ಆಶ್ಚರ್ಯಜನಕವಾಗಿ ಇರುತ್ತದೆ ಎಂದು ಒಂಭತ್ತನೆಯ ಮಂಡಲದಲ್ಲಿ ಪಠಿತವಾಗಿದೆ. ಮತ್ತು ಈ ಸೋಮದ ಮಹಿಮೆಯು ಸ್ತುತಿರೂಪದಿಂದ—

ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ ।

(ಋ. ಸಂ. ೯-೧-೧)

ಎಂಬ ಈ ಋಕ್ಕಿನಲ್ಲಿ ಉಕ್ತವಾಗಿದೆ.

ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಂ ।
ಸೋಮಂ ಯಂ ಬ್ರಾಹ್ಮಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ॥

(ಋ. ಸಂ. ೧೦-೮೫-೩)

ಸೋಮ ಎಂಬ ಪದಕ್ಕೆ ಚಂದ್ರನೆಂದು ಅರ್ಥವಾಗುತ್ತದೆ. ಈ ಋಕ್ಕಿನಲ್ಲಿ ಸೋಮಲತೆ, ಚಂದ್ರ ಇವರಿಬ್ಬರನ್ನು ಸ್ತುತಿಸಿರುವುದು. ಆದರೆ, ಪ್ರಸಿದ್ಧನಾದ ಚಂದ್ರನಿಗಿಂತಲೂ ಈ ಸೋಮಕ್ಕೆ ಪ್ರಾಧಾನ್ಯವನ್ನು ಈರೀತಿಯಾಗಿ ಯಾಸ್ಕರು ವರ್ಣಿಸಿದ್ದಾರೆ.

ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಮಿತಿ ವೃಥಾಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುರಿತಿ ನ ತಸ್ಯಾಶ್ನಾತಿ ಕಶ್ಚನಾಯಜ್ವೇತ್ಯಧಿಯಜ್ಞಂ । ಅಥಾಧಿದೈವತಂ ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಮಿತಿ ಯಜುಸ್ಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುಶ್ಚಂದ್ರಮಸಂ ನ ತಸ್ಯಾಶ್ನಾತಿ ಕಶ್ಚನಾದೇವ ಇತಿ । (ನಿ. ೧೧-೪)

ರಸಾಯನಾದಿಗಳನ್ನು ಮಾಡುವವರು ಸೋಮವನ್ನು ತಂದು ರಸವನ್ನು ಹಿಂಡಿ ಪಾನಮಾಡುವರಾದರೂ, ಅವರು ಯಜ್ಞದಲ್ಲಿ ಸೋಮಪಾನಮಾಡುವ ಸೋಮಪರೆಂದು ಪ್ರಸಿದ್ಧರಾಗುವುದಿಲ್ಲವಾದುದರಿಂದ ಯಜ್ಞಾಂಗವಾಗಿ ಉಪ

ಯೋಗಿಸಲ್ಪಟ್ಟ ಕಾರಣ ಸೋಮವು ಯಜಮಾನರಿಗೆ ಮಾತ್ರವೇ ವಿಧ್ಯುಕ್ತವಾದ ರೀತಿಯಿಂದ ಸೋಮಪನೆಂಬ ಪ್ರಸಿದ್ಧಿಯನ್ನು ಉಂಟುಮಾಡುವುದೆಂದು ಸ್ತುತಿಸಿದೆ. ಅಧಿದೈವತಪಕ್ಷದಲ್ಲಿಯೂ, (ಸೋಮಪದಕ್ಕೆ ಚಂದ್ರನೆಂದು ಅರ್ಥವನ್ನು ವಿವರಿಸುವಲ್ಲಿಯೂ) ಯಜ್ಞಾಂಗವಾಗಿರುವ ಸೋಮವನ್ನು ಸೋಮಪದದಿಂದ ನಿರ್ದೇಶ ಮಾಡಿದೆ. "ಸೋಮೋ ನಾಕಮೇಷ ಯದ್ದೇವಾನಾಮನ್ನಂ" ಎಂಬ ಶ್ರುತಿವಾಕ್ಯದಿಂದ ಚಂದ್ರನು ಸೋಮಪದವಾಚ್ಯನಾಗಿದ್ದರೂ ಅವನು ದೇವತೆಗಳಿಗೆ ಮಾತ್ರವೇ ಅನ್ನವಾಗಿರುವನು. ಆದ್ದರಿಂದ ಸೋಮಂ-ಮನ್ಯತೇ ಎಂಬ ಮಂತ್ರದಿಂದ ಅಧಿಯಜ್ಞ ಅಧಿದೈವ ಎಂಬ ಎರಡುವಿಧವಾದ ಅರ್ಥವನ್ನು ಸೋಮಪದಕ್ಕೆ ಹೇಳಿದರೂ, ಓಷಧಿರೂಪವಾದ ಸೋಮಕ್ಕೇ ಯಾಜ್ಞಿಕರು ಆಚರಿಸುವ ಯಜ್ಞದಲ್ಲಿ ಪ್ರಾಧಾನ್ಯವನ್ನು ಹೇಳಿರುತ್ತದೆ.

ಯತ್ತ್ವಾ ದೇವ ಪ್ರಪಿಬಂತಿ ತತ ಆ ಪ್ಯಾಯಸೇ ಪುನಃ ।
ವಾಯುಸ್ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ॥

(ಋ. ಸಂ. ೧೦-೮೫-೫)

ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನರಿತಿ ನಾರಾಶಂಸಾನಭಿಪ್ರೇತ್ಯ ಪೂರ್ವಪಕ್ಷಾಪರಪಕ್ಷಾವಿತಿ ವಾ ವಾಯುಸ್ಸೋಮಸ್ಯ ರಕ್ಷಿತಾ ವಾಯುಮಸ್ಯ ರಕ್ಷಿತಾರಮಾಹ ಸಾಹಚರ್ಯಾತ್ ರಸಹರಣಾದ್ವಾ । ಸಮಾನಾಂ ಸಂವತ್ಸರಾಣಾಂ ಮಾಸ ಆಕೃತಿಃ ಸೋಮೋ ರೂಪವಿಶೇಷೈರೋಷಧಿಶ್ಚಂದ್ರಮಾ ವಾ ! ಅಧಿಯಜ್ಞಪರವಾದ ಅರ್ಥದಲ್ಲಿ ಸೋಮವನ್ನು ಮೂರುಸವನಗಳಲ್ಲಿಯೂ, ಯಜಮಾನರೇ ಮೊದಲಾದ ಋತ್ವಿಜರು ಪಾನಮಾಡುತ್ತಾರೆ. ಇದರಿಂದ ಈ ಸೋಮನು ಆಪ್ಯಾಯನಮಾಡುವವನಾಗಿರುವನು. ವಾಯುವು ಓಷಧಿಗಳ ರಸವನ್ನು ಹೀರುವವನಾದರೂ ಸೋಮರಸವನ್ನು ಹೀರದೇ ಇರುವುದರಿಂದ ಅದರ ರಕ್ಷಕನಾಗಿರುವನು. ಆಯುರ್ವೇದವನ್ನು ತಿಳಿದ ರಸಾಯನಕಾರರು ಈ ಸೋಮನು ಆಯಾಯ ಮಾಸದ ಶುಕ್ಲಪಕ್ಷಗಳಲ್ಲಿರುವ ತಿಥಿಗಳಿಗನುಸಾರವಾಗಿ ಪರ್ಣಗಳ (ಎಲೆಗಳ) ಅಭಿವೃದ್ಧಿಯನ್ನೂ, ಕೃಷ್ಣಪಕ್ಷಗಳಲ್ಲಿರುವ ತಿಥಿಗಳಿಗೆ ಅನುಗುಣವಾಗಿ ಪರ್ಣಗಳ (ಅಪಚಿತಿ) ಹ್ರಾಸವನ್ನೂ ಹೊಂದುವನು. ಅಧಿದೈವತಪಕ್ಷದಲ್ಲಿ ಸೋಮಪದವಾಚ್ಯನಾದ ಚಂದ್ರನು ತನ್ನ ಕಲೆಗಳಿಂದ ಆಯಾಯ ತಿಥಿಗಳಿಗನುಗುಣವಾಗಿ ದೇವತೆಗಳ ಆಪ್ಯಾಯಕನಾಗಿರುವನು. ಚಂದ್ರನ ಕಲೆಗಳನ್ನು ದೇವತೆಗಳೂ ಪಾನಮಾಡುವರು. ಆಯಾಯ ಪಕ್ಷಗಳಲ್ಲಿ ವೃದ್ಧಿಹ್ರಾಸಗಳನ್ನು ತನ್ನ ಕಲೆಗಳ ಮೂಲಕ ಚಂದ್ರನು ಹೊಂದುವನು ಎಂದು ಅಧಿಯಜ್ಞ ಅಧಿದೈವ ಎಂಬ ಎರಡು ಪ್ರಕಾರಗಳಲ್ಲಿಯೂ ಸೋಮಲತೆಗೆ ಚಂದ್ರನ (ಸಮಾನಸ್ಥಿತಿಯನ್ನು) ಸಾದೃಶ್ಯವನ್ನು ಹೇಳಿ ಸೋಮತಾದಾತ್ಮ್ಯವನ್ನು ಉಪಪಾದನೆಮಾಡಿ ಪ್ರಭೂತವಾದ ಮಾಹಾತ್ಮ್ಯಪೂರಿತವೆಂದು ಸೋಮಲತೆಯನ್ನು ಪ್ರಶಂಸಿಸಿದೆ.

ವ್ಯಾಕರಣಪ್ರಕ್ರಿಯಾ.

**ಇಂದ್ರಂ**—ಇದಿ ಪರಮೈಶ್ವರ್ಯೇ ಧಾತು. **ಋಜ್ರೇಂದ್ರಾಗ್ರ**—(ಉ. ಸೂ. ೨-೧೮೦) ಎಂಬುದರಿಂದ ರನ್ ಪ್ರತ್ಯಯಾಂತವಾಗಿ ನಿಪಾತಮಾಡಿರುವುದರಿಂದ ಆದ್ಯುದಾತ್ತವಾಗುತ್ತದೆ.

**ಕವಿಚ್ಛದಾ**—ಛದಿ ಅಪವಾರಣೇ ಧಾತು. **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಕ್ವಿಪ್. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. **ಸುಪಾಂಸುಲುಕ್** ಎಂಬುದರಿಂದ ವಿಭಕ್ತಿಗೆ (ಡಾ) ಡಾದೇಶ. ಕವಿಚ್ಛದಾ ಎಂದು ರೂಪವಾಗುತ್ತದೆ.

**ಜೂತ್ಯಾ**—ಜೂ ಎಂಬುದು ಸೂತ್ರದಲ್ಲಿ ನಿರ್ದಿಷ್ಟವಾದ ಧಾತು. **ಉದಾತ್ತಃ**—ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ನಂತವಾಗಿ ನಿಪಾತಮಾಡಿರುವುದರಿಂದ ಅಂತ ಉದಾತ್ತವಾಗುತ್ತದೆ. ತೃತೀಯಾ ಏಕವಚನದಲ್ಲಿ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ಅನುದಾತ್ತವಿಭಕ್ತಿ ಬಂದುದರಿಂದ **ಉದಾತ್ತಯಣೋ ಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಯೂ ಉದಾತ್ತವಾಗುತ್ತದೆ.

**ವೃಣೇ**—ವೃಞ್ ಸಂಭಕ್ತೌ ಧಾತು. ಕ್ರ್ಯಾದಿ. ಲಟ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಟಿತಆತ್ಮನೇಪದಾನಾಂ**—ಎಂಬುದರಿಂದ ಅದಕ್ಕೆ ಏತ್ವ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ವಿಕರಣಕ್ಕೆ ಙಿತ್ವವಿರುವುದರಿಂದ ಧಾತು ಋಕಾರಕ್ಕೆ ಗುಣ ಬರುವುದಿಲ್ಲ. ಋಕಾರದಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತಾ**—ತದ್ ಶಬ್ದ. ಪ್ರಥಮಾ ದ್ವಿವಚನಕ್ಕೆ (ಔ) **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ.

**ಸೋಮಸ್ಯ**—ಷುಞ್ ಅಭಿಷವೇ ಧಾತು. **ಅರ್ತಿಸ್ತುಸುಹುಸೃಧೃಕ್ಷಿ**—(ಉ. ಸೂ. ೧-೧೩೭) ಎಂಬುದರಿಂದ ಇದಕ್ಕೆ ಮನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ. ಪ್ರತ್ಯಯವು ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

**ತೃಂಪತಾಮ್**—ತೃಪ ಪ್ರೀಣನೇ ಧಾತು. ಲೋಟ್ ಪ್ರಥಮಪುರುಷ ದ್ವಿವಚನಕ್ಕೆ ತಾಮಾದೇಶ. ಮುಚಾದಿಯಲ್ಲಿ ಪಠಿತವಾದುದರಿಂದ **ಶೇಮುಚಾದೀನಾಮ್**—(ಪಾ. ಸೂ. ೭-೧-೫೯) ಎಂಬುದರಿಂದ ಧಾತುವಿಗೆ ನುಮಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಂಹಿತಾಪಾಠಃ**

ತೋಶಾ ವೃತ್ರಹಣಾ ಹುವೇ ಸಜಿತ್ವಾನಾಪರಾಜಿತಾ ।
ಇಂದ್ರಾಗ್ನೀ ವಾಜಸಾತಮಾ ॥ ೪ ॥

**ಪದಪಾಠಃ**

**ತೋಶಾ । ವೃತ್ರಽಹನಾ । ಹುವೇ । ಸಽಜಿತ್ವಾನಾ । ಅಪರಾಽಜಿತಾ ।**
**ಇಂದ್ರಾಗ್ನೀ ಇತಿ । ವಾಜಽಸಾತಮಾ ॥ ೪ ॥**

### ಸಾಯಣಭಾಷ್ಯಂ.

ತೋಶಾ ಶತ್ರೂಣಾಂ ಬಾಧಕೌ ವೃತ್ರಹಣಾ ವೃತ್ರಸ್ಯ ಪಾಪಸ್ಯ ಹಂತಾರೌ ಸಜಿತ್ವಾನಾ ಸಮಾನ ಜೇತಾರೌ ಪರಸ್ಪರಾಪೇಕ್ಷಯಾ ಜಯಶೀಲಾವಪರಾಜಿತಾ ಕೇನಾಪ್ಯತಿರಸ್ಕೃತಾ ವಾಜಸಾತಮಾನ್ನಸ್ಯಾತಿಶಯೇನ ದಾತಾರಾವಿಂದ್ರಾಗ್ನೀ ಯುವಾಂ ಹುವೇ । ಇಹ ಕರ್ಮಣಿ ಸೋಮಪಾನಾರ್ಥಮಹಮಾಹ್ವಯಾಮಿ ॥ ವೃತ್ರಹಣಾ । ಹನ ಹಿಂಸಾಗತ್ಯೋಃ । ಬ್ರಹ್ಮಭ್ರೂಣವೃತ್ರೇಷು ಕ್ವಿಬಿತಿ ಕ್ವಿಪ್ । ಏಕಾಜುತ್ತರಪದೇ ಣಃ । ಪಾ. ೮-೪-೧೨ । ಇತಿ ಣತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಹುವೇ । ಹ್ವಯತೇರ್ಬಹುಲಂ ಛಂದಸೀತಿ ಲುಕಿ ಸತಿ ಹ್ವಃ ಸಂಪ್ರಸಾರಣಮಭ್ಯಸ್ತಸ್ಯೇತಿ ಬಹುಲಂ ಛಂದಸೀತಿ ಸಂಪ್ರಸಾರಣಂ । ಉವಙಾದೇಶಃ । ವ್ಯತ್ಯಯೇನಾತ್ಮನೇಪದಂ । ನಿಘಾತಃ । ಸಜಿತ್ವಾನಾ । ಜಿ ಜಯೇ । ಶೀಙ್ ಕ್ರುಶಿರುಹಿಜಿಕ್ಷಿಸ್ಸೃಭ್ಯಃ । ಉ. ೪-೧೧೩ । ಇತಿ ಕ್ವನಿಪ್ । ಕಿತ್ತ್ವಾದ್ಗುಣಾಭಾವಃ । ಪಿತ್ತ್ವಾತ್ತುಗಾಗಮಃ । ಸಮಾನಸ್ಯ ಛಂದಸ್ಯಮೂರ್ಧೇತಿ ಸಮಾನಸ್ಯ ಸಭಾವಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅಪರಾಜಿತಾ । ನಞ್ಸಮಾಸೇ ತತ್ಪುರುಷೇ ತುಲ್ಯಾರ್ಥೇತಿ ಪೂರ್ವಪದಪ್ರಕೃತಿಸ್ವರತ್ವಂ । ಇಂದ್ರಾಗ್ನೀ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವೇ ಪ್ರಾಪ್ತೇ ನೋತ್ತರಪದೇಽನುದಾತ್ತಾದಾವಿತಿ ಪ್ರತಿಷೇಧಾತ್ಸಮಾಸಸ್ವರಃ । ವಾಜಸಾತಮಾ । ಷಣು ದಾನೇ । ಅಸ್ಮಾಜ್ಜನಸನಖನಕ್ರಮಗಮ ಇತಿ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾಕಾರಃ । ಅತಿಶಾಯನೇ ತಮಬಿಷ್ಠನಾವಿತಿ ತಮಪ್ । ಕೃದುತ್ತರಪದಪ್ರಕೃತಿಸ್ವರತ್ವಂ ॥

### ಪ್ರತಿಪದಾರ್ಥ

ತೋಶಾ—ಶತ್ರುಹಿಂಸಕರೂ । ವೃತ್ರಹಣಾ—ಪಾಪನಾಶಕರೂ । ಸಜಿತ್ವಾನಾ—ಸಮಾನಜಯಶಾಲಿಗಳೂ। ಅಪರಾಜಿತಾ—(ಯಾರಿಂದಲೂ)ಜಯಿಸಲಶಕ್ಯರೂ । ವಾಜಸಾತಮಾ—ಅತಿಶಯಾನ್ನದಾತೃಗಳೂ ಆದ । ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ (ನಿಮ್ಮಿಬ್ಬರನ್ನು) । ಹುವೇ—(ನಮ್ಮ ಈ ಯಾಗಕ್ಕೆ ಬಂದು ಸೋಮಪಾನಮಾಡಬೇಕೆಂದು) ಕರೆಯುತ್ತೇನೆ.

### ಭಾವಾರ್ಥ.

ಎಲೈ ಇಂದ್ರಾಗ್ನಿಗಳೇ, ಶತ್ರುಗಳಿಗೆ ಬಾಧೆಯುಂಟುಮಾಡುವವರೂ, ಪಾಪಪರಿಹಾರಕರೂ, ಸಮಾನ ಜಯಶಾಲಿಗಳೂ, ಯಾರಿಂದಲೂ ಜಯಿಸಲಶಕ್ಯರೂ, ಯಥೇಚ್ಛವಾಗಿ ಅನ್ನದಾನಮಾಡುವವರೂ ಆದ ನಿಮ್ಮಿಬ್ಬರನ್ನು ನಮ್ಮ ಈ ಯಾಗಕ್ಕೆ ಬಂದು ಸೋಮಪಾನಮಾಡಿರೆಂದು ಆಹ್ವಾನಿಸುತ್ತೇನೆ.

### English Translation.

I invoke Indra and Agni, the discomfiters of foes, the destroyers of *Vritra*, the victorious, the invincible, the bestowers of most abundant food.

### ವಿಶೇಷವಿಷಯಗಳು.

**ತೋಶಾ—ಶತ್ರೂಣಾಂ ಬಾಧಕೌ.** ಇಂದ್ರಾಗ್ನಿಗಳು ಶತ್ರುಗಳನ್ನು ನಿಗ್ರಹಿಸುವರೆಂದು ಅರ್ಥವನ್ನು ವರ್ಣಿಸಿದೆ.

ವೃತ್ರಹಣಾ—ವೃತ್ರಸ್ಯ ಪಾಪಸ್ಯ ಹಂತ್ರಾ । ನಿರುಕ್ತಕಾರರು ವೃತ್ರಶಬ್ದದ ಅರ್ಥವನ್ನು ಹೀಗೆ ವಿವರಿಸಿದ್ದಾರೆ—ತತ್ಕೋ ವೃತ್ರಃ ಮೇಘ ಇತಿ ನೈರುಕ್ತಾಃ ತ್ವಾಷ್ಟ್ರೋಽಸುರ ಇತ್ಯೈತಿಹಾಸಿಕಾಃ ಅಪಾಂ ಚ ಜ್ಯೋತಿಷಶ್ಚ ಮಿಶ್ರೀಭಾವಕರ್ಮಣೋ ವರ್ಷಕರ್ಮ ಜಾಯತೇ। ತತ್ರೋಪಮಾರ್ಥೇನ ಯುದ್ಧವರ್ಣಾ ಭವಂತಿ । ಅಹಿವತ್ತು ಖಲು ಮಂತ್ರವರ್ಣಾ ಬ್ರಾಹ್ಮಣವಾದಾಶ್ಚ । ವಿವೃದ್ಧ್ಯಾ ಶರೀರಸ್ಯ ಸ್ರೋತಾಂಸಿ ನಿವಾರಯಾಂ ಚಕಾರ । ತಸ್ಮಿನ್ ಹತೇ ಪ್ರಸಸ್ಯಂದಿರ ಆಪಃ । (ನಿ. ೨-೧೬) ವೃತ್ರಂ ಜಘ್ನಿವಾನ್ ಅಪವವಾರ ತತ್ । ವೃತ್ರೋ ವೃಣೋತೇರ್ವಾ ವರ್ತತೇರ್ವಾ ವರ್ಧತೇರ್ವಾ ಯದವೃಣೋತ್ ತದ್ ವೃತ್ರಸ್ಯ ವೃತ್ರತ್ವಂ ಇತಿ ವಿಜ್ಞಾಯತೇ । ಯದವರ್ತತ ತತ್ ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ । (ನಿ. ೨-೧೭) ಶಬ್ದಗಳ ನಿರ್ವಚನಾನುಸಾರವಾದ ಅರ್ಥವನ್ನು ವಿವರಿಸುವ ನಿರುಕ್ತವನ್ನು ಅಧ್ಯಯನಮಾಡುವವರು ನೈರುಕ್ತರೆನಿಸುವರು. ಇವರು ಮೇಘವು ವೃತ್ರ ಶಬ್ದದಿಂದ ಬೋಧ್ಯವಾಗಿರುವುದು ಎಂದು ಹೇಳುತ್ತಾರೆ. ಬದಲಿ—

ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರೇದಿತಿ ॥

ಇತಿಹಾಸಗಳು ಮತ್ತು ಪುರಾಣಗಳು ಇವುಗಳಲ್ಲಿ ಹೇಳಿರುವುದನ್ನು ವಿಮರ್ಶೆಮಾಡಿ ವೇದದ ಅರ್ಥವನ್ನು ನಿಶ್ಚಯ ಮಾಡಬೇಕು. ಕೊಂಚಮಟ್ಟಿನ ಜ್ಞಾನವುಳ್ಳವನು ವೇದದ ಅರ್ಥವನ್ನು ಹೇಳುವುದಾದರೆ ವೇದವು ಅವನಿಂದ ತನಗೆ ಅವಮಾನವಾಗುವುದೆಂದು ಭಯವನ್ನು ಹೊಂದುತ್ತದೆ ಎಂದು ಸ್ಮೃತಿವಚನವಿರುತ್ತದೆ. ತ್ವಷ್ಟೃವಿನ ಪುತ್ರನು ವೃತ್ರಾಸುರನು ಎಂದು ಬೋಧಿಸುವ ಇತಿಹಾಸವು ತೈತ್ತಿರೀಯಸಂಹಿತೆಯಲ್ಲಿಯೂ, ಶತಪಥಬ್ರಾಹ್ಮಣದಲ್ಲಿಯೂ ಉಕ್ತವಾಗಿದೆ. ಇದನ್ನು ಅನುಸರಿಸಿ ಯಾಸ್ಕರು ಮುಖ್ಯಂ ಕಾರಣತ್ವಂ ಇತಿಹಾಸಜ್ಞಾನಸ್ಯೈವ-ವೇದಾರ್ಥವನ್ನು ನಿರ್ಣಯಮಾಡುವುದರಲ್ಲಿ ಇತಿಹಾಸಜ್ಞಾನವು ಮುಖ್ಯಕಾರಣವಾಗಿದೆ ಎಂದು ಹೇಳಿದ್ದಾರೆ. ಇವರ ಮುಖ್ಯವಾದ ಅಭಿಪ್ರಾಯವು ವೇದಾರ್ಥವನ್ನು ನಿರ್ಣಯಮಾಡುವ ವಿಷಯದಲ್ಲಿ ಉಪಾಯಾಂತರಗಳು ಯಾವುದೂ ಇಲ್ಲದಿರುವಾಗ ಐತಿಹಾಸಿಕ ಪಕ್ಷವನ್ನು ಅಂಗೀಕರಿಸಬೇಕೆಂದೂ, ಅಗತಿಕಗತಿಕಲ್ಪನಾ ಎಂದೂ ಸಮರ್ಥನೆ ಮಾಡುವುದಾಗಿದೆ. ಈ ವಿಷಯದಲ್ಲಿ ಈ ಮಂತ್ರವನ್ನುದಹರಿಸಿ,

ಯದಚರಸ್ತನ್ವಾ ವಾವೃಧಾನೋ ಬಲಾನೀಂದ್ರ ಪ್ರಬ್ರುವಾಣೋ ಜನೇಷು ।
ಮಾಯೇತ್ಸಾ ತೇ ಯಾನಿ ಯುದ್ಧಾನ್ಯಾಹುರ್ನಾದ್ಯ ಶತ್ರುಂ ನನು ಪುರಾ ವಿವಿತ್ಸೇ ॥
(ಋ. ಸಂ. ೧೦-೫೪-೨)

ಇಂದ್ರನು ಅನೇಕಪ್ರಕಾರದಿಂದ ವೃದ್ಧಿಯನ್ನು ಹೊಂದುವನು. ಆಯಾಯಪ್ರಕಾರದಿಂದ ವೃದ್ಧಿಹೊಂದಿದ ಶರೀರವುಳ್ಳವನಾಗಿ ಇಂದ್ರನು ತನ್ನ ಶಕ್ತಿಯಿಂದ ಪ್ರಸಿದ್ಧನಾಗಿರುವನು. ಇಂದ್ರನು ಅನೇಕ ಯುದ್ಧಗಳನ್ನು ಮಾಡುವಾಗ ಅವನು ಅನೇಕವಿಧವಾದರೂಪಗಳನ್ನು ಧರಿಸಿರುವನು ಎಂಬ ಇವೆಲ್ಲವೂ ಅವನ ಮಾಯೆಯ ಮಹಿಮೆಯಾಗಿರುತ್ತದೆ. ಇಂದ್ರನಿಗೆ ಶತ್ರುವಾದವನು (ಇರುವುದಿಲ್ಲ) ಇಲ್ಲವು. ವೀರ್ಯಮಿಂದ್ರಃ ವೀರ್ಯಂ ವೈ ಪ್ರಾಣಾಃ ಇತಿ ಹ ವಿಜ್ಞಾಯತೇ । ಇಂದ್ರನೇ ಪ್ರಾಣವು. ಇಂದ್ರನೇ ವೀರ್ಯವು ಎಂದು ಶ್ರುತಿಯು ಬೋಧಿಸುವುದು. ಆದ್ದರಿಂದ ಇಂದ್ರನು ಯುದ್ಧಮಾಡಿರುವುದು ಇವೆಲ್ಲವೂ ಮಾಯಾಮಾತ್ರವಾಗಿರುವುದು. ತಸ್ಮಾದಾಹುರ್ನೈತದಸ್ತಿ ಯದ್ದೇವಾಸುರಮಿತಿ ವಿಜ್ಞಾಯತೇ—ತಸ್ಮಾದಾಹುಃ ಎಂಬ ಶ್ರುತಿಯು, ದೇವಾಸುರ ಎಂಬ ವಿರೋಧವೂ, ಯುದ್ಧವೂ ಇಲ್ಲವು ಎಂದು ಬೋಧಿಸುವುದು, ಎಂದು ವಿಮರ್ಶೆಮಾಡಿ, ಉದಕಗಳಿಗೂ, ತೇಜಸ್ಸಿಗೂ ಅನ್ಯೋನ್ಯ

ವಾಗಿ ಮಿಶ್ರಣವು ಉಂಟಾಗುವುದರಿಂದ (ವರ್ಷವು) ವೃಷ್ಟಿಯು ಉಂಟಾಗುತ್ತದೆ. ವೇದಶಾಖಾಂತರಗಳಲ್ಲಿಯೂ ಆಯಾಯ ಬ್ರಾಹ್ಮಣವಾಕ್ಯಗಳಲ್ಲಿಯೂ, ವೃತ್ರನೆಂಬ ಅಸುರನೂ ಅವನೊಡನೆ ಯುದ್ಧವೂ ವರ್ಣಿತವಾಗಿದ್ದರೂ ಮೇಲೆ ಉಪಪಾದಿತವಾಗಿರುವ ಶ್ರುತಿಯುಕ್ತಿಗಳಿಂದ ಅವುಗಳನ್ನು ಉಪೇಕ್ಷೆಮಾಡತಕ್ಕದ್ದು ಎಂದು ಹೇಳಿದ್ದಾರೆ.

ಇವರ ಮತದಲ್ಲಿ ಉದಕ ಘನೀಭಾವವೇ ಶರೀರದ ಅಭಿವೃದ್ಧಿ ಎನಿಸಿರುವುದು. ಇದು ಉದಕಗಳನ್ನು ತಡೆಯುವುದು. ಇದನ್ನು ತಪ್ಪಿಸಿದರೆ ಉದಕಗಳು ವೃಷ್ಟಿರೂಪದಿಂದ ಭೂಮಿಯನ್ನು ಹೊಂದುವುವು. ವೃತ್ರಂ ಜಘ್ನಿವಾನ್ ಎಂದರೆ ವೃಷ್ಟಿಗೆ ಪ್ರತಿಬಂಧಕನಾಗಿರುವ ವೃತ್ರನನ್ನು ಅಥವಾ ಮೇಘವನ್ನು ಪ್ರಹರಿಸಿದನು ಅಥವಾ ಮೇಘಗಳಿಂದ ವೃಷ್ಟಿಗೆ ಪ್ರತಿಬಂಧಕವಾಗದಂತೆ ತಡೆಯುವುದು ಎಂದು ಅರ್ಥ. ಮೇಘಗಳಿಂದ ವೃಷ್ಟಿಯು ಉಂಟಾಗುವ ದಾರಿಯು ಪ್ರತಿಬದ್ಧವಾದಾಗ ಇಂದ್ರನು ಮೇಘವನ್ನು ಹೊಡೆದು ಉದಕಗಳು ಭೂಮಿಗೆ ಬೀಳುವಂತೆ ಅದರ ದಾರಿಯನ್ನು ಬಿಡಿಸುವನು. ಇದನ್ನೇ **ಆಪಃ ಪ್ರಸಸ್ಯಂದಿರೇ**-ಎಂದು ಹೇಳಿರುತ್ತದೆ.

ವೃತ್ರ ಎಂಬ ಶಬ್ದವು—ವೃಞ್ ವರಣೇ ಎಂಬ ಧಾತುವಿನಿಂದ ನಿಷ್ಪನ್ನವಾದಾಗ ಆವರಿಸುವುದು ಎಂಬ ಅರ್ಥವನ್ನು ಬೋಧಿಸುತ್ತದೆ. ವೃತು ವರ್ತನೇ ಎಂಬ ಧಾತುವಿನಿಂದ ನಿಷ್ಪನ್ನವೆಂದು ಹೇಳಿದರೆ, ಅಪಃ-ಉದಕಗಳನ್ನು, ವೃಷ್ಟಿಭಾವೇನ-ಮಳೆಯರೂಪದಿಂದ, ಅವರ್ತಯತ್ ಪ್ರಾವರ್ತಯತ್,—ಉಂಟುಮಾಡಿದನು ಎಂದು ಅರ್ಥವಾಗುತ್ತದೆ. ವೃಧು ವೃದ್ಧೌ ಎಂಬ ಧಾತುವಿನಿಂದ ನಿಷ್ಪನ್ನವಾದಾಗ ಮೇಘವು ಬಹಳವಾದ ಪ್ರಮಾಣದಿಂದ ವೃದ್ಧಿಯನ್ನು ಹೊಂದಿರುವುದು ಎಂದು ಅರ್ಥವಾಗುತ್ತದೆ ಎಂದು ವೃತ್ರ ಶಬ್ದದ ರೂಪನಿಷ್ಪತ್ತಿ ಪೂರ್ವಕವಾಗಿ ಅರ್ಥವನ್ನು ವಿಮರ್ಶೆಮಾಡಿ, ಆಯಾಯ ಪ್ರಕಾರಗಳಲ್ಲಿ ಬ್ರಾಹ್ಮಣವಾಕ್ಯವನ್ನೂ ಉದಹರಿಸಿರುವರು.

ಸಾಯಣರು ವೃತ್ರಹಣಾ ಎಂಬ ಪದಕ್ಕೆ ಪಾಪಗಳನ್ನು ಪರಿಹರಿಸುವ ಇಂದ್ರಾಗ್ನಿಗಳು ಎಂದು ಅರ್ಥವನ್ನು ಹೇಳಿದ್ದಾರೆ. ಇವರ ಆಶಯದಲ್ಲಿ ವೃಞ್‌ಧಾತುವಿನಿಂದ ನಿಷ್ಪನ್ನವಾದ ವೃತ್ರಶಬ್ದವು ಜ್ಞಾನವನ್ನು ಆವರಿಸುವುದೆಂಬ ಅರ್ಥವನ್ನು ಬೋಧಿಸುತ್ತದೆ.

**ಜಜಿತ್ವಾನಾ**—ಶತ್ರುಗಳನ್ನು ಒಂದೇಸಮನಾಗಿ ಜಯಿಸುವವರು. ಎಂದರೆ ಇಂದ್ರನಂತೆ ಅಗ್ನಿಯೂ ಶತ್ರುವನ್ನು ಜಯಿಸುವವನು. **ಅಪರಾಜಿತಾ** ಇವರಿಬ್ಬರೂ ಯಾರಿಂದಲೂ ಪರಾಜಯವನ್ನು ಹೊಂದದೆ ಇರುವವರು, ಮತ್ತು **ವಾಜಸಾತಮಾ**—ಪ್ರಭೂತವಾದ ಅನ್ನವನ್ನು ಅನುಗ್ರಹಿಸತಕ್ಕವರೂ ಆಗಿರುವುದರಿಂದ ಇವರಿಬ್ಬರನ್ನೂ ಯಜ್ಞದಲ್ಲಿ ಸೋಮಪಾನಕ್ಕಾಗಿ ಆಹ್ವಾನಮಾಡುತ್ತೇನೆ ಎಂದು ಮಂತ್ರದ್ರಷ್ಟೃವಾದ ಋಷಿಯು ಹೇಳಿರುವನು ಎಂದು ವರ್ಣಿಸಿದೆ.

## ವ್ಯಾಕರಣಪ್ರಕ್ರಿಯಾ

**ವೃತ್ರಹಣಾ**—ವೃತ್ರಂ ಹತವಂತೌ. ಹನ ಹಿಂಸಾಗತ್ಯೋಃ ಧಾತು. ಇದಕ್ಕೆ ವೃತ್ರಶಬ್ದ ಉಪಪದವಾಗಿರುವಾಗ ಬ್ರಹ್ಮಭ್ರೂಣವೃತ್ರೇಷು ಕ್ವಿಪ್ (ಪಾ. ಸೂ. ೩-೨-೮೭) ಎಂಬುದರಿಂದ ಭೂತಾರ್ಥದಲ್ಲಿ ಕ್ವಿಪ್ ಪ್ರತ್ಯಯ. ಏಕಾಚುಳ್ಳದ್ದು ಉತ್ತರಪದವಾಗಿರುವುದರಿಂದ **ಏಕಾಜುತ್ತರಪದೇಣಃ** (ಪಾ. ಸೂ. ೮-೪-೧೨) ಎಂಬುದರಿಂದ ಪೂರ್ವಪದದ ನಿಮಿತ್ತವನ್ನು ಅನುಸರಿಸಿ ಧಾತ್ವನಕಾರಕ್ಕೆ ಣತ್ವ. ಗತಿಕಾರಕೋ

—( ಪಾ. ಸೂ. ೬-೨-೧೩೯ ) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. **ಸುಪಾಂಸುಲುಕ್** ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಲಟ್ ಉತ್ತಮಪುರುಷಏಕವಚನದಲ್ಲಿ ಇಟ್. ಅದಕ್ಕೆ **ಟಿತಆತ್ಮ**—ಸೂತ್ರದಿಂದ ಏತ್ವ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. **ಷ್ವಃ ಸಂಪ್ರಸಾರಣಮ್** ಎಂದು ಅನುವೃತ್ತವಾಗುವಾಗ ಬಹುಲಂ ಛಂದಸಿ ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಉವಙಾದೇಶ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಜಿತ್ವಾನಾ**—ಜಿ ಜಯೇ ಧಾತು. **ಶೀಙ್ಕ್ರುಶಿರುಹಿಜಿಕ್ಷಿಸೃಧೃಭ್ಯ**—( ಉ. ಸೂ. ೪-೫೫೩ ) ಎಂಬುದರಿಂದ ಇದಕ್ಕೆ ಕ್ವನಿಪ್ ಪ್ರತ್ಯಯ. ಇದು ಕಿತ್ತಾದುದರಿಂದ ಧಾತುವಿನ ಇಕಾರಕ್ಕೆ ಗುಣ ಬರುವುದಿಲ್ಲ. ಪಿತ್ತಾದುದರಿಂದ ಹ್ರಸ್ವಸ್ಯ ಪಿತಿಕೃತಿತುಕ್ (ಪಾ. ಸೂ. ೬-೧-೭೧) ಎಂಬುದರಿಂದ ಇದಕ್ಕೆ ತುಗಾಗಮ. **ಸಮಾನಸ್ಯಛಂದಸ್ಯ**—( ಪಾ. ಸೂ. ೬-೩-೮೪ ) ಎಂಬುದರಿಂದ ಸಮಾನಶಬ್ದಕ್ಕೆ ಸಭಾವ. ಸಜಿತ್ವನ್ ಶಬ್ದ. ದ್ವಿವಚನಕ್ಕೆ ಆಕಾರಾದೇಶ. ಕೃದುತ್ತರಪದ ಪ್ರಕೃತಿಸ್ವರಬರುತ್ತದೆ.

**ಅಪರಾಜಿತಾ**—ನ ಪರಾಜಿತೌ. ನಞ್ ತತ್ಪುರುಷಸಮಾಸ. **ತತ್ಪುರುಷೇತುಲ್ಯಾರ್ಥ**—( ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ದ್ವಿವಚನಕ್ಕೆ ಆಕಾರಾದೇಶ.

ಇಂದ್ರಾಗ್ನೀ—ಇಂದ್ರಶ್ಚ ಅಗ್ನಿಶ್ಚ ಇಂದ್ರಾಗ್ನೀ. **ಅಜಾದ್ಯದಂತಮ್** ಎಂಬುದರಿಂದ ಇಂದ್ರಶಬ್ದಕ್ಕೆ ಪೂರ್ವನಿಪಾತ. **ದೇವತಾದ್ವಂದ್ವೇಚ** ಎಂಬುದರಿಂದ ಉಭಯಪದ ಪ್ರಕೃತಿಸ್ವರವು ಪ್ರಾಪ್ತವಾದರೆ **ನೋತ್ತರಪದೇಽನುದಾತ್ತಾದೌ**—( ಪಾ. ಸೂ. ೬-೨-೧೪೨) ಎಂಬುದರಿಂದ ನಿಷೇಧ ಬರುವುದರಿಂದ **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಾಜಸಾತಮಾ**—ಷಣು ದಾನೇ ಧಾತು. **ಜನಸನಖನಕ್ರಮ**—(ಪಾ.ಸೂ. ೩-೨-೬೭) ಎಂಬುದರಿಂದ ಇದಕ್ಕೆ ವಿಟ್ ಪ್ರತ್ಯಯ. ಇದು ಪರವಾದಾಗ **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿನ ನಕಾರಕ್ಕೆ ಆತ್ವ. ಇದರಮೇಲೆ ಅತಿಶಯಾರ್ಥ ತೋರುವಾಗ **ಅತಿಶಾಯನೇ ತಮಪ್**—ಎಂಬುದರಿಂದ ತಮಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕಾರಕಪೂರ್ವಪದವಾಗಿರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. **ಸುಪಾಂಸುಲುಕ್** ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಸಂಹಿತಾಪಾಠಃ**

**ಪ್ರ ವಾಮರ್ಚಂತ್ಯುಕ್ಥಿನೋ ನೀಥಾವಿದೋ ಜರಿತಾರಃ ।**

**ಇಂದ್ರಾಗ್ನೀ ಇಷ ಆ ವೃಣೇ ॥ ೫ ॥**

ಪದಪಾಠಃ

ಪ್ರ । ವಾಂ । ಅರ್ಚಂತಿ । ಉಕ್ಥಿನಃ । ನೀಥಾವಿದಃ । ಜರಿತಾರಃ ।

ಇಂದ್ರಾಗ್ನೀ ಇತಿ । ಇಷಃ । ಆ । ವೃಣೇ ॥ ೫ ॥

ಸಾಯಣಭಾಷ್ಯಂ.

ಹೇ ಇಂದ್ರಾಗ್ನೀ ಉಕ್ಥಿನಃ । ಉಕ್ಥಂ ಶಸ್ತ್ರಂ । ತದ್ವಂತಃ ಶಸ್ತ್ರಿಣೋ ಹೋತ್ರಾದಯೋ ವಾಂ ಯುವಾಂ ಪ್ರಾರ್ಚಂತಿ । ಇಹ ಕರ್ಮಣಿ ಸ್ತುತಿರೂಪಾಭಿರ್ವಾಗ್ಭಿಃ ಪೂಜಯಂತಿ । ತಥಾ ನೀಥಾವಿದಃ ಸ್ತೋತ್ರಾಭಿಜ್ಞಾಃ ಸಾಮಗಾನಕುಶಲಾ ಜರಿತಾರಃ ಸ್ತೋತಾರ ಉದ್ಗಾತ್ರಾದಯೋಽಭಿಲಷಿತಫಲಾವಾಪ್ತಯೇ ಯುವಾಮರ್ಚಂತಿ । ಅಹಮಪೀಷೋಽನ್ನಸ್ಯ ಲಾಭಾರ್ಥಮಿಂದ್ರಾಗ್ನೀ ಯುವಾಮಾ ವೃಣೇ । ಸರ್ವತಃ ಸಂಭಜೇ । ಪೂಜಯಾಮೀತ್ಯರ್ಥಃ ॥ ವಾಂ । ಯುಷ್ಮಚ್ಛಬ್ದಸ್ಯ ದ್ವಿತೀಯಾಯಾಂ ಪದಾತ್ಪರತ್ವಾದ್ಯುಷ್ಮದಸ್ಮದೋಃ ಷಷ್ಠೀಚತುರ್ಥೀದ್ವಿತೀಯಾ ಇತ್ಯಾದಿನಾ ವಾಮಿತ್ಯಾದೇಶೋಽನುದಾತ್ತಶ್ಚ । ಅರ್ಚಂತಿ । ಅರ್ಚ ಪೂಜಾಯಾಂ । ನಿಘಾತಃ । ಉಕ್ಥಿನಃ । ವಚ ಪರಿಭಾಷಣೇ । ಪಾತೄತುದಿವಚಿರಿಚೀತಿ ಕರ್ಮಣಿ ಥಕ್ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ ಉಕ್ಥಂ ಶಸ್ತ್ರಂ । ಉಕ್ಥಂ ಯೇಷಾಂ ತೇ । ಅತ ಇನಿಠನಾವಿತೀನಿಃ । ಯಸ್ಯೇತಿ ಲೋಪಃ । ಪ್ರತ್ಯಯಸ್ವರಃ । ನೀಥಾವಿದಃ । ಣೀಞ್ ಪ್ರಾಪಣೇ । ಹನಿಕುಷಿನೀರಮೀತ್ಯಾದಿನಾ ಕ್ಥನ್ । ಕಿತ್ತ್ವಾದ್ಗುಣಾಭಾವಃ । ವಿದ ಜ್ಞಾನೇ । ಕ್ವಿಪ್ ಚೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಇಂದ್ರಾಗ್ನೀ । ಆಮಂತ್ರಿತಸ್ಯಾದ್ಯುದಾತ್ತತ್ವಂ । ವೃಣೇ । ವೃಙ್ ಸಂಭಕ್ತೌ । ನಿಘಾತಃ ॥

ಪ್ರತಿಪದಾರ್ಥ.

(ಹೇ) ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । **ಉಕ್ಥಿನಃ**—ಶಸ್ತ್ರಮಂತ್ರಜ್ಞರಾದ ಹೋತ್ರಾದಿಋತ್ವಿಜರು । **ವಾಂ**—ನಿಮ್ಮಿಬ್ಬರನ್ನು । **ಪ್ರ ಅರ್ಚಂತಿ**—(ಸ್ತುತಿರೂಪವಾಕ್ಯಗಳಿಂದ) ವಿಶೇಷವಾಗಿ ಪೂಜಿಸುತ್ತಾರೆ; (ಅದೇರೀತಿ) । **ನೀಥಾವಿದಃ**—ಸ್ತೋತ್ರಾಭಿಜ್ಞರಾದ (ಸಾಮಗಾನಕುಶಲರಾದ) । **ಜರಿತಾರಃ**—(ಉದ್ಗಾತ್ರಾದಿ) ಸ್ತೋತೃಗಳು । **ವಾಂ ಅರ್ಚಂತಿ**—ನಿಮ್ಮಿಬ್ಬರನ್ನು ಸ್ತುತಿಗಳಮೂಲಕ ಪೂಜಿಸುತ್ತಾರೆ । (**ಅಹಂ ಅಪಿ**—ನಾನೂ ಕೂಡ) । **ಇಷಃ**—ಅನ್ನದ (ಲಾಭಕ್ಕೋಸ್ಕರ) । **ಆ ವೃಣೇ**—(ಇಂದ್ರಾಗ್ನಿಗಳನ್ನು) ಆಶ್ರಯಿಸುತ್ತೇನೆ ॥

ಭಾವಾರ್ಥ.

ಎಲೈ ಇಂದ್ರಾಗ್ನಿಗಳೇ, ಶಸ್ತ್ರಮಂತ್ರವಿದರಾದ ಹೋತ್ರಾದಿಋತ್ವಿಜರೂ ಮತ್ತು ಸಾಮಗಾನಕುಶಲರಾದ ಉದ್ಗಾತ್ರಾದಿಗಳೂ ನಿಮ್ಮಿಬ್ಬರನ್ನು ಸ್ತುತಿರೂಪವಾಕ್ಯಗಳಿಂದ ಪೂಜಿಸುತ್ತಾರೆ; ನಾನೂ ಕೂಡ ಅನ್ನಪ್ರಾಪ್ತಿಗಾಗಿ ನಿಮ್ಮನ್ನೇ ಆಶ್ರಯಿಸುತ್ತೇನೆ.

English Translation.

The reciters of prayers, the repeaters of praise, who are skilled in sacred song, worship you both : I have recourse to Indra and Agni for food.

ವಿಶೇಷವಿಷಯಗಳು.

**ಉಕ್ಥಿನಃ**—ಉಕ್ಥಂ ಶಸ್ತ್ರಂ ತದ್ವಂತಃ ಶಸ್ತ್ರಿಣೋ ಹೋತ್ರಾದಯಃ । ಉಕ್ಥಂ ಶಸ್ತ್ರಂ ಯೇಷಾಂ ತೇ । ಉಕ್ಥಶಬ್ದಕ್ಕೆ ಶಸ್ತ್ರವೆಂದು ಅರ್ಥವನ್ನು ವರ್ಣಿಸಿದೆ. ಶಸ್ತ್ರಪದದ ಅರ್ಥವು ಆಯಾ ದೇವತೆಗಳ ಗುಣವನ್ನು ಅಥವಾ ಮಹಿಮೆಯನ್ನು ವರ್ಣಿಸುವ ಸ್ತುತಿಯೆಂದು ತೈತ್ತಿರೀಯಬ್ರಾಹ್ಮಣಾದಿ ಗ್ರಂಥಗಳಲ್ಲಿ ಹೇಳಿ ಉಕ್ಥ ಮತ್ತು ಶಸ್ತ್ರ ಎಂಬ ಪದಗಳು ಛಾಂದಸವಾದ ಪ್ರಯೋಗದಲ್ಲಿ ಪರ್ಯಾಯಪದಗಳಾಗಿವೆ ಎಂದು ವಿವರಿಸಿದೆ. ಇಲ್ಲಿ ಉಕ್ಥವನ್ನು ಎಂದರೆ ಆಯಾಯ ದೇವತೆಗಳ ಗುಣಗಳನ್ನು ವರ್ಣಿಸುವ ಸ್ತುತಿಗಳನ್ನು ತಿಳಿದವರಾದ ಹೋತೃವೇ ಮೊದಲಾದ ಋತ್ವಿಜರು ಎಂಬ ಅರ್ಥವನ್ನು ಸಾಯಣರು ವಿವರಿಸಿ, ವಾಂ ಪ್ರ ಅ-ರ್ಚಂತಿ-ಇಂದ್ರಾಗ್ನಿಗಳನ್ನು, ಸ್ತುತಿರೂಪಾಭಿರ್ವಾಗ್ಭಿಃ ಪೂಜಯಂತಿ—ಸ್ತುತಿರೂಪವಾದ ವಾಕ್ಕುಗಳಿಂದ ಪೂಜಿಸುತ್ತಾರೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ನೀಥಾವಿದಃ**—ಸಾಮಗಾನಕುಶಲಾಃ ಸ್ತೋತ್ರಾಭಿಜ್ಞಾಃ—ನೀಥಾ ಎಂಬ ಪದವು ಸಾಮವೇದದಲ್ಲಿರುವ ಸಾಮಗಳ ಪ್ರಭೇದವಾಗಿರುವುದೆಂಬ ಅರ್ಥವನ್ನು ವರ್ಣಿಸಿ, ಸಾಮಗಾನಮಾಡುವುದರಲ್ಲಿ ನಿಪುಣರಾಗಿಯೂ, ಸಾಮಗಾನಮಾಡುವುದರಿಂದಲೇ ಆಯಾಯ ದೇವತೆಗಳನ್ನು ಸ್ತುತಿಮಾಡುವುದರಲ್ಲಿ ಮೇಧಾವಿಗಳಾಗಿಯೂ ಇರುವವರೆಂಬ ಅರ್ಥವನ್ನು ವಿವರಿಸಿದೆ.

**ಜರಿತಾರಃ**—ಜರಿತಾ ಎಂಬ ಪದವು ಜರಿತಾ-ಗರಿತಾ ಎಂದು (ನಿ. ೧-೭) ವ್ಯಾಖ್ಯಾತವಾಗಿದೆ. ಈ ಪದಕ್ಕೆ ಸ್ತೋತಾರಃ (ಸ್ತುತಿಮಾಡುವವರಾದ ಎಂದು ಸಾಮಾನ್ಯವಾದ ಅರ್ಥವಾದರೂ ಸಾಮವೇದದಿಂದ ಸ್ತುತಿಯನ್ನು ಪಠಿಸುವ ಉದ್ಗಾತೃವೇ ಮೊದಲಾದ ಋತ್ವಿಜರು ಎಂದು ಅರ್ಥಮಾಡಿ ಇವರು ತಮ್ಮ ತಮ್ಮ ಇಷ್ಟಾರ್ಥಗಳನ್ನು ಹೊಂದುವುದಕ್ಕಾಗಿ ಇಂದ್ರಾಗ್ನಿಗಳನ್ನು ಸಾಮಗಾನದಿಂದ ಸ್ತುತಿಸಿ ಪೂಜಿಸುವರು ಎಂಬ ಅರ್ಥವನ್ನು ಹೇಳಿದೆ.

**ಅಹಮಪಿ ಇಷಃ ಆ ವೃಣೇ**—ಅನ್ನಸ್ಯ ಲಾಭಾರ್ಥಂ ಇಂದ್ರಾಗ್ನೀ ಸರ್ವತಃ ಸಂಭಜೇ । ಇಷಮ್ ಎಂಬುದಾಗಿ ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ.

> **ಯವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ।**
> **ಅಭಿ ದಸ್ಯುಂ ಬಕುರೇಣಾ ಧಮಂತೋರು ಜ್ಯೋತಿಶ್ಚಕ್ರಥುರಾರ್ಯಾಯ ।**
>
> (ಋ. ಸಂ. ೧-೧೧೭-೨೧)

**ಇಲ್ಲಿ ಇಷಂ ದುಹಂತಾ ಎಂಬ ಪದಗಳಿಗೆ ಅನ್ನಂ ದುಹಂತಾ ಅನ್ನವನ್ನು ಕೊಡುವವರು ಎಂದು ಅರ್ಥವನ್ನು ವರ್ಣಿಸಿದೆ. ಇಂದ್ರಾಗ್ನಿಗಳನ್ನು ಅನ್ನವನ್ನು ಹೊಂದುವುದಕ್ಕಾಗಿ ಸೇವಿಸುತ್ತೇನೆ ಎಂದು ಮಂತ್ರದ್ರಷ್ಟಾದ ಋಷಿಯು ಆಶಂಸನೆ ಮಾಡಿರುತ್ತಾನೆ ಎಂಬ ಅರ್ಥವನ್ನು ವಿವರಿಸಿದೆ.**

**ವ್ಯಾಕರಣಪ್ರಕ್ರಿಯಾ.**

**ವಾಮ್**—ಯುಷ್ಮದ್ ಶಬ್ದ. ಪದದ ಪರದಲ್ಲಿ ಬಂದುದರಿಂದ **ಯುಷ್ಮದಸ್ಮದೋಃ ಷಷ್ಠೀಚತುರ್ಥೀದ್ವಿತೀ**—(ಪಾ. ಸೂ. ೮-೧-೨೦) ಎಂಬುದರಿಂದ ದ್ವಿತೀಯಾಂತವಾದ ಇದಕ್ಕೆ ವಾಮ್ ಎಂಬ ಆದೇಶ. ಇದು ಅನುದಾತ್ತವಾಗುತ್ತದೆ.

**ಅರ್ಚಂತಿ**—ಅರ್ಚ ಪೂಜಾಯಾಂ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. **ತಿಙ್ಙ-ತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ಉಕ್ಥಿನಃ—ವಚ ಪರಿಭಾಷಣೇ ಧಾತು. **ಪಾತೃತುದಿವಚಿರಿಚಿ**—(ಉ. ಸೂ. ೨-೧೬೪) ಎಂಬುದರಿಂದ ಇದಕ್ಕೆ ಕರ್ಮಣಿಯಲ್ಲಿ ಥಕ್ ಪ್ರತ್ಯಯ ಇದು ಕಿತ್ತಾದುದರಿಂದ **ವಚಿಸ್ವಪಿಯಜಾದೀನಾಂಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. **ಚೋಃಕುಃ** ಎಂಬುದರಿಂದ ಧಾತು ಚಕಾರಕ್ಕೆ ಕಕಾರಾದೇಶ. ಉಕ್ಥವೆಂದರೆ ಶಸ್ತ್ರ (ಮಂತ್ರವಿಶೇಷ) ಇದು ಉಳ್ಳವರು ಎಂಬರ್ಥ ವಿವಕ್ಷೆ ಮಾಡಿದಾಗ ಅತಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ನೀಥಾವಿದಃ—ಣೀಞ್ ಪ್ರಾಪಣೇ ಧಾತು. **ಹನಿಕುಷಿನೀರಮಿ**—(ಉ. ಸೂ. ೨-೧೪೯) ಎಂಬುದರಿಂದ ಇದಕ್ಕೆ ಕ್ಥನ್ ಪ್ರತ್ಯಯ. ಇದು ಕಿತ್ತಾದುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ನೀಥ ಎಂದು ರೂಪವಾಗುತ್ತದೆ. ವಿದಃ—ವಿದ ಜ್ಞಾನೇ ಧಾತು. ಕ್ವಿಪ್‌ಚ (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ನೀಥಂ ವಿದಂತಿ ಇತಿ ನೀಥಾವಿದಃ ಅನ್ಯೇಷಾಮಪಿದೃಶ್ಯತೇ (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಪೂರ್ವಪದಕ್ಕೆ ದೀರ್ಘ.

ಇಂದ್ರಾಗ್ನೀ—ಸಂಬೋಧನಾ ದ್ವಿವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಮಂತ್ರಿತಸ್ಯ (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ವೃಣೇ—ವೃಞ್ ಸಂಭಕ್ತೌ ಧಾತು ಕ್ರ್ಯಾದಿ. ಪೂರ್ವಮಂತ್ರದಲ್ಲಿ ವ್ಯಾಖ್ಯಾತವಾಗಿದೆ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಇಂದ್ರಾಗ್ನೀ ನವತಿಂ ಪುರೋ ದಾಸಪತ್ನೀರಧೂನುತಂ ।
ಸಾಕಮೇಕೇನ ಕರ್ಮಣಾ ॥ ೬ ॥

ಪದಪಾಠಃ

ಇಂದ್ರಾಗ್ನೀ ಇತಿ । ನವತಿಂ । ಪುರಃ । ದಾಸ್ಯಪತ್ನೀಃ । ಅಧೂನುತಂ ।
ಸಾಕಂ । ಏಕೇನ । ಕರ್ಮಣಾ ॥ ೬ ॥

ಸಾಯಣಭಾಷ್ಯಂ.

**ಹೇ ಇಂದ್ರಾಗ್ನೀ ದಾಸಪತ್ನೀಃ । ದಾಸಯಂತ್ಯುಪಕ್ಷಯಂತೀತಿ ದಾಸಾ ಉಪಕ್ಷಪಯಿತಾರಃ ಶತ್ರವಃ । ತೇ ಪತಯಃ ಪಾಲಕಾಃ ಯಾಸಾಂ ತಾ ದಾಸಪತ್ನೀಃ । ನವತಿಂ ನವತಿಸಂಖ್ಯಾಕಾಃ ಪುರ**

ಏವಂವಿಧಾಃ ಶತ್ರೂಣಾಂ ಪುರೀರೇಕೇನ ಕರ್ಮಣೈಕೇನೈವೋದ್ಯೋಗೇನ ಯುವಾಂ ಸಾಕಂ ಸಹ ಯುಗಪತ್ ಅಧೂನುತಂ । ಅಕಂಪಯತಂ । ತಾವಿಂದ್ರಾಗ್ನೀ ಆಹ್ವಯಾಮೀತಿ ಶೇಷಃ ॥ ನವತಿಂ । ನವಾನಾಂ ದಶತಾಂ ನವಭಾವಃ ತಿಶ್ಚ ಪ್ರತ್ಯಯಃ । ಪ್ರತ್ಯಯಸ್ವರೇಣಾಂತೋದಾತ್ತಃ । ದಾಸಪತ್ನೀಃ । ದಸು ಉಪಕ್ಷಯೇ । ದಾಸಯತೀತಿ ದಾಸಃ । ಪಚಾದ್ಯಜಂತಃ । ಚಿತ್ತ್ವಾದಂತೋದಾತ್ತಃ । ತೇ ಪತಯೋ ಯಾಸಾಂ ನಿತ್ಯಂ ಸಪತ್ನ್ಯಾದಿಷು ದಾಸಾಚ್ಚ । ಪಾ- ೪-೧-೩೫-೧ । ಇತ್ಯುಕ್ತತ್ವಾದ್ವಿಭಾಷಾ ಸಪೂರ್ವಸ್ಯೇತಿ ಙೀಪ್ । ಇಕಾರಸ್ಯ ನಕಾರಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಧೂನುತಂ । ಧೂಞ್ ಕಂಪನೇ । ಲಙಿ ಸ್ವಾದಿಭ್ಯಃ ಶ್ನುಃ । ನಿಘಾತಃ । ಏಕೇನ । ಇಣ್ ಗತೌ । ಇಣ್ಭೀಕಾಪಾಶಲ್ಯತಿಮರ್ಚಿಭ್ಯಃ ಕನ್ನಿತಿ ಕನ್ । ನಿತ್ತ್ವಾದಾದ್ಯುದಾತ್ತಃ ॥

## ಪ್ರತಿಪದಾರ್ಥ.

(ಹೇ) ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । ದಾಸಪತ್ನೀಃ—(ನಮಗೆ) ಹಿಂಸಕರಾದವರ ಅಧೀನದಲ್ಲಿರುವ । ನವತಿಂ—ತೊಂಭತ್ತು । ಪುರಃ—ಶತ್ರುನಗರಿಗಳನ್ನು । ಏಕೇನ ಕರ್ಮಣಾ—(ನೀವಿಬ್ಬರೂ) ಒಂದೇಒಂದು ಪ್ರಯತ್ನದಿಂದ । ಸಾಕಂ—ಏಕಕಾಲದಲ್ಲಿ । ಅಧೂನುತಂ—ಕಂಪಿಸುವಂತೆ ಮಾಡಿದಿರಿ (ನಾಶಮಾಡಿದಿರಿ). (ಅಂತಹ ನಿಮ್ಮಿಬ್ಬರನ್ನೂ ಸ್ತುತಿಸುತ್ತೇನೆ).

## ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ಶತ್ರುಗಳ ತೊಂಭತ್ತು ಪಟ್ಟಣಗಳನ್ನು ಏಕಕಾಲದಲ್ಲಿ ಒಂದೇ ಪ್ರಯತ್ನಕ್ಕೆ ನಾಶಮಾಡಿದಿರಿ; ಇಂತಹ ನಿಮ್ಮನ್ನು ಆಹ್ವಾನಿಸುತ್ತೇನೆ.

## English Translation.

Indra and Agni, with one united effort you overthrew ninety cities ruled over by (your) foes.

## ವಿಶೇಷವಿಷಯಗಳು

ದಾಸಪತ್ನೀಃ—ದಾಸಯಂತಿ ಉಪಕ್ಷಪಯಂತಿ ಇತಿ ದಾಸಾಃ । ಉಪಕ್ಷಪಯಿತಾರಃ ಶತ್ರವಃ ತೇ ಪಾಲಕಾಃ ಯಾಸಾಂ ತಾ ದಾಸಪತ್ನೀಃ । ನಾಶಮಾಡು ಎಂಬ ಅರ್ಥವನ್ನು ಬೋಧಿಸುವ ದಸು ಎಂಬ ಧಾತುವಿನಿಂದ ನಿಷ್ಪನ್ನವಾದ ದಾಸಪದವು ಶತ್ರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ಶತ್ರುಗಳನ್ನು ರಕ್ಷಕರನ್ನಾಗಿ ಹೊಂದಿರುವ ನಗರಿಗಳು ಎಂದು ವಿವರಿಸಿದೆ. ನಿರುಕ್ತಕಾರರು ದಾಸಪತ್ನೀಃ ಎಂಬ ಪದಕ್ಕೆ ದಾಸಪತ್ನೀಃ ದಾಸಾಧಿಪತ್ನ್ಯಃ । ದಾಸೋ ದಸ್ಯತೇರುಪದಾಸಯತಿ ಕರ್ಮಾಣಿ । ಎಂದು (ನಿ. ೨-೧೮) ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು ದಾಸಃ ಕರ್ಮಕರಃ ಶಂ ಹಿ ತಾಃ ಅಭಿಪ್ಲಾಯ ಪಾಂತಿ ರಕ್ಷಂತಿ । ಸ ಹಿ ಕರ್ಮಣಾ ಶ್ರಾಂತಃ ತಾಸು ಪೀತಾಸು ವಿಶ್ರಾಂತ ಆಪ್ಯಾಯಿತೋ ಭವಂತಿ । ಕೆಲಸಗಳನ್ನು ಮಾಡುವವನು ದಾಸನೆಂದೂ, ಅವನು ಆಯಾಸಗೊಂಡಿರುವಾಗ ಉದಕಗಳು ಅವನ ಆಯಾಸವನ್ನು ಪರಿಹರಿಸಿ ಸುಖದಿಂದ ಇರುವಂತೆ ಮಾಡುವುದರಿಂದ ಉದಕಗಳು ದಾಸಪತ್ನೀ ಎಂಬ ಶಬ್ದಕ್ಕೆ ಅರ್ಥವೆಂಬ ಒಂದು ವಿಧವಾದ ಅರ್ಥವನ್ನು ಹೇಳಿದ್ದಾರೆ. ಋ. ಸಂ. ೧-೩೨-೧೧ ರಲ್ಲಿ ಇರುವ ದಾಸಪತ್ನೀಃ ಎಂಬ ಶಬ್ದದ ವಿವರಣೆಯನ್ನು ನೋಡಿ ( See page 629 Part II ಋಗ್ವೇದಸಂಹಿತಾ)

ಐತಿಹಾಸಿಕಪಕ್ಷದಲ್ಲಿ ಯುದ್ಧವು ನಡೆಯುವಾಗ ದಸು ಎಂಬ ಧಾತುವು ಉಪಕ್ಷಯರೂಪವಾದ ಅರ್ಥವನ್ನು ಬೋಧಿಸುವುದರಿಂದ ಕೃಷ್ಯಾದಿಕರ್ಮಗಳನ್ನು ನಾಶಪಡಿಸುವ ಶತ್ರುವು ದಾಸಶಬ್ದದಿಂದ ಬೋಧ್ಯನಾಗಿರುವನು ಇವನು ರಕ್ಷಿಸುವುದು ದಾಸಪತ್ನಿಯಾಗಿರುವುದು ಎಂಬುದಾಗಿ ಅರ್ಥವನ್ನು ವರ್ಣಿಸಿದ್ದಾರೆ. ಪತ್ನಿಯು ಯಾವಾಗಲೂ ಪೋಷ್ಯಳಾಗಿರುವಕಾರಣ ದಾಸರನ್ನೂ ಪತ್ನಿಯ ಹಾಗೆ ಪೋಷಿಸುವುದರಿಂದ ಶತ್ರುಗಳಿಗೆ ದಾಸಪತ್ನ್ಯಃ ಎಂದು ಹೆಸರು ಬಂದಿದೆ. ಅಥವಾ ಇವರು ತಮ್ಮ ಆವಾಸವನ್ನು (ವಾಸಸ್ಥಾನವಾದ ನಗರವನ್ನು) ಪತ್ನಿಯನ್ನು ಪೋಷಿಸುವಂತೆ ರಕ್ಷಿಸುವಕಾರಣ ಇವರ ನಗರಗಳು ದಾಸಪತ್ನಿಯರೆಂದು ವ್ಯಪದಿಷ್ಟವಾಗಿರುವವು.

ನವತಿಂ ಪುರಃ ಏಕೇನ ಕರ್ಮಣಾ ಸಾಕಮಧೂನುತಂ—ನವತಿಸಂಖ್ಯಾಕಾಃ ಶತ್ರೂಣಾಂ ಪುರೀಃ ಏಕೇನೈವೋದ್ಯೋಗೇನ ಯುಗಪತ್ ಅಕಂಪಯತಂ । ನವತಿ ಶಬ್ದವು ನವಾನಾಂ ದಶತಾಂ ನವಭಾವಃ ಹತ್ತು ಸಾರಿ ಆವರ್ತಿತವಾದ ಒಂಭತ್ತುಗಳು ತೊಂಭತ್ತು ಆಗುವುದು. ಶತ್ರುಗಳಿಂದ ರಕ್ಷಿತವಾಗಿರುವ ತೊಂಭತ್ತು ನಗರಗಳನ್ನೂ ಇಂದ್ರಾಗ್ನಿಗಳು ಏಕಕಾಲದಲ್ಲಿ ಒಂದೇ ಪ್ರಯತ್ನದಿಂದ ನಾಶಪಡಿಸಿದರು ಎಂದು ಹೇಳಿ, ಈ ಪ್ರಕಾರವಾದ ಮಾಹಾತ್ಮ್ಯದಿಂದ ಪೂಜಿತರಾಗಿರುವ ಇವರಿಬ್ಬರನ್ನೂ ಯಜ್ಞದಲ್ಲಿ ಸೋಮಪಾನಕ್ಕಾಗಿ ಆಹ್ವಾನ ಮಾಡಿದೆ ಎಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

ನವತಿಮ್—ನವಾನಾಂ ದಶತಾಂ ನವಭಾವಃ ತಿ ಪ್ರತ್ಯಯ (ಒಂಭತ್ತುಹತ್ತು) ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ.

ದಾಸಪತ್ನೀಃ—ದಸು ಉಪಕ್ಷಯೇ ಧಾತು. ದಾಸಯತೀತಿ ದಾಸಃ. ಣಿಜಂತದ ಮೇಲೆ ನಂದಿಗ್ರಹಿಪಚಾದಿಭ್ಯೋ—(ಪಾ ಸೂ. ೩-೧-೧೩೪) ಎಂಬುದರಿಂದ ಕರ್ತರಿಯಲ್ಲಿ ಅಚ್ ಪ್ರತ್ಯಯ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ದಾಸಾಃ ಪತಯಃ ಯಾಸಾಂ ದಾಸಪತ್ನ್ಯಃ ನಿತ್ಯಂಸಪತ್ನ್ಯಾದಿಷು ದಾಸಾಚ್ಚ (ಪಾ. ಸೂ. ೪-೧-೩೫ ಗ) ಎಂದು ಪಾಠಮಾಡಿರುವುದರಿಂದ **ವಿಭಾಷಾ ಸಪೂರ್ವಸ್ಯ** (ಪಾ. ಸೂ. ೪-೧-೩೪) ಎಂಬುದರಿಂದ ಙೀಪ್ ಪ್ರತ್ಯಯ. ಇಕಾರಕ್ಕೆ ನಕಾರಾದೇಶ. ಬಹುವ್ರೀಹಿಯಲ್ಲಿ **ಪೂರ್ವಪದಪ್ರಕೃತಿಸ್ವರ** **ಬರುತ್ತದೆ.** ದ್ವಿತೀಯಾ ಬಹುವಚನಾಂತರೂಪ.

**ಅಧೂನುತಮ್—**ಧೂಞ್ ಕಂಪನೇ ಧಾತು. ಲಙ್ ಮಧ್ಯಮಪುರುಷ ದ್ವಿವಚನಕ್ಕೆ **ತಸ್‌ಥಸ್‌ಥಮಿಪಾಂ**—ಎಂಬುದರಿಂದ ತಮಾದೇಶ. **ಸ್ವಾದಿಭ್ಯಃಶ್ನುಃ** (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ. ಅದಕ್ಕೆ ಙಿತ್ವಾತಿದೇಶವಿರುವುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ವಿಕರಣದ ಉಕಾರಕ್ಕೆ ಗುಣ ಬರುವುದಿಲ್ಲ. ಅಂಗಕ್ಕೆ ಅಡಾಗಮ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಏಕೇನ**—ಇಣ್ ಗತೌ ಧಾತು. **ಇಣ್‌ಭೀಕಾಪಾಶಲ್ಯತಿಮರ್ಚಿಭ್ಯಃ ಕನ್** (ಉ. ಸೂ. ೩-೪೩) ಎಂಬುದರಿಂದ **ಕನ್** **ಪ್ರತ್ಯಯ.** **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ **ಧಾತುವಿಗೆ ಗುಣ.** **ಪ್ರತ್ಯಯ** ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ತೃತೀಯಾ ಏಕವಚನಾಂತರೂಪ.**

———

ಸಂಹಿತಾಪಾಠಃ

ಇಂದ್ರಾಗ್ನೀ ಅಪಸಸ್ಪರ್ಯುಪ ಪ್ರ ಯಂತಿ ಧೀತಯಃ ।
ಋತಸ್ಯ ಪಥ್ಯಾ೩ ಅನು ॥ ೭ ॥

ಪದಪಾಠಃ

ಇಂದ್ರಾಗ್ನೀ ಇತಿ । ಅಪಸಃ । ಪರಿ । ಉಪ । ಪ್ರ । ಯಂತಿ । ಧೀತಯಃ ।
ಋತಸ್ಯ । ಪಥ್ಯಾಃ । ಅನು ॥ ೭ ॥

ಸಾಯಣಭಾಷ್ಯಂ.

ಹೇ ಇಂದ್ರಾಗ್ನೀ ಧೀತಯಃ ಸೋಮಸ್ಯ ಧಾತಾರಃ ಪಾತಾರೋ ಹೋತ್ರಾದಯ ಋತಸ್ಯ ಕರ್ಮಫಲಸ್ಯ ಪಥ್ಯಾಃ ಪಥೋ ಮಾರ್ಗಾನನು ಲಕ್ಷೀಕೃತ್ಯಾಪಸೋಽಸ್ಮಾಭಿಃ ಕ್ರಿಯಮಾಣಸ್ಯ ಕರ್ಮಣಃ ಪರಿ ಸರ್ವತ ಉಪ ಪ್ರ ಯಂತಿ । ಸಮೀಪೇ ಪ್ರಕರ್ಷೇಣ ವರ್ತಂತೇ । ಅತಃ ಸೋಮಪಾನಾರ್ಥಂ ಯುವಾಮಾಗಚ್ಛತಮಿತಿ ಭಾವಃ । ಯದ್ವಾ । ಧೀತಯಃ ಸ್ತುತಯ ಋತಸ್ಯ ಯಜ್ಞಸ್ಯ ಮಾರ್ಗಾನ್ ಲಕ್ಷೀಕೃತ್ಯ ಕರ್ಮಣಃ ಪರಿತಃ ಪ್ರವರ್ತಂತೇ । ಅತಃ ಸ್ತೋತವ್ಯತಯಾ ಯುವಾಮಾಗತಮಿತಿ॥ ಯಂತಿ । ಇಣ್ ಗತೌ । ಯಣಾದೇಶಃ । ನಿಘಾತಃ । ಧೀತಯಃ । ಧೇಟ್ ಪಾನ ಇತ್ಯಸ್ಮಾತ್ಕರ್ತರಿ ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ಘುಮಾಸ್ಥೇತೀತ್ವಂ । ಚಿತ್ತ್ವಾದಂತೋದಾತ್ತಃ ॥

ಪ್ರತಿಪದಾರ್ಥ.

(ಹೇ) ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । ಧೀತಯಃ—ಸೋಮವನ್ನು ಧರಿಸಿರುವ (ಅಥವಾ ರಕ್ಷಿಸುವ) ಹೋತ್ರಾದಿಗಳು । ಋತಸ್ಯ—ಕರ್ಮಫಲದ । ಪಥ್ಯಾಃ—ಮಾರ್ಗಗಳನ್ನು । ಅನು—ಲಕ್ಷ್ಯದಲ್ಲಿಟ್ಟು । ಅಪಸಃ—(ನಮ್ಮಿಂದ ಮಾಡಲ್ಪಡುವ) ಕರ್ಮದ। ಪರಿ—ಸುತ್ತಲೂ । ಉಪ ಪ್ರ ಯಂತಿ—ಸಮೀಪದಲ್ಲಿ ಇರುತ್ತಾರೆ; (ಆದುದರಿಂದ ಸೋಮಪಾನಾರ್ಥವಾಗಿ ನೀವಿಬ್ಬರೂ ಬನ್ನಿ) । ಧೀತಯಃ—ಸ್ತುತಿಗಳು । ಋತಸ್ಯ—ಯಜ್ಞದ । ಪಥ್ಯಾಃ ಅನು—ಮಾರ್ಗಗಳನ್ನು ಅನುಸರಿಸಿ । ಅಪಸಃ ಪರಿ—ನಮ್ಮ ಈ ಕರ್ಮದ ಸುತ್ತಲೂ । ಉಪ ಪ್ರ ಯಂತಿ—ಸಮೀಪದಲ್ಲಿ ಇರುತ್ತವೆ; (ಆದುದರಿಂದ ಸ್ತೋತವ್ಯರಾಗಿ ನೀವಿಬ್ಬರೂ ಇಲ್ಲಿಗೆ ಬನ್ನಿ) ।

ಭಾವಾರ್ಥ.

ಎಲೈ ಇಂದ್ರಾಗ್ನಿಗಳೇ, ನಿಮಗಾಗಿ ಸೋಮವನ್ನು ಧರಿಸಿರುವ (ರಕ್ಷಿಸಿಟ್ಟುಕೊಂಡಿರುವ) ಹೋತ್ರಾದಿ ಋತ್ವಿಜರು, ಕರ್ಮಫಲಪ್ರಾಪ್ತಿಯನ್ನೇ ಗುರಿಯಾಗಿಟ್ಟುಕೊಂಡು, ನಮ್ಮ ಈ ಕರ್ಮದಲ್ಲಿ ನಿರತರಾಗಿರುತ್ತಾರೆ; (ಆದುದರಿಂದ ಅವರಿಂದ ದೇಯವಾದ ಸೋಮರಸವನ್ನು ಪಾನಮಾಡಲು ಆಗಮಿಸಿ).

## English Translation.

Indra and Agni the pious ministers, are present at our holy rite, according to the ways of worship.

### ವಿಶೇಷವಿಷಯಗಳು

**ಧೀತಯಃ**— ಸೋಮಸ್ಯ ಪಾತಾರಃ ಹೋತ್ರಾದಯಃ । ಪಾನಮಾಡು ಎಂಬ ಅರ್ಥವನ್ನು ಬೋಧಿಸುವ ಧೇಟ್ ಧಾತುವಿನಿಂದ ನಿಷ್ಪನ್ನವಾದ ಧೀತಯಃ ಎಂಬ ಶಬ್ದಕ್ಕೆ ಪಾನಮಾಡುವವರು ಎಂಬ ಅರ್ಥವಾಗುವಕಾರಣ ಸೋಮರಸವನ್ನು ಪಾನಮಾಡುವ ಹೋತೃವೇ ಮೊದಲಾದ ಋತ್ವಿಜರೆಂದು ಇಲ್ಲಿ ಅರ್ಥವನ್ನು ವರ್ಣಿಸಿದೆ. ಯಾಸ್ಕರು ಧೀತಿಃ ಧೀತಯಃ ಈ ಪದಗಳಿಗೆ ಇರುವ ಅರ್ಥವನ್ನು, ಉದಾಹರಣೆಗಳನ್ನು ಉದಹರಿಸಿ ವಿವರಿಸಿದ್ದಾರೆ.

ಧೀತಯಃ ಈ ಪದವು ಅಗ್ರುವಃ, ಅಣ್ವ್ಯಃ ಎಂಬ ಇಪ್ಪತ್ತೆರಡು ಅಂಗುಲಿನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।
ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ॥
(ಋ. ಸಂ. ೬-೬೧-೨)

ಇಲ್ಲಿ ಧೀತಿಭಿಃ ಎಂಬ ಪದಕ್ಕೆ ಕರ್ಮ, ಅಥವಾ ಸ್ತುತಿ ಎಂಬ ಅರ್ಥವನ್ನು ವಿವರಿಸಿದೆ.

ಋತಸ್ಯ ಹಿ ಶುರುಧಸ್ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ ।
ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ ॥
(ಋ. ಸಂ. ೪-೨೩-೮)

ಇಲ್ಲಿ ಧೀತಿ ಶಬ್ದಕ್ಕೆ ಪ್ರಜ್ಞಾ ಎಂಬ ಅರ್ಥವನ್ನು ವರ್ಣಿಸಿದೆ. ನಿರುಕ್ತಕಾರರ ಮತದಲ್ಲಿ ಧ್ಯೈ ಚಿಂತಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾದ ಧೀತಿಶಬ್ದದ ಅರ್ಥವು ವಿವೃತವಾಗಿದೆ ಎಂದು ತಾತ್ಪರ್ಯ.

**ಅಪಸಃ**— ಈ ಪದವು ಕರ್ಮನಾಮಗಳಲ್ಲಿ (ನಿ. ೩-೨) ಉಕ್ತವಾಗಿದೆ. ಸಾಯಣರು ಸತ್ಯ ಅಥವಾ ಯಜ್ಞ ಎಂದು ಅರ್ಥವುಳ್ಳ ಋತಶಬ್ದಕ್ಕೆ ಕರ್ಮಫಲವೆಂಬ ಅರ್ಥವನ್ನು ಹೇಳಿ ಅಪಸಃ ಎಂಬ ಪದಕ್ಕೆ ಕರ್ಮಫಲವು (ನೇರವಾಗಿ) ನಿರ್ವಿಘ್ನವಾಗಿ ಉಂಟಾಗುವ ಮಾರ್ಗವನ್ನು ಲಕ್ಷೀಕರಿಸಿ ಆಚರಿಸುವ ಯಜ್ಞದಲ್ಲಿ ಸೋಮಪಾನವನ್ನು ಮಾಡುವ ಹೋತೃವೇ ಮೊದಲಾದ ಋತ್ವಿಜರು ಯಜ್ಞದ ಕಾರ್ಯಗಳಲ್ಲಿ ನಿರತರಾಗಿರುತ್ತಾರೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮತ್ತು ಧೀತಿ ಎಂಬ ಪದವು ಯಾಸ್ಕರಿಂದ ಸ್ತುತಿ ಎಂಬ ಅರ್ಥಬೋಧಕವಾಗಿರುವುದೆಂದು ವ್ಯಾಖ್ಯಾನಮಾಡಿರುವಕಾರಣ ದೇವತೆಗಳನ್ನು ಉದ್ದೇಶಮಾಡಿ ಋತ್ವಿಜರು ಪಠಿಸುವ ಸ್ತುತಿಗಳು ಯಜ್ಞದಮಾರ್ಗಗಳನ್ನು ಲಕ್ಷೀಕರಿಸಿ ಯಜ್ಞಕರ್ಮದಲ್ಲಿಯೇ ಪ್ರವೃತ್ತಿಯನ್ನು ಉಂಟುಮಾಡುತ್ತವೆ ಎಂದು ಎರಡನೆಯ ಅರ್ಥವನ್ನು ಯಥಾ **ಧೀತಯಃ ಸ್ತುತಯಃ ಋತಸ್ಯ ಯಜ್ಞಸ್ಯ ಮಾರ್ಗಾನ್ ಲಕ್ಷೀಕೃತ್ಯ ಕರ್ಮಣಃ ಪರಿತಃ ಪ್ರವರ್ತಂತೇ** । ಎಂಬುದಾಗಿ ವ್ಯಾಖ್ಯಾನಮಾಡಿ ವರ್ಣಿಸಿದ್ದಾರೆ. ಋತ್ವಿಜರೂ, ಹೋತೃವೇ ಮೊದಲಾದವರೂ ಇಂದ್ರಾಗ್ನಿಗಳನ್ನು ಸೋಮಪಾನಕ್ಕೆ ಬರುವುದಕ್ಕಾಗಿ ಸ್ತುತಿಮಾಡಿ ಆಹ್ವಾನಮಾಡುವುದರಿಂದ ಇಂದ್ರಾಗ್ನಿಗಳು ಯಜ್ಞಕ್ಕೆ ಬರಬೇಕೆಂದು ಪ್ರಾರ್ಥಿಸಿದೆ.

**ಪಥ್ಯಾಃ—ಪಥಃ ಮಾರ್ಗಾನ್**—ದಾರಿಗಳು ಎಂದು ಅರ್ಥವನ್ನು ವಿವರಿಸಿದೆ. ಪಥ್ಯಾ ಸ್ವಸ್ತಿಃ— **ಪಂಥಾ ಅಂತರಿಕ್ಷಂ ತನ್ನಿವಾಸಾತ್** (ನಿ. ೧೧-೪೫) ಪಂಥಾ ಎಂದರೆ ಅಂತರಿಕ್ಷವೆಂದೂ ಅದರಲ್ಲಿ ವಾಸಮಾಡು ವುದರಿಂದ ಪಥ್ಯಾ ಎಂಬ ಶಬ್ದಕ್ಕೆ ಮಾರ್ಗವೆಂದೂ ಅರ್ಥಮಾಡಿದೆ.

ವ್ಯಾಕರಣಪ್ರಕ್ರಿಯಾ

**ಯಂತಿ**—ಇಣ್ ಗತೌ ಧಾತು ಅದಾದಿ. ಲಟ್ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ. ಶಪಿಗೆ ಲುಕ್. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಧೀತಯಃ**—ಧೇಟ್ ಪಾನೇ ಧಾತು. ಇದಕ್ಕೆ ಕರ್ತೃವಿಯಲ್ಲಿ **ಕ್ತಿಚ್‌ಕ್ತೌಚಸಂಜ್ಞಾಯಾಮ್** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ ಘುಮಾಸ್ಥಾಗಾ —(ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ಚಿತಃ (ಪಾ. ಸೂ. ೬-೧-೧೯೩) ಎಂಬುದ ರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಪಥ್ಯಾಃ**—ಪಥಿನ್ ಶಬ್ದ. ಯತ್ ಪ್ರತ್ಯಯ. ಟಿಲೋಪ. ಪ್ರತ್ಯಯ ತಿತ್ತಾದುದರಿಂದ **ತಿತ್‌ಸ್ವರಿ ತಮ್** ಎಂಬುದರಿಂದ ಸ್ವರಿತಸ್ವರ ಬರುತ್ತದೆ.

ಸಂಹಿತಾಪಾಠಃ

ಇಂದ್ರಾಗ್ನೀ ತವಿಷಾಣಿ ವಾಂ ಸಧಸ್ಥಾನಿ ಪ್ರಯಾಂಸಿ ಚ ।
ಯುವೋರಪ್ತೂರ್ಯಂ ಹಿತಂ ॥ ೮ ॥

ಪದಪಾಠಃ

ಇಂದ್ರಾಗ್ನೀ ಇತಿ । ತವಿಷಾಣಿ । ವಾಂ । ಸಧಃಸ್ಥಾನಿ । ಪ್ರಯಾಂಸಿ । ಚ ।
ಯುವೋಃ । ಅಪ್ಃತೂರ್ಯಂ । ಹಿತಂ ॥ ೮ ॥

ಸಾಯಣಭಾಷ್ಯಂ.

**ಹೇ ಇಂದ್ರಾಗ್ನೀ ವಾಂ ಯುವಯೋಸ್ತವಿಷಾಣಿ ಬಲಾನಿ ಪ್ರಯಾಂಸ್ಯನ್ನಾನಿ ಚ ಸಧಸ್ಥಾನಿ ಪರಸ್ಪರಮವಿಯುಜ್ಯ ವರ್ತಂತೇ। ತಥಾಪ್ತೂರ್ಯಂ ವೃಷ್ಟಿದ್ವಾರಾ ಪ್ರೇರಕತ್ವಂ ಯುವೋರ್ಯುವಯೋ- ರೇವ ಹಿತಂ ನಿಹಿತಂ ವರ್ತತೇ । ತಸ್ಮಾತ್ಸೋಮಪಾನಪ್ರಭೃತಿಷು ಸರ್ವಕರ್ಮಸ್ವಿಂದ್ರಾಗ್ನ್ಯೋಃ ಸಹೈವ ವರ್ತಮಾನತ್ವಮಿತಿ ಭಾವಃ ॥ ವಾಂ । ಷಷ್ಠೀದ್ವಿವಚನೇ ವಾಮಿತ್ಯಾದೇಶಃ । ಸಧಸ್ಥಾನಿ । ಷ್ಠಾ ಗತಿನಿ- ವೃತ್ತೌ । ಆತೋಽನುಪಸರ್ಗೇ ಕಃ । ಸಧ ಮಾದಸ್ಥಯೋಶ್ಛಂದಸೀತಿ ಸಹಸ್ಯ ಸಧಾದೇಶಃ ॥**

ಪ್ರತಿಪದಾರ್ಥ.

(ಹೇ) ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ | ವಾಂ—ನಿಮ್ಮಿಬ್ಬರಲ್ಲಿ | **ತವಿಷಾಣಿ**—ಬಲಗಳೂ | **ಪ್ರಯಾಂಸಿ** (ಚ)—ಅನ್ನಗಳೂ | ಸದಸ್ಥಾನಿ—ಅವಿಯುಕ್ತವಾಗಿಯೇ ಇವೆ; (ಹಾಗೆಯೇ) | **ಅಪ್ತೂರ್ಯಂ**—ವೃಷ್ಟಿಪ್ರೇರಕತ್ವವೂ | **ಯುವೋಃ**—ನಿಮ್ಮಿಬ್ಬರಲ್ಲಿಯೇ | **ಹಿತಂ**—ನಿಹಿತವಾಗಿದೆ (ಆದುದರಿಂದ ಸೋಮ ಪಾನಾದಿಗಳಿಗೆ ನೀವಿಬ್ಬರೂ ಮಿಳಿತರಾಗಿ ಬನ್ನಿ ||

ಭಾವಾರ್ಥ.

ಎಲೈ ಇಂದ್ರಾಗ್ನಿಗಳೇ ಬಲ ಮತ್ತು ಅನ್ನಗಳು ನಿಮ್ಮಿಬ್ಬರಲ್ಲಿ ಅವಿಯುಕ್ತವಾಗಿಯೇ (ಒಟ್ಟಿಗೆ ಸೇರಿ ಕೊಂಡೇ) ಇವೆ ಮತ್ತು ವೃಷ್ಟಿಪ್ರೇರಕತ್ವಶಕ್ತಿಯೂ ನಿಮ್ಮಲ್ಲಿಯೇ ಇದೆ; ಆದುದರಿಂದ ನೀವಿಬ್ಬರೂ ಮಿಳಿತ ರಾಗಿಯೇ ನಮ್ಮ ಯಾಗಕ್ಕೆ ಆಗಮಿಸಿ ಸೋಮಪಾನಮಾಡಿ.

English Translation.

Indra and Agni, in you, vigour and food are abiding together, and therefore in you is deposited the dispensing of water.

ವಿಶೇಷವಿಷಯಗಳು.

**ತವಿಷಾಣಿ**—ಬಲಾನಿ. ತವಿಷೀ ಎಂಬ ಪದವು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ ಮತ್ತು

ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಮ್ |
ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ |

(ಋ. ಸಂ. ೧-೧೮೭-೧)

ಇಲ್ಲಿ ತವಿಷೀತಿ ಬಲನಾಮ ತವತೇರ್ವಾ ವೃದ್ಧಿಕರ್ಮಣಃ (ನಿ. ೯-೨೫) ವೃದ್ಧಿ ಎಂಬ ಅರ್ಥವನ್ನು ಬೋಧಿ ಸುವ ತು ಧಾತುವಿನಿಂದ ನಿಷ್ಪನ್ನವಾದ ತವಿಸ್ ಎಂಬ ಪದಕ್ಕೆ ಬಲವೆಂದೂ ವೃದ್ಧಿಮಾಡುವುದೆಂದೂ ಯಾಸ್ಕರು ಅರ್ಥವನ್ನು ಹೇಳಿದ್ದಾರೆ.

**ಪ್ರಯಸ್**—ಎಂಬ ಪದವು ಅನ್ನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಇಂದ್ರಾಗ್ನಿಗಳು ಇಬ್ಬರೂ ಬಲವನ್ನೂ ಅನ್ನವನ್ನೂ ಅನ್ಯೋನ್ಯವಾಗಿರುತ್ತಾ ಒಟ್ಟಿಗೆ ಹೊಂದುವರೆಂದು ಉಕ್ತವಾಗಿರುವುದರಿಂದ ಇವರಿಬ್ಬರಿಗೂ ಪರಸ್ಪರವಾದ ಸ್ಥಿತಿಯು ಅವಿಯುಕ್ತವಾಗಿರುತ್ತದೆ ಎಂದು ಅರ್ಥವನ್ನು ವರ್ಣಿಸಿದೆ.

**ಅಪ್ತೂರ್ಯಂ**—ಎಂಬ ಪದಕ್ಕೆ ವೃಷ್ಟಿಯು ಉಂಟಾಗುವಂತೆ ಅನುಗ್ರಹವನ್ನು ಮಾಡಿ ಲೋಕವನ್ನು ವೃದ್ಧಿಯಾಗುವ ವಿಷಯದಲ್ಲಿ ಪ್ರೇರಿಸುವವರೂ ಇಂದ್ರಾಗ್ನಿಗಳೇ ಆಗಿರುವರು ಎಂದು ಅರ್ಥವನ್ನು ವಿವರಿಸಿ ಸೋಮಪಾನಪ್ರಭೃತಿಷು ಸರ್ವಕರ್ಮಸು ಇಂದ್ರಾಗ್ನ್ಯೋಃ ಸಹೈವ ವರ್ತಮಾನತ್ವಂ ಬಲ ಮತ್ತು ಅನ್ನ ಇವುಗಳನ್ನು ಅನುಗ್ರಹಿಸುವುದರಲ್ಲಿಯೂ, ಸೋಮಪಾನದಲ್ಲಿಯೂ, ಪ್ರಪಂಚಕ್ಕೆ ವೃಷ್ಟಿಯನ್ನು ಉಂಟುಮಾಡಿ ವೃದ್ಧಿಯಾಗುವಂತೆ ಪ್ರೇರಿಸುವುದರಲ್ಲಿಯೂ ಇಂದ್ರನೂ ಮತ್ತು ಅಗ್ನಿಯು ಜೊತೆಯಾಗಿಯೇ ಇರುವಕಾರಣ ಸೋಮಪಾನವನ್ನು ಮಾಡುವುದಕ್ಕಾಗಿ ಇವರಿಬ್ಬರೂ ಒಟ್ಟಿಗೆ ಯಜ್ಞಕ್ಕೆ ಬರಬೇಕೆಂದು ಆಶಿಸಿದೆ. ಇಂದ್ರಾಗ್ನಿಗಳ ಸಾಹಚರ್ಯವಿಚಾರವಾಗಿ ಋಗ್ವೇದಸಂಹಿತಾ ಭಾಗ-೮ ಪೇಜು 575-576 ಗಳನ್ನು ನೋಡಿ.

ವ್ಯಾಕರಣಪ್ರಕ್ರಿಯಾ.

**ತವಿಷಾಣಿ**—ತವ ಎಂಬುದು ಸೌತ್ರಧಾತು. **ತವೇರ್ಣಿದ್ವಾ** (ಉ. ಸೂ. ೧-೪೮) ಎಂಬುದರಿಂದ ಇದಕ್ಕೆ ಟಿಷಚ್ ಪ್ರತ್ಯಯ. **ಚುಟೂ** ಎಂಬುದರಿಂದ ಆದಿಯ ಟಕಾರಕ್ಕೆ ಇತ್ಸಂಜ್ಞೆ ಬರುವುದರಿಂದ ಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಾಮ್**—ಯುಷ್ಮದ್ ಶಬ್ದ. ಷಷ್ಠೀದ್ವಿವಚನಾಂತಕ್ಕೆ **ಯುಷ್ಮದಸ್ಮದೋಃ**—ಎಂಬುದರಿಂದ ವಾಮಾದೇಶ. ಇದು ಅನುದಾತ್ತವಾಗುತ್ತದೆ.

**ಸಧಸ್ಥಾನಿ**—ಷ್ಠಾ ಗತಿನಿವೃತ್ತೌ ಧಾತು. **ಆತೋಽನುಪಸರ್ಗೇ ಕಃ** (ಪಾ. ಸೂ. ೩-೨-೩) ಎಂಬುದ ಕ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದ ರಿಂದ ಆಕಾರಕ್ಕೆ ಲೋಪ. ಸ್ಥ ಎಂಬುದು ಪರವಾದಾಗ **ಸಧಮಾದಸ್ಥಯೋಶ್ಛಂದಸಿ** ಎಂಬುದರಿಂದ ಸಹ ಎಂಬುದಕ್ಕೆ ಸಧಾದೇಶ. ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಹಿತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ದಧಾತೇರ್ಹಿಃ** ಎಂಬುದರಿಂದ ಧಾತುವಿಗೆ ಹಿ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸಂಹಿತಾಪಾಠಃ

ಇಂದ್ರಾಗ್ನೀ ರೋಚನಾ ದಿವಃ ಪರಿ ವಾಜೇಷು ಭೂಷಥಃ ।
ತದ್ವಾಂ ಚೇತಿ ಪ್ರ ವೀರ್ಯಂ ॥ ೯ ॥

ಪದಪಾಠಃ

ಇಂದ್ರಾಗ್ನೀ ಇತಿ । ರೋಚನಾ । ದಿವಃ । ಪರಿ । ವಾಜೇಷು । ಭೂಷಥಃ ।
ತತ್ । ವಾಂ । ಚೇತಿ । ಪ್ರ । ವೀರ್ಯಂ ॥ ೯ ॥

ಸಾಯಣಭಾಷ್ಯಂ.

**ಹೇ ಇಂದ್ರಾಗ್ನೀ ದಿವೋ ರೋಚನಾ ಸ್ವರ್ಗಸ್ಯ ರೋಚಕೌ ಪ್ರಕಾಶಕೌ ಯುವಾಂ ವಾಜೇಷು ಸಂಗ್ರಾಮೇಷು ಪರಿ ಭೂಷಥಃ । ಪರಿತಃ ಸರ್ವತೋಽಲಂಕೃತೌ ಭವಥಃ । ಶತ್ರೂನ್ಪರಾಜಿತ್ಯ ಸರ್ವತೋ ವಿಜಯಮಾನೌ ವರ್ತೇಥೇ । ವಾಂ ಯುವಯೋರ್ವೀರ್ಯಂ ಸಾಮರ್ಥ್ಯಮೇವ ತತ್ತಾದೃಶಂ ಸಂಗ್ರಾಮವಿಜಯಂ ಪ್ರ ಚೇತಿ । ಪ್ರಕರ್ಷೇಣ ಜ್ಞಾಪಯತಿ । ಯದ್ವಾ ಯುವಾಂ ವಾಜೇಷು ಸಂಗ್ರಾಮೇಷು ಪರಿಭೂಷಥಃ । ಶತ್ರೂನ್ ಪರಿಭವಥಃ । ಶೇಷಂ ಪೂರ್ವವತ್ ॥ ರೋಚನಾ । ರುಚ ದೀಪ್ತಾವಿತ್ಯಸ್ಯ ಅನುದಾ-**

ತ್ರೇತಶ್ಚ ಹಲಾದೇರಿತಿ ಯುಜ್। ಚಿತ್ತ್ವಾದಂತೋದಾತ್ತಃ। ಭೂಷಥಃ। ಭೂಷ ಭೂಷಣೇ। ನಿಘಾತಃ। ಚೇತಿ। ಚಿತೀ ಸಂಜ್ಞಾನೇ। ಅಯಮಂತರ್ಭಾವಿತಣ್ಯರ್ಥಃ। ಬಹುಲಂ ಛಂದಸೀತಿ ಶಪೋ ಲುಕ್। ತಿಙಾರಲೋಪಶ್ಛಾಂದಸಃ ॥

ಪ್ರತಿಪದಾರ್ಥ.

(ಹೇ) ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ। ದಿವಃ—ದ್ಯುಲೋಕದ। ರೋಚನಾ—ಪ್ರಕಾಶಕರಾದ ನೀವಿಬ್ಬರೂ। ವಾಜೇಷು—ಸಂಗ್ರಾಮಗಳಲ್ಲಿ। ಪರಿ ಭೂಷಥಃ—(ಶತ್ರುಗಳನ್ನು ಸೋಲಿಸಿ) ಸರ್ವವಿಧದಲ್ಲಿ ಅಲಂಕೃತರಾಗಿರಿ। [ಅಥವಾ ವಾಜೇಷು—ಸಂಗ್ರಾಮಗಳಲ್ಲಿ। ಪರಿ ಭೂಷಥಃ—ಶತ್ರುಗಳನ್ನು ಪರಾಭವಗೊಳಿಸಿ]। ವಾಂ—ನಿಮ್ಮಿಬ್ಬರ। ವೀರ್ಯಂ—ಸಾಮರ್ಥ್ಯವು। ತತ್—ಅಂತಹ ಸಂಗ್ರಾಮವಿಜಯವನ್ನು। ಪ್ರ ಚೇತಿ—ವಿಶೇಷವಾಗಿ ತಿಳಿಸುತ್ತದೆ (ಪ್ರಸಿದ್ಧಿ ಪಡಿಸುತ್ತದೆ).

ಭಾವಾರ್ಥ.

ಎಲೈ ಇಂದ್ರಾಗ್ನಿಗಳೇ, ದೇವಲೋಕಕ್ಕೆ ಪ್ರಕಾಶದಾಯಕರಾದ ನೀವಿಬ್ಬರೂ ಯುದ್ಧಗಳಲ್ಲಿ ಜಯಶಾಲಿಗಳಾಗುತ್ತೀರಿ; ನಿಮ್ಮ ಸಾಮರ್ಥ್ಯವು ನೀವು ಜಯಶಾಲಿಗಳಾಗುತ್ತೀರೆಂಬುದನ್ನು ಪ್ರಸಿದ್ಧಿ ಪಡಿಸುತ್ತದೆ.

## English Translation.

Indra and Agni, illuminators of heaven, be ever graced (with victory) in battles, for such your prowess proclaims.

ವಿಶೇಷವಿಷಯಗಳು.

ದಿವಃ ರೋಚನಾ—ಸ್ವರ್ಗಸ್ಯ ಪ್ರಕಾಶಕೌ। ಯಾಸ್ಕರು ದ್ಯುರಿತ್ಯಹ್ನೋ ನಾಮಧೇಯಂ ದ್ಯೋತತ ಇತಿ ಸತಃ। (ನಿ. ೧-೭) ಎಂದು ಹೇಳಿ ಅಂತರಿಕ್ಷನಾಮಗಳಲ್ಲಿ (ನಿ. ೨-೨೧) ಪಾಠಮಾಡಿದ್ದಾರೆ.

ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ।
ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ।
(ಋ. ಸಂ. ೩-೫೯-೧)

ಮತ್ತು—

ವಿಶ್ವಕರ್ಮನ್ ಹವಿಷಾ ವಾವೃಧಾನಃ ಸ್ವಯಂ ಯಜಸ್ವ ಪೃಥಿವೀಮುತ ದ್ಯಾಂ।
ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ॥
(ಋ. ಸಂ. ೧೦-೮೧-೬)

ಇಲ್ಲಿಯೂ ಸಹ ದ್ಯುಶಬ್ದಕ್ಕೆ ಅಂತರಿಕ್ಷ ಅಥವಾ ಸ್ವರ್ಗ ಎಂಬ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸ್ವರ್ಗವೆಂದು ಅರ್ಥಮಾಡಿ ಇಂದ್ರಾಗ್ನಿಗಳು ಸ್ವರ್ಗವನ್ನು ಪ್ರಕಾಶಗೊಳಿಸುವರು ಎಂದು ವರ್ಣಿಸಿದೆ.

29

**ವಾಜೇಷು ಪರಿ ಭೂಷಥಃ**—**ವಾಜ** ಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಈ ಪದವು ಅನೇಕಾರ್ಥಕವಾಗಿದ್ದರೂ ಇಲ್ಲಿ **ಸಂಗ್ರಾಮ**-ಯುದ್ಧ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದೂ, **ಯುವಾಂ ಪರಿತಃ ಸರ್ವತಃ ಅಲಂಕೃತೌ ಭವಥಃ, ಶತ್ರೂನ್ ಪರಾಜಿತ್ಯ ಸರ್ವತೋ ವಿಜಯಮಾನೌ ವರ್ತೇಥೇ ।** ಇಂದ್ರಾಗ್ನಿಗಳನ್ನು ಸಂಬೋಧಿಸಿ, ಅವರಿಬ್ಬರೂ ಯುದ್ಧಗಳಲ್ಲಿ ಅಲಂಕೃತರಾಗಿರುವರೆಂದೂ, ಶತ್ರುಗಳನ್ನು ಜಯಿಸಿ ಸರ್ವಪ್ರಕಾರಗಳಿಂದಲೂ ಜಯಶೀಲರಾಗಿರುವರೆಂದೂ ವರ್ಣಿಸಿದೆ. ಮತ್ತು-**ಯೊದ್ವಾ ಯುವಾಂ ವಾಜೇಷು ಸಂಗ್ರಾಮೇಷು ಶತ್ರೂನ್ ಪರಿ ಭೂಷಥಃ ಪರಿಭವಥಃ**—ಅಥವಾ ಶತ್ರುಗಳನ್ನು ಯಾವಾಗಲೂ ಜಯಿಸುವವರೆಂದೂ ಹೇಳಿದೆ.

**ವಾಂ ವೀರ್ಯಂ ತತ್ ಪ್ರ ಚೇತಿ** ಎಂಬ ವಾಕ್ಯದಿಂದ ನಿಮ್ಮಿಬ್ಬರ ಸಾಮರ್ಥ್ಯವು ನೀವು ಆಚರಿಸಿರುವ ನಿಮ್ಮ ಅಪ್ರಕಾರವಾದ ಯುದ್ಧದ ಜಯವನ್ನು ಎಲ್ಲರಿಗೂ ತಿಳಿಸುತ್ತದೆ ಎಂದು ವರ್ಣಿಸಿ ಇಂದ್ರಾಗ್ನಿಗಳ ಮಹತ್ತ್ವಪೂರ್ಣವಾದ ವೀರ್ಯದ ಮಹಿಮೆಯನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ.

**ರೋಚನಾ**—ರುಚ ದೀಪ್ತೌ ಧಾತು. ಅನುದಾತ್ತೇತ್ತಾದ ಧಾತುವಾದುದರಿಂದ **ಅನುದಾತ್ತೇತಶ್ಚ ಹಲಾದೇಃ** (ಪಾ. ಸೂ ೩-೨-೧೪೯) ಎಂಬುದರಿಂದ ಇದಕ್ಕೆ ಕರ್ತರಿಯಲ್ಲಿ ಯುಚ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. **ಸುಪಾಂಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ದಿವಃ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭೂಷಥಃ**—**ಭೂಷ** ಅಲಂಕಾರೇ ಧಾತು. **ಲಟ್** ಮಧ್ಯಮ ಪುರುಷ ದ್ವಿವಚನಾಂತ ರೂಪ. **ತಿಙ್ಙತಿಙಃ** ಎಂಬುದರಿಂದ **ತಿಙಂತನಿಘಾತಸ್ವರ** ಬರುತ್ತದೆ.

**ಚೇತಿ**—**ಚಿತೀ** ಸಂಜ್ಞಾನೇ ಧಾತು. ಪ್ರೇರಣಾರ್ಥತೋರುವುದರಿಂದ ಇದು ಅಂತರ್ಭಾವಿತಣ್ಯರ್ಥಕವಾದ ಧಾತು. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್. **ಬಹುಲಂಛಂದಸಿ** ಎಂಬುದರಿಂದ ಶಪಿಗೆ ಲುಕ್. ತಿಪ್ ನಿಮಿತ್ತವಾಗಿ **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಛಾಂದಸವಾಗಿ ಧಾತು ತಕಾರಕ್ಕೆ ಲೋಪ. ಅತಿಙಂತದ ಪದದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೀರ್ಯಮ್**—ವೀರಶಬ್ದಕ್ಕೆ ಯತ್ ಪ್ರತ್ಯಯ ಬಂದಾಗ **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಇದಕ್ಕೆ **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಬರುವುದಿಲ್ಲ. **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಪ್ರತ್ಯಯಕ್ಕೆ ಸ್ವರಿತಸ್ವರ ಬರುತ್ತದೆ.

---

# ಹದಿಮೂರನೆಯ ಸೂಕ್ತವು

ಸಾಯಣಭಾಷ್ಯಂ.

ದ್ವಿತೀಯೇಽನುವಾಕೇ ಸಪ್ತದಶ ಸೂಕ್ತಾನಿ । ತತ್ರ ಪ್ರ ವೋ ದೇವಾಯೇತಿ ಸಪ್ತರ್ಚಮಾದ್ಯಂ ಸೂಕ್ತಂ ವೈಶ್ವಾಮಿತ್ರಋಷಭಸ್ಯಾರ್ಷಮಗ್ನಿದೇವತಾಕಮಾನುಷ್ಟುಭಂ । ಅತ್ರಾನುಕ್ರಮಣಿಕಾ । ಪ್ರ ವಃ ಸಪ್ತ ಋಷಭಸ್ತ್ವಾನುಷ್ಟುಭಮಿತಿ । ವಿಶ್ವಾಮಿತ್ರಪುತ್ರ ಋಷಭ ಋಷಿಃ । ಮಂಡಲಾದಿಪರಿಭಾಷಯಾಗ್ನಿರ್ದೇವತಾ ॥ ಅಗ್ನಿಷ್ಟೋಮ ಇದಂ ಸೂಕ್ತಮಾಜ್ಯಶಸ್ತ್ರಂ । ಪರಾಂಚಧ್ವರ್ಯೋರ್ನಾವೃತ್ತ ಇತಿ ಖಂಡೇ ಸೂತ್ರಿತಂ । ಪ್ರ ವೋ ದೇವಾಯೇತ್ಯಾಜ್ಯಮುಪಸಂತನುಯಾತ್ । ಆ.೫-೯ । ಇತಿ ॥ ಇದಮೇವ ಸೂಕ್ತಂ ಪ್ರಾತರನುವಾಕೇ ಆಶ್ವಿನಶಸ್ತ್ರೇ ಚ ವಿನಿಯುಕ್ತಂ । ಸೂತ್ರಂ ಚ । ಪ್ರ ವೋ ದೇವಾಯಾಗ್ನೇ ಕದಾ ತ ಇತಿ ಪಂಚ । ಆ. ೪-೧೩ । ಇತಿ ॥ ಅಭ್ಯುದಯೇಷ್ಟೌ ಸ ಯಂತೇತ್ಯಗ್ನೇಃ ಪ್ರದಾತುರ್ಯಾಜ್ಯಾ । ಸೂತ್ರಿತಂ ಚ । ಸ ಯಂತಾ ವಿಪ್ರ ಏಷಾಂ ದೀರ್ಘಸ್ತೇ ಅಸ್ತ್ವಂಕುಶಃ । ಆ. ೩-೧೩ । ಇತಿ ॥

ಅನುವಾದವು—ಈ ಸೂಕ್ತದಿಂದ ಮೂರನೆಯ ಮಂಡಲದ ಎರಡನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಹದಿನೇಳು ಸೂಕ್ತಗಳಿರುವವು. ಅವುಗಳಲ್ಲಿ **ಪ್ರ ವೋ ದೇವಾಯ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರಪುತ್ರನಾದ ಋಷಭನೆಂಬುವನು ಋಷಿಯು; ಅಗ್ನಿಯು ದೇವತೆಯು; ಅನುಷ್ಟುಬ್ ಛಂದಸ್ಸು. ಅನುಕ್ರಮಣಿಕೆಯಲ್ಲಿ — **ಪ್ರ ವಃ ಸಪ್ತ ಋಷಭಸ್ತ್ವಾನುಷ್ಟುಭಂ** ಎಂದು ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪರಾಂಚಧ್ವರ್ಯೋರ್ನಾವೃತ್ತ** ಎಂಬ ಖಂಡದ **ಪ್ರ ವೋ ದೇವಾಯೇತ್ಯಾಜ್ಯಮುಪಸಂತನುಯಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೯); ಮತ್ತು ಈ ಸೂಕ್ತವು ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳಿಗಾಗಿ ವಿನಿಯೋಗಿಸಲ್ಪಡುವುದೆಂದು ಆಶ್ವಲಾಯನಶ್ರೌತಸೂತ್ರದ **ಪ್ರ ವೋ ದೇವಯಾಗ್ನೇ ಕದಾ ತ ಇತಿ ಪಂಚ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೩); ಮತ್ತು ಅಭ್ಯುದಯೇಷ್ಟಿಯಲ್ಲಿ ಈ ಸೂಕ್ತದ **ಸ ಯಂತಾ ವಿಪ್ರ ಏಷಾಂ** ಎಂಬ ಮೂರನೆಯ ಋಕ್ಕನ್ನು ಅಗ್ನಿಸಂಬಂಧವಾದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಸ ಯಂತಾ ವಿಪ್ರ ಏಷಾಂ ದೀರ್ಘಸ್ತೇ ಅಸ್ತ್ವಂಕುಶಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೧೩).

———

## ಸೂಕ್ತ—೧೩

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೧೩ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧೩ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ ೭ ॥
ಋಷಿಃ— ಋಷಭೋ ವೈಶ್ವಾಮಿತ್ರಃ ॥
ದೇವತಾ—ಅಗ್ನಿಃ ॥
ಛಂದಃ—ಅನುಷ್ಟುಪ್ ॥

ಸಂಹಿತಾಪಾಠಃ

ಪ್ರ ವೋ ದೇವಾಯಾಗ್ನಯೇ ಬರ್ಹಿಷ್ಠಮರ್ಚಾಸ್ಮೈ ।
ಗಮದ್ದೇವೇಭಿರಾ ಸ ನೋ ಯಜಿಷ್ಠೋ ಬರ್ಹಿರಾ ಸದತ್ ॥ ೧ ॥

ಪದಪಾಠಃ

ಪ್ರ । ವಃ । ದೇವಾಯ । ಅಗ್ನಯೇ । ಬರ್ಹಿಷ್ಠಂ । ಅರ್ಚ । ಅಸ್ಮೈ ।
ಗಮತ್ । ದೇವೇಭಿಃ । ಆ । ಸಃ । ನಃ । ಯಜಿಷ್ಠಃ । ಬರ್ಹಿಃ । ಆ । ಸದತ್ ॥ ೧ ॥

ಸಾಯಣಭಾಷ್ಯಂ.

ಯಜಮಾನೋ ಹೋತ್ರಾದೀನ್ಪ್ರತಿ ಬ್ರೂತೇ । ಹೇ ಹೋತ್ರಾದಯೋ ವೋ ಯುಷ್ಮತ್ಸಂಬಂಧಿನೇ ದೇವಾಯ ದ್ಯೋತಮಾನಾಯಾಸ್ಮೈ ಅಸ್ಮಿನ್ ಕರ್ಮಣಿ ಸ್ತುತ್ಯಾಯಾಗ್ನಯೇ ಬರ್ಹಿಷ್ಠಂ ವೃದ್ಧತಮಂ ಪ್ರಭೂತಮಿದಂ ಸ್ತುತಿರೂಪಂ ಸ್ತೋತ್ರಶಸ್ತ್ರಾದಿ ವೋಕ್ಷ್ಯಜಾತಂ ಪ್ರಾರ್ಚ । ಉಚ್ಚಾರಯತ । ಏವಂ ಸ್ತುತಃ ಸೋಽಗ್ನಿರ್ದೇವೇಭಿರ್ಯಷ್ಟವ್ಯೈರ್ದೇವೈಃ ಸಹಿತಃ ಸನ್ ನೋಽಸ್ಮಾನ್ ಪ್ರತಿ ಆಗಮತ್ । ಆಗಚ್ಛತು । ಆಗತ್ಯ ಚ ಯಜಿಷ್ಠೋ ಯಷ್ಟೃತಮಃ ಸೋಽಗ್ನಿರ್ಬರ್ಹಿರಸ್ಮಾಭಿರ್ದತ್ತಂ ಸ್ತೀರ್ಣೇ ಬರ್ಹಿಷ್ಯಾಸದತ್ । ಆಸೀದತು । ಉಪವಿಶತು ॥ ಬರ್ಹಿಷ್ಠಂ । ಬರ್ಹಿಸ್ತೃತಬ್ದಾತ್ತ್ರಶ್ಛಂದಸೀತ್ಯತಿಶಾಯನ ಇಷ್ಠನ್ । ಅರ್ಚ । ಅರ್ಚ ಪೂಜಾಯಾಂ । ಭೌವಾದಿಕಃ । ಬಹುವಚನಸ್ಯೈಕವಚನಂ । ನಿಘಾತಃ । ಗಮತ್ । ಗಮ್ಲೃ ಗತೌ । ಅಸ್ಯ ಛಂದಸಿ ಲುಙ್ಲಙ್ಲಿಟ ಇತಿ ಲೋಡರ್ಥೇ ಲುಙ್ । ಲೃದಿತ್ತ್ವಾಚ್ಚ್ಲೇರಙ್ । ನಿತ್ಯಂ ಜಾತ ಇತೀಕಾರಲೋಪಃ । ಪಾದಾದಿತ್ವಾನ್ನ ನಿಘಾತಃ । ಯಜಿಷ್ಠಃ । ಯಷ್ಟೃಶಬ್ದಾತ್ತ್ರಶ್ಛಂದಸೀತೀಷ್ಠನ್ । ತುರಿಷ್ಠೇಮೇಯಃಸ್ವಿತಿ ತೃಚೋ ಲೋಪಃ । ನಿತ್ಸ್ವರಃ । ಸದತ್ । ಪೂರ್ವವಲ್ಲೋಡರ್ಥೇ ಲುಙ್ । ಷದ್ಲೃ ವಿಶರಣಗತ್ಯವಸಾದನೇಷ್ವಿತ್ಯಸ್ಯ ಲೃದಿತ್ತ್ವಾದಙ್ । ನಿಘಾತಃ ॥

### ಪ್ರತಿಪದಾರ್ಥ.

(**ಹೇ ಹೋತ್ರಾದಯಃ**—ಎಲೈ ಹೋತ್ರಾದಿಋತ್ವಿಜರೇ) । **ವಃ**—ಯುಷ್ಮತ್ಸಂಬಂಧಿಯೂ । **ದೇವಾಯ**—ದ್ಯೋತಮಾನನೂ । **ಅಸ್ಮೈ**—ಈ (ಕರ್ಮದಲ್ಲಿ ಸ್ತುತ್ಯನೂ ಆದ) । **ಅಗ್ನಯೇ**—ಅಗ್ನಿಗೋಸ್ಕರ । **ಬರ್ಹಿಷ್ಠಂ**—ಅತಿಶ್ರೇಷ್ಠವಾದ ಸ್ತೋತ್ರಶಸ್ತ್ರಾದಿ ಸ್ತುತಿಗಳನ್ನು । **ಪ್ರ ಅರ್ಚ**—ಹೆಚ್ಚಾಗಿ ಉಚ್ಚರಿಸಿ । **ಸಃ**—(ನಿಮ್ಮಿಂದ ಸ್ತುತನಾದ) ಆ ಅಗ್ನಿಯು । **ದೇವೇಭಿಃ**—ಯಷ್ಟವ್ಯದೇವತೆಗಳೊಡನೆ । **ನಃ**—ನಮ್ಮನ್ನುದ್ದೇಶಿಸಿ । **ಆ ಗಮತ್**—ಆಗಮಿಸಲಿ; (ಬಂದು) । **ಯಜಿಷ್ಠಃ**—(ನಮ್ಮಿಂದ) ಪೂಜ್ಯರಲ್ಲಿ ಅತ್ಯುತ್ತಮನಾದ ಅಗ್ನಿಯು । **ಬರ್ಹಿಃ**—(ವೇದಿಯಮೇಲೆ ಹರಡಿರುವ) ದರ್ಭಾಸನದಲ್ಲಿ । **ಆ ಸದತ್**—ಆಸೀನನಾಗಲಿ ॥

### ಭಾವಾರ್ಥ.

ಎಲೈ ಹೋತ್ರಾದಿಋತ್ವಿಜರೇ, ನಿಮ್ಮ ಆ ತೇಜಃಪುಂಜನಾದ ಅಗ್ನಿಯನ್ನುದ್ದೇಶಿಸಿ ಶ್ರೇಷ್ಠವಾದ ಸ್ತೋತ್ರಶಸ್ತ್ರಾದಿಸ್ತುತಿಗಳನ್ನು ಉಚ್ಚರಿಸಿ; ನಿಮ್ಮಿಂದ ಸ್ತುತನಾಗಿ ಪೂಜ್ಯತಮನಾದ ಆ ಅಗ್ನಿಯು ಯಷ್ಟವ್ಯರಾದ ಇತರ ದೇವತೆಗಳೊಡನೆ ನಮ್ಮ ಯಾಗಶಾಲೆಗೆ ಬಂದು ವೇದಿಕೆಯಮೇಲೆ ಹರಡಿರುವ ದರ್ಭಾಸನದಲ್ಲಿ ಆಸೀನನಾಗಲಿ. (ಕುಳಿತುಕೊಳ್ಳಲಿ)

### English Translation.

(Priests) utter devout (praises) to this your divine Agni, that so glorified he may come to us with the gods, and sit down on the sacrificial grass.

### ವಿಶೇಷವಿಷಯಗಳು.

**ದೇವಾಯ—ದ್ಯೋತಮಾನಾಯ.** ನಿರುಕ್ತಕಾರರು **ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ** । ಯಜಮಾನರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವುದರಿಂದಲೂ, ಅಥವಾ ತಾನು ತನ್ನ ಪ್ರಭೂತವಾದ ಮಹಿಮೆಯಿಂದ ಬೆಳಗುತ್ತಿರುವುದರಿಂದಲೂ, ಅಥವಾ ಅಂತರಿಕ್ಷದಲ್ಲಿ ಅಥವಾ ಸ್ವರ್ಗದಲ್ಲಿ ವಾಸಸ್ಥಾನವನ್ನು ಕಲ್ಪಿಸಿಕೊಂಡಿರುವುದರಿಂದಲೂ ಅಗ್ನಿಯು ದೇವಪದದಿಂದ ಅಭಿಧೇಯನಾಗಿರುವನು ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ. ಇಲ್ಲಿ ಪ್ರಕಾಶಿಸುತ್ತಿರುವನೆಂಬ ಅರ್ಥವನ್ನು ವಿವರಿಸಿದೆ.

**ಅಸ್ಮೈ ಬರ್ಹಿಷ್ಠಂ ಪ್ರ ಅರ್ಚ—ಅಸ್ಮಿನ್ ಕರ್ಮಣಿ ಸ್ತುತ್ಯಾಯ ವೃದ್ಧತಮಂ ಪ್ರಭೂತಮಿದಂ ಸ್ತುತಿರೂಪಂ ಸ್ತೋತ್ರಶಸ್ತ್ರಾದಿ ವಾ ಉಕ್ಥ್ಯಜಾತಂ ಉಚ್ಚಾರಯತ** । ಬರ್ಹಿಷ್ಠಃ, ಬರ್ಹಿಷತ್ ಎಂದು ಮಹನ್ನಾಮಗಳಲ್ಲಿ ( ನಿ. ೩-೧೯ ) ಬರ್ಹಿಷ್ಠ ಎಂಬ ಪದವು ಉಕ್ತವಾಗಿದೆ. ಅಗ್ನಿಯು ಯಜ್ಞಕರ್ಮದಲ್ಲಿ ಋತ್ವಿಜರಿಂದ ಸ್ತುತಿಮಾಡಲ್ಪಡಲು ಅರ್ಹನಾಗಿದ್ದಾನೆ. ಸ್ತುತಿಗೆ ಅರ್ಹನಾಗಿರುವ ಅಗ್ನಿಯ ವಿಷಯವಾದ ಪ್ರಭೂತವಾದ ಪ್ರಭಾವವನ್ನು ವ್ಯಕ್ತಗೊಳಿಸುವ ಸ್ತೋತ್ರ ಅಥವಾ ಶಸ್ತ್ರ, ಉಕ್ಥ್ಯ ಇವುಗಳನ್ನು ಬಹಳವಾಗಿ ಉಚ್ಚರಿಸಿರಿ ಎಂದು ಯಜಮಾನನು ಋತ್ವಿಜರನ್ನು ಸಂಬೋಧಿಸಿ ಹೇಳಿರುವನು ಎಂಬ ಆದೇಶವನ್ನು ವಿವರಿಸಿದೆ.

**ಯಜಿಷ್ಠಃ ಬರ್ಹಿಃ ಆ ಸದತ್—ಯಷ್ಟೃತಮಃ ಸಃ ಅಗ್ನಿಃ ಅಸ್ಮಾಭಿಃ ವೇದ್ಯಾಂ ಸ್ತೀರ್ಣೇ ಬರ್ಹಿಷಿ ಆಸೀದತು ಉಪವಿಶತು.** ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಆಹೂತನಾಗಿ ಬರುವ

ದೇವತೆಗಳೊಡಗೂಡಿ ಅಗ್ನಿಯು ನಮ್ಮ ಯಾಗಶಾಲೆಗೆ ಬಂದು ಯಜ್ಞವೇದಿಯಲ್ಲಿ ಹರಡಿರುವ ಬರ್ಹಿಸ್ಸಿನಲ್ಲಿ ಉಪವಿಷ್ಟನಾಗಲಿ ಎಂದು ಆಶಿಸಿದೆ. ಬರ್ಹಿಸ್ ಎಂಬ ಶಬ್ದವು ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ಉದಕ ನಾಮಗಳಲ್ಲಿಯೂ (ನಿ. ೨-೧೪) ಉಕ್ತವಾಗಿದೆ. ಮತ್ತು ಯಾಸ್ಕರು—**ಬರ್ಹಿಃ ಪರಿಬರ್ಹಣಾತ್** (ನಿ ೮-೯) ದರ್ಭೆಗಳನ್ನು ಕತ್ತರಿಸಿ ಹರಡಿರುವ, ಯಜ್ಞದಲ್ಲಿ ಯಜ್ಞಾಂಗವಾಗಿ ಸಿದ್ಧಮಾಡಿರುವ, ಕತ್ತರಿಸಿದ ತುಂಡುದರ್ಭೆಗಳಿಂದ ಕೂಡಿದ ಆಸನವೆಂಬ ಅರ್ಥವನ್ನು **ಪರಿಚ್ಛೇದನಾತ್ ಊನಂ ಹಿ ತದ್ಭವತಿ,** ಪರಿವೃದ್ಧಂ ವಾ ಎಂಬ ವಾಕ್ಯದಿಂದ ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ.

**ಬರ್ಹಿಷ್ಠಮ್**—ಬರ್ಹಿಷ್ಮತ್ ಶಬ್ದ. **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಇದಕ್ಕೆ ಅತಿಶಯಾರ್ಥ ತೋರುವಾಗ ಇಷ್ಠನ್ ಪ್ರತ್ಯಯ **ತುರಿಷ್ಠೇಮೇಯಸ್ಸು** (ಪಾ. ಸೂ. ೬-೪-೧೫೪) ಎಂಬುದರಿಂದ ಪ್ರತ್ಯಯ ಪರವಾದಾಗ ತೃಚಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರ್ಚ**—ಅರ್ಚ ಪೂಜಾಯಾಂ ಧಾತು. ಭ್ವಾದಿ ಲೋಟ್. ನ್ನಕ್ಷ್ಯದಿಂದ ಮಧ್ಯಮಪುರುಷಬಹುವಚನಕ್ಕೆ ಏಕವಚನಪ್ರತ್ಯಯ ಸಿಪ್. ಅದಕ್ಕೆ ಹಿ ಆದೇಶ. ಶಪ್ ವಿಕರಣ. ಅತೋಹೇಃ ಎಂಬುದರಿಂದ ಅದಕ್ಕೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ಗಮತ್**—ಗಮ್ಲೃ ಗತೌ ಧಾತು. **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಇದಕ್ಕೆ ಲೋಡರ್ಥದಲ್ಲಿ ಲುಙ್. ಪ್ರಥಮಪುರುಷಏಕವಚನದಲ್ಲಿ ತಿಪ್. ಇತಶ್ಚ ಎಂಬುದರಿಂದ ಇಕಾರ ಲೋಪ. ಧಾತು ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. **ಬಹುಲಂ ಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಯಜಿಷ್ಠಃ**—ಯಜತೃ ಶಬ್ದಕ್ಕೆ **ತುಶ್ಛಂದಸಿ** ಎಂಬುದರಿಂದ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ಇದು ಪರವಾದಾಗ ತೃಚಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸದತ್**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ತಿಪಿನ ಇಕಾರಲೋಪ. ಧಾತು ಲೃದಿತ್ತಾಗುದರಿಂದ ಹಿಂದಿನಂತೆ ಚ್ಲಿಗೆ ಅಙಾದೇಶ. **ಬಹುಲಂ ಛಂದಸ್ಯ**—ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

**ಋತಾವಾ ಯಸ್ಯ ರೋದಸೀ ದಕ್ಷಂ ಸಚಂತ ಊತಯಃ ।**

**ಹವಿಷ್ಮಂತಸ್ತಮೀಳತೇ ತಂ ಸನಿಷ್ಯಂತೋಽವಸೇ ॥ ೨ ॥**

ಪದಪಾಠಃ

ಋತಽವಾ । ಯಸ್ಯ । ರೋದಸೀ ಇತಿ । ದಕ್ಷಂ । ಸಚಂತೇ । ಊತಯಃ ।

ಹವಿಷ್ಮಂತಃ । ತಂ । ಈಳತೇ । ತಂ । ಸನಿಷ್ಯಂತಃ । ಅವಸೇ ॥ ೨ ॥

ಸಾಯಣಭಾಷ್ಯಂ.

ಯಸ್ಯ ಪೂರ್ವಮಂತ್ರೇ ಪ್ರತಿಪಾದಿತಸ್ಯಾಗ್ನೇಃ ರೋದಸೀ ಇಮೇ ದ್ಯಾವಾಪೃಥಿವ್ಯೌ ವಶೇ ಭವತಃ । ಅಗ್ನೇಃ ಪ್ರಕಾಶಕತ್ವೇನ ತದಧೀನಪ್ರಕಾಶಕೇ ಭವತ ಇತ್ಯರ್ಥಃ । ಕಿಂಚ ಊತಯೋ ಯಜಮಾನಸ್ಯ ಫಲಪ್ರದಾನೇನ ರಕ್ಷಿತಾರೋ ದೇವಾ ದಕ್ಷಂ ಯಸ್ಯಾಗ್ನೇರ್ಬಲಂ ಸಚಂತೇ ಸೇವಂತೇ । ಸಚಂತೇ ಸೇವಂತೇ। ನಿ. ೭-೨೩ । ಇತಿ ಯಾಸ್ಕಃ। ಅಗ್ನೇರ್ಯಜಮಾನದತ್ತಹವಿಷಾಂ ಪ್ರದಾತೃತ್ವೇನ ತದಧೀನಾ ಇತ್ಯರ್ಥಃ । ಏವಂಭೂತಃ ಸೋಽಗ್ನಿರ್ಋತಾವಾ ಸತ್ಯಕರ್ಮಾ । ಸತ್ಯಸಂಕಲ್ಪ ಇತ್ಯರ್ಥಃ । ಕಿಂಚ ಹವಿಷ್ಮಂತಃ ಸಂಭೃತಹವಿಷ್ಕಾ ಯಜಮಾನಾ ಹವಿರ್ವಹನಾರ್ಥಂ ತಮೇವಾಗ್ನಿಮೀಳತೇ । ಸ್ತುತಿರೂಪಾಭಿರ್ಗೀರ್ಭಿಃ ಪೂಜಯಂತಿ । ಕಿಂಚ ಸನಿಷ್ಯಂತೋ ಧನಾದಿಲಾಭಮಿಚ್ಛಂತಸ್ತಮವಸೇ ರಕ್ಷಣಾಯ ತಮೇವಾಗ್ನಿಮಾಶ್ರಯಂತೇ ॥ ಋತಾವಾ । ಋತಶಬ್ದಾತ್ತದಸ್ಯಾಸ್ತೀತಿ ಛಂದಸೀವನಿಪೌ ವಕ್ತವ್ಯಾವಿತಿ ವನಿಪ್ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ । ವನಿಪಃ ಪಿತ್ತ್ವಾದನುದಾತ್ತತ್ವೇ ಪ್ರಾತಿಪದಿಕಸ್ವರಃ । ಸಚಂತೇ । ಸಚ ಸಮವಾಯೇ । ವ್ಯತ್ಯಯೇನಾತ್ಮನೇಪದಂ । ಯದ್ವೃತ್ತಯೋಗಾದನಿಘಾತಃ । ಸನಿಷ್ಯಂತಃ । ಸನಿರ್ಲಾಭಃ । ತಮಿಚ್ಛಂತಃ । ಸುಪ ಆತ್ಮನಃ ಕ್ಯಚ್ । ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಂ ಸುಗ್ವಕ್ತವ್ಯ ಇತಿ ಕ್ಯಚಿ ಪರತಃ ಸುಗಾಗಮಃ । ಕ್ಯಚಃ ಸ್ವರಃ ॥

ಪ್ರತಿಪದಾರ್ಥ.

**ಯಸ್ಯ**—(ಪೂರ್ವಮಂತ್ರಪ್ರತಿಪಾದಿತನಾದ) ಯಾವ ಅಗ್ನಿಯ (ವಶದಲ್ಲಿ) । **ರೋದಸೀ**—ಈ ದ್ಯಾವಾಪೃಥಿವಿಗಳೆರಡೂ (ಇವೆಯೋ, ಮತ್ತು) । **ಊತಯಃ**—(ಫಲಪ್ರದಾನದಿಂದ ಯಜಮಾನನಿಗೆ) ರಕ್ಷಕರಾದ ದೇವತೆಗಳು । (**ಯಸ್ಯ**) **ದಕ್ಷಂ**—(ಯಾವ ಅಗ್ನಿಯ) ಬಲವನ್ನು । **ಸಚಂತೇ**—ಸೇವಿಸುತ್ತಾರೋ । (**ಸಃ**—ಅಂತಹ ಅಗ್ನಿಯು) । **ಋತವಾ**—ಸತ್ಯಭೂತವಾದ ಕರ್ಮವುಳ್ಳವನು (ಅಥವಾ ಸತ್ಯಸಂಕಲ್ಪನು) ; (ಮತ್ತು) । **ಹವಿಷ್ಮಂತಃ**—ಸಂಭೃತಹವಿಷ್ಕರಾದ ಯಜಮಾನರು (ದೇವತೆಗಳಿಗೆ ಹವಿಸ್ಸನ್ನು ವಹಿಸಲೆಂದು) । **ತಂ**—ಅದೇ ಅಗ್ನಿಯನ್ನು । **ಈಳತೇ**—ಸ್ತುತಿಸುತ್ತಾರೆ (ಹಾಗೆಯೇ) । **ಸನಿಷ್ಯಂತಃ**—ಧನಾದ್ಯಪೇಕ್ಷಿಗಳಾಗಿ । **ಅವಸೇ**—ರಕ್ಷಣೆಗೋಸ್ಕರಲೂ । **ತಂ**—ಅವನನ್ನೇ (ಆಶ್ರಯಿಸುತ್ತಾರೆ).

ಭಾವಾರ್ಥ.

ಈ ದ್ಯಾವಾಪೃಥಿವಿಗಳೆರಡೂ ಯಾವ ಪ್ರಕಾಶಕನಾದ ಅಗ್ನಿಯವಶದಲ್ಲಿವೆಯೋ, ಮತ್ತು ಫಲಪ್ರದಾನಾದಿರೂಪವಾಗಿ ಯಜಮಾನರಿಗೆ ರಕ್ಷಕರಾದ ದೇವತೆಗಳೂ ಹವಿರ್ವಾಹಕನಾದ ಅಗ್ನಿಯ ಬಲವನ್ನೇ ಆಶ್ರಯಿಸಿದ್ದಾರೋ, ಅಂತಹ ಸತ್ಯಸಂಕಲ್ಪನಾದ ಅಗ್ನಿಯನ್ನು ಸಂಭೃತಹವಿಷ್ಕರಾದ ಯಜಮಾನರೆಲ್ಲರೂ ದೇವತೆಗಳಿಗೆ ಹವಿಸ್ಸನ್ನು ತಲುಪಿಸೆಂದು ಸ್ತುತಿಸುತ್ತಾರೆ ಮತ್ತು ಧನಾದ್ಯಪೇಕ್ಷಿಗಳಾಗಿ ತಮ್ಮ ರಕ್ಷಣೆಗೋಸ್ಕರಲೂ ಅವನನ್ನೇ ಆಶ್ರಯಿಸುತ್ತಾರೆ.

## English Translation.

The observer of truth, of whom (are) heaven and earth, and whose vigour the protecting (deities) assist: him, the offerers of oblations adore, and those desirous of riches (have recourse) to him for protection.

### ವಿಶೇಷವಿಷಯಗಳು.

**ಯಸ್ಯ ರೋದಸೀ—** ಪೂರ್ವಮಂತ್ರೇ ಪ್ರತಿಪಾದಿತಸ್ಯ ಅಗ್ನೇಃ ಇಮೇ ದ್ಯಾವಾಪೃಥಿವ್ಯೌ ವಶೇ ಭವತಃ ಅಗ್ನೇಃ ಪ್ರಕಾಶಕತ್ವೇನ ತದಧೀನಪ್ರಕಾಶಕೇ ಭವತಃ। ರೋದಸೀ ಎಂಬ ಪದವು (ನಿ. ೩-೩೦) ದ್ಯಾವಾಪೃಥಿವೀನಾಮಗಳಲ್ಲಿ ಉಕ್ತವಾಗಿದೆ.

ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ।

(ಋ. ಸಂ. ೩-೩೦-೫)

ಇಲ್ಲಿ ರೋದಸೀ ರೋಧಸೀ ದ್ಯಾವಾಪೃಥಿವ್ಯೌ ನಿರೋಧನಾತ್ । ಕೂಲಂ ರೋಧಃ ನಿರುಣದ್ಧಿ ಸ್ರೋತಃ (ನಿ. ೬-೧) ಪ್ರವಾಹವನ್ನೂ (ದಡ) ತೀರವನ್ನೂ ತಡೆಯುವುದರಿಂದ ದ್ಯಾವಾಪೃಥಿವಿಗಳು ರೋದಸೀ ಅಥವಾ ರೋಧಸೀ ಎಂಬ ಪದಗಳಿಗೆ ಅಭಿಧೇಯವಾಗಿರುತ್ತವೆ.

ಪ್ರ ವೋ ಮಹೇ ಮಂದಮಾನಾಯಾಂಧಸೋಽರ್ಚಾ ವಿಶ್ವಾನರಾಯ ವಿಶ್ವಾಭುವೇ ।
ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ॥ (ಋ. ಸಂ. ೧೦-೫೦-೧)

ಇಲ್ಲಿ ವೈಶ್ವಾನರಾಗ್ನಿಯ ಸ್ತುತಿಯನ್ನು ದ್ಯಾವಾಪೃಥಿವಿಗಳು ಪೂಜಿಸುತ್ತವೆ ಎಂದು ಹೇಳಿದೆ. ಮತ್ತು ರೋದಸೀ ಎಂಬ ಪದಕ್ಕೆ ದ್ಯಾವಾಪೃಥಿವೀ ಎಂಬ ಅರ್ಥವನ್ನು ವರ್ಣಿಸಿದೆ.

ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ ।
ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ॥

(ಋ. ಸಂ. ೫-೫೬-೮)

ಇಲ್ಲಿ ರೋದಸೀ ರುದ್ರಸ್ಯ ಪತ್ನೀ ರುದ್ರಸ್ಯ ವಿಭೂತಿಃ ಎಂಬ ಅರ್ಥವನ್ನು ವಿವರಿಸಿದೆ.

ಸಾಯಣರು ಪ್ರಭೂತವಾದ ಮಹಿಮೆಯುಳ್ಳವನೆಂದು ಅಗ್ನಿಯನ್ನು ಪ್ರತಿಪಾದಿಸಿರುವುದರಿಂದ ಅಗ್ನಿಯ ಅಧೀನದಲ್ಲಿ ದ್ಯಾವಾಪೃಥಿವಿಗಳು ಇರುವುದರಿಂದಲೂ ಇವುಗಳಿಗೆ ಸ್ವಯಂ ಪ್ರಕಾಶಕತ್ವವು ಇಲ್ಲದ್ದರಿಂದಲೂ ಅಗ್ನಿಯ ಪ್ರಕಾಶದಿಂದಲೇ ಇವುಗಳು ಪ್ರಕಾಶವುಳ್ಳವುಗಳಾಗಿ ಇರುತ್ತವೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಊತಯಃ ದಕ್ಷಂ ಸಚಂತೇ—** ಊತಿ ಎಂಬ ಪದವು **ಊತಿರವನಾತ್** (ನಿ. ೫-೩) ರಕ್ಷಿಸುವುದು ಎಂಬ ಅರ್ಥವನ್ನು ಬೋಧಿಸುವ ಅವ ಧಾತುವಿನಿಂದ ನಿಷ್ಪನ್ನವಾಗಿ ಊತಿ ಶಬ್ದಕ್ಕೆ ರಕ್ಷಿಸುವುದು ಎಂಬ ಅರ್ಥವನ್ನು ವಿವರಿಸಿದೆ. ದಕ್ಷ ಶಬ್ದವು ಬಲನಾಮಗಳಲ್ಲಿ (ನಿ. ೨-೯) ಉಕ್ತವಾಗಿದೆ.

ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।

(ಋ. ಸಂ. ೧೦-೬೪-೫)

ಇಲ್ಲಿ ಆದಿತ್ಯೋ ದಕ್ಷ ಇತ್ಯಾಹುಃ (ನಿ ೧೧-೨೪) ಎಂಬ ವಚನದಿಂದ ದಕ್ಷಪದಕ್ಕೆ ಆದಿತ್ಯನೆಂದು ಅರ್ಥವನ್ನು ಹೇಳಿದೆ.

ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥

(ಋ. ಸಂ. ೨-೨೭-೧)

ಇಲ್ಲಿ ದಕ್ಷಶಬ್ದಕ್ಕೆ ಆದಿತ್ಯರಲ್ಲಿ ಒಬ್ಬನು ಎಂದೂ ಅರ್ಥವನ್ನು ಹೇಳಿದೆ.

ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।

(ಋ. ಸಂ. ೧-೫೯-೬)

ಇಲ್ಲಿ ಸಚಂತೇ ಸೇವಂತೇ-ಸೇವಿಸುತ್ತಾರೆ ಎಂಬ ಅರ್ಥವನ್ನು ವಿವರಿಸಿದೆ. ಯಜ್ಞವನ್ನು ಆಚರಿಸುವ ಯಜಮಾನರಿಗೆ ಬೇಕಾಗುವ ಫಲವನ್ನು ಅನುಗ್ರಹಿಸುವ ದೇವತೆಗಳು ಅಗ್ನಿಯ ಬಲವನ್ನು ಆಶ್ರಯಿಸಿ ಅಗ್ನಿಯನ್ನು ಸೇವಿಸುತ್ತಾರೆ. ಅಂದರೆ ಯಜಮಾನರು ಅಗ್ನಿಯ ಮೂಲಕವಾಗಿ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವುದರಿಂದ ಅಗ್ನಿಯು ಅದನ್ನು ಅವರಿಗೆ ತಲುಪಿಸುವುದರಿಂದ ದೇವತೆಗಳು ಅಗ್ನಿಯ ಅಧೀನದಲ್ಲಿರುವರು ಎಂಬ ಅರ್ಥವನ್ನು ಯಜಮಾನಸ್ಯ ಫಲಪ್ರದಾನೇನ ರಕ್ಷಿತಾರೋ ದೇವಾಃ ಯಸ್ಯಾಗ್ನೇರ್ಬಲಂ ಸೇವಂತೇ । ಆಗ್ನೇರ್ಯಜಮಾನದತ್ತಹವಿಸ್ಪ್ರದತ್ತೇನ ತದಧೀನಾಃ ಎಂಬ ವ್ಯಾಖ್ಯಾನದಿಂದ ವಿವರಿಸಿದ್ದಾರೆ.

ಋತಾವಾ—ಸತ್ಯವಾನ್, ಸತ್ಯಸಂಕಲ್ಪಃ । ಉದಕ, ಯಜ್ಞ, ಸತ್ಯ ಎಂಬ ನಾನಾರ್ಥಗಳು ಋತ ಶಬ್ದಕ್ಕೆ ಇರುತ್ತವೆಯಾಗಿ ಅಗ್ನಿಯು ಸತ್ಯವಾದ ಸಂಕಲ್ಪವುಳ್ಳವನೆಂದು ಇಲ್ಲಿ ವರ್ಣಿಸಿದೆ.

ಹವಿಷ್ಮಂತಃ ತಂ ಈಳತೇ ಸಂಭೃತಹವಿಷ್ಕಾ ಯಜಮಾನಾ ಹವಿರ್ವಹನಾರ್ಥಂ ಅಗ್ನಿಮೇವ ಸ್ತುತಿರೂಪಾಭಿರ್ವಾಗ್ಭಿಃ ಪೂಜಯಂತಿ । ಯಾಗವನ್ನು ಆಚರಿಸುವುದಕ್ಕಾಗಿ ಸಾಮಗ್ರಿಗಳನ್ನು ಸಿದ್ಧಮಾಡಿಕೊಂಡಿರುವ ಯಜಮಾನರು ಹವಿಸ್ಸುಗಳನ್ನು ಆಯಾಯ ದೇವತೆಗಳಿಗೆ ಒಯ್ಯುವುದಕ್ಕಾಗಿ ಸ್ತುತಿರೂಪವಾದ ವಾಕ್ಕುಗಳಿಂದ ಅಗ್ನಿಯನ್ನು ಸ್ತುತಿಸುತ್ತಾರೆ ಎಂಬ ಅರ್ಥವನ್ನು ವರ್ಣಿಸಿದೆ.

ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ । ಯಜ್ಞೇಷು ದೇವಮೀಳತೇ ।

(ಋ. ಸಂ. ೧-೧೫-೭)

ಇಲ್ಲಿ ಈಳತೇ ಎಂಬ ಪದಕ್ಕೆ ಯಾಚಂತಿ, ಸ್ತುವಂತಿ ವರ್ಧಯಂತಿ ಪೂಜಯಂತಿ ಇತಿ ವಾ—ಸ್ತುತಿಮಾಡುತ್ತಾರೆ, ಯಾಚಿಸುತ್ತಾರೆ, ವೃದ್ಧಿಯಾಗುವಂತೆ ಪೋಷಿಸುತ್ತಾರೆ, ಅಥವಾ ಪೂಜಿಸುತ್ತಾರೆ ಎಂದು ಅರ್ಥವನ್ನು (ನಿ. ೮-೧) ವಿವರಿಸಿದೆ.

ಸನಿಷ್ಯಂತಃ ತಮವಸೇ—ಧನಾದಿಲಾಭಮಿಚ್ಛಂತಃ ರಕ್ಷಣಾಯ ತಮೇವಾಶ್ರಯಂತಿ । ನಿರುಕ್ತಕಾರರು—

ಹಿನೋತಾ ನೋ ಅಧ್ವರಂ ದೇವಯಜ್ಯಾ ಹಿನೋತ ಬ್ರಹ್ಮ ಸನಯೇ ಧನಾನಾಂ ।

(ಋ. ಸಂ. ೧೦-೩೦-೧೧)

ಎಂಬಲ್ಲಿ ಸನಯೇ ಎಂಬ ಪದಕ್ಕೆ ಧನಗಳನ್ನು ಹೊಂದುವುದಕ್ಕಾಗಿ ಎಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯ

30

ಇದು—ಯಜಮಾನರು ಧನವೇ ಮೊದಲಾದವುಗಳನ್ನು ಹೊಂದಲು ಇಚ್ಛೆಯಿಂದಲೂ ರಕ್ಷಣೆಗಾಗಿಯೂ ಅಗ್ನಿಯನ್ನೇ ಆಶ್ರಯಿಸಿರುವರೆಂಬ ಅರ್ಥವನ್ನು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ.

**ಋತಾವಾ**—ಋತ ಶಬ್ದಕ್ಕೆ ಮತ್ವರ್ಥದಲ್ಲಿ **ಛಂದಸೀವನಿಪೌವಕ್ತವ್ಯೌ** ಎಂಬ ವಚನದಿಂದ ವನಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ಸಂಹಿತಾದಲ್ಲಿ ದೀರ್ಘ. ವನಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಪ್ರಾತಿಪದಿಕಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

**ಸಚಂತೇ**—ಷಚ ಸಮವಾಯೇ ಧಾತು. **ವ್ಯತ್ಯಯೋಬಹುಲಮ್** (ಪಾ. ಸೂ ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಈಳತೇ**—ಈಡ ಸ್ತುತೌ ಧಾತು. ಅದಾದಿ. ಲಟ್ ಪ್ರಥಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸನಿಷ್ಯಂತಃ**—ಸನಿ ಶಬ್ದವು ಲಾಭಾರ್ಥದಲ್ಲಿ ಪ್ರಯುಕ್ತವಾಗಿದೆ. ಸನಿಂ ಆತ್ಮನಃ ಇಚ್ಛಂತಃ ಸನಿಷ್ಯಂತಃ **ಸುಪಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಸರ್ವಪ್ರಾತಿಪದಿಕೇಭ್ಯಃ ಲಾಲಸಾಯಾಂ ಸುಗ್ವಕ್ತವ್ಯಃ** ಎಂಬ ವಚನದಿಂದ ಕ್ಯಚ್ ಪರವಾಗಾಗ ಪ್ರಾತಿಪದಿಕಕ್ಕೆ ಸುಕಾಗಮ. **ಸನಾದ್ಯಂತಾಧಾತವಃ** ಎಂಬುದರಿಂದ ಸನಿಷ್ಯ ಎಂಬ ಕ್ಯಜಂತಕ್ಕೆ ಧಾತುಸಂಜ್ಞಾ. ಇದರ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಶಪ್. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಕ್ಯಚ್ ಸ್ವರ ಉಳಿಯುತ್ತದೆ. ಏಕಾದೇಶಸ್ವರದಿಂದ ಏಕಾದೇಶವೂ ಉದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

ಸಂಹಿತಾಪಾಠಃ

ಸ ಯಂತಾ ವಿಪ್ರ ಏಷಾಂ ಸ ಯಜ್ಞಾನಾಮಥಾ ಹಿ ಷಃ ।
ಅಗ್ನಿಂ ತಂ ವೋ ದುವಸ್ಯತ ದಾತಾ ಯೋ ವನಿತಾ ಮಘಂ ॥ ೩ ॥

ಪದಪಾಠಃ

ಸಃ । ಯಂತಾ । ವಿಪ್ರಃ । ಏಷಾಂ । ಸಃ । ಯಜ್ಞಾನಾಂ । ಅಥ । ಹಿ । ಸಃ ।
ಅಗ್ನಿಂ । ತಂ । ವಃ । ದುವಸ್ಯತ । ದಾತಾ । ಯಃ । ವನಿತಾ । ಮಘಂ ॥ ೩ ॥

ಸಾಯಣಭಾಷ್ಯಂ.

ವಿಪ್ರೋ ಮೇಧಾವೀ ಕರ್ಮಾಭಿಜ್ಞಃ ಸೋಽಗ್ನಿರೇಷಾಂ ಕಾಲಾಪರಾಧೇನ ಹವಿರ್ನಿರ್ವಾಪಂ ಕೃತವತಾಂ ಯಜಮಾನಾನಾಂ ಯಥೋಕ್ತಕರ್ಮಪ್ರದರ್ಶನೇನ ತತ್ರ ಪ್ರವರ್ತಕಃ । ಅಥ ಕಿಂಚ ಯಜ್ಞಾನಾಂ ಜ್ಯೋತಿಷ್ಟೋಮಾದೀನಾಂ ಸೋಽಗ್ನಿರ್ನಿಯಂತಾ ಫಲಪ್ರದಾನೇನ ನಿಯಾಮಕಃ । ಹಿ ಪ್ರಸಿದ್ಧೌ । ಅತ ಏವ ಸರ್ವಸ್ಯ ನಿಯಂತಾ ಖಲು । ಕಿಂಚ ಸೋಽಗ್ನಿರ್ದಾತಾ ಜ್ಯೋತಿಷ್ಟೋಮಾದಿಕರ್ಮ-ಫಲದಾತಾ ಮಘಂ ಮಹನೀಯಂ ಧನಂ । ಮಘಂ ರೇಕ್ಣ ಇತಿ ತನ್ನಾಮಸು ಪಾಠಾತ್ । ತದ್ಧನಂ ವನಿತಾ ಪ್ರಯಚ್ಛಂಶ್ಚ ಭವತಿ । ವೋ ಯುಷ್ಮತ್ಸಂಬಂಧಿನಂ ತಾದೃಶಮಗ್ನಿಂ ಹೇ ಋತ್ವಿಜೋ ಯೂಯಂ ದುವಸ್ಯತ । ಆಹುತಿಪ್ರದಾನೇನ ಪರಿಚರತ । ದುವಸ್ಯತಿಃ ಪರಿಚರಣಕರ್ಮಾ ನಮಸ್ಯತಿ ದುವಸ್ಯತೀತಿ ತನ್ನಾಮಸು ಪಾಠಾತ್ ॥ ಯಂತಾ । ಯಮ ಉಪರಮ ಇತ್ಯಸ್ಯ ತೃಚಿ ರೂಪಂ । ಋಮತನಸಿತ್ಯಾದಿನಾ ಅನಬಾದೇಶಃ । ಚಿತ್ಸ್ವರಃ । ಅಥಾ । ನಿಪಾತಸ್ಯೇತಿ ದೀರ್ಘಃ । ದುವಸ್ಯತ । ದುವಃ ಪರಿಚರಣಂ । ತದಿಚ್ಛಂತಃ । ಸುಪಃ ಕ್ಯಚ್ । ತದಂತಸ್ಯ ಧಾತೋರ್ಲೋಟಿ ರೂಪಂ । ದಾತಾ । ಡುದಾಞ್ ದಾನೇ । ತಾಚ್ಛೀಲಿಕಸ್ತೃನ್ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ.

ವಿಪ್ರಃ—ಮೇಧಾವಿಯಾದ (ಕರ್ಮಾಭಿಜ್ಞನಾದ) । ಸಃ—ಆ ಅಗ್ನಿಯು । ಏಷಾಂ—ಹವಿರಾದಿಗಳನ್ನ ಪೀಸುವ ಯಜಮಾನರಿಗೆ । ಯಂತಾ ಪ್ರವರ್ತಕನು । ಅಥ—ಮತ್ತು । ಯಜ್ಞಾನಾಂ—ಜ್ಯೋತಿಷ್ಟೋಮಾದಿಯಜ್ಞಗಳಿಗೆ । ಸಃ—ಆ ಅಗ್ನಿಯು । (ಯಂತಾ)—(ಫಲಪ್ರದಾತೃರೂಪನಾಗಿ) ನಿಯಾಮಕನು ; (ಆದುದರಿಂದಲೇ) । ಸಃ—ಆ ಅಗ್ನಿಯು । (ಯಂತಾ) ಹಿ—ಸರ್ವನಿಯಾಮಕನಷ್ಟೇ । ದಾತಾ—(ಜ್ಯೋತಿಷ್ಟೋಮಾದಿ ಕರ್ಮಗಳಿಗೆ) ಫಲದಾತೃವಾದ । ಯಃ—ಯಾವ ಅಗ್ನಿಯು । ಮಘಂ—ಮಹನೀಯವಾದ ಧನವನ್ನು । ವನಿತಾ—ಕೊಡುವವನು (ಆಗುತ್ತಾನೆಯೋ) । ತಂ—ಅಂತಹ । ವಃ—ನಿಮ್ಮವನಾದ । ಅಗ್ನಿಂ—ಅಗ್ನಿಯನ್ನು । (ಹೇ ಋತ್ವಿಜಃ—ಎಲೈ ಋತ್ವಿಜರೇ, ನೀವು) । ದುವಸ್ಯತ—(ಆಹುತಿಪ್ರದಾನದಿಂದ) ಉಪಚರಿಸಿ ॥

ಭಾವಾರ್ಥ.

ಕರ್ಮಜ್ಞನಾದ ಅಗ್ನಿಯು ಯಾಗಕರ್ತೃಗಳಿಗೆ ಮಾರ್ಗದರ್ಶಕನು ; ಅವನೇ ಫಲಪ್ರದಾತೃವಾಗಿ ಜ್ಯೋತಿಷ್ಟೋಮಾದಿಯಾಗನಿಯಾಮಕನು ; ಆದುದರಿಂದ ಅವನು ಸರ್ವನಿಯಾಮಕನೆನ್ನಿಸಿಕೊಳ್ಳುತ್ತಾನೆ ; ಅವನೇ ಶ್ರೇಷ್ಠವಾದ ಧನವನ್ನು ಎಲ್ಲರಿಗೂ ಅನುಗ್ರಹಿಸುವವನು ; ಅಂತಹ ಅಗ್ನಿಯನ್ನು, ಎಲೈ ಋತ್ವಿಜರೇ, ಆಹುತ್ಯಾದಿಗಳಿಂದ ಪರಿಚರಿಸಿ.

English Translation.

He, the sage, is the director of those (who sacrifice), he is (the regulator) of sacrifices : worship him your (benefactor), the donor, who is the bestower of wealth.

ವಿಶೇಷವಿಷಯಗಳು

**ವಿಪ್ರಃ ಸಃ ಏಷಾಂ ಯಂತಾ—ಮೇಧಾವೀ ಕರ್ಮಾಭಿಜ್ಞಃ ಅಗ್ನಿಃ ಕಾಲಾಪರಾಧೇನ ಹವಿರ್ನಿರ್ವಾಪಂ ಕೃತವತಾಂ ಯಜಮಾನಾನಾಂ ಯಥೋಕ್ತಕರ್ಮಪ್ರದರ್ಶನೇನ ತತ್ರ ಪ್ರವರ್ತಕಃ । ಈ**

ಋಕ್ಕಿನಲ್ಲಿರುವ ಯನ್ತಾ ಎಂಬ ಪದವನ್ನು ಆವೃತ್ತಿಮಾಡಿದೆ. ಈ ವಾಕ್ಯದಲ್ಲಿ ಪ್ರವರ್ತಕನೆಂದು ಅರ್ಥಮಾಡಿದೆ. ವಿಪ್ರಶಬ್ದವು ಮೇಧಾವಿನಾಮಗಳಲ್ಲಿ ಉಕ್ತವಾಗಿದೆ. ಈ ಪದವನ್ನು ಸಃ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯೋಗಿಸಿದೆ. ಇದರಿಂದ ಅಗ್ನಿಯು ಮೇಧಾವಿಯೆಂದೂ, ಕರ್ಮಗಳನ್ನು ಶಾಸ್ತ್ರಕ್ಕನುಸಾರವಾಗಿ ಆಚರಿಸುವ ಕ್ರಮವನ್ನು ತಿಳಿದವನೆಂದೂ ಅರ್ಥಮಾಡಿ, ವಿಧ್ಯುಕ್ತಕಾಲದಲ್ಲಿ ಕರ್ಮವನ್ನು ಆಚರಿಸದೆ ಬೇರೆ ಕಾಲದಲ್ಲಿ ಕರ್ಮಾಂಗವಾದ ಹವಿಸ್ಸನ್ನು ಅರ್ಪಿಸುವ ಯಜಮಾನರಿಗೆ ಸರಿಯಾದ ರೀತಿಯಿಂದ ಕರ್ಮವನ್ನು ಆಚರಿಸುವ ಕ್ರಮವನ್ನು ಉಪದೇಶಮಾಡಿ, ಆಯಾಯ ಕರ್ಮಗಳನ್ನು ಆಚರಿಸುವಂತೆ ಆಯಾಯ ಯಜಮಾನರನ್ನು ಪ್ರೇರಿಸುವವನೆಂಬ ಅರ್ಥವನ್ನು ವಿವರಿಸಿದೆ. ಇದರಿಂದ-ಅಗ್ನಿಃ ಯಜಮಾನಾನಾಂ ಕರ್ಮಸು ಪ್ರವರ್ತಯಿತಾ ಎಂಬ ಅರ್ಥವನ್ನು ಹೇಳಿದೆ.

**ಯಜ್ಞಾನಾಂ ಸಃ ಯನ್ತಾ ಹಿ— ಜ್ಯೋತಿಷ್ಟೋಮಾದೀನಾಂ ಅಗ್ನಿಃ ಫಲಪ್ರದಾನೇನ ನಿಯಾಮಕಃ** | ಯನ್ತಾರಃ ಎಂದು ಯಜ್ಞಕರ್ಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. ಇಲ್ಲಿ ಯನ್ತಾ ಎಂಬ ಪದಕ್ಕೆ ನಿಯಂತಾ ಎಂಬ ಅರ್ಥವನ್ನು ಮಾಡಿ, ಹಿ ಎಂಬ ನಿಪಾತಕ್ಕೆ ಪ್ರಸಿದ್ಧಿ ಎಂದು ಅರ್ಥವನ್ನು ವಿವರಿಸಿದೆ. ಅಗ್ನಿಯು ಜ್ಯೋತಿಷ್ಟೋಮವೇ ಮೊದಲಾದ ಕರ್ಮಗಳಿಗೆ ಫಲವನ್ನು ಅನುಗ್ರಹಿಸುವವನಾದುದರಿಂದಲೂ, ಪ್ರಪಂಚವೆಲ್ಲವನ್ನೂ ತಾನು ಅಧೀನದಲ್ಲಿರಿಸಿಕೊಂಡು ಎಲ್ಲಕ್ಕೂ ನಿಯಾಮಕನಾಗಿರುವುದರಿಂದಲೂ, ಯಜಮಾನರು ಆಚರಿಸುವ ಯಜ್ಞಾದಿಕರ್ಮಗಳಿಗೆ ನಿಯಾಮಕನೆಂದು ವಿವರಿಸಿದೆ.

**ಸಃ ಅಗ್ನಿಃ ದಾತಾ— ಜ್ಯೋತಿಷ್ಟೋಮಾದಿಕರ್ಮಫಲದಾತಾ** | ದಾತಾ ಎಂಬ ಪದವು ದಾನ ಮಾಡುವವನು ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿರುವುದರಿಂದ ಇಲ್ಲಿ ಯಜಮಾನನಿಗೆ ಅವನು ಆಚರಿಸುವ ಯಜ್ಞಾದಿಕರ್ಮಗಳೆಲ್ಲಕ್ಕೂ ಫಲವನ್ನು ಅನುಗ್ರಹಿಸುವನೆಂಬ ಅರ್ಥವನ್ನು ವರ್ಣಿಸಿದೆ.

**ಮಘಂ— ಮಂಹನೀಯಂ ಧನಂ** | ಮಘ ಎಂಬ ಪದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಮತ್ತು **ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ** | ದಾನಮಾಡು ಎಂಬ ಅರ್ಥವನ್ನು ಬೋಧಿಸುವ ಮಂಹಧಾತುವಿನಿಂದ ನಿಷ್ಪನ್ನವಾದ ಮಘಶಬ್ದವು ದಾನಸಾಧನವಾಚಿಯಾಗಿ ಧನ ಎಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿದೆ. ಇದರಿಂದ ಸಾಯಣರು ಧನಕ್ಕೆ ಮಂಹನೀಯಂ ದಾನಾರ್ಹವಾದುದು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ವನಿತಾ—** ಅಗ್ನಿಯು ಯಜಮಾನರಿಗೆ ಧನವನ್ನು ಅನುಗ್ರಹಿಸುವನು ಎಂದು ಅರ್ಥಮಾಡಿದೆ.

**ವಃ ತಂ ಅಗ್ನಿಂ ದುವಸ್ಯತ— ಹೇ ಋತ್ವಿಜಃ ಯುಷ್ಮತ್ಸಂಬಂಧಿನಂ ತಾದೃಶಂ ಅಗ್ನಿಂ ಆಹುತಿಪ್ರದಾನೇನ ಪರಿಚರಿತ**-ದುವಸ್ಯತಿ ಎಂಬ ಶಬ್ದವು ಪರಿಚರಣಕರ್ಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಋತ್ವಿಜರನ್ನು ಸಂಬೋಧಿಸಿ (ಆಪ್ರಕಾರವಾದ) ಯಜ್ಞಫಲಪ್ರದಾತೃವೂ, ಯಜ್ಞನಿಯಾಮಕನೂ, ಧನಪ್ರದಾತೃವೂ ಆಗಿರುವ ಪ್ರಭಾವಶಾಲಿಯಾದ ಅಗ್ನಿಯನ್ನು ಉದ್ದೇಶಮಾಡಿ ಹವಿಸ್ಸುಗಳನ್ನು ಅರ್ಪಿಸಿ ಸೇವಿಸಿರಿ ಎಂದು ಮಂತ್ರದ್ರಷ್ಟೃವಾದ ಋಷಿಯ ಆದೇಶವು ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ.

**ಯಂತಾ—** ಯಮ ಉಪರಮೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಧಾತು ಮಕಾರಕ್ಕೆ ಅನುಸ್ವಾರ ಪರಸವರ್ಣ. **ಚಿತ್ತ್ವ**ದುದರಿಂದ ಅಂತೋದಾತ್ತಸ್ವರ ಬರುತ್ತದೆ. ಇದಕ್ಕೆ ಸು ಪರವಾದಾಗ

**ಋದುಶನಸ್ಪುರುದಂ**—(ಪಾ ಸೂ. ೭-೧-೯೪) ಎಂಬುದರಿಂದ ಅನಙಾದೇಶ. **ಅಪ್‌ತೃನ್‌ತೃಚ್**—(ಪಾ. ಸೂ. ೬-೪-೧೧) ಎಂಬುದರಿಂದ ಉಪಧಾದೀರ್ಘ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ. **ನಲೋಪಃ ಪ್ರಾತಿ**—ಸೂತ್ರದಿಂದ ನಲೋಪ. ಯಂತಾ ಎಂದು ರೂಪವಾಗುತ್ತದೆ.

ಅಥ—ನಿಪಾತಸ್ಯ ಚ—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ದುವಸ್ಯತ**—ದುವಸ್ ಪರಿಚರಣಾರ್ಥದಲ್ಲಿ ಪ್ರಯುಕ್ತವಾಗಿದೆ. ದುವಃ ಆತ್ಮನಃ ಇಚ್ಛಂತಃ ಎಂದು ಅರ್ಥ ವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್ ಪ್ರತ್ಯಯ. **ಸನಾದ್ಯಂತಾಧಾತವಃ** ಎಂಬುದರಿಂದ ದುವಸ್ಯ ಎಂಬುದಕ್ಕೆ ಧಾತು ಸಂಜ್ಞಾ ಬರುತ್ತದೆ. ಕ್ಯಜಂತದ ಮೇಲೆ ಲೋಟ್ ಮಧ್ಯಮ ಪುರುಷ ಬಹುವಚನದಲ್ಲಿ ದುವಸ್ಯತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ದಾತಾ—ಡುದಾಞ್ ದಾನೇ ಧಾತು. ತಚ್ಛೀಲಾರ್ಥ ತೋರುವಾಗ ಇದಕ್ಕೆ ತೃನ್ ಪ್ರತ್ಯಯ. ಇದು ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ವನಿತಾ—ವನುಧಾತುವು ಅನೇಕಾರ್ಥದಲ್ಲಿ ಪ್ರಯುಕ್ತವಾಗುವುದರಿಂದ ಇಲ್ಲಿ ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. ಹಿಂದಿನಂತೆ ತಚ್ಛೀಲಾರ್ಥದಲ್ಲಿ ತೃನ್ ಪ್ರತ್ಯಯ, ಇಡಾಗಮ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರಬರುತ್ತದೆ. ಪ್ರಥಮಾ ಏಕವಚನಾತರೂಪ.

ಸಂಹಿತಾಪಾಠಃ

ಸ ನಃ ಶರ್ಮಾಣಿ ವೀತಯೇಽಗ್ನಿರ್ಯಚ್ಛತು ಶಂತಮಾ ।
ಯತೋ ನಃ ಪ್ರುಷ್ಣವದ್ವಸು ದಿವಿ ಕ್ಷಿತಿಭ್ಯೋ ಅಪ್ಸ್ವಾ ॥ ೪ ॥

ಪದಪಾಠಃ

ಸಃ । ನಃ । ಶರ್ಮಾಣಿ । ವೀತಯೇ । ಅಗ್ನಿಃ । ಯಚ್ಛತು । ಶಂಽತಮಾ ।
ಯತಃ । ನಃ । ಪ್ರುಷ್ಣವತ್ । ವಸು । ದಿವಿ । ಕ್ಷಿತಿಽಭ್ಯಃ । ಅಪ್ಽಸು । ಆ ॥ ೪ ॥

ಸಾಯಣಭಾಷ್ಯಂ.

**ಸೋಽಗ್ನಿರ್ನೋಽ**ಸ್ಮಭ್ಯಂ ಹವಿಷ್ಪ್ರದಾತೃಭ್ಯೋಽಸ್ಮಭ್ಯಂ ಶಂತಮಾ ಪಶುಪುತ್ರಾದಿಸಮೃದ್ಧ್ಯಾಽತಿಶಯೇನ ಸುಖಕರಾಣಿ । ಶರ್ಮಶಬ್ದೋ ಗೃಹವಾಚೀ ಛಾಯಾ ಶರ್ಮ ವರ್ಮೇತಿ ತನ್ನಾಮಸು ಪಾಠಾತ್ । ತಥಾ-ವಿಧಾನಿ ಗೃಹಾಣಿ ವೀತಯೇ ಸಂಭಜನಾಯಾಗ್ನಿಹೋತ್ರಾದಿಕರ್ಮಪ್ರಾಪ್ತ್ಯರ್ಥಂ ಯಚ್ಛತು । ದದಾತು ।

ಯತೋ ಯಸ್ಮಾದಗ್ನೇಃ ಸಕಾಶಾತ್ ಪುಷ್ಟವತ್ಸಮೃದ್ಧಿಮದ್ದಾನಭೋಗಾದಿನಾ ವ್ಯಯೇ ಸತ್ಯಪ್ಯತಿಶಯೇನ ವರ್ಧಮಾನಂ ದಿವಿ ದ್ಯುಲೋಕೇ ಕ್ಷಿತಿಭ್ಯೋ ಭೂಲೋಕಾದಪ್ಸ್ವಂತರಿಕ್ಷೇ ಚ ಸಮುತ್ಪನ್ನಂ ವಸು ತತ್ತಲ್ಲೋಕೇ ಅಸಾಧಾರಣ್ಯೇನ ವರ್ತಮಾನಂ ಧನಮಾ ಸಮಂತಾದುಪಸೇವತೇ । ಯತೋಽಗ್ನೇಃ ಪ್ರಸಾದಾತ್ ತ್ರಿಷು ಲೋಕೇಷು ವಿದ್ಯಮಾನಂ ಧನಮಸ್ಮಾನಾಗಚ್ಛತಿ ಸೋಽಗ್ನಿರಿತಿ ಪೂರ್ವೇಣಾನ್ವಯಃ ॥ ವೀತಯೇ । ವೀ ಗತಿಕಾಂತ್ಯಾದಿಷು । ಮಂತ್ರೇ ವೃಷೇಷಪಚೇತ್ಯಾದಿನಾ ಕ್ತಿನ್ । ಉದಾತ್ತಃ ಕ್ತೇನ ನಿಪಾತನಾದುದಾತ್ತಃ । ಯಚ್ಛತು । ಯಮ ಉಪರಮೇ । ಇಷುಗಮಿಯಮಾಂ ಛ ಇತಿ ಮಕಾರಸ್ಯ ಛಃ । ಪುಷ್ಟವತ್ । ಪುಷ ಸ್ನೇಹನಸೇಚನಪೂರಣೇಷು । ಅಸ್ಮಾದೌಣಾದಿಕೋ ನಕ್ ಪ್ರತ್ಯಯಃ । ತದಸ್ಯಾಸ್ತೀತಿ ಮತುಪ್ । ತಸ್ಯೋದಾತ್ತತಾಭಾವಶ್ಛಾಂದಸಃ ॥

ಪ್ರತಿಪದಾರ್ಥ.

ಯತಃ—ಯಾವ ಅಗ್ನಿಯಿಂದ । ಪುಷ್ಟವತ್—(ದಾನಭೋಗಾದಿರೂಪವಾಗಿ ವ್ಯಯವಾದರೂ) ಅಭಿವೃದ್ಧಿಹೊಂದುವುದೂ । ದಿವಿ—ದೇವಲೋಕದಲ್ಲಿ । ಕ್ಷಿತಿಭ್ಯಃ—ಭೂಲೋಕದಿಂದ । ಅಪ್ಸು (ಚ)—ಉದಕಗಳಲ್ಲಿಯೂ (ಸಮುತ್ಪನ್ನವಾದುದು) ಅದ । ವಸು—(ಅಸಾಧಾರಣವಾದ) ಧನವು । ಆ—ಸರ್ವತಃ ಪ್ರಾಪ್ತವಾಗುತ್ತದೆಯೋ । ಸಃ ಅಗ್ನಿಃ—ಅಂತಹ ಅಗ್ನಿಯು । ನಃ—ನಮ್ಮಗಳಿಗೆ । ಶಂತಮಾ—(ಪಶುಪುತ್ರಾದ್ಯಭಿವೃದ್ಧಿದ್ವಾರಾ) ಸುಖವನ್ನುಂಟುಮಾಡುವ । ಶರ್ಮಾಣಿ—ಗೃಹಗಳನ್ನು । ವೀತಯೇ—(ಅಗ್ನಿಹೋತ್ರಾದಿ-ಕರ್ಮ) ಪ್ರಾಪ್ತಿಗೋಸ್ಕರ । ಯಚ್ಛತು—ದಾನಮಾಡಲಿ (ಕೊಡಲಿ)

ಭಾವಾರ್ಥ.

ಈ ಅಗ್ನಿಯಿಂದ, ಸ್ವರ್ಗಲೋಕ, ಭೂಲೋಕ ಮತ್ತು ಉದಕಗಳಿಗೆ ಸಂಬಂಧಿಸಿರುವ ಮತ್ತು ಎಷ್ಟೇ ವ್ಯಯವಾದರೂ ಅಭಿವೃದ್ಧಿಹೊಂದುತ್ತಲೇ ಇರುವ ಧನವು ಲಬ್ಧವಾಗುತ್ತದೆ; ಇಂತಹ ಅಗ್ನಿಯು ಪಶುಪುತ್ರಾದ್ಯಭಿವೃದ್ಧಿದ್ವಾರಾ ಸುಖವನ್ನುಂಟುಮಾಡತಕ್ಕವುಗಳೂ, ನಮ್ಮ ಅಗ್ನಿಹೋತ್ರಾದಿಕರ್ಮಗಳಿಗೆ ಅನುಕೂಲವೂ ಆದ ಗೃಹಗಳನ್ನು ನಮಗೆ ಅನುಗ್ರಹಿಸಲಿ.

English Translation.

May that Agni bestow upon us prosperous dwellings for our maintenance, so that from him infinite wealth, whether it may be in heaven or from earth, or in the waters (may come to us).

ವಿಶೇಷವಿಷಯಗಳು.

ಸಃ ಅಗ್ನಿಃ ನಃ ಶಂತಮಾ ವೀತಯೇ ಯಚ್ಛತು—ಹವಿಷ್ಪ್ರದಾತೃಭ್ಯಃ ಅಸ್ಮಭ್ಯಂ ಪಶುಪುತ್ರಾದಿಸಮೃದ್ಧ್ಯಾ ಅತಿಶಯೇನ ಸುಖಕರಾಣಿ ತಥಾವಿಧಾನಿ ಗೃಹಾಣಿ ಸಂಭಜನಾಯ ಅಗ್ನಿಹೋತ್ರಾದಿಕರ್ಮಪ್ರಾಪ್ತ್ಯರ್ಥಂ ದದಾತು । ಶರ್ಮ ವರ್ಮ ಇತಿ ಗೃಹನಾಮಸು ಪಾಠಾತ್ ಶರ್ಮಶಬ್ದಃ ಗೃಹವಾಚೀ । ಶರ್ಮ ಶಬ್ದವು ಗೃಹನಾಮಗಳಲ್ಲಿಯೂ ಸುಖನಾಮಗಳಲ್ಲಿಯೂ (ನಿ. ೩-೧೩) ಉಕ್ತವಾಗಿದೆ.

ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ ।
ಯಚ್ಛಾ ನಃ ಶರ್ಮ ಸಪ್ರಥಃ ॥

(ಋ. ಸಂ. ೧-೨೨-೧೫)

ಎಂಬಲ್ಲಿ ಶರ್ಮಶಬ್ದಕ್ಕೆ ಸುಖ ಎಂದು ಅರ್ಥವನ್ನು ವಿವರಿಸಿದೆ. ಶಂತಮ ಎಂಬ ಪದಕ್ಕೆ ಸಾಮಾನ್ಯವಾಗಿ ಬಹಳ ಸುಖಕರವೆಂಬ ಅರ್ಥವಾಗುತ್ತದೆ. ಸಾಯಣರು ಈ ಶಂತಮ ಶಬ್ದವು ಗೃಹವಾಚಕವಾದ ಶರ್ಮಶಬ್ದದ ಪರ್ಯಾಯವೆಂದು ಅರ್ಥವನ್ನು ವಿವರಿಸಿ, ನಿರುಕ್ತದ ವಿವರಣೆಯನ್ನು ಉದಹರಿಸಿ, ಹವಿಸ್ಸುಗಳನ್ನು ಅರ್ಪಿಸುವವರಾದ ಯಜಮಾನನೇ ಮೊದಲಾದವರಿಗೆ ಪಶುಪುತ್ರರೇ ಮೊದಲಾದವರು ಉತ್ಪನ್ನರಾಗುವುದರ ಮೂಲಕ ಬಹಳ ಸುಖವನ್ನು ಉಂಟುಮಾಡುವ ಮತ್ತೂ ಅಗ್ನಿಹೋತ್ರವೇ ಮುಂತಾದ ಕರ್ಮಗಳಿಗೆ ಸಾಧಕವಾಗಿರುವ ಗೃಹ (ಮನೆ)ಯನ್ನು ಅಗ್ನಿಯು ಅನುಗ್ರಹಿಸಲಿ ಎಂಬ ಅರ್ಥವನ್ನು ವಿವರಿಸಿದ್ದಾರೆ. ನಿರುಕ್ತದಲ್ಲಿ ಯಾಸ್ಕರು—ಪತ್ನೀವಂತಸ್ಸುತಾ ಇಮ ಉಶಂತೋ ಯಂತಿ ವೀತಯೇ । ಅಪಾಂ ಜಗ್ಮಿರ್ನಿಚುಂಪುಣಃ ( ಋ. ಸಂ. ೮-೯೩-೨೨) ಎಂಬ ಈ ಋಕ್ಕನ್ನು ಉದಹರಿಸಿ ವೀತಯೇ ಅಪಾಂ ಪಾನಾಯ—ನೀರನ್ನು ಕುಡಿಯುವುದಕ್ಕಾಗಿ ಎಂದು ವೀತಿಶಬ್ದಾರ್ಥವನ್ನು ವಿವರಿಸಿದಾರೆ. ಸಾಯಣರು ಅಗ್ನಿಹೋತ್ರಾದಿ ಕರ್ಮಪ್ರಾಪ್ತ್ಯರ್ಥಂ ಎಂಬುದಾಗಿ ವರ್ಣಿಸಿದ್ದಾರೆ.

**ಪೃಷ್ಣವತ್—ಸಮೃದ್ಧಿಮತ್,** ದಾನಭೋಗಾದಿನಾ **ವ್ಯಯೇ ಸತ್ಯಪಿ ಅತಿಶಯೇನ ವರ್ಧಮಾನಂ.** ಈ ಪದವು ವಸು ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ದಾನವನ್ನು ಮಾಡಿದರೂ, ಭೋಗಗಳನ್ನು (ಸುಖವನ್ನು) ಅನುಭವಿಸಿದರೂ, ಖರ್ಚುಮಾಡಿದರೂ ಬಹಳವಾಗಿ ವೃದ್ಧಿಹೊಂದುತ್ತಿರುವುದೂ ಸ್ವರ್ಗದಲ್ಲಿಯೂ, ಭೂಲೋಕದಲ್ಲಿಯೂ, ಉದಕಗಳಲ್ಲಿಯೂ ಇರುವುದರಿಂದ ಅಸಾಧಾರಣವಾಗಿರುವುದೂ ಆದ ಧನವು ಎಂದರ್ಥವು. ಅಗ್ನೇಃ **ಪ್ರಸಾದಾತ್ ತ್ರಿಷು ಲೋಕೇಷು ವಿದ್ಯಮಾನಂ ಧನಂ ಅಸ್ಮಾನಾಗಚ್ಛತಿ**—ಅಗ್ನಿಯ ಅನುಗ್ರಹದಿಂದ ಯಜ್ಞವನ್ನು ಆಚರಿಸುವ ಯಜಮಾನರೇ ಮೊದಲಾದ ನಮಗೆ ದೊರೆಯುವಕಾರಣ ನಮಗೆ ಅದನ್ನು ದೊರಕಿಸುವ ಪ್ರಭೂತವಾದ ಮಹಿಮೆಯುಳ್ಳ ಅಗ್ನಿಯನ್ನು ಸೇವಿಸಬೇಕು ಎಂಬ ಮಂತ್ರದ್ರಷ್ಟೃವಾದ ಋಷಿಯ ಆದೇಶವು ಇಲ್ಲಿ ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ.

**ವೀತಯೇ**—ವೀ ಗತಿಕಾಂತ್ಯಾದಿಷು ಧಾತು. **ಮಂತ್ರೇವೃಷೇಷಪಚ—**(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಪ್ರತ್ಯಯ. ಉದಾತ್ತವಾಗಿ ನಿಪಾತಮಾಡಿರುವುದರಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಯಚ್ಛತು**—ಯಮ ಉಪರಮೇ ಧಾತು. **ಲೋಟ್ ಪ್ರಥಮಪುರುಷ** ಏಕವಚನದಲ್ಲಿ ತಿಪ್ ಪ್ರತ್ಯಯ. ಏರುಃ (ಪಾ. ಸೂ ೩-೪-೮೬) ಎಂಬುದರಿಂದ ಇಕಾರಕ್ಕೆ **ಉಕಾರಾದೇಶ. ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿನ ಮಕಾರಕ್ಕೆ **ಛಾದೇಶ.** ಯಚ್ಛತು ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಶಂತಮಾ**—ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. **ಇದು ಪಿತ್ತಾದುದರಿಂದ** ಪ್ರಾತಿಪದಿಕಸ್ವರ ಬರುತ್ತದೆ. ನಪುಂಸಕಬಹುವಚನದಶ **ಶೇಶ್ಛಂದಸಿಬಹುಲಮ್** ( ಪಾ. ಸೂ. ೬-೧-೭೦ ) ಎಂಬುದರಿಂದ ಶಿಗಿ **ಲೋಪ.**

**ವೃಷ್ಣವತ್**—ವೃಷ ಸ್ನೇಹನಸೇಚನಪೂರಣೇಷು ಧಾತು. ಇದಕ್ಕೆ ಔಣಾದಿಕ ನಕ್ ಪ್ರತ್ಯಯ. **ಕಿತ್ತಾದುದರಿಂದ** ಲಘೂಪಧಗುಣ ಬರುವುದಿಲ್ಲ. ಷಕಾರದ ಪರದಲ್ಲಿ ಬಂದುದರಿಂದ ಣತ್ವ ಬರುತ್ತದೆ. **ವೃಷ್ಣಃ**

ಅಸ್ಯ ಅಸ್ತಿ ಇತಿ. **ಪ್ರಸ್ವವತ್ ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ **ಮಾದುಪಧಾಯಾಶ್ಚ**—(ಪಾ. ಸೂ ೮-೨-೯) ಎಂಬುದರಿಂದ ಅಕಾರದ ಪರದಲ್ಲಿ ಬಂದುದರಿಂದ ಮಕಾರಕ್ಕೆ ವತ್ವ. ಹ್ರಸ್ವದ ಪರದಲ್ಲಿ ಮತುಪ್ ಬಂದುದರಿಂದ **ಹ್ರಸ್ವನುಡ್ಭ್ಯಾಂ ಮತುಪ್** ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರಬೇಕಾಗುತ್ತದೆ. ಆದರೆ ಛಾಂದಸವಾಗಿ ಇಲ್ಲಿ ಬರುವುದಿಲ್ಲ. ನಠ್ ಪ್ರತ್ಯಯಸ್ವರ ಉಳಿಯುತ್ತದೆ.

**ಅಪ್ಸು**—ಸಪ್ತಮೀ ಬಹುವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ದೀದಿವಾಂಸಮಪೂರ್ವ್ಯಂ ವಸ್ವೀಭಿರಸ್ಯ ಧೀತಿಭಿಃ ।
ಋಕ್ವಾಣೋ ಅಗ್ನಿಮಿಂಧತೇ ಹೋತಾರಂ ವಿಶ್ಪತಿಂ ವಿಶಾಂ ॥ ೫ ॥

ಪದಪಾಠಃ

ದೀದಿಽವಾಂಸಂ । ಅಪೂರ್ವ್ಯಂ । ವಸ್ವೀಭಿಃ । ಅಸ್ಯ । ಧೀತಿಽಭಿಃ ।
ಋಕ್ವಾಣಃ । ಅಗ್ನಿಂ । ಇಂಧತೇ । ಹೋತಾರಂ । ವಿಶ್ಪತಿಂ । ವಿಶಾಂ ॥ ೫ ॥

ಸಾಯಣಭಾಷ್ಯಂ

ಋಕ್ವಾಣಃ ಸ್ತುತಿಂ ಕುರ್ವಾಣಾಃ ಋತ್ವಿಜೋ ಹೋತ್ರಾದಯೋ ದೀದಿವಾಂಸಂ ದೀಪ್ಯಮಾನಮಪೂರ್ವ್ಯಂ ತೇಜಸ್ವಿತಯಾ ಪ್ರತಿಕ್ಷಣಮಭಿನವಂ ಹೋತಾರಂ ದೇವಾನಾಮಾಹ್ವಾತಾರಂ ವಿಶಾಂ ವಿಶ್ಪತಿಂ ಪ್ರಜಾನಾಮುಚಿತಯೇನ ಪಾಲಯಿತಾರಂ ತಮಗ್ನಿಂ ವಸ್ವೀಭಿಃ ಪ್ರಶಸ್ತಾಭಿರಸ್ಯ ಧೀತಿಭಿರಗ್ನಿವಿಷಯಸ್ತುತಿಲಕ್ಷಣಾಭಿರ್ವಾಗ್ಭಿಃ ಯದ್ವಾ ವಸ್ವೀಭಿರ್ವಸುಮದ್ಭಿರಸ್ಯ ಧೀತಿಭಿರೇತದುದ್ದೇಶೇನ ಕ್ರಿಯಮಾಣೈಃ ಕರ್ಮಭಿರಿಂಧತೇ । ದೀಪಯಂತಿ । ಸ್ತೋತ್ರಕರಣಹವಿಷ್ಪ್ರದಾನಾದಿವ್ಯಾಪಾರೇಣ ಸಮೃದ್ಧಿಂ ಕುರ್ವಂತಿ ॥ ದೀದಿವಾಂಸಂ । ದಿವು ಕ್ರೀಡಾದಾವಿತ್ಯಸ್ಯ ಕ್ವಸೌ ರೂಪಂ । ತುಜಾದೀನಾಮಿತ್ಯಭ್ಯಾಸಸ್ಯ ದೀರ್ಘಃ । ಲೋಪೋ ವ್ಯೋರ್ವಲೀತಿ ಲೋಪಃ । ವಸ್ವೀಭಿಃ । ವಸುಶಬ್ದಾದ್ವೃತ್ಯಯೇನ ಙೀಪ್ । ನಿತ್ಸ್ವರಃ । ಧೀತಿಭಿಃ । ಧೇಟ್ ಪಾನೇ । ಕ್ತಿಚ್ ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ಘುಮಾಸ್ಥೇತೀತ್ವಂ । ಚಿತ್ಸ್ವರಃ । ಋಕ್ವಾಣಃ । ಋಚ್‌ಶಬ್ದಾನ್ಮತ್ವರ್ಥೇ ವನಿಪ್ । ಅಯಸ್ಮಯಾದಿತ್ವಾದ್ಭಸಂಜ್ಞಾತ್ವಾತ್ಕುತ್ವಂ । ಪದಸಂಜ್ಞಾಭಾವಾಜ್ಜಶ್ತ್ವಾಭಾವಃ । ಇಂಧತೇ । ಞಿಇಂಧೀ ದೀಪ್ತೌ । ವಿಶ್ಪತಿಂ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ವಿಶಾಂ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥

ಪ್ರತಿಪದಾರ್ಥ.

**ಋಕ್ವಾಣಃ**—ಸ್ತುತಿಕರ್ತೃಗಳಾದ ಹೋತ್ರಾದಿ ಋತ್ವಿಜರು । **ದೀದಿವಾಂಸಂ**—ದೇದೀಪ್ಯಮಾನನೂ । **ಅಪೂರ್ವ್ಯಂ**—ತೇಜಸ್ವಿಯಾದುದರಿಂದ ಪ್ರತಿಕ್ಷಣವೂ ನವೀನನೂ । **ಹೋತಾರಂ**—ದೇವತೆಗಳನ್ನು ಆಹ್ವಾನಿಸು

ವವನೂ । ವಿಶಾಂ—ಪ್ರಜೆಗಳಿಗೆ । ವಿಶ್ಪತಿಂ—ಪಾಲಕನೂ (ಆದ) । **ಅಗ್ನಿಂ**—ಅಗ್ನಿಯನ್ನು । **ವಸ್ವೀಭಿಃ**—ಪ್ರಶಸ್ತವಾದ । **ಅಸ್ಯ ಧೀತಿಭಿಃ**—ಈ ಅಗ್ನಿಸಂಬಂಧವಾದ ಸ್ತುತಿಗಳಿಂದ । [ಅಥವಾ **ವಸ್ವೀಭಿಃ**—ಹವೀರೂಪಧನ ವಿಶಿಷ್ಟವಾದ । **ಅಸ್ಯ ಧೀತಿಭಿಃ** — ಅಗ್ನಿಯನ್ನುದ್ದೇಶಿಸಿ ಮಾಡುವ ಕರ್ಮಗಳಿಂದ] **ಇಂಧತೇ** — ಜ್ವಲನಗೊಳಿಸುತ್ತಾರೆ ॥

ಭಾವಾರ್ಥ

ಸ್ತುತಿಕರ್ತೃಗಳಾದ ಹೋತ್ರಾದಿಋತ್ವಿಜರು, ದೇದೀಪ್ಯಮಾನನೂ, ಪ್ರತಿಕ್ಷಣವೂ ನವೀನನಂತೆ ತೋರುವವನೂ, ದೇವತೆಗಳನ್ನು ಆಹ್ವಾನಿಸುವವನೂ, ಪ್ರಜೆಗಳ ಪಾಲಕನೂ ಆದ ಅಗ್ನಿಯನ್ನು ಹವಿರಾದಿಯುಕ್ತರಾಗಿ ಆ ಅಗ್ನ್ಯುದ್ದೇಶದಿಂದ ಮಾಡುವ ಕರ್ಮಗಳಿಂದ ಅವನನ್ನು ಉದ್ದೀಪನಗೊಳಿಸುತ್ತಾರೆ.

English Translation

The devout kindle (the fire) with his wealth obtaining rites, (to worship) the radiant, unpreceded Agni, the invoker (of the gods), the pro--tector of men.

ವಿಶೇಷವಿಷಯಗಳು

**ಋಕ್ವಾಣಃ**—ಈ ಪದಕ್ಕೆ **ಸ್ತುತಿಂ ಕುರ್ವಾಣಾಃ**—ಸ್ತೋತ್ರವನ್ನು ಪಠಿಸುವವರು ಎಂದು ಅರ್ಥಮಾಡಿದೆ. ಅಗ್ನಿಯೇ ಮೊದಲಾದ ದೇವತೆಗಳ ಪ್ರಭಾವವನ್ನು ವರ್ಣಿಸುವ ಶಸ್ತ್ರಮಂತ್ರಗಳನ್ನು ಪಠಿಸುವ ಹೋತೃವೇ ಮೊದಲಾದ ಋತ್ವಿಜರು ಎಂದು ಅರ್ಥವನ್ನು ವಿವರಿಸಿದೆ.

**ಅಪೂರ್ವ್ಯಂ—ತೇಜಸ್ವಿತಯಾ ಪ್ರತಿಕ್ಷಣಮಭಿನವಂ**—ಅಗ್ನಿಯು ಬಹಳ ತೇಜಸ್ಸುಳ್ಳವನಾಗಿರುವ ಕಾರಣ ಪ್ರತಿಯೊಂದು ಕ್ಷಣದಲ್ಲಿಯೂ ಹೊಸಬನಾಗಿ ಕಾಣುತ್ತಿರುವನೆಂದು ಅರ್ಥ.

**ವಿಶಾಂ ವಿಶ್ಪತಿಂ — ಪ್ರಜಾನಾಮತಿಶಯೇನ ಪಾಲಯಿತಾರಂ** । ಪ್ರಜೆಗಳನ್ನೂ ಪ್ರಪಂಚವೆಲ್ಲವನ್ನೂ ಅಗ್ನಿಯು ಸಂರಕ್ಷಿಸುವವನೆಂದು ಅರ್ಥವನ್ನು ವರ್ಣಿಸಿದೆ. ಯಾಸ್ಕರು—

**ಅಸ್ಯ ವಾಮಸ್ಯ ಪಲಿತಸ್ಯ ಹೋತುಸ್ತಸ್ಯ ಭ್ರಾತಾ ಮಧ್ಯಮೋ ಅಸ್ತ್ಯಶ್ನಃ ।**
**ತೃತೀಯೋ ಭ್ರಾತಾ ಘೃತಪೃಷ್ಠೋ ಅಸ್ಯಾತ್ರಾಪಶ್ಯಂ ವಿಶ್ಪತಿಂ ಸಪ್ತಪುತ್ರಂ ॥**
(ಋ. ಸಂ. ೧-೧೬೪-೧).

ಎಂಬಲ್ಲಿ ವಿಶ್ಪತಿಂ ಎಂಬ ಪದಕ್ಕೆ **ಸರ್ವಸ್ಯ ಪಾತಾರಂ ವಾ ಪಾಲಯಿತಾರಂ ವಾ** ಎಂದು ಅರ್ಥವನ್ನು ವಿವರಿಸಿದ್ದಾರೆ.

**ವಸ್ವೀಭಿಃ — ಅಸ್ಯ ಧೀತಿಭಿಃ ಇಂಧತೇ—ಪ್ರಶಸ್ತಾಭಿಃ ಅಗ್ನಿವಿಶಯಸ್ತುತಿಲಕ್ಷಣಾಭಿರ್ವಾಗ್ಭಿಃ ಯದ್ವಾ ವಸುಮದ್ಭಿರೇತಮುದ್ದೇಶೇನ ಕ್ರಿಯಮಾಣೈಃ ಕರ್ಮಭಿಃ ಸ್ತೋತ್ರಕರಣಹವಿಷ್ಪ್ರದಾನಾದಿವ್ಯಾಪಾರೇಣ ಸಮೃದ್ಧಿಂ ಕುರ್ವಂತಿ** । ಧೀತಿಶಬ್ದಕ್ಕೆ ಕರ್ಮ, ಅಂಗುಲಿ, ಸ್ತುತಿ ಎಂಬ ಅರ್ಥದಲ್ಲಿ ಪ್ರಯೋಗವಿರುವ ಕಾರಣ ಇಲ್ಲಿ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಮೊದಲನೆಯದಾಗಿ ಅಗ್ನಿಯನ್ನು ಸ್ತುತಿಮಾಡುವುದರಲ್ಲಿ ಶ್ರೇಷ್ಠವಾಗಿರುವ, ಅಗ್ನಿಯ ಮಾಹಾತ್ಮ್ಯದಿಂದ ಪೂರಿತವಾಗಿರುವ ಸ್ತುತಿರೂಪವಾದ ವಾಕ್ಕುಗಳಿಂದ ಅಗ್ನಿಯನ್ನು ವೃದ್ಧಿಯಾಗುವಂತೆ ಋತ್ವಿಜರು ಮಾಡುತ್ತಾರೆ ಎಂದು ವಿವರಿಸಿದೆ. ಎರಡನೆಯ ಅರ್ಥದಲ್ಲಿ ಅಗ್ನಿಯ ಉದ್ದೇಶದಿಂದ ಆಚರಿಸುವ ಕರ್ಮಗಳು ಎಂದು ಧೀತಿಶಬ್ದಕ್ಕೆ ಅರ್ಥಮಾಡಿರುವುದರಿಂದ ಅಗ್ನಿಯನ್ನು ಉದ್ದೇಶಮಾಡಿ ಪಠಿಸುವ

ಸ್ತುತಿಗಳೂ, ಅಗ್ನಿಯ ಉದ್ದೇಶದಿಂದ ಅರ್ಪಿತವಾಗುವ ಹವಿಸ್ಸಿನ ಪ್ರದಾನರೂಪವಾದ ಕರ್ಮಗಳೂ ಇವುಗಳಿಂದ ಅಗ್ನಿಯನ್ನು ಅಭಿವೃದ್ಧಿಗೊಳಿಸಿ ಹರ್ಷವುಳ್ಳವನನ್ನಾಗಿ ಮಾಡುವರೆಂದು ವರ್ಣಿಸಿದೆ.

**ದೀದಿವಾಂಸಂ—ದೀಪ್ಯಮಾನಂ**—ಅಗ್ನಿಯು ತನ್ನ ತೇಜಸ್ಸುಗಳಿಂದ ಅತಿಶಯವಾಗಿ ಬೆಳಗುತ್ತಿರುವನೆಂದು ಅರ್ಥ.

ವ್ಯಾಕರಣಪ್ರಕ್ರಿಯಾ

**ದೀದಿವಾಂಸಂ**—ದಿವು ಕ್ರೀಡಾದಿಷು ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುವರಿಂದ ಕ್ವಸು ಆದೇಶ. ಧಾತುವಿಗೆ ದ್ವಿತ್ವಾದಿ. ತುಜಾದಿಯಲ್ಲಿ ಪಠಿತವಾದುದರಿಂದ **ತುಜಾದೀನಾಂ-ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ವಕಾರಕ್ಕೆ ಲೋಪ. ಪ್ರತ್ಯಯಸ್ವರ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ.

**ಅಪೂರ್ವ್ಯಂ—ತತ್ಪುರುಷೇತುಲ್ಯಾರ್ಥ**—( ಪಾ. ಸೂ. ೬-೨-೨ ) ಎಂಬುದರಿಂದ ನಞ್‌ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಸ್ವೀಭಿಃ**—ವಸು ಶಬ್ದಕ್ಕೆ ವ್ಯತ್ಯಯದಿಂದ ಙೀನ್ ಪ್ರತ್ಯಯ. ಯಣಾದೇಶ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ಧೀತಿಭಿಃ**—ಧೇಟ್ ಪಾನೇ ಧಾತು. **ಕ್ತಿಚ್‌ಕ್ತೌ ಚ ಸಂಜ್ಞಾಯಾಂ** ( ಪಾ. ಸೂ. ೩-೩-೧೭೪ ) ಎಂಬುದರಿಂದ ಕ್ತಿಚ್ ಪ್ರತ್ಯಯ. **ಆದೇಚಉಪದೇಶೇ** — ಎಂಬುದರಿಂದ ಧಾತುವಿಗೆ ಆತ್ವ. **ಘುಮಾಸ್ಥಾಗಾಪಾ**—(ಪಾ. ಸೂ. ೬-೪-೬೬) ಎಂಬುದರಿಂದ ಕಿತ್ತಾದ ಪ್ರತ್ಯಯ ಪರವಾದುದರಿಂದ ಆಕಾರಕ್ಕೆ ಈತ್ವ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಋಕ್ವಾಣಃ**—ಋಚ್ ಅಸ್ಯ ಅಸ್ತಿ ಎಂದು ಅರ್ಥವಿವಕ್ಷಾಮಾಡಿದಾಗ **ಛಂದಸೀ ವನಿಪೌ** ಎಂಬುದರಿಂದ ವನಿಪ್ ಪ್ರತ್ಯಯ. ಅಯಸ್ಮಯಾದಿಗಣಪಠಿತವಾದುದರಿಂದ ಭಸಂಜ್ಞಾ ಇರುವುದರಿಂದ ಚಕಾರಕ್ಕೆ ಕುತ್ವದಿಂದ ಕಕಾರಾದೇಶ. ಪದಸಂಜ್ಞೆ ಇಲ್ಲದಿರುವುದರಿಂದ ಜಶ್ತ್ವ ಬರುವುದಿಲ್ಲ. ಋಕಾರ ನಿಮಿತ್ತವಿರುವುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಪ್ರಾತಿಪದಿಕಸ್ವರ ಉಳಿಯುತ್ತದೆ ಪ್ರಥಮಾ ಬಹುವಚನಾಂತರೂಪ.

**ಇಂಧತೇ**—ಞಿಇಂಧೀ ದೀಪ್ತೌ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವಿಶ್ಪತಿಂ**—ವಿಶಾಂ ಪತಿಃ ತಂ | **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ವಿಶಾಂ** — ಷಷ್ಠೀಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಉತ ನೋ ಬ್ರಹ್ಮನ್ನವಿಷ ಉಕ್ಥೇಷು ದೇವಹೂತಮಃ ।
ಶಂ ನಃ ಶೋಚಾ ಮರುದ್ವೃಧೋಽಗ್ನೇ ಸಹಸ್ರಸಾತಮಃ ॥ ೬ ॥

ಪದಪಾಠಃ

ಉತ । ನಃ । ಬ್ರಹ್ಮನ್ । ಅವಿಷಃ । ಉಕ್ಥೇಷು । ದೇವಽಹೂತಮಃ ।
ಶಂ । ನಃ । ಶೋಚ । ಮರುತ್ಽವೃಧಃ । ಅಗ್ನೇ । ಸಹಸ್ರಽಸಾತಮಃ ॥ ೬ ॥

ಸಾಯಣಭಾಷ್ಯಂ

ಉತ ಅಪಿ ಚ ಹೇ ಅಗ್ನೇ ನೋ ಯಜ್ಞಕಾರಿಣೋಽಸ್ಮಾನ್ ಬ್ರಹ್ಮನ್ ಬ್ರಹ್ಮಣ್ಯಸ್ಮಾಭಿಃ ಕ್ರಿಯಮಾಣೇ ಸ್ತೋತ್ರೇಽವಿಷಃ । ಸ್ತೋತ್ರವಿಷಯನ್ಯೂನಾತಿರೇಕದೋಷೋ ಯಥಾ ನ ಭವತಿ ತಥಾ ಪಾಲಯ । ಕಿಂಚ ದೇವಹೂತಮೋ ದೇವಾನಾಮಾಹ್ವಾತೃತಮಸ್ತ್ವಮುಕ್ಥೇಷ್ವಸ್ಮಾಭಿಃ ಕ್ರಿಯಮಾಣೇಷ್ವಾಜ್ಯಪ್ರಉಗಾದಿಶಸ್ತ್ರೇಷ್ವವಿಷಃ । ಗೋಪಾಯ । ಕಿಂಚ ಮರುದ್ವೃಧೋ ಮರುದ್ಭಿರ್ವರ್ಧಮಾನಃ ಸಹಸ್ರಸಾತಮಃ ಸಹಸ್ರಸಂಖ್ಯಾಕಸ್ಯ ಧನಸ್ಯಾತಿಶಯೇನ ದಾತಾ ತ್ವಂ ನೋಽಸ್ಮಾಕಂ ಶಂ ಐಹಿಕಮಾಮುಷ್ಮಿಕಂ ಚ ಸುಖಂ ಶೋಚ । ದೀಪಯ । ವರ್ಧಯೇತ್ಯರ್ಥಃ ॥ ಅವಿಷಃ । ಅವ ರಕ್ಷಣಾದಿಷ್ವಿತ್ಯಸ್ಮಾಲ್ಲೇಟಿ ಸಿಬ್ಬಹುಲಮಿತಿ ಸಿಪ್ । ಅಸ್ಯಾರ್ಧಧಾತುಕತ್ವಾದಿಟ್ । ಇತಶ್ಚ ಲೋಪ ಇತಿ ಸಿಪ ಇಕಾರಲೋಪಃ । ಲೇಟೋಽಡಾಟಾವಿತ್ಯಡಾಗಮಃ । ನಿಘಾತಃ । ಉಕ್ಥೇಷು । ವಚ ಪರಿಭಾಷಣೇ । ಅಸ್ಮಾತ್ಕರ್ಮಣಿ ಪಾತೃತುದಿವಚಿರಿಚೀತ್ಯಾದಿನಾ ಥಕ್ । ಕಿತ್ತ್ವಾತ್ಸಂಪ್ರಸಾರಣಂ । ಪ್ರತ್ಯಯಸ್ವರಃ । ದೇವಹೂತಮಃ । ಹ್ವಯತೇಃ ಕ್ವಿಪ್ । ಬಹುಲಂ ಛಂದಸೀತಿ ಸಂಪ್ರಸಾರಣಪರರೂಪತ್ವೇ । ಹಲ ಇತಿ ದೀರ್ಘಃ । ಕೃದುತ್ತರಪದಪ್ರಕೃತಿಸ್ವರತ್ವಂ । ಶೋಚ । ಶುಚ ದೀಪ್ತೌ । ಅಯಮಂತರ್ಭಾವಿತಣ್ಯರ್ಥಃ । ನಿಘಾತಃ । ಮರುದ್ವೃಧಃ । ವೃಧು ವರ್ಧನೇ । ಇಗುಪಧಲಕ್ಷಣಃ ಕಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಸಹಸ್ರಸಾತಮಃ । ಷಣು ದಾನೇ । ಅಸ್ಯ ಜನಸನಖನಕ್ರಮಗಮೋ ವಿಡಿತಿ ವಿಟ್ । ವಿಡ್ವನೋರನುನಾಸಿಕಸ್ಯೇತ್ಯಾಕಾರಃ । ಕೃದುತ್ತರಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

**ಉತ**—ಮತ್ತು । ( **ಹೇ** ) **ಅಗ್ನೇ**—ಎಲೈ ಅಗ್ನಿಯೇ । **ನಃ**—( ಯಾಗಕರ್ತೃಗಳಾದ ) ನಮ್ಮನ್ನು । **ಬ್ರಹ್ಮನ್**—ನಮ್ಮಿಂದ ಮಾಡಲ್ಪಡುವ ಸ್ತುತಿಯಲ್ಲಿ । **ಅವಿಷಃ**—(ನ್ಯೂನಾತಿರೇಕದೋಷಗಳಿಲ್ಲದಂತೆ) ರಕ್ಷಿಸು । (ಮತ್ತು) । **ದೇವಹೂತಮಃ**—ದೇವತೆಗಳನ್ನು ಆಹ್ವಾನಿಸುವವರಲ್ಲಿ ಶ್ರೇಷ್ಠನಾದ ನೀನು । **ಉಕ್ಥೇಷು**—(ನಾವು ಉಚ್ಚರಿಸುವ) ಪ್ರಉಗಾದಿಶಸ್ತ್ರಗಳಲ್ಲಿಯೂ (**ಅವಿಷಃ**—ರಕ್ಷಿಸು) (ಮತ್ತು) । **ಮರುದ್ವೃಧಃ**—ವಾಯುವಿನಿಂದ

ವರ್ಧಿತನಾಗುವವನೂ | **ಸಹಸ್ರಸಾತಮಃ**—(ಅಪರಿಮಿತ) ಸಹಸ್ರಸಂಖ್ಯಾಕ ಧನದಾತೃವೂ ಆದ ನೀನು | **ನಃ**—ನಮಗೆ | **ಶಂ**—(ಐಹಿಕಾಮುಷ್ಮಿಕವೆಂಬ ಉಭಯವಿಧವಾದ) ಸುಖವನ್ನು | **ಶೋಚ**—ಪ್ರಕಾಶಗೊಳಿಸು (ಹೆಚ್ಚಿಸು)

ಭಾವಾರ್ಥ

ಮತ್ತು ಎಲೈ ದೇವಹೋತೃವಾದ ಅಗ್ನಿಯೇ, ನಾವು ಪಠಿಸುವ ಪ್ರಉಗಾದಿಶಸ್ತ್ರಮಂತ್ರಗಳಲ್ಲಿ ಮತ್ತು ಇತರ ಸ್ತುತಿಗಳಲ್ಲಿ ನ್ಯೂನಾತಿರೇಕಗಳಿಲ್ಲವಂತೆ ನಮ್ಮನ್ನು ರಕ್ಷಿಸು; ವಾಯುವಿನಿಂದ ವರ್ಧಿತನೂ, ಅಪರಿಮಿತ ಧನದಾತೃವೂ ಆದ ನೀನು ನಮಗೆ ಐಹಿಕಾಮುಷ್ಮಿಕ ಸುಖಗಳೆರಡನ್ನೂ ಅನುಗ್ರಹಿಸು.

## English Translation.

Perfect our prayer, Invoker of the gods, as well as our hymns : Agni, who increase with the winds and are the giver of thousands, augment our felicity.

ವಿಶೇಷವಿಷಯಗಳು

**ಬ್ರಹ್ಮನ್—ಬ್ರಹ್ಮಣಿ ಅಸ್ಮಾಭಿಃ ಕ್ರಿಯಮಾಣೇ ಸ್ತೋತ್ರೇ ನ್ಯೂನಾತಿರೇಕದೋಷೋ ಯಥಾ ನ ಭವತಿ ತಥಾ ಪಾಲಯ** | ಬ್ರಹ್ಮಶಬ್ದವು-ಅನ್ನನಾಮಗಳಲ್ಲಿಯೂ (ನಿ. ೩-೯) ಬಲನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ.

**ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ |**
**ತಸ್ಮಿನ್ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಂ ||**
(ಋ. ಸಂ. ೧-೮೦-೧೬)

ಇಲ್ಲಿ ಬ್ರಹ್ಮಾಣಿ ಕರ್ಮಾಣಿ—ಕರ್ಮಗಳು ಎಂದು ಅರ್ಥವನ್ನು ವರ್ಣಿಸಿದೆ.

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು |**
**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿ ಮಿಮೀತ ಉ ತ್ವಃ ||**
(ಋ. ಸಂ. ೧೦-೭೧-೧೧)

**ಬ್ರಹ್ಮಾ—ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ ಬ್ರಂಹಃ ಪರಿ ಬ್ರಹ್ಮಃ ಶ್ರುತತೋ ಬ್ರಹ್ಮ ಪರಿ ಬ್ರಹ್ಮಂ ಸರ್ವತಃ | ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ** | ಇಲ್ಲಿ ಬ್ರಹ್ಮಪದವು ಒಬ್ಬ ಋತ್ವಿಕ್ ಎಂಬ ಅರ್ಥವನ್ನು ಬೋಧಿಸುವುದು ಎಂದು ಹೇಳಿದೆ. ಸಾಯಣರು ಬ್ರಹ್ಮಪದಕ್ಕೆ ಪ್ರಕೃತವಾದ ಯಜ್ಞಕರ್ಮವೆಂಬ ಅರ್ಥದಲ್ಲಿ ಪ್ರಯೋಗವನ್ನು ಹೇಳಿ, ಯಜ್ಞದಲ್ಲಿ ಪಠಿಸುವ ದೇವತಾವಿಷಯವಾದ ಸ್ತೋತ್ರಗಳಲ್ಲಿ ಅಲ್ಲಲ್ಲಿ ಸಂಭಾವಿತವಾಗಿರುವ ನ್ಯೂನತೆಯೂ, ವ್ಯತ್ಯಾಸವೂ ಉಂಟಾಗದಂತೆ ಅಗ್ನಿಯು ನಮ್ಮನ್ನು ರಕ್ಷಿಸಲಿ ಎಂದು ಆಶಿಸಿದೆ.

**ದೇವಹೂತಮಃ ಉಕ್ಥೇಷು ಅವಿಷಃ—ದೇವಾನಾಮಾಹ್ವಾತೃತಮಃ ತ್ವಂ ಅಸ್ಮಾಭಿಃ ಕ್ರಿಯಮಾಣೇಷು ಆಜ್ಯಪ್ರಉಗಾದಿಶಸ್ತ್ರೇಷು ಗೋಪಾಯ** | ದೇವತೆಗಳನ್ನು ಯಜ್ಞದ ಹವಿರ್ಭಾಗವನ್ನು ಸ್ವೀಕರಿಸುವುದಕ್ಕಾಗಿ ಆಹ್ವಾನಮಾಡುವ ಹೋತೃಗಳೆಂಬ ಋತ್ವಿಜರಲ್ಲಿ ಶ್ರೇಷ್ಠನಾದ ಅಗ್ನಿಯು ಯಜಮಾನರು ಆಚರಿಸುವ ಯಜ್ಞಗಳಲ್ಲಿ ಪಠಿಸುವ ದೇವತಾಗುಣಪ್ರಶಂಸಾರೂಪವಾದ ಶಸ್ತ್ರಮಂತ್ರಗಳನ್ನು ಪಠಿಸುವ ಕಾಲದಲ್ಲಿಯೂ, ಆಜ್ಯ, ಪ್ರಉಗವೇ ಮೊದಲಾದವುಗಳ ಸ್ತುತಿಪಾಠಗಳಲ್ಲಿಯೂ ರಕ್ಷಿಸಲಿ ಎಂದು ಆಶಂಸಿಸಿದೆ.

**ಮರುದ್ವೃಧಃ—ಮರುದ್ಭಿಃ ವರ್ಧಮಾನಃ** । ಮರುತ್ ಎಂಬ ಪದವು ಹಿರಣ್ಯನಾಮಗಳಲ್ಲಿಯೂ (ನಿ. ೨-೧-೦) ಋತ್ವಿಜ್ನಾಮಗಳಲ್ಲಿಯೂ **ಮರುತಃ** ಎಂದು(ನಿ. ೩-೧೮) **ಮರುತಃ ಮಿತರಾವಿಣೋ ವಾ ಮಿತರೋಚನೋ ವಾ ಮಹತ್ ದ್ರವಂತೀತಿ ವಾ ।** (ನಿ. ೧೧-೧೪) ಬಹಳ ವಿಧವಾಗಿ ಶಬ್ದವನ್ನು ಮಾಡುವವರು, ಅತಿಶಯವಾಗಿ ಪ್ರಕಾಶವನ್ನು ಹೊಂದಿ ಬೆಳಗುವುದು, ವೃಷ್ಟಿಯನ್ನು ಬಹಳವಾಗಿ ಸುರಿಸುವರು ಎಂದು ಮರುತ್ ಶಬ್ದದ ಅರ್ಥ ನಿರ್ವಚನೆಯನ್ನು ಮಾಡಿದೆ. ಇಲ್ಲಿ ಅಗ್ನಿಯು ದೇವತೆಗಳಿಂದ ಅಥವಾ ವಾಯುಗಳಿಂದ ಅಭಿವೃದ್ಧಿಹೊಂದುವನೆಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

ಅವಿಷಃ—ಅವ ರಕ್ಷಣೇ ಧಾತು. ಲೇಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಇದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ. ಇಣ್ಣಿನ ಪರದಲ್ಲಿ ಪ್ರತ್ಯಯ ಸಕಾರ ಬಂದುದರಿಂದ ಅದಕ್ಕೆ ಷತ್ವ ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಉಕ್ಥೇಷು**—ವಚ ಪರಿಭಾಷಣೇ ಧಾತು. ಇದಕ್ಕೆ ಕರ್ಮಣಿಯಲ್ಲಿ **ಪಾತೃತುದಿವಚಿರಿಚಿ**—(ಉ. ಸೂ. ೨-೧೬೪) ಎಂಬುದರಿಂದ ಥಕ್ ಪ್ರತ್ಯಯ. ಇದು ಕಿತ್ತಾದುದರಿಂದ ಪರವಾದಾಗ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ. (ಉ) **ಸಂಪ್ರಸಾರಣಾಚ್ಚ** ಎಂಬುದರಿಂದ ಅಕಾರಕ್ಕೆ ಪೂರ್ವರೂಪ. **ಚೋಃಕುಃ** ಎಂಬುದರಿಂದ ಚಕಾರಕ್ಕೆ ಕುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀಬಹುವಚನಾಂತರೂಪ.

**ದೇವಹೂತಮಃ**—ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು. **ಕ್ವಿಪ್ ಚ** (ಪಾ.ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ, ಪೂರ್ವರೂಪ. **ಹಲಃ** (ಪಾ. ಸೂ. ೬-೪-೨) ಎಂಬುದರಿಂದ ಅದಕ್ಕೆ ದೀರ್ಘ. ಇದರಮೇಲೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಶೋಚ**—ಶುಚ ದೀಪ್ತೌ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮರುದ್ವೃಧಃ**—ವೃಧು ವರ್ಧನೇ ಧಾತು. ಇಕಾರ ಉಪಧೆಯಾಗಿರುವುದರಿಂದ **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. **ಲಶಕ್ವತದ್ಧಿತೇ** ಎಂಬುದರಿಂದ ಕಕಾರಕ್ಕೆ ಇತ್ ಸಂಜ್ಞಾ ಬರುವುದರಿಂದ ಲೋಪ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಮರುದ್ವೃಧಾದಿಗಳಲ್ಲಿ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಸಹಸ್ರಸಾತಮಃ**—ಷಣು ದಾನೇ ಧಾತು. **ಜನಸನಖನಕ್ರಮಗಮೋ ವಿಟ್** (ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ. **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಇದು ಪರ

ವಾದಾಗ ಧಾತುವಿಗೆ ಆತ್ವ. ಇದರಮೇಲೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ನೂ ನೋ ರಾಸ್ವ ಸಹಸ್ರವತ್ತೋಕವತ್ಪುಷ್ಟಿಮದ್ವಸು ।
ದ್ಯುಮದಗ್ನೇ ಸುವೀರ್ಯಂ ವರ್ಷಿಷ್ಠಮನುಪಕ್ಷಿತಂ ॥ ೭ ॥

ಪದಪಾಠಃ

ಸು । ನಃ । ರಾಸ್ವ । ಸಹಸ್ರವತ್ । ತೋಕವತ್ । ಪುಷ್ಟಿಮತ್ । ವಸು ।
ದ್ಯುಮತ್ । ಅಗ್ನೇ । ಸುವೀರ್ಯಂ । ವರ್ಷಿಷ್ಠಂ । ಅನುಪಕ್ಷಿತಂ ॥ ೭ ॥

ಸಾಯಣಭಾಷ್ಯಂ

ಅಸ್ಮಿನ್ ಸೂಕ್ತೇ ಸ್ತೂಯಮಾನ ಹೇ ಅಗ್ನೇ ಸಹಸ್ರವತ್ಸಹಸ್ರಸಂಖ್ಯೋಪೇತಂ ತೋಕವತ್ಪುತ್ರಪೌತ್ರಾದಿಸಹಿತಂ ಪುಷ್ಟಿಮತ್ಪೋಷಕೃತ್ । ಅನೇನ ಶರೀರಸ್ಯ ಕ್ಷೀರಾದಿದ್ವಾರಾ ಬಲಾರೋಗ್ಯಪ್ರದಂಗವಾದಿಕಮುಪಲಕ್ಷ್ಯತೇ । ದ್ಯುಮತ್ ದೀಪ್ತಿಮತ್ । ಅನೇನ ರತ್ನಕನಕಾದಿಕಂ ಪರಿಗೃಹ್ಯತೇ । ಸುವೀರ್ಯಂ ಶೋಭನಸಾಮರ್ಥ್ಯೋಪೇತಂ ತತ್ತತ್ಕಾರ್ಯೇಷು ವ್ಯವಹಾರಯೋಗ್ಯಂ ವರ್ಷಿಷ್ಠಮತಿಶಯೇನ ವೃದ್ಧಂ ಪ್ರಭೂತಮತ ಏವಾನುಪಕ್ಷಿತಂ ವ್ಯಯೇ ಕ್ರಿಯಮಾಣೇಪ್ಯನುಪಕ್ಷೀಣಂ । ಏವಂಭೂತಂ ವಸು ರತ್ನಕನಕಪಶ್ವಾದಿಲಕ್ಷಣಂ ಧನಂ ನೋಽಸ್ಮಭ್ಯಂ ಸು ಕ್ಷಿಪ್ರಮವಿಲಂಬೇನ ರಾಸ್ವ । ದತ್ಸ್ವ ॥ ನೂ ನಃ । ಋಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಮಿತಿ ದೀರ್ಘಃ । ರಾಸ್ವ । ರಾ ದಾನೇ । ಅಸ್ಯ ಲೋಟಿ ರೂಪಂ । ವ್ಯತ್ಯಯೇನಾತ್ಮನೇಪದಂ । ಅದಾದಿತ್ವಾಚ್ಛಪೋ ಲುಕ್ । ನಿಘಾತಃ । ಸಹಸ್ರವತ್ । ಮಾದುಪಧಾಯಾ ಇತಿ ಮತುಪೋ ವತ್ವಂ । ಕರ್ದಮಾದಿತ್ವಾನ್ಮಧ್ಯೋದಾತ್ತಃ ಸಹಸ್ರಶಬ್ದಃ । ಪುಷ್ಟಿಮತ್ । ಪುಷ ಪುಷ್ಟೌ । ಅಸ್ಮಾತ್ ಕ್ತಿಚ್ । ಪ್ರತ್ಯಯಸ್ವರೇಣಾಂತೋದಾತ್ತಃ । ಹ್ರಸ್ವನುಡ್ಭ್ಯಾಮಿತಿ ಮತುಪ ಉದಾತ್ತತ್ವಂ । ವರ್ಷಿಷ್ಠಂ । ಪ್ರಿಯಸ್ಥಿರೇತ್ಯಾದಿನಾ ವೃದ್ಧಸ್ಯ ವರ್ಷಿ ಇತ್ಯಾದೇಶಃ । ನಿತ್ಸ್ವರಃ । ಅನುಪಕ್ಷಿತಂ । ಕ್ಷಿ ಕ್ಷಯೇ ಇತ್ಯಸ್ಯ ದೀರ್ಘಾಭಾವಾನ್ನಿಷ್ಠಾನತ್ವಂ ನ ಭವತಿ । ತತ್ಪುರುಷತ್ವಾದವ್ಯಯಪೂರ್ವಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

**(ಹೇ) ಅಗ್ನೇ**—(ಈ ಸೂಕ್ತದಿಂದ ಸ್ತೂಯಮಾನನಾದ) ಎಲೈ ಅಗ್ನಿಯೇ । **ಸಹಸ್ರವತ್** — ಸಹಸ್ರ ಸಂಖ್ಯೋಪೇತವೂ । **ತೋಕವತ್**—ಪುತ್ರಪೌತ್ರಾದಿಸಹಿತವೂ । **ಪುಷ್ಟಿಮತ್**—(ಗವಾದಿಗಳಿಂದ ಕ್ಷೀರದಾನಮಾಡಿಸಿ) ಪುಷ್ಟಿಕಾರಕವೂ । **ದ್ಯುಮತ್**—(ರತ್ನಾದಿ ಸಹಿತವಾಗಿ) ಪ್ರಕಾಶಯುಕ್ತವೂ । **ಸುವೀರ್ಯಂ**—ಶೋಭನಸಾಮ

ರ್ಥ್ಯೋಪೇತವೂ (ವ್ಯವಹಾರಯೋಗ್ಯವೂ) | **ವರ್ಷಿಷ್ಠಂ**—ಅತಿಶಯವಾಗಿ ಅಭಿವೃದ್ಧಿಕರವೂ | **ಅನುಪಕ್ಷಿತಂ**—(ವ್ಯಯವಾದರೂ) ಕ್ಷಯಿಸದೇ ಇರುವುದೂ ಆದ | **ವಸು**—(ರತ್ನಕನಕ ಪಶ್ವಾದಿಲಕ್ಷಣ) ಧನವನ್ನು | **ನಃ**—ನಮಗೆ | **ನು**—ಕ್ಷಿಪ್ರವಾಗಿ | **ರಾಸ್ವ**—ಅನುಗ್ರಹಿಸು ||

ಭಾವಾರ್ಥ

ಎಲೈ ಅಗ್ನಿಯೇ, ಅಪರಿಮಿತವೂ, ಪುತ್ರಪೌತ್ರಾದಿಯುಕ್ತವೂ, ಪುಷ್ಟಿಕಾರಕವೂ, ಪ್ರಕಾಶಿಸುತ್ತಿರುವುದೂ, ವ್ಯವಹಾರಯೋಗ್ಯವೂ, ಅತ್ಯಂತ ಅಭಿವೃದ್ಧಿಯೂ, ಅಕ್ಷಯವೂ ಆದ ರತ್ನಕನಕಪಶ್ವಾದಿರೂಪಧನವನ್ನು ಅನುಗ್ರಹಿಸು.

English Translation.

Grant us indeed, Agni, wealth (that may be counted) by thousands, and comprising offspring, nourishment, brilliant treasure, and vigonyr, and be infinite and inexhaustible.

ವಿಶೇಷವಿಷಯಗಳು

**ಪುಷ್ಟಿಮತ್—ಪೋಷಕೃತ್ ಅನೇನ ಶರೀರಸ್ಯ ಕ್ಷೀರಾದಿದ್ವಾರಾ ಬಲಾರೋಗ್ಯಪ್ರದಂ ಗವಾದಿಕಂ ಉಪಲಕ್ಷ್ಯತೇ** | ಪುಷ್ಟಿಮತ್ ಎಂಬ ಪದಕ್ಕೆ ಪೋಷಣೆಯನ್ನು ಉಂಟುಮಾಡುವುದು ಎಂದು ಅರ್ಥವನ್ನು ಹೇಳಿದೆ. ಇದರಿಂದ ಶರೀರದ ಅಭಿವೃದ್ಧಿಯನ್ನೂ, ಆರೋಗ್ಯವನ್ನೂ ಹಾಲು ಮೊದಲಾದವುಗಳಿಂದ ಉಂಟುಮಾಡುವುದರಲ್ಲಿ ಕಾರಣವಾದ ಪಶು (ಹಸು)ವೇ ಮೊದಲಾದುವುಗಳೂ ಆಗಿರುವುವು ಎಂದು ವಿವರಿಸಿದೆ.

**ದ್ಯುಮತ್—ದೀಪ್ತಿಮತ್**— ಕಾಂತಿಯುಳ್ಳದುದು ಎಂದು ಅರ್ಥ ಮಾಡಿರುವುದರಿಂದ ಈ ಪ್ರಕಾರವಾದ ಧನವು ರತ್ನ, ಕನಕ, ಇವೇ ಮುಂತಾದುವುಗಳೆಂದೂ ವಿವರಿಸಿದೆ.

**ಸುವೀರ್ಯಂ—ಶೋಭನಸಾಮರ್ಥ್ಯೋಪೇತಂ**— ಲೌಕಿಕವಾದ ವ್ಯವಹಾರಗಳಲ್ಲಿಯೂ, ಆಯಾಯ ಕಾರ್ಯಗಳನ್ನು ಆಚರಿಸುವಾಗಲೂ ಮುಖ್ಯಸಾಧನವಾಗಿರುವಕಾರಣ ಧನವು ಬಹಳವಾದ ಶಕ್ತಿಯುಳ್ಳದ್ದೆಂದು ವರ್ಣಿಸಿದೆ.

**ವರ್ಷಿಷ್ಠಂ ಅನುಪಕ್ಷಿತಂ— ಅತಿಶಯೇನ ವೃದ್ಧಂ ಪ್ರಭೂತಂ ಅತ ಏವ ವ್ಯಯೇ ಕ್ರಿಯಮಾಣೇಪಿ ಅನುಪಕ್ಷಿತಂ** | ದಾನಭೋಗಾದಿಗಳಿಂದ ಖರ್ಚುಮಾಡಿದರೂ ಕಡಿಮೆಯಾಗದೆ ಇರುವುದು ಎಂದು ಅರ್ಥಮಾಡಿರುವುದರಿಂದ ಬಹಳ ಸಂಖ್ಯಾತವಾಗಿರುವುದೆಂದು ಅರ್ಥವನ್ನು ವರ್ಣಿಸಿದೆ.

ಅಗ್ನಿಯು, ಈ ಸೂಕ್ತದಿಂದ ಸ್ತುತಿಸಲ್ಪಟ್ಟವನಾಗಿ, ನಮಗೆ ಧನವನ್ನು ಅತಿಶಯವಾಗಿ ಅನುಗ್ರಹಿಸಲಿ ಎಂದು ಆಶಿಸಿದೆ ಮತ್ತು ಆ ಧನವು ಅನೇಕವಿಧವಾಗಿರುವುದರಿಂದ ಅದರ ಭೇದಗಳನ್ನು ಇಲ್ಲಿ ವಿವರಿಸಿದೆ. ಸಹಸ್ರಸಂಖ್ಯೆಯಿಂದ ಪರಿಚ್ಛಿತ್ತಿಯನ್ನು ಹೊಂದಿರುವುದು ಸಾಮಾನ್ಯವಾದ ಧನವು. ಸುಪುತ್ರಪೌತ್ರಾದಿಗಳೂ ಒಂದು ವಿಧವಾದ ಧನವು. ದೇಹಾರೋಗ್ಯ ಬಲಾದ್ಯಭಿವೃದ್ಧಿಯನ್ನು ಹೆಚ್ಚಿಸುವ ಕ್ಷೀರಾದಿಸಾಧನವಾದ ಪಶ್ವಾದಿಗಳೂ ಒಂದು ವಿಧವಾದ ಧನವು. ಲೌಕಿಕವ್ಯವಹಾರಯೋಗ್ಯವಾಗಿರುವ ಸಾಮರ್ಥ್ಯವನ್ನು ಉಂಟುಮಾಡುವ ಚರರೂಪವಾದ ದ್ರವ್ಯವು ಒಂದು ವಿಧವಾದ ಧನವು ಎಷ್ಟು ಖರ್ಚುಮಾಡಿದರೂ ತೀರಿಹೋಗದೆ ಅಭಿವೃದ್ಧಿಯನ್ನೇ ಹೊಂದುತ್ತಿರುವ ಅಕ್ಷಯವಾದ ನಿಧಿಯೂ ಒಂದು ವಿಧವಾದ ಧನವು. ಈ ಪ್ರಕಾರದ ಭೇದಗಳಿಂದ ಕೂಡಿರುವ ನಾನಾವಿಧವಾದ ಧನವೆಲ್ಲವನ್ನು ಅಗ್ನಿಯು ನಮಗೆ ಜಾಗ್ರತೆಯಾಗಿ ಅನುಗ್ರಹಿಸಲಿ ಎಂದು ಆಶಿಸಿದೆ.

ವ್ಯಾಕರಣ ಪ್ರಕ್ರಿಯಾ

**ನೂ ನಃ—ಋಚಿ ತನುಘ ಮಕ್ಷು—**(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ನು ಎಂಬುದಕ್ಕೆ ದೀರ್ಘ ಬರುತ್ತದೆ.

**ರಾಸ್ವ**—ರಾ ದಾನೇ ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಹಸ್ರವತ್—ತದಸ್ಯಾಸ್ತಿ**—ಎಂಬುದರಿಂದ ಸಹಸ್ರಶಬ್ದಕ್ಕೆ ಮತುಪ್. ಅಕಾರದ ಪರದಲ್ಲಿ ಬಂದುದರಿಂದ ಮತುಪಿನ ಮಕಾರಕ್ಕೆ ವತ್ವ. ಕರ್ದಮಾದಿಗಣದಲ್ಲಿ ಪಠಿತವಾದುದರಿಂದ ಸಹಸ್ರಶಬ್ದವು ಮಧ್ಯೋದಾತ್ತವುಳ್ಳದ್ದಾಗುತ್ತದೆ. ತೋಕವತ್ ಎಂಬಲ್ಲಿಯೂ ಹೀಗೆಯೇ ಮತುಪ್ ವತ್ವಾದಿ.

**ಪುಷ್ಟಿಮತ್**—ಪುಷ ಪುಷ್ಟೌ ಧಾತು. **ಕ್ತಿಚ್‌ಕ್ತೌಚಸಂಜ್ಞಾಯಾಂ** ಎಂಬುದರಿಂದ ಕ್ತಿಚ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಇದರಮೇಲೆ ಮತುಪ್ ಪ್ರತ್ಯಯ. ಹ್ರಸ್ವದ ಪರದಲ್ಲಿ ಮತುಪ್ ಬಂದುದರಿಂದ **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪ್ ಉದಾತ್ತವಾಗುತ್ತದೆ. ದ್ಯುಮತ್ ಎಂಬಲ್ಲಿಯೂ ಹ್ರಸ್ವದ ಪರದಲ್ಲಿ ಬಂದುದರಿಂದ ಉದಾತ್ತವಾಗುತ್ತದೆ.

**ಸುವೀರ್ಯಂ—ವೀರ ವೀರ್ಯೌ ಚ** ( ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದಾದ್ಯುದಾತ್ತ ಸ್ವರ ಬರುತ್ತದೆ.

**ವರ್ಷಿಷ್ಠಂ**—ಅತಿಶಯೇನ ವೃದ್ಧಃ ವರ್ಷಿಷ್ಠಃ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ಪ್ರಿಯಸ್ಥಿರ**—(ಪಾ. ಸೂ. ೬-೪-೧೫೭) ಎಂಬುದರಿಂದ ವೃದ್ಧ ಶಬ್ದಕ್ಕೆ ವರ್ಷಿ ಎಂಬ ಆದೇಶ.. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅನುಪಕ್ಷಿತಂ**—ಕ್ಷಿ ಕ್ಷಯೇ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ದೀರ್ಘವಿಲ್ಲದಿರುವುದರಿಂದ ತಕಾರಕ್ಕೆ ನಕಾರಾದೇಶ ಬರುವುದಿಲ್ಲ. ತತ್ಪುರುಷ ಸಮಾಸವಾದುದರಿಂದ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಹದಿಮೂರನೆಯ ಸೂಕ್ತವು ಸಮಾಪ್ತವು.**

———

# ಹದಿನಾಲ್ಕನೆಯ ಸೂಕ್ತವು

ಆ ಹೋತೇತಿ ಸಪ್ತರ್ಚಂ ದ್ವಿತೀಯಂ ಸೂಕ್ತಂ । ಆ ಹೋತೇತ್ಯನುಕ್ರಮಣಿಕಾ । ಋಷಭಸ್ತ್ವಿತಿ ತುಶಬ್ದಪ್ರಯೋಗಾದಸ್ಯಾಪಿ ಸೂಕ್ತಸ್ಯ ಋಷಭ ಋಷಿಃ । ಅನುಕ್ತತ್ವಾತ್ ತ್ರಿಷ್ಟುಪ್ । ಅಗ್ನಿರ್ದೇವತಾ ॥ ಏತದಾದೀನಿ ದಶ ಸೂಕ್ತಾನಿ ತೃತೀಯಾಷ್ಟಮವರ್ಜಿತಾನಿ ಪ್ರಾತರನುವಾಕ ಆಶ್ವಿನಶಸ್ತ್ರೇ ತ್ರೈಷ್ಟುಭೇ ಛಂದಸಿ ವಿನಿಯುಕ್ತಾನಿ । ಅಥೈತಸ್ಯಾ ಇತಿ ಖಂಡೇ ಸೂತ್ರಿತಂ । ಆ ಹೋತೇತಿ ದಶಾನಾಂ ತೃತೀಯಾಷ್ಟಮೇ ಉದ್ಧರೇದಿತಿ ತ್ರೈಷ್ಟುಭಂ । ಆ. ೪–೧೩ ಇತಿ ॥

ಅನುವಾದವು— ಆ ಹೋತಾ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ ಆ ಹೋತಾ ಎಂದು ಮೊದಲಾಗಿ ಹೇಳಿರುವುದು. ಸೂತ್ರದಲ್ಲಿ ಋಷಭಸ್ತು ಎಂದು ತುಶಬ್ದಪ್ರಯೋಗವಿರುವುದರಿಂದ ಈ ಸೂಕ್ತಕ್ಕೂ ಹಿಂದಿನ ಸೂಕ್ತದಂತೆ ಋಷಭನೆಂಬುವನೇ ಋಷಿಯು ; ತ್ರಿಷ್ಟುಪ್‌ಛಂದಸ್ಸು ; ಅಗ್ನಿಯು ದೇವತೆಯು. ಈ ಸೂಕ್ತದಿಂದ ಮುಂದಕ್ಕೆ ಹತ್ತು ಸೂಕ್ತಗಳು—ಮೂರು ಮತ್ತು ಎಂಟನೆಯ ಸೂಕ್ತಗಳನ್ನು ಬಿಟ್ಟು—ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿ ವಿನಿಯೋಗಿಸಲ್ಪಡಬೇಕೆಂದು ಆಶ್ವಲಾಯನಶ್ರೌತಸೂತ್ರದ ಅಥೈತಸ್ಯಾ ಎಂಬ ಖಂಡದ ಆ ಹೋತೇತಿ ದಶಾನಾಂ ತೃತೀಯಾಷ್ಟಮೇ ಉದ್ಧರೇದಿತಿ ತ್ರೈಷ್ಟುಭಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪–೧೩)

## ಸೂಕ್ತ—೧೪

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೧೪ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೭
ಋಷಿಃ—ಋಷಭೋ ವೈಶ್ವಾಮಿತ್ರಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಆ ಹೋತಾ ಮಂದ್ರೋ ವಿದಥಾನ್ಯಸ್ಥಾತ್ಸತ್ಯೋ ಯಜ್ವಾ ಕವಿತಮಃ ಸ ವೇಧಾಃ ।
ವಿದ್ಯುದ್ರಥಃ ಸಹಸಸ್ಪುತ್ರೋ ಅಗ್ನಿಃ ಶೋಚಿಷ್ಕೇಶಃ ಪೃಥಿವ್ಯಾಂ ಪಾಜೋ ಅಶ್ರೇತ್ ॥

ಪದಪಾಠಃ

ಆ । ಹೋತಾ । ಮಂದ್ರಃ । ವಿದಥಾನಿ । ಅಸ್ಥಾತ್ । ಸತ್ಯಃ । ಯಜ್ವಾ । ಕವಿಽತಮಃ । ಸಃ । ವೇಧಾಃ ।
ವಿದ್ಯುತ್ಽರಥಃ । ಸಹಸಃ । ಪುತ್ರಃ । ಅಗ್ನಿಃ । ಶೋಚಿಃಽಕೇಶಃ । ಪೃಥಿವ್ಯಾಂ । ಪಾಜಃ । ಅಶ್ರೇತ್ ॥೧॥

ಸಾಯಣಭಾಷ್ಯಂ

ಋಷಭೋಽಗ್ನಿಂ ಸ್ತೌತಿ । ಹೋತಾ ದೇವಾನಾಮಾಹ್ವಾತಾ ಮಂದ್ರಃ ಸ್ತೋತುರ್ಮಾದಯಿತಾ ಸತ್ಯಃ ಸತ್ಯಕರ್ಮಾ ಕವಿತಮೋಽತಿಶಯೇನ ಮೇಧಾವೀ ಯಜ್ವಾ ದೇವಾನಾಂ ಯಷ್ಟಾ ವೇಧಾಃ ಸರ್ವಸ್ಯ ಜಗತೋ ವಿಧಾತಾ । ಏವಂವಿಧಮಹಿಮೋಪೇತಃ ಸೋಽಗ್ನಿರ್ವಿದಥಾನ್ಯಸ್ಮಾಭಿಃ ಕ್ರಿಯಮಾಣಾನ್ಯಜ್ಞಾನಾ-ಸ್ಥಾತ್ । ಆತಿಷ್ಠತಿ। ಪ್ರಾಪ್ನೋತಿ। ಕಿಂಚ ವಿದ್ಯುದ್ರಥೋ ವಿದ್ಯೋತಮಾನಯಾನೋಪೇತಃ ಶೋಚಿಷ್ಕೇಶಃ। ಶೋಚೀಂಷಿ ಜ್ವಾಲಾಃ ಕೇಶಾ ಯಸ್ಯ ಸಃ। ಜ್ವಾಲಾಮಯಕೇಶೋಪೇತಃ ಸಹಸಸ್ಪುತ್ರೋ ಬಲಸ್ಯ ಸೂನು-ರೇವಂಭೂತಃ ಸೋಽಗ್ನಿಃ ಪೃಥಿವ್ಯಾಂ ವಿಸ್ತೀರ್ಣೇಽಂತರಿಕ್ಷೇ ಪಾಜಸ್ತೇಜಃ ಸ್ವಕೀಯಾಂ ಪ್ರಭಾಮಶ್ರೇತ್ । ಶ್ರಯತೇ । ಪ್ರಾಪಯತಿ । ಯದ್ವಾ ಪೃಥಿವ್ಯಾಂ ಭೂಮೌ ವರ್ತಮಾನಃ ಪಾಜೋ ಬಲಂ ಸೇವತೇ ॥ ಮಂದ್ರಃ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು । ಅಸ್ಮಾತ್ಸ್ಫಾಯಿತಂಚೀತ್ಯಾದಿನಾ ರಕ್-ಇದಿತ್ತ್ವಾನ್ನುಮ್ । ಅಸ್ಥಾತ್ । ಷ್ಠಾ ಗತಿನಿವೃತ್ತೌ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲುಙ್ । ಗಾತಿಸ್ಥೇತಿ ಸಿಚೋ ಲೋಪಃ। ನಿಘಾತಃ। ಯಜ್ವಾ। ಯಜ ದೇವಪೂಜಾಸಂಗತಿಕರಣದಾನೇಷು। ಸುಯ-ಜೋರ್ಙ್ವನಿಬಿತಿ ಙ್ವನಿಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಕವಿತಮಃ । ಕು ಶಬ್ದೇ । ಕೌತಿ ಕೂಯತೇ ವಾ । ಅಚ ಇರಿತಿ ಕರ್ತರಿ ಭಾವೇ ವಾ ಇಪ್ರತ್ಯಯಃ । ತಮಪಃ ಪಿತ್ತ್ವಾದನುದಾತ್ತತ್ವೇ ಪ್ರತ್ಯಯಸ್ವರಃ । ಶೋಚಿಷ್ಕೇಶಃ । ಶುಚ ದೀಪ್ತೌ । ಅರ್ಚಿಶುಚಿಹುಸೃಪಿಛಾದಿಛರ್ದಿಭ್ಯ ಇಸಿರಿತೀಸಿಃ । ಪ್ರತ್ಯಯಸ್ವರೇಣಾಂತೋದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಅಶ್ರೇತ್ । ಶ್ರಿಞ್ ಸೇವಾ-ಯಾಮಿತ್ಯಸ್ಯ ಛಂದಸಿ ವರ್ತಮಾನೇ ಲಙ್ । ಬಹುಲಂ ಛಂದಸೀತಿ ಶಪೋ ಲುಕ್। ಸಾರ್ವಧಾತುಕ ಗುಣಃ । ನಿಘಾತಃ ॥

ಪ್ರತಿಪದಾರ್ಥ

**ಹೋತಾ**—(ದೇವತೆಗಳನ್ನು ಯಾಗಗಳಿಗೆ) ಆಹ್ವಾನಿಸುವವನೂ । **ಮಂದ್ರಃ**—(ಸ್ತೋತೃವಿಗೆ) ಹರ್ಷ ವುಂಟುಮಾಡುವವನೂ । **ಸತ್ಯಃ**—(ಸತ್ಯಫಲವಾದ ಕರ್ಮಗಳನ್ನು ಮಾಡುವವನೂ) ಸತ್ಯಸ್ವರೂಪನೂ । **ಕವಿತಮಃ**—ಜ್ಞಾನಶ್ರೇಷ್ಠನೂ । **ಯಜ್ವಾ**—(ದೇವ) ಯಾಗಕರ್ತೃವೂ । **ವೇಧಾಃ**—(ಪ್ರಪಂಚವನ್ನು) ಸೃಜಿಸಿದವನೂ (ಆದ) । **ಸಃ**—ಆ ಅಗ್ನಿಯು । **ವಿದಥಾನಿ**—(ನಾವು ಮಾಡುವ) ಯಜ್ಞಗಳನ್ನು (ಉದ್ದೇಶಿಸಿ) । **ಆ ಅಸ್ಥಾತ್**—ಪ್ರಾಪ್ತ ನಾಗುತ್ತಾನೆ; (ಮತ್ತು) । **ವಿದ್ಯುದ್ರಥಃ**—ತೇಜಃಪುಂಜವಾದ ಯಾನೋಪೇತನೂ (ಅಥವಾ ವಿದ್ಯುತ್ತೇ ರಥವಾಗಿ ಉಳ್ಳವನೂ) । **ಶೋಚಿಷ್ಕೇಶಃ**—ಜ್ವಾಲಾರೂಪಕೇಶಯುಕ್ತನೂ । **ಸಹಸಃ ಪುತ್ರಃ**—ಬಲದ ಪುತ್ರನೂ (ಆದ) । **ಅಗ್ನಿಃ**—ಅಗ್ನಿಯು । **ಪೃಥಿವ್ಯಾಂ**—ವಿಸ್ತೀರ್ಣವಾದ ಅಂತರಿಕ್ಷದಲ್ಲಿ । **ಪಾಜಃ**—ತನ್ನ ಪ್ರಭೆಯನ್ನು । **ಅಶ್ರೇತ್**—ಬೀರುತ್ತಾನೆ ಅಥವಾ । **ಪೃಥಿವ್ಯಾಂ**—ಭೂಮಿಯಮೇಲೆ । **ಪಾಜಃ**—(ತನ್ನ) ಬಲವನ್ನು । **ಅಶ್ರೇತ್**—ಸೇವಿಸು ತ್ತಾನೆ (ವ್ಯಕ್ತಪಡಿಸುತ್ತಾನೆ).

ಭಾವಾರ್ಥ

ದೇವತೆಗಳ ಆಹ್ವಾನಕರ್ತೃವೂ, ಸ್ತೋತೃವಿಗೆ ಆನಂದದಾಯಕನೂ, ಸತ್ಯಸ್ವರೂಪನೂ, ಜ್ಞಾನಿಶ್ರೇಷ್ಠನೂ, ದೇವತೆಗಳ ಯಾಗಕರ್ತೃವೂ, ಜಗದ್ವಿಧಾತೃವೂ ಆದ ಅಗ್ನಿಯು ನಮ್ಮ ಯಾಗಗಳನ್ನುದ್ದೇಶಿಸಿ ಬರುತ್ತಾನೆ. ಮತ್ತು ವಿದ್ಯುತ್ತೇ ರಥವಾಗಿ ಉಳ್ಳವನೂ, ಜ್ವಾಲಾರೂಪಕೇಶಗಳುಳ್ಳವನೂ, ಬಲದ ಪುತ್ರನೂ ಆದ ಆ ಅಗ್ನಿಯು ಭೂಮಿಯಲ್ಲಿ ತನ್ನ ಸಾಮರ್ಥ್ಯವನ್ನು ಪ್ರಕಟಗೊಳಿಸುತ್ತಾನೆ.

## English Translation.

The invoker (of the gods), the exhilarator (of his worshippers), the true, the offerer of sacrifice, the most wise, the creator, is present at our sacred rites. AGNI, the son of strength, whose chariot is the lightning whose hair is flame, manifests his glory on the earth.

### ವಿಶೇಷ ವಿಷಯಗಳು

ಏತದಾದೀನಿ........ಪ್ರಾತರನುವಾಕೇ ಆಶ್ವಿನಶಸ್ತ್ರೇ ತ್ರೈಷ್ಟುಭೇ ಛಂದಸಿ ವಿನಿಯುಕ್ತಾನಿ ||

(ಸಾ. ಭಾ. ಪೀಠಿಕಾ)

ಅಗ್ನಿಯನ್ನುದ್ದೇಶಿಸಿ ಪಠಿಸಿದ ಈ ಸೂಕ್ತಕ್ಕೂ ಇದರ ಮುಂದಿನ ಸೂಕ್ತಗಳಿಗೂ ಪ್ರಾತರನುವಾಕಾತ್ಮಕವಾದ ಆಶ್ವಿನಶಸ್ತ್ರದಲ್ಲಿ ವಿನಿಯೋಗವೆಂದು ಸಾಯಣರು ತಮ್ಮ ಭಾಷ್ಯದ ಪೀಠಿಕೆಯಲ್ಲಿ ತಿಳಿಸಿದ್ದಾರೆ. ಪ್ರಕೃತದಲ್ಲಿ ಆಶ್ವಿನಶಸ್ತ್ರಕ್ಕೂ ಮತ್ತು ಅಗ್ನಿಸೂಕ್ತಕ್ಕೂ ಇರತಕ್ಕ ಸಂಬಂಧವನ್ನೂ ಮತ್ತು ಪ್ರಾತರನುವಾಕದ ವೈಶಿಷ್ಟ್ಯವನ್ನೂ ತಿಳಿಯಬೇಕಾದುದು ಅಗತ್ಯವು. ಆಶ್ವಿನಶಸ್ತ್ರಕ್ಕೂ ಅಗ್ನಿಸೂಕ್ತಕ್ಕೂ ಇರತಕ್ಕ ಸಂಬಂಧವನ್ನು ಸೂಚಿಸುವ ಕಥಾಸಂದರ್ಭವು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಉಕ್ತವಾಗಿದೆ.

**ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛಂಸ್ತಸ್ಯಾ ಏತತ್ಸಹಸ್ರಂ ವಹತುಮನ್ವಾಕರೋದ್ಯದೇತ-ದಾಶ್ವಿನಮಿತ್ಯಾಚಕ್ಷತೇಽನಾಶ್ವಿನಂ ಹೈವ ತದ್ಯದರ್ವಾಕ್ಸಹಸ್ರಂ ತಸ್ಮಾತ್ತತ್ಸಹಸ್ರಂ ವೈವ ಶಂಸೇ-ದ್ಭೂಯೋ ವಾ ಪ್ರಾಶ್ಯ ಘೃತಂ ಶಂಸೇದ್ಯಥಾ ಹ ವಾ ಇದಮನೋ ವಾ ರಥೋ ವಾಕ್ತೋ ವರ್ತತ ಏವಂ ಹೈವಾಕ್ತೋ ವರ್ತತೇ | ಶಕುನಿರಿವೋತ್ಪತಿಷ್ಯನ್ನಾಹ್ವಯೀತ |**

(ಐ. ಬ್ರಾ. ೧೬-೧)

ಪೂರ್ವದಲ್ಲಿ ಪ್ರಜಾಪತಿಯು ತನ್ನ ಮಗಳಾದ ಸೂರ್ಯೆಯನ್ನು ಸೋಮನಿಗೆ ವಿವಾಹಾರ್ಥವಾಗಿ ಕೊಡಲು ನಿಶ್ಚಯಿಸಿದಾಗ ಸಕಲ ದೇವತೆಗಳೂ ಅವಳನ್ನು ತಾವು ವರಿಸಬೇಕೆಂದು ಅಪೇಕ್ಷೆಯಿಂದ ಬಂದರು. ಆಗ ಪ್ರಜಾಪತಿಯು **ಆಶ್ವಿನಶಸ್ತ್ರವೆಂದು** ಪ್ರಸಿದ್ಧವಾದ ಸಹಸ್ರಮಂತ್ರಗಳನ್ನು ಪಠಿಸಬೇಕೆಂದೂ ಅದಕ್ಕೆ ಕಡಿಮೆಯಾಗಬಾರದೆಂದೂ ಒಂದು ನಿಯಮವನ್ನು ಗೊತ್ತುಮಾಡಿದನು. ಲೋಕದಲ್ಲಿ ರಥಚಕ್ರವು ತೈಲಸಿಂಚಿತವಾದನಂತರ ಹೇಗೆ ಸುಲಭವಾಗಿ ಚಲಿಸಬಲ್ಲದೋ ಹಾಗೆ ಘೃತಪಾನಾನಂತರ ಸುಲಭವಾಗಿ ಮಂತ್ರಗಳನ್ನು ಪಠಿಸಬಹುದಾದುದರಿಂದ ಮೊದಲು ಘೃತಪಾನವನ್ನು ಮಾಡಿ ಅನಂತರ ಪಠಿಸಬೇಕು. ಮತ್ತು ಪಕ್ಷಿಯು ಹಾರುವುದಕ್ಕೆ ಸಿದ್ಧವಾದಾಗ ತನ್ನ ದೇಹವನ್ನು ಲಘುವಾಗಿ ಮಾಡಿಕೊಳ್ಳುವಂತೆ ಇವಳನ್ನು ಮೋಹಿಸುವ ವರನೂ ಆ ಗುಣವನ್ನು ಹೊಂದಿರಬೇಕೆಂದನು.

**ತಸ್ಮಿನ್ದೇವಾ ನ ಸಮಜಾನತ ಮಮೇದಮಸ್ತು ಮಮೇದಮಸ್ತ್ವಿತಿ ತೇ ಸಂಜಾನಾನಾ ಅಬ್ರುವನ್ನಾಜಿಮಸ್ಯಾಯಾಮಹೈ ಸ ಯೋ ನ ಉಜ್ಜೇಷ್ಯತಿ ತಸ್ಯೇದಂ ಭವಿಷ್ಯತೀತಿ ತೇಽಗ್ನೇರೇವಾಧಿ ಗೃಹಪತೇರಾದಿತ್ಯಂ ಕಾಷ್ಠಾಮಕುರ್ವತ ತಸ್ಮಾದಾಗ್ನೇಯೀ ಪ್ರತಿಪದ್ಭವತ್ಯಾಶ್ವಿನ-ಸ್ಯಾಗ್ನಿರ್ಹೋತಾ ಗೃಹಪತಿಃ ಸ ರಾಜೇತಿ |**

(ಐ. ಬ್ರಾ. ೧೬-೧)

ಆಗ ದೇವತೆಗಳು ಪರಸ್ಪರವಾಗಿ ಹೋರಾಟವನ್ನು ಮಾಡಲಿಷ್ಟಪಡದೇ, ಎಲ್ಲರೂ ಸೇರಿ ಒಂದು ಪಂದ್ಯದಲ್ಲಿ ಭಾಗವಹಿಸ ಬೇಕೆಂದೂ ಆ ಪಂದ್ಯದಲ್ಲಿ ಯಾರೂ ಜಯಿಸುತ್ತಾರೆಯೋ ಅವರು ಇವಳನ್ನು ವರಿಸಲು ಅರ್ಹರೆಂದೂ ಒಟ್ಟಿಗೆ ಒಂದು ತೀರ್ಮಾನಕ್ಕೆ ಬಂದರು. ಆಗ ಗೃಹಪತಿಯಾದ ಅಗ್ನಿಯಿಂದ ಪ್ರಾರಂಭಿಸಿ ಸೂರ್ಯನವರೆಗೆ ಓಡಿದರು. ಆದುದ ರಿಂದಲೇ ಪ್ರಥಮಮಂತ್ರವಾದ

ಸ ತ್ವಂ ದಕ್ಷಸ್ಯಾವೃಕೋ ವೃಧೋ ಭೂರರ್ಯಃ ಪರಸ್ಯಾಂತರಸ್ಯ ತರುಷಃ |
ರಾಯಃ ಸೂನೋ ಸಹಸೋ ಮರ್ತ್ಯೇಷ್ವಾ ಛರ್ದಿರ್ಯಚ್ಛ ವೀತಹವ್ಯಾಯ ಸಪ್ರಥೋ ಭರದ್ವಾಜಾಯ ಸಪ್ರಥಃ ||

(ಋ. ಸಂ. ೬-೧೫-೩)

ಎಂಬ ಋಕ್ಕು ಅಗ್ನಿಪರವಾಗಿರುವುದೆಂದು ಒಂದು ಮತವೂ, ಅಲ್ಲದೇ,

ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ |
ಅಗ್ನೇರನೀಕಂ ಬೃಹತಃ ಸಪರ್ಯಂ ದಿವಿ ಶುಕ್ರಂ ಯಜತಂ ಸೂರ್ಯಸ್ಯ ||

(ಋ. ಸಂ. ೧೦-೭-೩)

ಎಂಬ ಮಂತ್ರದಿಂದ ಪ್ರಾರಂಭಿಸಬೇಕೆಂದು ಇನ್ನೊಂದು ಮತವೂ ಆಗಿದೆ. ಆದರೆ ಇದು ಗ್ರಾಹ್ಯವಲ್ಲ.

ತತ್ತನ್ನಾದೃತ್ಯಂ |....................ತಸ್ಮಾದಗ್ನಿರ್ಹೋತಾ ಗೃಹಪತಿಃ ಸ ರಾಜೇತ್ಯೇತಯೈವ ಪ್ರತಿಪದ್ಯೇತ ಗೃಹಪತಿವತೀ ಪ್ರಜಾತಿಮತೀ ಶಾಂತಾ ಸರ್ವಾಯುಃ ಸರ್ವಾಯುತ್ವಾಯ | ಸರ್ವಮಾಯುರೇತಿ ಯ ಏವಂ ವೇದ ||

ಅಗ್ನಿರ್ಹೋತಾ ಗೃಹಪತಿಃ—ಇತ್ಯಾದಿ ಮಂತ್ರಗಳಿಂದ ಪ್ರಾರಂಭಿಸುವುದೇ ನ್ಯಾಯವಾಗಿದೆ. ಈ ತತ್ತ್ವವನ್ನು ತಿಳಿದವರು ಸಕಲ ಸಂಪತ್ತನ್ನೂ ಪಡೆದು ದೀರ್ಘಾಯುಗಳಾಗುತ್ತಾರೆಂದಿದೆ. ಅಲ್ಲದೇ,

ತಾಸಾಂ ವೈ ದೇವತಾನಾಮಾಜಿಂ ಧಾವಂತೀನಾಮಭಿಸೃಷ್ಟಾನಾಮಗ್ನಿರ್ಮುಖಂ ಪ್ರಥಮಃ ಪ್ರತ್ಯಪದ್ಯತ ತಮಶ್ವಿನಾವನ್ವಾಗಚ್ಛತಾಂ ತಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸ ತಥೇತ್ಯಬ್ರವೀತ್ತಸ್ಯ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾಕುರುತಾಂ ತಸ್ಮಾದಾಗ್ನೇಯಮಾಶ್ವಿನೇ ಶಸ್ಯತೇ |

ಸಕಲ ದೇವತೆಗಳೂ ಈ ಪಂದ್ಯದಲ್ಲಿ ಭಾಗವಹಿಸಿ ಓಡುತ್ತಿದ್ದಾಗ ಅಗ್ನಿಯು ಎಲ್ಲರಿಗಿಂತಲೂ ಮುಂದಾದನು. ಆಗ ಅಶ್ವಿನೀದೇವತೆಗಳು ಅಗ್ನಿಯನ್ನು ಸಮೀಪಿಸಿ ನಮಗೆ ದಾರಿಯನ್ನು ಬಿಡು ಈ ಪಂದ್ಯವಲ್ಲಿ ನಾವು ಜಯಿಸಲು ನಮಗೆ ಸಹಾಯವನ್ನು ಮಾಡು ಎಂದು ಕೇಳಿಕೊಂಡರು. ಆಗ ಅಗ್ನಿಯು ಅದಕ್ಕೆ ಒಪ್ಪಿದನು. ಆದರೆ ಆ ಜಯದಲ್ಲಿ ತನಗೂ ಒಂದು ಭಾಗವನ್ನು ಕೊಡಬೇಕೆಂದು ಕೇಳಿಕೊಂಡನು. ಆದುದರಿಂದಲೇ ಆಶ್ವಿನಶಸ್ತ್ರದಲ್ಲಿ ಅವನಿಗೂ ಒಂದು ಭಾಗವಿದೆ.

ಈ ಸಂದರ್ಭದಲ್ಲಿ ಇನ್ನೊಂದು ಆಕ್ಷೇಪವನ್ನು ಹೇಳಿ ಅದಕ್ಕೆ ಸಮಾಧಾನವನ್ನೂ ತಿಳಿಸಿದೆ.

ತದಾಹುರ್ಯಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ ಕಸ್ಮಾದೇತದಾಶ್ವಿನಮಿತ್ಯಾಚಕ್ಷತ ಇತ್ಯಶ್ವಿನೌ ಹಿ ತದುದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ |

(ಐ. ಬ್ರಾ. ೧೭-೨)

ಈ ಸಂದರ್ಭದಲ್ಲಿ ಅಗ್ನಿಯನ್ನೂ, ಇಂದ್ರನನ್ನೂ, ಉಷಸ್ಸನ್ನೂ ಉದ್ದೇಶಿಸಿ ಮಂತ್ರಗಳನ್ನು ಪಠಿಸಬೇಕಾಗಿರುವುದರಿಂದ ಇವಕ್ಕೆಲ್ಲ ಆಶ್ವಿನಶಸ್ತ್ರವೆಂದು ಹೆಸರು ಹೇಗೆ ಬಂದಿತು ಎಂಬ ಆಕ್ಷೇಪಣೆಯು ಬಂದರೆ, ಆಗ ಇದು ಮುಖ್ಯವಾಗಿ ಅಶ್ವಿನೀ ದೇವತೆಗಳ ಜಯವನ್ನು ಕುರಿತು ಪಠಿತವಾಗಿರುವುದರಿಂದ ಈ ಮಂತ್ರಗಳಿಗೆ ಈ ಹೆಸರು ಎಂಬುದೇ ಸಮಾಧಾನವು.

ಇಲ್ಲಿ ಪ್ರಾತರನುವಾಕವೆಂದರೇನೆಂಬುದನ್ನು ವಿವರಿಸುವುದು ಅವಶ್ಯವಾಗಿದೆ. ಅಗ್ನಿಷ್ಟೋಮಯಾಗವನ್ನು ಮಾಡುವಾಗ ಸೋಮರಸವನ್ನು ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನ ಅಥವಾ ಸುತ್ಯಾದಿನವೆಂದು ಹೆಸರು. ಈ ದಿವಸದ ಪ್ರಾತಃಕಾಲದಲ್ಲಿ ಸೂರ್ಯೋದಯವಾಗುವುದಕ್ಕೆ ಮುಂಚೆ ಅಧ್ವರ್ಯುವು **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನು ಬ್ರೂಹಿ** ಎಂದು ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಹೋತೃವು ಕೆಲವು ಮಂತ್ರಗಳನ್ನು ಪಠಿಸುವನು. ಇವುಗಳಿಗೆ ಪ್ರಾತರನುವಾಕ ಮಂತ್ರಗಳೆಂದು ಹೆಸರು. ಹೋತೃವು ಈ ಪ್ರಾತರನುವಾಕ ಮಂತ್ರಗಳನ್ನು ಪಠಿಸಬೇಕು. ಇವನ್ನು **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾಹಾಧ್ವರ್ಯುಃ** (ಐ. ಬ್ರಾ. ೨-೧೫) ಎಂದು ಐತರೇಯ ಬ್ರಾಹ್ಮಣದಲ್ಲಿಯೇ ಹೇಳಿದೆ.

ಪ್ರಾತರನುವಾಕ ಮಂತ್ರಗಳನ್ನು ಪಠಿಸುವಾಗ ಹೋತೃವು ಅನುಸರಿಸುವ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸ ಲಾಗುತ್ತದೆ. ಯಜ್ಞದಲ್ಲಿ ಪ್ರಧಾನ ಋತ್ವಿಕ್‌ಪಾತ್ರವನ್ನು ವಹಿಸಿರುವ ಅಧ್ವರ್ಯುವು ಇತರ ಋತ್ವಿಕ್ಕುಗಳನ್ನುದ್ದೇಶಿಸಿ ಇಂತಹ ಕಾರ್ಯವನ್ನು ನೀನು ಮಾಡಬೇಕು ಇತ್ಯಾದಿಯಾಗಿ ಪದೇಪದೇ ಹೇಳಬೇಕಾಗುತ್ತಿರುತ್ತದೆ. ಇಂತಹ ವಾಕ್ಯಗಳಿಗೆ ಪ್ರೈಷಗಳೆಂದು ಹೆಸರು. ಪ್ರಕೃತ ಸಂದರ್ಭದಲ್ಲಿ ಅಧ್ವರ್ಯುವು ಹೋತೃವನ್ನುದ್ದೇಶಿಸಿ—**ದೇವೇಭ್ಯಃಪ್ರಾತರ್ಯಾವಭ್ಯೋ ಹೋತರನುಬ್ರೂಹಿ** ಎಲೈ ಹೋತೃವೇ, ದೇವತೆಗಳನ್ನುದ್ದೇಶಿಸಿ ಪ್ರಾತರನುವಾಕಮಂತ್ರಗಳನ್ನು ಹೇಳು ಎಂದು ಹೇಳುವನು. ಆಗ ಹೋತೃವು ಆಗ್ನೀಧ್ರವೆಂಬ ಅಗ್ನಿಕುಂಡದ ಸಮೀಪಕ್ಕೆ ಹೋಗಿ ಅಲ್ಲಿ ವಾಕ್ಶುದ್ಧಿಗಾಗಿ ಒಂದು ಆಜ್ಯಾ ಹುತಿಯನ್ನೂ, ಆಹವನೀಯಾಗ್ನಿಯಲ್ಲಿ ಎರಡು ಆಜ್ಯಾಹುತಿಗಳನ್ನೂ ವಿಧ್ಯುಕ್ತ ಮಂತ್ರಗಳಿಂದ ಹೋಮಮಾಡುವನು. ಬಳಿಕ ಹವಿರ್ಧಾನವೆಂಬ ಶಾಲೆಯನ್ನು ಪೂರ್ವದ್ವಾರದಿಂದ ಪ್ರವೇಶಿಸಿ ಅಲ್ಲಿರುವ ಗಾಡಿಗಳ ನೊಗದ ಸಮೀಪದಲ್ಲಿ ಕುಳಿತು ಮೊದಲು ಈ ಮಂತ್ರವನ್ನು ಪಠಿಸುತ್ತಾನೆ.

**ಆಪೋ ರೇವತೀಃ ಕ್ಷಯಥಾ ಹಿ ವಸ್ವಃ ಕ್ರತುಂ ಚ ಭದ್ರಂ ಬಿಭೃಥಾಮೃತಂ ಚ ।**
**ರಾಯಶ್ಚ ಸ್ಥ ಸ್ವಪತ್ಯಸ್ಯ ಪತ್ನೀಃ ಸರಸ್ವತೀ ತದ್ಗೃಣತೇ ವಯೋ ಧಾತ್ ॥**
(ಋ.ಸಂ. ೧೦-೩೦-೧೨)

ಅನಂತರ ಅಗ್ನಿ, ಉಷಸ್ಸು, ಅಶ್ವಿನೀದೇವತೆಗಳು ಇವರನ್ನುದ್ದೇಶಿಸಿ ಪ್ರಾತರನುವಾಕಮಂತ್ರಗಳನ್ನು ಪಠಿಸುವನು. ಇವು ಮೂರು ಭಾಗಗಳಾಗಿವೆ. ಅಗ್ನಿಯನ್ನುದ್ದೇಶಿಸಿ ಹೇಳುವ ಮಂತ್ರಗಳಿಗೆ ಆಗ್ನೇಯಕ್ರತುವೆಂದೂ, ಉಷಸ್ಸನ್ನುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಉಷಸ್ಯಕ್ರತುವೆಂದೂ, ಅಶ್ವಿನೀದೇವತೆಗಳನ್ನುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಆಶ್ವಿನಕ್ರತು ವೆಂದೂ ಹೆಸರು. ಇಲ್ಲಿ ಪ್ರತಿ ದೇವತೆಯನ್ನೂ ಉದ್ದೇಶಿಸಿದ ಮಂತ್ರಗಳು ಏಳು ಛಂದಸ್ಸುಗಳಿಂದಲೂ ಕೂಡಿರಬೇಕೆಂದು ತಿಳಿಸಲು **ಸಪ್ತಭಿಃ ಸಪ್ತಭಿಃ ಛಂದೋಭಿಃ** ಎಂದು ವೀಪ್ಸೆಯಿದೆ. (ದ್ವಿರುಕ್ತವಾಗಿದೆ). ಅದರಂತೆ ಈ ಮಂತ್ರಗಳ ವಿವರಣೆಯು ಈರೀತಿಯಿದೆ.

**ಉಪ ಪ್ರಯಂತಃ (ಋ. ಸಂ. ೧-೭೪-೧) ಇತಾದಿಷು ಛಂದೋ ಗಾಯತ್ರಂ ।**
**ತ್ವಮಗ್ನೇ ವಸೂನ್ ( ,, ೧-೪೫-೧) ಇತ್ಯಾದಿಷ್ವನುಷ್ಟುಪ್ ಛಂದಃ ।**
**ಆಬೋಧ್ಯಗ್ನಿಃ ( ,, ೫-೧-೧ ) ಇತ್ಯಾದಿಷು ತ್ರಿಷ್ಟುಪ್ ,, ।**

ಆಗ ದೇವತೆಗಳು ಪರಸ್ಪರವಾಗಿ ಹೋರಾಟವನ್ನು ಮಾಡಲಿಷ್ಟಪಡದೇ, ಎಲ್ಲರೂ ಸೇರಿ ಒಂದು ಪಂದ್ಯದಲ್ಲಿ ಭಾಗವಹಿಸ ಬೇಕೆಂದೂ ಆ ಪಂದ್ಯದಲ್ಲಿ ಯಾರೂ ಜಯಿಸುತ್ತಾರೆಯೋ ಅವರು ಇವಳನ್ನು ವರಿಸಲು ಅರ್ಹರೆಂದೂ ಒಟ್ಟಿಗೆ ಒಂದು ತೀರ್ಮಾನಕ್ಕೆ ಬಂದರು. ಆಗ ಗೃಹಪತಿಯಾದ ಅಗ್ನಿಯಿಂದ ಪ್ರಾರಂಭಿಸಿ ಸೂರ್ಯನವರೆಗೆ ಓಡಿದರು. ಆದುದ ರಿಂದಲೇ ಪ್ರಥಮಮಂತ್ರವಾದ

ಸ ತ್ವಂ ವಹ್ನಸ್ಯಾವೃಕೋ ವೃಥೋ ಭೂರರ್ಯಃ ಪರಸ್ಯಾಂತರಸ್ಯ ತರುಷಃ |
ರಾಯಃ ಸೂನೋ ಸಹಸೋ ಮರ್ತ್ಯೇಷ್ವಾ ಛರ್ದಿರ್ಯಚ್ಛ ವೀತಹವ್ಯಾಯ ಸಪ್ರಥೋ ಭರದ್ವಾಜಾಯ ಸಪ್ರಥಃ ||

(ಋ. ಸಂ. ೬-೧೫-೩)

ಎಂಬ ಋಕ್ಕು ಅಗ್ನಿಪರವಾಗಿರುವುದೆಂದು ಒಂದು ಮತವೂ, ಅಲ್ಲದೇ,

ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ |
ಅಗ್ನೇರನೀಕಂ ಬೃಹತಃ ಸಪರ್ಯಂ ದಿವಿ ಶುಕ್ರಂ ಯಜತಂ ಸೂರ್ಯಸ್ಯ ||

(ಋ. ಸಂ. ೧೦-೭-೩)

ಎಂಬ ಮಂತ್ರದಿಂದ ಪ್ರಾರಂಭಿಸಬೇಕೆಂದು ಇನ್ನೊಂದು ಮತವೂ ಆಗಿದೆ. ಆದರೆ ಇದು ಗ್ರಾಹ್ಯವಲ್ಲ.

ತತ್ತನ್ನಾದೃತ್ಯಂ |...................ತಸ್ಮಾದಗ್ನಿರ್ಹೋತಾ ಗೃಹಪತಿಃ ಸ ರಾಜೇತ್ಯೇತಯೈವ ಪ್ರತಿಪದ್ಯೇತ ಗೃಹಪತಿವತೀ ಪ್ರಜಾತಿಮತೀ ಶಾಂತಾ ಸರ್ವಾಯುಃ ಸರ್ವಾಯುತ್ವಾಯ | ಸರ್ವಮಾಯುರೇತಿ ಯ ಏವಂ ವೇದ ||

ಅಗ್ನಿರ್ಹೋತಾ ಗೃಹಪತಿಃ—ಇತ್ಯಾದಿ ಮಂತ್ರಗಳಿಂದ ಪ್ರಾರಂಭಿಸುವುದೇ ನ್ಯಾಯವಾಗಿದೆ. ಈ ತತ್ತ್ವವನ್ನು ತಿಳಿದವರು ಸಕಲ ಸಂಪತ್ತನ್ನೂ ಪಡೆದು ದೀರ್ಘಾಯುಗಳಾಗುತ್ತಾರೆಂದಿದೆ. ಅಲ್ಲದೇ,

ತಾಸಾಂ ವೈ ದೇವತಾನಾಮಾಜಿಂ ಧಾವಂತೀನಾಮಭಿಸೃಷ್ಟಾನಾಮಗ್ನಿರ್ಮುಖಂ ಪ್ರಥಮಃ ಪ್ರತ್ಯಪದ್ಯತ ತಮಶ್ವಿನಾವನ್ವಾಗಚ್ಛತಾಂ ತಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸ ತಥೇತ್ಯಬ್ರವೀತ್ತ್ವಸ್ಯ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾಕುರುತಾಂ ತಸ್ಮಾದಾಗ್ನೇಯಮಾಶ್ವಿನೇ ಶಸ್ಯತೇ |

ಸಕಲ ದೇವತೆಗಳೂ ಈ ಪಂದ್ಯದಲ್ಲಿ ಭಾಗವಹಿಸಿ ಓಡುತ್ತಿದ್ದಾಗ ಅಗ್ನಿಯು ಎಲ್ಲರಿಗಿಂತಲೂ ಮುಂದಾದನು. ಆಗ ಅಶ್ವಿನೀದೇವತೆಗಳು ಅಗ್ನಿಯನ್ನು ಸಮೀಪಿಸಿ ನಮಗೆ ದಾರಿಯನ್ನು ಬಿಡು ಈ ಪಂದ್ಯದಲ್ಲಿ ನಾವು ಜಯಿಸಲು ನಮಗೆ ಸಹಾಯವನ್ನು ಮಾಡು ಎಂದು ಕೇಳಿಕೊಂಡರು. ಆಗ ಅಗ್ನಿಯು ಅದಕ್ಕೆ ಒಪ್ಪಿದನು. ಆದರೆ ಆ ಜಯದಲ್ಲಿ ತನಗೂ ಒಂದು ಭಾಗವನ್ನು ಕೊಡಬೇಕೆಂದು ಕೇಳಿಕೊಂಡನು. ಆದುದರಿಂದಲೇ ಆಶ್ವಿನಶಸ್ತ್ರದಲ್ಲಿ ಅವನಿಗೂ ಒಂದು ಭಾಗವಿದೆ.

ಈ ಸಂದರ್ಭದಲ್ಲಿ ಇನ್ನೊಂದು ಆಕ್ಷೇಪವನ್ನು ಹೇಳಿ ಅದಕ್ಕೆ ಸಮಾಧಾನವನ್ನೂ ತಿಳಿಸಿದೆ.

ತದಾಹುರ್ಯಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ ಕಸ್ಮಾದೇತದಾಶ್ವಿ-ನಮಿತ್ಯಾಚಕ್ಷತ ಇತ್ಯಶ್ವಿನಾ ಹಿ ತದುದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ |

(ಐ. ಬ್ರಾ. ೧೭-೨)

ಈ ಸಂದರ್ಭದಲ್ಲಿ ಅಗ್ನಿಯನ್ನೂ, ಇಂದ್ರನನ್ನೂ, ಉಷಸ್ಸನ್ನೂ ಉದ್ದೇಶಿಸಿ ಮಂತ್ರಗಳನ್ನು ಪಠಿಸಬೇಕಾಗಿರುವುದರಿಂದ ಇವಕ್ಕೆಲ್ಲ ಆಶ್ವಿನಶಸ್ತ್ರವೆಂದು ಹೆಸರು ಹೇಗೆ ಬಂದಿತು ಎಂಬ ಆಕ್ಷೇಪಣೆಯು ಬಂದರೆ, ಆಗ ಇದು ಮುಖ್ಯವಾಗಿ ಅಶ್ವಿನೀ ದೇವತೆಗಳ ಜಯವನ್ನು ಕುರಿತು ಪಠಿತವಾಗಿರುವುದರಿಂದ ಈ ಮಂತ್ರಗಳಿಗೆ ಈ ಹೆಸರು ಎಂಬುದೇ ಸಮಾಧಾನವು.

ಇಲ್ಲಿ ಪ್ರಾತರನುವಾಕವೆಂದರೇನೆಂಬುದನ್ನು ವಿವರಿಸುವುದು ಅವಶ್ಯವಾಗಿದೆ. ಅಗ್ನಿಷ್ಟೋಮಯಾಗವನ್ನು ಮಾಡುವಾಗ ಸೋಮರಸವನ್ನು ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನ ಅಥವಾ ಸುತ್ಯಾದಿನವೆಂದು ಹೆಸರು. ಈ ದಿವಸದ ಪ್ರಾತಃಕಾಲದಲ್ಲಿ ಸೂರ್ಯೋದಯವಾಗುವುದಕ್ಕೆ ಮುಂಚೆ ಅಧ್ವರ್ಯುವು **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನು ಬ್ರೂಹಿ** ಎಂದು ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಹೋತೃವು ಕೆಲವು ಮಂತ್ರಗಳನ್ನು ಪಠಿಸುವನು. ಇವುಗಳಿಗೆ ಪ್ರಾತರನುವಾಕ ಮಂತ್ರಗಳೆಂದು ಹೆಸರು. ಹೋತೃವು ಈ ಪ್ರಾತರನುವಾಕ ಮಂತ್ರಗಳನ್ನು ಪಠಿಸಬೇಕು. ಇದನ್ನು **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾಹಾಧ್ವರ್ಯುಃ** (ಐ. ಬ್ರಾ. ೨-೧೫) ಎಂದು ಐತರೇಯ ಬ್ರಾಹ್ಮಣದಲ್ಲಿಯೇ ಹೇಳಿದೆ.

ಪ್ರಾತರನುವಾಕ ಮಂತ್ರಗಳನ್ನು ಪಠಿಸುವಾಗ ಹೋತೃವು ಅನುಸರಿಸುವ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸಲಾಗುತ್ತದೆ. ಯಜ್ಞದಲ್ಲಿ ಪ್ರಧಾನ ಋತ್ವಿಕ್‌ಪಾತ್ರವನ್ನು ವಹಿಸಿರುವ ಅಧ್ವರ್ಯುವು ಇತರ ಋತ್ವಿಕ್ಕುಗಳನ್ನುದ್ದೇಶಿಸಿ ಇಂತಹ ಕಾರ್ಯವನ್ನು ನೀನು ಮಾಡಬೇಕು ಇತ್ಯಾದಿಯಾಗಿ ಪದೇಪದೇ ಹೇಳಬೇಕಾಗುತ್ತಿರುತ್ತದೆ. ಇಂತಹ ವಾಕ್ಯಗಳಿಗೆ ಪ್ರೈಷಗಳೆಂದು ಹೆಸರು. ಪ್ರಕೃತ ಸಂದರ್ಭದಲ್ಲಿ ಅಧ್ವರ್ಯುವು ಹೋತೃವನ್ನುದ್ದೇಶಿಸಿ—**ದೇವೇಭ್ಯಃಪ್ರಾತರ್ಯಾವಭ್ಯೋ ಹೋತರನುಬ್ರೂಹಿ** ಎಲೈ ಹೋತೃವೇ, ದೇವತೆಗಳನ್ನುದ್ದೇಶಿಸಿ ಪ್ರಾತರನುವಾಕಮಂತ್ರಗಳನ್ನು ಹೇಳು ಎಂದು ಹೇಳುವನು. ಆಗ ಹೋತೃವು ಆಗ್ನೀಧ್ರವೆಂಬ ಅಗ್ನಿಕುಂಡದ ಸಮೀಪಕ್ಕೆ ಹೋಗಿ ಅಲ್ಲಿ ವಾಕ್ಶುದ್ಧಿಗಾಗಿ ಒಂದು ಆಜ್ಯಾಹುತಿಯನ್ನೂ, ಆಹವನೀಯಾಗ್ನಿಯಲ್ಲಿ ಎರಡು ಆಜ್ಯಾಹುತಿಗಳನ್ನೂ ವಿಧ್ಯುಕ್ತ ಮಂತ್ರಗಳಿಂದ ಹೋಮಮಾಡುವನು. ಬಳಿಕ ಹವಿರ್ಧಾನವೆಂಬ ಶಾಲೆಯನ್ನು ಪೂರ್ವದ್ವಾರದಿಂದ ಪ್ರವೇಶಿಸಿ ಅಲ್ಲಿರುವ ಗಾಡಿಗಳ ನೊಗದ ಸಮೀಪದಲ್ಲಿ ಕುಳಿತು ಮೊದಲು ಈ ಮಂತ್ರವನ್ನು ಪಠಿಸುತ್ತಾನೆ.

**ಆಪೋ ರೇವತೀಃ ಕ್ಷಯಥಾ ಹಿ ವಸ್ವಃ ಕ್ರತುಂ ಚ ಭದ್ರಂ ಬಿಭೃಥಾಮೃತಂ ಚ ।**
**ರಾಯಶ್ಚ ಸ್ಥ ಸ್ವಪತ್ಯಸ್ಯ ಪತ್ನೀಃ ಸರಸ್ವತೀ ತದ್ಗೃಣತೇ ವಯೋ ಧಾತ್ ॥**

(ಋ.ಸಂ. ೧೦-೩೦-೧೨)

ಅನಂತರ ಅಗ್ನಿ, ಉಷಸ್ಸು, ಅಶ್ವಿನೀದೇವತೆಗಳು ಇವರನ್ನುದ್ದೇಶಿಸಿ ಪ್ರಾತರನುವಾಕಮಂತ್ರಗಳನ್ನು ಪಠಿಸುವನು. ಇವು ಮೂರು ಭಾಗಗಳಾಗಿವೆ. ಅಗ್ನಿಯನ್ನುದ್ದೇಶಿಸಿ ಹೇಳುವ ಮಂತ್ರಗಳಿಗೆ ಆಗ್ನೇಯಕ್ರತುವೆಂದೂ, ಉಷಸ್ಸನ್ನುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಉಷಸ್ಯಕ್ರತುವೆಂದೂ, ಅಶ್ವಿನೀದೇವತೆಗಳನ್ನುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಆಶ್ವಿನಕ್ರತುವೆಂದೂ ಹೆಸರು. ಇಲ್ಲಿ ಪ್ರತಿ ದೇವತೆಯನ್ನೂ ಉದ್ದೇಶಿಸಿದ ಮಂತ್ರಗಳು ಏಳು ಛಂದಸ್ಸುಗಳಿಂದಲೂ ಕೂಡಿರಬೇಕೆಂದು ತಿಳಿಸಲು **ಸಪ್ತಭಿಃ ಸಪ್ತಭಿಃ ಛಂದೋಭಿಃ** ಎಂದು ವೀಪ್ಸೆಯಿದೆ. (ದ್ವಿರುಕ್ತವಾಗಿದೆ). ಅದರಂತೆ ಈ ಮಂತ್ರಗಳ ವಿವರಣೆಯು ಈರೀತಿಯಿದೆ.

**ಉಪ ಪ್ರಯಂತಃ (ಋ. ಸಂ. ೧-೭೪-೧) ಇತಾದಿಷು ಚ್ಛಂದೋ ಗಾಯತ್ರಂ ।**
**ತ್ವಮಗ್ನೇ ವಸೂನ್ ( ,, ೧-೪೫-೧) ಇತ್ಯಾದಿಷ್ವನುಷ್ಟುಪ್‌ಛಂದಃ ।**
**ಆಬೋಧ್ಯಗ್ನಿಃ ( ,, ೫-೧-೧ ) ಇತ್ಯಾದಿಷು ತ್ರಿಷ್ಟುಪ್ ,, ।**

ಏನಾ ವೋ ಅಗ್ನಿಂ ( ,, ೭-೧೬-೧ ) ಇತ್ಯಾದಿಷು ಬೃಹತೀ ,, ।
ಅಗ್ನೇ ವಾಜಸ್ಯ ( ,, ೧-೭೯-೪ ) ಇತ್ಯಾದಿಷೂಷ್ಣಿಕ್ ,, ।
ಜನಸ್ಯ ಗೋಪಾ ( ,, ೫-೧೧-೧ ) ಇತ್ಯಾದಿಷು ಜಗತೀ ,, ।
ಅಗ್ನಿಂ ತಂ ಮನ್ಯೇ ( ,, ೫-೬-೧ ) ಇತಾದಿಷು ಪಂಕ್ತಿಃ ,, ।

ತಾನ್ಯೇತಾನಿ ಸಪ್ತಚ್ಛಂದಾಂಸ್ಯಾಗ್ನೇಯೇ ಕ್ರತೌ ಪ್ರಾತರನುವಾಕೇ ದ್ರಷ್ಟವ್ಯಾನಿ ॥ ಏಳು ಛಂದಸ್ಸುಗಳಿಂದ ಕೂಡಿದ ಈ ಏಳು ಮಂತ್ರಗಳೂ ಅಗ್ನಿದೇವತೆಯನ್ನುದ್ದೇಶಿಸಿದ ಪ್ರಾತರನುವಾಕದಲ್ಲಿ ಆಗ್ನೇಯಕ್ರತುಸಂಬಂಧವಾದ ಮಂತ್ರಗಳು.

ಪ್ರತಿ ಷ್ಯಾ ಸೂನರೀ ( ಋ. ಸಂ. ೪–೫೨–೧ ) ಇತ್ಯಾದಿಷು ಗಾಯತ್ರೀ ಛಂದಃ ।
ಉಷೋ ಭದ್ರೇಭಿಃ ( ಋ. ಸಂ. ೧-೪೯-೧ ) ಇತ್ಯಾದಿಷು ಅನುಷ್ಟುಪ್ ಚ್ಛಂದಃ
ಇದಂ ಶ್ರೇಷ್ಠಂ ( ,, ೧-೧೧೩-೧ ) ,, ತ್ರಿಷ್ಟುಪ್ ,,
ಪ್ರತ್ಯು ಅದರ್ಶಿ ( ,, ೭-೮೧-೧ ) ,, ಬೃಹತೀ ,,
ಉಷಸ್ತಚ್ಚಿತ್ರಮಾಭರ ( ,, ೧-೯೨-೧೩ ) ,, ಉಷ್ಣಿಕ್ ,,
ಏತಾ ಉ ತ್ಯಾ ( ,, ೧-೯೨-೧ ) ,, ಜಗತೀ ,,
ಮಹೇ ನೋ ಅದ್ಯ ( ,, ೫-೭೯-೧ ) ,, ಪಂಕ್ತಿಃ ,,

ತಾನ್ಯೇತಾನ್ಯುಷಸಃ ಪ್ರಾತರನುವಾಕೇ ಸಪ್ತಚ್ಛಂದಾಂಸಿ. ಈ ಏಳೂ ಉಷೋ ದೇವತೆಯನ್ನುದ್ದೇಶಿಸಿದುದೂ ಪ್ರಾತರನುವಾಕದಲ್ಲಿ ಉಷಸ್ಯಕ್ರತು ಸಂಬಂಧವಾದುದೂ ಆದ ಮಂತ್ರಗಳು. ಮತ್ತು

ಏಷೋ ಉಷಾ ( ಋ. ಸಂ. ೧. ೪೬. ೧) ಇತ್ಯಾದಿಷು ಗಾಯತ್ರೀ ಚ್ಛಂದಃ
ಯದದ್ಯ ( ,, ೫. ೭೩. ೧) ,, ಅನುಷ್ಟುಪ್ ,,
ಆ ಭಾತ್ಯಗ್ನಿಃ ( ,, ೫. ೭೬. ೧) ,, ತ್ರಿಷ್ಟುಪ್ ,,
ಇಮಾ ಉ ವಾಂ ( ,, ೭. ೭೪. ೧) ,, ಬೃಹತೀ ,,
ಅಶ್ವಿನಾ ವರ್ತಿಃ ( ,, ೧ ೯೨. ೧೬) ,, ಉಷ್ಣಿಕ್ ,,
ಅಬೋಧ್ಯಗ್ನಿರ್ಜ್ಮ ( ,, ೧. ೧೫೭. ೧) ,, ಜಗತೀ ,,
ಪ್ರತಿಪ್ರಿಯತಮಂ ( ,, ೫. ೭೫. ೧) ,, ಪಂಕ್ತಿಃ ,,

ತಾನ್ಯೇತಾನ್ಯಾಶ್ವಿನೇ ಪ್ರಾತರನುವಾಕೇ ಸಪ್ತಛಂದಾಂಸಿ । ಈ ಏಳೂ ಅಶ್ವಿನೀದೇವತೆಗಳನ್ನುದ್ದೇಶಿಸಿದ ಮತ್ತು ಆಶ್ವಿನಕ್ರತುಸಂಬಂಧವಾದ ಪ್ರಾತರನುವಾಕಮಂತ್ರಗಳು. ಈ ಪ್ರಾತರನುವಾಕಮಂತ್ರಗಳ ಮಾಹಾತ್ಮ್ಯವನ್ನು ಐತರೇಯಬ್ರಾಹ್ಮಣದಲ್ಲಿ ವರ್ಣಿಸಿ ಅದರ ಆಧ್ಯಾತ್ಮಿಕವಾದ ಹಿನ್ನೆಲೆಯನ್ನು ಕೆಳಗೆ ಕಂಡಂತೆ ವಿವರಿಸಿದೆ.

ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾಹಾಧ್ವರ್ಯುಃ । ಏತೇ ವಾವ ದೇವಾಃ ಪ್ರಾತರ್ಯಾವಾಣೋ ಯದಗ್ನಿರುಷಾ ಅಶ್ವಿನೌ ತ ಏತೇ ಸಪ್ತಭಿಃ ಸಪ್ತಭಿಶ್ಛಂದೋ-ಭಿರಾಗಚ್ಛಂತಿ । ಅಸ್ಯ ದೇವಾಃ ಪ್ರಾತರ್ಯಾವಾಣೋ ಹವಂ ಗಚ್ಛಂತಿ ಯ ಏವಂ ವೇದ । ಪ್ರಜಾಪತೌ ವೈ ಸ್ವಯಂ ಹೋತರಿ ಪ್ರಾತರನುವಾಕಮನುವಕ್ಷ್ಯತ್ಯುಭಯೇ ದೇವಾಸುರಾ ಯಜ್ಞಮುಪಾವಸನ್ನಸ್ಮಭ್ಯಮನುವಕ್ಷ್ಯತ್ಯಸ್ಮಭ್ಯಮಿತಿ ಸ ವೈ ದೇವೇಭ್ಯ ಏವಾನ್ವಬ್ರವೀತ್ ।

ತತೋ ವೈ ದೇವಾ ಅಭವನ್ಪರಾಸುರಾಃ ಭವತ್ಯಾತ್ಮನಾ ಪರಾಸ್ಯ ದ್ವಿಷನ್ ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ । ಪ್ರಾತರ್ವೈ ಸ ತಂ ದೇವೇಭ್ಯೋಽನ್ವಬ್ರವೀದ್ಯತ್ಪ್ರಾತರನುವಾಕಸ್ಯ ಪ್ರಾತರನುವಾಕತ್ವಂ । ಮಹತಿ ರಾತ್ರ್ಯಾ ಅನೂಚ್ಯಃ ಸರ್ವಸ್ಯೈ ವಾಚಃ ಸರ್ವಸ್ಯ ಬ್ರಹ್ಮಣಃ ಪರಿಗೃಹೀತ್ಯೈ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ತಸ್ಯ ವಾಚಂ ಪ್ರೋದಿತಾಮನುಪ್ರವದಂತಿ ತಸ್ಮಾನ್ಮಹತಿ ರಾತ್ರ್ಯಾ ಅನೂಚ್ಯಃ........ಯದಾ ವಾ ಅಧ್ವರ್ಯುರುಪಾಕರೋತಿ ವಾಚೈವೋಪಾಕರೋತಿ ವಾಚಾ ಹೋತಾನ್ವಾಹ ವಾಗ್ಘಿ ಬ್ರಹ್ಮ ತತ್ರ ಸ ಕಾಮ ಉಪಾಪ್ತೋಯೋ ವಾಚಿ ಚ ಬ್ರಹ್ಮಣಿ ಚ ॥

( ಐ. ಬ್ರಾ. ೭-೫ )

ಅಗ್ನಿ, ಉಷಸ್ಸು ಮತ್ತು ಅಶ್ವಿನೀದೇವತೆಗಳು ಇವರು ಪ್ರಾತಃಕಾಲದಲ್ಲಿ ಸಂಚರಿಸತಕ್ಕ ದೇವತೆಗಳು. ಇವರಲ್ಲಿ ಪ್ರತಿಯೊಂದು ದೇವತೆಯೂ ಸಪ್ತಚ್ಛಂದಸ್ಸನ್ನುಳ್ಳವರಾಗಿದ್ದಾರೆ. ಈ ತತ್ತ್ವವನ್ನರಿತ ಮಾನವನನ್ನಲ್ಲಿಗೆ ಇವರು ಬರುತ್ತಾರೆ. ಒಂದುಸಲ ಪ್ರಜಾಪತಿಯೇ ಹೋತೃವಾಗಿದ್ದಾಗ ದೇವತೆಗಳು ಒಂದುಕಡೆಯೂ, ಅಸುರರು ಇನ್ನೊಂದುಕಡೆಯೂ ಯಜ್ಞದೀಕ್ಷಿತರಾಗಿ ಪ್ರಜಾಪತಿಯು ತಮ್ಮ ಯಾಗಕ್ಕೆ ಪ್ರಾತರನುವಾಕವನ್ನು ಪಠಿಸುವನೆಂದು ಎರಡು ಗುಂಪಿನವರೂ ಭಾವಿಸಿಕೊಂಡರು. ಆದರೆ ಪ್ರಜಾಪತಿಯು ದೇವತೆಗಳಿಗಾಗಿ ಮಾತ್ರ ಪಠಿಸಿದನು. ದೇವತೆಗಳು ಇದರಿಂದ ಜಯಿಸಿದರು. ಅಸುರರು ಪರಾಜಿತರಾದರು. ಇದನ್ನು ಪ್ರಾತಃಕಾಲದಲ್ಲಿ ಪಠಿಸಿದ್ದರಿಂದ ಪ್ರಾತರನುವಾಕವೆಂದು ಪ್ರಸಿದ್ಧವಾಯಿತು ಮತ್ತು ಇದರ ಪ್ರಭಾವವು ಪೂರ್ಣವಾಗಿ ತೋರಬೇಕಾದರೆ ಗಭೀರವಾದ ಮಧ್ಯರಾತ್ರಿಯಲ್ಲಿ ಇದನ್ನು ಪಠಿಸಬೇಕು. ವಾಕ್ಕೇ ಬ್ರಹ್ಮಸ್ವರೂಪವಾದ್ದರಿಂದ ಇದನ್ನು ಪಠಿಸಿದರೆ ಇಷ್ಟಾರ್ಥವು ಲಭಿಸುತ್ತದೆ.

ಪ್ರಜಾಪತೌ ಸ್ವಯಂ ಹೋತರಿ ಪ್ರಾತರನುವಾಕಮನುವಕ್ಷ್ಯತಿ ಸರ್ವಾ ದೇವತಾ ಆಶಂಸಂತ-ಮಾಮಭಿ ಪ್ರತಿಪತ್ಸ್ಯತಿ ಮಾಮಭೀತಿ ಸ ಪ್ರಜಾಪತಿರೈಕ್ಷತ ಯದ್ಯೇಕಾಂ ದೇವತಾಮಾದಿಷ್ಟಾ-ಮಭಿ ಪ್ರತಿಪತ್ಸ್ಯಾಮೀತರಾಮೇಕೇನ ದೇವತಾ ಉಪಾಪ್ತಾ ಭವಿಷ್ಯಂತೀತಿ ಸ ಏತಾಮೃಚಮ-ಪಶ್ಯದಾಪೋ ರೇವತೀರಿತ್ಯಾಪೋ ವೈ ಸರ್ವಾ ದೇವತಾ ರೇವತ್ಯಃ ಸರ್ವಾ ದೇವತಾಃ ಸ ಏತ-ಯರ್ಚಾ ಪ್ರಾತರನುವಾಕಂ ಪ್ರತ್ಯಪದ್ಯತ ತಾಃ ಸರ್ವಾ ದೇವತಾಃ ಪ್ರಾಮೋದಂತ ಮಾಮಭಿ ಪ್ರತ್ಯಪಾದಿ ಮಾಮಭೀತಿ । ಸರ್ವಾ ಹಾಸ್ಮಿನ್ ದೇವತಾಃ ಪ್ರಾತರನುವಾಕಮನುಬ್ರುವತಿ ಪ್ರಮೋದಂತೇ ಸರ್ವಾಭಿರ್ಹಾಸ್ಯ ದೇವತಾಭಿಃ ಪ್ರಾತರನುವಾಕಃ ಪ್ರತಿಪನ್ನೋ ಭವತಿ ಯ ಏವಂ ವೇದ ।

( ಐ. ಬ್ರಾ. ೭-೬ )

ಪ್ರಜಾಪತಿಯು ಹೋತೃವಾಗಿ ಪ್ರಾತರನುವಾಕವನ್ನು ಪಠಿಸಲು ಸಿದ್ಧವಾದಾಗ ದೇವತೆಗಳಲ್ಲಿ ಪ್ರತಿಯೊಬ್ಬರೂ ತಮ್ಮನ್ನುದ್ದೇಶಿಸಿ ಪಠಿಸುವನು ಎಂದು ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಆಗ ಪ್ರಜಾಪತಿಗೆ ಸಂದಿಗ್ಧಾವಸ್ಥೆಯುಂಟಾಯಿತು. ಒಂದು ದೇವತೆಯನ್ನು ಮಾತ್ರ ಉದ್ದೇಶಿಸಿದರೆ, ಇನ್ನೊಂದು ದೇವತೆಯನ್ನು ಪಡೆಯುವುದು ಹೇಗೆ ಎಂದು ಯೋಚಿಸಿ ಕೊನೆಗೆ ಸಕಲದೇವತಾತ್ಮಕವಾದ ಅಪ್ಪನ್ನುದ್ದೇಶಿಸಿ, ( ನೀರನ್ನುದ್ದೇಶಿಸಿ )

ಆಪೋ ರೇವತೀಃ ಕ್ಷಯಥಾ ಹಿ ವಸ್ವಃ ಕ್ರತುಂ ಚ ಭದ್ರಂ ಬಿಭೃಥಾಮೃತಂ ಚ ।
ರಾಯಶ್ಚ ಸ್ಥ ಸ್ವಪತ್ಯಸ್ಯ ಪತ್ನೀಃ ಸರಸ್ವತೀ ತದ್ಗೃಣತೇ ವಯೋ ಧಾತ್ ॥

(ಋ. ಸಂ. ೧೦-೩೦-೧೨)

ಎಂಬ ಮಂತ್ರವನ್ನು ಪಠಿಸಿದನು. ಇದರಿಂದ ಸಕಲ ದೇವತೆಗಳೂ ತೃಪ್ತರಾದರು. ಆದುದರಿಂದ ಈ ತತ್ತ್ವವನ್ನು ತಿಳಿದು ಪ್ರಾತರನುವಾಕವನ್ನು ಪಠಿಸುವವನು ಸಕಲ ದೇವತೆಗಳ ಅನುಗ್ರಹವನ್ನು ಪಡೆಯುತ್ತಾನೆ.

ತಿಸ್ರೋ ದೇವತಾ ಅನ್ವಾಹ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಮೇವ ಲೋಕಾನಾಮಭಿಜಿತ್ಯೈ ||

(ಐ. ಬ್ರಾ. ೭-೮)

ಅಗ್ನಿ, ಉಷಸ್ಸು ಮತ್ತು ಅಶ್ವಿನೀದೇವತೆಗಳು ಈ ಮೂವರೇ ಮೂರು ಲೋಕಗಳಿಗೂ ಅಧಿಪತಿಗಳಾಗಿರುವುದರಿಂದ ಇವರನ್ನುದ್ದೇಶಿಸಿ ಪಠಿಸಿದ ಮಂತ್ರಗಳು ಮೂರು ಲೋಕಗಳ ಅವಾಪ್ತಿಗೂ ಸಾಧನವಾಗುವುವು ಎಂದಿರುವಾಗ ಇಲ್ಲಿ ಇನ್ನೊಂದು ಸಂಶಯವು ತಲೆದೋರುತ್ತದೆ. ಆ ಸಂಶಯವನ್ನು ನಿರೀಕ್ಷಿಸಿ ಅದಕ್ಕೆ ಈ ರೀತಿ ಸಮಾಧಾನವನ್ನು ಹೇಳಿದೆ.

ತದಾಹುಃ ಕಥಮನೂಚ್ಯಃ ಪ್ರಾತರನುವಾಕ ಇತಿ | ಯಥಾಚ್ಛಂದಸಮನೂಚ್ಯಃ ಪ್ರಾತರನುವಾಕಃ ಪ್ರಜಾಪತೇರ್ವಾ ಏತಾನ್ಯಂಗಾನಿ ಯಚ್ಛಂದಾಂಸ್ಯೇಷ ಉ ಏವ ಪ್ರಜಾಪತಿರ್ಯೋ ಯಜತೇ ಯದ್ಯಜಮಾನಾಯ ಹಿತಂ | ಪಚ್ಛೋಽನೂಚ್ಯಃ ಪ್ರಾತರನುವಾಕಶ್ಚತುಷ್ಪಾದಾ ವೈ ಪಶವಃ ಪಶೂನಾಮವರುದ್ಧ್ಯೈ……………………………ಆಹುತಿಭಾಗಾ ವಾ ಅನ್ಯಾ ದೇವತಾ ಅನ್ಯಾಃ ಸ್ತೋಮಭಾಗಾಶ್ಛಂದೋಭಾಗಾಸ್ತಾ ಯಾ ಅಗ್ನಾವಾಹುತಯೋ ಹೂಯಂತೇ ತಾಭಿರಾಹುತಿಭಾಗಾಃ ಪ್ರೀಣಾತ್ಯಥ ಯತ್ಸ್ತುವಂತಿ ಚ ಶಂಸಂತಿ ಚ ತೇನ ಸ್ತೋಮಭಾಗಾಶ್ಛಂದೋಭಾಗಾಃ | ಉಭಯ್ಯೋ ಹಾಸ್ಯೈತಾ ದೇವತಾಃ ಪ್ರೀತಾ ಅಭೀಷ್ಟಾ ಭವಂತಿ ಯ ಏವಂ ವೇದ ||

ಪ್ರಾತರನುವಾಕವನ್ನು ಪಠಿಸುವ ಕ್ರಮವಾವುದು ಎಂಬ ಪ್ರಶ್ನೆಗೆ ಛಂದೋಬದ್ಧವಾಗಿಯೂ ನಿಯಮಿತಛಂದಸ್ಸುಗಳ ಕ್ರಮವನ್ನನುಸರಿಸಿಯೂ ಪಠಿಸುವುದೇ ಶಾಸ್ತ್ರೀಯವಾದ ಕ್ರಮವೆಂಬುದೇ ಉತ್ತರವು. ಏತಕ್ಕೆಂದರೆ, ಛಂದಸ್ಸುಗಳು ಪ್ರಜಾಪತಿಯ ಅಂಗಗಳು. ಪ್ರಜಾಪತಿಯೇ ಯಜ್ಞಕರ್ತನು. ಮತ್ತು ಪಶುಗಳು ಪಾದಚಾರಿಗಳಾದುದರಿಂದ ಅವನ್ನು ಪಡೆಯಬೇಕಾದರೆ ಪ್ರಾತರನುವಾಕವನ್ನು ಪಾದಕ್ರಮದಿಂದಲೇ ಪಠಿಸಬೇಕು. ಇತ್ಯಾದಿಯಾಗಿ ಪಠನದ ಕ್ರಮವನ್ನು ತಿಳಿಸಿ ಇನ್ನೊಂದು ಸಂದೇಹವನ್ನು ನಿರೀಕ್ಷಿಸಿದೆ. ಅದೇನೆಂದರೆ,

ಅಭೂದುಷಾ ರುಶತ್ಪಶುರಿತ್ಯುತ್ತಮಯಾ ಪರಿದಧಾತಿ | ತದಾಹುರ್ಯತ್ತ್ರೀನ್ಕ್ರತೂನನ್ವಾಹಾಗ್ನೇಯಮುಷಸ್ಯಮಾಶ್ವಿನಂ ಕಥಮಸ್ಯೈಕಯರ್ಚಾ ಪರಿದಧತಃ ಸರ್ವೇ ತ್ರಯಃ ಕ್ರತವಃ ಪರಿಹಿತಾ ಭವಂತೀತಿ | ಅಭೂದುಷಾ ರುಶತ್ಪಶುರಿತ್ಯುಷಸೋ ರೂಪಮಾಗ್ನಿರಧಾಯ್ಯೃತ್ವಿಯ ಇತ್ಯಗ್ನೇರಯೋಜಿ ವಾಂ ವೃಷಣ್ವಸೂ ರಥೋ ದಸ್ರಾವಮರ್ತ್ಯೋ ಮಾಧ್ವೀ ಮಮ ಶ್ರುತಂ ಹವಮಿತ್ಯಶ್ವಿನೋರೇವಮುಹಾಸ್ಯೈಕಯರ್ಚಾ ಪರಿದಧತಃ ಸರ್ವೇ ತ್ರಯಃ ಕ್ರತವಃ ಪರಿಹಿತಾ ಭವಂತಿ ಭವಂತಿ ||

(ಐ. ಬ್ರಾ. ೭-೮)

ಪ್ರಾತರನುವಾಕವನ್ನು ಅಗ್ನಿ, ಉಷಸ್ಸು ಮತ್ತು ಅಶ್ವಿನೀದೇವತೆಗಳು ಎಂಬ ಈ ಎಲ್ಲಾ ದೇವತೆಗಳನ್ನೂ ಉದ್ದೇಶಿಸಿ ಪಠಿಸಬೇಕಾಗಿರುವುದರಿಂದ ಪ್ರಕೃತದಲ್ಲಿ,

ಅಭೂದುಷಾ ರುಶತ್ಪಶುರಾಗ್ನಿರಧಾಯ್ಯೃತ್ವಿಯಃ | ( ಋ. ಸಂ. ೫-೭೫-೯ )

ಎಂಬ ಒಂದೇ ಮಂತ್ರದಿಂದ ಸಮಾಪ್ತಿಯನ್ನು ಹೇಳುವಾಗ ಎಲ್ಲಾ ದೇವತೆಗಳನ್ನೂ ಉದ್ದೇಶಿಸಿದ ಎಲ್ಲಾ ಕರ್ಮಗಳೂ

ಹೇಗೆ ಪೂರ್ಣಗೊಳ್ಳುತ್ತವೆ ಎಂಬ ಪ್ರಶ್ನೆಯು ಬಂದರೆ ಆಗ, ಈ ಮಂತ್ರದಲ್ಲೇ ಮೂರು ದೇವತೆಗಳ ಸ್ತುತಿಯೂ ಇದೆ ಎಂಬುದನ್ನು ವಿವರಿಸಿ ತೋರಿಸಿದೆ. ಇದು ಪ್ರಾತರನುವಾಕದ ಮಹಿಮೆಯು.

**ಹೋತಾ**—ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಬರಬೇಕಾದ ದೇವತೆಗಳನ್ನು ಆಯಾಯ ಮಂತ್ರಗಳಿಂದ ಆಹ್ವಾನಮಾಡುವವನು ಹೋತೃವೆನಿಸಿ ಇರುವನು. ಇಲ್ಲಿ ಅಗ್ನಿಯನ್ನೇ ಹೋತೃಪದದಿಂದ ವ್ಯಪದೇಶ ಮಾಡಿರುವುದರಿಂದ ಈ ಹೋತೃವಿನ ತಾದಾತ್ಮ್ಯವು ಅಗ್ನಿಗೆ ಉಕ್ತವಾಗಿರುವುದು. ಮತ್ತು ದೇವತೆಗಳನ್ನು ಆಹ್ವಾನ ಮಾಡುವುದೆಂಬ ಕಾರ್ಯಕಾರಿತ್ವವು ಅಗ್ನಿಗೆ ಮಾತ್ರವೇ ಇರುವಕಾರಣ **ದೇವಾನಾಂ ಆಹ್ವಾತಾ** ಎಂಬ ಅರ್ಥವನ್ನು ವಿವರಿಸಿದೆ.

ಈ ಶಬ್ದದ ರೂಪನಿಷ್ಪತ್ತಿಯನ್ನು ವಿವರಿಸುತ್ತಾ ಐತರೇಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಯಜ್ಞೋ ವೈ ದೇವೇಭ್ಯ ಉದಕ್ರಾಮತ್ತಮಿಷ್ಟಿಭಿಃ ಪ್ರೈಷಮೈಚ್ಛನ್ಯದಿಷ್ಟಿಭಿಃ ಪ್ರೈಷಮೈಚ್ಛಂಸ್ತದಿಷ್ಟೀನಾಮಿಷ್ಟಿತ್ವಂ ತಮನ್ವವಿಂದನ್ । ಅನುವಿತ್ತಯಜ್ಞೋ ರಾಧ್ನೋತಿ ಯ ಏವಂ ವೇದ । ಆಹೂತಯೋ ವೈ ನಾಮೈತಾ ಯದಾಹುತಯ ಏತಾಭಿರ್ವೈ ದೇವಾನ್ಯಜಮಾನೋ ಹ್ವಯತಿ ತದಾಹುತೀನಾಮಾಹೂತಿತ್ವಂ। ಊತಯಃ ಖಲು ವೈ ತಾ ನಾಮ ಯಾಭಿರ್ದೇವಾ ಯಜಮಾನಸ್ಯ ಹವಮಾಯಂತಿ ಯೇ ವೈ ಪಂಥಾನೋ ಯಾಃ ಸ್ರುತಯಸ್ತಾ ವಾ ಊತಯಸ್ತ ಉ ಏವೈತತ್ಸ್ವರ್ಗಯಾಣಾ ಯಜಮಾನಸ್ಯ ಭವಂತಿ ।**

( ಐ. ಬ್ರಾ. ೧-೨ )

ಒಂದು ಸಲ ಯಜ್ಞವು ದೇವತೆಗಳಿಂದ ದೂರವಾಯಿತು. ಆಗ ಅವರು ಆಹುತಿಯನ್ನರ್ಪಿಸುವುದರಿಂದ ಅದನ್ನು ಪುನಃ ಪಡೆದರು. ಆಹುತಿಯೆಂದರೆ, ದೇವತೆಯ ಹೆಸರನ್ನು ಉದ್ದೇಶಿಸಿ ಆಹ್ವಾನಮಾಡುವುದರ ಮೂಲಕ ಮಾಡತಕ್ಕ ಅರ್ಪಣೆ. ಇಂತಹ ಆಹುತಿಯನ್ನರ್ಪಿಸುವವನಿಗೆ **ಹೋತೃ**ವೆಂದು ಹೆಸರು ಎಂದು ಹೇಳಿದರೆ ಆಗ ಇನ್ನೊಂದು ಪ್ರಶ್ನೆ ಏಳುತ್ತದೆ.

**ತದಾಹುರ್ಯದನ್ಯೋ ಜುಹೋತ್ಯಥ ಯೋಽನು ಚಾಹ ಯಜತಿ ಚ ಕಸ್ಮಾತ್ತಂ ಹೋತೇತ್ಯಾಚಕ್ಷತ ಇತಿ ಯದ್ವಾವ ಸ ತತ್ರ ಯಥಾಭಾಜನಂ ದೇವತಾ ಅಮುಮಾವಹಾಮುಮಾವಹೇತ್ಯಾವಾಹಯತಿ ತದೇವ ಹೋತುರ್ಹೋತೃತ್ವಂ ಹೋತಾ ಭವತಿ। ಹೋತೇತ್ಯೇನಮಾಚಕ್ಷತೇ ಯ ಏವಂ ವೇದ ॥**

( ಐ. ಬ್ರಾ. ೧-೨ )

ಆಹುತಿಯನ್ನರ್ಪಿಸುವವನೇ ಬೇರೆ, ಆಹುತ್ಯರ್ಪಣಕ್ಕೆ ಆಹ್ವಾನವನ್ನು ಕೊಟ್ಟು ಮಂತ್ರವನ್ನುಚ್ಚರಿಸುವವನೇ ಬೇರೆಯಾದರೂ ಸಹ ಅರ್ಪಣಮಂತ್ರವನ್ನುಚ್ಚರಿಸುವವನಿಗೆ ಹೋತೃವೆಂಬ ಹೆಸರು ಹೇಗೆ ಉಚಿತವಾಗುತ್ತದೆಂಬ ಪ್ರಶ್ನೆಗೆ ಈ ಮಂತ್ರವನ್ನು ಪಠಿಸತಕ್ಕವನು ಆಯಾ ಅರ್ಪಣಾಪರಿಮಾಣಕ್ಕನುಗುಣವಾಗಿ ಆಯಾ ದೇವತೆಗಳನ್ನು ಕರೆಯುವುದರಿಂದ ಅವನಿಗೂ ಹೋತೃವೆಂಬ ಹೆಸರು ಸರಿಯಾಗಿದೆಯೆಂದು ತಿಳಿಸಿ ಅನಂತರ,

**ಮನೋ ವೈ ಯಜ್ಞಸ್ಯ ಮೈತ್ರಾವರುಣೋ ವಾಗ್ಯಜ್ಞಸ್ಯ ಹೋತಾ**

( ಐ. ಬ್ರಾ. ೬-೫ )

ಎಂಬ ವಾಕ್ಯದಿಂದ ಮಂತ್ರವನ್ನು ಪಠಿಸುವ ವಾಕ್ಕಿಗೂ ಹೋತೃವಿಗೂ ತಾದಾತ್ಮ್ಯವನ್ನು ಹೇಳಿದೆ. ಮತ್ತು,

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನಿತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈಷ ಸ್ವೋ ಲೋಕೋ ಯದುತ್ತರವೇದೀನಾಭಿಃ..............ನಿಹೋತಾ ಹೋತೃಷದನೇ ವಿದಾನ ಇತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈತದ್ಧೋತೃಷದನಂ ಯದುತ್ತರವೇದೀನಾಭಿಃ ।**

(ಐ. ಬ್ರಾ. ೫-೨)

ಇತ್ಯಾದಿ ವಾಕ್ಯಗಳು ಹೋಮನಿಷ್ಪಾದಕವಾದ ಅಗ್ನಿಯನ್ನು ದೇವಹೋತೃವೆಂದು ಸಂಬೋಧಿಸುತ್ತವೆ. ಆದುದರಿಂದ ಪ್ರಕೃತವಾದ **ಋಕ್ಕಿನಲ್ಲಿ ಹೋತಾರಂ** ಎಂಬ ಪದಕ್ಕೆ **ಹೋಮನಿಷ್ಪಾದಕಂ, ಆಹ್ವಾತಾರಂ ವಾ** ಎಂದು ಅರ್ಥ ಮಾಡಬಹುದು. ಇದು ಅಗ್ನಿಗೆ ವಿಶೇಷಣವಾಗಿದೆ.

**ಮಂದ್ರಃ—ಸ್ತೋತೄಃ ಮಾದಯಿತಾ।** ಹರ್ಷ ಎಂಬ ಅರ್ಥವನ್ನು ಬೋಧಿಸುವ ಮದಿಧಾತುವಿನಿಂದ ನಿಷ್ಪನ್ನವಾದ ಮಂದ್ರಶಬ್ದಕ್ಕೆ ಅತಿಶಯವಾದ ಹರ್ಷವನ್ನು ಉಂಟುಮಾಡುವುದು ಎಂದು ಅರ್ಥವಾಗುವ ಕಾರಣ ಅಗ್ನಿಯು ತನ್ನನ್ನು ಸ್ತುತಿಮಾಡುವವರನ್ನು ಬಹಳ ಸಂತೋಷದಿಂದಿರುವ ಹಾಗೆ ಮಾಡುವನೆಂದು ಹೇಳಿದೆ.

ಈ ಪದವು **ವಾಙ್ನಾಮ**ಗಳಲ್ಲಿ ಪಠಿತವಾಗಿದೆ. (ನಿ. ೨-೨೩). ಮಧುರವಾದುದೂ, ಹರ್ಷದಾಯಕ ವಾದುದೂ ಆದ ವಾಕ್ಕೆಂದರ್ಥ. **ಮಂದ್ರಜಿಹ್ವ** ಎಂಬ ಪದವು **ಅಗ್ನಿ**ಗೂ **ಬೃಹಸ್ಪತಿ**ಗೂ ವಿಶೇಷಣವಾಗಿ ಉಪ ಯೋಗಿಸಲ್ಪಟ್ಟಾಗ ಅವರ ಆಕರ್ಷಕವಾದ ಸ್ವರೂಪವನ್ನು ವರ್ಣಿಸುತ್ತದೆ. ಆದರೆ ಅರ್ಥವು ಮಾತ್ರ ಕೊಂಚ ವ್ಯತ್ಯಾಸ ವಾಗಿರುತ್ತದೆ. ಉದಾಹರಣೆಗೆ—

**ಅನರ್ವಾಣಂ ವೃಷಭಂ ಮಂದ್ರಜಿಹ್ವಂ ಬೃಹಸ್ಪತಿಂ ವರ್ಧಯಾ ನವ್ಯಮರ್ಕೈಃ ।**
**ಗಾಥಾನ್ಯಃ ಸುರುಚೋ ಯಸ್ಯ ದೇವಾ ಆಶೃಣ್ವಂತಿ ನವಮಾನಸ್ಯ ಮರ್ತಾಃ ॥**

(ಋ. ಸಂ. ೧-೧೯೦-೧)

ಎಂಬ ಋಕ್ಕಿನಲ್ಲಿ **ಬೃಹಸ್ಪತಿಗೆ** ವಿಶೇಷಣವಾಗಿ ಉಪಯೋಗಿಸಲ್ಪಟ್ಟಾಗ ಹರ್ಷದಾಯಕವಾದ ವಾಕ್ಕುಳ್ಳವನೆಂದರ್ಥ ವಾಗುತ್ತದೆ. ಅದೇ ವಿಶೇಷಣವು,

**ತ್ವಾಮಗ್ನೇ ಪ್ರಥಮಂ ದೇವಯಂತೋ ದೇವಂ ಮರ್ತಾ ಅಮೃತ ಮಂದ್ರಜಿಹ್ವಂ ।**

(ಋ. ಸಂ. ೪-೧೧-೫)

ಇತ್ಯಾದಿ ಋಕ್ಕುಗಳಲ್ಲಿ **ಅಗ್ನಿಗೆ** ವಿಶೇಷಣವಾಗಿ ಉಪಯೋಗಿಸಲ್ಪಟ್ಟಾಗ ರಮಣೀಯವೂ ಹರ್ಷದಾಯಕವೂ ಆದ ಜ್ವಾಲಾರೂಪವಾದ ಜಿಹ್ವೆಗಳುಳ್ಳ ಅಗ್ನಿಯೆಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಮಂದ್ರ** ಶಬ್ದಕ್ಕೆ ರಮಣೀಯ ವಾದುದೂ, ಮಾದನಶೀಲವಾದುದೂ ಆದ ಸ್ವರೂಪವುಳ್ಳ ಅಗ್ನಿಯೆಂದರ್ಥ.

**ಸತ್ಯಃ—ಸತ್ಯಕರ್ಮಾ।** ಸತ್ಯಶಬ್ದವು ಉದಕನಾಮಗಳಲ್ಲಿ(ನಿ. ೨-೨೪)ಉಕ್ತವಾಗಿರುವುದರಿಂದ ಪ್ರಪಂಚಕ್ಕೆ (ಉದಕವನ್ನು ಉಂಟುಮಾಡುವವನು) ವೃಷ್ಟಿಪ್ರದನು ಎಂದೂ **ಅಥವಾ—ಸತ್ಯಂ ಕಸ್ಮಾತ್ ಸತ್ಸು ತಾಯತೇ ಸ- ತ್ಪ್ರಭವಂ ಭವತೀತಿ ವಾ** (ನಿ. ೩-೧೩) ಸತ್ಪುರುಷರಲ್ಲಿರುವ ವಂಚನೆಯಿಲ್ಲದಿರುವ ವಾಕ್ಕೆಂದೂ, ಅಥವಾ ಸತ್ಪುರುಷರ ಸಮೀಪದಲ್ಲಿ ಹೇಳುವ ಪರಿಶುದ್ಧವಾದ ವಚನವೆಂದೂ ಅರ್ಥಮಾಡಿರುವುದರಿಂದ ಅಗ್ನಿಯು ಇತರರಿಗೆ ವಂಚನೆಯು ಆಗ ದಿರುವ ವಾಕ್ಕುಗಳನ್ನು ಹೇಳುವವನೆಂದೂ ಅಥವಾ ವಂಚನೆಯಿಲ್ಲದಿರುವ ಕರ್ಮಗಳುಳ್ಳವನೆಂದೂ ಅರ್ಥವನ್ನು ವಿವರಿಸಿದೆ.

**ಸತ್ಯಃ, ಕವಿತಮಃ, ವೇಧಾಃ** ಎಂಬ ಈ ವಿಶೇಷಣಗಳೆಲ್ಲಾ ಅಗ್ನಿಯ ಅಸಾಧಾರಣವಾದ ಗುಣಗಳನ್ನು ತಿಳಿಸತಕ್ಕವಾಗಿವೆ.

**ವೇಧಾಃ** ಎಂಬ ಪದಕ್ಕೆ **ಸರ್ವಸ್ಯ ಜಗತಃ ವಿಧಾತಾ** ಎಂದು ಸಾಯಣರು ಅರ್ಥಮಾಡಿದ್ದಾರೆ. ಸಕಲವಾದ ಜಗತ್ತನ್ನೂ ಸೃಷ್ಟಿಸುವವನು ಎಂದರ್ಥ. **ವೇಧಸ್** ಶಬ್ದವು ನಿರುಕ್ತದಲ್ಲಿ **ಮೇಧಾವಿ** ನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೫). ಮೇಧಾವಿಯಾದ ಯಜಮಾನನ ಗುಣಗಳನ್ನು ವರ್ಣಿಸುವಾಗ ಈ ಪದವು ಸಾಧಾರಣವಾಗಿ ವಿಶೇಷಣವಾಗಿರುತ್ತದೆ. ಒಂದೊಂದು ಕಡೆಗಳಲ್ಲಿ **ಉತ್ಪಾದಕ** ಎಂಬರ್ಥವಿದ್ದರೂ ಸಹ ಯಜ್ಞಫಲದ ಉತ್ಪಾದಕನು ಎಂದಾಗಬಹುದೇ ಹೊರತು ಸೃಷ್ಟಿಕರ್ತನ ಪರವಾಗಿ ಈ ಪದದ ಪ್ರಯೋಗವು ಇರುವಂತೆ ಕಾಣುವುದಿಲ್ಲ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ಸತ್ಯಃ, ಕವಿತಮಃ** ಇತ್ಯಾದಿ ವಿಶೇಷಣಗಳ ಜೊತೆಯಲ್ಲಿರುವುದರಿಂದ ಈ ಪದಕ್ಕೆ ಸನ್ನಿವೇಶಕ್ಕನುಗುಣವಾಗಿ ಸಾಯಣರು ಹೇಳಿರುವ ಅರ್ಥವು ಹೊಂದಿಕೊಳ್ಳಬಹುದು. ಅಲ್ಲದೇ,

**ಸ ಪೂರ್ವಯಾ ನಿವಿದಾ ಕವ್ಯತಾಯೋರಿಮಾಃ ಪ್ರಜಾ ಅಜನಯನ್ಮನೂನಾಂ**
**ವಿವಸ್ವತಾ ಚಕ್ಷಸಾ ದ್ಯಾಮುಪಶ್ಚ ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ॥**

(ಋ. ಸಂ. ೧-೯೬-೨)

ಇತ್ಯಾದಿ ಋಕ್ಕುಗಳಲ್ಲಿ ಪ್ರಾಚೀನವಾದುದೂ, ಗುಣಗಾನಮಾಡತಕ್ಕದ್ದೂ ಮತ್ತು ಸ್ತೋತ್ರರೂಪವುಳ್ಳದ್ದೂ ಆದ ಮನುವಿನ ಮಂತ್ರದಿಂದ ಸ್ತುತನಾದ ಅಗ್ನಿಯು ಮನುವಿಗೆ ಸಂಬಂಧಿಸಿದ ಸಕಲ ಪ್ರಜೆಗಳನ್ನೂ ಸೃಷ್ಟಿಸಿದನು ಎಂಬ ವರ್ಣನೆಯಿದೆ. ಮತ್ತು ಮನುವಿನಿಂದ "**ಅಗ್ನಿರ್ದೇವೇದ್ಧಃ**" ಇತ್ಯಾದಿ ಮಂತ್ರಗಳಿಂದ ಸ್ತುತನಾದ ಅಗ್ನಿಯು ಸಕಲ ಭೂತಗಳ ಸೃಷ್ಟಿಯನ್ನು ಮಾಡಿದ ವಿಚಾರವನ್ನೂ ಆ ಮಂತ್ರಗಳ ಮಹಿಮೆಯನ್ನೂ ಋಗ್ವೇದಸಂಹಿತೆಯ ೬ನೇ ಭಾಗದ ೭೪-೭೬ನೇ ಪುಟಗಳಲ್ಲಿ ವರ್ಣಿಸಿದೆ.

**ಸತ್ಯಃ**—ಈ ಪದಕ್ಕೆ ಸಾಯಣರು **ಸತ್ಯಕರ್ಮಾ** ಎಂದು ಇಲ್ಲಿ ಅರ್ಥಮಾಡಿದ್ದಾರೆ.

**ಸತ್ಯ** ಶಬ್ದವು ಋಕ್ಸಂಹಿತೆಯಲ್ಲೆಲ್ಲಾ ಶ್ರೇಷ್ಠವಾದುದೂ ಮತ್ತು ನೈತಿಕವಾದುದೂ ಆದ ಅರ್ಹತೆಯನ್ನೂ ಶಕ್ತಿಯನ್ನೂ ತೋರಿಸುವ ಅರ್ಥವನ್ನು ಮುಂದಿಟ್ಟುಕೊಂಡೇ ಉಪಯೋಗಿಸಲ್ಪಟ್ಟಿದೆ. ಇಂತಹ ಉತ್ತಮವಾದ ಅರ್ಹತೆಯುಳ್ಳವರು ಆಚರಿಸುವ ಕ್ರಿಯೆಗಳೂ ಸಹ ಸತ್ಯರೂಪವಾಗಿಯೇ ಇವೆ. ಈ ಅರ್ಥವನ್ನೇ ವ್ಯಕ್ತಪಡಿಸಿ ನಿರುಕ್ತಕಾರರೂ ಸಹ **ಸತ್ಯ** ಶಬ್ದದ ನಿರ್ವಚನವನ್ನು ಈರೀತಿ ಮಾಡಿರುತ್ತಾರೆ.

**ಸತ್ಯಂ ಕಸ್ಮಾತ್ ಸತ್ಸು ತಾಯತೇ ಸತ್ಪ್ರಭವಂ ಭವತೀತಿ ವಾ**

(ನಿ. ೩-೧೩).

ಸಜ್ಜನರಲ್ಲಿ ಹರಡಿರುತ್ತದೆ ಅಥವಾ ಸಜ್ಜನರಲ್ಲಿ ಉತ್ಪನ್ನವಾಗುತ್ತದೆ. ಆದುದರಿಂದ **ಸತ್ಯ**ವೆಂದು ಕರೆಯಲ್ಪಟ್ಟಿದೆಯೆಂದು ನಿರುಕ್ತಕಾರರು ವಿವರಿಸಿದ್ದಾರೆ. ಈ ನಿರ್ವಚನದ ಪ್ರಕಾರ ಸತ್ಯಾತ್ಮಕವಾದ ಫಲವೂ ಸಹ ಸಜ್ಜನರಿಗೇ ಲಭಿಸಬೇಕಾಗಿರುವುದರಿಂದ ಸದ್ಗುಣಿಗಳ ಸತ್ಯಕರ್ಮಕ್ಕೆ ತಕ್ಕ ಸದ್ಭಾತ್ಮಕವಾದ ಫಲ ಎಂಬಭಿಪ್ರಾಯವು ಈ ಋಕ್ಕಿನ ವರ್ಣನೆಯಿಂದ ಸೂಚಿತವಾಗಿದೆ. ಸತ್ಯಮಾರ್ಗಾವಲಂಬಿಯಾದ ದೈವಭಕ್ತನಿಗೂ, ಅಸತ್ಯಮಾರ್ಗಾವಲಂಬಿಯಾದ ದೈವನಿಂದಕನಿಗೂ ಇಲ್ಲಿ ವ್ಯತ್ಯಾಸವನ್ನು ತೋರಿಸಿ ದೈವನಿಂದಕನ ಶಕ್ತಿಯು ಪ್ರಾರಂಭದಲ್ಲಿ ಎಷ್ಟೇ ಅಧಿಕವಾಗಿದ್ದರೂ ಸಹ ಕೊನೆಯಲ್ಲಿ ತಾನಾಗಿಯೇ ಕ್ಷೀಣಿಸುತ್ತದೆಂದೂ ದೈವಭಕ್ತನ ಸಾಮರ್ಥ್ಯಗಳು ವೃದ್ಧಿಯನ್ನು ಹೊಂದುವುದೆಂದೂ ಆ ವೃದ್ಧಿಯು ಅವನ ಸತ್ಯಜೀವನದ ಫಲವೆಂದೂ ತಿಳಿಸಿದೆ. ಆದುದರಿಂದಲೇ ಯಜಮಾನನು,

**ತ್ವಂ ದೇಹಿ ಸಹಸ್ರಿಣಂ ರಯಿಂ ನೋಽದ್ರೋಘೇಣ ವಚಸಾ ಸತ್ಯಮಗ್ನೇ ।**

(ಋ. ಸಂ. ೩-೧೪-೬)

ಇತ್ಯಾದಿ ಸನ್ನಿವೇಶಗಳಲ್ಲಿ **ಸತ್ಯಶೀಲಂ, ಸನ್ಮಾರ್ಗಪ್ರವರ್ತಮಾನಂ ಪುತ್ರಂ ದೇಹಿ,** ಸತ್ಯಶೀಲನೂ ಸನ್ಮಾರ್ಗದಲ್ಲಿ ಪ್ರವೃತ್ತಿಯುಳ್ಳವನೂ ಆದ ಪುತ್ರನನ್ನು ಕೊಡು ಎಂದು ಸತ್ಯಾತ್ಮಕನಾದ ಅಗ್ನಿಯನ್ನು ಪ್ರಾರ್ಥಿಸಿದ್ದಾನೆ. ಹೀಗೆ, ಸತ್ಯಶಬ್ದವು ಕರ್ಮಪರವಾಗಿಯೂ, ಫಲಪರವಾಗಿಯೂ ಉಪಯೋಗಿಸಲ್ಪಟ್ಟಿರುವುದರಿಂದ ಈ ಎರಡು ಸನ್ನಿವೇಶಗಳಲ್ಲೂ ಸಹ ಈ ಭಾವವು ಯಾವ ವಿಶ್ವತತ್ತ್ವವನ್ನು ಪ್ರತಿಬಿಂಬಿಸುತ್ತದೆ ಎಂಬುದನ್ನು ವಿವರಿಸಬೇಕಾಗಿದೆ.

**ತೇ ದೇವಾ ಉತ್ಸೃಜ್ಯಾನೃತಂ । ಸತ್ಯಮನ್ವಾಲೇಭಿರೇ ।**

(ಶ. ಬ್ರಾ. ೯. ೫. ೧. ೧೩)

**ತದ್ಯತ್ತತ್ಸತ್ಯಂ । ತ್ರಯೀ ಸಾ ವಿದ್ಯಾ ತೇ ದೇವಾ ಅಬ್ರುವನ್ ಯಜ್ಞಂ ಕೃತ್ವೇದಂ ಸತ್ಯಂ ತನವಾಮಹಾ ಇತಿ**

(ಶ. ಬ್ರಾ. ೯. ೫. ೧. ೧೮)

ದೇವತೆಗಳು ಅಸತ್ಯವನ್ನು ತ್ಯಜಿಸಿ ಸತ್ಯವನ್ನೇ ದೃಢವಾಗಿ ಅವಲಂಬಿಸಿದರು. **ತ್ರಯೀ** ಎಂದು ಕರೆಸಿಕೊಳ್ಳುವ ಮೂರು ವೇದಗಳೇ ಈ ಸತ್ಯಸ್ವರೂಪಗಳಾಗಿವೆಯಾದ್ದರಿಂದ ವೇದೋಕ್ತವಾದ ಕರ್ಮಗಳನ್ನಾಚರಿಸಿ ಸತ್ಯವನ್ನು ಹರಡೋಣ ಎಂದು ದೇವತೆಗಳು ಆಶಿಸಿದರು. ಇತ್ಯಾದಿಯಾಗಿ ಸತ್ಯಕ್ಕೂ ಕರ್ಮಾಚರಣೆಗೂ ಇರತಕ್ಕ ತಾತ್ತ್ವಿಕವಾದ ಸಂಬಂಧವನ್ನು ತೋರಿಸುವುದಲ್ಲದೇ ಇಂತಹ ಶುದ್ಧವಾದ ಕರ್ಮಾಚರಣೆಗಳಿಂದ ಪೂರ್ಣವಾದದ್ದೂ ಸಕಲ ಸಂಪದ್ಯುಕ್ತವಾದದ್ದೂ ಆದ ಶ್ರೇಯಸ್ಸನ್ನೂ ಪಡೆಯಬಹುದೆಂದೂ ಆಶಿಸಿದೆ.

**ನಾಭಿರ್ಋತಸ್ಯ ಸಪ್ರಥಾ ಇತಿ । ಸತ್ಯಂ ವಾ ಋತಂ ವಾ ಋತಂ ಸತ್ಯಸ್ಯ ನಾಭಿಃ ಸಪ್ರಥಾ ಇತ್ಯೇವೈತದಾಹ ಸ ನೋ ವಿಶ್ವಾಯುಃ ಸಪ್ರಥಾ ಇತಿ ಸ ನಃ ಸರ್ವಾಯುಃ ಇತ್ಯೇವೈತದಾಹ ।**

(ಶ. ಬ್ರಾ. ೧೪. ೩. ೧. ೧೮)

ಇತ್ಯಾದಿ ವಿವರಣೆಗಳಿಂದ ವಿಶ್ವನಿಯಮಕ್ಕೂ ಸತ್ಯಕ್ಕೂ ಇರುವ ತಾದಾತ್ಮ್ಯವನ್ನು ತೋರಿಸಿ ಇಂತಹ ಸತ್ಯವನ್ನು ಅನುಸರಿಸುವುದರಿಂದಲೂ ಸತ್ಯಕರ್ಮಗಳನ್ನು ಆಚರಿಸುವುದರಿಂದಲೂ ಪೂರ್ಣಾಯುಸ್ಸು ಫಲರೂಪವಾಗಿ ದೊರಕುವುದೆಂದೂ ಸತ್ಫಲಕ್ಕೂ ಸತ್ಕರ್ಮಕ್ಕೂ ಇರುವ ಕಾರ್ಯಕಾರಣ ಸಂಬಂಧವನ್ನು ತಿಳಿಸಿದೆ.

ಸತ್ಯಾತ್ಮಕವಾದ ಕರ್ಮಾಚರಣೆಗೂ ಸಹ ವಿಶ್ವನಿಯಮವನ್ನೂ ಅದಕ್ಕೆ ಕಾರಣರಾದ ದೇವತೆಗಳ ಸ್ವರೂಪವನ್ನೂ ತಿಳಿಯಬೇಕಾದುದು ಅತ್ಯವಶ್ಯವಾದುದರಿಂದ ಆ ಜ್ಞಾನವೂ ಸಹ ಸತ್ಯದಿಂದಲೇ ಸಾಧ್ಯವೆಂಬುದನ್ನೂ ಸಹ ಅನೇಕ ಸನ್ನಿವೇಶಗಳಲ್ಲಿ ವಿಶದವಾಗಿ ತಿಳಿಸಿದೆ.

**ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।**
**ಸತ್ಯಂ ತದಿಂದ್ರೋ ದಶಭಿರ್ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಂ ।**

( ಋ. ಸಂ. ೩. ೩೯. ೫ )

**ತ ಇದ್ದೇವಾನಾಂ ಸಧಮಾದ ಆಸನ್ನೃತಾವಾನಃ ಕವಯಃ ಪೂರ್ವ್ಯಾಸಃ ।**
**ಗೂಳ್ಹಂ ಜ್ಯೋತಿಃ ಪಿತರೋ ಅನ್ವವಿಂದನ್ಸತ್ಯಮಂತ್ರಾ ಅಜನಯನ್ನುಷಾಸಂ ॥**

( ಋ. ಸಂ. ೭. ೭೬. ೪ )

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಸಹ ಸತ್ಯಾತ್ಮಕರಾದ ದೇವತೆಗಳ ಸ್ವರೂಪವನ್ನು ತಿಳಿದು ಕರ್ಮಗಳನ್ನು ಆಚರಿಸಿದುದರ ಫಲವಾಗಿ ಸಂಪತ್ತನ್ನು ಪಡೆದರೆಂಬ ಹಿಂದಿನ ಸಂದರ್ಭಗಳನ್ನು ಸೂಚಿಸುವ ವಾಕ್ಯಗಳು ಬಹಳವಾಗಿವೆ. ಮತ್ತು ಸತ್ಯದಿಂದಲೇ ನಮಗೆ ಶುಭವಾಗಲಿ ಎಂಬ ಪ್ರಾರ್ಥನೆಯೂ ಜೊತೆಯಲ್ಲಿಯೇ ಇದೆ.

**ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ ಋತ ಮಾಶುಷಾಣಾಃ ।**
**ಶುಚೀದಯನ್ದೀಧಿತಿಮುಕ್ಥಶಾಸಃ ಕ್ಷಾಮಾ ಭಿಂದಂತೋ ಅರುಣೀರಪವ್ರನ್ ॥**

( ಋ. ಸಂ. ೪. ೨. ೧೬ )

ನಮ್ಮ ಪಿತೃಗಳು ಸತ್ಯಾತ್ಮಕವಾದ ಯಜ್ಞಾಚರಣೆಯಿಂದ ಯಾವ ಒಳ್ಳೆಯ ಫಲಗಳನ್ನು ಪಡೆದರೋ ಅದೇ ರೀತಿ ಈಗಲೂ ಸಹ ನಮ್ಮ ಕರ್ಮಗಳೆಲ್ಲವೂ **ತತ್ಸತ್ಯಮಸ್ತು** ಸತ್ಯವಾದ ಫಲಗಳನ್ನು ಕೊಡುವುದಾಗಲಿ ಇತ್ಯಾದಿ ಪ್ರಾರ್ಥನೆಗಳಲ್ಲಿ **ಸತ್ಯಧರ್ಮರಾದ** ಅಗ್ನ್ಯಾದಿದೇವತೆಗಳ ಸತ್ಯಸ್ವರೂಪವೂ ವರ್ಣಿತವಾಗಿದೆ.

**ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಃ ಸತ್ಯೈಃ ।**

(ಋ. ಸಂ. ೧-೬೭-೩)

**ಕವಿಮಗ್ನಿಮುಪ ಸ್ತುಹಿ ಸತ್ಯಧರ್ಮಾಣಮಧ್ವರೇ । ದೇವಮಮೀವಚಾತನಂ ।**

(ಋ. ಸಂ. ೧-೧೨-೭)

**ದೇವೋ ನ ಯಃ ಸವಿತಾ ಸತ್ಯಮನ್ಮಾ ಕ್ರತ್ವಾ ನಿಪಾತಿ ವೃಜನಾನಿ ವಿಶ್ವಾ ।**
**ಪುರುಪ್ರಶಸ್ತೋ ಅಮತಿರ್ನ ಸತ್ಯ ಆತ್ಮೇವ ಶೇವೋ ದಿಧಿಷಾಯ್ಯೋ ಭೂತ್ ।**

(ಋ. ಸಂ. ೧-೭೩-೨)

ಮುಂತಾದ ಅನೇಕ ಕಡೆಗಳಲ್ಲಿ **ಅಗ್ನ್ಯಾದಿ** ದೇವತೆಗಳೂ **ಸತ್ಯ**ದಿಂದಲೇ ಪೃಥಿವ್ಯಾದಿ ಲೋಕಗಳನ್ನು ಧರಿಸಿದುದನ್ನೂ, ಅದರಿಂದಲೇ ಲೋಕರಕ್ಷಣೆಯನ್ನು ನಿರ್ವಹಿಸಿದುದನ್ನೂ ಮತ್ತು ಮಾನವರೂ ಸಹ ಅದೇ ಸತ್ಯಮಾರ್ಗವನ್ನನುಸರಿಸಬೇಕೆಂದೂ ತಿಳಿಸಿದೆ. ಅಗ್ನಿಯ ಅದೇ ಗುಣವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ವರ್ಣಿಸಿದೆ..

**ಕವಿತಮಃ—ಅತಿಶಯೇನ ಮೇಧಾವೀ । ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ** (ನಿ. ೧೨-೧೩) ಗಮನಾರ್ಥಕವಾದ ಕವಧಾತುವಿನಿಂದ ನಿಷ್ಪನ್ನವಾದ ಕವಿಶಬ್ದಕ್ಕೆ ಗತ್ಯರ್ಥಾನಾಂ ಜ್ಞಾನಾರ್ಥಕತ್ವಂ ಎಂಬ ನ್ಯಾಯದಿಂದ ಪ್ರಜ್ಞಾವಂತನೆಂದು ಅರ್ಥಮಾಡಿರುವುದರಿಂದ ಅಗ್ನಿಯು ಪ್ರಜ್ಞಾವಂತರೆಲ್ಲರಿಗಿಂತಲೂ ಮಿಗಿಲಾದವನೆಂದು ವರ್ಣಿಸಿದೆ.

**ಯಜ್ವಾ—ದೇವಾನಾಂ ಯಷ್ಟಾ ।** ಯಜಧಾತುವಿನಿಂದ ಯಷ್ಟಾ ಎಂಬ ಶಬ್ದರೂಪವಾಗಿದೆ. ದೇವತೆಗಳನ್ನು ಪೂಜಿಸುವುದು ಮುಂತಾದ ಅರ್ಥದಲ್ಲಿ ಯಜಧಾತು ಪ್ರಯುಕ್ತವಾಗಿದೆ. ಇಲ್ಲಿ ಅಗ್ನಿಯನ್ನು ದೇವಾನಾಂ ಯಷ್ಟಾ ಎಂದು ಹೇಳಿರುವುದರಿಂದ ಯಜ್ಞಮಾಡುವ ಯಜಮಾನನ ಹಾಗೆ ಅಗ್ನಿಯು ದೇವತೆಗಳಿಗೆ ಹವಿಸ್ಸುಗಳನ್ನು ಒಯ್ಯುವುದರಿಂದ ದೇವತೆಗಳನ್ನು ಪೂಜಿಸುವವನು ಎಂದು ಅರ್ಥವನ್ನು ವರ್ಣಿಸಿದೆ.

**ವೇಧಾಃ—ಸರ್ವಸ್ಯ ಜಗತೋ ವಿಧಾತಾ । ವೇಧ** ಶ್ಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. ಇಲ್ಲಿ ಅಗ್ನಿಯು ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡುವ ಪ್ರಜ್ಞಾವಂತನೆಂದು ವರ್ಣಿಸಿದೆ.

**ವಿದಥಾನಿ ಆಸ್ಥಾತ್—ಅಸ್ಮಾಭಿಃ ಕ್ರಿಯಮಾಣಾನ್ ಯಜ್ಞಾನ್ ಆತಿಷ್ಠತಿ ಪ್ರಾಪ್ನೋತಿ ।** ವಿದಥ ಎಂಬ ಪದವು ಪ್ರಜ್ಞಾ ಅಥವಾ ಯಜ್ಞ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ಇಲ್ಲಿ ವಿದಥ ಶಬ್ದಕ್ಕಿರುವ ಅರ್ಥಗಳಲ್ಲಿ ಒಂದನ್ನು ಮಾತ್ರ ಹೇಳಿದೆ. ಇದು ನಿರುಕ್ತಕಾರರ ನಿರ್ವಚನಗಳಲ್ಲಿ ಒಂದಾಗಿದೆ. ಈ ಪದವು **ಯಜ್ಞಃ ವೇನಃ** ಇತ್ಯಾದಿ ಯಜ್ಞನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೭) ಮತ್ತು **ವಿದಥಾನಿ ವೇದನಾನಿ** ಎಂದು ವಿದಥ ಶಬ್ದಕ್ಕೆ ಜ್ಞಾನವೆಂಬರ್ಥವನ್ನು ತೋರಿಸಲು (ನಿ. ೬-೭) ನಿರುಕ್ತಕಾರರು

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ । ವಿದಥಾನಿ ಪ್ರಚೋದಯನ್ ॥**

(ಋ. ಸಂ. ೩-೨೭-೭)

ಎಂಬ ಋಕ್ಕನ್ನು ಉದಾಹರಿಸಿ ಅಲ್ಲಿ ಜ್ಞಾನಾರ್ಥಕವಾದ **ವಿದ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. ಈ ಪದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಬೇಕೆಂದು ಕೆಲವು ಪಂಡಿತರು ಪ್ರಯತ್ನಿಸಿ ಎಲ್ಲರೂ ತಮ್ಮ ತಮ್ಮ ವೈಯಕ್ತಿಕವಾದ ಅಭಿಪ್ರಾಯವನ್ನು ಮಾತ್ರ ತಿಳಿಸಿರುವರು. ಒಬ್ಬೊಬ್ಬರೂ ಒಂದೊಂದು ವಿಧವಾಗಿ ಈ ಪದಕ್ಕೆ ನಿರ್ವಚನವನ್ನು ತೋರಿಸಿ ಬೇರೆಬೇರೆ ಅರ್ಥಮಾಡಿರುವುದರಿಂದ ಆ ಎಲ್ಲಾ ಅರ್ಥಗಳೂ ಆಯಾ ಸಂದರ್ಭಕ್ಕನುಗುಣವಾಗಿ ಹೊಂದಿಕೊಳ್ಳುವುವು ಎಂದು ಹೇಳಬಹುದು. Max Muller ಪಂಡಿತನು,

**ಅಮಾದೇಷಾಂ ಭಿಯಸಾ ಭೂಮಿರೇಜತಿ ನೌರ್ನ ಪೂರ್ಣಾ ಕ್ಷರತಿ ವ್ಯಥಿರ್ಯತೀ ।**
**ದೂರೇದೃಶೋ ಯೇ ಚಿತಯಂತ ಏಮಭಿರಂತರ್ಮಹೇ ವಿದಥೇ ಯೇತಿರೇ ನರಃ ॥**

(ಋ. ಸಂ. ೫-೫೯-೨)

ಎಂಬ ಋಕ್ಕನ್ನು ವಿವರಿಸುವಾಗ **ವಿದಥೇ** ಎಂಬ ಪದಕ್ಕೆ (ಯಜ್ಞ) ಸಭೆ (The great sacrificial Assembly) ಎಂದರ್ಥಮಾಡಿದ್ದಾನೆ. ಮತ್ತು ಇದರ ವಿವರಣೆಯನ್ನು ಕೊಡುವಾಗ ಇತರ **ಜರ್ಮನ್** ಪಂಡಿತರು ಈ ಪದಕ್ಕೆ ಹೇಳಿರುವ ಅರ್ಥವನ್ನೂ ಮತ್ತು ಇದರ ಮೂಲಧಾತುವಿನ ವಿಷಯದಲ್ಲಿ ಅವರ ಅಭಿಪ್ರಾಯಗಳನ್ನು ತಿಳಿಸಿ, ಕೊನೆಗೆ ಈರೀತಿ ಹೇಳಿದ್ದಾನೆ.

Vidatha may have been the name of a sacred act, as Veda is of sacred knowledge. But the fact remains that it is best translated by Assembly, particularly an assembly for sacrificial purposes.

(S. B·E. xxxii. p. 349-50 )

ಪವಿತ್ರವಾದ ಜ್ಞಾನವೆಂಬುದು ವೇದಶಬ್ದಾರ್ಥವಾಗುವಂತೆ, ಪವಿತ್ರವಾದ ಕ್ರಿಯೆಯೆಂಬುದು ವಿದಥ ಶಬ್ದಾರ್ಥವೆಂದು ಕೆಲವರು ಹೇಳಿರುವರು. ಆದರೆ **ಯಜ್ಞಸಭೆಯೆಂಬುದು** ಈ ಪದದ ಮುಖ್ಯಾರ್ಥವೆಂಬುದರಲ್ಲಿ ಸಂಶಯವಿಲ್ಲವೆಂದು ನಿಷ್ಕರ್ಷಿಸಿದ್ದಾರೆ.

Hermann Oldenberg ಎಂಬ ಪಂಡಿತನು Vedic Hymuns ಎಂಬ ಗ್ರಂಥದಲ್ಲಿ ಋಕ್ಸಂಹಿತೆಯಲ್ಲಿನ—

**ತ್ವಮಗ್ನೇ ವೃಜಿನವರ್ತನಿಂ ನರಂ ಸಕ್ಮನ್ಪಿಪರ್ಷಿ ವಿದಥೇ ವಿಚರ್ಷಣೇ ।**
**ಯಃ ಶೂರಸಾತಾ ಪರಿತಕ್ಮ್ಯೇ ಧನೇ ದಭ್ರೇಭಿಶ್ಚಿತ್ಸಮೃತಾ ಹಂಸಿ ಭೂಯಸಃ ॥**

(ಋ. ಸಂ. ೧-೩೧-೬)

ಎಂಬ ಋಕ್ಕಿನಲ್ಲಿರುವ **ವಿದಥೇ** ಎಂಬ ಪದಕ್ಕೆ ಅರ್ಥವನ್ನು ವಿವರಿಸುವಾಗ ತನ್ನ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾನೆ ಅವನ ವಾಕ್ಯಗಳನ್ನು ಉದಾಹರಿಸಿ ಅನಂತರ ಅವನ ಅಭಿಪ್ರಾಯಗಳನ್ನು ತಿಳಿಸಲಾಗುತ್ತದೆ. ಇವನೂ ಅನೇಕ ಚರ್ಚಾ

ಸ್ಪದವಾದ ಅಭಿಪ್ರಾಯಗಳನ್ನು ಸೂಚಿಸಿ ಕೊನೆಗೆ ತನ್ನ ಅಭಿಪ್ರಾಯವನ್ನು ಹೇಳಿದ್ದಾನೆ. ಅದು ಈರೀತಿಯಲ್ಲಿದೆ—

On the derivation and meaning of ವಿದಥ Various opinions have been pronounced in the last years which have been collected by prof. Max-Muller in his note on R. V. v. 59-2. (S. B. E. Vol. 32. p. 349.) Without trying to discuss here all different theories, I proceed to state my own opinion.

I propose to derive ವಿದಥ from ವಿ+ಧಾ, the root ಧಾ with the prefix ವಿ means to 'distribute' to "arrange" or "to ordain" Thus the original meaning of ವಿದಥ must be like the meaning of ವಿಧಾನ "distribution, disposition or ordinance" In v. 3-6. we read ವಿದಥೇಷು ಅಹ್ನಾಂ. This phrase receives its explanation by vii 66-11 and we may call attention also to vi. 51-2. within the sphere of the Vedic Poets' thoughts, the most prominent example of something most artificially ವಿಹಿತ was the sacrifice ಯಜ್ಞ and ವಿದಥ, Sacrifice and ordinance became nearly synonimous. ( iii 3-8. ) .................... Finally ವಿದಥ comes to mean 'the act of disposing of any business" or the like; this meaning appears, I believe, in some passages like the well known phrase, ಬೃಹದ್ವದೇಮ ವಿದಥೇ ಸುವೀರಾಃ may we with valient men mightily raise our voice at the determining of ordinances. Thus the word ವಿದಥ and ಸಭಾ approach each other in their meaning: a person influential in council is called both ವಿದಥ್ಯ and ಸಭೇಯ. [Sacred books of the East. Vol. 46. p. 27]. ಈ ಲೇಖನದ ಮುಖ್ಯ ಸಾರಾಂಶವೇನೆಂದರೆ,

ವಿದಥ ಶಬ್ದಾರ್ಥವು ಧಾ ಧಾತುವಿಗೆ ವಿ ಎಂಬ ಉಪಸರ್ಗವನ್ನು ಸೇರಿಸುವುದರಿಂದ ನಿಷ್ಪನ್ನವಾಗಿದೆ. ವಿಧಾ ಎಂದರೆ ಹಂಚು ಅಥವಾ ನಿಯಮಿಸು ಎಂದರ್ಥವಾಗುತ್ತದೆ. ನಿಯಮಪಾಲನೆಯೆಂದೂ ಅರ್ಥವಾಗಬಹುದು. ವಿದಥ ಮತ್ತು ವಿಧಾ ಈ ಎರಡು ಪದಗಳಿಗೆ ಒಂದೇ ಅರ್ಥವಿರುವುದೆಂಬ ಅಂಶವನ್ನು ಕೆಳಗೆ ಉದಾಹೃತವಾಗಿರುವ ಋಕ್ಕುಗಳಲ್ಲಿ ಪ್ರಯೋಗಿಸಿರುವ ಪದಗಳಿಂದ ತಿಳಿಯಬಹುದು.

ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬುಧ್ಯಮಾನಾಃ ।
ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ ಮರ್ತಾನ್ ॥
( ಋ. ಸಂ. ೫-೩-೬ )

ಎಂಬ ಋಕ್ಕಿನಲ್ಲಿರುವ ವಿದಥೇಷ್ವಹ್ನಾಂ ಎಂಬ ಪದಗಳಿಗೂ,

ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।
ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥
( ಋ. ಸಂ. ೭-೬೬-೧೧ )

ಎಂಬ ಋಕ್ಕಿನಲ್ಲಿರುವ ವಿ-ದಧುಃ ಎಂಬ ಪದಗಳಿಗೂ ಇರತಕ್ಕ ಸಮಾನಾರ್ಥದಿಂದ ಈ ವಿಷಯವು ತಿಳಿಯುತ್ತದೆ ಮತ್ತು ವಿಹಿತ ಮತ್ತು ವಿದಥ ಎಂಬ ಪದಗಳಿಗೆ ಒಂದೇ ಅರ್ಥವಾಗಿ ಶಾಸ್ತ್ರವಿಹಿತವಾದ ಯಜ್ಞವೇ ವಿದಥವೆಂಬ ಹೆಸರಿನಿಂದ

ಕರೆಯಲ್ಪಟ್ಟಿತು. ಯಜ್ಞ ಅಥವಾ ಯಜ್ಞಸಭೆ ಎಂಬ ಅರ್ಥವು ಕೊನೆಯಲ್ಲಿ ಉಳಿಯಿತು ಎಂದು ಈ ಪಂಡಿತನು ವಿವರಿಸಿದ್ದಾನೆ.

**ವಿದಥ**ವೆಂದರೆ ಸಭೆಯೆಂದಾಗುವುದೇ ಇಲ್ಲ, ವೈಯಕ್ತಿಕವಾದ **ಗೃಹ** ಎಂಬರ್ಥವೇ ಸರಿಯಾದುದು ಎಂದು Bloomfield ಎಂಬ ಪಂಡಿತನು ಸಾಧಿಸಿ Max Muller ಮತ್ತು Oldenberg ಎಂಬಿಬ್ಬರೂ ಹೇಳಿರುವ ಅರ್ಥದಲ್ಲಿರುವ ದೋಷಗಳನ್ನು ತೋರಿಸಿದ್ದಾನೆ. ಅವನ ಅಭಿಪ್ರಾಯವು ಈರೀತಿಯಲ್ಲಿದೆ.

The word **ವಿದಥ** contains the root **ವಿದ್** in its ordinary sense of 'get, acquire' Instead of this, the radical idea, underlying the word was generally felt to be 'come together, 'assemble' Again, the false start, from the notion of 'assemblage' resulted in an approximation of the word to other words for assemblage, especially to **ಸಭಾ** with which **ವಿದಥ** was almost identified. We shall see that there are decided points of contact between the words **ವಿದಥ** and **ಸಭಾ** but the contact is that of extreme opposites in a way. **ವಿದಥ** refers to home matters, **ಸಭಾ** generally to public matters.

In the interpretation of a term that figures prominently in the mystic-hieratic sphere of the Veda, it is peculiarly necessary to search for its uses outside of that sphere, if there be such uses. In x. 85-26, the bride after the wedding ceremoney proper, as the newly married couple are about to travel to their new home, is addressed with the words "May Pushan, taking you by the hand, lead thee home, may the Aswins lead you forth on their car. Go to your house in order that you may be the mistress of the house."

Now, **ವಿದಥ** here, can but have one meaning, 'housenold' or something very like it. It certainly cannot refer to anything in the nature of a public gathering similar to the **ಸಭಾ**. In the phrase **ಬೃಹದ್ವದೇಮ ವಿದಥೇ ಸುವೀರಾಃ** ( R. V. ii. 1-16 ) the word **ಸುವೀರಾಃ** refers to family relations, and not to public life.

Thus far, it may not be doubted, the word appears in the language of ordinary life. But it is found to a very much greater extent in the sacerdotal sphere; indeed, as all interpreters from Yaska on, have agreed, it often has a meaning very much close to **ಯಜ್ಞ** 'Sacrifice' itself. This is as it should be. In as much as the sacrifice is a private home affaire it is very natural **ವಿದಥ**

the house promises the establishment should figure prominently in connection with the sacrifice ಎಂದು ಹೇಳಿದೆ.

ಈ ಲೇಖನದ ಸಾರಾಂಶವೇನೆಂದರೆ; **ವಿದಥ** ಶಬ್ದಕ್ಕೆ ಕೆಲವರು ಹೇಳಿರುವಂತೆ **ಸಭಾ** ಎಂಬ ಅರ್ಥವು ಸರಿಯಲ್ಲ. ಈ ಶಬ್ದಕ್ಕೆ ವೈಯಕ್ತಿಕವಾದ ಗೃಹವೆಂದರ್ಥ. ಈ ಅರ್ಥದಲ್ಲಿಯೇ ಈ ಪದದ ಪ್ರಯೋಗವಿರುವುದನ್ನು ಅನೇಕ ಕಡೆಗಳಲ್ಲಿ ಗಮನಿಸಬಹುದು. ಉದಾಹರಣೆಗೆ—

**ಪೂಷಾ ತ್ವೇತೋ ನಯತು ಹಸ್ತಗೃಹ್ಯಾಶ್ವಿನಾ ತ್ವಾ ಪ್ರ ವಹತಾಂ ರಥೇನ ।**
**ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಮಾ ವದಾಸಿ ॥**

( ಋ. ಸಂ. ೧೦-೮೫-೨೬ )

ಎಂಬ ಋಕ್ಕಿನಲ್ಲಿ **ಪೂಷನೂ ಅಶ್ವಿನೀದೇವತೆಗಳೂ** ನಿನ್ನನ್ನು **ಪತಿಗೃಹಕ್ಕೆ** ಕ್ಷೇಮದೊಡನೆ ಕರೆದೊಯ್ಯಲಿ ಎಂಬರ್ಥವಿರುವುದು ವಿಶದವಾಗಿದೆ. ಅಲ್ಲದೆ,

**ಯೇ ಸ್ತೋತೃಭ್ಯೋ ಗೋಅಗ್ರಾಮಶ್ವಪೇಶಸಮಗ್ನೇ ರಾತಿಮುಪಸೃಜಂತಿ ಸೂರಯಃ ।**
**ಅಸ್ಮಾಞ್ಚ ತಾಂಶ್ಚ ಪ್ರ ಹಿ ನೇಷಿ ವಸ್ಯ ಆ ಬೃಹದ್ವದೇಮ ವಿದಥೇ ಸುವೀರಾಃ ॥**

( ಋ. ಸಂ. ೨-೧-೧೬ )

ಎಂಬ ಋಕ್ಕಿನಲ್ಲಿಯೂ ಸಹ **ಸುವೀರಾಃ** ಎಂದರೆ **ಶೋಭನಪುತ್ರಾದಿಸಹಿತಾಃ** ಎಂದರ್ಥಮಾಡಿರುವುದರಿಂದ ಗೃಹವೆಂದರ್ಥ. ಆದರೆ, ಗೃಹದಲ್ಲಿ ಯಜ್ಞಕಾರ್ಯವು ನಡೆಯುವುದರಿಂದ ಪ್ರಕೃತದಲ್ಲಿ ಯಜ್ಞಗೃಹವೆಂದೂ ಆಗಬಹುದು. ಯಾಸ್ಕಾದಿಗಳು ಯಜ್ಞಪರ್ಯಾಯ ಶಬ್ದವೆಂದು ಹೇಳಿರುವುದರಲ್ಲಿಯೂ ಇದೇ ಅರ್ಥವಿದೆ. ಹೀಗೆಂಬುದಾಗಿ ಪಾಶ್ಚಾತ್ಯರಲ್ಲಿ ಅನೇಕ ಪಂಡಿತರು ತಮ್ಮ ತಮ್ಮ ವೈಯಕ್ತಿಕವಾದ ಅಭಿಪ್ರಾಯಗಳನ್ನೂ ತಿಳಿಸಿದ್ದಾರೆ..

ಹೀಗೆ **ಗೃಹ, ಯಜ್ಞ,** ಸಭಾ ಎಂಬ ಬೇರೆ ಬೇರೆ ಅರ್ಥಗಳೆಲ್ಲವೂ ಹೊಂದಿಕೊಳ್ಳುವುದರಿಂದ ಇವುಗಳಲ್ಲಿ ಯಾವುದೂ ತಪ್ಪೆಂದು ಹೇಳುವುದಕ್ಕಾಗುವುದಿಲ್ಲ. ಸಾಯಣಭಾಷ್ಯದಲ್ಲಿಯೇ ಈ ಅರ್ಥಗಳೆಲ್ಲವನ್ನೂ ಹೇಳಿದೆ. ಉದಾಹರಣೆಗೆ, ೧೦-೮೫-೨೬ ಮತ್ತು ೨೭ರಲ್ಲೂ; ೭-೭೪-೩ ಇತ್ಯಾದಿ ಋಕ್ಕುಗಳಲ್ಲೂ **ಗೃಹವೆಂದೂ,** ೧೦-೧೦೦-೬; ೧೦-೧೧೦-೭ ಇತ್ಯಾದ್ಯನೇಕಋಕ್ಕುಗಳಲ್ಲಿ ಯಜ್ಞವೆಂದೂ ಅರ್ಥಮಾಡಿದ್ದಾರೆ. ಯಜ್ಞಗೃಹವೆಂದೂ ಮತ್ತು ಯಜ್ಞಸಭಾ ಎಂದೂ ಅರ್ಥವಾಗುತ್ತದೆ.

**ವಿದ್ಯುದ್ರಥಃ—ವಿದ್ಯೋತಮಾನಯಾನೋಪೇತಃ ।** ದೇವತೆಗಳಲ್ಲಿ ಇಂದ್ರನೇ ಮೊದಲಾದವರ ರಥಗಳಿಗೆ ಕಟ್ಟಿರುವ ಕುದುರೆಯೇ ಮೊದಲಾದುವುಗಳನ್ನು ಹೇಳುವಾಗ **ರೋಹಿತೋಗ್ನೇಃ** ಎಂದು ಉಕ್ತವಾಗಿದೆ. ಅಗ್ನಿಯು ಕೆಂಪುಬಣ್ಣದ ಪ್ರಕಾಶಮಾನವಾದ ವಾಹನವನ್ನೂ ಅಥವಾ ಈ ಪ್ರಕಾರದಿಂದ ಇರುವ ವಾಹನದಿಂದ ಕೂಡಿದ ರಥವನ್ನು ಹೊಂದಿರುವನು ಎಂದೂ ಅರ್ಥವನ್ನು ಹೇಳಿದೆ.

**ಶೋಚಿಷ್ಕೇಶಃ—ಶೋಚೀಂಷಿ ಜ್ವಾಲಾಃ ಕೇಶಾಃ ಯಸ್ಯ ಸಃ** ಅಗ್ನಿಯು ತನ್ನ ಜ್ವಾಲೆಗಳನ್ನು ಮನುಷ್ಯರು ಕೂದಲುಗಳನ್ನು ಧರಿಸುವಂತೆ ಧರಿಸಿರುವವನು. ಆದ್ದರಿಂದ **ಜ್ವಾಲಾಮಯ ಕೇಶೋಪೇತಃ** ಎಂದು ವರ್ಣಿಸಿದೆ.

**ಸಹಸಸ್ಪುತ್ರಃ—ಬಲಸ್ಯ ಸೂನುಃ ।** ಅಗ್ನಿಯು ಅರಣಿಗಳಲ್ಲಿ ಬಲಪ್ರಯೋಗಪೂರ್ವಕವಾಗಿ ಮಥನ ಮಾಡುವುದರಿಂದ ಉತ್ಪನ್ನನಾಗುವ ಕಾರಣ ಈ ರೀತಿಯಾಗಿ ವ್ಯಪದಿಷ್ಟನಾಗಿರುವನು.

**ಪೃಥಿವ್ಯಾಂ ವಾಜಃ ಅಶ್ರೇತ್:—ಪೃಥಿವ್ಯಾಂ ಅಂತರಿಕ್ಷೇ ವಿಸ್ತೀರ್ಣೇ ತೇಜಃ ಸ್ವಕೀಯಾಂ ಪ್ರಭಾಂ ಪ್ರಾಪಯತಿ । ಯದ್ವಾ ಪೃಥಿವ್ಯಾಂ ಭುವಿ ವರ್ತಮಾನಃ ಬಲಂ ಸೇವತೇ ।** ಅಂತರಿಕ್ಷನಾಮಗಳಲ್ಲಿ ( ನಿ. ೨-೧೦ ) ಪೃಥಿವೀಶಬ್ದವು ಉಕ್ತವಾಗಿದೆ ಮತ್ತು ಭೂವಾಚಕಗಳಲ್ಲಿ (ನಿ. ೨-೫) ಉಕ್ತವಾಗಿದೆ- ಅಗ್ನಿಯು ವಿಸ್ತಾರವಾದ ಅಂತರಿಕ್ಷದಲ್ಲಿ ತನ್ನ ಕಾಂತಿಯನ್ನು ವ್ಯಾಪಿಸಿರುವನು ಮತ್ತು ಭೂಮಿಯಲ್ಲಿಯೂ ತನ್ನ ಸಾಮರ್ಥ್ಯವನ್ನು ಆಶ್ರಯಿಸಿ ಇರುವನು ಎಂದು ಅಗ್ನಿಯ ಸ್ವರೂಪವನ್ನೂ ಮಹಿಮೆಯನ್ನೂ ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಮಂದ್ರಃ**—ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು. ಧಾತು. **ಸ್ಫಾಯಿತಂಚಿ**—(ಉ. ಸೂ. ೨-೧೮೦) ಎಂಬುದರಿಂದ ರಕ್ ಪ್ರತ್ಯಯ. **ಇದಿತೋನುಮ್‌ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಸ್ಥಾತ್**—ಷ್ಠಾ ಗತಿನಿವೃತ್ತೌ ಧಾತು, **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥ ದಲ್ಲಿ ಲುಙ್. ಪ್ರಥಮಪುರುಷಏಕವಚನದಲ್ಲಿ ತಿಪ್. ಇಕಾರಲೋಪ. **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಚ್ಲಿಗೆ ಸಿಚಾದೇಶ ಬಂದಾಗ ಅದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಜ್ವಾ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಸುಯಜೋರ್ಙ್ವನಿಪ್** (ಪಾ. ಸೂ. ೩-೨-೧೦೩) ಎಂಬುದರಿಂದ ಇದಕ್ಕೆ ಙ್ವನಿಪ್ ಪ್ರತ್ಯಯ. ವನ್ ಉಳಿಯುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

**ಕವಿತಮಃ**—ಕು ಶಬ್ದೇ ಧಾತು. ಕೌತಿ ಕೂಯತೇ ವಾ ಕವಿಃ **ಅಚ ಇಃ** (ಉ. ಸೂ. ೪-೫೭೮) ಎಂಬುದರಿಂದ ಕರ್ತ್ರರ್ಥದಲ್ಲಾಗಲೀ, ಭಾವಾರ್ಥದಲ್ಲಾಗಲೀ ಇ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಇದರಮೇಲೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಇದು ಪಿತ್ತಾದುದರಿಂದ ಪೂರ್ವದ ಪ್ರತ್ಯಯ (ಇ) ಸ್ವರ ಉಳಿಯುತ್ತದೆ.

**ವಿದ್ಯುದ್ರಥಃ—ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಶೋಚಿಷ್ಕೇಶಃ**—ಶುಚ ದೀಪ್ತೌ ಧಾತು. **ಅರ್ಚಿಶುಚಿಹುಸೃಪಿಛದಿಛರ್ದಿಭ್ಯ ಇಸಿಃ** (ಉ. ಸೂ. ೩-೨೮೫) ಎಂಬುದರಿಂದ ಇದಕ್ಕೆ ಇಸಿ ಪ್ರತ್ಯಯ. ಧಾತುವಿನ ಲಘೂಪಧೆಗೆ ಅದನ್ನು ನಿಮಿತ್ತೀಕರಿಸಿ ಗುಣ. ಪ್ರತ್ಯಯ ಸ್ವರದಿಂದ ಶೋಚಿಃ ಎಂಬುದು ಅಂತೋದಾತ್ತವಾಗುತ್ತದೆ. ಶೋಚೀಂಷಿ ಕೇಶಾಃ ಯಸ್ಯ ಸಃ ಶೋಚಿಷ್ಕೇಶಃ ಬಹು ವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಶ್ರೇತ್**—ಶ್ರಿಞ್ ಸೇವಾಯಾಂ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ತಿಪಿನ ಇಕಾರಕ್ಕೆ ಲೋಪ. **ಸಾರ್ವಧಾತುಕಾರ್ಧ**—(ಪಾ. ಸೂ. ೭-೩-೮೩) ಎಂಬುದರಿಂದ ಧಾತುವಿನ ಇಕಾರಕ್ಕೆ ಗುಣ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

ಅಯಾಮಿ ತೇ ನಮಉಕ್ತಿಂ ಜುಷಸ್ವ ಋತಾವಸ್ತುಭ್ಯಂ ಚೇತತೇ ಸಹಸ್ವಃ ।
ವಿದ್ವಾ ಆ ವಕ್ಷಿ ವಿದುಷೋ ನಿ ಷತ್ಸಿ ಮಧ್ಯ ಆ ಬರ್ಹಿರೂತಯೇ ಯಜತ್ರ ॥ ೨ ॥

ಪದಪಾಠಃ

ಅಯಾಮಿ । ತೇ । ನಮಃಽಉಕ್ತಿಂ । ಜುಷಸ್ವ । ಋತಽವಃ । ತುಭ್ಯಂ । ಚೇತತೇ । ಸಹಸ್ವಃ ।
ವಿದ್ವಾನ್ । ಆ । ವಕ್ಷಿ । ವಿದುಷಃ । ನಿ । ಸತ್ಸಿ । ಮಧ್ಯೇ । ಆ । ಬರ್ಹಿಃ । ಊತಯೇ । ಯಜತ್ರ ॥ ೨ ॥

ಸಾಯಣಭಾಷ್ಯಂ

ಋತಾವಃ । ಋತಂ ಸತ್ಯಭೂತೋ ಯಜ್ಞಃ । ತದ್ವನ್ ಹೇ ಅಗ್ನೇ ತೇ ತ್ವದ್ವಿಷಯಾಂ ನಮಉಕ್ತಿಂ ನಮಸ್ಕಾರವಾಕ್ಯಮಹಮಯಾಮಿ । ಪ್ರೇರಯಾಮಿ । ಉಚ್ಚಾರಯಾಮಿ । ಹೇ ಸಹಸ್ವಃ । ಸಹೋ ಬಲಂ । ತದ್ವನ್ನಗ್ನೇ ಚೇತತೇ ಚೇತಯಿತ್ರೇ ಕರ್ಮಣಃ ಪ್ರಜ್ಞಾಪಕಾಯ ತುಭ್ಯಂ ನಮಉಕ್ತಿಃ ಕ್ರಿಯತೇ । ತಾಂ ಜುಷಸ್ವ । ಅಸ್ಮಾಭಿಃ ಕ್ರಿಯಮಾಣಾಂ ನಮಸ್ಕಾರೋಕ್ತಿಂ ಸೇವಸ್ವ । ಕಿಂಚ ವಿದ್ವಾನಾನುಪೂರ್ವ್ಯೇಣ ದೇವಾಹ್ವಾನಾಭಿಜ್ಞೋ ವಿದುಷಃ ಕರ್ಮಾಭಿಜ್ಞಾನಾವಕ್ಷಿ । ಆವಹ । ಕಿಂಚ ಯಜತ್ರ ಯಷ್ಟವ್ಯ ಹೇ ಅಗ್ನ ಊತಯೇಽಸ್ಮಾಕಂ ರಕ್ಷಣಾಯ ಮಧ್ಯೇ ಬರ್ಹಿಃ ಸ್ತೀರ್ಣಸ್ಯ ಬರ್ಹಿಷೋ ಮಧ್ಯ ಆ ನಿಷತ್ಸಿ । ಆ ಸಮಂತಾನ್ನಿಷೀದ ॥ ಅಯಾಮಿ । ಇಣ್ ಗತೌ । ಭೌವಾದಿಕಃ । ಪಾದಾದಿತ್ವಾದನಿಘಾತಃ । ಜುಷಸ್ವ । ಜುಷೀ ಪ್ರೀತಿಸೇವನಯೋಃ । ತುದಾದಿಃ । ಲೋಟಿ ರೂಪಂ । ನಿಘಾತಃ । ಚೇತತೇ । ಚಿತೀ ಸಂಜ್ಞಾನೇ । ಶತುರ್ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ತತೋಽಂತೋದಾತ್ತತಾಭಾವಾಚ್ಛತುರನುಮ ಇತಿ ವಿಭಕ್ತೇರುದಾತ್ತತಾಭಾವಃ । ಧಾತುಸ್ವರಃ । ಸಹಸ್ವಃ । ಸಹೋಽಸ್ತ್ಯಸ್ಯೇತಿ ಮತುಪ್ । ಸಕಾರಸ್ಯ ತಸೌ ಮತ್ವರ್ಥ ಇತಿ ಭಸಂಜ್ಞಾಕತ್ವಾದ್ರುರ್ನ ಭವತಿ । ಮಾದುಪಧಾಯಾ ಇತಿ ಮತುಪೋ ವತ್ವಂ । ಉಗಿದಚಾಮಿತಿ ನುಮ್ । ಹಲ್ಙ್ಯಾದಿಲೋಪೇ ನಕಾರಸ್ಯ ಮತುವಸೋ ರುರಿತಿ ರುತ್ವಂ । ಆಮಂತ್ರಿತನಿಘಾತಃ । ವಿದುಷಃ । ವಿದ ಜ್ಞಾನ ಇತ್ಯೇತಸ್ಮಾದುತ್ತರಸ್ಯ ಶತುರ್ವಿದೇಃ ಶತುರ್ವಸುರಿತಿ ವಸ್ವಾದೇಶಃ । ಭಸಂಜ್ಞಾಯಾಂ ವಸೋಃ ಸಂಪ್ರಸಾರಣಂ ಪ್ರತ್ಯಯಸ್ವರಃ । ಸತ್ಸಿ । ಷದ್‌ಲೃ ವಿಶರಣಾದಿಷು । ಲಟಿ ಬಹುಲಂ ಛಂದಸೀತಿ ಶಪೋ ಲುಕ್ । ಶಿತ್ಪ್ರತ್ಯಯಪರತ್ವಾಭಾವಾತ್ಸೀದಾದೇಶಾಭಾವಃ । ಸದೇರಪ್ರತೇರಿತಿ ಷತ್ವಂ । ಯಜತ್ರ । ಯಜ ದೇವಪೂಜಾದಿಷು । ಅಮಿನಕ್ಷಿಯಜೀತ್ಯಾದಿನಾತ್ರನ್ಪ್ರತ್ಯಯಃ । ಆಮಂತ್ರಿತನಿಘಾತಃ ॥

ಪ್ರತಿಪದಾರ್ಥ

(ಹೇ) **ಋತಾವಃ**—ಸತ್ಯಭೂತವಾದ ಯಜ್ಞವಿಶಿಷ್ಟನಾದ ಎಲೈ ಅಗ್ನಿಯೇ । **ತೇ**—ನಿನ್ನ ವಿಷಯಕವಾದ । **ನಮಉಕ್ತಿಂ**—ನಮಸ್ಕಾರವಾಕ್ಯವನ್ನು । **ಅಯಾಮಿ**—( ನಾನು ) ಪ್ರೇರಿಸುತ್ತೇನೆ (ಉಚ್ಚರಿಸುತ್ತೇನೆ) **(ಹೇ) ಸಹಸ್ವಃ**—ಎಲೈ ಬಲಿಷ್ಠನಾದ ಅಗ್ನಿಯೇ । **ಚೇತತೇ**—ಕರ್ಮಗಳ ತಿಳುವಳಿಕೆ ಕೊಡುವ । **ತುಭ್ಯಂ**—ನಿನಗೆ । **(ನಮಉಕ್ತಿಂ ಅಯಾಮಿ**—ನಮಸ್ಕಾರ ಉಕ್ತಿಯನ್ನು ಉಚ್ಚರಿಸುತ್ತೇನೆ । **(ತಾಂ) ಜುಷಸ್ವ**—

ಆ ಉಕ್ತಿಯನ್ನು ಸೇವಿಸುವವನಾಗು । **(ಕಿಂಚ**—ಮತ್ತು) **ವಿದ್ವಾನ್**—ಕ್ರಮವಾಗಿ ದೇವತೆಗಳನ್ನು ಆಹ್ವಾನಿಸುವುದನ್ನು ತಿಳಿದಿರುವ ನೀನು । **ವಿದುಷಃ**—ಕರ್ಮಜ್ಞಾನವುಳ್ಳವರನ್ನು । **ಆ ವಕ್ಷಿ**—ಕರೆದುಕೊಂಡು ಬಾ । **(ಹೇ) ಯಜತ್ರ**—ಯಷ್ಟವ್ಯನಾದ ಎಲೈ ಅಗ್ನಿಯೇ । **ಊತಯೇ**—ನಮ್ಮ ರಕ್ಷಣೆಗೋಸ್ಕರ । **ಮಧ್ಯೇ ಬರ್ಹಿಃ**—ಆಸ್ತೀರ್ಣವಾದ ದರ್ಭೆಯ ಮೇಲೆ । **ಆ ನಿ ಸತ್ಸಿ**—ಆಸೀನನಾಗು. ।

ಭಾವಾರ್ಥ

ಸತ್ಯಭೂತಯಜ್ಞವಿಶಿಷ್ಟನೂ, ಬಲಿಷ್ಠನೂ ಆದ ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿ ಸ್ತುತಿವಾಕ್ಯಗಳನ್ನುಚ್ಚರಿಸುತ್ತೇನೆ; ಅದನ್ನು ಸ್ವೀಕರಿಸು; ಮತ್ತು ಕ್ರಮವಾಗಿ ದೇವತೆಗಳನ್ನು ಆಹ್ವಾನಿಸುವ ನೀನು ಜ್ಞಾನಿಗಳಾದವರನ್ನು ಕರೆದುಕೊಂಡು ಬಾ ; ಯಷ್ಟವ್ಯನಾದ ನೀನೂ ಆಸ್ತೀರ್ಣವಾದ ದರ್ಭಾಸನದ ಮೇಲೆ ನಮ್ಮ ರಕ್ಷಣೆಯ ಉದ್ದೇಶದಿಂದ ಆಸೀನನಾಗು.

English Translation

I utter to you the words of adoration, be pleased by them, observer of truth : endowed with strength, (they are addressed) to you who are the expounder (of sacred rites) : wise (as you are) bring (hither) the wise : object of sacrifice, sit down in the midst upon the sacred grass for our protection.

ವಿಶೇಷವಿಷಯಗಳು

**ಋತಾವಃ**—ಋತ ಶಬ್ದಕ್ಕೆ ಸತ್ಯ ಅಥವಾ ಯಜ್ಞ ಎಂಬ ಅರ್ಥದಲ್ಲಿ ಪ್ರಯೋಗವಿರುವ ಕಾರಣ ಅಗ್ನಿಯು ಯಜ್ಞವುಳ್ಳವನು ಎಂಬರ್ಥವುಳ್ಳ ಋತಾವಃ ಎಂಬ ಪದದಿಂದ ಸಂಬೋಧಿಸಿದೆ. ಮತ್ತು **ಸಹಸ್ವಃ** ಬಲವುಳ್ಳವನು ಎಂದೂ, ಚೇತತೇ ಎಂಬ ಪದಕ್ಕೆ **ಕರ್ಮಣಃ ಪ್ರಜ್ಞಾಪಕಾಯ** ಕರ್ಮಗಳನ್ನು ಬೋಧಿಸುವವನು ಎಂದೂ ಸಂಬೋಧಿಸಿ ಈ ಪ್ರಕಾರವಾದ ಮಹಿಮೆಯುಳ್ಳ ಅಗ್ನಿಯು ಯಜ್ಞ ಮಾಡುವ ಋತ್ವಿಜರೂ, ಮತ್ತು ಯಜಮಾನನೂ ಪಠಿಸುವ **ನಮಉಕ್ತಿಂ** ನಮಸ್ಕಾರದಿಂದ ಕೂಡಿರುವ ಸ್ತೋತ್ರರೂಪವಾದ ವಾಕ್ಕನ್ನು ಸೇವಿಸಲಿ ಎಂಬ ಅರ್ಥವನ್ನು **ಅಸ್ಮಾಭಿಃ ಕ್ರಿಯಮಾಣಾಂ. ನಮಸ್ಕಾರೋಕ್ತಿಂ ಸೇವಸ್ವ** ಎಂಬ ವಾಕ್ಯದಿಂದ ವರ್ಣಿಸಿದೆ.

**ವಿದ್ವಾನ್— ಆನುಪೂರ್ವ್ಯೇಣ ದೇವಾಹ್ವಾನಾಭಿಜ್ಞಃ** । ಯಜ್ಞದಲ್ಲಿ ಹವಿಸ್ಸಿನ ಸ್ವೀಕಾರಕ್ಕಾಗಿ ಆಯಾಯ ದೇವತೆಗಳನ್ನು ಆಹ್ವಾನಮಾಡುವ ಕ್ರಮವನ್ನು ಚೆನ್ನಾಗಿ ತಿಳಿದುಕೊಂಡು ಇರುವ ಅಗ್ನಿಯು ಯಜ್ಞಕರ್ಮವನ್ನು ಬಲ್ಲವರನ್ನು ಆಹ್ವಾನಿಸಿ ಯಾಗಕ್ಕೆ ಬರುವಹಾಗೆ ಮಾಡಲಿ ಎಂದು ಆಶಿಸಿದೆ.

**ಯಜತ್ರ ಊತಯೇ ಮಧ್ಯೇ ಬರ್ಹಿಃ ಆ ನಿ ಷತ್ಸಿ—ಯಷ್ಟವ್ಯ ಹೇ ಅಗ್ನೇ ಅಸ್ಮಾಕಂ ರಕ್ಷಣಾಯ ಸ್ತೀರ್ಣಸ್ಯ ಬರ್ಹಿಷೋ ಮಧ್ಯೇ ಆ ಸಮಂತಾನ್ನಿಷೀದ**—ಅಗ್ನಿಯು ಪೂಜಾರ್ಹನಾದುದರಿಂದ ಅಗ್ನಿಯನ್ನು ಯಜತ್ರ ಎಂಬ ಪದದಿಂದ ಸಂಬೋಧಿಸಿದೆ. ಈ ಅಗ್ನಿಯು ಯಜ್ಞವನ್ನು ಮಾಡುವ (ನಮ್ಮಗಳ) ಯಜಮಾನ ಮತ್ತು ಋತ್ವಿಕ್ಕುಗಳಾದ ನಮ್ಮನ್ನು ರಕ್ಷಿಸುವುದಕ್ಕಾಗಿ ಯಾಗಶಾಲೆಯ ಯಜ್ಞವೇದಿಯಲ್ಲಿ ಹರಡಿರುವ ಬರ್ಹಿಸ್ಸಿನಲ್ಲಿ ಚೆನ್ನಾಗಿ ಕುಳಿತುಕೊಳ್ಳಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ಅಯಾಮಿ**—ಇಣ್ ಗತೌ. ಭ್ವಾದಿ ಪಠಿತವಾದ ಧಾತು. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್. ಶಪ್ ನಿಮಿತ್ತವಾಗಿ ಧಾತುವಿಗೆ ಗುಣ. ಅಯಾದೇಶ. **ಅತೋ ದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ಅದಂತಾಂಗಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಮಿಪ್ ಶಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಜುಷಸ್ವ**—ಜುಷೀ ಪ್ರೀತಿಸೇವನಯೋಃ ಧಾತು. ತುದಾದಿ. ಲೋಟ್ ಮಧ್ಯಮಪುರುಷಏಕವಚನಾಂತ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಋತಾವಃ**—ಋತಂ ಅಸ್ಯ ಅಸ್ತಿ ಇತಿ ಋತಾವಾನ್. ಮತುಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ಸಂಬುದ್ಧಿಯಲ್ಲಿ **ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚೇತತೇ**—ಚಿತೀ ಸಂಜ್ಞಾನೇ ಧಾತು. ಲಟ್ಟಿಗೆ ಶತ್ರಾದೇಶ. **ಪುಗಂತಲಘೂಪಧಸ್ಯಚ** ಎಂಬುದರಿಂದ ಲಘೂಪಧಗುಣ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಇದರಿಂದ **ಶತುರನುಮೋ**—(ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಸಹಸ್ವಃ**—ಸಹಃ ಅಸ್ಯ ಅಸ್ತಿ ಇತಿ ಸಹಸ್ವಾನ್. **ತದಸ್ಯಾಸ್ತಿ**—ಎಂಬುದರಿಂದ ಮತುಪ್‌ಪ್ರತ್ಯಯ. **ತಸೌ ಮತ್ವರ್ಥೇ** (ಪಾ. ಸೂ. ೧-೪-೧೯) ಎಂಬುದರಿಂದ ಪೂರ್ವಕ್ಕೆ ಭಸಂಜ್ಞಾ ಇರುವುದರಿಂದ ಸಕಾರಕ್ಕೆ ರುತ್ವ ಬರುವುದಿಲ್ಲ. ಅಕಾರ ಉಪಧೆಯಾಗಿರುವುದರಿಂದ ಪರವಾದುದರಿಂದ **ಮಾದುಪಧಾಯಾಶ್ಚ**—(ಪಾ. ಸೂ. ೮-೨-೯) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ ಸು ಪರವಾದಾಗ ಉಗಿತ್ತಾದುದರಿಂದ **ಉಗಿದಚಾಂ ಸರ್ವನಾ**—(ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಹಲ್‌ಙ್ಯಾಭ್ಯೋ**—ಎಂಬುದರಿಂದ ಸುವಿಗೆ ಲೋಪ. ಸಂಯೋಗಾಂತಲೋಪದಿಂದ ತಕಾರಕ್ಕೆ ಲೋಪ. **ಮತುವಸೋಃ ರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ. ಪದಾಂತದಲ್ಲಿ ಅದಕ್ಕೆ ವಿಸರ್ಗ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವಿದುಷಃ**—ವಿದ ಜ್ಞಾನೇ ಧಾತು. ಲಟಿಗೆ ಶತ್ರಾದೇಶ ಬಂದಾಗ **ವಿದೇಃ ಶತುರ್ವಸುಃ** (ಪಾ- ಸೂ. ೭-೧-೩೬) ಎಂಬುದರಿಂದ ಅದಕ್ಕೆ ವಸ್ವಾದೇಶ. ಶಸ್ ಪರವಾದಾಗ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ.(ಉ) **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪಃ **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦) ಎಂಬುದರಿಂದ ಷತ್ವ. ವಿದುಷಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಸತ್ಸಿ**—ಷದ್‌ಲೃ ವಿಶರಣಗತ್ಯವಸಾದನೇಷು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ-ಛಂದಸಿ** ಎಂಬುದರಿಂದ ಶಪಿಗೆ ಲುಕ್. ಶಿತ್ತಾದ ಪ್ರತ್ಯಯ ಪರದಲ್ಲಿ ಇಲ್ಲದಿರುವುದರಿಂದ ಧಾತುವಿಗೆ ಸೀದಾದೇಶ ಬರುವುದಿಲ್ಲ. **ಖರಿಚ** ಎಂಬುದರಿಂದ ದಕಾರಕ್ಕೆ ತಕಾರಾದೇಶ. **ನಿ** ಎಂಬುದರ ಪರವಾಗಿ ಬಂದುದರಿಂದ **ಸದಿರ-**

**ಪ್ರತೇಃ** (ಪಾ. ಸೂ. ೮-೩-೬೬) ಎಂಬುದರಿಂದ ಧಾತುಸಕಾರಕ್ಕೆ ಷತ್ವ. ಅತಿಜಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಯಜತ್ರ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಅಮಿನಕ್ಷಿಯಜಿ**—(ಉ. ಸೂ. ೪-೩೮೫) ಎಂಬುದರಿಂದ ಇದಕ್ಕೆ ಅತ್ರನ್ ಪ್ರತ್ಯಯ. ಸಂಬುದ್ಧ್ಯಂತರೂಪ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

**ದ್ರವತಾಂ ತ ಉಷಸಾ ವಾಜಯಂತೀ ಅಗ್ನೇ ವಾತಸ್ಯ ಪಥ್ಯಾಭಿರಚ್ಛ ।**
**ಯತ್ಸೀಮಂಜಂತಿ ಪೂರ್ವ್ಯಂ ಹವಿರ್ಭಿರಾ ವಂಧುರೇವ ತಸ್ಥತುರ್ದುರೋಣೇ ॥ ೩ ॥**

ಪದಪಾಠಃ

ದ್ರವತಾಂ । ತೇ । ಉಷಸಾ । ವಾಜಯಂತೀ ಇತಿ । ಅಗ್ನೇ । ವಾತಸ್ಯ । ಪಥ್ಯಾಭಿಃ । ಅಚ್ಛ ।
ಯತ್ । ಸೀಂ । ಅಂಜಂತಿ । ಪೂರ್ವ್ಯಂ । ಹವಿಃಽಭಿಃ । ಆ । ವಂಧುರಾಽಇವ । ತಸ್ಥತುಃ । ದುರೋಣೇ ॥

ಸಾಯಣಭಾಷ್ಯಂ

ಹೇ ಅಗ್ನೇ ವಾಜಯಂತೀ ವಾಜಮನ್ನಂ ಕುರ್ವಾಣೇ ಉಷಸಾ ಉಷಾಸಾನಕ್ತೇ ಅಹೋರಾತ್ರೌ ತೇ ತ್ವಾಂ ದ್ರವತಾಂ । ಅಭಿಗಚ್ಛತಾಂ । ತ್ವಮಪಿ ವಾತಸ್ಯ ವಾಯೋಃ ಪಥ್ಯಾಭಿರ್ಮಾರ್ಗೈರಚ್ಛ ತಾವಹೋರಾತ್ರೌ ಶೀಘ್ರಮಭಿಗಚ್ಛ । ಯದ್ಯಸ್ಮಾತ್ಕಾರಣಾದಹೋರಾತ್ರಾಗ್ನ್ಯೋಃ ಪರಸ್ಪರಾಭಿಗಮನೇನಾನ್ಯೋನ್ಯಸಂಬಂಧಸ್ತಸ್ಮಾದಹೋರಾತ್ರಯೋಃ ಸಾಯಂಪ್ರಾತಃಕಾಲಯೋಃ ಪೂರ್ವ್ಯಂ ಪುರಾತನಂ ತ್ವಾಮೃತ್ವಿಜೋ ಹವಿರ್ಭಿರಾಜ್ಯಾದಿಭಿಃ ಸೀಂ ಸರ್ವತೋಽಂಜಂತಿ । ಸಿಂಚಂತಿ । ಕಿಂಚ ಬಂಧುರೇವ । ಯಥಾ ಕೂವರಸ್ಥಾನಂ ಪರಸ್ಪರಸಂಸಕ್ತೇಷಾದ್ವಯೋಪೇತಂ ತದ್ವತ್ಸಂಸಕ್ತೌ ತಾವಹೋರಾತ್ರೌ ದುರೋಣೇಽಸ್ಮಾಕಂ ಗೃಹೇಽಗ್ನಿಹೋತ್ರಾದಿಕರ್ಮಸಿದ್ಧ್ಯರ್ಥಮಾ ಆವೃತ್ಯ ಪುನಃಪುನರಾವರ್ತಮಾನೌ ಸಂತೌ ತಸ್ಥತುಃ । ತಿಷ್ಠತಾಂ ॥ ದ್ರವತಾಂ । ದ್ರು ಗತಾವಿತ್ಯಸ್ಯ ಲೋಟಿ ರೂಪಂ । ಪಥ್ಯಾಭಿಃ । ಪಥಿಷು ಸಾಧವ ಇತ್ಯರ್ಥೇ ತತ್ರ ಸಾಧುಃ । ಪಾ. ೪-೪-೯೮ । ಇತಿ ಯತ್ । ನಸ್ತದ್ಧಿತ ಇತಿ ಟಿಲೋಪಃ । ತಿತ್ಸ್ವರಿತ ಇತಿ ಸ್ವರಿತಃ । ತಸ್ಥತುಃ । ತಿಷ್ಠತೇರ್ಲಿಟ್ಯುಸಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**(ಹೇ) ಅಗ್ನೇ**—ಎಲೈ ಅಗ್ನಿಯೇ । **ವಾಜಯಂತೀ**—ಅನ್ನದಾತ್ರಿಗಳಾದ । **ಉಷಸಾ**—ಹಗಲು ರಾತ್ರಿಗಳು । **ತೇ**—ನಿನ್ನನ್ನುದ್ದೇಶಿಸಿ । **ದ್ರವತಾಂ**—ಓಡಿಬರಲಿ ; (ನೀನೂ ಕೂಡ) । **ವಾತಸ್ಯ**—ವಾಯುವಿನ । **ಪಥ್ಯಾಭಿಃ**—ಮಾರ್ಗಗಳಿಂದ । **ಅಚ್ಛ**— (ಆ ಅಹೋರಾತ್ರಗಳಿಗೆ) ಅಭಿಮುಖನಾಗಿ (ಹೋಗು) ; । **ಯತ್**—

(ಮೇಲೆ ಹೇಳಿದಂತೆ) ಯಾವ ಕಾರಣದಿಂದ (ಅಹೋರಾತ್ರಗಳು ಮತ್ತು ಅಗ್ನಿಗೆ ಪರಸ್ಪರಾಭಿಗಮನರೂಪಸಂಬಂಧವೋ)। **ತತ್**—ಆದುದರಿಂದ ಅಹೋರಾತ್ರಗಳೆರಡರಲ್ಲಿಯೂ ಅಂದರೆ ಸಾಯಂಪ್ರಾತಃಕಾಲಗಳಲ್ಲಿ) । **ಪೂರ್ವ್ಯಂ**—ಪುರಾತನನಾದ ನಿನ್ನನ್ನು (ಋತ್ವಿಜರು) । **ಹವಿರ್ಭಿಃ**—ಆಜ್ಯಾದಿಹವಿಸ್ಸುಗಳಿಂದ । **ಸೀಂ**—ಸರ್ವದಾ । **ಅಂಜಂತಿ**—ಸೇಚನಮಾಡುತ್ತಾರೆ (ಹೋಮ ಮಾಡುತ್ತಾರೆ) ; । **ವಂಧುರಾಇವ**—ಗಾಡಿಯ ಮೂಕಿಯಂತೆ (ಪರಸ್ಪರ ಸಂಸಕ್ತವಾದ ಅಹೋರಾತ್ರಗಳು) । **ದುರೋಣೇ**—ನಮ್ಮ ಮನೆಯಲ್ಲಿ । **ಆ**—ಪುನಃಪುನಃ ಆವರ್ತಿಸುತ್ತಾ । **ತಸ್ಥತುಃ**—(ಶಾಶ್ವತವಾಗಿ) ನಿಲ್ಲಲಿ. ।

ಭಾವಾರ್ಥ

ಎಲೈ ಅಗ್ನಿಯೇ, ಅನ್ನದಾತ್ರಿಗಳಾದ ಹಗಲುರಾತ್ರಿಗಳು ನಿನ್ನನ್ನು ಉದ್ದೇಶಿಸಿ ಧಾವಿಸಿ ಬರುತ್ತವೆ ಮತ್ತು ನೀನೂ ಅವುಗಳನ್ನುದ್ದೇಶಿಸಿ, ವಾಯುಮಾರ್ಗದಿಂದ ಬರುತ್ತೀಯೇ; ಆದುದರಿಂದಲೇ, ಋತ್ವಿಜರು, ಪುರಾತನನಾದ ನಿನಗೆ, ಸಾಯಂಪ್ರಾತಃಕಾಲಗಳೆರಡರಲ್ಲಿಯೂ ಆಜ್ಯಾದಿಹವಿಸ್ಸುಗಳನ್ನರ್ಪಿಸುತ್ತಾರೆ. ಆ ಪರಸ್ಪರಸಂಸಕ್ತವಾದ ಅಹೋರಾತ್ರಗಳೆರಡೂ ನಮ್ಮ ಗೃಹಗಳಲ್ಲಿ ಸರ್ವದಾ ಒಂದಾದ ಮೇಲೊಂದು ಬರುತ್ತಲೇ ಇರಲಿ.

English Translation

May the food-bestowing day and night hasten to you whilst you, AGNI, meet them on the paths of the wind: since (the priests) ever worship you preceding (them) with oblations, whilst they (united) like the pole (and the yoke of a waggon), abide successively in our dwelling.

ವಿಶೇಷವಿಷಯಗಳು

**ವಾಜಯಂತೀ ಉಷಸಾ ತೇ ಪ್ರವತಾಂ**—**ವಾಜಮನ್ನಂಕುರ್ವಾಣೇ ಉಷಾಸಾನಕ್ತೇ ಅಹೋರಾತ್ರೌ ತ್ವಾಂ ಅಭಿಗಚ್ಛತಾಂ** । ನಿರುಕ್ತಕಾರರು–**ಉಷಾಸಾನಕ್ತಾ—ಉಷಾಸಾನಕ್ತೋಷಾಶ್ಚ ನಕ್ತಾ ಚೋಷಾ ನಕ್ತೇತಿ ರಾತ್ರಿನಾಮ ಅನಕ್ತಿಭೂತಾನ್ಯವಶ್ಯಾಯೇನಾಪಿ ವಾ ನಕ್ತಾ ಅವ್ಯಕ್ತವರ್ಣಾ** । (ನಿ. ೮–೧೧) ಎಂದು ಹೇಳಿದ್ದಾರೆ. ದುರ್ಗಾಚಾರ್ಯರು ಉಷಾಸಾನಕ್ತಾ ಎಂಬ ಪದಕ್ಕೆ ಉಷಾಶ್ಚ ನಕ್ತಾ ಚ ಎಂದು ವಿಗ್ರಹವಾಕ್ಯವನ್ನು ಪ್ರದರ್ಶನಮಾಡಿ, **ಉಚ್ಛತೀತಿ ಉಷಾ** ( ಉಚ್ಛೀ ವಿವಾಸೇ ) ಬಹಳ ಸುಖದಿಂದ ವಾಸವಾಗುವಂತೆ ಇರಿಸುವುದು ಎಂಬ ಅರ್ಥವುಳ್ಳ ಉಚ್ಛೀ ಎಂಬ ಧಾತುವಿನಿಂದ ನಿಷ್ಪನ್ನವಾದ (ಉಷಾಸಾ) **ಉಷಸ್** ಎಂಬ ಪದವು ಅಹಸ್ಸು ಎಂಬ ಅರ್ಥವನ್ನು ಬೋಧಿಸುವುದು. ಭೂತಾನಿ—ಪ್ರಾಣಿಗಳನ್ನು **ಅನಕ್ತಿ ಅವಶ್ಯಾಯೇನ** ಹಿಮದಿಂದ ತೋಯಿಸುವುದು ಎಂದು ಅರ್ಥವನ್ನು ವಿವರಿಸಿ **ಅನಕ್ತಾ** ಎಂಬ ಪದದಲ್ಲಿರುವ ಅಕಾರವು ಲೋಪವಾಗಿ ನಕ್ತಾ ಎಂಬ ಶಬ್ದದಿಂದ ರಾತ್ರಿಯು ಬೋಧಿತವಾಗಿದೆ ಎಂದೂ, ಅಥವಾ **ನಕ್ತಾ ಅವ್ಯಕ್ತವರ್ಣಾ**—ಅಹಸ್ಸು ಪದಾರ್ಥಗಳನ್ನು ಚೆನ್ನಾಗಿ ಕಾಣುವಂತೆ ಮಾಡುತ್ತದೆ. ರಾತ್ರಿಯು ಅವುಗಳನ್ನು ಸ್ಪಷ್ಟವಾಗಿರುವಂತೆ ತೋರಿಸದಿರುವ ಕಾರಣ **ನ ಅಕ್ತಾ ಅಥವಾ, ನ ವ್ಯಕ್ತಾ ಅನಕ್ತಾ** ಎಂದು **ನಕ್ತಾ** ಶಬ್ದರೂಪದ ನಿಷ್ಪತ್ತಿಯನ್ನೂ ಅರ್ಥವಿವರಣೆಯನ್ನೂ ತಿಳಿಸಿದ್ದಾರೆ. ಮತ್ತು ಯಾಸ್ಕರು

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।**
**ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥**
(೧೦–೧೧೦–೬)

ಈ ಋಕ್ಕನ್ನು ಉದಹರಿಸಿರುವರು. ಈ ಋಕ್ಕಿಗೆ ದುರ್ಗಾಚಾರ್ಯರು ಅಹೋರಾತ್ರಪರವಾದ ಒಂದು ಅರ್ಥವನ್ನೂ ಮತಾಂತರದಿಂದ ಅಗ್ನಿಯ ಪರವಾದ ಎರಡನೆಯ ಅರ್ಥವನ್ನೂ ವಿವರಿಸಿದ್ದಾರೆ. ಇಲ್ಲಿ ಸಾಯಣರು ವಾಜಶ್ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿರುವುದರಿಂದ ಅನ್ನವನ್ನು ಪ್ರಾಣಿಗಳಿಗೆ ಉಂಟುಮಾಡುವ ಅಹೋರಾತ್ರಗಳು ಅಗ್ನಿಯನ್ನು ಪೂಜಿಸುತ್ತಿರಲಿ ಎಂದು ಅರ್ಥವನ್ನು ವರ್ಣಿಸಿದ್ದಾರೆ. ಅಹಸ್ಸಿಗೆ ಪೂರ್ವಭಾವಿಯಾದ ಉಷಃಕಾಲ ದಲ್ಲಿಯೂ, ರಾತ್ರಿಗೆ ಪೂರ್ವಭಾವಿಯಾದ ಸಂಧ್ಯಾಕಾಲದಲ್ಲಿಯೂ ಅಗ್ನಿಯನ್ನು ಪೂಜಿಸುವ ವಿಧಿಯು ನಿತ್ಯವಾಗಿರುತ್ತದೆ ಯಾಗಿ ಈ ಅರ್ಥವು ಇಲ್ಲಿ ಉಕ್ತವಾಗಿದೆ.

ಮತ್ತು **ವಾಜಯಂತೀ, ಹವಿರ್ಭಿಃ ಸೀಂ ಅಂಜಂತಿ** ಇತ್ಯಾದಿ ವರ್ಣನೆಗಳಿಂದ ಯಜ್ಞಕ್ಕೂ ಅವರಿಗೂ ಇರತಕ್ಕ ನಿತ್ಯಸಂಬಂಧವು ವರ್ಣಿತವಾಗಿದೆ. ಉಷಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ ಪ್ರಜ್ವಲಿತನಾಗತಕ್ಕ ಅಗ್ನಿಯೊಡನೆ ಇವರಿಗೆ ಅತ್ಯಂತ ನಿಕಟವಾದ ಸಂಬಂಧವಿದೆ. ಆದುದರಿಂದಲೇ ಅವರು ತಮ್ಮ ನಡುವೆ ಅಗ್ನಿಯನ್ನು ಧರಿಸಿ ಹಿಡಿದಿರುವುದಾಗಿ ಆಲಂಕಾರಿಕವಾದ ವರ್ಣನೆಯು.

**ನಕ್ತೋಷಾಸಾ ವರ್ಣಮಾಮೇಮ್ಯಾನೇ ಧಾಪಯೇತೇ ಶಿಶುಮೇಕಂ ಸಮೀಚೀ ।**
**ದ್ಯಾವಾಕ್ಷಾಮಾ ರುಕ್ಮೋ ಅಂತರ್ವಿ ಭಾತಿ ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ॥**

(ಋ. ಸಂ. ೧-೯೬-೫)

ಇತ್ಯಾದಿ ಋಕ್ಕುಗಳಲ್ಲಿ **ಶಿಶು** ರೂಪನಾದ ಅಗ್ನಿಗೆ ಹವಿಃಪಾನಮಾಡಲು ಸಹಾಯ ಮಾಡುತ್ತಾರೆಂದು ತಿಳಿಯುತ್ತದೆ. ಈ ಸಂಬಂಧವಿರುವುದರಿಂದಲೇ ಅವರು ಯಜ್ಞಕರ್ತರ ಸಮೀಪವರ್ತಿನಿಯರೆಂದು ಹೇಳಲ್ಪಟ್ಟಿದ್ದಾರೆ. ಸಾಧಾರಣವಾಗಿ ಈ ಅಂಶದ ವರ್ಣನೆಯು ಪುನರಾವರ್ತವಾಗಿದೆ. ಉದಾಹರಣೆಗೆ—

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।**
**ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥**

(ಋ. ಸಂ. ೧೦-೧೧೦-೬)

ಎಂಬ ಋಕ್ಕಿನಲ್ಲಿಯೂ ಇದೇ ವಿಷಯವು ಕೊಂಚ ಬೇರೆ ರೀತಿಯಲ್ಲಿ ಹೇಳಲ್ಪಟ್ಟಿದೆ.

**ಉಷಾಸಾನಕ್ತಾ** ದೇವತೆಗಳಿಗೆ ಯಜ್ಞಕಾರ್ಯಗಳಲ್ಲಿ ಗೌಣವಾದ ಸ್ಥಾನವಿಲ್ಲದೇ ಅತಿಮುಖ್ಯವಾದ ಸ್ಥಾನವು ಲಭಿಸುವುದೆಂದು ಈ ಅಂಶದಿಂದ ತಿಳಿಯುತ್ತದೆ.

**ಹೋತಾಯಕ್ಷದುಷಾಸಾನಕ್ತಾ ಬೃಹತೀ ಸುಪೇಶಸಾ ನೄಗ್ಃ ಪತಿಭ್ಯೋ ಯೋನಿಂ ಕೃಣ್ವಾನೇ।**
**ಸಗ್ಂಸ್ಮಯಮಾನೇ ಇಂದ್ರೇಣ ದೇವೈರೇದಂ ಬರ್ಹಿಃ ಸೀದತಾಂ ವೀತಾಮಾಜ್ಯಸ್ಯ ಹೋತರ್ಯಜ ॥**

(ತೈ. ಬ್ರಾ. ೩-೬-೨-೨)

ಎಂಬ ಮಂತ್ರದಲ್ಲಿ ಈ ಪ್ರಧಾನವಾದ ಸ್ಥಾನಲಾಭವು ಸೂಚಿತವಾಗಿರುವುದಲ್ಲದೇ ಇವರು ಅಗ್ನಿಯೊಡನೆಯೂ ಮತ್ತು ಇಂದ್ರಾದಿ ಇತರ ದೇವತೆಗಳೊಡನೆಯೂ ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಿದೆ. ಐತರೇಯ ಬ್ರಾಹ್ಮಣದಲ್ಲಿ ಇವರನ್ನು **ಅಹೋರಾತ್ರೇ** ಎಂದು ಸಂಬೋಧಿಸಿದೆ. ಬೃಹದ್ದೇವತೆಯಲ್ಲಿ ಈ ದೇವತೆಗಳ ಸ್ವರೂಪವನ್ನು ಈ ರೀತಿ ವರ್ಣಿಸಿದೆ—

**ನಕ್ತೋಷಾಸೌ ಚ ಯೇ ದೇವ್ಯಾವಾಗ್ನೇಯ್ಯಾವೇವ ತೇ ಸ್ಮೃತೇ ।**
**ಶ್ಯಾವ್ಯಾಗ್ನೇಯೀ ಹಿ ಕಾಲಸ್ಯ ತಸ್ಯೈವೋಷಾಃ ತಲೇವ ತು ॥**

(ಬೃ. ದೇ. ೩-೮)

**ಉಷಸ್ಸು** ಮತ್ತು **ನಕ್ತ** ಈ ಎರಡು ದೇವತೆಗಳೂ ಸಹ **ಅಗ್ನಿ** ಸಂಬಂಧಿಗಳೆಂದು ಪ್ರಸಿದ್ಧವಾಗಿವೆ. ಇವುಗಳಲ್ಲಿ ಶ್ಯಾವಿಯು (ರಾತ್ರಿದೇವತೆ) ಅಗ್ನಿಯೊಡನೆ ನಿಕಟವಾದ ಸಂಬಂಧವನ್ನು ಹೊಂದಿರುವುದೂ ಮತ್ತು **ಉಷಃ ಕಸ್ಮಾ-ದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ** (ನಿ. ೨-೧೮) ಎಂಬ ನಿರುಕ್ತವಾಕ್ಯದಿಂದ **ಉಷಸ್ಸು** ಆ ರಾತ್ರಿಯ ಅಪರಕಾಲವೆಂದೂ ತಿಳಿದ ವಿಷಯವಾಗಿದೆ.

**ತಮ ಉಚ್ಛತ್ಯುಷಾ ನಕ್ತಾನಕ್ತೀಮಾಂ ಹಿಮಬಿಂದುಭಿಃ ।**
**ಅಪಿ ವಾವ್ಯಕ್ತವರ್ಣೇತಿ ನಞ್ ಪೂರ್ವಾಂಜೇರಿದಂ ಭವೇತ್ ॥**

(ಬೃ. ದೇ. ೩-೯)

ಈ ಇಬ್ಬರಲ್ಲಿ ಉಷಸ್ಸು ಕತ್ತಲನ್ನು ಓಡಿಸುತ್ತಾಳೆ. ರಾತ್ರಿಯು ಹಿಮಬಿಂದುಗಳಿಂದ ಎಲ್ಲವನ್ನೂ ನೆನೆಯುವಂತೆಯೂ ವ್ಯಾಪ್ತವಾಗುವಂತೆಯೂ ಮಾಡುತ್ತಾಳೆ. ಅಥವಾ ನಿರ್ದಿಷ್ಟವಾದ ವರ್ಣವಿಲ್ಲದಿರುವುದರಿಂದ **ನಞ್** ಪದದೊಡನೆ **ಆಂಜನ್** ಧಾತುವು ಸೇರಿ ಅವ್ಯಕ್ತವರ್ಣರೆಂಬ ಅರ್ಥವನ್ನು ಕೊಡುತ್ತದೆ.

**ಸಾ ಹಿ ದೋಷಾ ಭವತ್ಯಾದೌ ನಿಶೀಥೇ ಸಾ ತಮಸ್ವತೀ ।**
**ನಾಮ್ನಾ ಭವತ್ಯುಷಾಶ್ಚೈವ ಸೈಷಾ ಪ್ರಾಗುದಯಾದ್ರವೇಃ ॥**

(ಬೃ. ದೇ. ೩-೧೦)

ಪ್ರಾರಂಭದಲ್ಲಿ ಈ ದೇವತೆಗೆ (ಪ್ರ) ದೋಷಾ ಎಂದೂ ಮಧ್ಯರಾತ್ರಿಯಲ್ಲಿ ತಮಸ್ವತಿಯೆಂದೂ, ಸೂರ್ಯೋದಯಕ್ಕೆ ಮೊದಲು ಉಷಸ್ಸೆಂದೂ ಹೆಸರು. **ದೋಷಾ, ತಮಸ್ವತೀ; ಶ್ಯಾವೀ, ನಕ್ತಾ** ಇವೆಲ್ಲ ರಾತ್ರಿನಾಮಗಳೆಂದು ನಿಘಂಟು ವಿನಲ್ಲಿ ಪ್ರಸಿದ್ಧವಾಗಿದೆ.

**ಸಾಧ್ವಪಾಂಸಿ ಸನತಾ ನ ಉಕ್ಷಿತೇ ಉಷಾಸಾನಕ್ತಾ ವಯ್ಯೇವ ರಣ್ವಿತೇ ।**
**ತಂತುಂ ತತಂ ಸಂವಯಂತೀ ಸಮೀಚೀ ಯಜ್ಞಸ್ಯ ಪೇಶಃ ಸುದುಘೇ ಪಯಸ್ವತೀ ॥**

(ಋ. ಸಂ. ೨-೩-೬)

ಇತ್ಯಾದಿ ಋಕ್ಕುಗಳಲ್ಲಿ ತಂತು ತತಂ **ಸಂವಯಂತೀ** ಇತ್ಯಾದಿ ವರ್ಣನೆಗಳಿಂದ ಯಜ್ಞದ ವಿಸ್ತರಣೆಗೆ ಉಷಾಸಾನಕ್ತರ ಸಹಾಯವು ತೋರುವುದು.

**ವಾಜಯಂತೀಃ**—ಈ ಪದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದು ಸುಲಭವಲ್ಲ. **ವಾಜಯತೀತ್ಯ-ರ್ಚತಿಕರ್ಮಾ** (ನಿ. ೩-೧೯) ಎಂದು ನಿರುಕ್ತಕಾರರು ಹೇಳಿರುವಂತೆ **ವಾಜಯತಿ** ಎಂಬ ಪದವು ಅರ್ಚತಿಕರ್ಮ ನಾಮಗಳಲ್ಲಿ ಸೇರಿರುವುದರಿಂದ ಉಷಾಸಾನಕ್ತರು ಈ ಯಜ್ಞ ಕರ್ಮದಲ್ಲಿ ಅಗ್ನಿಯನ್ನು ಪೂಜಿಸುವವರಾಗಿದ್ದಾರೆ ಎಂದೂ ಹೇಳಬಹುದು. ಈ ಪದವು ಅನ್ನನಾಮಗಳಲ್ಲಿ ಮಾತ್ರವಲ್ಲದೇ ಸಂಗ್ರಾಮ ನಾಮಗಳಲ್ಲಿಯೂ ಪಠಿತವಾಗಿದೆ. ಈ ಪದಕ್ಕೆ ಬಲವೆಂದೂ ಅರ್ಥವಾಗುತ್ತದೆ. ಈ ಪದದ ಪ್ರಯೋಗಗಳನ್ನು ಪರಿಶೀಲಿಸಿದರೆ,

**ಇಂದ್ರ ಋಭುಭಿರ್ವಾಜಿಭಿರ್ವಾಜಯನ್ನಿಹ ಸ್ತೋಮಂ ಜರಿತುರುಪ ಯಾಹಿ ಯಜ್ಞಿಯಂ ।**

(ಋ. ಸಂ. ೩-೬೦-೭)

ಇತ್ಯಾದಿ ಋಕ್ಕುಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವಂತೆಯೇ **ಅನ್ನಂ ಕುರ್ವಾಣಃ** ಎಂದೂ,

**ಏವಾ ತೆ ಇಂದ್ರೋಚಥಮಹೇಮ ಶ್ರವಸ್ಯಾ ನ ತ್ಮನಾ ವಾಜಯಂತಃ ।**

(ಋ. ಸಂ. ೨-೧೯-೭)

ಇತ್ಯಾದಿ ಋಕ್ಕುಗಳಲ್ಲಿ **ಬಲಿನಂ ಕುರ್ವತಃ** ಎಂದೂ,

**ಮಾಂ ನರಃ ಸ್ವಶ್ವಾ ವಾಜಯಂತೋ ಮಾಂ ವೃತಾಃ ಸಮರಣೇ ಹವಂತೇ ।**

(ಋ. ಸಂ. ೪-೪೨-೫)

ಇವೇ ಮುಂತಾದ ಕಡೆಗಳಲ್ಲಿ **ಸಂಗ್ರಾಮಮಿಚ್ಛಂತಃ** ಎಂದೂ,

**ಸ ಮಾತೆರಾ ವಿಚರನ್ವಾಜಯನ್ನಪಃ ಪ್ರ ಮೇಧಿರಃ ಸ್ವಧಯಾ ಪಿನ್ವತೇ ಪದಂ ।**

(ಋ. ಸಂ. ೯-೬೮-೪)

ಇತ್ಯಾದಿ ಸ್ಥಳಗಳಲ್ಲಿ **ಪ್ರೇರಯನ್** ಎಂದೂ ಹೀಗೆಯೇ ಅನೇಕಾರ್ಥಗಳಲ್ಲಿ ಉಪಯೋಗಿಸಲ್ಪಟ್ಟು ಪ್ರಕೃತವಾದ ಋಕ್ಕಿನಲ್ಲಿ ಭಾಷ್ಯಕಾರರು ಹೇಳಿರುವಂತೆ **ಅನ್ನಂ ಕುರ್ವಾಣೇ** ಎಂಬರ್ಥವು ಉಚಿತವಾಗಿರುವುದು. **ಉಷಾಸಾ-ನಕ್ತರಿಗೂ ಅಗ್ನಿಗೂ** ಇರತಕ್ಕ ಸಂಬಂಧವನ್ನೂ ಯಜ್ಞಕಾರ್ಯದಲ್ಲಿ ಅವರ ನೆರವನ್ನೂ ಹಿಂದೆ ವಿವರಿಸಿದೆ.

**ವಾತಸ್ಯ ಪಥ್ಯಾಭಿಃ ಅಚ್ಛ—ತ್ವಮಪಿ ವಾಯೋಃ ಮಾರ್ಗೈಃ ತಾವಹೋರಾತ್ರೌ ಶೀಘ್ರಮಭಿಗಚ್ಛ ।** ಅಗ್ನಿಯು (ವಾಯುವಿನ ಮಾರ್ಗದಿಂದ) ವಾಯುವು ಸಂಚರಿಸುವ ಮಾರ್ಗದಿಂದ ಅಹೋರಾತ್ರಗಳನ್ನು ಅನುಸರಿಸಲಿ ಎಂದು ಆಶಿಸಿದೆ.

**ಪೂರ್ವ್ಯಂ ಹವಿರ್ಭಿಃ ಸೀಂ ಅಂಜಂತಿ—ಪುರಾತನಂ ತ್ವಾಂ ಋತ್ವಿಜಃ ಆಜ್ಯಾದಿಭಿಃ ಸರ್ವತಃ ಸಿಂಚಂತಿ ।** ಪೂರ್ವ್ಯಂ ಎಂಬ ಪದವು ಪುರಾಣನಾಮಗಳಲ್ಲಿ (ನಿ. ೩-೨೦) ಉಕ್ತವಾಗಿದೆ. **ಸೀಂ** ಎಂಬ ನಿಪಾತವೂ **ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ "ಪ್ರಸೀಮಾದಿತ್ಯೋ ಅಸೃಜತ್" ಪ್ರಾಸೃಜತ್ ಸರ್ವತ ಇತಿ ವಾ ವ್ಯವೃಣೋತ್ ಸರ್ವತ ಆದಿತ್ಯಃ** (ನಿ. ೧-೭) ಪರಿಗ್ರಹ ಎಂಬ ಅರ್ಥದಲ್ಲಿಯೂ, ಪದಪೂರಣ ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿರುವುದು. ಆದರೆ **ಪ್ರಸೀಂ ಆದಿತ್ಯಃ** ಎಂಬಲ್ಲಿ **ಸೀಂ** ಎಂಬ ಪದಕ್ಕೆ **ಸರ್ವತಃ** ಎಂದು ಅರ್ಥವನ್ನು ವಿವರಿಸಿದೆ. ಪುರಾತನವಾಗಿರುವ ಅಗ್ನಿಯನ್ನು ಋತ್ವಿಜರು ಹವಿಸ್ಸುಗಳಿಂದಲೂ ಆಜ್ಯಗಳಿಂದಲೂ ಸರ್ವಪ್ರಕಾರದಿಂದ ತೃಪ್ತಿಗೊಳಿಸುತ್ತಾರೆ ಎಂದು ಅರ್ಥವನ್ನು ವರ್ಣಿಸಿ, **ಅಹೋರಾತ್ರಾಗ್ನ್ಯೋಃ ಪರಸ್ಪರಾಭಿಗಮನೇನಾನ್ಯೋನ್ಯಸಂಬಂಧಃ** ಅಹಸ್ಸನ್ನು ರಾತ್ರಿಯೂ, ರಾತ್ರಿಯನ್ನು ಅಹಸ್ಸೂ ಸಂಬಂಧಿಸಿ ಕೊಂಡು ಪರಸ್ಪರವಾಗಿ ಇವೆರಡೂ ಅನುಸರಿಸುವಹಾಗೆ, ಅಗ್ನಿಯು ಅಹಸ್ಸನ್ನೂ ರಾತ್ರಿಯನ್ನೂ ಅನುಸರಿಸಿ ಸಂಬಂಧಿಸಿ ಕೊಂಡಿರುವಕಾರಣ ಸಾಯಂಪ್ರಾತಃಕಾಲಗಳಲ್ಲಿ ನಿಯತವಾಗಿ ಯಜಮಾನರು ಅಗ್ನಿಯನ್ನು ಹವಿಸ್ಸುಗಳಿಂದ ಪೂಜಿಸುವ ರೆಂದು ವಿವರಿಸಿದೆ.

**ಬಂಧುರೇವ ದುರೋಣೇ ಆ ತಸ್ಥತುಃ—ಯಥಾ ಕೂವರಸ್ಥಾನಂ ಪರಸ್ಪರಸಂಸಕ್ತೇಷಾದ್ವಯೋ-ಪೇತಂ ತದ್ವತ್ಸಂಸಕ್ತೌ ತಾವಹೋರಾತ್ರೌ ಅಸ್ಮಾಕಂ ಗೃಹೇ ಅಗ್ನಿಹೋತ್ರಾದಿಕರ್ಮಸಿದ್ಧ್ಯರ್ಥಂ ಪುನಃ ಪುನರಾವರ್ತಮಾನೌ ಸಂತೌ ತಿಷ್ಠತಾಂ ॥** ದುರೋಣೆ ಎಂಬ ಪದವು ಗೃಹನಾಮಗಳಲ್ಲಿ (ನಿ. ೩-೧೩) ಉಕ್ತವಾಗಿ ದುರೋಣಇತಿ ಗೃಹನಾಮ ದುರವಾ ಭವಂತಿ ದುಸ್ತರ್ಪಾಃ (ನಿ. ೪-೫) ಎಂದು ವ್ಯಾಖ್ಯಾತವಾಗಿದೆ. ಸಾರಥಿಯು ಕೂತುಕೊಳ್ಳುವ ಸ್ಥಾನವು ಎರಡು ಹಲಗೆಗಳಿಂದ ಪರಸ್ಪರವಾಗಿ ಸೇರಿರುವಂತೆ ದೃಢವಾಗಿರುವ ಹಾಗೆ ಅನ್ಯೋನ್ಯವಾಗಿ ಸಂಶ್ಲಿಷ್ಟವಾಗಿರುಪ ಅಹೋರಾತ್ರಗಳು ಅಗ್ನಿಹೋತ್ರವೇ ಮೊದಲಾದ ಕರ್ಮಗಳ ಸಿದ್ಧಿಗಾಗಿ ಆವೃತ್ತಿಯನ್ನು ಪದೇ ಪದೇ

ಹೊಂದುತ್ತಾ ನಮ್ಮ ಗೃಹಗಳಲ್ಲಿ ಆಯಾಯ ಕರ್ಮಗಳನ್ನು ನೆರವೇರಿಸಲು ಅನುಕೂಲವಾಗುವಂತೆ ನಿಯತವಾದ ಸ್ಥಿತಿಯನ್ನು ಹೊಂದಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ದ್ರವತಾಂ**—ದ್ರು ಗತೌ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ ಬಂದಾಗ **ಆಮೇತಃ** (ಪಾ. ಸೂ. ೩-೪-೯೦) ಎಂಬುದರಿಂದ ಅದಕ್ಕೆ ಆಮಾದೇಶ. ಶಪ್ ನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಪ್ರತ್ಯಯಗಳು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ವಾಜಯಂತೀ**—ವಾಜಂ ಕರೋತಿ ಇತಿ ವಾಜಯಂತೀ. **ತತ್ಕರೋತಿ ತದಾಚಷ್ಟೇ** ಎಂಬ ವಚನದಿಂದ ಣಿಚ್. ಣಿಜಂತದಮೇಲೆ ಶತೃ ಶಪ್. ಅದನ್ನು ನಿಮಿತ್ತೀಕರಿಸಿ ಣಿಚಿನ ಇಕಾರಕ್ಕೆ ಗುಣ, ಅಯಾದೇಶ. **ಉಗಿತಶ್ಚ** ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ. ಪ್ರಥಮಾದ್ವಿವಚನ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಪೂರ್ವಸವರ್ಣದೀರ್ಘ.

**ಪಥ್ಯಾಭಿಃ**—ಪಥಿಷು ಸಾಧವಃ ಪಥ್ಯಾ. **ತತ್ರ ಸಾಧುಃ** (ಪಾ. ಸೂ. ೪-೪-೯೮) ಎಂಬುದರಿಂದ ಸಾಧು ಎಂಬ ಅರ್ಥದಲ್ಲಿ ಯತ್ ಪ್ರತ್ಯಯ. ನಕಾರಾಂತಶಬ್ದವಾದುದರಿಂದ **ನಸ್ತದ್ಧಿತೇ** (ಪಾ. ಸೂ. ೬-೪-೧೪೪) ಎಂಬುದರಿಂದ ಟಿಗೆ (ಇನ್) ಲೋಪ. **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಪ್ರತ್ಯಯ ಕಿತ್ತಾದುದರಿಂದ ಸ್ವರಿತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ಅಂಜಂತಿ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ತಸ್ಥತುಃ**—ಷ್ಠಾ ಗತಿನಿವೃತ್ತೌ ಧಾತು. ಲಿಟ್ ಪ್ರಥಮಪುರುಷದ್ವಿವಚನಕ್ಕೆ **ಪರಸ್ಮೈಪದಾನಾಂ**—ಎಂಬುದರಿಂದ ಅತುಸಾದೇಶ. ಧಾತುವಿಗೆ ದ್ವಿತ್ವಾದಿ. **ಶರ್ಪೂರ್ವಾ ಖಯಃ** (ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ತಕಾರ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

**ಮಿತ್ರಶ್ಚ ತುಭ್ಯಂ ವರುಣಃ ಸಹಸ್ವೋಽಗ್ನೇ ವಿಶ್ವೇ ಮರುತಃ ಸುಮ್ನಮರ್ಚನ್ ।**
**ಯಚ್ಛೋಚಿಷಾ ಸಹಸಸ್ಪುತ್ರ ತಿಷ್ಠಾ ಅಭಿ ಕ್ಷಿತೀಃ ಪ್ರಥಯನ್ಸೂರ್ಯೋ ನೄನ್ ॥**

ಪದಪಾಠಃ

**ಮಿತ್ರಃ । ಚ । ತುಭ್ಯಂ । ವರುಣಃ । ಸಹಸ್ವಃ । ಅಗ್ನೇ । ವಿಶ್ವೇ । ಮರುತಃ । ಸುಮ್ನಂ । ಅರ್ಚನ್ ।**
**ಯತ್ । ಶೋಚಿಷಾ । ಸಹಸಃ । ಪುತ್ರ । ತಿಷ್ಠಾಃ । ಅಭಿ । ಕ್ಷಿತೀಃ । ಪ್ರಥಯನ್ । ಸೂರ್ಯಃ । ನೄನ್॥**

ಸಾಯಣಭಾಷ್ಯಂ

**ಸಹಸ್ಸೋ** ಬಲವನ್ ಹೇ ಅಗ್ನೇ ಮಿತ್ರಶ್ಚ ವರುಣಶ್ಚ ಮಿತ್ರಾವರುಣೌ ವಿಶ್ವೇ ಮರುತಃ ಸರ್ವೇ ದೇವಾಶ್ಚ ತುಭ್ಯಂ ತ್ವದರ್ಥಂ ಸುಮ್ನಂ ಸ್ತೋತ್ರಮರ್ಚನ್ । ವಹಂತಿ । ಯದ್ವಾ ಸರ್ವೇ ದೇವಾಸ್ತುಭ್ಯಂ ತ್ವಾಂ ಸುಮ್ನಂ ಸುಖೇನಾರ್ಚನ್ ಪೂಜಯಂತಿ । ಯದ್ಯಸ್ಮಾತ್ಕಾರಣಾತ್ಸಹಸಸ್ಪುತ್ರ ಹೇ ಅಗ್ನೇ ಸೂರ್ಯಃ ಸುಷ್ಠು ಅರ್ಯಃ ಸ್ವಾಮೀ ಯದ್ವಾ ಸರ್ವಾಂತರ್ಯಾಮಿತಯಾ ಸುಷ್ಠು ಪ್ರೇರಕೋ ಯದ್ವಾ ಸೂರ್ಯಃ ಶೋಭನವೀರ್ಯೋಽಭಿ ಕ್ಷಿತೀಃ । ಕ್ಷಿತಿಶಬ್ದೋ ಮನುಷ್ಯವಾಚೀ । ವಿಶಃ ಕ್ಷಿತಯ ಇತಿ ತನ್ನಾಮಸು ಪಾಠಾತ್ । ಮನುಷ್ಯಾನಭಿಲಕ್ಷ್ಯ ನೄನ್ ಮಾರ್ಗಪ್ರದರ್ಶಕತ್ವೇನ ನೇತೄನ್ ಆತ್ಮನೋ ರಶ್ಮೀನ್ ಪ್ರಥಯನ್ಸರ್ವತೋ ವಿಸ್ತಾರಯಂಸ್ತ್ವಂ ಶೋಚಿಷಾ ದೀಪ್ತ್ಯಾ ಸಮಾನಃ ಸನ್ ತಿಷ್ಠಾಃ । ತಿಷ್ಠಸಿ । ತಸ್ಮಾದೇತೇ ದೇವಾಃ ಪೂಜಯಂತೀತಿ ॥ ಅರ್ಚನ್ । ಅರ್ಚ ಪೂಜಾಯಾಮಿತ್ಯಸ್ಯ ಲಙಿ ರೂಪಂ। ಅಡಭಾವಶ್ಛಾಂದಸಃ । ತಿಷ್ಠಾಃ । ಷ್ಠಾ ಗತಿನಿವೃತ್ತಾವಿತ್ಯಸ್ಯ ಲೇಟಿ ರೂಪಂ । ಯದ್ಯೋಗಾದನಿಘಾತಃ । ಪಾಘ್ರೇತ್ಯಾದಿನಾ ತಿಷ್ಠಾದೇಶಸ್ಯಾದ್ಯುದಾತ್ತತ್ವೇನ ನಿಪಾತನಾದಾದ್ಯುದಾತ್ತಃ । ಸೂರ್ಯಃ ।ರಾಜಸೂಯ ಸೂರ್ಯೇತಿ ಕ್ಯಬಂತತ್ವೇನ ನಿಪಾತನಾತ್ಸರ್ವಾರ್ಥಾಃ ಸಿದ್ಧಾ ಭವಂತಿ ॥

ಪ್ರತಿಪದಾರ್ಥ

(**ಹೇ**) **ಸಹಸಃ ಪುತ್ರ**—ಬಲದ ಪುತ್ರನಾದ ಎಲೈ ಅಗ್ನಿಯೇ । **ಯತ್**—ಯಾವ ಕಾರಣದಿಂದ । **ಸೂರ್ಯಃ**—(ಸರ್ವಾಂತರ್ಯಾಮಿಯಾಗಿ) ಸರ್ವಪ್ರೇರಕನಾದ ಅಥವಾ ಒಳ್ಳೆಯ ಸಾಮರ್ಥ್ಯವಿಶಿಷ್ಟನಾದ (ನೀನು) । **ಕ್ಷಿತೀಃ ಅಭಿ**—ಮನುಷ್ಯರನ್ನು ಉದ್ದೇಶಿಸಿ। **ನೄನ್**—ಮಾರ್ಗಪ್ರದರ್ಶಕಗಳಾದ (ನಿನ್ನ ರಶ್ಮಿಗಳನ್ನು)। **ಪ್ರಥಯನ್**—ಎಲ್ಲಾ ಕಡೆಗೂ ಹರಡುವವನಾಗಿ । **ಶೋಚಿಷಾ**—ದೀಪ್ತಿಯಿಂದ (ಸರ್ವತ್ರ ಸಮಾನನಾಗಿ) । **ತಿಷ್ಠಾಃ**—ಇರುತ್ತೀಯೋ । (**ತತ್**—ಆದುದರಿಂದ) । **ಸಹಸ್ವಃ**—ಬಲಿಷ್ಠನಾದ । (**ಹೇ**) **ಅಗ್ನೇ**—ಎಲೈ ಅಗ್ನಿಯೇ । **ಮಿತ್ರಃ ವರುಣಃ ಚ**—ಮಿತ್ರಾವರುಣರಿಬ್ಬರೂ । **ವಿಶ್ವೇ ಮರುತಃ**—ಸಮಸ್ತ ದೇವತೆಗಳೂ । **ತುಭ್ಯಂ**—ನಿನಗೋಸ್ಕರ । **ಸುಮ್ನಂ**—ಸ್ತೋತ್ರವನ್ನು । **ಅರ್ಚನ್**—ವಹಿಸುತ್ತಾರೆ । [ಅಥವಾ **ತುಭ್ಯಂ**—ನಿನ್ನನ್ನು । **ಸುಮ್ನಂ**—ಸುಖವಾಗಿ ॥ **ಅರ್ಚನ್**—ಅರ್ಚಿಸುತ್ತಾರೆ]

ಭಾವಾರ್ಥ

ಬಲದ ಪುತ್ರನೂ (ಸ್ವತಃ) ಬಲಿಷ್ಠನೂ ಆದ ಎಲೈ ಅಗ್ನಿಯೇ, ಸರ್ವಪ್ರೇರಕನಾದ ನೀನು ಜನಗಳಿಗೆ ಮಾರ್ಗದರ್ಶಕಗಳಾದ ನಿನ್ನ ರಶ್ಮಿಗಳನ್ನು ಎಲ್ಲೆಡೆಗಳಲ್ಲಿ ಹರಡಿಕೊಂಡಿದ್ದೀಯೇ; ಆದುದರಿಂದಲೇ, ಮಿತ್ರಾವರುಣರು, ಮರುತರು ಮೊದಲಾದ ದೇವತೆಗಳೆಲ್ಲರೂ ನಿನ್ನನ್ನು ಸ್ತುತಿಸುತ್ತಾರೆ.

English Translation

Vigorous AGNI, to you, MITRA and VARUNA, and all the MARUTS, offer praise; since, son of strength, you stand a sun, shedding (your) rays with lustre on mankind.

ವಿಶೇಷವಿಷಯಗಳು

**ಸಹಸ್ವಃ**—ವಿಶ್ವೇ ಮರುತಃ ತುಭ್ಯಂ ಸುಮ್ನಮರ್ಚನ್—ಬಲವನ್ ಹೇ ಅಗ್ನೇ ಸರ್ವೇ ದೇವಾಶ್ಚ ತ್ವದರ್ಥಂ ಸ್ತೋತ್ರಂ ವಹಂತಿ ಯದ್ವಾ ಸರ್ವೇ ದೇವಾಸ್ತುಭ್ಯಂ ತ್ವಾಂ ಸುಮ್ನಂ ಸುಖೇನಾರ್ಚ

**ಪೂಜಯಂತಿ** । ಸುಮ್ನಂ ಎಂಬ ಪದವು ಸುಖನಾಮುಗಳಲ್ಲಿ (ನಿ.೩-೧೩) ಉಕ್ತವಾಗಿದೆ. ಸಹಸ್ ಎಂಬ ಶಬ್ದವು ಉದಕ ನಾಮುಗಳಲ್ಲಿಯೂ (ನಿ. ೨-೨೪) ಬಲನಾಮುಗಳಲ್ಲಿಯೂ (ನಿ. ೩-೯) ಪಠಿತವಾಗಿವೆ. ಇಲ್ಲಿ ಅಗ್ನಿಯನ್ನು ಪ್ರಭೂತವಾದ ಬಲವುಳ್ಳವನೆಂದು ಸಂಬೋಧಿಸಿ ಎಲ್ಲಾ ದೇವತೆಗಳೂ ಅಗ್ನಿಯನ್ನು ಸ್ತೋತ್ರಗಳನ್ನು ಹೇಳುತ್ತಾ ಪೂಜಿಸುವರು ಎಂದು ಒಂದು ವಿಧವಾದ ಅರ್ಥವನ್ನು ಮಾಡಿದೆ. ಸುಮ್ನಶಬ್ದಕ್ಕೆ ಸುಖವೆಂದು ಅರ್ಥಮಾಡಿರುವ ಎರಡನೆಯ ಸಂದರ್ಭದಲ್ಲಿ ದೇವತೆಗಳೆಲ್ಲರೂ ಸುಖದಿಂದ ಅಗ್ನಿಯನ್ನು ಪೂಜಿಸುವರು ಎಂಬ ಅರ್ಥವನ್ನು ವಿವರಿಸಿದೆ.

**ಸೂರ್ಯಃ—ಸುಷ್ಠು ಅರ್ಯಃ ಸ್ವಾಮೀ। ಯದ್ವಾ ಸರ್ವಾಂತರ್ಯಾಮಿತಯಾ ಸುಷ್ಠು ಪ್ರೇರಕಃ। ಯದ್ವಾ ಶೋಭನವೀರ್ಯಃ।** ಯಾಸ್ಕರು **ಸೂರ್ಯಃ ಸರ್ತೇರ್ವಾ, ಸುವತೇರ್ವಾ, ಸ್ವೀರ್ಯತೇರ್ವಾ** (ನಿ. ೧೨-೧೪)ಗತ್ಯರ್ಥಕವಾದ ಸೃಧಾತುವಿನಿಂದ ಸೂರ್ಯ ಎಂಬ ಪದವು ನಿಷ್ಪನ್ನವಾಗಿದೆ. ಈ ಪಕ್ಷದಲ್ಲಿ ಸಂಚರಿಸುವವನೆಂದು ಅರ್ಥ. ಪ್ರಸವಿಸು ಎಂಬ ಅರ್ಥವುಳ್ಳ ಷೂಞ್ ಧಾತುವಿನಿಂದ ನಿಷ್ಪನ್ನವಾದಾಗ ಸೃಷ್ಟಿಮಾಡುವವನು ಎಂದು ಅರ್ಥವಾಗುತ್ತದೆ. ಗಮನ ಅಥವಾ ಕಂಪನ ಎಂಬ ಅರ್ಥವುಳ್ಳ ಈರಧಾತುವಿನಿಂದ ಸು ಎಂಬ ಉಪಸರ್ಗಪೂರ್ವಕವಾಗಿ ಸೂರ್ಯ ಶಬ್ದದ ರೂಪನಿಷ್ಪತ್ತಿಯನ್ನು ಹೇಳುವಾಗ **ವಾಯುನಾ ಹ್ಯಯಂ ಸುಷ್ಠು ಈರ್ಯತೇ ಪ್ರೇರ್ಯತೇ** ವಾಯುವಿನಿಂದ ಅತಿಶಯವಾಗಿ ಪ್ರೇರಿಸಲ್ಪಡುವನೆಂದೂ ಮೂರು ವಿಧವಾಗಿ ಅರ್ಥವನ್ನು ವಿವರಿಸಿ ಪ್ರಸಿದ್ಧನಾದ ಸೂರ್ಯನಿಗೆ ಜಾತವೇದಾಗ್ನಿಯ ತಾದಾತ್ಮ್ಯವನ್ನು ಬೋಧಿಸುವ,

**ಉದು ತ್ಯಂ ಜಾತವೇದಸಂ ದೇವಂ ವಹನ್ತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ॥**

(ಋ. ಸಂ. ೧-೫೦-೧)

ಈ ಋಕ್ಕನ್ನು ಉದಹರಿಸಿದ್ದಾರೆ. ಮತ್ತು ಈ ಸೂರ್ಯನಿಗೆ ಸಾರ್ವಾತ್ಮ್ಯವನ್ನು ಬೋಧಿಸುವ—

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**

(ಋ. ಸಂ. ೧-೧೧೫-೧)

ಈ ಋಕ್ಕನ್ನು ಉದಹರಿಸಿದ್ದಾರೆ. ಇಲ್ಲಿ ಪ್ರಸಿದ್ಧನಾದ ಅಗ್ನಿಯು ಸೂರ್ಯನಲ್ಲಿ ಕಂಡುಬರುವ ಗುಣಗಳನ್ನು ಹೊಂದಿರುವನೆಂದು ಸಮರ್ಥನೆ ಮಾಡಿ, ಅಗ್ನಿಯು ಎಲ್ಲಕ್ಕೂ ಪ್ರಭುವಾಗಿರುವವನೂ, ಸರ್ವರಿಗೂ ಅಂತರ್ಯಾಮಿಯಾಗಿರುವವನೂ, ಆದ್ದರಿಂದ ಎಲ್ಲರಿಗೂ ಪ್ರೇರಕನಾಗಿರುವನು, ಮತ್ತು ಉತ್ತಮವಾದ ವೀರ್ಯವುಳ್ಳವನು ಎಂದು ಅರ್ಥವನ್ನು ಮಾಡಿದೆ.

**ಅಭಿಕ್ಷಿತೀಃ ನೄನ್ ಪ್ರಥಯನ್—ಕ್ಷಿತಿಶಬ್ದಃ ಮನುಷ್ಯವಾಚೀ ಮನುಷ್ಯಾನಭಿಲಕ್ಷ್ಯ ಮಾರ್ಗ-ಪ್ರದರ್ಶಕತ್ವೇನ ನೇತೄನ್ ಆತ್ಮನೋ ರಶ್ಮೀನ್ ಸರ್ವತಃ ವಿಸ್ತಾರಯನ್ ದೀಪ್ತ್ಯಾ ಸಮಾನಸ್ತಿಷ್ಠಸಿ ।** ಕ್ಷಿತಿಶಬ್ದವು ಭೂವಾಚಕಗಳಲ್ಲಿಯೂ (ನಿ. ೨-೫) ಕ್ಷಿತಯಃ ಎಂದು ಮನುಷ್ಯವಾಚಕಗಳಲ್ಲಿಯೂ (ನಿ. ೩-೭) ಉಕ್ತವಾಗಿದೆ. ಅಗ್ನಿಯು ಆಯಾಯ ಮನುಷ್ಯರಿಗೆ ಉಚಿತವಾಗಿರುವ ರಕ್ಷಣೆಗೆ ಅನುಕೂಲವಾದ ಉಪಾಯಗಳಂತಿರುವ, ಮನುಷ್ಯರಿಗೆ ಅಂಧಕಾರವನ್ನು ತೊಲಗಿಸಿ ಸರಿಯಾದ ಮಾರ್ಗದಲ್ಲಿ ಒಯ್ಯುವ ಕಿರಣಗಳನ್ನು ಎಲ್ಲಾ ಕಡೆಯಲ್ಲಿ ಸೂರ್ಯನು ತನ್ನ ಕಾಂತಿಗಳಿಂದ ಬೆಳಗುವಂತೆ ಅಗ್ನಿಯೂ,ತನ್ನ ರಶ್ಮಿಗಳ ದೀಪ್ತಿಗಳಿಂದ ಮಾರ್ಗಪ್ರದರ್ಶಕನಾಗಿಯೂ ಹರಡಿರುವ ಪ್ರಕಾಶಿಸುವನೆಂದು ಸೂರ್ಯನ ಹೋಲಿಕೆಯನ್ನು ಸಾಮಾನ್ಯಧರ್ಮದ ಮೂಲಕ ವ್ಯಂಗ್ಯರೀತಿಯಿಂದ ಹೇಳಿ ಕಾವ್ಯಶೈಲಿಯಿಂದ ಇಲ್ಲಿ ವಿವರಿಸಿದೆ.

**ನ್ನೄನ್—ಆತ್ಮನೋ ರಶ್ಮೀನ್** ನರಃ ಎಂಬ ಶಬ್ದವು ಅಶ್ವನಾಮಗಳಲ್ಲಿಯೂ (ನಿ.೨-೨೭) ಮನುಷ್ಯನಾಮಗಳಲ್ಲಿಯೂ (ನಿ. ೩-೭) ಉಕ್ತವಾಗಿದೆ. ಸಾಯಣರು ಅಗ್ನಿಯ ರಶ್ಮಿಗಳು—ಎಂದು ಅರ್ಥವನ್ನು ವಿವರಿಸಿದ್ದಾರೆ.

**ವಿಶ್ವೇ ಮರುತಃ—** ಇಲ್ಲಿ **ಮರುತ್** ಶಬ್ದಕ್ಕೆ **ದೇವಾಃ** ಎಂದರ್ಥಮಾಡಿದೆ. **ಮರುಚ್ಛಬ್ದ**ವನ್ನು ನಿರುಕ್ತಕಾರರು **ಋತ್ವಿಜ್**ನಾಮಗಳಲ್ಲೂ (ನಿ. ೩-೧೮) **ಹಿರಣ್ಯ**ನಾಮಗಳಲ್ಲೂ (ನಿ. ೨-೧೦) ಸೇರಿಸಿ ಪಠಿಸಿದ್ದಾರೆ. ಆದರೆ ಮರುದ್ದೇವತೆಗಳೆಂದು ಪ್ರಸಿದ್ಧವಾದ ಪದವು ಋತ್ವಿಕ್ಕೆಂದೂ, ಹಿರಣ್ಯವೆಂದೂ ಮತ್ತು ಕೆಲವು ಕಡೆಗಳಲ್ಲಿ ದೇವತೆಗಳೆಂದೂ ಅರ್ಥವನ್ನು ಕೊಡುವುದಾದರೆ ಈ ಪದದ ಮೂಲಧಾತುವಾವುದು, ಅದರ ನಿಷ್ಪತ್ತಿಯು ಯಾವರೀತಿಯಲ್ಲಿ ಸಾಧ್ಯ ಮತ್ತು ಮರುದ್ದೇವತೆಗಳೆಂದು ತಿಳಿಸುವಾಗ ಈ ಪದದ ವ್ಯುತ್ಪತ್ತಿಯೇನು ಎಂದು ತಿಳಿಯುವುದೂ ಕೊಂಚ ಶ್ರಮಸಾಧ್ಯವೇ ಆಗಿದೆ. ಮರುದ್ದೇವತೆಗಳ ಪರವಾಗಿ ಉಪಯೋಗಿಸಲ್ಪಡುವ ಈ ಪದಕ್ಕೆ ನಿರುಕ್ತಕಾರರು ಈ ವಿಧವಾಗಿ ನಿರ್ವಚನವನ್ನೂ ಹೇಳಿದ್ದಾರೆ.

**ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ।**

(ನಿ. ೧೧-೧೪)

ನಿಯಮಿತವಾದ ಶಬ್ದವುಳ್ಳವರಾದ್ದರಿಂದಾಗಲಿ, ನಿಯಮಿತವಾದ ತೇಜಸ್ಸನ್ನುಳ್ಳವರಾದ್ದರಿಂದಾಗಲಿ ಅಥವಾ ವೇಗವಾಗಿ ಓಡುವವರಾದ್ದರಿಂದಾಗಲಿ ಈ ಹೆಸರು ಎಂದು ೧-೮೮-೧ನೇ ಋಕ್ಕನ್ನುದಾಹರಿಸಿ ಮರುತ್ತಗಳ ಸ್ವರೂಪವನ್ನು ತಿಳಿಸಿದ್ದಾರೆ.

ಈ ರೀತಿ ನಾನಾರ್ಥಗಳುಳ್ಳ ಈ ಪದಕ್ಕೆ ಸರಿಯಾದ ನಿರ್ವಚನವನ್ನು ಹೇಳುವುದು ಶ್ರಮವೆಂದು ತಿಳಿಸಿ Max Muller ಎಂಬ ಪಂಡಿತನು ಈ ರೀತಿ ಹೇಳಿದ್ದಾನೆ.

Marut or Maruta in ordinary Sanskrit mean wind, and more particularly a strong wind, differing by its violent character from Vayu or Vata. Nor do the hymns themselves leave us in any doubt as to the natural phenomena with which the Maruts are identified. Storms which root up the trees of the forest, lightning, thunder and showers of rain are the background from which the Maruts in their personal and dramatic character rise before our eyes. In most of the later native dictionaries, in the ಮೇದಿನೀ, ವಿಶ್ವ, ಹೇಮಚಂದ್ರ, ಅಮರ, ಅನೇಕಾರ್ಥಮಂಜರೀ, Marut is given a synonym of ದೇವ, or God in general and so is Maru in Pali.

But, while the hymns addressed to the Maruts enable us to watch the successive stages in the development of so called deities more clearly than any other hymns, there is, no doubt, one drawback, namely, the uncertainty of the etymology of Marut. The etymology of the name is and always must be the best key to the original intention of a deity.

With regard to Marut I have myself no doubt whatever that Mar-ut comes from the root MAR in the sense of grinding, crushing, pounding (like ಮೃಣಾತಿ, ಮೃದಿತ etc.). There is no objection to this etymology either on the ground of phonetic rules, or on account of the meaning of Marut. Professor Kuhn's idea that the name of the Maruts was derived from the root ಮೃ to die and that the Maruts were originally conceived as the souls of the departedo and afterwards as ghosts, spirits, winds and lastly as storms, derives ns, support from the Veda. Another etymology, proposed in Bohtlingk' Dictionary, which derives Marut from a root ಮೃ to strive, labours under two disadvantages; first that there is no such root in Sanskrit; secondly, that the lurid splendour of the lightning is but a subordinate feature in the character of the Maruts. No better etymology having been proposed,, I still maintain that the derivation of Marut from ಮ್ರಾ to pound, to smash, is free from any objection and that the original conception of the Maruts was that of crushing, smashing, striking, tearing, and the destroying storms.

[The Vedic Hymns. Sacred Books of the East Vol. XXXII—p. 24.]

ಈ ಪಂಡಿತನು ಮೇಲಿನ ವಾಕ್ಯಗಳಲ್ಲಿ Kuhn ಮುಂತಾದ ಪಾಶ್ಚಾತ್ಯ ಪಂಡಿತರ ಅಭಿಪ್ರಾಯಗಳನ್ನು ತಿಳಿಸಿ ಅವುಗಳಲ್ಲಿರುವ ದೋಷಗಳನ್ನೂ ಹೇಳಿದ್ದಾನೆ. ತನ್ನ ಅಭಿಪ್ರಾಯವನ್ನು ಹೇಳುತ್ತಾ ಈ ಪದವು ಹಿಂಸಾರ್ಥಕವಾದ **ಮ್ರಾ** ಧಾತುವಿನಿಂದ ನಿಷ್ಪನ್ನವಾಗಿ ವೃಕ್ಷಾದಿಗಳನ್ನು ಛೇದಿಸತಕ್ಕ ಶಕ್ತಿವಿಶೇಷವೆಂದು ತಿಳಿಸಿದ್ದಾನೆ. ಸೋಮಾದಿಗಳನ್ನು ಹಿಂಡುವುದರಿಂದ ಋತ್ವಿಕ್ಕುಗಳಿಗೂ ಮರುತ್ತೆಂಬ ಪ್ರಯೋಗವುಂಟು. ಮಿತವಾದ ದೀಪ್ತಿಯುಳ್ಳವರಾದ್ದರಿಂದ ಈ ಹೆಸರು ಪ್ರಸಿದ್ಧವಾಯಿತೆಂದು ನಿರುಕ್ತಕಾರರು ಹೇಳಿರುವುದರಿಂದಲೂ ದೇವತೆಗಳಿಗೂ ಹಿರಣ್ಯಕ್ಕೂ ಈ ಗುಣವಿರುವುದರಿಂದಲೂ ಈ ಹೆಸರು ಪ್ರಸಿದ್ಧಿವಾಗಿದೆಯೆಂದು ಕಾಣುತ್ತದೆ.

ವ್ಯಾಕರಣಪ್ರಕ್ರಿಯಾ

**ಅರ್ಚನ್**—ಅರ್ಚ ಪೂಜಾಯಾಂ ಧಾತು. ಛಾಂದಸವಾಗಿ ಲಙ್. ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಝೋಽಂತಃ** ಎಂಬುದರಿಂದ ಅಂತಾದೇಶ ಬಂದಾಗ ಸಂಯೋಗಾಂತಲೋಪದಿಂದ ತಕಾರಲೋಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. **ತಿಙ್ಙತಿಙಃ** ಎಂಬುದರಿಂದ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶೋಚಿಷಾ**—ಶುಚ ದೀಪ್ತೌ ಧಾತು. ಇದಕ್ಕೆ ಔಣಾದಿಕ ಇಸಿಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ತಿಷ್ಠಾಃ**—ಷ್ಠಾ ಗತಿನಿವೃತ್ತೌ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ ಲೋಪಃ**

**ಪರಸ್ಮೈಪದೇಷು** (ಪಾ. ಸೂ. ೩-೪-೯೨) ಎಂಬುದರಿಂದ ಅದರ ಇಕಾರಕ್ಕೆ ಲೋಪ. ಶಪ್ ವಿಕರಣ. **ಪಾಘ್ರಾ-ಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ತಿಷ್ಠಾದೇಶ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. ತಿಷ್ಠಾಃ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಷ್ಠಾದೇಶವನ್ನು ಆದ್ಯುದಾತ್ತವಾಗಿ ನಿಪಾತಮಾಡಿರುವುದರಿಂದ ತಿಷ್ಠಾಃ ಎಂಬುದು ಆದ್ಯುದಾತ್ತವಾಗುತ್ತದೆ.

**ಸೂರ್ಯಃ**—ಸೃ ಗತೌ ಧಾತು. **ರಾಜಸೂಯ ಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

———

ಸಂಹಿತಾಪಾಠಃ

ವಯಂ ತೇ ಅದ್ಯ ರರಿಮಾ ಹಿ ಕಾಮಮುತ್ತಾನಹಸ್ತಾ ನಮಸೋಪಸದ್ಯ ।
ಯಜಿಷ್ಠೇನ ಮನಸಾ ಯಕ್ಷಿ ದೇವಾನಸ್ರೇಧತಾ ಮನ್ಮನಾ ವಿಪ್ರೋ ಅಗ್ನೇ ॥ ೫ ॥

ಪದಪಾಠಃ

ವಯಂ । ತೇ । ಅದ್ಯ । ರರಿಮ । ಹಿ । ಕಾಮಂ । ಉತ್ತಾನಽಹಸ್ತಾಃ । ನಮಸಾ । ಉಪಽಸದ್ಯ ।
ಯಜಿಷ್ಠೇನ । ಮನಸಾ । ಯಕ್ಷಿ । ದೇವಾನ್ । ಅಸ್ರೇಧತಾ । ಮನ್ಮನಾ । ವಿಪ್ರಃ । ಅಗ್ನೇ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ಉತ್ತಾನಹಸ್ತಾ ಹವಿಃಸ್ವೀಕರಣಾದುತ್ತಾನಪಾಣಯೋ ವಯಂ ಕಾಮಂ ಕಮನೀಯಂ ಪುರೋಡಾಶಾದಿಹವಿಸ್ತೇ ತುಭ್ಯಮದ್ಯೇದಾನೀಮಸ್ಮಿನ್ಕರ್ಮಣಿ ರರಿಮ । ದದ್ಮಃ । ನಮಸಾ ನಮಸ್ಕಾರೇಣೋಪಸದ್ಯ ಪ್ರಸನ್ನೋ ಭೂತ್ವಾ ಯಜಿಷ್ಠೇನ ಯಷ್ಟೃತಮೇನ ಯಾಗೇಚ್ಛಾವತಾ ಮನಸಾಂತಃಕರಣೇನ ದೇವಾನ್ಯಕ್ಷಿ । ಯಜನೀಯಾನ್ದೇವಾನ್ಯಜ । ಪೂಜಯ । ಕಿಂಚ ವಿಪ್ರೋ ಮೇಧಾವೀ ಕರ್ಮಾಭಿಜ್ಞಸ್ತ್ವಮಸ್ರೇಧತಾಕ್ಷೀಣೇನ ಪ್ರಭೂತೇನ ಮನ್ಮನಾ ಮಂತವ್ಯೇನ ಸ್ತೋತ್ರೇಣ ದೇವಾನ್ಪೂಜಯ ॥ ಅದ್ಯ । ಸದ್ಯಃ ಪರುತ್ಪರಾರ್ಯೈಷಮ ಇತ್ಯಾದಿನಾ ನಿಪಾತಿತಃ । ಅಂತೋದಾತ್ತಶ್ಚ । ರರಿಮ । ರಾ ದಾನ ಇತ್ಯಸ್ಯ ವರ್ತಮಾನೇ ಲಿಟ ಪರಸ್ಮೈಪದಾನಾಂ ಣಲತುಃ । ಪಾ. ೩-೪-೮೨ । ಇತ್ಯಾದಿನಾ ಮಸೋ ಮಾದೇಶಃ । ಕ್ರಾದಿನಿಯಮಾದಿಡಾಗಮಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಹಿಯೋಗಾದನಿಘಾತಃ । ಆಗಮಾ ಅನುದಾತ್ತಾ ಇತೀಟೋಽನುದಾತ್ತತ್ವಾತ್ಪ್ರತ್ಯಯಸ್ವರಃ । ಉಪಸದ್ಯ । ಷದ್ಲೃ ವಿಶರಣಗತ್ಯವಸಾದನೇಷು । ಅಸ್ಯ ಕ್ತ್ವಾ । ಸಮಾಸೇಽನಞ್ಪೂರ್ವೇ ಕ್ತ್ವೋ ಲ್ಯಬಿತಿ ಲ್ಯಪ್ । ಲಿತ್ಸ್ವರಃ । ಯಕ್ಷಿ । ಯಜ ದೇವಪೂಜಾಸಂಗತಿಕರಣದಾನೇಷು । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಷತ್ವಕತ್ವೇ । ಸಿಪೋ ಹ್ಯಾದೇಶಾಭಾವಶ್ಛಾಂದಸಃ । ಅಸ್ರೇಧತಾ । ಸ್ರಿಧಿಃ ಕ್ಷಯಾರ್ಥಃ । ತತ್ಪುರುಷ ಇತಿ ನಞ್ಸ್ವರಃ ॥

ಪ್ರತಿಪದಾರ್ಥ

**(ಹೇ) ಅಗ್ನೇ**—ಎಲೈ ಅಗ್ನಿಯೇ | **ಉತ್ತಾನಹಸ್ತಾಃ**—ಮೇಲಕ್ಕೆ ಎತ್ತಲ್ಪಟ್ಟ ಕೈಗಳುಳ್ಳ | **ವಯಂ**—ನಾವು | **ಕಾಮಂ**—(ದೇವತೆಗಳಿಂದ) ಅಪೇಕ್ಷಣೀಯವಾದ (ಪುರೋಡಾಶಾದಿಹವಿಸ್ಸನ್ನು) | **ತೇ**—ನಿನಗೆ | **ಅದ್ಯ**—ಈಗ (ಈ ಕರ್ಮದಲ್ಲಿ) | **ರರಿಮ**—ಅರ್ಪಿಸುತ್ತೇವೆ. | **ನಮಸಾ**—(ನಮ್ಮ) ನಮಸ್ಕಾರದಿಂದ | **ಉಪಸದ್ಯ**—ಪ್ರಸನ್ನನಾಗಿ | **ಯಜಿಷ್ಠೇನ**—ಯಾಗಮಾಡಬೇಕೆಂದು ದೃಢವಾದ ಇಚ್ಛೆಯುಳ್ಳ | **ಮನಸಾ**—ಅಂತಃಕರಣದಿಂದ | **ದೇವಾನ್**—ದೇವತೆಗಳನ್ನು | **ಯಕ್ಷಿ**—ಪೂಜಿಸು ; (ಮತ್ತು) | **ವಿಪ್ರಃ**—(ಕರ್ಮಾಭಿಜ್ಞನಾದ) ಮೇಧಾವಿಯಾದ (ನೀನು) | **ಅಸ್ರೇಧತಾ**—ಅಕ್ಷೀಣವಾದ (ಪ್ರಭೂತವಾದ) | **ಮನ್ಮನಾ**—ಸ್ತೋತ್ರದಿಂದ | **(ದೇವಾನ್ ಯಕ್ಷಿ**—ದೇವತೆಗಳನ್ನು ಪೂಜಿಸು).

ಭಾವಾರ್ಥ

ಎಲೈ ಅಗ್ನಿಯೇ, ಹವಿಃಪಾಣಿಗಳಾಗಿ, ಕೈಯನ್ನು ಮೇಲಕ್ಕೆ ಎತ್ತಿ, ನಾವು ಈಗ ಈ ಯಜ್ಞದಲ್ಲಿ ದೇವತೆಗಳಿಗೆ ಪ್ರಿಯವಾದ ಪುರೋಡಾಶಾದಿಹವಿಸ್ಸನ್ನು ನಿನಗೆ ಅರ್ಪಿಸುತ್ತೇವೆ; ನಮ್ಮ ನಮಸ್ಕಾರಾದಿಗಳಿಂದ ಪ್ರಸನ್ನನಾಗಿ ನೀನು ದೇವತೆಗಳನ್ನು ಉದ್ದೇಶಿಸಿ ಯಾಗಮಾಡಬೇಕೆಂಬ ಪ್ರಬಲೇಚ್ಛೆಯುಳ್ಳವನಾಗಿ, ದೇವತೆಗಳನ್ನು ಪೂಜಿಸು; ಆ ದೇವತೆಗಳನ್ನು ಕರ್ಮಾಭಿಜ್ಞನಾದ ನೀನು ಹೆಚ್ಚಾಗಿ ಸ್ತುತಿಸು.

## English Translation

With uplifted hands, approaching you with reverence, we present to you to day our oblation : do you, who are wise, worship the gods with most devout mind and with unwearied praise.

ವಿಶೇಷವಿಷಯಗಳು

**ಉತ್ತಾನಹಸ್ತಾ**—ಹವಿಃಸ್ವೀಕರಣಾದುತ್ತಾನಪಾಣಯಃ | ಯಾಸ್ಕರು **ಉತ್ತಾನ, ಉತ್ತತಾನ, ಉರ್ಧ್ವತಾನೋ ವಾ** (ನಿ. ೪-೨೧) ಎಂದು **ಉತ್ತಾನ**ಶಬ್ದದ ಅರ್ಥವಿವರಣೆಯನ್ನು ಮಾಡಿದ್ದಾರೆ. ಇಲ್ಲಿ ಅಗ್ನಿಯನ್ನು ಸಂಬೋಧಿಸಿ ಋತ್ವಿಜರಾದ ನಾವು ಮೇಲುಮುಖವಾದ ಹಸ್ತತಲವುಳ್ಳ ಹಸ್ತಗಳಿಂದ ಎಂದರೆ ಕೈಗಳನ್ನೆತ್ತಿ ಹವಿಸ್ಸುಗಳನ್ನು ಧರಿಸಿ ಅಗ್ನಿಗೆ ಪ್ರೀತಿಯನ್ನು ಉಂಟುಮಾಡುವ ರುಚಿಕರವಾದ ಪುರೋಡಾಶವೇ ಮೊದಲಾದ ಹವಿಸ್ಸುಗಳನ್ನು ಯಜ್ಞಗಳಲ್ಲಿ ಅಗ್ನಿಗೆ ಅರ್ಪಿಸುವೆವು ಎಂದು ಆಶಂಸಿಸಿದೆ.

**ನಮಸಾ ಉಪಸದ್ಯ ಯಜಿಷ್ಠೇನ ಮನಸಾ ದೇವಾನ್ ಯಕ್ಷಿ—ನಮಸ್ಕಾರೇಣ ಪ್ರಸನ್ನೋ ಭೂತ್ವಾ ಯಾಗೇನ ಅಚ್ಛಾವತಾ ಅಂತಃಕರಣೇನ ಯಜನೀಯಾನ್ ದೇವಾನ್ ಯಜ ಪೂಜಯ** ಅಗ್ನಿಯು ಋತ್ವಿಜರಾದ ನಮ್ಮ ನಮಸ್ಕಾರಗಳಿಂದ ಪ್ರಸನ್ನನಾಗಿ, ನಮ್ಮ ಯಜ್ಞದಲ್ಲಿ ಅರ್ಪಿಸುವ ಹವಿಸ್ಸಿನ ಸ್ವೀಕಾರದಿಂದ ಪರಿಶುದ್ಧವಾದ ಅಂತಃಕರಣಗಳಿಂದ ಯಜ್ಞದಲ್ಲಿ ಪೂಜ್ಯರಾಗಿರುವ ದೇವತೆಗಳನ್ನು ಪೂಜಿಸಲಿ ಎಂದು ಆಶಿಸಿದೆ.

ಮತ್ತು ವಿಪ್ರಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಪಠಿತವಾಗಿರುವುದರಿಂದ ಯಜ್ಞಕರ್ಮಗಳಲ್ಲಿ ಕುಶಲನಾಗಿರುವ ಅಗ್ನಿಯು ಬಹಳವಾಗಿ ಧ್ಯಾನಾರ್ಹವಾಗಿರುವ ಸ್ತೋತ್ರದಿಂದ ದೇವತೆಗಳನ್ನು ಪೂಜಿಸಲಿ ಎಂದು ಆಶಂಸಿಸಿದೆ.

**ಅಸ್ರೇಧತಾ—ಅಕ್ಷೀಣೇನ ಪ್ರಭೂತೇನ** ಕ್ಷಯವನ್ನು ಅಂದರೆ ಕಡಿಮೆಯಾಗಿರುವ ಸ್ಥಿತಿಯನ್ನು ಹೊಂದದಿರುವ ಕಾರಣ ಅತಿಶಯವಾದುದು ಎಂಬ ಅರ್ಥವನ್ನು ವರ್ಣಿಸಿದೆ.

**ಮನ್ಮನಾ**—ಇಲ್ಲಿ **ಮಂತವ್ಯೇನ ಸ್ತೋತ್ರೇಣ** ಧ್ಯಾನಮಾಡಲು ಅರ್ಹವಾದ ಸ್ತುತಿಯಿಂದ ಎಂಬ ಅರ್ಥವನ್ನು ವರ್ಣಿಸಿದೆ.

ಸ್ತುತ್ಯವಾದ, ಪೂಜ್ಯವಾದ ಎಂಬರ್ಥಗಳಲ್ಲಿ ಈ ಪದದ ಪ್ರಯೋಗವಿದೆ. ಋ. ಸಂ. ೧-೨೬-೨ ; ೧-೧೨೭-೨ ; ೧-೧೫೧-೮ ; ಇತ್ಯಾದ್ಯನೇಕ ಋಕ್ಕುಗಳಲ್ಲಿ **ಮನ್ಮನಾ, ಮನ್ಮಭಿಃ** ಎಂಬ ಪದಗಳಿಗೆ ಶ್ರೇಷ್ಠವಾದ ಮತ್ತು ಸ್ತುತ್ಯರ್ಹವಾದ ಮನಃಪ್ರವೃತ್ತಿಯೆಂದರ್ಥವಾಗುತ್ತದೆ. ನಿರುಕ್ತಕಾರರು ಮನ್ಮಶಬ್ದದ ಪ್ರಯೋಗವಿರುವ ಮೂರು ಋಕ್ಕುಗಳನ್ನು ಉದಾಹರಿಸಿದ್ದಾರೆ. ಮೊದಲನೆಯದಾಗಿ,

**ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।**
**ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥**
(ಋ. ಸಂ. ೧-೧೬೨-೭)

ಎಂಬ ಋಕ್ಕಿನಲ್ಲಿ **ಮನ್ಮ** ಶಬ್ದಕ್ಕೆ ನಿರುಕ್ತಕಾರರು ಮಂತ್ರವೆಂದರ್ಥಮಾಡಿದ್ದಾರೆ. (ನಿ. ೬-೨೨.) ಮನನೀಯವಾದ ಎಂದರೆ ಧ್ಯಾನಾರ್ಹವಾದ ಮಂತ್ರವೆಂದರ್ಥ. ಸಾಯಣರು ಮನನೀಯವಾದ ಫಲವೆಂದರ್ಥ ಮಾಡಿದ್ದಾರೆ. ಎರಡನೆಯದಾಗಿ,

**ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ ।**
**ಮನ್ಮಾನಿ ಧೀಭಿರುತ ಯಜ್ಞಮೃಂಧನ್ ದೇವತ್ರಾ ಚ ಕೃಣುಹ್ಯಧ್ವರಂ ನಃ ॥**
(ಋ. ಸಂ. ೧೦-೧೧೦-೨)

ಎಂಬಲ್ಲಿ **ಅಸ್ಮದಭಿಪ್ರೇತಾನಿ ಸ್ತೋತ್ರಾಣಿ** ಎಂದರ್ಥ ಮಾಡಿದ್ದಾರೆ. ಹೀಗೆಯೇ ೧-೧೫೯-೯ನೇ ಋಕ್ಕನ್ನೂ ಸಹ ಉದಾಹರಿಸಿ (ನಿ. ೧೯-೪೨) ಅಲ್ಲಿಯೂ ಅದೇ ಅರ್ಥವಾಗುತ್ತದೆಂದು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸ್ತುತ್ಯರ್ಹವಾದ ಮಂತ್ರದಿಂದ ಎಂದರ್ಥವಾಗುತ್ತದೆ.

ಈ ಶಬ್ದದ ಅವಯವಾರ್ಥವನ್ನೇ ಹೇಳಬೇಕಾದರೆ ಮನಸ್ಸಿನ ಇಚ್ಛೆಯೆಂದಭಿಪ್ರಾಯವಾಗುತ್ತದೆ. ಅನೇಕ ಸಂಹಿತಾ ವಾಕ್ಯಗಳಲ್ಲಿ ಈ ಪದದ ಪ್ರಯೋಗವು ಶ್ರೇಷ್ಠವಾದ ಅಭಿಲಾಷೆಯನ್ನು ತೋರಿಸುವ ವಸ್ತುವನ್ನು ನಿರ್ದೇಶಿಸುವುದಾಗಿದೆ. ಈ ಆದೃತವಾದ ವಸ್ತುವು ಯಜ್ಞಫಲವಾಗಬಹುದು ; ಸ್ತುತಿಯಾಗಬಹುದು ; ಹವಿಸ್ಸಾಗಬಹುದು. **ಅಗ್ನಿಃ ಪ್ರತ್ನೇನ ಮನ್ಮನಾ** (ಐ. ಬ್ರಾ. ೧-೪) ಇತ್ಯಾದಿ ವಾಕ್ಯಗಳಲ್ಲೂ ಸಹ ಈ ಪದದ ಅತಿಶಯಿತವಾದ ಅರ್ಥವನ್ನು ಗಮನಿಸಬಹುದು.

ವ್ಯಾಕರಣಪ್ರಕ್ರಿಯಾ

**ಅದ್ಯ**—ಅಸ್ಮಿನ್ ಅಹನಿ ಅದ್ಯ. **ಸದ್ಯಃ ಪರುತ್ ಪರಾರಿ**—(ಪಾ. ಸೂ. ೫-೩-೨೨) ಎಂಬುದರಿಂದ ಇದಂ ಶಬ್ದಕ್ಕೆ ಅಶ್ ಭಾವವೂ ದ್ಯಪ್ರತ್ಯಯವೂ ನಿಪಾತಿತವಾಗಿದೆ. ಇದರಿಂದಲೇ ಅಂತೋದಾತ್ತವಾಗುತ್ತದೆ.

**ರರಿಮ**—ರಾ ದಾನೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಉತ್ತಮಪುರುಷಬಹುವಚನದ ಮಸಿಗೆ ಮಾದೇಶ. ಕ್ರಾದಿನಿಯಮದಿಂದ ಅದಕ್ಕೆ ಇಡಾಗಮ ಬರುತ್ತದೆ. **ಅಸಂಯೋಗಾಲ್ಲಿಟ್‌ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ವವಿರುವುದರಿಂದ ಅದು ಪರವಾದಾಗ **ಆತೋಲೋಪ ಇಟಿಚ** (ಪಾ. ೬-೪-೬೪) ಎಂಬುದರಿಂದ ಧಾತುವಿನ

ಆಕಾರಕ್ಕೆ ಲೋಪ. ರರಿಮ ಎಂದು ರೂಪವಾಗುತ್ತದೆ. ಹಿ ಎಂಬುದರ ಸಂಬಂಧವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ. **ಆಗಮಾ ಅನುದಾತ್ತಾಃ** ಎಂಬ ವಚನದಿಂದ ಇಡಾಗಮು ಅನುದಾತ್ತವಾಗುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಉತ್ತಾನಹಸ್ತಾಃ**—**ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಉಪಸದ್ಯ**—ಉಪ ಎಂಬುದು ಉಪಸರ್ಗ. ಷದಲ್ಲ ವಿಶರಣಗತ್ಯವಸಾದನೇಷು ಧಾತು. ಇದಕ್ಕೆ ಕ್ತ್ವಾ ಪ್ರತ್ಯಯ ಬಂದಾಗ **ಸಮಾಸೇನಞ್ಪೂ**— (ಪಾ. ಸೂ. ೩-೧-೩೭) ಎಂಬುದರಿಂದ ಲ್ಯಬಾದೇಶ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯಜಿಷ್ಠೇನ**—ಯಜ ಧಾತುವಿಗೆ ತೃಚ್ ಬಂದಾಗ ಅದಕ್ಕೆ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ತೃಚಿಗೆ ಲೋಪ. ನಿತ್ಸ್ವರದಿಂದ ಆದ್ಯುದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ.

**ಯಕ್ಷಿ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ವ್ರಶ್ಚಭ್ರಸ್ಜಸೃಜ**—(ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷತ್ವ. ಸಕಾರ ಪರವಾದುದರಿಂದ **ಷಢೋಃಕಃಸಿ** (ಪಾ. ಸೂ. ೮-೨-೪೧) ಎಂಬುದರಿಂದ ಷಕಾರಕ್ಕೆ ಕಕಾರಾದೇಶ. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಯಕ್ಷಿ ಎಂದು ರೂಪವಾಗುತ್ತದೆ. ಸಿಪಿಗೆ ಛಾಂದಸವಾಗಿ ಹಿ ಆದೇಶ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಅಸ್ರೇಧತಾ**—ಸ್ರಿಧಧಾತುವು ಕ್ಷಯಾರ್ಥದಲ್ಲಿ ಪ್ರಯುಕ್ತವಾಗಿದೆ. ಲಿಟಗೆ ಶತ್ರಾದೇಶ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪದೆಗೆ ಗುಣ. ನ ಸ್ರೇಧತ್ ಅಸ್ರೇಧತ್ ತೇನ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

---

ಸಂಹಿತಾಪಾಠಃ

**ತ್ವದ್ಧಿ ಪುತ್ರ ಸಹಸೋ ವಿ ಪೂರ್ವೀರ್ದೇವಸ್ಯ ಯಂತ್ಯೂತಯೋ ವಿ ವಾಜಾಃ ।**
**ತ್ವಂ ದೇಹಿ ಸಹಸ್ರಿಣಂ ರಯಿಂ ನೋಽದ್ರೋಘೇಣ ವಚಸಾ ಸತ್ಯಮಗ್ನೇ ॥**

ಪದಪಾಠಃ

**ತ್ವತ್ । ಹಿ । ಪುತ್ರ । ಸಹಸಃ । ವಿ । ಪೂರ್ವೀಃ । ದೇವಸ್ಯ । ಯಂತಿ । ಊತಯಃ । ವಿ । ವಾಜಾಃ ।**
**ತ್ವಂ । ದೇಹಿ । ಸಹಸ್ರಿಣಂ । ರಯಿಂ । ನಃ । ಅದ್ರೋಘೇಣ । ವಚಸಾ । ಸತ್ಯಂ । ಅಗ್ನೇ ॥ ೬ ॥**

ಸಾಯಣಭಾಷ್ಯಂ

**ಸಹಸಃ ಪುತ್ರ ಬಲಸ್ಯ ಪುತ್ರ ಹೇ ಅಗ್ನೇ ದೇವಸ್ಯ ದೇವನಶೀಲಸ್ಯ ಕರ್ಮಕರಣಪ್ರವೃತ್ತಸ್ಯ ಯಜಮಾನಸ್ಯ ತ್ವತ್ ತ್ವತ್ತಃ ಸಕಾಶಾತ್ಪೂರ್ವೀಃ ಪ್ರಭೂತಾ ಊತಯೋ ವಿಘ್ನಪರಿಹಾರೇಣ ಕರ್ಮ-ಪರಿಪಾಲನಾದಿರೂಪಾ ರಕ್ಷಾ ವಿ ಯಂತಿ ಹಿ । ವಿವಿಧಂ ಗಚ್ಛಂತಿ ಖಲು । ತಮಿಮಂ ಯಜಮಾನಂ ಪ್ರಾಪ್ನುವಂತಿ । ತಥಾ ವಾಜಾ ಅನ್ನಾನಿ ವಿಯಂತಿ । ಏನಂ ಯಜಮಾನಂ ಪ್ರಾಪ್ನುವಂತಿ । ಕಿಂಚ ಹೇ ಅಗ್ನೇ ತ್ವಂ ಸಹಸ್ರಿಣಂ ಸಹಸ್ರಸಂಖ್ಯಾಕಂ ರಯಿಂ ಧನಂ ನೋಽಸ್ಮಭ್ಯಂ ದೇಹಿ । ತಥಾದ್ರೋಘೇಣ ದ್ರೋಹರಹಿತೇನ ಪಾಪಶೂನ್ಯೇನ ವಚಸಾ ವಾಕ್ಯೇನ ಯುಕ್ತಂ ಸತ್ಯಂ ಸತ್ಯಶೀಲಂ ಸನ್ಮಾರ್ಗೇ ಪ್ರವರ್ತ-ಮಾನಂ ಪುತ್ರಂ ಚ ದೇಹಿ । ಪ್ರಯಚ್ಛ ॥ ತ್ವತ್ । ಯುಷ್ಮಚ್ಛಬ್ದಸ್ಯ ಪಂಚಮ್ಯೇಕವಚನೇ ತ್ವಾದೇಶಃ । ಙಸೇರೇಕವಚನಸ್ಯ ಚ । ಪಾ. ೭-೧-೩೨ । ಇತ್ಯದಾದೇಶಃ । ಏಕಾದೇಶಸ್ವರಃ । ಪುತ್ರ ಸಹಸಃ । ಪರಮಪಿ-ಛಂದಸೀತಿ ಪರಾಂಗವದ್ಭಾವಾದ್ದ್ವಯೋಃ ಸರ್ವಾನುದಾತ್ತತ್ವಂ । ದೇಹಿ । ಡುದಾಞ್ ದಾನ ಇತ್ಯಸ್ಯ ಲೋಟಿ ಘ್ವಸೋರೇದ್ಧಾವಿತಿ ಧಾತೋರೇತ್ವಮಭ್ಯಾಸಲೋಪಶ್ಚ । ನಿಘಾತಃ । ಅದ್ರೋಘೇಣ । ದ್ರುಹ ಜಿಘಾಂಸಾಯಾಂ । ಘಞ್ । ದ್ರೋಘಃ । ಘಕಾರಶ್ಛಾಂದಸಃ । ನಞ್ಸುಭ್ಯಾಮಿತ್ಯುತ್ತರಪದಾಂತೋ-ದಾತ್ತತ್ವಂ ॥**

ಪ್ರತಿಪದಾರ್ಥ

**ಸಹಸಃ ಪುತ್ರ**—ಬಲದ ಪುತ್ರನಾದ । **(ಹೇ) ಅಗ್ನೇ**—ಎಲೈ ಅಗ್ನಿಯೇ । **ದೇವಸ್ಯ**—ಕರ್ಮಗಳನು ಮಾಡುವುದರಲ್ಲಿ ಪ್ರವೃತ್ತನಾದ ಯಜಮಾನನಿಗೆ । **ತ್ವತ್**—ನಿನ್ನಿಂದ । **ಪೂರ್ವೀಃ**—ಹೆಚ್ಚಾದ (ನಾನಾವಿಧವಾದ) । **ಊತಯಃ**—ಕರ್ಮಪರಿಪಾಲನರೂಪರಕ್ಷಣಕರ್ಮಗಳು । **ವಿ ಯಂತಿ ಹಿ**—ವಿವಿಧರೂಪವಾಗಿ ಪ್ರಾಪ್ತವಾಗುತ್ತವೆ ಯಷ್ಟೆ । **(ತಥಾ**—ಹಾಗೆಯೇ) । **ವಾಜಾಃ**—ಅನ್ನಗಳೂ । **ವಿ(ಯಂತಿ)**—ಪ್ರಾಪ್ತವಾಗುತ್ತವೆ; (ಮತ್ತು) । **(ಹೇ ಅಗ್ನೇ**—ಎಲೈ ಅಗ್ನಿಯೇ) । **ತ್ವಂ**—ನೀನು। **ಸಹಸ್ರಿಣಂ**—ಸಹಸ್ರ ಸಂಖ್ಯಾಕವಾದ । **ರಯಿಂ**—ಧನವನ್ನು। **ನಃ**—ನಮಗೆ । **ದೇಹಿ**—ಕೊಡು; (ಅದೇ ರೀತಿ)। **ಅದ್ರೋಘೇಣ**—ದ್ರೋಹ (ಪಾಪ) ರಹಿತವಾದ । **ವಚಸಾ**—ವಾಕ್ಯದಿಂದ ಯುಕ್ತನೂ । **ಸತ್ಯಂ**—ಸತ್ಯಶೀಲನೂ (ಆದ ಪುತ್ರನನ್ನೂ) । **(ದೇಹಿ**—ಅನುಗ್ರಹಿಸು) ॥

ಭಾವಾರ್ಥ

ಎಲೈ ಬಲಪುತ್ರನಾದ ಅಗ್ನಿಯೇ, ನಿನ್ನ ಉದ್ದಿಶ್ಯಕವಾದ ಕರ್ಮಗಳನ್ನಾಚರಿಸುವ ಯಜಮಾನನಿಗೆ ನೀನ್ನ ಬಹುವಿಧವಾಗಿ ಯಾಗಪಾಲನಾದಿರಕ್ಷಣೆಗಳನ್ನು ಮಾಡುತ್ತೀಯಷ್ಟೇ. ಅದೇ ರೀತಿ ನಮಗೂ ಸಹಸ್ರಸಂಖ್ಯಾಕ ಧನವನ್ನೂ ಮತ್ತು ದ್ರೋಹಾದಿರಹಿತವಾದ ಭಾಷೆಯುಳ್ಳವನೂ, ಸನ್ಮಾರ್ಗಗಾಮಿಯೂ ಆದ ಪುತ್ರನನ್ನೂ ಅನುಗ್ರಹಿಸು.

English Translation

From you, verily, son of strength, many and various benefactions and various kinds of food devolve upon the devout (worshipper) : grant us, AGNI, infinite wealth; and (a son) observant of truth, with speech devoid of guile.

ವಿಶೇಷವಿಷಯಗಳು

**ಸಹಸಃ ಪುತ್ರಃ**—ಬಲಪ್ರಯೋಗಪೂರ್ವಕವಾಗಿ ಮಥನಶಕ್ತಿಯಿಂದ ಉತ್ಪನ್ನನಾದುದರಿಂದ ಅಗ್ನಿಗೆ **ಸಹಸಸ್ಪುತ್ರಃ, ಸಹಸಃ ಸೂನುಃ** ಇತ್ಯಾದಿಯಾದ ವಿಶೇಷಣಗಳಿವೆ.

**ಅಯಂ ಹಿ ದ್ರವಿಣೋದೋಽಗ್ನಿರಯಂ ದಾತಾ ಬಲಸ್ಯ ಹಿ |**
**ಜಾಯತೇ ಚ ಬಲೇನಾಯಂ ಮಥ್ಯಕೃತ್ಯೈಷಿಭಿರಧ್ವರೇ ||**

(ಬೃ. ದೇ. ೩–೬೧ ; ೩–೬೫)

ಬಲದಾತನಾದುದರಿಂದಲೂ, ಬಲದಿಂದ ಉತ್ಪನ್ನನಾದುದರಿಂದಲೂ ಅಗ್ನಿಗೆ ಈ ವಿಶೇಷಣವೆಂದು ಬೃಹದ್ದೇವತಾವಾಕ್ಯಗಳಲ್ಲಿ ಪ್ರತಿಪಾದಿಸಿದೆ. ಇದಕ್ಕೆ ಉದಾಹರಣೆಯಾಗಿ,

**ಅಸ್ಮಾಕಮಗ್ನೇ ಅಧ್ವರಂ ಜುಷಸ್ವ ಸಹಸಃ ಸೂನೋ ತ್ರಿಷಧಸ್ಥ ಹವ್ಯಂ |**

(ಋ. ಸಂ. ೫–೪–೮)

**ಯಸ್ತೇ ಅಗ್ನೇ ಸುಮತಿಂ ಮರ್ತೋ ಅಕ್ಷತ್ಸಹಸಃ ಸೂನೋ ಅತಿ ಸ ಪ್ರ ಶೃಣ್ವೇ ||**

(ಋ. ಸಂ. ೧೦–೧೧–೭)

ಇತ್ಯಾದ್ಯನೇಕ ಋಕ್ಕುಗಳಲ್ಲೆಲ್ಲಾ ಅಗ್ನಿಯ ಈ ಗುಣವನ್ನು ಹೇಳಿ ವರ್ಣಿಸಿದೆ.

**ದೇವಸ್ಯ—ದೇವನಶೀಲಸ್ಯ ಕರ್ಮಕರಣಪ್ರವೃತ್ತಸ್ಯ ಯಜಮಾನಸ್ಯ |** ದೇವಶಬ್ದವು **ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ** (ನಿ. ೭–೧೫) ಎಂದು ವ್ಯಾಖ್ಯಾತವಾಗಿದೆ. ಇದರ ವಿವರಣೆಯನ್ನು ಹಿಂದಿನ ಋಕ್ಕಿನಲ್ಲಿ ವಿವರಿಸಿದೆ. ಇಲ್ಲಿ ದಿವುಧಾತುವಿನಿಂದ ನಿಷ್ಪನ್ನವಾದ ದೇವಶಬ್ದಕ್ಕೆ ಪ್ರಕಾಶವುಳ್ಳ ಸ್ವಭಾವದಿಂದ ಇರುವವನೆಂದು ಅರ್ಥಮಾಡಿ ಯಜ್ಞಕರ್ಮದಲ್ಲಿ ಪ್ರವೃತ್ತನಾದ ಯಜಮಾನನೆಂದು ಅರ್ಥವನ್ನು ಹೇಳಿದೆ.

**ಪೂರ್ವೀಃ ಊತಯಃ—ಪ್ರಭೂತಾಃ ವಿಘ್ನಪರಿಹಾರೇಣ ಕರ್ಮಪರಿಪಾಲನಾದಿರೂಪಾಃ ರಕ್ಷಾಃ |** ಪೂರ್ವೀ ಎಂಬ ಪದಕ್ಕೆ ಪ್ರಭೂತ ಅಥವಾ ಅತಿಶಯವೆಂದು ಅರ್ಥವನ್ನು ವಿವರಿಸಿ, (ಬಲದಿಂದ ಉತ್ಪನ್ನನಾಗಿರುವ) ಸಹಸಸ್ಪುತ್ರನಾದ ಅಗ್ನಿಯ ಅನುಗ್ರಹದಿಂದ ಯಜಮಾನನು ಆಚರಿಸುವ ಯಜ್ಞದ ಕರ್ಮಗಳು ಯಾವ ವಿಧವಾದ ವಿಘ್ನವೂ ಬರದಂತೆ ಅತಿಶಯವಾದ ರಕ್ಷಣೆಗಳಿಂದ ನೆರವೇರುತ್ತವೆ ಎಂದು ಅಗ್ನಿಯ ಮಾಹಾತ್ಮ್ಯವನ್ನು ವ್ಯಕ್ತಗೊಳಿಸಿದೆ. ಈ ಅಭಿಪ್ರಾಯದಿಂದಲೇ ರಕ್ಷಾಃ ವಿಯಂತಿ ಎಂಬ ಪದಕ್ಕೆ **ವಿವಿಧಂ ಗಚ್ಛಂತಿ ತಮಿಮಂ ಯಜಮಾನಂ ಪ್ರಾಪ್ನುವಂತಿ** ಎಂಬ ವಾಕ್ಯವು **ಅನ್ನಾನಿ ಯಜಮಾನಂ ಪ್ರಾಪ್ನುವಂತಿ** ಯಜಮಾನನನ್ನು ಅಗ್ನಿಯ ಅನುಗ್ರಹದಿಂದ ಪ್ರಭೂತವಾದ ಅನ್ನವೂ ಹೊಂದುವುದು ಎಂದು ಅರ್ಥವನ್ನು ವರ್ಣಿಸಿದೆ.

**ಸಹಸ್ರಿಣಂ ರಯಿಂ ನಃ ದೇಹಿ**—ಅಗ್ನಿಯು ಸಹಸ್ರ (ಸಾವಿರ) ಸಂಖ್ಯೆಯುಳ್ಳ ಧನವನ್ನು ಯಜ್ಞಮಾಡುವ ನಮಗೆ ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

**ಅದ್ರೋಘೇಣ ವಚಸಾ ಸತ್ಯಂ ದೇಹಿ—ದ್ರೋಹರಹಿತೇನ ಪಾಪಶೂನ್ಯೇನ ವಾಕ್ಯೇನ ಯುಕ್ತಂ ಸತ್ಯಶೀಲಂ ಸನ್ಮಾರ್ಗೇ ಪ್ರವರ್ತಮಾನಂ ಪುತ್ರಂ ಚ ಪ್ರಯಚ್ಛ |** (ಇತರರಿಗೆ) ಸರ್ವರಿಗೂ ಕೆಟ್ಟದ್ದನ್ನು ಹಾರೈಸದೆ ಇರುವ ವಾಕ್ಕುಗಳುಳ್ಳವನಾದ, ಮತ್ತು ಸತ್ಯವಾದ ಮಾತುಗಳನ್ನು ಹೇಳುವ, ಸತ್ಪುರುಷರ ಮಾರ್ಗದಲ್ಲಿಯೇ ಇರುವ ಪುತ್ರನು ಯಜಮಾನನಿಗೆ ಉತ್ಪನ್ನನಾಗಬೇಕೆಂದು ಅಗ್ನಿಯ ಅನುಗ್ರಹವನ್ನು ಪ್ರಾರ್ಥಿಸಿದೆ.

**ಸತ್ಯಂ**—ಈ ಪದವು ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ. ಮತ್ತು **ಸತ್ಸು ತಾಯತೇ ಸತ್ಪ್ರಭವಂ ಭವತೀತಿ ವಾ** (ನಿ. ೩-೧೩) ಎಂದು ವಿವೃತವಾಗಿದೆ. ಇಲ್ಲಿ ಸತ್ಯಶೀಲನಾದ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

**ತ್ವತ್** — ಯುಷ್ಮದ್ ಶಬ್ದ. ಪಂಚಮೀಏಕವಚನಪರವಾದಾಗ **ತ್ವಮಾವೇಕವಚನೇ** ಎಂಬುದರಿಂದ ಮಪರ್ಯಂತಕ್ಕೆ ತ್ವಾದೇಶ. **ಏಕವಚನಸ್ಯಚ** (ಪಾ. ಸೂ. ೭-೧-೩೨) ಎಂಬುದರಿಂದ ವಿಭಕ್ತಿಗೆ ಅತ್ ಆದೇಶ. ಅದಿಗೆ ಲೋಪ. ಪರರೂಪ. **ಏಕಾದೇಶಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶವು ಉದಾತ್ತವಾಗುತ್ತದೆ.

**ಪುತ್ರ ಸಹಸಃ**—ಷಷ್ಠ್ಯಂತಶಬ್ದಕ್ಕೆ ಪರಾಂಗವದ್ಭಾವವು ಎಲ್ಲಾ ಕಡೆಯಲ್ಲಿಯೂ ವಿಹಿತವಾಗಿರುತ್ತದೆ. **ಪರಮಪಿ ಛಂದಸಿ** ಎಂಬ ವಚನದಿಂದ ಆಮಂತ್ರಿತಕ್ಕೆ ಪರವಾಗಿ ಷಷ್ಠ್ಯಂತವಿದ್ದರೂ ಪರಾಂಗಭಾವದಂತೆಯೇ ಆಗುವುದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮–೧–೧೯) ಎಂಬುದರಿಂದ ಸಮುದಾಯಕ್ಕೆ ಅನುದಾತ್ತಸ್ವರಬರುತ್ತದೆ.

**ಯಂತಿ**—ಇಣ್ ಗತೌ ಧಾತು. ಲಟ್‌ಪ್ರಥಮಪುರುಷ ಬಹುವಚನಾಂತರೂಪ. **ಹಿಚ** (ಪಾ. ಸೂ. ೮-೧–೩೪ ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ದೇಹಿ**—ಡುದಾಞ್ ದಾನೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಸೇರ್ಹ್ಯಪಿಚ್ಚ** ಎಂಬುದರಿಂದ ಹಿ ಆದೇಶ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬಂದಾಗ **ಘ್ವಸೋರೇದ್ಧಾವಭ್ಯಾಸಲೋಪಶ್ಚ** (ಪಾ.ಸೂ ೬-೪–೧೧೯) ಎಂಬುದರಿಂದ ಅಭ್ಯಾಸಕ್ಕೆ ಲೋಪ. ಧಾತುವಿನ ಅಕಾರಕ್ಕೆ ಏತ್ವ. ದೇಹಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅದ್ರೋಘೇಣ**—ದ್ರುಹ ಜಿಘಾಂಸಾಯಾಂ ಧಾತು. ಘಞ್ ಪ್ರತ್ಯಯ. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಧಾತು ಹಕಾರಕ್ಕೆ ಛಾಂದಸವಾಗಿ ಘಕಾರಾದೇಶ ಬರುತ್ತದೆ. ನ ವಿದ್ಯತೇ ದ್ರೋಘಃ ಯಸ್ಯ ಸಃ ಅದ್ರೋಘಃ **ನಞ್‌ಸುಭ್ಯಾಂ** (ಪಾ. ಸೂ. ೬–೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

---

ಸಂಹಿತಾಪಾಠಃ

**ತುಭ್ಯಂ ದಕ್ಷ ಕವಿಕ್ರತೋ ಯಾನೀಮಾ ದೇವ ಮರ್ತಾಸೋ ಅಧ್ವರೇ ಅಕರ್ಮ ।**
**ತ್ವಂ ವಿಶ್ವಸ್ಯ ಸುರಥಸ್ಯ ಬೋಧಿ ಸರ್ವಂ ತದಗ್ನೇ ಅಮೃತ ಸ್ವದೇಹ ॥ ೭ ॥**

ಪದಪಾಠಃ

**ತುಭ್ಯಂ । ದಕ್ಷ । ಕವಿಕ್ರತೋ ಇತಿ ಕವಿಽಕ್ರತೋ । ಯಾನಿ । ಇಮಾ । ದೇವ । ಮರ್ತಾಸಃ । ಅಧ್ವರೇ । ಅಕರ್ಮ ।**
**ತ್ವಂ । ವಿಶ್ವಸ್ಯ । ಸುಽರಥಸ್ಯ । ಬೋಧಿ । ಸರ್ವಂ । ತತ್ । ಅಗ್ನೇ । ಅಮೃತ । ಸ್ವದ । ಇಹ ॥ ೭ ॥**

ಸಾಯಣಭಾಷ್ಯಂ

ದಕ್ಷ ಸಮೃದ್ಧತಯಾ ಸಾಮರ್ಥ್ಯೋಽಪೇತ ಕವಿಕ್ರತೋಽತೀಂದ್ರಿಯವಿಷಯಪ್ರಜ್ಞೋಪೇತ ಸರ್ವಜ್ಞ ದೇವ ದೀಪ್ಯಮಾನ ಹೇ ಅಗ್ನೇ ಮರ್ತಾಸೋ ಯಜಮಾನಾ ವಯಂ ತುಭ್ಯಂ ತ್ವದರ್ಥಂ ಯಾನೀಮಾ ಯಾನೀಮೋಮಾನಿ ಹವೀಂಷ್ಯಧ್ವರೇ ಯಜ್ಞೇಽಕರ್ಮ । ಹವಿಸ್ತ್ಯಾಗಮಕಾರ್ಷ್ಮ । ತ್ವಂ ಚ ಸುರಥಸ್ಯ ಶೋಭನಯಾನೋಪೇತಸ್ಯ ವಿಶ್ವಸ್ಯ ಸರ್ವಸ್ಯ ಯಜಮಾನಸ್ಯ ಬೋಧಿ । ಗೋಪಾಯಿತಾ ಭವಾಮೀತಿ ಬುಧ್ಯಸ್ವ । ಹೇ ಅಮೃತ ಮರಣಧರ್ಮರಹಿತಾಗ್ನ ಇಹಾಸ್ಮಿನ್ಕರ್ಮಣ್ಯಸ್ಮಾಭಿರ್ದತ್ತಂ ತತ್ಸರ್ವಂ ಹವಿಃ ಸ್ವದ । ಆಸ್ವಾದಯ ॥ ಅಕರ್ಮ । ಡುಕೃಞ್ ಕರಣ ಇತ್ಯಸ್ಯ ಲಙಿ ಛಂದಸ್ಯುಭಯಥೇತಿ ಮಸ ಆರ್ಧಧಾತುಕತ್ವೇನ ಙಿತ್ವಾಭಾವಾದ್ಗುಣಃ । ಯದ್ವೃತ್ತಯೋಗಾದನಿಘಾತಃ । ಬೋಧಿ । ಬುಧ ಅವಗಮನೇ । ಛಂದಸಿ ಲುಙ್ಲಙ್ಲಿಟ ಇತಿ ಲೋಡರ್ಥೇ ಲುಙ್ । ತಿಙಾಂ ತಿಙೋ ಭವಂತೀತಿ ಸಿಪಸ್ತಾದೇಶಃ । ದೀಪಜನಬುಧೇತ್ಯಾದಿನಾ ಕರ್ತರಿ ಚಿಣ್ । ಚಿಣೋ ಲುಗಿತಿ ತಪ್ರತ್ಯಯಸ್ಯ ಲೋಪಃ । ಅಡಭಾವಶ್ಛಾಂದಸಃ ಸ್ವದ । ಸ್ವದ ಆಸ್ವಾದನೇ । ಅಂತರ್ಭಾವಿತಣ್ಯರ್ಥಃ । ಲೋಟಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**ದಕ್ಷ**—ಸಮರ್ಥನೂ, । **ಕವಿಕ್ರತೋ**—ಅತೀಂದ್ರಿಯಜ್ಞಾನಯುಕ್ತನೂ, । **ದೇವ**—ದೇದೀಪ್ಯಮಾನನೂ ಆದ । **(ಹೇ) ಅಗ್ನೇ**—ಎಲೈ ಅಗ್ನಿಯೇ । **ಮರ್ತಾಸಃ**—ಮರ್ತ್ಯರಾದ ನಾವು (ಯಜಮಾನರು) । **ತುಭ್ಯಂ**—ನಿನಗೋಸ್ಕರ । **ಯಾನಿ ಇಮಾ**—ಯಾವ ಈ ಹವಿರಾದಿಗಳನ್ನು । **ಅಧ್ವರೇ**—ಯಜ್ಞದಲ್ಲಿ । **ಅಕರ್ಮ**—ಅರ್ಪಣೆ ಮಾಡಿದೆವೋ । **ತತ್ ಸರ್ವಂ**—ಅದೆಲ್ಲವನ್ನೂ । **(ಹೇ ) ಅಮೃತ**—ಮರಣರಹಿತನಾದ ಎಲೈ ಅಗ್ನಿಯೇ । **ಇಹ**—ಈ ಕರ್ಮದಲ್ಲಿ । **ಸ್ವದ**—ಆಸ್ವಾದಿಸು (ಮತ್ತು) । **ತ್ವಂ**—ನೀನು । **ಸುರಥಸ್ಯ**—(ಯಜ್ಞಸಹಾಯಕವಾದ) ಒಳ್ಳೆಯ ರಥವಿಶಿಷ್ಟರಾದ । **ವಿಶ್ವಸ್ಯ**—ಎಲ್ಲಾ ಯಾಗಕರ್ತೃಗಳ । **ಬೋಧಿ**—(ರಕ್ಷಕನು ನಾನಾಗುತ್ತೇನೆಂದು) ತಿಳಿವಳಿಕೆಯುಳ್ಳವನಾಗು.

ಭಾವಾರ್ಥ

ಸಮರ್ಥನೂ, ಅತೀಂದ್ರಿಯಜ್ಞನೂ, ದೇದೀಪ್ಯಮಾನನೂ ಆದ ಎಲೈ ಅಗ್ನಿಯೇ, ಮರ್ತ್ಯರಾದ (ನಮ್ಮಿಂದ) ಯಜಮಾನರಿಂದ ಯಾಗಗಳಲ್ಲಿ ಹವಿರಾದಿಗಳು ಅರ್ಪಿತವಾಗುತ್ತವೆ; ಮರಣರಹಿತನಾದ ನೀನೂ ಕೂಡ ಯಾಗಸಹಾಯಕವಾದ ರಥವಿಶಿಷ್ಟರಾದ ಎಲ್ಲಾ ಯಾಗಕರ್ತೃಗಳಿಗೂ ರಕ್ಷಕನಾಗುತ್ತೇನೆಂಬ ಮನಸ್ಸುಳ್ಳವನಾಗಿ, ನಮ್ಮಿಂದ ಅರ್ಪಿತವಾದುದನ್ನೆಲ್ಲವನ್ನೂ ಸ್ವೀಕರಿಸು.

## English Translation

Divine (AGNI), mighty and omniscient, these (are the offerings) which we mortals present to you in the sacrifice : be cognizant of every respectable worshipper, and partake, immortal, of all (his offerings) on this occasion.

ವಿಶೇಷವಿಷಯಗಳು

**ದಕ್ಷ—ಸಮೃದ್ಧತಯಾ ಸಾಮರ್ಥ್ಯೋಪೇತ** । ದಕ್ಷಶಬ್ದವು (ನಿ.೩-೯) ಬಲನಾಮಗಳಲ್ಲಿ ಪಠಿತವಾಗಿದೆ. ಅಗ್ನಿಯು ಸರ್ವಪ್ರಕಾರದಿಂದಲೂ ಸರ್ವವಿಧವಾದ ಅತಿಶಯವನ್ನು ಉಂಟುಮಾಡುವ ಸನ್ನಿವೇಶಗಳಿಂದ ಯುಕ್ತನಾಗಿರುವನೆಂದೂ ಪ್ರಭೂತವಾದ ಸಾಮರ್ಥ್ಯದಿಂದ ಕೂಡಿರುವನೆಂದೂ ಅರ್ಥವನ್ನು ವರ್ಣಿಸಿದೆ.

**ಕವಿಕ್ರತೋ—ಅತೀಂದ್ರಿಯವಿಷಯಪ್ರಜ್ಞೋಪೇತ ಸರ್ವಜ್ಞ ।** ಕವಿಶಬ್ದವು **ಮೇಧಾವಿ**ನಾಮಗಳಲ್ಲಿ ಪ್ರಯುಕ್ತವಾಗಿದೆ. **ಕ್ರತು** ಶಬ್ದಕ್ಕೆ **ಕರ್ಮ ವಾ ಪ್ರಜ್ಞಾಂ ವಾ** ಎಂದು (ನಿ. ೨–೨೮) ಅರ್ಥಮಾಡಿದೆ. ಅಲ್ಲದೆ **ಕ್ರತು** ಶಬ್ದವು ಕರ್ಮನಾಮಗಳಲ್ಲಿ (ನಿ. ೩–೨) ಉಕ್ತವಾಗಿದೆ. ಪ್ರಜ್ಞಾನಾಮಗಳಲ್ಲಿಯೂ (ನಿ. ೩–೧೩) ಹೇಳಲ್ಪಟ್ಟದೆ. ಅಗ್ನಿಯು ಮೇಧಾವಿಯೂ ಪ್ರಜ್ಞಾವಂತನೂ ಆಗಿರುವನೆಂದು ನಿರುಕ್ತಕಾರರ ನಿರ್ವಚನದಿಂದ ಅರ್ಥವಾಗುವ ಕಾರಣ ಸಾಯಣರು ಈ ಅರ್ಥದಿಂದ ಅಗ್ನಿಯ ಪ್ರಭಾವವು ವ್ಯಕ್ತವಾಗುವುದಿಲ್ಲವಾಗಿ ಇಂದ್ರಿಯಗೋಚರವಾಗದಿರುವ ವಿಷಯಗಳನ್ನು ಅಗ್ನಿಯು ಸಾಕ್ಷಾತ್ಕರಿಸುವ ಜ್ಞಾನವುಳ್ಳವನೆಂದು ಅರ್ಥವನ್ನು ವರ್ಣಿಸಿದ್ದಾರೆ.

ಇದಲ್ಲದೆಈ ಪದವು ಅನೇಕಕಡೆಗಳಲ್ಲಿ ಅಗ್ನಿಗೆ ವಿಶೇಷಣವಾಗಿಯೂ ಕೆಲವೆಡೆಗಳಲ್ಲಿ ಸೋಮನಿಗೆ ವಿಶೇಷಣವಾಗಿಯೂ ಉಪಯೋಗಿಸ್ಪಟ್ಟಿದೆ. ಈ ವಿಶೇಷಣವು ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ಅಲೌಕಿಕವಾದ ಶಕ್ತಿಯನ್ನೂ ಪ್ರಜ್ಞೆಯನ್ನೂ ತೋರಿಸುತ್ತದೆ. ಇವರ ಗಂಭೀರವಾದ ಅರ್ಥವನ್ನರಿಯಬೇಕಾದರೆ ಕವಿಶಬ್ದಕ್ಕೂ, ಕ್ರತುಶಬ್ದಕ್ಕೂ ಇರತಕ್ಕ ನಿಷ್ಕೃಷ್ಟವಾದ ಅರ್ಥವನ್ನರಿಯಬೇಕು.

ಕವಿಶಬ್ದಕ್ಕೆ ಸಾಯಣರು ಎರಡು ವಿಧವಾಗಿ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ **"ಯೇ ದೇವಾ ಅನೂಚಾನಾಸ್ತೇ ಕವಯಃ"** ಎಂಬ ಶ್ರುತಿವಾಕ್ಯವನ್ನನುಸರಿಸಿ ವೇದಾಂಗಸಹಿತವಾದ ವೇದಾಧ್ಯಯನವನ್ನು ಮಾಡಿದ ಶಾಸ್ತ್ರಜ್ಞರೆಂದು ಒಂದು ವಿಧವಾಗಿಯೂ, ಎರಡನೆಯದಾಗಿ **ಕವಿಃ ಮನೀಷೀ** (ನಿ. ೩–೧೫) ಎಂಬ ನಿರುಕ್ತದ ವಾಕ್ಯವನ್ನುದಾಹರಿಸಿ, ಮೇಧಾವಿಯೆಂದು ಇನ್ನೊಂದು ವಿಧವಾಗಿಯೂ ಅರ್ಥಮಾಡಿದ್ದಾರೆ.

**ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ ।**

(ನಿ. ೧೨–೧೩)

ಎಂಬುದಾಗಿ ನಿರುಕ್ತಕಾರರು **ಕವಿ**ಶಬ್ದದ ನಿರ್ವಚನವನ್ನು ಹೇಳಿದ್ದಾರೆ. **ಕ್ರಮ್**ಧಾತುವಿನಿಂದ ನಿಷ್ಪನ್ನವಾಗಿ ಕ್ರಾಂತದರ್ಶನವುಳ್ಳವನೆಂದಾಗಬಹುದು. ಅಥವಾ **ಕವ್** ಧಾತುವಿನಿಂದ ನಿಷ್ಪನ್ನವಾಗಿ ಕಾಂತದರ್ಶನನೆಂದಾಗಬಹುದು. ಅಥವಾ **ಕು** ಧಾತುವಿನಿಂದ ನಿಷ್ಪನ್ನವಾಗಿ ಸ್ತುತಿಮಾಡತಕ್ಕ ಸ್ತೋತೃವೆಂದಾಗಬಹುದು ಎಂದು ನಿರುಕ್ತಕಾರರ ನಿರ್ವಚನವು ತೋರಿಸುತ್ತದೆ. ಕವಿಯ ಸ್ವರೂಪವೇನು ? ಕವಿಯ ಶಕ್ತಿಯೇನು ? ಯಾವ ಸ್ವರೂಪ ಮತ್ತು ಶಕ್ತಿಯನ್ನು ತಿಳಿಸಲು ಋಕ್ಸಂಹಿತೆಯಲ್ಲಿ **ಕವಿ**ಶಬ್ದದ ಪ್ರಯೋಗವಿದೆ ಎಂಬುದನ್ನು ತಿಳಿಯಬೇಕಾದುದು ಅವಶ್ಯಕವಾಗಿರುತ್ತದೆ.

**ಋಷಿ, ಸುಮೇಧ, ಧೀರ, ರೇಭ** ಎಂಬ ಪದಗಳು ಯಾವ ಸ್ವರೂಪವಿಶೇಷವನ್ನು ತೋರಿಸುವುವೋ **ಕವಿ**ಪದವೂ ಅದೇ ಶಕ್ತಿಯನ್ನು ಸೂಚಿಸಲು ಉಪಯುಕ್ತವಾಗಿದೆಯೆಂದು ಹೇಳಬಹುದು. ಭೂತಭವಿಷ್ಯದ್ವರ್ತಮಾನ ಕಾಲಗಳ ವ್ಯವಹಾರಗಳನ್ನೆಲ್ಲಾ ತಿಳಿಯತಕ್ಕ ಅಸಾಧಾರಣವಾದ ಶಕ್ತಿಯುಳ್ಳವನೇ **ಧೀರನು, ಋಷಿಯು.** ಅವನೇ **ಕವಿಯು.** ಈ ಶಕ್ತಿಯುಳ್ಳವನೇ ಸ್ತೋತ್ರರೂಪವಾದ ಕಾವ್ಯದ ಸೃಷ್ಟಿಗೂ ಅರ್ಹನಾಗಿರುವನು. ಆದುದರಿಂದ ಸ್ತುತಿಕಾರನಿಗೂ ಕವಿ, ರೇಭ ಇತ್ಯಾದಿ ಹೆಸರುಗಳಿರುವುವು. [ಲೌಕಿಕವಾದ ಸಾಹಿತ್ಯಗಳಲ್ಲೂ, ಗ್ರಂಥಗಳಲ್ಲೂ ಕವಿ, ಕಾವ್ಯ ಎಂಬ ಪದಗಳಿಗೆ ಕೊಂಚ ವ್ಯತ್ಯಸ್ತವಾದ ಅರ್ಥವಿರುವುದೆಂಬುದನ್ನು ಮುಂದೆ ಸಂದರ್ಭಾನುಸಾರವಾಗಿ ವಿವರಿಸಲಾಗುತ್ತದೆ]. ಕವಿಯ ನಿಜವಾದ ಸ್ವರೂಪವನ್ನು ತಿಳಿಸಲು ನಿರುಕ್ತಕಾರರು,

**ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।**
**ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ॥**

(ಋ. ಸಂ. ೫-೮೧-೨)

ಎಂಬ ಋಕ್ಕನ್ನುದಾಹರಿಸಿ ಇಲ್ಲಿ **ಸವಿತೃ**ವಿಗೆ ವಿಶೇಷಣವಾಗಿರುವ **ಕವಿ**ಶಬ್ದವು ಸವಿತೃವಿನ ಯಾವ ಸ್ವರೂಪವನ್ನು ತೋರಿಸುವುದೆಂದು ವಿವರಿಸಿದ್ದಾರೆ. ವಿಶ್ವದ ಸಕಲ ರೂಪಗಳನ್ನೂ ಪ್ರಕಾಶಪಡಿಸುವವನಾದುದರಿಂದ ಸವಿತೃವಿಗೆ ಈ ವಿಶೇಷಣವಿದೆಯೆಂದು ತಿಳಿಯುತ್ತದೆ. ಎಂದರೆ, ಗೂಢವಾಗಿ ಅಡಗಿ ಲೋಕದ ದೃಷ್ಟಿಗೆ ಗೋಚರವಾಗದಿರುವ ಅಂಶಗಳನ್ನು ತನ್ನ ಶಕ್ತಿಯಿಂದ ಪ್ರಕಾಶಿತವಾಗುವಂತೆ ಮಾಡಿ ಲೋಕದ ದೃಷ್ಟಿಗೆ ಬೀಳುವಂತೆ ಮಾಡುವ ಶಕ್ತಿಯಿದೆಯೆಂದರ್ಥ. ಇದೇ ಅರ್ಥದಲ್ಲಿಯೇ ಸ್ತೋತೃವಾದ ಸ್ತುತಿಕರ್ತನಿಗೂ ಸಹ **ಕವಿ**ಯೆಂಬ ಹೆಸರು ಪ್ರಸಿದ್ಧವಾಗಿದೆ. ಈ ಭಾವವು ಋಕ್ಸಂಹಿತೆಯಲ್ಲಿರುವ,

**ಬ್ರಹ್ಮಾ ಕೃಣೋತಿ ವರುಣೋ ಗಾತುವಿದಂ ತಮೀಮಹೇ ।**
**ವ್ಯೂರ್ಣೋತಿ ಹೃದಾ ಮತಿಂ ನವ್ಯೋ ಜಾಯತಾಮೃತಂ ವಿತ್ತಂ ಮೇ ಅಸ್ಯ ರೋದಸೀ ॥**

(ಋ. ಸಂ. ೧–೧೦೫-೧೫)

ಎಂಬ ಋಕ್ಕಿನಲ್ಲಿಯೂ ಹೀಗೆಯೇ ಇತರ ಋಕ್ಕುಗಳಲ್ಲಿಯೂ ಸೂಚಿತವಾಗಿದೆ. ಉದಾಹೃತವಾದ ಈ ಋಕ್ಕಿನಲ್ಲಿ **ವ್ಯೂರ್ಣೋತಿ** ಎಂಬುದಕ್ಕೆ **ಉಚ್ಚಾರಯತಿ, ಪ್ರಕಾಶಯತಿ** ಎಂದು ಸಾಯಣರು ಅರ್ಥಮಾಡಿದ್ದಾರೆ. **ಊರ್ಣುಞ್ ಆಚ್ಛಾದನೇ** ಮರೆಸು, ಹೊದ್ದಿಸು ಎಂಬರ್ಥದ **ಊರ್ಣು** ಧಾತುವು **ಊರ್ಣೋತಿ** ಎಂದಾಗುತ್ತದೆ. ಇಲ್ಲಿ ವಿ ಎಂಬ ಉಪಸರ್ಗದೊಡನೆ ಸೇರಿ ವಿಗತವಾದ ಆಚ್ಛಾದನೆ ಎಂದರೆ ಮರೆಯನ್ನು ತಪ್ಪಿಸುವುದು ಎಂದರ್ಥವನ್ನು ಕೊಡುತ್ತದೆ. ಪ್ರಕಾಶಪಡಿಸುವುದೆಂದು ತಾತ್ಪರ್ಯ. ಮಾನಸಿಕವಾದ ಸ್ತುತಿಯನ್ನು ಪ್ರಕಾಶಪಡಿಸುವುದೆಂದು ಸೃಷ್ಟಿಸಾಮರ್ಥ್ಯವೂ, ಗುಪ್ತವಾಗಿರುವ ಅಂಶವನ್ನು ಪ್ರಕಾಶಪಡಿಸಿ ತೋರಿಸುವ ಶಕ್ತಿಯೂ ಸಹ ಕವಿಯ ಅಥವಾ ಸ್ತುತಿಕರ್ತನ ವಿಶೇಷ ಗುಣವೆಂದು ಇದರಿಂದ ತಿಳಿಯುತ್ತದೆ. ಆದುದರಿಂದಲೇ ಸವಿತೃವಿಗೂ ಸ್ತುತಿಕರ್ತನಿಗೂ ಇರುವ ಸಮಾನವಾದ ಧರ್ಮವನ್ನು ತಿಳಿಸುವ **ಕವಿ**ಶಬ್ದವು ಇಬ್ಬರಿಗೂ ವಿಶೇಷಣವಾಗಿರುತ್ತದೆ. ಇದೇ **ಕವಿ**ಲಕ್ಷಣವನ್ನೂ **ಕವಿ**ಕೃತಿಯನ್ನೂ ವಿವರಿಸುತ್ತಾ, ಋಕ್ಸಂಹಿತೆಯಲ್ಲಿ,

**ಸಮಾನಂ ನೀಳಂ ವೃಷಣೋ ವಸಾನಾಃ ಸಂ ಜಗ್ಮಿರೇ ಮಹಿಷಾ ಅರ್ವತೀಭಿಃ ।**
**ಋತಸ್ಯ ಪದಂ ಕವಯೋ ನಿ ಪಾಂತಿ ಗುಹಾ ನಾಮಾನಿ ದಧಿರೇ ಪರಾಣಿ ।**

(ಋ. ಸಂ. ೧೦–೫–೨)

**ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ ।**
**ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ ॥**

(ಋ. ಸಂ. ೧೦-೭೧–೧)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಈ ಭಾವವು ವ್ಯಕ್ತವಾಗಿರುತ್ತದೆ. ಕವಿಗಳು ಋತದ ಪಥವನ್ನು ಪ್ರವೇಶಿಸಿ ಅತ್ಯಂತ ಗೂಢವಾದ ಹೃದಯದಲ್ಲಿ ಅತ್ಯುತ್ತಮವಾದ ರಹಸ್ಯದ ನಾಮಗಳನ್ನು ಧರಿಸಿದ್ದಾರೆ. ಮತ್ತು ಅವನ್ನು ಪ್ರಕಾಶಪಡಿಸಿ ಲೋಕಕ್ಕೆ ತಿಳಿಯುವಂತೆ ಮಾಡುತ್ತಾರೆ ಎಂದು ವರ್ಣಿತವಾಗಿದೆ. ಈ ಕವಿಯ ದರ್ಶನವೂ, ಪ್ರಕಾಶನರೂಪವಾದ ಕೃತಿಯೂ ಯಜ್ಞರೂಪವಾದ ಸಾಧನದಿಂದಲೇ ಸಾಧ್ಯವು.

**ಯಜ್ಞೇನ ವಾಚಃ ಪದವೀಯಮಾಯನ್ ತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ ।**
**ತಾಮಾಭೃತ್ಯಾ ವ್ಯದಧುಃ ಪುರುತ್ರಾ ತಾಂ ಸಪ್ತ ರೇಭಾ ಅಭಿ ಸಂ ನವಂತೇ ॥**

(ಋ. ಸಂ. ೧೦-೭೧-೩)

ಅತೀಂದ್ರಿಯಾರ್ಥದರ್ಶಿಗಳಾದ ಋಷಿಗಳಲ್ಲಿ ಗುಪ್ತವಾಗಿದ್ದ ವಾಕ್ಕನ್ನು ಯಜ್ಞರೂಪವಾದ ಸಾಧನದಿಂದ ಕವಿಗಳು ಪಡೆದರು. ಅನಂತರ ಲೋಕದ ಪ್ರಜೆಗಳ ಉಪಕಾರಕ್ಕಾಗಿ ಅವರಿಗೂ ಉಪದೇಶವನ್ನು ಮಾಡಿದರು. ವಿಶ್ವತತ್ತ್ವ ರೂಪವಾದ ಈ ವಾಕ್ಕನ್ನು ಗಾಯತ್ರ್ಯಾದಿ ಛಂದಸ್ಸುಗಳು ಸೇವಿಸುತ್ತವೆ ಇತ್ಯಾದಿಯಾಗಿ ವಾಕ್ಪ್ರಕಾಶನರೂಪವಾದ ಸೃಷ್ಟಿಗೂ ಯಜ್ಞರೂಪವಾದ ಕರ್ಮಕ್ಕೂ ಕೆಲವೆಡೆಗಳಲ್ಲಿ ತಾದಾತ್ಮ್ಯವನ್ನೂ ಇನ್ನು ಕೆಲವೆಡೆಗಳಲ್ಲಿ ಕಾರ್ಯಕಾರಣರೂಪ ವಾದ ಸಂಬಂಧವನ್ನೂ ತಿಳಿಸಿದೆ. ಇದೇ ಭಾವವನ್ನು ಶತಪಥಾದಿಬ್ರಾಹ್ಮಣಗಳಲ್ಲೂ ಈರೀತಿ ತಿಳಿಸಿದೆ—

**ಆಯುರೇತಜ್ಜ್ಯೋತಿಃ ಪ್ರವಿಶತಿ ಯ ಏತಮನು ವಾ ಬ್ರೂತೇ ಭಕ್ಷಯತಿ ವಾ ತಸ್ಯ ವ್ರತ-ಚರ್ಯಾ ಯಾ ಸೃಷ್ಟೌ ।**

(ಶ. ಬ್ರಾ. ೧೪-೧-೨-೨೬)

ಎಂಬಲ್ಲಿ ಮಂತ್ರೋಚ್ಚಾರಣಪೂರ್ವಕವಾದ ಕರ್ಮಕ್ಕೂ ನೂತನಸೃಷ್ಟಿಗೂ ತಾದಾತ್ಮ್ಯವನ್ನು ಹೇಳಿದೆ. ಹೀಗೆ ಕವಿಯ ಸ್ವರೂಪವೂ ಅಲೌಕಿಕವಾದ ಶಕ್ತಿಯೂ ವರ್ಣಿತವಾಗಿದೆ. ಅದರಂತೆಯೇ **ಕ್ರತು**ಶಬ್ದದ ಅರ್ಥವೂ ಈ ಎರಡು ಅಂಶ ಗಳನ್ನು ವಿವರಿಸುವುದಾಗಿದೆ. ಮೊದಲು **ಕ್ರತ**ಶಬ್ದದ ವಿಶೇಷಾರ್ಥವನ್ನು ತಿಳಿದು ಅನಂತರ ಕವಿ**ಕ್ರತು**ವೆಂಬ ಸಮಸ್ತ ಪದದ ಅರ್ಥವನ್ನು ಗಮನಿಸಬೇಕು.

**ಕ್ರತು**ಶಬ್ದವನ್ನು ನಿರುಕ್ತಕಾರರು **ಕರ್ಮ**ನಾಮಗಳಲ್ಲೂ, (ನಿ. ೩-೧) **ಪ್ರಜ್ಞಾ**ನಾಮಗಳಲ್ಲೂ (ನಿ. ೩-೧೩) ಪಠಿಸಿದ್ದಾರೆ. ಮತ್ತು, ಋಕ್ಸಂಹಿತೆಯ;

**ಯೋ ಜಾತ ಏವ ಪ್ರಥಮೋ ಮನಸ್ವಾನ್ದೇವೋ ದೇವಾನ್ಕ್ರತುನಾ ಪರ್ಯಭೂಷತ್ ।**
**ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ॥**

(ಋ. ಸಂ. ೨-೧೨-೧)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಕ್ರತು** ಶಬ್ದದ ವಿಶೇಷಾರ್ಥವನ್ನು ತಿಳಿಸಿದ್ದಾರೆ. (ನಿ. ೧೦-೧೦) **ಕ್ರತು** ಶಬ್ದಕ್ಕೆ ಕರ್ಮವೆಂದು ಸಾಧಾರಣವಾಗಿ ಅರ್ಥವನ್ನು ಹೇಳಿದರೂ ಸಹ ಈ ಕರ್ಮದಲ್ಲಿ ಒಂದು ಅತ್ಯಧಿಕವಾದ ವೈಶಿಷ್ಟ್ಯವಿದೆ ಯೆಂದು ಈ ಪದದ ಪ್ರಯೋಗವಿರುವೆಡೆಗಳಲ್ಲೆಲ್ಲಾ ತಿಳಿಯುತ್ತದೆ. ಮತ್ತು ಕರ್ಮಕ್ಕೆ ಪ್ರಚೋದಕವಾದ ಸಂಕಲ್ಪ ವೆಂದು ಈ ಪದದ ಮುಖ್ಯಾರ್ಥವು. ಈ ಅರ್ಥವು ಕೆಳಗೆ ಉದಾಹೃತವಾಗುವ ಋಕ್ಕಿನಿಂದ ತಿಳಿಯುತ್ತದೆ.

**ಸುಪ್ರವಾಚನಂ ತವ ವೀರ ವೀರ್ಯಂ೧ ಯದೇಕೇನ ಕ್ರತುನಾ ವಿಂದಸೇ ವಸು ।**
**ಜಾತೂಷ್ಠಿರಸ್ಯ ಪ್ರ ವಯಃ ಸಹಸ್ವತೋ ಯಾ ಚಕರ್ಥ ಸೇಂದ್ರ ವಿಶ್ವಾಸ್ವುಕ್ಥ್ಯಃ ॥**

(ಋ. ಸಂ. ೨-೧೩-೧೧)

ಎಂಬ ಈ ಋಕ್ಕಿನಲ್ಲಿ **ಕ್ರತುನಾ** ಎಂಬ ಪದಕ್ಕೆ **ಕರ್ಮಣಾ** ಎಂದು ಸಾಯಣರು ಅರ್ಥಮಾಡಿದ್ದಾರೆ. ಇಲ್ಲಿ **ಕರ್ಮ** ವೆಂಬುದಕ್ಕಿಂತ ಸಂಕಲ್ಪವೆಂದು ಹೇಳುವುದು ಉಚಿತವಾಗಿರುತ್ತದೆ. ಇದೇ ಉದಾಹರಣೆಯನ್ನು Monier Williams ಎಂಬ ಪಂಡಿತನು ತೆಗೆದುಕೊಂಡು ವಿವರಿಸುತ್ತಾ **ಏಕೇನ ಕರ್ಮಣಾ** ಎಂಬುದಕ್ಕೆ through the merewill ಎಂದರೆ, **ಕೇವಲ ಸಂಕಲ್ಪದಿಂದಲೇ** ಎಂದರ್ಥಮಾಡಿದ್ದಾನೆ. ಇದು ಇಲ್ಲಿ ಸಹಜವಾದ ಅರ್ಥವಾಗಿರುತ್ತದೆ. ಹೇಗೆಂದರೆ, ಇಲ್ಲಿ ಇಂದ್ರನ ಪರಾಕ್ರಮವನ್ನು ವರ್ಣಿಸಿದೆ. ಇಂದ್ರನು ಒಂದೇ ಕರ್ಮದಿಂದ ಶತ್ರುನಾಶವನ್ನು ಮಾಡಿದನು ಎಂಬುದಕ್ಕಿಂತ ಇಲ್ಲಿ "ಇಂದ್ರನು ಕೇವಲ ಸಂಕಲ್ಪಮಾತ್ರದಿಂದಲೇ ಶತ್ರುನಾಶವನ್ನು ಮಾಡಿದನು" ಎಂಬುದೇ ಸಹಜವಾಗಿದೆ.

ಕ್ರತು ಶಬ್ದವನ್ನು ಕರ್ಮಪರ್ಯಾಯವಾಗಿ ಉಪಯೋಗಿಸಿದಾಗೆಲ್ಲಾ, ಆ ಕರ್ಮಕ್ಕೆ ಮೂಲವಾದ ಸಂಕಲ್ಪವೂ ಮತ್ತು ಕರ್ಮದ ಗುರಿಯಾದ ಧ್ಯೇಯವೂ ಸೂಚಿತವಾಗಿ ಈ ಶಬ್ದವು ಪುರುಷನ ಆಧ್ಯಾತ್ಮಿಕವಾದ ಅಸ್ತಿತ್ವವನ್ನೂ ಅದೇ ಧ್ಯೇಯವನ್ನೂ ತೋರಿಸುತ್ತದೆ. ಉದಾಹರಣೆಗೆ—

ತ್ವಂ ಸೋಮ ಕ್ರತುಭಿಃ ಸುಕ್ರತುರ್ಭೂಸ್ತ್ವಂ ದಕ್ಷೈಃ ಸುದಕ್ಷೋ ವಿಶ್ವವೇದಾಃ ।
ತ್ವಂ ವೃಷಾ ವೃಷತ್ವೇಭಿರ್ಮಹಿತ್ವಾ ದ್ಯುಮ್ನೇಭಿರ್ದ್ಯುಮ್ನ್ಯಭವೋ ನೃಚಕ್ಷಾಃ ॥

(ಋಂ. ಸಂ. ೧-೯೧-೨).

ಎಂಬ ಋಕ್ಕಿನಲ್ಲಿ ಕ್ರತು ಮತ್ತು ದಕ್ಷ ಎಂಬ ಎರಡು ಪದಗಳು ಸೋಮದೇವನ ಅಸಾಧಾರಣವಾದ ಗುಣಗಳನ್ನು ತಿಳಿಸುತ್ತವೆ. ಇಲ್ಲಿ ಕ್ರತು ಶಬ್ದಕ್ಕೆ ಸಾಯಣರು ಕರ್ಮ ಅಥವಾ ಪ್ರಜ್ಞಾ ಎಂಬರ್ಥವೆಂದು ವಿವರಿಸಿದ್ದಾರೆ. ಅತ್ಯುತ್ತಮವಾದ ಜ್ಞಾನಯುಕ್ತನೆಂದು ಸೋಮನನ್ನು ಸಂಬೋಧಿಸಿದೆ. ಇದರಂತೆಯೇ,

ತೇ ಸತ್ಯೇನ ಮನಸಾ ದೀಧ್ಯಾನಾಃ ಸ್ವೇನ ಯುಕ್ತಾಸಃ ಕ್ರತುನಾ ವಹಂತಿ ।
ಇಂದ್ರವಾಯೂ ವೀರವಾಹಂ ರಥಂ ವಾಮೀಶಾನಯೋರಭಿ ಪೃಕ್ಷಃ ಸಚಂತೇ ॥

(ಋ. ಸಂ. ೭-೯೦-೫).

ಎಂಬಲ್ಲಿ ಯಜ್ಞರೂಪವಾದ ಮಾನವ ವ್ಯಹಾರಕ್ಕೆ ಮೂಲವಾದ ಜ್ಞಾನವೂ ಮತ್ತು ಸಂಕಲ್ಪವೂ ಕ್ರತುನಾ ಎಂಬ ಪದದಿಂದ ಸೂಚಿತವಾಗಿವೆ. ವಿಶ್ವವ್ಯವಹಾರವೆಲ್ಲವೂ ಯಜ್ಞಮಯವಾಗಿರುವುದರಿಂದ ಈ ವಿಶ್ವಾತ್ಮಕವಾದುದೂ ಮತ್ತು ವೈಯಕ್ತಿಕವಾದ ಕರ್ಮಗಳಿಂದ ನಿರ್ವಹಿಸಲ್ಪಡತಕ್ಕದ್ದೂ ಆದ ಯಜ್ಞಕ್ಕೆ ಮೂಲವೇ ಪುರುಷಸಂಕಲ್ಪವು. ಪುರುಷನ ವ್ಯಕ್ತಿತ್ವವು ಈ ಸಂಕಲ್ಪ ಮತ್ತು ಧ್ಯೇಯಗಳಿಂದಲೇ ಪೂರ್ಣವಾಗಿರಬೇಕು. ಆದುದರಿಂದಲೇ ಪುರುಷನು ಕ್ರತುಮಯನೆಂದು ವರ್ಣಿಸಲ್ಪಟ್ಟಿದ್ದಾನೆ. ಇದೇ ಅಂಶವನ್ನು ಉಪನಿಷದಾದಿಗಳಲ್ಲಿ ಈ ರೀತಿ ವರ್ಣಿಸಿದೆ.

ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ ।
ಅಥ ಖಲು ಕ್ರತುಮಯಃ ಪುರುಷೋ ಯಥಾಕ್ರತುರಸ್ಮಿಂಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ॥

(ಛಾ. ಉ. ೩-೧೪-೧).

ಎಂಬಲ್ಲಿ ಪುರುಷನನ್ನು ಕ್ರತುಮಯನೆಂದು ಹೇಳಿದೆ. ಇಲ್ಲಿ ಕ್ರತುವೆಂದರೇನು ಎಂಬುದನ್ನು ವಿವರಿಸುತ್ತಾ ಶಂಕರಾಚಾರ್ಯರು ಈ ರೀತಿ ಭಾಷ್ಯವನ್ನು ಹೇಳಿದ್ದಾರೆ.

ಕ್ರತುಂ ಕುರ್ವೀತ ಕ್ರತುರ್ನಿಶ್ಚಯೋಽಧ್ಯವಸಾಯ ಏವಮೇವ ನಾನ್ಯಥೇತ್ಯವಿಚಲಃ ಪ್ರತ್ಯಯಸ್ತಂ ಕ್ರತುಂ ಕುರ್ವೀತೋಪಾಸೀತೇತ್ಯನೇನ ವ್ಯವಹಿತೇನ ಸಂಬಂಧಃ । ಕಿಂ ಪುನಃ ಕ್ರತುಕರಣೇನ ಕರ್ತವ್ಯಂ ಪ್ರಯೋಜನಂ? ಕಥಂ ವಾ ಕ್ರತುಃ ಕರ್ತವ್ಯಃ । ಕ್ರತುಕರಣಂ ಚಾಭಿಪ್ರೇತಾರ್ಥಸಿದ್ಧಿಸಾಧನಂ ಕಥಂ। ಇತ್ಯಸ್ಯಾರ್ಥಸ್ಯ ಪ್ರತಿಪಾದನಾರ್ಥಮಥೇತ್ಯಾದಿಗ್ರಂಥಃ। . . . ಯಸ್ಮಾತ್ಕ್ರತುಮಯಃ ಕ್ರತುಪ್ರಾಯೋಽಧ್ಯವಸಾಯಾತ್ಮಕಃ ಪುರುಷೋ ಜೀವಃ। ಯಥಾಕ್ರತುರ್ಯಾದೃಶಃ ಕ್ರತುಃ ಅಸ್ಯ ಸೋಽಯಂ ಯಥಾಕ್ರತುರ್ಯಥಾಧ್ಯವಸಾಯಃ ಯಾದೃಙ್ನಿಶ್ಚಯಃ ಅಸ್ಮಿನ್ನಿಹ ಪುರುಷೋ ಭವತಿ ತಥೇತೋಽಸ್ಮಾದ್ದೇಹಾತ್ಪ್ರೇತ್ಯ ಮೃತ್ವಾ ಭವತಿ । ಕ್ರತ್ವನುರೂಪಫಲಾತ್ಮಕೋ ಭವತೀತ್ಯರ್ಥಃ ॥

(ಛಾ. ಉ. ಶಾಂಕರಭಾಷ್ಯ ೩-೧೪-೧)

ಕ್ರತುವೆಂದರೆ ಮನೋನಿಶ್ಚಯ, ಮನಸ್ಸಂಕಲ್ಪ ಮತ್ತು ಅವಿಚಲವಾದ ಶ್ರದ್ಧೆ ಎಂದರ್ಥವಾಗುತ್ತದೆ. ಈ ವಿಧವಾದ ಸಂಕಲ್ಪರೂಪವಾದದ್ದೂ ಮತ್ತು ಶ್ರದ್ಧಾಮಯವಾದದ್ದೂ ಆದ ಕ್ರತುವಿನ ಉಪಾಸನೆಯನ್ನು ಪುರುಷನು ಅವಶ್ಯವಾಗಿ ಮಾಡತಕ್ಕದ್ದು. ಇಹಲೋಕದಲ್ಲಾಗಲಿ ಪಾರ್ಥಿವವಾದ ದೇಹತ್ಯಾಗಾನಂತರದಲ್ಲಾಗಲಿ ಪುರುಷನ ಅಸ್ತಿತ್ವವು ಅವನ ಕ್ರತುವಿನ ಸ್ವರೂಪವನ್ನನುಸರಿಸಿರುತ್ತದೆ. ಮತ್ತು ಆ ಕ್ರತೂಪಾಸನೆಯ ಫಲವಾಗಿರುತ್ತದೆ. ಕ್ರತೂಪಾಸನೆಯಿಲ್ಲದಿದ್ದರೆ ಉತ್ತಮವಾದ ಫಲವಿಲ್ಲವೆಂಬುದೂ ತಾತ್ಪರ್ಯವು ಎಂಬುದಾಗಿ ಶಾಂಕರಭಾಷ್ಯದ ವಿವರಣೆಯಿದೆ.

ಇಲ್ಲಿ **ಕ್ರತು** ಶಬ್ದಕ್ಕೆ ಸಂಕಲ್ಪವೆಂದರ್ಥವೇ ಅಥವಾ ಧ್ಯೇಯ (purpose) ವೆಂದರ್ಥವೇ ಎಂಬ ವಿಚಾರವನ್ನು ಚರ್ಚಿಸುತ್ತಾ Edgerton (ಎಡ್ಗರ್ಟನ್) ಎಂಬ ಆಂಗ್ಲಪಂಡಿತನು ಶತಪಥಬ್ರಾಹ್ಮಣದ ವಾಕ್ಯವನ್ನೂ, ಮೇಲೆ ಉದಾಹೃತವಾದ ವಾಕ್ಯವನ್ನೂ ಉದಾಹರಿಸಿ ಅಲ್ಲಿ **ಕ್ರತು** ಶಬ್ದದ ಅರ್ಥವನ್ನು ಈ ರೀತಿ ವಿವರಿಸಿದ್ದಾನೆ.

The word **ಕ್ರತು** is not easy to define· Eggling translates it "understanding," but with an alternative, "will, purpose" which is more in accord with the Hindu commentator on the passage who says ಕ್ರತು means ನಿಶ್ಚಯ ಅಧ್ಯವಸಾಯ, that is "fixed determination". It Seems to mean man's mental constitution as a whole, total 'frame of mind', but with a strong flavour of will, conscious purpose. or determination. . . . . Man's ಕ್ರತು, therefore, would be his mental make up in general, but particularly any fixed determination he may entertain with regard to his future life. And his ಕ್ರತು at the moment of death decides his destiny after death."

(Annals of the Bhandarkar Institute. Vol. VIII p. 223)

ಇದರ ಸಾರಾಂಶವಿಷ್ಟೇ. ಶತಪಥಬ್ರಾಹ್ಮಣದಲ್ಲೂ (೧೦-೬-೩-೧) ಮತ್ತು ಛಾಂದೋಗ್ಯೋಪನಿಷತ್ತಿನಲ್ಲೂ (೩-೧೪-೧) ಇರುವ ಕ್ರತುಶಬ್ದಕ್ಕೆ Eggeling ಎಂಬ ಪರಿವರ್ತನಕಾರನು **ಜ್ಞಾನ** ಎಂಬರ್ಥವನ್ನು ಹೇಳಿ ನಂತರ ಸಂಕಲ್ಪ, ಧ್ಯೇಯ ಎಂಬ ಪರ್ಯಾಯರೂಪವಾದ ಅರ್ಥವನ್ನೂ ಹೇಳಿದ್ದಾನೆ. ಒಟ್ಟಿನಲ್ಲಿ ಈ ಪದಕ್ಕೆ ಪುರುಷನ ಶಾಶ್ವತವಾದ ಸ್ಥಿತಿಗತಿಗಳನ್ನು ನಿಷ್ಕರ್ಷಿಸತಕ್ಕ ಪುರುಷನ ಮನಸ್ಸಂಕಲ್ಪವೆಂದೇ ಅರ್ಥವಾಗುತ್ತದೆಂದಿದೆ.

ಋಕ್ಸಂಹಿತೆಯ ಅನೇಕಭಾಗಗಳಲ್ಲಿ ಈ ಪದಕ್ಕೆ ಯಜ್ಞವೆಂಬರ್ಥವಿದ್ದರೂ ಇದೇ ತಾತ್ಪರ್ಯವು ಸೂಚಿತವಾಗಿ ಸಂಕಲ್ಪಾತ್ಮಕವಾದ ಯಜ್ಞವೆಂದೇ ಅರ್ಥ, ಉದಾಹರಣೆಗೆ—

**ಸಾಕಂ ಹಿ ಶುಚಿನಾ ಶುಚಿಃ ಪ್ರಶಾಸ್ತಾ ಕ್ರತುನಾಜನಿ ।**
**ವಿದ್ವಾँ ಅಸ್ಯ ವ್ರತಾ ಧ್ರುವಾ ವಯಾ ಇವಾನು ರೋಹತೇ ॥**

(ಋ. ಸ. ೨-೫-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಈ ಭಾವವು ವ್ಯಕ್ತಪಡುತ್ತದೆ. ಪುರುಷನ ಅಸ್ತಿತ್ವವೂ ಭವಿಷ್ಯತ್ತಿನ ಸ್ಥಿತಿಗತಿಗಳೂ ಈ ಕ್ರತುರೂಪವಾದ ಕರ್ಮವನ್ನೇ ಆಶ್ರಯಿಸಿರುವುದರಿಂದ ಉಪನಿಷದಾದಿಗಳಲ್ಲಿ ಪದೇ ಪದೇ ಮಾನವನಿಗೆ ಈ ವಿಷಯದಲ್ಲಿ ಎಚ್ಚರಿಕೆಯನ್ನು ಕೊಡಲಾಗುತ್ತಿದೆ.

**ಓಂ ಕ್ರತೋ ಸ್ಮರ ಕೃತಗ್ಂ ಸ್ಮರ ಕ್ರತೋ ಸ್ಮರ ಕೃತಗ್ಂ ಸ್ಮರ ।**

(ಈಶ. ೧೭)

ಎಂದು ಈಶ ಮತ್ತು ಬೃಹದಾರಣ್ಯಕಾದ್ಯುಪನಿಷತ್ತುಗಳಲ್ಲಿ (ಬೃ. ಉ. ೫-೧೫-೧) ಸಂಕಲ್ಪಾತ್ಮಕನಾದ ಆತ್ಮನನ್ನು ಉದ್ದೇಶಿಸಿ ಉಪದೇಶಿಸಿದೆ. **ಕ್ರತೋ** ಎಂಬ ಪದಕ್ಕೆ **ಹೇ ಸಂಕಲ್ಪಾತ್ಮಕ** ಎಂದೇ ಶಂಕರಾಚಾರ್ಯರು ಅರ್ಥವನ್ನು ಹೇಳಿದ್ದಾರೆ. ಆದರೆ, ಐತರೇಯೋಪನಿಷತ್ತಿನಲ್ಲಿ ಅಧ್ಯಾತ್ಮದ ಸ್ವರೂಪವನ್ನು ವಿವರಿಸುವಾಗ—

**ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ . . . . . ಸ್ಮೃತಿಃ ಸಂಕಲ್ಪಃ ಕ್ರತುಃ ||**

(ಐ. ಉ. ೩-೨)

**ಸಂಕಲ್ಪ** ಮತ್ತು **ಕ್ರತು** ಎಂಬ ಬೇರೆ ಬೇರೆ ಆತ್ಮಗುಣಗಳನ್ನು ಹೇಳಿದೆ.

ಈ ಆಧ್ಯಾತ್ಮಿಕವಾದ ಗುಣಗಳನ್ನು ತಿಳಿಸುವ ವೇಳೆಗಳಲ್ಲಿ ಮಾತ್ರವಲ್ಲದೆ ಪುರುಷನ ಭೌತಿಕವಾದ ಕರ್ಮಗಳನ್ನೂ ಮತ್ತು ಯಜ್ಞಯಾಗಾದ್ಯಾಹುತಿಕರ್ಮಗಳನ್ನೂ ತಿಳಿಸುವಾಗಲೂ ಈ ಪದವು ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ,

**ನಹಿ ಸು ಯೊವದಧೀಮಸೀಂದ್ರಂ ಕೋ ವೀರ್ಯಾ ಪರಃ |**
**ತಸ್ಮಿನ್ನೃಮ್ಣಮುತ ಕ್ರತುಂ ದೇವಾ ಓಜಾಂಸಿ ಸಂ ದಧುರರ್ಚನ್ನನು ಸ್ವರಾಜ್ಯಂ ||**

(ಋ. ಸ. ೧-೮೦-೧೫)

ಇತ್ಯಾದಿ ಋಕ್ಕುಗಳಲ್ಲಿ ಕ್ರತು ಶಬ್ದಕ್ಕೆ ವೀರ್ಯಕರ್ಮವೆಂದೂ,

**ಯಸ್ಯಾಜಸ್ರಂ ಶವಸಾ ಮಾನಮುಕ್ಥಂ ಪರಿಭುಜದ್ರೋದಸೀ ವಿಶ್ವತಃ ಸೀಂ |**
**ಸ ಪಾರಿಷತ್ಕ್ರತುಭಿರ್ಮಂದಸಾನೋ ಮರುತ್ವಾನ್ನೋ ಭವತ್ವಿಂದ್ರ ಊತೀ ||**

(ಋ. ಸಂ. ೧-೧೦೦-೧೪)

ಇತ್ಯಾದಿಗಳಲ್ಲಿ ಯಜ್ಞಕರ್ಮವೆಂದೂ ಅರ್ಥವಾಗುತ್ತದೆ. ಹೀಗೆಯೇ ಶಕ್ತಿ, ಸಂಪತ್ತು ಪ್ರಭಾವ ಇತ್ಯಾದ್ಯರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ.

ಮುಖ್ಯವಾಗಿ, ಕವಿಶಬ್ದವೂ ಮತ್ತು ಕ್ರತುಶಬ್ದವೂ ಸಹ ಪುರುಷನ ಅಲೌಕಿಕವಾದ ಸ್ವರೂಪ ಮತ್ತು ಶಕ್ತಿಗಳನ್ನು ತೋರಿಸುತ್ತವೆ ಎಂದು ಹಿಂದಿನ ವಿವರಣೆಯಿಂದ ಸ್ಪಷ್ಟವಾಗಿ ತಿಳಿದಿದೆ. ಪ್ರಕೃತವಾದ ಋಕ್ಕಿನಲ್ಲಿ ಇವೆರಡೂ ಸೇರಿ ಕವಿಕ್ರತೋ ಎಂಬ ಸಮಸ್ತಪದವನ್ನು ವಿವರಿಸುತ್ತಾ, ಸಾಯಣರು, **ಅತೀಂದ್ರಿಯವಿಷಯಪ್ರಜ್ಞೋಪೇತ, ಸರ್ವಜ್ಞ** ಎಂದು ಅಗ್ನಿಯ ಅಸಾಧಾರಣವಾದ ಗುಣವನ್ನು ತಿಳಿಸುವ ವಿಶೇಷಣವೆಂದು ತಿಳಿಸಿದ್ದಾರೆ. ಈ ಸಮಸ್ತ ಪದವು ಅಗ್ನಿಗೆ ವಿಶೇಷಣವಾಗಿ ಏಳು ಸನ್ನಿವೇಶಗಳಲ್ಲೂ, ಸೋಮನಿಗೆ ವಿಶೇಷಣವಾಗಿ ಮೂರು ಸನ್ನಿವೇಶಗಳಲ್ಲೂ ಪ್ರಯುಕ್ತವಾಗಿದೆ. ಇತರರಿಂದ ತಿಳಿಯಲಶಕ್ಯವಾದ ಪ್ರಜ್ಞಾವಂತನೆಂದೂ ಶಕ್ತಿಯುಳ್ಳವನೆಂದೂ ಅರ್ಥ. ಇದೇ ಅಗ್ನಿಯ ಮಹಿಮೆಯನ್ನು ವರ್ಣಿಸುವಾಗ,

**ಶುಕ್ರೇಭಿರಂಗೈ ರಜ ಆತತನ್ವಾನ್ ಕ್ರತುಂ ಪುನಾನಃ ಕವಿಭಿಃ ಪವಿತ್ರೈಃ |**
**ಶೋಚಿರ್ವಸಾನಃ ಪರ್ಯಾಯುರಪಾಂ ಶ್ರಿಯೋ ಮಿಮೀತೇ ಬೃಹತೀರನೂನಾಃ ||**

(ಋ. ಸಂ. ೩-೧-೫)

ಎಂಬಲ್ಲಿ ಕವಿಭಿಃ **ಕ್ರಾಂತಪ್ರಜ್ಞೈಃ ಸ್ತೋತವ್ಯೈಃ ವಾ....ತೇಜೋಭಿಃ, ಕ್ರತುಂ ಕರ್ಮಣಾಂ ಕರ್ತಾರಂ ಯಜಮಾನಂ** ಎಂದು ಕವಿಶಬ್ದವು ಅಗ್ನಿಯ ಅಲೌಕಿಕವಾದ ತೇಜಸ್ಸನ್ನೂ, ಕ್ರತುಶಬ್ದವು ಯಜ್ಞಕರ್ತನ ಕರ್ಮಶಕ್ತಿಯನ್ನೂ ಸೂಚಿಸುತ್ತದೆ. ಈ ಪದಗಳು ಸಮಸ್ತಪದಗಳಾಗಿಯೂ ವಿವಕ್ತಗಳಾಗಿಯೂ ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಆಯಾ ಸಂದರ್ಭಗಳಿಗನುಗುಣವಾಗಿ ಅರ್ಥಗಳನ್ನು ಹೇಳಬೇಕು.

ಅಧ್ವರಶಬ್ದಕ್ಕೆ ಅಂತರಿಕ್ಷ ಅಥವಾ ಯಜ್ಞ ಎಂದು ಎರಡು ಅರ್ಥಗಳಲ್ಲಿ ಪ್ರಯೋಗವು ಇರುವುದರಿಂದ ಅಗ್ನಿಯನ್ನು ಕವಿಕ್ರತೋ ದೇವ ಎಂಬ ಪದಗಳಿಂದ ಸಂಬೋಧಿಸಿ ಯಜ್ಞವನ್ನು ಆಚರಿಸುವ ಯಜಮಾನರಾದ ನಾವು ಯಜ್ಞಗಳಲ್ಲಿ ನಿನಗಾಗಿ ಹವಿಸ್ಸನ್ನು ಅರ್ಪಿಸುವೆವು ಎಂದು ಅರ್ಥವನ್ನು **ಸರ್ವಜ್ಞ ದೀಪ್ಯಮಾನ ಹೇ ಅಗ್ನೇ ಯಜಮಾನಾ ವಯಂ ಇಮಾನಿ ಹವೀಂಷಿ ಯಜ್ಞೇ ಹವಿಸ್ತ್ಯಾಗಮುಕಾರ್ಷ್ಮ** ಎಂಬ ವಾಕ್ಯದಿಂದ ವಿವರಿಸಿದೆ.

**ಸುರಥಸ್ಯ ವಿಶ್ವಸ್ಯ ಬೋಧಿ—ಶೋಭನಯಾನೋಪೇತಸ್ಯ ಸರ್ವಸ್ಯ ಯಜಮಾನಸ್ಯ ಗೋಪಾಯಿತಾ ಭವಾಮೀತಿ ಬುಧ್ಯಸ್ವ** । ಉತ್ತಮವಾದ ವಾಹನಗಳಿಂದ ಕೂಡಿರುವ ಯಜಮಾನನಿಗೆ ಸಂಬಂಧಿಸಿದ ಸರ್ವಸ್ವವನ್ನು ಅಗ್ನಿಯು ತನ್ನ ರಕ್ಷಣೆಗೆ ಸೇರಿದುದು ಎಂದು ತಿಳಿದು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

ಅಮೃತಶಬ್ದಕ್ಕೆ ಮರಣಧರ್ಮವಿಲ್ಲದವನೆಂದು ಅಗ್ನಿಯನ್ನು ಸಂಬೋಧಿಸಿ, **ಅಸ್ಮಾಭಿಃ ಅಸ್ಮಿನ್ ಕರ್ಮಣಿ ದತ್ತಂ ಸರ್ವಂ ಹವಿಃ ಆಸ್ವಾದಯ** । ಯಜಮಾನರೂ ಮತ್ತು ಋತ್ವಿಜರೂ ಆಗಿರುವ ನಾವು ಯಜ್ಞಕರ್ಮಗಳಲ್ಲಿ ಅರ್ಪಿಸಿದ ಎಲ್ಲಾ ವಿಧವಾದ ಹವಿಸ್ಸುಗಳನ್ನೂ ಅಗ್ನಿಯು ಸ್ವೀಕರಿಸಿ ರುಚಿನೋಡಿ ಭಕ್ಷಿಸಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಇಮಾ—ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕ ಬಹುವಚನದಲ್ಲಿ ಶಿ ಬಂದು ರೂಪವಾದಾಗ ಅದಕ್ಕೆ ಲೋಪ.

**ಅಕರ್ಮ—**ಡುಕೃಞ್ ಕರಣೇ ಧಾತು. ಲಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** (ಪಾ.ಸೂ. ೩-೪-೯೯) ಎಂಬುದರಿಂದ ಸಕಾರ ಲೋಪ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭ ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕ ಸಂಜ್ಞೆ ಇರುವುದರಿಂದ **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ವ ಬರುವುದಿಲ್ಲ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ ಬಂದಾಗ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. **ಲುಙ್‌ಲಙ್—**(ಪಾ. ಸೂ. ೬-೪-೭೧) ಎಂಬುದರಿಂದ ಅಂಗಕ್ಕೆ ಅಡಾಗಮ. ಅಕರ್ಮ ಎಂದು ರೂಪವಾಗುತ್ತದೆ. ಯಾನಿ ಎಂದು ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸುರಥಸ್ಯ—**ಶೋಭನಃ ರಥಃ ಯಸ್ಯ ಸಃ ತಸ್ಯ. **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಬೋಧಿ—**ಬುಧ ಅವಗಮನೇ. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲುಙ್. **ತಿಙಾಂ ತಿಙೋ ಭವತಿ** ಎಂಬ ವಚನದಿಂದ ಸಿಪಿಗೆ ತಾದೇಶ. **ದೀಪಜನಬುಧ—**(ಪಾ.ಸೂ. ೩-೧-೬೧) ಎಂಬುದರಿಂದ ಕರ್ತರಿಯಲ್ಲಿ ಚಿಣ್. **ಚಿಣೋಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರದಲ್ಲಿರುವುದರಿಂದ ತ ಪ್ರತ್ಯಯಕ್ಕೆ ಲುಕ್. ಚಿಣ್‌ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಬಹುಲಂಛಂದಸ್ಯ—**(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಸ್ವದ—**ಸ್ವದ ಆಸ್ವಾದನೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———

# ಹದಿನೈದನೆಯ ಸೂಕ್ತ

ವಿ ಪಾಜಸಾ ಪೃಥುನೇತಿ ಸಪ್ತರ್ಚಂ ತೃತೀಯಂ ಸೂಕ್ತಂ ಕತಗೋತ್ರೋತ್ಪನ್ನೋತ್ಕೀಲಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ಅತ್ರೇಯಮನುಕ್ರಮಣಿಕಾ । ವಿ ಪಾಜಸಾ ಕಾತ್ಯ ಉತ್ಕೀಲಸ್ತ್ವಿತಿ । ಕತಗೋತ್ರೋತ್ಪನ್ನ ಉತ್ಕೀಲೋ ನಾಮ ಋಷಿಃ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಾ ಹೋತೇತ್ಯಾದಿಸೂಕ್ತದಶಕಂ ವಿನಿಯುಕ್ತಂ ತತ್ರೇದಂ ಚ ದ್ವಿತೀಯಂ ಸೂಕ್ತಂ ॥

**ಅನುವಾದವು**—**ವಿ ಪಾಜಸಾ ಪೃಥುನಾ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕತಗೋತ್ರೋತ್ಪನ್ನನಾದ ಉತ್ಕೀಲನೆಂಬುವನು ಋಷಿಯು; ತ್ರಿಷ್ಟುಪ್ ಛಂದಸ್ಸು; ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ **ವಿ ಪಾಜಸಾ ಕಾತ್ಯ ಉತ್ಕೀಲಸ್ತು** ಎಂದು ಹೇಳಿರುವುದು. ಉತ್ಕೀಲನೆಂಬುವನು ಕತಗೋತ್ರದಲ್ಲಿ ಉತ್ಪನ್ನನಾದ ಒಬ್ಬ ಋಷಿಯು. ಹಿಂದಿನ ಸೂಕ್ತದ ವಿನಿಯೋಗದಲ್ಲಿ ಹೇಳಿರುವಂತೆ ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಉಪಯೋಗಿಸುವ **ಆ ಹೋತಾ** ಎಂದು ಮೊದಲಾಗುವ ಹತ್ತು ಸೂಕ್ತಗಳಲ್ಲಿ ಇದು ಎರಡನೆಯದು.

## ಸೂಕ್ತ—೧೫

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೧೫ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧೫ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೭

ಋಷಿಃ—ಉತ್ಕೀಲಃ ಕಾತ್ಯಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ವಿ ಪಾಜಸಾ ಪೃಥುನಾ ಶೋಶುಚಾನೋ ಬಾಧಸ್ವ ದ್ವಿಷೋ ರಕ್ಷಸೋ ಅಮೀವಾಃ ।
ಸುಶರ್ಮಣೋ ಬೃಹತಃ ಶರ್ಮಣಿ ಸ್ಯಾಮಗ್ನೇರಹಂ ಸುಹವಸ್ಯ ಪ್ರಣೀತೌ ॥ ೧ ॥

ಪದಪಾಠಃ

ವಿ । ಪಾಜಸಾ । ಪೃಥುನಾ । ಶೋಶುಚಾನಃ । ಬಾಧಸ್ವ । ದ್ವಿಷಃ । ರಕ್ಷಸಃ । ಅಮೀವಾಃ ।
ಸುಽಶರ್ಮಣಃ । ಬೃಹತಃ । ಶರ್ಮಣಿ । ಸ್ಯಾಂ । ಅಗ್ನೇಃ । ಅಹಂ । ಸುಽಹವಸ್ಯ । ಪ್ರಽನೀತೌ ॥ ೧ ॥

ಸಾಯಣಭಾಷ್ಯಂ

ಉತ್ಕೀಲಃ ಸ್ತೌತಿ । ಹೇ ಅಗ್ನೇ ಪೃಥುನಾ ವಿಸ್ತೀರ್ಣೇನ ಪಾಜಸಾ ತೇಜಸಾ ಶೋಶುಚಾನೋಽತ್ಯರ್ಥಂ ದೀಪ್ಯಮಾನಸ್ತ್ವಂ ದ್ವಿಷಃ ಕರ್ಮಾನುಷ್ಠಾನವಿಘ್ನಕಾರಿಣಃ ಶತ್ರೂನ್ ವಿ ಬಾಧಸ್ವ । ವಿಶೇಷೇಣ ನಾಶಯ । ತಥಾಮೀವಾ ರೋಗರಾಹಿತ್ಯೇನ ಸಾಮರ್ಥ್ಯೋಪೇತಾನಿ ರಕ್ಷಸಃ । ಉಭಯತ್ರ ಸುಬ್ವ್ಯತ್ಯಯಃ । ತಾನಿ ರಕ್ಷಾಂಸಿ ಬಾಧಸ್ವ । ಕರ್ಮವಿಘ್ನಕಾರೀಣಿ ತಾನ್ಯಪನುದಸ್ವ । ಯದ್ವಾಮೀವಾ ಅಭಿಮುಖ್ಯೇನಾಗಮನಪರಾಗಮನಪರಾಃ ಪಿಶಾಚಿಕಾಶ್ಚ ಬಾಧಸ್ವ । ಸುಶರ್ಮಣಃ ಸ್ವರ್ಗಾದಿಲಕ್ಷಣಶೋಭನಸುಖಹೇತೋರ್ಬೃಹತೋ ಮಹತಃ ಶತ್ರುವಿಜಯೇನ ಪ್ರಾಪ್ತಮಹಿಮ್ನಃ ಸುಹವಸ್ಯ ಸುಷ್ಠ್ವಾಹ್ವಾನೋಪೇತಸ್ಯಾಗ್ನೇಃ ಶರ್ಮಣ್ಯಸ್ಮಾಕಂ ಸುಖಹೇತೌ ಪ್ರಣೀತಾವುತ್ತರವೇದ್ಯಾದಿಸ್ಥಾನೇಷು ಪ್ರಣಯನೇ । ಪ್ರಕರ್ಷೇಣ ನಯನಂ ತತ್ರ ತತ್ರಾನೀಯ ಪ್ರಕ್ಷೇಪಃ । ಏವಂ ಭೂತೇ ತವ ಪ್ರಣಯನೇಽಹಂ ಸ್ಯಾಂ । ಅಗ್ನಿಪ್ರಣಯನಪೂರ್ವಕೇ ಕೃತ್ಸ್ನಾನುಷ್ಠಾನೇ ಭವೇಯಂ ॥ ಪಾಜಸಾ । ಪಾ ರಕ್ಷಣೇ । ಅಸುನ್ನಿತ್ಯನುವೃತ್ತೌ ಪಾತೇರ್ಬಲೇ ಜುಟ್ ಚೇತ್ಯಸುನ್ । ಜುಡಾಗಮಃ । ನಿತ್ತ್ವಾದಾದ್ಯುದಾತ್ತಃ । ಪೃಥುನಾ । ಪ್ರಥ ಪ್ರಖ್ಯಾನೇ । ಉದಿತ್ಯನುವೃತ್ತೌ ಪ್ರಥಿಮ್ರದಿಭ್ರಸ್ಜಾಂ ಸಂಪ್ರಸಾರಣಮಿತ್ಯುಪ್ರತ್ಯಯಃ । ತತ್ಸಂನಿಯೋಗೇನ ಸಂಪ್ರಸಾರಣಂ । ಪ್ರತ್ಯಯಸ್ವರಃ । ಶೋಶುಚಾನಃ । ಶುಚ ದೀಪ್ತಾವಿತ್ಯಸ್ಯ ಯಙ್ಲುಕಿ ಗುಣೋ ಯಙ್ಲುಕೋರಿತ್ಯಭ್ಯಾಸಸ್ಯ ಗುಣಃ । ವ್ಯತ್ಯಯೇನ ಶಾನಚ್ । ಚರ್ಕರೀತಸ್ಯಾದಾದಿವದ್ಭಾವಾಚ್ಛಪೋ ಲುಕ್ । ಚಿತ್ತ್ವಾದಂತೋದಾತ್ತತ್ವೇ ಪ್ರಾಪ್ತೇಽಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಬಾಧಸ್ವ । ಬಾಧೃ ಲೋಡನ ಇತ್ಯಸ್ಯ ಲೋಟಿ ರೂಪಂ । ಪಾದಾದಿತ್ವಾನ್ನಿಘಾತಾಭಾವಃ । ಸುಶರ್ಮಣಃ । ಶೄ ಹಿಂಸಾಯಾಂ । ಮಃಖಂ ಶೃಣಾತೀತ್ಯೌಣಾದಿಕೋ ಮನಿನ್ । ಸೋರ್ಮನಸೀ ಇತ್ಯುತ್ತರಪದಾದ್ಯುದಾತ್ತತ್ವಂ । ಸ್ಯಾಂ । ಅಸ ಭುವೀತ್ಯಸ್ಯ ಲಿಙಃ ಯಾಸುಟ್ ಪರಸ್ಮೈಪದೇಷ್ವಿತ್ಯಾದಿನಾ ಯಾಸುಟ್ । ಲಿಙಃ ಸಲೋಪ ಇತಿ ಸಲೋಪಃ । ಯಾಸುಟೋ ಙಿತ್ತ್ವಾತ್ ಶ್ನಸೋರಲ್ಲೋಪಃ । ನಿಘಾತಃ ॥

ಪ್ರತಿಪದಾರ್ಥ

(**ಅಗ್ನೇ**—ಎಲೈ ಅಗ್ನಿಯೇ) । **ಪೃಥುನಾ**—ವಿಸ್ತೃತವಾದ । **ಪಾಜಸಾ**—ತೇಜಸ್ಸಿನಿಂದ । **ಶೋಶುಚಾನಃ**—ಅತಿಶಯವಾಗಿ ಬೆಳಗುತ್ತಾ । **ದ್ವಿಷಃ**—(ಯಜ್ಞಕರ್ತರ) ದ್ವೇಷಿಗಳನ್ನು । **ವಿ ಬಾಧಸ್ವ**—ನಾಶಪಡಿಸು. (ಹಾಗೆಯೇ) । **ಅಮೀವಾಃ ರಕ್ಷಸಃ**—ಆರೋಗ್ಯದಿಂದ ದೃಢಕಾಯರಾದ ರಾಕ್ಷಸಪಿಶಾಚಾದಿಗಳನ್ನೂ (ನಾಶಪಡಿಸು) । **ಸುಶರ್ಮಣಃ**—ಸ್ವರ್ಗಾದಿ ಸುಖಗಳಿಗೆ ಹೇತುವಾದವನೂ । **ಬೃಹತಃ**—ಮಾಹಾತ್ಮ್ಯವನ್ನು ಪಡೆದವನೂ । **ಸುಹವಸ್ಯ**—ಶ್ರೇಷ್ಠವಾದ ಆಹ್ವಾನದಿಂದ ಕೂಡಿದವನೂ ಆದ । **ಅಗ್ನೇಃ**—ಅಗ್ನಿದೇವನ । **ಶರ್ಮಣಿ**—ಸುಖಹೇತುವಾದ । **ಪ್ರಣೀತೌ**—ಉತ್ತರವೇದ್ಯಾದಿ ಪ್ರಣಯನಸ್ಥಾನದಲ್ಲಿ । **ಅಹಂ**—ನಾನು । **ಸ್ಯಾಂ**—(ಪೂಜಾಸಕ್ತನಾಗಿ) ಇರುವಂತಾಗಲಿ.

ಭಾವಾರ್ಥ

ಎಲೈ ಅಗ್ನಿಯೇ, ನೀನು ವಿಸ್ತೃತವಾದ ತೇಜಸ್ಸಿನಿಂದ ಅತಿಶಯವಾಗಿ ಬೆಳಗುತ್ತಾ ಯಜ್ಞಕರ್ತರಾದ ನಮ್ಮ ದ್ವೇಷಿಗಳನ್ನು ನಾಶಪಡಿಸು. ಹಾಗೆಯೇ ಆರೋಗ್ಯದಿಂದ ದೃಢಕಾಯರಾದ ರಾಕ್ಷಸಪಿಶಾಚಾದಿಗಳನ್ನೂ ಸಹ ನಾಶಪಡಿಸು. ಸ್ವರ್ಗಾದಿಸುಖಗಳಿಗೆ ಹೇತುವಾದವನೂ, ಮಾಹಾತ್ಮ್ಯವನ್ನು ಪಡೆದವನೂ, ಶ್ರೇಷ್ಠವಾದ ಆಹ್ವಾನ

ದಿಂದ ಯುಕ್ತನಾದವನೂ ಆದ ಅಗ್ನಿದೇವನ ಸುಖಹೇತುವಾದ ಉತ್ತರವೇದಿಸ್ಥಾನದಲ್ಲಿ ನಾನು ಇದ್ದು ಅಗ್ನಿಪೂಜಾ ಕಾರ್ಯಗಳಲ್ಲಿ ಆಸಕ್ತನಾಗಿರುವಂತೆ ಆಗಲಿ ; ಎಂದರೆ, ತತ್ಫಲವಾದ ಸುಖವನ್ನೂ ಅನುಭವಿಸುವಂತಾಗಲಿ.

English Translation

Radiant with great glory, repel the hostile Rakshasas and Pishachas : may I be in (the enjoyment) of the favour of the great (AGNI), the giver of prosperity, and in the service of (him who is) easily invoked.

ವಿಶೇಷವಿಷಯಗಳು

**ಪೃಥುನಾ ಪಾಜಸಾ ಶೋಶುಚಾನಃ—ವಿಸ್ತೀರ್ಣೇನ ತೇಜಸಾ ಅತ್ಯರ್ಥಂ ದೀಪ್ಯಮಾನಃ । ಪೃಥುಃ** ಎಂಬ ಪದವು (ನಿ. ೨–೨) ಪ್ರಥ ಪ್ರಖ್ಯಾನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಮತ್ತು **ವಿದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ** ಎಂಬಲ್ಲಿ (ನಿ. ೧೨–೨೫) **ಪೃಥು ಮಹಾಂತಂ** ಎಂದು ವಿವೃತವಾಗಿದೆ. **ಪಾಜಃ** ಎಂಬ ಶಬ್ದವು ಬಲನಾಮಗಳಲ್ಲಿ (ನಿ. ೩–೯) ಪಠಿತವಾಗಿ, **ಪಾಜಃ ಪಾಲನಾತ್** ಎಂದು ವಿವೃತವಾಗಿದೆ. ಇಲ್ಲಿ ಅಗ್ನಿಯು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ತನ್ನ ತೇಜಸ್ಸುಗಳಿಂದ ಅತಿಶಯವಾದ ಕಾಂತಿಯಿಂದ ಬೆಳಗುತ್ತಿರುವನು ಎಂಬ ಅರ್ಥವನ್ನು ವರ್ಣಿಸಿದೆ.

**ದ್ವಿಷಃ ವಿಬಾಧಸ್ವ—ಕರ್ಮಾನುಷ್ಠಾನವಿಘ್ನಕಾರಿಣಃ ಶತ್ರೂನ್ ವಿಶೇಷೇಣ ನಾಶಯ ।** ಅಗ್ನಿಯು ಯಜ್ಞಮಾಡುವವರ ವಿಷಯದಲ್ಲಿ ಶತ್ರುಗಳು ಮಾಡುವ ತೊಂದರೆಗಳನ್ನೂ ಯಜ್ಞಕರ್ಮಗಳನ್ನು ಆಚರಿಸುವಾಗ ವಿಘ್ನ ಮಾಡುವವರನ್ನೂ ನಾಶಮಾಡಲಿ ಎಂದು ಪ್ರಾರ್ಥಿಸಿದೆ.

**ಅಮೀವಾಃ ರಕ್ಷಸಃ ವಿಬಾಧಸ್ವ—ರೋಗರಾಹಿತ್ಯೇನ ಸಾಮರ್ಥ್ಯೋಪೇತಾನಿ ತಾನಿ ರಕ್ಷಾಂಸಿ ಕರ್ಮವಿಘ್ನಕಾರೀಣಿ ತಾನ್ಯಪಸುವಸ್ವ । ಯದ್ವಾ ಆಗಮನಪರಾಗಮನಪರಾಃ ಪಿಶಾಚಿಕಾಶ್ಚ ಬಾಧಸ್ವ । ಅಮೀವಾ** ಎಂಬ ಪದವು ನಿರುಕ್ತಕಾರರಿಂದ—

**ಯಸ್ತೇ ಗರ್ಭಮಮೀವಾ ದುರ್ಣಾಮಾ ಯೋನಿಮಾಶಯೇ ।**
**ಅಗ್ನಿಷ್ಟಂ ಬ್ರಹ್ಮಣಾ ಸಹ ನಿಷ್ಕ್ರವ್ಯಾದಮನೀನಶತ್ ॥**

(ಋ. ಸಂ. ೧೦–೧೬೨–೨)

ಉದಾಹೃತವಾಗಿ **ಅಮೀವಾ ಇತ್ಯಸ್ಯ ಕ್ರಿಮಿಃ ಅಭಿಧೇಯಃ ಕ್ರಿಮ್ಯುಪಹತೇ ಹಿ ಯೋನೌ ಗರ್ಭಃ ನ ಸಂಭವತೀತ್ಯುಪಪತ್ತಿಃ** ಅಮೀವಾ ಎಂಬ ಪದದಿಂದ ಕ್ರಿಮಿಯು ಬೋಧಿತವಾಗಿರುವುದು. ಕ್ರಿಮಿಯಿಂದ ದುಷ್ಟವಾದ ಗರ್ಭಾಶಯದಲ್ಲಿ ಪಿಂಡವು ಉತ್ಪನ್ನವಾಗುವುದಿಲ್ಲ ಎಂದು ದುರ್ಗಾಚಾರ್ಯರಿಂದ ವ್ಯಾಖ್ಯಾತವಾಗಿದೆ. ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ರೋಗದ ಬಾಧೆಯಿಲ್ಲದಿರುವ ಕಾರಣ ಶಕ್ತಿವಂತರಾಗಿರುವ ರಾಕ್ಷಸರು ಯಜ್ಞಕರ್ಮಗಳಿಗೆ ವಿಘ್ನವನ್ನು ಮಾಡುವವರಾದುದರಿಂದ ಅಗ್ನಿಯು ಅವರನ್ನು ನಾಶಪಡಿಸಲಿ ಎಂದು ವಿವರಿಸಿದೆ. ಸರ್ವರಿಗೂ ತೊಂದರೆಯನ್ನು ಉಂಟುಮಾಡುವುದಕ್ಕಾಗಿಯೇ ಬಂದುಹೋಗುತ್ತಿರುವ ಪಿಶಾಚವೇ ಮೊದಲಾದವುಗಳನ್ನೂ ಅಗ್ನಿಯು ನಾಶಪಡಿಸಲಿ ಎಂದೂ ಪ್ರಾರ್ಥಿಸಿದೆ.

**ಸುಶರ್ಮಣಃ ಬೃಹತಃ ಸುಹವಸ್ಯ ಅಗ್ನೇಃ—**ಇಲ್ಲಿ ಮೂರು ವಿಶೇಷಣಗಳಿಂದ ಅಗ್ನಿಯ ಮಹಿಮೆಯನ್ನು ವರ್ಣಿಸಿದೆ. ಯಜ್ಞಮಾಡುವವರಿಗೆ ಸ್ವರ್ಗವನ್ನು ದೊರಕಿಸಿ ಸ್ವರ್ಗಸುಖವೇ ಮೊದಲಾದ ಐಹಿಕಸುಖಗಳನ್ನೂ

ಉಂಟುಮಾಡುವವನೆಂದೂ, ಶತ್ರುಗಳನ್ನು ನಾಶಪಡಿಸುವುದರಿಂದ ಪ್ರಭೂತವಾದ ಮಹಿಮೆಯನ್ನು ಹೊಂದಿರುವವನೆಂದೂ, ದೇವತೆಗಳನ್ನು ಯಜ್ಞದಲ್ಲಿ ಹವಿಸ್ಸಿನ ಸ್ವೀಕಾರಕ್ಕಾಗಿ ಕರೆದುತರುವವನಾದುದರಿಂದ ಶೋಭನಾಹ್ವಾನಕರ್ತನೆಂದೂ ಅಗ್ನಿಯನ್ನು ಅವನ ಮಹಿಮೆಯನ್ನೂ ವರ್ಣಿಸಿದೆ.

**ಶರ್ಮಣಿ—ಅಸ್ಮಾಕಂ ಸುಖಹೇತೌ** । **ಶರ್ಮ**ಶಬ್ದವು ಸುಖನಾಮಗಳಲ್ಲಿ ಮತ್ತು ಗೃಹನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಮತ್ತು—**ಸುಖಂ ಕಸ್ಮಾತ್ ಸುಹಿತಂ ಖೇಭ್ಯಃ** ಇಂದ್ರಿಯಗಳಿಗೆ ಹಿತವನ್ನು ಉಂಟುಮಾಡುವುದರಿಂದ ಸುಖವೆಂದು ವ್ಯಪದಿಷ್ಟವಾಗಿದೆ.

**ಪ್ರಣೀತೌ—ಉತ್ತರವೇದ್ಯಾದಿಸ್ಥಾನೇಷು ಪ್ರಕರ್ಷೇಣ ನಯನಂ ತತ್ರ ತತ್ರಾನೀಯ ಪ್ರಕ್ಷೇಪಃ ಏವಂ ಭೂತೇ ಅಗ್ನಿಪ್ರಣಯನಪೂರ್ವಕೇ ಕ್ರತ್ವನುಷ್ಠಾನೇ** । ಯಾಗಶಾಲೆಯಲ್ಲಿ ಅಗ್ನಿಯನ್ನು ಮೂರುಕಡೆಗಳಲ್ಲಿ ಇರಿಸಿ ಆ ಅಗ್ನಿಗಳಿಗೆ ಬೇರೆ ಬೇರೆಯ ಹೆಸರಿನಿಂದ ವ್ಯವಹರಿಸುವರು. ಯಜ್ಞಾಂಗವಾದ ಕರ್ಮಗಳನ್ನು ಅಂದರೆ ಸೋಮಿಕ ಮತ್ತು ಪಾಶುಕತಂತ್ರಗಳನ್ನು ಆಚರಿಸುವುದಕ್ಕಾಗಿ ಆ ಅಗ್ನಿಯನ್ನು ಉತ್ತರವೇದಿಯೇ ಮೊದಲಾದ ಪ್ರದೇಶಗಳಿಗೆ ಒಯ್ಯುವರು. ಇದನ್ನು ಇಲ್ಲಿ ಪ್ರಣಯನ ಶಬ್ದದಿಂದ ವ್ಯವಹರಿಸಿದೆ. ಇಲ್ಲಿ ಮಂತ್ರದ್ರಷ್ಟೃವಾದ ಋಷಿಯು ಈ ಪ್ರಕಾರವಾದ ಉತ್ತರವೇದ್ಯಾದಿಪ್ರದೇಶಗಳಲ್ಲಿ ಅಗ್ನಿಪ್ರಣಯನವನ್ನು ಮಾಡಿ ಕ್ರತುವನ್ನು ಆಚರಿಸಿ ಸುಖವನ್ನು ಹೊಂದುವುದು ಎಂದು ಅಗ್ನಿಪ್ರಣಯನವು ಸುಖಕಾರಣವೆಂದು ವರ್ಣಿಸಿ, ಯಜ್ಞಾಚರಣೆಯಲ್ಲಿರತಕ್ಕ ತನ್ನ ಔತ್ಸುಕ್ಯವು ಅಗ್ನಿಯ ಅನುಗ್ರಹದಿಂದ ತನಗೆ ಉಂಟಾಗಲಿ ಎಂದು ಆಶಿಸಿದ್ದಾನೆ.

ವ್ಯಾಕರಣಪ್ರಕ್ರಿಯಾ

**ಪಾಜಸಾ**—ಪಾ ರಕ್ಷಣೇ. ಧಾತು. **ಅಸುನ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ಪಾತೇರ್ಬಲೇ ಜುಟ್ ಚ** (ಉ. ಸೂ. ೪-೬೪೨) ಎಂಬುದರಿಂದ ಧಾತುವಿಗೆ ಅಸುನ್ ಪ್ರತ್ಯಯ. ಅದಕ್ಕೆ ಜುಟಾಗಮ. **ಆದ್ಯಂತೌಟಕಿತೌ** (ಪಾ. ಸೂ. ೧-೧-೪೬) ಎಂಬುದರಿಂದ ಆದ್ಯವಯವವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಪೃಥುನಾ**—ಪ್ರಥ ಪ್ರಖ್ಯಾನೇ ಧಾತು. **ಉತ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ಪ್ರಥಿಮ್ರದಿಭ್ರಸ್ಜಾಂ ಸಂಪ್ರಸಾರಣಮ್** (ಉ. ಸೂ. ೧-೨೮) ಎಂಬುದರಿಂದ ಉ ಪ್ರತ್ಯಯ. ಅದರೊಡನೆ ಧಾತುವಿನ ರೇಫಕ್ಕೆ (ಋ) ಸಂಪ್ರಸಾರಣ. ಪೃಥು ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಶೋಶುಚಾನಃ**—ಶುಚ ದೀಪ್ತೌ ಧಾತು. **ಧಾತೋರೇಕಾಚಃ** (ಪಾ. ಸೂ. ೩-೧-೨೨), ಎಂಬುದರಿಂದ ಅತಿಶಯಾರ್ಥದಲ್ಲಿ ಯಙ್ ಬಂದಾಗ **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್. ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಗುಣೋಯಙ್‌ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. **ವ್ಯತ್ಯಯೋ ಬಹುಲಂ** ಎಂಬುದರಿಂದ ಯಙ್‌ಲುಗಂತದ ಮೇಲೆ ಲಟ್ ಬಂದಾಗ ಅವಕ್ಕೆ ಶಾನಚಾದೇಶ. **ಚರ್ಕರೀತಂಚ** ಎಂಬುದರಿಂದ ಯಙ್‌ಲುಗಂತವನ್ನು ಅದಾದಿಯಲ್ಲಿ ಪಾಠಮಾಡಿರುವುದರಿಂದ ಶಪಿಗೆ ಲುಕ್. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಬಾಧಸ್ವ**—ಬಾಧೃ ವಿಲೋಡನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿ

ಯಲ್ಲಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ.೬–೧–೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸುಶರ್ಮಣಃ**—ಶ್ೃ ಹಿಂಸಾಯಾಮ್. ಧಾತು. ದುಃಖಂ ಶೃಣಾತಿ ಇತಿ ಶರ್ಮಾ. ಔಣಾದಿಕಮನಿನ್ ಪ್ರತ್ಯಯ ಬಂದಾಗ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ಬಹುವ್ರೀಹಿ ಸಮಾಸವಾದಾಗ **ಸೋರ್ಮನಸೀ** (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಸ್ಯಾಮ್**—ಅಸ ಭುವಿ. ಧಾತು. ಲಿಙ್ ಉತ್ತಮಪುರುಷ ಏಕವಚನದಲ್ಲಿ ಮಿಪಿಗೆ ಅಮಾದೇಶ. **ಯಾಸುಟ್ ಪರಸ್ಮೈ**—(ಪಾ. ಸೂ. ೩-೪-೧೦೩) ಎಂಬುದರಿಂದ ಅದಕ್ಕೆ ಯಾಸುಟಾಗಮ. **ಲಿಙಃಸಲೋಪೋನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಅದರ ಸಕಾರಕ್ಕೆ ಲೋಪ. ಯಾಸುಟಿಗೆ ಙಿತ್ವವಿಧಾನಮಾಡಿರುವುದರಿಂದ ಇದು ಪರವಾದಾಗ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಶಪಿಗೆ ಲುಕ್ ಬಂದುದರಿಂದ ಅಕಾರದ ಪರದಲ್ಲಿ ಯಾಸುಟ್ ಬಾರದಿರುವುದರಿಂದ ಅದಕ್ಕೆ ಇಯಾದೇಶ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಹವಸ್ಯ—ಆದ್ಯುದಾತ್ತಂ ದ್ವ್ಯಚ್‌ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಬಹುವ್ರೀಹಿಯಲ್ಲಿ ಸು ಸ್ವರಕ್ಕೆ ಆಪವಾದವಾಗಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಪ್ರಣೀತೌ—ತಾದೌಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ(ಪ್ರ)ಉದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

**ತ್ವಂ ನೋ ಅಸ್ಯಾ ಉಷಸೋ ವ್ಯುಷ್ಟೌ ತ್ವಂ ಸೂರ ಉದಿತೇ ಬೋಧಿ ಗೋಪಾಃ ।**
**ಜನ್ಮೇವ ನಿತ್ಯಂ ತನಯಂ ಜುಷಸ್ವ ಸ್ತೋಮಂ ಮೇ ಅಗ್ನೇ ತನ್ವಾ ಸುಜಾತ ॥ ೨ ॥**

ಪದಪಾಠಃ

**ತ್ವಂ । ನಃ । ಅಸ್ಯಾಃ । ಉಷಸಃ । ವಿಽಉಷ್ಟೌ । ತ್ವಂ । ಸೂರೇ । ಉತ್ಽಇತೇ । ಬೋಧಿ । ಗೋಪಾಃ ।**
**ಜನ್ಮಽಇವ । ನಿತ್ಯಂ । ತನಯಂ । ಜುಷಸ್ವ । ಸ್ತೋಮಂ । ಮೇ । ಅಗ್ನೇ । ತನ್ವಾ । ಸುಽಜಾತ ॥ ೨ ॥**

ಸಾಯಣಭಾಷ್ಯಂ

**ಹೇ ಅಗ್ನೇ ತ್ವಮಸ್ಯಾ ಅದ್ಯ ವರ್ತಮಾನಾಯಾ ಉಷಸೋ ವ್ಯುಷ್ಟೌ ವ್ಯುಚ್ಛನೇ ಪ್ರಕಾಶನೇ ಸೂರೇ ಸೂರ್ಯೇ ಉದಿತೇ ಚ ಸತಿ ನೋಽಗ್ನಿಹೋತ್ರಾದಿಕರ್ಮಣಿ ಪ್ರವೃತ್ತಾನಾಮಸ್ಮಾಕಂ ಗೋಪಾ ಗೋಪಾಯಿತಾ ಭವಾಮೀತಿ ಬೋಧಿ । ಬುಧ್ಯಸ್ವ । ಕೇಚಿತ್ಸೂರ್ಯೋದಯಾತ್ಪ್ರಾಗಗ್ನಿಹೋತ್ರಂ ಜುಹ್ವತಿ। ಕೇಚಿದುದಿತೇ ತಸ್ಮಿನ್ಜುಹ್ವತಿ । ತೇಷಾಮುಭಯೇಷಾಂ ಪಾಲಯಿತಾ ಭವೇತ್ಯರ್ಥಃ । ತನ್ವಾ ಸುಜಾತ**

ಜ್ವಾಲಾಪರಿವೃತೇನ ಶರೀರೇಣ ಸುಷ್ಠು ಜಾತ ದೇದೀಪ್ಯಮಾನ । ಅಥವಾ ತನ್ವಾ ಸುಜಾತ ಆತ್ಮನೈವ ಸುಜಾತಃ ಸ್ವಯಂಭೂರಿತ್ಯರ್ಥಃ । ತಾದೃಶಸ್ತ್ವಂ ಮೇ ಮದೀಯಂ ಸ್ತೋಮಂ ತ್ರಿವೃತ್ಪಂಚದಶಾದಿಲಕ್ಷಣಂ ಸ್ತೋತ್ರಂ ನಿತ್ಯಂ ಜುಷಸ್ವ । ತತ್ರ ದೃಷ್ಟಾಂತಃ । ಜನ್ಮೇವೇತಿ । ಯಥಾ ಜನ್ಮ ಜನಕಃ ಪಿತಾ ರಸಂ ತನಯಂ ಪುತ್ರಂ ಪರಿಷ್ವಂಗಾದಿಭಿಃ ಸೇವತೇ ತದ್ವದಸ್ಮಾಭಿಃ ಕ್ರಿಯಮಾಣಮಿಮಂ ಸೇವಸ್ವ ॥ ವ್ಯುಷ್ಟೌ । ಉಚ್ಛೀ ವಿವಾಸೇ । ತಮೋ ವಿವಾಸ್ಯತೇಽನಯೇತಿ ಕರಣೇ ಕ್ತಿನ್ । ವ್ರಶ್ಚಾದಿನಾ ಷತ್ವಂ । ತಾದೌ ಚ ನಿತಿ ಕೃತ್ಯತಾವಿತಿ ಗತೇಃ ಪ್ರಕೃತಿಸ್ವರತ್ವಂ । ಗೋಪಾಃ । ಗುಪೂ ರಕ್ಷಣೇ । ಗುಪೂಧೂಪವಿಚ್ಛಿಪಣಿಪನಿಭ್ಯ ಇತ್ಯಾಯಪ್ರತ್ಯಯಃ । ತದಂತಾದ್ಧಾತೋಃ ಕ್ವಿಪ್ । ಅತೋ ಲೋಪ ಇತ್ಯಕಾರಲೋಪಃ । ಲೋಪೋ ವ್ಯೋರಿತಿ ಯಲೋಪಃ । ಧಾತುಸ್ವರಃ । ಜುಷಸ್ವ । ಜುಷೀ ಪ್ರೀತಿಸೇವನಯೋರಿತ್ಯಸ್ಯ ಲೋಟಿ ರೂಪಂ । ನಿಘಾತಃ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ, । ತ್ವಂ—ನೀನು । ಅಸ್ಯಾಃ ಉಷಸಃ—ಅಭಿವ್ಯಕ್ತವಾಗಿರುವ ಈ ಉಷಸ್ಸಿನ । ವ್ಯುಷ್ಟೌ—ಪ್ರಕಾಶಕಾಲದಲ್ಲೂ । ಸೂರೇ—ಸೂರ್ಯನು । ಉದಿತೇ—ಉದಯಿಸಿರುವ ಕಾಲದಲ್ಲೂ । ನಃ—ನಮ್ಮ । ಗೋಪಾಃ—ರಕ್ಷಕನಾಗಿರುವೆನೆಂದು । ಬೋಧಿ—ತಿಳಿ । ತನ್ವಾ—(ಜ್ವಾಲಾರೂಪವಾದ) ದೇಹದೊಡನೆ । ಸುಜಾತ—ಪ್ರಕಾಶಮಾನವಾದ ಉತ್ಪನ್ನವುಳ್ಳ ಅಗ್ನಿಯೇ । ತನಯಂ—ಪುತ್ರನನ್ನು । ಜನ್ಮ ಇವ—ಜನಕನಾದ ಪಿತೃವು (ಆಲಿಂಗನಾದಿಗಳಿಂದ) ಪ್ರೀತಿಸುವಂತೆ । ತ್ವಂ—ನೀನೂ ಸಹ । ಮೇ—ನನ್ನ । ಸ್ತೋಮಂ—ತ್ರಿವೃದಾದಿಲಕ್ಷಣಗಳುಳ್ಳ ಸ್ತೋತ್ರವನ್ನು । ನಿತ್ಯಂ—ಪ್ರತಿದಿನವೂ । ಜುಷಸ್ವ—ಪ್ರೀತಿಯಿಂದ ಸೇವಿಸು.

### ಭಾವಾರ್ಥ

ಎಲೈ ಅಗ್ನಿಯೇ, ಅಭಿವ್ಯಕ್ತವಾಗಿರುವ ಈ ಉಷಸ್ಸಿನ ಪ್ರಕಾಶಕಾಲದಲ್ಲೂ, ಸೂರ್ಯನು ಉದಯಿಸಿರುವ ಕಾಲದಲ್ಲೂ, ನಮ್ಮ ರಕ್ಷಕನಾಗಿರುವೆನೆಂದು ತಿಳಿ; ಎಂದರೆ, ನಮ್ಮನ್ನು ರಕ್ಷಿಸು, ಜ್ವಾಲಾರೂಪವಾದ ದೇಹದೊಡನೆ ಪ್ರಕಾಶಮಾನವಾದ ಉತ್ಪನ್ನವುಳ್ಳ ಅಗ್ನಿಯೇ, ಜನಕನಾದ ಪಿತೃವು ಪುತ್ರನನ್ನು ಆಲಿಂಗನಾದಿಗಳಿಂದ ಪ್ರೀತಿಸುವಂತೆ, ನೀನೂ ಸಹ ನನ್ನಿಂದ ಅರ್ಪಿತವಾಗುವ ತ್ರಿವೃದಾದಿಲಕ್ಷಣಗಳುಳ್ಳ ಸ್ತೋತ್ರವನ್ನು ಪ್ರತಿದಿನವೂ ಪ್ರೀತಿಯಿಂದ ಸೇವಿಸು.

### English Translation

Consider yourself our protector at the breaking of the dawn to-day and when the sun has risen : AGNI, you are engenderd with (embodied) form; be pleased with my constant praise, as a father (is pleased with) his son·

### ವಿಶೇಷವಿಷಯಗಳು

ಪ್ರಕೃತವಾದ ಋಕ್ಕಿನಲ್ಲಿ ಉಷಸ್ಸಿನ ಆವಿರ್ಭಾವಕ್ಕೂ ಸೂರ್ಯೋದಯಕ್ಕೂ ಅಗ್ನಿಯ ಯಜ್ಞರಕ್ಷಣೆಗೂ ಸಂಬಂಧವನ್ನು ಸೂಚಿಸಿದೆ. ಉಷಸ್ಸು, ಅಗ್ನಿ ಮತ್ತು ಅಶ್ವಿನೀದೇವತೆಗಳು ಇವರಿಗಿರತಕ್ಕ ಸಂಬಂಧವನ್ನು ಆಶ್ವಿನ ಶಸ್ತ್ರದ ಸ್ವರೂಪವನ್ನು ವಿವರಿಸುವಾಗ ತಿಳಿಸಿದೆ.

ಏತಾ ಉ ತ್ಯಾಃ ಪ್ರತ್ಯದೃಶ್ರನ್ಪುರಸ್ತಾಜ್ಜ್ಯೋತಿರ್ಯಚ್ಛಂತೀರುಷಸೋ ವಿಭಾತೀಃ ।
ಅಜೀಜನನ್ಸೂರ್ಯಂ ಯಜ್ಞಮಗ್ನಿಮಪಾಚೀನಂ ತಮೋ ಅಗಾದಜುಷ್ಟಂ ॥

(ಋ. ಸಂ. ೭-೭೮-೩)

ಎಂಬ ಋಕ್ಕಿನಲ್ಲಿ ಸೂರ್ಯ, ಯಜ್ಞ ಮತ್ತು ಅಗ್ನಿ ಇವರುಗಳ ಜನನವು ಉಷಸ್ಸಿನಿಂದಾದುದು ಎಂದು ವರ್ಣಿತವಾಗಿದೆ. ಅಲ್ಲದೇ,

**ಉಷಾ ಉಚ್ಛಂತೀ ಸಮಿಧಾನೇ ಅಗ್ನಾ ಉದ್ಯನ್ತ್ಸೂರ್ಯ ಉರ್ವಿಯಾ ಜ್ಯೋತಿರಶ್ರೇತ್ ।**
**ದೇವೋ ನೋ ಅತ್ರ ಸವಿತಾ ನ್ವರ್ಥಂ ಪ್ರಾಸಾವೀದ್ದ್ವಿಪತ್ಪ್ರ ಚತುಷ್ಪದಿತ್ಯೈ ॥**

(ಋ. ಸಂ. ೧-೧೨೪-೧)

ಎಂಬಲ್ಲಿ ಆಹವನೀಯಾದ್ಯಗ್ನಿಗಳು ಸಮಿದ್ಧವಾಗುತ್ತಿರಲು ಉಷೋದೇವತೆಯು ತಮಃಪರಿಹಾರಕವಾದ ತನ್ನ ಅಮಿತ ತೇಜಸ್ಸಿನಿಂದ ತಮಸ್ಸನ್ನು ಪರಿಹರಿಸುತ್ತಾಳೆ ಎಂದು ಉಷಸ್ಸಿನ ಆವಿರ್ಭಾವಕ್ಕೂ ಅಗ್ನಿಯ ಪ್ರಜ್ವಲನಕ್ಕೂ ಕಾರ್ಯಕಾರಣ ಭಾವವನ್ನು ತಿಳಿಸಿದೆ. ಈರೀತಿ ಯಜ್ಞಾಗ್ನಿಯ ಉತ್ಪತ್ತಿಗೂ ಉಷಸ್ಸಿನ ಆವಿರ್ಭಾವಕ್ಕೂ ಅವಿನಾಭಾವಸಂಬಂಧವು ನಾನಾ ಕಡೆಗಳಲ್ಲಿ ವರ್ಣಿತವಾಗಿ ಅಗ್ನ್ಯುಷಸ್ಸುಗಳ ಸಂಯೋಗವು ವಿಶ್ವಸೌಂದರ್ಯವನ್ನು ಹರಡುವುದು ಮತ್ತು ಜಗತ್ತಿಗೆಲ್ಲಾ ಆಕರ್ಷಕವಾಗಿರುವುದು ಎಂದು ವರ್ಣಿಸುವ ಚಿತ್ರವು ಕಾವ್ಯದೃಷ್ಟಿಯಿಂದ ಅತ್ಯದ್ಭುತವಾಗಿದೆ. ಉದಾಹರಣೆಗೆ—

**ಅಗ್ರೇ ಬೃಹನ್ನುಷಸಾಮೂರ್ಧ್ವೋ ಅಸ್ಥಾನ್ನಿರ್ಜಗನ್ವಾನ್ತಮಸೋ ಜ್ಯೋತಿಷಾಗಾತ್ ।**
**ಅಗ್ನಿರ್ಭಾನುನಾ ರುಶತಾ ಸ್ವಂಗ ಆ ಜಾತೋ ವಿಶ್ವಾ ಸದ್ಮಾನ್ಯಪ್ರಾಃ ॥**

(ಋ. ಸಂ. ೧೦-೧-೧)

ಎಂಬಲ್ಲಿ ಉಷಸ್ಸುಗಳ ಊರ್ಧ್ವಭಾಗದಲ್ಲಿ ಪ್ರಕಾಶಿಸುವ ಅಗ್ನಿಯು ಆದಿತ್ಯನ ಪ್ರಕಾಶದೊಂದಿಗೆ ತನ್ನ ತೇಜಸ್ಸನ್ನು ಯೋಜಿಸಿ ವಿಶ್ವಕ್ಕೆಲ್ಲಾ ಕಾಂತಿಯನ್ನು ಹರಡುವನು ಎಂಬ ವರ್ಣನೆಯು ಅಗ್ನ್ಯುಷಸ್ಸುಗಳ ಸಂಯೋಗದಿಂದ ಉತ್ಪನ್ನವಾಗುವ ವಿಶ್ವಸೌಂದರ್ಯವನ್ನು ವರ್ಣಿಸುವುದಾಗಿದೆ.

**ತ್ವಾಮಿದಸ್ಯಾ ಉಷಸೋ ವ್ಯುಷ್ಟಿಷು ದೂತಂ ಕೃಣ್ವಾನಾ ಅಯಜಂತ ಮಾನುಷಾಃ ।**
**ತ್ವಾಂ ದೇವಾ ಮಹಯಾಯ್ಯಾಯ ವಾವೃಧುರಾಜ್ಯಮಗ್ನೇ ನಿಮೃಜಂತೋ ಅಧ್ವರೇ ॥**

(ಋ. ಸಂ. ೧೦-೧೨೨-೭)

ಇತ್ಯಾದಿ ಋಕ್ಕುಗಳಲ್ಲಿ ಅಗ್ನ್ಯುಷಸ್ಸುಗಳ ಸಂಯೋಗದಿಂದ ಲಭಿಸತಕ್ಕ ಲೋಕೋಪಕಾರವು ವರ್ಣಿತವಾಗಿದೆ. ಉಷಸ್ಸಿನ ಆವಿರ್ಭಾವವಾದೊಡನೆಯೇ ಮಾನವರು ಅಗ್ನಿಯನ್ನು ಸ್ತುತಿಸಿ ಅವನನ್ನು ದೇವದೂತನಾಗುವಂತೆ ಪ್ರಾರ್ಥಿಸಿ ಪೂಜಿಸುತ್ತಾರೆ. ದೇವತೆಗಳೂ ಸಹ ಮಹಾನುಭಾವನಾದ ಅಗ್ನಿಯನ್ನು ಪೂಜಿಸುತ್ತಾರೆ ಎಂಬ ವಿವರಣೆಯಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಗ್ನ್ಯುಷಸ್ಸುಗಳ ಸಂಯೋಗದಿಂದ ಲಭಿಸುವ ಸೌಂದರ್ಯವೂ ಉಪಕಾರವೂ ಸೂಚಿತವಾಗಿದೆ.

**ಅದ್ಯ ಉಷಸೋ ವ್ಯುಷ್ಟೌ ಸೂರೇ ಉದಿತೇ ಚ ಸತಿ ನಃ ಗೋಪಾಃ ಬೋಧಿ ಕೇಚಿತ್ ಸೂರ್ಯೋದಯಾತ್ ಪ್ರಾಕ್ ಅಗ್ನಿಹೋತ್ರಂ ಜುಹ್ವತಿ ಕೇಚಿತ್ ಉದಿತೇ ಸೂರ್ಯೇ । ತೇಷಾಮುಭಯೇಷಾಂ ಪಾಲಯಿತಾ ಭವ ।** ತಮಸ್ಸನ್ನು (ಅಂಧಕಾರವನ್ನು) ನಾಶಗೊಳಿಸು ಎಂಬ ಅರ್ಥವುಳ್ಳ ಉಚ್ಛೀ ಎಂಬ ಧಾತುವಿನಿಂದ ನಿಷ್ಪನ್ನವಾದ ವಿ ಉಪಸರ್ಗದಿಂದ ಕೂಡಿದ ವ್ಯುಷ್ಟಿ ಎಂಬ ಶಬ್ದಕ್ಕೆ ಕತ್ತಲೆಯನ್ನು ನಾಶಮಾಡುವ ಉಷಃಕಾಲವು ಎಂದರ್ಥವು. ಇದು ಪ್ರಾಪ್ತವಾದಕಾಲದಲ್ಲಿ ಕೆಲವರೂ, ಸೂರ್ಯನು ಉದಯವನ್ನು ಹೊಂದಿದ ಅನಂತರದಲ್ಲಿ ಕೆಲವರೂ ಅಗ್ನಿಹೋತ್ರವನ್ನು ಆಚರಿಸಿ ಅಗ್ನಿಗೆ ಹೋಮವನ್ನು ಮಾಡುವರು. ಅಗ್ನಿಯು ಅಗ್ನಿಹೋತ್ರವನ್ನು ಆಚರಿಸುವ ಕರ್ಮದಲ್ಲಿ ಪ್ರವೃತ್ತರಾಗಿರುವ ಯಜಮಾನರೇ ಮೊದಲಾದ ನಮಗೆ ರಕ್ಷಕನಾಗಿರಲಿ ಎಂದು ಅಗ್ನಿಯನ್ನು ಪ್ರಾರ್ಥಿಸಿದೆ.

**ತನಯಂ—ತುಕ್, ತೋಕಂ, ತನಯಃ** ಇತ್ಯಾದಿ ಹದಿನೈದು ಅಪತ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩–೨) **ತೋಕಂ, ತನಯಃ** ಎಂಬ ಎರಡು ಶಬ್ದಗಳಿಗೂ ಪುತ್ರನೆಂದೇ ಅರ್ಥವು. ಪ್ರಕೃತವಾದ ಋಕ್ಕಿನಲ್ಲಿಯೂ ತನಯಶಬ್ದಕ್ಕೆ ಪುತ್ರನೆಂದೇ ಅರ್ಥಮಾಡಿದೆ. ಸ್ಥೂಲದೃಷ್ಟಿಯಿಂದ ನೋಡಿದರೆ **ತೋಕ, ತನಯ** ಎಂಬ ಎರಡು ಶಬ್ದಗಳ ಅರ್ಥವೂ ಒಂದೇ ಆದರೂ ವ್ಯವಹಾರದಲ್ಲಿ ಪುತ್ರಪೌತ್ರಾದಿಗಳೆಂದು ಒಟ್ಟಿಗೆ ಹೇಳುವ ರೂಢಿಯಿದೆ. ಅದೂಅಲ್ಲದೆ, **ತೋಕಂ ತುದ್ಯತೇಃ । ತನಯಂ ತನೋತೇಃ ।** ಎಂದು ನಿರುಕ್ತಕಾರರು ಇವುಗಳ ಸೂಕ್ಷ್ಮವಾದ ವ್ಯತ್ಯಾಸವನ್ನು ತೋರಿಸಿರುವರು. ಇದನ್ನೇ ವ್ಯಾಖ್ಯಾಕಾರರು ವಿವರಿಸುತ್ತಾ **ತೋಕಂ ಇತಿ ಪುತ್ರಃ ಸ ಹಿ ನಿತ್ಯಂ ಪಿತ್ರಾವಿನಯತಾ ತುದ್ಯತೇ ಇದಂ ಕುರ್ವಿದಂ ಮಾ ಕಾರ್ಷೀರಿತಿ । ತನಯಂ ತನೋತೇಃ ಪೌತ್ರಂ । ತದ್ಧ್ಯತಿತರಾಂ ಪಿತುಃ ಸಕಾಶಾತ್ ತತಂ ಭವತಿ ।** ಶಿಕ್ಷಣವನ್ನು ಕೊಡತಕ್ಕ ತಂದೆಯು ಯಾವಾಗಲೂ ಇದನ್ನು ಮಾಡು ಇದನ್ನು ಮಾಡಬೇಡ ಎಂಬ ನಿರ್ಬಂಧವನ್ನಿಟ್ಟು ನಿಯಮದ ಜೀವನವನ್ನು ನಡೆಸುವಂತೆ ಮಾಡುವುದರಿಂದ ಅಂತಹ ಮಗನಿಗೆ **ತೋಕಂ** ಎಂದೂ, ಸಂತತಿಯನ್ನು ವಿಸ್ತರಿಸಿ ಬೆಳೆಸಲು ಸಾಧನವಾದುದರಿಂದ ಪೌತ್ರನಿಗೆ ತನಯನೆಂದೂ ಅರ್ಥವಾಗುತ್ತದೆಂದು ವಿವರಿಸಿದ್ದಾರೆ. (ನಿ. ೧೦–೭)

**ತನ್ವಾ ಸುಜಾತ—ಜ್ವಾಲಾಪರಿವೃತೇನ ಶರೀರೇಣ ದೇದೀಪ್ಯಮಾನ ಅಥವಾ ಆತ್ಮನೈವ ಸುಜಾತಃ ಸ್ವಯಂಭೂಃ ।** ಅಗ್ನಿಯು ನಿನ್ನ ರಶ್ಮಿಗಳ (ಜ್ವಾಲೆಗಳ) ರೂಪವಾಗಿರುವ ತನ್ನ ಶರೀರದಿಂದ ಬೆಳಗುತ್ತಿರುವನು ಎಂದು ಒಂದು ವಿಧವಾದ ಅರ್ಥವನ್ನೂ ಇತರ ವಿಧವಾದ ಕಾರಣಗಳು ತನ್ನ ಉತ್ಪತ್ತಿಗೆ ಸಹಕಾರಿಗಳು (ನಿಮಿತ್ತಗಳು) ಯಾವುವೂ ಇಲ್ಲದಿರುವಕಾರಣ ತಾನಾಗಿಯೇ ಪ್ರಾದುರ್ಭವಿಸಿ ಶರೀರವನ್ನು ಹೊಂದಿ ಪ್ರಕಾಶಿಸುತ್ತಿರುವನು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ವಿವರಿಸಿದೆ,

**ಮೇ ಸ್ತೋಮಂ ಜನ್ಮೇವ ನಿತ್ಯಂ ಜುಷಸ್ವ—ತ್ರಿವೃತ್‌ಪಂಚದಶಾದಿಲಕ್ಷಣಂ ಸ್ತೋತ್ರಂ ಜನಕಃ ಪಿತಾ ಔರಸಂ ಪುತ್ರಂ ಪರಿಷ್ವಂಗಾದಿಭಿಃ ಸೇವತೇ ತದ್ವದಸ್ಮಾಭಿಃ ಕ್ರಿಯಮಾಣಂ ಇಮಂ ಸೇವಸ್ವ ।** ಪ್ರಭೂತವಾದ ಮಾಹಾತ್ಮ್ಯದಿಂದ ಪೂರಿತನಾದ ಅಗ್ನಿಯು—ಯಾಜ್ಞಿಕರಾದವರು ಪಠಿಸುವ ಸ್ತೋತ್ರವನ್ನು ತಂದೆಯು ತನ್ನ ಔರಸಪುತ್ರನನ್ನು ಆದರದಿಂದ ಲಾಲಿಸುವಂತೆ ಆದರಿಸಿ ವಿಶ್ವಾಸದಿಂದ ಶ್ರವಣಮಾಡಲಿ ಎಂದು ಆಶಂಸಿಸಿದೆ. ಸ್ತೋತ್ರವು ತ್ರಿವೃತ್, ಪಂಚದಶ ಮೊದಲಾದ ಸ್ತೋಮಗಳ ಲಕ್ಷಣರೂಪವಾದುದೆಂದು ವರ್ಣಿಸಿದೆ.

ಜನ್ಮ ಶಬ್ದವು—ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ.

**ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।**
**ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪೇಷು ಜನ್ಮಸು ॥**

(ಋ. ಸಂ. ೧೦-೬೪-೫)

ಇಲ್ಲಿ **ಜನ್ಮನಿ, ಜನ್ಮಸು** ಎಂಬ ಪದಗಳಿಗೆ ಉದಯ ಅಥವಾ ಉತ್ಪತ್ತಿ ಎಂಬ ಅರ್ಥವನ್ನು ಹೇಳಿದೆ. ಇಲ್ಲಿ ಪುತ್ರನ ಉತ್ಪತ್ತಿಗೆ ಕಾರಣನಾದ ತಂದೆಯನ್ನೂ ಜನ್ಮಶಬ್ದದಿಂದಲೇ ವ್ಯವಹರಿಸಿದೆ. ಮತ್ತು ನಿರುಕ್ತಕಾರರು,

**ವಿ ದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ । ಪಶ್ಯಞ್ಜನ್ಮಾನಿ ಸೂರ್ಯ ।**

(ಋ. ಸಂ. ೧-೫೦-೭)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಜನ್ಮಾನಿ** ಎಂಬ ಪದಕ್ಕೆ ಜನ್ಮಗಳನ್ನುಳ್ಳ ಭೂತಜಾತಗಳನ್ನು ಎಂದರ್ಥಮಾಡಿದ್ದಾರೆ.

(ನಿ. ೧೨–೨೭). ಹೀಗೆ ಜನ್ಮಹೇತುವಾದ ಪಿತೃವಿಗೂ ಜನ್ಮಾತ್ಮಕವಾದ ಭೂತಜಾತಕ್ಕೂ ವಿಶೇಷಣವಾಗಿ ಈ ಪದವು ಉಪಯೋಗಿಸಲ್ಪಟ್ಟಿದೆ. ಇದಕ್ಕೆ ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಬೇಕು.

**ಸ್ತೋಮಂ—ಸ್ತೋಮಶಬ್ದಕ್ಕೆ** ಸಾಯಣರು **ತ್ರಿವೃತ್ಪಂಚದಶಾದಿಲಕ್ಷಣಂ ಸ್ತೋತ್ರಂ** ಎಂದು ವಿವರಣೆಯನ್ನು ಹೇಳಿದ್ದಾರೆ. **ಏಕಂ ಸಾಮ ತೃಚೇ ಕ್ರಿಯತೇ, ತಸ್ಯ ಚ ತೃಚಸ್ಯ ಆವೃತ್ತ್ಯಾ ಋಚಾಂ ಸಂಖ್ಯಾ ವರ್ಧನೀಯಾ ಭವತಿ ಯಾ ಸ್ತೋಮಶಬ್ದೇನೋಚ್ಯತ ಇತಿ** । ಎಂಬ ವಾಕ್ಯದಿಂದ ಸ್ತೋಮದ ಲಕ್ಷಣ ವನ್ನು ತಿಳಿಸಿ ಸ್ತೋಮಗಳಲ್ಲಿ **ತ್ರಿವೃತ್, ಪಂಚದಶಃ, ಸಪ್ತದಶಃ, ಏಕವಿಂಶಃ, ತ್ರಿಣವಃ, ತ್ರಯಸ್ತ್ರಿಂಶಃ, ಚತುಶ್ಚತ್ವಾರಿಂಶಃ, ಅಷ್ಟಾಚತ್ವಾರಿಂಶಃ** ಎಂದು ಒಂಭತ್ತು ವಿಧಗಳನ್ನೂ ಸಹ ಅವುಗಳ ವಿಸ್ತೃತಿಗಳೊಡನೆ ಋಗ್ವೇದ ಸಂಹಿತೆಯ ೨ನೇ ಭಾಗದ ೧೩೮ರಿಂದ ೧೫೦ನೇ ಪೇಜುಗಳಲ್ಲಿ ಬಹಳ ವಿಶದವಾಗಿ ತಿಳಿಸಿದೆಯಾದ್ದರಿಂದ ಇಲ್ಲಿ ಆ ಸ್ತೋಮಗಳ ಪಠನದಿಂದ ಲಭಿಸತಕ್ಕ ಪ್ರಯೋಜನಗಳನ್ನು ಮಾತ್ರ ತಿಳಿಸಲಾಗುತ್ತದೆ.

ಸ್ತೋಮಗಳಲ್ಲಿ ಮೇಲೆ ಹೇಳಿರುವ ಒಂಭತ್ತು ವಿಭಾಗಗಳನ್ನು ತ್ರಯೋದಶ, ಚತುರ್ದಶ, ಷೋಡಶ ಇತ್ಯಾದಿ ಆವಾಪಕ್ರಮದಿಂದ ಹೆಚ್ಚುಮಾಡಿಕೊಳ್ಳಬಹುದು. ಉದಾಹರಣೆಗೆ

**ವಸವಸ್ತ್ರಯೋದಶಾಕ್ಷರೇಣ ತ್ರಯೋದಶಗ್ಂಸ್ತೋಮಮುದಜಯನ್ರುದ್ರಾಶ್ಚತುರ್ದಶಾಕ್ಷ-ರೇಣ ಚತುರ್ದಶಗ್ಂ ಸ್ತೋಮಮುದಜಯನ್ನಾದಿತ್ಯಾಃ ಪಂಚದಶಾಕ್ಷರೇಣ ಪಂಚದಶಗ್ಂ-ಸ್ತೋಮಮುದಜಯನ್ನದಿತಿಃ ಷೋಡಶಾಕ್ಷರೇಣ ಷೋಡಶಗ್ಂಸ್ತೋಮಮುದಜಯತ್ಪ್ರಜಾ-ಪತಿಸ್ಸಪ್ತದಶಾಕ್ಷರೇಣ ಸಪ್ತದಶಗ್ಂಸ್ತೋಮಮುದಜಯತ್ ।**

(ತೈ. ಸಂ. ೧–೭–೧೧–೪೪)

ಎಂಬ ತೈತ್ತಿರೀಯಸಂಹಿತಾವಾಕ್ಯಗಳಿಂದ **ವಸುರುದ್ರಾದಿತ್ಯರೂ, ಅದಿತಿಯೂ ಪ್ರಜಾಪತಿಯೂ** ಕ್ರಮವಾಗಿ **ತ್ರಯೋದಶ, ಚತುರ್ದಶ, ಪಂಚದಶ, ಷೋಡಶ, ಸಪ್ತದಶ** ಸ್ತೋಮಗಳನ್ನು ಗಳಿಸಿಕೊಂಡ ಕ್ರಮವನ್ನು ಹೇಳಿದೆ. ಸ್ತೋಮಗಳ ಪ್ರಭಾವವು ಅತ್ಯಧಿಕವಾದುದು, ಇವುಗಳ ಪಠನದಿಂದ ಸಕಲವಾದ ಇಷ್ಟಾರ್ಥಗಳನ್ನೂ ಗಳಿಸ ಬಹುದು ಎಂಬ ವಿಷಯವೂ ತೈತ್ತಿರೀಯಸಂಹಿತೆಯಲ್ಲಿಯೇ ಪಠಿಸಲ್ಪಟ್ಟಿದೆ.

**ಪ್ರಾತಃಸವನೇ ವೈ ಗಾಯತ್ರೇಣ ಛಂದಸಾ ತ್ರಿವೃತೇ ಸ್ತೋಮಾಯ ಜ್ಯೋತಿರ್ದಧದೇತಿ ತ್ರಿವೃತಾ ಬ್ರಹ್ಮವರ್ಚಸೇನ ಪಂಚದಶಾಯ ಜ್ಯೋತಿರ್ದಧದೇತಿ ಪಂಚದಶೇನೌಜಸಾ ವೀರ್ಯೇ-ಣ ಸಪ್ತದಶಾಯ ಜ್ಯೋತಿರ್ದಧದೇತಿ ಸಪ್ತದಶೇನ ಪ್ರಾಜಾಪತ್ಯೇನ ಪ್ರಜನನೇನೈಕವಿಗ್ಂಶಾ-ಯ ಜ್ಯೋತಿರ್ದಧದೇತಿ ಸ್ತೋಮ ಏವ ತತ್ಸ್ತೋಮಾಯ ಜ್ಯೋತಿರ್ದಧದೇತ್ಯಥೋ ಸ್ತೋಮ ಏವ ಸ್ತೋಮಮಭಿಪ್ರಣಯತಿ ಯಾವಂತೋ ವೈ ಸ್ತೋಮಾಸ್ತಾವಂತಃ ಕಾಮಾ-ಸ್ತಾವಂತೋ ಲೋಕಾಸ್ತಾವಂತಿ ಜ್ಯೋತೀಗ್ಂಷ್ಯೇತಾವತ ಏವ ಸ್ತೋಮಾನೇತಾವತಃ ಕಾ-ಮಾನೇತಾವತೋ ಲೋಕಾನೇತಾವಂತಿ ಜ್ಯೋತೀಗ್ಂಷ್ಯವರುಂಧೇ ॥**

(ತೈ. ಸಂ. ೭–೧–೨–೧)

ಎಂಬ ಈ ವಾಕ್ಯಗಳಲ್ಲಿ ಅಗ್ನಿಷ್ಟೋಮದಲ್ಲಿ ಪಠಿಸಬೇಕಾದ **ನಾಲ್ಕು** ವಿಧವಾದ ಸ್ತೋಮಗಳ ಪ್ರಭಾವವನ್ನು ತಿಳಿಸಿದೆ. ಯಜ್ಞಕರ್ತನು ಪ್ರಾತಃಸವನಕಾಲದಲ್ಲಿ ಗಾಯತ್ರೀಛಂದಸ್ಸಿನಿಂದ **ತ್ರಿವೃತ್ ಸ್ತೋಮವನ್ನು** ಮಹತ್ತ್ವದ ಸ್ಥಾನದಲ್ಲಿರಿ ಸುತ್ತಾನೆ. ಹೀಗೆಯೇ ಜ್ಯೋತೀರೂಪವಾದ ತ್ರಿವೃತದಿಂದ ಪಂಚದಶಸ್ತೋಮವನ್ನೂ, ವೀರ್ಯಯುತವಾದ ಪಂಚದಶ

ದಿಂದ ಸಪ್ತದಶಸ್ತೋಮವನ್ನೂ, ಪ್ರಜಾಪತಿಯೊಡನೆ ಸಂಬಂಧವನ್ನು ಹೊಂದಿ ಪ್ರಜನನಕ್ಕೆ ಸಾಧಕವಾದ ಸಪ್ತದಶ ಸ್ತೋಮದಿಂದ ಏಕವಿಂಶಸ್ತೋಮವನ್ನೂ ತೇಜೋಯುತವಾಗುವಂತೆ ಮಾಡುತ್ತಾನೆ. ಹೀಗೆಯೇ ಒಂದು ಬಗೆಯ ಸ್ತೋಮವು ಇನ್ನೊಂದು ವಿಧವಾದ ಸ್ತೋಮಕ್ಕೆ ಪ್ರಭಾವವನ್ನೂ ತೇಜಸ್ಸನ್ನೂ ಉಂಟುಮಾಡುತ್ತದೆ. ಸ್ತೋಮದಲ್ಲಿ ಎಷ್ಟು ಬಗೆಗಳಿವೆಯೋ ಅಷ್ಟು ಲೋಕಗಳೂ, ಅಷ್ಟುಬಗೆಯ ತೇಜಸ್ಸುಗಳೂ ಅಷ್ಟೇ ವಿಧವಾದ ಇಷ್ಟಾರ್ಥಗಳೂ ಇವೆ. ಮತ್ತು ಸ್ತೋಮಪಠನದಿಂದ ಯಜಮಾನನು ಅಷ್ಟು ವಿಧವಾದ ಲೋಕಗಳನ್ನೂ, ತೇಜಸ್ಸುಗಳನ್ನೂ ಮತ್ತು ಇಷ್ಟಾರ್ಥ ಗಳನ್ನೂ ಪಡೆಯುವನು ಎಂದು ಸ್ತೋಮದ ಪ್ರಭಾವವನ್ನು ತಿಳಿಸಿ ಅನಂತರ ಸ್ತೋಮಪಠನವಿಲ್ಲದಿರುವುದರಿಂದ ಆಗುವ ನಷ್ಟವನ್ನೂ ತಿಳಿಸಿದೆ.

ಬ್ರಹ್ಮವಾದಿನೋ ವದಂತಿ ಸತ್ಸ್ವೈ ಯಜೇತ ಯೋಽಗ್ನಿಷ್ಟೋಮೇನ ಯಜಮಾನೋಽಥ ಸರ್ವಸ್ತೋಮೇನ ಯಜೇತೇತಿ ಯಸ್ಯ ತ್ರಿವೃತಮಂತರ್ಯಂತಿ ಪ್ರಾಣಾಗ್‌ಸ್ತಸ್ಯಾಂತರ್ಯಂತಿ ಪ್ರಾಣೇಷು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಪಂಚ-ದಶಮಂತರ್ಯಂತಿ ವೀರ್ಯಂ ತಸ್ಯಾಂತರ್ಯಂತಿ ವೀರ್ಯೇಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಸಪ್ತದಶಮಂತರ್ಯಂತಿ ಪ್ರಜಾಂ ತಸ್ಯಾಂತರ್ಯಂತಿ ಪ್ರಜಾ-ಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯೈಕವಿಗ್‌ಂಶ-ಮಂತರ್ಯಂತಿ ಪ್ರತಿಷ್ಠಾಂ ತಸ್ಯಾಂತರ್ಯಂತಿ ಪ್ರತಿಷ್ಠಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಿಣವಮಂತರ್ಯಂತ್ಯೃತೂಗ್‌ಶ್ಚ ತಸ್ಯ ನಕ್ಷತ್ರಿಯಾಂ ಚ ವಿರಾಜಮಂತರ್ಯಂತ್ಯೃತುಷು ಮೇಽಪ್ಯಸನ್ನಕ್ಷತ್ರಿಯಾಯಾಂ ಚ ವಿರಾಜೀತಿ ಖಲು ವೈ ಯ-ಜ್ಞೇನ ಯಜಮಾನೋ ಯಜತೇ ಯಸ್ಯ ತ್ರಯಸ್ತ್ರಿಗ್‌ಂಶಮಂತರ್ಯಂತಿ ದೇವತಾಸ್ತಸ್ಯಾಂತರ್ಯಂ-ತಿ ದೇವತಾಸು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯೋ ವೈ ಸ್ತೋಮಾನಾಮವಮಂ ಪರಮತಾಂ ಗಚ್ಛಂತಂ ವೇದ ಪರಮತಾಮೇವ ಗಚ್ಛತಿ ತ್ರಿವೃದ್ವೈ ಸ್ತೋಮಾನಾಮವಮಸ್ತ್ರಿವೃತ್ಪರಮೋ ಯ ಏವಂ ವೇದ ಪರಮತಾಮೇವ ಗಚ್ಛತಿ ॥

(ತೈ. ಸಂ. ೭-೧-೩)

ಅಗ್ನಿಷ್ಟೋಮದಿಂದ ಯಜ್ಞಮಾಡತಕ್ಕವರು ಸರ್ವಸ್ತೋಮದಿಂದಲೂ ಮಾಡಬೇಕೆಂದು ಶಾಸ್ತ್ರಜ್ಞರು ವಿಧಿಸಿ ದ್ದಾರೆ. ಈ ವಿಧಿಯಲ್ಲಿ ತಿವೃತ್ ಸ್ತೋಮವನ್ನು ಬಿಟ್ಟುಬಿಟ್ಟರೆ ಅವನ ಮುಖ್ಯಪ್ರಾಣವೇ ಮಾಯವಾಗುವುದರಿಂದ ಯಜಮಾನನು ಈ ಯಜ್ಞವು ನನ್ನ ಮುಖ್ಯಪ್ರಾಣದಲ್ಲಿ ಅಂತರ್ಗತವಾಗಲಿ ಎಂಬ ಉದ್ದಿಶ್ಯದಿಂದ ಯಾಗಮಾಡುತ್ತಾನೆ. ಹೀಗೆಯೇ ಪಂಚದಶಸ್ತೋಮವನ್ನು ಬಿಟ್ಟರೆ ಶಕ್ತ್ಯಭಾವವಾಗುವುದರಿಂದಲೂ, ಸಪ್ತದಶಸ್ತೋಮವನ್ನು ಬಿಟ್ಟರೆ ಸಂತತಿ ಯಿಲ್ಲದೇ ಹೋಗುವುದರಿಂದಲೂ ಏಕವಿಂಶಸ್ತೋಮವನ್ನು ಬಿಟ್ಟರೆ ತನ್ನ ಜೀವನಾಧಾರವೇ ಕಳಚಿಹೋಗುವುದರಿಂದಲೂ, ತ್ರಿಣವಸ್ತೋಮವನ್ನು ಬಿಟ್ಟರೆ ತನ್ನ ಪ್ರಯೋಜನಕ್ಕಾಗಿ ಇರತಕ್ಕ ಋತುಗಳೂ ನಕ್ಷತ್ರಗಳ ಶಕ್ತಿಗಳೂ ತನ್ನ ಭಾಗಕ್ಕೆ ಸಹಾಯಕರಾಗದಿರುವುದರಿಂದಲೂ, ತ್ರಯಸ್ತ್ರಿಂಶಸ್ತೋಮವನ್ನು ಬಿಟ್ಟರೆ ಮುಖ್ಯವಾದ ದೇವತಾಸಾನ್ನಿಧ್ಯವೇ ಇಲ್ಲದಿರು ವುದರಿಂದಲೂ ಸಹ ಯಜಮಾನನು ಶಕ್ತಿಸಂಪಾದನೆಗಾಗಿ ಪಂಚದಶಸ್ತೋಮದಿಂದಲೂ, ಸಂತತಿಲಾಭಕ್ಕಾಗಿ ಸಪ್ತದಶ ಸ್ತೋಮದಿಂದಲೂ, ಜೀವನಾಧಾರಕ್ಕಾಗಿ ಏಕವಿಂಶಸ್ತೋಮದಿಂದಲೂ, ಋತುಗಳ ಮತ್ತು ನಕ್ಷತ್ರಗಳ ಪ್ರಭಾವಗಳ ಪ್ರಯೋಜನವನ್ನು ಪಡೆಯುವುದಕ್ಕಾಗಿ ತ್ರಿಣವಸ್ತೋಮದಿಂದಲೂ, ತನ್ನ ಮುಖ್ಯದೇವತಾಸಾನ್ನಿಧ್ಯದ ಲಾಭಕ್ಕಾಗಿ ತ್ರಯಸ್ತ್ರಿಂಶಸ್ತೋಮದ ಪಠನದಿಂದಲೂ ಯಾಗವನ್ನು ನೆರವೇರಿಸುತ್ತಾನೆ. ಯಾವ ಯಜಮಾನನು ಸ್ತೋಮಗಳ

ಲ್ಲೆಲ್ಲಾ ಪ್ರಥಮಸ್ಥಾನವನ್ನು ಪಡೆದಿರುವ ತ್ರಿವೃತ್ ಸ್ತೋಮದ ಮಹಿಮೆಯನ್ನು ತಿಳಿಯುತ್ತಾನೆಯೋ, ಆ ಯಜಮಾನನು ಯಜ್ಞಕರ್ತರಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾನೆ.

ಹೀಗೆಯೇ, ಪೃಷ್ಠ್ಯಷಡಹ ಯಾಗದಲ್ಲಿ ಆರುದಿನಗಳಲ್ಲಿಯೂ ಕ್ರಮವಾಗಿ ಪಠಿಸಬೇಕಾದ ತ್ರಿವೃದಾದಿ ಸ್ತೋಮಗಳ ಮಹಿಮೆಯನ್ನು ವರ್ಣಿಸುತ್ತಾ,

**ತ್ರಿವೃದಗ್ನಿಷ್ಟೋಮೋ ಭವತಿ ತೇಜ ಏವಾವರುಂಧತೇ ಪಂಚದಶೋ ಭವತೀಂದ್ರಿಯಮೇವಾವರುಂಧತೇ ಸಪ್ತದಶೋ ಭವತ್ಯನ್ನಾದಸ್ಯಾವರುದ್ಧ್ಯಾ ಅಥೋ ಪ್ರೈವ ತೇನ ಜಾಯಂತ ಏಕವಿಗ್ಂಶೋ ಭವತಿ ಪ್ರತಿಷ್ಠಿತ್ಯಾ ಅಥೋ ರುಚಮೇವಾತ್ಮನ್ದಧತೇ ತ್ರಿಣವೋ ಭವತಿ ವಿಜಿತ್ಯೈ ತ್ರಯಸ್ತ್ರಿಗ್ಂಶೋ ಭವತಿ ಪ್ರತಿಷ್ಠಿತ್ಯೈ ॥**

ತ್ರಿವೃತ್‌ಸ್ತೋಮದೊಡನೆ ಕೂಡಿದ ಅಗ್ನಿಷ್ಟೋಮದಿಂದ ತೇಜಸ್ಸನ್ನೂ ಪಂಚದಶಸ್ತೋಮದಿಂದ ವೀರ್ಯವನ್ನೂ ಸಪ್ತದಶದಿಂದ ಅನ್ನವನ್ನೂ, ಏಕವಿಗ್ಂಶದಿಂದ ಪ್ರತಿಷ್ಠೆಯನ್ನೂ ತ್ರಿಣವದಿಂದ ಜಯವನ್ನೂ ತ್ರಯಸ್ತ್ರಿಂಶದಿಂದ ಮಹತ್ತ್ವವನ್ನೂ ಪಡೆಯುತ್ತಾನೆ ಎಂದೂ ಸಹ ಸ್ತೋಮಪಠನದ ಪ್ರಯೋಜನಗಳನ್ನು ತಿಳಿಸಿದೆ. ಕಠೋಪನಿಷತ್ತಿನಲ್ಲಿಯೂ ಸಹ,

**ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ದೃಷ್ಟ್ವಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥** (ಕ. ಉ. ೨-೧೧)

ಎಂಬ ವಾಕ್ಯದಿಂದ ಸ್ತೋಮದ ಮಹತ್ತ್ವವನ್ನೂ ಅದರಿಂದ ಲಭಿಸತಕ್ಕ ಆಧ್ಯಾತ್ಮಿಕವಾದ ಶಾಂತಿಯನ್ನೂ ತಿಳಿಸಿದೆ. ಛಾಂದೋಗ್ಯೋಪನಿಷತ್ತಿನಲ್ಲಿ,

**ಯೇನ ಚ್ಛಂದಸಾ ಸ್ತೋಷ್ಯನ್ ಸ್ಯಾತ್ತಚ್ಛಂದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯಮಾಣಃ ಸ್ಯಾತ್ತಂ ಸ್ತೋಮಮುಪಧಾವೇತ್ ।**

(ಛಾ. ಉ. ೧-೩-೧೦)

ಎಂಬ ವಾಕ್ಯದಿಂದ **ಉದ್ಗೀಥದ** ಮಹತ್ತ್ವವನ್ನು ವರ್ಣಿಸುತ್ತಾ ಯಾವ **ಸ್ತೋಮ**ದಿಂದ ಆಯಾ ಸನ್ನಿವೇಶಕ್ಕನುಗುಣವಾಗಿ ಸ್ತುತಿಕರ್ತನ ಸ್ತೋತ್ರವು ಪೂರ್ಣವಾಗಿರುತ್ತದೆಯೋ ಅಂತಹ ಸ್ತೋಮವನ್ನೇ ಆಶ್ರಯಿಸಿ ಪುರುಷನು ಧ್ಯಾನ ಮಾಡಬೇಕೆಂದು ವಿಧಿಸಿದೆ.

ಇದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಸ್ತೋಮಂ** ಎನ್ನುವುದರಿಂದ ಇಂತಹ ಗಾನಾತ್ಮಕವಾದುದೂ ಅತಿಶಯವಾದ ಪ್ರಯೋಜನವನ್ನು ಕೊಡತಕ್ಕದ್ದೂ ಆದ ಸ್ತೋತ್ರವೆಂದರ್ಥ.

### ವ್ಯಾಕರಣಪ್ರಕ್ರಿಯಾ

**ವ್ಯುಷ್ಟೌ**—ವಿ ಉಪಸರ್ಗ. ಉಛೀ ವಿವಾಸೇ ಧಾತು. ತಮಃ ವಿವಾಸ್ಯತೇ ಅನಯಾ ಇತಿ ವ್ಯುಷ್ಟಿಃ. ಕರಣಾರ್ಥದಲ್ಲಿ ಕ್ತಿನ್ ಪ್ರತ್ಯಯ. **ವ್ರಶ್ಚಭ್ರಸ್ಜ**—(ಪಾ. ಸೂ. ೮-೨-೩೬) ಎಂಬುದರಿಂದ ಧಾತು ಛಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯ ತಕಾರಕ್ಕೆ ಷ್ಟುತ್ವ. ತಕಾರಾದಿಯಾಗಿ ನಿತ್ತಾಗಿರುವ ಪ್ರತ್ಯಯಾಂತವಾದ ಪದ ಪರದಲ್ಲಿರುವುದರಿಂದ **ತಾದೌ ಚ ನಿತಿ ಕೃತ್ಯತೌ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಸೂರೇ**—ಷೂಙ್ ಪ್ರಾಣಿಗರ್ಭವಿಮೋಚನೇ. ಧಾತು. **ಸುಸೂಧಾಗೃಧಿಭ್ಯಃ ಕ್ರನ್** (ಉ. ಸೂ. ೨-೧೮೨) ಎಂಬುದರಿಂದ ಕ್ರನ್ ಪ್ರತ್ಯಯ. ಕಿತ್ತಾದುದರಿಂದ ಗುಣಬರುವುದಿಲ್ಲ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಬೋಧಿ**—ಬುಧ ಅವಗಮನೇ ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಗೋಪಾಃ**—ಗುಪೂ ರಕ್ಷಣೇ. ಧಾತು. **ಗುಪೂಧೂಪವಿಚ್ಛಿಪಣಿಪನಿಭ್ಯ ಆಯಃ** (ಪಾ. ಸೂ. ೩-೧-೨೮) ಎಂಬುದರಿಂದ ಇವಕ್ಕೆ ಸ್ವಾರ್ಥದಲ್ಲಿ ಆಯ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಸನಾದ್ಯಂತಾಧಾತವಃ** ಎಂಬುದರಿಂದ ಗೋಪಾಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. **ಕ್ವಿಪ್ ಚ** ಎಂಬುದರಿಂದ ಇದರ ಮೇಲೆ ಕ್ವಿಪ್ ಪ್ರತ್ಯಯ. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಕ್ವಿಪ್‌ಲೋಪಕ್ಕಿಂತಲೂ ಮುಂಚೆ **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಕ್ಕೆ ಲೋಪ. ಗೋಪಾಃ ಎಂದು ರೂಪವಾಗುತ್ತದೆ. ಧಾತುಸ್ವರಉಳಿಯುತ್ತದೆ.

**ಜುಷಸ್ವ**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್‌ಮಧ್ಯಮಪುರುಷ ಏಕವಚನಾಂತರೂಪ. ಅತಿ ಙಂತದಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ತನ್ವಾ**—**ತನ್ವಾದೀನಾಂಛಂದಸ್ಯುಪಸಂಖ್ಯಾನಮ್** ಎಂಬ ವಚನದಿಂದ ತೃತೀಯಾ ಏಕವಚನಪರ ವಾದಾಗ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ಅನುದಾತ್ತವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ** (ಪಾ. ಸೂ. ೮-೨-೪) ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

———

ಸಂಹಿತಾಪಾಠಃ

ತ್ವಂ ನೃಚಕ್ಷಾ ವೃಷಭಾನು ಪೂರ್ವೀಃ ಕೃಷ್ಣಾಸ್ವಗ್ನೇ ಅರುಷೋ ವಿ ಭಾಹಿ ।
ವಸೋ ನೇಷಿ ಚ ಪರ್ಷಿ ಚಾತ್ಯಂಹಃ ಕೃಧೀ ನೋ ರಾಯ ಉಶಿಜೋ ಯವಿಷ್ಠ ॥

ಪದಪಾಠಃ

ತ್ವಂ । ನೃಽಚಕ್ಷಾಃ । ವೃಷಭ । ಅನು । ಪೂರ್ವೀಃ । ಕೃಷ್ಣಾಸು । ಅಗ್ನೇ । ಅರುಷಃ । ವಿ । ಭಾಹಿ ।
ವಸೋ ಇತಿ । ನೇಷಿ । ಚ । ಪರ್ಷಿ । ಚ । ಅತಿ । ಅಂಹಃ । ಕೃಧಿ । ನಃ । ರಾಯೇ । ಉಶಿಜಃ । ಯವಿಷ್ಠ

ಸಾಯಣಭಾಷ್ಯಂ

ವೃಷಭ ಕಾಮಾನಾಂ ವರ್ಷಿತರ್ಹೇ ಅಗ್ನೇ ನೃಚಕ್ಷಾಽನೃಣಾಂ ಮನುಷ್ಯಾಣಾಂ ಶುಭಾಶುಭಕರ್ಮದ್ರಷ್ಟಾ ಕೃಷ್ಣಾಸು ರಾತ್ರಿಷ್ವರುಷ ಆರೋಚಮಾನಸ್ತ್ವಮನು ಅನುಕ್ರಮೇಣ ಪೂರ್ವೀರ್ಬಹ್ವೀರ್ಜ್ವಾಲಾವಿ ಭಾಹಿ । ವಿಶೇಷೇಣ ಪ್ರಕಾಶಯ । ವಸೋ ಸರ್ವಸ್ಯ ಪ್ರಕಾಶಪ್ರದಾನೇನ ಸ್ವಸ್ವಸ್ಥಾನೇಷು ವಾಸಯಿತರಗ್ನೇ ತ್ವಂ ನೋಽಸ್ಮಾನ್ನೇಷಿ। ಕರ್ಮಾನುರೂಪಫಲಾನಿ ಚ ಪ್ರಾಪಯ। ಅಂಹೋಽಸ್ಮಾಕಂ ದಾರಿದ್ರ್ಯಲಕ್ಷಣಂ ಪಾಪಮತಿಪರ್ಷಿ ಚ । ಅತಿಪಾರಯ। ನಿವಾರಯೇತಿ ಯಾವತ್ । ಕಿಂಚ ಯವಿಷ್ಠ ಯುವತಮ ಹೇ

ಅಗ್ನೇ ನೋಽಸ್ಮಾನ್ರಾಯೇ ಧನಾಯೋಶಿಜಃ ಕಾಮಯಮಾನಾನ್ಕೃಧಿ । ಕುರು । ಅಭಿಲಷಿತಫಲಪ್ರದಾನೇನ ಪ್ರಾಪ್ತಕಾಮಾನ್ಕುರ್ವಿತ್ಯರ್ಥಃ ॥ ನೃಚಕ್ಷಾಃ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ಅಯಮತ್ರ ದರ್ಶನೇ ವರ್ತತೇ । ಅಸುನ್ನಿತ್ಯನುವೃತ್ತೌ ಚಕ್ಷೇರ್ಬಹುಲಂ ಶಿಚ್ಚೇತ್ಯಸುನ್ । ಶಿದ್ವದ್ಭಾವಾತ್ ಖ್ಯಾಞಾದೇಶಾಭಾವಃ । ಕೃದುತ್ತರಪದಪ್ರಕೃತಿಸ್ವರಃ । ವೃಷಭ । ವೃಷು ಸೇಚನೇ । ಅಭಜಿತ್ಯನುವೃತ್ತೌ ಋಷಿವೃಷಿಭ್ಯಾಂ ಕಿದಿತ್ಯಭಚ್ । ಕಿತ್ತ್ವಾದ್ಗುಣಾಭಾವಃ । ಅಪಾದಾದಿತ್ವಾನ್ನಿಘಾತಃ । ಪೂರ್ವೀಃ । ಪುರು ಶಬ್ದಸ್ಯ ವೋತೋ ಗುಣವಚನಾದಿತಿ ಙೀಷ್ । ಆದ್ಯಸ್ಯೋಕಾರಸ್ಯ ದೀರ್ಘಶ್ಛಾಂದಸಃ । ಪ್ರತ್ಯಯಸ್ವರೇಣಾಂತೋದಾತ್ತಃ । ಭಾಹಿ । ಭಾ ದೀಪ್ತೌ । ಅಂತರ್ಭಾವಿತಣ್ಯರ್ಥಃ । ಲೋಟಿ ರೂಪಂ । ವಸೋ । ವಸ ನಿವಾಸೇ । ಉರಿತ್ಯನುವೃತ್ತೌ ಶೄಸ್ವೃಸ್ನಿಹಿತ್ರ್ಯಸಿವಸೀತ್ಯಾದಿನಾ ಉಪ್ರತ್ಯಯಃ । ಪಾದಾದಿತ್ವಾನ್ನ ನಿಘಾತಃ । ಷಾಷ್ಠಿಕಮಾದ್ಯುದಾತ್ತತ್ವಂ । ನೇಷಿ । ಣೀಞ್ ಪ್ರಾಪಣೇ । ಛಂದಸಿ ಲೋಡರ್ಥೇ ಲಟ್ । ಬಹುಲಂ ಛಂದಸೀತಿ ಶಪೋ ಲುಕ್ । ಆಮಂತ್ರಿತಂ ಪೂರ್ವಮವಿದ್ಯಮಾನವದಿತ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪಾದಾದಿತ್ವಾನ್ನ ನಿಘಾತಃ । ಪರ್ಷಿ । ಪೄ ಪಾಲನಪೂರಣಯೋಃ । ಚಾದಿಷು ಚೇತಿ ನ ನಿಘಾತಃ । ಕೃಧಿ ಡುಕೃಞ್ ಕರಣ ಇತ್ಯಸ್ಯ ಲೋಟಿ ಸೇರ್ಹ್ಯಪಿಚ್ಚೇತಿ ಹಿರಾದೇಶಃ । ತಸ್ಯ ಸುಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಧಿರಾದೇಶಃ । ಬಹುಲಂ ಛಂದಸೀತ್ಯುಪ್ರತ್ಯಯಸ್ಯ ಲುಕ್ । ಪಾದಾದಿತ್ವಾನ್ನ ನಿಘಾತಃ । ರಾಯೇ ರಾ ದಾನೇ । ರಾತೇರ್ಡೈರಿತಿ ಡೈಪ್ರತ್ಯಯಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಉಶಿಜಃ ವಶ ಕಾಂತೌ । ವಶೇಃ ಕಿಚ್ಚೇತೀಜಿಪ್ರತ್ಯಯಃ । ಕಿತ್ತ್ವಾತ್ಸಂಪ್ರಸಾರಣಂ । ಪ್ರತ್ಯಯಸ್ವರಃ । ಯವಿಷ್ಠ । ಯುವಶಬ್ದಾದತಿಶಾಯನ ಇಷ್ಠನ್ಪ್ರತ್ಯಯಃ । ಸ್ಥೂಲದೂರಯುವೇತ್ಯಾದಿನಾ ಯಣಾದೇಃ ಪರಸ್ಯ ಲೋಪಃ ಪೂರ್ವಸ್ಯ ಚ ಗುಣಃ । ಆಮಂತ್ರಿತತ್ವಾನ್ನಿಘಾತಃ ॥

ಪ್ರತಿಪದಾರ್ಥ

**ವೃಷಭ**—ಇಷ್ಟಾರ್ಥಗಳನ್ನು ಸುರಿಸಿಕೊಡುವ । **ಅಗ್ನೇ**—ಎಲೈ ಅಗ್ನಿಯೇ । **ನೃಚಕ್ಷಾಃ**—ಮಾನವರ (ಶುಭಾಶುಭರೂಪವಾದ) ಕರ್ಮಗಳನ್ನು ನೋಡುವವನೂ । **ಕೃಷ್ಣಾಸು**—ಅಂಧಕಾರಪೂರಿತವಾದ ರಾತ್ರಿಕಾಲಗಳಲ್ಲಿ । **ಅರುಷಃ**—ಪ್ರಕಾಶಿಸುವವನೂ ಆದ । **ತ್ವಂ**—ನೀನು । **ಅನು**—ಕ್ರಮಕ್ರಮವಾಗಿ । **ಪೂರ್ವೀಃ**—ಬಹುಸಂಖ್ಯಾಕವಾದ ಜ್ವಾಲೆಗಳೊಡನೆ । **ವಿ ಭಾಹಿ**—ವಿಶೇಷರೀತಿಯಿಂದ ಪ್ರಕಾಶಿಸು । **ವಸೋ**—(ಎಲ್ಲವನ್ನೂ) ಅದರದರ ಸ್ಥಾನದಲ್ಲಿಡತಕ್ಕ ಅಗ್ನಿಯೇ । **ನೇಷಿ ಚ**—(ನಮ್ಮ ಕರ್ಮಫಲದೊಡನೆ) ನಮ್ಮನ್ನು ಸೇರಿಸು । **ಅಂಹಃ ಚ**—ದಾರಿದ್ರ್ಯಾದಿರೂಪವಾದ ಪಾಪವನ್ನೂ ಕೂಡ । **ಅತಿ ಪರ್ಷಿ**—ನಾಶಮಾಡು । **ಯವಿಷ್ಠ**—ಅತ್ಯಂತ ಯುವಕನಾದ ಅಗ್ನಿಯೇ । **ನಃ**—ನಮ್ಮನ್ನು । **ರಾಯೇ**—ಧನಕ್ಕಾಗಿ । **ಉಶಿಜಃ**—ಆಸೆಪಡುವವರನ್ನಾಗಿ । **ಕೃಧಿ**—ಮಾಡು, (ಎಂದರೆ ನಮ್ಮ ಇಷ್ಟಾರ್ಥವು ನೆರವೇರುವಂತೆ ಮಾಡು).

ಭಾವಾರ್ಥ

ಇಷ್ಟಾರ್ಥಗಳನ್ನು ಸುರಿಸಿಕೊಡುವ ಎಲೈ ಅಗ್ನಿಯೇ, ಮಾನವರ ಶುಭಾಶುಭರೂಪವಾದ ಕರ್ಮಗಳನ್ನು ನೋಡುವವನೂ, ಅಂಧಕಾರಪೂರಿತವಾದ ರಾತ್ರಿಕಾಲಗಳಲ್ಲಿ ಪ್ರಕಾಶಿಸುವವನೂ ಆದ ನೀನು ಕ್ರಮಕ್ರಮವಾಗಿ ಬಹುಸಂಖ್ಯಾಕವಾದ ಜ್ವಾಲೆಗಳೊಡನೆ ವಿಶೇಷರೀತಿಯಿಂದ ಪ್ರಕಾಶಿಸು. ಎಲ್ಲವನ್ನೂ ಅದರದರ ಸ್ಥಾನದಲ್ಲಿಡತಕ್ಕ ಅಗ್ನಿಯೇ, ನಮ್ಮ ಕರ್ಮಫಲದೊಡನೆ ನಮ್ಮನ್ನು ಸೇರಿಸು. ದಾರಿದ್ರ್ಯಾದಿರೂಪವಾದ ನಮ್ಮ ಪಾಪವನ್ನೂ ನಾಶಮಾಡು. ಅತ್ಯಂತ ಯುವಕನಾದ ಅಗ್ನಿಯೇ, ಧನಕ್ಕಾಗಿ ಆಸೆಪಡುವ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸು.

## English Translation

Showerer (of benefits), beholder of men, radiant amidst darkness, shine, AGNI, with abundant (rays) in due order : granter of dwellings, conduct us (to good), keep off all ill, and youngest (of all the gods), gratify our desires for wealth,

ವಿಶೇಷವಿಷಯಗಳು

**ವೃಷಭ—ಕಾಮನಾಂ ವರ್ಷಿತಃ** ನಿರುಕ್ತಕಾರರು—**ವೃಷಭಃ ಪ್ರಜಾಂ ವರ್ಷತೀತಿ ವಾ ಅತಿಬೃಹತಿ ರೇತ ಇತಿ ವಾ ತದ್ ವೃಷಕರ್ಮಾ ವರ್ಷಣಾತ್ ವೃಷಭಃ ।** ಪ್ರಜೆಯು ಉತ್ಪನ್ನವಾಗಲು ಕಾರಣವಾದ ರೇತಸ್ಸನ್ನು ಸೇಚನಮಾಡುವುದರಿಂದಲೂ, ರೇತಸ್ಸನ್ನು ಸೇಚನಮಾಡುವ ಕಾರ್ಯದಲ್ಲಿ ತನ್ನ ಶರೀರವನ್ನು ಅತಿಶಯವಾಗಿ ಅರ್ಪಿಸುವ ಕಾರ್ಯವು ವೃಷಶಬ್ದದಿಂದ ವ್ಯವಹರಿಸಲ್ಪಡುವಕಾರಣ **ವರ್ಷಣಾತ್ ವೃಷಭಃ** ಎಂದು ಅರ್ಥ ನಿರ್ವಚನವನ್ನು ಮಾಡಿ ವೃಷಭಶಬ್ದಾರ್ಥವನ್ನು ವಿವರಿಸಿದ್ದಾರೆ. ಮತ್ತು

**ಮರುತ್ವಾँ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ ।**
**ಆ ಸಿಂಚಸ್ವ ಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಂ ॥**

(ಋ. ಸಂ. ೩–೪೭–೧)

ಇಲ್ಲಿ ವೃಷಭ ಶಬ್ದಕ್ಕೆ ವರ್ಷಿತುರಪಾಂ ಉದಕವನ್ನು ವರ್ಷಿಸುವವನು ಎಂಬ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಅಗ್ನಿಯು ಯಜಮಾನರ ಇಷ್ಟಾರ್ಥಗಳನ್ನು ನೆರವೇರಿಸುವವನು ಎಂಬ ಅರ್ಥವನ್ನು ಹೇಳಿದೆ.

**ನೃಚಕ್ಷಾಃ—ನೃಣಾಂ ಮನುಷ್ಯಾಣಾಂ ಶುಭಾಶುಭಕರ್ಮಣಾಂ ದ್ರಷ್ಟಾ ।** ಅಗ್ನಿಯು–ಮನುಷ್ಯರು ಆಚರಿಸುವ ಶುಭವಾದ ಮತ್ತು ಅಶುಭವಾದ ಕರ್ಮಗಳನ್ನು ಸಾಕ್ಷಿಭಾವದಿಂದ ನೋಡುವವನು ಎಂದು ಅರ್ಥವನ್ನು ಹೇಳಿದೆ.

**ಕವಿರ್ನೃಚಕ್ಷಾ ಅಭಿ ಷೀಮಚಷ್ಟ ಋತಸ್ಯ ಯೋನಾ ವಿಘೃತೇ ಮದಂತೀ ।**

(ಋ. ಸಂ. ೩-೫೪-೬)

**ನೃಚಕ್ಷಾ ರಕ್ಷಃ ಪರಿ ಪಶ್ಯ ವಿಕ್ಷು ತಸ್ಯ ತ್ರೀಣಿ ಪ್ರತಿ ಶೃಣೀಹ್ಯಗ್ರಾ ।**

(ಋ. ಸಂ. ೧೦-೮೭-೧೦)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿ, ಸೂರ್ಯ ಮುಂತಾದ ದೇವತೆಗಳ ಪರವಾಗಿ **ನೃಚಕ್ಷಾಃ** ಎಂಬ ವಿಶೇಷಣವಿದೆ. ಈರೀತಿ ಈ ವಿಶೇಷಣವು ಬರುವ ಸ್ಥಳಗಳಲ್ಲೆಲ್ಲಾ **ನರಾಣಾಂ ದ್ರಷ್ಟಾ** ಎಂದರೆ ಯಜಮಾನರನ್ನು ಅನುಗ್ರಹದಿಂದ ನೋಡುವವನು ಎಂದಾಗುತ್ತದೆ. ಆದರೆ ಕೆಲವೆಡೆಗಳಲ್ಲಿ, ಎಂದರೆ,

**ತ್ವಂ ವೃಷಾ ವೃಷತ್ವೇಭಿರ್ಮಹಿತ್ವಾ ದ್ಯುಮ್ನೇಭಿರ್ದ್ಯುಮ್ನ್ಯಭವೋ ನೃಚಕ್ಷಾಃ ।**

(ಋ. ಸಂ. ೧–೯೧-೨)

ಇತ್ಯಾದಿ ಸ್ಥಳಗಳಲ್ಲಿ **ದರ್ಶಯಿತಾ** ಮಾನವರ ಕರ್ಮಗಳಿಗೆ ತಕ್ಕಂತೆ ಫಲಗಳನ್ನು ತೋರಿಸಿಕೊಡುವವನು ಎಂದು ಸೋಮನಿಗೆ ವಿಶೇಷಣವಾಗಿದೆ. ಮತ್ತು—

**ನೃಚಕ್ಷಾ ಏಷ ದಿವೋ ಮಧ್ಯ ಆಸ್ತ ಆಪಪ್ರಿವಾನ್ರೋದಸೀ ಅಂತರಿಕ್ಷಂ ।**

(ಋ. ಸಂ. ೧೦–೧೩೯-೨)

ಎಂಬಲ್ಲಿ ಸ್ವಭಿಃ ರಶ್ಮಿಭಿಃ ಪ್ರಕಾಶಮಾನಃ ರಶ್ಮಿಗಳೊಡನೆ ಪ್ರಕಾಶಿಸುವ ಎಂದು ಸವಿತೃವಿಗೆ ವಿಶೇಷಣವಾಗಿದೆ. ಈ ಪದವು ಒಬ್ಬ ರಾಕ್ಷಸನಿಗೂ ವಿಶೇಷಣವಾಗಿದೆಯೆಂದು Monier Willians ಎಂಬ ಪಂಡಿತನು Sanskrit. English Dictionary ಯಲ್ಲಿ ಹೇಳಿದ್ದಾನೆ. ಆದರೆ ಅದಕ್ಕೆ ಆಧಾರವಾವುದೆಂದು ಹೇಳಿಲ್ಲ.

**ಅರುಷಃ**—ಈ ಪದವು ಅಶ್ವನಾಮಗಳಲ್ಲಿ (ನಿ. ೨-೧೭) ಉಕ್ತವಾಗಿದೆ. ಸಾಯಣರು ಬಹಳವಾಗಿ ಪ್ರಕಾಶಿಸುವವನು ಎಂದು ಅರ್ಥವನ್ನು ಮಾಡಿ, ಅಗ್ನಿಯು ರಾತ್ರಿಗಳಲ್ಲಿ ಬೆಳಗುವವನಾಗಿ ತನ್ನ ಪ್ರಭೂತವಾದ ಜ್ವಾಲೆಗಳನ್ನು ಅತಿಶಯವಾಗಿ ಪ್ರಕಾಶಗೊಳಿಸಲಿ ಎಂದು ವಿವರಿಸಿದ್ದಾರೆ.

**ಅರುಷ** ಶಬ್ದಕ್ಕೆ ಅನೇಕ ಅರ್ಥಗಳಿರುವುದರಿಂದ ಈ ಪದಕ್ಕೆ ಸಂದರ್ಭಾನುಸಾರವಾಗಿ ಆಗತಕ್ಕ ಅರ್ಥಗಳನ್ನು ಗಮನಿಸಬೇಕು. ನಿರುಕ್ತಕಾರರು ಈ ಪದವನ್ನು ಅಶ್ವನಾಮಗಳಲ್ಲಿ ಮಾತ್ರವಲ್ಲದೇ, **ಗತಿಕರ್ಮನಾಮಗಳಲ್ಲಿಯೂ** (ನಿ. ೩-೯) **ಉಷಸ್ಸಿನ** ಪರ್ಯಾಯನಾಮವಾಗಿಯೂ (ನಿ. ೨-೧೯) ಪಠಿಸಿದ್ದಾರೆ. ಅಲ್ಲದೇ,

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**
**ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀರ್ಯಂತಿ ಮಾತರಃ ॥**
(ಋ. ಸಂ. ೧-೯೨-೧)

ಎಂಬ ಋಕ್ಕಿನಲ್ಲಿ **ಅರುಷೀಃ ಆರೋಚಮಾನಾ**, ಕಾಂತಿಯುತಳಾದ ಎಂಬರ್ಥವಾಗಿ ಉಷಸ್ಸಿಗೆ ವಿಶೇಷಣವಾಗಿದೆ. ಹೀಗೆ ಈ ಪದವು ಕೆಲವುಕಡೆ ವಿಶೇಷಣರೂಪದಲ್ಲಿಯೂ, ಇನ್ನೂ ಕೆಲವುಕಡೆ ವಿಶೇಷ್ಯರೂಪದಲ್ಲಿಯೂ ಉಪಯೋಗಿಸಲ್ಪಟ್ಟು ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾಹರಣೆಗೆ—

**ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿ ತಸ್ಥುಷಃ ।**
**ರೋಚಂತೇ ರೋಚನಾ ದಿವಿ ॥** (ಋ. ಸಂ. ೧-೬-೧)

ಎಂಬ ಋಕ್ಕಿನಲ್ಲಿರುವ **ಅರುಷ** ಶಬ್ದವನ್ನು ಪರಿಶೀಲಿಸಿದರೆ, ಅಲ್ಲಿ ಋಷಿಯು ಸೂರ್ಯೋದಯವನ್ನು ವರ್ಣಿಸಿದ್ದಾನೆ. ಇಂದ್ರನು ಪ್ರಕಾಶಮಾನವಾದ ಅಹಸ್ಸಿನ ದೇವತೆಯೆಂದೂ, ಸೂರ್ಯನು ಅವನ ಅಶ್ವವೆಂದೂ, ಮರುತ್ತುಗಳು ಅವನ ಸಖರೆಂದೂ ಭಾವಿಸಿದೆ. **ಅರುಷ**ಶಬ್ದವು ಕೆಂಪುಬಣ್ಣವೆಂದು ಅರ್ಥವನ್ನು ಕೊಡುವುದಾದರೂ ಇಲ್ಲಿ ಅಶ್ವಪರ್ಯಾಯವಾಗಿಯಾಗಲಿ ಅಥವಾ ಅಶ್ವರೂಪದ ಸೂರ್ಯಪರ್ಯಾಯವಾದ ಪದವಾಗಲಿ ಆಗಿದೆ. ಬ್ರಧ್ನವೆಂದು **ಅರುಷ** ಶಬ್ದಕ್ಕೆ ವಿಶೇಷಣವಾಗಿದೆ. ಇದೇ ರೀತಿ ವಿಶೇಷ್ಯವಾಗಿದ್ದು ಸ್ವತಂತ್ರವಾದ ಮತ್ತು ರೂಢವಾದ ಅರ್ಥವನ್ನು ಕೊಡತಕ್ಕ ಸನ್ನಿವೇಶಗಳು ಬಹಳವಾಗಿವೆ. ಉದಾಹರಣೆಗೆ—

**ತವ ತ್ಯೇ ಅಗ್ನೇ ಹರಿತೋ ಘೃತಸ್ನಾ ರೋಹಿತಾಸ ಋಜ್ವಂಚಃ ಸ್ವಂಚಃ ।**
**ಅರುಷಾಸೋ ವೃಷಣ ಋಜುಮುಷ್ಕಾ ಆ ದೇವತಾತಿಮಹ್ವಂತ ದಸ್ಮಾಃ ॥**
(ಋ. ಸಂ. ೪-೬-೯)

ಎಂಬ ಋಕ್ಕಿನಲ್ಲಿ **ಹರಿತಃ, ರೋಹಿತಾಸಃ, ಅರುಷಾಸಃ** ಎಂಬ ವರ್ಣನಾಮಗಳು ಆಯಾ ವರ್ಣನಾಮದ ಅಶ್ವಗಳನ್ನು ಸೂಚಿಸುತ್ತವೆ. ಮತ್ತು—

**ಅವರ್ಧಯನ್ತ್ಸುಭಗಂ ಸಪ್ತ ಯಹ್ವೀಃ ಶ್ವೇತಂ ಜಜ್ಞಾನಮರುಷಂ ಮಹಿತ್ವಾ ।**
**ಶಿಶುಂ ನ ಜಾತಮಭ್ಯಾರುರಶ್ವಾ ದೇವಾಸೋ ಅಗ್ನಿಂ ಜನಿಮನ್ವಪುಷ್ಯನ್ ॥**
(ಋ. ಸಂ. ೩-೧-೪)

ಎಂಬಲ್ಲಿ ಅಗ್ನಿಗೆ ವಿಶೇಷಣವಾಗಿಯೂ,

ಸಿಂಧುರ್ಹ ವಾಂ ರಸಯಾ ಸಿಂಚದಶ್ವಾನ್ ಘೃಣಾ ವಯೋಽರುಷಾಸಃ ಪರಿ ಗ್ಮನ್ |

(ಋ. ಸಂ. ೪-೪೩-೬)

ಇತ್ಯಾದ್ಯನೇಕ ಋಕ್ಕುಗಳಲ್ಲಿ (೧-೧೧೮-೫ ; ೫-೭೩-೫) ಅಶ್ವಾದಿಗಳಿಗೆ ವಿಶೇಷಣವಾಗಿಯೂ ಉಪಯೋಗಿಸಲ್ಪಟ್ಟಿದೆ. ಕೆಲವು ಕಡೆಗಳಲ್ಲಿ **ಅರುಷ** ವೆಂಬ ಪ್ರತ್ಯೇಕವಾದ ದೇವತೆಯನ್ನೇ ನಿರ್ದೇಶಿಸಿದ ಅಂಕಿತನಾಮವಾಗಿಯೂ ಉಪಯೋಗಿಸಿರುವುವನ್ನು ನೋಡಬಹುದು. ಎರಡು ಋಕ್ಕುಗಳನ್ನು ಮಾತ್ರ ಉದಾಹರಣೆಗೆ ತೆಗೆದುಕೊಂಡರೆ ಈ ಅಂಶವು ವ್ಯಕ್ತವಾಗುತ್ತದೆ.

ಅಪ ಸ್ವಸುರುಷಸೋ ನಗ್ಜಿಹೀತೇ ರಿಣಕ್ತಿ ಕೃಷ್ಣೀರರುಷಾಯ ಪಂಥಾಂ |
ಅಶ್ವಾಮಘಾ ಗೋಮಘಾ ವಾಂ ಹುವೇಮ ದಿವಾ ನಕ್ತಂ ಶರುಮಸ್ಮದ್ಯುಯೋತಂ ||

(ಋ. ಸಂ. ೭-೭೧-೧)

ಇಲ್ಲಿ **ಅರುಷಾಯ** ಎಂಬ ಪದಕ್ಕೆ ಸಾಯಣರೇ ನಿರ್ದಿಷ್ಟವಾದ ಅರ್ಥವನ್ನು ಹೇಳಲಾಗಲಿಲ್ಲ. **ಅರೋಚಮಾನಾಯ ಅಹ್ನೇ ಸೂರ್ಯಾಯ ವಾ** ಎಂದು ಎರಡನ್ನೂ ಪರ್ಯಾಯವಾಗಿ ಹೇಳಿದ್ದಾರೆ. ಈ ಋಕ್ಕನ್ನು ವಿವರಿಸುವಾಗ Max-Muller ಎಂಬ ಪಂಡಿತನ ಅಭಿಪ್ರಾಯವು ಗಮನಾರ್ಹವಾದುದು.

Here, Arusha shares the same half-mythological character as Ushas, where we should speak of dawn and morning as mere periods of time, the Vedic poet speakes of them as living and intelligent beings, half human, half divine, as powers of nature capable of understanding his prayers and power ful enough to reward his praises. I do not think that we need hesitate to take Arusha in this passage as a propar name of the morning or of the morning sun to whom the dark goddess, the Night, yeilds the path when he rises in the east.

[ The Sacred Books of the East. Vol. XXXII. p. 21 ]

ಇದೇ ರೀತಿಯಲ್ಲಿ,

ವಿಶೋವಿಶ ಈಡ್ಯಮಧ್ವರೇಷ್ವದೃಪ್ತಕ್ರತುಮರತಿಂ ಯುವತ್ಯೋಃ |
ದಿವಃ ಶಿಶುಂ ಸಹಸಃ ಸೂನುಮಗ್ನಿಂ ಯಜ್ಞಸ್ಯ ಕೇತುಮರುಷಂ ಯಜಧ್ಯೈ ||

(ಋ. ಸಂ. ೬-೪೯-೨)

ಎಂಬ ಋಕ್ಕಿನಲ್ಲಿಯೂ ಸಹ **ಅರುಷಂ** ಎಂಬ ಪದವು ಅಗ್ನಿಗೆ ವಿಶೇಷಣವಾಗಿರುವುದು ಸ್ಪಷ್ಟವಾಗಿದ್ದರೂ ಸಹ **ಅರುಷ** ಪದವು ಅಗ್ನಿಪರ್ಯಾಯವಾದ ಮತ್ತು ಅಗ್ನ್ಯಂಶವನ್ನು ಸೂಚಿಸುವ ಬೇರೆ ಅಂಕಿತನಾಮವೇ ಆಗಿದೆಯೆಂದು ಹೇಳಿದರೂ ತಪ್ಪಾಗಲಾರದು. ಈ ಋಕ್ಕನ್ನು ವಿವರಿಸುವಾಗಲೂ ಸಹ Max Muller ಎಂಬ ಪಂಡಿತನು ತನ್ನ ಅಭಿಪ್ರಾಯವನ್ನು ಈರೀತಿ ಸೂಚಿಸಿದ್ದಾನೆ.

..................But I return to my orignal transl ation, and I prefer to see in Arusha as the representative of the rising Sun and, at the same time, of the sacrificial fire of the morning, but nevertheless as having in the mind of

the poet a personality of his own. Heis the child of Dyu, originally, the offspring of heaven. He is the son of strength, originally genarated by the strong rubbing of the Aranis. He is the light of the sacrifice, whether as reminding man that the time for the morning sacrifice has come, or as himself lighting the sacrifice on the eastern altar of the sky. He is Arusha, originally as clothed in bright red colour, but gradually changed into the representative of the morning.

[S. B. E. Vol. 32. p. 25-6].

ವಯಂ ಹಿ ತೇ ಅಮನ್ಮಹ್ಯಾನ್ತಾದಾ ಪರಾಕಾತ್ । ಅಶ್ವೇ ನ ಚಿತ್ರೇ ಅರುಷಿ ॥

(ಋ. ಸಂ. ೧-೩೦-೨೧)

ಯುಕ್ಷ್ವಾ ಹ್ಯರುಷೀ ರಥೇ ಹರಿತೋ ದೇವ ರೋಹಿತಃ । ತಾಭಿರ್ದೇವಾँ ಇಹಾ ವಹ ॥

(ಋ. ಸಂ ೧-೧೪-೧೨)

ಅಧಿ ಶ್ರಿಯಂ ನಿ ದಧುಶ್ಚಾರುಮಸ್ಮಿನ್ದಿವೋ ಯದಕ್ಷೀ ಅಮೃತಾ ಅಕೃಣ್ವನ್ ।
ಅಧ ಕ್ಷರಂತಿ ಸಿಂಧವೋ ನ ಸೃಷ್ಟಾಃ ಪ್ರ ನೀಚೀರಗ್ನೇ ಅರುಷೀರಜಾನನ್ ।

(ಋ. ಸಂ.೧-೭೨-೧೦)

ಇವೇ ಮುಂತಾದ ಕಡೆಗಳಲ್ಲಿ ಅಗ್ನಿಯ ಹೊಂಬಣ್ಣದ ಕುದುರೆಯೆಂದೂ ಉಳಿದ ೮-೬೮-೧೮ ಇತ್ಯಾದಿ ಋಕ್ಕುಗಳಲ್ಲಿ ಸಾಮಾನ್ಯವಾದ ಕುದುರೆಯೆಂದೂ ಅರ್ಥವಾಗುತ್ತದೆ. ಸ್ತ್ರೀಲಿಂಗದಲ್ಲಿ ಉಪಯೋಗಿಸಿರುವ **ಅರುಷೀ** ಎಂಬ ಪದದ ವಿಶೇಷಾರ್ಥಗಳನ್ನು ಕುರಿತು Max muller ಪಂಡಿತನು ಪುನಃ ಈರೀತಿ ಹೇಳಿದ್ದಾನೆ.

Further on, where the meanings attributable to Arushi in the Veda are collected, it is said that Arushi means a red house, also the teams of Agni and Ushas. Now, here surely a distinction should have been made between tho passages in which Arushi means a real horse and those where it expresses the imaginary steeds of Agni. The former, it should be observed, occur in one mandala only and in places of somewhat doubtful authority. Again, two passages are set apart where Arushi is supposed to mean flames. Now, it may be perfectly true that the red horses of Agni are meant for flames, just as the red horses of Indra may be the rays of the Sun. But in that case, the red horses of Agni, should always have been thus translated, or rather interpreted, and not in one passage only.

[S. B. E XXXII. p. 27]

ಪ್ರಕೃತವಾದ ಋಕ್ಕಿನಲ್ಲಿ **ಅರುಷಃ** ಎಂಬ ಪದಕ್ಕೆ ಅತಿಶಯವಾಮದೂ ಹೊಂಬಣ್ಣವುಳ್ಳದ್ದೂ ಆದ ಪ್ರಕಾಶವೆಂದರ್ಥ ಮಾಡಬಹುದಾಗಿದೆ.

**ವಸೋ ಅಸ್ಮಾನ್ ನೇಷಿ—ಸರ್ವಸ್ಯ ಪ್ರಕಾಶಪ್ರದಾನೇನ ಸ್ವಸ್ವಸ್ಥಾನೇಷು ವಾಸಯಿತಃ ಅಗ್ನೇ ತ್ವಂ ಅಸ್ಮಾನ್ ಕರ್ಮಾನುರೂಪಫಲಾನಿ ಚ ಪ್ರಾಪಯ** । ಇಲ್ಲಿ ವಸುಶಬ್ದಕ್ಕೆ ಎಲ್ಲರಿಗೂ ಬೆಳಕನ್ನು ಅನುಗ್ರಹಿಸುದರಿಂದ ಅವರವರ ವಾಸಸ್ಥಾನಗಳಲ್ಲಿ ಸುಖವಾಗಿರುಸುವವನೆಂದು ಅರ್ಥಮಾಡಿ, ಯಜ್ಞಮಾಡುವ ನಮ್ಮನ್ನು ನಮ್ಮವು ಕರ್ಮ್ಮ ಕರ್ಮಗಳಿಗೆ ಅನುರೂಪವಾದ ಫಲಗಳನ್ನು ನಮಗೆ ಅಗ್ನಿಯು ಅನುಗ್ರಹಿಸಲಿ ಎಂದು ಆಶಿಸಿದೆ.

**ಅಂಹಃ—ಅಸ್ಮಾಕಂ ದಾರಿದ್ರ್ಯಲಕ್ಷಣಂ ಪಾಪಂ** । ನಮ್ಮ ದರಿದ್ರತನದರೂಪವಾದ ಪಾಪವೆಂದು ಅರ್ಥಮಾಡಿ ಅಗ್ನಿಯು ಈ ಪಾಪವನ್ನು ನಾಶಮಾಡಲಿ ಎಂದು ಪ್ರಾರ್ಥಿಸಿದೆ.

**ಯಸ್ಮೈ ತ್ವಮಾಯಜಸೇ ಸ ಸಾಧತ್ಯನರ್ವಾ ಕ್ಷೇತಿ ದಧತೇ ಸುವೀರ್ಯಂ ।**
**ಸ ತೂತಾವ ನೈನಮಶ್ನೋತ್ಯಂಹತಿರಗ್ನೇ ಸಖ್ಯೇ ಮಾರಿಷಾಮಾ ವಯಂ ತವ ॥**

(ಋ. ಸಂ. ೧-೯೪-೯)

ನಿರುಕ್ತಕಾರರು ಈ ಋಕ್ಕನ್ನು ಉದಹರಿಸಿ **ನೈನಮಂಹತಿರಶ್ನೋತ್ಯಂಹತಿಶ್ಚಾಂಹಶ್ಚಾಂಹುಶ್ಚ ಹಂತೇರ್ನಿರೂಢೋಪಧಾತ್ ವಿಪರೀತಾತ್** (ನಿ. ೪—೨೫) ಹನಧಾತುವಿನಿಂದ ಅಂಹಸ್‌ಶಬ್ದವು ನಿಷ್ಪನ್ನವಾಗಿದೆ. ಹನಧಾತುವಿನ ನಕಾರವು ಅಕಾರದಮುಂದೆ ಬಂದಿರುವುದರಿಂದ ಅಂಹತಿ, ಅಂಹಃ, ಅಂಹುಃ ಎಂಬ ಶಬ್ದಗಳಾಗಿವೆ. ಪಾಪವು ಇದರಿಂದ ಬೋಧ್ಯವಾಗಿದೆ ಎಂದು ದುರ್ಗಾಚಾರ್ಯರು ವ್ಯಾಖ್ಯಾನಮಾಡಿದ್ದಾರೆ.

**ಯಜಿಷ್ಠ—ಯುವತಮ** ಯಾವಾಗಲೂ ಅಗ್ನಿಯು ಯೌವ್ವನದಲ್ಲಿಯೇ ಇರತಕ್ಕವನೆಂದು ಅಗ್ನಿಯನ್ನು ಸಂಬೋಧಿಸಿ ಈ ಅಗ್ನಿಯು **ಅಭಿಲಷಿತಫಲಪ್ರದಾನೇನಪ್ರಾಪ್ತಕಾಮಾನ್ ಕುರು** ನಮ್ಮ ಇಷ್ಟಗಳನ್ನು ನೆರವೇರಿಸಿ ಕೊಡುವುದರಿಂದ ನಮ್ಮನ್ನು ಪೂರ್ಣಕಾಮರನ್ನಾಗಿ ಮಾಡಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ನೃಚಕ್ಷಾಃ—**ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ಅದಾದಿ ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಪ್ರಕಾಶಾರ್ಥದಲ್ಲಿ ಪ್ರಯುಕ್ತವಾಗಿದೆ. **ಅಸುನ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ಚಕ್ಷೇರ್ಬಹುಲಂ ಶಿಚ್ಚ** (ಉ. ಸೂ. ೪-೬೭೨) ಎಂಬುದರಿಂದ ಅಸುನ್ ಪ್ರತ್ಯಯ. ಶಿತ್ವ ವಿಧಾನಮಾಡಿರುವುದರಿಂದ ಆರ್ಧಧಾತುಕಸಂಜ್ಞೆ ಬರುವುದಿಲ್ಲ. ಇದರಿಂದ ಧಾತುವಿಗೆ ಖ್ಯಾಞಾದೇಶ ಬರುವುದಿಲ್ಲ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವೃಷಭ—**ವೃಷು ಸೇಚನೇ ಧಾತು. **ಅಭಚ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ಋಷಿವೃಷಿಭ್ಯಾಂಕಿತ್** (ಉ. ಸೂ. ೪-೪೦೩) ಎಂಬುದರಿಂದ ಇದಕ್ಕೆ ಅಭಚ್ ಪ್ರತ್ಯಯ. ಕಿತ್ವ ಅತಿದೇಶಮಾಡಿರುವುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಸಂಬುದ್ಧಿಯಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ.

**ಪೂರ್ವೀಃ—**ಪುರುಶಬ್ದ ಗುಣವಾಚಕವಾಗಿದೆ. **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಷ್. ಛಾಂದಸವಾಗಿ ಆದಿಯ ಉಕಾರಕ್ಕೆ ದೀರ್ಘ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಭಾಹಿ—**ಭಾ ದೀಪ್ತೌ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವಸೋ**—ವಸ ನಿವಾಸೇ ಧಾತು. **ಉಃ** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ಶೃಸ್ವೃಸ್ನಿಹಿತ್ರ್ಯಸಿವಸಿ**—(ಉ. ೧-೧೦) ಎಂಬುದರಿಂದ ಉ ಪ್ರತ್ಯಯ. ಸಂಬುದ್ಧ್ಯಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನೇಷಿ**—ಣೀಞ್ ಪ್ರಾಪಣೇ ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲಟ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಸಿಪ್ ನಿಮಿತ್ತವಾಗಿ ಧಾತುವಿನ ಇಕಾರಕ್ಕೆ ಗುಣ. **ಆಮಂತ್ರಿತಂ ಪೂರ್ವ**—(ಪಾ. ಸೂ. ೮-೧-೭೨) ಎಂಬುದರಿಂದ ಪೂರ್ವಶಬ್ದಕ್ಕೆ ಅವಿದ್ಯಮಾನವದ್ಭಾವ ಬರುತ್ತದೆ. ಆದುದರಿಂದ ಪದದ ಪರದಲ್ಲಿ ತಿಙಂತ ಬಂದಂತಾಗಲಿಲ್ಲ. ಇದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಉದಾತ್ತವಾಗುವುದರಿಂದ ಧಾತು ಸ್ವರ ಉಳಿಯುತ್ತದೆ.

**ಪರ್ಷಿ**—ಪೄ ಪಾಲನಪೂರಣಯೋಃ ಧಾತು. ಲಟ್‌ಮಧ್ಯಮಪುರುಷಏಕವಚನಾಂತರೂಪ. ಹಿಂದಿನಂತೇ ವಿಕರಣಕ್ಕೆ ಲುಕ್. **ಚಾದಿಷುಚ** ಎಂಬುದರಿಂದ ಚಕಾರದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಕೃಧಿ**—ಡುಕೃಞ್‌ಕರಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** ಎಂಬುದರಿಂದ ಅದಕ್ಕೆ ಹಿ ಆದೇಶ. **ಶ್ರುಶೃಣುಪೃಕೃವೃಭ್ಯಶ್ಛಂದಸಿ** (ಪಾ. ಸೂ. ೬-೪-೧೦೨) ಎಂಬುದರಿಂದ ಹಿ ಎಂಬುದಕ್ಕೆ ಧಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಉ) ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ರಾಯೇ**—ರಾ ದಾನೇ ಧಾತು. **ರಾತೇರ್ಡೈಃ** (ಉಸೂ. ೨-೨೫) ಎಂಬುದರಿಂದ ಡೈ ಪ್ರತ್ಯಯ. ಡಿತ್ತಾದುದರಿಂದ ಟಿಗೆ (ಆ) ಲೋಪ. ರೈ ಶಬ್ದವಾಗುತ್ತದೆ. ಚತುರ್ಥಿಯಲ್ಲಿ ಆಯಾ ದೇಶ. **ಊಡಿದಂಪದಾದಿ**—(ಪಾ ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಉಶಿಜಃ**—ವಶ ಕಾಂತೌ ಧಾತು. **ವಶೇಃ ಕಿಚ್ಚ** (ಉ ಸೂ. ೨. ೭೫) ಎಂಬುದರಿಂದ ಇಜಿ ಪ್ರತ್ಯಯ. ಕಿತ್ವವಿಧಾನಮಾಡಿರುವುದರಿಂದ **ಗೃಹಿಜ್ಯಾ**—ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಪ್ರತ್ಯಯ ಸ್ವರದೀಂದ ಇಕಾರ ಉದಾತ್ತವಾಗುತ್ತದೆ.

**ಯವಿಷ್ಠ**—ಅತಿಶಯೇನ ಯುವಾ ಯವಿಷ್ಠಃ **ಅತಿಶಾಯನೇತಮಬಿಷ್ಠನೌ** ಎಂಬುದರಿಂದ ಇಷ್ಠನ್ ಪ್ರತ್ಯಯ. **ಸ್ಥೂಲದೂರ**—(ಪಾ. ಸೂ- ೬-೪-೧೫೬) ಎಂಬುದರಿಂದ ಯಣಾದಿ ಪರಕ್ಕೆ (ವನ್) ಲೋಪ. ಪೂರ್ವದ ಉಕಾರಕ್ಕೆ ಗುಣ ಅವಾದೇಶ. **ಆಮಂತ್ರಿತಸ್ಯಚ** (ಪಾ ಸೂ. ೮-೧-೧೯) ಎಂಬುದರಿಂದ ಸಂಬುದ್ಧಿಯಲ್ಲಿ ನಿಘಾತ ಸ್ವರ ಬರುತ್ತದೆ.

———

**ಸಂಹಿತಾಪಾಠಃ**

**ಅಷಾಹ್ಯೋ ಅಗ್ನೇ ವೃಷಭೋ ದಿದೀಹಿ ಪುರೋ ವಿಶ್ವಾಃ ಸೌಭಗಾ ಸಂಜಿಗೀವಾನ್ ।**
**ಯಜ್ಞಸ್ಯ ನೇತಾ ಪ್ರಥಮಸ್ಯ ಪಾಯೋರ್ಜಾತವೇದೋ ಬೃಹತಃ ಸುಪ್ರಣೀತೇ ॥೪॥**

ಪದಪಾಠಃ

ಅಷಾಳ್ಹಃ । ಅಗ್ನೇ । ವೃಷಭಃ । ದಿದೀಹಿ । ಪುರಃ । ವಿಶ್ವಾಃ । ಸೌಭಗಾ । ಸಂಽಜಿಗೀವಾನ್ ।
ಯಜ್ಞಸ್ಯ । ನೇತಾ । ಪ್ರಥಮಸ್ಯ । ಪಾಯೋಃ । ಜಾತಽವೇದಃ । ಬೃಹತಃ । ಸುಽಪ್ರನೀತೇ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ಅಷಾಳ್ಹಃ ಶತ್ರುಭಿರಸೋಢೋಽಪರಾಜಿತಃ । ಸ್ವಯಂ ಶತ್ರೂಞ್ಜಯತೀತ್ಯರ್ಥಃ । ವೃಷಭಃ ಕಾಮಾನಾಂ ವರ್ಷಯಿತಾ ಏವಂಭೂತಸ್ತ್ವಂ ವಿಶ್ವಾಃ ಸರ್ವಾಃ ಪುರಃ ಶತ್ರೂಣಾಂ ಪುರೀಃ ಸೌಭಗಾ ತತ್ರತ್ಯಾನಿ ಶೋಭನಾನ್ಯುತ್ತಮಾನಿ ಧನಾನಿ ಚ ಸಂಜಿಗೀವಾನ್ ಸಮ್ಯಗ್ಜಯನ್ ದೀದಿಹಿ । ಸರ್ವತೋ ಜ್ವಾಲಾಭಿರ್ದೀಪ್ಯಸ್ವ । ಸುಪ್ರಣೀತೇ ಶೋಭನಪ್ರಣಯನ ಜಾತವೇದೋ ಜಾತಪ್ರಜ್ಞ ಹೇ ಅಗ್ನೇ ಬೃಹತ ಉಪದಿಷ್ಟಾತಿದಿಷ್ಟದ್ವಿವಿಧೇತಿಕರ್ತವ್ಯತಾಕಲಾಪೇನ ಮಹತಃ ಪಾಯೋಸ್ತತ್ಫಲಪ್ರದಾನೇನ ರಕ್ಷಕಸ್ಯ ಪ್ರಥಮಸ್ಯ ಮುಖ್ಯತಯಾ ಪ್ರಥಮಂ ಕ್ರಿಯಮಾಣಸ್ಯ । ಏಷ ವಾವ ಪ್ರಥಮೋ ಯಜ್ಞೋ ಯಜ್ಞಾನಾಂ ಯಜ್ಜ್ಯೋತಿಷ್ಟೋಮ ಇತಿ ಶ್ರುತೇಃ । ತಾದೃಶಸ್ಯ ಜ್ಯೋತಿಷ್ಟೋಮಾಖ್ಯಸ್ಯ ಯಜ್ಞಸ್ಯ ನೇತಾ ಹವಿರ್ವಹನದೇವತಾಹ್ವಾನಾದಿಕ್ರಿಯಾಯಾ ನಿರ್ವಾಹಕೋ ಭವ ॥ ಅಷಾಳ್ಹಃ । ಷಹ ಮರ್ಷಣ ಇತ್ಯಸ್ಯ ನಿಷ್ಠಾಯಾಂ ಹೋ ಢ ಇತಿ ಢಕಾರಃ । ಝಷಸ್ತಥೋರ್ಧೋಧ ಇತಿ ತಸ್ಯ ಧಕಾರಃ । ಷ್ಟುತ್ವೇನ ಢಃ । ಢಲೋಪೇ ಕೃತೇ ಢ್ರಲೋಪೇ ಪೂರ್ವಸ್ಯ ದೀರ್ಘ ಇತಿ ದೀರ್ಘಃ । ಓತ್ವಾಭಾವಶ್ಛಾಂದಸಃ । ಸಹೇಃ ಸಾಡಃ ಸ ಇತಿ ಸಕಾರಸ್ಯ ಮೂರ್ಧಾನ್ಯಾದೇಶಃ। ಅವ್ಯಯಪೂರ್ವಪದಪ್ರಕೃತಿಸ್ವರೇ ನಞ್ಸ್ವರಃ । ವೃಷಭಃ । ವೃಷ ಸೇಚನೇ। ಋಷಿವೃಷಿಭ್ಯಾಂ ಕಿದಿತ್ಯಭಚ್ । ಚಿತ್ಸ್ವರಃ । ದೀದಿಹಿ । ದಿವು ಕ್ರೀಡಾದಾವಿತ್ಯಸ್ಯ ಯಙ್ಲುಕಿ ಲೋಟೋ ಮಧ್ಯಮೈಕವಚನೇ ಸಂಜ್ಞಾಪೂರ್ವಕೋ ವಿಧಿರನಿತ್ಯ ಇತ್ಯಭ್ಯಾಸಸ್ಯ ಗುಣಾಭಾವಃ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ ಇತಿ ಪೂರ್ವತ್ರಾಸಿದ್ಧಮಿತ್ಯಸ್ಯಾಪ್ರವೃತ್ತೌ ಪರತ್ವಾಝ್ಝಲಿ ಚೇತಿ ದೀರ್ಘತ್ವಂ। ಪಶ್ಚಾಚ್ಛಲೋಪಃ । ಸೌಭಗಾ । ಸುಭಗಾಸ್ಮಂತ್ರ ಇತ್ಯುದ್ಗಾತ್ರಾದಿಷು ಪಾಠಾದ್ಭಾವಾರ್ಥೇಽಞ್ । ಹೃದ್ಭಗಸಿಂಧ್ವಂತೇ ಇತಿ ಪೂರ್ವಪದಸ್ಯ ವೃದ್ಧಿಃ । ಉತ್ತರಪದಸ್ಯ ವೃದ್ಧಿರ್ನ ಭವತಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾತ್ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ತೇನ ಚ ಸೌಭಾಗ್ಯೇನ ಧನಾನ್ಯುಪಲಕ್ಷ್ಯಂತೇ । ಞಿತ್ತ್ವಾದಾದ್ಯುದಾತ್ತಃ । ಸಂಜಿಗೀವಾನ್ । ಜಿ ಜಯೇ । ಛಂದಸಿ ಲಿಟ್ । ತಸ್ಯ ಕ್ವಸುಃ । ಸನ್ಲಿಟೋರ್ಜೇರಿತಿ ಕವರ್ಗಾದೇಶಃ । ಪ್ರತ್ಯಯಸ್ವರಃ । ದೀರ್ಘಶ್ಛಾಂದಸಃ । ಪಾಯೋಃ । ಪಾ ರಕ್ಷಣೇ । ಕೃವಾಪಾಜಿಮಿಸ್ವದಿಸಾಧ್ಯಶೂಭ್ಯ ಉಣ್ ... ಮಿಾತ್ಯಾದಿನಾ ಉಣ್ಪ್ರತ್ಯಯಃ । ಆತೋ ಯುಕ್ ಚಿಣ್ಕೃತೋರಿತಿ ಯುಗಾಗಮಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಷಾಳ್ಹಃ—ಅಪ್ರತಿಹತನಾದವನೂ । ವೃಷಭಃ—ಇಷ್ಟಾರ್ಥಗಳನ್ನು ಸುರಿಸುವವನೂ ಆದ ನೀನು । ವಿಶ್ವಾಃ—ಸಮಸ್ತವಾದ । ಪುರಃ—ಶತ್ರುಪಟ್ಟಣಗಳನ್ನೂ । ಸೌಭಗಾ—ಅವುಗಳ ಉತ್ತಮವಾದ ಐಶ್ವರ್ಯಗಳನ್ನೂ । ಸಂಜಿಗೀವಾ—ಪೂರ್ಣವಾಗಿ ಜಯಿಸುತ್ತಾ । ದಿದೀಹಿ—ಅತಿಶಯವಾಗಿ ಪ್ರಕಾಶಿಸು । ಸುಪ್ರಣೀತೇ—ಶ್ರೇಷ್ಠವಾದ ಮಾರ್ಗದರ್ಶಕನೂ । ಜಾತವೇದಃ—ಸಕಲವನ್ನೂ ತಿಳಿದವನೂ ಆದ ಅಗ್ನಿಯೇ ।

**ಬೃಹತಃ**—ಮಹತ್ತ್ವಾದುದೂ | **ಪಾಯೋಃ**—(ಫಲಪ್ರದಾನದಿಂದ) ರಕ್ಷಕವಾದುದೂ | **ಪ್ರಥಮಸ್ಯ**—ಎಲ್ಲಕ್ಕಿಂತಲೂ ಮೊದಲು ನೆರವೇರಿಸಲ್ಪಡುವುದೂ ಆದ | **ಯಜ್ಞಸ್ಯ**—ಜ್ಯೋತಿಷ್ಟೋಮರೂಪವಾದ ಯಜ್ಞಕ್ಕೆ | **ನೇತಾ**—ನಿರ್ವಾಹಕನಾಗಿ (ಇರು) ||

ಭಾವಾರ್ಥ

ಎಲೈ ಅಗ್ನಿಯೇ, ಅಪ್ರತಿಹತವಾದ ಶಕ್ತಿಯುಳ್ಳವನೂ, ಇಷ್ಟಾರ್ಥಗಳನ್ನು ಸುರಿಸುವವನೂ ಆದ ನೀನು ಸಮಸ್ತವಾದ ಶತ್ರುಪಟ್ಟಣಗಳನ್ನೂ ಅವುಗಳ ಉತ್ತಮವಾದ ಐಶ್ವರ್ಯಗಳನ್ನೂ ಪೂರ್ಣವಾಗಿ ಜಯಿಸುತ್ತಾ ಅತಿಶಯವಾಗಿ ಪ್ರಕಾಶಿಸು. ಶ್ರೇಷ್ಠವಾದ ಮಾರ್ಗದರ್ಶಕನೂ, ಸಕಲವನ್ನೂ ತಿಳಿದವನೂ ಆದ ಅಗ್ನಿಯೇ, ಮಹತ್ತ್ವಾದುದೂ, ಯಜ್ಞಕರ್ತರಿಗೆ ಫಲಗಳನ್ನು ಕೊಟ್ಟು ರಕ್ಷಿಸುವುದೂ, ಎಲ್ಲಕ್ಕಿಂತಲೂ ಪ್ರಥಮದಲ್ಲಿ ನೆರವೇರಿಸಲ್ಪಡುವುದೂ ಆದ ಜ್ಯೋತಿಷ್ಟೋಮರೂಪವಾದ ಯಜ್ಞಕ್ಕೆ ನಿರ್ವಾಹಕನಾಗಿರು.

English Translation

AGNI, you are irresistible and the showerer (of benefits), consume victorious all the cities (of the foe), and (all their) precious things : the duly worshipped, the knower of all that is born, (be for us) the conductor of the first great preserving sacrifice.

ವಿಶೇಷವಿಷಯಗಳು

ಅಷಾಳ್ಹಃ—**ಶತ್ರುಭಿರಸೋಢೋ ಅಪರಾಜಿತಃ** ಅಗ್ನಿಯು ಶತ್ರುಗಳಿಂದ ಜಯಿಸಲಶಕ್ಯನಾಗಿರುವವನು ಆದುದರಿಂದ **ಸ್ವಯಂ ಶತ್ರೂನ್ ಜಯತಿ** ತಾನಾಗಿಯೇ ಶತ್ರುಗಳನ್ನು ಜಯಿಸುವವನು ಎಂಬ ಅರ್ಥವನ್ನು ವರ್ಣಿಸಿದೆ.

**ಪುರಃ ಸೌಭಗಾ ಸಂಜಿಗೀವಾನ್ ದೀದಿಹಿ—ಶತ್ರೂಣಾಂ ಪುರೀಃ** ಪುರಃ ಎಂಬ ಶಬ್ದಕ್ಕೆ ಶತ್ರುಗಳ ನಗರವೆಂದು ಅರ್ಥಮಾಡಿದೆ, ಸೌಭಗಶಬ್ದದಿಂದ ನಗರದಲ್ಲಿ ಇರುವ ಧನವೆಂದೂ ಆಪ್ರಕಾರದಿಂದ ಇರುವ ಅತ್ಯುತ್ತಮವಾದ ಧನವನ್ನು ಅಗ್ನಿಯು ಜಯಿಸಿ, **ಸರ್ವಶಃ ಜ್ವಾಲಾಭಿರ್ದೀಪಸ್ವ** ಸರ್ವಪ್ರಕಾರದಿಂದಲೂ ಅಥವಾ ಎಲ್ಲಾ ಕಡೆಯಲ್ಲಿಯೂ ತನ್ನ ರಶ್ಮಿಗಳಿಂದ ಪ್ರಕಾಶಿಸಲಿ ಎಂದು ಆಶಿಸಿದೆ.

**ಜಾತವೇದಃ**—ನಿರುಕ್ತಕಾರರಿಂದ ಈಪದವು **ಜಾತಾನಿ ವೇದ, ಜಾತಾನಿ ವೈನಂ ವಿದುಃ. ಜಾತೇಜಾತೇ ವಿದ್ಯತ ಇತಿ ವಾ, ಜಾತವಿದ್ಯೋ ಜಾತಧನಃ, ಜಾತವಿದ್ಯೋ ಜಾತಪ್ರಜ್ಞಾನಃ ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಂ ಇತಿ ಬ್ರಾಹ್ಮಣಂ** ಎಂದು ವ್ಯಾಖ್ಯಾತವಾಗಿರುತ್ತದೆ.

**ಜಾತವೇದಸ್ಸಿನ** ಸ್ವರೂಪವನ್ನು ಬೃಹದ್ದೇವತೆಯಲ್ಲಿ ಈರೀತಿ ತಿಳಿಸಿದೆ.

**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ |**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ||**

(ಬೃ. ದೇ ೧–೬೭)

ಋಷಿಗಳು ಪೃಥ್ವಿಯ ಮೇಲಿರತಕ್ಕ ಅಗ್ನಿಯನ್ನು ಜಾತವೇದಸ್ಸೆಂದೂ ದ್ಯುಲೋಕದಲ್ಲಿರುವ ಅಗ್ನಿಯನ್ನು ವೈಶ್ವಾನರನೆಂದೂ ಕರೆಯುತ್ತಾರೆಂದು ಈ ಶ್ಲೋಕದಲ್ಲಿ ಹೇಳಿದೆ. ಮತ್ತು ಇದೇ ವಿವರಣೆಯನ್ನು ಮುಂದುವರಿಸುತ್ತಾ,

ವೈಶ್ವಾನರಂ ಶ್ರಿತೋಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।
ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸಿ ॥

(ಬೃ. ದೇ. ೧-೯೭)

ಅಗ್ನಿಯು ವೈಶ್ವಾನರನಲ್ಲಿಯೂ ವೈಶ್ವಾನರನು ಅಗ್ನಿಯಲ್ಲಿಯೂ ಅಡಕವಾಗಿ ಜಾತವೇದಸ್ಸು ಈ ಎರಡು ರೂಪಗಳಲ್ಲಿಯೂ ಅಡಕವಾಗಿದ್ದಾನೆಂದೂ, ಈ ಎರಡು ರೂಪಗಳೂ ಜಾತವೇದಸ್ಸಿನ ಬೇರೆ ಬೇರೆ ಅಂಶಗಳೆಂದೂ ವಿವರಿಸಿದೆ. ಹೀಗೆ ಮೊದಲನೇ ಅಧ್ಯಾಯದಲ್ಲಿ ಜಾತವೇದಸ್ಸಿನ ಸ್ಥಾನಗಳನ್ನು ಹೇಳಿ ಎರಡನೇ ಅಧ್ಯಾಯದಲ್ಲಿ ಜಾತವೇದಸ್ಸಿನ ಸ್ವರೂಪನಿರ್ವಚನವನ್ನು ಈರೀತಿ ತಿಳಿಸಿದೆ.

ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।
ಯೆಚ್ಛೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ॥

(ಬೃ. ದೇ. ೨-೩೦)

ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃಪುನಃ ।
ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ॥

(ಬೃ. ದೇ. ೨-೩೧)

ಉತ್ಪನ್ನವಾಗುವಾಗಲೇ ಸಕಲವನ್ನೂ ತಿಳಿಯುವುದರಿಂದಲೂ, ಅಥವಾ ಅವನಲ್ಲೇ ಜ್ಞಾನವು ಉತ್ಪನ್ನವಾದುದರಿಂದಲೂ, ಅಥವಾ ಉತ್ಪನ್ನವಾದಾಗಲೇ ಸಕಲ ಧನವನ್ನೂ ತಿಳಿದು ಹೊಂದಿರುವುದರಿಂದಲೂ, ಅಥವಾ ಪುನಃ ಪುನಃ ಉತ್ಪನ್ನವಾದಾಗಲೆಲ್ಲಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವವನಾದುದರಿಂದಲೂ, ಮಧ್ಯಲೋಕವಾಸಿಯಾದ **ಇಂದ್ರನಂತೆ ಜಾತವೇದಸ್ಸೆಂದು** ಅಗ್ನಿಯು ಸ್ತುತನಾಗಿದ್ದಾನೆಂದು ಬೃಹದೇವತೆಯಲ್ಲಿ ನಿರ್ವಚನವಿದೆ. ಇದರಂತೆಯೇ ಈ ಅಗ್ನಿಯ ಸ್ವರೂಪವನ್ನು ವಿವರಿಸಿ ಶತಪಥಬ್ರಾಹ್ಮಣದಲ್ಲಿ ಈರೀತಿ ಹೇಳಿದೆ.

ಯಃ ಸಂವತ್ಸರಂ ಜಾತಃ ಸ್ಯಾತ್ಪ್ರಾಣೋ ವಾ ಅಗ್ನಿಸ್ತಮೇತದ್ಬಿಭರ್ತ್ಯಥ ಹ ವೈ ರೇತಃ ಸಿಕ್ತಂ ಪ್ರಾಣೋಽನ್ವವರೋಹತಿ ತದ್ವಿಂದತೇ ತದ್ಯಜ್ಜಾತಂ ಜಾತಂ ವಿಂದತೇ ತಸ್ಮಾಜ್ಜಾತವೇದಾಃ ॥

(ಶ. ಬ್ರಾ. ೯-೫-೧೬-೮)

ಪ್ರಾಣರೂಪಿಯಾದ ಅಗ್ನಿಯು ಉತ್ಪನ್ನವಾದ ಸಕಲ ಭೂತಗಳನ್ನೂ ತನ್ನ ಶಕ್ತಿಯಿಂದ ವ್ಯಾಪಿಸಿಕೊಳ್ಳುವುದರಿಂದ **ಜಾತವೇದಸ್ಸೆಂದು** ಕರೆಯಲ್ಪಟ್ಟಿದೆಯೆಂದು ಹೇಳಿದೆ. ಯಜ್ಞಗೃಹದಲ್ಲಿ ಪೂಜಿಸಲ್ಪಡತಕ್ಕ ಈ ಜಾತವೇದಸ್ಸೇ ವಿಖ್ಯಾತನಾದ ಬ್ರಹ್ಮನೆಂದೂ ಉಪನಿಷತ್ತುಗಳಲ್ಲಿ ವರ್ಣಿಸಿದೆ.

ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।

(ಪ್ರ. ಉ. ೧-೮)

ವಿಶ್ವರೂಪನೂ, ಸಹಸ್ರ ರಶ್ಮಿಗಳುಳ್ಳವನೂ, ಸರ್ವಜ್ಞನೂ, ಲೋಕಕ್ಕೆಲ್ಲಾ ಆಶ್ರಯನಾದವನೂ ಮತ್ತು ಜ್ಞಾನಿಗಳಿಂದ ಅರಿಯಲ್ಪಟ್ಟವನೂ ಸಕಲಭೂತಗಳಿಗೂ ಅಂತರಾತ್ಮನಾಗಿರುವವನೂ ಆದ ಸೂರ್ಯನು ಉದಯಿಸುತ್ತಾನೆಂದು ಪ್ರಶ್ನೋಪನಿಷತ್ತಿನಲ್ಲಿಯೂ,

ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।
ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥

(ಕ. ಉ. ೧-೪-೮)

ಯಾವ ಜಾತವೇದಸ್ಸು ಅರಣಿಗಳ ನಡುವೆ ಅಧಿಯಜ್ಞದಲ್ಲಿದ್ದುಕೊಂಡು ಎಲ್ಲಾ ಹವಿಸ್ಸುಗಳನ್ನೂ ಭೋಗಿಸುವನೋ, ಗರ್ಭಿಣೀಸ್ತ್ರೀಯರು ಮಮತೆಯಿಂದ ತಮ್ಮ ಗರ್ಭಗಳನ್ನು ಪೋಷಿಸಿ ಬೆಳೆಸುವಂತೆ ಯಾವ ಪರಮಪುರುಷನನ್ನು ಯೋಗಿಗಳು ತಮ್ಮ ಹೃದಯದಲ್ಲಿಟ್ಟುಕೊಂಡು ಧ್ಯಾನಮಾಡುವರೋ, ಮತ್ತು ಯಾವ ಪೂಜ್ಯನಾದ ಅಗ್ನಿಯನ್ನುದ್ದೇಶಿಸಿ ಯಜ್ಞಕರ್ತರು ಹವಿಸ್ಸುಗಳನ್ನರ್ಪಿಸುವರೋ ಆ ಜಾತವೇದಸ್ಸೇ ವಿಶ್ವಾತ್ಮನಾದ **ಪರಬ್ರಹ್ಮ** ಎಂದು ಕಠೋಪನಿಷತ್ತಿನಲ್ಲಿ ವರ್ಣಿಸಿದೆ. ಇದೇ ಆನುಪೂರ್ವಿಯಲ್ಲಿ ಋ. ಸಂ. ೩-೨೯-೨ನೇ ಋಕ್ಕಿನಲ್ಲಿ ವರ್ಣಿಸಿರುವ ಅಂಶವನ್ನೇ ಕಠದಲ್ಲಿ ತಿಳಿಸಿದೆ. ಹೀಗೆ ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಧನವುಳ್ಳವನೂ ಸರ್ವೋತ್ಕೃಷ್ಟನೂ ಆದುದರಿಂದ **ಜಾತ-ವೇದಸ್ಸೆಂದು** ಕರೆಯಲ್ಪಡುತ್ತಾನೆಂದು ಎಲ್ಲಾ ಶ್ರುತಿಗಳೂ ಸ್ತುತಿಸಿವೆ.

**ಬೃಹತಃ ಪಾಯೋಃ ಪ್ರಥಮಸ್ಯ ಯಜ್ಞಸ್ಯ ನೇತಾ ಭವ**—ಪಾಧಾತುವಿನಿಂದ ನಿಷ್ಪನ್ನವಾದ ಪಾಯು ಶಬ್ದಕ್ಕೆ ರಕ್ಷಕನೆಂದು ಅರ್ಥವನ್ನು ವಿವರಿಸಿದೆ. ಯಾಗವು ಆಯಾಯ ಕರ್ಮಫಲಗಳನ್ನು ಅನುಗ್ರಹಿಸುವುದರಿಂದ ರಕ್ಷಿಸುವುದೆಂದು ಅರ್ಥಮಾಡಿದೆ. ಬೃಹತ್ ಶಬ್ದಕ್ಕೆ ಮಹತ್ ಎಂಬ ಅರ್ಥಮಾಡಿದೆ. ಯಜ್ಞಾಂಗವಾದ ಕರ್ಮಗಳಲ್ಲಿ ಕೆಲವು ಕರ್ಮಗಳು ಉಪದೇಶಗಮ್ಯವಾಗಿಯೂ (ಶ್ರುತಿವಾಕ್ಯಗಳಿಂದ ಬೇರೆ ಬೇರೆಯಾಗಿ ಹೇಳಲ್ಪಡುವುವುಗಳಾಗಿಯೂ,) ಮತ್ತೆ ಕೆಲವು ಕರ್ಮಗಳು ಒಂದು ಕಡೆಯಲ್ಲಿ ಉಕ್ತವಾಗಿರುವುದರಿಂದ ಇನ್ನೊಂದು ಕಡೆಯಲ್ಲಿ ಅಚರಿಸುವುದಕ್ಕಾಗಿ ಊಹಿಸತಕ್ಕವುಗಳಾಗಿಯೂ ಇರುವುದರಿಂದ **ಉಪದಿಷ್ಟಾತಿದಿಷ್ಟೋಭಯೇತಿಕರ್ತವ್ಯತಾಕಲಾಪೇನ** ಎಂದು ಎರಡು ವಿಧವಾದ ಅವಶ್ಯಕರ್ತವ್ಯಗಳಿಂದ ಯಜ್ಞವು ಮಹತ್ತಾಗಿರುವುದೆಂದು ವರ್ಣಿತವಾಗಿದೆ.

ಪ್ರಥಮಶಬ್ದವು ಇಲ್ಲಿ ಮುಖ್ಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂಬ ಅರ್ಥವನ್ನು ವಿವರಿಸಿ, **ಏಷ ವಾವ ಪ್ರಥಮೋ ಯಜ್ಞೋ ಯಜ್ಞಾನಾಂ ಯಜ್ಜ್ಯೋತಿಷ್ಟೋಮಃ** ಎಂಬ ಶ್ರುತಿವಾಕ್ಯವನ್ನು ಉದಹರಿಸಿ, ಜ್ಯೋತಿಷ್ಟೋಮ ಎಂಬ ಯಜ್ಞವು ಯಜ್ಞಗಳಲ್ಲಿ ಮುಖ್ಯವಾದುದೂ ಎಂದೂ, ಇದನ್ನು ಮುಖ್ಯವಾದಕಾರಣ ಅವಶ್ಯವಾಗಿ ಆಚರಿಸಬೇಕೆಂದೂ ವರ್ಣಿಸಿದೆ. ಮತ್ತು ಈ ವಿಧವಾದ ಮಹತ್ತ್ವಪೂರಿತವಾದ ಜ್ಯೋತಿಷ್ಟೋಮವೆಂಬ ಯಜ್ಞದಲ್ಲಿ ಅಗ್ನಿಯು ಹವಿರ್ವಹನ **ದೇವತಾಹ್ವಾನಾದಿ ಕ್ರಿಯಾಯಾ ನಿರ್ವಾಹಕಃ** ಹವಿಸ್ಸನ್ನು ದೇವತೆಗಳಿಗಾಗಿ ಒಯ್ಯುವುದು, ದೇವತೆಗಳನ್ನು ಯಜ್ಞಕ್ಕಾಗಿ ಆಹ್ವಾನಮಾಡುವುದು ಇವೇ ಮೊದಲಾದ ಕಾರ್ಯಗಳನ್ನು ನೆರವೇರಿಸುವುದರಿಂದ ಯಜ್ಞವನ್ನು ಪೂರ್ತಿಮಾಡಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ಅಷಾಳ್ಹಃ**—ಷಹ ಮರ್ಷಣೇ ಧಾತು. **ನಿಷ್ಠಾ** ಎಂಬುದರಿಂದ ಇದಕ್ಕೆ ಕ್ತ ಪ್ರತ್ಯಯ. **ಹೋಢಃ** (ಪಾ. ಸೂ. ೮-೩-೩೧) ಎಂಬುದರಿಂದ ಹಕಾರಕ್ಕೆ ಢಕಾರಾದೇಶ. **ಝಷಸ್ತಥೋರ್ಧೋಽಧಃ** (ಪಾ.ಸೂ. ೮-೨-೪೦) ಎಂಬುದರಿಂದ ಢಕಾರವನ್ನು ನಿಮಿತ್ತೀಕರಿಸಿ ಪ್ರತ್ಯಯ ತಕಾರಕ್ಕೆ ಧಕಾರಾದೇಶ. **ಷ್ಟುನಾಷ್ಟುಃ** ಎಂಬುದರಿಂದ ಅದಕ್ಕೆ ಢಕಾರಾದೇಶ. **ಢೋಢೇ ಲೋಪಃ** (ಪಾ. ಸೂ. ೮-೩-೧೩) ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. ಆಗ **ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ** (ಪಾ. ಸೂ. ೬-೩-೧೧೧) ಎಂಬುದರಿಂದ ಪೂರ್ವದ ಅಕಾರಕ್ಕೆ ದೀರ್ಘ. ಛಾಂದಸವಾಗಿ **ಸಹಿವಹೋರೋದವರ್ಣಸ್ಯ** ಎಂಬುದರಿಂದ ಬರುವ ಓತ್ವವು ಬರುವುದಿಲ್ಲ. **ಸಹೇ ಸಾಡಃ ಸಃ** (ಪಾ. ಸೂ. ೮-೩-೫೬) ಎಂಬುದರಿಂದ ಧಾತುಸಕಾರಕ್ಕೆ ಷತ್ವ. ಸಾಢ ಎಂಬುದರೊಡನೆ ನಞಗೆ ಸಮಾಸ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ಸ್ವರ ಉಳಿಯುತ್ತದೆ.

**ವೃಷಭಃ**—ವೃಷು ಸೇಚನೇ. ಧಾತು. **ಋಷಿವೃಷಿಭ್ಯಾಂಕಿತ್** (ಉ. ಸೂ. ೪-೪೦೩) ಎಂಬುದರಿಂದ

ಅಭಚ್ ಪ್ರತ್ಯಯ. ಕಿತ್ವಾತಿದೇಶದಿಂದ ಗುಣ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ದಿದೀಹಿ**—ದಿವು ಕ್ರೀಡಾದಿಷು. ಧಾತು. ಇಲ್ಲಿ ಪ್ರಕಾಶಾರ್ಥದಲ್ಲಿ ಸ್ವೀಕೃತವಾಗಿದೆ. ಭೃಶಾರ್ಥ ತೋರುವಾಗ ಯಙ್. ಅದಕ್ಕೆ ಲುಕ್. ಯಙ್‌ಲುಗಂತದಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** (ಪರಿ. ೯೫) ಎಂಬುದರಿಂದ ಅಭ್ಯಾಸಕ್ಕೆ ಗುಣ ಬರುವುದಿಲ್ಲ. ಇಲ್ಲಿ ದಿದಿವ್+ಹಿ ಎಂದಿರುವಾಗ ದೀರ್ಘವು ಅಸಿದ್ಧವಾದುದರಿಂದ ಮೊದಲು ವಲೋಪ ಬರಬೇಕಾಗುತ್ತದೆ. ಆದರೆ **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧) ಎಂಬ ಸೂತ್ರವು ಇಲ್ಲಿ ಪ್ರವರ್ತಿಸುವುದಿಲ್ಲ. ಆದುದರಿಂದ ಪರಸೂತ್ರವಾದ **ಹಲಿಚ** (ಪಾ. ಸೂ. ೮-೨-೭೭) ಎಂಬುದರಿಂದ ಧಾತುವಿನ ಇಕಾರಕ್ಕೆ ದೀರ್ಘ. **ಲೋಪೋವ್ಯೋರ್ವಲಿ** ಎಂಬುದರಿಂದ ಆಮೇಲೆ ವಕಾರಲೋಪ. ದೀದಿಹಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಸೌಭಗಾ**—**ಸುಭಗಾನ್ಮಂತ್ರೇ** ಎಂದು ಉದ್ಗಾತ್ರಾದಿಗಣದಲ್ಲಿ ಪಾಠಮಾಡಿರುವುದರಿಂದ ಸುಭಗ ಶಬ್ದದ ಮೇಲೆ ಭಾವಾರ್ಥದಲ್ಲಿ ಅಞ್ ಪ್ರತ್ಯಯ. ಞಿತ್ತಾದುದರಿಂದ **ಹೃದ್ಭಗಸಿಂಧ್ವಂತೇ**—(ಪಾ. ಸೂ. ೭-೩-೧೯) ಎಂಬುದರಿಂದ ಪೂರ್ವಪದಕ್ಕೆ ವೃದ್ಧಿ. ಅದರಿಂದ ಉತ್ತರಪದದ ಆದಿಗೆ ವೃದ್ಧಿಯು ವಿಹಿತವಾದರೂ ಸಕಲ ಕಾರ್ಯಗಳೂ ಛಂದಸ್ಸಿನಲ್ಲಿ ವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ. ಸೌಭಾಗ್ಯದಿಂದ ಇಲ್ಲಿ ಅದಕ್ಕೆ ಕಾರಣವಾದ ಧನವು ಲಕ್ಷಣಾದಿಂದ ತೋರುತ್ತದೆ. ಅಞ್ ಪ್ರತ್ಯಯ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಂಜಿಗೀವಾನ್**—ಜಿ ಜಯೇ. ಧಾತು. ಛಂದಸ್ಸಿನಲ್ಲಿ ಲಿಟ್ ಬಂದಾಗ **ಕ್ವಸುಶ್ಚ** ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಸನ್‌ಲಿಟೋರ್ಜೇಃ** (ಪಾ. ಸೂ. ೭-೩-೫೭) ಎಂಬುದರಿಂದ ಲಿಟ್ ಪರವಾದುದ್ದರಿಂದ ಧಾತುವಿನ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. ಛಾಂದಸವಾಗಿ ಧಾತುವಿನ ಇಕಾರಕ್ಕೆ ದೀರ್ಘ. ಪ್ರತ್ಯಯಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಪಾಯೋಃ**—ಪಾ ರಕ್ಷಣೇ. ಧಾತು. **ಕೃವಾಪಾಜಿ**—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ಣಿತ್ ಪ್ರತ್ಯಯಪರವಾದುದರಿಂದ **ಆತೋಯುಕ್‌ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

---

ಸಂಹಿತಾಪಾಠಃ

**ಅಚ್ಛಿದ್ರಾ ಶರ್ಮ ಜರಿತಃ ಪುರೂಣಿ ದೇವಾ ಅಚ್ಛಾ ದೀದ್ಯಾನಃ ಸುಮೇಧಾಃ ।**
**ರಥೋ ನ ಸಸ್ನಿರಭಿ ವಕ್ಷಿ ವಾಜಮಗ್ನೇ ತ್ವಂ ರೋದಸೀ ನಃ ಸುಮೇಕೇ ॥ ೫ ॥**

ಪದಪಾಠಃ

ಅಚ್ಛಿದ್ರಾ । ಶರ್ಮ । ಜರಿತರಿತಿ । ಪುರೂಣಿ । ದೇವಾನ್ । ಅಚ್ಛ । ದೀದ್ಯಾನಃ । ಸುಽಮೇಧಾಃ । ರಥಃ । ನ । ಸಸ್ನಿಃ । ಅಭಿ । ವಕ್ಷಿ । ವಾಜಂ । ಅಗ್ನೇ । ತ್ವಂ । ರೋದಸೀ ಇತಿ । ನಃ । ಸುಮೇಕೇ ಇತಿ ಸುಽಮೇಕೇ ॥ ೫ ॥

ಸಾಯಣಭಾಷ್ಯಂ

ಜರಿತಃ ಸರ್ವಸ್ಯ ಜಗತೋಽಂತಕಾಲೇ ಜರಯಿತರ್ಹೇ ಅಗ್ನೇ ಸುಮೇಧಾಃ ಶೋಭನಪ್ರಜ್ಞೋಪೇತೋ ದೀದ್ಯಾನಃ ಸ್ವತೇಜಸಾ ಪ್ರಕಾಶಮಾನಸ್ತ್ವಂ ದೇವಾನ್ ಯಷ್ಟವ್ಯಾನ್ದೇವಾನ್ ಅಚ್ಛಾಭಿಲಕ್ಷ್ಯ ತೆಮುದ್ದೇಶೇನ ಕ್ರಿಯಮಾಣಾನಿ ಪುರೂಣಿ ಶರ್ಮ ಸ್ವರ್ಗಾದಿಸುಖಸಾಧನಭೂತಾನ್ಯಗ್ನಿಹೋತ್ರಾದೀನಿ ಕರ್ಮಾಣ್ಯಚ್ಛಿದ್ರಾ ಅಚ್ಛಿದ್ರಾಣಿ ಕುರು । ಕರ್ತೃಕರ್ಮಸಾಧನವೈಕಲ್ಯರಾಹಿತ್ಯೇನ ಸಂಪೂರ್ಣಾನಿ ಕುರು । ಕಿಂಚ ಹೇ ಅಗ್ನೇ ತ್ವಂ ಸಸ್ನಿಃ ಸಂನಿರುದ್ಧಃ ಸ್ವಕೀಯಂ ಸತತಗಮನಂ ಸಂನಿರುಧ್ಯ ಹವಿಷ್ಪ್ರಕ್ಷೇಪಪರ್ಯಂತಮತ್ರ ವರ್ತಮಾನಸ್ತ್ವಂ ವಾಜಂ ನೋಽಸ್ಮಾಭಿರ್ದೀಯಮಾನಂ ಹವಿರ್ಲಕ್ಷಣಮನ್ನಮಭಿ ದೇವಾನಭಿಲಕ್ಷ್ಯ ವಕ್ಷಿ । ವಹ । ಪ್ರಾಪಯ । ತತ್ರ ದೃಷ್ಟಾಂತಃ । ರಥೋ ನ ರಥ ಇವ । ಯಥಾ ರಥೋ ಧಾನ್ಯಾದಿಕಮೂಢ್ವಾ ತತ್ಸ್ವಾಮಿನಂ ಪ್ರಾಪಯತಿ ತದ್ವತ್ । ಕಿಂಚ ತ್ವಮಗ್ನೇ ರೋದಸೀ ದ್ಯಾವಾಪೃಥಿವ್ಯೌ ಸುಮೇಕೇ ಶೋಭನರೂಪೋಪೇತೇ ಸ್ವಕೀಯಪ್ರಭಾಭಿಃ ಪ್ರಕಾಶಯುಕ್ತೇ ಕುರು ॥ ದೀದ್ಯಾನಃ ॥ ದೀದೇತಿಃ ದೀಪ್ತಿಕರ್ಮಾ । ತಸ್ಮಾಚ್ಛಾನಚ್ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಸುಮೇಧಾಃ । ನಿತ್ಯಮಸಿಚ್ ಪ್ರಜಾಮೇಧಯೋರಿತ್ಯಸಿಚ್ಪ್ರತ್ಯಯಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸಸ್ನಿಃ । ಷಸ ಸ್ವಪ್ನೇ । ಅಸ್ಮಾದೌಣಾದಿಕೋ ನಿನ್ । ನಿತ್ತ್ವಾದಾದ್ಯುದಾತ್ತತ್ವಂ । ವಕ್ಷಿ । ವಹ ಪ್ರಾಪಣೇ । ಅಸ್ಯ ಲೋಟಃ ಸಿಪಿ ಬಹುಲಂ ಛಂದಸೀತಿ ಶಪೋ ಲುಕ್ । ಢತ್ವಕತ್ವೇ । ಹಿರಾದೇಶಶ್ಛಾಂದಸತ್ವಾನ್ನ ಭವತಿ ನಿಘಾತಃ ॥

ಪ್ರತಿಪದಾರ್ಥ

ಜರಿತಃ—ಎಲ್ಲವನ್ನೂ ಜೀರ್ಣವಾಗುವಂತೆ ಮಾಡತಕ್ಕ ಅಗ್ನಿಯೇ । ಸುಮೇಧಾಃ—ಶ್ರೇಷ್ಠವಾದ ಪ್ರಜ್ಞೆಯುಳ್ಳವನೂ । ದೀದ್ಯಾನಃ—ಸ್ವತೇಜಸ್ಸಿನಿಂದ ಪ್ರಕಾಶಿಸುವವನೂ ಆದ ನೀನು । ದೇವಾನ್ ಅಚ್ಛ—ದೇವತೆಗಳನ್ನು ಉದ್ದೇಶಿಸಿ ನೆರವೇರಿಸಲ್ಪಡತಕ್ಕ । ಪುರೂಣಿ—ಬಹಳವಾದವೂ । ಶರ್ಮ—ಸುಖಸಾಧನವೂ ಆದ ಅಗ್ನಿಹೋತ್ರಾದಿ ಕರ್ಮಗಳನ್ನು । ಅಚ್ಛಿದ್ರಾ—ಲೋಪರಹಿತವಾಗುವಂತೆ ಮಾಡು (ಮತ್ತು) । ಸಸ್ನಿಃ—ನಿನ್ನ ಪ್ರಸರವನ್ನು ತಡೆದು । ರಥೋ ನ—ರಥವು ಪದಾರ್ಥಗಳನ್ನು ಹೊರುವಂತೆ । ನಃ—ನಮ್ಮ । ವಾಜಂ—ಹವಿಸ್ಸಿನ ರೂಪವಾದ ಅನ್ನವನ್ನು । ಅಭಿ—ದೇವತೆಗಳನ್ನು ಉದ್ದೇಶಿಸಿ । ವಕ್ಷಿ—ವಹಿಸು (ಮತ್ತು ಅವರಿಗೆ ತಲಪಿಸು) । ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ರೋದಸೀ—ದ್ಯಾವಾಪೃಥಿವಿಗಳನ್ನು । ಸುಮೇಕೇ—ಶ್ರೇಷ್ಠವಾದ ರೂಪದಿಂದ ಪ್ರಕಾಶಿಸುವಂತೆ ಮಾಡು ॥

ಭಾವಾರ್ಥ

ಸಕಲವನ್ನೂ ಜೀರ್ಣವಾಗಿ ಆಗುವಂತೆ ಮಾಡತಕ್ಕ ಅಗ್ನಿಯೇ, ಶ್ರೇಷ್ಠವಾದ ಪ್ರಜ್ಞೆಯುಳ್ಳವನೂ, ಸ್ವತೇಜಸ್ಸಿನಿಂದ ಪ್ರಕಾಶಿಸುವವನೂ ಆದ ನೀನು ದೇವತೆಗಳನ್ನು ಉದ್ದೇಶಿಸಿ ನೆರವೇರಿಸಲ್ಪಡತಕ್ಕವೂ, ಸುಖಸಾಧನವಾದವೂ,

ಬಹುಸಂಖ್ಯಾಕವಾದವೂ ಆದ ನಮ್ಮ ಅಗ್ನಿಹೋತ್ರಾದಿ ಕರ್ಮಗಳನ್ನು ಲೋಪರಹಿತವಾಗುನಂತೆ ಮಾಡು. ಮತ್ತು ರಥವು ಪದಾರ್ಥಗಳನ್ನು ಹೊರುವಂತೆ ನೀನೂ ಸಹ ನಿನ್ನ ಪ್ರಸರವನ್ನು ತಡೆದು ದೇವತೆಗಳನ್ನುದ್ದೇಶಿಸಿ ಅರ್ಪಿಸಿದ ನಮ್ಮ ಹವಿಸ್ಸಿನ ರೂಪವಾದ ಅನ್ನವನ್ನು ವಹಿಸಿ ಅವರಿಗೆ ಸೇರಿಸು. ಎಲೈ ಅಗ್ನಿಯೇ, ನಿನ್ನ ಪ್ರಕಾಶದಿಂದ ದ್ಯಾವಾ ಪೃಥಿವಿಗಳನ್ನೂ ಸಹ ಅತಿಶಯವಾದ ರೂಪದಿಂದ ಪ್ರಕಾಶಿಸುವಂತೆ ಮಾಡು.

## English Translation

Destroyer (of the world), you who are endowed with intelligence and radiance, celebrate many faultless sacred rites in honour of the gods, and restraining (your impatience), convey to them like a waggon our (sacrificial) food : illume (with your rays) the beautiful heaven and earth.

### ವಿಶೇಷವಿಷಯಗಳು

**ಜರಿತಃ—ಸರ್ವಸ್ಯ ಜಗತಃ ಅಂತಕಾಲೇ ಜರಯಿತಃ** ಅಗ್ನಿಯು ಪ್ರಳಯಕಾಲದಲ್ಲಿ ಎಲ್ಲಾ ಪ್ರಾಣಿಗಳನ್ನೂ ನಾಶಮಾಡುವವನೆಂದು ಅರ್ಥವನ್ನು ವಿವರಿಸಿದೆ.

**ಪುರೂಣಿ ಕರ್ಮ ಅಚ್ಛಿದ್ರಾ—ಸ್ವರ್ಗಾದಿಸುಖಸಾಧನಭೂತಾನಿ ಅಗ್ನಿಹೋತ್ರಾದೀನಿ ಕರ್ಮಾಣಿ ಅಚ್ಛಿದ್ರಾಣಿ ಕರ್ತೃಕರ್ಮಸಾಧನವೈಕಲ್ಯರಾಹಿತ್ಯೇನ ಸಂಪೂರ್ಣಾನಿ ಕುರು ।** ಶರ್ಮ ಶಬ್ದವು ಶರಣಂ (ನಿ. ೯-೩೪) ರಕ್ಷಣೆ ಮಾಡುವುದು ಅಥವಾ ಸುಖವನ್ನು ಉಂಟುಮಾಡುವುದು ಎಂದು ವ್ಯಾಖ್ಯಾತವಾಗಿರುವುದರಿಂದ ಸ್ವರ್ಗವೇ ಮೊದಲಾದ ಸುಖಗಳನ್ನು ಉಂಟುಮಾಡುವುದರಲ್ಲಿ ಕಾರಣವಾಗಿರುವ ಅಗ್ನಿಹೋತ್ರವೇ ಮೊದಲಾದ ಕರ್ಮಗಳಲ್ಲಿ ಕರ್ತೃವಿನಲ್ಲಿರುವ, ಕರ್ಮಗಳಲ್ಲಿ ಉಂಟಾಗುವ, ಸಾಧನಗಳ ನ್ಯೂನತೆಯಿಂದ ಉಂಟಾಗುವ, ನ್ಯೂನತೆಯು ಯಾವುದೂ ಬರದಂತೆ ಅಗ್ನಿಯು ಯಾಜ್ಞಿಕರಾದ ನಮ್ಮ ಯಜ್ಞಕರ್ಮಗಳನ್ನು ಪೂರ್ಣವಾಗುವಂತೆ ಮಾಡಲಿ ಎಂದು ಆಶಿಸಿದೆ.

**ಸಸ್ನಿಃ—ಸನ್ನಿರುದ್ಧಃ ಸ್ವಕೀಯಂ ಸತತಗಮನಂ ಸನ್ನಿರುಧ್ಯ ಹವಿಷ್ಪ್ರಕ್ಷೇಪಪರ್ಯಂತಮತ್ರ ವರ್ತಮಾನಃ ।** ನಿರುಕ್ತಕಾರರು—

**ಸಸ್ನಿಮವಿಂದಚ್ಚರಣೇ ನದೀನಾಮಪಾವೃಣೋದ್ದುರೋ ಅಶ್ಮವ್ರಜಾನಾಂ ।**
**ಪ್ರಾಸಾಂ ಗಂಧರ್ವೋ ಅಮೃತಾನಿ ವೋಚದಿಂದ್ರೋ ದಕ್ಷಂ ಪರಿ ಜಾನಾದಹೀನಾಂ ॥**

(ಋ. ಸಂ. ೧೦-೧೩೯-೬)

ಈ ಋಕ್ಕನ್ನು ಉದಹರಿಸಿ **ಸಸ್ನಿಂ** ಎಂಬ ಪದಕ್ಕೆ **ಸಂಸ್ನಾತಂ ಅದ್ಭಿಃ ಪರಿವೇಷ್ಟಿತಂ** ಉದಕಗಳಿಂದ ನಿರುದ್ಧನಾದ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಅಗ್ನೇ ರೋದಸೀ ಸುಮೇಕೇ ದ್ಯಾವಾಪೃಥಿವ್ಯೌ ಶೋಭನರೂಪೋಪೇತೇ ಸ್ವಕೀಯಪ್ರಭಾಭಿಃ ಪ್ರಕಾಶಯುಕ್ತೇ ಕುರು ।** ಅಗ್ನಿಯನ್ನು ಸಂಬೋಧಿಸಿ, ಸುಖಕರವಾದ ರೂಪದಿಂದ ಕೂಡಿರುವ ದ್ಯಾವಾಪೃಥಿವಿಗಳು ತಮ್ಮ ಕಾಂತಿಗಳಿಂದ ಬೆಳಗುತ್ತಿರುವಹಾಗೆ ಅಗ್ನಿಯು ತನ್ನ ಪ್ರಕಾಶವನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಅಚ್ಛಿದ್ರಾ**—ನ ಛಿದ್ರಾಣಿ ಅಚ್ಛಿದ್ರಾಣಿ. ನಞ್‌ತತ್ಪುರುಷಸಮಾಸದಲ್ಲಿ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ನಪುಂಸಕಬಹುವಚನದಲ್ಲಿ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಜರಿತಃ**—ಜ್ಯಾಷ್ ವಯೋಹಾನೌ. ಧಾತು. ಇಲ್ಲಿ ಅಂತರ್ಭಾವಿತಣ್ಯರ್ಥಕವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅದಕ್ಕೆ ಇಡಾಗಮ. ಸಂಬುದ್ಧಿಯಲ್ಲಿ ಅಮಂತ್ರಿತನಿಘಾತಸ್ವರ ಬರುತ್ತದೆ.

**ದೇವಾನ್**—ಇದಕ್ಕೆ ಅಕಾರಪರವಾದುದರಿಂದ **ದೀರ್ಘಾದಟಿಸಮಾನಪಾದೇ**(ಪಾ. ಸೂ. ೮-೩-೯)ಎಂಬುದರಿಂದ ರುತ್ವ. **ಆತೋಟಿನಿತ್ಯಂ** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವದ ಆಕಾರಕ್ಕೆ ನಿತ್ಯವಾಗಿ ಅನುನಾಸಿಕ ಭಾವ. ಅಚ್ಛಾ ಎಂಬಲ್ಲಿ **ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ದೀದ್ಯಾನಃ**—ದೀದೀ ಎಂಬ ಧಾತುವು ದೀಪ್ತಿಕ್ರಿಯಾವಾಚಕವಾಗಿದೆ. ಇದರಮೇಲೆ ಲಟ್ ಬಂದಾಗ ಅದಕ್ಕೆ ಶಾನಾಚಾದೇಶ. ಅದಾದಿಪಠಿತವಾದುದರಿಂದ ಶಪಿಗೆ ಲುಕ್. ಅಭ್ಯಸ್ತಸಂಜ್ಞಾ ಇರುವುದರಿಂದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸುಮೇಧಾಃ**—**ನಿತ್ಯಮಸಿಚ್‌ಪ್ರಜಾಮೇಧಯೋಃ** (ಪಾ. ಸೂ. ೫-೪-೧೨೨) ಎಂಬುದರಿಂದ ಮೇಧ ಎಂಬುದಕ್ಕೆ ಬಹುವ್ರೀಹಿಯಲ್ಲಿ ಅಸಿಚ್‌ಪ್ರತ್ಯಯ. **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ.

**ಸಸ್ನಿಃ**—ಷಸ ಸ್ವಪ್ನೇ ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಇದಕ್ಕೆ ಔಣಾದಿಕವಾದ ಸಿನ್ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ವಕ್ಷಿ**—ವಹ ಪ್ರಾಪಣೇ ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಹೋಢಃ** ಎಂಬುದರಿಂದ ಧಾತುಹಕಾರಕ್ಕೆ ಢತ್ವ. **ಷಢೋಃ ಕಃಸಿ** (ಪಾ. ಸೂ. ೮-೨-೪೧) ಎಂಬುದರಿಂದ ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ. ಸಿಪಿಗೆ ಹಿ ಎಂಬ ಆದೇಶವು ಛಾಂದಸವಾಗಿ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಪ್ರ ಪೀಪಯ ವೃಷಭ ಜಿನ್ವ ವಾಜಾನಗ್ನೇ ತ್ವಂ ರೋದಸೀ ನಃ ಸುದೋಘೇ ।
ದೇವೇಭಿರ್ದೇವ ಸುರುಚಾ ರುಚಾನೋ ಮಾ ನೋ ಮರ್ತ್ಯಸ್ಯ ದುರ್ಮತಿಃ ಪರಿ ಷ್ಠಾತ್

ಪದಪಾಠಃ

ಪ್ರ । ಪೀಪಯ । ವೃಷಭ । ಜಿನ್ವ । ವಾಜಾನ್ । ಅಗ್ನೇ । ತ್ವಂ । ರೋದಸೀ ಇತಿ । ನಃ । ಸುದೋಘೇ ಇತಿ ಸುऽದೋಘೇ ।
ದೇವೇಭಿಃ । ದೇವ । ಸುऽರುಚಾ । ರುಚಾನಃ । ಮಾ । ನಃ । ಮರ್ತಸ್ಯ । ದುಃऽಮತಿಃ । ಪರಿ । ಸ್ಥಾತ್ ॥

41

ಸಾಯಣಭಾಷ್ಯಂ

**ವೃಷಭ ಕಾಮಾನಾಂ ವರ್ಷಿತರ್ಹೇ ಅಗ್ನೇ ತ್ವಂ ನೋಽಸ್ಮಾಕಂ ಪ್ರಪೀಪಯ । ಅಭಿಲಷಿತ-ಫಲಾನಿ ವರ್ಧಯ । ವಾಜಾನನ್ನಾನಿ ಚ ಜಿನ್ವ । ಪ್ರಯಚ್ಛ । ಕಿಂಚ ದೇವ ದೀಪ್ಯಮಾನ ಹೇ ಅಗ್ನೇ ಸುರುಚಾ ಶೋಭನದೀಪ್ತ್ಯಾ ರುಚಾನಃ ಶೋಭಮಾನಸ್ತ್ವಂ ದೇವೇಭಿರ್ಯಜನೀಯದೇವೈಃ ಸಹಿತೋಽ-ಸ್ಮಾಕಂ ರೋದಸೀ ಇಮೇ ದ್ಯಾವಾಪೃಥಿವ್ಯೌ ಸುದೋಘೇ ವೃಷ್ಟಿದ್ವಾರಾಭಿಮತಫಲಪ್ರದಾನೇನ ಸುಷ್ಠು ದೋಗ್ಧ್ರ್ಯೌ ಕುರು । ತಥಾ ಮರ್ತಸ್ಯ ಶತ್ರೋರ್ದುರ್ಮತಿರ್ದುಷ್ಟಬುದ್ಧಿಪ್ರಯುಕ್ತೋಽಭಿಭವೋ ನೋಽಸ್ಮಾನ್ ಮಾ ಪರಿ ಷ್ಮಾತ್ । ಪರಿತೋ ಮಾ ಗಚ್ಛತು ॥ ಪೀಪಯ । ಪಾ ಪಾನ ಇತ್ಯೇತಸ್ಯ ಣ್ಯಂತಸ್ಯ ಲುಙಿ ಚಙಿ ದ್ವಿರ್ವಚನಾಭ್ಯಾಸದೀರ್ಘೌ । ಸಿಪೋ ಲೋಪಶ್ಛಾಂದಸಃ । ಜಿನ್ವ । ಇವಿ ಜಿವಿ ಧಿವಿ ಪ್ರೀಣ-ನಾರ್ಥಾಃ । ಏತಸ್ಯ ಲೋಟಿ ಇದಿತ್ವಾನ್ನುಮ್ । ಶಪ್ । ಅತೋ ಹೇರಿತಿ ಹೇರ್ಲುಕ್ । ಆಮಂತ್ರಿತಸ್ಯಾ-ವಿದ್ಯಮಾನವತ್ವೇನ ಅತಿಙ ಉತ್ತರತ್ವಾಭಾವಾನ್ನ ನಿಘಾತಃ । ಸುದೋಘೇ । ದೋಹನಂ । ದೋಘಃ ಭಾವೇ ಘಞ್ । ಕುತ್ವಂ ಛಾಂದಸಂ । ಆದ್ಯುದಾತ್ತಂ ದ್ವ್ಯಚ್ ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ದುರ್ಮತಿಃ । ಮನು ಅವಬೋಧನೇ । ಮನ್ಯತ ಇತಿ ಮತಿರ್ಬುದ್ಧಿಃ । ಕರ್ತರಿ ಕ್ತಿಚ್ । ದುಷ್ಟಾ ಬುದ್ಧಿಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಕೃದುತ್ತರಪದಪ್ರಕೃತಿಸ್ವರತ್ವಂ ॥**

ಪ್ರತಿಪದಾರ್ಥ

**ವೃಷಭ**—ಇಷ್ಟಾರ್ಥಗಳನ್ನು ಸುರಿಸಿಕೊಡುವ । **ಅಗ್ನೇ**—ಅಗ್ನಿಯೇ । **ತ್ವಂ**—ನೀನು । **ನಃ**—ನಮಗೆ । **ಪ್ರ ಪೀಪಯ**—(ಇಷ್ಟಾರ್ಥಗಳನ್ನು) ಪೂರ್ಣವಾಗುವಂತೆ ಮಾಡು । **ವಾಜಾನ್**—ಅನ್ನಗಳನ್ನು । **ಜಿನ್ವ**—ಒದಗಿಸಿಕೊಡು । **ದೇವ**—ಪ್ರಕಾಶಮಾನನಾದ ಅಗ್ನಿಯೇ । **ಸುರುಚಾ**—ನಿನ್ನ ಉತ್ತಮವಾದ ಕಾಂತಿಯಿಂದ । **ರುಚಾನಃ**—ಶೋಭಿಸುವ ನೀನು । **ದೇವೇಭಿಃ**—(ಯಜ್ಞಾರ್ಹರಾದ) ದೇವತೆಗಳೊಡನೆ ಸೇರಿ । **ರೋದಸೀ**—ದ್ಯಾವಾಪೃಥಿವಿಗಳನ್ನು । **ಸುದೋಘೇ**—ವೃಷ್ಟ್ಯಾದಿಗಳನ್ನು ಅತಿಶಯವಾಗಿ ಸುರಿಸುವವರನ್ನಾಗಿ (ಮಾಡು) । **ಮರ್ತಸ್ಯ**—ಮಾನವನಾದ ಶತ್ರುವಿನ । **ದುರ್ಮತಿಃ**—ದುಷ್ಟಬುದ್ಧಿಯು । **ನಃ**—ನಮ್ಮನ್ನು । **ಮಾ ಪರಿ ಷ್ಮಾತ್**—ಸುತ್ತುವರಿಯದಿರಲಿ ॥

ಭಾವಾರ್ಥ

ಇಷ್ಟಾರ್ಥಗಳನ್ನು ಸುರಿಸಿಕೊಡುವ ಅಗ್ನಿಯೇ, ನೀನು ನಮ್ಮ ಅಭಿಮತವಾದ ಫಲಗಳನ್ನು ವೃದ್ಧಿಯಾಗುವಂತೆ ಮಾಡಿ ನಮ್ಮನ್ನು ತೃಪ್ತರಾಗುವಂತೆ ಮಾಡು, ಮತ್ತು ನಮಗೆ ಅನ್ನಗಳನ್ನು ಒದಗಿಸು. ಪ್ರಕಾಶಮಾನನಾದ ಅಗ್ನಿಯೇ, ಉತ್ತಮವಾದ ಕಾಂತಿಯಿಂದ ಶೋಭಿಸುವ ನೀನು ಯಜ್ಞಾರ್ಹರಾದ ಇತರ ದೇವತೆಗಳೊಡನೆ ಸೇರಿ ದ್ಯಾವಾಪೃಥಿವಿಗಳೂ ಸಹ ವೃಷ್ಟ್ಯಾದಿಗಳನ್ನು ಅತಿಶಯವಾಗಿ ಸುರಿಸುವಂತೆ ಮಾಡು. ಮತ್ತು ನಿನ್ನ ಸಹಾಯದಿಂದ, ಮಾನವನಾದ ಶತ್ರುವಿನ ದುಷ್ಟಬುದ್ಧಿಯೂ, ಅವನ ಅಪಕಾರವೂ ನಮ್ಮನ್ನು ಸುತ್ತುವರೆಯದಿರಲಿ.

## English Translation

Be propitious, showerer (of benefits); grant (abundant) food, AGNI; (make) heaven and earth yield us milk: divine (AGNI), associated with the gods, shining with bright radiance, let not the ill-will of any mortal prevail aginst us.

ವಿಶೇಷವಿಷಯಗಳು

**ಪ್ರ ಪೀಪಯ ಜಿನ್ವ ವಾಜಾ೯—ಅಭಿಲಷಿತಫಲಾನಿ ವರ್ಧಯ । ಅನ್ನಾನಿ ಪ್ರಯಚ್ಛ ।** ಇಲ್ಲಿ ವೃಷಭ ಪದದಿಂದ ಇಷ್ಟಾರ್ಥಗಳನ್ನು ಅತಿಶಯವಾಗಿ ಅನುಗ್ರಹಿಸುವವನೆಂದು ಅಗ್ನಿಯನ್ನು ಸಂಬೋಧಿಸಿ ಅಗ್ನಿಯು ನಮ್ಮ ಅಭಿಮತಗಳನ್ನು ನೆರವೇರಿಸಲಿ ಎಂದು ಆಶಿಸಿದೆ. ಮತ್ತೂ ಸಂತೋಷಪಡಿಸು ಎಂಬ ಅರ್ಥವನ್ನು ಬೋಧಿಸುವ ಜಿವಿಧಾತುವಿನ ರೂಪವಾದ ಜಿನ್ವ ಎಂಬ ಪದಕ್ಕೆ ಅನ್ನವನ್ನು ನಮಗೆ ಅನುಗ್ರಹಿಸುವುದರ ಮೂಲಕ ಸಂತೋಷವನ್ನು ಉಂಟುಮಾಡು ಎಂದು ಅರ್ಥವನ್ನು ಹೇಳಿದೆ.

**ಪೀಪಯ** ಎಂಬ ಪದವು ವೃದ್ಧ್ಯರ್ಥಕವಾದ **ಪ್ಯೈ** ಧಾತುವಿನಿಂದ ನಿಷ್ಪನ್ನವಾಗಿ ಆಪ್ಯಾಯಮಾನವಾಗಿರಲಿ ಎಂಬ ಮಾನಸಿಕವಾದ ತೃಪ್ತಿಯನ್ನೂ ವೃದ್ಧಿಯನ್ನೂ ಹೊಂದು ಎಂದು ಸಂಪತ್ಸಮೃದ್ಧಿಯನ್ನು ಸೂಚಿಸುತ್ತದೆ.

**ಪೀಪಾಯ ಸ ಶ್ರವಸಾ ಮರ್ತ್ಯೇಷು ಯೋ ಅಗ್ನಯೇ ದದಾಶ ವಿಪ್ರ ಉಕ್ಥೈಃ ।**
**ಚಿತ್ರಾಭಿಸ್ತಮೂತಿಭಿಶ್ಚಿತ್ರಶೋಚಿರ್ವ್ರಜಸ್ಯ ಸಾತಾ ಗೋಮತೋ ಧಧಾತಿ ॥**

(ಋ. ಸಂ. ೬-೧೦-೩).

ಇತ್ಯಾದ್ಯನೇಕ ಋಕ್ಕುಗಳಲ್ಲಿ ಈ ಪದವು ಪ್ರಯೋಗಿಸಲ್ಪಟ್ಟಿರುವಾಗ ಮನಸ್ಸಿನ ಹರ್ಷ, ಅನ್ನಸಮೃದ್ಧಿ ಈ ಎರಡರ್ಥಗಳೂ ಸೂಚಿತವಾಗಿ ಅವೆರಡರ ಕಾರ್ಯಕಾರಣಭಾವವನ್ನೂ ತೋರಿಸುತ್ತದೆ. ಇದರಂತೆಯೇ, ಜಿನ್ವಶಬ್ದದ ಪ್ರಯೋಗವಿರುವಾಗಲೂ ಸಹ ಆತ್ಮಪ್ರೀಣನವನ್ನು ಸೂಚಿಸುತ್ತದೆ. **ಜಿನ್ವತಿಃ ಪ್ರೀತಿಕರ್ಮಾ** (ನಿ. ೬-೨೨) ಎಂದು ನಿರುಕ್ತಕಾರರು ವಿವರಿಸಿ ಈ ಪದದಿಂದ ಸೂಚಿತವಾಗುವ ಪ್ರೀತ್ಯತಿಶಯವನ್ನು ತೋರಿಸಲು,

**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ।**

(ಋ. ಸಂ. ೧-೧೬೪-೫೧).

ಎಂಬ ಋಕ್ಕನ್ನುದಾಹರಿಸಿ ಅಲ್ಲಿ ದ್ಯಾವಾಪೃಥಿವಿಗಳು ತಮ್ಮ ತಮ್ಮ ಕರ್ಮಾಚರಣೆಗಳಿಂದ ಪರಸ್ಪರವಾಗಿ ಒದಗಿಸಿಕೊಡತಕ್ಕ ಪ್ರೀತ್ಯತಿಶಯವನ್ನು ಜಿನ್ವತಿಪದವು ಸೂಚಿಸುತ್ತದೆಂದು ತಿಳಿಸಿದ್ದಾರೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪ್ರೀತ್ಯತಿಶಯವನ್ನು ತೋರಿಸುವ ಪದವಾಗಿದೆ.

**ಸುರುಚಾ ರುಚಾನಃ—ಶೋಭನದೀಪ್ತ್ಯಾ ಶೋಭಮಾನಃ ।** ಇಲ್ಲಿ ದೇವಶಬ್ದದಿಂದ ಅಗ್ನಿಯನ್ನು ಸಂಬೋಧಿಸಿ, ಸ್ವಭಾವಸಿದ್ಧವಾದ ಅತಿಶಯವಾದ ಕಾಂತಿಗಳಿಂದ ಬೆಳಗುತ್ತಿರುವ ಅಗ್ನಿಯು ನಮಗೆ ಸುಖವನ್ನುಂಟುಮಾಡುವ ರಶ್ಮಿಗಳಿಂದ ಪ್ರಕಾಶಿಸುವನೆಂದು ಅರ್ಥವನ್ನು ವಿವರಿಸಿದೆ.

**ದೇವೇಭಿಃ ರೋದಸೀ ಸುದೋಘೇ—ಯಜನೀಯದೇವೈಃ ಸಹಿತೋಽಸ್ಮಾಕಂ ಇಮೇ ದ್ಯಾವಾಪೃಥಿವ್ಯೌ ವೃಷ್ಟಿದ್ವಾರಾ ಅಭಿಮತಫಲದಾನೇನ ಸುಷ್ಠು ದೋಗ್ಧ್ರ್ಯೌ ಕುರು ।** ಯಜ್ಞದಲ್ಲಿ ಪೂಜಾರ್ಹರಾಗಿರುವ ದೇವತೆಗಳೊಡಗೂಡಿ ಅಗ್ನಿಯು ದ್ಯಾವಾಪೃಥಿವಿಗಳನ್ನು (ಭೂಮ್ಯಂತರಿಕ್ಷಗಳನ್ನು) ವೃಷ್ಟ್ಯುದಕಗಳಿಂದ ತುಂಬಿರುವಹಾಗೆ ಮಾಡಿ, ನಮ್ಮ ಅಭಿಮತಗಳು ದ್ಯಾವಾಪೃಥಿವಿಗಳಿಂದ ಪ್ರಭೂತವಾಗಿ ಉಂಟಾಗುವಂತೆ ಅನುಗ್ರಹಿಸಲಿ ಎಂದು ಆಶಿಸಿದೆ.

**ಮರ್ತಸ್ಯ ದುರ್ಮತಿಃ ನಃ ಮಾ ಪರಿ ಷ್ಮಾತ್—ಶತ್ರೋಃ ದುಷ್ಟಬುದ್ಧಿಪ್ರಯುಕ್ತೋ ಅಭಿಭವಃ ಅಸ್ಮಾನ್ ಪರಿತೋ ಮಾ ಗಚ್ಛತು** (ಶತ್ರುವಿನಿಂದ ಉಂಟಾಗುವ) ಶತ್ರುವಿನ ದುರ್ಮಾರ್ಗವರ್ತನದಿಂದ ನಮಗೆ ಸಂಭವಿಸಬಹುದಾದ ತಿರಸ್ಕಾರವು ನಮಗೆ ಯಾವಾಗಲೂ ಉಂಟಾಗದಿರುವಂತೆ ಅಗ್ನಿಯು ಅನುಗ್ರಹವನ್ನು ಉಂಟು ಮಾಡಲಿ ಎಂದು ಪ್ರಾರ್ಥಿಸಿದೆ.

**ಮರ್ತಸ್ಯ—ಶತ್ರೋಃ**—ಮರ್ತಶಬ್ದವು ಮನುಷ್ಯನಾಮಗಳಲ್ಲಿ (ನಿ. ೩–೮) ಪಠಿತವಾಗಿದೆ. ಸಾಯಣರು ಇದಕ್ಕೆ ಮಾನವಶತ್ರು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ದುರ್ಮತಿಃ**—ನಿಶ್ಚಯಮಾಡು ಎಂಬ ಅರ್ಥವುಳ್ಳ ಮನುಧಾತುವಿನಿಂದ ನಿಷ್ಪನ್ನವಾದ ಮತಿಶಬ್ದಕ್ಕೆ ದುರ್ ಎಂಬ ಉಪಸರ್ಗವು ಸೇರಿ ದುಷ್ಟಾ ಮತಿಃ ಬುದ್ಧಿಃ ಎಂದು ಅರ್ಥಮಾಡಿದೆ.

ವ್ಯಾಕರಣಪ್ರಕ್ರಿಯಾ

**ಪೀಪಯ**—ಪಾ ಪಾನೇ. ಧಾತು. **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ ಛಾಂದಸವಾಗಿ ಲುಙ್. ಮಧ್ಯಮಪುರುಷಏಕವಚನದಲ್ಲಿ ಸಿಪ್. **ಣಿಶ್ರಿದ್ರುಸ್ರುಭ್ಯಃ** (ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. **ಸನ್ವಲ್ಲಘುನಿಚಙ್ಪರೇ** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದರಿಂದ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ ಬಂದಾಗ **ದೀರ್ಘೋಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ. ಛಾಂದಸವಾಗಿ ಸಿಪಿಗೆ ಲೋಪ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಜಿನ್ವ**—ಇವಿ ಜಿವಿ ಧಿವಿ ಪ್ರೀಣನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಇದಿತೋ ನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ. ಶಪ್ ವಿಕರಣ. ಅದಂತದ ಪರದಲ್ಲಿ ಹಿ ಬಂದುದರಿಂದ **ಅತೋ ಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಜಿನ್ವ ಎಂದು ರೂಪವಾಗುತ್ತದೆ. ಇದರಿಂದ ಆಮಂತ್ರಿತ (ಸಂಬುದ್ಧ್ಯಂತರೂಪ)ವಿರುವುದರಿಂದ **ಆಮಂತ್ರಿತಂ-ಪೂರ್ವಮವಿದ್ಯಮಾನವತ್** (ಪಾ. ಸೂ. ೭-೧-೭೨) ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವ ಬರುವುದರಿಂದ ಅದರ ಹಿಂದೆ ತಿಙಂತರೂಪವು ಬಂದಂತಾಗುತ್ತದೆ. **ಅತಿಙಃ** ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸುದೋಘೋ**—ದೋಹನಂ ದೋಘಃ. ದುಹ ಪ್ರಪೂರಣೇ. ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಛಾಂದಸವಾಗಿ ಧಾತು ಹಕಾರಕ್ಕೆ ಘತ್ವ. **ಪುಗಂತಲಘೂಪಧಸ್ಯಚ** ಎಂಬುದರಿಂದ ಲಘೂಪಧಗುಣ. ಞಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಆದ್ಯುದಾತ್ತಂ ದ್ವ್ಯಚ್‌ಛಂದಸಿ** (ಪಾ.ಸೂ. ೬-೨-೧೧೯) ಎಂಬುದರಿಂದ ಬಹುವ್ರೀಹಿಯಲ್ಲಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ರುಚಾನಃ**—ರುಚ ದೀಪ್ತೌ ಧಾತು. ಲಟಿಗೆ ಶಾನಚಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ದುರ್ಮತಿಃ**—ಮನು ಅವಬೋಧನೇ. ಮನ್ಯತೇ ಇತಿ ಮತಿಃ ಬುದ್ಧಿಃ. ಕರ್ತ್ರರ್ಥದಲ್ಲಿ ಕ್ತಿಚ್ ಪ್ರತ್ಯಯ. **ಅನುದಾತ್ತೋಪದೇಶವನ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. ದುಷ್ಟಾ ಮತಿಃ ದುರ್ಮತಿಃ ಅವ್ಯಯಪೂರ್ವಪದ ಪ್ರಕೃತಿಸ್ವರ ಬಂದರೆ ಅಪವಾದನಾಗಿ **ಗತಿಕಾರಕೋಪಪದಾ**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಸ್ಥಾತ್—ಷ್ಠಾ ಗತಿನಿವೃತ್ತೌ. ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾ** (ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।
ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥ ೭ ॥

ಪದಪಾಠಃ

ಇಳಾಂ । ಅಗ್ನೇ । ಪುರುऽದಂಸಂ । ಸನಿಂ । ಗೋಃ । ಶಶ್ವತ್ऽತಮಂ । ಹವಮಾನಾಯ । ಸಾಧ ।
ಸ್ಯಾತ್ । ನಃ । ಸೂನುಃ । ತನಯಃ । ವಿಜಾऽವಾ । ಅಗ್ನೇ । ಸಾ । ತೇ । ಸುऽಮತಿಃ । ಭೂತು । ಅಸ್ಮೇ ಇತಿ ॥ ೭ ॥

ಸಾಯಣಭಾಷ್ಯಂ

ಉತೋ ಪಿತೃಭ್ಯಾಮಿತ್ಯಸ್ಮಿನ್ಸರ್ಗೇ ವ್ಯಾಖ್ಯಾತೇಯಮೃಕ್ ॥ (48 ನೇ ಪೇಜನ್ನು ನೋಡಿ).

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಪುರುದಂಸಂ**—ಅನೇಕ ಕರ್ಮಗಳಿಗೆ ಸಾಧನವಾದುದೂ । **ಗೋಃ ಸನಿಂ**—ಗವಾದಿ ಪಶುಗಳನ್ನು ಸಂಪಾದಿಸಿಕೊಡತಕ್ಕುದೂ ಆದ । **ಇಳಾಂ**—'ಇಳಾ' ಎಂದು ಪ್ರಸಿದ್ಧವಾದ ದೇವತಾ ವಿಶೇಷವನ್ನು (ಅಥವಾ ಭೂಮಿಯನ್ನು) । **ಶಶ್ವತ್ತಮಂ**—ಅನುಸ್ಯೂತವಾಗಿ । **ಹವಮಾನಾಯ**—ಹವಿಸ್ಸನ್ನು ಅರ್ಪಿಸತಕ್ಕ ನನಗೆ । **ಸಾಧ**—ಒದಗಿಸಿಕೊಡು । **ನಃ**—ನಮಗೆ । **ಸೂನುಃ**—ಪುತ್ರನೂ । **ತನಯಃ**—ಪೌತ್ರನೂ । **ಸ್ಯಾತ್**—ಲಭಿಸಲಿ । **ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **ಸುಮತಿಃ**—(ಯಾವ) ಶ್ರೇಷ್ಠವಾದ ಅನುಗ್ರಹ ಬುದ್ಧಿಯಿದೆಯೋ । **ಸಾ**—ಅದು । **ಅಸ್ಮೇ**—ನಮ್ಮ ಭಾಗಕ್ಕೆ । **ವಿಜಾವಾ**—ಫಲವನ್ನು ಕೊಡತಕ್ಕದ್ದಾಗಿ । **ಭೂತು**—ಆಗಿರಲಿ ॥

ಭಾವಾರ್ಥ

ಎಲೈ ಅಗ್ನಿಯೇ, ಅನೇಕ ಕರ್ಮಗಳಿಗೆ ಸಾಧನವಾದುದೂ, ಗವಾದಿ ಪಶುಗಳನ್ನು ಸಂಪಾದಿಸಿಕೊಡತಕ್ಕುದೂ ಆದ 'ಇಳಾ' ಎಂಬ ಪ್ರಸಿದ್ಧವಾದ ದೇವತಾವಿಶೇಷವನ್ನು ಅನುಸ್ಯೂತವಾಗಿ ಹವಿಸ್ಸನ್ನು ಅರ್ಪಿಸತಕ್ಕ ನನಗೆ ಒದಗಿಸಿ ಕೊಡು. ನಮಗೆ ಪುತ್ರನೂ ಪೌತ್ರನೂ ಲಭಿಸಲಿ. ಎಲೈ ಅಗ್ನಿಯೇ, ಶ್ರೇಷ್ಠವಾದುದೂ ಅನುಗ್ರಹಾತ್ಮಕವಾದುದೂ ಆದ ಯಾವ ನಿನ್ನ ಬುದ್ಧಿಯಿದೆಯೋ ಅದು ನಮ್ಮ ಭಾಗಕ್ಕೆ ವ್ಯರ್ಥವಾಗದೆ ಫಲವನ್ನು ಕೊಡತಕ್ಕುದಾಗಿ ಆಗಿರಲಿ.

English Translation

Grant AGNI, to the offerer of the oblation, earth the giver of cattle the means of many sacred rites, such that it may long endure : may there be to us sons and grandsons, and may your favour, AGNI, be productive of good unto us.

ಪೂರ್ವದಲ್ಲಿ (೩-೧-೭-೧೧) ವ್ಯಾಖ್ಯಾತವಾಗಿದೆ.

---

## ಹದಿನಾರನೆಯ ಸೂಕ್ತವು

---

**ಅಯಮಗ್ನಿರಿತಿ ಚತುರ್ಥಂ ಷಳೃಚಂ ಸೂಕ್ತಮಾಗ್ನೇಯಂ । ಅತ್ರಾನುಕ್ರಮಣಿಕಾ । ಅಯಮಗ್ನಿಃ ಷಟ್ ಪ್ರಗಾಥಮಿತಿ । ಉತ್ಕೀಲಸ್ತ್ವಿತಿ ತುಶಬ್ದಪ್ರಯೋಗಾದಸ್ಯಾಪಿ ಸೂಕ್ತಸ್ಯ ಸ ಏವ ಋಷಿಃ । ಅತ್ರ ವಿಷಮಸಂಖ್ಯಾನಾಮೃಚಾಂ ಬೃಹತೀ ಛಂದಸ್ತೃತೀಯಪಾದಸ್ಯ ದ್ವಾದಶಾಕ್ಷರತ್ವಾತ್ । ಸಮಸಂಖ್ಯಾನಾಂ ತು ಸತೋಬೃಹತೀ ಪ್ರಥಮತೃತೀಯಪಾದಯೋರ್ದ್ವಾದಶಾಕ್ಷರತ್ವಾತ್ । ಉಕ್ತಂ ಚ । ಅಯುಜೌ ಜಾಗತೌ ಸತೋಬೃಹತೀತಿ ॥**

ಅನುವಾದವು—**ಅಯಮಗ್ನಿಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗ್ನಿಯು ದೇವತೆಯು; ಅನುಕ್ರಮಣಿಕೆಯಲ್ಲಿ **ಅಯಮಗ್ನಿಃ ಷಟ್ ಪ್ರಾಗಾಥಮಿತಿ** ಎಂದು ಹೇಳಿರುವುದು ಉತ್ಕೀಲಸ್ತ್ವತಿ ಎಂದು ತುಶಬ್ದಪ್ರಯೋಗವಿರುವುದರಿಂದ ಈ ಸೂಕ್ತಕ್ಕೂ ಹಿಂದಿನ ಸೂಕ್ತದಂತೆ ಉತ್ಕೀಲನೇ ಋಷಿಯು ; ಈ ಸೂಕ್ತದಲ್ಲಿ ವಿಷಮಸಂಖ್ಯೆಯ ಋಕ್ಕುಗಳಲ್ಲಿ ಎಂದರೆ ೧, ೩, ೫ನೆಯ ಋಕ್ಕುಗಳಲ್ಲಿ ಮೂರನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳಿರುವುದರಿಂದ ಅವುಗಳು ಬೃಹತೀಛಂದಸ್ಕವು; ಮತ್ತು ಸಮಸಂಖ್ಯೆಯ ಋಕ್ಕುಗಳಲ್ಲಿ ಎಂದರೆ ೨, ೪, ೬ನೆಯ ಋಕ್ಕುಗಳಲ್ಲಿ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ಹನ್ನೆರಡು ಅಕ್ಷರಗಳಿರುವುದರಿಂದ ಅವುಗಳು ಸತೋಬೃಹತೀಛಂದಸ್ಸಿನವು. ಛಂದೋನುಕ್ರಮಣಿಕೆಯಲ್ಲಿ **ಅಯುಜೌ ಜಾಗತೌ ಸತೋಬೃಹತೀ** ಎಂದು ಹೇಳಿರುವುದು.

## ಸೂಕ್ತ—೧೬

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೧೬ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬

ಋಷಿಃ—ಉತ್ಕೀಲಃ ಕಾತ್ಯಃ ॥

ದೇವತಾ—ಅಗ್ನಿಃ ॥

ಛಂದಃ— ೧, ೩, ೫. ಬೃಹತೀ । ೨, ೪, ೬. ಸತೋಬೃಹತೀ ॥

ಸಂಹಿತಾಪಾಠಃ

ಅ॒ಯಮ॒ಗ್ನಿಃ ಸು॒ವೀರ್ಯ॒ಸ್ಯೇಶೇ ಮ॒ಹಃ ಸೌಭ॑ಗಸ್ಯ ।
ರಾ॒ಯ ಈಶೇ ಸ್ವ॒ಪ॒ತ್ಯಸ್ಯ॒ ಗೋಮ॒ತ ಈಶೇ ವೃತ್ರ॒ಹಥಾನಾಂ ॥ ೧ ॥

ಪದಪಾಠಃ

ಅ॒ಯಂ । ಅ॒ಗ್ನಿಃ । ಸು॒ಽವೀರ್ಯ॑ಸ್ಯ । ಈಶೇ । ಮ॒ಹಃ । ಸೌಭ॑ಗಸ್ಯ ।
ರಾ॒ಯಃ । ಈ॒ಶೇ । ಸು॒ಽಅ॒ಪ॒ತ್ಯಸ್ಯ॑ । ಗೋಽಮ॑ತಃ । ಈಶೇ । ವೃ॒ತ್ರ॒ಽಹಥಾ॑ನಾಂ ॥ ೧ ॥

ಸಾಯಣಭಾಷ್ಯಂ

ಉತ್ಕೀಲಃ ಸ್ತೌತಿ । ಅಯಂ ಯಜನೀಯತ್ವೇನಾಂಗುಲ್ಯಾ ನಿರ್ದಿಶ್ಯಮಾನೋಽಗ್ನಿಃ ಸುವೀರ್ಯಸ್ಯ ಶೋಭನಸಾಮರ್ಥ್ಯೋಪೇತಸ್ಯ ಮಹೋ ಮಹತಃ ಸೌಭಗಸ್ಯ ಸೌಭಾಗ್ಯಸ್ಯೇಶೇ । ಈಷ್ಟೇ । ಈಶ್ವರೋ ಭವತಿ । ಸರ್ವಸ್ಯ ಬಲಾರೋಗ್ಯಹೇತುತಯಾ ಸೌಭಾಗ್ಯಕಾರಿತ್ವಾತ್ । ತಥಾ ಗೋಮತೋ ಗವಾದಿಪಶುಯುಕ್ತಸ್ಯ ಸ್ವಪತ್ಯಸ್ಯ ಶೋಭನಾಪತ್ಯಸ್ಯ ರಾಯೋ ಧನಸ್ಯೇಶೇ । ಈಷ್ಟೇ । ಪುತ್ರಪಶ್ವಾದ್ಯುದ್ದೇಶೇನ ಕ್ರಿಯಮಾಣಕರ್ಮಫಲಸಂಪಾದಕತ್ವೇನ ತತ್ಸ್ವಾಮಿತ್ವಾತ್ । ತಥೈವಂಭೂತೋಽಗ್ನಿರ್ವೃತ್ರಹಥಾನಾಂ । ಹನನಂ ಹಥಃ । ಶತ್ರುಭೂತಪಾಪವಿನಾಶನಾನಾಮಪೀಶೇ । ಈಷ್ಟೇ । ತ್ವಯಿ ಸಮರ್ಪಿತಕರ್ಮಣಾಮಸ್ಮಾಕಂ ತ್ವತ್ಪ್ರಸಾದಾತ್ಪಾಪಕ್ಷಯೋ ಭವತೀತಿ ತಸ್ಯಾಪಿ ಸ್ವಾಮೀ ॥ ಈಶೇ । ಈಶ ಐಶ್ವರ್ಯೇ । ಅದಾದಿತ್ವಾಚ್ಛಪೋ ಲುಕ್ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಪಾದಾದಿತ್ವಾದನಿಘಾತಃ । ಸೌಭಗಸ್ಯ । ಸುಭಗಸ್ಯ ಭಾವಃ ಸೌಭಗಂ । ಉದ್ಗಾತ್ರಾದಿತ್ವಾದಞ್ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರ ಹೃದ್ಭಗೇತ್ಯಾದಿನಾ ಪ್ರಾಪ್ತಾಯಾ ಉತ್ತರಪದವೃದ್ಧೇರಭಾವಃ । ರಾಯಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಈಶೇ । ನಿಘಾತಃ । ಸ್ವಪತ್ಯಸ್ಯ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ವೃತ್ರಹಥಾನಾಂ । ವೃತು ವರ್ತನೇ । ಅಸ್ಮಾತ್ ಸ್ಫಾಯಿತಂಚಿವಂಚೀತ್ಯಾದಿನಾ ರಕ್ಪ್ರತ್ಯಯಃ । ಕಿತ್ತ್ವಾದಗುಣಃ । ಹನ ಹಿಂಸಾಗತ್ಯೋರಿತ್ಯಸ್ಮಾತ್ ಹನಿಕುಷಿನೀರಮಿಕಾಶಿಭ್ಯ ಇತಿ ಕ್ಥನ್ । ಕಿತ್ತ್ವಾದನುನಾಸಿಕಲೋಪಃ । ಕೃದುತ್ತರಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

**ಅಯಂ ಅಗ್ನಿಃ**—ಯಜ್ಞವೇದಿಯಲ್ಲಿರುವ ಈ ಅಗ್ನಿಯು | **ಸುವೀರ್ಯಸ್ಯ**—ಶ್ರೇಷ್ಠವಾದ ಸಾಮರ್ಥ್ಯದಿಂದ ಕೂಡಿದುದೂ | **ಮಹಃ**—ಮಹತ್ತಾದುದೂ ಆದ | **ಸೌಭಗಸ್ಯ**—ಮಂಗಳಾತ್ಮಕವಾದ ಐಶ್ವರ್ಯಕ್ಕೆ | **ಈಶೇ**—ಪ್ರಭುವಾಗಿದ್ದಾನೆ | **ಗೋಮತಃ**—ಗವಾದಿಪಶುಯುಕ್ತವಾದುದೂ | **ಸ್ವಪತ್ಯಸ್ಯ**—ಶ್ರೇಷ್ಠವಾದ ಪುತ್ರಸಂಪತ್ತಿನಿಂದ ಕೂಡಿದುದೂ ಆದ | **ರಾಯಃ**—ಧನಕ್ಕೆ | **ಈಶೇ**—ಒಡೆಯನಾಗಿದ್ದಾನೆ | **ವೃತ್ರಹಥಾನಾಂ**—ಶತ್ರುರೂಪವಾದ ಪಾಪಾದಿಗಳ ನಾಶನಕ್ಕೂ ಸಹ | **ಈಶೇ**—ಪ್ರಭುವಾಗಿದ್ದಾನೆ.

ಭಾವಾರ್ಥ

ಯಜ್ಞವೇದಿಯಲ್ಲಿರುವ ಈ ಅಗ್ನಿಯು ಶ್ರೇಷ್ಠವಾಥ ಸಾಮರ್ಥ್ಯದಿಂದ ಕೂಡಿದುದೂ, ಮಹತ್ತಾದುದೂ, ಮಂಗಳಾತ್ಮಕವಾದುದೂ ಆದ ಐಶ್ವರ್ಯಕ್ಕೆ ಪ್ರಭುವಾಗಿದ್ದಾನೆ. ಗವಾದಿಪಶುಯುಕ್ತವಾದುದೂ, ಶ್ರೇಷ್ಠವಾದ ಪುತ್ರಸಂಪತ್ತಿನಿಂದ ಕೂಡಿದುದೂ ಆದ ಧನಕ್ಕೂ ಒಡೆಯನಾಗಿದ್ದಾನೆ. ಶತ್ರುರೂಪವಾದ ಪಾಪಗಳ ನಾಶನಕ್ಕೂ ಸಹ ಶಕ್ತನಾಗಿದ್ದಾನೆ. [ಅಥವಾ ಪಾಪನಾಶಕರಿಗೂ ಒಡೆಯನಾಗಿದ್ದಾನೆ].

English Translation

This AGNI, is the lord of heroism and of great good fortune; he is the lord of wealth comprising progeny and cattle; he is the lord of the slayers of VRITRA. (enemy)

ವಿಶೇಷವಿಷಯಗಳು

**ಸುವೀರ್ಯಸ್ಯ ಮಹಃ ಸೌಭಗಸ್ಯ ಈಶೇ**—**ಸರ್ವಸ್ಯ ಬಲಾರೋಗ್ಯಹೇತುತಯಾ ಸೌಭಾಗ್ಯಕಾರಿತ್ವಾತ್ ಶೋಭನಸಾಮರ್ಥ್ಯೋಪೇತಸ್ಯ ಮಹತಃ ಸೌಭಾಗ್ಯಸ್ಯ ಈಶ್ವರೋ ಭವತಿ** | ಅಗ್ನಿಯು ಪ್ರಪಂಚವೆಲ್ಲವನ್ನೂ ಬಲ ಮತ್ತು ಆರೋಗ್ಯವುಳ್ಳದ್ದನ್ನಾಗಿ ಮಾಡುವ ಶಕ್ತಿಯಿಂದ ಕೂಡಿರುವ ಕಾರಣ ಉತ್ತಮವಾದ ಬಲವನ್ನೂ, ಆರೋಗ್ಯವನ್ನೂ ಅನುಗ್ರಹಿಸುವ ಪ್ರಭುವಾಗಿರುವವನೆಂದೂ, ಅಥವಾ ಆಪ್ರಕಾರವಾದ ಪ್ರಭಾವವುಳ್ಳವನೆಂದೂ ವರ್ಣಿಸಿದೆ.

**ಗೋಮತಃ ಸ್ವಪತ್ಯಸ್ಯ ರಾಯಃ ಈಶೇ** | ಈ ವಾಕ್ಯದಿಂದ ಅಗ್ನಿಯು—ಆಯಾಯ ಕಾಮನೆಯಿಂದ ಕರ್ಮವನ್ನು ಆಚರಿಸಿದವರಿಗೆ ಅವರವರ ಇಚ್ಛೆಗಳನ್ನು ಈಡೇರಿಸುವವನಾದುದರಿಂದ **ಪುತ್ರಪಶ್ವಾದ್ಯುದ್ದೇಶೇನ ಕ್ರಿಯಮಾಣಕರ್ಮಫಲಸಂಪಾದಕತ್ವೇನ** ಪುತ್ರ ಮತ್ತು ಪಶು, ಧನ ಇವುಗಳು ದೊರಕಬೇಕೆಂಬ ಉದ್ದೇಶದಿಂದ ಯಜ್ಞಕರ್ಮಗಳನ್ನು ಆಚರಿಸಿದವರ ಇಷ್ಟಗಳನ್ನು ನೆರವೇರಿಸುವುದರಲ್ಲಿಯೂ ಪ್ರಭುವಾಗಿ ಇರುವವನೆಂದು ಅರ್ಥವನ್ನು ವಿವರಿಸಿದೆ.

**ವೃತ್ರಹಥಾನಾಂ ಈಶೇ**—**ಶತ್ರುಭೂತಪಾಪವಿನಾಶನಾನಾಮಪಿ ಈಶೇ** | **ತ್ವಯಿ ಸಮರ್ಪಿತಕರ್ಮಣಾಮಸ್ಮಾಕಂ ತ್ವತ್ಪ್ರಸಾದಾತ್ ತಸ್ಯಾಪಿ ಸ್ವಾಮೀ** | ನಿರುಕ್ತಕಾರರು ವೃತ್ರಶಬ್ದಕ್ಕೆ ತತ್ತ್ವದೃಷ್ಟಿಯಿಂದ ಲೋಕಕ್ಕೆ ಹಿತವನ್ನೂ ಸುಖವನ್ನೂ ಉಂಟುಮಾಡುವ ಉದಕಗಳನ್ನು ನಿರೋಧಿಸುವ ಮೇಘವೆಂದೂ, ಐತಿಹಾಸಿಕ ದೃಷ್ಟಿಯಿಂದ ಲೋಕಕಂಟಕನಾದ ಒಬ್ಬ ಅಸುರನೆಂದೂ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಲೋಕದಲ್ಲಿರುವ ಪ್ರಾಣಿಗಳ

ಸುಖವಾಗಿರಲು ಪ್ರತಿಬಂಧಕವನ್ನು ಆಚರಿಸುವುದು ಎಂಬ ಲಾಕ್ಷಣಿಕಾರ್ಥವನ್ನು ಪರಿಗ್ರಹಿಸಿ ಪಾಪವೆಂದು ಅರ್ಥವನ್ನು ಹೇಳಿ, ಈ ಪಾಪವು ಶತ್ರುವಿನಹಾಗೆ ಕೆಡಕನ್ನು ಉಂಟುಮಾಡುವಕಾರಣ ಈ ಶತ್ರುರೂಪವಾದ ಪಾಪವನ್ನು ನಾಶ ಮಾಡುವ ವಿಷಯದಲ್ಲಿ ಅಗ್ನಿಯು ಸಮರ್ಥನೆಂಬ ಅರ್ಥವನ್ನು ವಿವರಿಸಿದ್ದಾರೆ. ಇದರಿಂದ ಅಗ್ನಿಯು ಆಯಾಯ ರೀತಿಯಿಂದ ತನ್ನನ್ನು ಸೇವಿಸುವವರಿಗೆ ಫಲಪ್ರದಾತೃವಾದ ಪ್ರಭುವಾಗಿರುವನೆಂದೂ ಹೇಳಿದೆ. ಮೊದಲು ಸಾಮಾನ್ಯ ವಾಗಿ ಬಲಾರೋಗ್ಯಗಳನ್ನು ಉಂಟುಮಾಡುವವನೆಂದೂ ಅನಂತರ ಆಯಾಯ ಕಾಮನೆಯುಳ್ಳವರು ಆಚರಿಸಿದ ಸಕಾಮ ಕರ್ಮಾನುರೂಪವಾದ ಫಲಪ್ರದಾತೃವೆಂದೂ, ನಿಷ್ಕಾಮನೆಯಿಂದ ಕರ್ಮಗಳನ್ನು ಆಚರಿಸಿ ಅದನ್ನು ಅರ್ಪಿಸಿದವರಿಗೆ ದುರ್ಗತ್ಯಾಪಾದಕವಾದ ಪಾಪಗಳನ್ನು ಪರಿಹರಿಸಿ "**ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ**" ಎಂಬ ವಚನಾನುಸಾರವಾಗಿ ಜ್ಞಾನಮಾರ್ಗದಲ್ಲಿ ಪ್ರವೇಶಿಸಲು ಅರ್ಹತೆಯನ್ನು ಉಂಟುಮಾಡುವವ ನೆಂದೂ ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಸುವೀರ್ಯಸ್ಯ**—ಶೋಭನಂ ವೀರ್ಯಂ ಯಸ್ಯ. ಸುಸ್ವರಕ್ಕೆ ಅಪವಾದವಾಗಿ **ಆದ್ಯುದಾತ್ತಂದ್ವ್ಯಚ್-ಛಂದಸಿ** ( ಪಾ. ಸೂ. ೬-೨-೧೧೯ ) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಷಷ್ಠೀಏಕವಚ ನಾಂತರೂಪ.

**ಈಶೇ**—ಈಶ ಐಶ್ವರ್ಯೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತ-ಆತ್ಮನೇಪದಾನಾಂ**—ಎಂಬುದರಿಂದ ಟಿಗೆ ಏತ್ವ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯದ ತಕಾರಕ್ಕೆ ಲೋಪ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತೇತ್ತಾದ ಧಾತುವಿನ ಪರದಲ್ಲಿ ಪ್ರತ್ಯಯ ಬಂದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮಹಃ**—**ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಸೌಭಗಸ್ಯ**—ಸುಭಗಸ್ಯ ಭಾವಃ ಸೌಭಗಮ್. ಉದ್ಗಾತ್ರಾದಿಗಣಪಠಿತವಾದುದರಿಂದ ಅಞ್‌ಪ್ರತ್ಯಯ. ಎಲ್ಲಾ ಕಾರ್ಯಗಳೂ ಛಂದಸ್ಸಿನಲ್ಲಿ ವಿಕಲ್ಪವಾದುದರಿಂದ **ಹೃದ್ಭಗಸಿಂಧ್ವಂತೇ ಪೂರ್ವಪದಸ್ಯಚ** (ಪಾ. ಸೂ. ೭-೩-೧೯) ಎಂಬುದರಿಂದ ಉಭಯಪದಕ್ಕೆ ವೃದ್ಧಿವಿಹಿತವಾದರೂ ಉತ್ತರಪದಾದಿಗೆ ವೃದ್ಧಿ ಬರುವುದಿಲ್ಲ. ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಾಯಃ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಷಷ್ಠೀವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಈಶೇ**—ಪೂರ್ವದಲ್ಲಿ ಪ್ರಕ್ರಿಯಾ ವಿವೃತವಾಗಿದೆ. ಅತಿಙಂತದ ಪರದಲ್ಲಿರುದರಿಂದ ನಿಘಾತಸ್ವರ ಬರುತ್ತದೆ.

**ಸ್ವಪತ್ಯಸ್ಯ**—ಶೋಭನಂ ಅಪತ್ಯಂ ಯಸ್ಯ ಸಃ. ತಸ್ಯ **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ವೃತ್ರಹಥಾನಾಮ್**—ವೃತು ವರ್ತನೇ. ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೨-೧೭೦) ಎಂಬುದ ರಿಂದ ಇದಕ್ಕೆ ರಕ್ ಪ್ರತ್ಯಯ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ವೃತ್ರ

ಎಂದು ರೂಪವಾಗುತ್ತದೆ. ಹನ ಹಿಂಸಾಗತ್ಯೋಃ ಧಾತು. **ಹನಿಕುಷಿನೀರಮಿಕಾಶಿಭ್ಯಃ** (ಉ. ಸೂ. ೨-೧೪೫) ಎಂಬುದರಿಂದ ಕ್ಥನ್ ಪ್ರತ್ಯಯ ಕಿತ್ತಾದುದರಿಂದ **ಅನುದಾತ್ತೋಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. ಹಥ ಎಂದು ರೂಪವಾಗುತ್ತದೆ. ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋಪಪ**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಹಥ ಎಂಬುದು ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ.

---

ಸಂಹಿತಾಪಾಠಃ

**ಇಮಂ ನರೋ ಮರುತಃ ಸಶ್ಚತಾ ವೃಧಂ ಯಸ್ಮಿನ್ರಾಯಃ ಶೇವೃಧಾಸಃ ।**
**ಅಭಿ ಯೇ ಸಂತಿ ಪೃತನಾಸು ದೂಢ್ಯೋ ವಿಶ್ವಾಹಾ ಶತ್ರುಮಾದಭುಃ ॥ ೨ ॥**

ಪದಪಾಠಃ

**ಇಮಂ । ನರಃ । ಮರುತಃ । ಸಶ್ಚತ । ವೃಧಂ । ಯಸ್ಮಿನ್ । ರಾಯಃ । ಶೇಽವೃಧಾಸಃ ।**
**ಅಭಿ । ಯೇ । ಸಂತಿ । ಪೃತನಾಸು । ದುಃಽಧ್ಯಃ । ವಿಶ್ವಾಹಾ । ಶತ್ರುಂ । ಆಽದಭುಃ ॥ ೨ ॥**

ಸಾಯಣಭಾಷ್ಯಂ

ನರಃ ಕರ್ಮಣಾಂ ನೇತಾರೋ ಹೇ ಮರುತೋ ದೇವಾ ಯೂಯಂ ವೃಧಂ ಪಶುಪುತ್ರಾದಿವರ್ಧಕಮಿಮಮಸ್ಮಾಭಿಃ ಸ್ತೂಯಮಾನಮಿಮಮಗ್ನಿಂ ಸಶ್ಚತ । ಹವಿರಾನಯನಾರ್ಥಂ ಸೇವಧ್ವಂ । ಕೀದೃಶೋಽಗ್ನಿರಿತ್ಯಾಕಾಂಕ್ಷಾಯಾಮಾಹ । ಯಸ್ಮಿನ್ದೇವೇ ರಾಯೋ ಧನಾನಿ ಶೇವೃಧಾಸೋ ದಾನಭೋಗಾದ್ಯುಪಯೋಗೇನ ಸುಖಸ್ಯ ವರ್ಧಕಾನಿ ಸಂತಿ । ಯೇ ಚ ದೇವಾಃ ಪೃತನಾಸು ಸೇನಾಸು ತದುಪಲಕ್ಷಿತೇಷು ಸಂಗ್ರಾಮೇಷು ದೂಢ್ಯೋ ದುಷ್ಟಧ್ಯಾನೋಪೇತಾನಾತ್ಮನೋ ಹಿಂಸಕಾಞ್ಛತ್ರೂನಭಿಸಂತಿ । ಅಭಿಭವಂತಿ । ಯೇ ಚ ವಿಶ್ವಾಹಾ ವಿಶ್ವಾನ್ಯಹಾನಿ ಯಸ್ಮಿನ್ನಖಂಡೇ ಕಾಲೇ ತಸ್ಮಿನ್ಸರ್ವದಾ ಶತ್ರುಮಾತ್ಮನೋ ದ್ವೇಷ್ಟಾರಮಾದಭುಃ । ಆದಭ್ನುವಂತಿ । ಹಿಂಸಂತಿ । ಏವಂಭೂತಾಸ್ತೇ ಸರ್ವೇ ಮರುತೋ ಯೂಯಂ ತಮಿಮಮಗ್ನಿಂ ಸೇವಧ್ವಮಿತಿ ಪೂರ್ವೇಣಾನ್ವಯಃ ॥ ಸಶ್ಚತ । ಷಸ್ಜ ಸಂಗ ಇತ್ಯಸ್ಮಾಲ್ಲೋಟಿ ರೂಪಂ। ಜಕಾರಸ್ಯ ವ್ಯತ್ಯಯೇನ ಚಕಾರಃ । ನಿಘಾತಃ । ಶೇವೃಧಾಸಃ । ವರ್ಣವ್ಯತ್ಯಯಃ । ಶಂ ಸುಖಂ ವರ್ಧಯತೀತಿ । ಅಸುನ್ನಿತ್ಯಸುನ್ । ಗುಣಾಭಾವಶ್ಛಾಂದಸಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತ್ಯೌಣಾದಿಕಸೂತ್ರಾತ್ ಪೂರ್ವಪದಪ್ರಕೃತಿಸ್ವರಃ । ಸಂತಿ । ಅಸ ಭುವಿ । ದೂಢ್ಯಃ । ಧ್ಯೈ ಚಿಂತಾಯಾಂ । ಅನ್ಯೇಭ್ಯೋಽಪಿ ದೃಶ್ಯತ ಇತಿ ಕ್ವಿಪ್ । ದೃಶಿಗ್ರಹಣಾತ್ಸಂಪ್ರಸಾರಣಂ । ದುರೋ ದಾಶನಾಶದಭಧ್ಯೇಷೂತ್ವಂ ವಕ್ತವ್ಯಮುತ್ತರಪದಾದೇಶ್ಚ ಷ್ಟುತ್ವಮಿತಿ ಊತ್ವಷ್ಟುತ್ವೇ । ಛಂದಸ್ಯುಭಯಥೇತಿ ಶಸೀಯಣಾದೇಶಂ ಬಾಧಿತ್ವಾ ಯಣಾದೇಶಃ । ಕೃದುತ್ತರಪದಪ್ರಕೃತಿಸ್ವರೇಣಾಂತೋದಾತ್ತಃ । ಶಸಃ

**ಸುಪ್ತ್ವಾನ್ಸದನುದಾತ್ತತ್ವೇ ಕೃತೇ ಉದಾತ್ತಸ್ವರಿತಯೋರ್ಯಣ ಇತಿ ಶಸಃ ಸ್ವರಿತತ್ವಂ । ಆದಭುಃ । ದನ್ಭು. ದಂಭೇ । ಅಸ್ಮಾಲ್ಲಿಟ್ಯುಸಿ ರೂಪಂ । ಶ್ರಂಥಿಗ್ರಂಥಿದಂಭಿಸ್ವಂಜೀನಾಮುಪಸಂಖ್ಯಾನಮಿತಿ ಕಿತ್ವಾದ್ವಾವಾದ- ನುನಾಸಿಕಲೋಪಃ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮಿತಿ ದ್ವಿರ್ವಚನಾಭಾವಃ । ಯದ್ವೃ- ತ್ತಯೋಗಾದನಿಘಾತಃ । ಸತಿ ಶಿಷ್ಟಸ್ವರೋ ಬಲೀಯಾನಿತಿ ಪ್ರತ್ಯಯಸ್ವರಃ ॥**

ಪ್ರತಿಪದಾರ್ಥ

**ಯೇ**—ಯಾರು । **ಪೃತನಾಸು**—ಸಂಗ್ರಾಮಗಳಲ್ಲಿ । **ದೂಢ್ಯಃ**—ದುಷ್ಟರಾದ ಶತ್ರುಗಳನ್ನು । **ಅಭಿ ಸಂತಿ**—ಸೋಲಿಸುತ್ತಾರೋ, (ಮತ್ತು) । **ವಿಶ್ವಾಹಾ**—ಸರ್ವಕಾಲಗಳಲ್ಲೂ । **ಶತ್ರುಂ**—ತಮ್ಮ ಶತ್ರುವನ್ನು । **ಆದಭುಃ**—ಹಿಂಸಿಸಿ ನಾಶಮಾಡುತ್ತಾರೆಯೋ ಅಂತಹವರೂ । **ನರಃ**—ನೇತೃಗಳಾದವರೂ ಆದ । **ಮರುತಃ**— ಎಲೈ ಮರುದ್ದೇವತೆಗಳೇ, (ನೀವು) । **ವೃಧಂ**—ಪಶುಪುತ್ರಾದಿಗಳನ್ನು ವೃದ್ಧಿಯಾಗುವಂತೆ ಮಾಡುವವನೂ, ಮತ್ತು । **ಯಸ್ಮಿನ್**—ಯಾವ (ಅಗ್ನಿ)ದೇವನಲ್ಲಿ । **ರಾಯಃ**—ಧನಗಳು । **ಶೇವೃಧಾಸಃ**—ಸುಖವರ್ಧಕಗಳಾಗಿವೆಯೋ ಅಂತಹ । **ಇಮಂ**—ಈ ಅಗ್ನಿದೇವತೆಯನ್ನು । **ಸಶ್ಚತ**—ಸೇರಿಕೊಂಡು ಸೇವಿಸಿರಿ ॥

ಭಾವಾರ್ಥ

ಎಲೈ ಮರುತ್ತಗಳೇ, ನೀವು ನಮಗೆಲ್ಲರಿಗೂ ನೇತೃಗಳಾಗಿಯೂ, ಸಂಗ್ರಾಮಗಳಲ್ಲಿ ದುಷ್ಟರಾದ ಶತ್ರುಗಳನ್ನು ಸೋಲಿಸುವವರಾಗಿಯೂ, ದ್ವೇಷವನ್ನು ತೋರಿಸುವ ದುಷ್ಟರನ್ನು ಸರ್ವಕಾಲಗಳಲ್ಲಿಯೂ ನಾಶಮಾಡುವವರಾಗಿಯೂ ಇದ್ದೀರಿ. ಇಂತಹ ಉತ್ತಮವಾದ ಶಕ್ತಿಯುಳ್ಳ ನೀವು ಪಶುಪುತ್ರಾದಿಗಳನ್ನು ವೃದ್ಧಿಯಾಗುವಂತೆ ಮಾಡುವವನೂ ಮತ್ತು ಸುಖವರ್ಧಕಗಳಾದ ಧನಗಳನ್ನು ಹೊಂದಿರುವವನೂ ಆದ ಈ ಅಗ್ನಿದೇವತೆಯನ್ನು ಸೇರಿಕೊಂಡು ಅವನನ್ನು ಸೇವಿಸಿರಿ.

English Translation

Maruts, leaders (of rites), associate with this augmenter (of our prosperity), in whom (abide) riches contributing to felicity, you who (are victorious) over (your) enemies in battle, who daily humble (your) foes.

ವಿಶೇಷವಿಷಯಗಳು

**ನರಃ ಮರುತಃ ವೃಧಂ ಇಮಂ ಸಶ್ಚತ**—**ಕರ್ಮಣಾಂ ನೇತಾರೋ ದೇವಾಃ ಯೂಯಂ ಪಶು- ಪುತ್ರಾದಿವರ್ಧಕಂ ಅಸ್ಮಾಭಿಃ ಸ್ತೂಯಮಾನಮಿಮಮಗ್ನಿಂ ಹವಿರಾನಯನಾರ್ಥಂ ಸೇವಧ್ವಂ** । ದೇವತೆಗಳು ಯಜ್ಞಾದಿಕರ್ಮಗಳನ್ನು ಆಚರಿಸಲು ಸಹಾಯಕರೆಂದು ದೇವತೆಗಳನ್ನು ಸಂಬೋಧಿಸಿದೆ. ಮತ್ತು ಪಶುಪುತ್ರಾದಿ ಗಳನ್ನು ಅಭಿವೃದ್ಧಿಗೊಳಿಸುವ, ಯಜ್ಞಮಾಡುವವರಿಂದ ಸ್ತುತ್ಯನಾದ ಅಗ್ನಿಯು ದೇವತೆಗಳಿಗಾಗಿ (ಹವಿಸ್ಸನ್ನು) ಅರ್ಪಿತವಾಗುವ ಹವಿರ್ಭಾಗಗಳನ್ನೂ ಒಯ್ಯುವವನಾಗಿರುವುದರಿಂದ ಅಗ್ನಿಯನ್ನು ದೇವತೆಗಳೂ ಸೇವಿಸಲಿ ಎಂದು ಆಶಿಸಿದೆ.

**ಶೇವೃಧಾಸಃ ರಾಯಃ**—**ದಾನಭೋಗಾದ್ಯುಪಯೋಗೇನ ಸುಖಸ್ಯ ವರ್ಧಕಾನಿ ಧನಾನಿ** । ಅಗ್ನಿಯು ದಾನಮಾಡುವುದು ಮತ್ತು ಭೋಗಪಡುವುದು ಎಂಬ ರೀತಿಯಿಂದ ಸುಖವನ್ನು (ಉಂಟುಮಾಡುವ) ಹೆಚ್ಚಿಸುವ ಧನಗಳನ್ನು ಅತಿಶಯವಾಗಿ ಹೊಂದಿರುವನೆಂದು ಅಗ್ನಿಯ ಪ್ರಭೂತವಾದ ಪ್ರಭಾವವನ್ನೂ ಸೂಚಿಸಿದೆ.

**ಪೃತನಾಸು ದೂಢ್ಯಃ**—**ಸೇನಾಸು ತದುಪಲಕ್ಷಿತೇಷು ಸಂಗ್ರಾಮೇಷು ದುಷ್ಟಧ್ಯಾನೋಪೇತಾನ್ ಆತ್ಮನೋ ಹಿಂಸಕಾನ್ ಶತ್ರೂನ್ ಅಭಿಸಂತಿ ಅಭಿಭವಂತಿ** | ಪೃತನಾ ಎಂಬ ಪದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ಸೇನೆ ಎಂಬ ಅರ್ಥದಲ್ಲಿಯೂ ಸಂಗ್ರಾಮ (ಯುದ್ಧ) ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ.

**ಇಂದ್ರಾವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ |**
**ದೀರ್ಘಪ್ರಯಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ ||**
(ಋ. ಸಂ. ೭-೮೨-೧)

ಇಲ್ಲಿ **ದೂಢ್ಯಂ ಪಾಪಧಿಯಂ** (ನಿ. ೫-೨) ಕೆಟ್ಟಬುದ್ಧಿಯುಳ್ಳವನು ಎಂದು ದೂಢಿಶಬ್ದಕ್ಕೆ ಅರ್ಥವನ್ನೂ ಹೇಳಿದೆ. ಸೇನೆಯಲ್ಲಿರುವವರೂ, ಅಥವಾ ಸೇನೆಗಳು ಇರುವ ಸನ್ನಿವೇಶವಾದ ಯುದ್ಧಗಳಲ್ಲಿರುವವರೂ ಇತರರನ್ನು ಹಿಂಸೆಮಾಡುವ ಯೋಜನೆಗಳನ್ನು ಮಾಡುವಕಾರಣ ಹಿಂಸಕರೆಂದೂ ಶತ್ರುಗಳೆಂದೂ ವ್ಯವಹೃತರಾಗಿರುತ್ತಾರೆ. ಇವರನ್ನೂ ದೇವತೆಗಳು ನಾಶಮಾಡುತ್ತಾರೆಂದು ವರ್ಣಿಸಿದೆ.

**ವಿಶ್ವಾಹಾ**—**ವಿಶ್ವಾನಿ ಅಹಾನಿ ಯಸ್ಮಿನ್ ಅಖಂಡೇ ಕಾಲೇ ತಸ್ಮಿನ್ ಸರ್ವದಾ** | ಎಲ್ಲಾ ಅಹಸ್ಸುಗಳನ್ನೂ ಒಳಗೊಂಡಿರುವ ಅಖಂಡವಾದ ಕಾಲವು ವಿಶ್ವಾಹಾ ಎಂಬ ಪದದಿಂದ ಬೋಧ್ಯವಾಗಿದೆ ಎಂದೂ, ದೇವತೆಗಳು (ಯಾವಾಗಲೂ) ಸರ್ವಕಾಲದಲ್ಲಿಯೂ ತಮ್ಮನ್ನು ದ್ವೇಷಿಸುವ ಶತ್ರುಗಳನ್ನು ನಾಶಪಡಿಸುವರೆಂದು ಅರ್ಥವನ್ನು ವಿವರಿಸಿ, **ಏವಂಭೂತಾಸ್ಸರ್ವೇ ಮರುತಃ ಅಗ್ನಿಂ ಸೇವಧ್ವಂ** ಈ ಪ್ರಕಾರವಾಗಿರುವ ದೇವತೆಗಳೆಲ್ಲರೂ ಅಗ್ನಿಯನ್ನು ಸೇವಿಸಲಿ ಎಂದು ದೇವತೆಗಳನ್ನು ಸಂಬೋಧಿಸಿ ಅವರ ಮಹಿಮೆಯನ್ನು ಪ್ರಕಟಗೊಳಿಸಿ ಅವರೂ ಕೂಡ ಸೇವಿಸಬೇಕಾದ ಅಗ್ನಿಯ ಪ್ರಭೂತವಾದ ಪ್ರಭಾವವನ್ನು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಸಶ್ಚತ**—ಷಸ್ಜ ಸಂಗೇ. ಧಾತು. **ಧಾತ್ವಾದೇಃಷಃಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಲೋಟ್ ಮಧ್ಯಮಪುರುಷಬಹುವಚನಕ್ಕೆ ಲಙ್ವದ್ಭಾವವಿರುವುದರಿಂದ **ತಸ್ಥಸ್ಥಮಿಪಾಂ**—ಎಂಬುದರಿಂದ ತ ಆದೇಶ. ಧಾತುಜಕಾರಕ್ಕೆ ವ್ಯತ್ಯಯದಿಂದ ಚಕಾರಾದೇಶ. **ಸ್ತೋಃಶ್ಚುನಾಶ್ಚುಃ** ಎಂಬುದರಿಂದ ಸಕಾರಕ್ಕೆ ಶಕಾರಾದೇಶ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವೃಧಮ್**—ವೃಧು ವರ್ಧನೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾಏಕವಚನಾಂತರೂಪ.

**ಶೇವೃಧಾಸಃ**—ಶ ಸುಖಂ ವರ್ಧಯತಿ ಇತಿ ಶೇವೃಧಾಃ. ವೃಧು ವರ್ಧನೇ ಧಾತು. ಔಣಾದಿಕ ಅಸುನ್ ಪ್ರತ್ಯಯ. ಛಾಂದಸವಾಗಿ ಲಘೂಪಧಗುಣ ಬರುವುದಿಲ್ಲ. ವ್ಯತ್ಯಯದಿಂದ ಶ ಎಂಬುದಕ್ಕೆ ಶೇ ಎಂಬ ವಿಕಾರ ಬರುತ್ತದೆ. **ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂಚ** (ಉ. ಸೂ. ೪-೬೬೬) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸಂತಿ**—ಅಸ ಭುವಿ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ದೂಢ್ಯಃ**—ಧ್ಯೈ ಚಿಂತಾಯಾಂ ಧಾತು. **ಅನ್ಯೇಭ್ಯೋಽಪಿದೃಶ್ಯತೇ** (ಪಾ. ಸೂ. ೩-೨-೧೭೮) ಎಂಬು

ದರಿಂದ ಕ್ವಿಪ್ ಪ್ರತ್ಯಯ. ದೃಶಿಗ್ರಹಣಸಾಮರ್ಥ್ಯದಿಂದ ಧಾತುವಿನ ಯಕಾರಕ್ಕೆ ಸಂಪ್ರಸಾರಣ. (ಇ) ಪೂರ್ವರೂಪ. ದುರ್ ಉಪಸರ್ಗಪೂರ್ವದಲ್ಲಿರುವಾಗ **ದುರೋ ದಾಶನಾಶ ದ ಭಧ್ಯೇಷೂತ್ವಂ ವಕ್ತವ್ಯಮುತ್ತರಪದಾದೇಃ ಷ್ಟುತ್ವಂಚ** ಎಂಬ ವಚನದಿಂದ ಉತ್ವ. ದಕಾರಕ್ಕೆ ಢಕಾರಾದೇಶ. ದೂಢಿ ಎಂದು ರೂಪವಾಗುತ್ತದೆ. ಇದಕ್ಕೆ ಶಸ್ ಪರವಾದಾಗ **ಛಂದಸ್ಯುಭಯಥಾ** ಎಂಬುದರಿಂದ ಇಯಙಾದೇಶವು ಬಾಧಿತವಾಗಿ ಯಣಾದೇಶ ಬರುತ್ತದೆ. ಕೃದುತ್ತರಪದಪ್ರಕೃತಿಸ್ವರದಿಂದ ಅಂತೋದಾತ್ತವಾಗುತ್ತದೆ.

ವಿಶ್ವಾಹಾ—**ಶೇಶ್ಛಂದಸಿ ಬಹುಲಮ್** ಎಂಬುದರಿಂದ ನಪುಂಸಕಬಹುವಚನದಲ್ಲಿ ಶಿಗೆ ಲುಕ್.

ಆದಭುಃ—ದಂಭು ದಂಭನೇ. ಧಾತು. ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಉಸಾದೇಶ. **ಶ್ರಂಥಿಗ್ರಂಥಿದಂಭಿ ಸ್ವಂಜೀನಾಮುಪಸಂಖ್ಯಾನಮ್** ಎಂಬ ವಾರ್ತಿಕದಿಂದ ಸಂಯೋಗದ ಪರದಲ್ಲಿದ್ದರೂ ಪ್ರತ್ಯಯಕ್ಕೆ ಕಿತ್ವ ಬರುತ್ತದೆ. **ಅನಿದಿತಾಂಹಲಉಪಧಾ**—(ಪಾ. ಸೂ. ೬–೪–೨೪) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. **ದ್ವಿರ್ವಚನ ಪ್ರಕರಣೇ ಛಂದಸಿ ವೇತಿ ವಕ್ತವ್ಯಮ್** (ಕಾ. ೬–೧–೮) ಎಂಬ ವಚನದಿಂದ ಲಿಣ್ಣಿಮಿತ್ತವಾಗಿ ದ್ವಿತ್ವ ಬರುವುದಿಲ್ಲ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮–೧–೬೬ ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. **ಸತಿಶಿಷ್ಟಃಸ್ವರೋ ಬಲೀಯಾನ್** ಎಂಬ ವಚನದಿಂದ ಪ್ರತ್ಯಯಸ್ವರ ಉಳಿಯುತ್ತದೆ. ಉದಾತ್ತವುಳ್ಳ ತಿಙಂತಪರವಾದುದರಿಂದ ತಿಙಿಚೋದಾತ್ತವತಿ (ಪಾ. ಸೂ. ೮–೧–೭೧) ಎಂಬುದರಿಂಧ ಗತಿಗೆ (ಆಙ್) ಅನುದಾತ್ತ ಸ್ವರ ಬರುತ್ತದೆ.

ಸಂಹಿತಾಪಾಠಃ

ಸ ತ್ವಂ ನೋ ರಾಯಃ ಶಿಶೀಹಿ ಮೀಢ್ವೋ ಅಗ್ನೇ ಸುವೀರ್ಯಸ್ಯ ।
ತುವಿದ್ಯುಮ್ನ ವರ್ಷಿಷ್ಠಸ್ಯ ಪ್ರಜಾವತೋಽನಮೀವಸ್ಯ ಶುಷ್ಮಿಣಃ ॥ ೩ ॥

ಪದಪಾಠಃ

ಸಃ । ತ್ವಂ । ನಃ । ರಾಯಃ । ಶಿಶೀಹಿ । ಮೀಢ್ವಃ । ಅಗ್ನೇ । ಸುಽವೀರ್ಯಸ್ಯ ।
ತುವಿಽದ್ಯುಮ್ನ । ವರ್ಷಿಷ್ಠಸ್ಯ । ಪ್ರಜಾಽವತಃ । ಅನಮೀವಸ್ಯ । ಶುಷ್ಮಿಣಃ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ಸ ತಥಾವಿಧಸ್ತ್ವಂ ನೋಽಸ್ಮಾನ್ರಾಯಃ । ತೃತೀಯಾರ್ಥೇ ಷಷ್ಠೀ । ಧನೇನ ಶಿಶೀಹಿ। ತೀಕ್ಷ್ಣಾನ್‌ಕುರು । ಅಸ್ಮಾನ್ಧನಸಮೃದ್ಧಾನ್ಕುರು । ಕಿಂಚ ತುವಿದ್ಯುಮ್ನ ಬಹುಧನೋಪೇತ ಅತ ಏವ ಮೀಢ್ವೋ ಮೀಢ್ವನ್ ಕಾಮಾನಾಂ ಸೇಕ್ತಃ ಹೇ ಅಗ್ನೇ ತ್ವಂ ವರ್ಷಿಷ್ಠಸ್ಯ ವೃದ್ಧತಮಸ್ಯ ಪ್ರಭೂತಸ್ಯ ಪ್ರಜಾವತೋಽಪತ್ಯಯುಕ್ತಸ್ಯಾನಮೀವಸ್ಯಾರೋಗ್ಯಹೇತೋರತ ಏವ ಶುಷ್ಮಿಣೋ ಬಲಹೇತೋಃ ಸುವೀರ್ಯಸ್ಯ ಶೋಭನಸಾಮರ್ಥ್ಯಯುಕ್ತಸ್ಯಾನ್ನಸ್ಯ ಸಂಬಂಧಿನೋಽಸ್ಮಾನ್ಕುರು । ಯದ್ವಾ । ಏತತ್ಸರ್ವಂ ವಿಶೇಷಣತಯಾ ಯೋಜನೀಯಂ । ಏತಾಃ ಷಷ್ಠ್ಯಸ್ತೃತೀಯಾರ್ಥೇ । ಏತದುಕ್ತಂ ಭವತಿ । ಧನೇನಾ–

**ಪತ್ಯಾರೋಗ್ಯಶರೀರಬಲೋಪೇತೇನಾನ್ನೇನಾಸ್ಮಾನ್ಸಮೃದ್ಧಾನ್ಕುರ್ವಿತಿ || ಶಿಶೀಹಿ | ಶಿಞ್ ನಿಶಾನ ಇತ್ಯಸ್ಯ ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ | ವಾ ಛಂದಸೀತಿ ವಿಕಲ್ಪೇನ ಜಾತ್ವಾದಜಾತಶ್ಚೇತಿ ಹೇರ್ಧಿರಾದೇಶೋ ನ ಭವತಿ | ದೀರ್ಘಶ್ಛಂದಸಃ | ನಿಘಾತಃ | ಮೀಢ್ವಃ | ಮಿಹ ಸೇಚನ ಇತ್ಯಸ್ಯ ಕ್ವಸೌ ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚೇತಿ ನಿಪಾತನಾತ್ ಢತ್ವಂ ಉಪಧಾದೀರ್ಘಶ್ಚ | ಸಂಬುದ್ಧೌ ಸುಮಿ ಕೃತೇ ಹಲ್‌ಙ್ಯಾದಿಲೋಪೇ ಸಂಯೋಗಾಂತಲೋಪೇ ಚ ಕೃತೇ ಮತುವಸೋ ರುಃ ಸಂಬುದ್ಧೌ ಛಂದಸೀತಿ ರುಃ | ಪಾದಾದಿತ್ವಾದಾದ್ಯುದಾತ್ತಃ ||**

ಪ್ರತಿಪದಾರ್ಥ

**ತುವಿದ್ಯುಮ್ನ**—ಪ್ರಭೂತವಾದ ಧನದಿಂದ ಕೂಡಿದ | **ಅಗ್ನೇ**—ಎಲೈ ಅಗ್ನಿಯೇ | **ಸಃ**—ಮೇಲೆ ವರ್ಣಿತವಾದ ಗುಣಗಳುಳ್ಳವನೂ | **ಮೀಢ್ವಃ**—ಇಷ್ಟಾರ್ಥಗಳನ್ನು ಸುರಿಸುವವನೂ ಆದ | **ತ್ವಂ**—ನೀನು | **ಸುವೀರ್ಯಸ್ಯ**—ಶ್ರೇಷ್ಠವಾದ ವೀರ್ಯದಿಂದ ಕೂಡಿದುದೂ | **ವರ್ಷಿಷ್ಠಸ್ಯ**—ಅತ್ಯಂತ ಪ್ರಭೂತವಾದುದೂ | **ಪ್ರಜಾವತಃ**—ಪುತ್ರಪೌತ್ರಾದಿಸಂಪದ್ಯುಕ್ತವಾದುದೂ | **ಅನಮೀವಸ್ಯ**—ಆರೋಗ್ಯಹೇತುವಾದುದೂ | **ಶುಷ್ಮಿಣಃ**—ಶಕ್ತಿಜನಕವಾದುದೂ ಆದ | **ರಾಯಃ**—ಧನದಿಂದ | **ನಃ**—ನಮ್ಮನ್ನು | **ಶಿಶೀಹಿ**—ಸಮೃದ್ಧರನ್ನಾಗಿ ಮಾಡು.

ಭಾವಾರ್ಥ

ಪ್ರಭೂತವಾದ ಧನದಿಂದ ಕೂಡಿದ ಎಲೈ ಅಗ್ನಿಯೇ, ಮೇಲೆ ವರ್ಣಿತವಾದ ಸದ್ಗುಣಗಳಿಂದ ತುಂಬಿದವನೂ, ಕಾಮಗಳನ್ನು ಸುರಿಸುವವನೂ ಆದ ನೀನು ಶ್ರೇಷ್ಠವಾದ ವೀರ್ಯದಿಂದ ಕೂಡಿದುದೂ, ಅತ್ಯಂತ ಪ್ರಭೂತವಾದುದೂ, ಪುತ್ರಪೌತ್ರಾದಿಸಂಪದ್ಯುಕ್ತವಾದುದೂ, ಆರೋಗ್ಯಹೇತುವಾದುದೂ, ಶಕ್ತಿಜನಕವಾದುದೂ ಆದ ಧನದಿಂದ ನಮ್ಮನ್ನು ಸಮೃದ್ಧರನ್ನಾಗಿ ಮಾಡು.

## English Translation

Opulent AGNI, showerer (of benefits), prosper us with riches comprising vigour, numerous progeny, health, and happiness.

ವಿಶೇಷವಿಷಯಗಳು

**ಅಸ್ಮಾನ್ ರಾಯಃ ಶಿಶೀಹಿ** ಎಂಬ ವಾಕ್ಯದಿಂದ ನಮ್ಮನ್ನು ಅಗ್ನಿಯು ಧನವಂತರಾಗಿರುವಂತೆ ಮಾಡಲಿ ಎಂದು ಆಶಿಸಿದೆ. ಅಗ್ನಿಯನ್ನು ತುವಿದ್ಯುಮ್ನ ಎಂಬ ಪದದಿಂದ ಸಂಬೋಧಿಸಿ ಅಗ್ನಿಯು ಪ್ರಭೂತವಾದ ಧನವುಳ್ಳವನೆಂದೂ, ಅಗ್ನಿಯು ನಮ್ಮನ್ನು ಬಹಳ ಸಾಮರ್ಥ್ಯವುಳ್ಳವರನ್ನಾಗಿ ಮಾಡಲಿ ಎಂದೂ ಪ್ರಾರ್ಥಿಸಿದೆ.

ಷಷ್ಠೀವಿಭಕ್ತ್ಯಂತವಾಗಿರುವ **ವರ್ಷಿಷ್ಠಸ್ಯ ಪ್ರಜಾವತಃ ಅನಮೀವಸ್ಯ ಶುಷ್ಮಿಣಃ ಸುವೀರ್ಯಸ್ಯ** ಈ ಪದಗಳಿಗೆ ಅತಿಶಯವಾಗಿ ವೃದ್ಧಿಯನ್ನು ಹೊಂದುವ, ಪುತ್ರಪೌತ್ರರುಂಟಾಗಲು ಕಾರಣವಾದ, ಬಲಾರೋಗ್ಯಗಳನ್ನು ಉಂಟುಮಾಡುವ ಅನ್ನವು ನಮಗೆ ಅಗ್ನಿಯ ಅನುಗ್ರಹದಿಂದ ಉಂಟಾಗಲಿ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ.

**ಯದ್ವಾ ಏತತ್ಸರ್ವಂ ವಿಶೇಷಣತಯಾ ಯೋಜನೀಯಂ ಧನೇನ ಅಪತ್ಯಾರೋಗ್ಯಶರೀರಬಲೋಪೇತೇನ ಅನ್ನೇನ ಚ ಅಸ್ಮಾನ್ ಸಮೃದ್ಧಾನ್ ಕುರು.** ಈ ಪದಗಳೆಲ್ಲವೂ ಧನವಾಚಕವಾದ ರೈ ಪದಕ್ಕೆ

ವಿಶೇಷವಾಗಿ ಪ್ರಯೋಗಿಸಿ ಪುತ್ರರೂ, ಆರೋಗ್ಯವೂ, ಶರೀರದ (ಬಲವೂ) ಸಾಮರ್ಥ್ಯವೂ ಇವುಗಳು ಉಂಟಾಗಲು ಕಾರಣವಾದ ಅನ್ನವುಳ್ಳವರನ್ನಾಗಿ ಅಥವಾ ಪ್ರಭೂತವಾದ ಅನ್ನವನ್ನು ಅನುಗ್ರಹಿಸುವುದರ ಮೂಲಕ ನಾವು ಧನ ಸಮೃದ್ಧರಾಗಿರುವಂತೆ ಅಗ್ನಿಯು ಅನುಗ್ರಹಿಸಲಿ ಎಂದು ಎರಡನೆಯ ಅರ್ಧವನ್ನು ಹೇಳಿ ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

ಶಿಶೀಹಿ—ಶಿಞ್ ನಿಶಾನೇ. ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್ ಬಂದಾಗ ಅದಕ್ಕೆ ಹಿ ಆದೇಶ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ **ವಾಛಂದಸಿ** ಎಂಬುದರಿಂದ ಹಿಗೆ ವಿಕಲ್ಪವಾಗಿ ಜುತ್ವವಿಧಾನಮಾಡಿರುವುದರಿಂದ ಇಲ್ಲಿ ಬರುವುದಿಲ್ಲ. **ಅಜುತಶ್ಚ** (ಪಾ. ಸೂ. ೬-೪-೧೦೩) ಎಂಬುದರಿಂದ ಹಿಗೆ ಧಿಭಾವ ಬರುವುದಿಲ್ಲ. ಛಾಂದಸವಾಗಿ ಧಾತುವಿನ ಇಕಾರಕ್ಕೆ ದೀರ್ಘ ಬರುತ್ತದೆ.

ಮೀಢ್ವಃ—ಮಿಹ ಸೇಚನೇ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ ಕ್ವಸುರಾದೇಶ. ಇದು ಪರವಾದಾಗ **ದಾಶ್ವಾನ್ ಸಾಹ್ವಾನ್‌ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ನಿಪಾತಮಾಡಿರುವುದರಿಂದ ಧಾತು ಹಕಾರಕ್ಕೆ ಢತ್ವ. ಉಪಧಾದೀರ್ಘಗಳು ಬರುತ್ತವೆ. ಮೀಢ್ವಸ್ ಶಬ್ದ. ಇದಕ್ಕೆ ಸಂಬುದ್ಧಿಯಲ್ಲಿ ಸುಪರವಾದಾಗ ಉಗಿತ್ತಾದುದರಿಂದ ನುಮಾಗಮ. **ಹಲ್‌ಙ್ಯಾಭ್ಯೋ ದೀರ್ಘಾತ್** (ಪಾ. ಸೂ. ೬-೧-೬೮) ಎಂಬುದರಿಂದ ಹಲಂತದ ಪರದಲ್ಲಿರುವ ಸು ವಿಭಕ್ತಿಗೆ ಲೋಪ. **ಸಂಯೋಗಾಂತಸ್ಯ ಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ನಕಾರದಪರದ ಸಕಾರಕ್ಕೆ ಲೋಪ. **ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ. ವಿಸರ್ಗ. ಪಾದಾದಿಯಲ್ಲಿರುವುದರಿಂದ **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತುವಿದ್ಯುಮ್ನಎಂಬ ಸಂಬುದ್ಧಿಯಲ್ಲಿಯೂ ಹೀಗೆ ಪಾದಾದಿಯಲ್ಲಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅನಮೀವಸ್ಯ—**ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

ಚಕ್ರಿರ್ಯೋ ವಿಶ್ವಾ ಭುವನಾಭಿ ಸಾಸಹಿಶ್ಚಕ್ರಿರ್ದೇವೇಷ್ವಾ ದುವಃ ।
ಆ ದೇವೇಷು ಯತತ ಆ ಸುವೀರ್ಯ ಆ ಶಂಸ ಉತ ನೃಣಾಂ ॥ ೪ ॥

ಪದಪಾಠಃ

ಚಕ್ರಿಃ । ಯಃ । ವಿಶ್ವಾ । ಭುವನಾ । ಅಭಿ । ಸಸಹಿಃ । ಚಕ್ರಿಃ । ದೇವೇಷು । ಆ । ದುವಃ ।
ಆ । ದೇವೇಷು । ಯತತೇ । ಆ । ಸುವೀರ್ಯೇ । ಆ । ಶಂಸೇ । ಉತ । ನೃಣಾಂ ॥ ೪ ।

ಸಾಯಣಭಾಷ್ಯಂ

ಯೋಽಯಮಗ್ನಿಶ್ಚಕ್ರಿಃ ಸರ್ವಸ್ಯ ಜಗತಃ ಕರ್ತಾ ಸ ಚ ವಿಶ್ವಾ ಭುವನಾ ವಿಶ್ವಾನಿ ಭವನಾನ್ಯಭಿ ಅಭಿವಿಶತಿ । ತತ್ಸೃಷ್ಟ್ವಾ ತದೇವಾನುಪ್ರಾವಿಶದಿತಿ ಶ್ರುತೇಃ । ಚಕ್ರಿಃ ಕರ್ತಾ ಸೋಽಗ್ನಿಃ ಸಾಸಹಿಃ ಪುರೋಡಾಶಾದಿಹವಿರ್ಭಾರಸಹನಶೀಲಃ ಸನ್ ಧ್ರುವೋಽಸ್ಮಾಭಿರ್ದತ್ತಂ ಹವಿರ್ದೇವೇಷು ಯಜನೀಯೇ- ದೇವೇಷ್ವಾ । ಆನಯತಿ । ಸ ಚಾಗ್ನಿರ್ದೇವೇಷು ದೇವನಶೀಲೇಷು ಸ್ತೋತೃಷ್ವಾ ಯತತೇ । ಅಭಿಮು- ಖ್ಯೇನ ಗಚ್ಛತಿ । ಯದ್ವಾ ವಿಶ್ವಾನಿ ಭುವನಾನಿ ಚಕ್ರಿರಭಿಸಾಸಹಿರಭಿಭವನಶೀಲಃ । ಅಕಾರಶ್ಚಾರ್ಥೇ । ದೇವೇಷು ಚ ಧ್ರುವಃ ಪರಿಚರಣಂ ಚಕ್ರಿಃ ಕರ್ತಾ । ಯ ಏವಂಭೂತಃ ಸ ಆಯತತ ಇತ್ಯಾದಿ ಪೂರ್ವ- ವತ್ । ಉತ ಅಪಿ ಚ ನೃಣಾಂ ಯಜ್ಞಸ್ಯ ನೇತೄಣಾಂ ಶಸ್ತ್ರಿಣಾಂ ಶಂಸೇ । ಶಂಸನಂ ಶಂಸಃ ಶಸ್ತ್ರಂ । ತಸ್ಮಿನ್ ಸೋಽಗ್ನಿರಾಗಚ್ಛತಿ । ತಥಾ ನೃಣಾಂ ಮನುಷ್ಯಾಣಾಂ ಸುವೀರ್ಯೇ ಶೋಭನವೀರ್ಯೋಪೇತ- ಯುದ್ಧೇ ತತ್ಪ್ರಕ್ಷಣಾರ್ಥಮಾಗಚ್ಛತಿ । ಅನೇನಾಗ್ನೇಃ ಸರ್ವವ್ಯಾಪಕತಾ ಪ್ರತಿಪಾದಿತಾ ಭವತಿ ॥ ಚಕ್ರಿಃ । ಡುಕೃಞ್ ಕರಣೇ । ಆದೃಗಮಹನಜನಃ ಕಿಕಿನೌ ಲಿಟ್ ಚೇತಿ ಕಿನ್ಪ್ರತ್ಯಯಃ । ಲಿಡ್ವದ್ಭಾವಾದ್ದ್ವಿರ್ವ- ಚನಂ । ಕಿತ್ತ್ವಾದ್ಗುಣಾಭಾವಃ । ನಿತ್ಸ್ವರಃ । ಸಾಸಹಿಃ । ಷಹ ಮರ್ಷಣೇ ಇತ್ಯಸ್ಮಾದ್ಯಙಂತಾತ್ಸಹಿವಹಿ ಚಲಿಪತಿಭ್ಯೋ ಯಙಂತೇಭ್ಯಃ ಕಿಕಿನೌ । ಪಾ ೩-೨-೧೭೧-೪ । ಇತಿ ಕಿಃ । ಪ್ರತ್ಯಯಸ್ವರಃ । ಯತತೇ । ಯತೀ ಪ್ರಯತ್ನೇ । ಯದ್ವೃತ್ತಯೋಗಾದನಿಘಾತಃ । ಶಂಸೇ । ಭಾವೇ ಘಞ್ । ಞಿತ್ಸ್ವರಃ । ನೃಣಾಂ ನೃ ಚೇತಿ ವಿಕಲ್ಪೇನ ದೀರ್ಘಾಭಾವಃ । ನಾಮನ್ಯತರಸ್ಯಾಮಿತಿ ವಿಭಕ್ತೇರುದಾತ್ತತ್ವಂ । ವಿಶ್ವೇತ್ಯಾದಿಷು ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥

ಪ್ರತಿಪದಾರ್ಥ

**ಯಃ**—ಯಾವ ಈ ಅಗ್ನಿಯು । **ಚಕ್ರಿಃ**—ಜಗತ್ಕರ್ತನಾಗಿದ್ದು । **ವಿಶ್ವಾ ಭುವನಾನಿ**—ಸಕಲ ಜಗತ್ತನ್ನೂ । **ಅಭಿ**—ವ್ಯಾಪಿಸಿ ಪ್ರವೇಶಿಸುತ್ತಾನೆ. । **ಚಕ್ರಿಃ**—ಸೃಷ್ಟಿಕರ್ತನಾದ ಅಗ್ನಿಯು । **ಸಾಸಹಿಃ**—ಪುರೋಡಾಶಾದಿಗಳನ್ನು ವಹಿಸುವ ಸಾಮರ್ಥ್ಯವುಳ್ಳವನಾಗಿ । **ಧ್ರುವಃ**—(ನಮ್ಮಿಂದ ಅರ್ಪಿತವಾದ) ಹವಿಸ್ಸನ್ನು । **ದೇವೇಷು**—ದೇವತೆಗಳಲ್ಲಿಗೆ । **ಆ(ನಯಂತಿ)**—ತೆಗೆದುಕೊಂಡುಹೋಗಿ ಸೇರಿಸುತ್ತಾನೆ । **ದೇವೇಷು**—ದೇವಪೂಜಕರಾದ ಸ್ತೋತೃಗಳಲ್ಲಿ । **ಆ ಯತತೇ**—ಎದುರುಗೊಂಡು ಹೋಗಿ ಸೇರುತ್ತಾನೆ । **ಸುವೀರ್ಯೇ**—ಶ್ರೇಷ್ಠವಾದ ಪರಾಕ್ರಮವನ್ನು ತೋರಿಸುವ ಯುದ್ಧದಲ್ಲಿ । **ಆ**—(ಸಹಾಯಕ್ಕೆ) ಬರುತ್ತಾನೆ. । **ಉತ**—ಮತ್ತು । **ನೃಣಾಂ**—ಯಜ್ಞಕರ್ತರಾದ ಮಾನವರ । **ಶಂಸೇ**—ಸ್ತೋತ್ರಕಾಲಗಳಲ್ಲಿ । **ಆ(ಗಚ್ಛತಿ)**—ಬಂದು ಸೇರುತ್ತಾನೆ.

ಭಾವಾರ್ಥ

ಜಗತ್ಕರ್ತನಾದ ಅಗ್ನಿಯು ಸಕಲ ಜಗತ್ತನ್ನೂ ವ್ಯಾಪಿಸಿ ಪ್ರವೇಶಿಸುತ್ತಾನೆ. ಮತ್ತು ಪುರೋಡಾಶಾದಿಗಳನ್ನು ವಹಿಸುವ ಸಾಮರ್ಥ್ಯವುಳ್ಳವನಾಗಿ ನಮ್ಮಿಂದ ಅರ್ಪಿತವಾದ ಹವಿಸ್ಸನ್ನು ದೇವತೆಗಳಲ್ಲಿಗೆ ತೆಗೆದುಕೊಂಡು ಹೋಗಿ ಸೇರಿಸುತ್ತಾನೆ. ಮತ್ತು ದೇವಪೂಜಕರಾದ ಸ್ತೋತೃಗಳಲ್ಲಿ ಎದುರುಗೊಂಡು ಹೋಗಿ ಸೇರುತ್ತಾನೆ. ಶ್ರೇಷ್ಠವಾದ ವೀರ್ಯವನ್ನು ಪ್ರಕಟಿಸುವ ಯುದ್ಧದಲ್ಲಿ ಸಹಾಯಕ್ಕೆ ಬರುತ್ತಾನೆ. ಮತ್ತು ಯಜ್ಞಕರ್ತರಾದ ಮಾನವರ ಸ್ತೋತ್ರ ಕಾಲಗಳಲ್ಲಿ ಬಂದು ಸೇರಿ ಸ್ತುತಿಗಳನ್ನು ಸ್ವೀಕರಿಸುತ್ತಾನೆ.

## English Translation

He who is the maker pervades all worlds ; he the enduring maker (of all) bears our offerings to the gods : he is present with the devout (worshippers) and amidst the heroism and the devotions of men.

ವಿಶೇಷವಿಷಯಗಳು

**ಚಕ್ರಿಃ ವಿಶ್ವಾ ಭುವನಾ ಅಭಿ—ಸರ್ವಸ್ಯ ಜಗತಃ ಕರ್ತಾ ವಿಶ್ವಾನಿ ಭುವನಾನಿ ಅಭಿವಿಶತಿ** | ಅಗ್ನಿಯು ಜಗತ್ತೆಲ್ಲವನ್ನೂ (ನಿರ್ಮಿಸಿ) ಸೃಷ್ಟಿಮಾಡಿ, ತಾನು ಸೃಷ್ಟಿಮಾಡಿದ ಪ್ರಪಂಚವನ್ನು ತನ್ನ ರೂಪಾಂತರದಿಂದ ಪ್ರವೇಶಿಸಿದವನು ಎಂದು ಅರ್ಥವನ್ನು ವಿವರಿಸಿ ಜಗತ್ತಿನ ಪ್ರವೇಶವಿಷಯದಲ್ಲಿ **ತತ್ಸೃಷ್ಟ್ವಾ | ತದೇವಾನು ಪ್ರಾವಿಶತ್** (ತೈ. ಉ. ೨-೬) ಎಂಬ ತೈತ್ತಿರೀಯೋಪನಿಷತ್ತಿನ ವಾಕ್ಯವನ್ನು ಉದಾಹರಿಸಿದೆ.

**ಚಕ್ರಿಃ ಸಾಸಹಿಃ-ಪುರೋಡಾಶಾದಿಹವಿರ್ಭಾರವಹನಶೀಲಃ** | ಜಗತ್ತಿನ ಸೃಷ್ಟಿಕರ್ತನಾಗಿರುವ ಅಗ್ನಿಯು ಪುರೋಡಾಶವೇ ಮೊದಲಾದ ಪ್ರಭೂತವಾದ ಹವಿಸ್ಸುಗಳನ್ನು ದೇವತೆಗಳಿಗಾಗಿ ಒಯ್ಯುವನಾಗಿರುವನು ಎಂದು ಅರ್ಥವನ್ನು ವರ್ಣಿಸಿದೆ.

**ದೇವೇಷು ಆಯತತೇ—ದೇವನಶೀಲೇಷು ಸ್ತೋತೃಷು ಆಭಿಮುಖ್ಯೇನ ಗಚ್ಛತಿ** | ಕಾಂತಿಯಿಂದ ಬೆಳಗುತ್ತಿರುವ ಸ್ತೋತ್ರಮಾಡುವ ಋತ್ವಿಜರಿಗೆ ಅಗ್ನಿಯು ತನ್ನ ಸ್ವರೂಪವು ಪ್ರತ್ಯಕ್ಷವಾಗುವಂತೆ ಮಾಡುವನು ಎಂದು ಋತ್ವಿಜರ ವಿಷಯದಲ್ಲಿರುವ ಅಗ್ನಿಯ ಅನುಗ್ರಹರೂಪವಾದ ದಯಾಯುಕ್ತವಾದ ಬುದ್ಧಿಯು ಇಲ್ಲಿ ಉಕ್ತವಾಗಿದೆ.

ಎರಡನೆಯ ಅರ್ಥದಲ್ಲಿ—**ವಿಶ್ವಾ ಚಕ್ರಿಃ ದೇವೇಷು ದುವಃ ಚಕ್ರಿಃ ದೇವೇಷು ಆಯತತೇ** | ಜಗತ್ತಿನ ಸೃಷ್ಟಿಕರ್ತನೂ, ದೇವತೆಗಳ ಸೇವೆಯನ್ನು ಮಾಡತಕ್ಕವನೂ ಆದ ಅಗ್ನಿಯು, ಶತ್ರುಗಳನ್ನು ಜಯಿಸುವ ಸ್ವಭಾವವುಳ್ಳವನೂ ಆಗಿ ದೇವತೆಗಳಿಗೆ ಪ್ರತ್ಯಕ್ಷವಾಗಿ ಇರುತ್ತಾನೆ ಎಂದೂ ವಿವರಿಸಿದೆ. ಮತ್ತು **ದೇವೇಷು** ಎಂಬ ಪದಕ್ಕೆ **ಯಜನೀಯದೇವೇಷು, ದೇವನಶೀಲೇಷು ಸ್ತೋತೃಷು** ಯಾಗಾರ್ಹರಾದವರು ಎಂದೂ, ಕಾಂತಿಯಿಂದ ಬೆಳಗುತ್ತಿರುವ ಸ್ತೋತ್ರಮಾಡುವವರು ಎಂದೂ ಎರಡು ವಿಧವಾದ ಅರ್ಥವನ್ನೂ ಹೇಳಿದೆ.

**ನೃಣಾಂ ಶಂಸೇ—ಯಜ್ಞಸ್ಯ ನೇತೃಣಾಂ ಶಸ್ತ್ರಿಣಾಂ ಶಂಸೇ | ಶಂಸನಂ ಶಂಸಃ ಶಸ್ತ್ರಂ** | ಯಜ್ಞವನ್ನು ವಿಧ್ಯುಕ್ತವಾದ ಕ್ರಮದಲ್ಲಿ ಆಚರಿಸಲು ತಕ್ಕ ಆನುಕೂಲ್ಯವನ್ನು ಒದಗಿಸುವವರು ನೇತೃಗಳೆಂದು ನೃಣಾಂ ಎಂಬ ಪದಕ್ಕೆ ಅರ್ಥವನ್ನು ವಿವರಿಸಿ, ಇವರು ಪಠಿಸುವ ಸ್ತೋತ್ರಗಳನ್ನು ಶ್ರವಣಮಾಡಿ ಅಗ್ನಿಯು ಯಜ್ಞಕ್ಕೆ ಆಗಮಿಸುವನು ಎಂದು ಹೇಳಿದೆ. **ನೃಣಾಂ** ಎಂಬ ಪದಕ್ಕೆ ಮನುಷ್ಯಾಣಾಂ-ಮನುಷ್ಯರ ಎಂದು ಅರ್ಥವನ್ನು ವಿವರಿಸಿ, **ಸುವೀರ್ಯೇ ಶೋಭನವೀರ್ಯೋಪೇತೆಯುದ್ಧೇ** ಸುವೀರ್ಯಪದವು, ಬಹಳ ಶಕ್ತಿಯುಳ್ಳವರಿಂದ ಕೂಡಿರುವ ಯುದ್ಧಬೋಧಕವೆಂದು ಅರ್ಥಮಾಡಿ, ಅಗ್ನಿಯು ಮನುಷ್ಯರು ಯುದ್ಧಮಾಡುವ ಸನ್ನಿವೇಶಗಳಲ್ಲಿ ಆಗಮಿಸುವನು ಎಂದು ವರ್ಣಿಸಿ, **ಅನೇನಾಗ್ನೇಃ ಸರ್ವವ್ಯಾಪಕತಾ ಪ್ರತಿಪಾದಿತಾ ಭವತಿ**—ಇದರಿಂದ ಅಂದರೆ, ಜಗತ್ಕರ್ತನಾಗಿ ಜಗತ್ತನ್ನು ಪ್ರವೇಶಿಸಿ ಯಾಗಾರ್ಹರಾದ ದೇವತೆಗಳಿಗೂ ಸೇವಕನಾಗಿ, ತನ್ನನ್ನು ಸ್ತುತಿಸುವ ಋತ್ವಿಜರಿಗೂ ಪ್ರತ್ಯಕ್ಷನಾಗಿ ತನ್ನನ್ನು ಸ್ತುತಿಮಾಡುವ ಇತರರಿಗೂ ತನ್ನ ಸ್ತೋತ್ರವನ್ನು ಪಠಿಸುವ ಕಾಲಗಳಲ್ಲಿ ಸನ್ನಿಹಿತನಾಗಿ, ವೀರರು ಯುದ್ಧಮಾಡುವ ಸನ್ನಿವೇಶಗಳಲ್ಲಿಯೂ ಸನ್ನಿಹಿತನಾಗಿರುವವನೆಂದು ಅಗ್ನಿಯ ಪ್ರಭಾವವು ಇಲ್ಲಿ ವರ್ಣಿತವಾಗಿರುವುದರಿಂದ ಅಗ್ನಿಯು ಸರ್ವವ್ಯಾಪಕನಾಗಿರುವನೆಂದು ಉಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

**ಚಕ್ರಿಃ**—ಡುಕೃಞ್ ಕರಣೇ ಧಾತು. **ಆದೃಗಮಹನಜನಃಕಿಕಿನೌ ಲಿಟ್ ಚ** (ಪಾ. ಸೂ. ೩-೨-೧೭೧) ಎಂಬುವರಿಂದ ಇದಕ್ಕೆ ಕಿನ್ ಪ್ರತ್ಯಯ. ಈ ಪ್ರತ್ಯಯಕ್ಕೆ ಲಿಡ್ವದ್ಭಾವವಿಧಾನಮಾಡಿರುವುದರಿಂದ ಧಾತುವಿಗೆ ದ್ವಿತ್ವ-

ಅಭ್ಯಾಸಕ್ಕೆ ಚಕಾರಾದೇಶ. ಪ್ರತ್ಯಯ ಕಿತ್ತಾದುದರಿಂದ **ಸಾರ್ವಧಾತುಕಾರ್ಧ**— (ಪಾ. ಸೂ. ೧-೭-೩-೮೪) ಎಂಬುದರಿಂದ ಧಾತುವಿನ ಇಕಾರಕ್ಕೆ ಗುಣಬರುವುದಿಲ್ಲ. ಯಣಾದೇಶ. ಚಕ್ರಿ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಶ್ವಾ, ಭುವನಾ**—ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿಬಹುಲಮ್** (ಪಾ. ಸೂ. ೬-೧-೭೦)ಎಂಬುದರಿಂದ ಶಿಗೆ ಲೋಪ.

**ಸಾಸಹಿಃ**—ಷಹ ಮರ್ಷಣೇ. ಧಾತು. ಇದಕ್ಕೆ ಯಙ್ ಬಂದಾಗ ಯಙಂತದ ಮೇಲೆ **ಸಹಿ ವಹಿ ಚಲಿ ಪೃಭ್ಯೋ ಯಙಂತೇಭ್ಯಃ ಕಿಕಿನೌ** (ಪಾ. ಮ. ೩-೨-೧೭೧-೪) ಎಂಬುದರಿಂದ ಕಿ ಪ್ರತ್ಯಯ. **ಯಸ್ಯಹಲಃ** ಎಂಬುದರಿಂದ ಯಙಿನ ಯಕಾರಕ್ಕೂ **ಅತೋಲೋಪಃ** ಎಂಬುದರಿಂದ ಅಕಾರಕ್ಕೂ ಲೋಪ. ಅಭ್ಯಾಸಕ್ಕೆ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯತತೇ**—ಯತೀ ಪ್ರಯತ್ನೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತೇತ್ತಾದ ಧಾತುವಾದುದರಿಂದ ಪರದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಶಂಸೇ**—ಶಂಸು ಸ್ತುತೌ ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ನೃಣಾಮ್**—ನೃ ಶಬ್ದ. ಷಷ್ಠೀ ಬಹುವಚನ ಪರವಾದಾಗ **ನೃಚ** (ಪಾ. ಸೂ. ೬-೪-೬) ಎಂಬುದರಿಂದ ದೀರ್ಘ ವಿಕಲ್ಪವಾದುದರಿಂದ ಇಲ್ಲಿ ದೀರ್ಘ ಬರುವುದಿಲ್ಲ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

———

ಸಂಹಿತಾಪಾಠಃ

ಮಾ ನೋ ಅಗ್ನೇಽಮತಯೇ ಮಾವೀರತಾಯೈ ರೀರಧಃ ।
ಮಾಗೋತಾಯೈ ಸಹಸಸ್ಪುತ್ರ ಮಾ ನಿದೇಽಪ ದ್ವೇಷಾಂಸ್ಯಾ ಕೃಧಿ ॥ ೫ ॥

ಪದಪಾಠಃ

ಮಾ । ನಃ । ಅಗ್ನೇ । ಅಮತಯೇ । ಮಾ । ಅವೀರತಾಯೈ । ರೀರಧಃ ।
ಮಾ । ಅಗೋತಾಯೈ । ಸಹಸಃ । ಪುತ್ರ । ಮಾ । ನಿದೇ । ಅಪ । ದ್ವೇಷಾಂಸಿ । ಆ । ಕೃಧಿ ॥ ೫ ॥

ಸಾಯಣಭಾಷ್ಯಂ

ಸಹಸಸ್ಪುತ್ರ ಬಲಸ್ಯ ಪುತ್ರ ಹೇ ಅಗ್ನೇ ತ್ವಂ ನೋಽಸ್ಮಾನ್ ಅಮತಯೇ ಶತ್ರುಭೂತಾಯ ದಾರಿದ್ರ್ಯಾಯ ಮಾ ರೀರಧಃ । ಸಂಸಿದ್ಧಾನ್ವಿಷಯಭೂತಾನ್ಮಾ ಕುರು । ತಥಾವೀರತಾಯಾ ಅಪುತ್ರತಾಯೈ ।

ಅವೀರಶಬ್ದೇನ ತದ್ವಾನ್ ಲಕ್ಷ್ಯತೇ | ವೀರಸ್ಯ ಭಾವೋ ವೀರತಾ | ನ ವೀರತಾ ಅವೀರತಾ | ತಸ್ಯೈ | ಅಸ್ಮಾನಪುತ್ರತಾಯಾ ವಿಷಯಭೂತಾನ್ಮಾ ಕುರು | ತಥಾ ತ್ವಮಸ್ಮಾನಗೋತಾಯೈ ಗವಾದಿಪಶುಸಂಪತ್ತ್ಯಭಾವಸ್ಯ ವಿಷಯಭೂತಾನ್ಮಾ ಕುರು | ಕಿಂಚಾಸ್ಮಾನ್ನಿದೇ ನಿಂದಾಯಾ ವಿಷಯಭೂತಾನ್ಮಾ ಕುರು | ಮಾ ವಿಧೇಹಿ | ತಥಾ ತ್ವಂ ದ್ವೇಷಾಂಸಿ ಕರ್ಮಾಪರಾಧನಿಮಿತ್ತಾನ್ ದ್ವೇಷಾಂಶ್ಚಾಪಾಕೃಧಿ | ಅಪಾಕುರು | ನಿವಾರಯ|| ಅವೀರತಾಯೈ | ವೀರಾ ಅಸ್ಯ ಸಂತೀತಿ ವೀರಃ | ಅರ್ಶಆದಿತ್ವಾದಚ್ | ತಸ್ಯ ಭಾವೋ ವೀರತಾ| ತಸ್ಯ ಭಾವಸ್ತ್ವತಲಾವಿತಿ ತಲ್| ನ ವೀರತಾ ಅವೀರತಾ| ನಞಃ ಸ್ವರೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತಿ ನಞುತ್ತರಸ್ಯಾದೇರುದಾತ್ತತಾ| ರೀರಧಃ| ರಾಧ ಸಾಧ ಸಂಸಿದ್ಧೌ | ಅಸ್ಮಾಣ್ಣ್ಯಂತಾಚ್ಛಾಂದಸೇ ಲುಙಿ ಣಿಶ್ರಿದ್ರುಸ್ರುಭ್ಯ ಇತಿ ಚ್ಲೇಶ್ಚಙಾದೇಶಃ | ಣೇರನಿಟೀತಿ ಣಿಲೋಪಃ | ಣೌ ಚಙ್ಯುಪಧಾಯಾ ಇತ್ಯುಪಧಾಹ್ರಸ್ವಃ | ಚಙೀತಿ ದ್ವಿರ್ವಚನಂ | ಸನ್ವಲ್ಲಘುನಿ ಚಙ್‌ಪರ ಇತಿ ಸನ್ವದ್ಭಾವಃ | ಸನ್ಯತ ಇತ್ಯಭ್ಯಾಸಸ್ಯೇತ್ವಂ | ತಸ್ಯ ದೀರ್ಘೋ ಲಘೋರಿತಿ ದೀರ್ಘಃ | ನ ಮಾಙ್‌ಯೋಗ ಇತ್ಯಡಭಾವಃ | ನಿಘಾತಃ | ಅಗೋತಾಯೈ | ಗೋಶಬ್ದೇನ ಗೋಮಾನ್ ಲಕ್ಷ್ಯತೇ | ನ ಗೌರಗೌಃ | ಅಗೋರ್ಭಾವೋಽಗೋತಾ | ತಸ್ಯ ಭಾವ ಇತಿ ತಲ್ | ಲಿತ್ಸ್ವರಃ | ಸಹಸಸ್ಪುತ್ರ | ಸುಬಾಮಂತ್ರಿತೇ ಪರಾಂಗವತ್ಸ್ವರ ಇತಿ ಪರಾಂಗವದ್ಭಾವಾತ್ಸಹಸಸ್ಪುತ್ರ ಇತ್ಯೇತಯೋಃ ಸರ್ವಾನುದಾತ್ತತ್ವಂ | ನಿದೇ | ಣಿದಿ ಕುತ್ಸಾಯಾಂ | ಅಸ್ಮಾತ್ಸಂಪದಾದಿತ್ವಾದ್ಭಾವೇ ಕ್ವಿಪ್ | ಅನಿತ್ಯಮಾಗಮಶಾಸನಮಿತಿ ನುಮಭಾವಃ | ಸಾವೇಕಾಚ ಇತಿ ವಿಭಕ್ತೇರುದಾತ್ತತಾ ||

ಪ್ರತಿಪದಾರ್ಥ

**ಸಹಸಸ್ಪುತ್ರ**—ಶಕ್ತಿಪುತ್ರನಾದ | **ಅಗ್ನೇ**—ಎಲೈ ಅಗ್ನಿಯೇ | **ನಃ**—ನಮ್ಮನ್ನು | **ಅಮತಯೇ**—ಶತ್ರುಭೂತವಾದ ದಾರಿದ್ರ್ಯಕ್ಕೆ | **ಮಾ ರೀರಧಃ**—ಪಾತ್ರವಾಗುವಂತೆ ಮಾಡಬೇಡ | **ಅವೀರತಾಯೈ**—ವೀರಪುತ್ರರಹಿತವಾದ ಸ್ಥಿತಿಗೂ | **ಮಾ**—ಪಾತ್ರವಾಗುವಂತೆ ಮಾಡಬೇಡ | **ಅಗೋತಾಯೈ**—ಗವಾದಿಪಶುಹೀನವಾದ ದೆಸೆಗೂ | **ಮಾ**—ಪಾತ್ರವಾಗುವಂತೆ ಮಾಡಬೇಡ | **ನಿದೇ**—ದೂಷಣೆಗೆ ಭಾಜನರನ್ನಾಗಿ | **ಮಾ**—ಮಾಡಬೇಡ | **ದ್ವೇಷಾಂಸಿ**—ಪರಸ್ಪರವಾದ ದ್ವೇಷಾಸೂಯೆಗಳನ್ನು | **ಅಪಾಕೃಧಿ**—ದೂರಮಾಡಿ ನಾಶವಾಗುವಂತೆ ಮಾಡು ||

ಭಾವಾರ್ಥ

ಶಕ್ತಿಪುತ್ರನಾದ ಎಲೈ ಅಗ್ನಿಯೇ, ಶತ್ರುಭೂತವಾದ ದಾರಿದ್ರ್ಯಕ್ಕೂ ವೀರಪುತ್ರರಹಿತವಾದ ಸ್ಥಿತಿಗೂ, ಗವಾದಿಪಶುಹೀನವಾದ ದೆಸೆಗೂ, ಮತ್ತು ಇತರರ ನಿಂದೆಗೂ ನಮ್ಮನ್ನು ಪಾತ್ರರಾಗುವಂತೆ ಮಾಡಬೇಡ. ನಮ್ಮ ನಮ್ಮ ಪರಸ್ಪರವಾದ ದ್ವೇಷಾಸೂಯೆಗಳು ದೂರವಾಗಿ ನಾಶವಾಗುವಂತೆ ಮಾಡು.

## English Translation

Consign us not, AGNI, to malignity ; (doom) us not to the absence of prosperity ; nor, son of strength, to the want of cattle, nor to reproach : drive away (all) animosities.

ವಿಶೇಷವಿಷಯಗಳು

ಅಗ್ನಿಯನ್ನು, ಸಹಸಸ್ಪುತ್ರ—ಅರಣಿಗಳಿಂದ ಬಲವಾಗಿ ಮಥನಮಾಡುವಾಗ, ಉತ್ಪನ್ನನಾಗುವಕಾರಣ ಬಲಸ್ಯ ಪುತ್ರನೆಂದು ಸಂಬೋಧಿಸಿ, ನಮ್ಮ ವಿಷಯದಲ್ಲಿ ಶತ್ರುವಿನ ಕಾರ್ಯವನ್ನು ಆಚರಿಸುವ ದಾರಿದ್ರ್ಯವನ್ನು ನಾಶಮಾಡುವಂತೆ ಪ್ರಾರ್ಥಿಸಿದೆ. ಇಲ್ಲಿ ಅಮತಯ ಎಂಬ ಪದಕ್ಕೆ ಶತ್ರುವೆಂಬ ಅರ್ಥವನ್ನು ವಿವರಿಸಿದೆ.

**ಅವೀರತಾಯೈ—ವೀರಶಬ್ದೇನ ತದ್ವಾನ್ ಲಕ್ಷ್ಯತೇ।** ವೀರಸ್ಯ ಭಾವಃ ವೀರತಾ ನ ವೀರತಾ ಅವೀರತಾ **ಅಸ್ಮಾಕ್ ಅಪುತ್ರತಾಯಾ ವಿಷಯಭೂತಾರ್ ಮಾ ಕುರು।** ವೀರ್ಯಶಬ್ದದಿಂದ ವೀರ್ಯವುಳ್ಳವನು ಎಂದೂ, ವೀರನ ಧರ್ಮವು ವೀರ್ಯವೆಂದೂ, ವೀರ್ಯವಿಲ್ಲದವನು ಅವೀರನೆಂದೂ ಅರ್ಥವನ್ನು ವರ್ಣಿಸಿ, ವೀರ್ಯದಿಂದ ಉತ್ಪನ್ನನಾಗುವ ಪುತ್ರನನ್ನು ಹೊಂದಿ ಇರುವವನು ವೀರಶಬ್ದವಾಚ್ಯನೆಂದೂ, ಪುತ್ರವಂತನಲ್ಲದಿರುವವನು ಅವೀರನೆಂದೂ, ವಿವರಿಸಿ, ಅಗ್ನಿಯು ಯಾಜ್ಞಿಕರಾದ ನಮಗೆ ಅಪುತ್ರತೆಯನ್ನು ಉಂಟುಮಾಡದಿರಲಿ ಎಂದು ಪ್ರಾರ್ಥಿಸಿದೆ.

**ನಿದೇ ಮಾ ಕುರು—ನಿಂದಾಯಾ ವಿಷಯಭೂತಾನ್ ಮಾ ವಿಧೇಹಿ** ಯಜ್ಞವನ್ನು ಆಚರಿಸುವ ಯಜಮಾನರಾದ ನಮಗೆ ಯಾವ ವಿಧವಾದ ನಿಂದೆಯೂ ಉಂಟಾಗದಿರುವಂತೆ ಅಗ್ನಿಯು ಅನುಗ್ರಹವನ್ನು ಮಾಡಲಿ ಎಂದು ಪ್ರಾರ್ಥಿಸಿದೆ.

**ದ್ವೇಷಾಂಸಿ ಅಪ ಆ ಕೃಧಿ—ಕರ್ಮಾಪರಾಧನಿಮಿತ್ತಾನ್ ದ್ವೇಷಾಂಶ್ಚ ನಿವಾರಯ।** ಯಜ್ಞದಲ್ಲಿ ಉಂಟಾಗಬಹುದಾದ ಅವಶ್ಯಕರ್ತವ್ಯಗಳಲ್ಲಿ ಸಂಭವಿಸುವ ನ್ಯೂನತೆಗಳೇ ಮೊದಲಾದ ಅಪರಾಧಗಳು ನಮಗೆ ಉಂಟಾಗದಿರಲಿ ಎಂದೂ, ಯಜ್ಞಕರ್ಮಗಳ ಆಚರಣೆಯ ವಿಷಯದಲ್ಲಿ ಉಂಟಾಗುವ ಅಲಸಿಕೆ (ಸೋಮಾರಿತನವೇ) ಮೊದಲಾದ ಅಪರಾಧಗಳು ನಮಗೆ ಸಂಭವಿಸದಿರುವಂತೆ ಅಗ್ನಿಯು ಅನುಗ್ರಹಿಸಲಿ ಎಂದೂ ಅಗ್ನಿಯನ್ನು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಅವೀರತಾಯೈ**—ವೀರಾಃ ಅಸ್ಯ ಸಂತಿ ಇತಿ ವೀರಃ. **ಅರ್ಶ ಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥದಲ್ಲಿ ಅಚ್‌ಪ್ರತ್ಯಯ. ವೀರಸ್ಯ ಭಾವಃ ವೀರತಾ. **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ಭಾವಾರ್ಥದಲ್ಲಿ ತಲ್ ಪ್ರತ್ಯಯ. **ತಲಂತಂಸ್ತ್ರಿಯಾಂ** ಎಂಬ ವಚನದಿಂದ ಸ್ತ್ರೀತ್ವದಲ್ಲಿ ಟಾಪ್. ನ ವೀರತಾ ಅವೀರತಾ ತಸ್ಯೈ. ನಞ್‌ತತ್ಪುರುಷದಲ್ಲಿ ನಞ್‌ಸ್ವರ ಪ್ರಾಪ್ತವಾದರೆ ಪರಾದಿಶ್ಛಂದಸಿ **ಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ರೀರಧಃ**—**ರಾಧ** ಸಾಧ ಸಂಸಿದ್ಧೌ. **ಹೇತುಮತಿಚ** ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವಾಗ ಣಿಚ್. ಣಿಜಂತದಮೇಲೆ ಛಾಂದಸವಾಗಿ ಲೋಡರ್ಥದಲ್ಲಿ ಲುಙ್. **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಣೌಚಙ್ಯುಪಧಾಯಾ ಹ್ರಸ್ವಃ** (ಪಾ. ಸೂ. ೭-೪-೧) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. **ಸನ್ವಲ್ಲಘುನಿಚಙ್‌ಪರೇನಗ್ಲೋಪೇ** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವವಿರುವುದರಿಂದ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಧಾತುವಿನ ಅಭ್ಯಾಸಕ್ಕೆ ಇತ್ವ. ಅದಕ್ಕೆ **ದೀರ್ಘೋಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ದೀರ್ಘ. ಮಾಙ್ ಸಂಬಂಧವಿರುವುದರಿಂದ **ನ ಮಾಙ್ ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. ತಿಙಂತನಿಘಾತಸ್ವರ ಬರುತ್ತದೆ.

**ಅಗೋತಾಯೈ**—ಇಲ್ಲಿ ಗೋಶಬ್ದದಿಂದ ಗೋವುಳ್ಳವನು ಎಂದು ಲಕ್ಷಣಾವೃತ್ತಿಯಿಂದ ಬೋಧಿತವಾಗುತ್ತದೆ. ನ ಗೌಃ ಅಗೌಃ ಅಗೋರ್ಭಾವಃ ಅಗೋತಾ **ತಸ್ಯ ಭಾವಸ್ತ್ವತಲೌ** ಎಂಬುದರಿಂದ ಭಾವಾರ್ಥದಲ್ಲಿ ತಲ್ ಪ್ರತ್ಯಯ. ಇದು ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಸಹಸಸ್ಪುತ್ರ—ಸುಬಾಮಂತ್ರಿತೇ ಪರಾಂಗವತ್ಸ್ವರೇ ( ಪಾ. ಸೂ. ೨-೧-೨ ) ಎಂಬುದರಿಂದ ಸಹಸಃ ಎಂಬ ಷಷ್ಠ್ಯಂತಕ್ಕೆ ಪರಾಂಗತ್ವವನ್ನು ಹೇಳಿರುವುದರಿಂದ ಸಮುದಾಯಕ್ಕೆ ಆಮಂತ್ರಿತನಿಘಾತಸ್ವರ ಬರುತ್ತದೆ.

ನಿದೇ—ಣಿದಿ ಕುತ್ಸಾಯಾಂ ಧಾತು. ಸಂಪದಾದಿಗಣದಲ್ಲಿ ಪಠಿತವಾದುದರಿಂದ ಭಾವಾರ್ಥದಲ್ಲಿ ಕ್ವಿಪ್. ಆಗಮಶಾಸ್ತ್ರಮನಿತ್ಯಂ ಎಂಬ ಪರಿಭಾಷೆಯಿಂದ ಧಾತುವು ಇದಿತ್ತಾದರೂ ನುಮಾಗಮ ಬರುವುದಿಲ್ಲ. ಚತುರ್ಥೀ ಏಕವಚನಾಂತರೂಪ. ಸಾವೇಕಾಚಸ್ತೃತೀಯಾದಿಃ (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

———

ಸಂಹಿತಾಪಾಠಃ

ಶಗ್ಧಿ ವಾಜಸ್ಯ ಸುಭಗ ಪ್ರಜಾವತೋಽಗ್ನೇ ಬೃಹತೋ ಅಧ್ವರೇ ।
ಸಂ ರಾಯಾ ಭೂಯಸಾ ಸೃಜ ಮಯೋಭುನಾ ತುವಿದ್ಯುಮ್ನ ಯಶಸ್ವತಾ ॥ ೬ ॥

ಪದಪಾಠಃ

ಶಗ್ಧಿ । ವಾಜಸ್ಯ । ಸುಽಭಗ । ಪ್ರಜಾಽವತಃ । ಅಗ್ನೇ । ಬೃಹತಃ । ಅಧ್ವರೇ ।
ಸಂ । ರಾಯಾ । ಭೂಯಸಾ । ಸೃಜ । ಮಯಃಽಭುನಾ । ತುವಿಽದ್ಯುಮ್ನ । ಯಶಸ್ವತಾ ॥ ೬ ॥

ಸಾಯಣಭಾಷ್ಯಂ

ಸುಭಗ ಶೋಭನಧನೋಪೇತ ಹೇ ಅಗ್ನೇ ತ್ವಮಧ್ವರೇಽಸ್ಮಾಭಿಃ ಕ್ರಿಯಮಾಣೇಽಸ್ಮಿನ್ನಗ್ನಿಷ್ಟೋಮಾದಿಕರ್ಮಣಿ ಬೃಹತೋ ಮಹತಃ ಪ್ರಭೂತಸ್ಯ ಪ್ರಜಾವತೋಽಪತ್ಯೋಪೇತಸ್ಯ ವಾಜಸ್ಯಾನ್ನಸ್ಯ ಶಗ್ಧಿ । ಈಶಿಷೇ । ತಾದೃಶಮನ್ನಮಸ್ಮಿನ್ನಧ್ವರೇಽಸ್ಮಭ್ಯಂ ದೇಹಿ । ಕಿಂಚ ತುವಿದ್ಯುಮ್ನ ಬಹುಧನಯುಕ್ತ ಹೇ ಅಗ್ನೇ ಮಯೋಭುನಾ । ಮಯ ಇತಿ ಸುಖನಾಮ ಶೇವೃಧಂ ಮಯ ಇತಿ ತನ್ನಾಮಸು ಪಾಠಾತ್ । ತದ್ಭಾವಾದ್ಯುಪಯೋಗಹೇತುತಯಾ ಸುಖಸ್ಯ ಭಾವಕೇನಾತ ಏವ ಯಶಸ್ವತಾ ಕೀರ್ತಿಮತಾ ಭೂಯಸಾತಿಪ್ರಭೂತೇನ ರಾಯ್ಯೈವಂವಿಧೇನ ಧನೇನಾಸ್ಮಾನ್ ಸಂಸೃಜ । ಸಂಯೋಜಯ ॥ ಶಗ್ಧಿ । ಶಕ್ಲೃ ಶಕ್ತಾವಿತ್ಯಸ್ಯ ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಹುಝಲ್ಭ್ಯೋ ಹೇರ್ಧಿರಿತಿ ಧಿರಾದೇಶಃ । ಹೇರಪಿತ್ತ್ವಾದುದಾತ್ತತಾ । ರಾಯಾ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಭೂಯಸಾ । ಬಹುಶಬ್ದಾತ್ ದ್ವಿವಚನವಿಭಜ್ಯೋಪಪದ ಇತೀಯಸುನ್ । ಬಹೋರ್ಲೋಪೋ ಭೂ ಚ ಬಹೋರಿತೀಯಸುನಃ ಸರ್ವಸ್ಯ ಲೋಪೇ ಪ್ರಾಪ್ತೆ ಆದೇಃ ಪರಸ್ಯ । ಪಾ. ೧-೧-೫೪ । ಇತಿ ಪ್ರತ್ಯಯಸ್ಯಾದೇರ್ಲೋಪೋ ಬಹೋರ್ಭೂರಾದೇಶಶ್ಚ । ನಿತ್ಸ್ವರಃ । ಸೃಜ । ಸೃಜ ವಿಸರ್ಗೇ । ತುದಾದಿಃ । ಲೋಟಿ ರೂಪಂ । ನಿಘಾತಃ । ಮಯೋಭುನಾ । ಭೂಸತ್ತಾಯಾಮಿತ್ಯಸ್ಮಾದೌಣಾದಿಕೋ ಡುಪ್ರತ್ಯಯಃ । ತುವಿದ್ಯುಮ್ನ । ಪಾದಾದಿತ್ವಾದನಿಘಾತಃ ॥

ಪ್ರತಿಪದಾರ್ಥ

ಸುಭಗ—ಶ್ರೇಷ್ಠವಾದ ಧನಯುಕ್ತನಾದ । ಅಗ್ನೇ—ಅಗ್ನಿಯೇ । ಅಧ್ವರೇ—ಅಗ್ನಿಷ್ಟೋಮರೂಪವಾದ ಈ ಕರ್ಮದಲ್ಲಿ । ಬೃಹತಃ—ಪ್ರಭೂತವಾದುದೂ, । ಪ್ರಜಾವತಃ—ಪುತ್ರಸಂಪತ್ತಿನಿಂದ ಕೂಡಿದುದೂ ಆದ ।

**ವಾಜಸ್ಯ**—ಅನ್ನಕ್ಕೆ । **ಶಗ್ಧಿ**—ಪ್ರಭುವಾಗಿದ್ದೀಯೆ. । **ತುವಿದ್ಯುಮ್ನ**—ಪ್ರಭೂತವಾದ ಧನಕ್ಕೆ ಈಶನಾದ ಅಗ್ನಿಯೇ **ಮಯೋಭುನಾ**—ಸುಖಹೇತುವಾದುದೂ, । **ಯಶಸ್ವತಾ**—ಯಶಸ್ಸಿನಿಂದ ಕೂಡಿದುದೂ, । **ಭೂಯಸಾ**—ಅತ್ಯಧಿಕವಾದುದೂ ಆದ । **ರಾಯಾ**—ಧನದೊಡನೆ । **ಸಂ ಸೃಜ**—(ನಮ್ಮನ್ನು) ಸೇರಿಸು.

ಭಾವಾರ್ಥ

ಶ್ರೇಷ್ಠವಾದುದೂ ಪ್ರಭೂತವಾದುದೂ ಆದ ಧನದಿಂದ ಕೂಡಿದ ಎಲೈ ಅಗ್ನಿಯೇ, ಅಗ್ನಿಷ್ಟೋಮರೂಪವಾದ ಈ ಕರ್ಮದಲ್ಲಿ ಅತ್ಯಧಿಕವಾದುದೂ, ಪುತ್ರಾದಿಸಂಪತ್ತಿನಿಂದ ಕೂಡಿದುದೂ ಆದ ಅನ್ನಕ್ಕೆ ನೀನು ಪ್ರಭುವಾಗಿದ್ದೀಯೆ. ಆದುದರಿಂದ ಸುಖಹೇತುವಾದುದೂ, ಯಶಸ್ಸಿನಿಂದ ಕೂಡಿದುದೂ, ಅತ್ಯಧಿಕವಾದುದೂ ಆದ ಐಶ್ವರ್ಯದೊಡನೆ ನಮ್ಮನ್ನು ಸೇರಿಸಿ ನಮ್ಮನ್ನು ಸಂಪದ್ಯುಕ್ತರಾಗುವಂತೆ ಮಾಡು.

English Translation

Auspicious AGNI, bestow (upon us) at the rite, food (the source of) happiness and renown.

ವಿಶೇಷವಿಷಯಗಳು

**ಅಧ್ವರೇ ವಾಜಸ್ಯ ಶಗ್ಧಿ—ಅಸ್ಮಾಭಿಃ ಕ್ರಿಯಮಾಣೇ ಅಗ್ನಿಷ್ಟೋಮಾದಿಕರ್ಮಣಿ ಅನ್ನಸ್ಯ ಈಶಿಷೇ**। ಇಲ್ಲಿ ಅಗ್ನಿಯನ್ನು ಸುಭಗ ಶಬ್ದದಿಂದ ಸಂಬೋಧಿಸಿ ಅಗ್ನಿಯು ಶೋಭನಧನೋಪೇತ-ಉತ್ತಮವಾದಧನವಂತನೆಂದು ಅರ್ಥವನ್ನು ವಿವರಿಸಿದೆ. ಯಾಗಮಾಡುವವರು ಆಚರಿಸುವ ಅಗ್ನಿಷ್ಟೋಮವೇ ಮೊದಲಾದ ಕರ್ಮಗಳಲ್ಲಿ ಉತ್ತಮವಾದ ಧನವುಳ್ಳ ಅಗ್ನಿಯು ಆಪ್ರಕಾರವಾಗಿರುವ ಅನ್ನವನ್ನು ಅನುಗ್ರಹಿಸಲಿ ಎಂದು ಅರ್ಥವನ್ನು ವರ್ಣಿಸಿದೆ. ಅಗ್ನಿಯು ಅನುಗ್ರಹಿಸುವ ಅನ್ನವು **ಬೃಹತಃ—ಮಹತಃ** ಪ್ರಭೂತವಾಗಿರುವ ಮಾಹಾತ್ಮ್ಯದಿಂದ ಯುಕ್ತವಾಗಿರುವುದೂ ಎಂದೂ, **ಪ್ರಜಾವತಃ ಅಪತ್ಯೋಪೇತಸ್ಯ**—ಪುತ್ರಪೌತ್ರಾದಿಸಂತತಿಯ ಅಭಿವೃದ್ಧಿಯನ್ನು ಉಂಟುಮಾಡುವುದೆಂದೂ ವಿವರಿಸಿದೆ.

**ಮಯೋಭುನಾ ಭೂಯಸಾ ರಾಯಾ ಸಂಸೃಜ—ಮಯ ಇತಿ ಸುಖನಾಮ ತದ್ದಾನಾದ್ಯುಪಯೋಗಹೇತುತಯಾ ಸುಖಸ್ಯ ಭಾವಕೇನ ಅತಿಪ್ರಭೂತೇನ ಏವಂ ವಿಧೇನ ಧನೇನಾಸ್ಮಾನ್ ಸಂಯೋಜಯ** । ಇಲ್ಲಿ ಬಹುಧನಯುಕ್ತ, ಬಹಳ ಧನವಂತನೆಂದು ಅರ್ಥವನ್ನು ಬೋಧಿಸುವ **ತುವಿದ್ಯುಮ್ನ**ಎಂಬ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ. **ಮಯ** ಶಬ್ದವು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಧನವು ದಾನವೇ ಮೊದಲಾದ ಉಪಯೋಗಗಳಿಂದ ಸುಖಜನಕವಾಗಿರುವ ಕಾರಣ **ಮಯೋಭೂ** ಎಂಬ ಪದದಿಂದ ವ್ಯಪದಿಷ್ಟವಾಗಿದೆ. ಮತ್ತು ದಾನಾದಿಗಳಿಂದ ಕೀರ್ತಿಸಂಪಾದಕವಾಗಿರುವ ಕಾರಣ ಯಶಸ್ವಿಯೂ ಆಗಿರುವುದೆಂದು **ಯಶಸ್ವತಾ** ಎಂಬ ಪದಕ್ಕೆ ಅರ್ಥವನ್ನೂ ಹೇಳಿದೆ. ಸುಖಜನಕವಾದುದೂ, ಕೀರ್ತಿಸಂಪಾದಕವಾದುದೂ, ಪ್ರಭೂತವಾದುದೂ ಆದ ಧನವನ್ನು ಬಹಳ ಧನವಂತನಾದ ಅಗ್ನಿಯು ನಮಗೆ ದೊರಕಿಸಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಶಗ್ಧಿ**—ಶಕ್ಲೃ ಶಕ್ತೌ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** ಎಂಬುದರಿಂದ ಅದಕ್ಕೆ ಹಿ ಆದೇಶ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಝಲಂತದ ಪರದಲ್ಲಿ ಹಿ ಬಂದುದರಿಂದ **ಹುಝಲ್ಭ್ಯೋ ಹೇರ್ಧಿಃ** (೬-೪-೧೦೧) ಎಂಬುದರಿಂದ ಅದಕ್ಕೆ ಧಿಆದೇಶ. **ಝಲಾಂ ಜಶ್**

**ಝುಳಿ** ಎಂಬುದರಿಂದ ಧಾತುಕಕಾರಕ್ಕೆ ಗಕಾರದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಒಗೆ ಅಪಿತ್ವವಿಧಾನಮಾಡಿರುವುದರಿಂದ ಉದಾತ್ತಸ್ವರ ಬರುವುದರಿಂದ ಅಂತೋದಾತ್ತವಾಗುತ್ತದೆ.

**ಬೃಹತೇ**—**ಬೃಹನ್ಮಹತೋರುಪಸಂಖ್ಯಾನಮ್** ಎಂಬ ವಚನದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಾಯೋ**—ರೈ ಶಬ್ದ. ಚತುರ್ಥೀ ಏಕವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭೂಯಸಾ**—ಬಹುಶಬ್ದ. ಅತಿಶಯಾರ್ಥ ತೋರುವಾಗ **ದ್ವಿವಚನವಿಭಜ್ಯೋಪಪದೇ ತರಬೀಯಸುನೌ** (ಪಾ. ಸೂ. ೫-೩-೫೭) ಎಂಬುದರಿಂದ ಈಯಸುನ್ ಪ್ರತ್ಯಯ. **ಬಹೋರ್ಲೋಪೋ ಭೂಚಬಹೋಃ** (ಪಾ. ಸೂ. ೬-೪-೧೫೮) ಬಹು ಎಂಬುದರ ಪರಕ್ಕೆ ಲೋಪ, ಬಹು ಎಂಬುದಕ್ಕೆ ಭೂ ಆದೇಶ, ಎಂಬುದರಿಂದ ಪರದ ಈಯಸುನಿಗೆ ಸರ್ವಲೋಪಪ್ರಾಪ್ತವಾದರೆ **ಆದೇಃಪರಸ್ಯ** (ಪಾ. ಸೂ. ೧-೧-೫೪) ಎಂಬುದರಿಂದ ಈಯಸುನಿನ ಆದಿಯ ಈಕಾರಕ್ಕೆ ಲೋಪ. ಬಹು ಎಂಬುದಕ್ಕೆ ಭೂಆದೇಶ. ಭೂಯಸ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸೃಜ**—ಸೃಜ ವಿಸರ್ಗೇ. ಧಾತು. ತುದಾದಿ ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಶ ವಿಕರಣಕ್ಕೆ ಙಿತ್ವಾತಿದೇಶವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮಯೋಭುನಾ**—ಭೂ ಸತ್ತಾಯಾಂ ಧಾತು. ಇದಕ್ಕೆ ಔಣಾದಿಕವಾದ ಡು ಪ್ರತ್ಯಯ. ಡಿತ್ತಾದುದರಿಂದ ಟಿಗೆ (ಊ) ಲೋಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಶುವಿಮ್ಯುವ್ನ**—ಸಂಬುಧ್ಯಂತರೂಪ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

---

## ಹದಿನೇಳನೆಯ ಸೂಕ್ತವು

ಸಮಿಧ್ಯಮಾನ ಇತಿ ಪಂಚರ್ಚಂ ಪಂಚಮಂ ಸೂಕ್ತಮಾಗ್ನೇಯಂ ತ್ರೈಷ್ಟುಭಂ ವೈಶ್ವಾಮಿತ್ರಸ್ಯ ಕತಸ್ಯಾರ್ಷಂ | ತಥುಕ್ತಂ | ಸಮಿಧ್ಯಮಾನಃ ಪಂಚ ಕತೋ ವೈಶ್ವಾಮಿತ್ರಸ್ತ್ರೈತಿ.|| ಆ ಹೋತೇತ್ಯಾದಿಸೂಕ್ತದಶಕಸ್ಯ ವಿನಿಯೋಗ ಉಕ್ತಃ ಪ್ರಾತರನುವಾಕಾಶ್ವಿನಶಸ್ತ್ರಯೋರಿತಿ | ತತ್ರೇದಂ ಚತುರ್ಥಂ | ವಾಜಪೇಯೇ ಬಾರ್ಹಸ್ಪತ್ಯೇ ಚರಾವಾಗ್ನಿಂ ಸುದೀತಿಮಿತಿ ಸ್ವಿಷ್ಟಕೃತೋ ಯಾಜ್ಯಾ | ವಾಜಪೇಯೇನೇತ್ಯಾದಿಖಂಡೇ ಸೂತ್ರಿತಂ | ಅಗ್ನಿಂ ಸುದೀತಿಂ ಸುದೃಶಂ ಗೃಣಂತ ಇತಿ ಸಂಯಾಜ್ಯೇ | ಆ ೯ - ೯ | ಇತಿ||

**ಅನುವಾದವು**—**ಸಮಿಧ್ಯಮಾನಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರವಂಶಸ್ಥನಾದ ಕತಃ ಎಂಬುವನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಸಮಿಧ್ಯಮಾನಃ ಪಂಚ ಕತೋ ವೈಶ್ವಾಮಿತ್ರಸ್ತ್ರೈತಿ** ಎಂದು ಹೇಳಿರುವುದು. ಹಿಂದೆ (೧೫ನೆಯ ಸೂಕ್ತದಲ್ಲಿ) **ಆ ಹೋತಾ** ಎಂದು ಮೊದಲಾಗುವ ಸೂಕ್ತದಿಂದ ಹತ್ತು

ಸೂಕ್ತಗಳಿಗೆ ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಗಳಲ್ಲಿ ವಿನಿಯೋಗವಿರುವುದೆಂದು ಹಿಂದೆಯೇ ಹೇಳಿರುವುದಷ್ಟೆ. ಆ ಹತ್ತು ಸೂಕ್ತಗಳಲ್ಲಿ ಇದು ನಾಲ್ಕನೆಯದು. ವಾಜಪೇಯಯಾಗದಲ್ಲಿ ಬಾರ್ಹಸ್ಪತ್ಯಚರುಹೋಮ ಮಾಡುವಾಗ ಈ ಸೂಕ್ತದ ನಾಲ್ಕನೆಯ ಋಕ್ಕಾದ **ಅಗ್ನಿಂ ಸುದೀತಿಂ ಸುದೃಶಂ** ಎಂಬ ಋಕ್ಕನ್ನು ಸ್ವಿಷ್ಟಕೃದ್ಧೋಮದಲ್ಲಿ ಯಾಜ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನಿಂ ಸುದೀತಿಂ ಸುದೃಶಂ ಗೃಣಂತ ಇತಿ ಸಂಯಾಜ್ಯೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೯–೯)

## ಸೂಕ್ತ—೧೭

ಮಂಡಲ—೩ ‖ ಅನುವಾಕ—೨ ‖ ಸೂಕ್ತ—೧೭ ‖

ಅಷ್ಟಕ—೩ ‖ ಅಧ್ಯಾಯ—೧ ‖ ವರ್ಗ—೧೭ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ–೫

ಋಷಿಃ—ಕತೋ ವೈಶ್ವಾಮಿತ್ರಃ‖

ದೇವತಾ—ಅಗ್ನಿಃ ‖

ಛಂದಃ— ತ್ರಿಷ್ಟುಪ್‖

ಸಂಹಿತಾಪಾಠಃ

ಸಮಿಧ್ಯಮಾನಃ ಪ್ರಥಮಾನು ಧರ್ಮಾ ಸಮಕ್ತುಭಿರಜ್ಯತೇ ವಿಶ್ವವಾರಃ ।
ಶೋಚಿಷ್ಕೇಶೋ ಘೃತನಿರ್ಣಿಕ್ಪಾವಕಃ ಸುಯಜ್ಞೋ ಅಗ್ನಿರ್ಯಜಥಾಯ ದೇವಾನ್

ಪದಪಾಠಃ

ಸಂಽಇಧ್ಯಮಾನಃ । ಪ್ರಥಮಾ । ಅನು । ಧರ್ಮಾ । ಸಂ । ಅಕ್ತುಽಭಿಃ । ಅಜ್ಯತೇ । ವಿಶ್ವಽವಾರಃ ।
ಶೋಚಿಃಽಕೇಶಃ । ಘೃತಽನಿರ್ನಿಕ್ । ಪಾವಕಃ । ಸುಽಯಜ್ಞಃ । ಅಗ್ನಿಃ । ಯಜಥಾಯ । ದೇವಾನ್ ‖೧‖

ಸಾಯಣಭಾಷ್ಯಂ

ಕತಃ ಸ್ತೌತಿ । ಧರ್ಮಾ । ಧಾರಣಾದ್ಧರ್ಮಾ । ಅಗ್ನೇರ್ಯಜ್ಞನಿರ್ವಾಹಕತಯಾ ತದ್ಧಾರಕತ್ವಾದ್ಧರ್ಮಾಗ್ನಿಃ । ತಥಾ ಚ ಮಂತ್ರಃ । ಧರ್ಮಾಣಮಗ್ನಿಂ ವಿದಥಸ್ಯ ಸಾಧನಂ । ಋಗ್ವೇ. ೧೦–೯೨–೨ । ಇತಿ । ತಾದೃಶೋಽಗ್ನಿಃ ಪ್ರಥಮಾ ಪ್ರಥಮಂ ಯಜ್ಞೋಪಕ್ರಮೇ ಅನು ಅಗ್ನ್ಯಾಯತನೇಷ್ವನುಕ್ರಮೇಣ ಸಮಿಧ್ಯಮಾನಃ ಸಮ್ಯಕ್ ಪ್ರಜ್ವಾಲ್ಯಮಾನಃ । ಯದ್ವಾ । ಅನು ಧರ್ಮಾ ಧರ್ಮಸಾಧನಭೂತೇಷು ಯಜ್ಞೇಷು ಪ್ರಥಮಂ ಸಮಿಧ್ಯಮಾನೋ ವಿಶ್ವವಾರೋ ವಿಶ್ವೈಃ ಸರ್ವೈರ್ಯಜಮಾನೈರ್ವರ್ಣನೀಯತಯಾ ವರಣೀಯಃ ಶೋಚಿಷ್ಕೇಶಃ । ಶೋಚೀಂಷಿ ಜ್ವಾಲಾಃ ಕೇಶಾ ಯಸ್ಯ ಸ ತಥೋಕ್ತಃ । ಘೃತನಿರ್ಣಿಕ್ । ಘೃತಸ್ಯ ತಾಪನದ್ವಾರಾ ವಿಲಾಪನೇನ ಶೋಧಕಃ । ಪಾವಕೋಽಸ್ಮದೀಯಪಾಪಶೋಧಕಃ । ಸುಯಜ್ಞಃ ಶೋಭನ-

ಯಜ್ಞೋಪೇತಃ । ಏವಂಭೂತೋಽಗ್ನಿರ್ದೇವಾನಸ್ಮಾಭಿರ್ಯಜನೀಯಾನ್ದೇವಾನ್ಯಜಥಾಯ ಯಷ್ಟು-ಮಕ್ತುಭಿರಂಜನಸಾಧನೈರ್ಘೃತಾದಿಭಿಃ ಸಮುಜ್ಯತೇ । ಸಮ್ಯಕ್ ಸಿಚ್ಯತೇ ॥ ಪ್ರಥಮಾ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ಧರ್ಮ । ಧೃ ಇಞ್ ಧಾರಣ ಇತ್ಯಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಹ್ರಸ್ವತ್ವಂ ಛಾಂದಸಂ । ನಿತ್ಸ್ವರಃ । ಅಕ್ತುಭಿಃ । ಅಂಜೂ ವ್ಯಕ್ತಿಗತಿವ್ರಕ್ಷಣೇಷು । ಅಜ್ಯತ ಏಭಿರಿತಿ ಬಾಹುಲಕತ್ವಾತ್ ಕ್ತುಃ ಕರಣೇ । ಕಿತ್ತ್ವಾದುಪಧಾಲೋಪಃ । ಪ್ರತ್ಯಯಸ್ವರಃ । ಅಜ್ಯತೇ । ಸ ಏವ ಧಾತುಃ । ಕರ್ಮಣಿ ಯಕ್ । ಅನಿದಿತಾಮಿತ್ಯುಪಧಾಲೋಪಃ । ವಿಶ್ವವಾರಃ । ವಿಶ್ವೈರ್ಯಜಮಾನೈ-ರ್ಹೋತೃದ್ವಾರಾ ವಾರೋ ವಾರಣಂ ಯಸ್ಯೇತ್ಯತ್ರ ವೃಞ್ ವರಣ ಇತ್ಯಸ್ಯ ಣ್ಯಂತಸ್ಯ ರೂಪಂ ವಾರಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಘೃತನಿರ್ಣಿಕ್ । ಣಿಜಿರ್ ಶೌಚ-ಪೋಷಣಯೋಃ । ಕ್ವಿಪ್ । ಘೃತಂ ನೇನೇಕ್ತೀತಿ ದ್ವಿತೀಯಾತತ್ಪುರುಷತ್ವಾತ್ಪೂರ್ವಪದಸ್ವರಃ । ಯಜ-ಥಾಯ । ಯಜ ದೇವಪೂಜಾಸಂಗತಿಕರಣದಾನೇಷು । ಅಸ್ಮಾದೌಣಾದಿಕೋಽಥಪ್ರತ್ಯಯಃ । ತಾದರ್ಥ್ಯೇ ಚತುರ್ಥೀ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಧರ್ಮ**—ಯಜ್ಞಾದಿಧಾರಕನೂ । **ವಿಶ್ವವಾರಃ**—ಸಕಲರಿಂದಲೂ ಅಪೇಕ್ಷಿಸಲ್ಪಡುವವನೂ । **ಶೋಚಿ-ಷ್ಕೇಶಃ**—ಜ್ವಾಲಾರೂಪವಾದ ಕೇಶಗಳುಳ್ಳವನೂ । **ಘೃತನಿರ್ಣಿಕ್**—ಘೃತರೂಪವಾದ ಹೊದ್ದಿಕೆಯುಳ್ಳವನೂ । **ಪಾವಕಃ**—ನಮ್ಮ ಶುದ್ಧಿಕರ್ತನೂ । **ಸುಯಜ್ಞಃ**—ಶ್ರೇಷ್ಠವಾದ ಯಜ್ಞದಿಂದ ಕೂಡಿದವನೂ ಆದ । **ಅಗ್ನಿಃ**—ಅಗ್ನಿಯು । **ದೇವಾನ್**—ದೇವತೆಗಳನ್ನು ಉದ್ದೇಶಿಸಿ । **ಯಜಥಾಯ**—ಯಜ್ಞಮಾಡುವುದಕ್ಕಾಗಿ । **ಪ್ರಥಮಾ**—ಯಜ್ಞಾರಂಭದಲ್ಲಿ । **ಅನು**—ಅನುಕ್ರಮವಾಗಿ । **ಸಮಿಧ್ಯಮಾನಃ**—ಪ್ರಜ್ವಲಿಸಲ್ಪಟ್ಟು । **ಅಕ್ತುಭಿಃ**—ಅಂಜನಾದಿಗಳಿಂದ । **ಸಮುಜ್ಯತೇ**—ಪ್ರೋಕ್ಷಿಸಲ್ಪಟ್ಟು ಅಲಂಕೃತನಾಗುತ್ತಾನೆ ॥

ಭಾವಾರ್ಥ

ಯಜ್ಞಾದಿಗಳ ಧಾರಕನೂ, ಸಕಲರಿಂದಲೂ ಅಪೇಕ್ಷಿಸಲ್ಪಡುವವನೂ, ಜ್ವಾಲಾರೂಪವಾದ ಕೇಶಗಳುಳ್ಳವನೂ, ಘೃತರೂಪವಾದ ಹೊದ್ದಿಕೆಯುಳ್ಳವನೂ, ನಮ್ಮ ಶುದ್ಧಿಕರ್ತನೂ, ಶ್ರೇಷ್ಠವಾದ ಯಜ್ಞದಿಂದ ಕೂಡಿದವನೂ ಆದ ಅಗ್ನಿಯು ದೇವತೆಗಳನ್ನು ಉದ್ದೇಶಿಸಿ ಯಜ್ಞಮಾಡುವುದಕ್ಕಾಗಿ ಯಜ್ಞಾರಂಭದಲ್ಲಿ ಅನುಕ್ರಮವಾಗಿ ಪ್ರಜ್ವಲಿಸಲ್ಪಟ್ಟು ಅಂಜನಾದಿಗಳಿಂದ ಅಲಂಕೃತನಾಗುತ್ತಾನೆ.

English Translation

The righteous (AGNI) when first kindled on the several (altars) the object of adoration by all, whose hair is flame, and who is cleansed with butter, the purifier, the worthily-worshipped, is sprinkled with oblations for the worship of the gods.

ವಿಶೇಷವಿಷಯಗಳು

ಧರ್ಮಾ ಪ್ರಥಮಾ ಅನು ಸಮಿಧ್ಯಮಾನಃ—ಧಾರಣಾತ್ ಧರ್ಮ । ತಾದೃಶೋ ಅಗ್ನಿಃ ಪ್ರಥಮಂ ಯಜ್ಞೋಪಕ್ರಮ ಅಗ್ನ್ಯಾಯತನೇಷ್ವನುಕ್ರಮೇಣ ಸಮ್ಯಕ್ ಪ್ರಜ್ವಾಲ್ಯಮಾನಃ । ಅನು ಧರ್ಮ । ಧರ್ಮ-

**ಸಾಧನಭೂತೇಷು ಯಜ್ಞೇಷು ಪ್ರಥಮಂ ಸಮಿಧ್ಯಮಾನಃ** । ಧರಿಸುವುದು ಎಂಬ ಅರ್ಥಬೋಧಕವಾಗಿರುವುದರಿಂದ ಧಾರಣಾತ್ ಧರ್ಮ ಎಂದು ಧರ್ಮಶಬ್ದದ ನಿರ್ವಚನವು ಉಕ್ತವಾಗಿದೆ. ಇಲ್ಲಿ ಯಜ್ಞವನ್ನು ನೆರವೇರಿಸುವುದರಿಂದಲೂ, ಯಜ್ಞವು ಪೂರ್ತಿ ಉಪಕ್ರಮದಿಂದ ಪೂರ್ಣವಾಗುವವರಿಗೂ ಅಗ್ನಿಯು ತನ್ನ ಸಾನ್ನಿಧ್ಯವನ್ನು ಅನುಗ್ರಹಿಸಿರುವುದರಿಂದಲೂ ಧಾರಣಕರ್ತೃವಾದವನು ಧರ್ಮಶಬ್ದಬೋಧ್ಯನೆಂಬ ವ್ಯುತ್ಪತ್ತಿಯಿಂದ ಅಗ್ನಿಯನ್ನು ಧರ್ಮಶಬ್ದದಿಂದ ಸಂಬೋಧಿಸಿದೆ. ಇದೇ ಅರ್ಥವನ್ನು ಬೋಧಿಸುವ **"ಧರ್ಮಾಣಮಗ್ನಿಂ ವಿದಥಸ್ಯ ಸಾಧನಂ"** ಎಂಬ ಶ್ರುತಿವಾಕ್ಯವೂ ಉದಾಹೃತವಾಗಿದೆ. ಈ ಪ್ರಕಾರವಾಗಿ ಇರುವ ಅಗ್ನಿಯು ಯಜ್ಞದ ಆರಂಭದಲ್ಲಿ ಯಾಗಶಾಲೆಯಲ್ಲಿ ಮೊದಲು ಮಾಡಿಕೊಂಡು ಕೊನೆಯವರಿಗೂ ಯಾಜ್ಞಿಕರಿಂದ ಉದ್ದೀಪ್ತನಾಗಿರುವನು ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ.

ಎರಡನೆಯ ಅರ್ಥದಲ್ಲಿ ಧರ್ಮಾಚರಣೆಯ ವಿಷಯದಲ್ಲಿ ಧರ್ಮಸಾಧನವಾದುದು ಯಜ್ಞವೂ ಆಗಿರುವುದರಿಂದ ಯಜ್ಞಗಳಲ್ಲಿ ಎಲ್ಲಕ್ಕಿಂತಲೂ ಮೊದಲ ಕಾರ್ಯವೆಂದರೆ ಯಜಮಾನರೇ ಮೊದಲಾದವರಿಂದ ಅಗ್ನಿಯು ಉದ್ದೀಪ್ತನಾಗುವನು (ಹೊತ್ತಿಸಲ್ಪಡುವನು) ಎಂದು ವರ್ಣಿಸಿದೆ.

**ವಿಶ್ವವಾರಃ—ವಿಶ್ವೈಸ್ಸರ್ವೈರ್ಯಜಮಾನೈರ್ಯಷ್ಟವ್ಯತಯಾ ವರಣೀಯಃ ವಿಶ್ವೈರ್ಯಜಮಾನೈರ್ಹೋತ್ರೈದ್ವಾರಾ ವಾರೋ ವಾರಣಂ ಯಸ್ಯ** । ಯಜ್ಞಮಾಡುವ ಯಜಮಾನರು (ಯಾಗಾರ್ಹನೆಂದು) ಹವಿಸ್ಸುಗಳನ್ನು ಅರ್ಪಿಸಲು ಅಥವಾ ಅರ್ಪಿತವಾದ ಹವಿಸ್ಸುಗಳನ್ನು ಸ್ವೀಕರಿಸಿ ಒಯ್ಯುವನೆಂದು ಅಪೇಕ್ಷಿತನಾದವನು ಎಂದೂ, ಅಥವಾ, ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಮಾಡುವುದರ ಮೂಲಕ ಯಜಮಾನರಿಂದ ಅಭಿಲಷಿತನಾದವನು ಅಗ್ನಿಯು ಎಂದೂ, ಎರಡು ಅರ್ಥವನ್ನು ವರ್ಣಿಸಿದೆ.

**ಶೋಚಿಷ್ಕೇಶಃ—ಶೋಚೀಂಷಿ ಜ್ವಾಲಾಃ ಕೇಶಾಃ ಯಸ್ಯ** । ಅಗ್ನಿಯು ತನ್ನ ಜ್ವಾಲೆಗಳನ್ನೇ ಕೇಶವಾಗಿ (ಕೂದಲುಗಳಂತೆ) ಉಳ್ಳವನು ಎಂದು ಅರ್ಥಮಾಡಿದೆ. ಎಂದರೆ ಅಗ್ನಿಯ ಜ್ವಾಲೆಗಳೇ ಅಗ್ನಿಗೆ ಕೇಶಗಳಂತಿರುವವು ಎಂದಭಿಪ್ರಾಯವು.

**ಘೃತನಿರ್ಣಿಕ್—ಘೃತಸ್ಯ ತಾಪನದ್ವಾರಾ ವಿಲಾಪನೇನ ಶೋಧಕಃ** । ನಿರ್ಣಿಕ್ ಎಂಬ ಪದವು ರೂಪನಾಮಗಳಲ್ಲಿ (ನಿ. ೩-೯)ಉಕ್ತವಾಗಿದೆ. ಮತ್ತು

**ಸಾ ತೇ ಜೀವಾತುರುತ ತಸ್ಯ ವಿದ್ಧಿ ಮಾ ಸ್ಮೈತಾದೃಗಪ ಗೂಹಃ ಸಮರ್ಯೇ ।**
**ಆವಿಃ ಸ್ವಃ ಕೃಣುತೇ ಗೂಹತೇ ಬುಸಂ ಸ ಪಾದುರಸ್ಯ ನಿರ್ಣಿಜೋ ನ ಮುಚ್ಯತೇ ॥**

(ಋ. ಸಂ. ೧೦-೨೭-೨೪)

ಈ ಋಕ್ಕಿನಲ್ಲಿ **ತಮಃ ಪಂಕದಿಗ್ಧಾನಿ ಹಿ ರೂಪಾಣಿ ಸ್ವೇನ ಪ್ರಕಾಶೋದಕೇನ ಧೌತಾನೀವ ಕರೋತೀತಿ ನಿರ್ಣಿಕ್ ಸೂರ್ಯಃ** । ಕತ್ತಲೆಯೆಂಬ ಕೆಸರಿನಲ್ಲಿ ಸರಿಯಾಗಿ ಕಾಣಿಸದಿರುವ ಆಕೃತಿಗಳನ್ನು ತನ್ನ ಪ್ರಕಾಶವೆಂಬ ಉದಕಗಳಿಂದ ಕಾಣಿಸುವಂತೆ ಮಾಡುವವನು ಎಂದು ಅರ್ಥಮಾಡಿ ಸೂರ್ಯನನ್ನು ಶೋಧಕನೆಂಬ ಅರ್ಥವನ್ನು ವರ್ಣಿಸಿದೆ. ಇಲ್ಲಿ ಅಗ್ನಿಯು ಆಜ್ಯವನ್ನು ತನ್ನ ರಶ್ಮಿಗಳಿಂದ ತಪಿಸುವಂತೆ ಮಾಡಿ ಅದನ್ನು ಶುದ್ಧಿಮಾಡುವವನು ಎಂದು ವಿವರಿಸಿದೆ.

**ಪಾವಕಃ—ಅಸ್ಮದೀಯಪಾಪಶೋಧಕಃ** । ಯಜಮಾನರಾದ ನಮ್ಮ ಪಾಪಗಳನ್ನು ಪರಿಹರಿಸಿ ನಮ್ಮನ್ನು ಪವಿತ್ರರನ್ನಾಗಿ ಮಾಡುವ ಕಾರಣ ಅಗ್ನಿಯು ಪರಿಶುದ್ಧಿಯನ್ನು ಉಂಟುಮಾಡುವವನೆಂದು ಅರ್ಥಮಾಡಿದೆ.

**ಅಕ್ತುಭಿಃ ಸಂ ಅಜ್ಯತೇ—ಅಂಜನಸಾಧನೈಃ ಘೃತಾದಿಭಿಃ ಸಮ್ಯಕ್ ಸಿಚ್ಯತೇ** । ಅಗ್ನಿಯು ಯಜಮಾನರಿಂದ ಯಜ್ಞದಲ್ಲಿ ಪೂಜಾರ್ಹರಾದ ದೇವತೆಗಳನ್ನು ಪೂಜಿಸುವುದಕ್ಕಾಗಿ ಲೇಪನಮಾಡುವುದೇ ಮೊದಲಾದ ಕರ್ಮಗಳಿಗೆ ಸಾಧನವಾದ ಆಜ್ಯವೇ ಮೊದಲಾದವುಗಳಿಂದ ತೃಪ್ತನಾಗಿರುವಂತೆ ಸೇಚನಮಾಡಲ್ಪಡುತ್ತಾನೆಂದು ವರ್ಣಿಸಿದೆ.

ಅಗ್ನಿಯನ್ನು ಉದ್ದೇಶಮಾಡಿ ಆಚರಿಸಿದ, ಅಥವಾ ಆಚರಿಸುವ ಯಜ್ಞವು ಉತ್ತಮವಾದ ಫಲಪ್ರದವಾದುದರಿಂದ ಅಗ್ನಿಯನ್ನು **ಸುಯಜ್ಞಃ** ಎಂಬ ಪದದಿಂದ ಇಲ್ಲಿ ಸಂಬೋಧಿಸಿದೆ. ಇದಕ್ಕೆ **ಶೋಭನಯಜ್ಞೋಪೇತಃ** ಉತ್ತಮವಾದ ದೇವತೆಗಳ ಪೂಜೆಯು ನಡೆಯಲು ಕಾರಣವಾದ ಯಜ್ಞದಿಂದ ಅಗ್ನಿಯು ಕೂಡಿರುವವನು ಎಂಬ ಅರ್ಥವನ್ನು ಇಲ್ಲಿ ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಸಮಿಧ್ಯಮಾನಃ**— ಞಿಇಂಧೀ ದೀಪ್ತೌ. ಧಾತು. ಕರ್ಮಣಿಯಲ್ಲಿ ಶಾನಚ್ ಪ್ರತ್ಯಯ. **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. **ಅನಿದಿತಾಂಹಲಉ**— ಎಂಬುದರಿಂದ ಧಾತುವಿನ ಉಪಧೆಗೆ ಲೋಪ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್** ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಯಕ್‌ಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪ್ರಥಮಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ.

**ಧರ್ಮ**—ಧೃಞ್ ಧಾರಣೇ. ಧಾತು. **ಅನ್ಯೇಭ್ಯೋಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. **ಸಾರ್ವಧಾತುಕಾರ್ಧ**— ಎಂಬುದರಿಂದ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸು ಪರವಾದಾಗ ದೀರ್ಘಪ್ರಾಪ್ತವಾದರೆ ಛಾಂದಸವಾಗಿ ಹ್ರಸ್ವ ಬರುತ್ತದೆ.

**ಅಕ್ತುಭಿಃ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಅಜ್ಯತೇ ಏಭಿರಿತಿ ಅಕ್ತೂನಿ. ಬಹುಲಗ್ರಹಣಸಾಮರ್ಥ್ಯದಿಂದ ಕರಣಾರ್ಥದಲ್ಲಿ ಕ್ತು ಪ್ರತ್ಯಯ. ಕಿತ್ತಾದುದರಿಂದ **ಅನಿದಿತಾಂಹಲಉ**— ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ.

**ಅಜ್ಯತೇ**—ಪೂರ್ವೋಕ್ತವಾದ ಧಾತುವಿಗೆ ಕರ್ಮಣಿಯಲ್ಲಿ ಲಟ್ ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. ಟಿಗೆ ಏತ್ವ. ಯಕ್‌ನಿಮಿತ್ತವಾಗಿ ಉಪಧಾನಕಾರಕ್ಕೆ ಲೋಪ. ತಿಜಂತನಿಘಾತಸ್ವರ ಬರುತ್ತದೆ.

**ವಿಶ್ವವಾರಃ**—ವಿಶ್ವೈಃ ಯಜಮಾನೈರ್ಹೋತೃದ್ವಾರಾ ವಾರಂ ವಾರಣಂ ಯಸ್ಯ ಸಃ. ವೃಞ್ ವರಣೇ. ಧಾತು. ಣ್ಯಂತದ ಮೇಲೆ ಘಞ್‌ಪ್ರತ್ಯಯ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್** (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಶೋಚಿಷ್ಕೇಶಃ**—ಶೋಚೀಂಷಿ ಕೇಶಾಃ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಘೃತನಿರ್ಣಿಕ್**—ಣಿಜಿರ್ ಶೌಚಪೋಷಣಯೋಃ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಘೃತಂ ನೇನೇಕ್ತಿ ಇತಿ ಘೃತನಿರ್ಣಿಕ್. ನಿರ್ ಉಪಸರ್ಗ. ದ್ವಿತೀಯಾ ತತ್ಪುರುಷಸಮಾಸ. **ತತ್ಪುರುಷೇ**—ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಘೃತಶಬ್ದ ಅಂತೋದಾತ್ತವಾಗುತ್ತದೆ.

**ಸುಯಜ್ಞಃ**—ಶೋಭನಃ ಯಜ್ಞಃ ಯಸ್ಯ ಸಃ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಯಜಥಾಯ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಬಹುಲಗ್ರಹಣದಿಂದ **ಶೀಙ್-ಶಪಿರುಗಮಿ**—(ಉ. ಸೂ. ೨-೩೫೩) ಎಂಬುದರಿಂದ ವಿಹಿತವಾದ ಅಥಪ್ರತ್ಯಯವು ಈ ಧಾತುವಿಗೆ ಬರುತ್ತದೆ. ಯಜಥ ಎಂದು ರೂಪವಾಗುತ್ತದೆ. **ತಾದರ್ಥ್ಯೇ ಚತುರ್ಥೀ ವಾಚ್ಯಾ** ಎಂಬ ವಚನದಿಂದ ತಾದರ್ಥ್ಯತೋರುವಾಗ ಚತುರ್ಥೀ ಬರುತ್ತದೆ.

———

ಸಂಹಿತಾಪಾಠಃ

ಯಥಾಯಜೋ ಹೋತ್ರಮಗ್ನೇ ಪೃಥಿವ್ಯಾ ಯಥಾ ದಿವೋ ಜಾತವೇದಶ್ಚಿಕಿತ್ವಾನ್।
ಏವಾನೇನ ಹವಿಷಾ ಯಕ್ಷಿ ದೇವಾನ್ಮನುಷ್ವದ್ಯಜ್ಞಂ ಪ್ರ ತಿರೇಮಮದ್ಯ ॥ ೨ ॥

ಪದಪಾಠಃ

ಯಥಾ । ಅಯಜಃ । ಹೋತ್ರಂ । ಅಗ್ನೇ । ಪೃಥಿವ್ಯಾಃ । ಯಥಾ । ದಿವಃ । ಜಾತಽವೇದಃ । ಚಿಕಿತ್ವಾನ್ ।
ಏವ । ಅನೇನ । ಹವಿಷಾ । ಯಕ್ಷಿ । ದೇವಾನ್ । ಮನುಷ್ವತ್ । ಯಜ್ಞಂ । ಪ್ರ । ತಿರ । ಇಮಂ । ಅದ್ಯ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಯಥಾ ಪೃಥಿವ್ಯಾ ಯಜಮಾನಭೂತಾಯಾಃ ಪೃಥಿವೀದೇವತಾಯಾಃ ಪೂರ್ವಂ ಹೋತಾ ಸನ್ ಹೋತ್ರಂ ಹೋಮಸಾಧನಂ ಹವಿರಯಜೋಽಯಾಜೀಃ ಜಾತವೇದೋ ಜಾತಪ್ರಜ್ಞ ಹೇ ಅಗ್ನೇ ಚಿಕಿತ್ವಾನ್ ಕರ್ಮವಿಷಯಜ್ಞಾನವಾನ್ ತ್ವಂ ಯಥಾ ಚ ದಿವೋ ಯಜಮಾನಭೂತಾಯಾ ದ್ಯುದೇವತಾಯಾ ಹೋತಾ ಭೂತ್ವಾ ಹವಿರಯಜಃ। ಏವ ಏವಂ ತ್ವಮಸ್ಮಿನ್ಕರ್ಮಣಿ ಹೋತಾ ಸನ್ ಅನೇನಾಸ್ಮಾಭಿರ್ದೀಯಮಾನೇನ ಹವಿಷಾ ದೇವಾನ್ ಯಕ್ಷಿ। ಯಜ। ಕಿಂಚ ತ್ವಮದ್ಯೇದಾನೀಮಸ್ಮಾಭಿಃ ಕ್ರಿಯಮಾಣಮಿಮಂ ಯಜ್ಞಂ ಪ್ರ ತಿರ। ಅನುಷ್ಠಾನಸಂಪೂರ್ತ್ಯಾ ಪಾರಂ ಗಮಯ। ತತ್ರ ದೃಷ್ಟಾಂತೋ ಮನುಷ್ವದಿತಿ। ಯಥಾ ಮನೋರ್ಯಜ್ಞಮನುಷ್ಠಾನಸಂಪೂರ್ತ್ಯಾ ಪಾರಮನೈಷೀಸ್ತ-ದ್ವದಿಮಂ ಯಜ್ಞಂ ಪಾರಂ ನಯೇತ್ಯರ್ಥಃ॥ ಯಥಾ। ಪ್ರಕಾರವಚನೇ ಥಾಲಿತಿ ಥಾಲ್। ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ। ಅಯಜಃ। ಯಜೇರ್ಲಙಿ ರೂಪಂ। ಯಚ್ಛಬ್ದಯೋಗಾದ-ನಿಘಾತಃ। ಹೋತ್ರಂ। ಹು ದಾನಾದನಯೋಃ। ಹುಯಾಮಾಶ್ರುಭಸಿಭ್ಯಸ್ತ್ರನ್ನಿತಿ ತ್ರನ್ಪ್ರತ್ಯಯೇನಾಂತೋ-ದಾತ್ತಃ। ದಿವಃ। ಊಡಿದಮಿತಿ ವಿಭಕ್ತೇರುದಾತ್ತತ್ವಂ। ಚಿಕಿತ್ವಾನ್। ಕಿತ ಜ್ಞಾನ ಇತ್ಯಸ್ಯ ಕ್ವಸೌ

ರೂಪಂ | ಪ್ರತ್ಯಯಸ್ವರಃ | ಅನೇನ | ಇದಂಶಬ್ದಸ್ಯ ತೃತೀಯೈಕವಚನ ಅನಾಪ್ಯಕಃ | ಪಾ. ೭-೨-೧೧೨ | ಇತ್ಯನಾದೇಶಃ | ಯಕ್ಷಿ | ಯಜೇರ್ಲೋಟಿ ರೂಪಂ | ಮನುಷ್ವತ್ | ತತ್ರ ಸಸ್ಯೇವೇತಿ ವತಿಃ | ನಭೋಽಂಗಿರೋ ಮನುಷಾಂ ವತ್ಯುಪಸಂಖ್ಯಾನಮಿತಿ ಭಸಂಜ್ಞಾತ್ವಾದ್ರುತ್ವಾಭಾವಃ | ಪ್ರತ್ಯಯಸ್ವರಃ | ತಿರ | ತರತೇರ್ಲೋಟಿ ವ್ಯತ್ಯಯೇನ ಶಃ | ಋತ ಇದ್ಧಾತೋರಿತೀತ್ವಂ | ನಿಘಾತಃ ||

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ಯಥಾ**—ಯಾವರೀತಿಯಲ್ಲಿ | **ಪೃಥಿವ್ಯಾಃ**—ಪೃಥಿವೀದೇವತೆಯ (ಹೋತೃವಾಗಿದ್ದು) | **ಹೋತ್ರಂ**—ಹೋಮಸಾಧನವಾದ ಹವಿಸ್ಸನ್ನು | **ಅಯಜಃ**—(ಪೃಥಿವಿಗಾಗಿ) ಅರ್ಪಿಸಿ ಯಜ್ಞಮಾಡಿದೆಯೋ | **ಜಾತವೇದಃ**—ಸಕಲವನ್ನೂ ತಿಳಿದ ಎಲೈ ಅಗ್ನಿಯೇ | **ಯಥಾ**—ಯಾವ ರೀತಿಯಲ್ಲಿ | **ಚಿಕಿತ್ವಾನ್**—ಕರ್ಮವಿಷಯಕವಾದ ಜ್ಞಾನವನ್ನು ಹೊಂದಿದ ನೀನು | **ದಿವಃ**—ದ್ಯುಲೋಕದೇವತೆಗಾಗಿ ಯಜ್ಞಮಾಡಿದೆಯೋ | **ಏವ**—ಅದೇ ರೀತಿಯಲ್ಲಿ | **ಅನೇನ ಹವಿಷಾ**—ಈ ಹವಿಸ್ಸಿನಿಂದ | **ದೇವಾನ್**—ದೇವತೆಗಳನ್ನುದ್ದೇಶಿಸಿ | **ಯಕ್ಷಿ**—ಯಜ್ಞಮಾಡು | **ಮನುಷ್ವತ್**—ಮನುವಿನ ಯಜ್ಞವನ್ನು ಪೂರ್ಣವಾಗಿ ಆಗುವಂತೆ ಮಾಡಿದ ಹಾಗೆ | **ಅದ್ಯ**—ಈಗ **ಇಮಂ ಯಜ್ಞಂ**—ಈ ಯಜ್ಞವನ್ನು | **ಪ್ರ ತಿರ**—ಪೂರ್ಣವಾಗುವಂತೆ ಮಾಡು ||

ಭಾವಾರ್ಥ

ಸರ್ವಜ್ಞನಾದ ಎಲೈ ಅಗ್ನಿಯೇ, ಹಿಂದೆ ಪೃಥಿವೀದೇವತೆಯ ಹೋತೃವಾಗಿದ್ದು ಯಾವ ರೀತಿಯಲ್ಲಿ ಯಜ್ಞಮಾಡಿದೆಯೋ, ಯಾವ ರೀತಿಯಲ್ಲಿ ಕರ್ಮವಿಷಯಕವಾದ ಜ್ಞಾನವನ್ನು ಹೊಂದಿ ದ್ಯುಲೋಕದೇವತೆಗಾಗಿಯೂ ಯಜ್ಞವನ್ನು ಮಾಡಿದೆಯೋ, ಅದೇ ರೀತಿಯಲ್ಲಿ ಈ ಹವಿಸ್ಸಿನಿಂದ ದೇವತೆಗಳನ್ನುದ್ದೇಶಿಸಿ ಯಜ್ಞಮಾಡು. ಮನುವಿನ ಯಜ್ಞವನ್ನು ಹಿಂದೆ ಸಾಂಗವಾಗಿ ನೆರವೇರಿಸಿದಂತೆಯೇ ಈಗಲೂ ಸಹ ನಮ್ಮ ಈ ಯಜ್ಞವನ್ನು ಪೂರ್ಣವಾಗುವಂತೆ ಮಾಡು.

English Translation

As you offerred the burnt-offering, AGNI, ( on behalf of ) earth ; as you, JATAVEDAS, who are cognizant (of sacred rites, offerred sacrifice on behalf) of heaven ; so with this oblation worship the gods, and perfect this rite to-day (as you did) that of MANU.

ವಿಶೇಷವಿಷಯಗಳು

**ಪೃಥಿವ್ಯಾಃ ಹೋತ್ರಂ ಅಯಜಃ**—ಇಲ್ಲಿ ಸಾಯಣರು **ಯಜಮಾನಭೂತಾಯಾಃ ಪೃಥಿವೀದೇವತಾಯಾಃ ಪೂರ್ವಂ ಹೋತಾ ಸನ್ ಹೋತ್ರಂ ಹವಿಃ ಹೋಮಸಾಧನಂ ಅಯಜಃ** ಪೃಥಿವಿಯು ಯಜ್ಞವನ್ನು ಮಾಡುವ ಯಜಮಾನನಾಗಿ ಇದ್ದಾಗ ಅಗ್ನಿಯು ಹೋತೃವೆಂಬ ಋತ್ವಿಜನಾಗಿ ಹೋಮ (ಸಾಧನ) ದ್ರವ್ಯವಾದ ಹವಿಸ್ಸನ್ನು ಅರ್ಪಿಸಿರುವನೆಂದು ವ್ಯಾಖ್ಯಾನಮಾಡಿರುವುದರಿಂದ ಪೃಥಿವೀದೇವತೆಯೂ ಯಾಗವನ್ನು ಆಚರಿಸಿರುವಳೆಂದು ಸೂಚಿತವಾಗಿದೆ. ಯಾಸ್ಕರು ಪೃಥಿವೀಶಬ್ದವನ್ನು ಅಂತರಿಕ್ಷನಾಮಗಳಲ್ಲಿ (ನಿ. ೨-೧೦) ಪಠಿಸಿದ್ದಾರೆ. ಆದರೆ ಸಾಯಣರು ಈ ಪದಕ್ಕೆ ಪೃಥಿವೀದೇವತೆಯೆಂದು ಅರ್ಥವನ್ನು ವಿವರಿಸಿದ್ದಾರೆ. ಹೋತ್ರ ಶಬ್ದವು ಭಾವಸಾಧನಪರವಾಗಿರುವುದೆಂದು ವ್ಯಾಖ್ಯಾತವಾಗಿ ಹೋಮದ್ರವ್ಯರೂಪವಾದ ಹವಿಸ್ಸೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಜಾತವೇದಃ**—**ಜಾತಪ್ರಜ್ಞ । ಜಾತವೇದಶ್ಶಬ್ದವು ಜಾತಾನಿ ವೇದ, ಜಾತಾನಿ ವೈನಂ ವಿದುಃ, ಜಾತೇಜಾತೇ ವಿದ್ಯತ ಇತಿ ವಾ, ಜಾತವಿತ್ತೋ ವಾ ಜಾತಧನಃ, ಜಾತವಿದ್ಯೋ ವಾ ಜಾತಪ್ರಜ್ಞಾನಃ, ಯೆಜ್ಞಾತಃ ಪಶೂನವಿಂದತೇತಿ ತಜ್ಞಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ** (ನಿ. ೭-೨೦) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. (ಇವರ ವಿವರಣೆಯು ಹಿಂದೆ ವಿವೃತವಾಗಿದೆ) ಸಾಯಣರು ಇಲ್ಲಿ ಜಾತಪ್ರಜ್ಞ ಎಂದು ಅರ್ಥವನ್ನು ವಿವರಿಸಿ, ಅಗ್ನಿಯನ್ನು ಈ ಪದದಿಂದ ಸಂಬೋಧಿಸಿ, ಅಗ್ನಿಯು **ಚಿಕಿತ್ವಾನ್** ಕರ್ಮವಿಷಯವಾದ ಜ್ಞಾನವುಳ್ಳವನಾಗಿರುವನೆಂಬ ಅರ್ಥವನ್ನು ವರ್ಣಿಸಿ, **ದಿವಃ ಯಜಮಾನಭೂತಾಯಾಃ ದ್ಯುದೇವತಾಯಾಃ ಹೋತಾ ಭೂತ್ವಾ ಹವಿರಯಜಃ** ಅಗ್ನಿಯು ಯಜ್ಞವನ್ನು ಮಾಡುವ ಯಜಮಾನರೂಪದಿಂದ ಇರುವ ದ್ಯುದೇವತೆಯ ಯಜ್ಞದಲ್ಲಿ ಹೋತೃವೆಂಬ ಋತ್ವಿಜನಾಗಿ ಹೋಮದ್ರವ್ಯವಾದ ಹವಿಸ್ಸನ್ನು ಅರ್ಪಿಸಿರುವನೆಂಬ ಅರ್ಥವನ್ನು ವಿವರಿಸಿದ್ದಾರೆ.

**ಚಿಕಿತ್ವಾನ್**—ಈ ಪದವು ಯಾಸ್ಕರಿಂದ **ಚೇತನಾವಾನ್** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವ್ಯಾಖ್ಯಾತವಾಗಿದೆ. ಮತ್ತು—

**ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ ಯಜಸಿ ಜಾತವೇದಃ ।**
**ಆ ಚ ವಹ ಮಿತ್ರಮಹಶ್ಚಿಕಿತ್ವಾನ್ ತ್ವಂ ದೂತಃ ಕವಿರಸಿ ಪ್ರಚೇತಾಃ ॥**

(ಋ. ಸಂ. ೧೦-೧೧೦-೧)

ಈ ಋಕ್ಕಿನಲ್ಲಿ ಜಾತವೇದಾಗ್ನಿಯು ವರ್ಣಿತವಾಗಿರುವನೆಂದೂ, ಅಗ್ನಿಯನ್ನೇ ಈ ಪದದಿಂದ ಸಂಭೋದಿಸಿ ಅಗ್ನಿಯು-ಹೋಮದಲ್ಲಿ ಅರ್ಪಿಸುವ ಹವಿಸ್ಸನ್ನು ದೇವತೆಗಳಿಗೆ ತಲಪಿಸುವ ದೂತನೆಂದೂ, ಹೋತೃವಾಗಿರುವವನೆಂದೂ, ಮತ್ತು ಯಜಮಾನರ ಅಭಿಮತವನ್ನು ತಿಳಿಯುವವನೆಂದೂ ಅರ್ಥವನ್ನು ಯಾಸ್ಕರು ವಿವರಿಸಿದ್ದಾರೆ.

**ಮನುಷ್ವತ್ ಏವ ಹವಿಷಾ ದೇವಾನ್ ಯಕ್ಷಿ ಅದ್ಯ ಇಮಂ ಯಜ್ಞಂ ಪ್ರ ತಿರ** ಅಗ್ನಿಯು ಪೃಥಿವೀ ದೇವಿಯೂ, ದ್ಯುದೇವತೆಯೂ ಯಜ್ಞವನ್ನು ಆಚರಿಸಿದಾಗ ಹೋತೃವಾಗಿ ಹವಿಸ್ಸನ್ನು ಯಜಮಾನರ ಅಭಿಮತಕ್ಕನುಗುಣವಾಗಿ ದೇವತೆಗಳ ಉದ್ದೇಶ್ಯದಿಂದ ಅರ್ಪಿಸಿದಂತೆ, **ಅಸ್ಮಾಭಿರ್ದೀಯಮಾನೇನ ಹವಿಷಾ ದೇವಾನ್ ಯಕ್ಷಿ** ಯಜಮಾನರಾದ ನಾವು ಅರ್ಪಿಸಿದ ಹವಿಸ್ಸುಗಳನ್ನು ದೇವತೆಗಳಿಗೆ ಅರ್ಪಿಸಲಿ, ಎಂದೂ, ಈಗ ಯಜಮಾನರಾದ ನಮ್ಮಿಂದ ಆಚರಿಸಲ್ಪಡುವ ಈ ಯಜ್ಞವನ್ನು ಅಗ್ನಿಯು **ಅನುಷ್ಠಾನಸಂಪೂರ್ತ್ಯಾ ಪಾರಂ ಗಮಯ** ಅವಶ್ಯಕರ್ತವ್ಯ ಕರ್ಮಗಳ ಆಚರಣೆಯ ಲೋಪವಿಲ್ಲದಹಾಗೆ ಪೂರ್ಣಮಾಡಲಿ ಎಂದೂ ಯಜಮಾನರ ಆಶಂಸನೆಯು ವರ್ಣಿತವಾಗಿದೆ. ಈ ವಿಷಯದಲ್ಲಿ **ಮನುಷ್ವತ್** ಎಂದು ಉಪಮಾನವು ಉಕ್ತವಾಗಿದೆ. **ಯಥಾ ಮನೋಃ ಯಜ್ಞಂ ಅನುಷ್ಠಾನ-ಸಂಪೂರ್ತ್ಯಾ ಪಾರಮನೈಷೀಃ ತದ್ವತ್** ಪೂರ್ವದಲ್ಲಿ ಮನುವೆಂಬುವನ ಯಜ್ಞದಲ್ಲಿ ಅಗ್ನಿಯು ಹೋತೃವಾಗಿದ್ದು ಯಜ್ಞಕರ್ಮಗಳಲ್ಲಿ ಯಾವ ವಿಧವಾದ ಲೋಪವೂ ಇಲ್ಲದಹಾಗೆ ಯಜ್ಞಕರ್ಮವನ್ನು ಪೂರ್ತಿಮಾಡಿರುವಂತೆಯೇ ನಮ್ಮ ಯಜ್ಞದಲ್ಲಿಯೂ, ಅಗ್ನಿಯು ಹೋತೃವಾಗಿ ಯಜ್ಞವನ್ನು ಪೂರ್ತಿಮಾಡಲಿ ಎಂದು ಯಜಮಾನರ ಆಶಂಸನೆಯು ಉಕ್ತವಾಗಿದೆ ಎಂಬ ಅರ್ಥವು ವಿವರಿಸಲ್ಪಟ್ಟಿದೆ.

**ಯಜ್ಞಂ**—ಈ ಪದವು **ಯಜ್ಞಃ ಕಸ್ಮಾತ್ ಪ್ರಖ್ಯಾತಂ ಕರ್ಮೇತಿ ನೈರುಕ್ತಾಃ । ಯಾಚ್ಞೋ ಭವತೀತಿ ವಾ ಯಜುರುನ್ನೋ ಭವತೀತಿ ವಾ ಬಹುಕೃಷ್ಣಾಜಿನ ಇತ್ಯೌಪಮನ್ಯವೋ ಯಜೂಂಷ್ಯೇನಂ ನಯಂತೀತಿ ವಾ ।** (ನಿ. ೩-೧೯) ಎಂದು ನೈರುಕ್ತಮತ, ಉಪಮನ್ಯು ಎಂಬ ಆಚಾರ್ಯರ ಮತಗಳ ಪ್ರದರ್ಶನ ಪೂರ್ವಕವಾಗಿ ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಈ ವಾಕ್ಯದ ಅರ್ಥವು ಹಿಂದೆ ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಯಥಾ**—ಯಚ್ಛಬ್ದ. **ಪ್ರಕಾರವಚನೇಥಾಲ್** (ಪಾ. ಸೂ. ೫-೩-೨೩) ಎಂಬುದರಿಂದ ಥಾಲ್‌ಪ್ರತ್ಯಯ ಇದಕ್ಕೆ ವಿಭಕ್ತಿಸಂಜ್ಞಾ ಇರುವುದರಿಂದ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ಅತ್ವ. **ಅತೋ-ಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. ಯಥಾ ಎಂದು ರೂಪವಾಗುತ್ತದೆ. ಪ್ರತ್ಯಯ ಲಿತ್ತಾದು ದರಿಂದ **ಲಿತಿ** (ಪಾ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅಯಜಃ**—ಯ.ಜ ದೇವಪೂಜಾದಿಷು ಧಾತು. ಲಙ್ ಮಧ್ಯಮಪುರುಷಏಕವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತಸ್ವರವಾಗುತ್ತದೆ.

**ಹೋತ್ರಂ**—ಹು ದಾನಾದನಯೋಃ ಧಾತು. **ಹುಯಾಮಾಶ್ರುಭಸಿಭ್ಯಸ್ತ್ರನ್** (ಉ. ಸೂ. ೪-೬೦೭) ಎಂಬುದರಿಂದ ತ್ರನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ವ್ಯತ್ಯಯದಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪೃಥಿವ್ಯಾಃ**—**ಉದಾತ್ತಯಣೋಹಲ್‌ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದಿವಃ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರಬರುತ್ತದೆ.

**ಚಿಕಿತ್ವಾನ್**—ಕಿತ ಜ್ಞಾನೇ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ ಕ್ವಸುರಾದೇಶ. ಧಾತುವಿಗೆ ದ್ವಿತ್ವಾದಿ. ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ. ಪ್ರಥಮಾಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ, ದೀರ್ಘ.

**ಅನೇನ**—ಇದಂಶಬ್ದ. ಇದಕ್ಕೆ ತೃತೀಯಾಏಕವಚನ ಪರವಾದಾಗ **ಅನಾಪ್ಯಕಃ** (ಪಾ. ಸೂ. ೭-೨-೧೧೨) ಎಂಬುದರಿಂದ ಅನಾದೇಶ. **ಟಾಙಸಿಙಸಾ**—ಎಂಬುದರಿಂದ ವಿಭಕ್ತಿಗೆ ಇನಾದೇಶ. ಗುಣ.

**ಯಕ್ಷಿ**—ಯಜ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದ ರಿಂದ ನಿಘಾತಸ್ವರ ಬರುತ್ತದೆ.

**ಮನುಷ್ವತ್**—**ತತ್ರ ತಸ್ಯೇವ** (ಪಾ. ಸೂ. ೫-೧-೧೧೬) ಎಂಬುದರಿಂದ ಸಾದೃಶ್ಯಾರ್ಥದಲ್ಲಿ, ವತಿಪ್ರತ್ಯಯ. **ನಭೋಂಗಿರೋ ಮನುಷಾಂ ವತ್ಯುಪಸಂಖ್ಯಾನಂ** ಎಂಬ ವಚನದಿಂದ ವತಿ ಪರವಾದಾಗ ಭಸಂಜ್ಞಾ ಬರುವುದ ರಿಂದ ಪೂರ್ವದ ಸಕಾರಕ್ಕೆ ರುತ್ವ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ತಿರ**—ತೄ ಪ್ಲವನತರಣಯೋಃ ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಆದೇಶ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶ ವಿಕರಣ ಬರುತ್ತದೆ. ಇದಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. **ಋೂತಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಋೂಕಾರಕ್ಕೆ ಇತ್ವ. ರಪರವಾಗಿ ಬರುತ್ತದೆ. **ಅತೋ ಹೇಃ** ಎಂಬುದರಿಂದ ಹಿಗೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ತ್ರೀಣ್ಯಾಯೂಂಷಿ ತವ ಜಾತವೇದಸ್ತ್ರಿಸ್ರ ಆಜಾನೀರುಷಸಸ್ತೇ ಅಗ್ನೇ ।
ತಾಭಿರ್ದೇವಾನಾಮವೋ ಯಕ್ಷಿ ವಿದ್ವಾನಥಾ ಭವ ಯಜಮಾನಾಯ ಶಂಯೋಃ ॥

ಪದಪಾಠಃ

ತ್ರೀಣಿ । ಆಯೂಂಷಿ । ತವ । ಜಾತಽವೇದಃ । ತಿಸ್ರಃ । ಆಽಜಾನೀಃ । ಉಷಸಃ । ತೇ । ಅಗ್ನೇ ।
ತಾಭಿಃ । ದೇವಾನಾಂ । ಅವಃ । ಯಕ್ಷಿ । ವಿದ್ವಾನ್ । ಅಥ । ಭವ । ಯಜಮಾನಾಯ । ಶಂ । ಯೋಃ ॥

ಸಾಯಣಭಾಷ್ಯಂ

ಹೇ ಜಾತವೇದೋ ಜಾತಪ್ರಜ್ಞ ತವ ತ್ರೀಣ್ಯಾಯೂಂಷಿ ತ್ರಿವಿಧಾನ್ಯಾಜ್ಯೌಷಧಿಸೋಮಾತ್ಮಕಾನ್ಯನ್ನಾನ್ಯಾಹಾರತಯಾ ಕಲ್ಪಿತಾನಿ ಹೇ ಅಗ್ನೇ ತಿಸ್ರ ಉಷಸ ಏಕಾಹಾಹೀನಸತ್ರಗತಾ ಉಷಸ ಉಷೋಽಭಿಮಾನಿನ್ಯಸ್ತಿಸ್ರೋ ದೇವತಾಸ್ತೇ ತವಾಜಾನೀರ್ಜನಯಿತ್ರ್ಯೋ ಮಾತರಃ। ಯದ್ವಾ। ಉಷೋಽಭಿಮಾನಿನ್ಯೋ ದೇವತಾಸ್ತವಾಜಾನೀಸ್ತ್ವಾಮನುಜಾತಾಸ್ತಿಸ್ರಃ ಸ್ವಸಾರಃ। ತಥಾಚ ಸ್ವಸ್ಯಃ ಪ್ರಕೃತ್ಯ ಮಂತ್ರಃ। ಪ್ರಜಾಮೇಕಾ ರಕ್ಷತ್ಯೂರ್ಜಮೇಕಾ ರಾಷ್ಟ್ರಮೇಕಾ ರಕ್ಷತೀತಿ। ತಾಭಿರುಷೋಽಭಿಮಾನಿನೀಭಿರ್ದೇವತಾಭಿಃ ಸಹಿತಸ್ತ್ವಮವೋಽಸ್ಮಾಭಿರ್ದೀಯಮಾನಂ ಹವಿರ್ಲಕ್ಷಣಮನ್ನಂ ದೇವಾನಾಂ ಯಕ್ಷಿ। ಯಷ್ಟವ್ಯದೇವಾನಾಂ ಪ್ರಯಚ್ಛ। ಅಥ ಅನಂತರಂ ವಿದ್ವಾನ್ ಜಾನಂಸ್ತ್ವಂ ಯಜಮಾನಾಯ ಶಂ ಭವ। ಸುಖಹೇತುರ್ಭವ। ಯೋಶ್ಚ ಸುಖಸ್ಯ ಮಿಶ್ರಯಿತಾ ಚ ಭವ ॥ ತವ । ಯುಷ್ಮದಸ್ಮದೋರ್ಙಸೀತ್ಯಾದ್ಯುದಾತ್ತಃ। ತಿಸ್ರಃ। ತ್ರಿಶಬ್ದಸ್ಯ ಸ್ತ್ರ್ಯರ್ಥೇ ತ್ರಿಚತುರೋಃ ಸ್ತ್ರಿಯಾಮಿತಿ ತಿಸೃ ಇತ್ಯಾದೇಶಃ। ಅಚಿ ರ ಋತ ಇತಿ ರೇಫಾದೇಶಃ। ತಿಸೃಭ್ಯೋ ಜಸ ಇತಿ ವಿಭಕ್ತೇರುದಾತ್ತತ್ವಂ। ಆಜಾನೀಃ। ಜನ ಜನನೇ। ಜನಿಘಸಿಭ್ಯಾಮಿಣ್ ಇತಿ ಕರ್ತರಿ ಇಣ್। ಣಿತ್ತ್ವಾದುಪಧಾವೃದ್ಧಿಃ। ವಾ ಛ ದಸೀತಿ ವರ್ಣದೀರ್ಘಃ। ಕೃದುತ್ತರಪದಪ್ರಕೃತಿಸ್ವರಃ। ಅವಃ। ಅವ ರಕ್ಷಣೇ। ಅಸುನ್ನಿತ್ಯಸುನ್। ನಿತ್ಸ್ವರಃ। ಯಕ್ಷಿ। ಯಜೇರ್ದಾನಾರ್ಥಸ್ಯ ಲೇಟಿ ರೂಪಂ। ಯಜಮಾನಾಯ। ಪೂಜ್ಯಜೋಃ ಶಾನನ್। ಪಾ ೩-೨-೧೨೮। ಇತಿ ಯಜೇಃ ಶಾನನ್ ನಿತ್ಸ್ವರಃ। ಯೋಃ। ಯು ಮಿಶ್ರಣ ಇತ್ಯಸ್ಮಾದನ್ಯೇಭ್ಯೋಽಪಿ ದೃಶ್ಯಂತೆ ಇತಿ ವಿಚ್। ಆರ್ಧಧಾತುಕಲಕ್ಷಣೋ ಗುಣಃ। ಕೃದುತ್ತರಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

ಜಾತವೇದಃ—ಉತ್ಪನ್ನವಾದ ಸಕಲವನ್ನೂ ತಿಳಿದ ಎಲೈ ಅಗ್ನಿಯೇ। ತವ—ನಿನಗೆ। ಆಯೂಂಷಿ—ಆಯುರ್ದಾಯಕಗಳಾದ ಆಹಾರಗಳು। ತ್ರೀಣಿ—ಆಜ್ಯ, ಓಷಧಿ ಮತ್ತು ಸೋಮ ಎಂಬ ಮೂರು ಬಗೆಗಳಾಗಿವೆ.। ಅಗ್ನೇ—ಎಲೈ ಅಗ್ನಿಯೇ। ತಿಸ್ರಃ ಉಷಸಃ—ಮೂರು ಉಷೋಽಭಿಮಾನದೇವತೆಗಳು। ತೇ—ನಿನಗೆ। ಆಜಾನೀಃ—ಒಡಹುಟ್ಟಿದ ಸಹೋದರಿಯರು.। ತಾಭಿಃ—ಆ ದೇವತೆಗಳೊಡಗೂಡಿ। ಅವಃ—ನಮ್ಮಿಂದ ದತ್ತವಾದ ಹವಿಸ್ಸನ್ನು।

**ದೇವಾನಾಂ**—ದೇವತೆಗಳನ್ನು ಉದ್ದೇಶಿಸಿ | **ಯಕ್ಷಿ**—ಯಾಗರೂಪವಾಗಿ ಅರ್ಪಿಸು | **ಅಥ**—ಅನಂತರ | **ವಿದ್ವಾನ್** ಪ್ರಾಜ್ಞನಾದ ನೀನು | **ಯಜಮಾನಾಯ**—ಯಜಮಾನನಿಗೆ | **ಶಂಯೋಃ**—ಸುಖವನ್ನು ಒದಗಿಸಿ ಕೊಡುವವನಾಗಿ | **ಭವ**—ಆಗು.

ಭಾವಾರ್ಥ

ಉತ್ಪನ್ನವಾದ ಸಕಲವನ್ನೂ ತಿಳಿದ ಎಲೈ ಅಗ್ನಿಯೇ, ನಿನಗೆ ಆಯುರ್ದಾಯಕಗಳಾದ ಆಹಾರಗಳು—ಆಜ್ಯ, ಓಷಧಿ ಮತ್ತು ಸೋಮ ಎಂದು ಮೂರು ಬಗೆಗಳಾಗಿವೆ. ಮತ್ತು ಮೂರು ಉಷೋಽಭಿಮಾನಿದೇವತೆಗಳೂ ನಿನಗೆ ಒಡಹುಟ್ಟಿದ ಸಹೋದರಿಯರು. ಆ ದೇವತೆಗಳೊಡಗೂಡಿ, ದೇವತೆಗಳನ್ನುದ್ದೇಶಿಸಿ ನಮ್ಮಿಂದ ದತ್ತವಾದ ಹವಿಸ್ಸನ್ನು ಯಾಗರೂಪವಾಗಿ ಅರ್ಪಿಸು. ಅನಂತರ ಪ್ರಾಜ್ಞನಾದ ನೀನು ಯಜಮಾನನಿಗೆ ಸುಖವನ್ನು ಒದಗಿಸಿ ಕೊಡುವವನಾಗಿ ಆಗು.

English Translation

Three are your existences JATAVEDAS; three, AGNI, are your parent dawns : with them offer the oblation of the gods, and knowing (his wishes) be the bestower of happiness on the institutor of the sacrifice.

ವಿಶೇಷವಿಷಯಗಳು

**ಜಾಡವೇದಃ ತವ ತ್ರೀಣ್ಯಾಯೂಂಷಿ—ತ್ರಿವಿಧಾನಿ ಆಜ್ಯೌಷಧಿಸೋಮಾತ್ಮಕಾನಿ ಅನ್ನಾಹಾರತಯೊ ಕಲ್ಪಿತಾನಿ** | ಜಾತವೇದಶ್ಶಬ್ದವು ಜಾತಪ್ರಜ್ಞ ಎಂಬ ಅರ್ಥಬೋಧಕವಾಗಿರುವುದೆಂದು ಅರ್ಥವನ್ನು ವಿವರಿಸಿ, ಈ ಪದದಿಂದಲೇ ಅಗ್ನಿಯನ್ನು ಸಂಬೋಧಿಸಿದೆ. ಆಯುಃ ಎಂಬ ಪದವು ಅನ್ನನಾಮಗಳಲ್ಲಿ (ನಿ. ೨-೯) ಪಠಿತವಾಗಿದೆ. ಈ ಪದವು ನಿರುಕ್ತಕಾರರಿಂದ

**ವಾತ ಆ ವಾತು ಭೇಷಜಂ ಶಂಭು ಮಯೋಭು ನೋ ಹೃದೇ | ಪ್ರ ಣ ಆಯೂಂಷಿ ತಾರಿಷತ್ ||**
(ಋ. ಸಂ. ೧೦-೧೮೬-೧)

ಈ ಋಕ್ಕಿನಲ್ಲಿ ಆಯುಸ್ಸು (ಜೀವಿತಕಾಲ) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವೃತವಾಗಿದೆ. ಸಾಯಣರು ಈ ಪದಕ್ಕೆ ಅನ್ನವೆಂದು ಅರ್ಥವನ್ನು ವಿವರಿಸಿ, ಅಗ್ನಿಗೆ ಆಜ್ಯ, ಓಷಧಿ, (ಸಮಿತ್) ಸೋಮ ಎಂಬ ಮೂರು ವಿಧವಾದ ದ್ರವ್ಯಗಳೂ ಆಹಾರವಾಗಿ ಅನ್ನರೂಪದಿಂದ ಕಲ್ಪಿತವಾಗಿ ಯಜಮಾನರಿಂದ ಅರ್ಪಿತವಾಗಿರುತ್ತವೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ತಿಸ್ರಃ ಉಷಸಃ ತೇ ಆಜಾನೀಃ**—ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಆಜಾನೀಃ ಎಂಬ ಪದಕ್ಕೆ **ಜನಯಿತ್ರ್ಯಃ ಮಾತರಃ** ಎಂಬ ಅರ್ಥವನ್ನು ವಿವರಿಸಿ, **ಏಕಾಹಾಹೀನಸತ್ರಗತಾಃ ಉಷೋಭಿಮಾನಿನ್ಯಸ್ತಿಸ್ರೋ ದೇವತಾಃ ಮಾತರಃ** ಏಕಾಹ, ಅಹೀನ, ಸತ್ರ, ಎಂಬ ಯಾಗ ದಿನಗಳಂಉಷೋಭಿಮಾನಿದೇವತೆಗಳು ಮೂರು ಜನರೂ, ಅಗ್ನಿಯನ್ನು ಆಯಾಯ ಯಾಗದಿನಗಳಲ್ಲಿ ಉತ್ಪನ್ನ ಮಾಡಿ ವೃದ್ಧಿಗೊಳಿಸುವುದರಿಂದ ಮಾತೃಸ್ಥಾನೀಯರಾಗಿರುವರೆಂದು ವರ್ಣಿಸಿದ್ದಾರೆ.

ಎರಡನೆಯ ಅರ್ಥದಲ್ಲಿ ಆಜಾನೀಃ ಎಂಬ ಪದವು **ಅನುಜಾತಾಃ** ಅನುಸರಿಸಿ ಉತ್ಪತ್ತಿಯನ್ನು ಹೊಂದಿರುವ ಸಹೋದರಿಯರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿದೆ. ಈ ಅರ್ಥದಲ್ಲಿ **ಉಷೋಭಿಮಾನಿನ್ಯೋ**

**ದೇವತಾಸ್ತ್ವಾಮನುಜಾತಾಃ ತಿಸ್ರಃ ಸ್ವಸಾರಃ** ಏಕಾಹವೇ ಮೊದಲಾದ ಮೂರು ಯಾಗಸಂಬಂಧಿಯಾದ ಉಷಃಕಾಲ ಗಳ ಅಭಿಮಾನಿದೇವತೆಗಳೂ ಅಗ್ನಿಯನ್ನು ಅನುಸರಿಸಿ ಉತ್ಪನ್ನರಾದ ಕಾರಣ ಅಗ್ನಿಯ ಸ್ವಸೃಗಳು (ಭಗಿನಿಯರು) ಎಂದು ಅರ್ಥವನ್ನು ಸಾಯಣರು ವಿವರಿಸಿ, ಈ ಅರ್ಥವು "ಪ್ರಜಾಮೇಕಾ ರಕ್ಷತಿ, ಊರ್ಜಮೇಕಾ, ರಾಷ್ಟ್ರಮೇಕಾ ರಕ್ಷತಿ" ಎಂಬ ಮಂತ್ರದಿಂದ ಉಕ್ತವಾಗಿದೆ ಎಂದು ಶ್ರುತಿಯನ್ನು ಉದಾಹರಿಸಿದ್ದಾರೆ. ಮತ್ತು ಅಗ್ನಿಯು—**ಉಷೋಭಿಮಾನಿದೇವತಾಭಿಸ್ಸಹಿತಃ ಅಸ್ಮಾಭಿರ್ದೀಯಮಾನಂ ಹವಿರ್ಲಕ್ಷಣಮನ್ನಂ ಯಷ್ಟವ್ಯದೇವತಾನಾಂ ಪ್ರಯಚ್ಛ |** ಉಷೋಭಿಮಾನಿದೇವತೆಗಳಿಂದ ಕೂಡಿದವನಾಗಿ ಯಜಮಾನರು (ಯಾಗದಲ್ಲಿ) ಆಯಾಯ ಯಾಗ ಗಳಲ್ಲಿ ಉದ್ದೇಶಮಾಡಿ. ಆಯಾಯ ದೇವತೆಗಳಿಗೆ ಅರ್ಪಿಸಿರುವ ಹವಿಸ್ಸಿನರೂಪವಾದ ಅನ್ನವನ್ನು ಅಯಾಯ ದೇವತೆ ಗಳಿಗೆ ತಲಪಿಸಲಿ ಎಂದು ಅರ್ಥವನ್ನು ವಿವರಿಸಿದ್ದಾರೆ.

**ವಿದ್ವಾನ್ ಜಾನಂಸ್ತ್ವಂ ಯಜಮಾನಾಯ ಸುಖಹೇತುರ್ಭವ | ಯೋಃ ಸುಖಸ್ಯ ಮಿಶ್ರಯಿತಾ ಚ ಭವ |** ಅಗ್ನಿಯು ವಿದ್ವಾನ್–ಸರ್ವಜ್ಞನೆಂದೂ ಅವನು (ಯಜಮಾನನ ಸ್ಥಿತಿಯನ್ನು ಮತ್ತೂ) ಯಜಮಾನನ ವಿಷಯ ಗಳೆಲ್ಲವನ್ನೂ ತಿಳಿಯುವವನಾದಕಾರಣ ಯಜಮಾನನಿಗೆ ಸುಖವು ಉಂಟಾಗಲು ಕಾರಣನಾಗಿರಲಿ ಎಂದೂ, ಯಜಮಾನ ನಿಗೆ ತನ್ನಿಂದ ಉಂಟಾಗುವ ಸುಖಗಳನ್ನು ಸೇರಿಸುವವನಾಗಿರಲಿ ಎಂದೂ, ಆಶಂಸನೆಯನ್ನು ವರ್ಣಿಸಿದೆ.

ಯಾಸ್ಕರು—**ಶಂಯೋಃ ಶಂಯುಃ ಸುಖಂಯುಃ "ಅಥಾನಃ ಶಂಯೋರರಪೋ ದಧಾತ"** ಶಂಯು ಎಂಬ ಪದಕ್ಕೆ ಸುಖವನ್ನು ಮಿಶ್ರಮಾಡುವವನು ಎಂದು ಅರ್ಥವನ್ನು ವಿವರಿಸಿ, ಉದಾಹರಣೆಯನ್ನು ನಿರ್ದೇಶ ಮಾಡಿರುವರು. ಮತ್ತು—

**"ಅಥಾಪಿ ಶಂಯೋರ್ಬಾರ್ಹಸ್ಪತ್ಯ ಉಚ್ಯತೇ"** —ಬೃಹಸ್ಪತಿಪುತ್ರನೆಂಬ ಆಚಾರ್ಯರ ಮತದಲ್ಲಿ ಶಂ, ಯುಃ ಎಂದು ಎರಡು ಪದವು ನಿರ್ದಿಷ್ಟವಾಗಿದೆ ಎಂದು ವಿವರಿಸಿ,

> **ತಚ್ಛಂಯೋರಾವೃಣೀಮಹೇ ಗಾತುಂ ಯಜ್ಞಾಯ ಗಾತುಂ ಯಜ್ಞಪತಯೇ ದೈವೀಸ್ಸ್ವಸ್ತಿರಸ್ತು ನಃ ಸ್ವಸ್ತಿರ್ಮಾನುಷೇಭ್ಯಃ ಊರ್ಧ್ವಂ ಜಿಗಾತು ಭೇಷಜಂ ಶಂನ್ನೋ ಅಸ್ತು ದ್ವಿಪದೇ ಶಂ ಚತುಷ್ಪದೇ**

ಎಂಬ ಮಂತ್ರವನ್ನು ಉದಾಹರಿಸಿದ್ದಾರೆ. ಶಂಯೋಃ ಎಂಬ ಪದದಿಂದ **ಶಮನಯೋವನೇ ಉಚ್ಯೇತೇ** ರೋಗ ಭಯಗಳ ಶಮನವೂ, ಸುಖದ ಮಿಶ್ರಣವೂ ಉಕ್ತವಾಗಿದೆ ಎಂದು ಅರ್ಥವನ್ನು ದುರ್ಗಾಚಾರ್ಯರು ವಿವರಿಸಿದ್ದಾರೆ.

ಶಂಯೋಃ ಎಂಬ ಪದವು ಇದೇ ಅರ್ಥದಲ್ಲಿ "**ಓಮಾನಂ ಶಂಯೋರ್ಮಮಕಾಯ ಸೂನವೇ**" (ಋ. ಸಂ. ೧–೩೪–೬) "ತಚ್ಛಂಯೋಸ್ಸುಮ್ನಮೀಮಹೆ" ( ಋ. ಸಂ. ೧–೪೩–೪ ) ಈ ಋಕ್ಕುಗಳಲ್ಲಿ ಪ್ರಯುಕ್ತ ವಾಗಿದೆ ಎಂದೂ ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ತವ**—ಯುಷ್ಮದ್ ಶಬ್ದ. ಷಷ್ಠ್ಯಂತರೂಪ. **ಯುಷ್ಮದಸ್ಮದೋರ್ಙಸಿ** ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ತಿಸ್ರಃ**—ತ್ರಿ ಶಬ್ದ. ಇದಕ್ಕೆ ಸ್ತ್ರೀಲಿಂಗದಲ್ಲಿ ಜಸ್ ಪರವಾದಾಗ **ತ್ರಿಚತುರೋಃಸ್ತ್ರಿಯಾಂತಿಸೃ ಚತಸೃ** (ಪಾ. ಸೂ. ೭–೨–೯೯) ಎಂಬುದರಿಂದ ತಿಸ್ರಾದೇಶ. **ಅಚಿರ ಋತಃ** (ಪಾ. ಸೂ. ೭–೨–೧೦೦) ಎಂಬುದರಿಂದ ಋಕಾರಕ್ಕೆ ರೇಫಾದೇಶ. ತಿಸ್ರಃ ಎಂದು ರೂಪವಾಗುತ್ತದೆ. **ತಿಸೃಭ್ಯೋಜಸಃ** (ಪಾ. ಸೂ. ೬–೧–೧೬೬) ಎಂಬುದ ರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಆಜಾನೀಃ**—ಜನ ಜನನೇ ಧಾತು. **ಜನಿಘಸಿಭ್ಯಾಮಿಣ್** (ಉ. ಸೂ. ೪-೫೭೯) ಎಂಬುದರಿಂದ ಕರ್ತರಿಯಲ್ಲಿ ಇಣ್ ಪ್ರತ್ಯಯ. ಇದು ಣಿತ್ತಾದುದರಿಂದ **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. ಜಸ್ ಪರವಾದಾಗ **ವಾಛಂದಸಿ** (ಪಾ. ಸೂ. ೬-೧-೧೦೬) ಎಂಬುದರಿಂದ ಸವರ್ಣದೀರ್ಘ. ಪ್ರಾದಿಸಮಾಸವಾದಾಗ **ಗತಿಕಾರಕೋಪಪದಾತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿ–ಸ್ವರ ಬರುತ್ತದೆ.

**ಅವಃ**—ಅವ ರಕ್ಷಣೇ ಧಾತು. **ಸರ್ವಧಾತುಭ್ಯಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಕ್ಷಿ**—ಯಜಧಾತುವು ಇಲ್ಲಿ ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. ಲೇಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಯಜಮಾನಾಯ**—ಯಜ ಧಾತು. **ಪೂಙ್ ಯಜ್ಯೋಃ ಶಾನನ್** (ಪಾ. ಸೂ. ೩-೨-೧೨೮) ಎಂಬುದರಿಂದ ಶಾನನ್ ಪ್ರತ್ಯಯ. ಸಾರ್ವಧಾತುಕಸಂಜ್ಞೆ ಇರುವುದರಿಂದ ಶಪ್ ವಿಕರಣ ಬರುತ್ತದೆ. **ಆನೇಮುಕ್** ಎಂಬುದರಿಂದ ಮುಕಾಗಮ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥ್ಯಂತರೂಪ.

**ಯೋಃ**—ಯು ಮಿಶ್ರಣೇ. ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಇದಕ್ಕೆ ವಿಚ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

———

ಸಂಹಿತಾಪಾಠಃ

ಅಗ್ನಿಂ ಸುದೀತಿಂ ಸುದೃಶಂ ಗೃಣಂತೋ ನಮಸ್ಯಾಮಸ್ತ್ವೇಡ್ಯಂ ಜಾತವೇದಃ ।
ತ್ವಾಂ ದೂತಮರತಿಂ ಹವ್ಯವಾಹಂ ದೇವಾ ಅಕೃಣ್ವನ್ನಮೃತಸ್ಯ ನಾಭಿಂ ॥ ೪ ॥

ಪದಪಾಠಃ

ಅಗ್ನಿಂ । ಸುಽದೀತಿಂ । ಸುಽದೃಶಂ । ಗೃಣಂತಃ । ನಮಸ್ಯಾಮಃ । ತ್ವಾ । ಈಡ್ಯಂ । ಜಾತಽವೇದಃ ।
ತ್ವಾಂ । ದೂತಂ । ಅರತಿಂ । ಹವ್ಯಽವಾಹಂ । ದೇವಾಃ । ಅಕೃಣ್ವನ್ । ಅಮೃತಸ್ಯ । ನಾಭಿಂ ॥ ೪ ॥

ಸಾಯಣಭಾಷ್ಯಂ

ಜಾತವೇದೋ ಜಾತಸ್ಯ ಸರ್ವಸ್ಯ ವೇದಿತರ್ಹೇ ಅಗ್ನೇ ಗೃಣಂತಸ್ತ್ವದ್ವಿಷಯಾಂ ಸ್ತುತಿಂ ಕುರ್ವಾಣಾ ವಯಮಗ್ನಿಮಂಗನಾದಿಗುಣೋಪೇತಂ, ಸುದೀತಿಂ ಶೋಭನದೀಪ್ತಿಂ ಅತ ಏವ ಸುದೃಶಂ ಸರ್ವೈಃ ಸುದರ್ಶನಮೀಡ್ಯಂ ಸ್ತುತ್ಯಂ ಏವಂವಿಧಂ ತ್ವಾ ತ್ವಾಂ ನಮಸ್ಯಾಮಃ । ಹವಿರ್ಭಿಃ ಪೂಜಯಾಮಃ ।

ಕಿಂಚ ದೇವಾ ಅಸ್ಮಾಭಿರ್ಯಜನೀಯಾ ಇಂದ್ರಾದಯೋ ದೇವಾ ಅರತಿಂ । ನ ವಿದ್ಯತೇ ವಿಷಯೇಷು ರತಿಃ ಪ್ರೀತಿರ್ಯಸ್ಯಾಸಾವರತಿಃ । ವಿಷಯೇಷ್ವಸಕ್ತಂ ಅತ ಏವಾಮೃತಸ್ಯ ದೇವಾನ್ನಭೂತಾಯಾಃ ಸುಧಾಯಾ ನಾಭಿಂ ನಾಭಿಸ್ಥಾನಂ ತ್ವಾಂ ತಾದೃಶಂ ಹವ್ಯವಾಹಂ ದೂತಮಕೃಣ್ವನ್ । ಹವಿಷಾಂ ವೋಢಾರಂ ದೂತಮಕುರ್ವನ್ । ದೂತೋ ಹಿ ದ್ವಿವಿಧೋ ವಾರ್ತಾಹಾರೀ ಕಾರ್ಯಕಾರೀ ಚೇತಿ । ತತ್ರ ತ್ವಾಂ ಕಾರ್ಯಕಾರಿಣಂ ದೂತಮಕಾರ್ಷುರಿತಿ ಭಾವಃ ॥ ಸುದೀತಿಂ । ದೀಙ್ ಕ್ಷಯೇ । ದೀಯತೇ ವಿನಾಶ್ಯತ ಆಭಿಸ್ತಮ ಇತಿ ಕರಣೇ ಕ್ತಿನ್ । ದೀತಯೋ ದೀಪ್ತಯಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸುದೃಶಂ । ದೃಶಿರ್ ಪ್ರೇಕ್ಷಣೇ । ತಸ್ಮಾಚ್ಛಕ್ಯಾರ್ಥೇ ಖಲ್ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ಗುಣಾಭಾವಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಗೃಣಂತಃ । ಗೃಣಾತಿರರ್ಚತಿಕರ್ಮಾ । ನಮಸ್ಯಾಮಃ । ನಮಸ್ ಪೂಜಾಯಾಂ। ನಮೋ ವರಿವಶ್ಚಿತ್ರಙಃ ಕ್ಯಜಿತಿ ಕ್ಯಚ್ । ತದಂತಾಲ್ಲಟಿ ರೂಪಂ । ಪಾದಾದಿತ್ವಾನ್ನ ನಿಘಾತಃ । ದೂತಂ । ಟುದು ಉಪತಾಪೇ । ದುತನಿಭ್ಯಾಂ ದೀರ್ಘಶ್ಚ । ಉ. ೩-೯೦ । ಇತಿ ಕ್ತಃ । ತತ್ಸಂನಿಯೋಗೇನ ಧಾತೋರ್ದೀರ್ಘಃ । ದೂತ ಇತಸ್ತತಃ ಸಂಚಾರೀತ್ಯರ್ಥಃ । ಪ್ರತ್ಯಯಸ್ವರಃ । ಅರತಿಂ । ರಮು ಕ್ರೀಡಾಯಾಂ । ಭಾವೇ ಕ್ತಿನ್ । ಅಕೃಣ್ವನ್ । ಕೃವಿ ಹಿಂಸಾಕರಣಯೋರಿತ್ಯಸ್ಯ ಲಙಿ ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯೋಽಕಾರಶ್ಚಾಂತಾದೇಶಃ । ನಿಘಾತಃ ॥

ಪ್ರತಿಪದಾರ್ಥ

**ಜಾತವೇದಃ**—ಜಾತಪ್ರಜ್ಞನಾದ ಎಲೈ ಅಗ್ನಿಯೇ । **ಅಗ್ನಿಂ**—ಅಂಗನಾದಿಗುಣಗಳಿಂದ ಕೂಡಿದವನೂ । **ಸುದೀತಿಂ**—ಶ್ರೇಷ್ಠವಾದ ಕಾಂತಿಯುಳ್ಳವನೂ । **ಸುದೃಶಂ**—ಎಲ್ಲರಿಂದಲೂ ಅತಿಶಯವಾಗಿ ನೋಡಲ್ಪಡುವವನೂ । **ಈಡ್ಯಂ**—ಸ್ತುತ್ಯನೂ ಆದ । **ತ್ವಾ**—ನಿನ್ನನ್ನು । **ಗೃಣಂತಃ**—ನಿನ್ನ ಗುಣಗಳನ್ನು ಸ್ತುತಿಸುತ್ತಾ । **ನಮಸ್ಯಾಮಃ**—ಪೂಜಿಸುತ್ತೇವೆ । **ಅರತಿಂ**—ವಿಷಯಾಸಕ್ತನಲ್ಲದಿರುವವನೂ । **ಅಮೃತಸ್ಯ**—ದೇವತೆಗಳ ಅನ್ನವಾದ ಅಮೃತಕ್ಕೆ । **ನಾಭಿಂ**—ನಾಭಿಸ್ಥಾನನಾದವನೂ ಆದ । **ತ್ವಾಂ**—ನಿನ್ನನ್ನು । **ದೇವಾಃ**—ಇಂದ್ರಾದಿ ದೇವತೆಗಳು । **ಹವ್ಯವಾಹಂ**—ಹವಿಸ್ಸನ್ನು ವಹಿಸತಕ್ಕ । **ದೂತಂ**—ದೂತನನ್ನಾಗಿ । **ಅಕೃಣ್ವನ್**—ಮಾಡಿದರು ॥

ಭಾವಾರ್ಥ

ಜಾತಪ್ರಜ್ಞನಾದ ಎಲೈ ಅಗ್ನಿಯೇ, ಅಂಗನಾದಿಗುಣಗಳಿಂದ ಕೂಡಿದವನೂ, ಶ್ರೇಷ್ಠವಾದ ಕಾಂತಿಯುಳ್ಳವನೂ, ಎಲ್ಲರಿಂದಲೂ ಅತಿಶಯವಾಗಿ ನೋಡಲ್ಪಡುವವನೂ, ಸ್ತುತ್ಯನೂ ಆದ ನಿನ್ನನ್ನು, ನಿನ್ನ ಗುಣಗಳನ್ನು ಸ್ತುತಿಸುವ ನಾವು ಪೂಜಿಸುತ್ತೇವೆ. ವಿಷಯಾಸಕ್ತನಲ್ಲದಿರುವವನೂ, ದೇವತೆಗಳ ಅನ್ನವಾದ ಅಮೃತಕ್ಕೆ ನಾಭಿಸ್ಥಾನನಾದವನೂ ಆದ ನಿನ್ನನ್ನು ಇಂದ್ರಾದಿದೇವತೆಗಳು ಹವಿಸ್ಸನ್ನು ವಹಿಸತಕ್ಕ ದೂತನನ್ನಾಗಿ ಮಾಡಿದರು.

English Translation

JATAVEDAS, we venerate you, glorifying the briltiant, beautiful, adorable AGNI : the gods have made you their messenger, the disinterested bearer of oblations, the centre of ambrosia.

ವಿಶೇಷವಿಷಯಗಳು.

**ಜಾತವೇದಃ**—ಇಲ್ಲಿ ಜಾತವೇದಶ್ಶಬ್ದಕ್ಕೆ ಅನೇಕ ವಿಧವಾದ ಅರ್ಥಗಳು ಇದ್ದರೂ. **ಜಾತಸ್ಯ ಸರ್ವಸ್ಯ ವೇದಿತಃ** ಉತ್ಪನ್ನವಾದವುಗಳೆಲ್ಲವನ್ನೂ ತಿಳಿದಿರುವವನು ಎಂದು ಅರ್ಥವನ್ನು ಹೇಳಿ ಅಗ್ನಿಯನ್ನು ಸಂಬೋಧಿಸಿದೆ.

**ಗೃಣಂತಃ**— ಈ ಪದವು ಯಜ್ಞವನ್ನು ಆಚರಿಸುವ ಯಜಮಾನರು **ತ್ವದ್ವಿಷಯಾಂ ಸ್ತುತಿಂ ಕುರ್ವಾಣಾಃ** ಅಗ್ನಿಯ ವಿಷಯವಾದ ಸ್ತುತಿಯನ್ನು ಮಾಡುವವರೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ಅಗ್ನಿಂ— ಅಜ್ಞನಾದಿಗುಣೋಪೇತಂ. ಯಾಸ್ಕರು **ಅಗ್ನಿಃ ಕಸ್ಮಾತ್ ಅಗ್ರಣೀರ್ಭವತಿ, ಅಗ್ರಂ-ಯಜ್ಞೇಷು ಪ್ರಣೀಯತೇ, ಅಂಗಂ ನಯತಿ ಸನ್ನಮಮಾನಃ, ಅಕ್ನೋಪನೋ ಭವತೀತಿ ಸ್ಥೌಲಾಷ್ಠೀವಿ-ರ್ನಕ್ನೋಪಯತಿ ನ ಸ್ನೇಹಯತಿ ತ್ರಿಭ್ಯಃ ಆಖ್ಯಾತೇಭ್ಯೋ ಜಾಯತ ಇತಿ ಶಾಕಪೂಣಿಃ। ಇತಾದ-ಗ್ಧಾದ್ವಾ ನೀತಾತ್। ಸಖಲ್ವೇತೇರಾಕಾರಮಾದತ್ತೇ ಗಕಾರಮನಕ್ತೇರ್ವಾ ದಹತೇರ್ವಾ ನೀಃ ಪರಃ** (ನಿ. ೭-೧೪) ಎಂದು ಅಗ್ನಿಶಬ್ದದ ಅರ್ಥವನ್ನು ವಿವರಿಸಿದ್ದಾರೆ. ಇವರ ವಿವರಣೆಯು ಹಿಂದೆ ವಿವೃತವಾಗಿದೆ. ಸಾಯಣರು ಅಗ್ನಿಯು ತನ್ನ ವ್ಯಾಪ್ತಿಯಿಂದ ಕೂಡಿದವುಗಳನ್ನು ತನ್ನ ಅಧೀನದಲ್ಲಿ ಇರಿಸುವವನೆಂಬ ಅರ್ಥವನ್ನು ಹೇಳಿ, ಯಜಮಾನರು ಅಗ್ನಿಯು, ಮಂಗಳಕರವಾದ ಕಾಂತಿಯುಳ್ಳವನು, ಎಲ್ಲರಿಂದಲೂ ದರ್ಶನಮಾಡಲರ್ಹನಾದ ವನು, ಸ್ತುತಿಸಲು ಅರ್ಹನಾದವನು, ಎಂಬ ಇವೇ ಮೊದಲಾದ ಗುಣಗಳಿಂದ ಕೂಡಿರುವಕಾರಣ **ಏವಂವಿಧಂ ತ್ವಾಂ ನಮಸ್ಯಾಮಃ** ಅಗ್ನಿಯನ್ನು ಹವಿಸ್ಸುಗಳನ್ನು ಅರ್ಪಿಸಿ ಪೂಜಿಸುತ್ತೇವೆ ಎಂಬ ಅರ್ಥವನ್ನು ವಿವರಿಸಿದ್ದಾರೆ. ಇದರಿಂದ ಅಗ್ನಿಯ ಪ್ರಭೂತವಾದ ಮಾಹಾತ್ಮ್ಯವು ವಿವೃತವಾಗಿದೆ.

ದೇವಾಃ— ಈ ಪದವೂ ಯಾಸ್ಕರಿಂದ **ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವ-ತೀತಿ ವಾ ದೇವಃ** (ನಿ. ೭-೧೫) ಎಂದು ವಿವೃತವಾಗಿದೆ. ಸಾಯಣರು ಈ ಪದಕ್ಕೆ **ಅಸ್ಮಾಭಿರ್ಯಜನೀಯಾ ಇಂದ್ರಾದಯಃ** ಯಜಮಾನರಾದ ನಮ್ಮಿಂದ ಪೂಜಿತರಾಗಿರುವ ಇಂದ್ರನೇ ಮೊದಲಾದ ದೇವತೆಗಳು ಅಗ್ನಿಯನ್ನು **ದೂತಮಕೃಣ್ವನ್**— ದೂತನನ್ನಾಗಿ ಮಾಡಿಕೊಂಡಿರುವರು ಎಂದು ಅರ್ಥವನ್ನು ಹೇಳಿದ್ದಾರೆ. ಮತ್ತು **ದೂತೋ ಹಿ ದ್ವಿವಿಧಃ ವಾರ್ತಾಹಾರೀ ಕಾರ್ಯಕಾರೀ ಚೇತಿ ತತ್ರ ಕಾರ್ಯಕಾರಿಣಂ ದೂತಮಕಾರ್ಷುಃ** ದೂತನಾದವನು ವರ್ತಮಾನವನ್ನು ತರುವವನು ಅಥವಾ ಕಾರ್ಯಗಳನ್ನು ಆಚರಿಸುವವನು ಎಂದು ಎರಡು ವಿಧವಾಗಿರುವುದರಿಂದ ಅಗ್ನಿಯು ಕಾರ್ಯಕಾರಿಯಾದ ದೇವದೂತನಾಗಿ ದೇವತೆಗಳಿಂದ ನಿಯಮಿತನಾಗಿರುವನೆಂದು ವಿವರಿಸಿದೆ.

**ಅರತಿಂ, ಅಮೃತಸ್ಯ ನಾಭಿಂ, ಹವ್ಯವಾಹಂ** ಎಂಬ ಈ ಪದಗಳು ದೂತಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿರುವುದರಿಂದ ಪ್ರಸಿದ್ಧನಾದ ಲೌಕಿಕದೂತನಿಗಿಂತ ಅಗ್ನಿಯು ವ್ಯತಿರಿಕ್ತನಾದ ಅಥವಾ ಗುಣಗಳಿಂದ ಅಧಿಕನಾದ ದೂತನಾಗಿರುವನೆಂಬ ಅಂಶವು ಉಕ್ತವಾಗಿದೆ.

ಅರತಿಂ ಎಂಬ ಪದಕ್ಕೆ **ನ ವಿದ್ಯತೇ ರತಿಃ ವಿಷಯೇಷು ಪ್ರೀತಿಃ ಯಸ್ಯ**— ಭೋಗಾರ್ಹಗಳಾದ ಭೋಗ್ಯ ವಸ್ತುಗಳಲ್ಲಿ ಪ್ರೀತಿಯಿಲ್ಲದವನೆಂದೂ, **ವಿಷಯೇಷ್ವಸಕ್ತಂ** ವಿಷಯಾಸಕ್ತಿ ಇಲ್ಲದವನೆಂದೂ ಅರ್ಥಮಾಡಿ ಅಗ್ನಿಯ ಗುಣವು ವಿವೃತವಾಗಿದೆ.

**ಅಮೃತಸ್ಯ— ದೇವಾನ್ನಭೂತಾಯಾಃ ಸುಧಾಯಾಃ** ಅಮೃತವು ದೇವತೆಗಳಿಗೆ ಅನ್ನವಾಗಿರುವುದರಿಂದ ಅಗ್ನಿಯು ಈ ಅಮೃತಕ್ಕೆ **ನಾಭಿ** ಉತ್ಪತ್ತಿಸ್ಥಾನವಾಗಿರುವನೆಂದು ವರ್ಣಿಸಿದೆ.

**ಹವ್ಯವಾಹಂ**— ಯಜಮಾನರು ಅರ್ಪಿಸಿದ ಹವಿಸ್ಸನ್ನು ಒಯ್ಯುವವನೆಂಬ ಅರ್ಥವನ್ನು ವಿವರಿಸಿದೆ. ಇದ ರಿಂದ ಅಗ್ನಿಯು ವಿಷಯಾಸಕ್ತಿಯಿಲ್ಲದಿರುವ ಮತ್ತೂ ದೇವತೆಗಳ ಅನ್ನವಾದ ಅಮೃತದ ಉತ್ಪತ್ತಿಸ್ಥಾನನಾದ, ಹವಿಸ್ಸು ಗಳನ್ನು ದೇವತೆಗಳಿಗಾಗಿ ಒಯ್ಯುವ ದೇವದೂತನಾಗಿ ದೇವತೆಗಳಿಂದ ಮಾಡಲ್ಪಟ್ಟಿರುವನೆಂದು ಇತರ ದೂತರಿಗಿಂತ ವ್ಯತಿರೇಕವು ಉಕ್ತವಾಗಿದೆ. ಪ್ರಸಿದ್ಧರಾದ ಇತರ ದೂತರಿಗಿಂತ ಅಧಿಕವಾದ ಗುಣಗಳುಳ್ಳ ಅಗ್ನಿಯನ್ನು ದೇವತೆಗಳು

ಕಾರ್ಯಕಾರಿಯಾದ ದೂತನನ್ನಾಗಿ ಮಾಡಿಕೊಂಡಿರುವಕಾರಣ ಯಜ್ಞಮಾಡುವ ಯಜಮಾನರು ಈ ಅಗ್ನಿಯನ್ನು ಸ್ತುತಿಮಾಡಿ, ಹವಿಸ್ಸುಗಳನ್ನು ಅರ್ಪಿಸಿ ಪೂಜಿಸುವರೆಂಬ ಅರ್ಥವು ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಸುದೀತಿಂ**—ದೀಙ್ ಕ್ಷಯೇ ಧಾತು. ದೀಯತೇ ವಿನಾಶ್ಯತೇ ಆಭಿಃ ತಮಃ ಇತಿ ದೀತಿಃ (ಕತ್ತಲೆಯನ್ನು ಹೋಗಲಾಡಿಸುವುದು) ಕರಣಾರ್ಥದಲ್ಲಿ ಕ್ತಿನ್ ಪ್ರತ್ಯಯ. ದೀತಿ ಎಂದರೆ ಕಾಂತಿ. ಶೋಭನಾಃ ದೀತಯಃ ಯಸ್ಯ ಸಃ ಸುದೀತಿಃ **ನಞ್ಸುಭ್ಯಾಂ** ( ಪಾ. ಸೂ. ೬-೨-೧೭೨ ) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಸುದೃಶಂ**—ದೃಶಿರ್ ಪ್ರೇಕ್ಷಣೇ ಧಾತು. ಇದರಮೇಲೆ ಶಕ್ಯಾರ್ಥ ತೋರುವಾಗ ಖಲ್‌ಪ್ರತ್ಯಯ. **ಸಂಜ್ಞಾ-ಪೂರ್ವಕೋವಿಧಿರನಿತ್ಯಃ** (ಪಿರಿ. ೯೫) ಎಂಬ ವಚನದಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಗೃಣಂತಃ**—ಗೄ ಶಬ್ದೇ ಧಾತು. ಪೂಜನಾರ್ಥದಲ್ಲಿ ಪ್ರಯುಕ್ತವಾಗಿದೆ. ಲಿಟಗೆ ಶತ್ರಾದೇಶ. **ಕ್ರ್ಯಾ-ದಿಭ್ಯಃ ಶ್ನಾ** ( ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ ವಿಕರಣದ ಆಕಾರಕ್ಕೆ ಲೋಪ. ಋಕಾರದ ಪರದಲ್ಲಿರುವುದ ರಿಂದ ನಕಾರಕ್ಕೆ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ನಮಸ್ಯಾಮಃ**—ನಮಸ್ ಎಂಬುದಕ್ಕೆ ಪೂಜಾರ್ಥ ತೋರುವಾಗ **ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) ಎಂಬುದರಿಂದ ಕ್ಯಚ್ ಪ್ರತ್ಯಯ. **ಸನಾದ್ಯಂತಾಧಾತವಃ** (ಪಾ. ಸೂ. ೩-೧-೩೨) ಎಂಬುದ ರಿಂದ ನಮಸ್ಯ ಎಂಬ ಕ್ಯಜಂತಕ್ಕೆ ಧಾತುಸಂಜ್ಞಾ ಬರುತ್ತದೆ. ಲಿಟ್‌ಪ್ರಥಮಪುರುಷಬಹುವಚನದಲ್ಲಿ ನಮಸ್ಯಾಮಃ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಕ್ಯಚ್‌ಸ್ವರ ಉಳಿಯುತ್ತದೆ.

**ದೂತಂ**—ಟುದು ಉಪತಾಪೇ ಧಾತು. **ದುತನಿಭ್ಯಾಂ ದೀರ್ಘಶ್ಚ** (ಉ. ಸೂ. ೩-೩೭೦) ಎಂಬುದ ರಿಂದ ಕ್ತ ಪ್ರತ್ಯಯ. ಅದರೊಡನೆ ಧಾತುವಿಗೆ ದೀರ್ಘವೂ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗು ತ್ತದೆ. ಇತ್ತ ಅತ್ತ ಸಂಚಾರಮಾಡುವವನು ದೂತನು.

**ಅರತಿಂ**—ರಮು ಕ್ರೀಡಾಯಾಂ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ. **ಅನುದಾತ್ತೋಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಮಕಾರಕ್ಕೆ ಲೋಪ. ನ ವಿದ್ಯತೇ ರತಿಃ ಯಸ್ಯ ಸಃ ಅರತಿಃ **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಕೃಣ್ವನ್**—ಕೃವಿ ಹಿಂಸಾಕರಣಯೋಃ ಧಾತು ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ ಅಂತಾದೇಶ, ಇಕಾರಲೋಪ. **ಧಿನ್ವಿಕೃಣ್ವ್ಯೋರಚ** (ಪಾ.ಸೂ. ೩-೧-೮೦) ಎಂಬುದರಿಂದ ಉ ವಿಕರಣ, ಅಕಾರ ಅಂತಾದೇಶವಾಗಿ ಬರುತ್ತದೆ. **ಅತೋಲೋಪಃ** ಎಂಬುದರಿಂದ ಅಕಾರಕ್ಕೆ ಲೋಪ, ಇದಿತ್ತಾದುದರಿಂದ ಧಾತುವಿಗೆ ನುಮಾಗಮ, ಅಂಗಕ್ಕೆ ಅಡಾಗಮ, ಅಕೃಣ್ವನ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

ಸಂಹಿತಾಪಾಠಃ

ಯಸ್ತ್ವದ್ಧೋತಾ ಪೂರ್ವೋ ಅಗ್ನೇ ಯಜೀಯಾನ್ದ್ವಿತಾ ಚ ಸತ್ತಾ ಸ್ವಧಯಾ ಚ ಶಂಭುಃ ।

ತಸ್ಯಾನು ಧರ್ಮ ಪ್ರ ಯಜಾ ಚಿಕಿತ್ವೋಽಥಾ ನೋ ಧಾ ಅಧ್ವರಂ ದೇವವೀತೌ ॥

ಪದಪಾಠಃ

ಯಃ । ತ್ವತ್ । ಹೋತಾ । ಪೂರ್ವಃ । ಅಗ್ನೇ । ಯಜೀಯಾನ್ । ದ್ವಿತಾ । ಚ । ಸತ್ತಾ । ಸ್ವಧಯಾ । ಚ । ಶಂऽಭುಃ ।

ತಸ್ಯ । ಅನು । ಧರ್ಮ । ಪ್ರ । ಯಜ । ಚಿಕಿತ್ವಃ । ಅಥ । ನಃ । ಧಾಃ । ಅಧ್ವರಂ । ದೇವऽವೀತೌ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವತ್ ತ್ವತ್ತೋಽಪಿ ಪೂರ್ವಃ ಪ್ರಥಮಭಾವೀ ಯಜೀಯಾನ್ ಅತಿಶಯೇನ ಯಷ್ಟಾ ಯೋ ಯಃ ಕಶ್ಚಿದ್ಧೋತಾ ಹೋಮನಿಷ್ಪಾದಕೋ ದ್ವಿತಾ ದ್ವೈಧಂ ಮಧ್ಯಮೇ ಚೋತ್ತಮೇ ಚ ಸ್ಥಾನೇ ಸ್ವಧಯಾ ಸೋಮಾಖ್ಯೇನಾನ್ನೇನ ಸಹ ಸತ್ತಾ ನಿಷಣ್ಣಃ ಸನ್ ಶಂಭುರ್ಯಷ್ಟ್ರೂಣಾಂ ಸುಖಭೂರಭೂತ್ । ದ್ವಿತೀಯಪಾದಮೇವಂ ಯಾಸ್ಕೋ ವ್ಯಾಚಖ್ಯೌ । ದ್ವಿತಾ ಚ ಸತ್ತಾ ಸ್ವಧಯಾ ಚ ಶಂಭುಃ । ದ್ವೈಧಂ ಸತ್ತಾ ಮಧ್ಯಮೇ ಚ ಸ್ಥಾನ ಉತ್ತಮೇ ಚ ಶಂಭುಃ ಸುಖಭೂಃ । ನಿ. ೫–೩ । ಇತಿ । ಚಿಕಿತ್ವೋ ಧರ್ಮ-ವಿಷಯಚೇತನಾವನ್ ಹೇ ಅಗ್ನೇ ತಸ್ಯ ಯಸ್ತ್ವತ್ತೋಽಪಿ ಪೂರ್ವಭಾವೀ ಹೋತಾ ನಿರೂಪಿತಸ್ತಸ್ಯ ಹೋತುರನು ಧರ್ಮ ಧರ್ಮಾನನು ತೇನಾನುಷ್ಠಿತಧರ್ಮಾನುಪಲಕ್ಷ್ಯ ಪ್ರ ಯಜ । ಪ್ರಕರ್ಷೇಣ ದೇವಾ-ನ್ಪೂಜಯ । ಅಥ ಅನಂತರಂ ಹೇ ಅಗ್ನೇ ತ್ವಂ ನೋಽಸ್ಮಾಕಂ ಸಂಬಂಧಿನಮಧ್ವರಮಿಮಂ ಯಜ್ಞಂ ದೇವವೀತೌ ದೇವಾನಾಂ ಪ್ರೀತ್ಯರ್ಥಂ ಧಾಃ । ವಿಧೇಹಿ ॥ ಯಜೀಯಾನ್ । ಯಷ್ಟೃಶಬ್ದಸ್ಯ ತುಶ್ಛಂದ-ಸೀತೀಯಸುನ್ । ತಸ್ಮಿನ್ ತುರಿಷ್ಠೇಮೇಯಃಸ್ವಿತಿ ತೃಚೋ ಲೋಪಃ । ನಿತ್ತ್ವಾದಾದ್ಯುದಾತ್ತಃ । ದ್ವಿತಾ । ದ್ವಿಶಬ್ದಾತ್ಸಂಖ್ಯಾಯಾ ವಿಧಾರ್ಥೇ ಧೇತಿ ಧಾಪ್ರತ್ಯಯಃ । ಧಕಾರಸ್ಯ ತಕಾರಶ್ಛಾಂದಸಃ । ಪ್ರತ್ಯಯಸ್ವರಃ । ಸತ್ತಾ । ಷದ್ಲೃ ವಿಶರಣಗತ್ಯವಸಾದನೇಷು । ಅಸ್ಯ ತಾಚ್ಛೀಲಿಕಸ್ತೃನ್ । ನಿತ್ಸ್ವರಃ । ಸ್ವಧಯಾ । ಸ್ವರ್ಗಂ ಲೋಕಂ ದಧಾತಿ ಯಜಮಾನಸ್ಯೇತಿ ಸ್ವಧಾ । ಆತೋಽನುಪಸರ್ಗೇ ಕ ಇತಿ ಕಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವಂ । ಶಂಭುಃ । ಶಂ ಸುಖಮಸ್ಮಾದ್ಭವತೀತಿ ಭೂ ಸತ್ತಾಯಾಂ । ವಿಪ್ರಸಂಭ್ಯೋ ಡ್ವಸಂಜ್ಞಾಯಾಮಿತ್ಯತ್ರ ಮಿತದ್ರ್ವಾದೇರುಪಸಂಖ್ಯಾನಾತ್ ಡುಪ್ರತ್ಯಯಃ । ಡಿತ್ತ್ವಾಟ್ಟಿಲೋಪಃ । ಯಜ । ಯಜೇರ್ಲೋಟಿರೂಪಂ । ಚಿಕಿತ್ವಃ । ಕಿತ ಜ್ಞಾನ ಇತ್ಯಸ್ಯ ಕ್ವಸೌ ರೂಪಂ । ಮತುವಸೋ ರುಃ ಸಂಬುದ್ಧೌ ಛಂದಸೀತಿ ನಕಾರಸ್ಯ ರುಃ । ಅಥಾ ನಃ । ನಿಪಾತಸ್ಯೇತಿ ದೀರ್ಘಃ । ಧಾಃ । ಡುಧಾಞ್ ಧಾರಣಪೋ-ಷಣಯೋರಿತ್ಯಸ್ಯ ಛಾಂದಸೇ ಲುಙಿ ರೂಪಂ । ಅಡಭಾವಶ್ಛಾಂದಸಃ । ದೇವವೀತೌ । ದೇವಾನಾಂ ವೀತಿ-

**ರಶನಂ ಯತ್ರ ಪ್ರೀತೌ ಸಾ ಪ್ರೀತಿರ್ದೇವವೀತಿಃ । ವೀ ಕಾಂತ್ಯಾದಿಷ್ವಿತ್ಯಸ್ಮಾದ್ಭಾವೇ ಕ್ತಿನ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ ॥**

ಪ್ರತಿಪದಾರ್ಥ

**ಚಿಕಿತ್ವಃ**—ಧರ್ಮವಿಷಯವನ್ನು ಅರಿತಿರುವ । **ಅಗ್ನೇ**—ಎಲೈ ಅಗ್ನಿಯೇ । **ತ್ವತ್**—ನಿನಗಿಂತಲೂ । **ಪೂರ್ವಃ**—ಪೂರ್ವಭಾವಿಯಾಗಿ । **ಯಜೀಯಾನ್**—ಯಜ್ಞಕರ್ತನಾದ । **ಯಃ**—ಯಾವನು । **ಹೋತಾ**—ಹೋಮಸಂಪಾದಕನಾಗಿ। **ದ್ವಿತಾ**—ಮಧ್ಯಮಸ್ಥಾನ ಮತ್ತು ಉತ್ತಮಸ್ಥಾನ ಎಂಬ ಎರಡು ಸ್ಥಾನಗಳಲ್ಲೂ। **ಸ್ವಧಯಾ**—ಸೋಮರೂಪವಾದ ಅನ್ನದೊಡನೆ । **ಸತ್ತಾ**—ಕುಳಿತುಕೊಂಡು । **ಶಂಭುಃ**—ಸುಖಹೇತುವಾದನೋ । **ತಸ್ಯ**—ಆ ಹೋತೃವಿನ । **ಅನು ಧರ್ಮ**—ಅನುಷ್ಠಾನಾದಿ ಧರ್ಮಗಳಿಗನುಸಾರವಾಗಿ । **ಪ್ರ ಯಜ**—(ನೀನೂ) ಯಜ್ಞಮಾಡು। **ಅಥ**—ಅನಂತರ । **ನಃ**—ನಮ್ಮ । **ಅಧ್ವರಂ**—ಈ ಯಜ್ಞವನ್ನು । **ದೇವವೀತೌ**—ದೇವತೆಗಳಿಗೆ ಪ್ರೀತಿಯನ್ನುಂಟು ಮಾಡಲು । **ಧಾಃ**—ಅರ್ಪಿಸು ॥

ಭಾವಾರ್ಥ

ಧರ್ಮವಿಷಯವನ್ನರಿತಿರುವ ಎಲೈ ಅಗ್ನಿಯೇ, ನಿನಗಿಂತಲೂ ಪೂರ್ವಭಾವಿಯಾಗಿ ಯಜ್ಞಕರ್ತನಾದ ಯಾವನು ಹೋಮಸಂಪಾದಕನಾಗಿ ಮಧ್ಯಮಸ್ಥಾನ ಮತ್ತು ಉತ್ತಮಸ್ಥಾನ ಈ ಎರಡು ಸ್ಥಾನಗಳಲ್ಲೂ ಸೋಮರೂಪವಾದ ಅನ್ನದೊಡನೆ ಕುಳಿತುಕೊಂಡು ಸುಖಹೇತುವಾದನೋ, ಆ ಹೋತೃವಿನ ಅನುಷ್ಠಾನಾದಿ ಧರ್ಮಗಳಿಗನುಸಾರವಾಗಿ ನೀನೂ ಯಜ್ಞವನ್ನು ಮಾಡು. ಅನಂತರ ನಮ್ಮ ಈ ಯಜ್ಞವನ್ನು ದೇವತೆಗಳ ತೃಪ್ತ್ಯರ್ಥವಾಗಿ ಅರ್ಪಿಸು.

English Translation

He is the most diligent offerer of worship who is the presenter of oblations before you are, and who in two places (the middling and the best) seated with the sacrificial food is (the source of) happiness (to the worshippers) : cognizant (of the objects of devotion), officiate in accordance with his piety, and thus render our rite acceptable to the gods.

ವಿಶೇಷವಿಷಯಗಳು

ಈ ಮಂತ್ರದ ಪೂರ್ವಾರ್ಧಕ್ಕೆ ಸಾಯಣರು ಒಂದು ವಿಧವಾಗಿಯೂ, ಯಾಸ್ಕರು ಒಂದು ವಿಧವಾಗಿಯೂ ಅರ್ಥವನ್ನು ವಿವರಿಸಿದ್ದಾರೆ. ಸಾಯಣರ ವಿವರಣೆಯಲ್ಲಿ ಅಗ್ನಿಯು ತ್ವತ್‌ಪೂರ್ವಃ ಯಜೀಯಾನ್ ಹೋತಾ-ತನಗಿಂತಲೂ ಮೊದಲು ಬಂದು ಕುಳಿತು ಪ್ರಭೂತವಾದ ಹೋಮಗಳನ್ನು ಆಚರಿಸಿ, ಹವಿಸ್ಸುಗಳನ್ನು ಅರ್ಪಿಸುವುದರಿಂದ ಯಷ್ಟೃವಾಗಿರುವನು ಎಂದು ಅರ್ಥವನ್ನು ವಿವರಿಸಿದೆ. ಅಗ್ನಿಯು ತನ್ನಲ್ಲಿಯೇ ಇರುವ ಭೇದಭಾವವನ್ನು ಉಪಪಾದನೆ ಮಾಡಿರುವ ಕ್ರಮವು, **ದ್ವಿತಾ ಚ ಸತ್ತಾ ಸ್ವಧಯಾ ಚ ಶಂಭುಃ** ಎಂಬ ವಾಕ್ಯದಿಂದ ವಿವೃತವಾಗಿರುತ್ತದೆ. **ದ್ವಿತಾ** ಎಂಬ ಪದಕ್ಕೆ **ದ್ವೈಧಂ ಮಧ್ಯಮೇ ಚೋತ್ತಮೇ ಚ ಸ್ಥಾನೇ** ಅಗ್ನಿಯು ಮಧ್ಯಮಸ್ಥಾನದಲ್ಲಿಯೂ, ಉತ್ತಮಸ್ಥಾನದಲ್ಲಿಯೂ ಎರಡು ವಿಧವಾಗಿರುತ್ತಾನೆಂದೂ, ಅವನು **ಸೋಮಾಖ್ಯೇನಾನ್ನೇನ ಸಹ ನಿಷಣ್ಣಃ ಯಷ್ಟೄಣಾಂ ಸುಖಭೂಃ** ಸೋಮರೂಪವಾದ ಅನ್ನದಿಂದ ಕೂಡಿದವನಾಗಿ ಎಂದು ಸ್ವಧಾಶಬ್ದಕ್ಕೆ ಅರ್ಥವನ್ನು ವಿವರಿಸಿ, ಯಾಗವನ್ನು ಆಚರಿಸುವವರಿಗೆ ಸುಖಕರನಾಗಿರುವನು ಎಂದು ಅರ್ಥವನ್ನು ವರ್ಣಿಸಿದೆ. ಇದರಿಂದ ಅರ್ಥವು ಸ್ಪಷ್ಟವಾಗಿ ತಿಳಿಯುವಂತೆ ಇಲ್ಲ.

ಯಾಸ್ಕರು ಇದೇ ಮಂತ್ರದ ಅರ್ಥವನ್ನು ವಿವರಿಸಿದ್ದಾರೆ—ಅಗ್ನೇ ಎಂದು ಸಂಬೋಧಿಸಿ ಅಗ್ನಿಯು ಪೃಥಿವೀ ಸ್ಥಾನದಲ್ಲಿರುವವನೆಂದು ವಿವರಿಸಿದೆ. **ತ್ವತ್ಪೂರ್ವಃ ಯಃ ಹೋತಾ** ಎಂಬ ವಾಕ್ಯದಿಂದ **ಮಧ್ಯಮಸ್ಥಾನೋ ವಾಯುಃ** ಅಗ್ನಿಗಿಂತಲೂ ಪೂರ್ವದಲ್ಲಿ ಹೋತೃವಾಗಿರುವ ವಾಯುವು ಮಧ್ಯಮಸ್ಥಾನದೇವತೆಯಾಗಿರುವನೆಂದು ಹೇಳಿದೆ. ಈ ವಾಯುವು " **ಅಸಾವಪಿ ಹಿ ದೂತೋ ದೇವಾನಾಮಿತಿ ಶ್ರೂಯತೇ** " ದೇವತೆಗಳ ದೂತನಾಗಿದ್ದ ನೆಂದು ಶ್ರುತಿಯಲ್ಲಿ ಉಕ್ತನಾಗಿದೆಯೆಂದು ವಿವರಿಸಿ " **ಆ ದೂತೋ ಅಗ್ನಿಮಭರತ್ ವಿವಸ್ವತಃ** " ಎಂಬ ಶ್ರುತಿ ಯನ್ನು ಉದಾಹರಿಸಿ **ವೈದ್ಯುತೋಗ್ನಿರಿತಿ ಕೇಚಿನ್ಮನ್ಯಂತೇ**—ಈ ವಾಯುವು ವೈದ್ಯುತಾಗ್ನಿಯಾಗಿರುವನು ಎಂದು-ಕೆಲವರ ಮತವನ್ನು ನಿರ್ದೇಶಮಾಡಿದೆ. ಯಷ್ಟೃತರಃ ಎಂಬ ಅರ್ಥವು ಯಜೀಯಾನ್ ಎಂಬ ಪದಕ್ಕೆ ವಿವೃತವಾಗಿದೆ. ದ್ವಿತಾ ಚ ಸತ್ತಾ ಎಂಬ ಪದಗಳಿಗೆ ದ್ವೈಧಂ ಎಂದು ಅರ್ಥವು ವಿವೃತವಾಗಿ, **ಮಧ್ಯಮೇ ಚ ಸ್ಥಾನೇ ವೈದ್ಯುತ-ಭಾವೇನ ಉತ್ತಮೇ ಚ ಸ್ಥಾನೇ ಸೂರ್ಯಭಾವೇನ**-ಅಗ್ನಿಯು ವೈದ್ಯುತಾಗ್ನಿರೂಪದಿಂದ ಮಧ್ಯಮಸ್ಥಾನದಲ್ಲಿರು ವನು. ಉತ್ತಮಸ್ಥಾನದಲ್ಲಿ ಸೂರ್ಯರೂಪದಿಂದ ಇರುವನು ಎಂದು ಅಗ್ನಿಯರೂಪದ ದ್ವೈವಿಧ್ಯವು ಪ್ರದರ್ಶಿತವಾಗಿದೆ. **ಸ್ವಧಯಾ ಚ ಶಂಭುಃ** ಎಂಬ ವಾಕ್ಯದಲ್ಲಿ **ಸ್ವಧಯಾ ಅನ್ನೇನ ಸರ್ವಭೂತಾನಾಂ ವರ್ಷಣದ್ವಾರೇಣ** ಎಲ್ಲಾ ಪ್ರಾಣಿಗಳಿಗೂ ಪೋಷಕವಾಗಿರುವ ಅನ್ನವನ್ನು ಉತ್ಪನ್ನಮಾಡುವ ವೃಷ್ಟಿಯನ್ನು ಉಂಟುಮಾಡುವುದರಿಂದ **ಶಂಭುಃ** ಅಗ್ನಿಯು ಸುಖವನ್ನೂ ಉಂಟುಮಾಡುವನೆಂಬ ಅರ್ಥವನ್ನು ವಿವರಿಸಿದೆ.

ಈ ಮಂತ್ರದ ಉತ್ತರಾರ್ಧದ ವಿವರಣೆಯು ಸಾಯಣರು ಮತ್ತು ಯಾಸ್ಕರು ಹೇಳಿರುವುದು ಒಂದೇ ವಿಧವಾಗಿರುತ್ತದೆ. **ಚಿಕಿತ್ವಃ** ಎಂಬ ಪದಕ್ಕೆ ಯಾಸ್ಕರು **ಚೇತನಾವಾನ್** ಜ್ಞಾನವಂತನೆಂಬ ಅರ್ಥವನ್ನು ವಿವರಿಸಿ ದ್ದಾರೆ. ಸಾಯಣರು **ಧರ್ಮವಿಷಯಚೇತನಾವಾನ್** ಯಜ್ಞವೇ ಮೊದಲಾದ ಧರ್ಮಗಳನ್ನು ಆಚರಿಸುವ ಜ್ಞಾನ ವುಳ್ಳವನು ಎಂದು ಅರ್ಥವನ್ನು ವಿವರಿಸಿ, ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ ಎಂದು ಅರ್ಥಮಾಡಿ, **ತಸ್ಯ ಅನುಧರ್ಮ ಪ್ರಯಜ**—ಎಂಬ ವಾಕ್ಯಕ್ಕೆ '**ತ್ವತ್ತೋऽಪಿ ಪೂರ್ವಭಾವೀ ಹೋತಾ ನಿರೂಪಿತಃ ತಸ್ಯ ಹೋತುಃ ಧರ್ಮಾನನು ತೇನಾನುಷ್ಠಿತಧರ್ಮಾನುಪಲಕ್ಷ್ಯ ದೇವಾನ್ ಪ್ರಕರ್ಷೇಣ ಪೂಜಯ**—ಅಗ್ನಿಗಿಂತಲೂ ಪೂರ್ವ ದಲ್ಲಿ ಹೋತೃವಾಗಿದ್ದ ವಾಯುವಿನ ಧರ್ಮಗಳನ್ನು ಅಂದರೆ, ಹೋತೃಕಾರ್ಯರೂಪವಾದ ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ಕಾರ್ಯವನ್ನು ಅನುಸರಿಸಿ ಅಗ್ನಿಯು ನಮ್ಮ ಯಜ್ಞದಲ್ಲಿ ದೇವತೆಗಳನ್ನು ಪೂಜಿಸಲಿ ಎಂಬ ಅರ್ಥವನ್ನು ವಿವರಿಸಿದೆ. ದುರ್ಗಾಚಾರ್ಯರು—**ತಸ್ಯಾನುಧರ್ಮ—ತಸ್ಯ** '**ವಾಯೋರ್ವೃತ್ತಿಲಾಭಮನ್ವಾತ್ಮನೋ ದೀಪ್ತಿಲಕ್ಷಣಾಂ ವೃತ್ತಿಮತಿಲಾಭಮಾಪ್ನುವನ್** | ತನಗಿಂತಲೂ ಮುಂಚಿತವಾಗಿ ಹೋತೃವಾಗಿದ್ದ ವಾಯುವಿನ ಕಾಂತಿ ಮತ್ತು ಜ್ಞಾನ ಇವುಗಳನ್ನು ಅಗ್ನಿಯು ಹೊಂದಿರುವನೆಂದು ಅರ್ಥವನ್ನು ವಿವರಿಸಿ, **ವಾಯುರ್ವಾ ಅಗ್ನೇಸ್ತೇಜಃ ತಸ್ಮಾತ್ ವಾಯುರಗ್ನಿಮನ್ವೇತಿ ಇತಿ ಹ ವಿಜ್ಞಾಯತೇ** ಎಂದು ವಾಯ್ವಗ್ನಿಗಳಿಗೆ ತಾದಾತ್ಮ್ಯ ವನ್ನು ವರ್ಣಿಸಿರುವರು.

**ದೇವವೀತೌ—ದೇವಾನಾಂ ಪ್ರೀತ್ಯರ್ಥಂ** ಅಗ್ನಿಯು, ಯಜಮಾನರ ಯಜ್ಞವು ದೇವತೆಗಳ ಪ್ರೀತಿಯನ್ನು ಉಂಟುಮಾಡುವಹಾಗೆ ಆಚರಿಸಲಿ ಎಂದು ಅರ್ಥವು ವಿವೃತವಾಗಿದೆ. **ದೇವಾನಾಂ ವೀತಿಃ ಅಶನಂ ಯತ್ರ ಪ್ರೀತೌ ಸಾ ಪ್ರೀತಿಃ ದೇವವೀತಿಃ** | ವೀತಿ ಎಂಬ ಪದಕ್ಕೆ ಪ್ರೀತಿಯನ್ನು ಉಂಟುಮಾಡುವ ಅನ್ನಾದಿಗಳನ್ನು ಅರ್ಪಿಸುವ ಕರ್ಮವೆಂದು ಅರ್ಥವು ವಿವೃತವಾಗಿದೆ.

**ಸ್ವಧಯಾ—ಸ್ವರ್ಗಂ ಲೋಕಂ ದಧಾತಿ ಯಜಮಾನಸ್ಯ** ಸ್ವರ್ಗಲೋಕವನ್ನು ಯಜಮಾನನಿಗೆ ಉಂಟುಮಾಡುವುದು ಎಂದು ಸ್ವಧಾಶಬ್ದಾರ್ಥವು ವರ್ಣಿತವಾಗಿದೆ.

**ಶಂಭುಃ—ಶಂ ಸುಖಂ ಅಸ್ಮಾದ್ಭವತಿ**—ಸುಖವನ್ನು ಉಂಟುಮಾಡುವುದು ಎಂದು ಶಂಭು ಶಬ್ದದ ಅರ್ಥ ವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಯಜೀಯಾನ್**—ಯಜಧಾತುವಿಗೆ ತೃಚ್ ಬಂದಾಗ ಯಜತೃ ಎಂದು ರೂಪವಾಗುತ್ತದೆ. **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಇದರಮೇಲೆ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. **ತುರಿಷ್ಠೇಮೇ-ಯಃಸು** (ಪಾ.ಸೂ. ೬-೪-೧೫೪) ಎಂಬುದರಿಂದ ಪೂರ್ವದ ತೃಚಿಗೆ ಲೋಪ, ಯಜೀಯಸ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ದ್ವಿತಾ**—ದ್ವಿ ಎಂಬುದು ಸಂಖ್ಯಾವಾಚಕವಾದ ಶಬ್ದ. **ಸಂಖ್ಯಾಯಾವಿಧಾರ್ಥೇ ಧಾ** (ಪಾ. ಸೂ. ೩-೨-೩) ಎಂಬುದರಿಂದ ಪ್ರಕಾರಾರ್ಥದಲ್ಲಿ ಧಾಪ್ರತ್ಯಯ. ಛಾಂದಸವಾಗಿ ಧಾ ಎಂಬುದಕ್ಕೆ ತಕಾರಾದೇಶ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸತ್ತಾ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಇದಕ್ಕೆ ತಚ್ಛೀಲಾರ್ಥವಲ್ಲಿ ತೃನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ಸ್ವಧಯಾ**—ಸ್ವರ್ಗಂ ಲೋಕಂ ದಧಾತಿ ಯಜಮಾನಸ್ಯ ಇತಿ ಸ್ವಧಾ. (ಯಜಮಾನನಿಗೆ ಸ್ವರ್ಗವನ್ನು ಕೊಡುವುದು) ಡುಧಾಞ್ ಧಾರಣಪೋಷಣಯೋಃ ಧಾತು. **ಆತೋನುಪಸರ್ಗೇ ಕಃ** ( ಪಾ. ಸೂ. ೫-೩-೪೨ ) ಎಂಬುದರಿಂದ ಕಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಕಾರಕಪೂರ್ವಪದವಾಗಿರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಶಂಭುಃ**—ಶಂ ಸುಖಂ ಅಸ್ಮಾತ್ ಭವತಿ ಇತಿ ಶಂಭುಃ (ಸುಖವನ್ನು ಕೊಡುವವನು) ಭೂ ಸತ್ತಾಯಾಮ್. ಧಾತು. **ವಿಪ್ರಸಂಭ್ಯೋ ಡ್ವಸಂಜ್ಞಾಯಾಮ್** (ಪಾ. ಸೂ. ೩-೨-೧೮೦) ಎಂಬಲ್ಲಿ **ಮಿತದ್ರ್ವಾದೇರುಪ-ಸಂಖ್ಯಾನಮ್** ಎಂಬ ವಚನವಿರುವುದರಿಂದ ಇದು ಮಿತದ್ರ್ವಾದಿಯಲ್ಲಿ ಸೇರಿರುವುದರಿಂದ ಡು ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಟಿಗೆ (ಊ) ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯಜ**—ಯಜ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ **ದ್ವ್ಯಚೋತಸ್ತಿಙಃ** ಎಂಬುದರಿಂದ ಸಂಹಿತಾದಲ್ಲಿ ದೀರ್ಘ.

**ಚಿಕಿತ್ವಃ**—ಕಿತ ಜ್ಞಾನೇ ಧಾತು. ಕ್ವಸು ಪ್ರತ್ಯಯ. ಧಾತುವಿಗೆ ದ್ವಿತ್ವಾದಿ. ಸಂಬುದ್ಧಿಯಲ್ಲಿ **ಮತುವ-ಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಥಾನಃ—ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. **ಛಂದಸಿಲುಙ್** ಎಂಬುದರಿಂದ ಲುಙ್. ಮಧ್ಯಮ ಪುರುಷಏಕವಚನದಲ್ಲಿ ಸಿಪ್. ಇಕಾರಲೋಪ. **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಚ್ಲಿಗೆ ಸಿಚ್ ಬಂದಾಗ ಅದಕ್ಕೆ ಲುಕ್. **ಬಹುಲಂಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವು ದಿಲ್ಲ. ನಿಘಾತಸ್ವರ ಬರುತ್ತದೆ.

**ದೇವವೀತೌ**—ದೇವಾನಾಂ ವೀತಿಃ ಅಶನಂ ಯತ್ರ ಪ್ರೀತೌ ಸಾ ಪ್ರೀತಿಃ ದೇವವೀತಿಃ (ದೇವತೆಗಳಿಗೆ ಪ್ರೀತಿ ದಾಯಕವಾದುದು) ವೀ ಕಾಂತ್ಯಾದಿಷು ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಬಹುವ್ರೀಹಿಸಮಾಸ. **ಬಹುವ್ರೀಹೌಪ್ರಕೃತ್ಯಾ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ದೇವಶಬ್ದವು ಅಜಂತವಾದುದರಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಏಕವಚನದಲ್ಲಿ ದೇವವೀತೌ ಎಂದು ರೂಪವಾಗುತ್ತದೆ.

---

## ಹದಿನೆಂಟನೆಯ ಸೂಕ್ತವು

ಭವಾ ನೋ ಅಗ್ನ ಇತಿ ಪಂಚರ್ಚಂ ಷಷ್ಠಂ ಸೂಕ್ತಂ । ಭವಾ ನ ಇತ್ಯನುಕ್ರಮಣಿಕಾ । ಕತೋ ವೈಶ್ವಾಮಿತ್ರಸ್ತ್ರಿಷ್ಟುತಿ ತುಶಬ್ದಪ್ರಯೋಗಾದಸ್ಯಾಪಿ ವೈಶ್ವಾಮಿತ್ರಃ ಕತ ಋಷಿಃ । ಅಗ್ನಿರ್ದೇವತಾ ॥ ಪ್ರಾತ-ರನುವಾಕಾಶ್ವಿನಶಸ್ತ್ರಯೋರುಕ್ತಃ ಸೂಕ್ತವಿನಿಯೋಗಃ । ಪ್ರವರ್ಗ್ಯೇಽಭಿಷ್ಟವೇ ಭವಾ ನೋ ಅಗ್ನ ಇತಿ ದ್ವ್ಯೃಚೋ ವಿನಿಯುಕ್ತಃ । ಸೂತ್ರಿತಂ ಚ । **ಭವಾ ನೋ ಅಗ್ನೇ ಸುಮನಾ ಉಪೇತಾವಿತಿ ದ್ವ್ಯೃಚಾಃ** । ಆ. ೪-೬ ಇತಿ ॥

**ಅನುವಾದವು**—**ಭವಾ ನೋ ಅಗ್ನೇ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರವಂಶಸ್ಥನಾದ ಕತ ಎಂಬುವನು ಋಷಿಯು; ಅಗ್ನಿಯು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಭವಾ ನ** ಎಂದು ಮೊದಲಾಗಿ ಹೇಳಿರುವುದು. ಹಿಂದಿನ ಸೂಕ್ತದಲ್ಲಿ ಹೇಳಿರುವಂತೆ ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗ ವಿರುವುದು. ಪ್ರವರ್ಗ್ಯವೆಂಬ ಯಾಗದ ಅಭಿಷ್ಟವದಲ್ಲಿ **ಭವಾ ನೋ ಅಗ್ನೇ** ಎಂದು ಮೊದಲಾಗುವ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳ ವಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಭವಾ ನೋ ಅಗ್ನೇ ಸುಮನಾ ಉಪೇತಾವಿತಿ ದ್ವ್ಯೃಚಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು.(ಆ. ೪—೬)

### ಸೂಕ್ತ—೧೭

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೧೮ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧೮ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫
ಋಷಿಃ—ಕತೋ ವೈಶ್ವಾಮಿತ್ರಃ॥
ದೇವತಾ—ಅಗ್ನಿಃ ॥
ಛಂದಃ— ತ್ರಿಷ್ಟುಪ್॥

ಸಂಹಿತಾಪಾಠಃ

**ಭವಾ ನೋ ಅಗ್ನೇ ಸುಮನಾ ಉಪೇತೌ ಸಖೇವ ಸಖ್ಯೇ ಪಿತರೇವ ಸಾಧುಃ ।**
**ಪುರುದ್ರುಹೋ ಹಿ ಕ್ಷಿತಯೋ ಜನಾನಾಂ ಪ್ರತಿ ಪ್ರತೀಚೀರ್ದಹತಾದರಾತೀಃ ॥ ೧ ॥**

ಪದಪಾಠಃ

ಭವ । ನಃ । ಅಗ್ನೇ । ಸುಽಮನಾಃ । ಉಪಽಇತೌ । ಸಖಾಽಇವ । ಸಖ್ಯೇ । ಪಿತರಾಽಇವ । ಸಾಧುಃ । ಪುರುಽದ್ರುಹಃ । ಹಿ । ಕ್ಷಿತಯಃ । ಜನಾನಾಂ । ಪ್ರತಿ । ಪ್ರತೀಚೀಃ । ದಹತಾತ್ । ಅರಾತೀಃ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಮುಪೇತಾವಸ್ಮಾಭಿಃ ಕ್ರಿಯಮಾಣಸ್ಯ ಪ್ರವರ್ಗ್ಯಾಖ್ಯಕರ್ಮಣ ಅಭಿಮುಖ್ಯೇನಾಗಮನೇ ಸುಮನಾಸ್ತತ್ಕರ್ಮಸಿದ್ಧ್ಯರ್ಥಮನುಕೂಲಮನಸ್ಕೋ ಭೂತ್ವಾ ನಃ ಸಾಧುರ್ಭವ । ಅಸ್ಮತ್ಸಂಬಂಧಿಕರ್ಮಸಾಧಕೋ ಭವ । ತತ್ರ ದೃಷ್ಟಾಂತದ್ವಯಂ । ಸಖೇವ ಸಖ್ಯೇ ಪಿತರೇವೇತಿ । ಯಥಾ ಸಖಾ ಸುಹೃತ್ ಸಖ್ಯೇ ಮಿತ್ರಾಯ ಹಿತೋಪದೇಶೇನ ಸಾಧುರ್ಭವತಿ ಯಥಾ ಚ ಪಿತರಾ ಮಾತಾಪಿತರೌ ಪುತ್ರಾಯ ಸನ್ಮಾರ್ಗೋಪದೇಶೇನ ಸಾಧಕೌ ಭವತಃ । ತದ್ವತ್ । ಕಿಂಚ । ಜನಾನಾಂ ಮನುಷ್ಯಾಣಾಂ ಕ್ಷಿತಯೋ ಮನುಷ್ಯಾಃ ಪುರುದ್ರೋಹೋ ಹಿ ನಾನಾವಿಧದ್ರೋಹಯುಕ್ತಾಃ । ಹಿ ಶಬ್ದಃ ಕಾರಣಪರಃ । ಯಸ್ಮಾಲ್ಲೋಕೇ ಪರಸ್ಪರಮಾತ್ಸರ್ಯಾದಿನಾನ್ಯೋನ್ಯಮಸಹಮಾನಾ ಜನಾ ವರ್ತಂತೇ ತಸ್ಮಾತ್ತ್ವಂ ಪ್ರತೀಚೀಃ ಪ್ರತೀಚಃ ಪ್ರತಿಕೂಲತಯಾಸ್ಮದಾಭಿಮುಖ್ಯೇನಾಗಚ್ಛತೋಽರಾತೀರರಾತೀನ್ ಶತ್ರೂನ್ಪ್ರತಿ ದಹತಾತ್ । ತ್ವಂ ಪ್ರತಿಕೂಲಃ ಸನ್ ಭಸ್ಮಸಾತ್ಕುರು । ಭವಾ ನಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಉಪೇತೌ ॥ ಇಣ್ ಗತೌ । ಅಯನಮಿತಿ ಭಾವೇ ಕ್ತಿನ್ । ಪ್ರಾದಿಸಮಾಸಃ । ತಾದೌ ಚ ನಿತಿ ಕೃತ್ಯತೌ ಇತಿ ಗತೇಃ ಪ್ರಕೃತಿಸ್ವರತ್ವಂ । ಸಖ್ಯೇ । ಸಮಾನೇ ಖ್ಯಃ ಸ ಚೋದಾತ್ತ ಇತಿ ಇಣ್ । ಡಿತ್ತ್ವಾಟ್ಟಿಲೋಪಃ । ತತ್ಸಂನಿಯೋಗೇನ ಯಲೋಪಃ । ಸಮಾನಸ್ಯ ಛಂದಸೀತ್ಯಾದಿನಾ ಸಭಾವಃ । ಉದಾತ್ತ ಇತ್ಯುಕ್ತತ್ವಾದುಪಪದಸ್ಯೋದಾತ್ತತಾ । ಸಾಧುಃ । ರಾಧ ಸಾಧ ಸಂಸಿದ್ಧೌ । ಕೃವಾಪಾಜೀತ್ಯಾದಿನಾ ಉಣ್ಪ್ರತ್ಯಯಃ । ಪ್ರತ್ಯಯಸ್ವರಃ । ಪ್ರತೀಚೀಃ । ಅಂಚು ಗತಿಪೂಜನಯೋಃ । ಋತ್ವಿಗ್ದಧೃಗಿತ್ಯಾದಿನಾ ಕ್ವಿನ್ । ಸ್ತ್ರಿಯಾಮುಗಿತಶ್ಚೇತಿ ಙೀಪಿ ಪ್ರಾಪ್ತೇ ಪುನರ್ಧಾತೋರುಗಿತಃ ಪ್ರತಿಷೇಧ ಇತಿ ಪ್ರತಿಷಿದ್ಧೇಂಚತೇಶ್ಚೋಪಸಂಖ್ಯಾನಮಿತಿ ಪ್ರತಿಪ್ರಸವಾತ್ ಙೀಪ್ । ತಸ್ಮಿನ್ಭಸಂಜ್ಞಾಯಾಮಚ ಇತ್ಯಕಾರಲೋಪಃ । ಚಾವಿತಿ ದೀರ್ಘಃ । ದಹತಾತ್ । ದಹ ಭಸ್ಮೀಕರಣ ಇತ್ಯಸ್ಯ ಲೋಣ್ಮಧ್ಯಮೈಕವಚನೇ ಹೇಸ್ತುಹ್ಯೋಸ್ತಾತಙ್ಙಾಶಿಷೀತಿ ತಾತಙಾದೇಶಃ । ನಿಘಾತಃ । ಅರಾತೀಃ ಪ್ರತೀಚೀಃ । ಉಭಯತ್ರ ಲಿಂಗವ್ಯತ್ಯಯಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಉಪೇತೌ**—(ಈ ಕರ್ಮಸಾಧನೆಗಾಗಿ) ನಮ್ಮಲ್ಲಿಗೆ ಬರುವಾಗ । **ಸಖ್ಯೇ**—ಸ್ನೇಹಿತನ ವಿಷಯದಲ್ಲಿ । **ಸಖಾ ಇವ**—(ಮಕ್ಕಳ ವಿಷಯದಲ್ಲಿ) ತಂದೆತಾಯಿಗಳು ಇರುವಂತೆಯೂ । **ನಃ**—ನಮ್ಮ ವಿಷಯದಲ್ಲಿ (ನೀನು) । **ಸುಮನಾಃ**—ಅನುಕೂಲಮನಸ್ಕನಾಗಿಯೂ । **ಸಾಧುಃ**—ನಮ್ಮ ಕರ್ಮವನ್ನು ಸಾಧಿಸುವ ಸಹಾಯಕನಾಗಿಯೂ । **ಭವ**—ಆಗಿರು । **ಜನಾನಾಂ**—ಯಜ್ಞಕರ್ತರಾದ ಮಾನವರಿಗೆ । **ಕ್ಷಿತಯಃ**—ಅವರ ಶತ್ರುರೂಪರಾದ ಇತರ ಮಾನವರು । **ಪುರದ್ರುಹೋ ಹಿ**—ನಾನಾವಿಧವಾದ ದ್ರೋಹವನ್ನು ಬಯಸುವುದು ಸಹಜವಾಗಿದೆ । **ಪ್ರತೀಚೀಃ**—ನಮಗೆ ವಿರೋಧವನ್ನುಂಟುಮಾಡಬೇಕೆಂಬ ಉದ್ದಿಶ್ಯದಿಂದ ಬರತಕ್ಕ । **ಅರಾತೀಃ**—ಶತ್ರುಗಳನ್ನು । **ಪ್ರತಿ ದಹತಾತ್**—ಎದುರಿಸಿ ನಿಂತು ಅವರನ್ನು ಸುಟ್ಟುಬಿಡು ॥

ಭಾವಾರ್ಥ

ಎಲೈ ಅಗ್ನಿಯೇ ಪ್ರವರ್ಗ್ಯಾಖ್ಯವಾದ ಈ ಕರ್ಮಸಾಧನೆಗಾಗಿ ನಮ್ಮಲ್ಲಿಗೆ ಬರುವಾಗ ಒಬ್ಬ ಮಿತ್ರನು ತನ್ನ ಇನ್ನೊಬ್ಬ ಮಿತ್ರನಲ್ಲಿ ವ್ಯವಹರಿಸುವಂತೆಯೂ, ತಂದೆತಾಯಿಗಳು ಮಕ್ಕಳ ವಿಷಯದಲ್ಲಿರುವಂತೆಯೂ ನೀನೂ ಸಹ ನಮ್ಮ ವಿಷಯದಲ್ಲಿ ಅನುಕೂಲಮನಸ್ಕನಾಗಿದ್ದು ನಮ್ಮ ಕರ್ಮವನ್ನು ಸಾಧಿಸಲು ಸಹಾಯಕನಾಗಿರು. ಯಜ್ಞಕರ್ತರಾದ ಮಾನವರಿಗೆ ಅವರ ಶತ್ರುಭೂತರಾದ ಇತರ ಮಾನವರು ದ್ರೋಹವನ್ನು ಬಯಸುವುದು ಸಹಜವಾಗಿದೆ. ನಮಗೆ ವಿರೋಧವನ್ನುಂಟುಮಾಡಬೇಕೆಂದು ನಮ್ಮಲ್ಲಿಗೆ ಬರತಕ್ಕ ಅಂತಹ ಶತ್ರುಗಳನ್ನು ಎದುರಿಸಿ ಅವರನ್ನು ಸುಟ್ಟುಬಿಡು.

English Translation

Be favourably disposed, AGNI, on approaching us (at this rite); be the fulfiller (of our objects) like a friend (to a friend) or parents (to a child): since men are the grievous oppressors of men, consume the foes who come against us.

ವಿಶೇಷವಿಷಯಗಳು

**ಉಪೇತೌ ಸುಮನಾಃ ನಃ ಸಾಧುಃ ಭವ**—ಈ ವಾಕ್ಯದಲ್ಲಿ ಅಗ್ನೇ ಎಂಬ ಸಂಬೋಧಿಸಿದೆ. ಅಗ್ನಿಯು ಯಜಮಾನರಿಂದ ಆಚರಿಸಲ್ಪಡುವ ಪ್ರವರ್ಗ್ಯವೆಂಬ ಕರ್ಮವನ್ನು ನೆರವೇರಿಸುವುದಕ್ಕಾಗಿ ಬರುವ ವಿಷಯದಲ್ಲಿಯೂ ಸಂತೋಷದಿಂದ ಇರುವ ಮನಸ್ಸುಳ್ಳವನಾಗಿಯೂ, ಯಜಮಾನರು ಆಚರಿಸುವ ಕರ್ಮಗಳ ವಿಷಯದಲ್ಲಿ ಆ ಕರ್ಮಗಳನ್ನು ಸಾಧಿಸಿ ಕೊಡುವವನಾಗಿಯೂ ಇರಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.

**ಸಖ್ಯೇವ ಪಿತರೇವ**—ಅಗ್ನಿಯು ಯಜ್ಞಮಾಡುವ ಯಜಮಾನರ ವಿಷಯದಲ್ಲಿ ಹಿತಚಿಂತನಾಗಿರುವನೆಂದು ಎರಡು ಉಪಮಾನವನ್ನು ಹೇಳಿದೆ. **ಯಥಾ ಸುಹೃತ್ ಮಿತ್ರಾಯ ಹಿತೋಪದೇಶೇನ ಸಾಧುರ್ಭವತಿ, ಯಥಾ ಮಾತಾಪಿತರೌ ಪುತ್ರಾಯ ಸನ್ಮಾರ್ಗೋಪದೇಶೇನ ಸಾಧಕೌ ಭವತಃ ತದ್ವತ್** ಒಳ್ಳೆಯ (ಅಭಿಮಾನ) ಮನಸ್ಸುಳ್ಳ ಸ್ನೇಹಿತನು ತನ್ನ ಸ್ನೇಹಿತನಿಗೆ ಸುಖವಾಗುವ ರೀತಿಯನ್ನು ಬೋಧಿಸುವಂತೆಯೂ, ತಂದೆತಾಯಿಗಳು ತಮ್ಮ ಮಕ್ಕಳಿಗೆ ಸುಖಕರವಾದ ಬುದ್ಧಿಯನ್ನು ಹೇಳಿಕೊಟ್ಟು ಅವರನ್ನು ಕರ್ಮಸಾಧಕರನ್ನಾಗಿ ಮಾಡುವಂತೆಯೂ, ಅಗ್ನಿಯು ಯಜಮಾನರಿಗೆ ಸದುಪದೇಶವನ್ನು ಬೋಧಿಸಿ ಸನ್ಮಾರ್ಗಪ್ರವರ್ತಕರನ್ನಾಗಿ ಮಾಡುವನೆಂದು ಆಶಂಸನೆಯು ವಿವೃತವಾಗಿದೆ.

**ಜನಾನಾಂ ಕ್ಷಿತಯಃ ಪುರುದ್ರುಹಃ**—**ಕ್ಷಿತಯಃ** ಎಂಬ ಪದವು ಮನುಷ್ಯನಾಮಗಳಲ್ಲಿ (ನಿ. ೩-೭) ಉಕ್ತವಾಗಿದೆ. **ಮನುಷ್ಯಾಣಾಂ ಮನುಷ್ಯಾಃ ನಾನಾವಿಧದ್ರೋಹಯುಕ್ತಾಃ | ಲೋಕೇ ಪರಸ್ಪರಮಾತ್ಸರ್ಯಾದಿನಾ ಅನ್ಯೋನ್ಯಮಸಹಮಾನಾಃ ಜನಾಃ ವರ್ತಂತೇ |** ಮನುಷ್ಯರು ತಮಗಿಂತ ಬೇರೆಯಾದ ಮನುಷ್ಯರ ವಿಷಯದಲ್ಲಿ ದ್ರೋಹವನ್ನು ಮಾಡುವವರಾಗಿರುವರು ಮತ್ತೂ ಅನ್ಯೋನ್ಯವಾಗಿ ಇತರರ ಅಭಿವೃದ್ಧಿಯನ್ನು ಸಹಿಸದೆ ಇರುವ ಸ್ವಭಾವದಿಂದ ಇರುವರು. ಆದುದರಿಂದ ಇತರರನ್ನು ಕೆಡಿಸುವ ಯೋಚನೆಯನ್ನು ಮಾಡುವರು ಎಂದು ಅರ್ಥವು ವರ್ಣಿತವಾಗಿದೆ.

**ಪ್ರತೀಚೀಃ ಅರಾತೀಃ ಪ್ರತಿ ದಹತಾತ್**—ಪ್ರತೀಚಿ ಶಬ್ದವು **ಪ್ರತಿಕೂಲತಯಾ ಅಸ್ಮದಾಭಿಮುಖ್ಯೇನ ಆಗಚ್ಛತಃ** ಯಜಮಾನರಿಗೆ ಕೆಡಕನ್ನು ಆಚರಿಸುವುದಕ್ಕಾಗಿ ಯಜಮಾನರಿಗೆ ವಿರುದ್ಧವಾದ ಕರ್ಮಗಳನ್ನು ಆಚರಿಸು

ವನರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿ, ಈರೀತಿಯಾಗಿ ಶತ್ರುಗಳಾಗಿರುವವರನ್ನು ಅಗ್ನಿಯು ಸುಟ್ಟು ನಾಶಪಡಿಸಲಿ ಎಂಬ ಯಜಮಾನರ ಆಶಂಸಾರೂಪವಾದ ಅರ್ಥವು ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಭವ**—ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸುಮನಾಃ**—**ಸೋರ್ಮನಸೀ ಅಲೋಮೋಷಸೀ** (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರ ಪದಾದ್ಯುದಾತ್ತಸ್ವರ ಬರುತ್ತದೆ.

**ಉಪೇತೌ**—ಇಣ್ ಗತೌ ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಪ್ರಾದಿಸಮಾಸ. ತಾದಿಯಾಗಿ ನಕಾರ ಇತ್ತಾಗಿರುವ ಪ್ರತ್ಯಯಾಂತವು ಪರದಲ್ಲಿರುವುದರಿಂದ **ತಾದೌ ಚನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಸಖ್ಯೇ**—**ಸಮಾನೇ ಖ್ಯಃ ಸ್ಚೋದಾತ್ತಃ** (ಉ. ಸೂ. ೪-೫೩೬) ಎಂಬುದರಿಂದ, ಖ್ಯಾ ಪ್ರಕಥನೇ ಈ ಧಾತುವಿಗೆ ಸಮಾನವೆಂಬುದು ಉಪಪದವಾಗಿರುವಾಗ ಇಣ್ ಪ್ರತ್ಯಯ. ಡಿತ್ವ ವಿಧಾನಮಾಡಿರುವುದರಿಂದ ಟಿಗೆ (ಆ) ಲೋಪ. ತತ್ಸಂನಿಯೋಗದಿಂದ ಯಕಾರ ಲೋಪ. **ಸಮಾನಸ್ಯ ಛಂದಸ್ಯ**—(ಪಾ. ಸೂ. ೬-೩-೮೪) ಎಂಬುದರಿಂದ ಸಮಾನವೆಂಬುದಕ್ಕೆ ಸಭಾವ. ಉದಾತ್ತವೆಂಬುದರಿಂದ ಉಪಪದಕ್ಕೆ (ಸ) ಉದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಸಾಧುಃ**—ರಾಧ ಸಾಧ ಸಂಸಿದ್ಧೌ. ಧಾತು. **ಕೃವಾಪಾಜಿ**-(ಉ.ಸೂ. ೧-೧)ಎಂಬುದರಿಂದ ಉಣ್ ಪ್ರತ್ಯಯ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರತೀಚೀಃ**—ಅಂಚು ಗತಿಪೂಜನಯೋಃ ಧಾತು. **ಋತ್ವಿಕ್‌ದಧೃಕ್**—(ಪಾ.ಸೂ. ೩-೨-೫೯) ಎಂಬುದರಿಂದ ಸುಬಂತ ಉಪಪದವಾಗಿರುವಾಗ ಕ್ವಿನ್ ಪ್ರತ್ಯಯ. ಪುನಃ ಸ್ತ್ರೀತ್ವ ವಿವಕ್ಷಾಮಾಡಿದಾಗ ಉಗಿತ್ತಾದುದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್ ಪ್ರಾಪ್ತವಾದರೆ **ಧಾತೋರುಗಿತಃ ಪ್ರತಿಷೇಧಃ** (ಪಾ.ಸೂ. ೪-೧-೬-೧) ಎಂಬ ವಾರ್ತಿಕದಿಂದ ನಿಷೇಧ ಬಂದರೆ **ಅಂಚತೇಶ್ಚೋಪಸಂಖ್ಯಾನಮ್** ಎಂಬ ವಚನದಿಂದ ಪುನಃ ಙೀಪ್ ಬರುತ್ತದೆ. ಅಜಾದಿ ಪ್ರತ್ಯಯ ಪರವಾದುದರಿಂದ ಭ ಸಂಜ್ಞಾ ಇರುವುದರಿಂದ **ಅಚಃ** (ಪಾ.ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. **ಚೌ** (ಪಾ. ಸೂ. ೬-೩-೧೩೮) ಎಂಬುದರಿಂದ ಪೂರ್ವಕ್ಕೆ ದೀರ್ಘ. ದ್ವಿತೀಯಾಬಹುವಚನಾಂತರೂಪ. ಛಾಂದಸವಾಗಿ ಲಿಂಗವ್ಯತ್ಯಯ ಬಂದಿದೆ.

**ದಹತಾತ್**—ದಹ ಭಸ್ಮೀಕರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸ್ಸೇರ್ಹ್ಯಪಿಚ್ಚ** ಎಂಬುದರಿಂದ ಅದಕ್ಕೆ ಹಿ ಆದೇಶ. **ತುಹ್ಯೋಸ್ತಾತಙ್ ಆಶಿಷ್ಯನ್ಯತರಸ್ಯಾಮ್** (ಪಾ. ಸೂ. ೭-೧-೩೫) ಎಂಬುದರಿಂದ ಅದಕ್ಕೆ ಆಶೀರಾರ್ಥತೋರುವಾಗ ತಾತಙಾದೇಶ. ಶಪ್ ವಿಕರಣ. ದಹತಾತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅರಾತೀಃ—ರಾ ದಾನೇ. ಧಾತು. ಕ್ತಿಚ್‌ಕ್ತೌ ಚ ಸಂಜ್ಞಾಯಾಮ್ (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ನಞ್ ತತ್ಪುರುಷಸಮಾಸ. ತತ್ಪುರುಷೇ ತುಲ್ಯಾರ್ಥ—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ವ್ಯತ್ಯಯದಿಂದ ಇಲ್ಲಿ ಲಿಂಗವೈಪರೀತ್ಯ (ಸ್ತ್ರೀಲಿಂಗ) ಬಂದಿದೆ.

———

ಸಂಹಿತಾಪಾಠಃ

ತಪೋ ಷ್ವಗ್ನೇ ಅಂತರಾँ ಅಮಿತ್ರಾँ ತಪಾ ಶಂಸಮರರುಷಃ ಪರಸ್ಯ ।
ತಪೋ ವಸೋ ಚಿಕಿತಾನೋ ಅಚಿತ್ತಾನ್ವಿ ತೇ ತಿಷ್ಠಂತಾಮಜರಾ ಅಯಾಸಃ ॥ ೨ ॥

ಪದಪಾಠಃ

ತಪೋ ಇತಿ । ಸು । ಅಗ್ನೇ । ಅಂತರಾನ್ । ಅಮಿತ್ರಾನ್ । ತಪ । ಶಂಸಂ । ಅರರುಷಃ । ಪರಸ್ಯ ।
ತಪೋ ಇತಿ । ವಸೋ ಇತಿ । ಚಿಕಿತಾನಃ । ಅಚಿತ್ತಾನ್ । ವಿ । ತೇ । ತಿಷ್ಠಂತಾಂ । ಅಜರಾಃ । ಅಯಾಸಃ ॥

ಸಾಯಣಭಾಷ್ಯಂ

ಹೇ ಅಗ್ನೇ ಅಂತರಾನ್ ಅಭಿಭಾವಕಾನಮಿತ್ರಾಞ್ಛತ್ರೂನ್ ಸು ಸುಷ್ಠು ಯಥಾ ಭವತಿ ತಥಾ ತಪೋ । ತಪೈವ । ಬಾಧಸ್ವ । ಕಿಂಚ । ಅರರುಷಸ್ತುಭ್ಯಂ ಹವಿರಪ್ರಯಚ್ಛತೋಽತ ಏವ ಪರಸ್ಯ ಶತ್ರುಭೂತಸ್ಯ ಸ್ತಂ ಶಂಸಮಭಿಲಾಷಂ ತಪ । ಕ್ಷಪಯ । ವಸೋ ಸರ್ವಸ್ಯ ವಾಸಯಿತರ್ಹೇ ಅಗ್ನೇ ಚಿಕಿತಾನಃ ಕರ್ಮಾಭಿಜ್ಞಸ್ತ್ವಮಚಿತ್ತಾನ್ ಸತ್ಕರ್ಮಣ್ಯನಾಸಕ್ತಮನಸ್ಕಾನ್ಪುರುಷಾನ್ ತಪೋ । ಸಂತಪ । ಯಸ್ಮಾದೇವಂ ತಸ್ಮಾತ್ತೇ ತವ ರಶ್ಮಯೋಽಜರಾ ಜರಾರಹಿತಾ ಪ್ರತಿಬಂಧರಹಿತಾ ಅತ ಏವ ಅಯಾಸಃ ಸರ್ವತ್ರ ಗಮನಸ್ವಭಾವಾಃ ಸಂತೋ ವಿ ತಿಷ್ಠಂತಾಂ । ವಿಶೇಷೇಣ ತಿಷ್ಠಂತು ॥ ತಪೋ । ತಪ ಉ । ಗುಣಃ । ಉಞಮವಲಂಬ್ಯ ಉಞ ಇತಿ ಪ್ರಗೃಹ್ಯಸಂಜ್ಞಾ । ಪಾದಾದಿತ್ವಾದನಿಘಾತಃ । ತಪಾ । ತಪ ಸಂತಾಪ ಇತ್ಯಸ್ಯ ಲೋಟಿ ರೂಪಂ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಅರರುಷಃ ರಾ ದಾನ ಇತ್ಯಸ್ಯ ಕ್ವಸೌ ವಸ್ವೇಕಾಜಿತಿ ಪ್ರಾಪ್ತಸ್ಯೇಟಃ ಸಂಪ್ರಸಾರಣಂ ಸಂಪ್ರಸಾರಣಾಶ್ರಯಂ ಚ ಬಲೀಯ ಇತಿ ಸಂಪ್ರಸಾರಣಬಲೀಯಸ್ತ್ವಾನ್ನಿವೃತ್ತಿಃ । ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಸಮಾಸೇ ನಞ್ಸ್ವರಃ । ಚಿಕಿತಾನಃ । ಕಿತ ಜ್ಞಾನ ಇತ್ಯಸ್ಯ ಛಂದಸಿ ಲಿಟ್ । ತಸ್ಯ ಲಿಟಃ ಕಾನಜ್ವೇತಿ ಕಾನಜಾದೇಶಃ । ದ್ವಿರ್ವಚನಂ । ಕಿತ್ವಾದ್ಗುಣಾಭಾವಃ । ಚಿತ್ತ್ವಾದಂತೋದಾತ್ತಃ । ತಿಷ್ಠಂತಾಂ । ಷ್ಠಾ ಗತಿನಿವೃತ್ತೌ । ವಿಪೂರ್ವಾತ್ತಿಷ್ಠತೇಃ ಸಮವಪ್ರವಿಭ್ಯಃ ಸ್ಥ ಇತ್ಯಾತ್ಮನೇಪದಂ । ನಿಘಾತಃ । ಅಯಾಸಃ । ಅಯ ಗತೌ । ಪಚಾದ್ಯಚ್ ಚಿತ್ಸ್ವರಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಅಂತರಾನ್**—ಮೇಲೆಬಿದ್ದು ಆಕ್ರಮಣಮಾಡತಕ್ಕ । **ಅಮಿತ್ರಾನ್**—ಶತ್ರುಗಳನ್ನು । **ಸು**—ಸಂಪೂರ್ಣವಾಗಿ । **ತಪ**—ದಹಿಸು । **ಅರರುಷಃ**—ಹವಿಸ್ಸನ್ನು ಅರ್ಪಿಸದಿರುವ । **ಪರಸ್ಯ**—(ಆದ್ದ

ರಿಂದಲೇ) ಶತ್ರುಭೂತನಾದ ಮಾನವನ | **ಶಂಸಂ**—ಇಷ್ಟಾರ್ಥವನ್ನು | **ತಪ**—ನಾಶಮಾಡು | **ವಸೋ**—ಎಲ್ಲಾ ವಸ್ತುಗಳನ್ನೂ ಅವುಗಳ ಸ್ವಸ್ಥಾನದಲ್ಲಿರಿಸತಕ್ಕ ಅಗ್ನಿಯೇ | **ಚಿಕಿತಾನಃ**—ಕರ್ಮವಿಷಯಕವಾದ ಜ್ಞಾನವುಳ್ಳ ನೀನು | **ಅಚಿತ್ತಾನ್**—ಕರ್ಮಗಳಲ್ಲಿ ಆಸಕ್ತವಾದ ಮನಸ್ಸಿಲ್ಲದ ಪುರುಷರನ್ನು | **ತಪ**—ಹಿಂಸಿಸು (ಈ ರೀತಿ ಶತ್ರುಗಳನ್ನು ನಾಶಮಾಡುವುದರಿಂದ) | **ತೇ**—ನಿನ್ನ ರಶ್ಮಿಗಳು | **ಅಜರಾಃ**—ಪ್ರತಿಬಂಧರಹಿತಗಳಾಗಿಯೂ | **ಅಯಾಸಃ**—ಸರ್ವತ್ರಸಂಚಾರಮಾಡತಕ್ಕ ಸ್ವಭಾವವುಳ್ಳದ್ದಾಗಿಯೂ | **ವಿ ತಿಷ್ಠಂತಾಂ**—ಅತಿಶಯವಾದ ಸ್ಥಿತಿಯನ್ನು ಹೊಂದಲಿ ||

ಭಾವಾರ್ಥ

ಎಲೈ ಅಗ್ನಿಯೇ, ಮೇಲೆ ಬಿದ್ದು ಆಕ್ರಮಣಮಾಡತಕ್ಕ ಶತ್ರುಗಳನ್ನು ಪೂರ್ಣವಾಗಿ ದಹಿಸು. ಹವಿಸ್ಸನ್ನು ಅರ್ಪಿಸದಿರುವುದರಿಂದ ಶತ್ರುಭೂತನಾದ ಮಾನವನ ಇಷ್ಟಾರ್ಥಗಳನ್ನು ನಾಶಮಾಡು. ಸಕಲ ವಸ್ತುಗಳನ್ನೂ ಅವುಗಳ ಸ್ವಸ್ಥಾನದಲ್ಲಿರಿಸತಕ್ಕ ಅಗ್ನಿಯೇ, ಕರ್ಮವಿಷಯಕವಾದ ಜ್ಞಾನವುಳ್ಳ ನೀನು ಕರ್ಮಗಳಲ್ಲಿ ಅನಾಸಕ್ತವಾದ ಮನಸ್ಸುಳ್ಳ ಪುರುಷರನ್ನು ಹಿಂಸಿಸು. ಈ ರೀತಿ ಶತ್ರುಗಳ ದಮನವನ್ನು ಮಾಡುವುದರಿಂದ ನಿನ್ನ ರಶ್ಮಿಗಳು ಪ್ರತಿಬಂಧರಹಿತಗಳಾಗಿಯೂ, ಸರ್ವತ್ರಸಂಚಾರಮಾಡತಕ್ಕ ಸ್ವಭಾವವುಳ್ಳವಾಗಿಯೂ ಇದ್ದು ಅತಿಶಯವಾದ ಸ್ಥಿತಿಯನ್ನು ಹೊಂದಲಿ.

## English Translation

Vex thoroughly, AGNI, our assailing enemies, disappoint the purpose of the adversary who offers not worship : giver of dwellings, you arc cognizant (of sacred rites), vex those who have no thought (of pious acts) so that your undecaying, all-pervading (rays), may ever abide.

ವಿಶೇಷವಿಷಯಗಳು

**ಅಂತರಾ ಅಮಿತ್ರಾನ್ ಸುತಪಃ**—ಈ ವಾಕ್ಯದಲ್ಲಿ ಹೇ ಅಗ್ನೇ ಎಂದು ಅಗ್ನಿಯನ್ನು ಸಂಬೋಧಿಸಿ, **ಅಭಿಭಾವಕಾನ್, ಶತ್ರೂನ್** ಯಜಮಾನರನ್ನು ತಿರಸ್ಕರಿಸುವವರನ್ನೂ ಯಜಮಾನರಿಗೆ ಶತ್ರುಗಳಾಗಿರುವವರನ್ನೂ ಅಗ್ನಿಯು ಚೆನ್ನಾಗಿ ಬಾಧಿಸಲಿ ಎಂದು ಯಜಮಾನನ ಆಶಂಸನೆಯು ವರ್ಣಿತವಾಗಿದೆ.

**ಅರರುಷಃ ಪರಸ್ಯ**—ಅಗ್ನಿಗೆ ಹವಿಸ್ಸನ್ನು ಅರ್ಪಿಸದಿರುವ ಶತ್ರುವಿನ ಕಾರ್ಯವನ್ನೂ, ಅಗ್ನಿಯ ವಿಷಯ ದಲ್ಲಿ ಕೆಟ್ಟದ್ದನ್ನು ಆಚರಿಸುವವನ ಅಭಿಲಾಷೆಯನ್ನೂ ಅಗ್ನಿಯು ನಾಶಪಡಿಸಲಿ ಎಂಬ ಯಜಮಾನರ ಆಶಂಸನೆಯು ವರ್ಣಿತವಾಗಿದೆ.

**ವಸೋ** ಎಂಬ ಪದಕ್ಕೆ ಎಲ್ಲವನ್ನೂ ರಕ್ಷಿತವಾಗಿರುವಂತೆ ಇರಿಸುವವನು ಎಂದು ಅರ್ಥಮಾಡಿ, ಅಗ್ನಿಯನ್ನು ಸಂಬೋಧಿಸಿ ಅಗ್ನಿಯು **ಚಿಕಿತಾನಃ** ಯಜ್ಞಕರ್ಮಗಳ ತಿಳಿವಳಿಕೆಯುಳ್ಳವನಾಗಿ, **ಅಚಿತ್ತಾನ್**—**ಸತ್ಕರ್ಮಣ್ಯ-ನಾಸಕ್ತಮನಸ್ಕಾನ್** ಉತ್ತಮವಾದ ಫಲವನ್ನು ಕೊಡುವ ಕರ್ಮಗಳನ್ನು ಆಚರಿಸದಿರುವ ಮನಸ್ಸುಳ್ಳವರನ್ನು ನಾಶ ಮಾಡಲಿ ಎಂದು ಅರ್ಥವನ್ನು ವಿವರಿಸಿದೆ. **ವಸು** ಎಂಬ ಪದವು ರಶ್ಮಿನಾಮುಗಳಲ್ಲಿಯೂ(ನಿ. ೨-೧೫) ಧನನಾಮುಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. **ಸುಗುರ ಸತ್ಸುಹಿರಣ್ಯಾಃ** ಎಂಬ ಋಕ್ಕಿನಲ್ಲಿ **ವಸುನಾ** ಅಗ್ನೇನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಅಜರಾಃ ಅಯಾಸಃ ವಿತಿಷ್ಠಂತಾಂ—ಜರಾರಹಿತಾಃ ಪ್ರತಿಬಂಧರಹಿತಾಃ ಸರ್ವತ್ರಗಮನಸ್ವಭಾವಾಃ ಅಗ್ನೇಃ ರಶ್ಮಯಃ** | ಕಾಂತಿಯಿಂದ ಕೂಡಿದ ಅಗ್ನಿಯ ಕಿರಣಗಳು ಯಾವಾಗಲೂ ಒಂದೇ ವಿಧವಾಗಿ ಪ್ರಕಾಶಿಸುವವುಗಳಾಗಿಯೂ, ಯಾವ ವಿಧವಾದ ತಡೆಯೂ ಇಲ್ಲದೆ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸುವವುಗಳಾಗಿಯೂ, ಪ್ರಭೂತವಾದ ಪ್ರಕಾಶದಿಂದ ಬೆಳಗಲಿ ಎಂದು ಆಶಂಸಿಸಿದೆ.

ವ್ಯಾಕರಣಪ್ರಕ್ರಿಯಾ

**ತಪೋ**—ತಪ ಉ ಎಂದಿರುವಾಗ ಗುಣ. ಪರಾದಿವದ್ಭಾವವನ್ನು ಆಶ್ರಯಣಮಾಡಿದಾಗ ಉಞಃ (ಪಾ. ಸೂ. ೧-೧-೧೭) ಎಂಬುದರಿಂದ ಪ್ರಗೃಹ್ಯಸಂಜ್ಞಾ ಬರುವುದರಿಂದ ಪದಕಾಲದಲ್ಲಿ ಇತಿ ಪರವಾದಾಗ ಸಂಧಿ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಅಮಿತ್ರಾನ್—ನಞೋ ಜರಮರಮಿತ್ರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ತಪ**—ತಪ ಸಂತಾಪೇ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. **ದ್ವ್ಯಚೋಽತಸ್ತಿಙಃ** (ಪಾ. ಸೂ, ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಹಿಂದಿನಂತೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ಅರರುಷಃ**—ರಾ ದಾನೇ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ ಕ್ವಸು ಆದೇಶ. **ವಸ್ವೇಕಾಜಾ**—(ಪಾ. ಸೂ. ೭-೨-೬೭) ಎಂಬುದರಿಂದ ಇಡಾಗಮ ಪ್ರಾಪ್ತವಾದರೆ **ಸಂಪ್ರಸಾರಣಂ ತದಾಶ್ರಯಕಾರ್ಯಂಚ ಬಲವತ್** ಎಂಬ ವಚನದಿಂದ ಸಂಪ್ರಸಾರಣಕ್ಕೆ ಪ್ರಾಬಲ್ಯವಿರುವುದರಿಂದ ಇಡಾಗಮ ಬರುವುದಿಲ್ಲ. **ವಸೋಃ ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ ಪೂರ್ವರೂಪ. ನಞ್‌ತತ್ಪುರುಷಸಮಾಸದಲ್ಲಿ **ತತ್ಪುರುಷೇ ತುಲ್ಯಾರ್ಥ**—ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಚಿಕಿತಾನಃ**—ಕಿತ ಜ್ಞಾನೇ ಧಾತು. ಛಾಂದಸವಾಗಿ ಲಿಟ್. **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಜಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಚಕಾರಾದೇಶ. ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ತಿಷ್ಠಂತಾಮ್**—ಷ್ಠಾ ಗತಿನಿವೃತ್ತೌ ಧಾತು. ವಿ ಎಂಬ ಉಪಸರ್ಗದ ಸಂಬಂಧವಿರುವುದರಿಂದ **ಸಮವಪ್ರವಿಭ್ಯಸ್ಥಃ** (ಪಾ. ಸೂ. ೧-೩-೨೨) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲೋಟ್ ಪ್ರಥಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಜರಾಃ—ನಞೋಜರಮರ**—( ಪಾ. ಸೂ. ೬-೨-೧೧೬ ) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಅಯಾಸಃ**—ಅಯ ಗತೌ ಧಾತು. **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಪಚಾದಿಪಠಿತವಾದುದರಿಂದ ಅಚ್ ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

———

ಸಂಹಿತಾಪಾಠಃ

ಇಧ್ಮೇನಾಗ್ನ ಇಚ್ಛಮಾನೋ ಘೃತೇನ ಜುಹೋಮಿ ಹವ್ಯಂ ತರಸೇ ಬಲಾಯ ।
ಯಾವದೀಶೇ ಬ್ರಹ್ಮಣಾ ವಂದಮಾನ ಇಮಾಂ ಧಿಯಂ ಶತಸೇಯಾಯ ದೇವೀಂ ॥

ಪದಪಾಠಃ

ಇಧ್ಮೇನ । ಅಗ್ನೇ । ಇಚ್ಛಮಾನಃ । ಘೃತೇನ । ಜುಹೋಮಿ । ಹವ್ಯಂ । ತರಸೇ । ಬಲಾಯ ।
ಯಾವತ್ । ಈಶೇ । ಬ್ರಹ್ಮಣಾ । ವಂದಮಾನಃ । ಇಮಾಂ । ಧಿಯಂ । ಶತಸೇಽಯಾಯ । ದೇವೀಂ ॥

ಸಾಯಣಭಾಷ್ಯಂ

ಹೇ ಅಗ್ನೇ ಇಚ್ಛಮಾನೋ ಧನಂ ಕಾಮಯಮಾನೋಽಹಂ ಯಜಮಾನ ಇಧ್ಮೇನ ಸಮಿಂಧನಕಾರಿ ಸಮಿತ್ಸಮೂಹೇನ ಘೃತೇನಾಜ್ಯೇನ ಸಹ ಹವ್ಯಂ ಹವನಯೋಗ್ಯಂ ಹವಿಃ ಪುರೋಡಾಶಾದಿಕಂ ಜುಹೋಮಿ । ಕಿಮರ್ಥಂ । ತರಸೇ ವೇಗಾಯ ತವ ಸತತಗಮನಸಿದ್ಧ್ಯರ್ಥಂ ಬಲಾಯ ಸಾಮರ್ಥ್ಯಾಯ । ಪುರೋಡಾಶಾದಿಹವಿರ್ಭಾರವಹನಸಿದ್ಧ್ಯರ್ಥಂ ತ್ವಯಿ ಹವಿಃ ಪ್ರಕ್ಷಿಪಾಮಿ । ಕಿಂಚ ಬ್ರಹ್ಮಣಾ ಸ್ತೋತ್ರೇಣ ವಂದಮಾನಸ್ತ್ವಾಂ ಸ್ತುವನ್ನಹಂ ಯಾವದೀಶೇ ಯಾವದ್ಧನಂ ವೋಢುಂ ಶಕ್ನೋಮಿ ತಾವದ್ದೇಹಿ । ತ್ವಂ ಚೇಮಾಮಸ್ಮಾಭಿಃ ಕ್ರಿಯಮಾಣಾಂ ಧಿಯಂ ತ್ವದ್ವಿಷಯಾಂ ಸ್ತುತಿಂ ಶತಸೇಯಾಯಾಪರಿಮಿತಧನಪರ್ಯವಸಾನಾಯ ದೇವೀಂ ದೀಪ್ತಾಮತಿಪ್ರಭೂತಾಂ ಕುರು ॥ ಇಧ್ಮೇನ । ಞಿಇಂಧೀ ದೀಪ್ತೌ । ಇಧ್ಯತೇಽನೇನಾಗ್ನಿರಿತೀಧ್ಮಃ ಕಾಷ್ಠವಿಶೇಷಃ । ಇಷಿಯುಧೀಂಧಿದಸಿಶ್ಯಾಧೂಸೂಭ್ಯೋ ಮಗಿತಿ ಕರಣೇ ಮಕ್ । ಕಿತ್ತ್ವಾದನುನಾಸಿಕ ಲೋಪಃ । ಪ್ರತ್ಯಯಸ್ವರಃ । ಇಚ್ಛಮಾನಃ । ಇಷು ಇಚ್ಛಾಯಾಂ । ವ್ಯತ್ಯಯೇನ ಶಾನಚ್ । ಇಷುಗಮಿಯಮಾಂ ಛ ಇತಿ ಛಕಾರಃ । ಜುಹೋಮಿ । ಹು ದಾನಾದನಯೋರಿತ್ಯಸ್ಯ ಲಟಿ ರೂಪಂ । ಪಾದಾದಿತ್ವಾದನಿಘಾತಃ । ಹವ್ಯಂ । ಹವಮರ್ಹತೀತಿ ಛಂದಸಿ ಚೇತಿ ಯಪ್ರತ್ಯಯಃ । ಭಸಂಜ್ಞಾಯಾಂ ಯಸ್ಯೇತಿ ಲೋಪಃ । ಪ್ರತ್ಯಯಸ್ವರಃ । ಯಾವತ್ । ಯಚ್ಛಬ್ದಾತ್ ಯತ್ತದೇತೇಭ್ಯಃ ಪರಿಮಾಣೇ ವತುಬಿತಿ ವತುಪ್ । ಆ ಸರ್ವನಾಮ್ನ ಇತ್ಯಾಕಾರಃ । ಆದ್ಯುದಾತ್ತಃ । ಈಶೇ । ಈಶ ಐಶ್ವರ್ಯ ಇತ್ಯಸ್ಯ ಲಡುತ್ತಮೈಕವಚನ ಇಟಷ್ಟೇರೇತ್ವಂ । ಅದಾದಿತ್ವಾಚ್ಛಪೋ ಲುಕ್ । ಶತಸೇಯಾಯ । ಷೋ ಅಂತಕರ್ಮಣಿ । ಆದೇಚ ಉಪದೇಶೇಽಶಿತೀತ್ಯಾತ್ವಂ । ಅಚೋ ಯದಿತಿ ಭಾವೇ ಯತ್ । ಈದ್ಯತೀತೀತ್ವಂ ಆರ್ಧಧಾತುಕಲಕ್ಷಣೋ ಗುಣಃ । ಕೃದುತ್ತರಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಇಚ್ಛಮಾನಃ—ಧನವನ್ನು ಅಪೇಕ್ಷಿಸಿ । ಯಾವದೀಶೇ—ನನ್ನ ಶಿಕ್ತಿಯಿರುವಷ್ಟು । ಬ್ರಹ್ಮಣಾ—ಸ್ತೋತ್ರದಿಂದ । ವಂದಮಾನಃ—(ನಿನ್ನನ್ನು) ಪೂಜಿಸುತ್ತಾ । ತರಸೇ—(ನಿನ್ನ) ವೇಗವಾದ

ಪ್ರಸರಕ್ಕಾಗಿಯೂ | **ಬಲಾಯ**—ಸಾಮರ್ಥ್ಯಕ್ಕಾಗಿಯೂ | **ಇಧ್ಮೇನ**—(ನಿನ್ನನ್ನು ಪ್ರಜ್ವಲಿಸುವಂತೆ ಮಾಡುವ) ಕಾಷ್ಠಗಳೊಡನೆಯೂ | **ಘೃತೇನ**—ಘೃತದೊಡನೆಯೂ | **ಹವ್ಯಂ**—ಪುರೋಡಾಶಾದಿರೂಪವಾದ ಹವಿಸ್ಸನ್ನು | **ಜುಹೋಮಿ**—ಅರ್ಪಿಸುತ್ತೇನೆ| **ಇಮಾಂ ಧಿಯಂ**—ನನ್ನಿಂದ ಅರ್ಪಿತವಾದ ಈ ಸ್ತುತಿಯನ್ನು| **ಶತಸೇಯಾಯ**—ಅಪರಿಮಿತವಾದ ಧನವನ್ನು ಫಲರೂಪವಾಗಿ ಪಡೆಯುವುದಕ್ಕಾಗಿ | **ದೇವೀಂ**—ಕಾಂತಿಯುತವಾಗಿ ಮಾಡು ||

ಭಾವಾರ್ಥ

ಎಲೈ ಅಗ್ನಿಯೇ, ನನ್ನ ಶಕ್ತಿಯಿರುವಷ್ಟು ನಿನ್ನನ್ನು ಸ್ತೋತ್ರಮಾಡಿ ಪೂಜಿಸುತ್ತಾ, ನಿನ್ನ ವೇಗವಾದ ಪ್ರಸರಕ್ಕಾಗಿಯೂ, ಸಾಮರ್ಥ್ಯಕ್ಕಾಗಿಯೂ ನಿನ್ನನ್ನು ಪ್ರಜ್ವಲಿಸುವಂತೆ ಮಾಡುವ ಇಧ್ಮದೊಡನೆಯೂ, ಘೃತದೊಡನೆಯೂ ಪುರೋಡಾಶಾದಿರೂಪವಾದ ಹವಿಸ್ಸನ್ನು ಅರ್ಪಿಸುತ್ತೇನೆ. ಅಪರಿಮಿತವಾದ ಧನವನ್ನು ಫಲರೂಪವಾಗಿ ಪಡೆಯುವಂತೆ, ನನ್ನಿಂದ ಅರ್ಪಿತವಾದ ಈ ಸ್ತುತಿಯನ್ನು ಕಾಂತಿಯುತವಾಗಿ ಮಾಡು.

English Translation

Desirous (of wealth) I offer to you, AGNI, an oblation with butter and with fuel for your speed and invigoration, praising you with a holy prayer as much as I am able: (I propitiate you) that you may render this praise resplendent with infinite treasure.

ವಿಶೇಷವಿಷಯಗಳು

**ಇಧ್ಮೇನ—ಇಧ್ಯತೇ ಅನೇನಾಗ್ನಿರಿತೀಧ್ಮಃ ಕಾಷ್ಠವಿಶೇಷಃ** | ಅಗ್ನಿಯನ್ನು (ಉದ್ದೀಪ್ತನನ್ನಾಗಿ) ಜ್ವಾಲೆಗಳಿಂದ ಕೂಡಿ ಪ್ರಕಾಶಿಸುವಂತೆ ಮಾಡುವ ಕಟ್ಟಿಗೆಯು (ಸಮಿತ್ತುಗಳು) ಎಂದು ಇಧ್ಮಶಬ್ದದ ಅರ್ಥವನ್ನು ವಿವರಿಸಿ **ಸಮಿಂಧನಕಾರಿಸಮಿತ್ಸಮೂಹೇನ** ಎಂಬ ಅರ್ಥವನ್ನು ಹೇಳಿದ್ದಾರೆ. ನಿರುಕ್ತಕಾರರು—**ಇಧ್ಮಃ ಸಮಿಂಧನಾತ್** (ನಿ. ೮-೫) ದೀಪ್ತ್ಯರ್ಥಕವಾದ ಇಂಧ್ ಧಾತುವಿನಿಂದ ನಿಷ್ಪನ್ನವಾದುದರಿಂದ ಅಗ್ನಿಯನ್ನು ಪ್ರಕಾಶಗೊಳಿಸುವುದು ಇಧ್ಮವು (ಕಾಷ್ಠವು) ಎಂದು ಅರ್ಥವನ್ನು ಹೇಳಿದ್ದಾರೆ. ಮತ್ತೂ ಇಧ್ಮ ಶಬ್ದದಿಂದ ಸಮಿತ್ತುಗಳು ಅಭಿದೇಯವಾಗುವಕಾರಣ ಸಮಿತ್ತುಗಳಿಗೆ ಪ್ರಾಧಾನ್ಯವನ್ನು ಬೋಧಿಸುವ—

**ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ ಯಜಸಿ ಜಾತವೇದಃ |**
**ಆ ಚ ವಹ ಮಿತ್ರಮಹಶ್ಚಿಕಿತ್ವಾನ್ ತ್ವಂ ದೂತಃ ಕವಿರಸಿ ಪ್ರಚೇತಾಃ ||**
(ಋ. ಸಂ. ೧೦-೧೧೦-೧)

ಎಂಬ ಋಕ್ಕನ್ನು ಉದಹರಿಸಿ, **ಯಜ್ಞೇಧ್ಮ ಇತಿ ಕಾತ್ಥಕ್ಯಃ; ಅಗ್ನಿರಿತಿ ಶಾಕಪೂಣಿಃ**, ಎಂದು ಎರಡು ಮತಗಳನ್ನೂ ಪ್ರದರ್ಶನೆ ಮಾಡಿರುವರು. ಈ ಋಕ್ಕಿನಲ್ಲಿ ಯಜ್ಞದಲ್ಲಿ ಉಪಯೋಗಿಸ್ಪಡುವ (ಇಧ್ಮವು) ಸಮಿತ್ಸಮೂಹವು ಅಗ್ನಿಯ ತಾದಾತ್ಮ್ಯದಿಂದ ಪ್ರತಿಪಾದಿತವಾಗಿದೆ ಎಂದು ಕಾತ್ಥಕ್ಯರೆಂಬ ಆಚಾರ್ಯರು ವರ್ಣಿಸಿರುವರು ಎಂಬ ಮತವನ್ನೂ, ಅಗ್ನಿಯೇ ಪ್ರತಿಪಾದಿತನಾಗಿರುವನೆಂದು ಶಾಕಪೂಣಿ ಆಚಾರ್ಯರು ಉಪಪಾದಿಸಿದ್ದಾರೆ ಎಂಬ ಮತವನ್ನೂ ನಿರ್ದೇಶಮಾಡಿದೆ. ದುರ್ಗಾಚಾರ್ಯರು **ಜಾತವೇದಸ ಆಧಾರ ಇತಿ ತದಭಿಧಾನೇನ ಸಂಬೋಧ್ಯತೇ| ದೃಷ್ಟಾ ಹಿ ಮಂಚಸ್ಥೇಷು ಕ್ರೋಶತ್ಸು ತದಭಿಧಾನಪ್ರಾಪ್ತಿಃ** | ಮಂಚಾಃ ಕ್ರೋಶಂತಿ–ಮಂಚಗಳು ಕೂಗುತ್ತವೆ ಎಂಬಲ್ಲಿ

ಮಂಚಸ್ಥರಾದವರು ಎಂದು ಮಂಚಪದಕ್ಕೆ ಅರ್ಥವನ್ನು ಹೇಳುವಂತೆ, ಉದ್ದೀಪ್ತನಾಗುವ ಜಾತವೇದಾಗ್ನಿಗೆ ಉದ್ದೀಪನಾಧಾರವಾಗಿರುವ (ಸಮಿತ್ತುಗಳು) ಇಧ್ಮವು ಅಗ್ನಿತಾದಾತ್ಮ್ಯದಿಂದ ಉಕ್ತವಾಗಿದೆ ಎಂದು ಅರ್ಥವನ್ನು ವರ್ಣಿಸಿದ್ದಾರೆ.

ಕಾತ್ಥಕ್ಯರ ಮತದಲ್ಲಿ—**ಸಮಿಧಾಮೇವ ಇಧ್ಮಭಾವಮುಪಗತಾನಾಂ ಅಗ್ನಿನಾ ಸಂದೀಪ್ತಾನಾಂ ಸಮುದಾಯಾಪೇಕ್ಷಮಿದಂ**—ಇಧ್ಮಭಾವವನ್ನು ಹೊಂದಿ ಅಗ್ನಿಯಿಂದ ಸಂದೀಪ್ತವಾಗಿರುವ ಸಮಿತ್ತುಗಳ ಸಮುದಾಯವೇ ಇಲ್ಲಿ ಪ್ರತಿಪಾದಿತವಾಗಿದೆ ಎಂದು ಯುಕ್ತಿಯನ್ನು ಉಪಪಾದನೆಮಾಡಿ ಯಜ್ಞೇಧ್ಮ ಎಂಬ ಅಭಿಪ್ರಾಯವು ವರ್ಣಿತವಾಗಿದೆ.

**ಸರ್ವಾಣ್ಯೇತಾನಿ ಅಭಿಧಾನಾನಿ ಕರ್ಮಾಣಿ ಚ ಅಗೌಣಾನಿ ಅಗ್ನಿಪಕ್ಷೇ, ಗೌಣಾನಿ ಇಧ್ಮಪಕ್ಷೇ, ಗೌಣಮುಖ್ಯಯೋಶ್ಚ ಮುಖ್ಯೇ ಕಾರ್ಯಸಂಪ್ರತ್ಯಯಃ ಇತಿ ನ್ಯಾಯಃ। ಸ ಏಷೋಽಗ್ನಿಃ ಸಮಿತ್ಕಲಾಪಮಿಧ್ಮಮಾತ್ಮಕ್ಷೇಪೇನಾಭಿಸಂಪನ್ನಃ ತದಾಖ್ಯತಾಮುಪಗತಃ ತೇನ ಇಧ್ಮಾಭಿಧಾನೇನ ಇಜ್ಯತ ಇತಿ ಇಧ್ಮಶಬ್ದಃ ಸಮಾಮ್ನಾತಃ ನಾಗ್ನಿಶಬ್ದಃ ಇತಿ।**

ಶಾಕಪೂಣಿ ಎಂಬ ಆಚಾರ್ಯರು ಅಗ್ನಿಯನ್ನೂ ಇತರ ದೇವತೆಗಳನ್ನೂ ಉದ್ದೇಶಮಾಡಿ ಉಕ್ತವಾಗಿರುವ ಕರ್ಮಗಳೆಲ್ಲವೂ, ಅಗ್ನಿಯ ವಿಷಯದಲ್ಲಿಯೂ ಸಾಕ್ಷಾತ್ತಾಗಿ ಪ್ರತಿಪಾದಕವಾಗಿರುವ ಆಯಾಯ ಶಬ್ದಗಳಿಂದ ಪ್ರತಿಪಾದಿತವಾಗಿವೆ. ಗೌಣವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದಾರ್ಥ, ಮುಖ್ಯವಾಗಿ ಪ್ರತಿಪಾದಿಸುವ ಶಬ್ದಾರ್ಥ ಇವೆರಡರಲ್ಲಿ ಮುಖ್ಯಾರ್ಥದಲ್ಲಿಯೇ ಕಾರ್ಯವನ್ನು ಆಚರಿಸಬೇಕು ಎಂದು ನ್ಯಾಯವನ್ನು ಆಶ್ರಯಿಸಿ, ಈ ಮಂತ್ರದಿಂದ ಅಗ್ನಿಯೇ ಪ್ರತಿಪಾದಿತನಾಗಿರುವನು ಎಂದು ವಿವರಿಸಿದ್ದಾರೆ.

ಯಾಸ್ಕರು ಅಗ್ನಿಯೇ ಪ್ರತಿಪಾದಿತನಾಗಿರುವನು ಎಂಬುದಾಗಿ ಸಿದ್ಧಾಂತವನ್ನು ಹೇಳುವವರಾದರೂ, ಇಲ್ಲಿ ಅಗ್ನಿಯು ಸಮಿತ್ಸಮೂಹವು ತನ್ನನ್ನು ಉದ್ದೀಪ್ತನನ್ನಾಗಿ ಮಾಡುವಕಾರಣ ತನ್ನ ತಾದಾತ್ಮ್ಯದಿಂದ ಇರುವುದೆಂದು ತಿಳಿದು, ಇಧ್ಮತಾದಾತ್ಮ್ಯದಿಂದಲೇ ತಾನೂ ಇರುವವನಾಗಿ ಇಧ್ಮಶಬ್ದದಿಂದಲೇ ವ್ಯವಹೃತನಾಗಿರುವನು. ಯಾಗಸಾಧನವಾಗಿರುವುದರಿಂದ **ಇಜ್ಯತ ಇತಿ ಇಧ್ಮಃ** ಎಂದು ಇಧ್ಮಶಬ್ದಾರ್ಥವನ್ನು ವಿವರಿಸಿ, ಅಗ್ನಿಶಬ್ದವು ಇಲ್ಲದಿದ್ದರೂ ಇಧ್ಮಶಬ್ದದಿಂದಲೇ ಅಗ್ನಿಯು ಇಲ್ಲಿ ಪ್ರತಿಪಾದಿತನಾಗಿರುವನೆಂದು ಹೇಳಿರುವರು.

**ಇಚ್ಛಮಾನಃ**—ಈ ಪದದಿಂದ **ಧನಂ ಕಾಮಯಮಾನಃ ಅಹಂ ಯಜಮಾನಃ** ಧನವನ್ನು ಹೊಂದಲು ಅಪೇಕ್ಷೆಯನ್ನು ಹೊಂದಿರುವ ಯಜಮಾನನಾದ ನಾನು ಎಂದು ಅರ್ಥವನ್ನು ಹೇಳಿ, **ಇಧ್ಮೇನ ಘೃತೇನ ಹವ್ಯಂ ಜುಹೋಮಿ** ಯಜಮಾನನಾದ ನಾನು ಸಮಿತ್ಸಮೂಹದಿಂದಲೂ, ಆಜ್ಯದಿಂದಲೂ ಕೂಡಿ, ಹೋಮವನ್ನುಮಾಡಲು ಸಿದ್ಧವಾದ ಪುರೋಡಾಶವೇ ಮೊದಲಾದ ಹವಿಸ್ಸುಗಳನ್ನು ಅಗ್ನಿಗಾಗಿಯೂ, ಇತರ ದೇವತೆಗಳಿಗಾಗಿಯೂ ಅರ್ಪಿಸುತ್ತೇನೆ ಎಂದು ಅರ್ಥವನ್ನು ವರ್ಣಿಸಿದೆ.

**ತರಸೇ—ಬಲಾಯ। ಪುರೋಡಾಶಾದಿಹವಿರ್ಭಾರವಹನಸಿದ್ಧ್ಯರ್ಥಂ ತ್ವಯಿ ಹವಿಃ ಪ್ರಕ್ಷಿಪಾಮಿ।** ಸಂತತವಾಗಿ ಸಂಚರಿಸುವ ಅಥವಾ ವ್ಯಾಪಿಸುವ ವೇಗವು ಅಗ್ನಿಗೆ ಉಂಟಾಗುವುದಕ್ಕಾಗಿಯೂ, ಯಜಮಾನರು ಅರ್ಪಿಸುವ ಪುರೋಡಾಶವೇ ಮೊದಲಾದ ಹವಿಸ್ಸುಗಳನ್ನು ದೇವತೆಗಳಿಗೆ ಒಯ್ಯುವ ಸಾಮರ್ಥ್ಯವು ಉಂಟಾಗುವುದಕ್ಕಾಗಿಯೂ, ಅಗ್ನಿಯಲ್ಲಿ ಹವಿಸ್ಸುಗಳನ್ನು ಯಜಮಾನನಾದ ನಾನು ಅರ್ಪಿಸುವೆನು ಎಂದು ಅರ್ಥವು ವಿವೃತವಾಗಿದೆ.

**ಬ್ರಹ್ಮಣಾ ವಂದಮಾನಃ ಯಾವದೀಶೇ—ಸ್ತೋತ್ರೇಣ ತ್ವಾಂ ಸ್ತುವನ್ ಯಾವದ್ಧನಂ ವೋಢುಂ ಶಕ್ನೋಮಿ ತಾವದ್ದೇಹಿ**—ನಿರುಕ್ತಕಾರರಿಂದ ಬ್ರಹ್ಮ ಎಂಬ ಪದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಮತ್ತು—

ಯೊಮಿಥರ್ವಾ ಮಸುಷ್ವಿತಾ ಪಥ್ಯ ಇ್ ಧಿಯಮುತ್ನತ ।
ತಸ್ಮಿೄ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮುಗ್ಮತಾರ್ಚನ್ನನು ಸ್ವರಾಜ್ಯಂ ॥
(ಋ. ಸಂ. ೧-೮೦-೧೬)

ಈ ಋಕ್ಕಿನಲ್ಲಿ ಬ್ರಹ್ಮಾಣಿ ಕರ್ಮಾಣಿ ಎಂದು ಅರ್ಥವು ಉಕ್ತವಾಗಿದೆ. ಇಲ್ಲಿ ಸಾಯಣರು ಬ್ರಹ್ಮಣಾ ಎಂಬ ಪದಕ್ಕೆ ಸ್ತೋತ್ರವೆಂದು ಅರ್ಥವನ್ನು ವಿವರಿಸಿದ್ದಾರೆ. ಯಜಮಾನನು ಅಗ್ನಿಯನ್ನು ಸ್ತೋತ್ರಗಳಿಂದ ಸ್ತುತಿಮಾಡಿ ಸಂತೋಷ ಪಡಿಸಿ ಅಗ್ನಿಯ ಅನುಗ್ರಹದಿಂದ ತಾನು ವಹಿಸುವಷ್ಟು ದ್ರವ್ಯವನ್ನು ಅಗ್ನಿಯು ತನಗೆ ದೊರಕಿಸಲೆಂಬ ಅರ್ಥವು ವಿವೃತ ವಾಗಿದೆ.

**ಇವಾಂ ಧಿಯಂ ಶತಸೇಯಾಯ ದೇವೀಂ**—ಧೀಶಬ್ದವು ಕರ್ಮನಾಮಗಳಲ್ಲಿಯೂ (ನಿ. ೩-೨) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಉಕ್ತವಾಗಿದೆ. ಇಲ್ಲಿ ಸ್ತುತಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ಮಾಡಿದೆ. ಅಗ್ನಿಯು ಯಜಮಾನರಾದ ನಮ್ಮಿಂದ ಉಕ್ತವಾದ ಸ್ತುತಿಯನ್ನು **ಅಪರಿಮಿತಧನ ಪರ್ಯವಸಾನಾಯ ಅತಿಪ್ರಭೂತಾಂ ಕುರು** ಕೇಳಿ ಸ್ತುತಿಮಾಡುತ್ತಿರುವ ನಮಗೆ ಪ್ರಭೂತವಾದ ಧನವು ದೊರಕು ವಂತೆ ಅನುಗ್ರಹಿಸಲಿ ಎಂದು ಅರ್ಥವನ್ನು ವಿವರಿಸಿದೆ.

**ತರಸೇ**—ತರಸ್ ಎಂಬ ಪದವು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಬಲಾಯ ಎಂದು ಪ್ರತ್ಯೇಕ ವಾಗಿ ಪದವು ಪ್ರಯುಕ್ತವಾಗಿರುವಕಾರಣ ಈ ಪದಕ್ಕೆ ವೇಗವೆಂಬ ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಇಧ್ಮೇನ**—ಞಿಇಂಧೀ ದೀಪ್ತೌ ಧಾತು. ಇಧ್ಯತೇ ಅನೇನ ಅಗ್ನಿಃ ಇತಿ ಇಧ್ಮಃ ಕಾಷ್ಠವಿಶೇಷಃ (ಅಶ್ವತ್ಥಾದಿ ಕಟ್ಟಿಗೆ) **ಇಷಿಯುಧೀಂಧಿದಸಿಶ್ಯಾಧೂಸೂಭ್ಯೋ ಮಕ್** (ಉ. ಸೂ. ೧-೧೪೨) ಎಂಬುದರಿಂದ ಮಕ್ ಪ್ರತ್ಯಯ. ಕಿತ್ತಾದುದರಿಂದ **ಅನಿದಿತಾಂಹಲಉಪ**—ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಇಧ್ಮ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಇಚ್ಛಮಾನಃ**—ಇಷು ಇಚ್ಛಾಯಾಂ ಧಾತು. **ವ್ಯತ್ಯಯೋಬಹುಲಂ** ಎಂಬುದರಿಂದ ಲಟಿಗೆ ಶಾನಚಾ ದೇಶ. ಶ ವಿಕರಣ. **ಇಷುಗಮಿಯಮಾಂಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿನ ಷಕಾರಕ್ಕೆ ಛಕಾ ರಾದೇಶ. **ಆನೇಮುಕ್** ಎಂಬುದರಿಂದ ಅದಂತಕ್ಕೆ ಮುಕಾಗಮ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ವಿಕರಣಸ್ವರ ಉಳಿಯುತ್ತದೆ.

**ಜುಹೋಮಿ**—ಹು ದಾನಾದನಯೋಃ ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವ್ಯತ್ಯಯದಿಂದ ಧಾತುಸ್ವರ ಉಳಿಯುತ್ತದೆ.

**ಹವ್ಯಂ**—ಹವನಂ ಅರ್ಹತಿ ಇತಿ ಹವ್ಯಂ **ಛಂದಸಿ ಚ** (ಪಾ. ಸೂ. ೫-೧-೬೭) ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಭಸಂಜ್ಞಾ ಇರುವುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರ ದಿಂದ ಅಂತೋದಾತ್ತವಾಗುತ್ತದೆ.

**ಯಾವತ್**—ಯಚ್ಛಬ್ದ. **ಯತ್ತದೇತೇಭ್ಯಃ ಪರಿಮಾಣೇವತುಪ್** (ಪಾ. ಸೂ. ೫-೨-೩೯) ಎಂಬುದ ರಿಂದ ಪರಿಮಾಣಾರ್ಥತೋರುವಾಗ ವತುಪ್ ಪ್ರತ್ಯಯ. **ಆ ಸರ್ವನಾಮ್ನಃ** (ಪಾ. ಸೂ. ೬-೩-೯೧) ಎಂಬುದರಿಂದ

ಪ್ರತ್ಯಯಪರವಾದಾಗ ಆಕಾರಾದೇಶ. ಯಾವತ್ ಎಂದು ರೂಪವಾಗುತ್ತದೆ. ಪ್ರತ್ಯಯ ಪಿತ್ತಾದುದರಿಂದ ಆದ್ಯು-ದಾತ್ತಸ್ವರ ಬರುತ್ತದೆ.

**ಈಶೇ**—ಈಶ ಐಶ್ವರ್ಯೇ ಧಾತು. ಅದಾದಿ. ಲಟ್ ಉತ್ತಮಪುರುಷಏಕವಚನದಲ್ಲಿ ಇಟ್ ಪ್ರತ್ಯಯ. **ಟಿತಆತ್ಮನೇಪದಾನಾಂ**—ಎಂಬುದರಿಂದ ಅದಕ್ಕೆ ಏತ್ವ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಈಶೇ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅನುದಾತ್ತೇತ್ತಾದ ಧಾತುವಿನ ಪರದಲ್ಲಿ ಪ್ರತ್ಯಯ ಬಂದುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಂದಮಾನಃ**—ವದಿ ಅಭಿವಾದನಸ್ತುತ್ಯೋಃ ಧಾತು. ಲಟಿಗೆ ಶಾನಚಾದೇಶ. ಇದಿತ್ತಾದುದರಿಂದ ನುಮಾಗಮ. **ತಾಸ್ಯನುದಾತ್ತೇತ್**–ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಶಶಸೇಯಾಯ**—ಷೋ ಅಂತಕರ್ಮಣಿ ಧಾತು. **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಭಾವಾರ್ಥದಲ್ಲಿ ಯತ್ ಪ್ರತ್ಯಯ. ಅಶಿತ್ತಾದ ಪ್ರತ್ಯಯ ಪರವಾದುದರಿಂದ **ಆದೇಚಉಪದೇಶೇಶಿತಿ** (ಪಾ.ಸೂ. ೬-೧-೪೫) ಎಂಬುದರಿಂದ ಧಾತುವಿನ ಓಕಾರಕ್ಕೆ ಆತ್ವ. ಸಾಯ ಎಂದಿರುವಾಗ **ಈದ್ಯತಿ** (ಪಾ. ಸೂ. ೬-೪-೬೫) ಎಂಬುದರಿಂದ ಆಕಾರಕ್ಕೆ ಈತ್ವ. ಸೀಯ ಎಂದಿರುವಾಗ ಆರ್ಧಧಾತುಕಪರವಾದುದರಿಂದ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಈಕಾರಕ್ಕೆ ಗುಣ. **ಯತೋನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

———

ಸಂಹಿತಾಪಾಠಃ

ಉಚ್ಛೋಚಿಷಾ ಸಹಸಸ್ಪುತ್ರ ಸ್ತುತೋ ಬೃಹದ್ವಯಃ ಶಶಮಾನೇಷು ಧೇಹಿ ।
ರೇವದಗ್ನೇ ವಿಶ್ವಾಮಿತ್ರೇಷು ಶಂ ಯೋರ್ಮರ್ಮೃಜ್ಮಾ ತೇ ತನ್ವಂ೧ ಭೂರಿ ಕೃತ್ವಃ॥

ಪದಪಾಠಃ

ಉತ್ । ಶೋಚಿಷಾ । ಸಹಸಃ । ಪುತ್ರ । ಸ್ತುತಃ । ಬೃಹತ್ । ವಯಃ । ಶಶಮಾನೇಷು । ಧೇಹಿ ।
ರೇವತ್ । ಅಗ್ನೇ । ವಿಶ್ವಾಮಿತ್ರೇಷು । ಶಂ । ಯೋಃ । ಮರ್ಮೃಜ್ಮ । ತೇ । ತನ್ವಂ । ಭೂರಿ । ಕೃತ್ವಃ ॥

ಸಾಯಣಭಾಷ್ಯಂ

ಸಹಸಸ್ಪುತ್ರ ಹೇ ಅಗ್ನೇ ಶೋಚಿಷಾ ಸ್ವಕೀಯಯಾ ದೀಪ್ತ್ಯಾ ಉತ್ । ಉದ್ದೀಪ್ಯಸ್ವ । ಸ್ತುತಃ ಸ್ತೋತ್ರಶಸ್ತ್ರಸಾಧನಭೂತೈರ್ಮಂತ್ರೈಃ ಸ್ತುತಸ್ತ್ವಂ ಶಶಮಾನೇಷು । ಶಶಮಾನಃ ಶಂಸಮಾನಃ । ನಿ.೭-೮। ಇತಿ ಯಾಸ್ಕಃ । ತ್ವದ್ವಿಷಯಶಂಸನಂ ಕುರ್ವಾಣೇಷು ವಿಶ್ವಾಮಿತ್ರೇಷು ವಿಶ್ವಾಮಿತ್ರಗೋತ್ರೋತ್ಪನ್ನೇಷು । ವಿಶ್ವಂ ಮಿತ್ರಮಸ್ಯೇತಿ ವಿಶ್ವಾಮಿತ್ರ ಏಕಃ । ಏಕಸ್ಮಿನ್ಬಹುವಚನಂ ಪೂಜಾರ್ಥಂ । ತಥಾವಿಧೇಷ್ವಸ್ಮಾಸು ರೇವದ್ಧನಯುಕ್ತಂ ಬೃಹತ್ಪ್ರಭೂತಂ ವಯಃ । ವಯಃಶಬ್ದೋಽನ್ನವಾಚೀ । ಅರ್ಕೋ ವಯಃ ಪ್ರದ್ಮೇತ್ಯ-

ನ್ನನಾಮಸು ಪಠಿತತ್ವಾತ್। ತಾದೃಶಂ ಪ್ರಭೂತಮನ್ನಂ ಧೇಹಿ। ವಿಧೇಹಿ। ಕಿಂಚ ಶಂ ರೋಗಾಣಾಂ ಶಮನಂ ಚಾಸ್ಮಾಸು ಧೇಹಿ। ಯೋರ್ಭಯಾನಾಂ ಯಾವನಮಮಿಶ್ರಣಂ ಚ ಧೇಹಿ। ಶಮನಂ ಚ ರೋಗಾಣಾಂ ಯಾವನಂ ಚ ಭಯಾನಾಮಮಿತಿ ಯಾಸ್ಕಃ । ಕೃತ್ವೋಽಸ್ಮಾಭಿಃ ಕ್ರಿಯಮಾಣಸ್ಯ ಕರ್ಮಣಃ ಪ್ರಯೋಜಕಕರ್ತೃತ್ವೇನ ಕರ್ತರ್ಹೇ ಅಗ್ನೇ ತೇ ತವ ತನ್ವಂ ತನುಂ ಭೂರಿ ಬಹುವಾರಂ ಮರ್ಮೃಜ್ಮ । ಪುನಃ ಪುನಃ ಸೋಮಾಜ್ಯಪಯಃಪ್ರಭೃತಿಭಿರ್ವಯಂ ಸಿಂಚಾಮಃ ॥ ಶಶಮಾನೇಷು । ಶಶ ಪ್ಲುತಗತಾವಿತ್ಯಯಂ ಧಾತುರತ್ರ ಸ್ತುತ್ಯರ್ಥಃ । ತಾಚ್ಛೀಲ್ಯವಯೋವಚನಶಕ್ತಿಷ್ವಿತಿ ಚಾನಶ್ । ಚಿತ ಇತ್ಯಂತೋದಾತ್ತತ್ವಂ । ಧೇಹಿ । ಡುಧಾಞ್ ಧಾರಣಪೋಷಣಯೋರಿತ್ಯಸ್ಯ ಲೋಟಿ ರೂಪಂ । ರೇವತ್ । ರಯಿರಸ್ಯಾಸ್ತೀತಿ ಮತುಪ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ। ಛಂದಸೀರ ಇತಿ ತಸ್ಯ ವತ್ವಂ । ರಯೇರ್ಮತೌ ಬಹುಲಂ ಛಂದಸೀತಿ ಸಂಪ್ರಸಾರಣಂ । ಪರಪೂರ್ವತ್ವಂ । ಗುಣಃ । ವಿಶ್ವಾಮಿತ್ರೇಷು । ಮಿತ್ರೇ ಚರ್ಷೌ । ಪಾ ೬-೩-೧೩೦। ಇತಿ ಪೂರ್ವಪದಸ್ಯ ದೀರ್ಘತ್ವಂ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಮರ್ಮೃಜ್ಮ । ಮೃಜೂ ಶುದ್ಧಾವಿತ್ಯಸ್ಯ ವರ್ತಮಾನೇ ಲಿಟ್ಯುತ್ತಮಬಹುವಚನೇ ಮಸೋ ಮಾದೇಶಃ । ಅನಿತ್ಯಮಾಗಮಶಾಸನಮಿತೀಡಭಾವಃ । ರೇಫಶ್ಛಾಂದಸಃ । ಪಾದಾದಿತ್ವಾದನಿಘಾತಃ । ಪ್ರತ್ಯಯಸ್ವರಃ । ಭೂರಿ । ಭೂ ಸತ್ತಾಯಾಂ । ಅದಿಶದಿಭೂಶುಭಿಭ್ಯಃ ಕ್ರಿನ್ನಿತಿ ಕ್ರಿನ್ । ಕಿತ್ತ್ವಾದ್ಗುಣಾಭಾವಃ । ನಿತ್ಸ್ವರಃ । ಕೃತ್ವಃ । ಡುಕೃಞ್ ಕರಣೇ । ಸಂಪದಾದಿತ್ವಾದ್ಭಾವೇ ಕ್ವಿಪ್ । ತದಸ್ಯಾಸ್ತೀತಿ ಮತುಪ್ । ಝಯ ಇತಿ ತಸ್ಯ ವತ್ವಂ । ತಸೌ ಮತ್ವರ್ಥ ಇತಿ ಭಸಂಜ್ಞಾಯಾಂ ತಕಾರಸ್ಯ ಜಸ್ತ್ವಾಭಾವಃ । ಮತುವಸೋ ರುರಿತಿ ತಕಾರಸ್ಯ ರುತ್ವಂ ॥

ಪ್ರತಿಪದಾರ್ಥ

**ಸಹಸಸ್ಪುತ್ರ**—ಶಕ್ತಿಪುತ್ರನಾದ । **ಅಗ್ನೇ**—ಅಗ್ನಿಯೇ । **ಶೋಚಿಷಾ**—ನಿನ್ನ ದೀಪ್ತಿಯಿಂದ । **ಉತ್**—ಎದ್ದು ಪ್ರಕಾಶಿಸು । **ಸ್ತುತಃ**—ಮಂತ್ರಗಳಿಂದ ಸ್ತುತನಾದ ನೀನು । **ಶಶಮಾನೇಷು**—ನಿನ್ನನ್ನು ಸ್ತುತಿಸತಕ್ಕ । **ವಿಶ್ವಾಮಿತ್ರೇಷು**—(ವಿಶ್ವಾಮಿತ್ರವಂಶೋತ್ಪನ್ನರಲ್ಲಿ ಎಂದರೆ ನನ್ನ ಸಂತತಿಯವರಲ್ಲಿ) । **ರೇವತ್**—ಧನಯುಕ್ತವಾದುದೂ । **ಬೃಹತ್**— ಪ್ರಭೂತವಾದುದೂ ಆದ । **ವಯಃ** — ಅನ್ನವನ್ನು । **ಧೇಹಿ** — ಒದಗಿಸಿಕೊಡು (ಹಾಗೆಯೇ) । **ಶಂ**—ರೋಗರಹಿತವಾದ ಸುಖವನ್ನೂ । **ಯೋಃ**—ಭಯರಾಹಿತ್ಯವನ್ನೂ (ಉಂಟುಮಾಡು) । **ಕೃತ್ವಃ**—(ನಮ್ಮ) ಕರ್ಮಗಳಿಂದ ಪರಿಷ್ಕೃತನಾದ ಅಗ್ನಿಯೇ । **ತೇ**—ನಿನ್ನ । **ತನ್ವಂ**—ದೇಹವನ್ನು । **ಭೂರಿ**—ಅನೇಕಸಲ । **ಮರ್ಮೃಜ್ಮ**—(ಸೋಮ, ಆಜ್ಯ ಮತ್ತು ಪಯಃ) ಇವುಗಳಿಂದ ಪ್ರೋಕ್ಷಿಸಿ ಶುದ್ಧಿಮಾಡುತ್ತೇವೆ.

ಭಾವಾರ್ಥ

ಶಕ್ತಿಪುತ್ರನಾದ ಅಗ್ನಿಯೇ, ನಿನ್ನ ಸಹಜವಾದ ದೀಪ್ತಿಯಿಂದ ಎದ್ದು ಪ್ರಕಾಶಿಸು. ಮಂತ್ರಗಳಿಂದ ಸ್ತುತನಾದ ನೀನು ನಿನ್ನನ್ನು ಸ್ತುತಿಸತಕ್ಕ ವಿಶ್ವಾಮಿತ್ರವಂಶೋತ್ಪನ್ನರಾದವರಲ್ಲಿ ಧನಯುಕ್ತವಾದುದೂ, ಪ್ರಭೂತವಾದುದೂ ಆದ ಅನ್ನವನ್ನು ಒದಗಿಸಿಕೊಡು. ಹಾಗೆಯೇ ರೋಗರಹಿತವಾದ ಸುಖವನ್ನೂ ಭಯರಾಹಿತ್ಯವನ್ನೂ ಉಂಟುಮಾಡು. ನಮ್ಮ ಕರ್ಮಗಳಿಂದ ಪರಿಷ್ಕೃತನಾದ ಎಲೈ ಅಗ್ನಿಯೇ, ನಾವು ನಿನ್ನ ದೇಹವನ್ನು ಸೋಮ, ಆಜ್ಯ ಮತ್ತು ಪಯಸ್ಸುಗಳಿಂದ ಅನೇಕಸಲ ಪ್ರೋಕ್ಷಿಸಿ ಶುದ್ಧಿಮಾಡುತ್ತೇವೆ.

## English Translation

Rise up, son of strength, with (your) splendour when hymned, and bestow abundant food and wealth, AGNI, upon the descendants of VISHWAMITRA celebrating your praise; and grant them exemption from sickness and danger: Encourager of pious works (AGNI), we repeatedly sprinkle your substance (with milk and butter).

### ವಿಶೇಷವಿಷಯಗಳು

**ಸಹಸಸ್ಪುತ್ರ**—ಅಗ್ನಿಯು ಅರಣಿಗಳಲ್ಲಿ ಬಲವನ್ನು ಪಯೋಗಿಸಿ ಮಥನಮಾಡುವುದರಿಂದ ಉತ್ಪನ್ನನಾಗುವ ಕಾರಣ ಈ ಪದದಿಂದ ಸಂಬೋಧಿತನಾಗಿದ್ದಾನೆ.

**ಶೋಚಿಷಾ—ಸ್ವಕೀಯಯಾ ದೀಪ್ತ್ಯಾ** | **ಶೋಚಿಸ್** ಎಂಬ ಪದವು ಜ್ವಲತಿಕರ್ಮನಾಮಗಳಲ್ಲಿ (ನಿ. ೨-೧೭) ಪಠಿತವಾಗಿದೆ. ಅಗ್ನಿಯನ್ನು ಸಂಬೋಧಿಸಿ ಅಗ್ನಿಯು ತನ್ನ ಕಾಂತಿಯಿಂದ ಅತಿಶಯವಾಗಿ ಪ್ರಕಾಶಿಸಲಿ ಎಂದು ವರ್ಣಿಸಿದೆ.

**ಶಶಮಾನೇಷು—ತ್ವದ್ವಿಷಯಶಂಸನಂ ಕುರ್ವಾಣೇಷು** | ಶಶಮಾನಃ ಎಂಬ ಪದವು ಅರ್ಚತಿಕರ್ಮಗಳಲ್ಲಿ (ನಿ. ೩-೧೪) ಉಕ್ತವಾಗಿದೆ.

**ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ ಕವಿರ್ಹೋತಾ ಯಜತಿ ಮನ್ಮಸಾಧನಃ |**
**ಉಪಾಹ ತಂ ಗಚ್ಛಥೋ ವೀಥೋ ಅಧ್ವರಮಚ್ಛಾ ಗಿರಃ ಸುಮತಿಂ ಗಂತಮಸ್ಮಯೂ ||**

(ಋ. ಸಂ ೧-೧೫೧-೭)

ಇಲ್ಲಿ **ಶಶಮಾನ** ಪದವು ಪ್ರಶಂಸೆಮಾಡುವ ಸ್ತುತಿಯನ್ನು ಮಾಡುತ್ತಿರುವ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ವಿಶ್ವಾಮಿತ್ರೇಷು —ವಿಶ್ವಾಮಿತ್ರಗೋತ್ರೋತ್ಪನ್ನೇಷು ವಿಶ್ವಂ ಮಿತ್ರಂ ಅಸ್ಯೇತಿ ವಿಶ್ವಾಮಿತ್ರಃ** ಎಲ್ಲರನ್ನೂ ಸ್ನೇಹಭಾವದಿಂದ ತಿಳಿಯುವ ಒಬ್ಬ ಋಷಿಯು ವಿಶ್ವಾಮಿತ್ರನೆಂದು ಪ್ರಸಿದ್ಧನಾಗಿದ್ದರೂ, ಇಲ್ಲಿ ಅವನ ವಿಷಯದಲ್ಲಿ ಪೂಜ್ಯಭಾವದಿಂದ ಬಹುವಚನವು ಪ್ರಯುಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ. ವಿಶ್ವಾಮಿತ್ರೇಷು ಎಂಬ ಶಬ್ದಕ್ಕೆ ವಿಶ್ವಾಮಿತ್ರಗೋತ್ರದಲ್ಲಿ ಉತ್ಪನ್ನರಾದವರು ಎಂದು ಬಹುವಚನಾರ್ಥವನ್ನು ಹೇಳಬಹುದು. ಯಾಸ್ಕರು **ವಿಶ್ವಾಮಿತ್ರಃ ಸರ್ವಮಿತ್ರಃ** (ನಿ. ೨-೨೫) ಎಂದು ವ್ಯಾಖ್ಯಾನಮಾಡಿದ್ದಾರೆ. ಅಗ್ನಿಯು ಸ್ತೋತ್ರಗಳಿಂದಲೂ ಶಸ್ತ್ರ ಮಂತ್ರಗಳಿಂದಲೂ ಸ್ತುತಿಸಲ್ಪಟ್ಟವನಾಗಿ, ತನ್ನನ್ನು ಸ್ತುತಿಸುವ ವಿಶ್ವಾಮಿತ್ರಗೋತ್ರೋತ್ಪನ್ನರಾದವರಿಗೆ, ಪ್ರಭೂತವಾದ ಅನ್ನವನ್ನು ಅನುಗ್ರಹಿಸಲಿ ಎಂದು **ಬೃಹತ್ ವಯಃ ಧೇಹಿ** ಎಂಬ ಪದದಿಂದ ವಿವರಿಸಿದ್ದಾರೆ. ಬೃಹತ್ ಎಂಬ ಪದವು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ವಯಃ ಈ ಪದವು ಅನ್ನನಾಮಗಳಲ್ಲಿ (ನಿ. ೨-೭) ಉಕ್ತವಾಗಿದೆ.

**ಯುವೋಃ ಶ್ರಿಯಂ ಪರಿ ಯೋಷಾ ವೃಣೀತ ಸೂರೋ ದುಹಿತಾ ಪರಿತಕ್ಮ್ಯಾಯಾಂ |**
**ಯದ್ದೇವಯಂತಮವಥಃ ಶಚೀಭಿಃ ಪರಿ ಘ್ರಂಸಮೋಮನಾ ವಾಂ ವಯೋ ಗಾತ್ ||**

(ಋ. ಸಂ. ೭-೬೯-೪)

ಈ ಋಕ್ಕಿನಲ್ಲಿ ವಯಶ್ಶಬ್ದಕ್ಕೆ ಅನ್ನ ಎಂದು ಅರ್ಥವನ್ನು ವಿವರಿಸಿದೆ.

**ಶಂಯೋಃ**—ಯಾಸ್ಕರು **ಶಂಯುಃ** ಎಂಬ ಪದಕ್ಕೆ **ಶಮನಂ ಚ ರೋಗಾಣಾಂ ಯಾವನಂ ಚ ಭಯಾನಾಂ** (ನಿ. ೪–೨೧) ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಅಗ್ನಿಯು ರೋಗಗಳನ್ನು ಶಮನ ಮಾಡಿ, ಭಯವನ್ನು ನಾಶಪಡಿಸಿ, ಸುಖವನ್ನು ಉಂಟುಮಾಡುವವನೆಂದು ವರ್ಣಿಸಿ, ಆ ಪ್ರಕಾರವಾದ ಸುಖವನ್ನು ನಮಗೆ ಅನುಗ್ರಹಿಸಲಿ ಎಂದು ಆಶಂಸಿಸಿದೆ.

**ಕೃತ್ವ**ಃ—**ಅಸ್ಮಾಭಿಃ ಕ್ರಿಯಮಾಣಸ್ಯ ಕರ್ಮಣಃ ಪ್ರಯೋಜಕತ್ವೇನ ಕರ್ತಃ**—ಯಜಮಾನರು ಆಚರಿಸುವ ಯಜ್ಞಕರ್ಮಗಳು ಚೆನ್ನಾಗಿ ನೆರವೇರುವಂತೆ ಅಗ್ನಿಯು ಅನುಗ್ರಹಿಸುವನು ಎಂದು ಅರ್ಥವನ್ನು ವರ್ಣಿಸಿ, **ತನ್ವಂ ಭೂರಿ ಮರ್ಮೃಜ್ಮ**.—**ತನುಂ ಬಹುವಾರಂ ಪುನಃ ಪುನಃ ಸೋಮಾಜ್ಯಪಯಃಪ್ರಭೃತಿಭಿಃ ವಯಂ ಸಿಂಚಾಮಃ** ಈ ಪ್ರಕಾರವಾದ ಮಹಿಮೆಯಿಂದ ಕೂಡಿರುವ ಅಗ್ನಿಯ ಶರೀರವನ್ನು ಅನೇಕಸಾರಿ ಸೋಮ, ಆಜ್ಯ, ಹವಿಸ್ಸುಗಳು, ಇವೇ ಮೊದಲಾದವುಗಳಿಂದ ಯಜಮಾನರಾದ ನಾವು ಸಿಂಪಡಿಸುತ್ತೇವೆ ಎಂದು ವಿವರಿಸಿದೆ.

**ಭೂರಿ—ಬಹುವಾರಂ** । **ಭೂರಿ** ಎಂಬ ಪದವು ಉರು, ತುವಿ, ಎಂಬಿವೇ ಮೊದಲಾದ ಬಹುನಾಮಗಳಲ್ಲಿ (ನಿ. ೩–೧೩) ಪಠಿತವಾಗಿದೆ.

**ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ ಭೂರಿಶೃಂಗಾ ಅಯಾಸಃ ।**
**ಅತ್ರಾಹ ತದುರುಗಾಯಸ್ಯ ವೃಷ್ಣಃ ಪರಮಂ ಪದಮವ ಭಾತಿ ಭೂರಿ ॥**
(ಋ. ಸಂ.೧–೧೫೪–೬)

ಇಲ್ಲಿ ಭೂರಿ ಎಂಬ ಪದವು **ಭೂರಿತಿ ಬಹುನೋ ನಾಮಧೇಯಂ ಪ್ರಭವತೀತಿ ಸತಃ**-ಬಹು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಯಾಸ್ಕರು ವಿವರಿಸಿದ್ದಾರೆ.

**ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮಮಾಪ್ತ್ಯಮಾಪ್ತ್ಯಾನಾಂ ।**
**ಆ ದರ್ಷತೇ ಶವಸಾ ಸಪ್ತ ದಾನೂನ್ ಪ್ರ ಸಾಕ್ಷತೇ ಪ್ರತಿಮಾನಾನಿ ಭೂರಿ ॥**
(ಋ. ಸಂ. ೧೦–೧೨೦-೬)

ಈ ಋಕ್ಕಿನಲ್ಲಿಯೂ ಭೂರಿ ಪದಕ್ಕೆ ಬಹೂನಿ ಎಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಶಶಮಾನೇಷು**—ಶಶ ಪ್ಲುತಗತೌ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ತಾಚ್ಛೀಲ್ಯವಯೋವಚನಶಕ್ತಿಷು**—(ಪಾ. ಸೂ. ೩–೨–೧೨೯) ಎಂಬುದರಿಂದ ಇವಕ್ಕೆ ಚಾನಶ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** ಎಂಬುದರಿಂದ ಮುಕಾಗಮ. **ಚಿತಃ** (ಪಾ.ಸೂ. ೬-೧–೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶ್ಲು ವಿಕರಣನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿಗಳು ಬಂದಾಗ **ಘ್ವಸೋರೇದ್ಧಾವಭ್ಯಾಸಲೋಪಶ್ಚ** (ಪಾ. ಸೂ. ೬–೪–೧೧೯) ಎಂಬುದರಿಂದ ಧಾತುವಿನ ಅಭ್ಯಾಸಕ್ಕೆ ಲೋಪ. ಏತ್ವ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರೇವತ್**—ರಯಿಃ ಧನಂ ಅಸ್ಯ ಅಸ್ತಿ ಎಂದು ಅರ್ಥವಿವಕ್ಷಾಮಾಡಿದಾಗ **ತದಸ್ಯಾಸ್ತಿ**—ಸೂತ್ರದಿಂದ ಮತುಪ್. **ಹ್ರಸ್ವನುಡ್ಭ್ಯಾಂಮತುಪ್** (ಪಾ. ಸೂ. ೬–೧–೬೭೬) ಎಂಬುದರಿಂದ ಹ್ರಸ್ವದ ಪರದಲ್ಲಿರುವುದರಿಂದ ಮತುಪ್

ಪಿತ್ತಾದರೂ ಉದಾತ್ತವಾಗುತ್ತದೆ. **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಇಕಾರದ ಪರದಲ್ಲಿರುವುದರಿಂದ ಮತುಪಿನ ಮಕಾರಕ್ಕೆ ವತ್ವ. **ರಯೇರ್ಮತೌ ಬಹುಲಂಛಂದಸಿ** ಎಂಬ ವಚನದಿಂದ ರಯಿ ಶಬ್ದಕ್ಕೆ ಸಂಪ್ರಸಾರಣ. **ನಸಂಪ್ರಸಾರಣೇಸಂಪ್ರಸಾರಣಮ್** ಎಂಬುದರಿಂದ ಯಕಾರಕ್ಕೆ ಇಕಾರರೂಪಸಂಪ್ರಸಾರಣ ಬಂದಾಗ ಪರಕ್ಕೆ ಪೂರ್ವರೂಪ. ಇಕಾರಪರವಾದುದರಿಂದ ಗುಣ. ರೇವತ್ ಎಂದು ರೂಪವಾಗುತ್ತದೆ,

**ವಿಶ್ವಾಮಿತ್ರೇಷು**—ವಿಶ್ವಂ ಮಿತ್ರಂ ಯೇಷಾಂ ತೇ. **ಮಿತ್ರೇಚರ್ಷೌ** (ಪಾ. ಸೂ. ೬-೩-೧೩೦) ಎಂಬುದರಿಂದ ಮಿತ್ರಶಬ್ದಪರವಾಗಿ ಋಷಿರೂಪಾರ್ಥ ತೋರುವುದರಿಂದ ಪೂರ್ವಪದಕ್ಕೆ ಧೀರ್ಘ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಮಮೃಜ್ಮ**—ಮೃಜೂಷ್ ಶುದ್ಧೌ. ಧಾತು. **ಛಂದಸಿಲುಙ್ಲಙ್**—ಎಂಬುದರಿಂದ, ವರ್ತಮಾನಾರ್ಥದಲ್ಲಿ ಲಿಟ್. ಉತ್ತಮಪುರುಷ ಬಹುವಚನದಲ್ಲಿ **ಪರಸ್ಮೈಪದಾನಾಂ** (ಪಾ. ಸೂ. ೩-೪-೮೨) ಎಂಬುದರಿಂದ ಮಸಿಗೆ ಮಾದೇಶ. **ಆಗಮಾನುಶಾಸನಮನಿತ್ಯಂ** ಎಂಬ ವಚನದಿಂದ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಅಭ್ಯಾಸದಲ್ಲಿ ಛಾಂದಸವಾಗಿ ರೇಫ ಉಳಿಯುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಛಾಂದಸವಾಗಿ ಅಂತಕ್ಕೆ ದೀರ್ಘ.

**ಭೂರಿ**—ಭೂ ಸತ್ತಾಯಾಂ ಧಾತು. **ಅದಿಶದಿಭೂಶುಭಿಭ್ಯಃ ಕ್ರಿನ್** (ಉ. ಸೂ. ೪-೫-೫) ಎಂಬುದರಿಂದ ಕ್ರಿನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಭೂರಿ ಎಂದು ರೂಪವಾಗುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕೃತ್ವಃ**—ಡುಕೃಞ್ ಕರಣೇ. ಧಾತು. **ಸಂಪದಾದಿಭ್ಯಃ ಕ್ವಿಪ್** ಎಂಬ ವಚನದಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಕೃತ್ ಅಸ್ಯ ಅಸ್ತಿ ಎಂದು ಅರ್ಥವಿವಕ್ಷಾ ಮಾಡಿದಾಗ **ತದಸ್ಯಾಸ್ತಿ** ಎಂಬುದರಿಂದ ಮತುಪ್ ಪ್ರತ್ಯಯ. ತಕಾರದ ಪರದಲ್ಲಿ ಮತುಪ್ ಬಂದುದರಿಂದ **ಝಯಃ** (ಪಾ. ಸೂ. ೮-೨-೧೦) ಎಂಬುದರಿಂದ ಮಕಾರಕ್ಕೆ ವತ್ವ. **ತಸೌಮತ್ವರ್ಥೇ** (ಪಾ. ಸೂ. ೧-೪-೧೯) ಎಂಬುದರಿಂದ ಭಸಂಜ್ಞಾ ಬರುವುದರಿಂದ ತಕಾರಕ್ಕೆ ಜಶ್ತ್ವ ಬರುವುದಿಲ್ಲ. ಸಂಬುದ್ಧಿಯಲ್ಲಿ **ಮತುವಸೋರುಃಸಂಬುದ್ಧೌ** (ಪಾ. ಸೂ ೮-೩-೧) ಎಂಬುದರಿಂದ ರುತ್ವ.

---

ಸಂಹಿತಾಪಾಠಃ

ಕೃಧಿ ರತ್ನಂ ಸುಸನಿತರ್ಧನಾನಾಂ ಸ ಘೇದಗ್ನೇ ಭವಸಿ ಯತ್ಸಮಿದ್ಧಃ ।
ಸ್ತೋತುರ್ದುರೋಣೇ ಸುಭಗಸ್ಯ ರೇವತ್ಸೃಪ್ರಾ ಕರಸ್ನಾ ದಧಿಷೇ ವಪೂಂಷಿ ॥ ೫ ॥

ಪದಪಾಠಃ

ಕೃಧಿ । ರತ್ನಂ । ಸುಽಸನಿತಃ । ಧನಾನಾಂ । ಸಃ । ಘ । ಇತ್ । ಅಗ್ನೇ । ಭವಸಿ । ಯತ್ । ಸಂಽಇದ್ಧಃ ।
ಸ್ತೋತುಃ । ದುರೋಣೇ । ಸುಽಭಗಸ್ಯ । ರೇವತ್ । ಸೃಪ್ರಾ । ಕರಸ್ನಾ । ದಧಿಷೇ । ವಪೂಂಷಿ ॥ ೫ ॥

ಸಾಯಣಭಾಷ್ಯಂ

ಸುಸನಿತರಭಿಲಷಿತಧನಾನಾಂ ಸುಷ್ಠು ದಾತರ್ಹೇ ಅಗ್ನೇ ಧನಾನಾಂ ಕನಕಪಶ್ವಾದೀನಾಂ ಮಧ್ಯೇ ರತ್ನಮುತ್ತಮಂ ಧನಂ ಕೃಧಿ । ವಿಧೇಹಿ । ಮಹ್ಯಂ ದತ್ಸ್ವ । ಯದ್ಯದಾ ತ್ವಂ ಸಮಿದ್ಧಃ ಸೋಮಾಜ್ಯಾದಿಭಿಃ ಸಮ್ಯಗಿದ್ಧೋ ದೀಪ್ತೋ ವರ್ತಸೇ ತದಾ ಸ ಘೇತ್ ಸ ತಾದೃಶ ಏವ ತ್ವಂ ಧನಸ್ಯ ದಾತಾ ಖಲು ಭವಸಿ । ಕಿಂಚ ಸುಭಗಸ್ಯ ತ್ವದ್ವಿಷಯಸ್ತುತ್ಯಾ ಶೋಭನಧನಯುಕ್ತಸ್ಯ ಸ್ತೋತುರ್ಯಜಮಾನಸ್ಯ ದುರೋಣೇ ಗೃಹೇ ಸೃಪ್ರಾ ಪ್ರಸರ್ಪಣಶೀಲೌ ಕರ್ಮಕರಣಾರ್ಥಂ ಪ್ರಸೃತೌ ಕರಸ್ನಾ ಕರ್ಮಣಾಂ ಪ್ರಸ್ನಾತಾರೌ ಬಾಹೂ । ಕರಸ್ನೌ ಬಾಹೂ ಕರ್ಮಣಾಂ ಪ್ರಸ್ನಾತಾರೌ । ನಿ. ೬-೧೭ । ಇತಿ ಯಾಸ್ಕಃ । ವಪೂಂಷಿ ರೂಪಾಣಿ । ವರ್ಪೋ ವಪುರಿತಿ ರೂಪನಾಮಸು ಪಠಿತತ್ವಾತ್ । ತಾದೃಶೌ ಬಾಹೂ ಭಾಸ್ವರಾಣಿ ಜ್ಯೋತೀಂಷಿ ಚ ರೇವತ್ ಧನಯುಕ್ತಂ ಯಥಾ ಭವತಿ ತಥಾ ದಧಿಷೇ । ಧಾರಯಸಿ ॥ ಸುಸನಿತಃ । ಷಣು ದಾನ ಇತ್ಯಸ್ಯ ತೃಚಿ ರೂಪಂ । ಆಮಂತ್ರಿತನಿಘಾತಃ । ಸೃಪ್ರಾ । ಸೃಪ್ಲೃ ಗತೌ ಅಸ್ಮಾತ್ಸ್ಫಾಯಿತಂಚಿವಂಚೀತ್ಯಾದಿನಾ ರಕ್ । ಕಿತ್ತ್ವಾದ್ಗುಣಃ । ಪ್ರತ್ಯಯಸ್ವರಃ । ಕರಸ್ನಾ । ಕರೋತಿ ಫಲಮಿತಿ ಕರಃ ಕರ್ಮ । ಪಚಾದ್ಯಜಂತಃ । ಕರ್ಮಣಿ ಸ್ನಾ ಶೋಧನಂ ಯಯೋಸ್ತೌ । ಯದ್ವಾ ಕರ್ಮಣಾಂ ಶೋಧನಂ ಯಾಭ್ಯಾಮಿತಿ ಬಹುವ್ರೀಹೌ ಪೂರ್ವಪದಸ್ವರಃ । ದಧಿಷೇ । ಡುಧಾಞ್ ಧಾರಣಪೋಷಣಯೋರಿತ್ಯಸ್ಯ ಲಟಿ ಛಂದಸ್ಯುಭಯಥೇತಿ ಥಾಸ ಆರ್ಧಧಾತುಕತ್ವಾದಿಟ್ । ಆತೋ ಲೋಪಃ ॥ ನಿಘಾತಃ ॥

ಪ್ರತಿಪದಾರ್ಥ

**ಸುಸನಿತಃ**—(ಅಪೇಕ್ಷಿಸಿದ ಧನವನ್ನು) ಅತಿಯಾಗಿ ಕೊಡತಕ್ಕ । **ಅಗ್ನೇ**—ಎಲೈ ಅಗ್ನಿಯೇ । **ಧನಾನಾಂ**—ಸುವರ್ಣ ಮತ್ತು ಪಶ್ವಾದಿರೂಪವಾದ ಧನಗಳಲ್ಲಿ । **ರತ್ನಂ**—ಅತ್ಯುತ್ತಮವಾದ ಧನವನ್ನು । **ಕೃಧಿ**—(ನನಗೆ) ಒದಗಿಸಿ ಕೊಡು । **ಯತ್**—ಯಾವಾಗ । **ಸಮಿದ್ಧಃ**—ಸೋಮಾಜ್ಯಾದಿಗಳಿಂದ ನೀನು ಪ್ರಜ್ವಲಿತನಾಗುತ್ತೀಯೋ, (ಆಗ) । **ಸ ಘೇತ್**—ಅತ್ಯುತ್ತಮವಾದ ದಾತೃವಾಗಿಯೇ । **ಭವಸಿ**—ಆಗುತ್ತೀಯೆ । **ಸುಭಗಸ್ಯ**—(ನಿನ್ನನ್ನು ಸ್ತುತಿಸಿದ ಫಲವಾಗಿ) ಉತ್ತಮವಾದ ಧನದಿಂದ ಯುಕ್ತನಾದ । **ಸ್ತೋತುಃ**—ಸ್ತುತಿಕರ್ತನಾದ ಯಜಮಾನನ । **ದುರೋಣೇ**—ಗೃಹದಲ್ಲಿ । **ಸೃಪ್ರಾ**—(ಕರ್ಮಾರ್ಥವಾಗಿ) ಹರಡಿರುವುವೂ । **ಕರಸ್ನಾ**—ಕರ್ಮವನ್ನು ವೃದ್ಧಿಮಾಡತಕ್ಕವೂ ಆದ ಬಾಹುಗಳನ್ನೂ । **ವಪೂಂಷಿ**—ಪ್ರಕಾಶಮಾನವಾದ ರೂಪಗಳನ್ನೂ । **ರೇವತ್**—ಧನಯುಕ್ತವಾಗಿ ಮಾಡುವಂತೆ । **ದಧಿಷೇ**—ಹೊಂದಿದ್ದೀಯೆ ॥

ಭಾವಾರ್ಥ

ಅಪೇಕ್ಷಿಸಿದ ಧನವನ್ನು ಪ್ರಭೂತವಾಗಿ ಕೊಡತಕ್ಕ ಎಲೈ ಅಗ್ನಿಯೇ, ಸುವರ್ಣಪಶ್ವಾದಿರೂಪವಾದ ಧನಗಳಲ್ಲಿ ಅತ್ಯುತ್ತಮವಾದ ಧನವನ್ನು ನನಗೆ ಒದಗಿಸಿಕೊಡು. ಸೋಮಾಜ್ಯಾದಿಗಳಿಂದ ನೀನು ಪ್ರಜ್ವಲಿತನಾದೊಡನೆಯೇ ನೀನು ಅತ್ಯುತ್ತಮವಾದ ದಾತೃವೇ ಆಗುತ್ತೀಯೆ. ನಿನ್ನನ್ನು ಸ್ತುತಿಸಿದ ಫಲವಾಗಿ ಉತ್ತಮವಾದ ಧನದಿಂದ ಯುಕ್ತನಾದವನೂ, ಸ್ತುತಿಕರ್ತನೂ ಆದ ಯಜಮಾನನ ಗೃಹದಲ್ಲಿ ಕರ್ಮಾರ್ಥವಾಗಿ ಹರಡಿರುವುವೂ, ಕರ್ಮವನ್ನು ವೃದ್ಧಿಮಾಡತಕ್ಕವೂ ಆದ ಬಾಹುಗಳನ್ನೂ ಪ್ರಕಾಶಮಾನವಾದ ರೂಪಗಳನ್ನೂ ಸಹ ಯಜಮಾನನ ಗೃಹವನ್ನು ಧನಯುಕ್ತವನ್ನಾಗಿ ಮಾಡುವಂತೆ ಹೊಂದಿದ್ದೀಯೆ.

## English Translation

Liberal donor (of riches) bestow upon us the most precious of treasures, for therefore is it, AGNI, that you are kindled : you have arms promptly stretched forth, whose (radiant) forms (bestow) wealth on the dwelling of your fortunate adorer.

ವಿಶೇಷವಿಷಯಗಳು

**ಸುಸನಿತಃ—ಅಭಿಲಷಿತಧನಾನಾಂ ಸುಷ್ಠು ದಾತಃ**–ಈ ಪದವನ್ನು ಅಗ್ನೇ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯೋಗಿಸಿದೆ. ಅಗ್ನಿಯು ಯಜಮಾನರು ಅಪೇಕ್ಷಿಸಿದ ಧನಗಳನ್ನು ಪೂರ್ಣವಾಗಿ ಅನುಗ್ರಹಿಸುವನೆಂದು ಅರ್ಥವನ್ನು ವರ್ಣಿಸಿದೆ.

**ಧನಾನಾಂ ರತ್ನಂ ಕೃಧಿ**—ರತ್ನ ಶಬ್ದವು ಧನನಾಮುಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ಧನಶಬ್ದವು ಕನಕಪಶ್ವಾದಿಗಳಿಗೂ ಕೂಡ ಉಪಲಕ್ಷಕವಾಗಿ ಪ್ರಯುಕ್ತವಾಗಿದೆ. ರತ್ನಶಬ್ದಕ್ಕೆ ಉತ್ತಮವಾದ ಧನವೆಂದು ಅರ್ಥವು ವಿವೃತವಾಗಿದೆ. ಅಗ್ನಿಯು ಯಜಮಾನರ ಇಚ್ಛಾನುಸಾರವಾದ ಧನವನ್ನು ಕೊಡುವವನಾದಕಾರಣ ಕನಕ ಪಶು ಇವೇ ಮೊದಲಾದ ಧನಗಳಲ್ಲಿ ಉತ್ತಮವಾದ ಧನವನ್ನು ಅಗ್ನಿಯು ಕೊಡಲಿ ಎಂದು ಆಶಿಸಿದೆ.

**ಸಮಿದ್ಧಃ ಸ ಘೇತ್ ಭವಸಿ—ಸೋಮಾಜ್ಯಾದಿಭಿಃ ಸಮ್ಯಗಿದ್ಧಃ** | ಸೋಮ, ಆಜ್ಯ, ಹವಿಸ್ಸು ಇವುಗಳಿಂದ ಅಗ್ನಿಯು ಪೂರ್ಣವಾದ ಕಾಂತಿಯುಳ್ಳವನಾಗಿರುವಾಗ ಅವನು ಧನವನ್ನು ಅನುಗ್ರಹಿಸುವವನಾಗಿರುವನು ಎಂದು ಅರ್ಥವನ್ನು ವಿವರಿಸಿದೆ.

**ಸುಭಗಸ್ಯ—ಶೋಭನಧನಯುಕ್ತಸ್ಯ**—ಅಗ್ನಿಯನ್ನು ಸ್ತುತಿಮಾಡುವವನಾದ ಯಜಮಾನನ **ದುರೋಣೆ**—ಯಜ್ಞಗೃಹದಲ್ಲಿ ಅಗ್ನಿಯು, ತನ್ನನ್ನು ಸ್ತುತಿಮಾಡುವವರಿಗಾಗಿ ಉತ್ತಮವಾದ ಧನದಿಂದ ಯುಕ್ತನಾಗಿರುವನೆಂದೂ, **ಸೃಪ್ರಾ—ಕರ್ಮಕರಣಾರ್ಥಂ ಪ್ರಸೃತೌ** ಯಜಮಾನನ ಹಿತಕ್ಕಾಗಿ ಕಾರ್ಯಗಳನ್ನು ಆಚರಿಸಲು ಪ್ರಸಾರಿತವಾಗಿರುವ ಬಾಹುಗಳನ್ನು ಧರಿಸಿರುವನೆಂದೂ ವರ್ಣಿಸಿದೆ.

**ಕರಸ್ನಾ—ಕರೋತಿ ಫಲಮಿತಿ ಕರಃ ಕರ್ಮ | ಕರ್ಮಣಿ ಸ್ನಾ ಶೋಧನಂ ಯಯೋಸ್ತೌ, ಯದ್ವಾ ಕರ್ಮಣಾಂ ಶೋಧನಂ ಯಾಭ್ಯಾಂ** | ಫಲವನ್ನು ಉಂಟುಮಾಡುವುದರಿಂದ ಕರ್ಮವು ಕರಶಬ್ದದಿಂದ ಬೋಧ್ಯವಾಗಿರುತ್ತದೆ. ಫಲಪ್ರದವಾದ ಕರ್ಮಗಳಲ್ಲಿ ನ್ಯೂನತೆಯು ಬರದಂತೆ ಶೋಧಿಸುವಕಾರಣ, ಅಥವಾ ಕರ್ಮಗಳ ಶೋಧನೆಯನ್ನು ಆಚರಿಸಲು ಸಾಧನವಾದಕಾರಣ, ಬಾಹುಗಳು ಕರಸ್ನಾಶಬ್ದದಿಂದ ಬೋಧ್ಯವಾಗಿವೆ ಎಂದೂ, **ಕರ್ಮಣಾಂ ಪ್ರಸ್ನಾತಾರೌ** ಕರ್ಮಗಳನ್ನು ಶೋಧಿಸುವವಗಳೆಂದೂ ಸಾಯಣರು ಅರ್ಥವನ್ನು ವಿವರಿಸಿದ್ದಾರೆ.

ಯಾಸ್ಕರು—ಕರಸ್ನೌ ಎಂಬ ಪದವನ್ನು ಬಾಹುನಾಮುಗಳಲ್ಲಿ (ನಿ. ೩-೬) ಪಾಠಮಾಡಿ, **ಸೃಪ್ರಃ ಸರ್ಪಣಾತ್ ಇದಮಪೀತರತ್ ಸೃಪ್ರಮೇ ತಸ್ಮಾದೇವ ಸರ್ಪಿರ್ವಾ ತೈಲಂ ವಾ** | ಚಲನಕ್ರಿಯಾಧಾರವಾಗಿರುವುದರಿಂದ ಸೃಪ್ರಶಬ್ದದಿಂದ ಗಮ್ಯವಾಗಿರುವುದು ಆಜ್ಯವಾಗಬಹುದು (ನಿ. ೬-೧೭) ಅಥವಾ ತೈಲವಾಗಬಹುದು ಎಂದು ಅರ್ಥವನ್ನು ವಿವರಿಸಿ, **" ಸೃಪ್ರಕರಸ್ನಮೂತಯೇ " ಇತ್ಯಪಿ ನಿಗಮೋ ಭವತಿ** ಎಂದು ಉದಾಹರಣೆಯನ್ನು ಪ್ರದರ್ಶಿಸಿ, **ಕರಸ್ನೌ ಬಾಹೂ ಕರ್ಮಣಾಂ ಪ್ರಸ್ನಾತಾರೌ** ಎಂದು ವಿವರಣೆಯನ್ನು ಮಾಡಿದ್ದಾರೆ. ದುರ್ಗಾಚಾರ್ಯರು **ಕರಸ್ನೌ ಬಾಹೂ, ಕರ್ಮಣಾಂ ಪ್ರಸ್ನಾತಾರೌ. ನಿರ್ವರ್ತಯಿತಾರೌ** ಎಂದು ಅರ್ಥವನ್ನು ವಿವರಿಸಿದ್ದಾರೆ.

**ವಪೂಂಷಿ—ರೂಪಾಣಿ । ವಪುಃ** ಎಂಬ ಪದವು ಉದಕನಾಮುಗಳಲ್ಲಿಯೂ, (ನಿ. ೨-೨೪) ರೂಪನಾಮುಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಸಾಯಣರು ಅಗ್ನಿಯ ಬಾಹುಗಳು ಕರ್ಮಗಳನ್ನು ನೆರವೇರಿಸತಕ್ಕವುಗಳು, ಕರ್ಮಗಳನ್ನು ನೆರವೇರಿಸುವುದಕ್ಕಾಗಿ ಸಿದ್ಧವಾಗಿರುವುವುಗಳು, ಕರ್ಮಗಳನ್ನು ಸಾಧಿಸುವುದರಲ್ಲಿ ಅರ್ಹವಾದ ಆಕಾರವನ್ನು ಹೊಂದಿ ಇರುವುವು ಎಂದು ಬಾಹುಗಳನ್ನು ವರ್ಣಿಸಿ, ಇವುಗಳನ್ನು **ಭಾಸ್ವರಾಣಿ ಜ್ಯೋತೀಂಷಿ ಚ ಧನಯುಕ್ತಂ ಯಥಾ ಭವತಿ ತಥಾ ಧಾರಯಸಿ.** ಪ್ರಕಾಶದಿಂದ ಬೆಳಗುವ ಜ್ಯೋತಿಸ್ಸನ್ನೂ ಧನವನ್ನೂ ಧರಿಸಿರುವಂತೆ ಅಗ್ನಿಯು ಧರಿಸಿರುವವನು ಎಂದು ಅರ್ಥವನ್ನು ವಿವರಿಸಿದ್ದಾರೆ.

**ರೇವತ್—ರಯಿರಸ್ಯಾಸ್ತೀತಿ ರಯಿಃ** । ಧನವನ್ನೂ ಹೊಂದಿರುವುವು ಎಂದು ರೈಶಬ್ದವು ಮತುಪ್ ಪ್ರತ್ಯಯಾಂತವಾಗಿ ಇಲ್ಲಿ ಪ್ರಯುಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

**ಕೃಧಿ**—ಡುಕೃಞ್ ಕರಣೇ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಸಿತ್ವ ವಿಧಾನಮಾಡಿರುವುದರಿಂದ ಉದಾತ್ತಸ್ವರ ಬರುತ್ತದೆ.

**ಸುಸನಿತಃ**—ಷಣು ದಾನೇ ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ. ಸು ಉಪಸರ್ಗ. ಸಂಬುದ್ಧಿಯಲ್ಲಿ **ಋತೋಙಿಸರ್ವನಾಮಸ್ಥಾನಯೋಃ** ಎಂಬುದರಿಂದ ಗುಣ. ಸುಲೋಪ. ರೇಫಕ್ಕೆ ವಿಸರ್ಗ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಮಿದ್ಧಃ**—ಞಿಇಂಧೀ ದೀಪ್ತೌ ಧಾತು. ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸಮ್) ಉದಾತ್ತಸ್ವರ ಬರುತ್ತದೆ.

**ಸುಭಗಸ್ಯ—ಆದ್ಯುದಾತ್ತಂದ್ವ್ಯಚ್‌ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ರೇವತ್**—ಪೂರ್ವಮಂತ್ರದಲ್ಲಿ ವ್ಯಾಖ್ಯಾತವಾಗಿದೆ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಸೃಪ್ರಾ**—ಸೃಪ್ಲೃ ಗತೌ ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನ (ಔ) ಪರವಾದಾಗ ಅದಕ್ಕೆ ಆಕಾರಾದೇಶ.

**ಕರಸ್ನಾ**—ಕರೋತಿ ಫಲಮಿತಿ ಕರಃ ಕರ್ಮ (ಫಲವನ್ನು ಕೊಡುವಂತೆ ಮಾಡುವುದು ಕರ್ಮ) ಡುಕೃಞ್ ಕರಣೇ ಧಾತು. **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್‌ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಕರ್ಮಣಿ ಸ್ನಾ = ಶೋಧನಂ ಯಯೋಸ್ತೌ ಅಥವಾ ಕರ್ಮಣಾಂ ಶೋಧನಂ ಯಾಭ್ಯಾಮಿತಿ ಕರಸ್ನಾ. **ಬಹುವ್ರೀಹೌಪ್ರಕೃತ್ಯಾಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ.

**ದಧಿಷೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃಸೇ** ಎಂಬುದರಿಂದ ಅದಕ್ಕೆ ಸೇ ಆದೇಶ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭)

ಎಂಬುದರಿಂದ ಅದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ ಇಡಾಗಮ ಬರುತ್ತದೆ. ಶ್ಲು ವಿಕರಣನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಸಕಾರಕ್ಕೆ ಷತ್ವ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

## ಹತ್ತೊಂಭತ್ತನೆಯ ಸೂಕ್ತವು

**ಅಗ್ನಿಂ ಹೋತಾರಮಿತಿ ಪಂಚರ್ಚಂ ಸಪ್ತಮಂ ಸೂಕ್ತಂ ತ್ರೈಷ್ಟುಭಮಾಗ್ನೇಯಂ ಗಾಥಿನ ಆರ್ಷಂ । ತಥಾ ಚಾನುಕ್ರಾಂತಂ । ಅಗ್ನಿಂ ಹೋತಾರಂ ಗಾಥೀ ಹೇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋ-ರುಕ್ತೋ ವಿನಿಯೋಗಃ ॥**

**ಅನುವಾದವು— ಅಗ್ನಿಂ ಹೋತಾರಂ** ಎಂಬ ಸೂಕ್ತವು ಎರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗಾಥೀ ಎಂಬುವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅಗ್ನಿಂ ಹೋತಾರಂ ಗಾಥೀ ಹೇತಿ** ಎಂದು ಹೇಳಿರುವುದು. ಹಿಂದೆ ಹೇಳಿದಂತೆ ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು.

### ಸೂಕ್ತ—೧೯

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೧೯ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೧೯ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫

ಋಷಿಃ—ಗಾಥೀ ॥

ದೇವತಾ—ಅಗ್ನಿಃ ॥

ಛಂದಃ— ತ್ರಿಷ್ಟುಪ್॥

ಸಂಹಿತಾಪಾಠಃ

**ಅಗ್ನಿಂ ಹೋತಾರಂ ಪ್ರ ವೃಣೇ ಮಿಯೇಧೇ ಗೃತ್ಸಂ ಕವಿಂ ವಿಶ್ವವಿದಮಮೂರಂ ।**
**ಸ ನೋ ಯಕ್ಷದ್ದೇವತಾತಾ ಯಜೀಯಾನ್ರಾಯೇ ವಾಜಾಯ ವನತೇ ಮಘಾನಿ ॥**

ಪದಪಾಠಃ

**ಅಗ್ನಿಂ । ಹೋತಾರಂ । ಪ್ರ । ವೃಣೇ । ಮಿಯೇಧೇ । ಗೃತ್ಸಂ । ಕವಿಂ । ವಿಶ್ವವಿದಂ । ಅಮೂರಂ ।**
**ಸಃ । ನಃ । ಯಕ್ಷತ್ । ದೇವತಾತಾ । ಯಜೀಯಾನ್ । ರಾಯೇ । ವಾಜಾಯ । ವನತೇ । ಮಘಾನಿ ॥**

ಸಾಯಣಭಾಷ್ಯಂ

ಗಾಥೀ ಸ್ತೌತಿ । ಹೇ ಅಗ್ನೇ ಗೃತ್ಸಂ ಗೃಣಂತಂ ದೇವಾನಾಂ ಸ್ತುತಿಂ ಕುರ್ವಂತಂ ಕವಿಂ ಮೇಧಾವಿನಂ ವಿಶ್ವವಿದಂ ಸರ್ವವಿಷಯಜ್ಞಾನೋಪೇತಮಮೂರಮಮೂಢಮಗ್ನಿಮಂಗನಾದಿಗುಣೋಪೇತಂ ತ್ವಾಂ ಮಿಯೇಧೇಽಸ್ಮಾಭಿಃ ಕ್ರಿಯಮಾಣೇಽಸ್ಮಿನ್ಯಜ್ಞೇ ಹೋತಾರಂ ಹೋಮನಿಷ್ಪಾದಕಂ ದೇವಾನಾಮಾಹ್ವಾತಾರಂ ವಾಹಂ ಪ್ರ ವೃಣೇ । ಪ್ರಕರ್ಷೇಣ ಸಂಭಜೇ । ಸ ತಥಾವಿಧೋಽಗ್ನಿರ್ಯಜೀಯಾನ್ ಯಷ್ಟೃತಮಃ ಸನ್ ನೋಽಸ್ಮಾಕಂ ದೇವತಾತಾ ಯಷ್ಟವ್ಯತಯಾ ಸಂಬಂಧಿನೋ ದೇವಾನ್ಯಕ್ಷತ್ । ಯಜತು । ಕಿಂಚ ಸೋಽಗ್ನೀ ರಾಯೇ ಧನಾಯ ವಾಜಾಯಾನ್ನಾಯ ಚ ಮಘಾನಿ ಮಂಹನೀಯಾನ್ಯಸ್ಮಾಭಿರ್ದೀಯಮಾನಾನಿ ಹವೀಂಷಿ ವನತೇ । ಸಂಭಜತಾಂ ॥ ವೃಣೇ । ವೃಙ್ ಸಂಭಕ್ತೌ । ನಿಘಾತಃ । ಮಿಯೇಧೇ । ಮಕಾರೈಕಾರಯೋರ್ಮಧ್ಯ ಇಂಆಗಮಶ್ಛಾಂದಸಃ । ಗೃತ್ಸಂ । ಗೃಧು ಅಭಿಕಾಂಕ್ಷಾಯಾಂ । ಗೃಧಿಪಣ್ಯೋರ್ದಕಕೌ ಚ । ಉ. ೩-೬೯ । ಇತಿ ಸಪ್ರತ್ಯಯಃ । ಅಂತ್ಯಸ್ಯ ದಕಾರಃ । ವ್ಯತ್ಯಯೇನಾದ್ಯುದಾತ್ತತ್ವಂ । ಅಮೂರಂ । ಮುಹ ವೈಚಿತ್ಯೆ ಇತ್ಯಸ್ಯ ನಿಷ್ಠಾಯಾಂ ರೂಪಂ । ರೇಫಶ್ಛಾಂದಸಃ । ನಞಾ ಸಮಾಸೇ ತಸ್ಯ ನಞ್ಸ್ವರಃ । ಯಕ್ಷತ್ । ಯಜೇರ್ಲೇಟಿ ಸಿಬ್ಬಹುಲಂ ಲೇಟೀತಿ ಸಿಪ್ । ಲೇಟೋಽಡಾಟಾವಿತ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ದೇವತಾತಾ । ದೇವಶಬ್ದಾತ್ಸ್ವಾರ್ಥೇ ಸರ್ವದೇವಾತ್ತಾತಿಲಿತಿ ತಾತಿಲ್ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ಲಿತ್ಸ್ವರಃ । ವನತೇ ವನ ಷಣ ಸಂಭಕ್ತಾವಿತ್ಯಸ್ಯ ಲಟಿ ವ್ಯತ್ಯಯೇನಾತ್ಮನೇಪದಂ । ನಿಘಾತಃ ॥

ಪ್ರತಿಪದಾರ್ಥ

**ಗೃತ್ಸಂ**—(ದೇವತೆಗಳನ್ನು) ಸ್ತುತಿಸುವವನೂ । **ಕವಿಂ**—ಮೇಧಾವಿಯೂ । **ವಿಶ್ವವಿದಂ**—ಸಕಲ ವಿಷಯಗಳನ್ನೂ ತಿಳಿದವನೂ, । **ಅಮೂರಂ**—ಭ್ರಾಂತನಲ್ಲದವನೂ । **ಅಗ್ನಿಂ**—ಅಂಗನಾದಿಗುಣಗಳಿಂದ ಕೂಡಿದವನೂ ಆದ ಅಗ್ನಿಯನ್ನು । **ಮಿಯೇಧೇ**—ಈ ಯಜ್ಞದಲ್ಲಿ । **ಹೋತಾರಂ**—ಹೋಮಸಂಪಾದಕನಾದ ಹೋತೃವನ್ನಾಗಿ । **ಪ್ರ ವೃಣೇ**—ಭಜಿಸಿ ವರಿಸುತ್ತೇನೆ. । **ಸಃ**—ಅಂತಹ ಅಗ್ನಿಯು । **ಯಜೀಯಾನ್**—ಯಜ್ಞಕರ್ತರಲ್ಲಿ ಉತ್ತಮನಾಗಿ । **ನಃ**—ನಮಗಾಗಿ । **ದೇವತಾತಾ**—ಯಜ್ಞಾರ್ಹರಾದ ದೇವತೆಗಳನ್ನುದ್ದೇಶಿಸಿ । **ಯಕ್ಷತ್**—ಯಜ್ಞಮಾಡಲಿ. । **ರಾಯೇ**—ಧನಕ್ಕಾಗಿಯೂ । **ವಾಜಾಯ**—ಅನ್ನಕ್ಕಾಗಿಯೂ । **ಮಘಾನಿ**—ಪೂಜ್ಯವಾದ ಈ ಹವಿಸ್ಸುಗಳನ್ನು । **ವನತೇ**—ಸೇವಿಸಲಿ.

ಭಾವಾರ್ಥ

ದೇವತೆಗಳನ್ನು ಸ್ತುತಿಸುವವನೂ, ಮೇಧಾವಿಯೂ, ಸರ್ವಜ್ಞನೂ, ಭ್ರಾಂತನಲ್ಲದವನೂ, ಅಂಗನಾದಿಗುಣಗಳಿಂದ ಕೂಡಿದವನೂ ಆದ ಅಗ್ನಿಯನ್ನು ಈ ಯಜ್ಞದಲ್ಲಿ ಹೋಮಸಂಪಾದಕನಾದ ಹೋತೃವನ್ನಾಗಿ ಭಜಿಸಿ ವರಿಸುತ್ತೇನೆ. ಅಂತಹ ಗುಣಗಳಿಂದ ಕೂಡಿದ ಅಗ್ನಿಯು ಯಜ್ಞಕರ್ತರಲ್ಲೆಲ್ಲಾ ಉತ್ತಮನಾಗಿದ್ದು, ಯಜ್ಞಕರ್ತರಾದ ದೇವತೆಗಳನ್ನುದ್ದೇಶಿಸಿ ನಮಗಾಗಿ ಯಜ್ಞಮಾಡಲಿ. ನಮಗೆ ಲಭಿಸಬೇಕಾದ ಧನಕ್ಕಾಗಿಯೂ, ಅನ್ನಕ್ಕಾಗಿಯೂ ಸಹ ಪೂಜ್ಯವಾದ ಈ ಹವಿಸ್ಸುಗಳನ್ನು ಸೇವಿಸಲಿ.

## English Translation

I have recourse in this sacrifice to AGNI, the invoker and praiser (of the gods), the intelligent, the all-knowing, the unbeguiled; may he, the

adorable, sacrifice for us to the gods, (and) accept the precious (offerings) we make for food and riches.

ವಿಶೇಷವಿಷಯಗಳು

**ಗೃತ್ಸಂ—ಗೃಣಂತಂ ದೇವಾನಾಂ ಸ್ತುತಿಂ ಕುರ್ವಂತಂ |** ಈ ಮಂತ್ರದಲ್ಲಿ ಅಗ್ನಿಯನ್ನು ಹೋತೃವೆಂಬ ಋತ್ವಿಜನ ತಾದಾತ್ಮ್ಯದಿಂದ ವರ್ಣಿಸಿರುವಕಾರಣ ಹೋತೃವಿನ ಕಾರ್ಯಗಳೆಲ್ಲವೂ ಅಗ್ನಿಯಲ್ಲಿ ಉಕ್ತವಾಗಿವೆ. ಇದರಿಂದ ಹೋತೃವು ದೇವತೆಗಳನ್ನು ಸ್ತುತಿಮಾಡುವುದೂ, ಮೇಧಾವಿಯಾಗಿರುವುದೂ, ಯಜ್ಞಸಂಬಂಧಿಯಾದ ಕರ್ಮಗಳೆಲ್ಲದರ ಜ್ಞಾನವನ್ನೂ ಪೂರ್ಣವಾಗಿ ಹೊಂದಿರುವುದೂ ಅಥವಾ ಸರ್ವಜ್ಞನಾಗಿರುವುದೂ, ಸರ್ವವನ್ನು ವ್ಯಾಪಿಸಿರುವುದೂ ಎಂಬ ಗುಣಗಳು ಅಗ್ನಿಯಲ್ಲಿಯೂ ಇರುವುದರಿಂದ ಅಗ್ನಿಯನ್ನು **ಹೋತಾರಂ ಹೋಮನಿಷ್ಪಾದಕಂ ದೇವಾನಾಂ ಆಹ್ವಾತಾರಂ ವಾ** ಯಜ್ಞವನ್ನು ನೆರವೇರಿಸುವ ಅಥವಾ ದೇವತೆಗಳನ್ನು ಯಾಗಕ್ಕಾಗಿ ಆಹ್ವಾನಮಾಡುವ ಹೋತೃವನ್ನಾಗಿ ಯಜಮಾನರು ಹೊಂದಿರುವರು ಎಂದು ವಿವರಿಸಿದೆ.

**ಕವಿಂ—ಮೇಧಾವಿನಂ|** ಕವಿಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿ, **ಕವಿಃ ಮೇಧಾವೀ, ಕ್ರಾಂತದರ್ಶನೋ ಭವತಿ ಕವತೇರ್ವಾ** (ನಿ. ೧೨-೧೩) ಗಮನಾರ್ಥದಲ್ಲಿರುವ ಕುಧಾತುವಿನಿಂದ ನಿಷ್ಪನ್ನವಾದ ಕವಿಶಬ್ದವು ಪ್ರಾಜ್ಞನು, ಕೊನೆಯನ್ನು ಕಂಡಿರುವವನು ಎಂಬ ಅರ್ಥವಲ್ಲಿ ಪ್ರಯುಕ್ತವಾಗಿರುವುದು ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ.

**ಅಮೂರಂ—ಅಮೂಢಂ |** ಯಾಸ್ಕರು ಮೂರ, ಅಮೂರ ಎಂಬ ಶಬ್ದಗಳ ಅರ್ಥವನ್ನು ಉದಾಹರಣಪ್ರದರ್ಶನಪೂರ್ವಕವಾಗಿ ವಿವರಿಸಿದ್ದಾರೆ.

**ಮೂರಾ ಅಮೂರ ನ ವಯಂ ಚಿಕಿತ್ವೋ ಮಹಿತ್ವಮಗ್ನೇ ತ್ವಮಂಗ ವಿತ್ಸೇ |**
**ಶಯೇ ವವ್ರಿಶ್ಚರತಿ ಜಿಹ್ವಯಾದನ್ರೇರಿಹ್ಯತೇ ಯುವತಿಂ ವಿಶ್ಪತಿಃ ಸನ್ ||**

(ಋ. ಸಂ. ೧೦-೪-೪)

ಇಲ್ಲಿ **ಮೂಢಾ ವಯಂ ಸ್ಮಃ ಅಮೂಢಸ್ತ್ವಮಸಿ |** ಎಂದು ವ್ಯಾಖ್ಯಾನಮಾಡಿ, ಮೂರಶಬ್ದಕ್ಕೆ ಮೂಢನೆಂದೂ, ಅಮೂರಶಬ್ದಕ್ಕೆ ಅಮೂಢನೆಂದೂ, ಅರ್ಥವನ್ನು ವಿವರಿಸಿ, ಅಗ್ನಿಯು ಪ್ರಾಜ್ಞನಾಗಿರುವನು ಎಂದು ಅರ್ಥವನ್ನು ಹೇಳಿದೆ.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾ ಅಯುತಂ ಚ ಸಾಕಂ |**
**ಅತ್ರಾ ಪುರಂಧಿ ರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ||**

(ಋ. ಸಂ. ೪-೨೬-೭)

ಇಲ್ಲಿಯೂ ಅಮೂರಃ ಅಮೂಢಃ ಎಂದು ಅರ್ಥವನ್ನು ವರ್ಣಿಸಿದೆ.

**ದೇವತಾತಾ—**ದೇವತಾತಾ ಎಂಬ ಪದವು ಸಾಯಣರಿಂದ **ಯಷ್ಠವ್ಯತಯಾ ಸಂಬಂಧಿನೋ ದೇವಾನ್** ಯಜ್ಞದಲ್ಲಿ ಯಾಗಾರ್ಹರಾದ ದೇವತೆಗಳನ್ನು, ಹೋತೃವಾಗಿ ಇರುವ ಅಗ್ನಿಯು **ಯಜೀಯಾನ್** ಹೋಮಮಾಡುವವರಾದ ಋತ್ವಿಜರಲ್ಲಿ ಶ್ರೇಷ್ಠನಾಗಿ ಹವಿಸ್ಸಿನ ಅರ್ಪಣೆಯಿಂದ ತೃಪ್ತಿಪಡಿಸಲಿ ಎಂದು ವಿವೃತವಾಗಿದೆ.

ದೇವತಾತಾ ಎಂಬ ಪದವು ಯಜ್ಞನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ.

**ಶಂನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ||**
**ಜಂಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ ||**

(ಋ. ಸಂ. ೭-೩೮-೭)

ಇಲ್ಲಿ ದೇವತಾತಾ ಎಂಬ ಪದಕ್ಕೆ ಯಜ್ಞೇ ಎಂದು ಅರ್ಥವನ್ನು ಹೇಳಿದೆ.

**ಮಘಾನಿ—ಮಂಹನೀಯಾನಿ ಅಸ್ಮಾಭಿರ್ದೀಯಮಾನಾನಿ ಹವೀಂಷಿ** | ಮಘಶಬ್ದವು ಧನನಾಮ ಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ಯಜಮಾನರಿಂದ ಅರ್ಪಿತವಾದ ಹವಿಸ್ಸುಗಳೆಂಬ ಅರ್ಥದಲ್ಲಿ ಪ್ರಯುಕ್ತ ವಾಗಿದೆ. ಅಗ್ನಿಯು, ಯಜಮಾನರಾದ ನಾವು ಅರ್ಪಿಸಿದ ಹವಿಸ್ಸುಗಳನ್ನು ಸ್ವೀಕರಿಸಿ ನಮ್ಮ ಅನ್ನವನ್ನೂ ಧನವನ್ನೂ ಸರಿಯಾದ ವಿನಿಯೋಗಮಾಡಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ವೃಣೇ**—ವೃಞ್ ಸಂಭಕ್ತೌ. ಧಾತು. ಕ್ರ್ಯಾದಿ. ಲಟ್ ಉತ್ತಮಪುರುಷ ಏಕವಚನಾಂತರೂಪ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಿಯೇಧೇ**—ಮೇಧೇ ಎಂದು ರೂಪವಾದಾಗ ಛಾಂದಸವಾಗಿ ಏಕಾರ ಮತ್ತು ಮಕಾರಗಳ ಮಧ್ಯದಲ್ಲಿ ಇಯ್ ಎಂಬ ಆಗಮ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಗೃತ್ಸಂ**—ಗೃಧು ಅಭಿಕಾಂಕ್ಷಾಯಾಂ. ಧಾತು. **ಗೃಧಿಪಣ್ಯೋರ್ದಕೌಚ** (ಉ. ಸೂ. ೨-೩೪೪) ಎಂಬುದ ರಿಂದ ಸ ಪ್ರತ್ಯಯ. ಅದರೊಡನೆ ಧಾತು ಧಕಾರಕ್ಕೆ ದಕಾರಾದೇಶ. **ಖರಿಚ** ಎಂಬುದರಿಂದ ದಕಾರಕ್ಕೆ ತಕಾರಾ ದೇಶ. ಗೃತ್ಸ ಎಂದು ರೂಪವಾಗುತ್ತದೆ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಶ್ವವಿದಂ**—ವಿಶ್ವಂ ವೇತ್ತಿ ಇತಿ ವಿಶ್ವವಿತ್. ತಂ. ವಿದ ಜ್ಞಾನೇ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಮೂರಂ**—ಮುಹ ವೈಚಿತ್ಯೇ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಹಕಾರಕ್ಕೆ ಢತ್ವಾದಿಗಳು ಬಂದಾಗ ಮೂಢ ಎಂದು ರೂಪವಾಗುತ್ತದೆ. ಛಾಂದಸವಾಗಿ ಅಂತ್ಯಕ್ಕೆ ರೇಫಾದೇಶ ಬರುತ್ತದೆ. ನ ಮೂರಃ ಅಮೂರಃ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದಸ್ವರ ಉಳಿಯುತ್ತದೆ.

**ಯಕ್ಷತ್**—ಯಜ ದೇವಪೂಜಾದಿಷು. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ–ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪ ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಧಾತು ಜಕಾರಕ್ಕೆ ಷತ್ವಾದಿ. ಯಕ್ಷತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವತಾತಾ**—ದೇವಶಬ್ದದ ಮೇಲೆ ಸ್ವಾರ್ಥದಲ್ಲಿ **ಸರ್ವದೇವಾತ್ತಾತಿಲ್** (ಪಾ. ಸೂ. ೬-೧-೧೯೩) ಎಂಬುದರಿಂದ ತಾತಿಲ್ ಪ್ರತ್ಯಯ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನ ಪರವಾದಾಗ **ಸುಪಾಂಸುಲುಕ್** ಎಂಬುದ ರಿಂದ ಅದಕ್ಕೆ ಡಾದೇಶ.

**ಯಜೀಯಾನ್**—ಯಜ ಧಾತುವಿಗೆ ತೃಚ್ ಮಾಡಿದಾಗ ಯಷ್ಟೃ ಎಂದು ರೂಪವಾಗುತ್ತದೆ. ಇದರ ಮೇಲೆ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. ತೃಚಿಗೆ ಲೋಪ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವನತೇ**—ವನ ಷಣ ಸಂಭಕ್ತೌ. ಧಾತು. **ವ್ಯತ್ಯಯೋಬಹುಲಂ** ಎಂಬುದರಿಂದ ಆತ್ಮನೇಪದಿಯಾಗು ತ್ತದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

ಪ್ರ ತೇ ಅಗ್ನೇ ಹವಿಷ್ಮತೀಮಿಯರ್ಮ್ಯಚ್ಛಾ ಸುದ್ಯುಮ್ನಾಂ ರಾತಿನೀಂ ಘೃತಾಚೀಂ ।
ಪ್ರದಕ್ಷಿಣಿದ್ದೇವತಾತಿಮುರಾಣಃ ಸಂ ರಾತಿಭಿರ್ವಸುಭಿರ್ಯಜ್ಞಮಶ್ರೇತ್ ॥ ೨ ॥

ಪದಪಾಠಃ

ಪ್ರ । ತೇ । ಅಗ್ನೇ । ಹವಿಷ್ಮತೀಂ । ಇಯರ್ಮಿ । ಅಚ್ಛ । ಸುಽದ್ಯುಮ್ನಾಂ । ರಾತಿನೀಂ । ಘೃತಾಚೀಂ ।
ಪ್ರಽದಕ್ಷಿಣಿತ್ । ದೇವಽತಾತಿಂ । ಉರಾಣಃ । ಸಂ । ರಾತಿಽಭಿಃ । ವಸುಽಭಿಃ । ಯಜ್ಞಂ । ಅಶ್ರೇತ್ ॥

ಸಾಯಣಭಾಷ್ಯಂ

ಹೇ ಅಗ್ನೇ ಸುದ್ಯುಮ್ನಾಂ ಸುತೇಜಸಂ ಹವಿಷ್ಮತೀಂ ಪುರೋಡಾಶಾದಿಹವಿರ್ಯುಕ್ತಾಂ ರಾತಿನೀಂ ಹವಿರ್ದಾತ್ರೀಂ ಘೃತಾಚೀಂ ಘೃತಾನ್ವಿತಾಂ ಜುಹೂಮುಪಭೃತಂ ವಾ ತೇ ತವಾಚ್ಛ ತ್ವದಾಭಿಮುಖ್ಯೇನ ಪ್ರೇಯರ್ಮಿ । ಪ್ರೇರಯಾಮಿ । ದೇವತಾತಿಂ ದೇವಾನ್ ಉರಾಣ ಉರು ಬಹು ಕುರ್ವಾಣಃ । ಉರಾಣ ಉರು ಕುರ್ವಾಣಃ । ನಿ. ೬-೧೭ । ಇತಿ ಯಾಸ್ಕಃ । ತಾದೃಶೋ ಭವಾನ್ ರಾತಿಭಿರ್ವಸುಭಿರಸ್ಮಭ್ಯಂ ದೇಯತಯಾ ಪ್ರಾಪ್ತೈರ್ಧನೈಃ ಸಹ ಸನ್ ಪ್ರದಕ್ಷಿಣಿತ್ ಪ್ರಾದಕ್ಷಿಣ್ಯೇನ ಸಮಶ್ರೇತ್। ತಮಿಮಂ ಯಜ್ಞಂ ಸಮ್ಯಕ್ ಸೇವತಾಂ ॥ ಹವಿಷ್ಮತೀಂ । ಹವಿರಸ್ಯಾಸ್ತೀತಿ ಮತುಪ್। ತಸೌ ಮತ್ವರ್ಥ ಇತಿ ಭಸಂಜ್ಞಾಯಾಂ ಸಕಾರಸ್ಯ ರುರ್ನ ಭವತಿ । ಉಗಿತಶ್ಚೇತಿ ಙೀಪ್ । ಸ್ವರವಿಧೌ ವ್ಯಂಜನಮವಿದ್ಯಮಾನವದಿತಿ ಪರಿಭಾಷಾನಾಶ್ರಯಣಾನ್ಮತುಪ ಉದಾತ್ತತಾಭಾವಃ । ಇಯರ್ಮಿ । ಋ ಗತೌ । ಜುಹೋತ್ಯಾದಿಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಅಭ್ಯಾಸಸ್ಯಾಸವರ್ಣ ಇತೀಯಙಾದೇಶಃ । ಮಿಪಃ ಪಿತ್ತ್ವಾದ್ಗುಣಃ । ನಿಘಾತಃ । ಅಚ್ಛ । ನಿಪಾತಸ್ಯೇತಿ ಸಂಹಿತಾಯಾಂ ದೀರ್ಘಃ । ರಾತಿನೀಂ । ರಾ ದಾನ ಇತ್ಯಸ್ಯ ನಪುಂಸಕೇ ಭಾವೇ ಕ್ತಃ । ರಾತಮಸ್ಯಾಸ್ತೀತ್ಯತ ಇನಿಠನಾವಿತೀನಿಃ । ಪ್ರತ್ಯಯಸ್ವರಃ । ಘೃತಾಚೀಂ । ಘೃತಪೂರ್ವಾದಂಚತೇರ್ಋತ್ವಿಕ್‌ದಧೃಗಿತ್ಯಾದಿನಾ ಕ್ವಿನ್ । ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಭಸಂಜ್ಞಾಯಾಮಚ ಇತ್ಯಕಾರಲೋಪಃ । ಚಾವಿತಿ ದೀರ್ಘಃ । ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವೇ ಪ್ರಾಪ್ತೇ ಚಾವಿತಿ ಪೂರ್ವಪದಾಂತೋದಾತ್ತಃ । ಪ್ರದಕ್ಷಿಣಿತ್ । ಪ್ರದಕ್ಷಿಣಂ ಕರೋತೀತಿ ತತ್ಕರೋತೀತಿ ಣಿಜುತ್ಪದ್ಯಮಾನೋ ದಕ್ಷಿಣಶಬ್ದಾದ್ಭವತಿ। ಸಂಗ್ರಾಮಯತೇರೇವ ಸೋಪಸರ್ಗಾಣ್ಣಿಜುತ್ಪತ್ತಿರ್ನಾನ್ಯಸ್ಮಾದಿತಿ ತದಂತಾತ್ ಕ್ವಿಪ್ । ಹ್ರಸ್ವಸ್ಯ ಪಿತಿ । ಪಾ. ೬-೧-೭೧ । ಇತಿ ತುಕ್ । ಣಿಚೋ ಲೋಪಾಭಾವಶ್ಛಾಂದಸಃ । ಣಿಚ್‌ಸ್ವರಃ । ದೇವತಾತಿಂ । ದೇವಶಬ್ದಾತ್ಸರ್ವದೇವಾತ್ತಾತಿಲಿತಿ ತಾತಿಲ್ । ಲಿತೀತಿ ಪ್ರತ್ಯಯತ್ಪೂರ್ವಸ್ಯೋದಾತ್ತತ್ವಂ । ಉರಾಣಃ । ಉರು ಕರೋತೀತಿ ತತ್ಕರೋತೀತಿ ಣಿಚ್ । ತದಂತಾಚ್ಛಂದಸಿ ಲಿಟ್ । ಮಂತ್ರತ್ವಾದಾಮ್ನ ಭವತಿ । ತಸ್ಯ ಕಾನಚ್ । ಣೇರನಿಟೀತಿ ಣಿಲೋಪಃ । ವರಾದೇಶಾಭಾವಶ್ಛಾಂದಸಃ । ಚಿತ್ತ್ವಾದಂತೋದಾತ್ತಃ । ಅಶ್ರೇತ್ । ಶ್ರಿಞ್ ಸೇವಾಯಾಮಿತ್ಯಸ್ಯ ಛಾಂದಸೇ ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ನಿಘಾತಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ಸುದ್ಯುಮ್ನಾಂ**—ಪ್ರಕಾಶಮಾನವಾದುದೂ | **ಹವಿಷ್ಮತೀಂ**—ಪುರೋಡಾಶಾದಿಹವಿಸ್ಸುಗಳಿಂದ ಕೂಡಿದುದೂ | **ರಾತಿನೀಂ**—ಹವಿಸ್ಸನ್ನು ಅರ್ಪಿಸತಕ್ಕದ್ದೂ | **ಘೃತಾಚೀಂ**—ಘೃತದಿಂದ ಪೂರ್ಣವಾದದ್ದೂ ಆದ ಈ ಜುಹೂಪಾತ್ರೆಯನ್ನು | **ತೇ**—ನಿನ್ನ | **ಅಚ್ಛ**—ಅಭಿಮುಖವಾಗಿ | **ಪ್ರ ಇಯರ್ಮಿ**—(ಆಹುತ್ಯರ್ಪಣೆಗಾಗಿ) ಹಿಡಿಯುತ್ತೇನೆ | **ದೇವತಾತಿಂ**—ದೇವತೆಗಳ ಸಮೂಹವನ್ನು | **ಉರಾಣಃ**—ವೃದ್ಧಿಪಡಿಸತಕ್ಕ ನೀನು | **ರಾತಿಭಿಃ**—ನಮಗೆ ಕೊಡಬೇಕಾದ | **ವಸುಭಿಃ**—ಧನಗಳೊಡನೆ | **ಪ್ರದಕ್ಷಿಣಿತ್**—ಪ್ರದಕ್ಷಿಣಪೂರ್ವಕವಾಗಿ | **ಯಜ್ಞಂ**—ಈ ಯಜ್ಞವನ್ನು | **ಸಮಶ್ರೇತ್**—ಪೂರ್ಣವಾಗಿ ಸೇವಿಸು ||

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನವಾದುದೂ, ಪುರೋಡಾಶಾದಿ ಹವಿಸ್ಸುಗಳಿಂದ ಕೂಡಿದುದೂ, ಹವಿಸ್ಸನ್ನು ಅರ್ಪಿಸತಕ್ಕದ್ದೂ, ಘೃತದಿಂದ ಪೂರ್ಣವಾದದ್ದೂ ಆದ ಈ ಜುಹೂಪಾತ್ರೆಯನ್ನು ಆಹುತ್ಯರ್ಪಣೆಗಾಗಿ ನಿನ್ನ ಅಭಿಮುಖವಾಗಿ ಹಿಡಿಯುತ್ತೇನೆ. ದೇವತೆಗಳ ಸಮೂಹವನ್ನು ವೃದ್ಧಿಪಡಿಸತಕ್ಕ ನೀನು ನಮಗೆ ಕೊಡಬೇಕಾದ ಧನಗಳೊಡನೆ ಪ್ರದಕ್ಷಿಣಪೂರ್ವಕವಾಗಿ ಈ ಯಜ್ಞವನ್ನು ಪೂರ್ಣವಾಗಿ ಸೇವಿಸು.

## English Translation

Reverencing the gods, I place before you, Agni, the brilliant oblation-yielding, food-bestowing, butter-charged (offering); may you ( propitiated ) by the presented wealth, sanctify (this) sacrifice by your circumambulation.

ವಿಶೇಷವಿಷಯಗಳು

ಈ ಮಂತ್ರದಲ್ಲಿ ಅಗ್ನಿಯನ್ನು ಸಂಬೋಧಿಸಿ ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸುವುದಕ್ಕಾಗಿ ಸಿದ್ಧಮಾಡಿರುವ ಜುಹೂ ಎಂದು ಪ್ರಸಿದ್ಧವಾದ ಪಾತ್ರೆಯನ್ನು ವರ್ಣಿಸಿದೆ.

**ಸುದ್ಯುಮ್ನಾಂ—ಸುತೇಜಸಂ** | ದ್ಯುಮ್ನಶಬ್ದವು ಧನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. " **ಅಸ್ಮೇ ದ್ಯುಮ್ನಮಧಿರತ್ನಂ ಚ ಧೇಹಿ** " ಎಂದು ಉದಾಹೃತವಾಗಿ **ದ್ಯುಮ್ನಂ ದ್ಯೋತತೇರ್ಯಶೋವಾ ಅನ್ನಂ ವಾ** (ನಿ. ೫-೬) ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ತೇಜಸ್ಸೆಂದು ಅರ್ಥವನ್ನು ಮಾಡಿ, ಜುಹೂ ಎಂಬ ಪಾತ್ರೆಯು ತೇಜಶ್ಶಾಲಿಯಾಗಿರುವುದೆಂದು ವಿವರಿಸಿದೆ.

**ಘೃತಾಚೀಂ—ಘೃತಾನ್ವಿತಾಂ** | ಘೃತಾಚೀಶಬ್ದವು ರಾತ್ರಿನಾಮಗಳಲ್ಲಿ (ನಿ. ೨-೧೮) ಪಠಿತವಾಗಿದೆ. ಅಗ್ನಿಗೆ ಅಭಿಮುಖವಾಗಿ ಯಜಮಾನರು ಪುರೋಡಾಶವೇ ಮೊದಲಾದ ಹವಿಸ್ಸುಗಳಿಂದತುಂಬಿರುವ ಜುಹೂ ಎಂಬ ಪಾತ್ರೆಯನ್ನು ಅರ್ಪಿಸುತ್ತಾರೆಂದು ವರ್ಣಿಸಿದೆ.

**ಅಚ್ಛ—ಆಭಿಮುಖ್ಯೇನ** | ಈ ನಿಪಾತವು " ಶ್ರವಶ್ಚಾಚ್ಛಾಪಶುಮಚ್ಚಯೂಥಂ " ಎಂಬಲ್ಲಿ ಸಮುಚ್ಚಯಾರ್ಥದಲ್ಲಿ (ನಿ. ೪-೨೪) ಪ್ರಯುಕ್ತವಾಗಿದೆ. **ಅಚ್ಛಅಚ್ಛಾಭೇರಾಪ್ತುಮಿತಿ ಶಾಕಪೂಣಿಃ** (ನಿ. ೫-೨೮) ಅಚ್ಛ ಎಂಬ ನಿಪಾತವು **ಅಭೇಃ ಅರ್ಥೇ ಭವತಿ** ಎಂದು ಶಾಕಪೂಣಿ ಆಚಾರ್ಯರು ಹೇಳಿದ್ದಾರೆ ಎಂದು ವಿವೃತವಾಗಿ ಇಲ್ಲಿ ಅಭಿಮುಖ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ದೇವತಾತಿಂ ಉರಾಣಃ**—**ದೇವಾನ್ ಬಹು ಕುರ್ವಾಣಃ**| **ಉರಾಣಃ** ಎಂಬ ಪದವು **ಉರುಕುರ್ವಾಣಃ** ಎಂದು ಯಾಸ್ಕರಿಂದ ವಿವೃತವಾಗಿದೆ, ಮತ್ತೂ—

**ವೇರಧ್ವರಸ್ಯ ದೂತ್ಯಾನಿ ವಿದ್ವಾನುಭೇ ಅಂತಾ ರೋದಸೀ ಸಂಚಿಕಿತ್ವಾನ್ |**
**ದೂತ ಈಯಸೇ ಪ್ರದಿವ ಉರಾಣೋ ವಿದುಷ್ಟರೋ ದಿವ ಆರೋಧನಾನಿ ||**

(ಋ. ಸಂ. ೪-೭-೮)

ಉದಾಹೃತವಾದ ಈ ಋಕ್ಕಿನಲ್ಲಿ **ಅಲ್ಪಮಪಿ ಹುತಂ ಹವಿಃ ದೇವತಾತೃಪ್ತಿಸಮರ್ಥಂ ಬಹು ಕುರ್ವಾಣಃ** ಅಲ್ಪವಾದ ಹವಿಸ್ಸನ್ನೂ ಕೂಡ ದೇವತೆಗಳಿಗೆ ತೃಪ್ತಿಯು ಉಂಟಾಗುವಂತೆ ಬಹಳವಾಗಿರುವಂತೆ ಮಾಡುವನು ಎಂದು ಉರಾಣ ಶಬ್ದದ ಅರ್ಥವು ಉಕ್ತವಾಗಿದೆ. ದೇವತಾತಿ ಶಬ್ದವು ಯಜ್ಞನಾಮುಗಳಲ್ಲಿ ಉಕ್ತವಾಗಿದ್ದರೂ, ಇಲ್ಲಿ ಅಗ್ನಿಯು ಯಜ್ಞಕ್ಕಾಗಿ ಆಹೂತರಾದ ದೇವತೆಗಳನ್ನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿ ಆ ದೇವತೆಗಳನ್ನು ಕುರಿತು ಅರ್ಪಿತವಾದ ಹವಿಸ್ಸು ಪ್ರಭೂತವಾಗಿರುವಂತೆ, ಮಾಡುವನು ಎಂದು ಅರ್ಥವನ್ನು ವಿವರಿಸಿದೆ.

**ರಾತಿಭಿಃ ವಸುಭಿಃ ಪ್ರದಕ್ಷಿಣಿತ್ ಸಮಶ್ರೇತ್**—**ಅಸ್ಮಭ್ಯಂ ದೇವತಯಾ ಪ್ರಾಪ್ತ್ಯೈಃ ಧನೈಃ ಪ್ರಾದಕ್ಷಿಣ್ಯೇನ ತಮಿಮಂ ಯಜ್ಞಂ ಸಮ್ಯಕ್ ಸೇವತಾಂ** | ಯಜಮಾನರು ತಮಗೆ ದೊರಕಿದ ದಾನಾರ್ಹವಾದ ಧನಗಳಿಂದ ದೇವತೆಗಳನ್ನು ಉದ್ದೇಶಿಸಿ ಆಚರಿಸುವ ಯಜ್ಞಗಳನ್ನು ಅಗ್ನಿಯು ಸರಳಭಾವದಿಂದ ಸೇವಿಸಲಿ ಎಂದು ಆಶಂಸೆಯು ವರ್ಣಿತವಾಗಿದೆ. ವಸು ಶಬ್ದಕ್ಕೆ ಅನೇಕಾರ್ಥಗಳಿದ್ದರೂ, ಇಲ್ಲಿ ಧನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

**ಹವಿಷ್ಮತೀಂ**—ಹವಿಃ ಅಸ್ಯ ಅಸ್ತಿ ಇತಿ ಹವಿಷ್ಮಾನ್. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. **ತಸೌಮತ್ವರ್ಥೇ** (ಪಾ. ಸೂ. ೧-೪-೧೯) ಎಂಬುದರಿಂದ ಭಸಂಜ್ಞಾ ಬರುವುದರಿಂದ ಪೂರ್ವದ ಸಕಾರಕ್ಕೆ ರುತ್ವ ಬರುವುದಿಲ್ಲ. ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. **ಸ್ವರವಿಧೌ-ವ್ಯಂಜನಮವಿದ್ಯಮಾನವತ್**—ಸ್ವರವಿಧಾನಮಾಡುವಾಗ ಮಧ್ಯೇ ವ್ಯಂಜನವಿದ್ದರೂ ಇಲ್ಲದಂತೆ ಎಂಬ ಪರಿಭಾಷೆಯನ್ನು ಇಲ್ಲಿ ಸ್ವೀಕರಿಸದಿರುವುದರಿಂದ ಹ್ರಸ್ವದ ಪರವಲ್ಲಿ ಮತುಪ್ ಬಾರದಿರುವುದರಿಂದ ಮತುಪಿದೆ ಉದಾತ್ತಸ್ವರ ಬರುವುದಿಲ್ಲ. ದ್ವಿತೀಯಾ ಏಕವಚನಾಂತರೂಪ.

**ಇಯರ್ಮಿ**—ಋ ಗತೌ ಧಾತು. ಜುಹೋತ್ಯಾದಿ. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇಕಾರಾದೇಶ. ಮಿಪ್ ನಿಮಿತ್ತವಾಗಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಅಸವರ್ಣ ಅಚ್ ಪರವಾದುದರಿಂದ **ಅಭ್ಯಾಸಸ್ಯಾಸವರ್ಣೇ** (ಪಾ. ಸೂ. ೬-೪-೭೮) ಎಂಬುದರಿಂದ ಅದಕ್ಕೆ ಇಯಾದೇಶ. ಇಯರ್ಮಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಚ್ಛ**—**ನಿಪಾತಸ್ಯಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ರಾತಿನೀಂ**—ರಾ ದಾನೇ. ಧಾತು. **ನಪುಂಸಕೇಭಾವೇಕ್ತಃ** (ಪಾ. ಸೂ. ೩-೩-೧೩೪) ಎಂಬುದರಿಂದ ಭಾವಾರ್ಥದಲ್ಲಿ ಕ್ತ ಪ್ರತ್ಯಯ. ರಾತ ಎಂದು ರೂಪವಾಗುತ್ತದೆ. ರಾತಮಸ್ಯಾಸ್ತಿ ಇತಿ ರಾತೀ. **ಅತ ಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಸ್ತ್ರೀತ್ವದಲ್ಲಿ ನಾಂತವಾದುದರಿಂದ **ಋನ್ನೇ-**

**ಭ್ಯೋ ಙೀಪ್** (ಪಾ. ಸೂ. ೪-೧-೫) ಎಂಬುದರಿಂದ ಙೀಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಇನಿ ಪ್ರತ್ಯಯಸ್ವರ ಉಳಿಯುತ್ತದೆ.

**ಘೃತಾಚೀಂ**—ಅಂಚು ಗತಿಪೂಜನಯೋಃ ಧಾತು. ಘೃತಶಬ್ದ ಪೂರ್ವದಲ್ಲಿರುವಾಗ **ಋತ್ವಿಕ್‌ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಇದಕ್ಕೆ ಕ್ವಿನ್ ಪ್ರತ್ಯಯ. ಸ್ತ್ರೀತ್ವವಿವಕ್ಷಾ ಮಾಡಿದಾಗ **ಅಂಚತೇಶ್ಚೋಪಸಂಖ್ಯಾನಂ** ಎಂಬ ವಚನದಿಂದ ಙೀಪ್. ಭಸಂಜ್ಞಾ ಇರುವುದರಿಂದ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಆಗ **ಚೌ** (ಪಾ. ಸೂ. ೬-೩-೧೩೮) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ಙೀಪ್ ಪರವಾದಾಗ ಉದಾತ್ತ. ಅಕಾರ ಲೋಪವಾದುದರಿಂದ **ಅನುದಾತ್ತಸ್ಯಚಯತ್ರೋದಾತ್ತಲೋಪಃ** ಎಂಬುದರಿಂದ ಙೀಪಿಗೆ ಉದಾತ್ತಸ್ವರ ಪ್ರಾಪ್ತವಾದರೆ **ಚೌ** (೬-೧-೨೨೨) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಪ್ರದಕ್ಷಿಣಿತ್**—ಪ್ರದಕ್ಷಿಣಂ ಕರೋತಿ ಇತಿ ಪ್ರದಕ್ಷಿಣಿತ್. **ತತ್ಕರೋತಿತದಾಚಷ್ಟೇ** ಎಂಬ ವಚನದಿಂದ ದಕ್ಷಿಣಶಬ್ದದ ಮೇಲೆ ಣಿಚ್. ಸಂಗ್ರಾಮ ಯುದ್ಧೇ ಎಂಬಲ್ಲಿ ಹೇಗೆ ಸಂ ಉಪಸರ್ಗ ಸಹಿತವಾದುದಕ್ಕೆ ಧಾತುಸಂಜ್ಞೆಯೋ ಅದರಂತೆ ಇಲ್ಲ ಪ್ರಸಹಿತವಾದ ದಕ್ಷಿಣಿ ಎಂಬುದಕ್ಕೆ ಧಾತುಸಂಜ್ಞಾ ಇರುವುದರಿಂದ ಪ್ರದಕ್ಷಿಣಿ ಎಂಬುದರ ಮೇಲೆ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧ ಎಂಬುದರಿಂದ ಪೂರ್ವಕ್ಕೆ ತುಕಾಗಮ. ಛಾಂದಸವಾಗಿ ಪ್ರತ್ಯಯನಿಮಿತ್ತವಾಗಿ ಣಿಚಿಗೆ ಲೋಪ ಬರುವುದಿಲ್ಲ. ಣಿಚ್‌ಸ್ವರ ಉಳಿಯುತ್ತದೆ.

**ದೇವತಾತಿಂ**—**ಸರ್ವದೇವಾತ್ತಾತಿಲ್** (ಪಾ. ಸೂ. ೪-೪-೧೪೨) ಎಂಬುದರಿಂದ ಸ್ವಾರ್ಥದಲ್ಲಿ ತಾತಿಲ್ ಪ್ರತ್ಯಯ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಉರಾಣಃ**—ಉರು ಕರೋತಿ ಎಂದು ವಿವಕ್ಷಾಮಾಡಿದಾಗ **ತತ್ಕರೋತಿತದಾಚಷ್ಟೇ** ಎಂಬ ವಚನದಿಂದ ಣಿಚ್. ಇದರ ಮೇಲೆ ಛಾಂದಸವಾಗಿ ಲಿಟ್. **ಕಾಸ್‌ಪ್ರತ್ಯಯಾದಾಮಮಂತ್ರೇಲಿಟಿ** (ಪಾ. ಸೂ. ೩-೧-೩೫) ಎಂಬಲ್ಲಿ ಅಮಂತ್ರೇ ಎಂದು ನಿಷೇಧಮಾಡಿರುವುದರಿಂದ ಆಂ ಬರುವುದಿಲ್ಲ. **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಲಿಟಿಗೆ ಕಾನಚಾದೇಶ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್‌ಗೆ ಲೋಪ. ಇಷ್ಠವತ್‌ಕಾರ್ಯಗಳನ್ನು ಅತಿದೇಶಮಾಡಿರುವುದರಿಂದ ಇಲ್ಲಿ ಉರು ಎಂಬುದಕ್ಕೆ ವರಾದೇಶ ಬರಬೇಕಾದರೂ ಛಾಂದಸವಾಗಿ ಇಲ್ಲಿ ಬರುವುದಿಲ್ಲ. **ಅಟ್‌ಕುಪ್ವಾಙ್**—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಶ್ರೇತ್**—ಶ್ರಿಇಞ್ ಸೇವಾಯಾಂ ಧಾತು. **ಛಂದಸಿಲುಙ್‌ಲಙ್**—(ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಙ್. ಪ್ರಥಮಪುರುಷಏಕವಚನದಲ್ಲಿ ತಿಪ್. ಇಕಾರಲೋಪ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಇಕಾರಕ್ಕೆ ಗುಣ. ಅಂಗಕ್ಕೆ ಅಡಾಗಮ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

ಸ ತೇಜೀಯಸಾ ಮನಸಾ ತ್ವೋತ ಉತ ಶಿಕ್ಷ ಸ್ವಪತ್ಯಸ್ಯ ಶಿಕ್ಷೋಃ ।
ಅಗ್ನೇ ರಾಯೋ ನೃತಮಸ್ಯ ಪ್ರಭೂತೌ ಭೂಯಾಮ ತೇ ಸುಷ್ಟುತಯಶ್ಚ ವಸ್ವಃ ॥

ಪದಪಾಠಃ

ಸಃ । ತೇಜೀಯಸಾ । ಮನಸಾ । ತ್ವಾಽಊತಃ । ಉತ । ಶಿಕ್ಷ । ಸುಽಅಪತ್ಯಸ್ಯ । ಶಿಕ್ಷೋಃ ।
ಅಗ್ನೇ । ರಾಯಃ । ನೃಽತಮಸ್ಯ । ಪ್ರಽಭೂತೌ । ಭೂಯಾಮ । ತೇ । ಸುಽಸ್ತುತಯಃ । ಚ । ವಸ್ವಃ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವೋತೋ ಯಸ್ತ್ವಯಾ ರಕ್ಷ್ಯಮಾಣಃ ಸ ತೇಜೀಯಸಾತಿಶಯೇನ ತೀಕ್ಷ್ಣೇನ ಸತ್ಕರ್ಮವಿಷಯತೀಕ್ಷ್ಣಬುದ್ಧಿಯುಕ್ತೇನ ಮನಸಾಂತಃಕರಣೇನ ಯುಕ್ತೋ ಭವತಿ । ಉತ ಅಪಿ ಚ ತಸ್ಮೈ ಸ್ವಪತ್ಯಸ್ಯ । ದ್ವಿತೀಯಾರ್ಥೇ ಷಷ್ಠೀ । ಶೋಭನಾಪತ್ಯೋಪೇತಂ ಧನಂ ಶಿಕ್ಷ । ಪ್ರಯಚ್ಛ । ಶಿಕ್ಷತಿರ್ದಾನಕರ್ಮಾ ದಾತ್ಯಾದಿಷು ದಾನಕರ್ಮಸು ಪಠಿತತ್ವಾತ್ । ಹೇ ಅಗ್ನೇ ಶಿಕ್ಷೋರಭಿಮತಫಲಪ್ರದಾನೇ ಶಕ್ತುಮಿಚ್ಛೋ ರಾಯೋ ನೃತಮಸ್ಯ ಧನಸ್ಯಾತಿಶಯೇನ ನೇತುರ್ದಾತುಸ್ತೇ ತವ ಪ್ರಭೂತೌ ಪ್ರಭಾವೇ ಮಹಿಮ್ನಿ ವಯಂ ಸ್ಯಾಮ। ಕಿಂಚ ಸುಷ್ಟುತಯಸ್ತ್ವದ್ವಿಷಯಶೋಭನಸ್ತುತಿಮಂತೋ ವಯಂ ವಸ್ವೋ ವಸುನೋ ಭಾಜನಂ ಭೂಯಾಮ । ಭೂಯಾಸ್ಮ ॥ ತೇಜೀಯಸಾ । ತೇಜಿತೃಶಬ್ದಾದತಿಶಾಯನ ಈಯಸುನ್ । ತುರಿಷ್ಠೇಮೇಯಃಸ್ವಿತಿ ತೃಚೋ ಲೋಪಃ । ನಿತ್ಸ್ವರಃ । ತ್ವೋತಃ । ಅವ ರಕ್ಷಣಾದಿಷು । ನಿಷ್ಠಾಯಾಂ ಜ್ವರತ್ವರಸ್ರಿವ್ಯವಿಮವಾಮುಪಧಾಯಾ ಇತ್ಯೂಠ್ । ಅಲೋಪಃ । ತ್ವಯಾ ಊತಃ । ತೃತೀಯೇತಿ ಯೋಗವಿಭಾಗಾತ್ಸಮಾಸಃ । ಟೇಲೋರ್ಪಶ್ಛಂದಸಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರಃ । ಶಿಕ್ಷ । ಶಿಕ್ಷ ವಿದ್ಯೋಪಾದಾನ ಇತ್ಯಯಮತ್ರ ದಾನಾರ್ಥಃ । ಅಸ್ಮಾಲ್ಲೋಟಿ ವ್ಯತ್ಯಯೇನ ಪರಸ್ಮೈಪದಂ । ಶಿಕ್ಷೋಃ । ಶಕ್ಲೃ ಶಕ್ತಾವಿತ್ಯಸ್ಯ ಸನ್ಯೇಕಾಚ ಉಪದೇಶ ಇತಿ ಇಟ್ಪ್ರತಿಷೇಧಃ । ಸನಿ ಮೀಮಾಘುರಭಲಭಶಕಪತಪದಾಮಚ ಇಸಿತಿ ಧಾತೋರಚ ಇಸಾದೇಶಃ । ಅತ್ರ ಲೋಪೋಽಭ್ಯಾಸಸ್ಯೇತ್ಯಭ್ಯಾಸಲೋಪಃ । ಸನಾಶಂಸಭಿಕ್ಷ ಉರಿತ್ಯುಪ್ರತ್ಯಯಃ । ಪ್ರತ್ಯಯಸ್ವರಃ । ಪ್ರಭೂತೌ । ಭೂಸತ್ತಾಯಾಮಿತ್ಯಸ್ಯ ಭಾವೇ ಕ್ತಿನ್ । ತಾದೌ ಚ ನಿತಿ ಕೃತ್ಯತಾವಿತಿ ಗತೇಃ ಪ್ರಕೃತಿಸ್ವರತ್ವಂ । ಭೂಯಾಮ । ಭೂ ಸತ್ತಾಯಾಮಿತ್ಯಸ್ಯಾಶೀರ್ಲಿಙಿ ಕಿದಾಶಿಷೀತಿ ಯಾಸುಟ್ । ಛಂದಸ್ಯುಭಯಥೇತಿ ತಸ್ಯ ಸಾರ್ವಧಾತುಕತ್ವಾತ್ಸಲೋಪಃ । ಆಗಮಸ್ವರಃ । ಯದ್ವಾ ತಸ್ಮಾತ್ಪ್ರಾರ್ಥನಾಯಾಂ ಲಿಙಿ ಯಾಸುಟ್ । ಬಹುಲಂ ಛಂದಸೀತಿ ಶಪೋ ಲುಕ್ । ಅನದಂತತ್ವಾದಿಯಾದೇಶೋ ನ ಭವತಿ । ಸುಷ್ಟುತಯಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ವಸ್ವಃ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವಃ । ಯಣಾದೇಶಃ ॥

ಪ್ರತಿಪದಾರ್ಥ

(ಅಗ್ನೇ—ಎಲೈ ಅಗ್ನಿಯೇ) | **ತ್ವೋತಃ**—ಯಾವ ಪುರುಷನು ನಿನ್ನಿಂದ ರಕ್ಷಿಸಲ್ಪಡುವನೋ | **ಸಃ**—ಅವನು | **ತೇಜೀಯಸಾ**—(ಸತ್ಕರ್ಮಗಳ ವಿಷಯದಲ್ಲಿ) ತೀವ್ರವಾದ ಆಸಕ್ತಿಯುಳ್ಳ | **ಮನಸಾ**—ಮನಸ್ಸಿನಿಂದ ಕೂಡಿರುತ್ತಾನೆ | **ಉತ**—ಮತ್ತು | **ಸ್ವಪತ್ಯಸ್ಯ**—ಶ್ರೇಷ್ಠವಾದ ಸಂತತಿಯಿಂದ ಕೂಡಿದ ಧನವನ್ನು | **ಶಿಕ್ಷ**—(ಅವನಿಗೆ) ಕೊಡು | **ಅಗ್ನೇ**—ಎಲೈ ಅಗ್ನಿಯೇ | **ಶಿಕ್ಷೋಃ**—ಅಭಿಮತವಾದ ಫಲವನ್ನು ಕೊಡತಕ್ಕವನೂ | **ರಾಯಃ**—ಧನದ| **ನೃತಮಸ್ಯ**—ದಾತೃಗಳಲ್ಲಿ ಅತ್ಯುತ್ತಮನೂ ಆದ | **ತೇ**—ನಿನ್ನ | **ಪ್ರಭೂತೌ**—ಪ್ರಭಾವದ ಆಶ್ರಯದಲ್ಲಿ | **ಭೂಯಾಮ**—ನಾವು ಇರುವಂತಾಗಲಿ | **ಚ**—ಮತ್ತು | **ಸುಷ್ಟುತಯಃ**—ನಿನ್ನನ್ನು ಉತ್ತಮವಾಗಿ ಸ್ತೋತ್ರಮಾಡ ತಕ್ಕ ನಾವು | **ವಸ್ವಃ**—ಧನಕ್ಕೆ ಪಾತ್ರರಾಗಿ | (**ಭೂಯಾಮ**—ಆಗಿರುವಂತೆ ಮಾಡು) ||

ಭಾವಾರ್ಥ

ಎಲೈ ಅಗ್ನಿಯೇ, ಯಾವ ಪುರುಷನು ನಿನ್ನಿಂದ ರಕ್ಷಿಸಲ್ಪಡುವನೋ, ಅವನು ಸತ್ಕರ್ಮಗಳ ವಿಷಯದಲ್ಲಿ ತೀವ್ರವಾದ ಆಸಕ್ತಿಯುಳ್ಳ ಮನಸ್ಸಿನಿಂದ ಕೂಡಿರುತ್ತಾನೆ. ಅವನಿಗೆ ಶ್ರೇಷ್ಠವಾದ ಸಂತತಿಯಿಂದ ಕೂಡಿದ ಧನವನ್ನು ಕೊಡು. ಅಭಿಮತವಾದ ಫಲವನ್ನು ಕೊಡತಕ್ಕವನೂ, ಧನದ ದಾತೃಗಳಲ್ಲಿ ಅತ್ಯುತ್ತಮನೂ ಆದ ನಿನ್ನ ಪ್ರಭಾವದ ಆಶ್ರಯದಲ್ಲಿ ನಾವು ಇರುವಂತಾಗಲಿ. ನಿನ್ನನ್ನು ಉತ್ತಮವಾಗಿ ಸ್ತೋತ್ರಮಾಡತಕ್ಕ ನಾವು ಧನಕ್ಕೆ ಪಾತ್ರರಾಗುವಂತೆಯೂ ಆಗಲಿ.

## English Translation.

He who is protected, Agni, by you, becomes endowed with a most luminous mind : bestow upon him excellent progeny : may we ever be under the power of you, who are the willing despenser of riches : glorifying you (may we be) the receptacle of wealth.

ವಿಶೇಷವಿಷಯಗಳು

**ತೇಜೀಯಸಾ ಮನಸಾ—ಅತಿಶಯೇನ ತೀಕ್ಷ್ಣೇಣ ಸತ್ಕರ್ಮವಿಷಯೇತೀಕ್ಷ್ಣಬುದ್ಧಿಯುಕ್ತೇನ ಅಂತಃಕರಣೇನ** | ಇಲ್ಲಿ ಅಗ್ನಿಯನ್ನು ಸಂಬೋಧಿಸಿ ಅಗ್ನಿಯಿಂದ ರಕ್ಷಿತನಾದವನು, ಸತ್ಕರ್ಮಗಳನ್ನು ಆಚರಿಸುವುದರಲ್ಲಿ ಪ್ರಭೂತವಾದ ಮನಸ್ಸುಳ್ಳವನಾಗಿರುತ್ತಾನೆ ಎಂದು ಅಗ್ನಿಕೃತವಾದ ರಕ್ಷಣಾಫಲವು ನಿರೂಪಿತವಾಗಿದೆ. ಅಂತಃಕರಣವೆಂಬ ಇಂದ್ರಿಯವನ್ನು ಅದರ ಕಾರ್ಯಾನುಗುಣವಾಗಿ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತವೆಂದು ನಾಲ್ಕು ವಿಧವಾಗಿ ವಿಂಗಡಿಸಿರುವಕಾರಣ ಬುದ್ಧಿಯುಕ್ತೇನ ಅಂತಃಕರಣೇನ ಎಂದು ಮನಸಾ ಎಂಬ ಪದಕ್ಕೆ ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಮನಸ್ಸು, ಬುದ್ಧಿ ಎಂಬ ಇವೆರಡೂ ಅಂತಃಕರಣದ ಪ್ರಭೇದಗಳೇ ಆದಾಗ್ಯೂ, ಸಂಶಯಾತ್ಮಕವಾದ ವೃತ್ತಿಯು ಮನಸ್ಸೆಂದೂ, ನಿಶ್ಚಯಾತ್ಮಕವಾದ ವೃತ್ತಿಯು ಬುದ್ಧಿಎಂದೂ ಸೂಚಿತವಾಗಿದೆ.

**ಸ್ವಪತ್ಯಸ್ಯ ಶಿಕ್ಷ—ಶೋಭನಾಪತ್ಯೋಪೇತಂ ಧನಂ ಪ್ರಯಚ್ಛ** | ಅಪತ್ಯಪದವು **ತುಕ್, ತೋಕಂ. ತನಯಃ**, ಎಂಬಿವೇ ಮೊದಲಾದ ಹದಿನೈದು ಅಪತ್ಯನಾಮಗಳ ಮಧ್ಯದಲ್ಲಿ (ನಿ, ೩—೨) ಪಠಿತವಾಗಿ **ಅಪತತಂ**

**ಭವತಿ ನಾನೇನ ಪತತೀತಿ ವಾ** ಎಂದು ವ್ಯಾಖ್ಯಾತವಾಗಿದೆ. ದುರ್ಗಾಚಾರ್ಯರು—**ಪಿತುಸ್ಸಕಾಶಾದೇತ್ಯ ಪೃಥ. ಗಿವ ತತಂ ಭವತಿ** ಉತ್ಪನ್ನವಾದ ಪ್ರಜೆಯು ಜನಕನಾದವನಿಂದ(ಪೃಥಕ್)ಬೇರೆಯ ರೂಪದಿಂದ ಪೋಷಿತವಾಗಿ ವೃದ್ಧಿಯನ್ನು ಹೊಂದುವುದರಿಂದಲೂ, ಅಥವಾ ತಂದೆಯೇ ಮೊದಲಾದವರು ಉತ್ಪನ್ನವಾದ ಈ ಪ್ರಜೆಯಿಂದ ನರಕಕ್ಕೆ ಬೀಳದಿರುವುದರಿಂದಲೂ ಅಪತ್ಯವೆಂದು ಪ್ರಸಿದ್ಧವಾಗಿರುವುದು ಎಂದು ಅರ್ಥವನ್ನು ವಿವರಿಸಿದ್ದಾರೆ. ಶಿಕ್ಷ ಎಂಬ ಪದವು ಶಿಕ್ಷತಿ ಎಂದು ದಾನಕರ್ಮಗಳಲ್ಲಿ (ನಿ. ೩-೨೦) ಪಠಿತವಾದ ಶಿಕ್ಷಧಾತುವಿನ ರೂಪವಾಗಿರುತ್ತದೆ. ಇದಕ್ಕೆ ದಾನಮಾಡು ಎಂದು ಅರ್ಥವನ್ನು ಹೇಳಿದೆ. ಸ್ವಪತ್ಯಸ್ಯ ಎಂಬಲ್ಲಿ ಷಷ್ಠೀವಿಭಕ್ತಿಯು ದ್ವಿತೀಯಾರ್ಥದಲ್ಲಿ ಪ್ರಯುಕ್ತವಾಗಿದೆ. ಅಗ್ನಿಯು ಯಜಮಾನರಿಗೆ ಉತ್ತಮವಾದ ಅಪತ್ಯದಿಂದ ಕೂಡಿರುವ ಧನವನ್ನು ಅನುಗ್ರಹಿಸಲಿ ಎಂಬ ಅರ್ಥವನ್ನು ವಿವರಿಸಿದೆ.

**ಶಿಕ್ಷೋಃ ರಾಯೋ ನೃತಮಸ್ಯ ಪ್ರಭೂತೌ—ಅಭಿಮತಫಲಪ್ರದಾನೇ ಶಕಿತುಮಿಚ್ಛೋಃ ಧನಸ್ಯಾತಿಶಯೇನ ದಾತುಃ ತವ ಪ್ರಭಾವೇ ಮಹಿಮ್ನಿ ವಯಂ ಸ್ಯಾಮ** | ದಾನಾರ್ಥಕವಾದ ಶಿಕ್ಷಧಾತುವಿನ ರೂಪವಾದ ಶಿಕ್ಷುಪದಕ್ಕೆ ಧನವನ್ನು ಅತಿಶಯವಾಗಿ ದಾನಮಾಡಲು ಇಚ್ಛಿಸುವ ಅಗ್ನಿಯ ಎಂದು ಅರ್ಥಮಾಡಿ ಆ ಅಗ್ನಿಯ ಪ್ರಭೂತವಾದ ಮಹಿಮೆಗೆ ಯಜಮಾನರಾದ ನಾವು ಪಾತ್ರರಾಗಿರೋಣ ಎಂದು ಆಶಿಸಿದೆ. ಪ್ರಭೂತಿಶಬ್ದಕ್ಕೆ ಪ್ರಭಾವ ಅಥವಾ ಮಹಿಮೆ ಎಂಬ ಅರ್ಥವನ್ನು ವಿವರಿಸಿದೆ.

**ಸುಷ್ಟುತಯಃ ವಸ್ವಃ**—ಅಗ್ನಿಯ ವಿಷಯದಲ್ಲಿ ಉತ್ತಮವಾದ ಸ್ತುತಿಯನ್ನು ಪಠಿಸುವ ಯಜಮಾನರಾದ ನಾವು ಧನವನ್ನು ಹೊಂದುವುದರಲ್ಲಿ ಪಾತ್ರರಾಗಿ **ಭೂಯಾಮ** ಇರೋಣ ಎಂದು ಯಜಮಾನರ ಆಶಂಸೆಯು ವಿವೃತವಾಗಿದೆ.

## ವ್ಯಾಕರಣಪ್ರಕ್ರಿಯಾ

**ತೇಜೀಯಸಾ**—ತೇಜಿತೃಶಬ್ದದ ಮೇಲೆ ಅತಿಶಯಾರ್ಥ ತೋರುವಾಗ ಈಯಸುನ್ ಪ್ರತ್ಯಯ. **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃಚಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತ್ವೋತಃ**—ಅವ ರಕ್ಷಣಾದಿಷು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ** (ಪಾ. ಸೂ. ೬-೪-೨೦) ಎಂಬುದರಿಂದ ಊಠಾದೇಶ. ಊತ ಎಂದು ರೂಪವಾಗುತ್ತದೆ. ತ್ವಯಾ ಊತಃ ತ್ವೋತಃ **ತೃತೀಯಾ** (ಪಾ. ಸೂ. ೨-೧-೨೦) ಎಂದು ಯೋಗವಿಭಾಗಮಾಡಿರುವುದರಿಂದ ಸಮಾಸ. ಛಾಂದಸವಾಗಿ ಟಿಗೆ ಲೋಪ. ಕರ್ಮಕ್ರಾಂತಪದ ಪರವಾದುದರಿಂದ **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಶಿಕ್ಷ**—ಶಿಕ್ಷ ವಿದ್ಯೋಪಾದಾನೇ ಧಾತು. ಇಲ್ಲಿ ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. **ವ್ಯತ್ಯಯೋ ಬಹುಲಂ** ಎಂಬುದರಿಂಥ ಪರಸ್ಮೈಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸ್ವಪತ್ಯಸ್ಯ**—ಶೋಭನಂ ಅಪತ್ಯಂ ಯಸ್ಯ ಸಃ ಸ್ವಪತ್ಯಃ ತಸ್ಯ. **ನಞ್ಸುಭ್ಯಾಂ** (ಪಾ. ಸೂ. ೬-೨ ೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರಬರುತ್ತದೆ.

**ಶಿಕ್ಷೋಃ**—ಶಕ್ಲೃ ಶಕ್ತೌ ಧಾತು. **ಧಾತೋಃ ಕರ್ಮಣಃ**—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. ಏಕಾಚಿನ ಪದದಲ್ಲಿರುವುದರಿಂದ **ಏಕಾಚಉಪದೇಶೇಶಿತಿ** (ಪಾ. ಸೂ. ೭-೨-೧೦) ಎಂಬುದರಿಂದ ಇಡಾಗಮ ಬರುವುದಿಲ್ಲ. **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. **ಸನಿಮೀಮಾಘುರಭಲಭಶಕ-ಪತಪದಾಮಚ ಇಸ್** (ಪಾ. ಸೂ. ೭-೪-೫೪) ಎಂಬುದರಿಂದ ಧಾತುವಿನ ಅಕಾರಕ್ಕೆ ಇಸಾದೇಶ. **ಅತ್ರ ಲೋಪೋಭ್ಯಾಸಸ್ಯ** (ಪಾ. ಸೂ. ೭-೪-೫೮) ಎಂಬುದರಿಂದ ಅಭ್ಯಾಸಕ್ಕೆ ಲೋಪ. ಕಕಾರನಿಮಿತ್ತವಾಗಿ ಸನಿನ ಸಕಾರಕ್ಕೆ ಷತ್ವ. ಶಿಕ್ಷ ಎಂದು ಸನಂತದ ರೂಪವಾಗುತ್ತದೆ. ಸನ್ನಂತದ ಮೇಲೆ **ಸನಾಶಂಸಭಿಕ್ಷಉಃ** (ಪಾ. ಸೂ. ೩-೨-೧೬೮ ಎಂಬುದರಿಂದ ಉ ಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಶಿಕ್ಷು ಎಂಬುದು ಅಂತೋದಾತ್ತವಾಗುತ್ತದೆ. ಷಷ್ಠೀಏಕವಚನಾಂತರೂಪ.

**ಪ್ರಭೂತೌ**—ಭೂ ಸತ್ತಾಯಾಂ ಧಾತು. ಇದಕ್ಕೆ ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ತಾದೌಚನಿತಿ ಕೃತ್ಯತೌ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ.

**ಭೂಯಾಮ**—ಭೂ ಸತ್ತಾಯಾಮ್. ಧಾತು. ಆಶೀರ್ಲಿಙ್. ಉತ್ತಮಪುರುಷ ಬಹುವಚನದಲ್ಲಿ ಮಸ್. ಸಕಾರಲೋಪ. ಇದಕ್ಕೆ ಯಾಸುಟಾಗಮ ಬಂದಾಗ **ಕಿದಾಶಿಷಿ** (ಪಾ. ಸೂ. ೩-೪-೧೦೪) ಎಂಬುದರಿಂದ ಅದು ಕಿತ್ತಾಗುತ್ತದೆ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಯಾಸುಟಿಗೆ ಸಾರ್ವಧಾತುಕಸಂಜ್ಞೆ ಇರುವುದರಿಂದ **ಲಿಙಃ ಸಲೋಪೋನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಅದರ ಸಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಗಮ (ಯಾಸುಟ್) ಸ್ವರದಿಂದ ಮಧ್ಯೋದಾತ್ತವಾಗುತ್ತದೆ. ಅಥವಾ ಪ್ರಾರ್ಥನಾರ್ಥತೋರುವಾಗ ಲಿಙ್. ಯಾಸುಟಾಗಮ. **ಬಹುಲಂಛಂದಸಿ** ಎಂಬುದರಿಂದ ಶಪಿಗೆ ಲುಕ್. ಅದಂತ ಪರದಲ್ಲಿ ಯಾಸುಟ್ ಬಾರದಿರುವುದರಿಂದ **ಅತೋಯೇಯಃ** ಎಂಬುದರಿಂದ ಇಯಾದೇಶ ಬರುವುದಿಲ್ಲ. ಹಿಂದಿನಂತೆಯೇ ರೂಪಸ್ವರಗಳು ಬರುತ್ತವೆ.

**ಸುಷ್ಟುತಯಃ**—ಶೋಭನಾಃ ಸ್ತುತಯಃ ಯೇಷಾಂ ತೇ. ಸುಷ್ಟುತಯಃ **ಇಜ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ವಸ್ವಃ**—ವಸು ಶಬ್ದ. ಷಷ್ಠೀ ಏಕವಚನಪರವಾದಾಗ **ಆಗಮಾನುಶಾಸನಮನಿತ್ಯಂ** ಎಂಬ ಪರಿಭಾಷೆಯಿಂದ ನುಮಾಗಮ ಬರುವುದಿಲ್ಲ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಗುಣವೂ ಬರುವುದಿಲ್ಲ. ಆಗ ಯಣಾದೇಶ.

———

ಸಂಹಿತಾಪಾಠಃ

ಭೂರೀಣಿ ಹಿ ತ್ವೇ ದಧಿರೇ ಅನೀಕಾಗ್ನೇ ದೇವಸ್ಯ ಯಜ್ಯವೋ ಜನಾಸಃ ।
ಸ ಆ ವಹ ದೇವತಾತಿಂ ಯವಿಷ್ಠ ಶರ್ಧೋ ಯದದ್ಯ ದಿವ್ಯಂ ಯಜಾಸಿ ॥ ೪ ॥

ಪದಪಾಠಃ

ಭೂರೀಣಿ । ಹಿ । ತ್ವೇ ಇತಿ । ದಧಿರೇ । ಅನೀಕಾ । ಅಗ್ನೇ । ದೇವಸ್ಯ । ಯಜ್ಯವಃ । ಜನಾಸಃ ।

ಸಃ । ಆ । ವಹ । ದೇವಽತಾತಿಂ । ಯವಿಷ್ಠ । ಶರ್ಧಃ । ಯತ್ । ಅದ್ಯ । ದಿವ್ಯಂ । ಯಜಾಸಿ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವಸ್ಯ ದ್ಯೋತಮಾನಸ್ಯ ತವ ಸಂಬಂಧಿನೋ ಯಜ್ಯವೋ ಯಷ್ಟಾರೋಽಧ್ವರ್ಯುಪ್ರಭೃತಯೋ ಜನಾಸೋ ಜನಾ ಭೂರೀಣಿ ಬಹೂನ್ಯನೀಕಾ ಅನೀಕಾನಿ ಸೇನಾರೂಪತಯಾ ಸರ್ವತ್ರ ಪ್ರಸೃತಾನಿ ಜ್ವಾಲಾರೂಪಾಣಿ ತೇಜಾಂಸ್ಯಾಹುತಿಪ್ರಕ್ಷೇಪೇಣ ತ್ವೇ ತ್ವಯಿ ದಧಿರೇ ಹಿ । ವಿದಧಿರೇ ಖಲು । ಚಕ್ರುರಿತಿ ಯಾವತ್ । ಸ ತಾದೃಶಸ್ತ್ವಂ ದೇವತಾತಿಂ ಯಷ್ಟವ್ಯದೇವಾನಿಹ ಕರ್ಮಣ್ಯಾವಹ । ಆಹ್ವಯ। ಹೇ ಯವಿಷ್ಠ ಯುವತಮ ಯದ್ಯಸ್ಮಾತ್ಕಾರಣಾದದ್ಯಾಸ್ಮಿನ್ಕರ್ಮಣಿ ದಿವ್ಯಂ ದಿವಿ ಭವಂ ದೇವಸಂಬಂಧಿ ಶರ್ಧಸ್ತೇಜಸ್ತ್ವಂ ಯಜಾಸಿ ಯಜಸಿ । ತಸ್ಮಾದ್ದೇವಾನಾಹ್ವಯೇತಿ ಶೇಷಃ ॥ ದಧಿರೇ । ದಧಾತೇರ್ಲಿಟಿ ರೂಪಂ । ಹಿಯೋಗಾದನಿಘಾತಃ । ಚಿತ್ತ್ವಾದಂತೋದಾತ್ತಃ । ಯಜ್ಯವಃ । ಯಜ ದೇವಪೂಜಾದಿಷು । ಯಜಿಮನಿಶುಂಧಿದಸಿಜನಿಭ್ಯೋ ಯುಜಿತಿ ಯುಚ್ । ವ್ಯತ್ಯಯೇನಾದ್ಯುದಾತ್ತತ್ವಂ । ದೇವತಾತಿಂ । ದೇವಶಬ್ದಾತ್ಸ್ವಾರ್ಥೇ ಸರ್ವದೇವಾತ್ತಾತಿಲಿತಿ ತಾತಿಲ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಯಜಾಸಿ । ಯಜೇರ್ಲೇಟ್ಯಾಡಾಗಮಃ । ಯದ್ಯೋಗಾದನಿಘಾತಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ದೇವಸ್ಯ**—ದೇವತಾತ್ಮನಾದ ನಿನ್ನ (ಪೂಜಕರೂ) । **ಯಜ್ಯವಃ**—ಯಜ್ಞಕರ್ತರೂ ಆದ । **ಜನಾಸಃ**-ಅಧ್ವರ್ಯುವೇ ಮುಂತಾದ ಮಾನವರು । **ಭೂರೀಣಿ**—ಅಧಿಕಸಂಖ್ಯೆಯಲ್ಲಿ । **ಅನೀಕಾ**-ಸೇನೆಯಂತೆ ವಿಸ್ತೃತವಾಗಿ ಹರಡಿರುವ ಜ್ವಾಲಾರೂಪವಾದ ತೇಜಸ್ಸುಗಳನ್ನು । **ತ್ವೇ**—ನಿನ್ನಲ್ಲಿ । **ದಧಿರೇ ಹ**—ಉತ್ಪನ್ನವಾಗುವಂತೆ ಮಾಡಿದರಲ್ಲವೇ? । **ಯವಿಷ್ಠ**—ಅತ್ಯಂತ ಯುವಕನಾದ ಅಗ್ನಿಯೇ, । **ಸಃ**—ಉತ್ತಮವಾದ ಗುಣಗಳಿಂದ ಕೂಡಿದ ನೀನು । **ಯತ್**—ಯಾವ ಕಾರಣದಿಂದ । **ಅದ್ಯ**—ಈ ಯಾಗಕರ್ಮದಲ್ಲಿ । **ದಿವ್ಯಂ**—ದೇವಸಂಬಂಧಿಯಾದ । **ಶರ್ಧಃ**—ತೇಜಸ್ಸನ್ನುದ್ದೇಶಿಸಿ । **ಯಜಾಸಿ**—ಯಜ್ಞಮಾಡುತ್ತೀಯೋ (ಆದ್ದರಿಂದ) । **ದೇವತಾತಿಂ**—ಯಜ್ಞಾರ್ಹರಾದ ದೇವತೆಗಳ ಸಮೂಹವನ್ನು । **ಆ ವಹ**—ಇಲ್ಲಿಗೆ ಬರಮಾಡು.

ಭಾವಾರ್ಥ

ಎಲೈ ಅಗ್ನಿಯೇ, ದೇವತಾತ್ಮಕನಾದ ನಿನ್ನ ಪೂಜಕರೂ, ಯಜ್ಞಕರ್ತರೂ ಆದ ಅಧ್ವರ್ಯುವೇ ಮುಂತಾದ ಮಾನವರು ಅಧಿಕಸಂಖ್ಯೆಯಲ್ಲಿ ಸೇನೆಯಂತೆ ವಿಸ್ತೃತವಾಗಿ ಹರಡಿರುವ ಜ್ವಾಲಾರೂಪವಾದ ತೇಜಸ್ಸುಗಳನ್ನು ನಿನ್ನಲ್ಲಿ ಉತ್ಪನ್ನವಾಗುವಂತೆ ಮಾಡಿದರಲ್ಲವೇ. ಅತ್ಯಂತ ಯುವಕನಾದ ಅಗ್ನಿಯೇ, ಉತ್ತಮವಾದ ಗುಣಗಳಿಂದ ಕೂಡಿದ ನೀನು ಯಾವ ಕಾರಣದಿಂದ ಈ ಯಾಗಕರ್ಮದಲ್ಲಿ ದೇವಸಂಬಂಧಿಯಾದ ತೇಜಸ್ಸನ್ನೂ ಶಕ್ತಿಯನ್ನು ಉದ್ದೇಶಿಸಿ ಯಜ್ಞಮಾಡುತ್ತೀಯೋ, ಆ ನಿಮಿತ್ತವಾಗಿ ಯಜ್ಞಾರ್ಹರಾದ ದೇವತೆಗಳ ಸಮೂಹವನ್ನು ಇಲ್ಲಿಗೆ ಬರಮಾಡು.

## English Translation

The ministering priests have consecrated in you, Agni, who art divine, many hosts (of flames); bring hither the gods, youngest (of the deities), that you may worship to-day the divine effulgence.

ವಿಶೇಷವಿಷಯಗಳು

**ದೇವಸ್ಯ ಯಜ್ಯವಃ ಜನಾಸಃ**—ಈ ಮಂತ್ರದಲ್ಲಿ ಅಗ್ನಿಯನ್ನು ಸಂಬೋಧಿಸಿದೆ. ದೇವಶಬ್ದಕ್ಕೆ **ದ್ಯೋತ-ಮಾನಸ್ಯ** ಎಂದು ವಿಶೇಷಣವನ್ನಾಗಿ ಪ್ರಯೋಗಿಸಿದೆ. ಪ್ರಕಾಶಮಾನನಾಗಿರುವ ಅಗ್ನಿಯನ್ನು ಹವಿಸ್ಸುಗಳಿಂದ ತೃಪ್ತಿಪಡಿಸುವ **ಯಷ್ಟಾರೋ ಅಧ್ವರ್ಯುಪ್ರಭೃತಯಃ** ಋತ್ವಿಜರಾದ ಅಧ್ವರ್ಯುವೇ ಮೊದಲಾದವರು ಮನುಷ್ಯ ರೂಪದಿಂದ ಇರತಕ್ಕವರೆಂದು ಅರ್ಥವನ್ನು ಮಾಡಿ, ಈ ಋತ್ವಿಜರು **ಭೂರೀಣಿ ಅನೀಕಾ—ಸೇನಾರೂಪತಯಾ ಸರ್ವತ್ರ ಪ್ರಸೃತಾನಿ ಜ್ವಾಲಾರೂಪತಯಾ ಸ್ಥಿತಾನಿ ತೇಜಾಂಸಿ ಆಹುತಿಪ್ರಕ್ಷೇಪೇಣ ತ್ವಯಿ ವಿದಧಿರೇ |** ಬಹಳ ವಾಗಿರುವ, ಅಗ್ನಿಯ ಸಂಬಂಧಿಯಾದ ಅಗ್ನಿಗೆ ಸೇನೆಯಂತೆ ಇರುವ ಜ್ವಾಲಾರೂಪವಾದ ತೇಜಸ್ಸುಗಳನ್ನು ಋತ್ವಿಜರಾದ ವರಿಂದ ಅರ್ಪಿಸುವ ಆಹುತಿಗಳಿಂದ ವೃದ್ಧಿಯಾಗುವಂತೆ ಮಾಡುತ್ತಿರುವರು ಎಂದು ಅರ್ಥವನ್ನು ವಿವರಿಸಿದೆ. **ದೇವತಾತಿಂ ಆವಹ ದೇವಾನ್ ಇಹ ಕರ್ಮಣಿ ಆವಹ ಆಹ್ವಯ |** ದೇವತಾತಿ ಶಬ್ದವು ಯಜ್ಞನಾಮಗಳಲ್ಲಿ (ನಿ. ೩-೧೯) ಪಠಿತನಾಗಿರುವುದರಿಂದ ಈ ಯಜ್ಞದಲ್ಲಿ ಎಂದು ಅರ್ಥವನ್ನು ಹೇಳಿದೆ. ಈ ಅಗ್ನಿಯು ಈ ಯಜ್ಞದಲ್ಲಿ ಯಾಗಾರ್ಹ ರಾದ ದೇವತೆಗಳನ್ನು ಯಾಗದಲ್ಲಿ ಅರ್ಪಿಸುವ ಹವಿಸ್ಸುಗಳನ್ನು ಸ್ವೀಕರಿಸುವುದಕ್ಕಾಗಿ ಆಹ್ವಾನಮಾಡಲಿ ಎಂದು ಆಶಿಸಿದೆ.

**ಯವಿಷ್ಠ** ಎಂಬ ಪದಕ್ಕೆ **ಯುವತಮ**—ಅಗ್ನಿಯು ಯೌವ್ವನವಂತನಾಗಿರುವವನು ಎಂದು ಅರ್ಥವನ್ನು ಹೇಳಿ ಈ ಪದದಿಂದ ಅಗ್ನಿಯನ್ನು ಸಂಬೋಧಿಸಿ, **ಅದ್ಯ ದಿವ್ಯಂ ಶರ್ಧಃ ಯಜಾಸಿ**—ಈ ಯಜ್ಞಕರ್ಮದಲ್ಲಿ ಅಗ್ನಿಯು ದೇವತೆಗಳಿಗೆ ಸಂಬಂಧಿಸಿರುವ ತೇಜಸ್ಸನ್ನು ಪೂಜಿಸುವವನಾದುದರಿಂದ ಅಗ್ನಿಯು ದೇವತೆಗಳನ್ನು ಯಜ್ಞಕ್ಕಾಗಿ ಆಹ್ವಾನ ಮಾಡಲಿ ಎಂಬ ಅರ್ಥವು ವಿವೃತವಾಗಿದೆ.

**ಶರ್ಧಃ—ತೇಜಃ** | ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಇಲ್ಲಿ ಶರ್ಧ ಎಂಬ ಪದಕ್ಕೆ ತೇಜಸ್ಸೆಂದು ಅರ್ಥಮಾಡಿದೆ.

ದಿವ್ಯಂ ಎಂಬ ಪದವು ನಿರುಕ್ತಕಾರರಿಂದ ವ್ಯಾಖ್ಯಾತವಾಗಿದೆ.

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಸ್ಸ ಸುಪರ್ಣೋ ಗುರುತ್ಮಾನ್ |**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ||**

(ಋ. ಸಂ. ೧-೧೬೪-೪೬)

ಈ ಋಕ್ಕಿನಲ್ಲಿ ದಿವ್ಯಶಬ್ದಕ್ಕೆ ದಿವಿಜ ಎಂಬ ಅರ್ಥವನ್ನು ವಿವರಿಸಿದೆ. ಇದರಂತೆಯೇ **ಈರ್ಮಾಂತಾಸಃ ಸಿಲಿಕಮಧ್ಯಮಾಸಃ** ಎಂಬ ಋಕ್ಕಿನಲ್ಲಿಯೂ **ದಿವ್ಯಾಃ ದಿವಿಜಾಃ** ಎಂಬ ಅರ್ಥವನ್ನೇ ವಿವರಿಸಿದೆ. ಸಾಯಣರು ದಿವ್ಯಶಬ್ದಕ್ಕೆ ದೇವಸಂಬಂಧಿ ಎಂದು ಅರ್ಥವನ್ನು ಹೇಳಿದ್ದಾರೆ.

ವ್ಯಾಕರಣಪ್ರಕ್ರಿಯಾ

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್‌ಪ್ರಥಮಪುರುಷ ಬಹುವಚನಾಂತರೂಪ. ಹಿ ಎಂಬುದರ ಸಂಬಂಧವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ

**ಅನೀಕಾ**—ಅನ ಪ್ರಾಣನೇ. ಧಾತು. **ಅನಿಹೃಷಿಭ್ಯಾಂ ಕಿಚ್ಚ** (ಉ. ಸೂ. ೪-೪೫೭) ಎಂಬುದರಿಂದ ಈಕನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಪುಂಸಕಬಹುವಚನದಲ್ಲಿ ಶೇಶ್ಛಂದಸಿ ಬಹುಲಂ ಎಂಬುದರಿಂದ ಶಿಗೆ ಲೋಪ.

**ಯಜ್ಯವಃ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಯಜಿ ಮನಿ ಶುಂಧಿ ದಸಿಜ-ನಿಭ್ಯೋ ಯುಚ್** (ಉ. ಸೂ. ೩-೩೦೦) ಎಂಬುದರಿಂದ ಯುಚ್ ಪ್ರತ್ಯಯ. ಯಜ್ಯು ಶಬ್ದವಾಗುತ್ತದೆ. ಚಿತ್ತಾದರೂ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ವಹ**—ವಹ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ದೇವತಾತಿಂ**—**ಸರ್ವದೇವಾತ್ತಾತಿಲ್** (ಪಾ. ಸೂ. ೪-೪-೧೪೨) ಎಂಬುದರಿಂದ ದೇವಶಬ್ದದ ಮೇಲೆ ಸ್ವಾರ್ಥದಲ್ಲಿ ತಾತಿಲ್ ಪ್ರತ್ಯಯ. ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಶರ್ಧಃ**—ಶೃಧು ಕುತ್ಸಾಯಾಂ ಧಾತು. ಔಣಾದಿಕ ಅಸುನ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಜಾಸಿ**—ಯಜ ದೇವಪೂಜಾದಿಷು. ಧಾತು. ಲೇಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಯತ್ ಎಂಬುದರ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣ, ಪ್ರತ್ಯಯ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

———

ಸಂಹಿತಾಪಾಠಃ

ಯತ್ತ್ವಾ ಹೋತಾರಮನಜನ್ಮಿಯೇಧೇ ನಿಷಾದಯಂತೋ ಯಜಥಾಯ ದೇವಾಃ

ಸ ತ್ವಂ ನೋ ಅಗ್ನೇಽವಿತೇಹ ಬೋಧ್ಯಧಿ ಶ್ರವಾಂಸಿ ಧೇಹಿ ನಸ್ತನೂಷು ॥ ೫ ॥

ಪದಪಾಠಃ

ಯತ್ । ತ್ವಾ । ಹೋತಾರಂ । ಅನಜನ್ । ಮಿಯೇಧೇ । ನಿಽಸಾದಯಂತಃ । ಯಜಥಾಯ । ದೇವಾಃ ।

ಸಃ । ತ್ವಂ । ನಃ । ಅಗ್ನೇ । ಅವಿತಾ । ಇಹ । ಬೋಧಿ । ಅಧಿ । ಶ್ರವಾಂಸಿ । ಧೇಹಿ । ನಃ । ತನೂಷು ॥

ಸಾಯಣಭಾಷ್ಯಂ

ಹೇ ಅಗ್ನೇ ಯಜಥಾಯ ಯಜನಾರ್ಥಂ ನಿಷಾದಯಂತೋ ನಿವಸಂತೋ ದೇವಾ ದೀಪ್ಯಮಾನಾ ಋತ್ವಿಜೋ ಮಿಯೇಧೇ ಮೇಧೇ ಯಜ್ಞೇ ಹೋತಾರಂ ದೇವಾನಾಮಾಹ್ವಾತಾರಂ ತ್ವಾ ತ್ವಾಂ ಯದ್ಯಸ್ಮಾ-

ವನಜನ್ । ಘೃತಾಹುತಿಭಿರೌಕ್ಷನ್ । ಯಜ್ಞಾ ನಿಷಾದಯಂತೋ ಹೋತಾರಂ ಹೋಮನಿಷ್ಪಾದಕಂ ತ್ವಾಂ ಬರ್ಹಿಷ್ಯುಪವೇಶಯಂತ ಋತ್ವಿಜೋ ಘೃತೈರಸಿಂಚನ್ ತಸ್ಮಾತ್ಸ ತಥಾವಿಧಸ್ತ್ವಮಿಹಾಸ್ಮಿನ್ಕರ್ಮಣಿ ನೋಽಸ್ಮಾಕಮವಿತಾ ಪಾಲಯಿತಾ ಭವಾಮೀತಿ ಬೋಧಿ । ಬುಧ್ಯಸ್ವ । ಕಿಂಚ ನಸ್ತನೂಷ್ವಸ್ಮಾಕಂ ತನುಜೇಷ್ವಪತ್ಯೇಷು ಶ್ರವಾಂಸ್ಯನ್ನಾನ್ಯಧಿ ಧೇಹಿ । ಅಧಿಕಂ ನಿಧೇಹಿ ॥ ಅನಜನ್ । ಅಂಜೂ ವ್ಯಕ್ತಿಗತಿಮ್ರಕ್ಷಣೇಷು । ಅಸ್ಮಾಲ್ಲಙಾ ರುಧಾದಿತ್ವಾತ್ ಶ್ನಂ । ಛಾಂದಸತ್ವಾದಲ್ಲೋಪಾಭಾವಃ । ಅನಿದಿತಾಮಿತ್ಯುಪಧಾಲೋಪಃ । ನಿಷಾದಯಂತಃ । ಷದಲೃ ವಿಶರಣಗತ್ಯವಸಾದನೇಷು। ಚುರಾದಿಃ । ಸದೇರಪ್ರತೇರಿತಿ ಷತ್ವಂ । ಯಜ್ಞಾ । ಹೇತುಮತಿ ಣಿಚ್ । ಶತುರ್ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಕೃತೇ ಣಿಚ್ಸ್ವರಃ। ಬೋಧಿ । ಬುಧ ಅವಗಹನೇ । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಸೇರ್ಹ್ಯಪಿಚ್ಚೇತಿ ಸಿಪೋ ಹಿರಾದೇಶಃ । ವಾ ಛಂದಸೀತಿ ವಿಕಲ್ಪೇನ ಪಿತ್ತ್ವಾದ್ಗುಣಃ । ಹುಝಲ್ಭ್ಯೋ ಹೇರ್ಧಿರಿತಿ ಹೇರ್ಧಿರಾದೇಶಃ । ಧಕಾರಲೋಪಶ್ಛಾಂದಸಃ । ನಿಘಾತಃ । ಧೇಹಿ । ದಧಾತೇರ್ಲೋಟಿ ರೂಪಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । **ಯಜಥಾಯ**—ಯಜ್ಞಾರ್ಥವಾಗಿ । **ನಿಷಾದಯಂತಃ**—ಸಿದ್ಧರಾಗಿ ಕುಳಿತಿರುವ । **ದೇವಾಃ**—ಪ್ರಕಾಶಮಾನರಾದ ಋತ್ವಿಕ್ಕುಗಳು । **ಮಿಯೇಧೇ**—ಈ ಯಜ್ಞದಲ್ಲಿ । **ಹೋತಾರಂ**—ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕ । **ತ್ವಾ**—ನಿನ್ನನ್ನು । **ಯತ್**—ಯಾವ ಉದ್ದಿಶ್ಯದಿಂದ । **ಅನಜನ್**—ಘೃತಾದಿಗಳಿಂದ ಪ್ರೋಕ್ಷಿಸಿದರೋ । **ಸಃ ತ್ವಂ**—ಅಂತಹ ವಿಶೇಷನಾದಿಗಳಿಂದ ಕೂಡಿದ ನೀನು । **ಇಹ**—ಈ ಕರ್ಮದಲ್ಲಿ । **ನಃ**—ನಮಗೆ । **ಅವಿತಾ**—ರಕ್ಷಕನಾಗಿರುವೆನೆಂದು । **ಬೋಧಿ**—ತಿಳಿ । **ನಃ**—ನಮ್ಮ । **ತನೂಷು**—ಅಪತ್ಯಾದಿಗಳಿಗೆ । **ಶ್ರವಾಂಸಿ**—ಅನ್ನಗಳನ್ನು । **ಅಧಿ ಧೇಹಿ**—ಅತ್ಯಧಿಕವಾಗಿ ಒದಗಿಸಿಕೊಡು ॥

ಭಾವಾರ್ಥ

ಎಲೈ ಅಗ್ನಿಯೇ, ಯಜ್ಞಾರ್ಥವಾಗಿ ಸಿದ್ಧರಾಗಿ ಕುಳಿತಿರುವವರೂ, ಪ್ರಕಾಶಮಾನರೂ ಆದ ಋತ್ವಿಕ್ಕುಗಳು ಈ ಯಜ್ಞದಲ್ಲಿ ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕ ನಿನ್ನನ್ನು ಯಾವ ಉದ್ದಿಶ್ಯದಿಂದ ಘೃತಾದಿಗಳಿಗೆ ವಿಶೇಷನ ಮಾಡಿ ಪ್ರೋಕ್ಷಿಸಿದರೋ, ಆ ಉದ್ದಿಶ್ಯವನ್ನರಿತು, ಅಂತಹ ವಿಶೇಷನಾದಿಗಳಿಂದ ಕೂಡಿದ ನೀನು ಈ ಕರ್ಮದಲ್ಲಿ ನಮಗೆ ರಕ್ಷಕನಾಗಿರಬೇಕೆಂಬುದನ್ನು ತಿಳಿ. ಮತ್ತು ನಮ್ಮ ಅಪತ್ಯಾದಿಗಳಿಗೆ ಅಧಿಕವಾಗಿ ಅನ್ನಗಳನ್ನು ಒದಗಿಸಿಕೊಡು.

English Translation

Inasmuch as the attendant divine (priests) annoint you as the invoker of the gods to offer worship in the sacrifice, therefore assent to be our protector on this occasion, and grant abundant food to our descendants.

ವಿಶೇಷವಿಷಯಗಳು

**ದೇವಾಃ ಮಿಯೇಧೇ ಹೋತಾರಂ ತ್ವಾಂ ಯಜಥಾಯ ನಿಷಾದಯಂತಃ ಅನಜನ್**—ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಅಗ್ನಿಯನ್ನು ಸಂಬೋಧಿಸಿ, **ಯಜನಾರ್ಥಂ ನಿವಸಂತೋ ದೀಪ್ಯಮಾನಾ ಋತ್ವಿಜಃ ಯಜ್ಞೇ ದೇವಾನಾಮಾಹ್ವಾತಾರಂ ಅಗ್ನಿಂ ಘೃತಾ-**

**ಹುತಿಭಿರ್ಘೃತೈ** | ಅಗ್ನಿಯಲ್ಲಿ ಹೋಮವನ್ನು ಆಚರಿಸುವುದಕ್ಕಾಗಿ ಸಿದ್ಧರಾಗಿರುವ ಋತ್ವಿಜರು ತೇಜಸ್ಸಿನಿಂದ ಬೆಳಗುತ್ತಾ ಯಜ್ಞದಲ್ಲಿ ದೇವತೆಗಳನ್ನು ಯಾಗಕ್ಕಾಗಿ ಕರದುತರುವ ಅಗ್ನಿಯನ್ನು ಆಜ್ಯಾಹುತಿಗಳಿಂದ ತೃಪ್ತಿಪಡಿಸುವರು ಎಂದು ವರ್ಣಿಸಿವೆ. ಎರಡನೆಯ ಅರ್ಥದಲ್ಲಿ—**ಯದ್ವಾ ನಿಷಾದಯಂತೋ ಋತ್ವಿಜಃ ಹೋತಾರಾಂ ಹೋಮನಿಷ್ಪಾದಕಂ ತ್ವಾಂ ಬರ್ಹಿಷ್ಯುಪವೇಶಯಂತಃ ಘೃತೈರಸಿಂಚ**—ಹೋಮವನ್ನು ಮಾಡಲು ಸಿದ್ಧರಾದ ಋತ್ವಿಜರು ಯಜ್ಞವನ್ನು ನೆರವೇರಿಸುವ ಅಗ್ನಿಯನ್ನು (ಬರ್ಹಿಸ್ಸಿನಲ್ಲಿ) ಯಜ್ಞವೇದಿಯಲ್ಲಿ ಸ್ಥಾಪಿಸಿ ಆಜ್ಯಗಳಿಂದ ತೃಪ್ತಿಪಡಿಸುವರು ಎಂದು (ಅರ್ಥಮಾಡಿದೆ) ವಿವರಿಸಿದೆ.

ಇದರಿಂದ ಇಹ ನಃ ಅವಿತಾ **ಬೋಧಿ** ಅಸ್ಮಿನ್ ಕರ್ಮಣಿ ಅಸ್ಮಾಕಂ ಪಾಲಯಿತಾ ಭವಾಮೀತಿ **ಬುಧ್ಯಸ್ವ** | ಅಗ್ನಿಯು ಈ ಯಜ್ಞಕರ್ಮದಲ್ಲಿ ಯಜಮಾನರೂ ಮತ್ತು ಋತ್ವಿಜರೂ ಆಗಿರುವ ನಮ್ಮನ್ನು ರಕ್ಷಿಸುವವನಾಗಿರುವನೆಂದು ತಿಳಿಯಲಿ ಎಂದು ಆಶಿಸಿದೆ.

**ನಃ ತನೂಷು ಶ್ರವಾಂಸಿ ಅಧಿ ಧೇಹಿ** | **ಅಸ್ಮಾಕಂ ತನುಜೇಷ್ವಪತ್ಯೇಷು ಅನ್ನಾನಿ ಅಧಿಕಂ ನಿಧೇಹಿ** | ನಿರುಕ್ತಕಾರರು ತನೂ ಎಂಬ ಪದವನ್ನು ಅಪತ್ಯನಾಮಗಳಲ್ಲಿ ಪಾಠಮಾಡಿಲ್ಲ.

**ದೇವೀಃ ಷಳುರ್ವೀರುರು ನಃ ಕೃಣೋತ ವಿಶ್ವೇ ದೇವಾಸ ಇಹ ವೀರಯಧ್ವಂ |**
**ಮಾ ಹಾಸ್ಮಹಿ ಪ್ರಜಯಾ ಮಾ ತನೂಭಿರ್ಮಾ ರಧಾಮ ದ್ವಿಷತೇ ಸೋಮ ರಾಜನ್ ||**
(ಋ. ಸಂ. ೧೦-೧೨೮-೫)

ಈ ಋಕ್ಕಿನಲ್ಲಿ ತನೂಶಬ್ದವು ಶರೀರವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿದ್ದಾರೆ. ಸಾಯಣರು ಈ ಪದಕ್ಕೆ ತನುಜ ಅಪತ್ಯವೆಂದು ಅರ್ಥವನ್ನು ವಿವರಿಸಿದ್ದಾರೆ.

**ಶ್ರವಃ** ಎಂಬ ಪದವು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿ **ಪ್ರಶಂಸಾ**, ಎಂಬರ್ಥದಲ್ಲಿ (ನಿ. ೯-೧೧) ಪ್ರಯುಕ್ತವಾಗಿದೆ. ಮತ್ತು **ಶ್ರೂಯುತ ಇತಿ ಸತಃ ಶ್ರವ ಇತ್ಯನ್ನನಾಮ** (ನಿ. ೧೦-೩) ಎಂದು ವ್ಯಾಖ್ಯಾತವಾಗಿದೆ. ಸಾಯಣರು ಯಜಮಾನರಾದ ನಮಗೂ ನಮ್ಮ ಮಕ್ಕಳುಗಳಿಗೂ ಪ್ರಭೂತವಾದ ಅನ್ನವನ್ನು ಅಗ್ನಿಯು ಅನುಗ್ರಹಿಸಲಿ ಎಂದು ಅರ್ಥವನ್ನು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಅನಜನ್**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅಂತಾದೇಶ. ಇಕಾರಲೋಪ. **ರುಧಾದಿಭ್ಯಃ ಶ್ನಂ** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಂ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಪ್ರತ್ಯಯಕ್ಕೆ ಙಿತ್ತಾದುದರಿಂದ **ಅನಿದಿತಾಂಹಲಉ**—ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ಶ್ನಸೋರಲ್ಲೋಪಃ** ಎಂಬುದರಿಂದ ಶ್ನಮಿನ ಅಕಾರಕ್ಕೆ ಲೋಪ ಪ್ರಾಪ್ತವಾದರೂ ಛಾಂದಸವಾಗಿ ಇಲ್ಲಿ ಲೋಪ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಮಿಯೇಧೇ**—ಮೇಧೇ ಎಂಬಲ್ಲಿ ಛಾಂದಸವಾಗಿ ಮಕಾರದ ಮೇಲೆ ಇಯಾಗಮ ಬಂದಿದೆ.

**ನಿಷಾದಯಂತಃ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಚುರಾದಿ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಇದು ಪರವಾದಾಗ **ಅತಉಪಧಾಯಾಃ** (ಪಾ. ಸೂ. ೭-೨-೧೧೬), ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಣಿಜಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಶಪ್ ವಿಕರಣ.

ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ, ಅಯಾದೇಶ. ನಿ ಎಂಬ ಉಪಸರ್ಗದ ಪರದಲ್ಲಿರುವುದರಿಂದ **ಸದಿರಪ್ರತೇಃ** (ಪಾ. ಸೂ. ೮-೩-೬೬) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ ಬರುತ್ತದೆ. ಅಥವಾ **ಹೇತುಮತಿಚ** (ಪಾ.ಸೂ. ೩-೧-೨೬) ಎಂಬುದರಿಂದ ಣಿಚ್. ಉಳಿದ ಪ್ರಕ್ರಿಯಾ ಹಿಂದಿನಂತೇ ಆಗುತ್ತದೆ. **ತಾಸ್ಯನುದಾತ್ತೇತ್** (ಪಾ.ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು (ಶತೃ) ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ.

**ಯಜಥಾಯ**—ಯಜ ದೇವಪೂಜಾದಿಷು. ಧಾತು. ಔಣಾದಿಕ ಅಥಪ್ರತ್ಯಯ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

**ಅವಿತಾ**—ಅವ ರಕ್ಷಣೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಬೋಧಿ**—ಬುಧ ಅವಗಮನೇ. ಧಾತು. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯ-ಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಅದಕ್ಕೆ ಹಿಆದೇಶ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ವಾಛಂದಸಿ** (ಪಾ. ಸೂ. ೩-೪-೮೮) ಎಂಬುದರಿಂದ ಹಿಗೆ ಅಪಿತ್ವವಿಕಲ್ಪವಾದುದರಿಂದ ಇಲ್ಲಿ ನಿಷೇಧ ಬರುವುದಿಲ್ಲ. ಆದುದರಿಂದ **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಸಿಪ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಹುಝಲ್‌ಭ್ಯೋಹೇರ್ಧಿಃ** (ಪಾ. ಸೂ. ೬-೪-೧೦೧) ಎಂಬುದರಿಂದ ಹಿಗೆ ಧಿ ಆದೇಶ. ಛಾಂದಸವಾಗಿ ಪೂರ್ವಧಕಾರಕ್ಕೆ ಲೋಪ. ಬೋಧಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ **ಘ್ವಸೋರೇದ್ಧಾವಭ್ಯಾಸಲೋಪಶ್ಚ** (ಪಾ. ಸೂ. ೬-೪-೧೧೯) ಎಂಬುದರಿಂದ ಅಭ್ಯಾಸಕ್ಕೆ ಲೋಪ. ಧಾತುವಿನ ಆಕಾರಕ್ಕೆ ಏತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———

# ಇಪ್ಪತ್ತನೆಯ ಸೂಕ್ತವು

**ಅಗ್ನಿಮುಷಸಮಿತಿ ಪಂಚರ್ಚಮಷ್ಟಮಂ ಸೂಕ್ತಂ ತ್ರೈಷ್ಟುಭಂ । ಅತ್ರೇಯಮನುಕ್ರಮಣಿಕಾ। ಅಗ್ನಿಮುಷಸಮಾದ್ಯಾಂತೇ ವೈಶ್ವದೇವ್ಯಾವಿತಿ । ಗಾಥೀ ಹೇತಿ ಹಶಬ್ದಪ್ರಯೋಗಾದಸ್ಯಾಪಿ ಸೂಕ್ತಸ್ಯ ಗಾಥೀ ಋಷಿಃ । ಪ್ರಥಮಾಪಂಚಮ್ಯೌ ವೈಶ್ವದೇವತಾಕೇ ಶಿಷ್ಟಾಸ್ತಿಸ್ರ ಆಗ್ನೇಯ್ಯಃ ॥ ಅಸ್ಯ ಸೂಕ್ತ-ಸ್ಯೋಕ್ತೋ ವಿನಿಯೋಗಃ ॥ ಮರುತ್ವತೀಯಶಸ್ತ್ರೇಽಗ್ನಿರ್ನೇತೇತ್ಯೇಷಾ ಧಾಯ್ಯಾ । ಸೂತ್ರಿತಂ ಚ । ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾಃ । ಆ. ೫-೧೪ ॥ ಇತಿ ॥**

**ಅನುವಾದವು**—**ಅಗ್ನಿಮುಷಸಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಅಗ್ನಿಮುಷಸಮಾದ್ಯಾಂತೇ ವೈಶ್ವದೇವ್ಯಾ** ಎಂದು ಹೇಳಿರುವುದು. **ಗಾಥೀ ಹೇತಿ** ಎಂದು ಹಶಬ್ದಪ್ರಯೋಗವಿರುವುದರಿಂದ ಹಿಂದಿನ ಸೂಕ್ತದಂತೆ ಈ ಸೂಕ್ತಕ್ಕೂ ಗಾಥೀ ಎಂಬುವನೇ ಋಷಿಯು. ಈ ಸೂಕ್ತದ ಮೊದಲಿನ ಮತ್ತು ಕೊನೆಯ ಋಕ್ಕುಗಳಿಗೆ ವಿಶ್ವೇದೇವತೆಗಳೇ ದೇವತೆಯು ;

ಉಳಿದ ಋಕ್ಕುಗಳಿಗೆ ಅಗ್ನಿಯು ದೇವತೆಯು. ಈ ಸೂಕ್ತಕ್ಕೂ ಹಿಂದೆಯೇ ವಿನಿಯೋಗವು ಹೇಳಲ್ಪಟ್ಟಿರುವುದು. ಮತ್ತು ಮರುತ್ವತೀಯಶಸ್ತ್ರಮಂತ್ರಗಳ ಪಠನಕಾಲದಲ್ಲಿ ಈ ಸೂಕ್ತದ ನಾಲ್ಕನೆಯ ಋಕ್ಕಾದ ಅಗ್ನಿರ್ನೇತಾ ಭಗ ಇವ ಎಂಬ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದ ಆಶ್ವಲಾಯನಶ್ರೌತಸೂತ್ರದ—ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾಃ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೧೪).

## ಸೂಕ್ತ—೨೦

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೦ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೦ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫

ಋಷಿಃ—ಗಾಥೀ ॥

ದೇವತಾ—೧, ೫ . ವಿಶ್ವೇದೇವಾಃ । ೨–೪ ಅಗ್ನಿಃ ॥

ಛಂದಃ— ತ್ರಿಷ್ಟುಪ್॥

ಸಂಹಿತಾಪಾಠಃ

ಅಗ್ನಿಮುಷಸಮಶ್ವಿನಾ ದಧಿಕ್ರಾಂ ವ್ಯುಷ್ಟಿಷು ಹವತೇ ವಹ್ನಿರುಕ್ಥೈಃ ।
ಸುಜ್ಯೋತಿಷೋ ನಃ ಶೃಣ್ವಂತು ದೇವಾಃ ಸಜೋಷಸೋ ಅಧ್ವರಂ ವಾವಶಾನಾಃ॥

ಪದಪಾಠಃ

ಅಗ್ನಿಂ । ಉಷಸಂ । ಅಶ್ವಿನಾ । ದಧಿಽಕ್ರಾಂ । ವಿಽಉಷ್ಟಿಷು । ಹವತೇ । ವಹ್ನಿಃ । ಉಕ್ಥೈಃ ।
ಸುಽಜ್ಯೋತಿಷಃ । ನಃ । ಶೃಣ್ವಂತು । ದೇವಾಃ । ಸಽಜೋಷಸಃ । ಅಧ್ವರಂ । ವಾವಶಾನಾಃ ॥ ೧ ॥

ಸಾಯಣಭಾಷ್ಯಂ

ಗಾಥೀ ಬ್ರೂತೇ । ವಹ್ನಿರ್ಹವಿಷಾಂ ಪ್ರಾಪಯಿತಾಗ್ನಿರ್ವ್ಯುಷ್ಟಿಷೂಷಸಾಂ ವ್ಯುಚ್ಛನೇಷ್ವಗ್ನಿಂ ಯಜನೀಯಂ ದೇವಮುಷಸಮುಷೋಽಭಿಮಾನಿನೀಂ ದೇವತಾಮಶ್ವಿನಾ ಅಶ್ವಿನೌ ದೇವೌ ದಧಿಕ್ರಾಂ । ದಧಿಕ್ರಾವಾ ನಾಮ ಕಶ್ಚಿದ್ದೇವಃ ತಂ ದಧಿಕ್ರಾವಾಣಂ । ಏತಾನ್ದೇವಾನುಕ್ಥೈಃ ಶಸ್ತ್ರೈಃ ಶಂಸನಸಾಧನೈರಪ್ರಗೀತಮಂತ್ರಾತ್ಮಕೈಃ ಸೂಕ್ತೈರ್ಹವತೇ । ಆಹ್ವಯತಿ । ಸುಜ್ಯೋತಿಷಃ ಸುಷ್ಠು ದ್ಯೋತಮಾನಾ ನೋಽಧ್ವರಮಸ್ಮತ್ಸಂಬಂಧಿನಮಿಮಂ ಯಜ್ಞಂ ವಾವಶಾನಾಃ ಕಾಮಯಮಾನಾಃ ಸಜೋಷಸಃ ಪರಸ್ಪರಂ ಸಂಗತಾ ಭೂತ್ವಾ ಸರ್ವೇ ದೇವಾಸ್ತದಾಹ್ವಾನಂ ಶೃಣ್ವಂತು ॥ ದಧಿಕ್ರಾಂ । ಕ್ರಮು ಪಾದವಿಕ್ಷೇಪೇ । ದಧೀತ್ಯುಪಪದೇ ಜನಸನಖನಕ್ರಮಗಮ ಇತಿ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾಕಾರಃ । ಕೃದುತ್ತರಪದಪ್ರಕೃತಿಸ್ವರತ್ವಂ । ಹವತೇ ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣಂ । ಸುಜ್ಯೋತಿಷಃ ।

ಸುಷ್ಠು ದ್ಯೋತಮಾನಾ ಇತಿ ವಿಗ್ರಹೇ ದ್ಯುತ ದೀಪ್ತಾವಿತ್ಯಸ್ಯ ದ್ಯುತೇರಿಸಿನ್ನಾದೇಶ್ಚ ಜಃ । ಉ. ೨-೧೧೧ । ಇತೀಸಿನ್ಪ್ರತ್ಯಯೋ ದಕಾರಸ್ಯ ಜಕಾರಃ । ಕೃದುತ್ತರಪದಪ್ರಕೃತಿಸ್ವರತ್ವಂ । ಬಹುವ್ರೀಹಿಪಕ್ಷೇ ತು ನಞ್-ಸುಭ್ಯಾಮಿತ್ಯುತ್ತರಪದಾಂತೋದಾತ್ತತಾ ಸ್ಯಾತ್ । ಯಥಾ । ಸುಜ್ಯೋತಿಷೋ ಅಕ್ತವಸ್ತಾ । ಅಭಿಷ್ಯುಃ । ಋಗ್ವೇ. ೧೦-೪೯-೧೫ । ಇತ್ಯತ್ರಾಂತೋದಾತ್ತತಾ । ತಸ್ಮಾದತ್ರ ನಾಯಂ ಸಮಾಸಃ ಕಿಂತು ತತ್ಪುರುಷ ಏವ । ಶೃಣ್ವಂತು । ಶ್ರು ಶ್ರವಣ ಇತ್ಯಸ್ಮಾಚ್ಛ್ರುವಃ ಶೃ ಚೇತಿ ಶ್ನುಸ್ತತ್ಸಂನಿಯೋಗೇನ ಧಾತೋಃ ಶೃ ಇತ್ಯಾದೇಶಃ । ನಿಘಾತಃ । ವಾವಶಾನಾಃ । ವಶ ಕಾಂತಾವಿತ್ಯಸ್ಯ ಯಙ್‌ಲುಕಿ ರೂಪಂ । ಅಭ್ಯಾಸಸ್ಯ ದೀರ್ಘೋಽಕಿತ ಇತಿ ದೀರ್ಘಃ । ವ್ಯತ್ಯಯೇನ ಶಾನಚ್ । ಚಿತ್ಸ್ವರಃ ॥

### ಪ್ರತಿಪದಾರ್ಥ

**ವಹ್ನಿಃ**—ಹವಿಸ್ಸನ್ನು ವಹಿಸತಕ್ಕ ಅಗ್ನಿಯು । **ವ್ಯುಷ್ಟಿಷು**—ಉಷಸ್ಸಿನ ಉದಯಕಾಲಗಳಲ್ಲಿ ॥ **ಅಗ್ನಿಂ**—ಯಜ್ಞಾಗ್ನಿಯನ್ನೂ । **ಉಷಸಂ**—ಉಷೋದೇವತೆಯನ್ನೂ । **ಅಶ್ವಿನಾ**—ಅಶ್ವಿನೀದೇವತೆಗಳನ್ನೂ । **ದಧಿಕ್ರಾಂ**—ದಧಿಕ್ರಾವಾ ಎಂಬ ಹೆಸರುಳ್ಳ ದೇವತೆಯನ್ನೂ । **ಉಕ್ಥೈಃ**—ಶಸ್ತ್ರಾತ್ಮಕವಾದ ಸೂಕ್ತಗಳಿಂದ ಪ್ರಾರ್ಥಿಸಿ । **ಹವತೇ**—ಕರೆಯುತ್ತಾನೆ । **ಸುಜ್ಯೋತಿಷಃ**—ಅತಿಶಯವಾದ ಪ್ರಕಾಶವನ್ನು ಹೊಂದಿರುವವರೂ । **ಅಧ್ವರಂ**—ಯಜ್ಞವನ್ನು । **ವಾವಶಾನಾಃ**—ಅಪೇಕ್ಷಿಸುವವರೂ । **ಸಜೋಷಸಃ**—ಪರಸ್ಪರವಾಗಿ ಒಟ್ಟಿಗೆ ಸೇರಿರುವವರೂ ಆದ । **ದೇವಾಃ**—ದೇವತೆಗಳು । **ನಃ**—ನಮ್ಮ ಸ್ತೋತ್ರವನ್ನು । **ಶೃಣ್ವಂತು**—ಕೇಳಲಿ ॥

### ಭಾವಾರ್ಥ

ಹವಿಸ್ಸನ್ನು ವಹಿಸತಕ್ಕ ಅಗ್ನಿಯು ಉಷಃಕಾಲದಲ್ಲೇ ಯಜ್ಞಾಗ್ನಿಯನ್ನೂ, ಉಷೋದೇವತೆಯನ್ನೂ ಅಶ್ವಿನೀದೇವತೆಗಳನ್ನೂ ದಧಿಕ್ರಾವಾ ಎಂಬ ಹೆಸರುಳ್ಳ ದೇವತೆಯನ್ನೂ ಶಸ್ತ್ರಾತ್ಮಕವಾದ ಸೂಕ್ತಗಳಿಂದ ಪ್ರಾರ್ಥಿಸಿ ಕರೆಯುತ್ತಾನೆ. ಅತಿಶಯವಾದ ಪ್ರಕಾಶವನ್ನು ಹೊಂದಿರುವವರೂ, ಯಜ್ಞವನ್ನು ಅಪೇಕ್ಷಿಸುವವರೂ, ಪರಸ್ಪರವಾಗಿ ಒಟ್ಟಿಗೆ ಸೇರಿರುವವರೂ ಆದ ದೇವತೆಗಳು ನಮ್ಮ ಸ್ತೋತ್ರಗಳನ್ನು ಕೇಳಲಿ.

### English Translation

The bearer (of the oblation) invokes with praises at the break of day, Agni, the dawn, the Ashwins, and Dadhikra : may the resplendent divinities, desirous of our sacrifice, hear in unison (the invocation).

### ವಿಶೇಷವಿಷಯಗಳು

ಗಾಧಿ ಎಂಬ ಋಷಿಯು ಅಗ್ನಿಯನ್ನು ಸ್ತುತಿಸಿರುವನೆಂದು ಹೇಳಿದೆ.

**ವಹ್ನಿಃ—ಹವಿಷಾಂ ಪ್ರಾಪಯಿತಾ ಅಗ್ನಿಃ** । ದೇವತೆಗಳಿಗೆ ಯಜಮಾನರು ಅರ್ಪಿಸಿದ ಹವಿಸ್ಸನ್ನು ಅವರವರಿಗೆ (ಅರ್ಪಿಸುವವನು) ತಲಪಿಸುವ ಕಾರ್ಯವನ್ನು ಆಚರಿಸುವವನು ಅಗ್ನಿಯು ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ವಹ್ನಿಶಬ್ದಕ್ಕೆ ಅನೇಕವಿಧವಾದ ಪ್ರಯೋಗಗಳನ್ನು ಪ್ರದರ್ಶಿಸಿ ವ್ಯಾಖ್ಯಾನಮಾಡಿದ್ದಾರೆ—ವಹ್ನಿಶಬ್ದವು ಅಶ್ವನಾಮಗಳಲ್ಲಿಯೂ (ನಿ. ೨-೨೭) ಪಠಿತವಾಗಿದೆ.

51

**ನ ಜಾಮಯೇ ತಾನ್ವೋ ರಿಕ್ಥಮಾರೈಕ್ ಚಕಾರ ಗರ್ಭಂ ಸನಿತುರ್ನಿಧಾನಂ ।**
**ಯದೀ ಮಾತರೋ ಜನಯಂತ ವಹ್ನಿಮನ್ಯಃ ಕರ್ತಾ ಸುಕೃತೋರನ್ಯ ಋನ್ಧನ್ ॥**
(ಋ. ಸಂ. ೨-೩೧-೩)

ದುರ್ಗಾಚಾರ್ಯರು ಇಲ್ಲಿ ವಹ್ನಿಶಬ್ದಕ್ಕೆ ವೋಢಾರಂ ಪುತ್ರಂ ಎಂದು ಅರ್ಥವನ್ನು ಹೇಳಿದ್ದಾರೆ.

**ಮೋದ್ಯಂತು ತೇ ವಹ್ನಯೋ ಯೇಭಿರೀಯಸೇಽರಿಷಣ್ಯನ್ ವೀಳಯಸ್ವಾ ವನಸ್ಪತೇ ।**
**ಅಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ-**
**ಋತುಭಿಃ ॥** (ಋ. ಸಂ. ೨-೩೭-೩)

ಇಲ್ಲಿ ವೋಢಾರಃ ಅಶ್ವಾಃ–ಭಾರವನ್ನು ಹೊರುವ ಅಶ್ವಗಳೆಂದು ಅರ್ಥವನ್ನು ವರ್ಣಿಸಿದೆ.

**ದಧಿಕ್ರಾಂ—ದಧಿಕ್ರಾವಾ ನಾಮ ಕಶ್ಚಿದ್ದೇವಃ ತಂ ದಧಿಕ್ರಾವಾಣಂ** । ನಿರುಕ್ತಕಾರರು—ದಧಿಕ್ರಾವಾ ಎಂಬ ಪದವನ್ನು ಅಶ್ವನಾಮಗಳಲ್ಲಿ (ನಿ. ೨-೨೭) ಪಾಠಮಾಡಿ, **ದಧಿಕ್ರಾ ಇತ್ಯೇತತ್ ದಧತ್ ಕ್ರಾಮತೀತಿ ವಾ ದಧತ್ ಕ್ರಂದತೀತಿ ವಾ ದಧದಾಕಾರೀ ಭವತೀತಿ ವಾ** । (ಅಶ್ವಾರೋಹಿಯನ್ನು) ಸವಾರನನ್ನು ಧರಿಸಿ ಸಂಚರಿಸುವುದು ಅಥವಾ ಧ್ವನಿಯನ್ನು ಮಾಡುವುದು, ಅಥವಾ ಸವಾರನನ್ನು ಧರಿಸಿ ಒಂದು ವಿಧವಾದ ಆಕಾರವನ್ನು ಹೊಂದುವುದು ಎಂದು ಅರ್ಥವನ್ನು ವರ್ಣಿಸಿದ್ದಾರೆ. ಯಾಸ್ಕರು ಅಥಾತೋ ಮಧ್ಯಮಸ್ಥಾನದೇವತಾಃ ಎಂದು ಹೇಳಿ,

**ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ।**
**ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ ಸಮಿಮಾ ವಚಾಂಸಿ ॥**
(ಋ. ಸಂ. ೪-೩೮-೧೦)

ಎಂಬ ಋಕ್ಕನ್ನು ಉದಹರಿಸಿ, ದಧಿಕ್ರಾ ಎಂಬ ದೇವನು ಮಧ್ಯಮಸ್ಥಾನ ದೇವತೆಗಳ ಮಧ್ಯದಲ್ಲಿ ಪರಿಗಣಿತನಾಗಿದ್ದನೆಂದು ವಿವರಿಸಿದ್ದಾರೆ. ಸಾಯಣರು ದಧಿಕ್ರಾವಾ ಎಂದು ಪ್ರಸಿದ್ಧವಾದ ಒಬ್ಬ ದೇವನೆಂದು ಅರ್ಥಮಾಡಿದ್ದಾರೆ.

**ಅಗ್ನಿಂ—ಯಜನೀಯಂ ದೇವಂ** । ಯಾಸ್ಕರು ಅಗ್ನಿಶಬ್ದಾರ್ಥವನ್ನು **ಅಗ್ರಣೀರ್ಭವತಿ, ಅಗ್ರಂ ಯಜ್ಞೇಷು ಪ್ರಣೀಯತೇ, ಅಂಗಂ ನಯತಿ ಸನ್ನಮಮಾನಃ** (ನಿ. ೭-೧೪) ಎಂಬ ಇವೇ ಮೊದಲಾದ ವಾಕ್ಯಗಳಿಂದ ವಿವರಿಸಿದ್ದಾರೆ. ಸಾಯಣರು ಯೋಗಾರ್ಹನಾದ ದೇವನೆಂದು ಅರ್ಥವನ್ನು ವಿವರಿಸಿ, ಯಜಮಾನರು ಅರ್ಪಿಸಿದ ಹವಿಸ್ಸುಗಳನ್ನು ಆಯಾಯಾ ದೇವತೆಗಳಿಗೆ ಒಯ್ಯುವ ಅಗ್ನಿಯು ಉಷಃಕಾಲವು ಕಳೆದನಂತರ ಯಾಗದಲ್ಲಿ ಹವಿಸ್ಸನ್ನು ಸ್ವೀಕರಿಸುವ ದೇವನನ್ನೂ ಉಷೋಭಿಮಾನಿಯಾದ ದೇವತೆಯನ್ನೂ ಅಶ್ವಿನೀದೇವತೆಗಳನ್ನೂ ದಧಿಕ್ರಾವಾ ಎಂಬ ದೇವನನ್ನೂ, ಆಯಾಯಾ ದೇವತೆಗಳನ್ನು ಪ್ರಶಂಸೆಮಾಡಿ ಸ್ತುತಿಸುವ ಮಂತ್ರಗಳಿಂದ ಯಾಗಕ್ಕೆ ಬರುವಂತೆ ಆಹ್ವಾನಮಾಡುತ್ತಾನೆಂದು ಅರ್ಥವನ್ನು ವಿವರಿಸಿದ್ದಾರೆ.

**ಅಧ್ವರಂ—ಅಸ್ಮತ್ಸಂಬಂಧಿನಂ ಇಮಂ ಯಜ್ಞಂ** । ಅಧ್ವರಶಬ್ದವು ಯಾಸ್ಕರಿಂದ ಯಜ್ಞನಾಮಗಳಲ್ಲಿಯೂ, (ನಿ. ೩-೧೯) ಅಂತರಿಕ್ಷನಾಮಗಳಲ್ಲಿಯೂ (ನಿ. ೩-೧೦) ಪಠಿತವಾಗಿ **ಅಧ್ವರ ಇತಿ ಯಜ್ಞನಾಮ, ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ** (ನಿ. ೧-೮) ಎಂದು ವ್ಯಾಖ್ಯಾತವಾಗಿದೆ. ಸಾಯಣರು ಯಜಮಾನರು ಆಚರಿಸುವ ಯಜ್ಞವನ್ನು ಅಪೇಕ್ಷಿಸುವವರಾದ, ಕಾಂತಿಯಿಂದ ಬೆಳಗುತ್ತಿರುವ ದೇವತೆಗಳೆಲ್ಲರೂ, ಒಟ್ಟಾಗಿ ಸೇರಿ, ಅಗ್ನಿಯ ಆಹ್ವಾನವನ್ನು ಕೇಳಿ ಆಗಮಿಸಲಿ ಎಂದು ಯಜಮಾನರ ಆಶಂಸನೆಯು ವಿವೃತವಾಗಿದೆ ಎಂದು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಅಶ್ವಿನಾ**—**ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ.

**ದಧಿಕ್ರಾಂ**—ಕ್ರಮು ಪಾದವಿಕ್ಷೇಪೇ ಧಾತು. ದಧಿ ಎಂಬ ಸುಬಂತವು ಉಪಪದವಾಗಿರುವಾಗ **ಜನಸನಖನಕ್ರಮುಗಮು**—(ಪಾ. ಸೂ. ೩-೨-೬೭) ಎಂಬುದರಿಂದ ವಿಚ್ ಪ್ರತ್ಯಯ. ಇದು ಪರವಾದಾಗ **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿಗೆ ಆತ್ವ. ದಧಿಕ್ರಾ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವ್ಯುಷ್ಟಿಷು**—ವಿ ಉಪಸರ್ಗ. ಉಛೀ ವಿವಾಸೇ ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ವ್ರಶ್ಚಭ್ರಸ್ಜಸೃಜ**—ಎಂಬುದರಿಂದ ಧಾತುವಿನ ಛಕಾರಕ್ಕೆ ಷತ್ವ. ಷಕಾರನಿಮಿತ್ತವಾಗಿ ಪ್ರತ್ಯಯತಕಾರಕ್ಕೆ ಷ್ಟುತ್ವದಿಂದ ಟಕಾರಾದೇಶ. ತಾದಿಯಾಗಿ ನಿತ್ತಾದ ಪ್ರತ್ಯಯಾಂತಪರವಾದುದರಿಂದ **ತಾದೌಚ ನಿತಿಕೃತ್ಯತೌ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

**ಹವತೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಲಟ್ ಪ್ರಥಮಪುರುಷ ಏಕವಚನಲ್ಲಿ ತ ಪ್ರತ್ಯಯ. ಟಿಗೆ ಏತ್ವ. ಶಪ್. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಶಪ್ ನಿಮಿತ್ತವಾಗಿ ಉಕಾರಕ್ಕೆ ಗುಣ. ಅವಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಜ್ಯೋತಿಷಃ**—ಸುಷ್ಠು ಜ್ಯೋತಮಾನಾ ಎಂದು ವಿಗ್ರಹವಾಕ್ಯಮಾಡಿದಾಗ, ದ್ಯುತ ದೀಪ್ತೌ ಧಾತು. ಇದಕ್ಕೆ **ದ್ಯುತೇರಿಸನ್ನಾದೇಶ್ಚ ಜಃ** (ಉ. ಸೂ. ೨-೨೬೭) ಎಂಬುದರಿಂದ ಇಸನ್ ಪ್ರತ್ಯಯ. ಆದಿಯ ದಕಾರಕ್ಕೆ ಜಕಾರಾದೇಶ. ಇಕಾರದ ಪರದಲ್ಲಿ ಬಂದುದರಿಂದ ಪ್ರತ್ಯಯಸಕಾರಕ್ಕೆ ಷತ್ವ. ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಅದು ನಿತ್‌ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಇಲ್ಲಿ ಬಹುವ್ರೀಹಿಸಮಾಸ ಮಾಡುವುದಾದರೆ **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರಬೇಕಾಗುತ್ತದೆ. ಇದಕ್ಕೆ ಉದಾಹರಣೆಯಾಗಿ **ಸುಜ್ಯೋತಿಷೋ ಅಕ್ತವಸ್ತ್ರಾ ಅಭಿ ಷ್ಯುಃ** (ಋ. ಸಂ. ೧೦-೪೯-೧೫) ಎಂಬಲ್ಲಿ ಅಂತೋದಾತ್ತಸ್ವರ ಬಂದಿರುತ್ತದೆ. ಆದುದರಿಂದಲೇ ಇಲ್ಲಿ ಬಹುವ್ರೀಹಿಸಮಾಸ ಮಾಡದೆ ತತ್ಪುರುಷಸಮಾಸ ಮಾಡಿದೆ.

**ಶೃಣ್ವಂತು**—ಶ್ರು ಶ್ರವಣೇ ಧಾತು. ಲೋಟ್ ಪ್ರಥಮಪುರುಷಬಹುವಚನದಲ್ಲಿ ಝಿಗೆ ಅಂತಾದೇಶ. ಇಕಾರಕ್ಕೆ ಉಕಾರಾದೇಶ. **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂಬುದರಿಂದ ಶ್ನು ವಿಕರಣ. ಅದರೊಡನೆ ಧಾತುವಿಗೆ ಶೃ ಆದೇಶ. ಋಕಾರದ ಪರದಲ್ಲಿ ನಕಾರ ಬಂದುದರಿಂದ ಣತ್ವ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಉಕಾರಕ್ಕೆ ಗುಣ ಬರುವುದಿಲ್ಲ. ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಾವಶಾನಾಃ**—ವಶ ಕಾಂತೌ ಧಾತು. ಅತಿಶಯಾರ್ಥದಲ್ಲಿ ಯಙ್ ಬಂದಾಗ ಅದಕ್ಕೆ ಲುಕ್. ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಆದಿಹಲ್‌ಶೇಷಃ **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ವ್ಯತ್ಯಯೋ ಬಹುಲಂ** ಎಂಬುದರಿಂದ ಯಙ್‌ಲುಗಂತದ ಮೇಲೆ ಲಟ್ ಬಂದಾಗ ಅದಕ್ಕೆ ಶಾನಚಾದೇಶ. ಯಙ್‌ಲುಕನ್ನು ಅದಾದಿಯಲ್ಲಿ ಪಾಠಮಾಡಿರುವುದರಿಂದ ಶಪಿಗೆ ಲುಕ್. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

———

ಸಂಹಿತಾಪಾಠಃ

ಅಗ್ನೇ ತ್ರೀ ತೇ ವಾಜಿನಾ ತ್ರೀ ಷಧಸ್ಥಾ ತಿಸ್ರಸ್ತೇ ಜಿಹ್ವಾ ಋತಜಾತ ಪೂರ್ವೀಃ ।
ತಿಸ್ರ ಉತೇ ತನ್ವೋ ದೇವವಾತಾಸ್ತಾಭಿರ್ನಃ ಪಾಹಿ ಗಿರೋ ಅಪ್ರಯುಚ್ಛನ್ ॥೨॥

ಪದಪಾಠಃ

ಅಗ್ನೇ । ತ್ರೀ । ತೇ । ವಾಜಿನಾ । ತ್ರೀ । ಸಧಽಸ್ಥಾ । ತಿಸ್ರಃ । ತೇ । ಜಿಹ್ವಾಃ । ಋತಽಜಾತ । ಪೂರ್ವೀಃ ।
ತಿಸ್ರಃ । ಊಂ ಇತಿ । ತೇ । ತನ್ವಃ । ದೇವಽವಾತಾಃ । ತಾಭಿಃ । ನಃ । ಪಾಹಿ । ಗಿರಃ । ಅಪ್ರಽಯುಚ್ಛನ್ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತವ ತ್ರೀ ವಾಜಿನಾ ಆಜ್ಯೌಷಧಿಸೋಮಾತ್ಮಕಾನಿ ತ್ರೀಣ್ಯನ್ನಾನಿ ತ್ರೀ ಷಧಸ್ಥಾ ತ್ರೀಣ್ಯಾಗ್ನೀಧ್ರೀಯಾದೀನಿ ಧಿಷ್ಣ್ಯಾನಿ ಸ್ಥಾನಾನಿ । ಯದ್ವೈಕಾಹಾಹೀನಸತ್ರಾಖ್ಯಾನಿ ತ್ರೀಣಿ ಸ್ಥಾನಾನಿ । ಯದ್ವಾ ತ್ರಯೋ ಲೋಕಾಃ । ಋತಜಾತ ಋತೇಷು ಸತ್ಯಭೂತೇಷು ಯಜ್ಞೇಷು ಸಮುತ್ಪನ್ನ ಹೇ ಅಗ್ನೇ ತೇ ತವ ಪೂರ್ವೀರ್ದೇವಾನಾಮುದರಪೂರಯಿತ್ರ್ಯಸ್ತಿಸ್ರೋ ಗಾರ್ಹಪತ್ಯಾದ್ಯಾ ಜಿಹ್ವಾಃ । ಹೇ ಅಗ್ನೇ ತೇ ತವ ದೇವವಾತಾ ದೇವೈರಭಿಲಷಿತಾಸ್ತಿಸ್ರಸ್ತನ್ವಃ ಪವಮಾನಪಾವಕಶುಚ್ಯಾತ್ಮಕಾನಿ ತ್ರೀಣಿ ಶರೀರಾಣಿ । ಏವಂಭೂತಸ್ತ್ವಮಪ್ರಯುಚ್ಛನ್ ಅಪ್ರಮಾದ್ಯನ್ ಸಾವಧಾನೋ ಭೂತ್ವಾ ತಾಭಿಸ್ತನೂಭಿರ್ನೋಽಸ್ಮಾಕಂ ಸ್ತೋತೄಣಾಂ ಗಿರಃ ಸ್ತೋತ್ರಶಸ್ತ್ರಾದೀನಿ ವಾಕ್ಯಾನಿ ಪಾಹಿ । ಪಾಲಯ ॥ ತಿಸ್ರಃ । ತಿಸೃಭ್ಯೋ ಜಸ ಇತಿ ಜಸ ಉದಾತ್ತತ್ವಂ । ಜಿಹ್ವಾಃ । ಲಿಹ ಅಸ್ವಾದನೇ । ಲಿಹಂತ್ಯಾಭೀ ರಸಾನಿತಿ ಶೇವಾಯಹ್ವಜಿಹ್ವಾಗ್ರೀವಾಪ್ವಾಮೀವಾ ಇತಿ ನಿಪಾತನಾದ್ವನ್ । ಲಕಾರಸ್ಯ ಜಕಾರಃ । ಗುಣಾಭಾವಃ । ವ್ಯತ್ಯಯೇನಾಂತೋದಾತ್ತತ್ವಂ । ದೇವವಾತಾಃ । ವಾ ಗತಿಗಂಧನಯೋಃ । ಅಸ್ಮಾತ್ಕರ್ಮಣಿ ಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಪಾಹಿ । ಪಾ ರಕ್ಷಣ ಇತ್ಯಸ್ಯ ಲೋಟಿ ರೂಪಂ । ನಿಘಾತಃ । ಅಪ್ರಯುಚ್ಛನ್ । ಯುಚ್ಛ ಪ್ರಮಾದೇ । ನಞ್ಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತೇ—ನಿನಗೆ । ವಾಜಿನಾ—ಅನ್ನಗಳು । ತ್ರೀ—ಮೂರು । ಷಧಸ್ಥಾ—ನಿನ್ನ ಸ್ಥಾನಗಳು । ತ್ರೀ—ಮೂರು । ಋತಜಾತ—ಸತ್ಯಾತ್ಮಕವಾದ ಯಜ್ಞಗಳಲ್ಲಿ ಉತ್ಪನ್ನನಾದ ಅಗ್ನಿಯೇ । ತೇ—ನಿನಗೆ । ಪೂರ್ವೀಃ—ದೇವತೆಗಳ ಉದರವನ್ನು ಪೂರ್ಣಮಾಡತಕ್ಕ । ಜಿಹ್ವಾಃ—ನಾಲಿಗೆಗಳು । ತಿಸ್ರಃ—ಮೂರು । ತೇ—ನಿನಗೆ । ದೇವವಾತಾಃ—ದೇವತೆಗಳಿಂದ ಅಪೇಕ್ಷಿತಗಳಾದ । ತನ್ವಃ—ಶರೀರಗಳು । ತಿಸ್ರಃ—ಮೂರು । ತಾಭಿಃ—ಈ ಎಲ್ಲಾ ಅವಯವಗಳಿಂದಲೂ । ನಃ—ನಿನ್ನ ಸ್ತುತಿಕರ್ತರಾದ ನಮ್ಮ । ಗಿರಃ—ಸ್ತುತಿವಾಕ್ಯಗಳನ್ನು । ಅಪ್ರಯುಚ್ಛನ್—ಸಾವಧಾನವಾದ ಚಿತ್ತದಿಂದ । ಪಾಹಿ—ಪಾಲಿಸು.

ಭಾವಾರ್ಥ

ಎಲೈ ಅಗ್ನಿಯೇ, ನಿನಗೆ ಇರತಕ್ಕ ಅನ್ನಗಳು ಮೂರು ಬಗೆಯಾಗಿವೆ. ನಿನಗಿರುವ ಸ್ಥಾನಗಳೂ ಮೂರು. ಸತ್ಯಾತ್ಮಕವಾದ ಯಜ್ಞಗಳಲ್ಲಿ ಉತ್ಪನ್ನವಾದ ಎಲೈ ಅಗ್ನಿಯೇ, ದೇವತೆಗಳ ಉದರವನ್ನು ತುಂಬುವುದಕ್ಕಾಗಿ ನಿನಗಿರತಕ್ಕ

ನಾಲಿಗೆಗಳು ಮೂರು. ನಿನಗೆ ದೇವತೆಗಳಿಂದ ಅಪೇಕ್ಷಿತಗಳಾದ ಮೂರು ವಿಧವಾದ ಶರೀರಗಳಿವೆ. ಈ ಎಲ್ಲಾ ಅವಯವಗಳಿಂದಲೂ ಸಹ ನಿನ್ನ ಸ್ತುತಿಕರ್ತರಾದ ನಮ್ಮ ಸ್ತುತಿವಾಕ್ಯಗಳನ್ನು ಸಾವಧಾನವಾದ ಚಿತ್ತದಿಂದ ಪಾಲಿಸು.

## English Translation

Agni, born of sacrifice, three are your viands; three your abiding places; three the tongues satisfying (the gods): three verily are your forms, acceptable to the deities, and with them never heedless (of our wishes), be propitious to our praises.

### ವಿಶೇಷವಿಷಯಗಳು

**ತ್ರೀ ವಾಜಿನಾ**—ಅಗ್ನಿಯನ್ನು ಸಂಬೋಧಿಸಿ, ವಾಜಿನಾ ಎಂಬ ಪದಕ್ಕೆ ಅನ್ನವೆಂದು ಅರ್ಥವನ್ನು ಹೇಳಿ, ಯಜಮಾನರು ಅರ್ಪಿಸುವ ಆಜ್ಯ, ಓಷಧಿ, ಸೋಮರೂಪವಾಗಿರುವ (ಈ ಮೂರು) ಮೂರು ವಿಧವಾದ (ಅನ್ನವೂ) ವಸ್ತುಗಳೂ ಅಗ್ನಿಗೆ ಅನ್ನವಾಗಿರುವುವು ಎಂದು ವಿವರಿಸಿದೆ.

**ತ್ರೀ ಷಧಸ್ಥಾ**—**ತ್ರೀಣಿ ಆಗ್ನೀಧ್ರೀಯಾದೀನಿ ಧಿಷ್ಣ್ಯಾನಿ ಸ್ಥಾನಾನಿ। ಯದ್ವಾ ಏಕಾಹಾಹೀನಸತ್ರಾಖ್ಯಾನಿ ತ್ರೀಣಿ ಸ್ಥಾನಾನಿ ಯದ್ವಾ ತ್ರಯೋಲೋಕಾಃ।** ಅಗ್ನಿಯು ಯಾಗಶಾಲೆಯಲ್ಲಿ ವಿಧ್ಯುಕ್ತವಾದ ಕ್ರಮದಿಂದ ಸಿದ್ಧಮಾಡಲ್ಪಟ್ಟ ಆಗ್ನೀಧ್ರೀಯವೇ ಮೊದಲಾದ ಮೂರು ಸ್ಥಾನಗಳಲ್ಲಿ ಇರುವವನೆಂದೂ, ಅಥವಾ ಏಕಾಹ, ಅಹೀನ, ಸತ್ರ ಎಂದು ಪ್ರಸಿದ್ಧವಾದ ಮೂರು ವಿಧವಾದ ಕ್ರತುಗಳಲ್ಲಿಯೂ ನೆಲೆಯಾಗಿರುವನೆಂದೂ, ಅಥವಾ ಪೃಥಿವೀ ಸ್ವರ್ಗ ಪಾತಾಳವೆಂಬ ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವನೆಂದೂ ವರ್ಣಿಸಿದೆ.

**ಋತಜಾತೆ**—ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ. **ಋತ** ಶಬ್ದಕ್ಕೆ **ಸತ್ಯಂ ವಾ ಯಜ್ಞಂ ವಾ** (ನಿ. ೪-೧೯) ಎಂದು ಎರಡು ವಿಧವಾದ ಅರ್ಥದಲ್ಲಿಯೂ ಪ್ರಯೋಗವಿರುವುದೆಂದು ಯಾಸ್ಕರು ವರ್ಣಿಸಿದ್ದಾರೆ. ಇಲ್ಲಿ ಸಾಯಣರು ಸತ್ಯಭೂತೇಷು ಯಜ್ಞೇಷು ಸಮುತ್ಪನ್ನ–ಅಗ್ನಿಯು ಸತ್ಯಾತ್ಮಕವಾಗಿರುವ ಯಜ್ಞಗಳಲ್ಲಿ ಉತ್ಪನ್ನನಾಗಿರುವನೆಂದು ಅರ್ಥವನ್ನು ವಿವರಿಸಿದ್ದಾರೆ.

**ಪೂರ್ವೀಃ ತಿಸ್ರಃ ಜಿಹ್ವಾಃ**—ಪೂರ್ವ್ಯಂ ಎಂದು ಪುರಾಣನಾಮಗಳಲ್ಲಿ (ನಿ. ೩-೨೦) ಪಠಿತವಾಗಿದ್ದರೂ ಸಾಯಣರು ಇಲ್ಲಿ ಪೂರ್ವೀಃ ಎಂಬ ಪದಕ್ಕೆ ಪೂರಯಿತ್ರ್ಯಃ ದೇವತೆಗಳಿಗೆ ಆಹಾರವನ್ನು ಅರ್ಪಿಸುವುದರಿಂದ ದೇವತೆಗಳನ್ನು ತೃಪ್ತಿಪಡಿಸುವ ಅಗ್ನಿಯ ಗಾರ್ಹಪತ್ಯವೇ ಮೊದಲಾದ ಮೂರು ಪ್ರಭೇದಗಳೂ ಅಗ್ನಿಯ ಜಿಹ್ವೆಗಳಾಗಿರುವವೆಂದು ವರ್ಣಿಸಿದ್ದಾರೆ.

**ತಿಸ್ರಃ ತನ್ವಃ**—**ಪವಮಾನ ಪಾವಕ ಶುಚ್ಯಾತ್ಮಕಾನಿ ತ್ರೀಣಿ ಶರೀರಾಣಿ।** ನಿರುಕ್ತಕಾರರು

**ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ।**

(ಋ. ಸಂ.೨-೧-೧)

**ಶುಚಿಃ ಶೋಚತೇರ್ಜ್ವಲತಿಕರ್ಮಣಃ** ಜ್ವಲತಿ ಎಂದು ಅರ್ಥವನ್ನು ಬೋಧಿಸುವ ಶುಚ್ ಧಾತುವಿನಿಂದ ನಿಷ್ಪನ್ನವಾದ ಶುಚಿ ಶಬ್ದವು ಅಗ್ನಿಯನ್ನು ಬೋಧಿಸುವುದೆಂದೂ, ಈ ಅಗ್ನಿಯು ಲೌಕಿಕಾಗ್ನಿ ಎಂದೂ ಅರ್ಥವನ್ನು ವಿವರಿಸಿದ್ದಾರೆ.

ಅಗ್ನಿಯು ಪವಮಾನ, ಪಾವಕ, ಶುಚಿ, ತಾನು ಇರುವ ಸ್ಥಳವನ್ನು ಪರಿಶುದ್ಧಿಮಾಡುವವನೂ, ತನಗೆ ಸಂಬಂಧಿಸಿದ ವಸ್ತುಗಳ ಕಶ್ಮಲಗಳನ್ನು ದಹಿಸಿ ಶುದ್ಧಿಯನ್ನು ಮಾಡುವವನೂ, ಉದ್ದೀಪ್ತನಾಗಿರುವವನೂ, ಆಗಿರುವಕಾರಣ ಅಗ್ನಿಯು ಈ ಮೂರು ವಿಧವಾದ ಶರೀರಗಳಿಂದ ವ್ಯಾಪಿಸಿರುವನೆಂಬ ಅರ್ಥವನ್ನು ವರ್ಣಿಸಿರುವರು.

ಅಗ್ನಿಯು ಏಕಾಹ, ಅಹೀನ, ಸತ್ರರೂಪವಾದ ಯಾಗಗಳಲ್ಲಿಯೂ, ಅಥವಾ ಮೂರು ಲೋಕಗಳಲ್ಲಿಯೂ ವ್ಯಾಪಿಸಿ, ಆಯಾಯ ಯಜ್ಞಗಳಲ್ಲಿ ಉತ್ಪನ್ನನಾಗಿ ದೇವತೆಗಳು ಪ್ರೀತಿಸುವ ಪವಮಾನ, ಪಾವಕ, ಶುಚಿ ಎಂಬ ಶರೀರಗಳಿಂದ, ದೇವತೆಗಳಿಗೆ ಅರ್ಪಿಸುವ ಆಜ್ಯ ಔಷಧಿ ಸೋಮರೂಪವಾದ ಅನ್ನಗಳನ್ನು ಗಾರ್ಹಪತ್ಯವೇ ಮೊದಲಾದ ಮೂರು ಜಿಹ್ವೆಗಳಿಂದ ದೇವತೆಗಳಿಗೆ ಅರ್ಪಿಸಿ ತೃಪ್ತಿಯನ್ನು ಉಂಟುಮಾಡುವನು ಎಂದು ಅಗ್ನಿಯ ಸ್ಥಾನ, ರೂಪ ಶರೀರ, ಅವುಗಳ ಕಾರ್ಯ, ಇವುಗಳನ್ನು ವಿವರಿಸಿ ಹೇಳಿದೆ.

ತಾಭಿಃ **ಅಪ್ರಯುಚ್ಛನ್ ನಃ ಗಿರಃ ಪಾಹಿ**—**ಅಪ್ರಮಾದ್ಯನ್ ಸಾವಧಾನೋ ಭೂತ್ವಾ ತನೂಭಿಃ ಅಸ್ಮಾಕಂ ಸ್ತೋತೄಣಾಂ ಸ್ತೋತ್ರಶಸ್ತ್ರಾದೀನಿ ವಾಕ್ಯಾನಿ ಪಾಲಯ**—ಅಗ್ನಿಯು ಸಾವಧಾನತೆಯಿಂದ(ಜಾಗರೂಕತೆಯಿಂದ) ಇರುವವನಾಗಿ ಸ್ತುತಿಮಾಡುವ ಯಜಮಾನರು ಪಠಿಸುವ ಸ್ತೋತ್ರಗಳನ್ನು ತನ್ನ ಆಯಾಯ ಶರೀರಗಳಿಂದ ರಕ್ಷಿಸಲಿ ಎಂದರೆ ಆಲಿಸಿ ಕೇಳಲಿ ಎಂದು ಯಜಮಾನರ ಆಶಂಸೆಯು ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ತ್ರೀ**—**ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕದಲ್ಲಿ ಶಿಗೆ ಲೋಪ.

**ತಿಸ್ರಃ**—ತ್ರಿ ಶಬ್ದ. ಸ್ತ್ರೀಲಿಂಗದಲ್ಲಿ ಜಸ್ ಪರವಾದಾಗ **ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ** ಎಂಬುದರಿಂದ ತಿಸ್ರಾದೇಶ. ಗುಣಕ್ಕೆ ಅಪವಾದವಾಗಿ **ಅಚಿರಋತಃ** ಎಂಬುದರಿಂದ ರೇಫಾದೇಶ. **ತಿಸೃಭ್ಯೋ ಜಸಃ** (ಪಾ. ಸೂ. ೬-೧-೧೬೬) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜಿಹ್ವಾಃ**—ಲಿಹ ಆಸ್ವಾದನೇ. ಧಾತು. ಲಿಹಂತಿ ಆಭಿಃ ರಸಾನ್ ಇತಿ. (ರಸವನ್ನು ಆಸ್ವಾದನ ಮಾಡುವುದು) ಶೇವಾ ಯಹ್ವಾ ಜಿಹ್ವಾ ಗ್ರೀವಾ ಪ್ವಾ ಮೀವಾಃ (ಉ. ಸೂ. ೧-೧೫೨) ಎಂಬುದರಿಂದ ನಿಪಾತಮಾಡಿರುವುದರಿಂದ ವನ್ ಪ್ರತ್ಯಯ. ಧಾತು ಲಕಾರಕ್ಕೆ ಜಕಾರಾದೇಶ. ನಿಪಾತದಿಂದಲೇ ಗುಣ ಬರುವುದಿಲ್ಲ. ಪ್ರತ್ಯಯ ನಿತ್ತಾದರೂ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಋತಜಾತ**—ಋತೇಷು ಜಾತಃ ಋತಜಾತಃ ಸಂಬುದ್ಧಿಯಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ.

**ತನ್ವಃ**—**ಉದಾತ್ತಸ್ವರಿತಯೋರ್ಯಣಃ** (ಪಾ. ಸೂ. ೮-೨-೪) ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ದೇವವಾತಾಃ**—ವಾ ಗತಿಗಂಧನಯೋಃ ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕರ್ಮಣಿಕ್ತಾಂತಪರವಾದುದರಿಂದ **ತೃತೀಯಾಕರ್ಮಣಿ** (ಪಾ. ಸೂ. ೯-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಪಾಹಿ**—ಪಾ ರಕ್ಷಣೇ. ಅದಾದಿ. ಲೋಟ್ ಮಧ್ಯಮಪುರುಷಏಕವಚನಾಂತರೂಪ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಪ್ರಯುಚ್ಛನ್**—ಯುಚ್ಛ ಪ್ರಮಾದೇ. ಧಾತು. ಲಟಿಗೆ ಶತ್ರಾದೇಶ. ನಞ್ ತತ್ಪುರುಷ ಸಮಾಸವಾದಾಗ **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನೇ ಭೂರೀಣಿ ತವ ಜಾತವೇದೋ ದೇವ ಸ್ವಧಾವೋಽಮೃತಸ್ಯ ನಾಮ ।
ಯಾಶ್ಚ ಮಾಯಾ ಮಾಯಿನಾಂ ವಿಶ್ವಮಿನ್ವ ತ್ವೇ ಪೂರ್ವೀಃ ಸಂದಧುಃ ಪೃಷ್ಟಬಂಧೋ

ಪದಪಾಠಃ

ಅಗ್ನೇ । ಭೂರೀಣಿ । ತವ । ಜಾತಽವೇದಃ । ದೇವ । ಸ್ವಧಾಽವಃ । ಅಮೃತಸ್ಯ । ನಾಮ ।
ಯಾಃ । ಚ । ಮಾಯಾಃ । ಮಾಯಿನಾಂ । ವಿಶ್ವಂಽಇನ್ವ । ತ್ವೇ ಇತಿ । ಪೂರ್ವೀಃ । ಸಂಽದಧುಃ । ಪೃಷ್ಟ-
ಬಂಧೋ ಇತಿ ಪೃಷ್ಟಽಬಂಧೋ ॥ ೩ ॥

ಸಾಯಣಭಾಷ್ಯಂ

ದೇವದ್ಯೋತಮಾನ ಜಾತವೇದೋ ಜಾತಪ್ರಜ್ಞ ಸ್ವಧಾವೋಽನ್ನವನ್ಹೇ ಅಗ್ನೇಽಮೃತಸ್ಯ ಮರಣಧರ್ಮರಹಿತಸ್ಯ ತವ ಸಂಬಂಧಿನೋ ದೇವಾ ಭೂರೀಣಿ ಬಹೂನಿ ನಾಮ ನಾಮಾನಿ ತೇಜಾಂಸಿ ತ್ವೇ ತ್ವಯಿ ಸಂದಧುಃ । ಸಂದಧಿರೇ । ಕಿಂಚ । ವಿಶ್ವಮಿನ್ವ ವಿಶ್ವಸ್ಯ ಸಂತರ್ಪಕ ಪೃಷ್ಟಬಂಧೋ ಅಪೇಕ್ಷಿತಫಲಪ್ರಶ್ನವಿಷಯಾಣಾಂ ಸ್ತೋತ್ರಾಣಾಂ ಬಂಧೋ ಹೇ ಅಗ್ನೇ ಮಾಯಿನಾಮಸುರಾಣಾಂ ಪೂರ್ವೀರ್ಭೂಯಸೀರ್ಯಾ ಮಾಯಾ ದೇವಾಸ್ತ್ವಯಿ ಸಂದಧುಃ ಸಂಪ್ರಯುಯುಜಿರೇ ತಾಸ್ತ್ವಯಿ ಸಂತಿ । ತಸ್ಮಾದ್ಯಜ್ಞವಿಘ್ನಕಾರಿಣಾಂ ಮಾಯಿನಾಂ ಮಾಯಾಃ ಪರಿಹೃತ್ಯಾಸ್ಮದೀಯಂ ಯಜ್ಞಂ ಪಾಲಯೇತಿ ಭಾವಃ ॥ ಸ್ವಧಾವಃ । ಸ್ವಧಾಸ್ಯಾಸ್ತೀತಿ ಮತುಪ್ । ಮತುವಸೋ ರುರಿತಿ ನಕಾರಸ್ಯ ರುಃ । ಅಮೃತಸ್ಯ । ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ನಾಮ । ಣಮ ಪ್ರಹ್ವತ್ವೇ । ನಾಮನ್ ಸೀಮನ್ ವ್ಯೋಮನ್ನಿತ್ಯಾದಿನಾ ಮನಿನ್ಪ್ರತ್ಯಯಾಂತತ್ವೇನ ನಿಪಾತನಾನ್ಮಕಾರಲೋಪೋ ದೀರ್ಘಶ್ಚ । ನಮಯಂತಿ ಸರ್ವಾನಪಿ ಸ್ವಾಶ್ರಯಭೂತಾನ್ಪುರುಷಾನಿತಿ ನಾಮಾನಿ ತೇಜಾಂಸಿ । ಸುಪಾಂ ಸುಲುಗಿತಿ ಸುಪೋ ಲುಕ್ । ನಿತ್ತ್ವಾದಾದ್ಯುದಾತ್ತಃ । ಮಾಯಿನಾಂ । ಮಾಯಾ ಏಷಾಂ ಸಂತೀತಿ ವ್ರೀಹ್ಯಾದಿತ್ವಾದಿನಿಃ । ಯಸ್ಯೇತಿ ಲೋಪಃ । ಪ್ರತ್ಯಯಸ್ವರಃ । ವಿಶ್ವಮಿನ್ವ । ಇವಿ ವ್ಯಾಪ್ತಿಪ್ರೀಣನಯೋರಿತ್ಯಸ್ಮಾದ್ವಿಶ್ವಶಬ್ದ ಉಪಪದೇ ಕರ್ಮಣ್ಯಣ್ಣಿತ್ಯಣ್ಪ್ರತ್ಯಯಃ । ಧಾತೂಪದೇಶಾವಸ್ಥಾಯಾಮಿದಿತೋ ನುಮಿತಿ ನುಮಿ ಪ್ರಾಪ್ತೇ ಲಘೂಪಧಗುಣೋ ನ ಭವತಿ । ವಿಶ್ವಮಿನ್ವತಿ ಪ್ರೀಣಯತೀತಿ ವಿಶ್ವಮಿನ್ವಃ । ತತ್ಪುರುಷೇ ಕೃತಿ ಬಹುಲಮಿತಿ ದ್ವಿತೀಯಾಯಾ ಅಲುಕ್ । ಆಮಂತ್ರಿತತ್ವಾನ್ನಿಘಾತಃ । ಸಂದಧುಃ । ಡುಧಾಞ್ ಧಾರಣಪೋಷಣಯೋರಿತ್ಯಸ್ಯ ಲಿಟ್ಯುಸಿ ರೂಪಂ । ಯದ್ವೃತ್ತಯೋಗಾದನಿಘಾತಃ । ಪ್ರತ್ಯಯಸ್ವರಃ। ಪೃಷ್ಟಬಂಧೋ । ಪ್ರಚ್ಛ ಜ್ಞೀಪ್ಸಾಯಾಮಿತ್ಯಸ್ಯ ಕರ್ಮಣಿ ನಿಷ್ಠಾಯಾಂ ಗ್ರಹಿಜ್ಯಾವಯೀತ್ಯಾದಿನಾ ಸಂಪ್ರಸಾರಣಂ । ವ್ರಶ್ಚಾದಿನಾ ಷತ್ವಂ । ಬಂಧ ಬಂಧನ ಇತ್ಯಸ್ಮಾತ್ ಶೃಸ್ವೃಸ್ನಿಹೀತ್ಯಾದಿನಾ ಉಪ್ರತ್ಯಯಃ । ಷಷ್ಠೀಸಮಾಸಃ। ಆಮಂತ್ರಿತತ್ವಾನ್ನಿಘಾತಃ ॥

ಪ್ರತಿಪದಾರ್ಥ

**ದೇವ**—ಪ್ರಕಾಶಮಾನನೂ | **ಜಾತವೇದಃ**—ಎಲ್ಲವನ್ನೂ ತಿಳಿದವನೂ | **ಸ್ವಧಾವಃ**—ಅನ್ನಕ್ಕೆ ಪ್ರಭುವಾಗಿರುವವನೂ ಆದ | **ಅಗ್ನೇ**—ಎಲೈ ಅಗ್ನಿಯೇ | **ಅಮೃತಸ್ಯ**—ಮರಣಧರ್ಮದಿಂದ ಬಾಹ್ಯನಾದ | **ತವ**—ನಿನ್ನ (ಸಂಬಂಧಿಗಳಾದ ದೇವತೆಗಳು) | **ಭೂರೀಣಿ**—ಬಹಳವಾಗಿ (ಅನೇಕ ವಿಧವಾದ) | **ನಾಮ**—ತೇಜಸ್ಸುಗಳನ್ನು | **ತ್ವೇ**—ನಿನ್ನಲ್ಲಿ | **ಸಂದಧುಃ**—ಸ್ಥಾಪಿಸಿದ್ದಾರೆ | **ವಿಶ್ವಮಿನ್ವ**—ಜಗತ್ತಿಗೆಲ್ಲಾ ತೃಪ್ತಿದಾಯಕನಾದವನೂ | **ಪ್ರೃಷ್ಟಬಂಧೋ**—ಅರ್ಥಿಗಳಾದ ಸ್ತೋತೃಗಳಿಗೆ ಬಂಧುವಾದವನೂ ಆದ ಎಲೈ ಅಗ್ನಿಯೇ | **ಮಾಯಿನಾಂ**—ವಂಚಕರಾದ ಅಸುರರ | **ಪೂರ್ವೀಃ**—ಬಹಳವಾದ | **ಯಾಃ ಮಾಯಾಃ**—ಯಾವ ವಂಚಕಶಕ್ತಿಯಿದೆಯೋ (ಅವೂ ಸಹ ನಿನ್ನಲ್ಲಿ ಸ್ಥಾಪಿತವಾಗಿವೆ ||

ಭಾವಾರ್ಥ

ಪ್ರಕಾಶಮಾನನೂ, ಸರ್ವಜ್ಞನೂ, ಅನ್ನಕ್ಕೆ ಪ್ರಭುವಾಗಿರುವವನೂ ಆದ ಎಲೈ ಅಗ್ನಿಯೇ, ಮರಣಾತೀತನಾದ ನಿನ್ನ ಸಂಬಂಧಿಗಳಾದ ದೇವತೆಗಳು ನಿನ್ನಲ್ಲಿ ಅನೇಕವಿಧವಾದ ತೇಜಸ್ಸುಗಳನ್ನು ಸ್ಥಾಪಿಸಿದ್ದಾರೆ. ಅಲ್ಲದೆ ವಂಚಕರಾದ ಅಸುರರಲ್ಲಿರತಕ್ಕ ವಂಚಕಶಕ್ತಿಯೂ ಸಹ ನಿನ್ನಲ್ಲಿ ಸ್ಥಾಪಿತವಾಗಿರುವುದರಿಂದ ಆ ಶಕ್ತಿಯಿಂದ ಅಸುರರನ್ನು ತಡೆದು ನಮ್ಮ ಯಜ್ಞವನ್ನು ಪಾಲಿಸು.

English Translation

Divine Agni, knowing all that exists and distributor of food, many are the names of you, who are immortal, satisfier of all men, friend of the suppliant, the gods have deposited in yon whatever are the delusions of the deluding (Rakshasas).

ವಿಶೇಷವಿಷಯಗಳು.

ಈ ಮಂತ್ರದಲ್ಲಿ **ದೇವ, ಜಾತವೇದಃ, ಸ್ವಧಾವಃ,** ಎಂಬ ಪದಗಳಿಂದ ಅಗ್ನಿಯನ್ನು ಸಂಬೋಧಿಸಿದೆ. **ದೇವ** ಶಬ್ದಕ್ಕೆ **ದ್ಯೋತಮಾನ,** ಪ್ರಕಾಶಪಡಿಸುವ ತೇಜಸ್ಸುಗಳಿಂದ ಬೆಳಗುತ್ತಿರುವವನೆಂದು ಅರ್ಥವನ್ನು ವಿವರಿಸಿದೆ. **ಜಾತವೇದ**ಶ್ಶಬ್ದಕ್ಕೆ ನಾಲ್ಕು ವಿಧವಾಗಿ ಅರ್ಥವನ್ನು ಯಾಸ್ಕರು ವಿವರಿಸಿರುವುದರಲ್ಲಿ **ಜಾತಪ್ರಜ್ಞ,** ಜ್ಞಾನವಂತನೆಂಬ ಅರ್ಥವನ್ನು ವರ್ಣಿಸಿದೆ. **ಸ್ವಧಾ**ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಅಗ್ನಿಯು ಅನ್ನವುಳ್ಳವನು ಎಂದು ಅರ್ಥವನ್ನು ಹೇಳಿದೆ.

**ನಾಮ—ನಾಮಾನಿ ತೇಜಾಂಸಿ, ನಮಯಂತಿ ಸರ್ವಾನಪಿ ಸ್ವಾಶ್ರಯಭೂತಾನ್ ಪುರುಷಾನಿತಿ ನಾಮಾನಿ ತೇಜಾಂಸಿ.** ತನಗೆ ಆಶ್ರಯಭೂತರಾಗಿರುವ ಪುರುಷರನ್ನು ತಗ್ಗಿಸುವಕಾರಣ ತೇಜಸ್ಸುಗಳು ಎಂದು ನಾಮ ಪದಕ್ಕೆ ಅರ್ಥವನ್ನು ಹೇಳಿದೆ.

**ಅಮೃತಸ್ಯ—ಮರಣಧರ್ಮರಹಿತಸ್ಯ**—ಈ ಪದವು ಅಗ್ನಿಗೆ ವಿಶೇಷಣವೆಂದು ವಿವರಿಸಿ, ಮರಣಧರ್ಮವಿಲ್ಲದಿರುವ ಅಗ್ನಿಯು **ಭೂರೀಣಿ ನಾಮ** ಬಹಳ ತೇಜಸ್ಸುಗಳನ್ನು ದೇವತೆಗಳು ಅಗ್ನಿಯಲ್ಲಿ ಸ್ಥಾಪಿಸಿರುವರು ಎಂದು ಅರ್ಥವನ್ನು ವರ್ಣಿಸಿದೆ.

**ವಿಶ್ವಮಿನ್ವ—ವಿಶ್ವಮಿನ್ವತಿ ಪ್ರೀಣಯತೀತಿ** | ಪ್ರಪಂಚವೆಲ್ಲವನ್ನೂ ಸಂತೋಷಪಡಿಸುವಕಾರಣ ಅಗ್ನಿಯನ್ನು **ವಿಶ್ವಸಂತರ್ಪಕ** ಎಂದು (ಅರ್ಥಮಾಡಿ) ಈ ಪದದಿಂದ ಸಂಬೋಧಿಸಿದೆ. ಯಾಸ್ಕರು—

**ವ್ಯ ಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ |**
**ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ ||**

(ಋ. ಸೂ. ೧೦-೧೧೦-೫)

ಈ ಋಕ್ಕನ್ನು ಉದಹರಿಸಿದ್ದಾರೆ. ದುರ್ಗಾಚಾರ್ಯರು, **ವಿಶ್ವಂ ಆಭಿಃ ಏತಿ.** ಎಲ್ಲವನ್ನೂ ಹೊಂದಲು ಸಾಧನವಾದ ಯಜ್ಞೋಪಕರಣವೆಂದು ವಿಶ್ವಮಿನ್ವ ಶಬ್ದಾರ್ಥವನ್ನು ವಿವರಿಸಿದ್ದಾರೆ.

**ಪೃಷ್ಟಬಂಧೋ— ಅಪೇಕ್ಷಿತಫಲಪ್ರಶ್ನವಿಷಯಾಣಾಂ ಸ್ತೋತ್ರಾಣಾಂ ಬಂಧೋ** ಅಗ್ನಿಯು ಅಪೇಕ್ಷೆಯನ್ನು ಹೊಂದಲು ಇಚ್ಛೆಯುಳ್ಳವರ ಸ್ತೋತ್ರಗಳಿಂದ ತೃಪ್ತನಾಗುವನೆಂದೂ, ಪಂಚವೆಲ್ಲವನ್ನೂ ಸಂತೋಷಪಡಿಸುವನೆಂದೂ ಅಗ್ನಿಯನ್ನು ವರ್ಣಿಸಿ **ಮಾಯಿನಾಂ ಪೂರ್ವೀಃ ಮಾಯಾಃ ದೇವಾಸ್ತ್ವಯಿ ಸಂಪ್ರಯುಯುಜಿರೇ ತಾಸ್ತ್ವಯಿ ಸಂತಿ |** ಮಾಯೆಯನ್ನು ಅಭ್ಯಾಸಮಾಡಿರುವ ಅಸುರರ, ಸಂಬಂಧವಾದ ಪ್ರಭೂತವಾದ ಮಾಯಗಳೆಲ್ಲವನ್ನೂ ದೇವತೆಗಳು ಅಗ್ನಿಯಲ್ಲಿ ಇರಿಸಿರುವ ಕಾರಣ, **ಯಜ್ಞವಿಘ್ನಕಾರಿಣಾಂ ಮಾಯಿನಾಂ ಮಾಯಾಃ ಪರಿಹೃತ್ಯ ಅಸ್ಮದೀಯಂ ಯಜ್ಞಂ ಪಾಲಯ**-ಯಜ್ಞಗಳಿಗೆ ವಿಘ್ನವನ್ನು ಆಚರಿಸುವ ಅಸುರರ ಮಾಯೆಗಳೆಲ್ಲವನ್ನೂ ಅಗ್ನಿಯು ಪರಿಹರಿಸಿ, ಯಜಮಾನರಾದ ನಮ್ಮ ಯಜ್ಞಗಳನ್ನು ರಕ್ಷಿಸಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ. ಇಲ್ಲಿ **ಪೂರ್ವೀಃ** ಎಂಬ ಪದಕ್ಕೆ **ಭೂಯಸೀಃ** ಎಂಬ ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಸ್ವಧಾವಃ**—ಸ್ವಧಾ ಅಸ್ಯ ಅಸ್ತಿ ಎಂದು ಅರ್ಥ ವಿವಕ್ಷಾ ಮಾಡಿದಾಗ **ತದಸ್ಯಾಸ್ತಿ**—ಸೂತ್ರದಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ **ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಮೃತಸ್ಯ**—ನಞ್ ಸ್ವರಕ್ಕೆ ಬಾಧಕವಾಗಿ **ನಞೋಜರಮರಮಿತ್ರಮೃತಾಃ** (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತ ಸ್ವರಬರುತ್ತದೆ.

**ನಾಮ**—ಣಮು ಪ್ರಹ್ವತ್ವೇ ಧಾತು. **ನಾಮನ್ ಸೀಮನ್ ವ್ಯೋಮನ್**—(ಉ. ಸೂ. ೪-೫೮೦) ಎಂಬುದರಿಂದ ಮನಿನ್ ಪ್ರತ್ಯಯಾಂತವಾಗಿ ನಿಪಾತಮಾಡಿರುವುದರಿಂದ ಧಾತುವಿನ ಮಕಾರಕ್ಕೆ ಲೋಪವೂ ಅಕಾರಕ್ಕೆ ದೀರ್ಘವೂ ಬರುತ್ತವೆ. ನಮಯಂತಿ ಸರ್ವಾನಪಿ ಸ್ವಾಶ್ರಯಭೂತಾನ್ ಪುರುಷಾನ್ ಇತಿ ನಾಮಾನಿ ತೇಜಾಂಸಿ (ಆಶ್ರಯಿಸಿದವರೆಲ್ಲರನ್ನೂ ಬಗ್ಗಿಸುವುದು) ಬಹುವಚನ ಪರವಾದಾಗ **ಸುಪಾಂಸುಲುಕ್** (ಪಾ.ಸೂ. ೭-೧-೩೯)ಎಂಬುದರಿಂದ ಅದಕ್ಕೆ ಲುಕ್. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಾಯಿನಾಮ್**—ಮಾಯಾ ಏಷಾಂ ಸಂತಿ ಇತಿ ಮಾಯಿನಃ ವ್ರೀಹ್ಯಾದಿಗಣದಲ್ಲಿ ಪಠಿತವಾದುದರಿಂದ **ವ್ರೀಹ್ಯಾದಿಭ್ಯಶ್ಚ** (ಪಾ. ಸೂ. ೫-೨-೧೧೬) ಎಂಬುದರಿಂದ ಇನಿ ಪ್ರತ್ಯಯ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ. ಷಷ್ಠೀಬಹುವಚನಾಂತರೂಪ.

**ವಿಶ್ವಮಿನ್ವ**— ಇವಿ ವ್ಯಾಪ್ತಿಪ್ರೀಣನಯೋಃ ಧಾತು. ವಿಶ್ವಂ ಇನ್ವತಿ ಪ್ರೀಣಯತಿ ಇತಿ ವಿಶ್ವಮಿನ್ವಃ ವಿಶ್ವ ಶಬ್ದ ಉಪಪದವಾಗಿರುವಾಗ **ಕರ್ಮಣ್ಯಣ್** (ಪಾ. ಸೂ. ೩-೧-೨) ಎಂಬುದರಿಂದ ಅಣ್ ಪ್ರತ್ಯಯ. ಧಾತುವಿನಲ್ಲಿ

ಇಕಾರ ಇತ್ತಾದುದರಿಂದ **ಇದಿತೋನುಂಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ಧಾತೂಪದೇಶಕಾಲ ದಲ್ಲಿಯೇ ನುಮಾಗಮ ಬರುವುದರಿಂದ ಲಘೂಪಧೆ ಇಲ್ಲದಿರುವುದರಿಂದ ಗುಣ ಬರುವುದಿಲ್ಲ. ಕೃದಂತವಾದ ಉತ್ತರಪದ ವಿರುವುದರಿಂದ **ತತ್ಪುರುಷೇ ಕೃತಿಬಹುಲಂ** (ಪಾ. ಸೂ. ೬-೩-೧೪) ಎಂಬುದರಿಂದ ಸಮಾಸದಲ್ಲಿ ದ್ವಿತೀಯಾವಿಭಕ್ತಿಗೆ ಲುಕ್ ಬರುವುದಿಲ್ಲ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಂದಧುಃ**—ಡುಧಾಞ್ ಧಾರಣಪೋಷಣಯೋಃ ಧಾತು. ಸಮ್ ಉಪಸರ್ಗ. ಲಿಟ್ ಪ್ರಥಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುವುದ ರಿಂದ ಪ್ರತ್ಯಯಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಸಮ್) ಅನುದಾತ್ತಸ್ವರ ಬರುತ್ತದೆ.

**ಪೃಷ್ಟಬಂಧೋ**—ಪ್ರಚ್ಛಜ್ಞೀಪ್ಸಾಯಾಂ ಧಾತು. **ನಿಷ್ಠಾ** ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗ್ರಹಿಜ್ಯಾವಯಿವ್ಯಧಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿನ ರೇಫಕ್ಕೆ ಋಕಾರರೂಪ, ಸಂಪ್ರಸಾರಣ. ಪೂರ್ವರೂಪ. **ವ್ರಶ್ಚಭ್ರಸ್ಜ**—(ಪಾ. ಸೂ. ೮-೨-೩೬) ಎಂಬುದರಿಂದ ಛಕಾರಕ್ಕೆ ಷಕಾರಾದೇಶ. ಅದನ್ನು ನಿಮಿತ್ತೀ ಕರಿಸಿ ಪ್ರತ್ಯಯತಕಾರಕ್ಕೆ ಷ್ಟುತ್ವ. ಪೃಷ್ಟ ಎಂದು ರೂಪವಾಗುತ್ತದೆ. ಬಂಧ ಬಂಧನೇ. ಧಾತು. ಶ್ವಾಸ್ಸೃಸ್ನಿಹಿ— (ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. ಬಂಧು ಎಂದು ರೂಪವಾಗುತ್ತದೆ. ಪೃಷ್ಟಸ್ಯ ಬಂಧುಃ ಪೃಷ್ಟ-ಬಂಧುಃ ಸಂಬುದ್ಧಿಯಲ್ಲಿ **ಹ್ರಸ್ವಸ್ಯ ಗುಣಃ** ಎಂಬುದರಿಂದ ಉಕಾರಕ್ಕೆ ಗುಣ. **ಆಮಂತ್ರಿತಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ ।
ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಂ ॥ ೪ ॥

ಪದಪಾಠಃ

ಅಗ್ನಿಃ । ನೇತಾ । ಭಗಃऽಇವ । ಕ್ಷಿತೀನಾಂ । ದೈವೀನಾಂ । ದೇವಃ । ಋತುऽಪಾಃ । ಋತऽವಾ ।
ಸಃ । ವೃತ್ರऽಹಾ । ಸನಯಃ । ವಿಶ್ವऽವೇದಾಃ । ಪರ್ಷತ್ । ವಿಶ್ವಾ । ಅತಿ । ದುಃऽಇತಾ । ಗೃಣಂತಂ ॥

ಸಾಯಣಭಾಷ್ಯಂ

**ಯೋऽಯಮಗ್ನಿಃ ಕ್ಷಿತೀನಾಂ ಮನುಷ್ಯಾಣಾಂ ದೈವೀನಾಂ ದೇವಸಂಬಂಧಿನೀನಾಂ ವಿಶಾಂ ನೇ-ತಾಂತರ್ಯಾಮಿತಯಾ ನಿಯಾಮಕಃ । ತತ್ರ ದೃಷ್ಟಾಂತಃ । ಋತುಪಾ ಭಗ ಇವ । ಯಥಾ ವಸಂತಾದ್ಯೃ-ತೂನಾಂ ಪಾಲಕಃ ಸೂರ್ಯಃ ಸರ್ವಸ್ಯ ಸ್ವಪ್ರಕಾಶಪ್ರದಾನೇನ ಪ್ರವರ್ತಕಃ । ತದ್ವತ್ । ಯಶ್ಚಾಗ್ನಿರ್ಋ-**

ತಾವಾಸತ್ಯಕರ್ಮಾ ವೃತ್ರಹಾ ವೃತ್ರಸ್ಯ ಹಂತಾ ಸನಯಃ ಸನಾತನಃ ಪುರಾಣೋ ವಿಶ್ವವೇದಾಃ ಸರ್ವವಿಷಯಜ್ಞಾನವಾನ್ಸರ್ವಜ್ಞೋ ದೇವೋ ದ್ಯೋತಮಾನಃ ಸ ತಥಾವಿಧೋಽಗ್ನಿರ್ಗೃಣಂತಂ ತದ್ವಿಷಯಾಂ ಸ್ತುತಿಂ ಕುರ್ವಂತಂ ಸ್ತೋತಾರಂ ವಿಶ್ವಾ ದುರಿತಾ ಸರ್ವಾಣಿ ದುರಿತಾನ್ಯತಿ ಅತಿಕ್ರಮ್ಯ ಪರ್ಷತ್। ಪಾರಂ ನಯತು॥ ನೇತಾ। ಣೀಞ್ ಪ್ರಾಪಣ ಇತ್ಯಸ್ಯ ತೃಚಿರೂಪಂ । ಚಿತ್ಸ್ವರಃ । ಕ್ಷಿತೀನಾಂ । ಕ್ಷಿ ನಿವಾಸಗತ್ಯೋಃ । ಕ್ತಿಚ್-ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ನಾಮನ್ಯತರಸ್ಯಾಮಿತ್ಯಂತೋದಾತ್ತತ್ವಂ । ದೈವೀನಾಂ । ದೇವಶಬ್ದಾತ್ಸಂಬಂಧಾರ್ಥೇ ದೇವಾದ್ಯಞಞಾವಿತ್ಯಞ್ । ಅಞಃ ಟಿಡ್ಢಾಣಞಿತಿ ಙೀಪ್ । ಞಿತ್ತ್ವಾದಾದ್ಯುದಾತ್ತಃ। ಋತುಪಾಃ । ಪಾ ರಕ್ಷಣ ಇತ್ಯಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ಋತೂನ್ಪಾತೀತ್ಯುಪಪದಮತಿಙ್ । ಪಾ. ೨-೨-೧೯ । ಇತಿ ಸಮಾಸಃ । ಕೃದುತ್ತರಪದಪ್ರಕೃತಿಸ್ವರಃ । ವೃತ್ರಹಾ। ಹನ ಹಿಂಸಾಗತ್ಯೋಃ। ಬ್ರಹ್ಮಭ್ರೂಣವೃತ್ರೇಷು ಕ್ವಿಬಿತಿ ಕ್ವಿಪ್ । ವಿಶ್ವವೇದಾಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ। ಪರ್ಷತ್ । ಪೄ ಪಾಲನಪೂರಣಯೋರಿತ್ಯಸ್ಯ ಲೇಟಿ ಸಿಬ್ಬಹುಲಮಿತಿ ಸಿಪ್ । ಅಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಪಾದಾದಿತ್ವಾದನಿಘಾತಃ । ಗೃಣಂತಂ । ಗೄ ಶಬ್ದೇ । ಲಟಃ ಶತೃ । ಕ್ರ್ಯಾದಿತ್ವಾತ್ ಶ್ನಾ । ಶತ್ರಂತತ್ವಾತ್ ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಶತೃಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಋತುಪಾಃ—ಋತುಗಳಿಗೆ ಪಾಲಕನಾದ । ಭಗ ಇವ—ಸೂರ್ಯನು (ವಸಂತಾದಿ ಋತುಗಳಿಗೆ) ನಿಯಾಮಕನಾಗಿರುವಂತೆ । ಅಗ್ನಿಃ—ಅಗ್ನಿಯು । ಕ್ಷಿತೀನಾಂ—ಮಾನವರಿಗೂ । ದೈವೀನಾಂ—ದೇವತಾರೂಪವಾದ ಪ್ರಜೆಗಳಿಗೂ । ನೇತಾ—ನಿಯಾಮಕನೂ ನೇತೃವೂ ಆಗಿದ್ದಾನೆ । ಋತಾವಾ—ಸತ್ಯದಪಾಲಕನೂ ಅಥವಾ ಸತ್ಯಕರ್ಮವುಳ್ಳವನೂ । ವೃತ್ರಹಾ—ವೃತ್ರನ ನಾಶಕನೂ । ಸನಯಃ—ಪುರಾತನನೂ । ವಿಶ್ವವೇದಾಃ—ಸರ್ವಜ್ಞನೂ । ದೇವಃ—ಪ್ರಕಾಶಮಾನನೂ ಆದ । ಸಃ—ಅಗ್ನಿಯು । ಗೃಣಂತಂ—ಸ್ತೋತ್ರಮಾಡತಕ್ಕ ಭಕ್ತನನ್ನು । ದುರಿತಾ—ಸಕಲ ಪಾಪಗಳಿಂದಲೂ । ಅತಿ—ದಾಟಿಸಿ । ಪರ್ಷತ್—ದಡವನ್ನು ಸೇರಿಸಲಿ (ರಕ್ಷಿಸಲಿ) ॥

ಭಾವಾರ್ಥ

ವಸಂತಾದಿಋತುಗಳಿಗೆ ಸೂರ್ಯನು ನಿಯಾಮಕನೂ ಪಾಲಕನೂ ಆಗಿರುವಂತೆ ಅಗ್ನಿಯು ಮಾನವರಿಗೂ, ದೇವತಾರೂಪವಾದ ಪ್ರಜೆಗಳಿಗೂ ನಿಯಾಮಕನೂ ನೇತೃವೂ ಆಗಿದ್ದಾನೆ. ಸತ್ಯಕರ್ಮವುಳ್ಳವನೂ, ವೃತ್ರನಾಶಕನೂ, ಪುರಾತನನೂ, ಸರ್ವಜ್ಞನೂ ಪ್ರಕಾಶಮಾನನೂ ಆದ ಅಗ್ನಿಯು ಸ್ತೋತ್ರಮಾಡತಕ್ಕ ಭಕ್ತನನ್ನು ಸಕಲವಿಧವಾದ ಪಾಪಗಳಿಂದಲೂ ದಾಟಿಸಿ ಸುರಕ್ಷಿತವಾದ ದಡವನ್ನು ಸೇರಿಸಲಿ.

English Translation

The divine Agni is the guide of devout men, as the sun is the regulator of the seasons : may he, the observer of truth, the slayer of Vritra, the ancient, the omniscient, convey his adorer (safe) over all difficulties.

ವಿಶೇಷವಿಷಯಗಳು

ಕ್ಷಿತೀನಾಂ ದೈವೀನಾಂ ನೇತಾ—ಕ್ಷಿತಿಶಬ್ದವು ಪೃಥಿವೀನಾಮಗಳಲ್ಲಿ (ನಿ. ೨-೫) ಉಕ್ತವಾಗಿದೆ. ಇಲ್ಲಿ ಮನುಷ್ಯಾಣಾಂ ದೇವಸಂಬಂಧಿನೀನಾಂ ವಿಶಾಂ ಅಂತರ್ಯಾಮಿತಯಾ ನಿಯಾಮಕಃ ಅಗ್ನಿಯು ಮನುಷ್ಯ

ಪ್ರಜೆಗಳಿಗೂ ದೇವಸಂಬಂಧಿಯಾಗಿ ಇರುವ ಪ್ರಜೆಗಳಿಗೂ ನಿಯಾಮಕನಾಗಿರುವನು ಎಂದು ಅರ್ಥವನ್ನು ವಿವರಿಸಿದೆ.

**ಋತುಪಾಃ ಭಗ ಇವ**—ಅಗ್ನಿಯು ಪ್ರಜೆಗಳಿಗೆ ನಿಯಾಮಕನಾಗಿರುವ ವಿಷಯದಲ್ಲಿ **ಯಥಾ ವಸಂತಾದ್ಯೃತೂನಾಂ ಪಾಲಕಃ ಸೂರ್ಯಃ ಸರ್ವಸ್ಯ ಪ್ರಕಾಶದಾನೇನ ಪ್ರವರ್ತಕಃ**—ವಸಂತವೇ ಮೊದಲಾದ ಋತುಗಳನ್ನು ಆಯಾಯ ಕಾಲಕ್ಕನುಗುಣವಾಗಿ ಪ್ರವೃತ್ತವಾಗುವಂತೆ ಮಾಡಿ, ಎಲ್ಲವನ್ನೂ ರಕ್ಷಿಸುವ ಸೂರ್ಯನು ಎಲ್ಲಕ್ಕೂ ತನ್ನ ಪ್ರಕಾಶದಿಂದ ಬೆಳಕನ್ನು ಅನುಗ್ರಹಿಸಿ ರಕ್ಷಿಸುವ ಹಾಗೆ ಅಗ್ನಿಯೂ, ಸರ್ವಕ್ಕೂ ತಾನು ಅಂತರ್ಯಾಮಿಯಾಗಿರುತ್ತಾ ಆಯಾಯ ಕಾಲಗಳಲ್ಲಿ ಪ್ರವೃತ್ತರಾಗಿರುವಂತೆ ಮಾಡುವನೆಂದು ಹೋಲಿಸಿ ಹೇಳಿದೆ.

ಅಗ್ನಿಯು **ಋತಾವಾ ಸತ್ಯಕರ್ಮಾ** (ಸತ್ಯವಾದ) ಶಾಶ್ವತವಾದ ಕರ್ಮಗಳುಳ್ಳವನು. **ವೃತ್ರಹಾ-ವೃತ್ರಸ್ಯ ಹಂತಾ** ವೃತ್ರಾಸುರನನ್ನು ನಾಶಮಾಡಿದವನು ಅಥವಾ ಮೇಘವನ್ನು ಭೇದಿಸಿ ವೃಷ್ಟಿಪ್ರದನಾಗಿರುವವನು, **ಸನಯಃ-ಸನಾತನಃ ಪುರಾಣಃ** ಬಹಳ ಪುರಾತನಕಾಲದಿಂದಲೂ ಇರತಕ್ಕವನು, **ವಿಶ್ವವೇದಾಃ ಸರ್ವವಿಷಯಜ್ಞಾನವಾನ್ ಸರ್ವಜ್ಞಃ** ಎಲ್ಲವನ್ನೂ ತಿಳಿಯಬಲ್ಲ ಜ್ಞಾನವುಳ್ಳವನು (ಸರ್ವಜ್ಞನು) **ದೇವಃ ದ್ಯೋತಮಾನಃ** ತೇಜಸ್ಸುಗಳಿಂದ ಬೆಳಗುತ್ತಿರುವವನು, ಎಂದು ಅಗ್ನಿಯ ಪ್ರಭೂತವಾದ ಪ್ರಭಾವವನ್ನು ವರ್ಣಿಸಿ, **ಸಃ ವಿಶ್ವಾ ದುರಿತಾನಿ ಅತಿ ಪರ್ಷತ್—ತಥಾವಿಧಃ ಅಗ್ನಿಃ ಸ್ತೋತಾರಂ ಸರ್ವಾಣಿ ದುರಿತಾನಿ ಅತಿಕ್ರಮ್ಯ ಪಾರಂ ನಯತು** ಬಹಳ ಮಹಿಮೆಯುಳ್ಳ ಅಗ್ನಿಯು ತನ್ನನ್ನು ಸ್ತುತಿಮಾಡುವವರ ಬಹಳವಾದ ಪಾತಕಗಳೆಲ್ಲವನ್ನೂ ನಾಶಪಡಿಸಿ ರಕ್ಷಿಸಲಿ ಎಂದು ಆಶಿಸಿದೆ.

**ವೃತ್ರಹಾ**—ಈ ಪದವು ಯಾಸ್ಕರಿಂದ ವ್ಯಾಖ್ಯಾತವಾಗಿದೆ.

**ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।**
**ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥**
(ಋ. ಸಂ. ೧-೫೯-೬)

**ವೃತ್ರಹಣಂ ಮೇಘಹನಂ** ವೃತ್ರಶಬ್ದಕ್ಕೆ ಮೇಘವನ್ನು ಎಂದು ಅರ್ಥಮಾಡಿ, ಮೇಘವನ್ನು ಭೇದಿಸುವವನು ಎಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ನೇತಾ**—ಣೀಞ್ ಪ್ರಾಪಣೇ ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ. **ಣೋನಃ** ಎಂಬುದರಿಂದ ಆದಿಗೆ ನತ್ವ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಈಕಾರಕ್ಕೆ ಗುಣ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಕ್ಷಿತೀನಾಂ**—ಕ್ಷಿ ನಿವಾಸಗತ್ಯೋಃ ಧಾತು. **ಕ್ತಿಚ್‌ಕ್ತೌ ಚಸಂಜ್ಞಾಯಾಂ** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಷಷ್ಠೀಬಹುವಚನಾಂತರೂಪ. **ನಾಮನ್ಯತರಸ್ಯಾಂ** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ದೈವೀನಾಂ**—ದೇವಶಬ್ದದಮೇಲೆ ಸಂಬಂಧಾರ್ಥದಲ್ಲಿ **ದೇವಾದ್ಯಞಞೌ** ಎಂಬುದರಿಂದ ಅಞ್‌ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಅಞಂತವಾದುದರಿಂದ ಸ್ತ್ರೀತ್ವ

ವಿವಕ್ಷಾಮಾಡಿದಾಗ **ಟಿಡ್ಢಾಣಞ್**—(ಪಾ. ಸೂ. ೪-೧-೧೫) ಎಂಬುದರಿಂದ ಙೀಪ್‌ಪ್ರತ್ಯಯ. ಇದು ಅನುದಾತ್ತ ವಾಗುವುದರಿಂದ ಪೂರ್ವದ ಪ್ರತ್ಯಯವು ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠಿ ಬಹುವಚನಾಂತರೂಪ.

**ಋತುಪಾಃ**—ಪಾ ರಕ್ಷಣೇ ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವಿಚ್‌ಪ್ರತ್ಯಯ. ಋತೂನ್ ಪಾತೀತಿ ಋತುಪಾಃ **ಉಪಪದಮತಿಙ್** (ಪಾ. ಸೂ. ೨-೨-೧೯) ಎಂಬುದರಿಂದ ಸಮಾಸ. ಋತು ಶಸ್ ಪಾ ವಿಚ್ ಎಂದು ಅಲೌಕಿಕವಿಗ್ರಹವಾಕ್ಯ. ಕಾರಕ ಉಪಪದವಾಗಿರುವುದರಿಂದ **ಗತಿಕಾರಕೋಪಪದಾತ್‌ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಋತಾವಾ—ಛಂದಸೀವನಿಪೌ** ಎಂಬ ವಚನದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಕ್ಕೆ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ವೃತ್ರಹಾ**—ವೃತ್ರಂ ಹತವಾನ್ ವೃತ್ರಹಾ. ಹನ ಹಿಂಗತ್ಯೋಃ ಧಾತು. ವೃತ್ರಶಬ್ದ ಉಪಪದವಾಗಿರುವಾಗ **ಬ್ರಹ್ಮಭ್ರೂಣವೃತ್ರೇಷು ಕ್ವಿಪ್** (ಪಾ. ಸೂ. ೩-೨-೮೭) ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿ ಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ವಿಶ್ವವೇದಾಃ**—ವಿಶ್ವಂ ವೇದಃ(ಜ್ಞಾನಂ) ಯಸ್ಯ ಸಃ ವಿಶ್ವವೇದಾಃ **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಪರ್ಷತ್**—ಪೄ ಪಾಲನಪೂರಣಯೋಃ ಧಾತು. ಲೇಟ್‌ಪ್ರಥಮಪುರುಷಏಕವಚನದಲ್ಲಿ ತಿಪ್. **ಇತಶ್ಚ-ಲೋಪಃ**—(ಪಾ.ಸೂ. ೩-೪-೯೭) ಎಂಬುದರಿಂದ ಇಕಾರಕ್ಕೆ ಲೋಪ. **ಸಿಬ್ಬಹುಲಂ ಲೇಟಿ** (ಪಾ.ಸೂ. ೩-೧-೩೪) ಎಂಬುದರಿಂದ ಸಿಪ್. **ಲೇಟೋಽಡಾಟೌ** (ಪಾ.ಸೂ. ೩-೪-೯೪) ಎಂಬುದರಿಂದ ಪ್ರತ್ಯಯಕ್ಕೆ ಅಡಾಗಮ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. ರ ಪರವಾಗಿ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಗಮ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ದುರಿತಾ**—ಇಣ್ ಗತೌ ಧಾತು. ಕ್ತ ಪ್ರತ್ಯಯ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ.

**ಗೃಣಂತಂ**—ಗೄ ಶಬ್ದೇ ಧಾತು. ಕ್ರ್ಯಾದಿ. ಲಟಿಗೆ ಶತ್ರಾದೇಶ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. ಶತೃವಿಗೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಋಕಾರ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಶತೃಪ್ರತ್ಯಯಸ್ವರ ಉಳಿಯುತ್ತದೆ. ದ್ವಿತೀಯಾಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ.

———

ಸಾಯಣಭಾಷ್ಯಂ

ದಧಿಕ್ರಾವ್ಣಮಗ್ನಿಮುಷಸಂ ಚ ದೇವೀಂ ಬೃಹಸ್ಪತಿಂ ಸವಿತಾರಂ ಚ ದೇವಂ ।
ಅಶ್ವಿನಾ ಮಿತ್ರಾವರುಣಾ ಭಗಂ ಚ ವಸೂನ್ರುದ್ರಾಁ ಆದಿತ್ಯಾಁ ಇಹ ಹುವೇ ॥ ೫ ॥

ಪದಪಾಠಃ

ದಧಿಕ್ರಾಂ । ಅಗ್ನಿಂ । ಉಷಸಂ । ಚ । ದೇವೀಂ । ಬೃಹಸ್ಪತಿಂ । ಸವಿತಾರಂ । ಚ । ದೇವಂ ।
ಅಶ್ವಿನಾ । ಮಿತ್ರಾವರುಣಾ । ಭಗಂ । ಚ । ವಸೂನ್ । ರುದ್ರಾನ್ । ಆದಿತ್ಯಾನ್ । ಇಹ । ಹುವೇ ॥ ೫ ॥

ಸಾಯಣಭಾಷ್ಯಂ

ಹೇ ದಧಿಕ್ರಾವಾದಯಃ ಸರ್ವೇ ದೇವಾ ಹೋತಾಹಂ ದಧಿಕ್ರಾಂ ದಧಿಕ್ರಾವಾಣಮಗ್ನಿಮುಷಸಂ ಚ ದೇವೀಮುಷೋಽಭಿಮಾನಿನೀಂ ದೇವತಾಂ ಚ ಬೃಹಸ್ಪತಿಂ ದೇವಂ ದ್ಯೋತಮಾನಂ ಸವಿತಾರಂ ಸರ್ವಸ್ಯ ಜಗತಃ ಪ್ರೇರಕಂ ದೇವಂ ಚ ಅಶ್ವಿನಾ ಅಶ್ವಿನೌ ದೇವೌ ಮಿತ್ರಾವರುಣೌ ಭಗಂ ಸೂರ್ಯಂ ಚ ವಸೂನಷ್ಟೌ ವಸೂನ್ ರುದ್ರಾನೇಕಾದಶ ರುದ್ರಾನ್ ಆದಿತ್ಯಾನ್ ದ್ವಾದಶಾದಿತ್ಯಾನ್ ಏತಾನ್ಸರ್ವಾನ್ ಹವಿರ್ಭುಜೋ ಯುಷ್ಮಾನಿಹಾಸ್ಮದೀಯೇ ಕರ್ಮಣಿ ಹುವೇ । ಹವಿಃಸ್ವೀಕರಣಾರ್ಥಮಾಹ್ವಯಾಮಿ ॥ ದಧಿಕ್ರಾಂ । ದಧಾತೀತಿ ದಧಿಃ । ಆದೃಗಮಹನೇತ್ಯಾದಿನಾ ಕಿಪ್ರತ್ಯಯಃ । ದಧೀಕ್ಯುಪಪದೇ ಕ್ರಮೇ-ರ್ಜನಸನೇತ್ಯಾದಿನಾ ವಿಟ್ । ವಿಡ್ವನೋರಿತ್ಯಾತ್ವಂ । ದೇವೀಂ । ದೇವಸ್ಯ ಪತ್ನೀ ದೇವೀ । ಪುಂಯೋಗಾ-ದಾಖ್ಯಾಯಾಮಿತಿ ಙೀಷ್ । ಯಸ್ಯೇತಿ ಲೋಪಃ । ಪ್ರತ್ಯಯಸ್ವರೇಣಾಂತೋದಾತ್ತಃ । ಬೃಹಸ್ಪತಿಂ । ತದ್ಬೃಹತೋಃ ಕರಪತ್ಯೋಶ್ಚೋರದೇವತಯೋಃ ಸುಟ್ ತಲೋಪಶ್ಚೇತಿ ಪತಿಶಬ್ದೇ ಪರತೋ ಬೃಹಚ್ಛ-ಬ್ದಸ್ಯ ತಲೋಪಃ ಸುಡಾಗಮಶ್ಚ । ಉಭೇ ವನಸ್ಪತ್ಯಾದಿಷು ಯುಗಪದಿತ್ಯುಭಯಪದಾದ್ಯುದಾತ್ತತ್ವಂ । ಸವಿತಾರಂ । ಷೂ ಪ್ರೇರಣ ಇತ್ಯಸ್ಯ ತೃಚಿ ಆರ್ಧಧಾತುಕಸ್ಯೇಡ್ವಲಾದೇರಿತೀಡಾಗಮಃ । ಚಿತ್ತ್ವಾದಂ-ತೋದಾತ್ತತ್ವಂ। ರುದ್ರಾಁ ಆದಿತ್ಯಾಁ ಇತ್ಯತ್ರ ಸಂಹಿತಾಯಾಂ ಶಸೋ ನಕಾರಸ್ಯ ದೀರ್ಘಾದಟಿ ಸಮಾನ-ಪಾದ ಇತಿ ರುತ್ವಂ । ತತಃ ಪೂರ್ವಸ್ಯಾವರ್ಣಸ್ಯ ಆತೋಽಟಿ ನಿತ್ಯಮಿತ್ಯನುನಾಸಿಕತ್ವಂ । ಭೋ ಭಗೋ ಅಘೋ ಅಪೂರ್ವಸ್ಯ ಯೋಽಶೀತಿ ರೋರ್ಯಾದೇಶಃ । ಲೋಪಃ ಶಾಕಲ್ಯಸ್ಯೇತಿ ತಸ್ಯ ಲೋಪಃ । ಯಲೋಪಸ್ಯಾಸಿದ್ಧತ್ವಾತ್ ಸ್ವರಸಂಧಿರ್ನ ಭವತಿ । ಅತೋ ರುದ್ರಾಁ ಆದಿತ್ಯಾ ಇತಿ ಭವತಿ । ಏವಮೇ-ಕಸ್ಮಿನ್ಪಾದ ಆಕಾರಾದಟಿ ಪರತೋ ನಕಾರಸ್ಯ ರುತ್ವಯತ್ವಪೂರ್ವಸವರ್ಣಾನುನಾಸಿಕಾದೇಶಾ ಉನ್ನೇ-ಯಾಃ । ಹುವೇ । ಹ್ವಯತೇರ್ಲಟಿ ಬಹುಲಂ ಛಂದಸೀತಿ ಸಂಪ್ರಸಾರಣಂ । ಇಟಶ್ಚಿತ ಆತ್ಮನೇಪದಾನಾ-ಮಿತ್ಯೇತ್ವಂ । ಉವಙಾದೇಶಃ । ನಿಘಾತಃ ॥

ಪ್ರತಿಪದಾರ್ಥ

(ಹೋತಾ ಅಹಂ—ಹೋತೃವಾದ ನಾನು) । ದಧಿಕ್ರಾಂ—ದಧಿಕ್ರಾವಾ ಎಂಬ ದೇವತೆಯನ್ನೂ । ಅಗ್ನಿಂ ಅಗ್ನಿಯನ್ನೂ । ದೇವೀಂ—ದೇವತಾತ್ಮಕಳಾದ । ಉಷಸಂ ಉಷೋದೇವತೆಯನ್ನೂ । ಬೃಹಸ್ಪತಿಂ—ಬೃಹಸ್ಪತಿ

ಯನ್ನೂ | **ದೇವಂ**—ದ್ಯೋತಮಾನನಾದ | **ಸವಿತಾರಂ**—ಸವಿತೃದೇವತೆಯನ್ನೂ | **ಅಶ್ವಿನಾ**—ಅಶ್ವಿನೀದೇವತೆಗಳನ್ನೂ | **ಮಿತ್ರಾವರುಣಾ**—ಮಿತ್ರಾವರುಣರನ್ನೂ | **ಭಗಂ**—ಭಗನನ್ನೂ | **ವಸೂನ್**—ವಸುಗಳನ್ನೂ | **ರುದ್ರಾನ್**—ರುದ್ರರನ್ನೂ | **ಆದಿತ್ಯಾನ್**—ಆದಿತ್ಯರನ್ನೂ | **ಇಹ**—ಈ ಯಜ್ಞಕರ್ಮದಲ್ಲಿ | **ಹುವೇ**—(ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ) ಕರೆಯುತ್ತೇನೆ.

ಭಾವಾರ್ಥ

ನನ್ನ ಈ ಯಜ್ಞಕರ್ಮದಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ದಧಿಕ್ರಾವಾದೇವತೆಯನ್ನೂ, ಅಗ್ನಿಯನ್ನೂ, ದೇವತಾತ್ಮಕಳಾದ ಉಷೋದೇವತೆಯನ್ನೂ, ಬೃಹಸ್ಪತಿಯನ್ನೂ, ದ್ಯೋತಮಾನನಾದ ಸವಿತೃದೇವತೆಯನ್ನೂ, ಅಶ್ವಿನೀದೇವತೆಗಳನ್ನೂ, ಮಿತ್ರಾವರುಣರನ್ನೂ, ಭಗನನ್ನೂ, ವಸುಗಳನ್ನೂ ರುದ್ರರನ್ನೂ, ಆದಿತ್ಯರನ್ನೂ, ಆಹ್ವಾನಿಸುತ್ತೇನೆ.

## English Translation.

I invoke to this rite, Dadhikra, AGNI, the divine USHAS, BRIHASPATHI, the divine SAVITRI, the ASWINS, MITRA and VARUNA, BHAGA, the Vasus, the Rudras, and Adityas.

ವಿಶೇಷವಿಷಯಗಳು

**ದಧಿಕ್ರಾಂ**—**ದಧಿಕ್ರಾವಾಣಂ** | ದಧಿಕ್ರಾ ಎಂಬುದಾಗಿ ಪ್ರಸಿದ್ಧನಾದ ದೇವನೆಂದು ಯಾಸ್ಕರು ವ್ಯಾಖ್ಯಾನ ಮಾಡಿದ್ದಾರೆ. (ಋ. ಸಂ. ೩-೨೦-೧) ನೇ ಋಕ್ಕಿನಲ್ಲಿ ಈ ಅಂಶವು ವಿವೃತವಾಗಿದೆ.

**ಉಷಸಂ ಚ ದೇವೀಂ**—**ಉಷೋಭಿಮಾನಿನೀಂ ದೇವತಾಂ ಚ** | ಯಾಸ್ಕರು—

**ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ |**
**ನಿ ಯತ್ಸೀಂ ಶಿಶ್ನಥದ್ವೃಷಾ ||** (ಋ. ಸಂ. ೪-೩೦-೧೦)
**ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ |**
**ಯೇನ ತೋಕಂ ಚ ತನಯಂ ಚ ಧಾಮಹೇ ||** (ಋ. ಸಂ.೧-೯೨-೧೩)

ಎಂಬ ಋಕ್ಕುಗಳನ್ನು ಉಪಹರಿಸಿದ್ದಾರೆ. ದುರ್ಗಾಚಾರ್ಯರು **ಇಯಂ ಚ ಮಧ್ಯಮಾ ಮೋಘಸಂಶ್ರಯಾತ್** ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ಏತಾ ಉತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ |**
**ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀರ್ಯಂತಿ ಮಾತರಃ ||**
(ಋ. ಸಂ. ೧-೯೨-೧)

ಈ ಋಕ್ಕಿನಲ್ಲಿ ಉಷೋದೇವಿಯ ರಶ್ಮಿಗಳು ಉದಯವನ್ನು ಹೊಂದಿದ ಸೂರ್ಯನ ಕಿರಣಗಳೊಂದಿಗೆ ಸೇರಿ ಪ್ರಕಾಶಿಸುತ್ತವೆ ಎಂದು ವರ್ಣಿಸಿದೆ.

**ಬೃಹಸ್ಪತಿಂ**—ಯಾಸ್ಕರು **ಬೃಹಸ್ಪತಿಃ ಬೃಹತಃ ಪತಿಃ ಪಾಲಯಿತಾ ವಾ** | ಎಂದು ವ್ಯಾಖ್ಯಾನಮಾಡಿ,

**ಅಶ್ನಾಪಿನದ್ಧಂ ಮಧು ಪರ್ಯಪಶ್ಯನ್ ಮತ್ಸ್ಯಂ ನ ದೀನ ಉದನಿ ಕ್ಷಿಯಂತಂ |**
**ನಿಷ್ಟಜ್ಜಭಾರ ಚಮಸಂ ನ ವೃಕ್ಷಾತ್ ಬೃಹಸ್ಪತಿರ್ವಿರವೇಣಾ ವಿಕೃತ್ಯ ||**
(ಋ. ಸಂ. ೧೦-೬೮-೮)

ಈ ಋಕ್ಕನ್ನು ಉದಹರಿಸಿದ್ದಾರೆ. ದುರ್ಗಾಚಾರ್ಯರು— **ಬೃಹತಃ ಮಹತೋಽಸ್ಯ ಜಗತಃ ಉದಕಸ್ಯ ವಾ ಪಾತಾ ರಕ್ಷಿತಾ ಪಾಲಯಿತಾ ರಕ್ಷಿತ್ರೈವ । ಉದಕನಿರ್ಹರಣಾತ್ ಮಧ್ಯಮಃ** (ನಿ. ೧೦-೧೨) ಮಹತ್ತಾದ ಜಗತ್ತನ್ನೂ ಅಥವಾ ಉದಕವನ್ನು ರಕ್ಷಿಸುವ ದೇವನೆಂದೂ, ಮೇಘಗಳಿಂದ ಉದಕವು ವೃಷ್ಟಿಗೆ ಅನುಕೂಲವಾಗುವಂತೆ ಮಾಡುವುದರಿಂದ ಮಧ್ಯಮಸ್ಥಾನದೇವನಾಗಿರುವನೆಂದೂ ವಿವರಿಸಿದ್ದಾರೆ.

**ದೇವಂ ಸವಿತಾರಂ—ದ್ಯೋತಮಾನಂ ಜಗತಃ ಪ್ರೇರಕಂ ದೇವಂ** । ತೇಜಸ್ಸುಗಳಿಂದ ಬೆಳಗುತ್ತಿರುವ ಮತ್ತು ಜಗತ್ತಿನಲ್ಲಿರುವ ಆಯಾಯಾ ಪ್ರಾಣಿಗಳನ್ನು ಅವರವರ ವ್ಯವಹಾರಾನುಕೂಲವಾಗಿರುವಂತೆ ಪ್ರೇರಿಸುವ ದೇವನು ಸವಿತೃವಾಗಿರುವನು ಎಂದು ಸಾಯಣರು ವಿವರಿಸಿದ್ದಾರೆ.

ಯಾಸ್ಕರು— **ಸವಿತಾ ವ್ಯಾಖ್ಯಾತಃ ತಸ್ಯ ಕಾಲೋ ಯದಾ ದ್ಯೌರಪಹತತಮಸ್ಕಾ ಕೀರ್ಣರಶ್ಮಿರ್ಭವತಿ** ಎಂದು ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು—

> **ಯಸ್ಮಿನ್ಕಾಲೇ ದ್ಯೌರೇವ ಅಪಹತತಮಸ್ಕಾ ಭವತಿ ಪೃಥಿವ್ಯಾಂ ತಮೋ ಭವತಿ ದಿವ್ಯಪಹತೇತಮಸಿ ವಿಕ್ಷಿಪ್ತಾ ಅಸ್ಯಾಂ ರಶ್ಮಯೋ ಭವಂತಿ ಸ ಸಾವಿತ್ರಃ ಕಾಲಃ ತಸ್ಮಿನ್ಕಾಲೇ-ಆದಿತ್ಯಃ ಸವಿತೋಚ್ಯತೇ ॥**

ಅಂತರಿಕ್ಷದಲ್ಲಿ ಕತ್ತಲೆಯು ನಾಶವಾಗಿ, ಭೂಮಿಯಲ್ಲಿ ಕತ್ತಲೆಯು ತುಂಬಿರುವಾಗ ಬೆಳಕನ್ನು ಬೀರುವ ಆದಿತ್ಯನ ಕಿರಣಗಳು ವ್ಯಾಪಿಸುವ ಕಾಲವು ಸವಿತೃದೇವನಿಗೆ ಸಂಬಂಧಿಸಿರುವುದರಿಂದ ಆದಿತ್ಯನೇ ಸವಿತೃಶಬ್ದದಿಂದ ವ್ಯಪದಿಷ್ಟನಾಗಿರುವನೆಂದು ಅರ್ಥವನ್ನು ವಿವರಿಸಿದ್ದಾರೆ.

**ಅಶ್ವಿನಾ—ಅಶ್ವಿನೀದೇವೌ** । ಯಾಸ್ಕರು ಅಶ್ವಿನೀಶಬ್ದಾರ್ಥವನ್ನು ವಿವರಿಸಿದ್ದಾರೆ.—

> **ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವಿನಾವಶ್ವೈರಿತ್ಯೌರ್ಣವಾಭಃ । ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ।**

ಎಲ್ಲವನ್ನೂ ಉದಕಗಳಿಂದಲೂ, ಬೆಳಕಿನಿಂದಲೂ ವ್ಯಾಪಿಸಿರುವ ದೇವತೆಗಳು ಅಶ್ವಿನೀದೇವತೆಗಳೆಂದು ಹೇಳಿದೆ ಔರ್ಣವಾಭಜಟ್ಟರೆಂಬ ಆಚಾರ್ಯರು ಅಶ್ವಗಳಿಂದ ಗತ್ತನ್ನು ವ್ಯಾಪಿಸಿರುವನೆಂದು ಹೇಳಿದ್ದಾರೆ. ಕೆಲವರು ದ್ಯಾವಾಪೃಥಿವಿಗಳಿಗೆ ಅಶ್ವಿನೀದೇವತೆಗಳೆಂದು ಹೆಸರು ಎಂದು ವರ್ಣಿಸಿದ್ದಾರೆ. ಅಹೋರಾತ್ರಿಗಳು ಅಶ್ವಿನೀದೇವತೆಗಳೆಂದು ಕೆಲವರೂ, ಸೂರ್ಯ-ಚಂದ್ರರೇ ಅಶ್ವಿನೀದೇವತೆಗಳೆಂದು ಕೆಲವರೂ, ಹೇಳುತ್ತಾರೆ. ಇತಿಹಾಸವನ್ನು ಹೇಳುವವರು ಪುಣ್ಯಶಾಲಿಗಳಾದ ಇಬ್ಬರು ರಾಜರು ಅಶ್ವಿನೀದೇವತೆಗಳಾಗಿರುತ್ತಾರೆಂದು ವರ್ಣಿಸಿದ್ದಾರೆ ಎಂದು ಮತಾಂತರಗಳನ್ನು ವಿವರಿಸಿದೆ. ನಿರುಕ್ತಕಾರರು ದ್ಯುಸ್ಥಾನದೇವತೆಗಳ ಮಧ್ಯದಲ್ಲಿ ಪಾಠಮಾಡಿರುವಕಾರಣ ಇವರನ್ನು ದ್ಯುಸ್ಥಾನದೇವತೆಗಳನ್ನಾಗಿ ನಿರ್ವಚನಮಾಡಿದೆ.

**ಭಗಂ—ಸೂರ್ಯಂ** । ನಿರುಕ್ತಕಾರರು—

> **ಪ್ರಾತರ್ಜಿತಂ ಭಗಮುಗ್ರಂ ಹುವೇಮ ವಯಂ ಪುತ್ರಮದಿತೇರ್ಯೋ ವಿಧರ್ತಾ ।**
> **ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ ॥**
> (ಋ. ಸಂ. (೭-೪೧-೨)

ಇಲ್ಲಿ ಭಗಶಬ್ದಕ್ಕೆ ಸೂರ್ಯನೆಂದು ಅರ್ಥವನ್ನು ಹೇಳಿದ್ದಾರೆ. **ಸಾವಿತ್ರಾತ್ಕಾಲಾತ್ ಪರತಃ ಏತಮುತ್ತಮಂ ಜ್ಯೋತಿಃ ಭಗಾಖ್ಯಂ ಭವತಿ** ಎಂದು ಸಾವಿತ್ರಕಾಲಾನಂತರದಲ್ಲಿ ಇರುವ ಪ್ರಕಾಶವನ್ನು ಭಗಶಬ್ದದಿಂದ ವಿವರಿಸಿರುವರೆಂದು ದುರ್ಗಾಚಾರ್ಯರು ಅರ್ಥವನ್ನು ವರ್ಣಿಸಿದ್ದಾರೆ.

**ವಸೂನ್—ಅಷ್ಟೌ ವಸೂರ್** | **ವಸವಃ ಯದ್ವಿವಸತೇ ಸರ್ವಮಗ್ನಿರ್ವಸುಭಿಃ ವಾಸವ ಇತಿ ಸಮಾಖ್ಯಾ ತಸ್ಮಾತ್ ಪೃಥಿವೀಸ್ಥಾನಾಃ | ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾನ್ಮಧ್ಯಮಸ್ಥಾನಾಃ | ವಸವ ಆದಿತ್ಯರಶ್ಮಯೋ ವಿವಾಸನಾತ್ತಸ್ಮಾತ್ ದ್ಯುಸ್ಥಾನಾಃ |** (ನಿ. ೧೨-೪೧)

**ಸುಗಾ ವೋ ದೇವಾಃ ಸುಪಥಾ ಅಕರ್ಮ ಯ ಆಜಗ್ಮುಃ ಸವನಮಿದಂ ಜುಷಾಣಃ |**
**ಜಕ್ಷಿವಾಂಸಃ ಪಪಿವಾಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ||**

(ಯ. ವಾ. ಸಂ. ೮-೧೮)

**ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ |**
**ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನ ಅಸ್ಯ ||**

(ಋ. ಸಂ. ೭-೩೯-೩)

ಅಗ್ನಿಯು ಸರ್ವವನ್ನೂ ವ್ಯಾಪಿಸಿರುವುದರಿಂದ ವಸು ಶಬ್ದದಿಂದ ವ್ಯಪದಿಷ್ಟನಾಗಿರುವನು. ಇದರಿಂದ ವಸುಗಳು ಪೃಥಿವೀಸ್ಥಾನವುಳ್ಳವರಾಗಿರುವರು. ಇಂದ್ರನು ವಸುಗಳಿಂದ ಕೂಡಿರುವವನಾದುದರಿಂದ ವಸುಗಳು ಮಧ್ಯಮಸ್ಥಾನವುಳ್ಳವರಾಗಿರುವರು. ಆದಿತ್ಯರಶ್ಮಿಗಳು ವಸು ಶಬ್ದದಿಂದ ವ್ಯಪದಿಷ್ಟವಾಗಿ ವ್ಯಾಪಿಸಿರುವುದರಿಂದ ದ್ಯುಸ್ಥಾನವಾಗಿರುವುವು ಎಂದು ವಸು ಶಬ್ದಾರ್ಥವನ್ನು ಯಾಸ್ಕರು ವಿವರಿಸಿ ಅವರಿಗೆ ಪೃಥಿವೀ ಅಂತರಿಕ್ಷ ಸ್ವರ್ಗವೆಂಬ ಮೂರು ಸ್ಥಾನಗಳಲ್ಲಿಯೂ ವಾಸಸ್ಥಾನವು ಕ್ಲಪ್ತವಾಗಿರುವುದೆಂದು ವರ್ಣಿಸಿದ್ದಾರೆ. ಸಾಯಣರು ವಸುಗಳು ಎಂಟು ಜನರು ಇರುವರೆಂದು **ಅಷ್ಟೌ ವಸವಃ** ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ತೈತ್ತಿರೀಯಾರಣ್ಯಕದಲ್ಲಿ ಈ ವಸುಗಳ ಹೆಸರುಗಳು ಉಕ್ತವಾಗಿವೆ.

**ರುದ್ರಾಃ—ಏಕಾದಶ ರುದ್ರಾಃ** | ನಿರುಕ್ತಕಾರರು

**ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ |**
**ಇಯಂ ವೋ ಅಸ್ಮತ್ಪ್ರತಿ ಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ||**

(ಋ. ಸಂ. ೫-೫೭-೧)

ಈ ಋಕ್ಕನ್ನು ಉದಹರಿಸಿ, ರುದ್ರರು ಪರಮೈಶ್ವರ್ಯಭಾವದಿಂದ ಇರುತ್ತಾರೆಂದೂ ಇಂದ್ರನ ಸಂಗಡ ಯಾಗಕ್ಕಾಗಿ ಬರುವವರೆಂದೂ ರುದ್ರರ ಪ್ರಭಾವವನ್ನು ವರ್ಣಿಸಿದ್ದಾರೆ. ಸಾಯಣರು ಈ ರುದ್ರರು ಹನ್ನೊಂದು ಜನರಿರುವರೆಂದು ವ್ಯಾಖ್ಯಾನವನ್ನು ಮಾಡಿದ್ದಾರೆ.

**ಆದಿತ್ಯಾಃ—ದ್ವಾದಶಾದಿತ್ಯಾಃ** | ಆದಿತ್ಯಶಬ್ದಾರ್ಥವು ನಿರುಕ್ತದಲ್ಲಿ ಉಕ್ತವಾಗಿದೆ.

**ಆದಿತ್ಯಃ ರಸಾನಾದತ್ತೇ ಭಾಸಂ ಜ್ಯೋತಿಷಾಮಾದೀಪ್ತೋ ಭಾಸೇತಿ ವಾ ಅದಿತೇಃ ಪುತ್ರ ಇತಿ ವಾ ( ನಿ. ೨-೧೩) ಏವಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ ಭವಂತಿ | ತದ್ಯಥಾ ಏತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇತಿ | (ನಿ. ೨-೧೩) ಸ್ವರಾದಿತ್ಯೋ ಭವತಿ | ಪೃಶ್ನಿರಾದಿತ್ಯೋ ಭವತಿ | ನಾಕ ಆದಿತ್ಯೋ ಭವತಿ | ಗೌರಾದಿತ್ಯೋ ಭವತಿ | ವಿಷ್ಟಬಾದಿತ್ಯೋ ಭವತಿ | ನಭ ಆದಿತ್ಯೋ ಭವತಿ | (ನಿ ೨-೧೪)**

ಉದಕಗಳನ್ನು ಹೀರುವುದರಿಂದಲೂ ಇತರ ಪ್ರಕಾಶಗಳನ್ನು ಕಡಿಮೆಮಾಡುವುದರಿಂದಲೂ, ಕಾಂತಿಯಿಂದ ಬೆಳಗುತ್ತಿರುವುದರಿಂದಲೂ, ಅಥವಾ ಅದಿತೀದೇವಿಯ ಪುತ್ರನಾಗಿರುವುದರಿಂದಲೂ ಆದಿತ್ಯನೆಂದು ಹೆಸರು ಪ್ರಸಿದ್ಧವಾಗಿರುವುದು

ಎಂದು ವಿವರಿಸಿ, ಇತರ ದೇವತೆಗಳಿಗೂ ಅಂದರೆ, ಮಿತ್ರ, ಮಿತ್ರಾವರುಣರು, ಅರ್ಯಮಾ, ದಕ್ಷ, ಭಗ, ಅಂಶ ಎಂಬ ದೇವತೆಗಳಿಗೂ ಆದಿತ್ಯಶಬ್ದದಿಂದಲೇ ವ್ಯವಹಾರವಿರುವುದು ಎಂದು ವ್ಯಾಖ್ಯಾನಮಾಡಿ ಈ ಅಂಶದಲ್ಲಿ ಪ್ರತ್ಯೇಕವಾದ ಉದಾಹರಣೆಗಳನ್ನೂ ಹೇಳಿದ್ದಾರೆ.

ಪೃಥಿವೀಸಂಬಂಧವಾದ ಮತ್ತು ಅಂತರಿಕ್ಷಸಂಬಂಧವಾದ ಉದಕಗಳನ್ನು ಹೀರುವುದು, ಗ್ರಹನಕ್ಷತ್ರಾದಿಗಳ ತೇಜಸ್ಸನ್ನು ತನ್ನ ಪ್ರಕಾಶದಿಂದ ಕಡಿಮೆ ಮಾಡುವುದು, ಕಾಂತಿಯಿಂದ ಕೂಡಿರುವುದು ಎಂಬ ಧರ್ಮಗಳಿಂದ ಕೂಡಿರುವ ಕಾರಣ ಸ್ವರ್ಗಕ್ಕೂ ಆದಿತ್ಯನೆಂದು ಹೆಸರು ಇರುವುದು. ಹೀಗೆಯೇ **ಪೃಶ್ನಿ, ನಾಕ** (ದ್ಯುಲೋಕ) **ದ್ಯೌಃ, ವಿಷ್ಟಪ್, ನಭಃ** ಇವುಗಳೆಲ್ಲವೂ ಆದಿತ್ಯಶಬ್ದದಿಂದಲೇ ವ್ಯವಹೃತವಾಗಿರುತ್ತವೆ ಎಂದೂ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಆದಿತ್ಯರು ಹನ್ನೆರಡು ಜನರು ಇರುವರೆಂದು ಅರ್ಥವನ್ನು ವಿವರಿಸಿದ್ದಾರೆ.

**ಹೇ ದಧಿಕ್ರಾವಾದಯಃ ಸರ್ವೇ ದೇವಾಃ ಹೋತಾ ಅಹಂ ಸರ್ವಾನ್ ಹವಿರ್ಭುಜಃ ಯುಷ್ಮಾನ್ ಅಸ್ಮದೀಯೇ ಕರ್ಮಣಿ ಹವಿಸ್ಸ್ವೀಕರಣಾರ್ಥಮಾಹ್ವಯಾಮಿ**-ಹೋತೃವಾಗಿರುವ ಋತ್ವಿಜನು ಯಜ್ಞಕರ್ಮದಲ್ಲಿ ದಧಿಕ್ರಾವನೇ ಮೊದಲಾದ ದೇವತೆಗಳೆಲ್ಲರನ್ನೂ ಸಂಬೋಧಿಸಿ ಹವಿಸ್ಸನ್ನು ಭೋಜನಮಾಡುವ ಈ ದೇವತೆಗಳೆಲ್ಲರೂ ಯಜ್ಞದಲ್ಲಿ ಅರ್ಪಿಸುವ ತಮ್ಮ ತಮ್ಮ ಹವಿಸ್ಸುಗಳನ್ನು ಸ್ವೀಕರಿಸುವುದಕ್ಕಾಗಿ ಬರಲಿ ಎಂದು ಎಲ್ಲರನ್ನೂ ಆಹ್ವಾನಿಸಿರುವನು ಎಂದು ಅರ್ಥವು ವರ್ಣಿತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ದಧಿಕ್ರಾಂ**—ದಧಾತೀತಿ ದಧಿಃ. ಡುಧಾಞ್ ಧಾರಣಪೋಷಣಯೋಃ **ಆದೃಗಮಹನ**—(ಪಾ. ಸೂ. ೩-೧-೧೭೧) ಎಂಬುದರಿಂದ ಕಿ ಪ್ರತ್ಯಯ. ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವಾದಿ. ಕಿತ್ತಾದುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ದಧಿ ಎಂದು ರೂಪವಾಗುತ್ತದೆ. ಇದು ಉಪಪದವಾಗಿರುವಾಗ **ಜನಸನಖನ**—(ಪಾ, ಸೂ. ೩-೨-೬೭) ಎಂಬುದರಿಂದ ಕ್ರಮು ಧಾತುವಿಗೆ ವಿಟ್ ಪ್ರತ್ಯಯ. **ವಿಡ್ವನೋರನುನಾಸಿಕಸ್ಯಾತ್** (ಪಾ. ೬-೪-೪೧) ಎಂಬುದರಿಂದ ವಿಟ್ ಪರವಾದಾಗ ಧಾತುವಿಗೆ ಆತ್ವ. ವಿಟನಲ್ಲಿ ಸರ್ವಲೋಪವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ದೇವೀಂ**—ದೇವಸ್ಯ ಪತ್ನೀ ದೇವೀ. **ಪುಂಯೋಗಾದಾಖ್ಯಾಯಾಂ** (ಪಾ. ಸೂ. ೪-೧-೪೮) ಎಂಬುದರಿಂದ ದೇವಶಬ್ದಕ್ಕೆ ಙೀಷ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಬೃಹಸ್ಪತಿಂ**—**ತದ್‌ಬೃಹತೋಃ ಕರಪತ್ಯೋಶ್ಚೋರದೇವತಯೋಃ ಸುಟ್ ತಲೋಪಶ್ಚ** ಎಂಬ ವಚನದಿಂದ ಬೃಹತ್ ಶಬ್ದಕ್ಕೆ ಪತಿಶಬ್ದ ಪರವಾಗಿ ದೇವತಾ ಎಂಬ ಅರ್ಥ ತೋರುವುದರಿಂದ ಬೃಹತ್ ಎಂಬಲ್ಲಿರುವ ತಕಾರಕ್ಕೆ ಲೋಪ. ಸುಡಾಗಮ. **ಉಭೇ ವನಸ್ಪತ್ಯಾದಿಷು ಯುಗಪತ್** (ಪಾ. ಸೂ. ೬-೨-೧೪೦) ಎಂಬುದರಿಂದ ಉಭಯಪದಗಳಲ್ಲಿಯೂ ಆದ್ಯುದಾತ್ತಸ್ವರ ಬರುತ್ತದೆ.

**ಸವಿತಾರಂ**—ಷೂ ಪ್ರೇರಣೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಅದಕ್ಕೆ ಇಡಾಗಮ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಅಶ್ವಿನಾ—ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ.

**ರುದ್ರಾ ಆದಿತ್ಯಾನ್**—ರುದ್ರಾನ್ ಎಂಬಲ್ಲಿ ಶಸಿನ ನಕಾರಕ್ಕೆ ಅಟ್ ಪರವಾದುದರಿಂದ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೮) ಎಂಬುದರಿಂದ ರುತ್ವ. **ಆತೋಽಟಿನಿತ್ಯಂ** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವದ ಆಕಾರಕ್ಕೆ ಅನುನಾಸಿಕಭಾವ. **ಭೋಭಗೋ ಅಘೋ ಅಪೂರ್ವಸ್ಯಯೋಽಶಿ** (ಪಾ. ಸೂ. ೮-೩-೧೭) ಎಂಬುದರಿಂದ ರುವಿಗೆ ಯಾದೇಶ. **ಲೋಪಃ ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಎಂಬುದರಿಂದ ಬಂದಿರುವ ಯಕಾರಕ್ಕೆ ಲೋಪ. **ಪೂರ್ವತ್ರಾಸಿದ್ಧಂ** ಎಂಬುದರಿಂದ ಈ ಲೋಪ ಅಸಿದ್ಧಭಾವವಿರುವುದರಿಂದ ಸ್ವರಸಂಧಿ (ಸವರ್ಣದೀರ್ಘ) ಬರುವುದಿಲ್ಲ ಹೀಗೆಯೇ ಆದಿತ್ಯಾನ್ ಎಂಬಲ್ಲಿಯೂ ಪ್ರಕ್ರಿಯೆಗಳು ಬರುತ್ತವೆ. ಒಂದೇ ಪಾದದಲ್ಲಿ ಈರೀತಿ ಆಕಾರದ ಪರದಲ್ಲಿ ನಕಾರ ಬಂದು ಅದಕ್ಕೆ ಅಟ್ ಪರವಾದರೆ ರುತ್ವ ಯತ್ವಪೂರ್ವಸವರ್ಣ ಅನುನಾಸಿಕಾದೇಶಗಳು ಬರುತ್ತವೆ.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು. ಲಟ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಟಿತ ಆತ್ಮನೇ**—ಎಂಬುದರಿಂದ ಅದಕ್ಕೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ. (ಉ) ಪೂರ್ವರೂಪ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. **ಅಚಿಶ್ನು-ಧಾತುಭ್ರುವಾಂ** ಎಂಬುದರಿಂದ ಉವಙಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

# ಇಪ್ಪತ್ತೊಂದನೆಯ ಸೂಕ್ತವು

---

**ಇಮಂ ನ ಇತಿ ಪಂಚರ್ಚಂ ನವಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಇಮಂ ನ ಉಪಾದ್ಯೇ ಅನುಷ್ಟುಭೌ ವಿರಾಡ್ರೂಪಾ ಸತೋ ಬೃಹತೀ ಅಂತ್ಯೇತಿ । ದ್ವಿತೀಯಾತೃತೀಯೇ ಅನುಷ್ಟುಭೌ ಪಂಚಮೀ ವಿರಾಡ್ರೂಪಾ ಸತೋ ಬೃಹತೀ ಚ । ಅನುಕ್ತತ್ವಾತ್ಪ್ರಥಮಾಚತುರ್ಥ್ಯೌ ತ್ರಿಷ್ಟುಭೌ । ಅಸ್ಯಾಪಿ ಗಾಥೀ ಋಷಿಃ ॥ ಪಶೌ ಸ್ತೋಕಾನುವಚನ ಇದಂ ಸೂಕ್ತಂ । ಸೂತ್ರಿತಂ ಚ । ಜುಷಸ್ವ ಸಪ್ರಥಸ್ತಮಮಿಮಂ ನೋ ಯಜ್ಞಂ । ಆ. ೩-೪ । ಇತಿ ॥**

**ಅನುವಾದವು—ಇಮಂ ನ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ **ಇಮಂ ನ ಉಪಾದ್ಯೇ ಅನುಷ್ಟುಭೌ ವಿರಾಡ್ರೂಪಾ-ಸತೋ ಬೃಹತೀ ಚಾಂತ್ಯಾ** ಎಂದು ಹೇಳಿರುವುದು. ಈ ಸೂಕ್ತದ ಎರಡು ಮತ್ತು ಮೂರನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು; ಐದನೆಯ ಋಕ್ಕು ವಿರಾಡ್ರೂಪಾ ಸತೋಬೃಹತೀ ಎಂಬ ಛಂದಸ್ಸಿನದು. ಮೊದಲನೆಯ ಮತ್ತು ನಾಲ್ಕನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತಕ್ಕೂ ಗಾಥೀ ಎಂಬುವನೇ ಋಷಿಯು. ಪಶುಯಾಗದಲ್ಲಿ ಸ್ತೋಕಾನುವಚನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ-**ಜುಷಸ್ವ ಸಪ್ರಥಸ್ತಮಮಿಮಂ ನೋ ಯಜ್ಞಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೪)

## ಸೂಕ್ತ—೨೧

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೧ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫

ಋಷಿಃ—ಗಾಥೀ ॥

ದೇವತಾ—ಅಗ್ನಿಃ ॥

ಛಂದಃ— ೧,೪. ತ್ರಿಷ್ಟುಪ್ ॥ ೨-೩. ಅನುಷ್ಟುಪ್ ।೫. ವಿರಾಡ್ರೂಪಾ ಸತೋಬೃಹತೀ॥

ಸಂಹಿತಾಪಾಠಃ

ಇಮಂ ನೋ ಯಜ್ಞಮಮೃತೇಷು ಧೇಹೀಮಾ ಹವ್ಯಾ ಜಾತವೇದೋ ಜುಷಸ್ವ ।
ಸ್ತೋಕಾನಾಮಗ್ನೇ ಮೇದಸೋ ಘೃತಸ್ಯ ಹೋತಃ ಪ್ರಾಶಾನ ಪ್ರಥಮೋ ನಿಷದ್ಯ ॥

ಪದಪಾಠಃ

ಇಮಂ । ನಃ । ಯಜ್ಞಂ । ಅಮೃತೇಷು । ಧೇಹಿ । ಇಮಾ । ಹವ್ಯಾ । ಜಾತऽವೇದಃ । ಜುಷಸ್ವ ।
ಸ್ತೋಕಾನಾಂ । ಅಗ್ನೇ । ಮೇದಸಃ । ಘೃತಸ್ಯ । ಹೋತರಿತಿ । ಪ್ರ । ಅಶಾನ । ಪ್ರಥಮಃ । ನಿऽಸದ್ಯ ॥

ಸಾಯಣಭಾಷ್ಯಂ

ಗಾಥೀ ಪ್ರಾರ್ಥಯತೇ । ಹೇ ಜಾತವೇದೋ ಜಾತಪ್ರಜ್ಞಾಗ್ನೇ ನೋಽಸ್ಮಾಕಂ ಸಂಬಂಧಿನಮಿಮಂ ಯಜ್ಞಂ ಪಶುಯಾಗಮಮೃತೇಷು ಮರಣಧರ್ಮರಹಿತೇಷು ಯಷ್ಟವ್ಯದೇವೇಷು ಧೇಹಿ । ತದಧೀನತಯಾ ಸಮರ್ಪಯ । ತ್ವಂ ಚೇಮಾ ಇಮಾನ್ಯಸ್ಮಾಭಿರ್ದೀಯಮಾನಾನಿ ಹವ್ಯಾ ಹವ್ಯಾನಿ ಹವೀಂಷಿ ಜುಷಸ್ವ । ಸೇವಸ್ವ । ಕಿಂಚ ಹೋತರ್ದೇವಾನಾಮಾಹ್ವಾತಃ । ಅಗ್ನಿರ್ವೈ ದೇವಾನಾಂ ಹೋತೇತ್ಯಾಮ್ನಾನಾತ್ । ತಾದೃಶ ಹೇ ಅಗ್ನೇ ನಿಷದ್ಯ ವೇದ್ಯಾಮುಪವಿಶ್ಯ ಪ್ರಥಮಃ ಸರ್ವೇಷಾಮೃತ್ವಿಜಾಮಾದಿಮಃ ಸನ್ ಮೇದಸೋ ವಪಾಖ್ಯಸ್ಯ ಹವಿಷೋ ಘೃತಸ್ಯಾಜ್ಯಸ್ಯ ಚ ಸ್ತೋಕಾನಾಂ । ದ್ವಿತೀಯಾರ್ಥೇ ಷಷ್ಠೀ । ಮೇದೋಘೃತಯೋರ್ಯೇ ಸ್ತೋಕಾ ಬಿಂದವೋ ವಿದ್ಯಂತೇ ತಾನ್ಪ್ರಕರ್ಷೇಣಾಶಾನ । ಭಕ್ಷಯ । ಪಿಬೇತ್ಯರ್ಥಃ ॥ ಧೇಹಿ । ದಧಾತೇರ್ಲೋಟಿ ರೂಪಂ । ಜುಷಸ್ವ । ಜುಷೀ ಪ್ರೀತಿಸೇವನಯೋರಿತ್ಯಸ್ಯ ಲೋಟ್ಯಾತ್ಮನೇಪದಿನೋ ರೂಪಂ । ಅಶಾನ । ಅಶ ಭೋಜನ ಇತ್ಯಸ್ಯ ಲೋಟಿ ಹಲಃ ಶ್ನಃ ಶಾನಜ್ಝೌ । ಪಾ. ೩-೧-೮೩ । ಇತಿ ಶಾನಜಾದೇಶಃ । ಪಶ್ಚಾದತೋ ಹೇರಿತಿ ಹೇರ್ಲುಕ್ । ನಿಘಾತಃ । ಪ್ರಥಮಃ । ಪ್ರಥ ಪ್ರಖ್ಯಾನೇ । ಪ್ರಥಮಃ ಪ್ರಥಂತೇಽಸ್ಮಾದ್ದ್ವಿತೀಯಾದಯ ಇತಿ । ಪ್ರಥೇರಮಚ್ । ಉ. ೫-೬೮ । ಇತ್ಯಮಚ್ । ಚಿತ್ತ್ವಾದಂತೋದಾತ್ತಃ । ನಿಷದ್ಯ । ಷದಲೃ ವಿಶರಣಗತ್ಯವಸಾದನೇಷ್ವಿತ್ಯಸ್ಯ ಲ್ಯಪಿ ರೂಪಂ । ಸದೇರಪ್ರತೇರಿತಿ ಷತ್ವಂ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥

ಪ್ರತಿಪದಾರ್ಥ

**ಜಾತವೇದಃ**—ಜಾತಪ್ರಜ್ಞನಾದ ಅಗ್ನಿಯೇ, | **ನಃ**—ನಮ್ಮ | **ಇಮಂ ಯಜ್ಞಂ**—ಈ ಪಶುಯಾಗವನ್ನು | **ಅಮೃತೇಷು**—ಅಮರ್ತ್ಯರಾದ ದೇವತೆಗಳಲ್ಲಿ | **ಧೇಹಿ**—ಸಮರ್ಪಿಸು | **ಇಮಾ**—ನಮ್ಮಿಂದ ದತ್ತವಾದ | **ಹವ್ಯಾ**—ಹವಿಸ್ಸುಗಳನ್ನು | **ಜುಷಸ್ವ**—ಸೇವಿಸು. | **ಹೋತಃ**—ದೇವತೆಗಳನ್ನು ಕರೆಯತಕ್ಕ | **ಅಗ್ನೇ**—ಎಲೈ ಅಗ್ನಿಯೇ | **ನಿಷದ್ಯ**—ಈ ವೇದಿಯಲ್ಲಿ ಕುಳಿತು | **ಪ್ರಥಮಃ**—ಋತ್ವಿಕ್ಕುಗಳಿಗೆಲ್ಲಾ ಮೊದಲನೆಯವನಾಗಿ | **ಮೇದಸಃ**—ವಪಾರೂಪವಾದ ಹವಿಸ್ಸಿನ (ಮತ್ತು) | **ಘೃತಸ್ಯ**—ಆಜ್ಯದ | **ಸ್ತೋಕಾನಾಂ**—ಬಿಂದುಗಳನ್ನು | **ಪ್ರ**—ಅತಿಶಯವಾಗಿ | **ಅಶಾನ**—ಭಕ್ಷಿಸು.

ಭಾವಾರ್ಥ

ಜಾತಪ್ರಜ್ಞನಾದ ಎಲೈ ಅಗ್ನಿಯೇ ನಮ್ಮ ಈ ಪಶುಯಾಗವನ್ನು ಅಮರ್ತ್ಯರಾದ ದೇವತೆಗಳಲ್ಲಿ ಸಮರ್ಪಿಸು. ನಮ್ಮಿಂದ ದತ್ತವಾದ ಹವಿಸ್ಸುಗಳನ್ನು ಸೇವಿಸು. ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕ ಅಗ್ನಿಯೇ, ನೀನೂ ಸಹ ಈ ವೇದಿಕೆಯಲ್ಲಿ ಕುಳಿತು ಋತ್ವಿಕ್ಕುಗಳಿಗೆಲ್ಲಾ ಮೊದಲನೆಯವನಾಗಿ ವಪಾರೂಪವಾದ ಈ ಹವಿಸ್ಸಿನ ಮತ್ತು ಆಜ್ಯದ ಬಿಂದುಗಳನ್ನು ಅತಿಶಯವಾಗಿ ಪಾನಮಾಡು.

English Translation

Convey our sacrifice, Jatavedas, to the immortals, and accept these oblations : Agni, invoker (of the gods), seated (on the altar) first partake of the drops of the marrow and the butter.

ವಿಶೇಷವಿಷಯಗಳು

ಜಾತವೇದಃ—ಈ ಪದಕ್ಕೆ ಜಾತಪ್ರಜ್ಞ ಎಂದು ಅರ್ಥವನ್ನು ಮಾಡಿದೆ. ಮತ್ತೂ ಅಗ್ನಿಯನ್ನು ಈ ಪದದಿಂದ ಸಂಬೋಧಿಸಿ, **ಅಸ್ಮಾಕಂ ಪಶುಯಾಗಂ ಮರಣಧರ್ಮರಹಿತೇಷು ಯುಷ್ಮನ್ಯದೇವೇಷು ತದಧೀನತಯಾ ಸಮರ್ಪಯ** ಯಜಮಾನರಾದ ನಾವು ಆಚರಿಸುವ ಪಶುಯಾಗವನ್ನು ಮರಣಧರ್ಮವಿಲ್ಲದಿರುವ ದೇವತೆಗಳಿಗೆ ಸಮರ್ಪಕವಾಗಿರುವಂತೆ ಅಗ್ನಿಯು ಒಪ್ಪಿಸಲಿ ಎಂದು ಆಶಿಸಿದೆ.

**ಇಮಾ ಹವ್ಯಾ ಜುಷಸ್ವ—ಇಮಾನಿ ಅಸ್ಮಾಭಿರ್ದೀಯಮಾನಾನಿ ಹವ್ಯಾನಿ ಹವೀಂಷಿ ಸೇವಸ್ವ** ಅಗ್ನಿಯು ಯಜಮಾನರಾದ ನಮ್ಮಿಂದ ಅರ್ಪಿತವಾಗಿರುವ ಹವಿಸ್ಸುಗಳನ್ನು ಸೇವಿಸಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.

**ಹೋತಃ**—ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ. "ಅಗ್ನಿರ್ವೈ ದೇವಾನಾಂ ಹೋತಾ" (ಐ.ಬ್ರಾ ೩-೧೪) ಅಗ್ನಿಯು ದೇವತೆಗಳನ್ನು ಯಾಗಕ್ಕಾಗಿ ಆಹ್ವಾನಮಾಡುವ ಹೋತೃವೆಂಬ ಋತ್ವಿಜನಾಗಿರುವನು ಎಂದು ಬೋಧಿಸುವ ಐತರೇಯಬ್ರಾಹ್ಮಣದ ವಾಕ್ಯವನ್ನು ಉದಹರಿಸಿ, **ದೇವಾನಾಂ ಆಹ್ವಾತಃ** ದೇವತೆಗಳನ್ನು ಆಹ್ವಾನಿಸುವವನು ಅಗ್ನಿಯು ಎಂದು ಅರ್ಥವನ್ನು ವಿವರಿಸಿದೆ.

**ಪ್ರಥಮಃ ಮೇಧಸಃ ಘೃತಸ್ಯ ಚ ಸ್ತೋಕಾನಾಂ ಅಶಾನ—ಸರ್ವೇಷಾಂ ಋತ್ವಿಜಾಂ ಆದಿಮಃ ಸನ್ ವಪಾಖ್ಯಸ್ಯ ಹವಿಷಃ ಆಜ್ಯಸ್ಯ ಚ ಬಿಂದೂನ್ ಭಕ್ಷಯ |**

ಅಗ್ನಿಯು ಋತ್ವಿಜರೆಲ್ಲರಿಗಿಂತಲೂ ಮೊದಲನೆಯವನಾಗಿ ಯಜ್ಞವೇದಿಕೆಯಲ್ಲಿ ಉಪವಿಷ್ಟನಾಗಿ ಪಶುವಿನ ವಪೆಯೆಂಬ ಹವಿಸ್ಸನ್ನೂ ಮೇದಸ್ಸು ಮತ್ತು ಆಜ್ಯ ಇವುಗಳ ಬಿಂದು (ಹನಿ)ಗಳನ್ನು ಭಕ್ಷಿಸಲಿ ಎಂದು ಯಜಮಾನನ ಆಶಂಸನೆಯು ಇಲ್ಲಿ ವರ್ಣಿತವಾಗಿದೆ.

**ಹವ್ಯಾ**—ಹವೀಂಷಿ ಯಾಸ್ಕರು,

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।**
**ಯೇ ಸುಕ್ರತವಶ್ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥**

(ಋ. ಸಂ. (೭–೨–೨)

ಈ ಋಕ್ಕನ್ನು ಉದಹರಿಸಿ ಹವ್ಯಾ ಎಂಬ ಪದಕ್ಕೆ ಹವೀಂಷಿ ಎಂದು ಅರ್ಥವನ್ನು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಹವ್ಯಾ**—**ಶೇಶ್ಛಂದಸಿ ಬಹುಲಂ** (ಪಾ. ಸೂ. ೬–೧–೭೦) ಎಂಬುದರಿಂದ ನಪುಂಸಕ ಬಹುವಚನದಲ್ಲಿ ಶಿಗೆ ಲೋಪ.

**ಜುಷಸ್ವ**—ಜುಷೀ ಪ್ರೀತಿಸೇವನಯೋಃ ಧಾತು. ಆತ್ಮನೇಪದಿ. ಲೋಟ್ ಮಧ್ಯಮಪುರುಷ ಏಕವಚನಾಂತ ರೂಪ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಶಾನ**—ಅಶ ಭೋಜನೇ. ಧಾತು. ಕ್ರ್ಯಾದಿ. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ ಬಂದಾಗ ಹಲಿನ ಪರದಲ್ಲಿ ಅದು ಬಂದುದರಿಂದ **ಹಲಃ ಶ್ನಃ ಶಾನಜ್ಝೌ** (ಪಾ. ಸೂ. ೩-೩-೮೩) ಎಂಬುದರಿಂದ ಅದಕ್ಕೆ ಶಾನಚಾದೇಶ. ಅದಂತದ ಪರದಲ್ಲಿ ಹಿ ಬಂದುದರಿಂದ **ಅತೋಹೇಃ** (ಪಾ. ಸೂ. ೬–೪–೧೦೫) ಎಂಬುದರಿಂದ ಹಿಗೆ ಲುಕ್. ಅಶಾನ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರಥಮಃ**—ಪ್ರಥ ಪ್ರಖ್ಯಾನೇ. ಧಾತು. ಪ್ರಥಮಃ ·ಪ್ರಥಂತೇ ಅಸ್ಮಾತ್ ,ದ್ವಿತೀಯಾದಯಃ (ಎರಡನೆ ಯವರಿಗಿಂತಲೂ ಪ್ರಸಿದ್ಧನಾದವನು.) **ಪ್ರಥೇರಮಚ್** (ಉ. ಸೂ. ೫–೭೪೬) ಎಂಬುದರಿಂದ ಅಮಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ನಿಷದ್ಯ**—ಷದ್‌ಲೃ ವಿಶರಣಗತ್ಯವಸಾದನೇಷು. ಧಾತು. **ಸಮಾಸೇನಞ್‌ಪೂರ್ವಾ**—(ಪಾ. ಸೂ. ೭–೧–೩೭) ಎಂಬುದರಿಂದ ಕ್ತ್ವಾಪ್ರತ್ಯಯ ಬಂದಾಗ ಅದಕ್ಕೆ ಲ್ಯಪ್ ಅದೇಶ. ಪ್ರತಿಭಿನ್ನವಾದ ಉಪಸರ್ಗದ ಪರದಲ್ಲಿರು ವುದರಿಂದ **ಸದಿರಪ್ರತೇಃ** (ಪಾ. ಸೂ. ೮-೩–೬೬) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬–೧–೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.]

———

ಸಂಹಿತಾಪಾಠಃ

ಘೃತವಂತಃ ಪಾವಕ ತೇ ಸ್ತೋಕಾಃ ಶ್ಚೋತಂತಿ ಮೇದಸಃ ।
ಸ್ವಧರ್ಮನ್ದೇವವೀತಯೇ ಶ್ರೇಷ್ಠಂ ನೋ ಧೇಹಿ ವಾರ್ಯಂ ॥ ೨ ॥

ಪದಪಾಠಃ

ಘೃತಽವಂತಃ । ಪಾವಕ । ತೇ । ಸ್ತೋಕಾಃ । ಶ್ಚೋತಂತಿ । ಮೇದಸಃ ।
ಸ್ವಽಧರ್ಮನ್ । ದೇವಽವೀತಯೇ । ಶ್ರೇಷ್ಠಂ । ನಃ । ಧೇಹಿ । ವಾರ್ಯಂ ॥ ೨ ॥

ಸಾಯಣಭಾಷ್ಯಂ

ಪಾವಕ ಪಾಪಶೋಧಕ ಹೇ ಅಗ್ನೇ ಸ್ವಧರ್ಮನ್ ಸ್ವಾಯತ್ತಧರ್ಮಕೇ ಸಾಂಗೇಽಸ್ಮಿನ್ಯಜ್ಞೇ ತೇ ತವ ಭಕ್ಷಣಾರ್ಥಂ ದೇವವೀತಯೇ ಯಜನೀಯದೇವಾನಾಂ ಭಕ್ಷಣಾರ್ಥಂ ಚ ಘೃತವಂತೋ ಘೃತೋಪೇತಾ ಮೇದಸೋ ಮೇದೋರೂಪಸ್ಯ ಹವಿಷಃ ಸ್ತೋಕಾ ಬಿಂದವಃ ಶ್ಚೋತಂತಿ । ಕ್ಷರಂತಿ । ಅಥವಾ ದೇವವೀತಯೇ ದೇವಸ್ಯ ತವ ವೀತಯ ಇತಿ ಯೋಜನೀಯಂ। ತಸ್ಮಾದ್ವಾರ್ಯಂ ವರಣೀಯಂ ಸಂಭಜನೀಯಂ ಶ್ರೇಷ್ಠಮುತ್ತಮಂ ಧನಂ ನೋಽಸ್ಮಭ್ಯಂ ಧೇಹಿ । ಪ್ರಯಚ್ಛ ॥ ಶ್ಚೋತಂತಿ । ಶ್ಚುತಿರ್ ಕ್ಷರಣ ಇತ್ಯಸ್ಯ ಲಟಿ ರೂಪಂ । ಸ್ವಧರ್ಮನ್ । ಸ್ವೇಽಂಗಭೂತಾ ಧರ್ಮಾಣೋ ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ದೇವವೀತಯೇ । ದೇವಾನಾಂ ವೀತಿಃ ಪ್ರೀತಿರ್ಯಸ್ಯಾಂ ಭಕ್ಷಣಕ್ರಿಯಾಯಾಂ ಸಾ ದೇವವೀತಿಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಶ್ರೇಷ್ಠಂ । ಪ್ರಶಸ್ಯಶಬ್ದಾದತಿಶಾಯನ ಇಷ್ಠನ್ । ಪ್ರಶಸ್ಯಸ್ಯ ಶ್ರ ಇತಿ ಶ್ರಾದೇಶಃ । ಗುಣಃ । ಏಕಾದೇಶಸ್ವರಃ । ಧೇಹಿ । ದಧಾತೇರ್ಲೋಟ್ । ವಾರ್ಯಂ । ವೃಞ್ ಸಂಭಕ್ತೌ । ಋಹಲೋರ್ಣ್ಯದಿತಿಣ್ಯತ್ । ಈಡವಂದೇತ್ಯಾದಿನಾದ್ಯುದಾತ್ತತ್ವಂ । ಏತಿಸ್ತುಶಾಸಿತ್ಯಾದಿನಾ ಕ್ಯಪ್ ವೃಣೋತೇರೇವ ನ ವೃಞಃ ॥

ಪ್ರತಿಪದಾರ್ಥ

ಪಾವಕ-ಶುದ್ಧಿಕಾರಕನಾದ ಎಲೈ ಅಗ್ನಿಯೇ, । ಸ್ವಧರ್ಮನ್-ಯಜ್ಞಾರ್ಹವಾದ ಸಕಲ ಅಂಗಗಳಿಂದಲೂ ಕೂಡಿದ ಈ ಯಜ್ಞದಲ್ಲಿ, । ತೇ—ನಿನ್ನ ಭಕ್ಷಣಕ್ಕಾಗಿಯೂ, । ದೇವವೀತಯೇ—ದೇವತೆಗಳ ಪಾನಕ್ಕಾಗಿಯೂ, । ಘೃತವಂತಃ—ಘೃತದಿಂದ ಪೂರ್ಣವಾದವೂ, । ಮೇದಸಃ—ಮೇದೋರೂಪವಾದ ಹವಿಸ್ಸಿಗೆ ಸಂಬಧಿಸಿದವೂ ಆದ । ಸ್ತೋಕಾಃ—ಬಿಂದುಗಳು । ಶ್ಚೋತಂತಿ—ಪ್ರವಿಸುತ್ತವೆ. (ಆದುದರಿಂದ) । ವಾರ್ಯಂ—ಅಪೇಕ್ಷಿತವಾದುದೂ । ಶ್ರೇಷ್ಠಂ—ಉತ್ತಮವಾದುದೂ ಆದ ಧನವನ್ನು । ನಃ—ನಮಗೆ । ಧೇಹಿ—ಕೊಡು.

ಭಾವಾರ್ಥ

ಶುದ್ಧಿಕಾರಕನಾದ ಎಲೈ ಅಗ್ನಿಯೇ, ಯಜ್ಞಾರ್ಹವಾದ ಸಕಲಅಂಗಗಳಿಂದಲೂ ಕೂಡಿದ ಈ ಯಜ್ಞದಲ್ಲಿ ನಿನ್ನ ಭಕ್ಷಣಕ್ಕಾಗಿಯೂ ದೇವತೆಗಳ ಪಾನಕ್ಕಾಗಿಯೂ ಸಹ ಘೃತದಿಂದ ಪೂರ್ಣವಾದವೂ, ಮೇದೋರೂಪವಾದ ಹವಿಸ್ಸಿಗೆ

ಸಂಬಂಧಿಸಿದವೂ ಆದ ಬಿಂದುಗಳು ಪ್ರವಿಸುತ್ತಿವೆ. ಅದರ ಫಲವಾಗಿ ನಮಗೆ ಅಪೇಕ್ಷಿತವಾದುದೂ, ಉತ್ತಮವಾದುದೂ ಆದ ಫಲವನ್ನು ಕೊಡು.

## English Translation

The drops of the marrow charged with butter fall, purifier, to you, at your own rite, for the food of the gods : therefore grant us excellent affluence.

### ವಿಶೇಷವಿಷಯಗಳು.

**ಪಾವಕ**—ಈ ಶಬ್ದದಿಂದ ಅಗ್ನಿಯನ್ನು ಸಂಬೋಧಿಸಿದೆ. ಪಾಪಶೋಧಕನಾಗಿ ಪ್ರಾಣಿಗಳ ಪಾಪಗಳನ್ನು ನಾಶ ಗೊಳಿಸಿ ಅವರನ್ನು ಪರಿಶುದ್ಧರನ್ನಾಗಿ ಮಾಡುವನೆಂದು ಅರ್ಥವನ್ನು ವಿವರಿಸಿದೆ. ನಿರುಕ್ತಕಾರರು—" ಯೇನಾ ಪಾವಕ ಚಕ್ಷಸಾ " ಇತ್ಯಾದಿ ಮಂತ್ರಗಳಿಂದ ವರುಣನನ್ನು ಸಂಬೋಧಿಸಿ ವರುಣಪರವಾದ ಅರ್ಥವನ್ನು (ನಿ. ೧೨-೨೨) ವಿವರಿಸಿ ದ್ದಾರೆ. ಇಲ್ಲಿ ಅಗ್ನಿಗೆ ವಿಶೇಷಣವಾಗಿ ಈ ಪದವು ಪ್ರಯುಕ್ತವಾಗಿದೆ.

**ದೇವವೀತಯೇ—ದೇವಾನಾಂ ವೀತಿಃ ಪ್ರೀತಿಃ ಯಸ್ಯಾಂ ಭಕ್ಷಣಕ್ರಿಯಾಯಾಂ** | ದೇವತೆಗಳಿಗೆ ಪ್ರೀತಿಯನ್ನು ಉಂಟುಮಾಡುವ ಭಕ್ಷಣಕ್ರಿಯೆಯೆಂದು ಅರ್ಥವನ್ನು ವರ್ಣಿಸಿದೆ.

**ಸ್ವಧರ್ಮನ್—ಸ್ವಾಯತ್ತಧರ್ಮಕೇ ಸಾಂಗೇ ಅಸ್ಮಿನ್ ಯಜ್ಞೇ** ವಿಧ್ಯುಕ್ತವಾದ ಪ್ರಕಾರದಿಂದ ಆಚರಿತವಾಗಿರುವ, ಯಾವ ನ್ಯೂನತೆಯೂ ಇಲ್ಲದಿರುವ ಎಂದು ಅರ್ಥವನ್ನು ವಿವರಿಸಿ ಈ ಯಜ್ಞದಲ್ಲಿ ದೇವತೆಗಳ ತೃಪ್ತಿ ಗಾಗಿಯೂ, ಅಥವಾ **ದೇವಸ್ಯ ತವ ವೀತಯೇ** ಪ್ರಕಾಶಮಾನನಾಗಿರುವ ಅಗ್ನಿಯ ತೃಪ್ತಿಗಾಗಿಯೂ **ಮೇದಸಃ ಸ್ತೋಕಾಃ** ಹವಿಸ್ಸಿನ ಬಿಂದುಗಳು **ಶ್ಚೋತಂತಿ ಕ್ಷರಂತಿ** ಅರ್ಪಿತವಾಗಿವೆ ಎಂದು ಅರ್ಥವನ್ನು ಹೇಳಿದೆ.

**ವಾರ್ಯಂ ಶ್ರೇಷ್ಠಂ ನಃ ದೇಹಿ—ವರಣೀಯಂ ಸಂಭಜನೀಯಂ ಉತ್ತಮಂ ಧನಂ ಅಸ್ಮಭ್ಯಂ ಪ್ರಯಚ್ಛ । ವೃಣೋತೇರಥಾಪಿ ವರತಮಂ** (ನಿ. ೫-೧) ವೃಞ್ ಧಾತುವಿನಿಂದ ನಿಷ್ಪನ್ನವಾದ ವಾರ್ಯಶಬ್ದಕ್ಕೆ ಸರ್ವರಿಗೂ ಅಭಿಲಷಿತವಾದುದು, ಅವಶ್ಯವಾಗಿ ಹೊಂದಲರ್ಹವಾದುದು ಎಂದು ಅರ್ಥವನ್ನು ವರ್ಣಿಸಿ, ಯಜಮಾನರಿಗೆ ಈ ಪ್ರಕಾರವಾಗಿರುವ ಉತ್ತಮವಾದ ಧನವನ್ನು ಅಗ್ನಿಯು ಅನುಗ್ರಹಿಸಲಿ ಎಂದು ಆಶಿಸಿದೆ.

ದುರ್ಗಾಚಾರ್ಯರು—

**ತದ್ವಾರ್ಯಂ ವೃಣೀಮಹೇ ವರಿಷ್ಠಂ ಗೋಪಯತ್ಯಂ ।**
**ಮಿತ್ರೋ ಯತ್ಪಾಂತಿ ವರುಣೋ ಯದರ್ಯಮಾ ॥**

(ಋ. ಸಂ. ೮-೨೫-೧೩)

ಇಲ್ಲಿ ವಾರ್ಯಶಬ್ದವು ವರಯಿತವ್ಯಂ ವರಣಾರ್ಹಂ ಧನಂ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಶ್ಚೋತಂತಿ**—ಶ್ಚುತಿರ್ ಕ್ಷರಣೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ವಧರ್ಮನ್**—ಸ್ವೇ (ಅಂಗಭೂತಾಃ) ಧರ್ಮಾಣ್ಯೋ ಯಸ್ಯ ಸ್ವಧರ್ಮಾ. ಬಹುವ್ರೀಹಿಸಮಾಸ. **ಧರ್ಮಾ-ದನಿಚ್ ಕೇವಲಾತ್** (ಪಾ. ಸೂ. ೫-೪-೧೨೪) ಎಂಬುದರಿಂದ ಅನಿಚ್ ಪ್ರತ್ಯಯ ಸಮಾಸಾಂತವಾಗಿ ಬರುತ್ತದೆ.

**ಬಹುವ್ರೀಹೌಪ್ರ**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮೀ ವಿಭಕ್ತಿಗೆ ಲುಕ್.

**ದೇವವೀತಯೇ**—ದೇವಾನಾಂ ವೀತಿಃ ಪ್ರೀತಿಃ ಯಸ್ಯಾಂ ಭಕ್ಷಣಕ್ರಿಯಾಯಾಂ. ಸಾ ದೇವವೀತಿಃ (ಯಾವ ತಿನ್ನುವುದರಲ್ಲಿ ದೇವತೆಗಳಿಗೆ ಪ್ರೀತಿಯಾಗುವುದೋ ಅದು.) ಬಹುವ್ರೀಹಿಯಲ್ಲಿ ಹಿಂದಿನಂತೆ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಶ್ರೇಷ್ಠಂ**—ಅತಿಶಯೇನ ಪ್ರಶಸ್ಯಃ ಶ್ರೇಷ್ಠಃ **ಅತಿಶಾಯನೇತಮಬಿಷ್ಠನೌ** ಎಂಬುದರಿಂದ ಪ್ರಶಸ್ಯಶಬ್ದದ ಮೇಲೆ ಇಷ್ಠನ್ ಪ್ರತ್ಯಯ. **ಪ್ರಶಸ್ಯ ಶ್ರಃ** (ಪಾ. ಸೂ. ೫-೩-೬೦) ಎಂಬುದರಿಂದ ಪ್ರತ್ಯಯಪರವಾದಾಗ ಪ್ರಕೃತಿಗೆ ಶ್ರಾದೇಶ. **ಪ್ರಕೃತ್ಯೈಕಾಚ್** (ಪಾ. ಸೂ. ೬-೪-೧೬೩) ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಆಕಾರಕ್ಕೆ ಲೋಪ ಬರುವುದಿಲ್ಲ. ಗುಣ. ನಿತ್ತಾದುದರಿಂದ ಅದ್ಯುದಾತ್ತಸ್ವರ ಬಂದಾಗ ಏಕಾದೇಶಸ್ವರದಿಂದ ಏಕಾರ ಉದಾತ್ತ ವಾಗುತ್ತದೆ.

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವಾರ್ಯಂ**—ವೃಙ್ ಸಂಭಕ್ತೌ. ಧಾತು. ಋದಂತವಾದುದರಿಂದ **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್‌ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಎಂಬುದರಿಂದ ಋಕಾರಕ್ಕೆ ವೃದ್ಧಿ. ರಪರವಾಗಿ ಬರುತ್ತದೆ. **ಈಡವಂದ ವೃಶಂಸ**—(ಪಾ. ಸೂ. ೬-೧-೨೧೪) ಎಂಬುದ ರಿಂದ ಆದ್ಯುದಾತ್ತಸ್ವರ ಬರುತ್ತದೆ. ಇಲ್ಲಿ ಒಂದು ಆಶಂಕೆ ಬರುತ್ತದೆ. **ಏತಿಸ್ತುಶಾಸ್**—(ಪಾ. ಸೂ. ೩-೧-೧೦೯) ಎಂಬಲ್ಲಿ ವೃ ಧಾತು ಸೇರಿರುವುದರಿಂದ ಕ್ಯಪ್ ಬರಬಹುದು. ಆದರೆ ಅದು ವೃಞ್ (ವರಣೆ) ಎಂಬ ಧಾತು. ಕ್ರ್ಯಾದಿ· ಈಧಾತು ಅಲ್ಲಿ ಪಠಿತವಾಗಿಲ್ಲ.

———

ಸಂಹಿತಾಪಾಠಃ

ತುಭ್ಯಂ ಸ್ತೋಕಾ ಘೃತಶ್ಚುತೋಽಗ್ನೇ ವಿಪ್ರಾಯ ಸಂತ್ಯ ।
ಋಷಿಃ ಶ್ರೇಷ್ಠಃ ಸಮಿಧ್ಯಸೇ ಯಜ್ಞಸ್ಯ ಪ್ರಾವಿತಾ ಭವ ॥ ೩ ॥

ಪದಪಾಠಃ

ತುಭ್ಯಂ । ಸ್ತೋಕಾಃ । ಘೃತಽಶ್ಚುತಃ । ಅಗ್ನೇ । ವಿಪ್ರಾಯ । ಸಂತ್ಯ ।
ಋಷಿಃ । ಶ್ರೇಷ್ಠಃ । ಸಂ । ಇಧ್ಯಸೇ । ಯಜ್ಞಸ್ಯ । ಪ್ರಽಅವಿತಾ । ಭವ ॥ ೩ ॥

ಸಾಯಣಭಾಷ್ಯಂ

**ಸಂತ್ಯ ಯಷ್ಟೃಭಿಃ ಸಂಭಜನೀಯ ಯದ್ವಾ ಯಷ್ಟೃಭ್ಯಃ ಫಲಪ್ರದ ಹೇ ಅಗ್ನೇ ವಿಪ್ರಾಯ ಮೇಧಾವಿನೇ ತುಭ್ಯಂ ತ್ವದರ್ಥಂ ಘೃತಶ್ಚುತಃ ಘೃತಕ್ಷರಣಯುಕ್ತಾಃ ಸ್ತೋಕಾಃ ಸಂತಿ । ಋಷಿರತೀಂ**—

ದ್ರಿಯಾರ್ಥದರ್ಶೀ ಅತ ಏವ ಶ್ರೇಷ್ಠಃ ಸರ್ವಾತಿಶಾಯೀ ತ್ವಂ ಸಮಿಧ್ಯಸೇ । ಘೃತಯುಕ್ತಮೇದೋ-ಬಿಂದುಭಿಃ ಸಮ್ಯಕ್ ಪ್ರಜ್ವಾಲ್ಯಸೇ । ಸ ತ್ವಂ ಯಜ್ಞಸ್ಯಾಸ್ಮಾಭಿಃ ಕ್ರಿಯಮಾಣಸ್ಯ ಪಶುಯಾಗಸ್ಯ ಪ್ರಾವಿತಾ ಪ್ರಕರ್ಷೇಣ ಪಾಲಕೋ ಭವ ॥ ತುಭ್ಯಂ । ಯುಷ್ಮಚ್ಛಬ್ದಸ್ಯ ಙಯಿ ತುಭ್ಯಮಹ್ಯೌ ಙಯಿ । ಪಾ. ೭-೨-೯೫। ಇತಿ ತುಭ್ಯಾದೇಶಃ । ಙೇಃ ಪ್ರಥಮಯೋರಮಿತಿ ಙೇರಮಾದೇಶಃ । ಙಯಿ ಚೇತ್ಯಾದ್ಯು-ದಾತ್ತತ್ವಂ । ಸಂತ್ಯ । ಷಣ ಸಂಭಕ್ತೌ ಷಣು ದಾನೇ ವಾ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ನ ಕ್ತಿಚಿ ದೀರ್ಘಶ್ಚೇತಿ ದೀರ್ಘನಲೋಪಾಭಾವಃ । ಸಂತೌ ಭವೋ ಭವೇ ಛಂದಸೀತಿ ತತ್ರ ಸಾಧುರಿತಿ ವಾ ಯತ್ಪ್ರತ್ಯಯಃ । ಯಸ್ಯೇತಿ ಲೋಪಃ । ಆಮಂತ್ರಿತತ್ವಾನ್ನಿಘಾತಃ । ಇಧ್ಯಸೇ । ಞಿಇಂಧೀ ದೀಪ್ತೌ । ಕರ್ಮಣಿ ಯಕ್ । ಕಿತ್ತ್ವಾದನುನಾಸಿಕಲೋಪಃ । ನಿಘಾತಃ । ಪ್ರಾವಿತಾ । ಅವ ರಕ್ಷಣಾದಿಷು । ತೃಚಿ ರೂಪಂ । ಸಮಾಸಸ್ವರಃ । ಭವನಿಘಾತಃ ॥

ಪ್ರತಿಪದಾರ್ಥ

**ಸಂತ್ಯ**—(ಯಜ್ಞಕರ್ತರಿಗೆ) ಪೂಜ್ಯನಾದ । **ಅಗ್ನೇ**—ಎಲೈ ಅಗ್ನಿಯೇ । **ವಿಪ್ರಾಯ**—ಮೇಧಾವಿಯಾದ । **ತುಭ್ಯಂ**—ನಿನಗಾಗಿ । **ಘೃತಶ್ಚುತಃ**—ಘೃತದ ಸ್ರವದಿಂದ ಯುಕ್ತವಾದ । **ಸ್ತೋಕಾಃ**—ಬಿಂದುಗಳು (ಸಿದ್ಧವಾಗಿವೆ)। **ಋಷಿಃ**—ಅತೀಂದ್ರಿಯಾರ್ಥಗಳನ್ನು ನೋಡಲು ಶಕ್ತನಾದವನೂ । **ಶ್ರೇಷ್ಠಃ**—ಉತ್ಕೃಷ್ಟನೂ ಆದ ನೀನು । **ಸಮಿಧ್ಯಸೇ**—ಪ್ರಜ್ವಲಿತನಾಗುತ್ತೀಯೆ। **ಯಜ್ಞಸ್ಯ**—ನಮ್ಮಿಂದ ನೆರವೇರಿಸಲ್ಪಡುವ ಈ ಪಶುಯಾಗದ। **ಪ್ರಾವಿತಾ**—ರಕ್ಷಕನಾಗಿ । **ಭವ**—ಆಗಿರು ॥

ಭಾವಾರ್ಥ

ಯಜ್ಞಕರ್ತರಿಗೆ ಪೂಜ್ಯನಾದ ಅಗ್ನಿಯೇ, ಮೇಧಾವಿಯಾದ ನಿನಗಾಗಿ ಘೃತದ ಸ್ರವದಿಂದ ಯುಕ್ತವಾದ ಬಿಂದುಗಳು ಸಿದ್ಧವಾಗಿವೆ. ಅತೀಂದ್ರಿಯಾರ್ಥಗಳನ್ನು ನೋಡಲು ಶಕ್ತನಾದವನೂ, ಉತ್ಕೃಷ್ಟನೂ ಆದ ನೀನು ಈಗ ಪ್ರಜ್ವಲಿತನಾಗುತ್ತೀಯೆ. ನಮ್ಮಿಂದ ನೆರವೇರಿಸಲ್ಪಡುವ ಈ ಪಶುಯಾಗದ ರಕ್ಷಕನಾಗಿರು.

## English Translation

The drops (of marrow) dripping with butter are offered, Agni, to you who are wise : you the most excellent Rishi are kindled : be the protector of the sacrifice.

ವಿಶೇಷವಿಷಯಗಳು

**ಸಂತ್ಯ—ಯಷ್ಟೃಭಿಃ ಸಂಭಜನೀಯ ಯದ್ವಾ ಯಷ್ಟೃಭ್ಯಃ ಫಲಪ್ರದ** । ಅಗ್ನಿಯು ಯಾಗಮಾಡುವ ಯಜಮಾನರಿಂದ ಅಗತ್ಯವಾಗಿ ಹೊಂದಲು ಅರ್ಹನಾಗಿರುವವನೆಂದೂ, ಅಥವಾ ಯಾಗಮಾಡುವ ಯಜಮಾನರಿಗೆ ಯಜ್ಞದ ಫಲವನ್ನು ಅನುಗ್ರಹಿಸುವವನೆಂದೂ ಅರ್ಥವನ್ನು ವಿವರಿಸಿದೆ.

ಈ ಪದವನ್ನು ಅಗ್ನಿಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ ಎಂದು ವರ್ಣಿಸಿ, ಈ ಪದದಿಂದ ಅಗ್ನಿಯನ್ನು ಸಂಬೋಧಿಸಿ, **ವಿಪ್ರಾಯ ಘೃತಶ್ಚುತಃ ಸ್ತೋಕಾಃ** ಮೇಧಾವಿಯಾದ ಅಗ್ನಿಯ ಪ್ರೀತ್ಯರ್ಥವಾಗಿ ಆಜ್ಯದಿಂದ ತುಂಬಿರುವ ಹವಿಸ್ಸಿನ ಬಿಂದುಗಳು ಅರ್ಪಿತವಾಗಿವೆ ಎಂದು ಅರ್ಥವನ್ನು ವಿವರಿಸಿದೆ.

**ಋಷಿಃ ಶ್ರೇಷ್ಠಃ ಸಮಿಧ್ಯಸೇ**— ಅತೀಂದ್ರಿಯಾರ್ಥದರ್ಶೀ ಇಂದ್ರಿಯಗಳಿಂದ ತಿಳಿಯಲಶಕ್ಯವಾದವುಗಳ ಜ್ಞಾನವನ್ನು ಹೊಂದಿರುವವನೆಂದು ಅರ್ಥವನ್ನು ವಿವರಿಸಿ, ಅಗ್ನಿಯು ಋಷಿಯಾಗಿರುವುದರಿಂದ **ಸರ್ವಾತಿಶಾಯೀ** ಎಲ್ಲರಿಗಿಂತಲೂ ಉತ್ತಮನಾಗಿರುವನು ಎಂದೂ, **ಸಮಿಧ್ಯಸೇ— ಘೃತಯುಕ್ತಮೇದೋಬಿಂದುಭಿಃ ಪ್ರಜ್ವಾಲ್ಯಸೇ** ಪಶುಯಾಗದಲ್ಲಿ ಪಶುವಿನ ಸಂಬಂಧಿ ವಪೆಯು ಮೇದಸ್ಸಿನರೂಪವಾದ ಹವಿಸ್ಸುಗಳಿಂದಲೂ ಆಜ್ಯದಿಂದಲೂ ಅಗ್ನಿಯು ಪ್ರಜ್ವಲಿತನಾಗಿರುವನು ಎಂದೂ ಅರ್ಥವನ್ನು ವಿವರಿಸಿದೆ.

**ಯಜ್ಞಸ್ಯ ಪ್ರಾವಿತಾ ಭವ**— **ಅಸ್ಮಾಭಿಃ ಕ್ರಿಯಮಾಣಸ್ಯ ಪಶುಯಾಗಸ್ಯ ಪ್ರಕರ್ಷೇಣ ಪಾಲಕಃ ಭವ** । ನಿರುಕ್ತಕಾರರಿಂದ **ಯಜ್ಞಃ ಪ್ರಖ್ಯಾತಂ ಯಜತಿಕರ್ಮ** ಲೋಕದಲ್ಲಿಯೂ ವೇದದಲ್ಲಿಯೂ ಪ್ರಸಿದ್ಧವಾದ ದೇವತೆಗಳನ್ನು ಸಂತೋಷಪಡಿಸುವ ಕರ್ಮನೆಂದು ಪ್ರಸಿದ್ಧವಾಗಿದೆ ಎಂದೂ, "**ಯಜ್ಞೋ ವೈ ದೇವಾನಾಮನ್ನಂ ಸಮಭೂತ್ ತಂ ಭೃತ್ಯಾಸ್ಸಮಭಾವಯನ್ನಿತಿ ಹಿ ವಿಜ್ಞಾಯತೇ**" ಯಜ್ಞವೆಂಬುದು ದೇವತೆಗಳಿಗೆ ಅನ್ನವನ್ನು ಅರ್ಪಿಸುವ ಕರ್ಮವೆಂದೂ ತಿಳಿದು ಅದನ್ನು ಭರಣವನ್ನು ಅಪೇಕ್ಷಿಸುವವರು ಪೂಜಾರ್ಹವಾದ ಕರ್ಮವೆಂದು ಭಾವಿಸಿರುವರು ಎಂದು ಬೋಧಿಸುವ ಬ್ರಾಹ್ಮಣವಾಕ್ಯದಿಂದ **ಯಜನಾತ್ ಯಜ್ಞಃ** ಎಂದು ನಿಷ್ಪನ್ನವಾಗಿದೆ ಎಂದೂ ವ್ಯಾಖ್ಯಾತವಾಗಿರುವುದರಿಂದ ಈ ಯಜ್ಞದಲ್ಲಿ ಒಂದುವಿಧವಾದ ಪಶುಯಾಗರೂಪವಾದ ಕರ್ಮವು ಯಜಮಾನರಿಂದ ಆಚರಿಸಲ್ಪಡುವಕಾರಣ ಅಗ್ನಿಯು ಈ ಯಾಗವನ್ನು ಯಾವ ನ್ಯೂನತೆಯೂ ಬರದಂತೆ ರಕ್ಷಿಸಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ತುಭ್ಯಂ**—ಯುಷ್ಮದ್ ಶಬ್ದ. ಚತುರ್ಥೀಏಕವಚನ (ಙೆ) ಪರವಾದಾಗ **ತುಭ್ಯಮಹ್ಯೌ ಙಯಿ** (ಪಾ. ಸೂ. ೭-೩-೯೫) ಎಂಬುದರಿಂದ ತುಭ್ಯಾದೇಶ. **ಙೇಪ್ರಥಮಯೋರಂ** (ಪಾ. ಸೂ. ೭-೧-೨೮) ಎಂಬುದರಿಂದ ವಿಭಕ್ತಿಗೆ ಅಮಾದೇಶ. **ಅಮಿಪೂರ್ವಃ** ಎಂಬುದರಿಂದ ಪೂರ್ವರೂಪ. **ಙಯಿಚ** (ಪಾ. ಸೂ. ೬-೧-೨೧೨) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಘೃತಶ್ಚುತಃ**—ಶ್ಚುತಿರ್ ಕ್ಷರಣೇ. ಧಾತು. **ಕ್ವಿಪ್‌ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಘೃತಂ ಶ್ಚೋತಂತಿ ಇತಿ ಘೃತಶ್ಚುತಃ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಸಂತ್ಯ**—ಷಣ ಸಂಭಕ್ತೌ ಧಾತು. ಅಥವಾ ಷಣು ದಾನೇ. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. **ಕ್ತಿಚ್‌ಕ್ತೌಚಸಂಜ್ಞಾಯಾಂ** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ **ನಕ್ತಿಚಿ ದೀರ್ಘಶ್ಚ** (ಪಾ. ಸೂ. ೬-೪-೩೯) ಎಂಬುದರಿಂದ ದೀರ್ಘ ನಲೋಪಾದಿಗಳು ಕ್ತಿಚ್ ಪರವಾದಾಗ ಬರುವುದಿಲ್ಲ. ಸಂತಿ ಎಂದು ರೂಪವಾಗುತ್ತದೆ. ಸಂತೌ ಭವಃ ಸಂತ್ಯಃ **ಭವೇಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದಲಾಗಲೀ **ತತ್ರಸಾಧುಃ** (ಪಾ. ಸೂ. ೪-೪-೯೮) ಎಂಬುದರಿಂದಾಗಲೀ ಯತ್‌ಪ್ರತ್ಯಯ. ಭಸಂಜ್ಞಾ ಇರುವುದರಿಂದ **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಪೂರ್ವದ ಇಕಾರಕ್ಕೆ ಲೋಪ. ಸಂತ್ಯ ಎಂದು ರೂಪವಾಗುತ್ತದೆ. ಸಂಬುದ್ಧಿಯಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ.

**ಇಧ್ಯಸೇ**—ಞಿಇಂಧೀ ದೀಪ್ತೌ. ಧಾತು. ಕರ್ಮಣಿಯಲ್ಲಿ ಲಟ್. ಮಧ್ಯಮಪುರುಷಏಕವಚನದಲ್ಲಿ **ಥಾಸಃಸೇ** ಎಂಬುದರಿಂದ ಸೇ ಆದೇಶ. **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಇದು ಕಿತ್ತಾದುದರಿಂದ **ಅನಿದಿತಾಂಹಲಉಪ**—(ಪಾ. ಸೂ. ೬-೪-೨೪)ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಪ್ರಾವಿತಾ—ಅವ ರಕ್ಷಣಾದಿಷು ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ. ಆರ್ಧಧಾತುಕಸ್ಯೇಡ್ವಲಾದೇಃ ಎಂಬುದರಿಂದ ಇಡಾಗಮ. ಕೃದುತ್ತರಪದಪ್ರಕೃತಿಸ್ವರದಿಂದ ಅಂತೋದಾತ್ತವಾಗುತ್ತದೆ.

ಭವ—ಭೂ ಸತ್ತಾಯಾಂ ಧಾತು. ಲೋಟ್‌ಮಧ್ಯಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವಃ ಸ್ತೋಕಾಸೋ ಅಗ್ನೇ ಮೇದಸೋ ಘೃತಸ್ಯ॥
ಕವಿಶಸ್ತೋ ಬೃಹತಾ ಭಾನುನಾಗಾ ಹವ್ಯಾ ಜುಷಸ್ವ ಮೇಧಿರ ॥ ೪ ॥

ಪದಪಾಠಃ

ತುಭ್ಯಂ । ಶ್ಚೋತಂತಿ । ಅಧ್ರಿಗೋ ಇತ್ಯಧ್ರಿऽಗೋ । ಶಚೀऽವಃ । ಸ್ತೋಕಾಸಃ । ಅಗ್ನೇ । ಮೇದಸಃ । ಘೃತಸ್ಯ ।

ಕವಿऽಶಸ್ತಃ । ಬೃಹತಾ । ಭಾನುನಾ । ಆ । ಅಗಾಃ । ಹವ್ಯಾ । ಜುಷಸ್ವ । ಮೇಧಿರ ॥ ೪ ॥

ಸಾಯಣಭಾಷ್ಯಂ

ಅಧ್ರಿಗೋ ಅಧೃತಗಮನ ಸತತಗಮನಸ್ವಭಾವ । ಅತ ಏವ ಶಚೀವಃ ಶಕ್ತಿಮನ್ ಹೇ ಅಗ್ನೇ ತುಭ್ಯಂ ತ್ವದರ್ಥಂ ಮೇದಸೋ ಮೇದೋರೂಪಸ್ಯ ಹವಿಷೋ ಘೃತಸ್ಯ ಸ್ತೋಕಾಸೋ ಬಿಂದವಃ ಶ್ಚೋತಂತಿ । ಸ್ರವಂತಿ । ತಸ್ಮಾತ್ಕವಿಶಸ್ತಃ ಕವಿಭಿಃ ಕರ್ಮಾಭಿಜ್ಞೈರ್ಹೋತ್ರಾದಿಭಿಃ ಸ್ತುತಸ್ತ್ವಂ ಬೃಹತಾ ಪ್ರಭೂತೇನ ಭಾನುನಾ ತೇಜಸಾ ಸಹಿತಃ ಸನ್ ಆಗಾಃ । ಅಸ್ಮದೀಯಂ ಪಶುಯಾಗಮಭ್ಯಾಗಚ್ಛ । ಆಗತ್ಯ ಚ ಮೇಧಿರ ಪ್ರಜ್ಞಾವನ್ನಗ್ನೇ ಹವ್ಯಾ ಅಸ್ಮಾಭಿರ್ದೀಯಮಾನಾನಿ ವಪಾದೀನಿ ಹವೀಂಷಿ ಜುಷಸ್ವ । ಸೇವಸ್ವ ॥ ಅಧ್ರಿಗೋ । ಗಮನಂ ಗೌರಿತಿ ಗಮ್ಲೃ ಸೃಪ್ಲೃ ಗತಾವಿತ್ಯಸ್ಯ ಭಾವೇ ಗಮೇರ್ಡೋರಿತಿ ಡೋಃ । ಅಧೃತಾ ಗೌರ್ಯೇನೇತ್ಯತ್ರ ಗೋಸ್ತ್ರಿಯೋರುಪಸರ್ಜನಸ್ಯೇತಿ ಗೋಶಬ್ದಸ್ಯ ಹ್ರಸ್ವತ್ವಂ । ಧೃತಶಬ್ದಸ್ಯ ಪೃಷೋದರಾದಿತ್ವಾತ್ ಧ್ರಿಭಾವಃ । ಸಂಬೋಧನೇ ಸಂಬುದ್ಧೌ ಚ । ಪಾ. ೭-೩-೧೦೬ । ಇತಿ ಗುಣಃ । ಅಪಾದಾದಿತ್ವಾನ್ನಿಘಾತಃ । ಶಚೀವಃ । ಮತುಪೋ ಮತುವಸೋ ರುರಿತಿ ರುತ್ವಂ । ಕವಿಶಸ್ತಃ । ಶಂಸು ಸ್ತುತಾವಿತ್ಯಸ್ಯ ನಿಷ್ಠಾಯಾಮನುನಾಸಿಕಲೋಪಃ । ಯಸ್ಯ ವಿಭಾಷೇತೀಟ್‌ಪ್ರತಿಷೇಧಃ । ಥಾಥಘಞ್‌ಕ್ತಾಜಬಿತ್ರಕಾಣಾಮಿತ್ಯಂತೋದಾತ್ತತ್ವಂ । ಭಾನುನಾ । ಭಾ ದೀಪ್ತೌ । ದಾಭಾಭ್ಯಾಂ ನುರಿತಿ ಕರ್ತರಿ ನುಃ। ಪ್ರತ್ಯಯಸ್ವರಃ। ಅಗಾಃ । ಇಣ್ ಗತಾವಿತ್ಯಸ್ಯ ಛಾಂದಸೇ ಲುಙಿ ಇಣೋ ಗೇತಿ ಗಾದೇಶಃ। ಗಾತಿಸ್ಥೇತಿ ಸಿಚೋ ಲೋಪಃ । ನಿಘಾತಃ । ಮೇಧಿರ । ಮೇಧಾರಥಾಭ್ಯಾಮಿರನಿರಚೌ ವಕ್ತವ್ಯಾವಿತೀರನ್ । ಆಮಂತ್ರಿತತ್ವಾನ್ನಿಘಾತಃ ॥

ಪ್ರತಿಪದಾರ್ಥ

**ಅಧ್ರಿಗೋ**—ತಡೆಯಿಲ್ಲದೇ ಪ್ರಸರಿಸುವ ಸ್ವಭಾವವುಳ್ಳವನೂ, | **ಶಚೀವಃ**—ಶಕ್ತಿಯುತನೂ ಆದ | **ಅಗ್ನೇ**—ಅಗ್ನಿಯೇ, | **ತುಭ್ಯಂ**—ನಿನಗಾಗಿ | **ಮೇದಸಃ**—ಮೇದೋರೂಪದ ಹವಿಸ್ಸಿನ (ಮತ್ತು) | **ಘೃತಸ್ಯ**—ಘೃತದ | **ಸ್ತೋಕಾಸಃ**—ಬಿಂದುಗಳು | **ಶ್ಚೋತಂತಿ**—ಸ್ರವಿಸುತ್ತವೆ. | **ಕವಿಶಸ್ತಃ**—ಕರ್ಮಗಳ ಸ್ವರೂಪವನ್ನು ತಿಳಿದ ಹೋತ್ರಾದಿಗಳಿಂದ ಸ್ತುತನಾದ ನೀನು | **ಬೃಹತಾ**—ಪ್ರಭೂತವಾದುದೂ | **ಭಾನುನಾ**—ತೇಜಸ್ಸಿನಿಂದ ಕೂಡಿದುದೂ ಆದ ನಮ್ಮ ಈ ಪಶುಯಾಗಕ್ಕಾಗಿ | **ಆಗಾಃ**—ದಯಮಾಡು. (ಇಲ್ಲಿ ಬಂದು) | **ಮೇಧಿರ**—ಪ್ರಜ್ಞಾವಂತನಾದ ಅಗ್ನಿಯೇ, | **ಹವ್ಯಾ**—ನಮ್ಮಿಂದ ದತ್ತನಾದ ಹವಿಸ್ಸುಗಳನ್ನು | **ಜುಷಸ್ವ**—ಸೇವಿಸು.

ಭಾವಾರ್ಥ

ಕಡೆಯಿಲ್ಲದೇ ಪ್ರಸರಿಸುವ ಸ್ವಭಾವವುಳ್ಳವನೂ, ಶಕ್ತಿಯುತನೂ ಆದ ಅಗ್ನಿಯೇ, ನಿನಗಾಗಿ ಮೇದೋರೂಪದ ಹವಿಸ್ಸಿನ ಮತ್ತು ಘೃತದ ಬಿಂದುಗಳು ಸ್ರವಿಸುತ್ತವೆ. ಕರ್ಮಜ್ಞರಾದ ಹೋತ್ರಾದಿಗಳಿಂದ ಸ್ತುತನಾದ ನೀನು ಪ್ರಭೂತವಾದುದೂ, ತೇಜಸ್ಸಿನಿಂದ ಕೂಡಿದುದೂ ಆದ ನಮ್ಮ ಈ ಪಶುಯಾಗಕ್ಕಾಗಿ ಬಂದು ಇಲ್ಲಿ ನಾವು ಅರ್ಪಿಸುವ ಹವಿಸ್ಸುಗಳನ್ನು ಸೇವಿಸು.

## English Translation

Irresistible and powerful Agni, the drops of marrow and of butter distil for you ; therefore you are praised by sages, come with great splendour, and be pleased, ever intelligent Agni, with our oblations.

ವಿಶೇಷವಿಷಯಗಳು

ಈ ಮಂತ್ರದ ಅರ್ಥವನ್ನು ಸಾಯಣರೂ ನಿರುಕ್ತಕಾರೂ ವಿವರಿಸಿದ್ದಾರೆ. ಎರಡು ವಿಧವಾದ ಅರ್ಥದಲ್ಲಿಯೂ ಕೊಂಚ ವ್ಯತ್ಯಾಸವು ಇರುತ್ತದೆ.

ಅಧ್ರಿಗೋ—ಈ ಪದವನ್ನೂ ಶಚೀವಃ ಎಂಬ ಪದವನ್ನೂ ಅಗ್ನಿಪದದ ವಿಶೇಷಣವನ್ನಾಗಿ ಪ್ರಯೋಗಿಸಿದೆ. **ಅಧೃತಗಮನ, ಸತತಗಮನಸ್ಸ್ವಭಾವ** ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವನು ಎಂದು ಅಧ್ರಿಗು ಶಬ್ದಕ್ಕೆ ಅರ್ಥವನ್ನೂ **ಶಕ್ತಿಮನ್** ಶಕ್ತಿಯುಳ್ಳವನು ಎಂದು ಶಚೀವಃ ಎಂಬ ಪದಕ್ಕೆ ಅರ್ಥವನ್ನೂ ಸಾಯಣರು ವಿವರಿಸಿದ್ದಾರೆ.

ಅಗ್ನೇ–ಎಂದು ಸಂಬೋಧಿಸಿ **ಮೇದೋರೂಪಸ್ಯ ಹವಿಷಃ ಘೃತಸ್ಯ ಚ ಬಿಂದವಃ ಸ್ರವಂತಿ** ಮೇದಸ್ಸಿನ ರೂಪದಿಂದ ಇರುವ ಹವಿಸ್ಸಿನ ಮತ್ತು ಆಜ್ಯದ ಬಿಂದುಗಳು ಪಶುಯಾಗದಲ್ಲಿ ಯಜಮಾನರಿಂದ ಅರ್ಪಿತವಾಗಿವೆ ಎಂದು ವಿವರಿಸಿದೆ.

ಕವಿಶಸ್ತಃ— **ಕವಿಭಿಃ ಕರ್ಮಾಭಿಜ್ಞೈಃ ಹೋತ್ರಾದಿಭಿಃ ಸ್ತುತಃ** ಯಾಸ್ಕರು ಕವಿ ಶಬ್ದವನ್ನು ಮೇಧಾವಿ ನಾಮಗಳಲ್ಲಿ (ನಿ. ೩–೧೫) ಪಾಠಮಾಡಿದ್ದಾರೆ. ಮತ್ತೂ

**ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ ಪೃಥಿವೀ ಸಮುದ್ರಃ |**
**ವಿಶ್ವೇ ದೇವಾ ಋತಾವೃಧೋ ಹುವಾನಾಃ ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ||**

(ಋ. ಸಂ.೬-೫೦-೧೪)

ಈ ಋಕ್ಕಿನಲ್ಲಿ **ಕವಿಶಸ್ತಾಃ** ಎಂಬ ಪದಕ್ಕೆ **ಮೇಧಾವಿಶಸ್ತಾಃ** ಮೇಧಾವಿಗಳಿಂದ ಸ್ತುತವಾದವುಗಳು ಎಂದು ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಯಜ್ಞಕರ್ಮಗಳನ್ನು ಆಚರಿಸುವ ಕ್ರಮವನ್ನು ತಿಳಿದು ಇರುವ ಋತ್ವಿಜರಾದ ಹೋತೃವೇ ಮೊದಲಾದವರಿಂದ ಅಗ್ನಿಯು ಸ್ತುತನಾಗಿರುವನು ಎಂದು ಅರ್ಥವನ್ನು ಹೇಳಿ, **ಬೃಹತಾ ಭಾನುನಾ ಆಗಾಃ** ಅಗ್ನಿಯು ಪ್ರಭೂತವಾದ ತನ್ನ ತೇಜಸ್ಸಿನಿಂದ ಯಾಗಶಾಲೆಗೆ ಆಗಮಿಸಲಿ ಎಂದು ಅರ್ಥವನ್ನು ವರ್ಣಿಸಿದ್ದಾರೆ. ಭಾನು ಶಬ್ದವು ಅಹರ್ನಾಮಗಳಲ್ಲಿ (ನಿ. ೨–೧೧) ಉಕ್ತವಾಗಿದೆ. ಇಲ್ಲಿ ತೇಜಸ್ಸೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಮೇಧಿರ** ಎಂಬ ಪದಕ್ಕೆ ಪ್ರಜ್ಞಾವನ್ ಎಂದು ಅರ್ಥವನ್ನು ವಿವರಿಸಿ, ಜ್ಞಾನಿಯಾಗಿರುವ ಅಗ್ನಿಯು **ಅಸ್ಮಾಭಿರ್ದೀಯಮಾನಾನಿ ವಪಾದೀನಿ ಹವೀಂಷಿ ಸೇವಸ್ವ** ಯಜಮಾನರು ಅರ್ಪಿಸುವ ವಪಾರೂಪದಿಂದಲೂ ಇತರ ವಿಧದಿಂದಲೂ ಇರುವ ಹವಿಸ್ಸುಗಳನ್ನು ಅಗ್ನಿಯು ಸೇವಿಸಲಿ ಎಂದು ಅರ್ಥವನ್ನು ವಿವರಿಸಿದೆ. ಯಾಸ್ಕರು ಅಧ್ರಿಗು ಶಬ್ದಾರ್ಥವನ್ನು ಈರೀತಿ ವಿವರಿಸಿದ್ದಾರೆ.

**ಅಧ್ರಿಗುರ್ಮಂತ್ರೋ ಭವತಿ ಗವ್ಯಧಿಕೃತತ್ವಾದಪಿ ವಾ ಪ್ರಶಾಸನಮೇವಾಭಿಪ್ರೇತಂ ಸ್ಯಾತ್ ತಚ್ಛಬ್ದವತ್ತ್ವಾದಧ್ರಿಗೋ'ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗವಿತಿ** (ನಿ. ೫–೧೧)

ದುರ್ಗಾಚಾರ್ಯರು ಅಧ್ರಿಗು ಶಬ್ದಕ್ಕೆ ಅನೇಕಾರ್ಥಗಳು ಇರುವುವು. (ಪಶುವಿನಲ್ಲಿ) **ಗವಿ ಅಧಿಕೃತೋ ಮಂತ್ರಃ ಅಧ್ರಿಗುಃ** ಪಶುವನ್ನು ಸಂಬೋಧಿಸುವುದರಲ್ಲಿ ಶಕ್ತವಾದ ಮಂತ್ರವೂ ಅಧ್ರಿಗು ಎಂಬ ಶಬ್ದದಿಂದ ನಿರ್ದಿಷ್ಟವಾಗಿದೆ ಎಂದೂ, **ಅಧ್ರಿಗುರ್ನಾಮ ದೈವ್ಯಃ ಕಶ್ಚಿದಸ್ತಿ ಶಮಿತಾ ತಸ್ಯೈತತ್ ಪ್ರಶಾಸನಂ ಸ್ಯಾತ್** ಪಶುವನ್ನು ಯಾಗದಲ್ಲಿ ವಧಿಸುವವನು ಒಬ್ಬನು ದೇವನಾಗಿರುವನು. ಅವನಿಗೆ ಈ ಪದವು ಸಂಬೋಧನಾರೂಪದಿಂದ ಇರುವುದು. **ಅಧ್ರಿಗೋ ಶಮೀಧ್ವಂ** ಎಂದು ಯಜ್ಞದಲ್ಲಿ ಸಂಪ್ರೇಷಣವು ಇರುತ್ತದೆ ಎಂದೂ, ವಿವರಿಸಿದ್ದಾರೆ. ಮತ್ತೂ

**ಅಗ್ನಿರಪ್ಯಧ್ರಿಗುರುಚ್ಯತೇ** ಯಾಸ್ಕರು–ಅಗ್ನಿಯೂ ಅಧ್ರಿಗು ಶಬ್ದದಿಂದ ಉಕ್ತನಾಗಿರುವನು ಎಂದು ಹೇಳಿ **"ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವಃ"** ಎಂಬ ಈ ಮಂತ್ರವನ್ನು ಉದಹರಿಸಿ, **ಅಧೃತಗಮನಕರ್ಮವತ್** ಸಂತತವಾದ ಗಮನಕ್ರಿಯೆಯುಳ್ಳವನಾದುದರಿಂದ ಅಗ್ನಿಯು ಅಧ್ರಿಗುಶಬ್ದವಾಚ್ಯನೆಂದು ವರ್ಣಿಸಿದ್ದಾರೆ.

**ಅಸ್ಮಾ ಇದು ಪ್ರ ತವಸೇ ತುರಾಯ ಪ್ರಯೋ ನ ಹರ್ಮಿ ಸ್ತೋಮಂ ಮಾಹಿನಾಯ ।**
**ಋಚೀಷಮಾಯಾಧ್ರಿಗವ ಓಹಮಿಂದ್ರಾಯ ಬ್ರಹ್ಮಾಣಿ ರಾತತಮಾ ॥**

(ಋ. ಸಂ. ೧–೬೧-೧)

ಈ ಮಂತ್ರದಲ್ಲಿ ಇಂದ್ರನನ್ನು ವರ್ಣಿಸುವಾಗ **ಅಧ್ರಿಗವೇ ಇಂದ್ರಾಯ** ಎಂದು ಉಕ್ತವಾಗಿರುವುದರಿಂದ **ಇಂದ್ರೋಽಪ್ಯಧ್ರಿಗುರುಚ್ಯತೇ** ಎಂದು ಯಾಸ್ಕರು ಅಧ್ರಿಗು ಶಬ್ದದಿಂದ ಇಂದ್ರನೂ ವಾಚ್ಯನಾಗಿರುವನೆಂದು ವಿವರಿಸಿದ್ದಾರೆ. ದುರ್ಗಾಚಾರ್ಯರು **ಅಧೃತಗಮನಾಯ ಅಪ್ರತಿಹತಗಮನಾಯ** ತಡೆಯಿಲ್ಲದಿರುವ ಸಂಚಾರವುಳ್ಳವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಇದನ್ನು ಅನುಸರಿಸಿ ಸಾಯಣರೂ ಅರ್ಥವನ್ನು ವರ್ಣಿಸಿರುವರು. ದುರ್ಗಾಚಾರ್ಯರು ಶಚೀವಃ ಎಂಬ ಪದಕ್ಕೆ ಕರ್ಮವನ್ ಎಂಬ ಅರ್ಥವನ್ನು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಶ್ಚೋತಂತಿ**—ಶ್ಚುತಿರ್ ಕ್ಷರಣೇ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಅಧ್ರಿಗೋ**—ಗಮನಂ ಗೌಃ ಇತಿ. ಗಮ್ಲ್ಯ ಸೃಪ್ಲ್ಯ ಗತೌ. ಭಾವಾರ್ಥದಲ್ಲಿ **ಗಮೇರ್ಡೋಃ** (ಉ. ಸೂ. ೨-೨೫) ಎಂಬುದರಿಂದ ಡೋಸ್ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಟಿಗೆ (ಅಮ್) ಲೋಪ. ಗೋ ಎಂದು ರೂಪವಾಗುತ್ತದೆ. ಅಧೃತಾ ಗೌಃ ಯೇನ ಅಧ್ರಿಗುಃ **ಗೋಸ್ತ್ರಿಯೋರುಪಸರ್ಜನಸ್ಯ** (ಪಾ. ಸೂ. ೧-೨-೪೮ ಎಂಬುದರಿಂದ ಸಮಾಸದಲ್ಲಿ ಗೋಶಬ್ದಕ್ಕೆ ಹ್ರಸ್ವ. ಉಕಾರ ಬರುತ್ತದೆ. ಪೃಷೋದರಾದಿಗಣಪಠಿತವಾದುದರಿಂದ ಧೃತಶಬ್ದಕ್ಕೆ ಧ್ರಿಭಾವ. ಸಂಬೋಧನಾ ಏಕವಚನದಲ್ಲಿ **ಸಂಬುದ್ಧೌಚ** (ಪಾ. ಸೂ. ೭-೩-೧೦೬) ಎಂಬುದರಿಂದ ಉಕಾರಕ್ಕೆ ಗುಣ. ಪದದ ಪರದಲ್ಲಿರುವುದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತ ಸ್ವರ ಬರುತ್ತದೆ.

**ಶಚೀವಃ**—ಮತುಬಂತವಾದ ಶಬ್ದ. ಸಂಬುದ್ಧಿಯಲ್ಲಿ **ಮತುವಸೋರುಃಸಂಬುದ್ಧೌ** (ಪಾ. ಸೂ. ೮ ೩-೧ ಎಂಬುದರಿಂದ ರುತ್ವ. **ಛಂದಸೀರಃ** ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಆಮಂತ್ರಿತನಿಘಾತಸ್ವರ ಬರುತ್ತದೆ.

**ಕವಿಶಸ್ತಃ**—ಶಂಸು ಸ್ತುತೌ ಧಾತು. ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. **ಅನಿದಿತಾಂಹಲ**—ಎಂಬುದರಿಂದ ಉಪಧಾನಕಾರಲೋಪ. ಉದಿತ್ತಾದುದರಿಂದ **ಯಸ್ಯ ವಿಭಾಷಾ** (ಪಾ. ಸೂ. ೭-೨-೧೫) ಎಂಬುದರಿಂದ ಇಣ್ನಿಷೇಧ ಬರುತ್ತದೆ. **ಥಾಥಘಞ್ಕ್ತಾಜಬಿತ್ರಕಾಣಾಂ** (ಪಾ. ಸೂ. ೬-೨-೧೪೪) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಭಾನುನಾ**—ಭಾ ದೀಪ್ತೌ ಧಾತು. **ದಾಭಾಭ್ಯಾಂ ನುಃ** (ಉ. ಸೂ. ೩-೩೧೨) ಎಂಬುದರಿಂದ ಕರ್ತರಿಯಲ್ಲಿ ನು ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ.

**ಅಗಾಃ**—ಇಣ್ ಗತೌ ಧಾತು. **ಛಂದಸಿಲುಙ್ಲಙ್ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲುಙ್. **ಇಣೋಗಾಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಲುಙ್ ಪರವಾದಾಗ ಧಾತುವಿಗೆ ಗಾ ಆದೇಶ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾ**— (ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬಂದಾಗ ಇಕಾರಲೋಪ. ಸಕಾರಕ್ಕೆ ರುತ್ವವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಮೇಧಿರ**—ಮೇಧಾ ಅಸ್ಯ ಅಸ್ತೀತಿ ಮೇಧಿರಃ **ಮೇಧಾರಥಾಭ್ಯಾಮಿರನಿರಚೌ ವಕ್ತವ್ಯೌ** ಎಂಬ ವಚನದಿಂದ ಈರನ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಸಂಬೋಧನೆಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

**ಓಜಿಷ್ಠಂ ತೇ ಮಧ್ಯತೋ ಮೇದ ಉದ್ಭೃತಂ ಪ್ರ ತೇ ವಯಂ ದದಾಮಹೇ ।**
**ಶ್ಚೋತಂತಿ ತೇ ವಸೋ ಸ್ತೋಕಾ ಅಧಿ ತ್ವಚಿ ಪ್ರತಿ ತಾನ್ದೇವಶೋ ವಿಹಿ ॥ ೫ ॥**

ಪದಪಾಠಃ

ಓಜಿಷ್ಠಂ । ತೇ । ಮಧ್ಯತಃ । ಮೇದಃ । ಉತ್ऽಭೃತಂ । ಪ್ರ । ತೇ । ವಯಂ । ದದಾಮಹೇ ।
ಶ್ಚೋತಂತಿ । ತೇ । ವಸೋऽಇತಿ । ಸ್ತೋಕಾಃ । ಅಧಿ । ತ್ವಚಿ । ಪ್ರತಿ । ತಾನ್ । ದೇವಽಶಃ । ವಿಹಿ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ಓಜಿಷ್ಠಂ ಅತಿಶಯೇನ ಸಾರಯುಕ್ತಂ ಮೇದೋ ವಪಾಖ್ಯಂ ಹವಿರ್ಮಧ್ಯತಃ ಪಶೋರ್ಮಧ್ಯಭಾಗಾತ್ತೇ ತ್ವದರ್ಥಮುದ್ಧೃತಮುಧೃತಮುಧ್ವರ್ಯ್ವಾದಯೋ ವಯಮಸ್ಮಿನ್ಪಶೌ ತೇ ತುಭ್ಯಂ ಪ್ರದದಾಮಹೇ । ಉದ್ಧೃತಂ ತದ್ವಪಾಖ್ಯಂ ಹವಿಃ ಪ್ರಯಚ್ಛಾಮಃ । ವಸೋ ಸರ್ವಸ್ಯ ಜಗತೋ ವಾಸಯಿತರ್ಹೇ ಅಗ್ನೇ ತ್ವಚ್ಯಧಿ ವಪಾಯಾಮುಪರಿ ಯೇ ಸ್ತೋಕಾ ಘೃತಮಿಶ್ರಾ ಬಿಂದವಸ್ತೇ ತೇ ತ್ವದರ್ಥಂ ಶ್ಚೋತಂತಿ । ಸ್ರವಂತಿ । ಯದ್ವಾ ತೇ ತವ ತ್ವಚ್ಯಧಿ ಜ್ವಾಲಾಖ್ಯಶರೀರಸ್ಯೋಪರಿ ಶ್ಚೋತಂತಿ । ತಾನ್ ಸ್ತೋಕಾನ್ದೇವಶೋ ದೇವೇಷು ಪ್ರತಿ ವಿಹಿ । ಪ್ರತ್ಯೇಕಂ ವಿಭಜಸ್ವ ॥ ಮಧ್ಯತಃ । ಮಧ್ಯಶಬ್ದಾತ್ ಪಂಚಮ್ಯಾಸ್ತಸಿಃ । ಪಾ. ೫-೪-೪೪-೧ । ಇತಿ ತಸಿಃ । ಪ್ರತ್ಯಯಸ್ವರಃ । ಉದ್ಧೃತಂ । ಹೃಞ್ ಹರಣೇ । ಕರ್ಮಣಿ ಕ್ತಃ । ಹೃಗ್ರಹೋರ್ಭಶ್ಛಂದಸೀತಿ ಹಕಾರಸ್ಯ ಭಕಾರಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ದದಾಮಹೇ । ದದ ದಾನ ಇತ್ಯಸ್ಯ ಲಟಿ ಞಿತ್ತ್ವಾದಾತ್ಮನೇಪದಂ । ಅತೋ ದೀರ್ಘೋ ಯಞೀತಿ ದೀರ್ಘಃ । ನಿಘಾತಃ । ಶ್ಚೋತಂತಿ । ಶ್ಚುತಿರ್ ಕ್ಷರಣೇ । ಪಾದಾದಿತ್ವಾದನಿಘಾತಃ । ಅಂತೇರ್ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಕೃತೇ ಧಾತುಸ್ವರಃ । ತ್ವಚಿ । ತನು ವಿಸ್ತಾರೇ । ತನೋತೇರನಶ್ಚ ವಃ । ಉ. ೨-೬೩ । ಇತಿ ಕರ್ತರಿ ಕರ್ಮಣಿ ವಾ ಚಿಕ್ । ಅಕಾರನಕಾರಯೋರ್ವಕಾರಾದೇಶಃ । ತನೋತಿ ತಾಯತೇ ವಾ ತ್ವಕ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ವಿಹಿ । ವೀ ಕಾಂತಿಗತ್ಯಾದಿಷ್ವಿತ್ಯಸ್ಯ ಲೋಟ್ಯದಾದಿತ್ವಾಚ್ಛಪೋ ಲುಕ್ । ಹ್ರಸ್ವಶ್ಛಾಂದಸಃ । ನಿಘಾತಃ । ೫೦ ॥

ಪ್ರತಿಪದಾರ್ಥ

(ಅಗ್ನೇ—ಎಲೈ ಅಗ್ನಿಯೇ)। **ಓಜಿಷ್ಠಂ**—ಅತ್ಯಂತಸಾರಯುಕ್ತವಾದುದೂ । **ಮಧ್ಯತಃ**—ಪಶುವಿನ ಮಧ್ಯ ಪ್ರದೇಶದಿಂದ । **ತೇ**—ನಿನಗಾಗಿ । **ಉದ್ಭೃತಂ**—ಹೊರಕ್ಕೆ ಎತ್ತಿಹಿಡಿದುದೂ । **ಮೇದಃ**—ವಪಾರೂಪವಾದುದೂ ಆದ ಹವಿಸ್ಸನ್ನೂ । **ವಯಂ**-ಅಧ್ವರ್ಯುವೇ ಮುಂತಾದ ನಾವುಗಳು । **ತೇ**—ನಿನ್ನನ್ನು ಉದ್ದೇಶಿಸಿ । **ಪ್ರದದಾಮಹೇ**—ಅರ್ಪಿಸುತ್ತೇವೆ । **ವಸೋ**—ಜಗತ್ತಿಗೆಲ್ಲಾ ವಾಸಸ್ಥಾನವನ್ನು ಕಲ್ಪಿಸುವ ಅಗ್ನಿಯೇ । **ತ್ವಚಿ ಅಧಿ**—ವಪೆಯಮೇಲೆ । **ಸ್ತೋಕಾಃ**—ಘೃತಮಿಶ್ರವಾದ ಬಿಂದುಗಳು । **ತೇ**—ನಿನಗಾಗಿ (ನಿನ್ನ ಜ್ವಾಲೆಯೊಳಗೆ) । **ಶ್ಚೋತಂತಿ**—ಸ್ರವಿಸುತ್ತವೆ । **ತಾನ್**—ಆ ಬಿಂದುಗಳನ್ನು । **ದೇವಶಃ**—ದೇವತೆಗಳಲ್ಲಿ । **ಪ್ರತಿ ವಿಹಿ**—ಪ್ರತ್ಯೇಕಮಾಡಿ ಎಲ್ಲರಿಗೂ ವಿಭಾಗಿಸು ॥

ಭಾವಾರ್ಥ

ಎಲೈ ಅಗ್ನಿಯೇ, ಅತ್ಯಂತ ಸಾರಯುಕ್ತವಾದುದೂ, ವಪಾರೂಪವಾದುದೂ ಆದ ಹವಿಸ್ಸನ್ನು ಪಶುವಿನ ಮಧ್ಯಪ್ರದೇಶದಿಂದ ನಿನಗಾಗಿ ಎತ್ತಿ ಹಿಡಿದು ಅಧ್ವರ್ಯುವೇ ಮುಂತಾದ ನಾವುಗಳು ನಿನ್ನನ್ನು ಉದ್ದೇಶಿಸಿ ಅರ್ಪಿಸುತ್ತೇವೆ. ಜಗತ್ತಿಗೆಲ್ಲಾ ವಾಸಸ್ಥಾನವನ್ನು ಕಲ್ಪಿಸುವ ಎಲೈ ಅಗ್ನಿಯೇ, ವಪೆಯಮೇಲೆ ಘೃತಮಿಶ್ರವಾದ ಬಿಂದುಗಳು ನಿನಗಾಗಿ ನಿನ್ನ ಜ್ವಾಲೆಯೊಳಕ್ಕೆ ಸ್ರವಿಸುತ್ತವೆ. ಆ ಬಿಂದುಗಳನ್ನು ವಿಭಾಗಮಾಡಿ ದೇವತೆಗಳಲ್ಲಿ ಎಲ್ಲರಿಗೂ ಹಂಚು.

## English Translation

We present to you the densest marrow that has been extracted for you from the interior (of the victim) : granter of dwellings, the drops fall for you upon the skin : distribnte them amongst the gods,

### ವಿಶೇಷವಿಷಯಗಳು

**ಓಜಿಷ್ಠಂ ಮೇದಃ ಮಧ್ಯತಃ ಉದ್ಭೃತಂ—ಅತಿಶಯೇನ ಸಾರಯುಕ್ತಂ ವಪಾಖ್ಯಂ ಹವಿಃ ಪಶೋರ್ಮಧ್ಯಭಾಗಾತ್ ತ್ವದರ್ಥಮುದ್ಧೃತಂ** ಪ್ರಭೂತವಾದ (ಶಕ್ತಿಯಿಂದ ಕೂಡಿ) ಸಾಮರ್ಥ್ಯವನ್ನು ಉಂಟು ಮಾಡುವ ವಪಾ ಎಂದು ಪ್ರಸಿದ್ಧವಾದ ಹವಿಸ್ಸು ಪಶುವಿನ ಶರೀರದ ಮಧ್ಯದಿಂದ ಅಗ್ನಿಗೋಸ್ಕರವಾಗಿ ಬೇರೆಯಾಗಿ ತೆಗೆಯಲ್ಪಟ್ಟು ಇರುವುದರಿಂದ ಇದನ್ನು ಅಧ್ವರ್ಯುವೇ ಮೊದಲಾದ ಋತ್ವಿಜರು ಈ ಪಶುಯಾಗದಲ್ಲಿ ಅಗ್ನಿಗಾಗಿಯೇ ಅರ್ಪಿಸಿರುತ್ತಾರೆ ಎಂದು ಅರ್ಥವನ್ನು ವಿವರಿಸಿದೆ.

**ವಸೋ—ಸರ್ವಸ್ಯ ಜಗತೋ ವಾಸಯಿತಃ**—ವಸುಶಬ್ದಕ್ಕೆ ಅನೇಕವಾದ ಅರ್ಥಗಳನ್ನು ಯಾಸ್ಕರು ವಿವರಿಸಿದ್ದಾರೆ. ಸಾಯಣರು ಇಲ್ಲಿ ಅಗ್ನಿಯು ಜಗತ್ತೆಲ್ಲವನ್ನೂ ಸುಖವಾಗಿ ವಾಸಮಾಡುವಂತೆ ಇರಿಸುವವನಾದುದ ರಿಂದ ವಸುಶಬ್ದದಿಂದ ಸಂಬೋಧಿತನಾಗಿ ಇರುವನೆಂದು ಅರ್ಥವನ್ನು ವರ್ಣಿಸಿ, **ಅಧಿ ತ್ವಚಿ ಸ್ತೋಕಾಃ ತೇ ಶ್ಚೋತಂತಿ—ವಪಾಯಾಂ ಉಪರಿ ಘೃತಮಿಶ್ರಾಃ ಬಿಂದವಃ ತ್ವದರ್ಥಂ ಸ್ರವಂತಿ-ಯದ್ವಾ; ತವ ಜ್ವಾಲಾಖ್ಯಶರೀರಸ್ಯ ಉಪರಿ ಸ್ರವಂತಿ** ಹವಿಸ್ಸಿನ ರೂಪದಿಂದ ಇರುವ ವಪೆಯ ಮೇಲುಗಡೆಯಲ್ಲಿ ಆಜ್ಯದ ಬಿಂದುಗಳು ಅಗ್ನಿಗೋಸ್ಕರ ವಾಗಿ ತೊಟ್ಟಿಕ್ಕುತ್ತವೆ. ಅಥವಾ ಅಗ್ನಿಯ ಜ್ವಾಲಾರೂಪವಾದ ಶರೀರದ ಮೇಲುಗಡೆಯಲ್ಲಿ ಆಜ್ಯದ ಬಿಂದುಗಳು ಜಿನುಗುತ್ತವೆ ಎಂದೂ, ಈ ಆಜ್ಯದ ಬಿಂದುರೂಪದಿಂದ ಕೂಡಿರುವ ಹವಿಸ್ಸುಗಳನ್ನು ಅಗ್ನಿಯು ಯಾಗಾರ್ಹರಾದ ಮತ್ತು ಯಾಗದಲ್ಲಿ ಆಹೂತರಾದ ದೇವತೆಗಳಿಗಾಗಿ ತಲಪಿಸಲಿ ಎಂದು ಆಶಂಸೆಯು ವರ್ಣಿತವಾಗಿದೆ.

**ಮೇದಃ—ವಪಾಖ್ಯಂ ಹವಿಃ** | ಯಾಸ್ಕರು **ಮೇದಃ ಮೇದ್ಯತೇಃ** (ನಿ. ೪–೩) ಸ್ನೇಹದಿಂದ ಕೂಡಿರುವ ಎಂಬ ಅರ್ಥವುಳ್ಳ ಮಿದಾ ಧಾತುವಿನಿಂದ ನಿಷ್ಪನ್ನವಾದ ಮೇದಸ್ ಶಬ್ದವು ಶರೀರದಲ್ಲಿ ಆರ್ದ್ರಭಾವವು ಇರುವಂತೆ ಮಾಡುವ ಧಾತುವಾಗಿರುವುದೆಂದು ವಿವೃತವಾಗಿದೆ ಎಂದು ವರ್ಣಿಸಿದ್ದಾರೆ. ಸಾಯಣರು ವಪಾ ಎಂದು ಹೆಸರುಳ್ಳ ಹವಿಸ್ಸೆಂದು ಅರ್ಥವನ್ನು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಮಧ್ಯತಃ**—ಮಧ್ಯಶಬ್ದದ ಮೇಲೆ **ಪಂಚಮ್ಯಾಸ್ತಸಿಃ** ( ಪಾ. ಸೂ. ೫-೪-೪೪ ) ಎಂಬುದರಿಂದ ತಸಿ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಉದ್‌ಭೃತಂ**—ಹೃಞ್ ಹರಣೇ. ಧಾತು. **ನಿಷ್ಠಾ** ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕಿತ್ತಾದುದರಿಂದ ಗುಣಬರುವುದಿಲ್ಲ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಧಾತುವಿನ ಹಕಾರಕ್ಕೆ ಭಕಾರಾ ದೇಶ. ಕರ್ಮಕ್ತಾಂತಪರವಾದುದರಿಂದ **ಗತಿರನಂತರಃ** (ಪಾ. ಸೂ. ೬–೨–೪೯) ಎಂಬುದರಿಂದ ಗತಿಗೆ (ಉದ್) ಉದಾತ್ತಸ್ವರ ಬರುತ್ತದೆ.

**ದದಾಮಹೇ**—ದದ ದಾನೇ. ಧಾತು. ಭ್ವಾದಿ. ಅನುದಾತ್ತೇತ್ತಾದುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತಆತ್ಮನೇ**—ಸೂತ್ರದಿಂದ ಟಿಗೆ ಏತ್ವ. ಶಪ್ ವಿಕರಣ.

**ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ಅದಂತಾಂಗಕ್ಕೆ ಪ್ರತ್ಯಯನಿಮಿತ್ತವಾಗಿ ದೀರ್ಘ. **ತಿಙ್ಙತಿಙಃ** ಎಂಬುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ಶ್ಚೋತಂತಿ**—ಶ್ಚುತಿರ್ ಕ್ಷರಣೇ. ಧಾತು. ಭ್ವಾದಿ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ತ್ವಚಿ**—ತನು ವಿಸ್ತಾರೇ. ಧಾತು. **ತನೋತೇರನಶ್ಚ ವಃ** (ಉ. ಸೂ. ೨-೨೧) ಎಂಬುದರಿಂದ ಇದಕ್ಕೆ ಕರ್ತರಿಯಲ್ಲಾಗಲೀ ಕರ್ಮಣಿಯಲ್ಲಾಗಲೀ ಟಕ್ ಪ್ರತ್ಯಯ. ಧಾತುವಿನ ನಕಾರಾಕಾರಗಳಿಗೆ ವಕಾರಾದೇಶ. ತನೋತಿ ತಾಯತೇ (ತನ್ಯತೇ) ವಾ ತ್ವಕ್. ಸಪ್ತಮ್ಯೇಕವಚನದಲ್ಲಿ ತ್ವಚಿ ಎಂದು ರೂಪವಾಗುತ್ತದೆ. ಏಕಾಚುಳ್ಳ ಶಬ್ದವಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದೇವಶಃ**—ದೇವ ಶಬ್ದದಮೇಲೆ ಸಪ್ತಮ್ಯರ್ಥದಲ್ಲಿ ಶಸ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಹಿ**—ವೀ ಕಾಂತಿಗತ್ಯಾದಿಷು. ಧಾತು. ಅದಾದಿ. ಲೋಟ್‌ಮಧ್ಯಮಪುರುಷಏಕವಚನಕ್ಕೆ ಹಿ ಆದೇಶ. ಅದು ಅಪಿತ್ತಾದುದರಿಂದ ಙಿತ್ತಾಗುವುದರಿಂದ ಗುಣ ಬರುವುದಿಲ್ಲ. ಛಾಂದಸವಾಗಿ ಧಾತುವಿಗೆ ಹ್ರಸ್ವ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

# ಇಪ್ಪತ್ತೆರಡನೆಯ ಸೂಕ್ತವು

**ಅಯಂ ಸ ಇತಿ ಪಂಚರ್ಚಂ ದಶಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಅಯಂ ಸ ಉಪಾಂತ್ಯಾನುಷ್ಟುಪ್ ಪುರೀಷ್ಯೇಭ್ಯೋಽಗ್ನಿಭ್ಯ ಇತಿ । ಋಷಿಃ ಕೌಶಿಕೋ ಗಾಥೀ । ಪಂಚಚಿತಿರೂಪಾ ಅಗ್ನಯೋ ದೇವತಾ । ಚತುರ್ಥ್ಯನುಷ್ಟುಪ್ ಶಿಷ್ಟಾಸ್ತ್ರಿಷ್ಟುಭಃ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತಃ ಸೂಕ್ತವಿನಿಯೋಗಃ । ಅಗ್ನಿಚಯನ ಇಷ್ಟಕಾಪ್ರಣಯನೇ ಪುರೀಷ್ಯಾಸ ಇತ್ಯೇಷಾನುವಚನೀಯಾ । ಪ್ರೇಷಿತಃ ಪುರೀಷ್ಯಚಿತಯೇಽನ್ವಾಹೇತ್ಯುಪಕ್ರಮ್ಯ ಪುರೀಷ್ಯಾಸೋ ಅಗ್ನಯ ಇತಿ ತ್ರಿರುಪಾಂಶು ಸಪ್ರಣವಮಿತಿ ಸೂತ್ರಿತಂ । ಆ ೪-೮ ॥**

**ಅನುವಾದವು**—**ಅಯಂ ಸ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಅಯಂ ಸ ಉಪಾಂತ್ಯಾನುಷ್ಟುಪ್ ಪುರೀಷ್ಯೇಭ್ಯೋಽಗ್ನಿಭ್ಯ ಇತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಕೌಶಿಕೋ ಗಾಥೀ ಎಂದರೆ ಕುಶಕಪುತ್ರನಾದ ಗಾಥೀ ಎಂಬುವನು ಋಷಿಯು; ಪಂಚಚಿತಿರೂಪಗಳಾದ ಅಗ್ನಿಗಳು ದೇವತೆಯು; ಈ ಸೂಕ್ತದ ನಾಲ್ಕನೆಯ ಋಕ್ಕು ಅನುಷ್ಟುಪ್‌ಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಪ್ರಾತರನುವಾಕ ಮತ್ತು ಅಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು; ಮತ್ತು ಅಗ್ನಿಚಯನದಲ್ಲಿ ಇಟ್ಟಿಗೆಗಳನ್ನು ತರುವಾಗ **ಪುರೀಷ್ಯಾಸ** ಎಂಬ (ಈ ಸೂಕ್ತದ ನಾಲ್ಕನೆಯ ಋಕ್ಕು) ಋಕ್ಕನ್ನು ಅನುವಚನೀಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-ಪ್ರೇ-

ಷಿತಃ ಪುರೀಷ್ಯಚಿತಯೇಽನ್ವಾಹೇತ್ಯುಪಕ್ರಮ್ಯ ಪುರೀಷ್ಯಾಸೋ ಅಗ್ನಯ ಇತಿ ತ್ರಿರುಪಾಂಶು ಸಪ್ರಣವಮಿತಿ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ४-೮).

## ಸೂಕ್ತ—೨೨

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೨ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫

ಋಷಿಃ—ಗಾಥೀ ॥

ದೇವತಾ—ಪುರೀಷ್ಯಾ ಅಗ್ನಯಃ ॥

ಛಂದಃ— ೧-೩, ೫. ತ್ರಿಷ್ಟುಪ್ ೪. । ಅನುಷ್ಟುಪ್ ॥

ಸಂಹಿತಾಪಾಠಃ

ಅಯಂ ಸೋ ಅಗ್ನಿರ್ಯಸ್ಮಿನ್ತ್ಸೋಮಮಿಂದ್ರಃ ಸುತಂ ದಧೇ ಜಠರೇ ವಾವಶಾನಃ ।
ಸಹಸ್ರಿಣಂ ವಾಜಮತ್ಯಂ ನ ಸಪ್ತಿಂ ಸಸವಾನ್ತ್ಸನ್ತ್ಸ್ತೂಯಸೇ ಜಾತವೇದಃ ॥ ೧ ॥

ಪದಪಾಠಃ

ಅಯಂ । ಸಃ । ಅಗ್ನಿಃ । ಯಸ್ಮಿನ್ । ಸೋಮಂ । ಇಂದ್ರಃ । ಸುತಂ । ದಧೇ । ಜಠರೇ । ವಾವಶಾನಃ ।
ಸಹಸ್ರಿಣಂ । ವಾಜಂ । ಅತ್ಯಂ । ನ । ಸಪ್ತಿಂ । ಸಸ೯ವಾನ್ । ಸನ್ । ಸ್ತೂಯಸೇ । ಜಾತವೇದಃ ॥ ೧ ॥

ಸಾಯಣಭಾಷ್ಯಂ

ಗಾಥೀ ಬ್ರೂತೇ । ಅಯಮುತ್ತರವೇದ್ಯಾಮಾಹುತ್ಯಧಿಕರಣಭೂತಾವಹನೀಯರೂಪತಯಾ ದೃಶ್ಯಮಾನೋಽಗ್ನಿಃ ಸ ತಥಾವಿಧಃ ಖಲು ವಾವಶಾನಃ ಸೋಮಂ ಕಾಮಯಮಾನ ಇಂದ್ರೋ ಯಸ್ಮಿನ್ನಗ್ನೌ ಸುತಮಭಿಷವಾದಿಸಂಸ್ಕಾರೋಪೇತಂ ಸೋಮಂ ಜಠರೇ ಸ್ವೋದರೇ ದಧೇ ದಧಾರ। ತಸ್ಮಾತ್ತಾದೃಶಮಹಿಮೋಪೇತಃ ಸೋಽಗ್ನಿರಿತಿ ಪೂರ್ವೇಣಾನ್ವಯಃ । ಕಿಂಚ । ಹೇ ಜಾತವೇದಃ ಸಹಸ್ರಿಣಂ । ಸಹಸ್ರಂ ನಾನಾರೂಪತಾಂ ಯುದ್ಧೇ ಯೋ ಭಜತಿ ಸ ಸಹಸ್ರೀ । ತಮತ್ಯಂ ವೇಗವಶಾದತನಶೀಲಂ ಸಪ್ತಿಂ ನ ಅಶ್ವಮಿವ ವಾಜಂ ಆಜ್ಯೌಷಧಿಸೋಮಾದ್ಯನೇಕಪ್ರಕಾರಂ ಹವಿರ್ಲಕ್ಷಣಮನ್ನಂ ಸಸವಾನ್ ಭೇಜಿವಾನ್ ಸನ್ ತ್ವಂ ಸ್ತೂಯಸೇ । ಸ್ತೋತೃಭಿರಸ್ಮಾಭಿಃ ಸ್ತೂಯಮಾನೋ ವರ್ತಸೇ ॥ ಧಧೇ । ದಧಾತೇರ್ಲಿಟಿ ಲಿಟಸ್ತಝಯೋರೇಶಿರೇಜಿತಿ ತಪ್ರತ್ಯಯಸ್ಯ ಏಶಿತ್ಯಾದೇಶಃ । ಯದ್ವೃತ್ತಯೋಗಾದನಿಘಾತಃ । ಪ್ರತ್ಯಯಸ್ವರಃ । ವಾವಶಾನಃ । ವಶ ಕಾಂತಾವಿತ್ಯಸ್ಯ ಯಙ್ಲುಕಿ ದೀರ್ಘೋಽಕಿತ ಇತ್ಯಭ್ಯಾಸಸ್ಯ ದೀರ್ಘಃ । ವ್ಯತ್ಯಯೇನ ಶಾನಚ್ । ಚಿತ್ಸ್ವರಃ । ಸಸವಾನ್ । ಷಣ ಸಂಭಕ್ತೌ । ಕ್ವಸಾವಿಡ್ಭಾವಃ । ನಲೋಪಃ । ಪ್ರತ್ಯ-

ಯಸ್ಸ್ವರಃ । **ಸ್ತೂಯಸೇ** । ಷ್ಟುಇಞ್ ಸ್ತುತೌ । ಕರ್ಮಣಿ ಯಕ್ । ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ । ನಿಘಾತಃ ॥

ಪ್ರತಿಪದಾರ್ಥ

**ವಾವಶಾನಃ**—ಸೋಮರಸವನ್ನಪೇಕ್ಷಿಸಿ । **ಇಂದ್ರಃ**—ಇಂದ್ರನು । **ಯಸ್ಮಿನ್**—ಯಾವ ಅಗ್ನಿಯಲ್ಲಿ । **ಸುತಂ**—ಅಭಿಷವಾದಿ ಸಂಸ್ಕಾರಯುಕ್ತವಾದ । **ಸೋಮಂ**—ಸೋಮರಸವನ್ನು । **ಜಠರೇ**—ತನ್ನ ಉದರದಲ್ಲಿ । **ದಧೇ**—ತುಂಬಿಕೊಂಡನೋ, । **ಅಯಂ**—ಉತ್ತರವೇದಿಯಲ್ಲಿರುವ । **ಅಗ್ನಿಃ**—ಅಗ್ನಿಯೂ ಸಹ । **ಸಃ**—ಅವನೇ ಆಗಿದ್ದಾನೆ. । **ಜಾತವೇದಃ**—ಉತ್ಪನ್ನವಾದ ಸಕಲವನ್ನೂ ತಿಳಿದ ಎಲೈ ಅಗ್ನಿಯೇ । **ಸಹಸ್ರಿಣಂ**—(ಯುದ್ಧರಂಗದಲ್ಲಿ) ನಾನಾವಿಧವಾದ ಸ್ವರೂಪವನ್ನು ತೋರಿಸುವುದೂ, । **ಅತ್ಯಂ**—ವೇಗವಾದ ಗಮನವುಳ್ಳದ್ದೂ ಆದ । **ಸಪ್ತಿಂ ನ**—ಅಶ್ವದೋಪಾದಿಯಲ್ಲಿ । **ವಾಜಂ**—ಆಜ್ಯ, ಓಷಧಿ, ಸೋಮ ಇತ್ಯಾದಿ ನಾನಾವಿಧವಾದ ಅನ್ನವನ್ನು । **ಸಸವಾನ್ಸನ್**—ಸೇವಿಸುತ್ತಾ । **ಸ್ತೂಯಸೇ**—(ನಮ್ಮಿಂದ) ಸ್ತುತಿಸಲ್ಪಡುತ್ತೀಯೆ.

ಭಾವಾರ್ಥ

ಯಾವ ಅಗ್ನಿಯಲ್ಲಿ ಸೋಮರಸವನ್ನಪೇಕ್ಷಿಸಿದ ಇಂದ್ರನು ಅಭಿಷವಾದಿ ಸಂಸ್ಕಾರಯುಕ್ತವಾದ ಸೋಮರಸವನ್ನು ತನ್ನ ಉದರದಲ್ಲಿ ತುಂಬಿಕೊಂಡನೋ, ಉತ್ತರವೇದಿಯಲ್ಲಿರುವ ಅಗ್ನಿಯೂ ಸಹ ಅವನೇ ಆಗಿದ್ದಾನೆ. ಉತ್ಪನ್ನವಾದ ಸಕಲ ವಸ್ತುಗಳನ್ನೂ ತಿಳಿದಿರುವ ಎಲೈ ಅಗ್ನಿಯೇ, ವೇಗಗಾಮಿಯಾದ ಯುದ್ಧರಂಗದಲ್ಲಿ ನಾನಾರೂಪವನ್ನು ಅನುಭವಗಳನ್ನೂ ಪಡೆಯುವ ಅಶ್ವದಂತೆ ಆಜ್ಯಾದಿ ನಾನಾವಿಧವಾದ ಅನ್ನವನ್ನು ಸೇವಿಸುತ್ತಾ ನೀನು ನಮ್ಮಿಂದ ಸ್ತುತಿಸಲ್ಪಡುತ್ತೀಯೆ.

English Translation

This is that Agni in whom Indra, desirous (of the oblation), placed the effused Soma for (his own) belly: you are praised by us Jatavedas enjoying the sacrificial food of many sorts like a rapid courser (enjoying many pleasures in battle).

ವಿಶೇಷವಿಷಯಗಳು.

**ಅಯಮಗ್ನಿಃ ಸಃ**—**ಉತ್ತರವೇದ್ಯಾಮಾಹುತ್ಯಧಿಕರಣಭೂತಾಹವನೀಯರೂಪತಯಾ ದೃಶ್ಯಮಾನಃ** ಉತ್ತರವೇದಿಯು ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಆಹವನೀಯವೆಂಬ ಅಗ್ನಿಯ ವಾಸಸ್ಥಾನವಾಗಿರುವುದರಿಂದ ಅಲ್ಲಿ ಪ್ರತ್ಯಕ್ಷವಾಗಿ ತನ್ನ ಮಹಿಮೆಯಿಂದ ಕೂಡಿ ಪ್ರಕಾಶಿಸುತ್ತಿರುವುದೆಂಬ ಅರ್ಥವನ್ನು ವರ್ಣಿಸಿ, **ವಾವಶಾನಃ ಇಂದ್ರಃ ಯಸ್ಮಿನ್ ಸುತಂ ಸೋಮಂ ಜಠರೇ ದಧಾರ** । ಈ ಅಗ್ನಿಯಲ್ಲಿ ಹವಿಸ್ಸಿನರೂಪದಿಂದ ಅರ್ಪಿತವಾಗಿರುವ ಸೋಮರಸವನ್ನು ಅದನ್ನು ಅಪೇಕ್ಷಿಸುವ ಇಂದ್ರನಿಗೆ ಅರ್ಪಿಸುವುದಕ್ಕಾಗಿ ತನ್ನಲ್ಲಿಯೇ ಇರಿಸಿಕೊಂಡಿರುವನು ಎಂದು ವಿವರಿಸಿದೆ. ಇದರಿಂದ ದೇವತೆಗಳಿಗೆ ತೃಪ್ತಿಯನ್ನು ಉಂಟುಮಾಡುವ ಪ್ರಭೂತವಾದ ಮಹಿಮೆಯಿಂದಲೇ ಈ ಅಗ್ನಿಯು ಪ್ರಕಾಶಿಸುತ್ತಿರುವನೆಂದೂ ಅರ್ಥವನ್ನು ವಿವರಿಸಿದೆ.

**ಜಾತವೇದಃ**—ಈ ಪದದಿಂದ ಆಹವನೀಯಾಗ್ನಿಯನ್ನು ಸಂಬೋಧಿಸಿ, **ಸಹಸ್ರಿಣಂ ಅತ್ಯಂ ಸಪ್ತಿಂ ನ**—**ವೇಗವಶಾತ್ ಅತನಶೀಲಂ ಅಶ್ವಮಿವ** ಯುದ್ಧಗಳಲ್ಲಿ ಅನೇಕ ವಿಧವಾಗಿರುವ ರೂಪಾಂತರಗಳನ್ನು (ಗಮನಗಳನ್ನು)

ಹೊಂದುವ ಕಾರಣದಿಂದ ವೇಗವಾಗಿ ಸಂಚರಿಸುವ ಅಶ್ವದಹಾಗೆ ಅಗ್ನಿಯು ಇರುವನೆಂದು ಹೋಲಿಸಿ ಹೇಳಿ, ಹವಿಸ್ಸಿನ ರೂಪದಿಂದ ಇರುವ ಆಜ್ಯ, ಓಷಧಿ ಸೋಮವೇ ಮೊದಲಾದ ಅನೇಕ ವಿಧವಾದ ಅನ್ನವನ್ನು ಅಗ್ನಿಯು ಹೊಂದಿರುವನು ಎಂದೂ, ಸ್ತೋತೃಗಳಾದ ಋತ್ವಿಜರಿಂದ ಈ ಅಗ್ನಿಯೇ ಸ್ತುತಿಸಲ್ಪಡುವನು ಎಂದೂ ವರ್ಣಿಸಿದೆ.

ಅತ್ಯಂ— ಅತನಶೀಲಂ ಅತ್ಯಶಬ್ದವು ಅಶ್ವನಾಮಗಳಲ್ಲಿ (ನಿ. ೨-೨೭) ಉಕ್ತವಾಗಿದೆ. ಇಲ್ಲಿ ಸಂಚರಿಸುವ ಸ್ವಭಾವವುಳ್ಳದ್ದೆಂದು ಇಲ್ಲಿ ಅರ್ಥವನ್ನು ಹೇಳಿದೆ.

ಸಪ್ತಿಂ— ಈ ಪದವು ಅಶ್ವನಾಮಗಳಲ್ಲಿ (ನಿ. ೨-೨೭) ಉಕ್ತವಾಗಿದೆ.

ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾಃ ಮರುತಃ ಪರಿ ಖ್ಯನ್ ।
ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ॥

(ಋ. ಸಂ. ೧-೧೬೨-೧)

ಈ ಋಕ್ಕಿನಲ್ಲಿ ಅಶ್ವವು ದೇವತೆಗಳಿಂದ ಉತ್ಪನ್ನವಾಗಿದೆ ಎಂದೂ ಆ ಪ್ರಕಾರವಾದ ಮಹಿಮೆಯಿಂದ ಕೂಡಿರುವುದೆಂದೂ ವಿವೃತವಾಗಿದೆ.

ವಾವಶಾನಃ— ವಷ್ಟೇರ್ವಾ ವಾಶ್ಯತೇರ್ವಾ (ನಿ. ೫-೧) ಈ ಪದವು ಕಾಂತ್ಯರ್ಥಕವಾದ ವಶಧಾತುವಿನಿಂದ ಲಾಗಲಿ, ಅಥವಾ ಶಬ್ದಮಾಡು ಎಂಬ ಅರ್ಥವುಳ್ಳ ವಾಶ್‌ಧಾತುವಿನಿಂದಲಾಗಲಿ ನಿಷ್ಪನ್ನವಾಗಿದೆ. ಈ ಪದಕ್ಕೆ ಕಾಮಯಮಾನಃ ಅಪೇಕ್ಷಿಸುವವನು ಎಂಬ ಅರ್ಥವನ್ನು ಇಲ್ಲಿ ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಸುತಂ**— ಷುಞ್ ಅಭಿಷವೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಧಾತ್ವಾದಿಗೆ ಸತ್ವ. ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ದಧೇ— ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಲಿಟಸ್ತಝಯೋರೇಶಿರೇಚ್** (ಪಾ. ಸೂ. ೩-೪-೮೧) ಎಂಬುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮.೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದ ಅಂತೋದಾತ್ತವಾಗುತ್ತದೆ.

ಜಠರೇ— ಜನೀ ಪ್ರಾದುರ್ಭಾವೇ. ಧಾತು. **ಜನೇರರಷ್ಠಚ** (ಉ. ಸೂ. ೫-೭೧೬) ಎಂಬುದರಿಂದ ಅರ ಪ್ರತ್ಯಯ. ಧಾತುವಿನ ಅಂತ್ಯಕ್ಕೆ ಠಕಾರಾದೇಶ. ಪ್ರತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

ವಾವಶಾನಃ— ವಶ ಕಾಂತೌ. ಧಾತು. ಅತಿಶಯಾರ್ಥದಲ್ಲಿ ಯಙ್ ಬಂದಾಗ **ಯಙೋಽಚಿಚ** ಎಂಬುದರಿಂದ ಅದಕ್ಕೆ ಲುಕ್. **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ವ್ಯತ್ಯಯೋಬಹುಲಂ** ಎಂಬುದರಿಂದ ಯಙ್‌ಲುಙ್‌ಂತದಮೇಲೆ ಲಟ್ ಬಂದಾಗ ಅದಕ್ಕೆ ಶಾನಚಾದೇಶ. ಇದು ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಸವಾನ್**— ಷಣ ಸಂಭಕ್ತೌ. ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ನಕಾರಕ್ಕೆ ಲೋಪ. ಧಾತುವಿಗೆ ದ್ವಿತ್ವಾದಿ. ಪ್ರತ್ಯಯಸ್ವರದಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಸ್ತೂಯಸೇ**—ಷ್ಟುಞ್ ಸ್ತುತೌ. ಧಾತು. ಕರ್ಮಣಿಯಲ್ಲಿ ಲಟ್. **ಥಾಸಃ ಸೇ** ಎಂಬುದರಿಂದ ಮಧ್ಯಮಪುರು ಏಕವಚನಕ್ಕೆ ಸೇ ಆದೇಶ. **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಅಕೃತ್ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಯಕ್ ನಿಮಿತ್ತವಾಗಿ ಧಾತುವಿನ ಉಕಾರಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

**ಅಗ್ನೇ ಯತ್ತೇ ದಿವಿ ವರ್ಚಃ ಪೃಥಿವ್ಯಾಂ ಯದೋಷಧೀಷ್ವಪ್ಸ್ವಾ ಯಜತ್ರ ।**
**ಯೇನಾಂತರಿಕ್ಷಮುರ್ವಾತತಂಥ ತ್ವೇಷಃ ಸ ಭಾನುರರ್ಣವೋ ನೃಚಕ್ಷಾಃ ॥ ೨ ॥**

ಪದಪಾಠಃ

ಅಗ್ನೇ । ಯತ್ । ತೇ । ದಿವಿ । ವರ್ಚಃ । ಪೃಥಿವ್ಯಾಂ । ಯತ್ । ಓಷಧೀಷು । ಅಪ್ಽಸು । ಆ । ಯಜತ್ರ ।
ಯೇನ । ಅಂತರಿಕ್ಷಂ । ಉರು । ಆಽತತಂಥ । ತ್ವೇಷಃ । ಸಃ । ಭಾನುಃ । ಅರ್ಣವಃ । ನೃಽಚಕ್ಷಾಃ ॥ ೨ ॥

ಸಾಯಣಭಾಷ್ಯಂ

ಯಜತ್ರ ಯಜನೀಯ ಹೇ ಅಗ್ನೇ ದಿವಿ ದ್ಯುಲೋಕೇ ಯದ್ವರ್ಚ ಆದಿತ್ಯಾಖ್ಯಂ ಯಜ್ಜ್ಯೋತಿಸ್ತತ್ತೇ ತವೈವ ಜ್ಯೋತಿಃ। ಪೃಥಿವ್ಯಾಮಾಹವನೀಯಾದಿರೂಪತಯಾ ವರ್ತಮಾನಂ ಯತ್ತೇಜಸ್ತತ್ತ್ವದೀಯಮೇವ। ಪ್ರಸಿದ್ಧಂ ತೇಜೋಽಭಿಧಾಯ ಗೂಢಂ ಜ್ಯೋತಿರಭಿಧತ್ತೇ । ಯದೋಷಧೀಷ್ವಪ್ಸ್ವಿತಿ। ಓಷಧೀಷ್ವರಣಿಪ್ರಭೃತಿಷು ಕಾಷ್ಠೇಷು ಯತ್ತೇಜಃ। ಯದ್ವಾ। ಓಷಧೀಷು ವನಸ್ಪತ್ಯಾದಿಷು ಸೋಮಾಖ್ಯಂ ಯತ್ತೇಜೋಽಪ್ಸು ಜಲೇಷು ಯದೌರ್ವಾಖ್ಯಂ ತೇಜಸ್ತತ್ಸರ್ವಂ ಆ ಸರ್ವತ್ರ ವರ್ತಮಾನಂ ತೇಜಸ್ತಾವಕಮೇವ। ಕಿಂಚ ಯೇನ ವಾಯುರೂಪೇಣ ತೇಜಸಾಂತರಿಕ್ಷಮಾಕಾಶಮುರ್ವಾತತಂಥ ಆತೇನಿಥ ವಿಸ್ತೀರ್ಣಂ ಕೃತವಾನಸಿ । ತ್ವೇಷೋ ದೀಪ್ತಿಮಾನ್ ಅತ ಏವ ಭಾನುರ್ಭಾಸಮಾನೋ ನೃಚಕ್ಷಾ ನೃಣಾಂ ಸಾಕ್ಷಿತಯಾ ದ್ರಷ್ಟಾರ್ಣವಃ ಸಮುದ್ರವನ್ಮಹಾನ್ । ಸ ತಾದೃಶಸ್ತ್ವಮಂತರಿಕ್ಷಮಾತೇನಿಥೇತಿ ಪೂರ್ವೇಣಾನ್ವಯಃ। ಉಕ್ತಾರ್ಥೇ ವಾಜಸನೇಯಕಂ। ಅಗ್ನೇ ಯತ್ತೇ ದಿವಿ ವರ್ಚ ಇತ್ಯಾದಿತ್ಯೋ ವಾ ಅಸ್ಯ ದಿವಿ ವರ್ಚಃ ಪೃಥಿವ್ಯಾಮಿತ್ಯಯಮಗ್ನಿಃ ಪೃಥಿವ್ಯಾಂ ಯದೋಷಧೀಷ್ವಪ್ಸ್ವಾ ಯಜತ್ರೇತಿ ಯ ಏವೌಷಧೀಷು ಚಾಪ್ಸು ಚಾಗ್ನಿಸ್ತಮೇತದಾಹ ಯೇನಾಂತರಿಕ್ಷಮುರ್ವಾತತಂಥೇತಿ ವಾಯುಃ ಸ ತ್ವೇಷಃ ಸ ಭಾನುರರ್ಣವೋ ನೃಚಕ್ಷಾ ಇತಿ ಮಹಾಂತ್ಸಭಾನುರರ್ಣವೋ ನೃಚಕ್ಷಾ ಇತ್ಯೇತತ್ । ಶತ. ಬ್ರಾ. ೭-೧-೨೩। ಇತಿ ॥

ಪೃಥಿವ್ಯಾಂ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ಓಷಧೀಷು । ಓಷಧೇಶ್ಚ ವಿಭಕ್ತಾವಪ್ರಥಮಾಯಾಮಿತಿ ದೀರ್ಘತ್ವಂ । ಅಪ್ಸು । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಆತತಂಥ। ತನು ವಿಸ್ತಾರ ಇತ್ಯಸ್ಯ ಲಿಟಿ ಥಲಿ ಬಭೂಥಾತತಂಥ ಜಗೃಭ್ಮ ವವರ್ಥೇತಿ ನಿಪಾನಾದಿಡೇತ್ವಾ-

ಭ್ಯಾಸಲೋಪಾ ನ ಭವಂತಿ | ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ | ಯದ್ವೃತ್ತಯೋಗಾದನಿಘಾತಃ| ಅರ್ಣವಃ| ಅರ್ಣಾಂಸ್ಯಸ್ಮಿನ್ಸಂತೀತಿ ಮತುಬರ್ಥೇ ವಪ್ರಕರಣೇಽನ್ಯೇಭ್ಯೋಽಪಿ ದೃಶ್ಯಂತೆ ಇತಿ ವಪ್ರತ್ಯಯಃ| ಅರ್ಣಸಃ ಸಲೋಪಶ್ಚೇತಿ ಸಲೋಪಃ | ಪ್ರತ್ಯಯಸ್ವರಃ | ನೃಚಕ್ಷಾಃ | ಚಕ್ಷಿಙ್ ವ್ಯಕ್ತಾಯಾಂ ವಾಚಿ | ಅಭಿವ್ಯಕ್ತವಾಗ್ವಾಚ್ಯಯಂ ಧಾತುರತ್ರಾಭಿವ್ಯಕ್ತಿಮಾತ್ರೇ ವರ್ತತೇ | ಚಕ್ಷೇರ್ಬಹುಲಂ ಶಿಚ್ಚೇತ್ಯಸುನ್ | ಕೃದುತ್ತರಪದಪ್ರಕೃತಿಸ್ವರಃ ||

ಪ್ರತಿಪದಾರ್ಥ

**ಯಜತ್ರ**—ಯಜ್ಞಾರ್ಹನಾದ | **ಅಗ್ನೇ**—ಎಲೈ ಅಗ್ನಿಯೇ, | **ದಿವಿ**—ದ್ಯುಲೋಕದಲ್ಲಿ | **ಯತ್ ವರ್ಚಃ**—ಆದಿತ್ಯಾಖ್ಯನಾದ ಯಾವ ತೇಜಸ್ಸಿದೆಯೋ, | **ಪೃಥಿವ್ಯಾಂ**—ಆಹವನೀಯಾದಿ ರೂಪದಲ್ಲಿ ಪೃಥ್ವಿಯಲ್ಲಿ ಯಾವ ತೇಜಸ್ಸಿದೆಯೋ, | **ಓಷಧೀಷು**—ಅರಣಿಯೇ ಮುಂತಾದ ಓಷಧಿಗಳಲ್ಲಿ ಯಾವ ತೇಜಸ್ಸು ಅಂತರ್ಗತ ವಾಗಿದೆಯೋ, ಮತ್ತು | **ಅಪ್ಸು**—ಉದಕಗಳಲ್ಲಿ | **ಯತ್**—ಔರ್ವಾಖ್ಯವಾದ ಯಾವ ತೇಜಸ್ಸು | **ಆ**—ಸರ್ವತ್ರ ವ್ಯಾಪಿಸಿ ಹರಡಿದೆಯೋ ಅವೆಲ್ಲವೂ ಸಹ | **ತೇ**—ನಿನ್ನ ತೇಜೋವಿಶೇಷಗಳೇ ಆಗಿವೆ | **ಯೇನ**—ವಾಯುರೂಪ ವಾದ ಯಾವ ತೇಜಸ್ಸಿನಿಂದ | **ಅಂತರಿಕ್ಷಂ**—ಅಂತರಿಕ್ಷವನ್ನು | **ಉರು**—ವಿಸ್ತೃತವಾದದ್ದನ್ನಾಗಿ | **ಆತತಂಥ**—ನಿರ್ಮಿಸಿದೆಯೋ | **ಸಃ**—ಆ ನಿನ್ನ ತೇಜಸ್ಸು | **ತ್ವೇಷಃ**—ದೀಪ್ತಿಮತ್ತಾದುದೂ, | **ಭಾನುಃ**—ಭಾಸಮಾನ ವಾದುದೂ, | **ನೃಚಕ್ಷಾಃ**—ಮಾನವರ ವ್ಯವಹಾರಗಳನ್ನು ನೋಡಿ ತಿಳಿಯತಕ್ಕದ್ದೂ ಆಗಿ | **ಅರ್ಣವಃ**—ಸಮುದ್ರ ದಂತೆ ಅತ್ಯಂತ ವಿಸ್ತೃತವಾಗಿದೆ.

ಭಾವಾರ್ಥ

ಯಜ್ಞಾರ್ಹನಾದ ಎಲೈ ಅಗ್ನಿಯೇ, ದ್ಯುಲೋಕದಲ್ಲಿ ಆದಿತ್ಯಾಖ್ಯವಾದ ತೇಜಸ್ಸಿದೆಯೋ, ಆಹವನೀಯಾದಿ ರೂಪದಲ್ಲಿ ಪೃಥ್ವಿಯಲ್ಲಿ ಯಾವ ತೇಜಸ್ಸಿದೆಯೋ, ವನಸ್ಪತಿಗಳಲ್ಲಿ ಅಂತರ್ಗತವಾಗಿ ಯಾವ ತೇಜಸ್ಸಿದೆಯೋ, ಉದಕ ಗಳಲ್ಲಿ ಔರ್ವಾಖ್ಯವಾದುದು ಯಾವುದಿದೆಯೋ ಅವೆಲ್ಲವೂ ಸಹ ನಿನ್ನ ತೇಜೋವಿಶೇಷಗಳೇ ಆಗಿವೆ. ವಾಯುರೂಪ ವಾದ ಯಾವ ತೇಜಸ್ಸಿನಿಂದ ನೀನು ಅಂತರಿಕ್ಷವನ್ನು ವಿಸ್ತೃತವಾಗುವಂತೆ ಮಾಡಿದೆಯೋ, ಆ ನಿನ್ನ ತೇಜಸ್ಸು ದೀಪ್ತಿ ಮತ್ತಾದುದೂ, ಭಾಸಮಾನವಾದುದೂ, ಮಾನವರ ವ್ಯವಹಾರಗಳನ್ನು ನೋಡಿ ತಿಳಿಯತಕ್ಕದ್ದೂ ಆಗಿ ಸಮುದ್ರದಂತೆ ಅತ್ಯಂತ ವಿಸ್ತೃತವಾಗಿದೆ.

## English Translation.

Adorable Agni, your radiance that is in the heaven, on the earth, in the plants, in the water, and wherewith you overspread the firmament, that is shining and resplendent, overlooking man (vast as) the ocean.

ವಿಶೇಷವಿಷಯಗಳು

**ಯಜತ್ರ** ಎಂಬ ಪದಕ್ಕೆ ಯಜನೀಯ ಯಾಗದಲ್ಲಿ ಪೂಜಿಸಲರ್ಹನಾದವನು ಎಂದು ಅರ್ಥವನ್ನು ವಿವರಿಸಿ ಅಗ್ನಿಯನ್ನು ಸಂಬೋಧಿಸಿದೆ.

**ದಿವಿ ಯತ್ ವರ್ಚಃ ತೇ—ದ್ಯುಲೋಕೇ ಆದಿತ್ಯಾಖ್ಯಂ ಯತ್ ಜ್ಯೋತಿಃ ತತ್ ತವೈವ |** ವರ್ಚಃ ಎಂಬ ಪದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ತೇಜಸ್ಸು ಎಂದು ಅರ್ಥವನ್ನು ವಿವರಿಸಿ

ದ್ಯುಲೋಕದಲ್ಲಿರುವ ಸರ್ವರಿಗೂ ಪ್ರತ್ಯಕ್ಷದಲ್ಲಿ ಕಾಣುವ ಆದಿತ್ಯನೆಂದು ಪ್ರಸಿದ್ಧವಾಗಿರುವ ತೇಜಸ್ಸು ಅಗ್ನಿಯ ಸಂಬಂಧವಾದ ತೇಜಸ್ಸಾಗಿರುವುದು ಎಂದು ವರ್ಣಿಸಿದೆ.

**ಪೃಥಿವ್ಯಾಂ—ಆಹವನೀಯಾದಿ ರೂಪತಯಾ ವರ್ತಮಾನಂ ಯತ್ತೇಜಃ** | ಯಾಗಶಾಲೆಯಲ್ಲಿ ಆಹವನೀಯ, ಗಾರ್ಹಪತ್ಯ, ಎಂಬ ಇವೇ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿ ಯಾಗಾರ್ಹವಾಗಿರುವ ಪಾರ್ಥಿವಾಗ್ನಿಯ ಸಂಬಂಧವಾದ ತೇಜಸ್ಸೂಕೂಡ ಅಗ್ನಿಯ ತೇಜಸ್ಸೇ ಆಗಿರುವುದು ಎಂದು ವಿವರಿಸಿದೆ.

ಪ್ರಭೂತವಾದ ರೂಪವನ್ನು ಹೊಂದಿ ಪ್ರಕಾಶದಿಂದ ಬೆಳಗುತ್ತಿರುವ ಆದಿತ್ಯ ಮತ್ತು ತ್ರೇತಾಗ್ನಿಗಳು ಅಗ್ನಿಯ ತಾದಾತ್ಮ್ಯಭಾವದಿಂದ ಇರುವಿಕೆಯನ್ನು ವಿವರಿಸಿ ಸೂಕ್ಷ್ಮರೂಪದಿಂದ ಅಗ್ನಿಯು ತನ್ನ ತೇಜಸ್ಸಿನಿಂದ ವ್ಯಾಪಿಸಿರುವುದನ್ನೂ ವ್ಯಾಪನಾರ್ಹವಾಗಿರುವ ಆಧಾರವನ್ನೂ **ಯದೋಷಧೀಷ್ವಪ್ಸ್ವಾ** ಎಂಬ ವಾಕ್ಯದಿಂದ ವರ್ಣಿಸಿದೆ.

**ಓಷಧೀಷು**—ಯಾಗದಲ್ಲಿ ಮಥನಮಾಡುವಾಗ ಉತ್ಪನ್ನನಾಗುವ ಅಗ್ನಿಗೆ ಉತ್ಪತ್ತಿಸ್ಥಾನವಾಗಿರುವ ಅರಣಿಗಳಲ್ಲಿಯೂ, ಯಾಗದಲ್ಲಿ ಹವಿಸ್ಸಿನ ರೂಪದಿಂದ ಅರ್ಪಿತವಾಗುವ ಸೋಮರೂಪದಿಂದ ಇರುವ, ವನಸ್ಪತಿಯೇ ಮೊದಲಾದವುಗಳಲ್ಲಿ (ಯೂಪಸ್ತಂಭ) ಇರುವ, **ಅಪ್ಸು** ಉದಕಗಳಲ್ಲಿ ಔರ್ವ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ, ತೇಜಸ್ಸು, ಓಷಧಿ ವನಸ್ಪತಿ ಉದಕಗಳಲ್ಲಿ ಸೂಕ್ಷ್ಮರೂಪವಾಗಿರುವ ತೇಜಸ್ಸು ಇವೆಲ್ಲವೂ **ತಾವಕಮೇವ** ಅಗ್ನಿಯ ತೇಜಸ್ಸುಗಳೇ ಆಗಿವೆ ಎಂದು ವಿವರಿಸಿ, ಅಗ್ನಿಯ ತೇಜಸ್ಸು ಸರ್ವವ್ಯಾಪಿಯಾಗಿರುವುದು ಎಂದು ವರ್ಣಿಸಿದೆ.

ಅಗ್ನಿಯ ತೇಜಸ್ಸು ಪ್ರಭೂತವಾದ ಮತ್ತು ಸೂಕ್ಷ್ಮರೂಪಗಳಿಂದ ವ್ಯಾಪಿಸಿರುವುದನ್ನು ವರ್ಣಿಸಿ, **ಯೇನಾಂತರಿಕ್ಷಂ ಉರು ಆತತಂಥ** ಎಂಬ ವಾಕ್ಯಕ್ಕೆ **ವಾಯುರೂಪೇಣ ತೇಜಸಾ ಆಕಾಶಂ ಆತತಂಥ** ಅಗ್ನಿಯು ವಾಯುರೂಪವಾದ ತೇಜಸ್ಸಿನಿಂದ ಅಂತರಿಕ್ಷದಲ್ಲಿಯೂ ವ್ಯಾಪಿಸಿರುವನು ಎಂದು ವಿವರಿಸಿದೆ.

**ತ್ವೇಷಃ, ಭಾನುಃ, ನೃಚಕ್ಷಾಃ, ಅರ್ಣವಃ—ದೀಪ್ತಿಮಾನ್, ಭಾಸಮಾನಃ, ನೃಣಾಂ ಸಾಕ್ಷಿತಯಾ ದ್ರಷ್ಟಾ, (ಅರ್ಣವಃ) ಸಮುದ್ರವತ್ ಮಹಾನ್** | ಅಗ್ನಿಯು ತನ್ನ ತೇಜಸ್ಸಿನಿಂದ ಕಾಂತಿಯುಳ್ಳವನಾಗಿರುವನು, ಪ್ರಕಾಶಿಸುತ್ತಾ ಎಲ್ಲಕ್ಕೂ ಪ್ರಕಾಶವನ್ನು ಉಂಟುಮಾಡುವವನು, ಮನುಷ್ಯರು ಆಚರಿಸುವ ಕರ್ಮಗಳಿಗೆಲ್ಲಕ್ಕೂ ಸಾಕ್ಷಿಯಾಗಿ ಇರುವನು, ಉದಕಗಳ ರಾಶಿಯಾದ ಸಮುದ್ರವು ದೊಡ್ಡದಾಗಿರುವಂತೆ ಅಗ್ನಿಯು ಮಹಿಮೆಯಿಂದ ದೊಡ್ಡವನಾಗಿರುವನು ಎಂದು ಅಗ್ನಿಯ ಪ್ರಭೂತವಾದ ತೇಜಸ್ಸಿನ ಸ್ವರೂಪವನ್ನು ವರ್ಣಿಸುವುದರ ಮೂಲಕವಾಗಿ ಅಗ್ನಿಯ ಪ್ರಭಾವವು ವರ್ಣಿತವಾಗಿದೆ. ಈ ಅಂಶವು ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿದೆ ಎಂದು ಅಲ್ಲಿಯ ವಾಕ್ಯವನ್ನು ಉಪಹರಿಸಿದೆ—

> **ಅಗ್ನೇ ಯತ್ತೇ ದಿವಿ ವರ್ಚ ಇತ್ಯಾದಿತ್ಯೋ ವಾ ಅಸ್ಯ ದಿವಿ ವರ್ಚಃ ಪೃಥಿವ್ಯಾಮಿತ್ಯಯಮಗ್ನಿಃ ಪೃಥಿವ್ಯಾಂ ಯದೋಷಧೀಷ್ವಪ್ಸ್ವಾ ಯಜತ್ರೇತಿ ಯ ಏವೌಷಧೀಷು ಚಾಪ್ಸು ಚಾಗ್ನಿಸ್ತಮೇತದಾಹ ಯೇನಾಂತರಿಕ್ಷಮುರ್ವಾತತಂಥೇತಿ ವಾಯುಃ ಸ ತ್ವೇಷಃ ಸ ಭಾನುರರ್ಣವೋ ನೃಚಕ್ಷಾ ಇತಿ ಮಹಾನ್ತ್ಸಭಾನುರರ್ಣವೋ ನೃಚಕ್ಷಾ ಇತ್ಯೇತತ್ ||**
>
> (ಶ. ಬ್ರಾ. ೭-೧-೨೩)

ಇಲ್ಲಿ ದ್ಯು ಪೃಥಿವೀ ಓಷಧಿ ವನಸ್ಪತಿ ಉದಕ, ಅಂತರಿಕ್ಷಗಳಲ್ಲಿ ಅಗ್ನಿಯ ತೇಜಸ್ಸಿನ ಸ್ಥಿತಿಯೂ, ಅಗ್ನಿಯು ಕರ್ಮಸಾಕ್ಷಿಯಾಗಿ ತೇಜಸ್ಸಿನ ರಾಶಿಯಾಗಿ ಇರುವಿಕೆಯೂ ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ದಿವಿ**— **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೃಥಿವ್ಯಾಂ**— ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಓಷಧೀಷು**— ಇವಕ್ಕೆ ಸಪ್ತಮೀ ಬಹುವಚನ ಪರವಾದಾಗ **ಓಷಧೇಶ್ಚ ವಿಭಕ್ತಾವಪ್ರಥಮಾಯಾಂ** ಪಾ. ಸೂ. ೬-೩-೧೩೨) ಎಂಬುದರಿಂದ ದೀರ್ಘ ಬರುತ್ತದೆ.

**ಅಪ್ಸು**—ಸಪ್ತಮೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಆತತಂಥ**—ಆಙ್ ಉಪಸರ್ಗ. ತನು ವಿಸ್ತಾರೇ. ಧಾತು. ಲಿಟ್ ಮಧ್ಯಮಪುರುಷ ಏಕವಚನಕ್ಕೆ ಥಲಾದೇಶ. **ಬಭೂಥಾತತಂಥ ಜಗೃಂಭವವರ್ಥ**—(ಪಾ. ಸೂ. ೭-೨-೬೪) ಎಂಬುದರಿಂದ ನಿಪಾತಮಾಡಿರುವುದರಿಂದ ಇಡಾಗಮವೂ ಏತ್ವಾಭ್ಯಾಸಲೋಪಗಳೂ ಬರುವುದಿಲ್ಲ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಿಙಿಚೋದಾತ್ತವತಿ** ಎಂಬುದರಿಂದ ಗತಿಗೆ (ಆ) ಅನುದಾತ್ತಸ್ವರ ಬರುತ್ತದೆ.

**ಅರ್ಣವಃ**—ಅರ್ಣಾಂಸಿ ಅಸ್ಮಿನ್ ಸಂತಿ ಇತಿ ಅರ್ಣವಃ **ವಪ್ರಕರಣೇ ಅನ್ಯೇಭ್ಯೋಪಿ ದೃಶ್ಯತೇ** (೫-೩-೧೦೯-೧) ಎಂಬ ವಚನದಿಂದ ಮತುಬರ್ಥದಲ್ಲಿ ವ ಪ್ರತ್ಯಯ. **ಅರ್ಣಸಃ ಸಲೋಪಶ್ಚ** ಎಂಬುದರಿಂದ ಇದು ಪರವಾದಾಗ ಪ್ರಕೃತಿಯ ಸಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನೃಚಕ್ಷಾಃ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು ಅದಾದಿ. ಅಭಿವ್ಯಕ್ತವಾಗರ್ಥಕವಾದ ಧಾತುವಾದರೂ ಇಲ್ಲಿ ಅಭಿವ್ಯಕ್ತಿ (ಪ್ರಕಾಶ) ಮಾತ್ರಾರ್ಥವನ್ನು ಕೊಡುತ್ತದೆ. **ಚಕ್ಷೇರ್ಬಹುಲಂಶಿಚ್ಚ** (ಉ. ಸೂ. ೪-೬೭೨) ಎಂಬುದರಿಂದ ಅಸುನ್ ಪ್ರತ್ಯಯ. ಶಿತ್ವವಿಧಾನಮಾಡಿರುವುದರಿಂದ ಪ್ರತ್ಯಯನಿಮಿತ್ತವಾಗಿ ಖ್ಯಾಞಾದೇಶ ಬರುವುದಿಲ್ಲ. ಕಾರಕಪೂರ್ವಪದವಾಗಿರುವುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

———

ಸಂಹಿತಾಪಾಠಃ

ಅಗ್ನೇ ದಿವೋ ಅರ್ಣಮಚ್ಛಾ ಜಿಗಾಸ್ಯಚ್ಛಾ ದೇವಾಁ ಊಚಿಷೇ ಧಿಷ್ಣ್ಯಾ ಯೇ ।
ಯಾ ರೋಚನೇ ಪರಸ್ತಾತ್ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪಃ ॥ ೩ ॥

ಪದಪಾಠಃ

ಅಗ್ನೇ । ದಿವಃ । ಅರ್ಣಂ । ಅಚ್ಛ । ಜಿಗಾಸಿ । ಅಚ್ಛ । ದೇವಾನ್ । ಊಚಿಷೇ । ಧಿಷ್ಣ್ಯಾಃ । ಯೇ ।
ಯಾಃ । ರೋಚನೇ । ಪರಸ್ತಾತ್ । ಸೂರ್ಯಸ್ಯ । ಯಾಃ । ಚ । ಅವಸ್ತಾತ್ । ಉಪತಿಷ್ಠಂತೇ । ಆಪಃ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ದಿವೋಽರ್ಣಂ ದ್ಯುಲೋಕೇ ವರ್ತಮಾನಮುದಕಂ ಅಭ್ಯಭಿಲಕ್ಷ್ಯ ಜಿಗಾಸಿ । ಧೂಮದ್ವಾರಾ ಪ್ರಾಪ್ನೋಷಿ । ಕಿಂಚ । ಧಿಷ್ಣ್ಯಾಃ । ಧಿಯಂ ಬುದ್ಧ್ಯುಪಹಿತಂ ದೇಹಮುಷ್ಣಂ-ತ್ಯುಷ್ಣೀಕುರ್ವಂತೀತಿ ಧಿಷ್ಣ್ಯಾಃ ಪ್ರಾಣಾಭಿಮಾನಿನೋ ದೇವಾಃ। ತಾನ್ಪ್ರಾಣಾಖ್ಯಾನ್ದೇವಾನಚ್ಛಾನುಕ್ರಮೇ-ಣೋಚಿಷೇ । ಸಮವೇತಾನ್ಕರೋಷಿ। ಸಮವೇತಾ ಭವತೇತ್ಯುಕ್ತವಾನಸೀತ್ಯರ್ಥಃ। ಸೂರ್ಯಸ್ಯ ಸೂರ್ಯ-ಲೋಕಸ್ಯ ಪರಸ್ತಾದುಪರಿ ರೋಚನೇ । ರೋಚನೋ ನಾಮಾಯಂ ಲೋಕೋ ಯತ್ರಾಗ್ನೇಯಂ ಜ್ಯೋತಿಸ್ತಪತಿ । ತಸ್ಮಿನ್ಪ್ರಾಪಸಮಾನೇ ರೋಚನಾಖ್ಯೇ ಲೋಕೇ ಯಾ ಆಪೋ ವಿದ್ಯಂತೇ ಅವಸ್ತಾ-ತ್ಸೂರ್ಯಲೋಕಾದಧಸ್ತಾದಂತರಿಕ್ಷಲೋಕೇ ಯಾಶ್ಚಾಪ ಉಪತಿಷ್ಠಂತೇ ವರ್ತಂತೇ ತಾ ಉಭಯೀರ-ಪಸ್ತ್ವಂ ಪ್ರೇರಯಸಿ । ಉಕ್ತಾರ್ಥೋ ವಾಜಸನೇಯಿಭಿಃ ಸ್ಪಷ್ಟಮಭಿಹಿತಃ। ಆಪೋ ವಾ ಅಸ್ಯ ದಿವೋಽ-ರ್ಣಸ್ತಾ ಏಷ ಧೂಮೇನಾಚ್ಛೇತ್ಯಚ್ಛಾ ದೇವಾ ಊಚಿಷೇ ಧಿಷ್ಣ್ಯಾ ಯ ಇತಿ ಪ್ರಾಣಾ ವೈ ದೇವಾ ಧಿಷ್ಣ್ಯಾಸ್ತೇ ಹಿ ಸರ್ವಾ ಧಿಯ ಇಷ್ಣಂತಿ ಯಾ ರೋಚನೇ ಪರಸ್ತಾತ್ಸೂರ್ಯಸ್ಯ ಯಾಶ್ಚಾ ವಸ್ತಾದುಪತಿ-ಷ್ಠಂತ ಆಪ ಇತಿ ರೋಚನೋ ಹ ನಾಮೈಷ ಲೋಕೋ ಯತ್ರೈಷ ಏತತ್ತಪತಿ ತದ್ಯಾಶ್ಚೈತಂ ಪರೇ-ಣಾಪೋ ಯಾಶ್ಚಾವರೇಣ ತಾ ಏತದಾಹ । ಶತ. ಬ್ರಾ. ೭-೧-೨೪। ಇತಿ । ತಾ ಉಭಯೀರಪಸ್ತ್ವಂ ಪ್ರೇರ-ಯಸೀತಿ ॥ ಅರ್ಣಂ । ಋ ಗತಾವಿತ್ಯಸ್ಮಾದುದಕೇ ನುಟ್ ಚೇತ್ಯಸುನ್ನುಡಾಗಮಶ್ಚ । ಅರ್ಯತೇ ಪ್ರಾ-ರ್ಥ್ಯತೇ ತೃಷ್ಣಿಪಾಸುಭಿರಿತ್ಯರ್ಣಃ । ಸಕಾರಲೋಪಶ್ಛಾಂದಸಃ । ನಿತ್ತ್ವಾದಾದ್ಯುದಾತ್ತಃ । ಜಿಗಾಸಿ । ಗಾ ಸ್ತುತೌ ಚ ಛಂದಸೀತ್ಯಯಂ ಧಾತುಶ್ಚಕಾರಾದ್ಗಮನೇ ವರ್ತಮಾನೋ ಜುಹೋತ್ಯಾದಿಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ನಿಘಾತಃ । ಊಚಿಷೇ । ಬ್ರೂಞ್ ವ್ಯಕ್ತಾಯಾಂ ವಾಚೀತ್ಯೇತಸ್ಯ ಲಿಟ ಆರ್ಧಧಾತುಕತ್ವಾದ್ಬ್ರುವೋ ವಚಿಃ । ಪಾ. ೨-೪-೫೩ । ಇತಿ ವಚ್ಯಾದೇಶಃ । ಅಸಂಯೋಗಾಲ್ಲಿಟ್ ಕಿದಿತಿ ಕಿತ್ತ್ವಾದ್ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ। ಅಭ್ಯಾಸಸ್ಯ ಲಿಟ್ಯಭ್ಯಾಸಸ್ಯೋಭಯೇಷಾಮಿತಿ ಸಂಪ್ರ-ಸಾರಣಂ । ಆರ್ಧಧಾತುಕ ಇಟ್ । ನಿಘಾತಃ । ಧಿಷ್ಣ್ಯಾಃ । ಉಷ ಪ್ಲುಷ ದಾಹೇ । ಧಿಯ ಉಷ್ಣಂತೀತಿ ಸಾನಸಿಧರ್ಣಸಿಪರ್ಣಸಿತಂಡುಲಾಂಕುಶಚಷಾಲೇಲ್ವಲಪಲ್ವಲಧಿಷ್ಣ್ಯಶಲ್ಯಾ ಇತಿ ನಿಪಾತನಾತ್ ಯನ್ನು-ಡಾಗಮಧಾತ್ವಾದಿಲೋಪೋಪಪದಹ್ರಸ್ವಾದಯಃ ಸರ್ವೇ ಸಿದ್ಧಾ ಭವಂತಿ । ನಿತ್ತ್ವಾದಾದ್ಯುದಾತ್ತಃ । ಅವ-ಸ್ತಾತ್ । ಅವರಶಬ್ದಾತ್ ದಿಕ್ಛಬ್ದೇಭ್ಯಃ ಸಪ್ತಮೀಪಂಚಮೀತ್ಯಾದಿನಾ ಅಸ್ತಾತಿಃ । ತಸ್ಮಿನ್ವಿಭಾಷಾ-ವರಸ್ಯ । ಪಾ.೫-೩-೪೧ । ಇತ್ಯವಾದೇಶಃ । ಪ್ರತ್ಯಯಸ್ವರಃ । ಉಪತಿಷ್ಠಂತೇ । ಷ್ಠಾ ಗತಿನಿವೃತ್ತೌ । ಉಪ-ಪೂರ್ವಾತ್ತಿಷ್ಠತೇರಕರ್ಮಕಾಚ್ಚ (ಪಾ. ೧-೩-೨೬ । ಇತ್ಯಾತ್ಮನೇಪದಂ । ಯದ್ವೃತ್ತಯೋಗಾದನಿಘಾತಃ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । (ತ್ವಂ—ನೀನು) । ದಿವಃ—ದ್ಯುಲೋಕದಲ್ಲಿರುವ । ಅರ್ಣಂ ಅಚ್ಛ—ಉದಕಕ್ಕೆ ಅಭಿಮುಖವಾಗಿ । ಜಿಗಾಸಿ—ಹೋಗುತ್ತೀಯೆ (ಅದರೊಂದಿಗೆ ಸೇರಿಕೊಳ್ಳುತ್ತೀಯೆ) । ಧಿಷ್ಣ್ಯಾಃ—ಪ್ರಾಣರೂಪದಲ್ಲಿರುವ । ದೇವಾನ್—ದೇವತೆಗಳನ್ನು । ಅಚ್ಛ—ಅನುಕ್ರಮವಾಗಿ । ಊಚಿಷೇ—ಒಂದಾಗಿ ಸೇರಿಸು ತ್ತೀಯೆ । ಸೂರ್ಯಸ್ಯ—ಸೂರ್ಯಲೋಕದ । ಪರಸ್ತಾತ್—ಮೇಲುಭಾಗದಲ್ಲಿ। ರೋಚನೇ—ರೋಚನವೆಂಬ ಹೆಸರುಳ್ಳ ಲೋಕದಲ್ಲಿ । ಯಾಃ—ಯಾವ ಉದಕಗಳಿವೆಯೋ (ಮತ್ತು) । ಅವಸ್ತಾತ್—ಸೂರ್ಯಲೋಕಕ್ಕಿಂತಲೂ ಕೆಳಗಡೆ

ಇರುವ ಅಂತರಿಕ್ಷಲೋಕದಲ್ಲಿ | **ಯಾಶ್ಚ ಆಪಃ**—ಯಾವ ಉದಕಗಳು | **ಉಪತಿಷ್ಠಂತೇ**—ಇರುತ್ತವೆಯೋ (ಅವೆಲ್ಲ ವನ್ನೂ ಚೈತನ್ಯಗೊಳಿಸುತ್ತೀಯೆ) ||

ಭಾವಾರ್ಥ

ಎಲೈ ಅಗ್ನಿಯೇ, ನೀನು ಊರ್ಧ್ವಾಭಿಮುಖವಾಗಿ ಪ್ರಸರಿಸಿ ದ್ಯುಲೋಕದಲ್ಲಿರುವ ಉದಕವನ್ನು ಸೇರಿಕೊಳ್ಳು ತ್ತೀಯೆ. ಪ್ರಾಣರೂಪವಲ್ಲಿರುವ ದೇವತೆಗಳನ್ನು ಅನುಕ್ರಮವಾಗಿ ಒಂದಾಗುವಂತೆ ಸೇರಿಸುತ್ತೀಯೆ. ಸೂರ್ಯಲೋಕದ ಮೇಲುಭಾಗವಾದ ರೋಚನವೆಂಬ ಹೆಸರುಳ್ಳ ಲೋಕದಲ್ಲೂ ಮತ್ತು ಸೂರ್ಯಲೋಕದ ಕೆಳಗಡೆ ಇರುವ ಅಂತರಿಕ್ಷಲೋಕ ದಲ್ಲೂ ಯಾವ ಉದಕಗಳಿವೆಯೋ ಅವೆಲ್ಲವನ್ನೂ ನೀನು ಚೈತನ್ಯಗೊಳಿಸುತ್ತೀಯೆ. ಎಂದರೆ ಪ್ರವಹಿಸುವಂತೆ ಮಾಡುತ್ತೀಯೆ.

English Translation

you move, Agni, to the vapour in heaven; you congregate the divinities who are the vital airs (of the body); you animate the waters in the bright region above the sun, as well as those that are in the firmament beneath.

ವಿಶೇಷವಿಷಯಗಳು

**ದಿವೋ ಅರ್ಣಂ ಅಚ್ಛ ಜಿಗಾಸಿ—ದ್ಯುಲೋಕೇ ವರ್ತಮಾನಂ ಅಪ್ಸುಃ ಅಭಿಲಕ್ಷ್ಯ ಧೂಮದ್ವಾರಾ ಪ್ರಾಪ್ನೋಷಿ** | ಅರ್ಣಸ್ ಎಂಬ ಪದವು ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ. ಅಗ್ನಿಯು ದ್ಯುಲೋಕ ದಲ್ಲಿರುವ ಉದಕಗಳನ್ನು ಧೂಮರೂಪದಿಂದ ವ್ಯಾಪಿಸಿರುವನೆಂದು ಅರ್ಥವನ್ನು ವಿವರಿಸಿದೆ.

**ಧಿಷ್ಣ್ಯಾಃ—ಬುದ್ಧ್ಯಾಸಹಿತಂ ದೇಹಮುಷ್ಣಂತಿ ಉಷ್ಣೀಕುರ್ವಂತಿ ಇತಿ ಧಿಷ್ಣ್ಯಾಃ ಪ್ರಾಣಾಭಿ- ಮಾನಿನೋ ದೇವಾಃ** | ಯಾಸ್ಕರು ಧಿಷ್ಣ್ಯ ಶಬ್ದದ ಅರ್ಥವನ್ನು ವಿವರಿಸಿದ್ದಾರೆ.—

> **ಧಿಷ್ಣ್ಯಾದ್ಧಿಷ್ಣ್ಯೇ ಧಿಷಣ್ಯೋ ಧಿಷಣಾಭವಃ ಧಿಷಣಾ ವಾಗ್ಧಿಷೇರ್ದಧಾತ್ಯರ್ಥೇ ಧೀಸಾದಿ- ನೀತಿ ವಾ ಧೀಸಾನಿನೀತಿ ವಾ** | (ನಿ. ೮–೪).

ದುರ್ಗಾಚಾರ್ಯರು ಧಿಷಧಾತುವಿನೊಡನೆ ದಧಧಾತುವು ಸೇರಿ **ವಾಕ್ ಅರ್ಥಂ ಧಾರಯತಿ** ಶಬ್ದಕ್ಕೂ ಅರ್ಥಕ್ಕೂ ಸಂಬಂಧವು ನಿತ್ಯವಾಗಿರುವುದರಿಂದ ಶಬ್ದವು ಅರ್ಥವನ್ನು ಧರಿಸಿರುವುದು ಎಂದು ಒಂದು ವಿಧವಾದ ಅರ್ಥವನ್ನೂ, ಧೀ ಶಬ್ದಕ್ಕೆ ಪ್ರಜ್ಞಾ ಅಥವಾ ಕರ್ಮ ಎಂದು ಅರ್ಥವು ಇರುವುದರಿಂದ ಪ್ರಜ್ಞೆಯನ್ನಾಗಲಿ, ಅಥವಾ ಕರ್ಮವನ್ನಾಗಲಿ, ಹೊಂದುವುದು ಎಂದೂ, ಪ್ರಜ್ಞೆಯಲ್ಲಾಗಲಿ ಅಥವಾ ಕರ್ಮದಲ್ಲಾಗಲಿ ಇರುವುದು ಎಂದೂ, ಅರ್ಥವನ್ನು ಧಿಷ್ಣ್ಯಶಬ್ದಕ್ಕೆ ವಿವರಿಸಿದ್ದಾರೆ. ಸಾಯಣರು ಬುದ್ಧಿಯನ್ನು ಉಪಾಧಿಯನ್ನಾಗಿ ಮಾಡಿಕೊಂಡು ಶರೀರವನ್ನು ತೇಜಸ್ಸುಳ್ಳದ್ದನ್ನಾಗಿ ಮಾಡುವ ಪ್ರಾಣಾಭಿಮಾನಿಗಳಾದ ದೇವತೆಗಳೆಂದು ಧಿಷ್ಣ್ಯ ಶಬ್ದದ ಅರ್ಥವನ್ನು ವಿವರಿಸಿರುವರು. ಮತ್ತು **ದೇವಾನ್ ಅಚ್ಛ ಊಚಿಷೇ** ಎಂಬ ವಾಕ್ಯದಿಂದ ಅಗ್ನಿಯು ಪ್ರಾಣಾಭಿಮಾನಿದೇವತೆಗಳು ಎಲ್ಲರೂ ಒಂದೇವಿಧವಾದ ಅಭಿಪ್ರಾಯ ವುಳ್ಳವರಾಗಿರಬೇಕೆಂದು ಹೇಳಿರುವನು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಸೂರ್ಯಸ್ಯ ಪರಸ್ತಾತ್ ರೋಚನೇ ಯಾ ಆಪಃ—ಸೂರ್ಯಲೋಕಸ್ಯ ಉಪರಿ ರೋಚನೋ ನಾಮಾಯಂ ಲೋಕಃ ಯತ್ರಾಗ್ನೇಯಂ ಜ್ಯೋತಿಃ ತಪತಿ** | **ತಸ್ಮಿನ್ ಭಾಸಮಾನೇ ರೋಚನಾಖ್ಯೇ**

ಲೋಕೇ ಯಾಃ ಆಪಃ ವಿದ್ಯಂತೇ ಸೂರ್ಯಲೋಕಾತ್ ಅಧಸ್ತಾತ್ ಅಂತರಿಕ್ಷಲೋಕೇ ಯಾಃ ಆಪಃ ಉಪತಿಷ್ಠಂತೇ ತಾ ಉಭಯೀರಪಸ್ತ್ವಂ ಪ್ರೇರಯಸಿ ಸೂರ್ಯಲೋಕದ ಮೇಲುಭಾಗದಲ್ಲಿ ಅಗ್ನಿಯ ತೇಜಸ್ಸಿನಿಂದ ಬೆಳಗುತ್ತಿರುವ ರೋಚನ ಎಂಬ ಲೋಕದಲ್ಲಿ ಇರುವ ಉದಕಗಳನ್ನೂ ಸೂರ್ಯಲೋಕದ ಕೆಳಭಾಗವಾದ ಅಂತರಿಕ್ಷದಲ್ಲಿರುವ ಉದಕಗಳನ್ನೂ ಅಗ್ನಿಯು ಲೋಕದ ಕ್ಷೇಮಕ್ಕಾಗಿ ಪ್ರೇರಿಸುತ್ತಿರುವನೆಂದು ವಿವರಿಸಿ ಈ ಮಂತ್ರದ ಅಭಿಪ್ರಾಯವೆಲ್ಲವನ್ನು ವರ್ಣಿಸಿರುವ ಶತಪಥ ಬ್ರಾಹ್ಮಣದ ವಾಕ್ಯವನ್ನು ಉಪಹರಿಸಿದ್ದಾರೆ.

> ಆಪೋ ವಾ ಅಸ್ಯ ದಿವೋಽರ್ಣಸ್ತಾ ಏಷ ಧೂಮೇನಾಚ್ಛೇತ್ಯಚ್ಛಾ ದೇವಾँ ಊಚಿಷೇ ಧಿಷ್ಣ್ಯಾ ಯೇ ಇತಿ ಪ್ರಾಣಾ ವೈ ದೇವಾ ಧಿಷ್ಣ್ಯಾಸ್ತೇ ಹಿ ಸರ್ವಾ ಧಿಯ ಇಷ್ಣಂತಿ ಯಾ ರೋಚನೇ ಪರಸ್ತಾತ್ ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪ ಇತಿ ರೋಚನೋ ಹ ನಾಮೈಷ ಲೋಕೋ ಯತ್ರೈಷ ಏತತ್ತಪತಿ ತದ್ಯಾಶ್ಚೈತಂ ಪರೇಣಾಪೋ ಯಾಶ್ಚಾವರೇಣ ತಾ ಏತದಾಹ । (ಶ. ಬ್ರಾ. ೭-೧-೨೪)

ಅಯಮರ್ಥೋ ವಾಜಸನೇಯಿಭಿಃ ಸ್ಪಷ್ಟಮುಕ್ತಃ ಈ ವಾಕ್ಯದಲ್ಲಿ ಈ ಮಂತ್ರದ ಅರ್ಥವು ಸ್ಪಷ್ಟವಾಗಿ ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಅರ್ಣಃ**—ಋ ಗತೌ ಧಾತು. **ಉದಕೇ ನುಟ್ ಚ** (ಉ. ಸೂ. ೪-೬೩೭) ಎಂಬುದರಿಂದ ಅಸುನ್ ಪ್ರತ್ಯಯ. ಅದಕ್ಕೆ ನುಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಅರ್ಯತೇ-ಪ್ರಾರ್ಥ್ಯತೇ ತತ್ಪಿಪಾಸುಭಿರಿತಿ ಅರ್ಣಃ (ಬಾಯಾರಿಕೆಯುಳ್ಳವರಿಂದ ಪ್ರಾರ್ಥಿಸಲ್ಪಡುವುದು) ಛಾಂದಸವಾಗಿ ಅಂತ್ಯಸಕಾರಕ್ಕೆ ಲೋಪ. ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ( ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಚ್ಛ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಜಿಗಾಸಿ**—ಗಾ ಸ್ತುತೌ ಧಾತು. ಇದು ಛಂದಸ್ಸಿನಲ್ಲಿ ಮಾತ್ರ ಪ್ರಯೋಗಿಸಲ್ಪಡುತ್ತದೆ. ಚಕಾರದಿಂದ ಇಲ್ಲಿ ಗಮನಾರ್ಥದಲ್ಲಿ ಪ್ರಯುಕ್ತವಾಗಿದೆ. ಜುಹೋತ್ಯಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಊಚಿಷೇ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲಿಟ್ ಮಧ್ಯಮಪುರುಷಏಕವಚನದಲ್ಲಿ **ಥಾಸಃ ಸೇ** ಎಂಬುದರಿಂದ ಸೇ ಆದೇಶ. ಆರ್ಧಧಾತುಕಸಂಜ್ಞೆ ಇರುವ ಈ ಪ್ರತ್ಯಯ ಪರವಾದಾಗ **ಬ್ರುವೋವಚಿಃ** ( ಪಾ. ಸೂ. ೨-೪-೫೩) ಎಂಬುದರಿಂದ ಧಾತುವಿಗೆ ವಚ್ಯಾದೇಶ. **ಅಸಂಯೋಗಾಲ್ಲಿಟ್ ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ತ್ವವಿರುವುದರಿಂದ **ವಚಿಸ್ವಪಿಯಜಾ**—(ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿನ ವಕಾರಕ್ಕೆ ಉಕಾರರೂಪ ಸಂಪ್ರಸಾರಣ. ಅಕಾರಕ್ಕೆ ಪೂರ್ವರೂಪ. **ಲಿಟ್ಯಭ್ಯಾಸಸ್ಯೋಭಯೇಷಾಂ** ಎಂಬುದರಿಂದ ಅಭ್ಯಾಸವಕಾರಕ್ಕೂ ಸಂಪ್ರಸಾರಣ. ಪೂರ್ವರೂಪ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ, **ಆದೇಶಪ್ರತ್ಯಯಯೋಃ** ಎಂಬುದರಿಂದ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಧಿಷ್ಣ್ಯಾಃ—ಉಪ ಪ್ಲುಷ ದಾಹೇ ಧಾತು. ಧಿಯಃ ಉಷ್ಣಂತೀತಿ ಧಿಷ್ಣ್ಯಾಃ ಸಾನಸಿ ಧರ್ಣಸಿ ಪರ್ಣಸಿ ತಂಡುಲಾಂಕುಶ ಚಷಾಲೇಲ್ವಲ ಪಲ್ವಲ ಧಿಷ್ಣ್ಯಶಲ್ಯಾಃ (ಉ. ಸೂ. ೪–೫೪೭) ಎಂಬುದರಿಂದ ನಿಪಾತಮಾಡಿರುವುದರಿಂದ ನುಡಾಗಮು, ಧಾತ್ವಾದಿಲೋಪ, ಉಪಪದ (ಧೀ) ಹ್ರಸ್ವ ಮುಂತಾದವುಗಳು ಸೂತ್ರಪ್ರವೃತ್ತಿ ಇಲ್ಲದೆ ಸಿದ್ಧವಾಗುತ್ತವೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಪರಸ್ತಾತ್—ಸಪ್ತಮ್ಯರ್ಥದಲ್ಲಿ ಅಸ್ತಾತಿ ಪ್ರತ್ಯಯ. ಯಸ್ಯೇತಿಚ ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅವಸ್ತಾತ್—ಅವರ ಶಬ್ದ. ದಿಕ್ಛಬ್ದೇಭ್ಯಃ ಸಪ್ತಮೀಪಂಚಮೀ—(ಪಾ. ಸೂ. ೫–೩–೨೭)ಎಂಬುದರಿಂದ ಅಸ್ತಾತಿ ಪ್ರತ್ಯಯ. ಇದು ಪರವಾದಾಗ ವಿಭಾಷಾವರಸ್ಯ (ಪಾ. ಸೂ. ೫–೩–೪೧) ಎಂಬುದರಿಂದ ಅವರ ಎಂಬುದಕ್ಕೆ ಅವಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಉಪತಿಷ್ಠಂತೇ—ಷ್ಠಾ ಗತಿನಿವೃತ್ತೌ ಧಾತು. ಉಪ ಎಂಬ ಉಪಸರ್ಗ ಸಂಬಂಧವಿರುವುದರಿಂದ ಅಕರ್ಮಕಾಚ್ಚ (ಪಾ. ಸೂ. ೧–೩–೨೬) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷ ಬಹುವಚನಾಂತ ರೂಪ. ಯದ್ವೃತ್ತಾನ್ನಿತ್ಯಂ (ಪಾ. ಸೂ. ೮–೧–೬೬) ಎಂಬುದರಿಂದ ಯಚ್ಛಬ್ದದ ಸಂಬಂಧವಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ತಾಸ್ಯನುದಾತ್ತೇತ್—(ಪಾ. ಸೂ. ೬–೧–೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ತಿಙಿಚೋದಾತ್ತವತಿ (ಪಾ. ಸೂ. ೮–೧–೭೧) ಎಂಬುದರಿಂದ ಗತಿಗೆ (ಉಪ) ಸರ್ವಾನುದಾತ್ತಸ್ವರ ಬರುತ್ತದೆ.

---

ಸಂಹಿತಾಪಾಠಃ

ಪುರೀಷ್ಯಾಸೋ ಅಗ್ನಯಃ ಪ್ರಾವಣೇಭಿಃ ಸಜೋಷಸಃ ।
ಜುಷಂತಾಂ ಯಜ್ಞಮದ್ರುಹೋಽನಮೀವಾ ಇಷೋ ಮಹೀಃ ॥ ೪ ॥

ಪದಪಾಠಃ

ಪುರೀಷ್ಯಾಸಃ । ಅಗ್ನಯಃ । ಪ್ರವಣೇಭಿಃ । ಸಽಜೋಷಸಃ ।
ಜುಷಂತಾಂ । ಯಜ್ಞಂ । ಅದ್ರುಹಃ । ಅನಮೀವಾಃ । ಇಷಃ । ಮಹೀಃ ॥ ೪ ॥

ಸಾಯಣಭಾಷ್ಯಂ

ಪುರೀಷ್ಯಾಸಃ ಸಿಕತಾಸಂಮಿಶ್ರಾ ಅಗ್ನಯಶ್ಚಿತ್ಯಾ ಅಗ್ನಯಃ ಪ್ರವಣೇಭಿರ್ಮೃತ್ಖನನಸಾಧನಭೂತೈರಭ್ರ್ಯಾದಿಭಿಃ ಸಹಿತಾಃ ಸಜೋಷಸಃ ಪರಸ್ಪರಸಂಗತಾಃ ಸಂತೋ ಯಜ್ಞಮಸ್ಮಾಭಿಃ ಕ್ರಿಯಮಾಣಮಗ್ನಿಚಯನಪೂರ್ವಕಮಿಮಂ ಸೋಮಯಾಗಂ ಜುಷಂತಾಂ । ಸೇವಂತಾಂ । ಕಿಂಚ । ಅದ್ರುಹೋಽದ್ರೋಗ್ಧಾರೋ ಯೂಯಮನಮೀವಾ ರೋಗಾದಿವರ್ಜಿತಾ ಮಹೀರ್ಮಹತ್ಯ ಇಷ ಊರ್ಜೋ ರೋಗಾದಿ

ರಹಿತಾನ್ಯನ್ನಾನ್ಯಸ್ಮಭ್ಯಂ ಪ್ರಯಚ್ಛತಾಂ ॥ ಪುರೀಷ್ಯಾಸಃ । ಪೄ ಪಾಲನಪೂರಣಯೋಃ । ಈಷನ್ನಿತ್ಯನುವೃತ್ತೌ ಶೄಪೄಭ್ಯಾಂ ಕಿತ್ । ಉ. ೪-೨೭ । ಇತೀಷನ್ಪ್ರತ್ಯಯಃ ಕಿಚ್ಚ । ಕಿತ್ತ್ವಾದ್ಗುಣೇ ಪ್ರತಿಷಿದ್ಧ ಉದೋಷ್ಠ್ಯಪೂರ್ವಸ್ಯೇತ್ಯುತ್ವಂ। ರಪರಃ। ಪೃಣಾತಿ ಪೂರ್ಯತೇ ವೇತಿ ಪುರೀಷಂ। ಪುರೀಷಂ ಪೃಣಾತೇಃ ಪೂರಯತೇರ್ವಾ। ನಿ.೨-೨೨। ಇತಿ ಯಾಸ್ಕಃ। ತದರ್ಹಂತೀತಿ ಪುರೀಷ್ಯಾಃ । ಛಂದಸಿ ಚೇತಿ ಯಪ್ರತ್ಯಯಃ। ಯಚಿ ಭಮಿತಿ ಭಸಂಜ್ಞಾಯಾಂ ಯಸ್ಯೇತಿ ಲೋಪಃ । ಪ್ರತ್ಯಯಸ್ವರಃ । ಪ್ರಾವಣೇಭಿಃ । ವನ ಷಣ ಸಂಭಕ್ತಾವಿತ್ಯಸ್ಮಾತ್ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತಿ ಕರಣೇ ಘಪ್ರತ್ಯಯಃ । ಪ್ರಕರ್ಷೇಣ ವನ್ಯತೇ ಸಂಭಜ್ಯತೇ ಸಂಶ್ಲಿಷ್ಯತೇ ಮೃದೇಭಿರಿತಿ ಪ್ರಾವಣಾನಿ ಖನಿತ್ರಾಣಿ । ಪ್ರನಿರಂತಃ । ಪಾ. ೮-೪-೫ । ಇತ್ಯಾದಿನಾ ಣತ್ವಂ । ವನಂ ಸಮಾಸೇ । ಪಾ. ೬-೨-೧೭೮ । ಇತ್ಯಂತೋದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರಃ । ಯದ್ವಾ । ಪ್ರುಙ್ ಗತೌ । ಪ್ರವಂತೇ ಗಚ್ಛಂತಿ ಮೃತ್ಖನನಂ ಪ್ರತೀತಿ ಚಲನಶಬ್ದಾರ್ಥಾದಕರ್ಮಕಾದ್ಯುಚ್ । ಪಾ. ೩-೨-೧೪೮ । ಇತಿ ಯುಚ್ । ಚಿತ್ಸ್ವರಃ । ಪೂರ್ವಸ್ಮಿನ್ಪಕ್ಷೇऽವಗ್ರಹಾಭಾವಶ್ಛಾಂದಸ ಇತಿ ವಕ್ತವ್ಯಂ । ಜುಷಂತಾಂ । ಜುಷೀ ಪ್ರೀತಿಸೇವನಯೋರಿತ್ಯಸ್ಯ ಲೋಟಿ ರೂಪಂ । ಪಾದಾದಿತ್ವಾದನಿಘಾತಃ । ಮಹೀಃ । ಮಹಚ್ಛಬ್ದಾದುಗಿತಶ್ಚೇತಿ ಙೀಪ್ । ತಕಾರಲೋಪಶ್ಛಾಂದಸಃ । ಪ್ರತ್ಯಯಸ್ವರೇಣಾಂತೋದಾತ್ತಃ ॥

### ಪ್ರತಿಪದಾರ್ಥ

**ಪುರೀಷ್ಯಾಸಃ**—ಮರಳಿನ ಕುಂಡಗಳಲ್ಲಿರುವ । **ಅಗ್ನಯಃ**—ಚಿತ್ಯಾಗ್ನಿಗಳು । **ಪ್ರವಣೇಭಿಃ**—ಕುಂಡಗಳನ್ನು ಅಗೆಯುವ ಸಾಧನಗಳೊಡನೆ । **ಸಜೋಷಸಃ**—ಪರಸ್ಪರವಾಗಿ ಒಂದುಗೂಡಿ । **ಯಜ್ಞಂ**—ನಮ್ಮಿಂದ ನೆರವೇರಿಸಲ್ಪಡುವ ಈ ಯಜ್ಞವನ್ನು । **ಜುಷಂತಾಂ**—ಸೇವಿಸಲಿ. (ಮತ್ತು) । **ಅದ್ರುಹಃ**—ಅಹಿಂಸಕವಾದುವೂ, । **ಅನಮೀವಾಃ**—ರೋಗಾದಿಗಳಿಂದ ವರ್ಜಿತವಾದುವೂ । **ಮಹೀಃ**—ಪ್ರಭೂತವಾದವೂ ಆದ । **ಇಷಃ**—ಅನ್ನಗಳನ್ನು (ಕೊಡಲಿ).

### ಭಾವಾರ್ಥ

ಮರಳಿನ ಕುಂಡಗಳಲ್ಲಿರುವ ಚಿತ್ಯಾಗ್ನಿಗಳು ಕುಂಡಗಳನ್ನು ಅಗೆಯುವ ಸಾಧನಗಳೊಡನೆ ಪರಸ್ಪರವಾಗಿ ಒಂದುಗೂಡಿ ನಮ್ಮಿಂದ ನೆರವೇರಿಸಲ್ಪಡುವ ಈ ಯಜ್ಞವನ್ನು ಸೇವಿಸಲಿ. ಮತ್ತು ಅಹಿಂಸಕವಾದವೂ, ರೋಗಾದಿಗಳಿಂದ ವರ್ಜಿತವಾದವೂ ಪ್ರಭೂತವಾದವೂ ಆದ ಅನ್ನಗಳನ್ನು ಕೊಡಲಿ.

### English Translation

May the benignant fires termed purishya, together with the instruments (that have dug the pits in which they are placed) combined, accept the sacrifice (and grant us) salutary and abundant food.

### ವಿಶೇಷವಿಷಯಗಳು

**ಪುರೀಷ್ಯಾಸಃ—ಅಗ್ನಯಃ** ಯಾಸ್ಕರು **ಪೃಣಾತೇಃ ಪೂರಯತೇರ್ವಾ ಪುರೀಷಂ** (ನಿ. ೭-೭೧) ಎಂದು ವ್ಯಾಖ್ಯಾನಮಾಡಿದ್ದಾರೆ. ಗುರ್ಗಾಚಾರ್ಯರು ಪೂರಯಿತೃ ಪ್ರೀಣಯಿತೃ ಎಂದರೆ ತುಂಬುವುದು ಅಥವಾ ಸಂತೋಷಪಡಿಸುವುದು ಎಂದು ಪುರೀಷಶಬ್ದಾರ್ಥವನ್ನು ವಿವರಿಸಿದ್ದಾರೆ. ಸಾಯಣರು **ಪೃಣಾತಿ ಪೂರ್ಯತೇ ವಾ** ಎಂದು ವ್ಯಾಖ್ಯಾನ

ಮಾಡಿ, **ಸಿಕತಾಸಂಮಿಶ್ರಾಃ ಅಗ್ನಯಃ** ಯಜಮಾನರನ್ನು ಅವರವರ ಅಭಿಲಾಷೆಗಳಿಂದ ತುಂಬುವ, ಅಥವಾ ಯಜಮಾನರನ್ನು ಸಂತೋಷಗೊಳಿಸುವ ಮರಳುಕುಂಡಗಳಲ್ಲಿರುವ ಅಗ್ನಿಗಳು ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ಪ್ರವಣೇಭಿಃ—ಪ್ರಕರ್ಷೇಣ ವನ್ಯತೇ ಸಂಭಜ್ಯತೇ ಸಂಶ್ಲಿಷ್ಯತೇ ಮೃದೇಭಿರಿತಿ ಪ್ರಾವಣಾನಿ ಖನಿತ್ರಾಣಿ**—ಅತಿಶಯವಾಗಿ ಜೇರೆಜೇರೆಯಾಗಿ ಇರುವಂತೆ ಮಾಡುವ ಸಾಧನವಾದ ಗುದ್ದಲಿಯೇ ಮೊದಲಾದವುಗಳು ಎಂದೂ, **ಮೃತ್ಖನನಸಾಧನಭೂತೈಃ ಅಭ್ರ್ಯಾದಿಭಿಸ್ಸಹಿತಾಃ** ಯಾಗದಲ್ಲಿ ಇರುವ ಅಗ್ನಿಗಳು (ಮೃತ್ಖನನಸಾಧನಗಳಾದ) ಮಣ್ಣನ್ನು ಅಗೆಯುವುದರಲ್ಲಿ ಸಾಧನಗಳಾದ ಗುದ್ದಲಿಗಳೊಡನೆಯೂ, ಇತರ ಅಗ್ನಿಗಳೊಡನೆಯೂ ಸೇರಿ ಯಜಮಾನರಿಂದ ಆಚರಿಸಲ್ಪಡುವ ಅಗ್ನಿಚಯನವೇ ಮೊದಲಾದ ಈ ಸೋಮಯಾಗಕ್ಕೆ ಆಗಮಿಸಿ ಅಲ್ಲಿ ಹವಿಸ್ಸನ್ನು ಸೇವಿಸಲಿ ಎಂದು ಆಶಿಸಿದೆ.

**ಅದ್ರುಹಃ ಅನವಿಹ್ವಾರಾಃ**—ಅಗ್ನಿಗಳು ದ್ರೋಹವನ್ನು ಮಾಡದಿರುವವರು ಎಂದು ಅರ್ಥವನ್ನು ಹೇಳಿ, ಈ ಅಗ್ನಿಗಳು ರೋಗಾದಿಗಳಿಂದ ವರ್ಜಿತವಾದ ಪ್ರಭೂತವಾದ **ಇಷಃ** ಅನ್ನವನ್ನು ಯಜಮಾನರಿಗೆ ಅನುಗ್ರಹಿಸಲಿ ಎಂದು ಅರ್ಥವನ್ನು ವಿವರಿಸಿದೆ. ಇಷ ಎಂಬ ಪದವು ಅನ್ನನಾಮಗಳಲ್ಲಿ (ನಿ. ೩–೯) ಪಠಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ಪುರೀಷ್ಯಾಸಃ**—ಪೄ ಪಾಲನಪೂರಣಯೋಃ ಧಾತು. ಈಷನ್ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ ಶೄ ಪೄ ಭ್ಯಾಂಕಿತ್ (ಉ. ಸೂ. ೪–೪೬೭) ಎಂಬುದರಿಂದ ಈಷನ್ ಪ್ರತ್ಯಯ. ಕಿತ್ವವಿಧಾನಮಾಡಿರುವುದರಿಂದ ಗುಣಬರುವುದಿಲ್ಲ. **ಉದೋಷ್ಠ್ಯಃ ಪೂರ್ವಸ್ಯ** (ಪಾ.ಸೂ. ೭–೧–೧೦೨) ಎಂಬುದರಿಂದ ಉತ್ವ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಪೃಣಾತಿ ಪೂರ್ಯತೇ ವಾ ಏಭಿಃ ಇತಿ ಪುರೀಷಂ. **ಪುರೀಷಂ ಪೃಣಾತೇಃ ಪೂರಯತೇರ್ವಾ** (ನಿರು. ೨–೨೨) ಎಂಬುದಾಗಿ ಯಾಸ್ಕರೂ ಹೇಳಿರುತ್ತಾರೆ. ಪುರೀಷಂ ಅರ್ಹಂತೀತಿ ಪುರೀಷ್ಯಾಃ **ಛಂದಸಿಚ** (ಪಾ. ಸೂ. ೫–೧–೬೭) ಎಂಬುದರಿಂದ ಯ ಪ್ರತ್ಯಯ. ಯಾದಿ ಪ್ರತ್ಯಯವಾದುದರಿಂದ **ಯಚಿಭಂ** ಎಂಬುದರಿಂದ ಭಸಂಜ್ಞಾ ಬರುತ್ತದೆ. ಆಗ **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭–೧–೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಪ್ರಾವಣೇಭಿಃ—ವನ** ಷಣ ಸಂಭಕ್ತೌ. ಧಾತು. ಇದಕ್ಕೆ **ಪುಂಸಿ ಸಂಜ್ಞಾಯಾಂ ಘಃಪ್ರಾಯೇಣ** (ಪಾ. ಸೂ. ೩–೩–೧೧೮) ಎಂಬುದರಿಂದ ಕರಣಾರ್ಥದಲ್ಲಿ ಘ ಪ್ರತ್ಯಯ. ಪ್ರಕರ್ಷೇಣ ವನ್ಯತೇ–ಸಂಭಜ್ಯತೇ–ಸಂಶ್ಲಿಷ್ಯತೇ ಮೃದ್‌ಏಭಿರಿತಿ ಪ್ರವಣಾನಿ. ಖನಿತ್ರಾಣಿ. (ಹಾರೆ ಗುದ್ದಲಿ ಮುಂತಾದುವು) **ಪುನಿರಂತಃ**—(ಪಾ. ಸೂ. ೮–೪–೫) ಎಂಬುದರಿಂದ ಪ್ರ ಎಂಬ ಉಪಸರ್ಗದಲ್ಲಿರುವ ನಿಮಿತ್ತದಪರದಲ್ಲಿ ಬಂದುದರಿಂದ ಧಾತುನಕಾರಕ್ಕೆ ಣತ್ವ ಬರುತ್ತದೆ. **ವನಂಸಮಾಸೇ** (ಪಾ. ಸೂ. ೬–೩–೧೭೮) ಎಂಬುದರಿಂದ ಸಮಾಸದಲ್ಲಿ ಅಂತೋದಾತ್ತಸ್ವರ ಬರುತ್ತದೆ. ಅಥವಾ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಅಥವಾ **ಪ್ರುಙ್** ಗತೌ. ಧಾತು. ಪ್ರವಂತೇ–ಗಚ್ಛಂತಿ ಮೃತ್‌ಖನನಂ ಪ್ರತಿ ಇತಿ ಪ್ರವಣಂ. **ಚಲನಶಬ್ದಾರ್ಥಾದಕರ್ಮಕಾದ್ಯುಟ್** (ಪಾ. ಸೂ. ೩–೨–೧೪೮) ಎಂಬುದರಿಂದ ಯುಟ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. **ಯುವೋರನಾಕೌ** (ಪಾ. ಸೂ ೭–೧–೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಹಿಂದಿನ ಪಕ್ಷದಲ್ಲಿ ಛಾಂದಸವಾಗಿ ಅವಗ್ರಹ ಬಂದಿಲ್ಲವೆನ್ನಬೇಕು. ಇದಕ್ಕೆ ತೃತೀಯಾ ಬಹುವಚನ–

ಪರವಾದಾಗ ಭಿಸಿಗೆ ಐಸ್ ಭಾವ ಛಂದಸ್ಸಿನಲ್ಲಿ ವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ಜುಷಂತಾಂ**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಅನಮೀವಾಃ—ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಬಹುವ್ರೀಹಿಯಲ್ಲಿ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ.

**ಮಹೀಃ**—ಮಹತ್ ಶಬ್ದ. ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಛಾಂದಸವಾಗಿ ಮಹತ್ ಶಬ್ದದ ತಕಾರಕ್ಕೆ ಲೋಪ. ಬೃಹನ್ಮಹತೋರುಪಸಂಖ್ಯಾನಂ ಎಂಬ ವಚನ ದಿಂದ ಪ್ರತ್ಯಯ ಉದಾತ್ತವಾಗುತ್ತದೆ.

———

ಸಂಹಿತಾಪಾಠಃ

ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।
ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥ ೫ ॥

ಪದಪಾಠಃ

ಇಳಾಂ । ಅಗ್ನೇ । ಪುರುऽದಂಸಂ । ಸನಿಂ । ಗೋಃ । ಶಶ್ವತ್ऽತಮಂ । ಹವಮಾನಾಯ । ಸಾಧ ।
ಸ್ಯಾತ್ । ನಃ । ಸೂನುಃ । ತನಯಃ । ವಿಜಾऽವಾ । ಅಗ್ನೇ । ಸಾ । ತೇ । ಸುऽಮತಿಃ । ಭೂತು । ಅಸ್ಮೇ ಇತಿ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ಪುರುದಂಸಂ । ಅಪೋऽಪ್ನೋ ದಂಸೋ ವೇಷ ಇತಿ ಕರ್ಮನಾಮಸು ಪಠಿತತ್ವಾ-ದ್ದಂಸಃಶಬ್ದಃ ಕರ್ಮವಾಚೀ । ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ತಾಂ ಬಹುಕ-ರ್ಮಾಣಂ ಗೋಃ ಸನಿಂ ಗವಾದಿಪಶೂನ್ಸಂಪಾದಯಿತ್ರೀಮಿಳಾಮೇತನ್ನಾಮಿಕಾಂ ಗೋರೂಪಾಂ ದೇವತಾಂ ಶಶ್ವತ್ತಮಂ ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧ । ಸಾಧಯ । ಕಿಂಚ ನೋऽಸ್ಮಾಕಂ ಸೂನುಃ ಪುತ್ರಸ್ತನಯಃ ಪೌತ್ರಃ ಸ್ಯಾದ್ಭವತೀತಿ ತೇ ತವ ಯಾ ಸುಮತಿಃ ಶೋಭನಾ ಬುದ್ಧಿಃ ಸಾ ವಿಜಾ-ವಾಬಂಧ್ಯಾ ಸತ್ಯಸ್ಮೇ ಅಸ್ಮಾಕಂ ಭೂತು । ಭವತು ॥ ಶಶ್ವತ್ತಮಂ । ಉಚ್ಛಾದಿಷು ಪಾಠಾದಂತೋದಾ-ತ್ತತ್ವಂ । ಸಾಧ । ರಾಧ ಸಾಧ ಸಂಸಿದ್ಧೌ । ಅಂತರ್ಭಾವಿತಣ್ಯರ್ಥೋऽಯಂ । ಲೋಟಿ ವ್ಯತ್ಯಯೇನ ಶಪ್ । ಸೇರ್ಹ್ಯಪಿಚ್ಚೇತಿ ಹಿರಾದೇಶಃ । ತಸ್ಯಾತೋ ಹೇರಿತಿ ಲುಕ್ । ನಿಘಾತಃ । ವಿಜಾವಾ । ಜನೀ ಪ್ರಾದುರ್ಭಾವೇ । ಅಸ್ಮಾದನ್ಯೇಭ್ಯೋऽಪಿ ದೃಶ್ಯಂತ ಇತಿ ವನಿಪ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಲಿಂಗವ್ಯತ್ಯಯಃ । ಭೂತು । ಭೂ ಸತ್ತಾಯಾಂ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥

**ಪ್ರತಿಪದಾರ್ಥ**

ಅಗ್ನೇ—ಎಲೈ ಅಗ್ನಿಯೇ | **ಪುರುದಂಸಂ**—ಅನೇಕ ಕರ್ಮಗಳಿಗೆ ಸಾಧನವಾದುದೂ | **ಗೋಃ ಸನಿಂ**—ಗವಾದಿ ಪಶುಗಳನ್ನು ಸಂಪಾದಿಸಿಕೊಡತಕ್ಕದ್ದೂ ಆದ | **ಇಳಾಂ**—'ಇಳಾ' ಎಂದು ಪ್ರಸಿದ್ಧವಾದ ದೇವತಾ ವಿಶೇಷವನ್ನು (ಅಥವಾ ಪೃಥ್ವಿಯನ್ನು) | **ಶಶ್ವತ್ತಮಂ**—ಅನುಸ್ಯೂತವಾಗಿ | **ಹವಮಾನಾಯ**—ಹವಿಸ್ಸನ್ನು ಅರ್ಪಿಸತಕ್ಕ ನನಗೆ | **ಸಾಧ**—ಒದಗಿಸಿಕೊಡು | **ನಃ**—ನಮಗೆ | **ಸೂನುಃ**—ಪುತ್ರನೂ | **ತನಯಃ**—ಪೌತ್ರನೂ | **ಸ್ಯಾತ್**—ಲಭಿಸಲಿ | **ಅಗ್ನೇ**—ಎಲೈ ಅಗ್ನಿಯೇ | **ತೇ**—ನಿನ್ನ | **ಸುಮತಿಃ**—(ಯಾವ) ಶ್ರೇಷ್ಠವಾದ ಅನುಗ್ರಹಬುದ್ಧಿಯಿದೆಯೋ | **ಸಾ**—ಅದು | **ಅಸ್ಮೇ**—ನಮ್ಮ ಭಾಗಕ್ಕೆ | **ವಿಜಾವಾ**—ಫಲವನ್ನು ಕೊಡತಕ್ಕದ್ದಾಗಿ | **ಭೂತು**—ಆಗಿರಲಿ.

**ಭಾವಾರ್ಥ**

ಎಲೈ ಅಗ್ನಿಯೇ, ಅನೇಕ ಕರ್ಮಗಳಿಗೆ ಸಹಾಯಕವಾಗುವ ಗವಾದಿ ಪಶುಗಳನ್ನು ಕೊಡುವವಳೂ, ಇಳಾನಾಮಕಳೂ, ಗೋರೂಪಳೂ ಆದ ಭೂಮಿಯು, ನಿರಂತರ ಯಾಗಾಚರಣೆಯಲ್ಲಿ ನಿರತರಾದ ನಮಗೆ ಅನುಕೂಲಿಸುವಂತೆ ಮಾಡು; ಮತ್ತು ಎಲೈ ಅಗ್ನಿಯೇ, ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನನುಗ್ರಹಿಸಬೇಕೆಂಬ ಶುಭವಾದ ಮತಿಯು ನಮಗೆ ಯಾವಾಗಲೂ ಅವಂಧ್ಯವಾಗಲಿ. (ಸಫಲವಾಗಲಿ)

## English Translation

Grant, Agni, to the offerer of the oblation earth the giver of cattle, the means of many sacred rites, such that it may long endure : may there be to us sons and grandsons, and may your favour, Agni, be productive of good unto us.

**ವಿಶೇಷವಿಷಯಗಳು**

**ಪುರುದಂಸಂ—ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ** | **ಅಪ್ನಃ ದಂಸಃ** ಎಂಬ ಇಪ್ಪತ್ತಾರು ಕರ್ಮನಾಮುಗಳಲ್ಲಿ (ನಿ. ೩-೨) **ದಂಸ** ಶಬ್ದವು ಉಕ್ತವಾಗಿರುತ್ತದೆ. ಬಹಳ ಕರ್ಮಗಳುಳ್ಳದ್ದೆಂದು ಅರ್ಥ

**ಗೋಃ ಸನಿಂ — ಗವಾದಿಪಶೂನ್ ಸಂಪಾದಯಿತ್ರೀಂ** | ಗೋಶಬ್ದಕ್ಕೆ ಪೃಥಿವೀ, ವಾಕ್ಕು, ಪಶು, ರಶ್ಮಿ ಎಂದು ಅನೇಕಾರ್ಥಗಳು ಇರುವುವು. ಗೋಃ ಸನಿಂ ಎಂಬ ಪದಗಳು ಇಳಾ ಎಂಬ ಪದಕ್ಕೆ ವಿಶೇಷಣವಾಗಿರುವುದರಿಂದ ಇಳಾ ದೇವತೆಯು ಗೋವುಗಳೇ ಮೊದಲಾದವುಗಳೆಲ್ಲವನ್ನೂ ಅನುಗ್ರಹಿಸುವಳೆಂದು ಅರ್ಥವನ್ನು ವರ್ಣಿಸಿದೆ.

**ಇಳಾಂ—ಏತನ್ನಾಮಿಕಾಂ ಗೋರೂಪಾಂ ದೇವತಾಂ** ಪೃಥಿವೀನಾಮುಗಳಲ್ಲಿ ಇಳಾ ಪದವು (ನಿ. ೨-೪) ಉಕ್ತವಾಗಿದೆ. ವಾಙ್ನಾಮುಗಳಲ್ಲಿಯೂ, (ನಿ. ೨-೨೩) ಅನ್ನನಾಮುಗಳಲ್ಲಿಯೂ, (ನಿ. ೩-೯) ಗೋನಾಮುಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಮತ್ತು ಇಳಾ ಎಂಬ ಪದವು ಈಶ ಧಾತುವಿನಿಂದ ನಿಷ್ಪನ್ನವಾಗಿದೆ.

> **ಅಭಿ ನ ಇಳಾ ಯೂಥಸ್ಯ ಮಾತಾ ಸ್ಮನ್ನದೀಭಿರುರ್ವಶೀ ವಾ ಗೃಣಾತು** |
> **ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾಯೋಃ** |
> **ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ** || (ಋ. ಸಂ. ೫-೪೧-೧೯, ೨೦)

ಈ ಋಕ್ಕುಗಳಲ್ಲಿ ಇಳಾ ಅಥವಾ ಇಡಾ ಎಂಬ ದೇವಿಯು ಮಧ್ಯಮಸ್ಥಾನದೇವತೆಯೆಂದು ವಿವೃತವಾಗಿದೆ. ಸಾಯಣರು ಗೋವಿನ ಆಕಾರವನ್ನು ಧರಿಸಿರುವ ಇಳಾ ಎಂದು ಹೆಸರುಳ್ಳ ದೇವತೆಯೆಂದು ಅರ್ಥವನ್ನು ವಿವರಿಸಿದ್ದಾರೆ.

**ಶಶ್ವತ್ತಮಂ ಹವಮಾನಾಯ ಸಾಧ—ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧಯ** । ಅಗ್ನಿಯನ್ನು ಯಾವಾಗಲೂ ಹವಿಸ್ಸುಗಳಿಂದ ತೃಪ್ತಿಪಡಿಸುತ್ತಿರುವ ಯಜಮಾನನಿಗೆ ಬೇಕಾದ ಇಷ್ಟಾರ್ಥಗಳನ್ನು ನೆರವೇರಿಸುವ, ಪ್ರಭೂತವಾದ ಮಹಾತ್ಮ್ಯದಿಂದ ಪೂರಿತವಾಗಿರುವ, ಗೋರೂಪದಿಂದ ಇರುವ, ಇಳಾದೇವತೆಯ. ಅನುಗ್ರಹವು ಉಂಟಾಗುವಂತೆ ಅಗ್ನಿಯನ್ನು ಪ್ರಾರ್ಥಿಸಿದೆ.

**ಸೂನುಃ—ಪುತ್ರಃ; ತನಯಃ ಪೌತ್ರಃ** । ತುಕ್, ತೋಕಂ ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೩-೨) ತನಯ ಶಬ್ದವೂ, ಸೂನು ಶಬ್ದವೂ ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**
(ಋ. ಸಂ. ೧೦–೫೦–೬)

ಎಂಬ ಈ ಋಕ್ಕಿನಲ್ಲಿ ಸೂನೋ ಎಂಬ ಶಬ್ದಕ್ಕೆ ಪುತ್ರನೆಂದು ಅರ್ಥವನ್ನು ಹೇಳಿ ಅಗ್ನಿಯನ್ನು (ಸಹಸಸ್ಪುತ್ರ) **ಸಹಸಸ್ಸೂನೋ, ಬಲಸ್ಯ ಪುತ್ರ** ಎಂದು ಹೇಳಿದೆ. ಸಾಯಣರು ಸೂನುಶಬ್ದಕ್ಕೆ ಪುತ್ರನೆಂದೂ, ತನಯ ಶಬ್ದಕ್ಕೆ ಪೌತ್ರ (ಪುತ್ರನ ಪುತ್ರ) ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಸುಮತಿಃ—ಶೋಭನಾ ಬುದ್ಧಿಃ** । ನಿರುಕ್ತಕಾರರು **ದೇವಸುಮತಿಂ** ಎಂಬಲ್ಲಿ ದೇವನಾಂ ಕಲ್ಯಾಣೀಂ **ಮತಿಂ**. ದೇವತೆಗಳ ಶುಭಕರವಾದ ಬುದ್ಧಿ ಎಂದೂ, **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬಲ್ಲಿ ಕಲ್ಯಾಣ್ಯಾಂ **ಮತೌ** ಎಂದೂ **ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ** ಎಂಬಲ್ಲಿಯೂ ಕಲ್ಯಾಣೀಂ ಮತಿಂ ಎಂಬ ಇದೇ ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಅಗ್ನಿಯನ್ನು ಹವಿಸ್ಸಿಗಳಿಂದ ತೃಪ್ತಿಗೊಳಿಸಿದ ಯಜಮಾನರ ವಿಷಯದಲ್ಲಿ ಅಗ್ನಿಯು ಅನುಗ್ರಹಿಸಬಹುದಾದ ಪುತ್ರ ಪೌತ್ರಾದಿಗಳ ಉತ್ಪತ್ತಿ ಮತ್ತು ಅಭಿವೃದ್ಧಿಯೇ ಮೊದಲಾದ ಅಗ್ನಿಯ ಕಲ್ಯಾಣಕರವಾದ ಬುದ್ಧಿಯು ಉಂಟಾಗಲಿ ಎಂದು ಪ್ರಾರ್ಥಿಸಿದೆ.

## ವ್ಯಾಕರಣಪ್ರಕ್ರಿಯಾ

**ಪುರುದಂಸಂ**—ಪುರೂಣಿ ದಂಸಾಂಸಿ ಯಸ್ಯಾಃ ಸಾ. **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨.೧೧೯) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಶಶ್ವತ್ತಮಂ**—ಉಂಛಾದಿಯಲ್ಲಿ ಪಠಿತವಾದುದರಿಂದ **ಉಂಛಾದೀನಾಂಚ** (ಪಾ. ಸೂ. ೬–೧–೧೬೦) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಾಧ**—ರಾಧ ಸಾಧ ಸಂಸಿದ್ಧೌ ಧಾತು. ಪ್ರಯೋಜಕ ವ್ಯಾಪಾರಕೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಶಪ್ ವಿಕರಣ ಬರುತ್ತದೆ. **ಅತೋ ಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಅದಂತದ ಪರದಲ್ಲಿರುವುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಯಾತ್**—ಅಸ ಭುವಿ ಧಾತು. ಲಿಙ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ಅನುದಾತ್ತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವೆಂದುದರಿಂದ ಉದಾತ್ತವಾಗುತ್ತದೆ.

ವಿಜಾವಾ—ಜನೀ ಪ್ರಾದುರ್ಭಾವೇ ಧಾತು. **ಅನ್ಯೇಭ್ಯೋಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಇದಕ್ಕೆ ವನಿಪ್ ಪ್ರತ್ಯಯ. ಇದು ಪರವಾದಾಗ **ವಿಡ್ವನೋರನುನಾಸಿಕಃಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿಗೆ ಆತ್ವ. ವಿ ಎಂಬುದರೊಡನೆ ಪ್ರಾದಿಸಮಾಸ. ವಿಜಾವನ್ ಶಬ್ದವಾಗುತ್ತದೆ. ಪ್ರಥಮಾ ಏಕವಚನಾಂತರೂಪ. **ವ್ಯತ್ಯಯೋಬ**—ಎಂಬುದರಿಂದ ಲಿಂಗವ್ಯತ್ಯಯ (ಸ್ತ್ರೀಲಿಂಗಕ್ಕೆ ಪುಲ್ಲಿಂಗ) ಬಂದಿದೆ. **ಗತಿಕಾರಕೋಪಪದಾತ್**—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುಮತಿಃ**—ಮನ ಜ್ಞಾನೇ ಧಾತು. ಕ್ತಿನ್ ಪ್ರತ್ಯಯ. **ಮಂಕ್ತ್ರೇ ವೃಷೇಷ**—(೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಭೂತು**—ಭೂ ಸತ್ತಾಯಾಂ ಧಾತು ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಏರುಃ ಎಂಬುದರಿಂದ ಇಕಾರಕ್ಕೆ ಉತ್ವ. **ಬಹುಲಂ ಛಂಧಸಿ** ಎಂಬುದರಿಂದ ವಿಕರಣಕ್ಕೆ (ಶಪ್) ಲುಕ್. **ಭೂಸುವೋಸ್ತಿಙಿ** ಎಂಬುದರಿಂದ ಗುಣನಿಷೇಧ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಅಸ್ಮೇ—ಸುಪಾಂ ಸುಲುಕ್**—ಎಂಬುದರಿಂದ ಷಷ್ಠೀ ಬಹುವಚನಕ್ಕೆ ಶೇ ಆದೇಶ.

---

# ಇಪ್ಪತ್ತಮೂರನೆಯ ಸೂಕ್ತವು

---

ನಿರ್ಮಥಿತಃ ಸುಧಿತ ಇತಿ ಪಂಚರ್ಚಮೇಕಾದಶಂ ಸೂಕ್ತಂ । ಅತ್ರಾನುಕ್ರಮಣಿಕಾ । ನಿರ್ಮಥಿತೋ ದೇವಶ್ರವಾ ದೇವವಾತಶ್ಚ ಭಾರತೌ ತೃತೀಯಾ ಸತೋಬೃಹತೀತಿ । ಭರತಸ್ಯ ಪುತ್ರೌ ದೇವಶ್ರವಾ ದೇವವಾತಶ್ಚೇತ್ಯುಭಾವಸ್ಯ ಋಷೀ । ತೃತೀಯಾ ಸತೋಬೃಹತೀ । ಶಿಷ್ಟಾಸ್ತ್ರಿಷ್ಟುಭಃ । ಅಗ್ನಿರ್ದೇವತಾ । ಆ ಹೋತೇತ್ಯಾದಿಸೂಕ್ತದಶಕಸ್ಯೋಕ್ತೋ ವಿನಿಯೋಗಃ ಪ್ರಾತರನುವಾಕಾಶ್ವಿನಶಸ್ತ್ರಯೋಃ । ಇಳಾಮಗ್ನ ಇತ್ಯಸ್ಯಾ ವಿನಿಯೋಗೋಽಸಕೃದುಪದಿಷ್ಟಃ ॥

**ನಿರ್ಮಥಿತಃ ಸುಧಿತ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ–**ನಿರ್ಮಥಿತೋ ದೇವಶ್ರವಾ ದೇವವಾತಶ್ಚ ಭಾರತೌ ತೃತೀಯಾ ಸತೋ ಬೃಹತೀತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಭರತನ ಪುತ್ರರಾದ ದೇವಶ್ರವಾಃ ಮತ್ತು ದೇವವಾತಃ ಎಂಬಿಬ್ಬರೂ ಋಷಿಗಳು; ಈ ಸೂಕ್ತದ ಮೂರನೆಯ ಋಕ್ಕು ಸತೋಬೃಹತೀಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು; ಅಗ್ನಿಯು ದೇವತೆಯು. ಆ ಹೋತಾ ಎಂದು ಮೊದಲಾದ ಹತ್ತು ಸೂಕ್ತಗಳು (ಅವುಗಳಲ್ಲಿ ಈ ಸೂಕ್ತವೂ ಸೇರಿದೆ) ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನದಲ್ಲಿ ವಿನಿಯೋಗವಿರುವುದೆಂದು ಹಿಂದೆಯೇ ಹೇಳಿದೆ. ಇಳಾಮಗ್ನೇ (ಈ ಸೂಕ್ತದ ಕೊನೆಯ ಋಕ್ಕು) ಎಂಬ ಋಕ್ಕಿನ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨೩

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೩ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫
ಋಷಿಃ—ದೇವಶ್ರವಾ ದೇವವಾತಶ್ಚ ಭಾರತಾ ॥
ದೇವತಾ—ಅಗ್ನಿಃ ॥
ಛಂದಃ— ೧, ೨, ೪, ೫. ತ್ರಿಷ್ಟುಪ್ । ೩. ಸತೋಬೃಹತೀ ॥

ಸಂಹಿತಾಪಾಠಃ

ನಿರ್ಮಥಿತಃ ಸುಧಿತ ಆ ಸಧಸ್ಥೇ ಯುವಾ ಕವಿರಧ್ವರಸ್ಯ ಪ್ರಣೇತಾ ।
ಜೂರ್ಯತ್ಸ್ವಗ್ನಿರಜರೋ ವನೇಷ್ವತ್ರಾ ದಧೇ ಅಮೃತಂ ಜಾತವೇದಾಃ ॥ ೧ ॥

ಪದಪಾಠಃ

ನಿಃऽಮಥಿತಃ । ಸುऽಧಿತಃ । ಆ । ಸಧऽಸ್ಥೇ । ಯುವಾ । ಕವಿಃ । ಅಧ್ವರಸ್ಯ । ಪ್ರऽನೇತಾ ।
ಜೂರ್ಯತ್ऽಸು । ಅಗ್ನಿಃ । ಅಜರಃ । ವನೇಷು । ಅತ್ರ । ದಧೇ । ಅಮೃತಂ । ಜಾತऽವೇದಾಃ ॥ ೧ ॥

ಸಾಯಣಭಾಷ್ಯಂ

ಭಾರತಾವೃಷೀ ಸ್ತೋತ್ರಂ ಕುರ್ವಾತೇ । ಯೋऽಗ್ನಿರ್ನಿರ್ಮಥಿತೋऽಗ್ನಿಷ್ಟೋಮಾದಿಕರ್ಮಸ್ವರಣ್ಯೋರ್ನಿತರಾಂ ಮಥಿತಃ ಸನ್ ಸಧಸ್ಥೇ ಯಜಮಾನಗೃಹೇ ಸುಧಿತೋ ಗಾರ್ಹಪತ್ಯಾಧಿಷು ತ್ರಿಷು ಕುಂಡೇಷು ಸುಷ್ಠು ನಿಹಿತಃ ನಿಧಾಯ ಚ ಕಾಷ್ಠಪ್ರಕ್ಷೇಪೇಣ ಪ್ರಜ್ವಾಲ್ಯಮಾನೋ ಯುವಾ ಪ್ರಬುದ್ಧಃ ಅತ ಏವಾಧ್ವರಸ್ಯ ಜ್ಯೋತಿಷ್ಟೋಮಾದೇಃ ಪ್ರಣೇತಾ ಪ್ರಕರ್ಷೇಣಾನೇತಾ ನಿರ್ವಾಹಕೋ ನೇತೃತ್ವಾದೇವ ಕವಿಃ ಕ್ರಾಂತದರ್ಶೀ । ತಥಾವಿಧೋ ಜಾತವೇದಾಃ ಸರ್ವವಿಷಯಾಭಿಜ್ಞಾನವಾನ್ ಸೋऽಗ್ನಿರ್ವನೇಷು ಮಹಾರಣ್ಯೇಷು ಜೂರ್ಯತ್ಸು ದಾವಾಗ್ನಿಸಂಬಂಧಾಜ್ಜೂರ್ಯಮಾಣೇಷು ಜರಾ ನಾಶಂ ಪ್ರಾಪ್ನುವತ್ಸ್ವಪಿ ಸ್ವಯಮಜರೋ ಜರಾರಹಿತಃ ಪ್ರತ್ಯುತ ದೀಪ್ಯಮಾನಃ ಸನ್ ಅತ್ರ ಏವಂ ಸ್ತುತಿಂ ಕುರ್ವಾಣೇಷು ಯಜಮಾನೇಷ್ವಮೃತಂ ಕ್ಷಯರಹಿತಂ ಪ್ರಭೂತಮನ್ನಮಾದಧೇ । ನಿದಧಾತಿ ॥ ಸುಧಿತಃ । ದಧಾತೇಃ ಕರ್ಮಣಿ ನಿಷ್ಠಾಯಾಂ ಸುಧಿತವಸುಧಿತನೇಮಧಿತೇತ್ಯಾದಿನಾ ನಿಪಾತನಾದ್ಧಿ ಇತ್ಯಾದೇಶಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಜೂರ್ಯತ್ಸು । ಜೂರೀ ಘೂರೀ ಹಿಂಸಾವಯೋಹಾನ್ಯೋಃ । ವ್ಯತ್ಯಯೇನ ಶತೃಪ್ರತ್ಯಯಃ । ದಿವಾದಿತ್ವಾಚ್ಛ್ಯನ್ । ನಿತ್ತ್ವಾದಾದ್ಯುದಾತ್ತಃ । ಅಜರಃ । ಜ್ಯಾ ವಯೋಹಾನಾವಿತ್ಯಸ್ಮಾದ್ಭಾವ ಋದೋರಬಿತ್ಯಪ್ಪ್ರತ್ಯಯಃ । ಗುಣಃ । ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ದಧೇ । ದಧಾತೇರ್ವರ್ತಮಾನೇ ಲಿಟಿ ರೂಪಂ । ಜಾತವೇದಾಃ । ಜನೀ ಪ್ರಾದು-

**ಭಾರ್ಗವ ಇತ್ಯಸ್ಯ ಕ್ತೇ ಜನಸನಖನಾಂ ಸನ್‌ಝುಲೋರಿತ್ಯಾಕಾರಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥**

ಪ್ರತಿಪದಾರ್ಥ

**ನಿರ್ಮಥಿತಃ**—ಅರಣಿಗಳಿಂದ ಚೆನ್ನಾಗಿ ಕಡೆಯಲ್ಪಟ್ಟವನೂ । **ಸಧಸ್ಥೇ**—ಯಜ್ಞಗೃಹದಲ್ಲಿ । **ಸುಧಿತಃ**—ಗಾರ್ಹಪತ್ಯಾದಿ ಕುಂಡಗಳಲ್ಲಿಡಲ್ಪಟ್ಟವನೂ । **ಯುವಾ**—ಪ್ರಬುದ್ಧನೂ । **ಅಧ್ವರಸ್ಯ**—ಯಜ್ಞಕ್ಕೆ । **ಪ್ರಣೇತಾ**—ಶ್ರೇಷ್ಠವಾದ ನೇತೃವೂ । **ಕವಿಃ**—ಕ್ರಾಂತದರ್ಶಿಯೂ । **ಜಾತವೇದಾಃ**—ಜಾತಪ್ರಜ್ಞನೂ ಆದ । **ಅಗ್ನಿಃ**—ಅಗ್ನಿಯು । **ವನೇಷು**—ಮಹಾರಣ್ಯಗಳು । **ಜೂರ್ಯತ್ಸು**—ದಾವಾಗ್ನಿಯಿಂದ ಜೀರ್ಣತವಾಗುತ್ತಿದ್ದರೂ ಸಹ । **ಅಜರಃ**—ತಾನು ಜರಾರಹಿತನಾಗಿದ್ದುಕೊಂಡು । **ಅತ್ರ**—ಯಜ್ಞಕಾಲದಲ್ಲಿ ಸ್ತುತಿಮಾಡತಕ್ಕ ಯಜಮಾನನಿಗೆ । **ಅಮೃತಂ**—ನಾಶರಹಿತವಾದ ಅನ್ನವನ್ನು । **ಆ ದಧೇ**—ಒದಗಿಸಿಕೊಡುತ್ತಾನೆ ॥

ಭಾವಾರ್ಥ

ಅರಣಿಗಳಿಂದ ಚೆನ್ನಾಗಿ ಕಡೆಯಲ್ಪಟ್ಟವನೂ, ಯಜ್ಞಗೃಹದಲ್ಲಿ ಗಾರ್ಹಪತ್ಯಾದಿ ಕುಂಡಗಳಲ್ಲಿಡಲ್ಪಟ್ಟವನೂ, ಪ್ರಬುದ್ಧನೂ, ಶ್ರೇಷ್ಠವಾದ ಯಜ್ಞನಿರ್ವಾಹಕನೂ, ಕ್ರಾಂತದರ್ಶಿಯೂ, ಜಾತಪ್ರಜ್ಞನೂ ಆದ ಅಗ್ನಿಯು ಮಹಾರಣ್ಯಗಳು ದಾವಾಗ್ನಿಯಿಂದ ಜೀರ್ಣತವಾಗುತ್ತಿದ್ದರೂ ಸಹ ತಾನು ಜರಾರಹಿತನಾಗಿದ್ದುಕೊಂಡು ಯಜ್ಞಕಾಲದಲ್ಲಿ ಸ್ತುತಿಮಾಡಕ್ಕ ಯಜಮಾನನಿಗೆ ನಾಶರಹಿತವಾದ ಅನ್ನವನ್ನು ಒದಗಿಸಿಕೊಡುತ್ತಾನೆ.

English Translation

Churned (by the friction of the sticks), duly placed in the sacrificial chamber, the young and sage leader of the rite, Jatavedas, the imperishable Agni, (blazing) amidst consuming forests, grants us on this occasion ambrosial (food).

ವಿಶೇಷವಿಷಯಗಳು

**ನಿರ್ಮಥಿತಃ ಸುಧಿತಃ**—**ಅಗ್ನಿಷ್ಟೋಮಾದಿಕರ್ಮಸು ಅರಣ್ಯೋಃ ನಿತರಾಂ ಮಥಿತಃ ಯಜಮಾನಗೃಹೇ ಗಾರ್ಹಪತ್ಯಾದಿಷು ತ್ರಿಷು ಕುಂಡೇಷು ಸುಷ್ಠು ನಿಹಿತಃ** ಅಗ್ನಿಷ್ಟೋಮವೇ ಮೊದಲಾದ ಯಜ್ಞಗಳಲ್ಲಿ ಅರಣಿಗಳಲ್ಲಿ ಮಥನದಿಂದ ಅಗ್ನಿಯು ಉತ್ಪನ್ನನಾಗಿ ಯಜಮಾನನ ಯಾಗಶಾಲೆಯಲ್ಲಿ (ಆಯಾಯ ಪ್ರದೇಶಗಳಲ್ಲಿ) ಗಾರ್ಹಪತ್ಯ ಆಹವನೀಯ ಎಂದು ಮೊದಲಾಗಿ ಪ್ರಸಿದ್ಧವಾದ ಸ್ಥಳಗಳಲ್ಲಿ ಉಪವಿಷ್ಟನಾಗಿರುವನು ಎಂದು ವರ್ಣಿಸಿದೆ.

**ಯುವಾ ಅಧ್ವರಸ್ಯ ಪ್ರಣೇತಾ**—ಕಾಷ್ಠಾದಿಗಳನ್ನು ಅರ್ಪಿಸುವುದರಿಂದ ಈ ಅಗ್ನಿಯು ಉದ್ದೀಪ್ತನಾಗಿ ಯೌವ್ವನದಿಂದ ಇರುವವನ ಹಾಗೆ ಕಾಂತಿಯಿಂದಲೂ, ತೇಜಸ್ಸಿನಿಂದಲೂ ಬೆಳಗುತ್ತಾ ಜ್ಯೋತಿಷ್ಟೋಮವೇ ಮೊದಲಾದ ಯಜ್ಞವನ್ನು ನೆರವೇರಿಸುವನು ಮತ್ತು ಯಜ್ಞಕರ್ಮಗಳ ಕೊನೆಯನ್ನು ನೋಡಿರುವ ಕವಿಯಾಗಿ ಇರುವನು. ಕವಿಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದ್ದರೂ ಇಲ್ಲಿ ಕ್ರಾಂತದರ್ಶಿ ಎಂದು ಅರ್ಥವನ್ನು ಮಾಡಿ ವರ್ಣಿಸಿದೆ.

**ಜಾತವೇದಾಃ ಅಗ್ನಿಃ ವನೇಷು ಜೂರ್ಯತ್ಸು ಅಜರಃ—ಸರ್ವವಿಷಯಾಭಿಜ್ಞಾನವಾನ್‌ಸಃ ಮಹಾರಣ್ಯೇಷು ದಾವಾಗ್ನಿಸಂಬಂಧಾತ್ ನಾಶಂ ಪ್ರಾಪ್ನುವತ್ಸ್ವಪಿ ಸ್ವಯಂ (ಅಜರಃ) ಜರಾರಹಿತಃ ಪ್ರತ್ಯುತ ದೀಪ್ಯಮಾನಃ** ಜಾತವೇದಾ ಎಂಬ ಪದಕ್ಕೆ ಸರ್ವಜ್ಞನೆಂದು ಅರ್ಥವನ್ನು ವಿವರಿಸಿ ಈ ಜಾತವೇದಾಗ್ನಿಯು ದಾವಾಗ್ನಿಸಂಬಂಧ(ಕಾಡ್ಗಿಚ್ಚು)ದಿಂದ ಕಾಡುಗಳು ನಾಶವನ್ನು ಹೊಂದಿ ಇರುವಾಗಲೂ ತಾನು ಮಾತ್ರ ಸ್ವಲ್ಪವೂ ಕುಂದದೆ ಕಾಂತಿಯಿಂದ ಬೆಳಗುತ್ತಿರುವನು ಎಂದು ಅರ್ಥವನ್ನು ವಿವರಿಸಿರುವುದರಿಂದ ಯಜ್ಞಾದಿಕರ್ಮಗಳಲ್ಲಿ ಜಾತವೇದಾಗ್ನಿಯು ಯಷ್ಟವ್ಯನಾಗಿರುವನೆಂದು ಸೂಚಿತವಾಗಿದೆ.

**ಅಮೃತಂ ಆ ದಧೇ—ಕ್ಷಯರಹಿತಂ ಪ್ರಭೂತಮನ್ನಂ ನಿದಧಾತಿ** | ಅಮೃತಶಬ್ದವು ಹಿರಣ್ಯನಾಮಗಳ ಲ್ಲಿಯೂ (ನಿ. ೨-೨-೧೦) ಉದಕನಾಮಗಳಲ್ಲಿಯೂ (ನಿ. ೨-೨೪) ಉಕ್ತವಾಗಿದೆ ಮತ್ತು **ಅಮೃತೇಷು ದೇವೇಷು** (ನಿ. ೮-೨೦) ಎಂದು ವಿವೃತವಾಗಿದೆ. ಇಲ್ಲಿ ಜಾತವೇದಾಗ್ನಿಯು ತನ್ನನ್ನು ಸ್ತುತಿಮಾಡುವ ಯಜಮಾನರಿಗೆ ವ್ಯಯ ಮಾಡಿದರೂ ಮುಗಿಯದಿರುವ ಬಹಳವಾದ ಅನ್ನವನ್ನು ಅನುಗ್ರಹಿಸುವನೆಂದು ಅರ್ಥವನ್ನು ವರ್ಣಿಸಿದೆ.

### ವ್ಯಾಕರಣಪ್ರಕ್ರಿಯಾ

**ನಿರ್ಮಥಿತಃ**—ಮಂಥ ವಿಲೋಡನೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕಿತ್ತಾದುದರಿಂದ ಧಾತು ವಿನ ನಕಾರಕ್ಕೆ ಲೋಪ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಉದಾತ್ತಸ್ವರ ಬರುತ್ತದೆ.

**ಸುಧಿತಃ—**ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ ಬಂದಾಗ **ಸುಧಿತ-ವಸುಧಿತ ನೇಮಧಿತ**—(ಪಾ. ಸೂ. ೭-೪-೪೫) ಎಂಬುದರಿಂದ ನಿಪಾತಮಾಡಿರುವುದರಿಂದ ಧಾತುವಿಗೆ ಧಿ ಆದೇಶ. **ಗತಿರನಂತರಃ** ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಜೂರ್ಯತ್ಸು**—ಜೂರೀ ಘೂರೀ ಹಿಂಸಾವಯೋಹಾನ್ಯೋಃ ಧಾತು. **ವ್ಯತ್ಯಯೋಬಹುಲಂ** ಎಂಬುದ ರಿಂದ ಲಟಿಗೆ ಶತ್ರಾದೇಶ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. ಅದುಪ ದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿ-ರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಅಜರಃ**—ಜ್ಯೂಷ್ ವಯೋಹಾನೌ. ಧಾತು. ಇದಕ್ಕೆ ಭಾವಾರ್ಥ ತೋರುವಾಗ **ಋದೋರಪ್** (ಪಾ. ಸೂ. ೩-೩-೫೭) ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ನ ವಿದ್ಯತೇ ಜರಾ ಯಸ್ಯ ಸಃ **ನಞೋ ಜರಮರಮಿತ್ರಮೃತಾಃ** (ಪಾ. ಸೂ ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಅತ್ರ—ಋಚಿ ತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ಧೀರ್ಘ ಬರುತ್ತದೆ.

**ದಧೇ**—ಡುಧಾಞ್ ಧಾರಣಪೋಷಣಯೋಃ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಜಾತವೇದಾಃ**—ಜನೀ ಪ್ರಾದುರ್ಭಾವೇ. ಧಾತು ಇದಕ್ಕೆ ಕ್ತ ಪ್ರತ್ಯಯಪರವಾದಾಗ **ಜನಸನಖನಾಂ ಸನ್‌ಝುಲೋಃ** (ಪಾ.ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆಕಾರ ಅಂತಾದೇಶ. ಜಾತಂ ವೇದಃ (ಜ್ಞಾನಂ) ಯಸ್ಯ ಸಃ ಜಾತವೇದಾಃ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಪೂರ್ವಪದವು ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸಂಹಿತಾಪಾಠಃ

ಅಮಂಥಿಷ್ಟಾಂ ಭಾರತಾ ರೇವದಗ್ನಿಂ ದೇವಶ್ರವಾ ದೇವವಾತಃ ಸುದಕ್ಷಂ ।
ಅಗ್ನೇ ವಿ ಪಶ್ಯ ಬೃಹತಾಭಿ ರಾಯೇಷಾಂ ನೋ ನೇತಾ ಭವತಾದನು ದ್ಯೂನ್ ॥ ೨ ॥

ಪದಪಾಠಃ

ಅಮಂಥಿಷ್ಟಾಂ । ಭಾರತಾ । ರೇವತ್ । ಅಗ್ನಿಂ । ದೇವಽಶ್ರವಾಃ । ದೇವಽವಾತಃ । ಸುಽದಕ್ಷಂ ।
ಅಗ್ನೇ । ವಿ । ಪಶ್ಯ । ಬೃಹತಾ । ಅಭಿ । ರಾಯಾ । ಇಷಾಂ । ನಃ । ನೇತಾ । ಭವತಾತ್ । ಅನು ।
ದ್ಯೂನ್ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ಭಾರತಾ ಭಾರತೌ ಭರತಸ್ಯ ಪುತ್ರೌ ದೇವಶ್ರವಾ ದೇವವಾತಶ್ಚೇತ್ಯುಭೌ ಸುದಕ್ಷಂ ಶೋಭನಸಾಮರ್ಥ್ಯೋಪೇತಂ ರೇವತ್ ರಯಿಮಂತಮಗ್ನಿಮಂಗನಾದಿಗುಣೋಪೇತಂ ತ್ವಾಮಮಂಥಿಷ್ಟಾಂ । ಅಗ್ನಿಷ್ಟೋಮಾದಿಕರ್ಮಪ್ರಾಪ್ತ್ಯರ್ಥಮಲೋಲುಡತಾಂ । ಮಥನೇನ ತ್ವಾಮುತ್ಪಾದಿತವಂತಾವಿತ್ಯರ್ಥಃ । ತಾದೃಶಸ್ತ್ವಂ ಬೃಹತಾ ಪ್ರಭೂತೇನ ರಾಯಾ ಧನೇನ ಸಹಿತಃ ಸನ್ ಅಭಿ ಅಭಿಮುಖೋ ಭೂತ್ವಾ ವಿ ಪಶ್ಯ । ಅಸ್ಮಾನ್ವಿಶೇಷೇಣಾನುಗ್ರಹಪ್ರದೃಷ್ಟ್ಯಾ ವೀಕ್ಷಸ್ವ । ಕಿಂಚ । ಅನು ದ್ಯೂನ್ । ದ್ಯುಃ ಶಚ್ಯೋಹರ್ನಾಚೀ ವಸ್ತೋರ್ದ್ಯುರಿತಿ ತನ್ನಾಮಸು ಪಾಠಾತ್ । ದ್ಯೂನನು ಸರ್ವೇಷು ದಿವಸೇಷು ನೋಽಸ್ಮಾಕಮಿಷಾಮನ್ನಾನಾಂ ನೇತಾ ಆನೇತಾ ಭವತಾತ್ । ಭವ ॥ ಅಮಂಥಿಷ್ಟಾಂ । ಮಂಥ ವಿಲೋಡನ ಇತ್ಯಸ್ಮಾಲ್ಲುಙಿ ಸಿಚ್ । ವದವ್ರಜಹಲಂತಸ್ಯಾಚಃ । ಪಾ. ೭-೨-೩ । ಇತಿ ವೃದ್ಧೌ ಪ್ರಾಪ್ತಾಯಾಂ ನೇಟೀತಿ ಪ್ರತಿಷೇಧಃ । ತಸ್ಥಸ್ಥಮಿಪಾಮಿತ್ಯಾದಿನಾ ತಸಸ್ತಾಮಾದೇಶಃ । ಪಾದಾದಿತ್ವಾದನಿಘಾತಃ । ಅಟ್ಸ್ವರಃ । ಭಾರತಾ । ಭರತಸ್ಯಾಪತ್ಯಮಿತ್ಯರ್ಥೇ ಉತ್ಸಾದಿತ್ವಾದಞ್ । ತದ್ಧಿತೇಷ್ವಚಾಮಾದೇರಿತ್ಯಾದಿವೃದ್ಧಿಃ । ಞ್ನಿತ್ಸ್ವರಃ । ರೇವತ್ । ರಯಿಶಬ್ದಾನ್ಮತುಪ್ । ವತ್ಯೋರ್ದಾತ್ತತ್ವಸಂಪ್ರಸಾರಣಪರಪೂರ್ವತ್ವಗುಣಸುಬ್ಲೋಪಾಃ । ದೇವಶ್ರವಾಃ । ಶ್ರು ಶ್ರವಣೇ । ಅಸುನ್ನಿತಿ ಕರ್ಮಣ್ಯಸುನ್ । ದೇವೈಃ ಶ್ರೂಯತೇ ಪ್ರಖ್ಯಾಪ್ಯತೇಽಸಾವಿತಿ ದೇವಶ್ರವಾ ಋಷಿಃ । ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇ ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತ್ಯೌಣಾದಿಕಸೂತ್ರಾತ್ಪೂರ್ವಪದಸ್ವರಃ । ದೇವವಾತಃ । ವಾ ಗತಿಗಂಧನಯೋಃ । ಅಸ್ಮಾತ್ಕರ್ಮಣಿ ಕ್ತಃ । ದೇವೈರಿಷ್ಯಮಾಣತಯಾ ಪ್ರಾಪ್ತೋ ದೇವವಾತ ಋಷಿಃ । ತೃತೀಯಾ ಕರ್ಮಣೇತಿ ಪೂರ್ವಪದಪ್ರಕೃತಿಸ್ವರಃ । ದ್ಯೂನ್ । ದ್ಯು ಅಭಿಗಮನೇ ದ್ಯುತ ದೀಪ್ತೌ ವಾ । ಡಿಚ್ಚೇತ್ಯನುವೃತ್ತೌ ದ್ಯುಯುಭ್ಯಾಂ ಚೇತಿ ಭೋಜಸೂತ್ರೇಣ ಡುಪ್ರತ್ಯಯೋ ಡಿಚ್ಚ । ದ್ಯುತೇರಶ್ಚಾಡುಯಶ್ಚ । ಉ. ೫-೨೯ । ಇತಿ ಡುನ್‌ಪ್ರತ್ಯಯಃ । ಅಭಿಗಚ್ಛಂತ್ಯಸ್ಮಿನ್ ಸ್ವಂ ಸ್ವಮಭಿತಂ ದೇಶಂ ಪ್ರಾಣಿನ ಇತಿ ದ್ಯೋತತೇ ಕಿರಣಸಂಬಂಧಾದಿತಿ ವಾ ದ್ಯುರ್ದಿವಸಃ । ಪ್ರಥಮಯೋರಿತಿ ಸವರ್ಣದೀರ್ಘಃ । ತಸ್ಮಾಚ್ಛಸೋ ನಃ ಪುಂಸಿ । ಪಾ. ೬-೧-೧೦೩ । ಇತಿ ಸಕಾರಸ್ಯ ನಕಾರಃ । ಏಕಾದೇಶಸ್ವರಃ ॥

### ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ಭಾರತಾ**—ಭರತನ ಪುತ್ರರಾದ | **ದೇವಶ್ರವಾಃ**—ದೇವಶ್ರವನೆಂಬುವನೂ | **ದೇವವಾತಃ**—ದೇವವಾತನೆಂಬುವನೂ | **ಸುದಕ್ಷಂ**—ಶ್ರೇಷ್ಠವಾದ ಸಾಮರ್ಥ್ಯದಿಂದ ಕೂಡಿದವನೂ | **ರೇವತ್**—ಧನಯುಕ್ತನೂ | **ಅಗ್ನಿಂ**—ಅಂಗನಾದಿ ಗುಣಗಳಿಂದ ಕೂಡಿದವನೂ ಆದ ನಿನ್ನನ್ನು | **ಅಮಂಥಿಷ್ಟಾಂ**—ಮಥಿಸಿ ಉತ್ಪತ್ತಿಯಾಗುವಂತೆ ಮಾಡಿದರು ( ಅಂತಹ ನೀನು ) | **ಬೃಹತಾ**—ಪ್ರಭೂತವಾದ | **ರಾಯಾ**—ಧನದೊಡನೆ ಕೂಡಿಕೊಂಡು | **ಅಭಿ**—ನಮ್ಮ ಅಭಿಮುಖವಾಗಿ | **ವಿಪಶ್ಯ**—ಅನುಗ್ರಹಾತ್ಮಕವಾದ ದೃಷ್ಟಿಯಿಂದ ನೋಡು | **ಅನು ದ್ಯೂನ್**—ಪ್ರತಿದಿನವೂ | **ನಃ**—ನಮಗೆ| **ಇಷಾಂ**—ಅನ್ನಗಳನ್ನು| **ನೇತಾ**—ತರುವವನಾಗಿ| **ಭವತಾತ್**—ಆಗಿರು ||

### ಭಾವಾರ್ಥ

ಎಲೈ ಅಗ್ನಿಯೇ, ಭರತಪುತ್ರರಾದ ದೇವಶ್ರವ ಮತ್ತು ದೇವವಾತ ಎಂಬಿಬ್ಬರೂ ಸಹ ಶ್ರೇಷ್ಠವಾದ ಸಾಮರ್ಥ್ಯದಿಂದ ಕೂಡಿದವನೂ, ಧನಯುಕ್ತನೂ ಅಂಗನಾದಿಗುಣಗಳಿಂದ ಕೂಡಿದವನೂ ಆದ ನಿನ್ನನ್ನು ಮಥಿಸಿ ನಿನ್ನ ಉತ್ಪತ್ತಿಯಾಗುವಂತೆ ಮಾಡಿದರು. ಅಂತಹ ನೀನು ಪ್ರಭೂತವಾದ ಧನದೊಡನೆ ಕೂಡಿಕೊಂಡು ನಮ್ಮ ಅಭಿಮುಖವಾಗಿ ಅನುಗ್ರಹಾತ್ಮಕವಾದ ದೃಷ್ಟಿಯಿಂದ ನೋಡು. ನಮಗೆ ಪ್ರತಿದಿನವೂ ಅನ್ನಗಳನ್ನು ತರುವವನಾಗಿ ಆಗಿರು.

## English Translation

The two sons of Bharata, Devashravas and Devavata, have churned the very powerful and wealth-bestowing Agni ; look upon us, Agni, with vast riches, and be the bringer of food (to us) every day.

### ವಿಶೇಷವಿಷಯಗಳು

**ಭಾರತಾ—ಭಾರತೌ ಭರತಸ್ಯ ಪುತ್ರೌ** | ಭರತನೆಂದು ಪ್ರಸಿದ್ಧನಾದವನ ಪುತ್ರರಾದ ಕಾರಣ ಭಾರತರೆಂದು ಹೆಸರುಳ್ಳವರೆಂದು ಅರ್ಥವನ್ನು ವರ್ಣಿಸಿದೆ.

**ದೇವಶ್ರವಾಃ—ದೇವೈಃ ಶ್ರೂಯತೇ ಪ್ರಖ್ಯಾಪ್ಯತೇ ಅಸಾವಿತಿ** | ದೇವತೆಗಳಿಂದ ಪ್ರಸಿದ್ಧಪಡಿಸಲ್ಪಟ್ಟವನಾದುದರಿಂದ ದೇವಶ್ರವಸ್ಸೆಂದು ಹೆಸರುಳ್ಳ ಋಷಿಯೂ, **ದೇವೈರ್ವಾತಃ—ದೇವೈರಿಷ್ಯಮಾಣತಯಾ ಪ್ರಾಪ್ತಃ** ದೇವತೆಗಳಿಂದ ಅಪೇಕ್ಷಿತನಾಗಿ ಹೊಂದಲ್ಪಟ್ಟಕಾರಣ ದೇವವಾತನೆಂಬ ಋಷಿಯೂ ಕೂಡ ತಾನು ಆಶ್ರಯಿಸುವುದೆಲ್ಲವನ್ನೂ ತನಗೆ ಅಧೀನದಲ್ಲಿರುವಂತೆ ಮಾಡಿಕೊಳ್ಳುವ ಧನವಂತನಾದ ಅಗ್ನಿಯನ್ನು ಅಗ್ನಿಷ್ಟೋಮವೇ ಮೊದಲಾದ ಯಜ್ಞಕರ್ಮಗಳ ಸಿದ್ಧಿಗಾಗಿ ಅರಣಿಗಳಲ್ಲಿ ಮಥನದಿಂದ ಉತ್ಪನ್ನಮಾಡಿದರೆಂದು ವಿವರಿಸಿದೆ.

ಈ ಋಷಿಗಳಿಂದ ಅರಣಿಗಳಲ್ಲಿ ಉತ್ಪನ್ನನಾಗಿರುವ ಅಗ್ನಿಯು **ಬೃಹತ್ ರಾಯಾ** ಪ್ರಭೂತವಾದ ಧನದಿಂದ ಕೂಡಿದವನಾಗಿ ಯಜ್ಞವನ್ನು ಆಚರಿಸುವ ಯಜಮಾನರಾದ ನಮಗೆ ಅಭಿಮುಖನಾಗಿ **ಅಸ್ಮಾನ್ ವಿಶೇಷೇಣಾನುಗ್ರಹದೃಷ್ಟ್ಯಾ ವೀಕ್ಷಸ್ವ** ನಮ್ಮನ್ನು ಅತಿಶಯವಾದ ಅನುಗ್ರಹದೃಷ್ಟಿಯಿಂದ ನೋಡು ಎಂದು ಆಶಿಸಿದೆ.

**ಅನು ದ್ಯೂನ್ ನಃ ಇಷಾಂ ನೇತಾ ಭವ—ಸರ್ವೇಷು ದಿವಸೇಷು ಅಸ್ಮಾಕಮನ್ನಾನಾಂ ನೇತಾ ಭವ** | ದ್ಯು ಶಬ್ದವು ಅಹರ್ನಾಮಗಳಲ್ಲಿ (ನಿ. ೨-೨೧) ಉಕ್ತವಾಗಿದೆ. ಅಗ್ನಿಯು ಯಜಮಾನರಿಗೆ ಅನ್ನವನ್ನು ಅನುಗ್ರಹಿಸಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ಅಮಂಥಿಷ್ಟಾಂ**—ಮನ್ಥ ವಿಲೋಡನೇ. ಧಾತು. ಲುಙ್. ಪ್ರಥಮಪುರುಷದ್ವಿವಚನದಲ್ಲಿ ತಸಿಗೆ ತಾಮಾದೇಶ. ಚ್ಲಿ ಬಂದಾಗ ಅದಕ್ಕೆ ಸಿಚಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. ಧಾತುವು ಹಲಂತವಾದುದರಿಂದ **ವದವ್ರಜಹಲಂತಸ್ಯಾಚಃ** (ಪಾ. ಸೂ. ೭-೨-೩) ಎಂಬುದರಿಂದ ವೃದ್ಧಿಯು ಪ್ರಾಪ್ತವಾದರೆ **ನೇಟಿ** (ಪಾ. ಸೂ. ೭-೨-೪) ಎಂಬುದರಿಂದ ಇಡಾದಿಸಿಚ್ ಪರವಾದುದರಿಂದ ನಿಷೇಧ ಬರುತ್ತದೆ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತಪದವಾಗುತ್ತದೆ.

**ಭಾರತಾ**—ಭರತಸ್ಯ ಅಪತ್ಯೇ ಪುಮಾಂಸೌ. ಭಾರತೌ. ವತ್ಸಾದಿಗಣದಲ್ಲಿ ಪಠಿತವಾದುದರಿಂದ **ವತ್ಸಾದಿಭ್ಯೋಽಞ್** ಎಂಬುದರಿಂದ ಅಞ್ ಪ್ರತ್ಯಯ. ಇದು ಞಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾದ್ವಿವಚನಪರವಾದಾಗ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ರೇವತ್**—ರಯಿಃ ಅಸ್ಯ ಅಸ್ತಿ ಎಂದು ಅರ್ಥ ವಿವಕ್ಷೆಮಾಡಿದಾಗ ಮತುಪ್ ಪ್ರತ್ಯಯ. **ರಯೇರ್ಮತೌ ಬಹುಲಂ** ಎಂಬುದರಿಂದ ಪೂರ್ವಕ್ಕೆ ಸಂಪ್ರಸಾರಣ. (ಇಕಾರ) ಪರಪೂರ್ವರೂಪ ಗುಣ. **ಸುಪಾಂ ಸುಲುಕ್** ಎಂಬುದರಿಂದ ವಿಭಕ್ತಿಗೆ (ದ್ವಿತೀಯಾಏಕವಚನ) ಲುಕ್.

**ದೇವಶ್ರವಾಃ**—ಶ್ರು ಶ್ರವಣೇ ಧಾತು. ಅಸುನ್ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ ಇದಕ್ಕೆ ಕರ್ಮಣಿಯಲ್ಲಿ ಅಸುನ್ ಪ್ರತ್ಯಯು ಬರುತ್ತದೆ. ದೇವೈಃ ಶ್ರೂಯತೇ-ಪ್ರಖ್ಯಾಪ್ಯತೇ ಅಸೌ ಇತಿ ದೇವಶ್ರವಾಃ ಋಷಿ ಎಂದರ್ಥ. ಕೃದುತ್ತರಪದಪ್ರಕೃತಿಸ್ವರ ಪ್ರಾಪ್ತವಾದರೆ **ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚ** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ದೇವವಾತಃ**—ವಾ ಗತಿಗಂಧನಯೋಃ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ ದೇವೈಃ ಇಷ್ಯಮಾಣತಯಾ ಪ್ರಾಪ್ತಃ ದೇವವಾತಃ ಋಷಿಃ (ದೇವತೆಗಳಿಂದ ಇಚ್ಛಾಪೂರ್ವಕ ಹೊಂದಲ್ಪಡುವವ) **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಪಶ್ಯ**—ದೃಶಿರ್ ಪ್ರೇಕ್ಷಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಬೃಹತಾ**—**ಬೃಹನ್ಮಹತೋರುಪಸಂಖ್ಯಾನಂ** ಎಂಬ ವಚನದಿಂದ ತೃತೀಯಾ ಏಕವಚನಕ್ಕೆ ಉದಾತ್ತಸ್ವರ ಬರುತ್ತದೆ.

**ರಾಯಾ**—ರೈ ಶಬ್ದ. ತೃತೀಯಾಏಕವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದ್ಯೂನ್**—ದ್ಯು ಅಭಿಗಮನೇ. ಧಾತು. ಅಥವಾ ದ್ಯುತ ದೀಪ್ತೌ. ಧಾತು. ಉಚ್ಛೇ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ದ್ಯುಯುಭ್ಯಾಂಚ** (ಭೋಜಸೂತ್ರ) ಎಂಬುದರಿಂದ ಡು ಪ್ರತ್ಯಯ. ದ್ಯುತಧಾತು

ಪಕ್ಷದಲ್ಲಿ ಅಶ್ರ್ವಾದಯಶ್ಚ (ಉ. ಸೂ. ೫-೭೦೭) ಎಂಬುದರಿಂದ ಡುನ್ ಪ್ರತ್ಯಯ. ಅಭಿಗಚ್ಛಂತಿ ಅಸ್ಮಿನ್ ಸ್ವಂ ಸ್ವಂ ಅಭಿಮತಂ ದೇಶಂ ಪ್ರಾಣಿನಃ ಇತಿ. (ಪ್ರಾಣಿಗಳು ಯಾವುದರಲ್ಲಿ ತಮ್ಮ ಅಭಿಮತದೇಶವನ್ನು ಕುರಿತು ಹೋಗುವುವೋ ಅದು) ದ್ಯುತಧಾತು ಪಕ್ಷದಲ್ಲಿ ದ್ಯೋತತೇ ಕಿರಣಸಂಬಂಧಾತ್ ಇತಿ ದಿವಸಃ (ಕಿರಣಗಳ ಸಂಬಂಧದಿಂದ ಪ್ರಕಾಶಿಸುವುದು ದಿವಸ) ದ್ಯು ಎಂದು ರೂಪವಾಗುತ್ತದೆ. ದ್ವಿತೀಯಾ ಬಹುವಚನದಲ್ಲಿ ಪ್ರಥಮಯೋಃ ಪೂರ್ವಸ- ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ. ಪೂರ್ವಸವರ್ಣದೀರ್ಘದ ಪರದಲ್ಲಿ ಶಸಿನ ಸಕಾರ ಬಂದುದರಿಂದ ತಸ್ಮಾಚ್ಛಸೋಃನಃಪುಂಸಿ (ಪಾ. ಸೂ. ೬-೧-೧೦೩) ಎಂಬುದರಿಂದ ಅದಕ್ಕೆ ನಕಾರಾದೇಶ. ಏಕಾದೇಶಉದಾತ್ತೇನೋದಾತ್ತಃ (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶಸ್ವರದಿಂದ ಉದಾತ್ತವಾಗುತ್ತದೆ.

---

ಸಂಹಿತಾಪಾಠಃ

ದಶ ಕ್ಷಿಪಃ ಪೂರ್ವ್ಯಂ ಸೀಮಜೀಜನನ್ತ್ಸುಜಾತಂ ಮಾತೃಷು ಪ್ರಿಯಂ ।
ಅಗ್ನಿಂ ಸ್ತುಹಿ ದೈವವಾತಂ ದೇವಶ್ರವೋ ಯೋ ಜನಾನಾಮಸದ್ವಶೀ ॥ ೩ ॥

ಪದಪಾಠಃ

ದಶ । ಕ್ಷಿಪಃ । ಪೂರ್ವ್ಯಂ । ಸೀಂ । ಅಜೀಜನನ್ । ಸುಽಜಾತಂ । ಮಾತೃಷು । ಪ್ರಿಯಂ ।
ಅಗ್ನಿಂ । ಸ್ತುಹಿ । ದೈವಽವಾತಂ । ದೇವಽಶ್ರವಃ । ಯಃ । ಜನಾನಾಂ । ಅಸತ್ । ವಶೀ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವವಾತಸ್ಯ ಕ್ಷಿಪಃ । ಕ್ಷಿಪ್ಯಂತೇ ಕರ್ಮಕರಣಾರ್ಥಮಿತಿ ಕ್ಷಿಪೋಽಂಗುಲಯಃ । ತಾಶ್ಚ ದಶ । ಬಾಹುದ್ವಯಸ್ಯ ಮಥನಸಾಧನತ್ವೇನ ತತ್ರತ್ಯಾ ಅಂಗುಲಯೋ ದಶಸಂಖ್ಯಾಕಾಃ । ತಾದೃಶೋಽಙ್ಗುಲಯಃ ಪೂರ್ವ್ಯಂ ಪುರಾತನಂ ಸೀಮೇನಂ ತ್ವಾಮಜೀಜನನ್ । ಉದಪೀಪದನ್ । ಹೇ ದೇವಶ್ರವೋ ಮಾತೃಷು ಮಾತೃಭೂತಾರಣ್ಯೋಃ ಸುಜಾತಂ ಸುಷ್ಠೂತ್ಪನ್ನಂ ಅತ ಏವ ಪ್ರಿಯಂ ಕಮನೀಯಂ ದೈವವಾತಂ ದೇವವಾತೇನ ಮಥಿತಮೇನಮಗ್ನಿಂ ಸ್ತುಹಿ । ಯೋಽಗ್ನಿರ್ಜನಾನಾಂ ಸ್ತೋತೄಣಾಂ ಯಜಮಾನಾನಾಂ ವಶೀ ವಶವರ್ತೀ ಕರ್ಮಣಾಂ ಸ್ವಾತಂತ್ರ್ಯೇಣ ಪ್ರವರ್ತಕೋಽಸತ್ ಭವತಿ ತಂ ಸ್ತುಹೀತಿ ಪೂರ್ವೇಣಾನ್ವಯಃ ॥ ದಶ । ದನ್ಶ ದಶನೇ । ಕನಿನ್ನಿತ್ಯನುವೃತ್ತೌ ನುದಶೋರ್ಗುಣಶ್ಚೇತಿ ಕನಿನ್ । ನಿತ್ಸ್ವರಃ । ಕ್ಷಿಪಃ । ಕ್ಷಿಪ ಪ್ರೇರಣೇ । ಔಣಾದಿಕಃ ಕರ್ಮಣಿ ಕ್ವಿಪ್ । ಕ್ಷಿಪ್ಯಂತೇ ಪ್ರೇರ್ಯಂತೇ ಕರ್ಮಸ್ವಿತಿ ಕ್ಷಿಪೋಽಂಗುಲಯಃ । ಧಾತುಸ್ವರಃ । ಅಜೀಜನನ್ । ಜನೀ ಪ್ರಾದುರ್ಭಾವೇ । ಹೇತುಮಣ್ಯಂತಸ್ಯ ಲುಙಿ ಚಙಿ ದ್ವಿರ್ವಚನಸನ್ವದ್ಭಾವಾಭ್ಯಾಸೇತ್ವದೀರ್ಘಾಃ । ನಿಘಾತಃ । ಸ್ತುಹಿ । ಷ್ಟುಞ್ ಸ್ತುತಾವಿತ್ಯಸ್ಯ ಲೋಟಿ ರೂಪಂ । ಅದಾದಿತ್ವಾಚ್ಛಪೋ ಲುಕ್ । ನಿಘಾತಃ । ದೈವವಾತಂ । ದೇವವಾತೇನ ನಿರ್ವೃತ್ತಮಿತ್ಯರ್ಥೇ ತೇನ ನಿರ್ವೃತ್ತಂ । ಪಾ. ೪-೨-೬೮ । ಇತ್ಯಣ್ । ಪ್ರತ್ಯಯಸ್ವರಃ । ಅಸತ್ । ಅಸ ಭುವಿ । ಅಸ್ಯ ಲೇಟ್ಯಡಾಗಮಃ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ದಶ ಕ್ಷಿಪಃ**—(ದೇವವಾತನ) ಹತ್ತು ಬೆರಳುಗಳೂ| **ಪೂರ್ವ್ಯಂ**—ಪುರಾತನನಾದವನೂ | **ಸೀಂ**—ಉತ್ತಮ ಗುಣಗಳಿಂದ ಕೂಡಿದವನೂ ಆದ ಅಗ್ನಿಯನ್ನು | **ಅಜೀಜನನ್**—ಉತ್ಪನ್ನವಾಗುವಂತೆ ಮಾಡಿದವು| **ದೇವಶ್ರವಃ**—ಎಲೈ ದೇವಶ್ರವಸ್ಸೇ | **ಮಾತೃಷು**—ಮಾತೃಭೂತವಾದ ಅರಣಿಗಳಲ್ಲಿ | **ಸುಜಾತಂ**—ಅತಿಶಯವಾಗಿ ಉತ್ಪನ್ನನಾದ ವನೂ | **ಪ್ರಿಯಂ**—ಹಿತಕರನೂ | **ದೇವವಾತಂ**—ದೇವವಾತನಿಂದ ಮಥಿತನಾದವನೂ (ಮತ್ತು) | **ಯಃ**—ಯಾವ ಅಗ್ನಿಯು | **ಜನಾನಾಂ**—ಸ್ತುತಿಕರ್ತರಾದ ಯಜಮಾನರಿಗೆ | **ವಶೀ**—ಪರಾಧೀನನೂ | **ಅಸತ್**—ಆಗಿರುವನೋ | ಅಂತಹ | **ಅಗ್ನಿಂ**—ಅಗ್ನಿಯನ್ನು | **ಸ್ತುಹಿ**—ಸ್ತುತಿಸು ||

ಭಾವಾರ್ಥ

ದೇವವಾತನ ಹತ್ತು ಬೆರಳುಗಳೂ ಸಹ ಪುರಾತನನಾದವನೂ ಉತ್ತಮವಾದ ಗುಣಗಳಿಂದ ಕೂಡಿದವನೂ ಆದ ಅಗ್ನಿಯನ್ನು ಉತ್ಪನ್ನವಾಗುವಂತೆ ಮಾಡಿದವು. ಎಲೈ ದೇವಶ್ರವಸ್ಸೇ, ಮಾತೃಭೂತವಾದ ಅರಣಿಗಳಲ್ಲಿ ಅತಿಶಯವಾಗಿ ಉತ್ಪನ್ನನಾದವನೂ, ಹಿತಕರನೂ, ದೇವವಾತನಿಂದ ಮಥಿತನಾದವನೂ ಮತ್ತು ಸ್ತುತಿಕರ್ತರಾದ ಯಜಮಾನನಿಗೆ ಪರಾಧೀನನಾದವನೂ ಆದ ಅಗ್ನಿಯನ್ನು ಸ್ತುತಿಸು.

## English Translation

The ten fingers have generated this ancient (Agni) : praise, Devashravas, this well-born, beloved (son) of his parents, generated by Devavata, Agni, who is the servant of men.

ವಿಶೇಷವಿಷಯಗಳು.

**ಕ್ಷಿಪಃ—ಕ್ಷಿಪ್ಯಂತೇ ಕರ್ಮಕರಣಾರ್ಥಮಿತಿ ಕ್ಷಿಪೋ ಅಂಗುಲಯಃ** | ಕ್ಷಿಪಃ ಎಂಬ ಪದವು ಅಂಗುಲಿ ನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಅವಶ್ಯಕರ್ತವ್ಯಕರ್ಮಗಳಿಗಾಗಿ ಉಪಯೋಗವನ್ನು ಹೊಂದುವಕಾರಣ ಕ್ಷಿಪ ಎಂಬ ಶಬ್ದದಿಂದ ವ್ಯವಹೃತವಾಗಿದೆ. ಈ ಅಂಗುಲಿಗಳು (ಬೆರಳುಗಳು) ಎರಡು ಹಸ್ತಗಳಿಂದ ಹತ್ತಾಗಿರುವುವು. ಇವುಗಳೆಲ್ಲವೂ ಅಗ್ನಿಯನ್ನು ಮಥನಮಾಡುವುದರಲ್ಲಿ ಸಾಧನವಾದ ಎರಡು ತೋಳುಗಳಲ್ಲಿರುವವು. ಇವು ಅಗ್ನಿಮಥನ ಕಾಲದಲ್ಲಿ ಸಹಾಯಕವಾಗಿರುತ್ತವೆ. ಈ ಅಂಗುಲಿಗಳು ಪುರಾತನನಾಗಿರುವ ಈ ಅಗ್ನಿಯನ್ನು ಅರಣಿಗಳಿಂದ ಉತ್ಪನ್ನ ಮಾಡಿರುತ್ತವೆ ಎಂದು ಅರ್ಥವನ್ನು ವಿವರಿಸಿದೆ.

ಸೀಂ ಎಂಬ ನಿಪಾತವು **ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ** (ನಿ. ೧-೭) ಪರಿಗ್ರಹ ಎಂಬ ಅರ್ಥದಲ್ಲಾಗಲಿ ಅಥವಾ ಪದಪೂರಣಾರ್ಥದಲ್ಲಿಯಾಗಲಿ ಪ್ರಯುಕ್ತವಾಗಿದೆ ಎಂದು ಯಾಸ್ಕರು ವಿವರಿಸಿದ್ದಾರೆ. ಮತ್ತು **ಅಪಿ ವಾ ಸೀಮಿತ್ಯೇತದನರ್ಥಕಮುಪನಿಬಂಧಮಾದದೀತ ಪಂಚಮೀ ಕರ್ಮಣಾಂ ಸೀಮ್ನಃ ಸೀಮತಃ ಸೀಮಾತಃ ಮರ್ಯಾದಾತಃ ಸೀಮಾ ಮರ್ಯಾದಾ** ಎಂದು ವಿವರಿಸಿ, "ಪ್ರಸೀಮಾದಿತ್ಯೋ ಅಸೃಜತ್" "ವಿಸೀಮತಃ ಸುರುಚೋ ವೇನ ಆವಃ" ಎಂದು ಉದಾಹರಣೆಯನ್ನು ಹೇಳಿದ್ದಾರೆ. ಸೀಂ ಎಂಬುದು ಅರ್ಥವಿಲ್ಲದ ನಿಪಾತವಾಗಿರುವುದು ಎಂದೂ ಕರ್ಮಾರ್ಥದಲ್ಲಿ ಎಲ್ಲೆಯನ್ನು ತೋರಿಸುವುದು ಎಂದೂ ದುರ್ಗಾಚಾರ್ಯರು ಅರ್ಥವನ್ನು ವರ್ಣಿಸಿದ್ದಾರೆ.

ದೇವಶ್ರವಸ್ ಎಂಬ ಋಷಿಯನ್ನು ಸಂಬೋಧಿಸಿ **ಮಾತೃಷು ಸುಜಾತಂ ಪ್ರಿಯಂ ದೈವವಾತಂ ಅಗ್ನಿಂ ಸ್ತುಹಿ** ಎಂಬ ವಾಕ್ಯದಿಂದ ಅಗ್ನಿಯು ಉತ್ಪನ್ನವಾಗಲು ಮುಖ್ಯಕಾರಣವಾದ ಅರಣಿಗಳಲ್ಲಿ ಮಥನದಿಂದ ಉತ್ಪನ್ನನಾಗಿ ಸರ್ವರಿಗೂ ಹಿತಕರನಾದ ದೇವವಾತಋಷಿಯಿಂದ ಮಥಿತನಾದ ಅಗ್ನಿಯನ್ನು ದೇವಶ್ರವಸ್ಸೆಂಬ ಋಷಿಯು ಸ್ತುತಿಮಾಡಲಿ ಎಂದು ಆದೇಶರೂಪವಾದ ಆಶಂಸೆಯು ವರ್ಣಿತವಾಗಿದೆ.

**ಜನಾನಾಂ ವಶೀ**—ಅಗ್ನಿಯು ಸ್ತೋತ್ರಮಾಡುವ ಯಜಮಾನರಿಗೆ ಅಧೀನನಾಗಿರುವವನೂ ಯಜ್ಞಕರ್ಮಗಳನ್ನು ಇತರರ ಸಹಾಯವಿಲ್ಲದಂತೆ ನೆರವೇರಿಸುವವನೂ ಆಗಿರುವುದರಿಂದ ಸ್ತೋತ್ರಾರ್ಹನಾಗಿರುವ ಅಗ್ನಿಯನ್ನು ಸ್ತುತಿಮಾಡಲಿ ಎಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ವಶ**—ದಂಶ ದಶನೇ ಧಾತು. **ಕನಿನ್** ಎಂದು ಪೂರ್ವಸೂತ್ರದಿಂದ ಅನುವೃತ್ತಗುವಾಗ **ನುದಶೋರ್ಗುಣಶ್ಚ** ಎಂಬುದರಿಂದ ಕನಿನ್‌ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ ಧಾತುವಿನ ಉಪಧಾನಕಾರಕ್ಕೆ ಲೋಪ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕ್ಷಿಪಃ**—ಕ್ಷಿಪ ಪ್ರೇರಣೇ ಧಾತು. ಇದಕ್ಕೆ ಉಣಾದಿಸಿದ್ಧವಾದ ಕ್ವಿಪ್ ಪ್ರತ್ಯಯವು ಕರ್ಮಣಿಯಲ್ಲಿ ಬರುತ್ತದೆ. ಕ್ಷಿಪ್ಯಂತೇ ಪ್ರೇರ್ಯಂತೇ ಕರ್ಮಸು ಇತಿ ಕ್ಷಿಪಃ ಅಂಗುಲಯಃ (ಕೆಲಸಗಳಲ್ಲಿ ಪ್ರೇರೇಪಿಸಲ್ಪಡುವವುಗಳು ಬೆರಳುಗಳು). ಧಾತುಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಅಜೀಜನನ್**—ಜನೀ ಪ್ರಾದುರ್ಭಾವೇ ಧಾತು. **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ **ಣಿಚ್.** ಣ್ಯಂತದಮೇಲೆ ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅದಕ್ಕೆ ಅಂತಾದೇಶ ಇಕಾರ ಲೋಪ. ತಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** ಎಂಬುದರಿಂದ ಧಾತುವಿಗೆ ದ್ವಿತ್ವ. ಸನ್ವದ್ಭಾವವಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ತುಹಿ**—ಷ್ಟುಞ್ ಸ್ತುತೌ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅದಾದಿಗಣ ಪಠಿತವಾದುದರಿಂದ ಶಪಿಗೆ ಲುಕ್ ಬರುತ್ತದೆ. ಹಿಂದಿನಂತೆ ತಿಙಂತನಿಘಾತಸ್ವರ ಬರುತ್ತದೆ.

**ದೈವವಾತಂ**—ದೇವವಾತೇನ ನಿರ್ವೃತ್ತಂ ಎಂದರ್ಥ. ವಿವಕ್ಷೆಮಾಡಿದಾಗ **ತೇನ ನಿರ್ವೃತ್ತಂ** (ಪಾ.ಸೂ. ೪-೨-೬೮) ಎಂಬುದರಿಂದ ಅಣ್‌ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿಗೆ ವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಸತ್**—ಅಸ ಭುವಿ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್. **ಇತಶ್ಚ ಲೋಪಃಪ**—(ಪಾ. ಸೂ. ೩-೧-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೧-೯೪) ಎಂಬುದರಿಂದ ಅದಕ್ಕೆ ಅಡಾಗಮ. ಶಪಿಗೆ ಲುಕ್. ಅಸತ್ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಗಮ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

———

ಸಂಹಿತಾಪಾಠಃ

ನಿ ತ್ವಾ ದಧೇ ವರ ಆ ಪೃಥಿವ್ಯಾ ಇಳಾಯಾಸ್ಪದೇ ಸುದಿನತ್ವೇ ಅಹ್ನಾಂ ।
ದೃಷದ್ವತ್ಯಾಂ ಮಾನುಷ ಆಪಯಾಯಾಂ ಸರಸ್ವತ್ಯಾಂ ರೇವದಗ್ನೇ ದಿದೀಹಿ ॥ ೪ ॥

ಪದಪಾಠಃ

ನಿ । ತ್ವಾ । ದಧೇ । ವರೇ । ಆ । ಪೃಥಿವ್ಯಾಃ । ಇಳಾಯಾಃ । ಪದೇ । ಸುದಿನಽತ್ವೇ । ಅಹ್ನಾಂ ।
ದೃಷತ್ಽವತ್ಯಾಂ । ಮಾನುಷೇ । ಆಪಯಾಯಾಂ । ಸರಸ್ವತ್ಯಾಂ । ರೇವತ್ । ಅಗ್ನೇ । ದಿದೀಹಿ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ಇಳಾಯಾ ಗೋರೂಪಧಾರಿಣ್ಯಾಃ ಪೃಥಿವ್ಯಾ ಭೂಮೇರ್ವರೇ ವರಿಷ್ಠೇ ಪದ ಉತ್ತರವೇದ್ಯಾಂ ಅಹ್ನಾಂ ಸುದಿನತ್ವೇ ಯಜನೀಯದಿವಸಾನಾಂ ಶೋಭನದಿನತ್ವಾರ್ಥಂ । ಯೇಷು ದಿನೇಷ್ವಿಂದ್ರಾದಯೋ ವರೀಯಾಂಸೋ ದೇವಾ ಇಜ್ಯಂತೇ ತಾನಿ ಸುದಿನಾನಿ । ತದರ್ಥಂ ತ್ವಾ ತ್ವಾಮಾ ನಿದಧೇ । ಆ ಸಮಂತಾನ್ನಿದಧಾಮಿ । ಉತ್ತಮಾನಿ ಸ್ಥಾನಾನಿ ದರ್ಶಯತಿ । ದೃಷದ್ವತ್ಯಾಂ । ದೃಷದ್ವತೀ ನಾಮ ಕಾಚಿನ್ನದೀ ತಸ್ಯಾಂ । ಮಾನುಷೇ ಮನುಷ್ಯಸಂಚಾರವಿಷಯೇ ತೀರೇ । ಆಪಯಾಯಾಂ । ಆಪಯಾ ನಾಮ ಕಾಚಿನ್ನದೀ ತಸ್ಯಾಂ । ಸರಸ್ವತ್ಯಾಂ ನದ್ಯಾಂ । ಏತೇಷು ಸ್ಥಾನೇಷು ತ್ವಂ ರೇವತ್ ಧನಯುಕ್ತಂ ಯಥಾ ಭವತಿ ತಥಾ ದಿದೀಹಿ । ದೀಪ್ಯಸ್ವ । ಮಹರ್ಷಯಃ ಸರಸ್ವತೀತೀರೇ ಖಲು ಯಜ್ಞಾದಿಕರ್ಮಾಣ್ಯಕಾರ್ಷುಃ। ತಥಾ ಚ ಬ್ರಾಹ್ಮಣಂ । ಋಷಯೋ ವೈ ಸರಸ್ವತ್ಯಾಂ ಸತ್ರಮಾಸತ । ಐ. ಬ್ರಾ. ೨-೧೯ । ಇತಿ ॥ ದಧೇ । ದಧಾತೇರ್ಲಿಟ್ಯುತ್ತಮೈಕವಚನೇ ರೂಪಂ । ವರೇ । ವೃಞ್ ವರಣೇ । ಗ್ರಹವೃದೃನಿಶ್ಚಿಗಮಶ್ಚೇತ್ಯಪ್ । ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ದೃಷದ್ವತ್ಯಾಂ । ದೃ ವಿದಾರಣೇ । ದೃಣಾತೇಃ ಷುಗ್ಘ್ರಸ್ವಶ್ಚ । ಉ. ೧-೧೩೦ । ಇತ್ಯಾದಿನಾ ಷುಗಾಗಮೋ ಧಾತೋರ್ಹ್ರಸ್ವಶ್ಚ । ದೃಷದ ಉಪಲಾ ಯಸ್ಯಾಂ ಸಂತೀತಿ ಮತುಪ್ । ಝಯ ಇತಿ ತಸ್ಯ ವತ್ವಂ । ಸ್ವರವಿಧೌ ವ್ಯಂಜನಮವಿದ್ಯಮಾನವದಿತ್ಯಸ್ಯಾಃ ಪರಿಭಾಷಾಯಾ ಅತ್ರಾಶ್ರಯಣಾಭಾವಾನ್ಮತುಪ ಉದಾತ್ತತಾಭಾವಃ । ಆದಿಪ್ರತ್ಯಯಸ್ವರಃ । ಸರಸ್ವತ್ಯಾಂ । ಸರಃಶಬ್ದೋಽಸುನಂತತ್ವಾದಾದ್ಯುದಾತ್ತಃ । ತದಸ್ಯಾಸ್ತೀತಿ ಮತುಪ್ । ಮಾದುಪಧತ್ವಾನ್ಮಸ್ಯ ವತ್ವಂ । ಉಗಿತ್ತ್ವಾತ್ ಙೀಪ್ । ದಿದೀಹಿ । ದಿವು ಕ್ರೀಡಾದಾವಿತ್ಯಸ್ಯ ಯಙ್ಲುಕಿ ರೂಪಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ, । ಇಳಾಯಾಃ—ಗೋರೂಪವನ್ನು ಧರಿಸಿರುವ । ಪೃಥಿವ್ಯಾಃ—ಭೂಮಿಯ । **ವರೇ**—ಉತ್ತಮವಾದುದೂ । **ಪದೇ**—ಉತ್ತರವೇದಿರೂಪವಾದುದೂ ಆದ ಸ್ಥಾನದಲ್ಲಿ । **ಅಹ್ನಾಂ ಸುದಿನತ್ವೇ**—ಎಲ್ಲಕ್ಕಿಂತಲೂ ಶ್ರೇಷ್ಠವಾದ ಸುದಿವಸದಲ್ಲಿ । **ತ್ವಾ**—ನಿನ್ನನ್ನು । **ಆ ನಿದಧೇ**—ಸುತ್ತಲೂ ಸ್ಥಾಪಿಸುತ್ತೇನೆ. । **ಮಾನುಷೇ**—ಯಜ್ಞಕರ್ತರಾದ ಮಾನವರು ಸಂಚರಿಸತಕ್ಕ । **ದೃಷದ್ವತ್ಯಾಂ**—'ದೃಷದ್ವತಿ'ಯ ದಡದ ಮೇಲೂ, ।

**ಆಪಯಾಯಾಂ**—'ಆಪಯಾ' ಎಂಬ ನದಿಯ ಮೇಲೂ | **ಸರಸ್ವತ್ಯಾಂ**—'ಸರಸ್ವತೀ' ಎಂಬ ನದಿಯ ದಡದ ಮೇಲೂ | **ರೇವತ್**—ಧನಯುಕ್ತನಾಗಿರುವಂತೆ | **ದಿದೀಹಿ**—ಪ್ರಜ್ವಲಿಸಿ ಪ್ರಕಾಶಿಸು.

### ಭಾವಾರ್ಥ

ಎಲೈ ಅಗ್ನಿಯೇ, ಗೋರೂಪವನ್ನು ಧರಿಸಿರುವ ಭೂಮಿಯ ಉತ್ತಮವಾದ ವೇದಿಸ್ಥಾನದಲ್ಲಿ ಎಲ್ಲಾ ದಿನಗಳಿಗಿಂತಲೂ ಶ್ರೇಷ್ಠವಾದ ಯಜ್ಞದಿನದಲ್ಲಿ ನಿನ್ನನ್ನು ಸುತ್ತಲೂ ಸ್ಥಾಪಿಸುತ್ತೇನೆ. ಯಜ್ಞಕರ್ತರಾದ ಮಾನವರು ಸಂಚರಿಸತಕ್ಕ 'ದೃಷದ್ವತಿ'ಯ ದಡದಮೇಲೂ, 'ಆಪಯಾ' ಮತ್ತು 'ಸರಸ್ವತೀ' ಎಂಬ ನದಿಗಳ ದಡದ ಮೇಲೆಯೂ ಸಹ ಧನಯುಕ್ತನಾಗಿರುವಂತೆ ಪ್ರಜ್ವಲಿಸಿ ಪ್ರಕಾಶಿಸು.

## English Translation.

I place you in an excellent spot of earth on an auspicious day of days: Agni, shine on the frequented (banks) of the Drishadvati, Apaya, and Saraswati, rivers.

### ವಿಶೇಷವಿಷಯಗಳು

**ಇಳಾಯಾಃ—ಗೋರೂಪಧಾರಿಣ್ಯಾಃ** | ಇಳಾ ಎಂಬ ಪದವು ಪೃಥಿವೀನಾಮಗಳಲ್ಲಿಯೂ (ನಿ. ೨-೫) ವಾಙ್ನಾಮಗಳಲ್ಲಿಯೂ (ನಿ. ೨-೨೩) ಅನ್ನನಾಮಗಳಲ್ಲಿಯೂ (ನಿ. ೩-೯) ಗೋನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಮತ್ತು ಸ್ತುತ್ಯರ್ಥಕವಾದ ಈಡ ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ವ್ಯಾಖ್ಯಾತವಾಗಿ "ಅಭಿ ನ ಇಳಾ ಯೂಥಸ್ಯ ಮಾತಾ" ಎಂದು ಉದಾಹೃತವಾಗಿದೆ. ಸಾಯಣರು ಗೋರೂಪವನ್ನು ಧರಿಸಿರುವ ಎಂದು ಅರ್ಥವನ್ನು ವಿವರಿಸಿ ಪೃಥಿವ್ಯಾಃ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ ಎಂದು ವರ್ಣಿಸಿದ್ದಾರೆ.

**ಪೃಥಿವ್ಯಾಃ–ಭೂಮೇಃ** | ಪೃಥಿವೀ ಶಬ್ದವು ಭೂನಾಮಗಳಲ್ಲಿಯೂ (ನಿ.೬-೫) ಅಂತರಿಕ್ಷನಾಮಗಳಲ್ಲಿಯೂ (ನಿ.೩-೧೦) ಉಕ್ತವಾಗಿ,

**ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ |**
**ಪ್ರ ಯಾ ಭೂಮಿಂ ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ ||**

(ಋ. ಸಂ. ೫-೮೪-೧)

ಎಂದು ಉದಾಹೃತವಾಗಿ ಪರ್ವತಗಳ ಮತ್ತು ಮೇಘಗಳ ಛೇದನವನ್ನು ಸಹಿಸುವ ಬಲವನ್ನು ಧರಿಸಿ ಅಂತರಿಕ್ಷದಲ್ಲಿರುತ್ತಾ, ಭೂಮಿಯಲ್ಲಿ ವೃಷ್ಟ್ಯುದಕವು ಬೀಳುವ ಹಾಗೆ ಮಾಹಾತ್ಮ್ಯದಿಂದ ಪೂರಿತಳಾಗಿಯೂ, ಅಥವಾ ಉದಕಗಳನ್ನು ಧರಿಸಿರುವವಳಾಗಿಯೂ ಇರುವ ಮಧ್ಯಮಸ್ಥಾನದೇವತೆಯೆಂದು ವ್ಯಾಖ್ಯಾತವಾಗಿದೆ.

ಇಲ್ಲಿ ಸಾಯಣರು ಭೂಮಿ ಎಂದು ಅರ್ಥವನ್ನು ವರ್ಣಿಸಿ, ಈ ಭೂಮಿಯಲ್ಲಿ ಉತ್ತಮವಾದ ಉತ್ತರವೇದಿಯ ಪ್ರದೇಶದಲ್ಲಿ, **ಯೇಷು ದಿನೇಷು ಇಂದ್ರಾದಯೋ ವರೀಯಾಂಸೋ ದೇವಾ ಇಜ್ಯಂತೇ ತಾನಿ ಸುದಿನಾನಿ** ಇಂದ್ರಸೇ ಮೊದಲಾದ ಮಹತ್ತ್ವಪೂರಿತರಾದ ದೇವತೆಗಳನ್ನುದ್ದೇಶಿಸಿ ಯಜ್ಞವನ್ನು ಆಚರಿಸುವ ಉತ್ತಮವಾದ ದಿನಗಳಿಗೆ ಸುದಿನಗಳೆಂದು ನಿಶ್ಚಯಮಾಡಿರುವುದು ಎಂಬ ಅರ್ಥವನ್ನು ವಿವರಿಸಿದೆ.

**ದೃಷದ್ವತ್ಯಾಂ**—ದೃಷದಃ ಉಪಲಾಃ ಯಸ್ಯಾಂ ಸಂತಿ । ದೃಷದ್ವತೀನಾಮ ಕಾಚಿನ್ನದೀ ತಸ್ಯಾಂ । ಬಹಳವಾಗಿ ಶಿಲೆಗಳು ಇರುವ ಕಾರಣ ದೃಷದ್ವತೀ ಎಂದು ಪ್ರಸಿದ್ಧವಾದ ನದಿಯು ಪ್ರವಹಿಸುವ ಯಾಗಾರ್ಹವಾದ ಉತ್ತಮಪ್ರದೇಶವೆಂದು ಅರ್ಥವನ್ನು ವರ್ಣಿಸಿ ಈ ಪದವನ್ನು ಮಾನುಷೇ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತ ವಾಗಿದೆ ಎಂದು ವಿವರಿಸಿ, ದೃಷದ್ವತೀನದಿಯ ತೀರವು ಮನುಷ್ಯಸಂಚಾರ ಯೋಗ್ಯವಾಗಿರುವುದು ಎಂದು ವರ್ಣಿಸಿದೆ.

**ಆಪಯಾಯಾಂ ಸರಸ್ವತ್ಯಾಂ**—ಆಪಯಾನಾಮ ಕಾಚಿನ್ನದೀ ತಸ್ಯಾಂ । ಯಾಸ್ಕರು ಸರಸ್ವತ್ಯೈಃ ಎಂದು ನದೀನಾಮಗಳಲ್ಲಿ (ನಿ. ೨-೨೪) ಪಾಠಮಾಡಿದ್ದಾರೆ.

**ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।**
**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ॥**

(ಋ. ಸಂ. ೬-೬೧-೨)

ಈ ಋಕ್ಕಿನಲ್ಲಿರುವ ಸರಸ್ವತೀ ಶಬ್ದಕ್ಕೆ ಒಂದು ನದಿಯೆಂದು ಅರ್ಥವನ್ನು ವಿವರಿಸಿದ್ದಾರೆ.

**ಪಾವಕಾ ನಸ್ಸರಸ್ವತೀ ವಾಜೇಭಿರ್ವಾಜಿನೀವತೀ ।**
**ಯಜ್ಞಂ ವಷ್ಟು ಧಿಯಾವಸುಃ ॥**

(ಋ. ಸಂ. ೧-೩-೧೦)

**ಮಹೋ ಅರ್ಣಸ್ಸರಸ್ವತೀ ಪ್ರ ಚೇತಯತಿ ಕೇತುನಾ ।**
**ಧಿಯೋ ವಿಶ್ವಾ ವಿ ರಾಜತಿ ॥**

(ಋ. ಸಂ. ೧-೩-೧೨)

ಈ ಋಕ್ಕಿನಲ್ಲಿರುವ ಸರಸ್ವತೀಶಬ್ದವು ವಾಗಭಿಮಾನಿಯಾದ ದೇವತಾಪರವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ಹೇಳಿದ್ದಾರೆ. ಸಾಯಣರು ಆಪಯಾ, ಸರಸ್ವತೀ ಎಂಬ ಪದಗಳು ಈ ಹೆಸರಿನಿಂದಲೇ ಪ್ರಸಿದ್ಧವಾದ ನದಿಗಳು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿವೆ ಎಂದು ವರ್ಣಿಸಿ **ಮಹರ್ಷಯಸ್ಸರಸ್ವತೀತೀರೆ ಯಜ್ಞಮಕಾರ್ಷುಃ** ಮಹರ್ಷಿಗಳು ಸರಸ್ವತೀನದಿಯ ತೀರದಲ್ಲಿ ಯಜ್ಞವನ್ನು ಆಚರಿಸಿದರು ಎಂದು ಹೇಳಿ, "ಋಷಯೋ ವೈ ಸರಸ್ವತ್ಯಾಂ ಸತ್ರಮಾಸತ" ಎಂಬ ಐತರೇಯಬ್ರಾಹ್ಮಣದ ವಾಕ್ಯವನ್ನು (ಐ. ಬ್ರಾ. ೨-೧೯) ಉದಹರಿಸಿ, ಈಪ್ರಕಾರವಾದ ಮಹಿಮಾತಿಶಯದಿಂದ ಕೂಡಿರುವ ಉತ್ತಮವಾದ ಪ್ರದೇಶಗಳಲ್ಲಿ ಅಗ್ನಿಯು ಧನಯುಕ್ತವಾಗಿರುವಂತೆ ಉದ್ದೀಪ್ತನಾಗಿರಲಿ ಎಂದು ಆಶಿಸಿದೆ ಎಂದು ವಿವರಿಸಿದ್ದಾರೆ. ಈ ಭಾಗದ ಮುನ್ನುಡಿಯಲ್ಲಿ ಈ ಯಜ್ಞದ ವರ್ಣನೆಯನ್ನು ನೋಡಿ.

ವ್ಯಾಕರಣಪ್ರಕ್ರಿಯಾ

**ದಧೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವರೇ**—ವೃಞ್ ವರಣೇ ಧಾತು. **ಗ್ರಹವೃದೃನಿಶ್ಚಿಗಮಶ್ಚ** (ಪಾ. ಸೂ. ೩-೩-೫೮) ಎಂಬುದರಿಂದ ಅಪ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪದೇ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ (ಸಪ್ತಮೀ) ಉದಾತ್ತ ಸ್ವರ ಬರುತ್ತದೆ.

**ದೃಷದ್ವತ್ಯಾಂ**—ದೃ ವಿದಾರಣೇ ಧಾತು. **ದೃಣಾತೇಃಷುಗ್ಘ್ರಸ್ವಶ್ಚ** (ಉ. ಸೂ. ೧-೧೨೮) ಎಂಬುದರಿಂದ ಷುಕಾಗಮ. ಧಾತುವಿಗೆ ಹ್ರಸ್ವ. ದೃಷದಃ ಉಪಲಾಃ (ಕಲ್ಲುಗಳು) ಯಸ್ಯಾಂ ಸಂತೀತಿ ದೃಷದ್ವತೀ. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ತಕಾರರೂಪ ಝಯಿನ ಪರದಲ್ಲಿರುವುದರಿಂದ ಝಯಃ (ಪಾ. ಸೂ. ೮-೨-೧೦) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. **ಸ್ವರವಿಧೌವ್ಯಂಜನಮವಿದ್ಯಮಾನವತ್** ಎಂಬ ಪರಿಭಾಷೆಯಿಂದ ಮಧ್ಯೆ ತಕಾರವಿದ್ದರೂ ಇಲ್ಲದಂತಾಗುವುದರಿಂದ ಹ್ರಸ್ವದ ಪರದಲ್ಲಿ ಮತುಪ್ ಬಂದುದರಿಂದ ಅದಕ್ಕೆ ಉದಾತ್ತಸ್ವರ ಬರಬೇಕಾದರೂ ಆ ಪರಿಭಾಷೆಯು ಅನಿತ್ಯವಾದುದರಿಂದ ಇಲ್ಲಿ ಅದನ್ನು ಆಶ್ರಯಿಸದಿರುವುದರಿಂದ **ಹ್ರಸ್ವನುಡ್ಭ್ಯಾಂ ಮತುಪ್** ಎಂಬ ಸೂತ್ರಕ್ಕೆ ಇಲ್ಲಿ ಪ್ರವೃತ್ತಿ ಇಲ್ಲದಿರುವುದರಿಂದ ಅದಕ್ಕೆ ಉದಾತ್ತಸ್ವರ ಬರುವುದಿಲ್ಲ. ಪೂರ್ವದ ಆದಿಪ್ರತ್ಯಯಸ್ವರ ಬರುತ್ತದೆ.

**ಸರಸ್ವತ್ಯಾಂ**—ಸೃ ಗತೌ ಧಾತು. ಇದಕ್ಕೆ ಔಣಾದಿಕ ಅಸುನ್ ಪ್ರತ್ಯಯ ಬಂದಾಗ ಗುಣ ಬಂದು ಸರಃ ಎಂದು ರೂಪವಾಗುತ್ತದೆ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸರಃ ಅಸ್ಯಾಃ ಅಸ್ತಿ ಇತಿ ಸರಸ್ವತೀ. ಹಿಂದಿನಂತೆ ಮತುಪ್ ಪ್ರತ್ಯಯ. ಅಕಾರವೇ ಉಪಧೆಯಾಗಿರುವ ಶಬ್ದದ ಪರದಲ್ಲಿರುವುದರಿಂದ **ಮಾದುಪಧಾಯಾಶ್ಚ**—(ಪಾ. ಸೂ. ೮-೨-೯) ಎಂಬುದರಿಂದ ಮಕಾರಕ್ಕೆ ವತ್ವ. ಉಗಿತ್ತ್ವಾದುದರಿಂದ **ಉಗಿತಶ್ಚ** (ಪಾ. ಸೂ, ೪-೧-೬) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ಪಿತ್ತ್ವಾದುದರಿಂದ ಅನುದಾತ್ತವಾಗುತ್ತದೆ.

**ದಿದೀಹಿ**—ದಿವು ಕ್ರೀಡಾದಿಷು ಧಾತು. ಯಙ್ ಲುಗಂತದಮೇಲೆ ಲೋಟ್. ಮಧ್ಯಮಪುರುಷಏಕವಚನದಲ್ಲಿ ದಿದೀಹಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।
ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥ ೫ ॥

ಪದಪಾಠಃ

ಇಳಾಂ । ಅಗ್ನೇ । ಪುರುऽದಂಸಂ । ಸನಿಂ । ಗೋಃ । ಶಶ್ವತ್ऽತಮಂ । ಹವಮಾನಾಯ । ಸಾಧ ।
ಸ್ಯಾತ್ । ನಃ । ಸೂನುಃ । ತನಯಃ । ವಿಜಾऽವಾ । ಅಗ್ನೇ । ಸಾ । ತೇ । ಸುऽಮತಿಃ । ಭೂತು । ಅಸ್ಮೇ ಇತಿ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ಪುರುದಂಸಂ । ಅಪೋಽಪ್ನೋ ದಂಸೋ ವೇಷ ಇತಿ ಕರ್ಮನಾಮಸು ಪಠಿತತ್ವಾದ್ದಂಸಃಶಬ್ದಃ ಕರ್ಮವಾಚೀ । ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ತಾಂ ಬಹುಕರ್ಮಾಣಂ ಗೋಃ ಸನಿಂ ಗವಾದಿಪಶೂನ್ಸಂಪಾದಯಿತ್ರೀಮಿಳಾಮೇತನ್ನಾಮಿಕಾಂ ಗೋರೂಪಾಂ ದೇವತಾಂ ಶಶ್ವತ್ತಮಂ ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧ । ಸಾಧಯ । ಕಿಂಚ ನೋಽಸ್ಮಾಕಂ

ಸೂನುಃ ಪುತ್ರಸ್ತನಯಃ ಪೌತ್ರಃ ಸ್ಯಾದ್ಭವತೀತಿ ಶೇ ತೇವ ಯಾ ಸುಮತಿಃ ಶೋಭನಾ ಬುದ್ಧಿಃ ಸಾ ವಿಜಾವಾಬಂಧ್ಯಾ ಸತ್ಯಸ್ಮೇ ಅಸ್ಮಾಕಂ ಭೂತು । ಭವತು ॥ ಶಶ್ವತ್ತಮಂ । ಉಚ್ಛಾದಿಷು ಪಾಠಾದಂತೋದಾತ್ತತ್ವಂ । ಸಾಧ । ರಾಧ ಸಾಧ ಸಂಸಿದ್ಧೌ । ಅಂತರ್ಭಾವಿತಣ್ಯರ್ಥೋಽಯಂ । ಲೋಟಿ ವ್ಯತ್ಯಯೇನ ಶಪ್ । ಸೇಹ್ಯರ್ಪಿಚ್ಚೇತಿ ಹಿರಾದೇಶಃ । ತಸ್ಯಾತೋ ಹೇರಿತಿ ಲುಕ್ । ನಿಘಾತಃ । ವಿಜಾವಾ । ಜನೀ ಪ್ರಾದುರ್ಭಾವೇ । ಅಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಲಿಂಗವ್ಯತ್ಯಯಃ । ಭೂತು । ಭೂ ಸತ್ತಾಯಾಂ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥

### ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಪುರುದಂಸಂ**—ಅನೇಕ ಕರ್ಮಗಳಿಗೆ ಸಾಧನವಾದುದೂ । **ಗೋಃ ಸನಿಂ**—ಗವಾದಿ ಪಶುಗಳನ್ನು ಸಂಪಾದಿಸಿಕೊಡತಕ್ಕದ್ದೂ ಆದ । **ಇಳಾಂ**—'ಇಳಾ' ಎಂದು ಪ್ರಸಿದ್ಧವಾದ ದೇವತಾ ವಿಶೇಷವನ್ನು (ಅಥವಾ ಪೃಥ್ವಿಯನ್ನು) । **ಶಶ್ವತ್ತಮಂ**—ಅನುಸ್ಯೂತವಾಗಿ । **ಹವಮಾನಾಯ**—ಹವಿಸ್ಸನ್ನು ಅರ್ಪಿಸತಕ್ಕನನಗೆ । **ಸಾಧ**—ಒದಗಿಸಿಕೊಡು । **ನಃ**—ನಮಗೆ । **ಸೂನುಃ**—ಪುತ್ರನೂ । **ತನಯಃ**—ಪೌತ್ರನೂ । **ಸ್ಯಾತ್**—ಲಭಿಸಲಿ । **ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **ಸುಮತಿಃ**—(ಯಾವ) ಶ್ರೇಷ್ಠವಾದ ಅನುಗ್ರಹಬುದ್ಧಿಯಿದೆಯೋ । **ಸಾ**—ಅದು । **ಅಸ್ಮೇ**—ನಮ್ಮ ಭಾಗಕ್ಕೆ । **ವಿಜಾವಾ**—ಫಲವನ್ನು ಕೊಡತಕ್ಕದ್ದಾಗಿ । **ಭೂತು**—ಆಗಿರಲಿ.

### ಭಾವಾರ್ಥ

ಎಲೈ ಅಗ್ನಿಯೇ, ಅನೇಕ ಕರ್ಮಗಳಿಗೆ ಸಹಾಯಕವಾಗುವ ಗವಾದಿ ಪಶುಗಳನ್ನು ಕೊಡುವವಳೂ, ಇಳಾನಾಮಕಳೂ, ಗೋರೂಪಳೂ ಆದ ಭೂಮಿಯು, ನಿರಂತರ ಯಾಗಾಚರಣೆಯಲ್ಲಿ ನಿರತರಾದ ನಮಗೆ ಅನುಕೂಲಿಸುವಂತೆ ಮಾಡು ; ಮತ್ತು ಎಲೈ ಅಗ್ನಿಯೇ, ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನನುಗ್ರಹಿಸಬೇಕೆಂಬ ಶುಭವಾದ ಮತಿಯು ನಮಗೆ ಯಾವಾಗಲೂ ಅವಂಧ್ಯವಾಗಲಿ. (ಸಫಲವಾಗಲಿ)

### English Translation

Grant, Agni, to the offerer of the oblation earth the giver of cattle, the means of many sacred rites, such that it may long endure : may there be to us sons and grandsons, and may your favour, Agni, be productive of good unto us.

### ವಿಶೇಷವಿಷಯಗಳು

**ಪುರುದಂಸಂ—ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ಅಪ್ನಃ ದಂಸಃ** ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩-೨) ದಂಸ ಶಬ್ದವು ಉಕ್ತವಾಗಿರುತ್ತದೆ. ಬಹಳ ಕರ್ಮಗಳುಳ್ಳದ್ದೆಂದು ಅರ್ಥ

**ಗೋಃ ಸನಿಂ —ಗವಾದಿಪಶೂನ್ ಸಂಪಾದಯಿತ್ರೀಂ** । ಗೋಶಬ್ದಕ್ಕೆ ಪೃಥಿವೀ, ವಾಕ್ಕು, ಪಶು, ರಶ್ಮಿ ಎಂದು ಅನೇಕಾರ್ಥಗಳು ಇರುವುವು. ಗೋಃ ಸನಿಂ ಎಂಬ ಪದಗಳು ಇಳಾ ಎಂಬ ಪದಕ್ಕೆ ವಿಶೇಷಣವಾಗಿರು

ವುದರಿಂದ ಇಳಾ ದೇವತೆಯು ಗೋವುಗಳೇ ಮೊದಲಾದವುಗಳೆಲ್ಲವನ್ನೂ ಅನುಗ್ರಹಿಸುವಳೆಂದು ಅರ್ಥವನ್ನು ವರ್ಣಿಸಿದೆ.

**ಇಳಾಂ—ಏತನ್ನಾಮಿಕಾಂ ಗೋರೂಪಾಂ ದೇವತಾಂ** ಪೃಥಿವೀನಾಮಗಳಲ್ಲಿ ಇಳಾ ಪದವು (ನಿ. ೨–೫) ಉಕ್ತವಾಗಿದೆ. ವಾಙ್ನಾಮಗಳಲ್ಲಿಯೂ, (ನಿ. ೨–೨೩) ಅನ್ನನಾಮಗಳಲ್ಲಿಯೂ, (ನಿ. ೩–೯) ಗೋನಾಮಗಳಲ್ಲಿಯೂ (ನಿ. ೩–೯) ಉಕ್ತವಾಗಿದೆ. ಮತ್ತು ಇಳಾ ಎಂಬ ಪದವು ಈಶ ಧಾತುವಿನಿಂದ ನಿಷ್ಪನ್ನವಾಗಿದೆ.

**ಅಭಿ ನ ಇಳಾ ಯೂಥಸ್ಯ ಮಾತಾ ಸ್ಮನ್ನದೀಭಿರುರ್ವಶೀ ವಾ ಗೃಣಾತು ।**
**ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾಯೋಃ ।**
**ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ ॥** (ಋ. ಸಂ. ೫–೪೧-೧೯, ೨೦)

ಈ ಋಕ್ಕುಗಳಲ್ಲಿ ಇಳಾ ಅಥವಾ ಇಡಾ ಎಂಬ ದೇವಿಯು ಮಧ್ಯಮಸ್ಥಾನದೇವತೆಯೆಂದು ವಿವೃತವಾಗಿದೆ. ಸಾಯಣರು ಗೋವಿನ ಆಕಾರವನ್ನು ಧರಿಸಿರುವ ಇಳಾ ಎಂದು ಹೆಸರುಳ್ಳ ದೇವತೆಯೆಂದು ಅರ್ಥವನ್ನು ವಿವರಿಸಿದ್ದಾರೆ.

**ಶಶ್ವತ್ತಮಂ ಹವಮಾನಾಯ ಸಾಧ—ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧಯ ।** ಅಗ್ನಿಯನ್ನು ಯಾವಾಗಲೂ ಹವಿಸ್ಸುಗಳಿಂದ ತೃಪ್ತಿಪಡಿಸುತ್ತಿರುವ ಯಜಮಾನನಿಗೆ ಬೇಕಾದ ಇಷ್ಟಾರ್ಥಗಳನ್ನು ನೆರವೇರಿಸುವ, ಪ್ರಭೂತವಾದ ಮಹಾತ್ಮ್ಯದಿಂದ ಪೂರಿತವಾಗಿರುವ, ಗೋರೂಪದಿಂದ ಇರುವ, ಇಳಾದೇವತೆಯ ಅನುಗ್ರಹವು ಉಂಟಾಗುವಂತೆ ಅಗ್ನಿಯನ್ನು ಪ್ರಾರ್ಥಿಸಿದೆ.

**ಸೂನುಃ—ಪುತ್ರಃ; ತನಯಃ ಪೌತ್ರಃ ।** ತುಕ್, ತೋಕಂ ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೩-೨) ತನಯ ಶಬ್ದವೂ, ಸೂನು ಶಬ್ದವೂ ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**
(ಋ. ಸಂ. ೧೦–೫೦-೬)

ಎಂಬ ಈ ಋಕ್ಕಿನಲ್ಲಿ ಸೂನೋ ಎಂಬ ಶಬ್ದಕ್ಕೆ ಪುತ್ರನೆಂದು ಅರ್ಥವನ್ನು ಹೇಳಿ ಅಗ್ನಿಯನ್ನು (ಸಹಸಸ್ಪುತ್ರ) **ಸಹಸಸ್ಸೂನೋ, ಬಲಸ್ಯ ಪುತ್ರ** ಎಂದು ಹೇಳಿದೆ. ಸಾಯಣರು ಸೂನುಶಬ್ದಕ್ಕೆ ಪುತ್ರನೆಂದೂ, ತನಯ ಶಬ್ದಕ್ಕೆ ಪೌತ್ರ (ಪುತ್ರನ ಪುತ್ರ) ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಸುಮತಿಃ—ಶೋಭನಾ ಬುದ್ಧಿಃ ।** ನಿರುಕ್ತಕಾರರು **ದೇವಸುಮತಿಂ** ಎಂಬಲ್ಲಿ **ದೇವನಾಂ ಕಲ್ಯಾಣೀಂ ಮತಿಂ.** ದೇವತೆಗಳ ಶುಭಕರವಾದ ಬುದ್ಧಿ ಎಂದೂ, **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬಲ್ಲಿ **ಕಲ್ಯಾಣ್ಯಾಂ ಮತೌ** ಎಂದೂ, **ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ** ಎಂಬಲ್ಲಿಯೂ **ಕಲ್ಯಾಣೀಂ ಮತಿಂ** ಎಂಬ ಇದೇ ಅರ್ಥವನ್ನು ವರ್ಣಿಸಿದ್ದಾರೆ. ಅಗ್ನಿಯನ್ನು ಹವಿಸ್ಸುಗಳಿಂದ ತೃಪ್ತಿಗೊಳಿಸಿದ ಯಜಮಾನರ ವಿಷಯದಲ್ಲಿ ಅಗ್ನಿಯು ಅನುಗ್ರಹಿಸಬಹುದಾದ ಪುತ್ರ ಪೌತ್ರಾದಿಗಳ ಉತ್ಪತ್ತಿ ಮತ್ತು ಅಭಿವೃದ್ಧಿಯೇ ಮೊದಲಾದ ಅಗ್ನಿಯ ಕಲ್ಯಾಣಕರವಾದ ಬುದ್ಧಿಯು ಉಂಟಾಗಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಪುರುದಂಸಂ**—ಪುರೂಣಿ ದಂಸಾಂಸಿ ಯಸ್ಯಾಃ ಸಾ. **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨.೧೧೯) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಶಶ್ವತ್ತಮಂ**—ಉಂಛಾದಿಯಲ್ಲಿ ಪಠಿತವಾದುದರಿಂದ **ಉಂಛಾದೀನಾಂಚ** (ಪಾ. ಸೂ. ೬-೧-೧೬೦) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಾಧ**—ರಾಧ ಸಾಧ ಸಂಸಿದ್ಧೌ ಧಾತು. ಪ್ರಯೋಜಕ ವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕ ವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಶಪ್ ವಿಕರಣ ಬರುತ್ತದೆ. **ಅತೋ ಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಅದಂತದ ಪರದಲ್ಲಿ ರುವುದರಿಂದ ಹಿಗೆ ಲುಕ್. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಯಾತ್**—ಅಸ ಭುವಿ ಧಾತು. ಲಿಙ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ಅನುದಾತ್ತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವೆಂಬುದರಿಂದ ಉದಾತ್ತವಾಗುತ್ತದೆ.

ವಿಜಾವಾ—ಜನೀ ಪ್ರಾದುರ್ಭಾವೇ ಧಾತು. **ಅನ್ಯೇಭ್ಯೋಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಇದಕ್ಕೆ ವನಿಪ್ ಪ್ರತ್ಯಯ. ಇದು ಪರವಾದಾಗ **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿಗೆ ಆತ್ವ. ವಿ ಎಂಬುದರೊಡನೆ ಪ್ರಾದಿಸಮಾಸ. ವಿಜಾವನ್ ಶಬ್ದವಾಗುತ್ತದೆ. ಪ್ರಥಮಾ ಏಕವಚನಾಂತರೂಪ. **ವ್ಯತ್ಯಯೋಬ**—ಎಂಬುದರಿಂದ ಲಿಂಗವ್ಯತ್ಯಯ (ಸ್ತ್ರೀಲಿಂಗಕ್ಕೆ ಪುಲ್ಲಿಂಗ) ಬಂದಿದೆ. **ಗತಿಕಾರಕೋಪಪದಾತ್**—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುಮತಿಃ**—ಮನ ಜ್ಞಾನೇ ಧಾತು. ಕ್ತಿನ್ ಪ್ರತ್ಯಯ. **ಮಂತ್ರೇ ವೃಷೇಷ**—(೩-೩-೯೬) ಎಂಬುದ ರಿಂದ ಕ್ತಿನ್ ಉದಾತ್ತವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಭೂತು**—ಭೂ ಸತ್ತಾಯಾಂ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಏರುಃ** ಎಂಬುದ ರಿಂದ ಇಕಾರಕ್ಕೆ ಉತ್ವ. **ಬಹುಲಂ ಛಂಧಸಿ** ಎಂಬುದರಿಂದ ವಿಕರಣಕ್ಕೆ (ಶಪ್) ಲುಕ್. **ಭೂಸುವೋಸ್ತಿಙಿ** ಎಂಬುದರಿಂದ ಗುಣನಿಷೇಧ ಬರುತ್ತದೆ. ತಿಜಂತನಿಘಾತಸ್ವರ ಬರುತ್ತದೆ.

**ಅಸ್ಮೇ**—**ಸುಪಾಂ ಸುಲುಕ್**—ಎಂಬುದರಿಂದ ಷಷ್ಠೀ ಬಹುವಚನಕ್ಕೆ ಶೇ ಆದೇಶ.

---

## ಇಪ್ಪತ್ತನಾಲ್ಕನೆಯ ಸೂಕ್ತವು

---

ಸಾಯಣಭಾಷ್ಯಂ

ಅಗ್ನೇ ಸಹಸ್ವೇತಿ ಪಂಚರ್ಚಂ ದ್ವಾದಶಂ ಸೂಕ್ತಂ । ಅತ್ರಾನುಕ್ರಮಣಿಕಾ । ಅಗ್ನೇ ಸಹಸ್ವ ಗಾಯತ್ರಮಾದ್ಯಾನುಷ್ಟುಬಿತಿ । ಋಷಿರ್ಗಾಥಿನೋ ವಿಶ್ವಾಮಿತ್ರಃ । ಅಗ್ನಿರ್ದೇವತಾ । ಆದ್ಯಾನುಷ್ಟುಪ್ ಶಿಷ್ಟಾ ಗಾಯತ್ರ್ಯಃ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಪ್ರಾತರನುವಾಕ ಆಶ್ವಿನಶಸ್ತ್ರೇ ಚ ಪ್ರಥಮಾ-ವರ್ಜಿತಸ್ಯ ಸೂಕ್ತಸ್ಯ ವಿನಿಯೋಗಃ । ಅಥೈತಸ್ಯಾ ಇತಿ ಖಂಡೇ ಸೂತ್ರಿತಂ । ಅಗ್ನಿ ಇಳೇತಿ ಚತಸ್ರಃ । ಆ. ೪-೧೩ । ಇತಿ ॥ ಅಭ್ಯುದಯೇಷ್ಟಾವಗ್ನೇರ್ದಾತುರನುವಾಕ್ಯಾಗ್ನೇ ದಾ ದಾಶುಷ ಇತ್ಯೇಷಾ । ಅಥಾ-ಗ್ನೇಯ್ಯ ಇತಿ ಖಂಡೇ ಸೂತ್ರಿತಂ । ಅಗ್ನೇ ದಾ ದಾಶುಷೇ ರಯಿಂ ಸ ಯಂತಾ ವಿಪ್ರ ಏಷಾಂ । ಆ. ೩-೧೩ । ಇತಿ ॥

**ಅನುವಾದವು—ಅಗ್ನೇ ಸಹಸ್ವ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಅಗ್ನೇ ಸಹಸ್ವ ಗಾಯತ್ರಮಾದ್ಯಾನುಷ್ಟುಬಿತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಗಾಥಿಪುತ್ರನಾದ ವಿಶ್ವಾಮಿತ್ರನು ಋಷಿಯು ; ಅಗ್ನಿಯು ದೇವತೆಯು. ಈ ಸೂಕ್ತದ ಮೊದಲನೆಯ ಋಕ್ಕು ಅನುಷ್ಟುಪ್‌ಛಂದಸ್ಕವು ; ಉಳಿದ ಋಕ್ಕುಗಳು ಗಾಯತ್ರೀಛಂದಸ್ಕವು. ಸೂಕ್ತದ ವಿನಿಯೋಗವು ಲೈಂಗಿಕವು. ಈ ಸೂಕ್ತದ ಮೊದಲನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳನ್ನು ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಥೈತಸ್ಯಾ** ಎಂಬ ಖಂಡದ **ಅಗ್ನ ಇಳೇತಿ ಚತಸ್ರಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೩) ; ಅಭ್ಯುದಯೇಷ್ಟಿಯಲ್ಲಿ ಅಗ್ನಿರ್ದಾತಾ ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಅಗ್ನೇ ದಾ ದಾಶುಷೇ** ಎಂಬ (ಈ ಸೂಕ್ತದ ಐದನೆಯ ಋಕ್ಕನ್ನು) ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಥಾಗ್ನೇಯ್ಯ** ಎಂಬ ಖಂಡದ **ಅಗ್ನೇ ದಾ ದಾಶುಷೇ ರಯಿಂ ಸ ಯಂತಾ ವಿಪ್ರ ಏಷಾಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೧೩).

## ಸೂಕ್ತ—೨೪

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೪ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೪ ॥

**ಸೂಕ್ತದಲ್ಲಿರುವ ಋಕ್ಸಂಖ್ಯೆ—೫**

ಋಷಿಃ—ವಿಶ್ವಾಮಿತ್ರಃ ॥
ದೇವತಾ—ಅಗ್ನಿಃ ॥
ಛಂದಃ—೧. ಅನುಷ್ಟುಪ್ । ೨-೫. ಗಾಯತ್ರೀ ॥

**ಸಂಹಿತಾಪಾಠಃ**

ಅಗ್ನೇ ಸಹಸ್ವ ಪೃತನಾ ಅಭಿಮಾತೀರಪಾಸ್ಯ ।
ದುಷ್ಟರಸ್ತರನ್ನರಾತೀರ್ವರ್ಚೋ ಧಾ ಯಜ್ಞವಾಹಸೇ ॥ ೧ ॥

**ಪದಪಾಠಃ**

ಅಗ್ನೇ । ಸಹಸ್ವ । ಪೃತನಾಃ । ಅಭಿಽಮಾತೀಃ । ಅಪ । ಅಸ್ಯ ।
ದುಸ್ತರಃ । ತರನ್ । ಅರಾತೀಃ । ವರ್ಚಃ । ಧಾಃ । ಯಜ್ಞಽವಾಹಸೇ ॥ ೧ ॥

**ಸಾಯಣಭಾಷ್ಯಂ**

ವಿಶ್ವಾಮಿತ್ರಃ ಸ್ತೌತಿ । ಹೇ ಅಗ್ನೇ ಪೃತನಾ ಅಭಿಯೋಕ್ತ್ರೀಃ ಸೇನಾಃ ಸಹಸ್ವ । ಅಭಿಭವ । ಅಭಿಮಾತೀರಭಿಮಾನಿನಃ ಕರ್ಮವಿಘ್ನಕಾರಿಣಃ ಶತ್ರೂನ್ ಅಪಾಸ್ಯ । ಅಪನುದ । ಕಿಂಚ ದುಷ್ಟರೋ ನ

ಕೇನಾಪಿ ತರಿತುಂ ಶಕ್ಯಃ ಅತ ಏವ ಅರಾತೀರರಾತೀನ್ ಶತ್ರೂನ್ ತರನ್ ಸ್ವತೇಜಸಾ ತಿರಸ್ಕುರ್ವಂಸ್ತ್ವಂ ಯಜ್ಞವಾಹಸೇ ಯಜ್ಞನಿರ್ವಾಹಕಾಯ ಯಜಮಾನಾಯ ವರ್ಚೋ ಧಾಃ । ಅನ್ನಂ ಧೇಹಿ । ಕುರು ॥ ಸಹಸ್ವ । ಷಹ ಮರ್ಷಣ ಇತ್ಯಸ್ಯ ಲೋಟಿ ರೂಪಂ । ಆಮಂತ್ರಿತಸ್ಯಾವಿದ್ಯಮಾನತ್ವೇನ ಪಾದಾದಿತ್ವಾತ್ ಅ-ನಿಘಾತಃ । ಅಭಿಮಾತೀಃ । ಮಾಙ್ ಮಾನೇ । ಮಾನಂ ಮಾತಿಃ । ಭಾವೇ ಕ್ತಿನ್ । ಅಸ್ಯ ಉಗ್ಸಿಕರಣ-ತ್ವಾದೀತ್ವೇತ್ವೇ ನ ಭವತಃ । ಅಭಿತೋ ಮಾನಂ ಯೇಷಾಂ ತ ಇತಿ ಬಹುವ್ರೀಹೌ ಪೂರ್ವಪದಪ್ರಕೃತಿ-ಸ್ವರತ್ವಂ । ಅಸ್ಯ । ಅಸು ಕ್ಷೇಪಣೇ । ದಿವಾದಿಃ । ಲೋಟಿ ರೂಪಂ । ದುಷ್ಟರಃ। ತೄ ಪ್ಲವನತರಣಯೋಃ। ಅಸ್ಮಾತ್ ಕೃಚ್ಛ್ರಾರ್ಥೇ ಖಲ್ । ಸುಷಾಮಾದಿತ್ವಾತ್ ವಿಸರ್ಜನೀಯಸ್ಯ ಸಕಾರಸ್ಯ ಷತ್ವಂ । ಲಿತ್ಸ್ವರಃ । ತರನ್ । ತರತೇಃ ಶತರಿ ರೂಪಂ । ಅದುಪದೇಶಾಲ್ಲಸಾರ್ವಧಾತುಕಸ್ವರೇಣ ಶತುರನುದಾತ್ತತ್ವೇ ಕೃತೇ ಧಾತುಸ್ವರಃ । ಧಾಃ । ದಧಾತೇಶ್ಛಂದಸಿ ಲುಙಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಪೃತನಾಃ—(ನಮ್ಮನ್ನು ಪ್ರತಿಭಟಿಸುವ) ಸೇನೆಗಳನ್ನು । ಸಹಸ್ವ—ಎದುರಿಸಿ ಸೋಲಿಸು । ಅಭಿಮಾತೀಃ—ಅಹಂಕಾರದಿಂದ ಕರ್ಮಕ್ಕೆ ವಿಘ್ನವನ್ನುಂಟುಮಾಡುವ ಶತ್ರುಗಳನ್ನು । ಅಪಾಸ್ಯ—ದೂರವಾಗಿ ಅಟ್ಟಿಬಿಡು. ದುಷ್ಟರಃ—ಅಪ್ರತಿಹತರಾದ । ಅರಾತೀಃ—ಶತ್ರುಗಳನ್ನು । ತರನ್—(ನಿನ್ನ ಮಹಿಮೆಯಿಂದ) ಪ್ರತಿಭಟಿಸಿ । ಯಜ್ಞವಾಹಸೇ—ಯಜ್ಞನಿರ್ವಾಹಕನಾದ ಯಜಮಾನನಿಗೆ । ವರ್ಚಃ—ತೇಜೋಯುತವಾದ ಅನ್ನವನ್ನು । ಧಾಃ—ಕೊಡು ॥

ಭಾವಾರ್ಥ

ಎಲೈ ಅಗ್ನಿಯೇ, ನಮ್ಮನ್ನು ಪ್ರತಿಭಟಿಸುವ ಸೇನೆಗಳನ್ನು ಎದುರಿಸಿ ಸೋಲಿಸು. ಅಹಂಕಾರದಿಂದ ಕರ್ಮಕ್ಕೆ ವಿಘ್ನವನ್ನುಂಟುಮಾಡುವ ಶತ್ರುಗಳನ್ನು ದೂರವಾಗಿ ಅಟ್ಟಿಬಿಡು. ಅಪ್ರತಿಹತರಾದ ಶತ್ರುಗಳನ್ನು ನಿನ್ನ ಮಹಿಮೆಯಿಂದ ಪ್ರತಿಭಟಿಸಿ ಯಜ್ಞನಿರ್ವಾಹಕನಾದ ಯಜಮಾನನಿಗೆ ತೇಜೋಯುತವಾದ ಅನ್ನವನ್ನು ಕೊಡು.

English Translation

Repel, Agni, (hostile) hosts ; drive away (all) assailants ; inseperable, foe-surpassing, give food to the institutor of this sacrifice.

ವಿಶೇಷವಿಷಯಗಳು

**ಅಗ್ನೇ ಪೃತನಾಃ ಸಹಸ್ವ—ಅಭಿಯೋಕ್ತ್ರೀಃ ಸೇನಾಃ ಅಭಿಭವ** । ಪೃತನಾ ಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಈ ವಾಕ್ಯದಲ್ಲಿ ಅಗ್ನಿಯನ್ನು ಸಂಬೋಧಿಸಿದೆ. ಅಗ್ನಿಯು ತನಗೆ ಎದುರಾಗುವ ಸೇನೆಗಳನ್ನು ತಿರಸ್ಕರಿಸಲಿ ಎಂದು ಅರ್ಥವನ್ನು ವರ್ಣಿಸಿದೆ.

**ಅಭಿಮಾತೀಃ—ಅಭಿತೋ ಮಾನಂ ಯೇಷಾಂ** ಬಹಳ ಅಹಂಕಾರವುಳ್ಳವರಾಗಿ ಇರುವುದರಿಂದ **ಕರ್ಮವಿಘ್ನಕಾರಿಣಃ** ಯಜ್ಞಕರ್ಮಗಳ ವಿಷಯದಲ್ಲಿ ವಿಘ್ನವನ್ನು ಆಚರಿಸುವ ಶತ್ರುಗಳನ್ನು ಅಗ್ನಿಯು ನಾಶಮಾಡಲಿ ಎಂದು ಆಶಿಸಿದೆ.

**ದುಷ್ಟರಃ—ದುಸ್ತರಃ ನ ಕೇನಾಪಿ ತರಿತುಂ ಶಕ್ಯಃ** ಯಾಸ್ಕರು ದುಷ್ಟರ ಶಬ್ದವು ಇದೇ ಅರ್ಥದಲ್ಲಿ ಪ್ರಯುಕ್ತವಾಗಿರುವುದನ್ನು ಉದಹರಿಸಿದ್ದಾರೆ—

**ಪೃಥಕ್ ಪ್ರಾಯನ್ ಪ್ರಥಮಾ ದೇವಹೂತಯೋಽಕೃಣ್ವತ ಶ್ರವಸ್ಯಾನಿ ದುಷ್ಟರಾ ।**
**ನ ಯೇ ಶೇಕುರ್ಯಜ್ಞಿಯಾಂ ನಾವಮಾರುಹಮೀರ್ಮೈವ ತೇ ನ್ಯವಿಶಂತ ಕೇಪಯಃ ॥**
(ಋ. ಸಂ. ೧೦-೪೪-೬)

ಇಲ್ಲಿ ದುಷ್ಟರಾ ದುಸ್ತರಾಣಿ ಎಂದು ಅರ್ಥವನ್ನು ವರ್ಣಿಸಿದೆ.

**ಅರಾತೀಃ**—ಅರಾತೀನ್ ಶತ್ರೂನ್ । ಯಾಸ್ಕರು ಅರಾತಯಃ ಅದಾನಕರ್ಮಾಣಃ ಅದಾನಪ್ರಜ್ಞಾ ವಾ (ನಿ. ೩-೧೧) ಎಂದು ಅರಾತಿಶಬ್ದದ ಅರ್ಥವನ್ನು ವ್ಯಾಖ್ಯಾನ ಮಾಡಿರುತ್ತಾರೆ. ದುರ್ಗಾಚಾರ್ಯರು ಅಸ್ಮಾಕ-**ಮಭಿಮತಾನರ್ಥಾನ್ ದದತೋ ಯೇ ನಿವಾರಯಂತಿ** ನಮಗೆ ಇಷ್ಟವಾದವುಗಳನ್ನು ಕೊಡುವವರಿಗೆ ಬೋಧಿಸಿ ಅದನ್ನು ತಪ್ಪಿಸುವವರು ಶತ್ರುಗಳು ಎಂದು ಅರ್ಥವನ್ನು ವಿವರಿಸಿ, **ದ್ವಿವಿಧಾಃ ಹಿ ಶತ್ರವಃ ದುಃಖಸನ್ನಾಶ್ಯಾಃ ಸುಖಸನ್ನಾಶ್ಯಾಶ್ಚ** ಎಂದು ಶತ್ರುಗಳಲ್ಲಿ ಎರಡು ವಿಧವನ್ನು ವಿವರಿಸಿ, **ತತ್ರ ಯೇ ದುಃಖಸನ್ನಾಶ್ಯಾಃ ತೇ ಅದಾನಪ್ರಜ್ಞಾಃ ಯೇ ಅದಾನಕರ್ಮಾಣಃ ತೇ ಸುಖಸನ್ನಾಶ್ಯಾಃ** ಎಂದು ಅರಾತಿಗಳ ಭೇದಗಳಲ್ಲಿರುವ ವಿವರ ವನ್ನೂ ತಿಳಿಸಿರುತ್ತಾರೆ.

ಸಾಯಣರು ಅರಾತಿ ಶಬ್ದಕ್ಕೆ ಶತ್ರುವೆಂದು ಅರ್ಥವನ್ನು ಹೇಳಿ, ಅಗ್ನಿಯು ಶತ್ರುಗಳನ್ನು **ಸ್ವತೇಜಸಾ ತಿರ-ಸ್ಕುರ್ವನ್** ತನ್ನ ತೇಜಸ್ಸಿನಿಂದ ತಿರಸ್ಕರಿಸಿ, ಯಜ್ಞವನ್ನು ನಿರ್ವಹಿಸುವ ಯಜಮಾನರಿಗೆ ಅನ್ನವನ್ನು ಅನುಗ್ರಹಿಸಲಿ ಎಂದು ಆಶಿಸಿದೆ.

**ವರ್ಚಃ—ಅನ್ನಂ** । ವರ್ಚಶ್ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ ಸಾಯಣರು ಇಲ್ಲಿ ಅನ್ನ ವೆಂದು ಅರ್ಥವನ್ನು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಸಹಸ್ವ**—ಷಹ ಮರ್ಷಣೇ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲೋಟ್ ಮಧ್ಯಮಪುರುಷಏಕವಚನಾಂತರೂಪ. **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಪೂರ್ವದಲ್ಲಿ ಅಗ್ನೇ ಎಂಬ ಅತಿಜಂತವಿದ್ದರೂ ಆಮಂತ್ರಿತವಾದುದರಿಂದ ಅದಕ್ಕೆ ಅವಿದ್ಯಮಾನವದ್ಭಾವ (ಇಲ್ಲದಿರುವಿಕೆ) ಬರುವುದರಿಂದ ಪಾದಾದಿಯಲ್ಲಿ ಬಂದಂತಾಗುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕಪ್ರತ್ಯಯ ಪರವಾದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಭಿಮಾತೀಃ**—ಮಾಙ್ ಮಾನೇ. ಧಾತು. ಮಾನಂ ಮಾತಿಃ ಭಾವಾರ್ಥದಲ್ಲಿ **ಸ್ತ್ರಿಯಾಂಕ್ತಿನ್** (ಪಾ.ಸೂ. ೩-೩-೯೪) ಎಂಬುದರಿಂದ ಕ್ತಿನ್‌ಪ್ರತ್ಯಯ. ಇದು ಲುಗ್ವಿಕರಣವಾದ ಅದಾದಿಯಲ್ಲಿ ಪಠಿತವಾದುದರಿಂದ ಈತ್ವ ಏತ್ವ ಗಳು ಬರುವುದಿಲ್ಲ. **ಘುಮಾಸ್ಥಾ**—(ಪಾ. ಸೂ. ೬-೪-೬೬) ಎಂಬಲ್ಲಿ ಅಲುಕ್‌ವಿಕರಣವುಳ್ಳ ಮಾಧಾತು ಪಠಿತವಾಗಿದೆ. ಅಭಿತಃ ಮಾತಿಃ (ಮಾನಂ) ಯೇಷಾಂ ತೇ ಅಭಿಮಾತಯಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ.ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಅಸ್ಯ**—ಅಸು ಕ್ಷೇಪಣೇ. ಧಾತು. ದಿವಾದಿ. ಲೋಟ್‌ಮಧ್ಯಮಪುರುಷ ಏಕವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ದುಷ್ಟರಃ—ತೄ ಪ್ಲವನತರಣಯೋಃ ಧಾತು. ದುಸ್ ಉಪಪದವಾಗಿರುವಾಗ ಈಷದುಃಸುಷು (ಪಾ. ಸೂ. ೩-೩-೧೨೬) ಎಂಬುದರಿಂದ ಖಲ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ಸುಷಾಮಾದಿಗಣದಲ್ಲಿ ಪಠಿತವಾದುದರಿಂದ ಸುಷಾಮಾದಿಷು ಚ (ಪಾ. ಸೂ. ೮-೩-೯೮) ಎಂಬುದರಿಂದ ದುಸಿನ ವಿಸರ್ಗದ ಸಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಧಾತುವಿನ ತಕಾರಕ್ಕೆ ಷ್ಟುತ್ವ. ಪ್ರತ್ಯಯ ಲಿತ್ತಾದುದ ರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ತರನ್—ಪೂರ್ವೋಕ್ತವಾದ ಧಾತುವಿಗೆ ಶತೃ ಪ್ರತ್ಯಯ ಬಂದಾಗ ತರತ್ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ (ಶತೃ) ಬಂದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಸು ಪರವಾದಾಗ ಉಗಿತ್ತಾದುದರಿಂದ ನುಮಾಗಮ. ಸುಲೋಪ. ಸಂಯೋಗಾಂತಲೋಪ ಅಸಿದ್ಧವಾದು ದರಿಂದ ನಲೋಪ ಬರುವುದಿಲ್ಲ.

ಧಾಃ—ಡುಧಾಞ್ ಧಾರಣಪೋಷಣಯೋಃ ಧಾತು. ಛಂದಸಿ ಲುಙ್‌ಲಙ್‌ಲಿಟಃ ಎಂಬುದರಿಂದ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಇಕಾರಲೋಪ. ಗಾತಿಸ್ಥಾಘು—(ಪಾ.ಸೂ. ೨-೪-೭೭) ಎಂಬುದರಿಂದ ಚ್ಲಿಗೆ ಸಿಚ್ ಬಂದಾಗ ಅದಕ್ಕೆ ಲುಕ್. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

———

ಸಂಹಿತಾಪಾಠಃ

ಅಗ್ನ ಇಳಾ ಸಮಿಧ್ಯಸೇ ವೀತಿಹೋತ್ರೋ ಅಮರ್ತ್ಯಃ ।

ಜುಷಸ್ವ ಸೂ ನೋ ಅಧ್ವರಂ ॥ ೨ ॥

ಪದಪಾಠಃ

ಅಗ್ನೇ । ಇಳಾ । ಸಂ । ಇಧ್ಯಸೇ । ವೀತಿಽಹೋತ್ರಃ । ಅಮರ್ತ್ಯಃ ।

ಜುಷಸ್ವ । ಸು । ನಃ । ಅಧ್ವರಂ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ವೀತಿಹೋತ್ರಃ । ವೀತಿಃ ಪ್ರೀತಿವಿಷಯಂ ಹೋತ್ರಮಗ್ನಿಹೋತ್ರಾದಿಕಂ ಯಸ್ಯಾ-ಸೌ ವೀತಿಹೋತ್ರಃ । ಯಜ್ಞೇಷು ಪ್ರೀತಿಮಾನಿತ್ಯರ್ಥಃ । ಅಮರ್ತ್ಯೋ ಮರಣಧರ್ಮರಹಿತಸ್ತ್ವಮಿಳೇ-ಳಾಯಾಮೀಡ್ಯಾಯಾಮುತ್ತರವೇದ್ಯಾಂ ಸಮಿಧ್ಯಸೇ । ಆಜ್ಯಾಹುತಿಪ್ರಕ್ಷೇಪೇಣ ಸಮ್ಯಕ್ ಪ್ರಜ್ವಾಲ್ಯಸೇ । ತಾದೃಶಸ್ತ್ವಂ ನೋಽಸ್ಮಾಕಮಧ್ವರಮಿಮಂ ಯಜ್ಞಂ ಸು ಸುಷ್ಠು ಜುಷಸ್ವ । ಆಹುತಿಸ್ವೀಕರಣೇನ ಸೇ-ವಸ್ವ ॥ ವೀತಿಹೋತ್ರಃ । ವೀ ಕಾಂತ್ಯಾದಿಷು । ಅಸ್ಮಾತ್ ಕರ್ಮಣಿ ಮಂತ್ರೇ ವೃಷೇಷಪಚೇತ್ಯಾದಿನಾ ಕ್ತಿನ್ನುದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಜುಷಸ್ವ । ಜುಷತೇರ್ಲೋಟಿ ರೂಪಂ । ಶ-ಸ್ವರಃ । ಸು । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, | **ವೀತಿಹೋತ್ರಃ**—ಯಜ್ಞದಿಂದ ತೃಪ್ತನಾಗುವವನೂ, | **ಅಮರ್ತ್ಯಃ**—ಮರಣಧರ್ಮರಹಿತನೂ ಆದ ನೀನು, | **ಇಳಾ**—ಪೂಜ್ಯವಾದ ಉತ್ತರವೇದಿಯಲ್ಲಿ | **ಸಮಿಧ್ಯಸೇ**—ಪ್ರಜ್ವಲಿತನಾಗುತ್ತೀಯೆ. | **ನಃ**—ನಮ್ಮ | **ಅಧ್ವರಂ**—ಯಜ್ಞವನ್ನು | **ಸು ಜುಷಸ್ವ**—ಪ್ರೀತಿಯಿಂದ ಸೇವಿಸು

ಭಾವಾರ್ಥ

ಎಲೈ ಅಗ್ನಿಯೇ, ಯಜ್ಞದಿಂದ ತೃಪ್ತನಾಗುವವನೂ, ಮರಣಧರ್ಮರಹಿತನೂ ಆದ ನೀನು ಪೂಜ್ಯವಾದ ಉತ್ತರವೇದಿಯಲ್ಲಿ ಪ್ರಜ್ವಲಿತನಾಗುತ್ತೀಯೆ. ನಮ್ಮ ಯಜ್ಞವನ್ನು ಪ್ರೀತಿಯಿಂದ ಸೇವಿಸು.

## English Translation

Agni, (who art) immortal and who art gratified byoblations, thou art kindled upon the altar : be pleased by this our sacrifice

ವಿಶೇಷವಿಷಯಗಳು

**ವೀತಿಹೋತ್ರಃ—ವೀತಿಃ ಪ್ರೀತಿವಿಷಯಂ ಹೋತ್ರಂ ಅಗ್ನಿಹೋತ್ರಾದಿಕಂ ಯಸ್ಯ | ಯಜ್ಞೇಷು ಪ್ರೀತಿಮಾನ್** | ಅಗ್ನಿಯು ಅಗ್ನಿಹೋತ್ರಾದಿಗಳ ವಿಷಯದಲ್ಲಿ ಪ್ರೀತಿಯುಳ್ಳವನಾಗಿರುವನೆಂದು ಈ ಪದದ ಅರ್ಥವನ್ನು ವರ್ಣಿಸಿದೆ.

**ಅಮರ್ತ್ಯಃ**—ಮರಣಧರ್ಮವಿಲ್ಲದವನಾದ ಅಗ್ನಿಯು ಪೂಜ್ಯವಾಗಿರುವ ಯಾಗಶಾಲೆಯ ಉತ್ತರವೇದಿಯಲ್ಲಿ ಯಜಮಾನರು ಅರ್ಪಿಸಿದ ಆಜ್ಯಾಹುತಿಗಳಿಂದ ಉದ್ದೀಪ್ತನಾಗಿರುವನು ಎಂದೂ, ಈ ಅಗ್ನಿಯು ಯಜಮಾನರಾದ ನಮ್ಮ ಯಜ್ಞವನ್ನೂ ಆಹುತಿಯನ್ನೂ ಸ್ವೀಕರಿಸುವುದರಿಂದ ಯಜ್ಞವು ಚನ್ನಾಗಿ ನೆರವೇರುವಹಾಗೆ ಸೇವಿಸಲಿ ಎಂದು ಆಶಿಸಿದೆ.

**ಇಳಾ**—ಎಂಬ ಪದವು ಅನೇಕಾರ್ಥವುಳ್ಳದ್ದಾಗಿದ್ದರೂ ಇಲ್ಲಿ **ಇಳಾಯಾಂ ಈಡ್ಯಾಯಾಂ** ಪೂಜ್ಯವಾದ ಎಂದು ವಿವೃತವಾಗಿ ಉತ್ತರವೇದಿಯೆಂಬ ಅರ್ಥದಲ್ಲಿ ಸಪ್ತಮ್ಯಂತವಾಗಿ ಪ್ರಯುಕ್ತವಾಗಿದೆ.

**ಅಧ್ವರಂ—ಯಜ್ಞಂ** | ಅಧ್ವರಶಬ್ದವು ಯಜ್ಞನಾಮಗಳಲ್ಲಿ ಉಕ್ತವಾಗಿದೆ. ಧ್ವರತಿರ್ಹಿಂಸಾಕರ್ಮ ತತ್ಪ್ರತಿಷೇಧಃ ಎಂದು ವ್ಯಾಖ್ಯಾತವಾಗಿದೆ.

ವ್ಯಾಕರಣಪ್ರಕ್ರಿಯಾ

**ಇಳಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಆಕಾರಾದೇಶ.

**ಇಧ್ಯಸೇ**—ಞಿಇಂಧೀ ದೀಪ್ತೌ. ಧಾತು. ಕರ್ಮಣಿಯಲ್ಲಿ ಲಟ್. ಮಧ್ಯಮಪುರುಷಏಕವಚನಾಂತ ರೂಪ. ತಿಙಂತನಿಘಾತಸ್ವರ ಬರುತ್ತದೆ.

**ವೀತಿಹೋತ್ರಃ**—ವೀ ಕಾಂತ್ಯಾದಿಷು. ಧಾತು. ಇದಕ್ಕೆ ಕರ್ಮಣಿಯಲ್ಲಿ **ಮಂತ್ರೇ ವೃಷೇಷಪಚ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗಿ ಬರುತ್ತದೆ. ವೀತಿಃ ಹೋತ್ರಂ ಯಸ್ಯ ಸಃ. ಬಹುವ್ರೀಹಿಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಜುಷಸ್ವ—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್‌ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ವಿಕರಣ (ಶ) ಸ್ವರ ಉಳಿಯುತ್ತದೆ.

**ಸು**—ಚಾವಯೋಸತ್ವೇ (ಪಾ. ಸೂ. ೧-೪-೫೭) ಎಂಬುದರಿಂದ ನಿಪಾತಸಂಜ್ಞೆ ಇರುವುದರಿಂದ **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಸಂಹಿತಾಪಾಠಃ

**ಅಗ್ನೇ ದ್ಯುಮ್ನೇನ ಜಾಗೃವೇ ಸಹಸಃ ಸೂನವಾಹುತ ।**
**ಏದಂ ಬರ್ಹಿಃ ಸದೋ ಮಮ ॥ ೩ ॥**

ಪದಪಾಠಃ

**ಅಗ್ನೇ । ದ್ಯುಮ್ನೇನ । ಜಾಗೃವೇ । ಸಹಸಃ । ಸೂನೋ ಇತಿ । ಆऽಹುತ ।**
**ಆ । ಇದಂ । ಬರ್ಹಿಃ । ಸದಃ । ಮಮ ॥ ೩ ॥**

ಸಾಯಣಭಾಷ್ಯಂ

**ದ್ಯುಮ್ನೇನ ಸ್ವತೇಜಸಾ ಸಹ ಜಾಗೃವೇ । ಜಾಗರ್ತೀತಿ ಜಾಗೃವಿಃ । ತಸ್ಯ ಸಂಬುದ್ಧಿಃ । ಲೋಕರಕ್ಷಾರ್ಥಂ ಸ್ವತೇಜಸಾ ಸಹ ಸರ್ವದಾ ಜಾಗರಣೋಪೇತ ಆಹುತೆ ದೇವತಾಹ್ವಾನಾರ್ಥಮಸ್ಮಾಭಿರಾಹುತ ಸಹಸಃ ಸೂನೋ ಬಲಸ್ಯ ಪುತ್ರ ಹೇ ಅಗ್ನೇ ಮಮ ಮತ್ಸಂಬಂಧಿನ್ಯಸ್ಮಿನ್ಯಜ್ಞೇ ಯದ್ವೇದ್ಯಾಮಾಸ್ತೀರ್ಣಮಿದಂ ಬರ್ಹಿಸ್ತತ್ರಾಸದಃ । ಆಸೀದ ॥ ಜಾಗೃವೇ । ಜಾಗೃ ನಿದ್ರಾಕ್ಷಯೇ । ಜ್ವಾಶ್ವಾಸ್ತ್ವಾಜಾಗೃಭ್ಯಃ ಕ್ವಿನ್ನಿತಿ ಕ್ವಿನ್ । ಕಿತ್ತ್ವಾತ್ತ್ವದ್ಗುಣಃ । ಜಾಗರ್ತೀತಿ ಜಾಗೃವಿಃ । ಜಾಗೃವಿರ್ಜಾಗರಣಾತ್ । ನಿ. ೯-೮ । ಇತಿ ಯಾಸ್ಕಃ ।. ಸಂಬುದ್ಧೌ ಚೇತಿ ಗುಣಃ । ಏಙ್‌ಹ್ರಸ್ವಾತ್ । ಪಾ. ೬-೧-೬೯ । ಇತಿ ಸೋರ್ಲೋಪಃ । ನಿಘಾತಃ । ಸಹಸಃ ಸೂನೋ । ಸುಪ ಆಮಂತ್ರಿತೇ ಪರಾಂಗವದ್ಭಾವಾದನುದಾತ್ತತ್ವೇ ಪಾದಾದಿತ್ವಾದನಿಘಾತಃ । ಸದಃ । ಷದ್‌ಲೃ ವಿಶರಣಗತ್ಯವಸಾದನೇಷ್ವಿತ್ಯಸ್ಯ ಛಾಂದಸೇ ಲುಙಿ ಲೃದಿತ್ತ್ವಾದಙ್ । ನಿಘಾತಃ । ಮಮ । ಅಸ್ಮಚ್ಛಬ್ದಸ್ಯ ಷಷ್ಠ್ಯೇಕವಚನೇ ಮಮಾದೇಶಃ । ಯುಷ್ಮದಸ್ಮದೋರ್ಙಸೀತ್ಯಾದ್ಯುದಾತ್ತತ್ವಂ ॥**

ಪ್ರತಿಪದಾರ್ಥ

**ದ್ಯುಮ್ನೇನ**—ನಿನ್ನ ಸ್ವತೇಜಸ್ಸಿನಿಂದ । **ಜಾಗೃವೇ**—(ಲೋಕರಕ್ಷಣೆಗಾಗಿ) ಎಚ್ಚರವಾಗಿರುವವನೂ । **ಆಹುತ**—ನಮ್ಮಿಂದ ಆಹೂತನಾಗುವವನೂ । **ಸಹಸಃ ಸೂನೋ**—ಶಕ್ತಿಪುತ್ರನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಮಮ**—ನನ್ನಿಂದ ನೆರವೇರಿಸಲ್ಪಡುವ ಯಜ್ಞದ ಈ ವೇದಿಯ । **ಇದಂ ಬರ್ಹಿಃ**—ಈ ದರ್ಭಾಸನದ ಮೇಲೆ । **ಆ ಸದಃ**—ಕುಳಿತುಕೊ ॥

ಭಾವಾರ್ಥ

ಲೋಕರಕ್ಷಣೆಗಾಗಿ ನಿನ್ನ ಸ್ವತೇಜಸ್ಸಿನಿಂದ ಕೂಡಿಕೊಂಡು ಎಚ್ಚರವಾಗಿರುವವನೂ, ನಮ್ಮಿಂದ ಆಹೂತನಾಗುವವನೂ, ಶಕ್ತಿಪುತ್ರನೂ ಆದ ಎಲೈ ಅಗ್ನಿಯೇ, ನನ್ನಿಂದ ಆಚರಿಸಲ್ಪಡುವ ಯಜ್ಞದ ಈ ವೇದಿಯ ದರ್ಭಾಸನದ ಮೇಲೆ ಕುಳಿತುಕೊ.

English ranslation

Agni, son of strength, vigilant (in the exercise of) your energy, take your seat when invoked, on the sacred grass (strewn at) my (sacrifice).

ವಿಶೇಷವಿಷಯಗಳು

**ದ್ಯುಮ್ನೇನ ಜಾಗೃವೇ—ಜಾಗರ್ತೀತಿ ಜಾಗೃವಿಃ । ಸ್ವತೇಜಸಾ ಸಹ ಲೋಕರಕ್ಷಾರ್ಥಂ ಸರ್ವದಾ ಜಾಗರಣೋಪೇತ**। ದ್ಯುಮ್ನಶಬ್ದವು ಧನನಾಮುಗಳಲ್ಲಿ (ನಿ. ೩-೯) ಪಠಿತವಾಗಿ, ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ಸಾಯಣರು ದ್ಯುಮ್ನಶಬ್ದಕ್ಕೆ ತೇಜಸ್ಸೆಂದು ಅರ್ಥವನ್ನು ವರ್ಣಿಸಿದ್ದಾರೆ. ಜಾಗೃವಿ ಶಬ್ದವು ನಿರುಕ್ತಕಾರರಿಂದ,

**ಪ್ರಾವೇಪಾ ಮಾ ಬೃಹತೋ ಮಾದಯಂತಿ ಪ್ರವಾತೇಜಾ ಇರಿಣೇ ವರ್ವೃತಾನಾಃ ।**
**ಸೋಮಸ್ಯೇವ ಮೌಜವತಸ್ಯ ಭಕ್ಷೋ ವಿಭೀದಕೋ ಜಾಗೃವಿರ್ಮಹ್ಯಮಚ್ಛಾನ್ ॥**
(ಋ. ಸಂ. ೧೦-೩೪-೧)

ಉದಾಹೃತವಾಗಿ **ಜಾಗೃವಿರ್ಜಾಗರಣಾತ್** ಎಂದು ವಿವೃತವಾಗಿದೆ. ದುರ್ಗಾಚಾರ್ಯರು **ಜಾಗೃವಿಃ ಜಾಗರಣ-ಕರ್ತಾ—ಯೋ ಜಯತಿ ಸಃ ಹರ್ಷೇಣ ಜಾಗರ್ತಿ, ಯೋ ಜೀಯತೇ ಸಃ ದುಃಖೇನ ಜಾಗರ್ತಿ** ಜಯವನ್ನು ಹೊಂದಿದವನು ಹರ್ಷದಿಂದ ಜಾಗರೂಕನಾಗಿರುತ್ತಾನೆ. ಜಯಿಸಲ್ಪಟ್ಟವನು ದುಃಖದಿಂದ ಎಚ್ಚರವಾಗಿರುವುದರಿಂದ ಜಾಗೃವಿ ಎಂಬ ಪದಕ್ಕೆ ಜಾಗಣರಮಾಡುವವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಅಗ್ನಿಯು ತನ್ನ ತೇಜಸ್ಸಿನಿಂದ ಲೋಕವನ್ನು ರಕ್ಷಿಸುವುದಕ್ಕಾಗಿ ಯಾವಾಗಲೂ ಜಾಗೃತನಾಗಿರುವನೆಂದು ಅರ್ಥವನ್ನು ವಿವರಿಸಿದೆ.

**ಆಹುತ—ದೇವಾನಾಂ ಆಹ್ವಾನಾರ್ಥಮಸ್ಮಾಭಿಃ ಆಹುತ ।** ಆಹುತಶಬ್ದವು ಯಾಸ್ಕರಿಂದ ಉದಾಹೃತವಾದ ಋಕ್ಕಿನಲ್ಲಿ ವಿವೃತವಾಗಿದೆ.

**ಹವಿಷ್ಪಾನ್ತಮಜರಂ ಸ್ವರ್ವಿದಿ ದಿವಿಸ್ಪೃಶ್ಯಾಹುತಂ ಜುಷ್ಟಮಗ್ನೌ ।**
**ತಸ್ಯ ಭರ್ಮಣೇ ಭುವನಾಯ ದೇವಾ ಧರ್ಮಣೇ ಕಂ ಸ್ವಧಯಾ ಪಪ್ರಥಂತ ॥**
(ಋ. ಸಂ. ೧೦-೮೮-೧)

ಇಲ್ಲಿ **ಆಹುತಂ ಅಭಿಹುತಂ ವಿಸೃಷ್ಟಂ** ಅರ್ಪಿತವಾಗಿರುವುದು ಎಂಬ ಅರ್ಥವನ್ನು ವಿವರಿಸಿದೆ.

**ಸಿನೀವಾಲಿ ಪೃಥುಷ್ಟುಕೇ ಯಾ ದೇವಾನಾಮಸಿ ಸ್ವಸಾ ।**
**ಜುಷಸ್ವ ಹವ್ಯಮಾಹುತಂ ಪ್ರಜಾಂ ದೇವಿ ದಿದಿಡ್ಢಿ ನಃ ॥**
(ಋ. ಸಂ. ೨-೩೨-೬)

ಈ ಋಕ್ಕಿನಲ್ಲಿಯೂ ಆಹುತಶಬ್ದವು **ಮರ್ಯಾದಯಾ ವಿಧಾನತಃ ಹುತಂ** ಪ್ರಮಾಣಾನುಗುಣವಾಗಿ-ಶಾಸ್ತ್ರದಲ್ಲಿ ಉಕ್ತವಾದ ರೀತಿಯಿಂದ ಅಗ್ನಿಯಲ್ಲಿ ಅರ್ಪಿತವಾದುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವೃತವಾಗಿದೆ.

ಅಗ್ನಿಯು ದೇವತೆಗಳನ್ನು ಯಾಗಕ್ಕಾಗಿ ಕರದುತರಲು ಅರ್ಪಿತವಾದ ಹವಿಸ್ಸುಳ್ಳವನಾಗಿರುವನೆಂದು ಅಗ್ನಿಯನ್ನು ಈ ಪದದಿಂದ ಸಂಬೋಧಿಸಿದೆ.

**ಸಹಸಃ ಸೂನೋ**—**ಬಲಸ್ಯಪುತ್ರ** ಅರಣಿಗಳಲ್ಲಿ ಮಥನಮಾಡುವುದರಿಂದ ಅಗ್ನಿಯು ಉತ್ಪನ್ನನಾಗುವನು ಬಲದಿಂದ ಹುಟ್ಟಿದಕಾರಣ ಈ ಪದದಿಂದ ಅಗ್ನಿಯು ಸಂಬೋಧಿತನಾಗಿದ್ದಾನೆ. ದುರ್ಗಾಚಾರ್ಯರು—ಸೂನೋ ಸಹಸಃ ಈ ಪದಗಳಿಗೆ ಅರ್ಥವನ್ನು ಈರೀತಿ ವಿವರಿಸಿದ್ದಾರೆ. **ಅಧಿದೇವತಾಭಾವೇನ ಪ್ರಾಣ ಇಂದ್ರೋ ವ್ಯವಸ್ಥಿತಃ ತಸ್ಯೇತರೋ ಯಃ ಪ್ರಜ್ಞಾಮುತ್ಪಾದ್ಯಾವಶಿಷ್ಟಃ ಪ್ರಾಣಃ ಸಃ ಪುತ್ರಃ ಇತ್ಯೇವಮುಪಪದ್ಯತೇ ಪಿತೃಪುತ್ರಭಾವಃ । ತದುಕ್ತಂ "ಪ್ರಾಣೋ ವಾ ಅಹಮಸ್ಮಿ ಪ್ರಾಣಸ್ತ್ವಂ ಪ್ರಾಣಸ್ಸರ್ವಾಣಿ ಭೂತಾನಿ" ಇತಿ** । ಅಧಿದೇವತಾಭಾವದಿಂದ ಇಂದ್ರನು ಪ್ರಾಣರೂಪದಲ್ಲಿರುವನು ಎಂದೂ, ಪ್ರಜ್ಞೆಯನ್ನು ಉಂಟುಮಾಡುವ ವಿಷಯದಲ್ಲಿ ಇತರವಾದ ಪ್ರಾಣವಾಯುಗಳು ಸಹಾಯಕವಾಗಿರುವುದೆಂದೂ ವಿವರಿಸಿ ಪ್ರಾಣವಾಯುವಿಗೂ ತತ್ಸಂಬಂಧಿಯಾದ ಇತರ ವಾಯುಗಳಿಗೂ ಪಿತೃಪುತ್ರಭಾವವನ್ನು ವಿವರಿಸಿ, ಈ ಅಭಿಪ್ರಾಯವನ್ನು ಬೋಧಿಸುವ ಶ್ರುತಿಯ ವಾಕ್ಯವನ್ನು ಉದಾಹರಿಸಿದ್ದಾರೆ. ಈ ವಿವರಣೆಯು ಇಂದ್ರನ ಪರವಾಗಿರುವುದು. ಪ್ರಕೃತಋಕ್ಕಿನಲ್ಲಿ ಈ ಪದದಿಂದ ಅಗ್ನಿಯನ್ನು ಸಂಬೋಧಿಸಿ, **ಮತ್ಸಂಬಂಧಿನ್ಯಸ್ಮಿನ್ ಯಜ್ಞೇ ಯದ್ವೇಧ್ಯಾಮಾಸ್ತೀರ್ಣಂ ಬರ್ಹಿಃ ತತ್ರ ಆಸೀದ.** ಯಜಮಾನನು ಆಚರಿಸುವ ಯಾಗದಲ್ಲಿ ಯಜ್ಞವೇದಿಯಲ್ಲಿ ಹಾಸಿರುವ ಬರ್ಹಿಸ್ಸಿನಲ್ಲಿ ಅಗ್ನಿಯು ಉಪವಿಷ್ಟನಾಗಿರಲಿ ಎಂದು ಯಜಮಾನನ ಆಶಂಸನೆಯು ವರ್ಣಿತವಾಗಿದೆ.

**ಬರ್ಹಿಃ**—ಬರ್ಹಿಶ್ಶಬ್ದವು ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ಉದಕನಾಮಗಳಲ್ಲಿಯೂ (ನಿ. ೨-೨೪) ಉಕ್ತವಾಗಿ **ಬರ್ಹಿಃ ಪರಿಬರ್ಹಣಾತ್** (ನಿ. ೮-೯) ಎಂದು ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಜಾಗೃವೇ**—**ಜ್ಯಾಶ್ಯಾಸ್ತ್ಯಾಜಾಗೃಭ್ಯಃ ಕ್ವಿನ್** (ಉ. ಸೂ. ೪-೫೪) ಎಂಬುದರಿಂದ ಕ್ವಿನ್ ಪ್ರತ್ಯಯ. ವಿ ಎಂದು ಉಳಿಯುತ್ತದೆ. ಕಿತ್ತಾದುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಜಾಗರ್ತೀತಿ ಜಾಗೃವಿಃ **ಜಾಗೃವಿರ್ಜಾಗರಣಾತ್** (ನಿರು ೯-೮) ಎಂದು ಯಾಸ್ಕರು ಹೇಳಿರುತ್ತಾರೆ. ಸಂಬುದ್ಧಿಯಲ್ಲಿ **ಸಂಬುದ್ಧೌ ಚ** (ಪಾ. ಸೂ. ೭-೩-೧೦೬) ಎಂಬುದರಿಂದ ಇಕಾರಕ್ಕೆ ಗುಣ. **ಏಙ್ಹ್ರಸ್ವಾತ್ಸಂಬುದ್ಧೇಃ** (ಪಾ. ಸೂ. ೬-೧-೬೯) ಎಂಬುದರಿಂದ ಪರದ ಸುವಿಗೆ (ಸಂಬುದ್ಧಿಗೆ) ಲೋಪ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಹಸಃ ಸೂನೋ**—**ಸುಬಾಮಂತ್ರಿತೇ ಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಎಂಬುದರಿಂದ ಸಹಸಃ ಎಂಬ ಷಷ್ಠ್ಯಂತಕ್ಕೆ ಪರಾಂಗವದ್ಭಾವವಿರುವುದರಿಂದ ಸಮುದಾಯಕ್ಕೇ ಆಮಂತ್ರಿತಸಂಜ್ಞೆ ಬರುತ್ತದೆ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಆಹುತ**—ಹು ದಾನಾದನಯೋಃ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಸದಃ**—ಷದ್‌ಲೃ ವಿಶರಣಗತ್ಯವಸಾದನೇಷು. ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಮಧ್ಯಮ ಪುರುಷಏಕವಚನದಲ್ಲಿ ಸಿಪ್. ಇಕಾರಲೋಪ. ಧಾತು ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—ಎಂಬುದರಿಂದ

ಜ್ಲಿಗೆ ಅಜಾದೇಶ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. ಛಾಂದಸವಾಗಿ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಮ**—ತವ ಮಮೌ ಙಸಿ (ಪಾ. ಸೂ. ೭-೨-೯೬) ಎಂಬುದರಿಂದ ಅಸ್ಮದ್ ಶಬ್ದಕ್ಕೆ ಮಮಾದೇಶ **ಯುಷ್ಮದಸ್ಮದೋರ್ಙಸಿ** (ಪಾ. ಸೂ. ೬-೧-೨೧೧) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನೇ ವಿಶ್ವೇಭಿರಗ್ನಿಭಿರ್ದೇವೇಭಿರ್ಮಹಯಾ ಗಿರಃ ।
ಯಜ್ಞೇಷು ಯ ಉ ಚಾಯವಃ ॥ ೪ ॥

ಪದಪಾಠಃ

ಅಗ್ನೇ । ವಿಶ್ವೇಭಿಃ । ಅಗ್ನಿಽಭಿಃ । ದೇವೇಭಿಃ । ಮಹಯ । ಗಿರಃ ।
ಯಜ್ಞೇಷು । ಯೇ । ಊಂ ಇತಿ । ಚಾಯವಃ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವೇಭಿರ್ದ್ಯೋತಮಾನೈರ್ವಿಶ್ವೇಭಿಃ ಸರ್ವೈರಗ್ನಿಭಿರ್ಯಷ್ಟವ್ಯತಯಾ ಸ್ಥಿತೈರಗ್ನಿಭಿಃ ಸಹಿತಸ್ತ್ವಂ ಚಾಯವ ಉಕ್ತವಿಷಯಸ್ತುತಿರೂಪಾಭಿರ್ವಾಗ್ಭಿರನನ್ಯಮನಸ್ಕತಯಾ ಪೂಜಕಾ ಯೇ ವಿದ್ಯಂತೇ ತೇಷಾಂ ಯಜ್ಞೇಷು ಜ್ಯೋತಿಷ್ಟೋಮಾದಿಷು ಗಿರಃ ಸ್ತೋತ್ರಶಸ್ತ್ರಾದಿಲಕ್ಷಣಾನಿ ವಾಕ್ಯಾನಿ ಮಹಯ । ಪೂಜಯ ॥ ಮಹ ಪೂಜಾಯಾಂ । ಚುರಾದಿಃ । ಅದಂತತ್ವಾದುಪಧಾವೃದ್ಧ್ಯಭಾವಃ । ನಿಘಾತಃ । ಚಾಯವಃ । ಚಾಯೃ ಪೂಜಾನಿಶಾಮನಯೋಃ । ಮೃಗಯ್ವಾದಯಶ್ಚೇತಿ ಕುಪ್ರತ್ಯಯಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ದೇವೇಭಿಃ**—ಪ್ರಕಾಶಮಾನಗಳಾದ । **ವಿಶ್ವೇಭಿಃ**—ಸಮಸ್ತವಾದ । **ಅಗ್ನಿಭಿಃ**—(ನಿನ್ನ ರೂಪಾಂತರಗಳಾದ) ಇತರ ಅಗ್ನಿಗಳೊಡನೆ ಕೂಡಿದ ನೀನು । **ಚಾಯವಃ**—ನಿನ್ನ ಪೂಜಕರಾದ **ಯೇ**—ಯಾವ ಯಜ್ಞಕರ್ತರಿದ್ದಾರೆಯೋ ಅಂತಹವರ । **ಯಜ್ಞೇಷು**—ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ । **ಗಿರಃ**—ಸ್ತುತಿರೂಪವಾದ ವಾಕ್ಯಗಳನ್ನು । **ಮಹಯ**—ಗೌರವಿಸಿ ಕೇಳು.

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನವೂ, ನಿನ್ನದೇ ರೂಪಾಂತವೂ ಆದ ಇತರ ಸಮಸ್ತವಾದ ಅಗ್ನಿಗಳೊಡನೆಯೂ ಸಹ ಕೂಡಿದ ನೀನು ನಿನ್ನ ಪೂಜಕರಾದ ಯಜ್ಞಕರ್ತರು ಯಾರು ಯಾರು ಇದ್ದಾರೆಯೋ ಅಂತಹವರ ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ ಅವರು ಪಠಿಸುವ ಸ್ತುತಿರೂಪವಾದ ವಾಕ್ಯಗಳನ್ನು ಗೌರವಿಸಿ ಕೇಳು.

English ranslation

Agni, with all the divine fires, respect the praises of those who in (their) sacrifices are (your especial) worshippers.

ವಿಶೇಷವಿಷಯಗಳು

**ದೇವೇಭಿಃ—ದ್ಯೋತಮಾನೈಃ| ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ** (ನಿ. ೭-೧೫) ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ಪ್ರಕಾಶವುಳ್ಳವರು ಎಂದು ಅರ್ಥವನ್ನು ವಿವರಿಸಿದೆ.

**ಅಗ್ನಿಭಿಃ—ಯಷ್ಟವ್ಯತಯಾ ಸ್ಥಿತೈರಗ್ನಿಭಿಃ** ಅಗ್ನಿಶಬ್ದವು ಯಾಸ್ಕರಿಂದ ವಾಖ್ಯಾತವಾಗಿದೆ. ಇಲ್ಲಿ ಯಾಗದಲ್ಲಿ ಹವಿಸ್ಸನ್ನು ಅರ್ಪಿಸುವುದಕ್ಕಾಗಿ ಶಾಸ್ತ್ರದಲ್ಲಿ ಉಕ್ತವಾಗಿರುವ ಕ್ರಮದಿಂದ ಆಯಾಯ ಹೆಸರುಗಳಿಂದ ಪ್ರಸಿದ್ಧ ನಾದ ಅಗ್ನಿಯ ಭೇದಗಳಿಂದ ಅಗ್ನಿಯು ಕೂಡಿರುವನು ಎಂದು ಅರ್ಥವನ್ನು ವರ್ಣಿಸಿದೆ.

**ಚಾಯವಃ—ತದ್ವಿಷಯಸ್ತುತಿರೂಪಾಭಿಃ ವಾಗ್ಭಿಃ ಅನನ್ಯಮನಸ್ಕತಯಾ ಪೂಜಕಾಃ** | ಸ್ತುತಿಗೆ ಅರ್ಹರಾದವರನ್ನು ಸ್ತುತಿಮಾಡಲರ್ಹವಾದ ಆಯಾಯ ವಾಕ್ಕುಗಳಿಂದ ಒಂದೇ ಮನಸ್ಸಿನಿಂದ ಸ್ತುತಿಮಾಡುವವರು ಎಂದು ಚಾವಯಃ ಎಂಬ ಪದಕ್ಕೆ ಅರ್ಥವನ್ನು ವರ್ಣಿಸಿದೆ.

**ಯಜ್ಞೇಷು**—ಯಜ್ಞಶಬ್ದವು ಯಜ್ಞಸಾಮಾನ್ಯವಾಚಿಯಾಗಿದ್ದರೂ, ಇಲ್ಲಿ **ಜ್ಯೋತಿಷ್ಟೋಮಾದಿಷು** ಜ್ಯೋತಿಷ್ಟೋಮವೇ ಮೊದಲಾದ ಯಜ್ಞಗಳಲ್ಲಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅಗ್ನಿಯು ಯಾಗಾರ್ಹರಾದ ಮತ್ತು ಆಯಾಯ ಯಾಗಗಳಲ್ಲಿ ಪ್ರಸಿದ್ಧರಾಗಿರುವ ಇತರ ಅಗ್ನಿಗಳೊಡಗೂಡಿ, ಏಕಾಗ್ರವಾದ ಮನಸ್ಸಿನಿಂದ ಪೂಜಿಸುವ ವರಿಂದ ಆಯಾಯ ಸ್ತೋತ್ರಶಸ್ತ್ರರೂಪವಾದ ವಾಕ್ಕುಗಳಿಂದ ಪೂಜಿಸಲ್ಪಡಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ ಎಂದು ವಿವೃತವಾಗಿದೆ.

ಗಿರಃ—ಸ್ತೋತ್ರಶಸ್ತ್ರಾದಿಲಕ್ಷಣಾನಿ ವಾಕ್ಯಾನಿ | ಗೀಃ ಎಂಬ ಪದವು ವಾಙ್ನಾಮಗಳಲ್ಲಿ (ನಿ. ೨-೨೩) ಉಕ್ತವಾಗಿದೆ.

**ಮಾ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ |**
**ಭೂರ್ಣಿಂ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್||**

(ಋ. ಸಂ.೮೧--೨೦)

ಇಲ್ಲಿ ಗಿರಾ ಎಂಬ ಪದಕ್ಕೆ **ಗೀತ್ಯಾ ಸ್ತುತ್ಯಾ** ಎಂಬ ಅರ್ಥವನ್ನು ವಿವರಿಸಿದೆ. "**ತಮೂಷು ಸಮನಾ ಗಿರಾ**" (ಋ. ಸಂ. ೬-೩-೨೬-೧) ಇಲ್ಲಿಯೂ ಗಿರಾ ಗೀತ್ಯಾ **ಸ್ತುತ್ಯಾ** ಎಂದು ಇದೇ ಅರ್ಥದಲ್ಲಿ ಪ್ರಯುಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

ವಿಶ್ವೇಭಿಃ—ಛಂದಸ್ಸಿನಲ್ಲಿ **ವಾ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪಿತವಾದುದರಿಂದ ಇಲ್ಲಿ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ. ದೇವೇಭಿಃ ಎಂಬಲ್ಲಿಯೂ ಹೀಗೆಯೇ ಏತ್ವ.

**ಮಹಯ**—ಮಹ ಪೂಜಾಯಾಂ ಧಾತು. ಚುರಾದಿ. ಇದು ಅದಂತವಾದ ಧಾತು. **ಸತ್ಯಾಪಪಾಶ—** (ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದ ರಿಂದ ಪೂರ್ವದ ಅಕಾರಕ್ಕೆ ಲೋಪ. **ಅಚಃಪೂರ್ವ**—ಎಂಬುದರಿಂದ ಅಲೋಪಕ್ಕೆ ಸ್ಥಾನಿವದ್ಭಾವವಿರುವುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಅದುಪಧೆಗೆ ವೃದ್ಧಿ ಬರುವುದಿಲ್ಲ. **ಲೋಟ್** ಮಧ್ಯಮಪುರುಷ ಏಕವಚನಕ್ಕೆ (ಸಿಪಿಗೆ)

ಜ್ಲಿಗೆ ಅಜಾದೇಶ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. ಛಾಂದಸವಾಗಿ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಮ**—ತವ ಮಮೌ ಙಸಿ (ಪಾ. ಸೂ. ೭-೨-೯೬) ಎಂಬುದರಿಂದ ಅಸ್ಮದ್ ಶಬ್ದಕ್ಕೆ ಮಮಾದೇಶ **ಯುಷ್ಮದಸ್ಮದೋರ್ಙಸಿ** (ಪಾ. ಸೂ. ೬-೧-೨೧೧) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನೇ ವಿಶ್ವೇಭಿರಗ್ನಿಭಿರ್ದೇವೇಭಿರ್ಮಹಯಾ ಗಿರಃ ।
ಯಜ್ಞೇಷು ಯ ಉ ಚಾಯವಃ ॥ ೪ ॥

ಪದಪಾಠಃ

ಅಗ್ನೇ । ವಿಶ್ವೇಭಿಃ । ಅಗ್ನಿಽಭಿಃ । ದೇವೇಭಿಃ । ಮಹಯ । ಗಿರಃ ।
ಯಜ್ಞೇಷು । ಯೇ । ಊಂ ಇತಿ । ಚಾಯವಃ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವೇಭಿರ್ದ್ಯೋತಮಾನೈರ್ವಿಶ್ವೇಭಿಃ ಸರ್ವೈರಗ್ನಿಭಿರ್ಯಷ್ಟವ್ಯತಯಾ ಸ್ಥಿತೈರಗ್ನಿಭಿಃ ಸಹಿತಸ್ತ್ವಂ ಚಾಯವ ಉಕ್ತವಿಷಯಸ್ತುತಿರೂಪಾಭಿರ್ವಾಗ್ಭಿರನನ್ಯಮನಸ್ಕತಯಾ ಪೂಜಕಾ ಯೇ ವಿದ್ಯಂತೇ ತೇಷಾಂ ಯಜ್ಞೇಷು ಜ್ಯೋತಿಷ್ಟೋಮಾದಿಷು ಗಿರಃ ಸ್ತೋತ್ರಶಸ್ತ್ರಾದಿಲಕ್ಷಣಾನಿ ವಾಕ್ಯಾನಿ ಮಹಯ । ಪೂಜಯ ॥ ಮಹ ಪೂಜಾಯಾಂ । ಚುರಾದಿಃ । ಅದಂತತ್ವಾದುಪಧಾವೃದ್ಧ್ಯಭಾವಃ । ನಿಘಾತಃ । ಚಾಯವಃ । ಚಾಯೃ ಪೂಜಾನಿಶಾಮನಯೋಃ । ಮೃಗಯ್ವಾದಯಶ್ಚೇತಿ ಕುಪ್ರತ್ಯಯಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ದೇವೇಭಿಃ**—ಪ್ರಕಾಶಮಾನಗಳಾದ । **ವಿಶ್ವೇಭಿಃ**—ಸಮಸ್ತವಾದ । **ಅಗ್ನಿಭಿಃ**—(ನಿನ್ನ ರೂಪಾಂತರಗಳಾದ) ಇತರ ಅಗ್ನಿಗಳೊಡನೆ ಕೂಡಿದ ನೀನು । **ಚಾಯವಃ**—ನಿನ್ನ ಪೂಜಕರಾದ **ಯೇ**—ಯಾವ ಯಜ್ಞಕರ್ತರಿದ್ದಾರೆಯೋ ಅಂತಹವರ । **ಯಜ್ಞೇಷು**—ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ । **ಗಿರಃ**—ಸ್ತುತಿರೂಪವಾದ ವಾಕ್ಯಗಳನ್ನು । **ಮಹಯ**—ಗೌರವಿಸಿ ಕೇಳು.

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನವೂ, ನಿನ್ನದೇ ರೂಪಾಂತವೂ ಆದ ಇತರ ಸಮಸ್ತವಾದ ಅಗ್ನಿಗಳೊಡನೆಯೂ ಸಹ ಕೂಡಿದ ನೀನು ನಿನ್ನ ಪೂಜಕರಾದ ಯಜ್ಞಕರ್ತರು ಯಾರು ಯಾರು ಇದ್ದಾರೆಯೋ ಅಂತಹವರ ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ ಅವರು ಪಠಿಸುವ ಸ್ತುತಿರೂಪವಾದ ವಾಕ್ಯಗಳನ್ನು ಗೌರವಿಸಿ ಕೇಳು.

English ranslation

Agni, with all the divine fires, respect the praises of those who in (their) sacrifices are (your especial) worshippers.

ವಿಶೇಷವಿಷಯಗಳು

**ದೇವೇಭಿಃ—ದ್ಯೋತಮಾನೈಃ| ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ** ಭವತೀತಿ ವಾ (ನಿ. ೭-೧೫) ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ಪ್ರಕಾಶವುಳ್ಳವರು ಎಂದು ಅರ್ಥವನ್ನು ವಿವರಿಸಿದೆ.

ಅಗ್ನಿಭಿಃ—**ಯಷ್ಟವ್ಯತಯಾ ಸ್ಥಿತೈರಗ್ನಿಭಿಃ** ಅಗ್ನಿಶಬ್ದವು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಇಲ್ಲಿ ಯಾಗದಲ್ಲಿ ಹವಿಸ್ಸನ್ನು ಅರ್ಪಿಸುವುದಕ್ಕಾಗಿ ಶಾಸ್ತ್ರದಲ್ಲಿ ಉಕ್ತವಾಗಿರುವ ಕ್ರಮದಿಂದ ಆಯಾಯ ಹೆಸರುಗಳಿಂದ ಪ್ರಸಿದ್ಧನಾದ ಅಗ್ನಿಯ ಭೇದಗಳಿಂದ ಅಗ್ನಿಯು ಕೂಡಿರುವನು ಎಂದು ಅರ್ಥವನ್ನು ವರ್ಣಿಸಿದೆ.

**ಚಾಯವಃ—ತದ್ವಿಷಯಸ್ತುತಿರೂಪಾಭಿಃ ವಾಗ್ಭಿಃ ಅನನ್ಯಮನಸ್ಕತಯಾ ಪೂಜಕಾಃ |** ಸ್ತುತಿಗೆ ಅರ್ಹರಾದವರನ್ನು ಸ್ತುತಿಮಾಡಲರ್ಹವಾದ ಆಯಾಯ ವಾಕ್ಕುಗಳಿಂದ ಒಂದೇ ಮನಸ್ಸಿನಿಂದ ಸ್ತುತಿಮಾಡುವವರು ಎಂದು ಚಾಯವಃ ಎಂಬ ಪದಕ್ಕೆ ಅರ್ಥವನ್ನು ವರ್ಣಿಸಿದೆ.

**ಯಜ್ಞೇಷು**—ಯಜ್ಞಶಬ್ದವು ಯಜ್ಞಸಾಮಾನ್ಯವಾಚಿಯಾಗಿದ್ದರೂ, ಇಲ್ಲಿ **ಜ್ಯೋತಿಷ್ಟೋಮಾದಿಷು** ಜ್ಯೋತಿಷ್ಟೋಮವೇ ಮೊದಲಾದ ಯಜ್ಞಗಳಲ್ಲಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅಗ್ನಿಯು ಯಾಗಾರ್ಹರಾದ ಮತ್ತು ಆಯಾಯ ಯಾಗಗಳಲ್ಲಿ ಪ್ರಸಿದ್ಧರಾಗಿರುವ ಇತರ ಅಗ್ನಿಗಳೊಡಗೂಡಿ, ಏಕಾಗ್ರವಾದ ಮನಸ್ಸಿನಿಂದ ಪೂಜಿಸುವವರಿಂದ ಆಯಾಯ ಸ್ತೋತ್ರಶಸ್ತ್ರರೂಪವಾದ ವಾಕ್ಕುಗಳಿಂದ ಪೂಜಿಸಲ್ಪಡಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ ಎಂದು ವಿವೃತವಾಗಿದೆ.

ಗಿರಃ—**ಸ್ತೋತ್ರಶಸ್ತ್ರಾದಿಲಕ್ಷಣಾನಿ ವಾಕ್ಯಾನಿ |** ಗೀಃ ಎಂಬ ಪದವು ವಾಙ್ನಾಮಗಳಲ್ಲಿ (ನಿ. ೧-೨೩) ಉಕ್ತವಾಗಿದೆ.

**ಮಾ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ |**
**ಭೂರ್ಣಿಂ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್||**

(ಋ. ಸಂ.೮೧—೨೦)

ಇಲ್ಲಿ ಗಿರಾ ಎಂಬ ಪದಕ್ಕೆ **ಗೀತ್ಯಾ ಸ್ತುತ್ಯಾ** ಎಂಬ ಅರ್ಥವನ್ನು ವಿವರಿಸಿದೆ. "**ಶಮೂಷು ಸಮನಾ ಗಿರಾ**" (ಋ. ಸಂ. ೬-೩-೨೬-೧) ಇಲ್ಲಿಯೂ ಗಿರಾ ಗೀತ್ಯಾ ಸ್ತುತ್ಯಾ ಎಂದು ಇದೇ ಅರ್ಥದಲ್ಲಿ ಪ್ರಯುಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

ವಿಶ್ವೇಭಿಃ—ಛಂದಸ್ಸಿನಲ್ಲಿ ವಾ ಛಂದಸಿ ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪಿತವಾದುದರಿಂದ ಇಲ್ಲಿ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ. ದೇವೇಭಿಃ ಎಂಬಲ್ಲಿಯೂ ಹೀಗೆಯೇ ಏತ್ವ.

**ಮಹಯ**—ಮಹ ಪೂಜಾಯಾಂ ಧಾತು. ಚುರಾದಿ. ಇದು ಅದಂತವಾದ ಧಾತು. **ಸತ್ಯಾಪಪಾಶ—** (ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. **ಅಚಃಪೂರ್ವ**—ಎಂಬುದರಿಂದ ಅಲೋಪಕ್ಕೆ ಸ್ಥಾನಿವದ್ಭಾವವಿರುವುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಅದುಪಧೆಗೆ ವೃದ್ಧಿ ಬರುವುದಿಲ್ಲ. **ಲೋಟ್** ಮಧ್ಯಮಪುರುಷ ಏಕವಚನಕ್ಕೆ (ಸಿಪಿಗೆ)

ಹಿ ಆದೇಶ. ಶಪ್ ನಿಮಿತ್ತವಾಗಿ ಣಿಚಿನ ಇಕಾರಕ್ಕೆ ಗುಣ. ಅಯಾದೇಶ. **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚಾಯವಃ**— ಚಾಯೃ ಪೂಜಾನಿಶಾಮನಯೋಃ ಧಾತು. **ಮೃಗಯ್ವಾದಯಶ್ಚ** (ಉ. ಸೂ. ೧-೩೭) ಎಂಬುದರಿಂದ ಕು ಪ್ರತ್ಯಯ. ಚಾಯು ಶಬ್ದ. ಪ್ರಥಮಾಬಹುವಚನಾಂತರೂಪ. ಪ್ರತ್ಯಯಸ್ವರದಿಂದ ಇದು ಅಂತೋದಾತ್ತವಾಗುತ್ತದೆ.

ಸಂಹಿತಾಪಾಠಃ

ಅಗ್ನೇ ದಾ ದಾಶುಷೇ ರಯಿಂ ವೀರವಂತಂ ಪರೀಣಸಂ ।
ಶಿಶೀಹಿ ನಃ ಸೂನುಮತಃ ॥ ೫ ॥

ಪದಪಾಠಃ

ಅಗ್ನೇ । ದಾಃ । ದಾಶುಷೇ । ರಯಿಂ । ವೀರऽವಂತಂ । ಪರೀಣಸಂ ।
ಶಿಶೀಹಿ । ನಃ । ಸೂನುऽಮತಃ ॥ ೫ ॥

ಸಾಯಣಭಾಷ್ಯಂ

**ಹೇ ಅಗ್ನೇ ದಾಶುಷೇ ತುಭ್ಯಂ ಹವಿರ್ದತ್ತವತೇ ಯಜಮಾನಾಯ ವೀರವಂತಂ ಪುತ್ರಯುಕ್ತಂ ಪರೀಣಸಂ ಪ್ರಭೂತಂ ರಯಿಂ ಧನಂ ದಾಃ । ದೇಹಿ । ಸೂನುಮತಃ ಪುತ್ರಪೌತ್ರಾದಿಸಹಿತಾನಸ್ಮಾನ್ ಶಿಶೀಹಿ । ಧನಪ್ರದಾನೇನ ತೀಕ್ಷ್ಣೀಕುರು ॥ ದಾಃ । ಡುದಾಞ್ ದಾನ ಇತ್ಯಸ್ಯ ಛಾಂದಸೇ ಲುಙಿ ರೂಪಂ ಆಮಂತ್ರಿತಸ್ಯಾವಿದ್ಯಮಾನತ್ವೇನ ಪಾದಾದಿತ್ವಾದನಿಘಾತಃ । ದಾಶುಷೇ । ದಾಶೃ ದಾನ ಇತ್ಯಸ್ಯ ಕ್ವಸೌ ದಾಶ್ವಾನ್ಸಾಹ್ವಾನ್ಮೀಢ್ವಾಂಶ್ಚೇತಿ ನಿಪಾತನಾತ್ ದ್ವಿರ್ವಚನಾಭಾವ ಇಡಭಾವಶ್ಚ । ಭಸಂಜ್ಞಾಯಾಂ ಸಂಪ್ರಸಾರಣಂ । ಪ್ರತ್ಯಯಸ್ವರಃ । ಪರೀಣಸಂ । ಪರಿಪೂರ್ವಾನ್ನಸತೇರ್ವ್ಯಾಪ್ತ್ಯರ್ಥಾತ್ ಕ್ವಿಪ್ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ । ಶಿಶೀಹಿ । ಶಿಞ್ ನಿಶಾನೇ । ವ್ಯತ್ಯಯೇನ ಶ್ಲುಃ । ದೀರ್ಘಶ್ಛಾಂದಸಃ । ಹೇರಪಿತ್ತ್ವಾದಂತೋದಾತ್ತತ್ವಂ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ದಾಶುಷೇ**—(ನಿನಗೆ) ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । **ವೀರವಂತಂ**—ಪುತ್ರಯುಕ್ತವಾದುದೂ । **ಪರೀಣಸಂ**—ಪ್ರಭೂತವಾದುದೂ ಆದ । **ರಯಿಂ**—ಧನವನ್ನು । **ದಾಃ**—ಕೊಡು. । **ಸೂನುಮತಃ**—ಪುತ್ರಪೌತ್ರಾದಿಸಹಿತರಾದ । **ನಃ**—ನಮ್ಮನ್ನು । **ಶಿಶೀಹಿ**—(ಧನಪ್ರದಾನದಿಂದ) ತೇಜೋಯುತರನ್ನಾಗಿ ಮಾಡು.

ಭಾವಾರ್ಥ

ಎಲೈ ಅಗ್ನಿಯೇ, ನಿನಗೆ ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ ಪುತ್ರರಿಂದ ಕೂಡಿದುದೂ, ಪ್ರಭೂತವಾದುದೂ ಆದ ಧನವನ್ನು ಕೊಡು. ಪುತ್ರಪೌತ್ರಾದಿಸಹಿತರಾದ ನಮ್ಮನ್ನು ಧನಪದಾನದಿಂದ ತೇಜೋಯುತರನ್ನಾಗಿ ಮಾಡು.

## English Translation

Grant, Agni, ample wealth and progeny to the donor (of the oblation). Make us prosperous, possessed of offspring.

### ವಿಶೇಷವಿಷಯಗಳು.

**ದಾಶುಷೇ**—ತುಭ್ಯಂ ಹವಿರ್ದತ್ತವತೇ ಯಜಮಾನಾಯ | ಯಾಸ್ಕರು—

**ಧಾತಾ ದದಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ |**
**ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಿಣಃ ||**

(ಅಥ. ಸಂ. ೭-೧೭-೧)

ಇಲ್ಲಿ **ದಾಶುಷೇ** ಎಂಬ ಪದಕ್ಕೆ **ದತ್ತವತೇ** ಎಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಅಗ್ನಿಯನ್ನು ಸಂಬೋಧಿಸಿದೆ ಎಂದೂ, ಅಗ್ನಿಯು ತನಗೆ ಹವಿಸ್ಸನ್ನು ಅರ್ಪಿಸಿದ ಯಜಮಾನನಿಗೆ ಪುತ್ರರಿಂದ ಕೂಡಿದ ಪ್ರಭೂತವಾದ ಧನವನ್ನು ಅನುಗ್ರಹಿಸಲಿ ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ವೀರವಂತಂ**—**ಪುತ್ರೈಯುಕ್ತಂ** | ಯಾಸ್ಕರು **ವೀರವಂತಃ ಕಲ್ಯಾಣವೀರಾ ವಾ ವೀರೋ ವೀರಯತ್ಯಮಿತ್ರಾನ್ ವೇತೇರ್ವಾಸ್ಯಾದ್ಗತಿಕರ್ಮಣೋ ವೀರಯತೇರ್ವಾ** | (ನಿ. ೧-೭) ಎಂದು ವಿವರಿಸಿದ್ದಾರೆ. ದುರ್ಗಾಚಾರ್ಯರು ಗಮನಾರ್ಥಕವಾದ ವಿಧಾತುವಿನಿಂದ ವೀರಶಬ್ದವು ನಿಷ್ಪನ್ನವಾಗಿರುವುದೆಂದೂ, ಅಥವಾ ಪರಾಕ್ರಮಾರ್ಥವನ್ನು ಬೋಧಿಸುವ ವೀರಧಾತುವಿನಿಂದ ನಿಷ್ಪನ್ನವಾಗಿ, ಶತ್ರುಗಳನ್ನು ನಾನಾವಿಧವಾಗಿ ನಾಶಗೊಳಿಸುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದೂ ಅರ್ಥವನ್ನು ಹೇಳಿದ್ದಾರೆ. ಸಾಯಣರು ಪುತ್ರರಿಂದ ಕೂಡಿದುದು ಎಂದು ಅರ್ಥವನ್ನು ವಿವರಿಸಿದ್ದಾರೆ.

**ಪರೀಣಸಂ**—**ಪ್ರಭೂತಂ** ಪರೀಣಸಾ ಎಂದು ಬಹುನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಇಲ್ಲಿ ಬಹಳ ಅಥವಾ ಬಹು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಸೂನುಮತಃ ನಃ ಶಿಶೀಹಿ**—ಸೂನುಮತಃ ಎಂಬ ಪದಕ್ಕೆ ಪುತ್ರಪೌತ್ರರಿಂದ (ಮಕ್ಕಳು ಮೊಮ್ಮಕ್ಕಳು ಇವರಿಂದ) ಕೂಡಿರುವ ಯಜಮಾನರಿಗೆ ಧನವನ್ನು ಅನುಗ್ರಹಿಸುವುದರಿಂದ ಅವರನ್ನು ಅಗ್ನಿಯು ತೇಜಶ್ಶಾಲಿಗಳಾಗಿರುವಂತೆ ಮಾಡಲಿ ಎಂದು ಆಶಿಸಿದೆ. ಸೂನುಶಬ್ದವು ಅಪತ್ಯನಾಮಗಳಲ್ಲಿ (ನಿ. ೩-೨) ಉಕ್ತವಾಗಿದೆ.

### ವ್ಯಾಕರಣಪ್ರಕ್ರಿಯಾ

**ದಾಃ**—ಡುದಾಞ್ ದಾನೇ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. ಚ್ಲಿಗೆ ಸಿಚಾದೇಶ. **ಗಾತಿಸ್ಥಾಘುಪಾ** (ಪಾ.ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. **ಬಹುಲಂಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪೂರ್ವದಲ್ಲಿ ಆಮಂತ್ರಿತವಿರುವುದರಿಂದ ಅದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಇದು ಪದಾದಿಯಲ್ಲಿ ಬಂದಂತಾಗುವುದರಿಂದ ಅನುದಾತ್ತಸ್ವರಬರುವುದಿಲ್ಲ. ಧಾತುಸ್ವರದಿಂದ ಉದಾತ್ತವಾಗುತ್ತದೆ.

**ದಾಶುಷೇ**—ದಾಶೃದಾನೇ. ಧಾತು. ಇದಕ್ಕೆ ಕ್ವಸುಪ್ರತ್ಯಯ ಬಂದಾಗ **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬–೧–೧೨) ಎಂಬುದರಿಂದ ನಿಪಾತ ಮಾಡಿರುವುದರಿಂದ ದ್ವಿತ್ವ, ಇಡಾಗಮಗಳು ಬರುವುದಿಲ್ಲ. ಚತುರ್ಥೀಏಕವಚನದಲ್ಲಿ ಭಸಂಜ್ಞಾ ಇರುವುದರಿಂದ ಸಂಪ್ರಸಾರಣ, ಪೂರ್ವರೂಪ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಪರೀಣಸಂ**—ಪರಿ ಉಪಸರ್ಗ. ಣಸ ವ್ಯಾಪ್ತೌ. ಧಾತು. ಪರಿ ಉಪಪದವಾಗಿರುವಾಗ **ಕ್ವಿಪ್‌ಚ** (ಪಾ.ಸೂ. ೩–೨–೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬–೩–೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶಿಶೀಹಿ**—ಶಿಞ್ ನಿಶಾನೇ. ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಅದೇಶ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಛಾಂದಸವಾಗಿ ಧಾತುವಿನ ಇಕಾರಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಆಪಿತ್ವವಿಧಾನ ಮಾಡಿರುವುದರಿಂದ ಉದಾತ್ತವಾಗುತ್ತದೆ.

---

# ಇಪ್ಪತ್ತೈದನೆಯ ಸೂಕ್ತವು

---

ಸಾಯಣಭಾಷ್ಯಂ

**ಅಗ್ನೇ ದಿವ ಇತಿ ಪಂಚರ್ಚಂ ತ್ರಯೋದಶಂ ಸೂಕ್ತಂ ವೈಶ್ವಾಮಿತ್ರಂ। ಅತ್ರೇಯಮನುಕ್ರಮಣಿಕಾ। ಅಗ್ನೇ ದಿವೋ ವೈರಾಜಮುಪಾಂತ್ಯಾಗ್ನೇಂದ್ರೀತಿ। ವಿರಾಟ್ ಛಂದಃ। ಅಗ್ನ ಇಂದ್ರಶ್ಚೇತ್ಯೇಷೇಂದ್ರಾಗ್ನೀದೇವತಾಕಾ। ಶಿಷ್ಟಾ ಆಗ್ನೇಯ್ಯಃ॥ ಅಗ್ನಿಷ್ಟೋಮ ಆಜ್ಯಶಸ್ತ್ರೇಽಗ್ನ ಇಂದ್ರಶ್ಚೇತಿ ಯಾಜ್ಯಾ। ಅಗ್ನ ಇಂದ್ರಶ್ಚ ದಾಶುಷೋ ದುರೋಣ ಇತಿ ಯಾಜ್ಯಾ। ಆ. ೫–೯। ಇತಿ ಸೂತ್ರಿತತ್ವಾತ್॥**

**ಅನುವಾದವು**—**ಅಗ್ನೇ ದಿವ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ಅನುಕ್ರಮಣಿಕೆಯಲ್ಲಿ—**ಅಗ್ನೇ ದಿವೋ ವೈರಾಜಮುಪಾಂತ್ಯಾಗ್ನೇಂದ್ರೀತಿ** ಎಂದು ಹೇಳಿರುವುದು. ಈ ಸೂಕ್ತದ **ಅಗ್ನ ಇಂದ್ರಶ್ಚ ದಾಶುಷಃ** (ಈ ಸೂಕ್ತದ ೪ನೆಯ ಋಕ್ಕು) ಎಂಬ ಋಕ್ಕಿಗೆ ಅಗ್ನಿ ಮತ್ತು ಇಂದ್ರನು ದೇವತೆಗಳು; ಉಳಿದ ಋಕ್ಕುಗಳಿಗೆ ಅಗ್ನಿಯು ದೇವತೆಯು; ವಿರಾಟ್‌ಛಂದಸ್ಸು. ಅಗ್ನಿಷ್ಟೋಮಯಾಗದಲ್ಲಿ ಆಜ್ಯಶಸ್ತ್ರಸಂಬಂಧವಾದ ಹೋಮದಲ್ಲಿ **ಅಗ್ನ ಇಂದ್ರಶ್ಚ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನ ಇಂದ್ರಶ್ಚ ದಾಶುಷೋ ದುರೋಣ ಇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೫–೯) ವಿವೃತವಾಗಿರುವುದು.

---

## ಸೂಕ್ತ—೨೫

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೫ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೫ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫

ಋಷಿಃ—ವಿಶ್ವಾಮಿತ್ರಃ ॥

ದೇವತಾ—೧-೩, ೫. ಅಗ್ನಿಃ । ೪. ಇಂದ್ರಾಗ್ನೀ ॥

ಛಂದಃ—ವಿರಾಟ್ ॥

ಸಂಹಿತಾಪಾಠಃ

ಅಗ್ನೇ ದಿವಃ ಸೂನುರಸಿ ಪ್ರಚೇತಾಸ್ತನಾ ಪೃಥಿವ್ಯಾ ಉತ ವಿಶ್ವವೇದಾಃ ।

ಋಧಗ್ದೇವಾँ ಇಹ ಯಜಾ ಚಿಕಿತ್ವಃ ॥ ೧ ॥

ಪದಪಾಠಃ

ಅಗ್ನೇ । ದಿವಃ । ಸೂನುಃ । ಅಸಿ । ಪ್ರಚೇತಾಃ । ತನಾ । ಪೃಥಿವ್ಯಾಃ । ಉತ । ವಿಶ್ವವೇದಾಃ ।

ಋಧಕ್ । ದೇವಾನ್ । ಇಹ । ಯಜ । ಚಿಕಿತ್ವಃ ॥ ೧ ॥

ಸಾಯಣಭಾಷ್ಯಂ

ವಿಶ್ವಾಮಿತ್ರಃ ಸ್ತೌತಿ । ಹೇ ಅಗ್ನೇ ವಿಶ್ವವೇದಾಃ ಸರ್ವವಿಷಯಜ್ಞಾನವಾನ್ ಪ್ರಚೇತಾಃ ಕರ್ಮವಿಷಯಜ್ಞಾನವಾಂಸ್ತ್ವಂ ದಿವೋ ದ್ಯುಲೋಕಾಭಿಮಾನಿದೇವತಾಯಾಃ ಸೂನುರಸಿ । ಪುತ್ರೋ ಭವಸಿ । ಉತ ಅಪಿ ಚ ಪೃಥಿವ್ಯಾಃ ಪೃಥಿವ್ಯಭಿಮಾನಿದೇವತಾಯಾಸ್ತನಾ ತನಯೋಽಸಿ । ಕಿಂಚ । ಚಿಕಿತ್ವಶ್ಚೇತನಾವನ್ ಹೇ ಅಗ್ನೇ ಇಹಾಸ್ಮಾಭಿಃ ಕ್ರಿಯಮಾಣೇಽಸ್ಮಿನ್ಕರ್ಮಣಿ ದೇವಾನ್ ಯಜನೀಯಾನಿಂದ್ರಾದಿದೇವಾನ್ ಋಧಕ್ ಪೃಥಕ್ ಕ್ರಮೇಣ ಯಜ । ಹವಿಷ್ಪ್ರದಾನೇನ ಪೂಜಯ ॥ ಅಸಿ । ಅಸ ಭುವೀತ್ಯಸ್ಯ ಲಟಿ ತಾಸಸ್ತ್ಯೋರ್ಲೋಪ ಇತಿ ಸಲೋಪಃ । ನಿಘಾತಃ । ವಿಶ್ವವೇದಾಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ವಿಶ್ವಸ್ಯಾಂತೋದಾತ್ತತ್ವಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ವಿಶ್ವವೇದಾಃ—ಸಕಲ ವಿಷಯಗಳನ್ನೂ ತಿಳಿದವನೂ । ಪ್ರಚೇತಾಃ—ಕರ್ಮವಿಷಯದಲ್ಲಿ ಜ್ಞಾನವುಳ್ಳವನೂ ಆದ ನೀನು । ದಿವಃ—ದ್ಯುಲೋಕಾಭಿಮಾನಿದೇವತೆಯ । ಸೂನುಃ—ಪುತ್ರನಾಗಿ । ಅಸಿ—ಆಗಿದ್ದೀಯೆ । ಉತ—ಮತ್ತು । ಪೃಥಿವ್ಯಾಃ—ಪೃಥಿವೀದೇವತೆಯ । ತನಾ—ತನಯನೂ ಆಗಿದ್ದೀಯೆ । ಇಹ—ನಮ್ಮ ಈ ಯಜ್ಞದಲ್ಲಿ । ಚಿಕಿತ್ವಂ—ಜ್ಞಾನಿಯಾದ ನೀನು । ದೇವಾನ್—ಇಂದ್ರಾದಿ ದೇವತೆಗಳನ್ನು । ಋಧಕ್—ಪ್ರತ್ಯೇಕವಾಗಿ (ಅವರವರ ಸ್ಥಾನಕ್ಕೆ ಅನುಗುಣವಾಗಿ) । ಯಜ—ಪೂಜಿಸು ॥

ಭಾವಾರ್ಥ

ಎಲೈ ಅಗ್ನಿಯೇ, ಸಕಲ ವಿಷಯಗಳನ್ನೂ ತಿಳಿದವನೂ, ಕರ್ಮವಿಷಯಕವಾದ ಜ್ಞಾನವುಳ್ಳವನೂ ಆದ ನೀನು ದ್ಯುಲೋಕಾಭಿಮಾನಿದೇವತೆಯ ಪುತ್ರನಾಗಿ ಆಗಿದ್ದೀಯೆ. ಮತ್ತು ಪೃಥಿವೀದೇವತೆಯ ತನಯನೂ ಆಗಿದ್ದೀಯೆ. ಜ್ಞಾನಿಯಾದ ನೀನು ನಮ್ಮ ಈ ಯಜ್ಞದಲ್ಲಿ ಇಂದ್ರಾದಿದೇವತೆಗಳನ್ನು ಅವರವರ ಸ್ಥಾನಕ್ಕೆ ಅನುಗುಣವಾಗಿ ಪ್ರತ್ಯೇಕವಾಗಿ ಪೂಜಿಸು.

## English Translation.

Agni you are omniscient, and the discriminator (of acts), you are the son of heaven or the son of earth: you are intelligent; worship severally the gods on this occasion.

ವಿಶೇಷವಿಷಯಗಳು

**ಪ್ರಚೇತಾಃ—ಕರ್ಮವಿಷಯಜ್ಞಾನವಾನ್** | ನಿರುಕ್ತಕಾರರು—

**ಆ ಜಂಘಂತಿ ಸಾನ್ವೇಷಾಂ ಜಘನಾँ ಉಪ ಜಿಘ್ನತೇ ।**
**ಅಶ್ವಾಜನಿ ಪ್ರಚೇತಸೋಽಶ್ವಾನ್ತ್ಸಮತ್ಸು ಚೋದಯ ॥**

(ಋ. ಸಂ. ೬–೭೫–೧೩)

ಈ ಋಕ್ಕನ್ನು ಉದಹರಿಸಿ **ಪ್ರಚೇತಸಃ** ಎಂಬ ಪದಕ್ಕೆ **ಪ್ರವೃದ್ಧಚೇತಸಃ** ಎಂದು ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು **ಪ್ರಕೃಷ್ಟಚೇತಸಃ** ಅತಿಶಯವಾದ ಜ್ಞಾನವುಳ್ಳವರೆಂದು ಅರ್ಥವನ್ನು ಹೇಳಿದ್ದಾರೆ. ಸಾಯಣರು ಅಗ್ನಿಯನ್ನು ಸಂಬೋಧಿಸಿ, ಅವನು ವಿಶ್ವವೇದಾಃ ಎಲ್ಲಾ ವಿಧವಾದ ಜ್ಞಾನವುಳ್ಳವನೂ, ಯಜ್ಞಕರ್ಮಗಳ ಜ್ಞಾನವಂತನೂ ಆಗಿರುವನೆಂದೂ, **ದಿವಃ ಸೂನುಃ** ದ್ಯುಲೋಕಾಭಿಮಾನಿದೇವತೆಯ ಪುತ್ರನಾಗಿರುವನೆಂದೂ, ಮತ್ತು **ಪೃಥಿವ್ಯಾಃತನಾ** ಪೃಥಿವ್ಯಭಿಮಾನಿದೇವತೆಯ ಪುತ್ರನಾಗಿರುವನೆಂದೂ, ಅರ್ಥವನ್ನು ವರ್ಣಿಸಿರುವರು. ತನಾ ಎಂಬ ಪದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದು. ಆದರೆ ಇಲ್ಲಿ ತನಯ ಅಥವಾ ಪುತ್ರ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ಹೇಳಿದ್ದಾರೆ. ನಿರುಕ್ತಕಾರರು ದ್ಯುಶಬ್ದವು ಅಹರ್ನಾಮಗಳಲ್ಲಿ (ನಿ. ೨–೯) ಉಕ್ತವಾಗಿದೆಯಾದರೂ, ದ್ಯುಲೋಕವೆಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ ಎಂದು ಉದಹರಿಸಿದ್ದಾರೆ. **ತ್ವಮಗ್ನೇ ದ್ಯುಭಿಃ** (ಋ. ಸಂ. ೨-೧-೧) ಎಂಬಲ್ಲಿಯೂ, **ಉಪ ಶ್ವಾಸಯಪೃಥಿವೀಮುತದ್ಯಾಂ** (ಋ. ಸಂ. ೬-೪೭-೨೯) **ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ** (ಋ. ಸಂ. ೩-೫೯-೧) ಎಂಬಲ್ಲಿಯೂ ದ್ಯುಶಬ್ದವು ಅಹಸ್ಸು, ಮತ್ತು ದ್ಯುಲೋಕ ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿದೆ.

**ಚಿಕಿತ್ವಃ—ಚೇತನಾವನ್** ಅಗ್ನಿಯು ಪ್ರಜ್ಞಾವಂತನೆಂದು ಈ ಪದದಿಂದ ಸಂಬೋಧಿಸಿದೆ. **ಇಹ ದೇವಾನ್ ಋಧಕ್ ಯಜ**—ಯಜಮಾನರು ಆಚರಿಸುತ್ತಿರುವ ಯಜ್ಞಕರ್ಮದಲ್ಲಿ ಯಾಗಾರ್ಹರಾದ ಇಂದ್ರನೇ ಮೊದಲಾದ ದೇವತೆಗಳನ್ನು, ಅಗ್ನಿಯು ಹವಿಸ್ಸನ್ನು ಅರ್ಪಿಸಿ ಪೂಜಿಸಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ ಎಂದು ವಿವರಿಸಿದೆ.

**ಚಿಕಿತ್ವಾನ್**—ಎಂಬ ಪದವೂ **ಸಮಿದ್ಧೋ ಅದ್ಯ ಮನುಷೋ ದುರೋಣೇ** (ಋ. ಸಂ. ೧೦–೧೧೦-೧) ಎಂಬಲ್ಲಿ ಚೇತನಾವಾನ್ ಎಂಬ ಅರ್ಥದಲ್ಲಿ (ನಿ. ೮-೫) ಪ್ರಯುಕ್ತವಾಗಿದೆ ಎಂದು ಉದಾಹೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಪ್ರಚೇತಾಃ**—ಚಿತೀ ಜ್ಞಾನೇ ಧಾತು. ಅಸುನ್ ಪ್ರತ್ಯಯ. **ಪುಗಂತಲಘೂಪಧಸ್ಯಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಪ್ರಕರ್ಷಂ ಚೇತಃ ಯಸ್ಯ ಸಃ ಪ್ರಚೇತಾಃ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ.

**ತನಾ**—ತನು ವಿಸ್ತಾರೇ ಧಾತು. ಕ್ವಿಪ್ ಪ್ರತ್ಯಯ. **ಸುಪಾಂಸುಲುಕ್** ಎಂಬುದರಿಂದ ಸು ವಿಭಕ್ತಿಗೆ ಆಕಾರಾದೇಶ.

**ಅಸಿ**—ಅಸ ಭುವಿ. ಧಾತು. ಲಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಎಂಬುದರಿಂದ ಧಾತು ಸಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ವಿಶ್ವವೇದಾಃ**—ವಿದ ಜ್ಞಾನೇ. ಧಾತು ಔಣಾದಿಕ ಅಸುನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತು ವಿನ ಲಘೂಪಧೆಗೆ ಗುಣ. ವಿಶ್ವಂ ವೇದಃ ಯಸ್ಯ ಸಃ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** (ಪಾ. ಸೂ. ೬-೨-೧೦೬) ಎಂಬುದರಿಂದ ವಿಶ್ವ ಶಬ್ದಕ್ಕೆ ಅಂತೋದಾತ್ತಸ್ವರ ಬರುತ್ತದೆ.

**ಯಜ**—ಯಜ ದೇವಪೂಜಾದಿಷು. ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಚಿಕಿತ್ವಃ**—ಕಿತ ಜ್ಞಾನೇ. ಧಾತು. **ಕ್ವಸುಶ್ಚ** ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಧಾತುವಿಗೆ ದ್ವಿತ್ವಾದಿ. ಕಿತ್ತ್ವದುದರಿಂದ ಲಘೂಪಧಗುಣ ಬರುವುದಿಲ್ಲ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

**ಅಗ್ನಿಃ ಸನೋತಿ ವೀರ್ಯಾಣಿ ವಿದ್ವಾನ್ತ್ಸನೋತಿ ವಾಜಮಮೃತಾಯ ಭೂಷನ್ ।**
**ಸ ನೋ ದೇವಾँ ಏಹ ವಹಾ ಪುರುಕ್ಷೋ ॥ ೨ ॥**

ಪದಪಾಠಃ

ಅಗ್ನಿಃ । ಸನೋತಿ । ವೀರ್ಯಾಣಿ । ವಿದ್ವಾನ್ । ಸನೋತಿ । ವಾಜಂ । ಅಮೃತಾಯ । ಭೂಷನ್ ।
ಸಃ । ನಃ । ದೇವಾನ್ । ಆ । ಇಹ । ವಹ । ಪುರುಕ್ಷೋ ಇತಿ ಪುರುऽಕ್ಷೋ ॥ ೨ ॥

ಸಾಯಣಭಾಷ್ಯಂ

**ವಿದ್ವಾನ್ ಕರ್ಮಾಭಿಜ್ಞೋ ಯೋಽಗ್ನಿರ್ವೀರ್ಯಾಣಿ ಪಶುಪುತ್ರಾದಿಸಂಪದ್ರೂಪಾಣಿ ಸಾಮರ್ಥ್ಯಾನಿ ಸನೋತಿ ಯಜಮಾನಾಯ ದದಾತಿ ಯಶ್ಚಾಗ್ನಿರ್ಭೂಷನ್ ಸ್ವತೇಜಸಾ ಸರ್ವಂ ಜಗದ್ಭೂಷಯನ್ ಅಲಂಕುರ್ವನ್ನಮೃತಾಯ ಮರಣಧರ್ಮರಹಿತಾಯೇಂದ್ರಾದಿದೇವಾಯ ವಾಜಂ ಹವಿರ್ಲಕ್ಷಣ-**

ಮನ್ನಂ ಸನೋತಿ ಪ್ರಯಚ್ಛತಿ ಪುರುಕ್ಷೋ ಪುರೋಡಾಶಾದಿಬಹುವಿಧಾನ್ನೋಪೇತ ಹೇ ಅಗ್ನೇ ಸ ತಾದೃಶಸ್ತ್ವಂ ನೋಽಸ್ಮಾಕಂ ಸಂಬಂಧಿನೀಹಾಸ್ಮಿನ್ಯಜ್ಞೇ ದೇವಾನ್ಯಜನೀಯಾನ್ದೇವಾನಾವಹ । ಆಹ್ವಯ॥ ಸನೋತಿ । ಷಣು ದಾನೇ । ತನಾದಿತ್ವಾದುಪ್ರತ್ಯಯಃ । ಪ್ರತ್ಯಯಸ್ವರಃ । ಪಾದಾದಿತ್ವಾದನಿಘಾತಃ । ಭೂಷನ್ । ಭೂಷ ಅಲಂಕಾರೇ । ಅಂತರ್ಭಾವಿತಣ್ಯರ್ಥಃ । ಶತುರ್ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ವಹ । ವಹೇರ್ಲೋಟಿ ರೂಪಂ । ಪುರುಕ್ಷೋ । ಪುರವಃ ಕ್ಷುಧೋಽನ್ನಾನಿ ಯಸ್ಯೇತಿ ಪುರುಕ್ಷುಃ । ಅಂತ್ಯಲೋಪಶ್ಛಾಂದಸಃ । ಸಂಬುದ್ಧೌ ಚೇತಿ ಗುಣಃ ॥

ಪ್ರತಿಪದಾರ್ಥ

**ವಿದ್ವಾನ್**—ಕರ್ಮಗಳ ವಿಷಯಗಳನ್ನು ತಿಳಿದ । **ಅಗ್ನಿಃ**—ಅಗ್ನಿಯು । **ವೀರ್ಯಾಣಿ**—ಪಶುಪುತ್ರಾದಿ ರೂಪವಾದ ಸಾಮರ್ಥ್ಯಗಳನ್ನು । **ಸನೋತಿ**—ಕೊಡುತ್ತಾನೆ (ಮತ್ತು) । **ಭೂಷನ್**—(ತನ್ನ ತೇಜಸ್ಸಿನಿಂದ) ಜಗತ್ತನ್ನೆಲ್ಲಾ ಅಲಂಕರಿಸುತ್ತ । **ಅಮೃತಾಯ**—ಮರಣಧರ್ಮರಹಿತರಾದ ಇಂದ್ರಾದಿ ದೇವತೆಗಳಿಗೆ । **ವಾಜಂ**—ಹವಿಸ್ಸಿನ ರೂಪದ ಅನ್ನವನ್ನು । **ಸನೋತಿ**—ಅರ್ಪಿಸುತ್ತಾನೆ । **ಪುರುಕ್ಷೋ**—ಪುರೋಡಾಶಾದ್ಯನ್ನೋಪೇತನಾದ ಅಗ್ನಿಯೇ । **ಸಃ**—ಅಂತಹ ನೀನು । **ನಃ**—ನಮಗೆ ಸಂಬಂಧಿಸಿದ । **ಇಹ**—ಈ ಯಜ್ಞದಲ್ಲಿ । **ದೇವಾನ್**—ಯಜ್ಞಾರ್ಹರಾದ ದೇವತೆಗಳನ್ನು । **ಆ ವಹ**—ಜೊತೆಯಲ್ಲಿ ಕರೆದುಕೊಂಡು ಬಾ ॥

ಭಾವಾರ್ಥ

ಕರ್ಮಗಳ ವಿಷಯಗಳನ್ನು ತಿಳಿದ ಅಗ್ನಿಯು ಪಶುಪುತ್ರಾದಿರೂಪವಾದ ಸಾಮರ್ಥ್ಯಗಳನ್ನು ಕೊಡುತ್ತಾನೆ. ಮತ್ತು ತನ್ನ ತೇಜಸ್ಸಿನಿಂದ ಜಗತ್ತನ್ನೆಲ್ಲಾ ಅಲಂಕರಿಸುತ್ತಾ ಮರಣಧರ್ಮರಹಿತರಾದ ಇಂದ್ರಾದಿದೇವತೆಗಳಿಗೆ ಹವಿಸ್ಸಿನರೂಪದ ಅನ್ನವನ್ನು ಅರ್ಪಿಸುತ್ತಾನೆ. ಪುರೋಡಾಶಾದ್ಯನ್ನೋಪೇತನಾದ ಎಲೈ ಅಗ್ನಿಯೇ, ಅಂತಹ ನೀನು ನಮಗೆ ಸಂಬಂಧಿಸಿದ ಈ ಯಜ್ಞದಲ್ಲಿ ಯಜ್ಞಾರ್ಹರಾದ ದೇವತೆಗಳನ್ನು ಜೊತೆಯಲ್ಲಿ ಕರೆದುಕೊಂಡು ಬಾ.

English Translation

The wise Agni bestows faculties (securing prosperity and descendants); adorning (the world with lustre) he gives (sacrificial food) to the immortals : Agni, (to whom) many oblations (are offered), bring hither to us the gods.

ವಿಶೇಷವಿಷಯಗಳು

**ಅಗ್ನಿಃ ವೀರ್ಯಾಣಿ ಸನೋತಿ—ಪಶುಪುತ್ರಾದಿಸಂಪದ್ರೂಪಾಣಿ ಸಾಮರ್ಥ್ಯಾನಿ ಯಜಮಾನಾಯ ದದಾತಿ.** ಅಗ್ನಿಯು–ಪಶು, ಪುತ್ರರು, ಐಶ್ವರ್ಯ ಎಂಬ ಇವೇ ಮೊದಲಾದ ರೂಪದಿಂದ ಯಜಮಾನರಿಗೆ ಬಲವನ್ನೂ ಶಕ್ತಿಯನ್ನೂ ಅನುಗ್ರಹಿಸುವನು ಎಂದು ಅರ್ಥವನ್ನು ವಿವರಿಸಿದೆ. ಯಾಸ್ಕರು

**ಯೋ ಅನಿಧ್ಮೋ ದೀದಯದಪ್ಸ್ವಂತರ್ಯಂ ವಿಪ್ರಾಸ ಈಳತೇ ಅಧ್ವರೇಷು ।**
**ಅಪಾನ್ನಪಾನ್ಮಧುಮತೀರಪೋ ದಾ ಯಾಭಿರಿಂದ್ರೋ ವಾವೃಧೇ ವೀರ್ಯಾಯ ॥**

(ಋ. ಸಂ. ೧೦-೩೦-೪)

ಎಂಬ ಋಕ್ಕಿನಲ್ಲಿ ವೀರ್ಯಾಯ ಎಂಬ ಶಬ್ದಕ್ಕೆ ವೀರಕರ್ಮಣೇ ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ಭೂಷನ್**—ಅಗ್ನಿಯು ತನ್ನ ತೇಜಸ್ಸಿನಿಂದ ಜಗತ್ತೆಲ್ಲವನ್ನೂ ಅಲಂಕಾರವಾಗಿರುವಂತೆ ಮಾಡುವನೆಂದು ಅರ್ಥವನ್ನು ವಿವರಿಸಿ, **ಅಮೃತಾಯ ಮರಣರಹಿತಾಯ ಇಂದ್ರಾದಿದೇವಾಯ ವಾಜಂ ಸನೋತಿ** ಮರಣವಿಲ್ಲದಿರುವ ಇಂದ್ರನೇ ಮೊದಲಾದ ದೇವತೆಗಳಿಗಾಗಿ ಯಜಮಾನರು ಅರ್ಪಿಸಿದ ಹವಿಸ್ಸಿನರೂಪವಾದ ಅನ್ನವನ್ನು ಅಗ್ನಿಯು ಒಪ್ಪಿಸುವನು ಎಂದು ಅರ್ಥವನ್ನು ವರ್ಣಿಸಿರುವರು.

**ಪುರುಕ್ಷೋ**—**ಪುರವಃ ಕ್ಷುಧಃ ಅನ್ನಾನಿ ಯಸ್ಯ । ಬಹುವಿಧಾನ್ನೋಪೇತ.** ಅಗ್ನಿಯು ಪುರೋಡಾಶವೇ ಮೊದಲಾದ ಅನೇಕ ವಿಧವಾದ ಅನ್ನವುಳ್ಳವನೆಂದು ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ.

**ನಃ ಇಹ ದೇವಾನ್ ಆ ವಹ**—ಈ ವಾಕ್ಯದಿಂದ ಯಜಮಾನರಾದ ನಾವು ಆಚರಿಸುತ್ತಿರುವ ಈ ಯಜ್ಞದಲ್ಲಿ ಅರ್ಪಿಸುವ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಯಾಗಾರ್ಹರಾದ ದೇವತೆಗಳನ್ನು ಅಗ್ನಿಯು ಆಹ್ವಾನಮಾಡಲಿ ಎಂದು ಅರ್ಥವನ್ನು ವಿವರಿಸಿದೆ. ದೇವಪದಕ್ಕೆ ಯಾಗಾರ್ಹರಾದ ದೇವತೆಗಳೆಂದು ಇಲ್ಲಿ ಅರ್ಥವನ್ನು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಸನೋತಿ**—ಷಣು ದಾನೇ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ತನಾದಿಕೃಞ್ಭ್ಯಉಃ** (ಪಾ. ಸೂ ೩-೧-೭೯) ಎಂಬುದರಿಂದ ಉ ವಿಕರಣ. ಪ್ರಥಮಪುರುಷ ಏಕವಚನಾಂತರೂಪ. ಪೂರ್ವದಲ್ಲಿ ಅಗ್ನಿ ಎಂಬ ಅತಿಜಂತವು ಇರುವುದರಿಂದ ನಿಘಾತಸ್ವರ ಬರುತ್ತದೆ. ಎರಡನೇ ಸನೋತಿ ಎಂಬುದು ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಭೂಷನ್**—ಭೂಷ ಅಲಂಕಾರೇ. ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಿಟಿಗೆ ಶತ್ರಾದೇಶ. ಇದು ಲಸಾರ್ವಧಾತುಕವಾಗಿ ಅದಂತದ ಪರದಲ್ಲಿ ಬಂದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಹ**—ವಹ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರಷಏಕವಚನಾಂತರೂಪ. ತಿಙಂತದ ನಿಘಾತಸ್ವರ ಬರುತ್ತದೆ.

**ಪುರುಕ್ಷೋ**—ಪುರವಃ ಕ್ಷುಧೋಽನ್ನಾನಿ ಯಸ್ಯ ಸಃ ಪುರುಕ್ಷುಃ ಛಾಂದಸವಾಗಿ ಕ್ಷುಧಿನ ಧಕಾರಕ್ಕೆ ಲೋಪ. ಸಂಬುದ್ಧಿಯಲ್ಲಿ ಸು ಪರವಾದಾಗ **ಸಂಬುದ್ಧೌ ಚ** ಎಂಬುದರಿಂದ ಗುಣ. **ಏಙ್ಹ್ರಸ್ವಾತ್‌ಸಂಬುದ್ಧೇಃ** ಎಂಬುದರಿಂದ ಸುವಿಗೆ ಲೋಪ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನಿರ್ದ್ಯಾವಾಪೃಥಿವೀ ವಿಶ್ವಜನ್ಯೇ ಆ ಭಾತಿ ದೇವೀ ಅಮೃತೇ ಅಮೂರಃ ।

ಕ್ಷಯನ್ವಾಜೈಃ ಪುರುಶ್ಚಂದ್ರೋ ನಮೋಭಿಃ ॥ ೩ ॥

ಪದಪಾಠಃ

ಅಗ್ನಿಃ । ದ್ಯಾವಾಪೃಥಿವೀ ಇತಿ । ವಿಶ್ವಜನ್ಯೇ ಇತಿ ವಿಶ್ವಜನ್ಯೇ । ಆ । ಭಾತಿ । ದೇವೀ ಇತಿ । ಅಮೃತೇ ಇತಿ । ಅಮೂರಃ ।

ಕ್ಷಯನ್ । ವಾಜೈಃ । ಪುರುಚಂದ್ರಃ । ನಮಃಭಿಃ ॥ ೩ ॥

ಸಾಯಣಭಾಷ್ಯಂ

ಅಮೂರೋಽಮೂಢಃ ಸರ್ವಜ್ಞಃ ಕ್ಷಯನ್ ಈಶಾನಃ ಸರ್ವಸ್ಯ ಜಗತಃ ಅತ ಏವ ಪುರುಶ್ಚಂದ್ರಃ ಪುರುಚಂದ್ರೋ ಬಹುಹಿರಣ್ಯೋಪೇತಃ । ಯದ್ವಾ । ಬಹುದೀಪ್ತಿಸ್ವರೂಪಃ । ವಾಜೈರ್ಬಲೈರ್ನಮೋಭಿರನ್ನೈಶ್ಚ ಸಹಿತಃ ಸೋಽಗ್ನಿರ್ವಿಶ್ವಜನ್ಯೇ ವಿಶ್ವಸ್ಯ ಜನಯಿತ್ರ್ಯೌ । ಯದ್ವಾ ವಿಶ್ವಂ ಜನ್ಯಮುತ್ಪಾದ್ಯಂ ಯಾಭ್ಯಾಂ ತೇ । ದೇವೀ ದ್ಯೋತಮಾನೇ ಅಮೃತೇ ಮರಣಧರ್ಮರಹಿತೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವಾಭಾತಿ । ಆ ಸಮಂತಾತ್ಪ್ರಕಾಶಯತಿ ॥ ದ್ಯಾವಾಪೃಥಿವೀ । ದಿವಃಶಬ್ದಸ್ಯ ದಿವೋ ದ್ಯಾವೇತಿ ದ್ಯಾವಾದೇಶ ಆದ್ಯುದಾತ್ತಃ । ಪೃಥಿವೀಶಬ್ದೋ ಙೀಷಂತತ್ವೇನಾಂತೋದಾತ್ತಃ । ದೇವತಾದ್ವಂದ್ವೇ ಚೇತ್ಯುಭಯೋಃ ಪ್ರಕೃತಿಸ್ವರತ್ವಂ । ವಿಶ್ವಜನ್ಯೇ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತಃ । ತತ್ಪುರುಷೇ ತು ಸ್ವರಶ್ಚಿಂತನೀಯಃ । ಆ ಭಾತಿ । ಭಾ ದೀಪ್ತೌ । ಅಂತರ್ಭಾವಿತಣ್ಯರ್ಥಃ । ಕ್ಷಯನ್ । ಕ್ಷಿ ಐಶ್ವರ್ಯೇ । ಶತುರ್ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಧಾತುಸ್ವರಃ । ಪುರುಶ್ಚಂದ್ರಃ । ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರ ಇತಿ ಸುಡಾಗಮಃ । ಶ್ಚುತ್ವೇನ ಶಕಾರಃ । ಉತ್ತರಪದಾಂತೋದಾತ್ತಪ್ರಕರಣೇ ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಮಿತ್ಯುತ್ತರಪದಾಂತೋದಾತ್ತತ್ವಂ। ಯದ್ವಾ ಸಮಾಸಸ್ಯೇತ್ಯಂತೋದಾತ್ತತ್ವಂ ॥

ಪ್ರತಿಪದಾರ್ಥ

**ಅಮೂರಃ**—ಭ್ರಾಂತಿಜ್ಞಾನವಿಲ್ಲದವನೂ (ನಿಷ್ಕೃಷ್ಟವಾದ ಜ್ಞಾನವುಳ್ಳವನೂ) । **ಕ್ಷಯನ್**—ಜಗತ್ತಿಗೆಲ್ಲಾ ಈಶ್ವರನೂ । **ಪುರುಶ್ಚಂದ್ರಃ**—ಬಹುವಿಧವಾದ ತೇಜಸ್ವಿಯೂ ಮತ್ತು । **ವಾಜೈಃ**—ಶಕ್ತಿಗಳಿಂದಲೂ । **ನಮೋಭಿಃ**—ಅನ್ನಗಳಿಂದಲೂ ಕೂಡಿರುವವನೂ ಆದ । **ಅಗ್ನಿಃ**—ಅಗ್ನಿಯು । **ವಿಶ್ವಜನ್ಯೇ**—ಜಗತ್ತಿಗೆಲ್ಲಾ ಜನನಿಯರೂ, । **ದೇವೀ**—ದೇವಾತ್ಮರೂ । **ಅಮೃತೇ**—ಮರಣಧರ್ಮರಹಿತರೂ ಆದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ಆ ಭಾತಿ**—ಸುತ್ತಲೂ ಪ್ರಕಾಶಿಸುವಂತೆ ಮಾಡುತ್ತಾನೆ.

ಭಾವಾರ್ಥ

ಭ್ರಾಂತಿಜ್ಞಾನವಿಲ್ಲದೇ ನಿಷ್ಕೃಷ್ಟವಾದ ತಿಳವಳಿಕೆಯುಳ್ಳವನೂ, ಜಗತ್ತಿಗೆಲ್ಲಾ ಈಶ್ವರನೂ, ಬಹುವಿಧವಾದ ತೇಜಸ್ವಿಯೂ ಮತ್ತು ಶಕ್ತಿಗಳಿಂದಲೂ ಅನ್ನಗಳಿಂದಲೂ ಕೂಡಿರುವವನೂ ಆದ ಅಗ್ನಿಯು ಜಗತ್ತಿಗೆಲ್ಲಾ ಜನನೀಜನಕರೂ, ಮರಣಧರ್ಮರಹಿತರೂ, ದೇವಾತ್ಮರೂ ಆದ ದ್ಯಾವಾಪೃಥಿವಿಗಳನ್ನು ಸುತ್ತಲೂ ಪ್ರಕಾಶಿಸುವಂತೆ ಮಾಡುತ್ತಾನೆ.

English Translation

Agni, the unbewildered, the ruler (of the world), the radiant, associated with vigour and food, illumines the divine immortal parents of all things, heaven and earth.

ವಿಶೇಷವಿಷಯಗಳು

**ಅಮೂರಃ ಕ್ಷಯನ್ ಪುರುಶ್ಚಂದ್ರಃ**—ಈ ಪದಗಳಿಂದ ಅಗ್ನಿಯು ವರ್ಣಿತನಾಗಿದ್ದಾನೆ. ಅಮೂರ ಎಂಬ ಪದವು ಯಾಸ್ಕರಿಂದ—

**ಮೂರಾ ಅಮೂರ ನ ವಯಂ ಚಿಕಿತ್ವೋ ಮಹಿತ್ವಮಗ್ನೇ ತ್ವಮಂಗ ವಿತ್ಸೇ |**

(ಋ. ಸಂ. ೧೦-೪-೪)

**ಮೂಢಾ ವಯಂ ಸ್ಮೋ ಅಮೂಢಸ್ತ್ವಮಸಿ ನ ವಯಂ ವಿದ್ಮೋ ಮಹತ್ತ್ವಮಗ್ನೇ ತ್ವಂ ತು ವೇತ್ಥ**— ಅಗ್ನಿಯ ಪ್ರಭೂತವಾದ ಮಾಹಾತ್ಮ್ಯವನ್ನು ಮೂಢರಾದ ನಾವು ತಿಳಿಯಲಾರೆವು. ಅಗ್ನಿಯೇ ಸರ್ವಜ್ಞನಾಗಿರುವುದರಿಂದ ಅದನ್ನು ತಿಳಿದಿರುವನು ಎಂದು ವಿವೃತವಾಗಿದೆ. ಸಾಯಣರು **ಅಮೂರ** ಶಬ್ದಕ್ಕೆ **ಅಮೂಢಃ ಸರ್ವಜ್ಞಃ** ಎಂದು ವಿವರಿಸಿ, ಅಗ್ನಿಯು ಎಲ್ಲವನ್ನೂ ತಿಳಿದಿರುವನು, ಸರ್ವಜ್ಞನಾಗಿ ಇರುವನು ಎಂದು ವರ್ಣಿಸಿದ್ದಾರೆ.

**ಕ್ಷಯನ್— ಈಶಾನಃ ಸರ್ವಸ್ಯ ಜಗತಃ** ಯಾಸ್ಕರು—

**ಪ್ರ ತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ |**
**ತಂ ತ್ವಾ ಗೃಣಾಮಿ ತವಸಮತವ್ಯಾನ್ ಕ್ಷಯಂತಮಸ್ಯ ರಜಸಃ ಪರಾಕೇ ||**

**(ಋ. ಸಂ. ೭-೧೦೦-೫)**

ಈ ಋಕ್ಕಿನಲ್ಲಿ ಕ್ಷಯಂತಂ ಎಂಬ ಪದವು ವಾಸಮಾಡು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿದ್ದಾರೆ. ಸಾಯಣರು— ಅಗ್ನಿಯು ಜಗತ್ತಿಗೆಲ್ಲಕ್ಕೂ ಪ್ರಭುವಾಗಿರುವನೆಂದು ಅರ್ಥವನ್ನು ಹೇಳಿದ್ದಾರೆ.

**ಪುರುಶ್ಚಂದ್ರಃ— ಬಹುಹಿರಣ್ಯೋಪೇತಃ | ಯದ್ವಾ ಬಹುದೀಪ್ತಿಸ್ವರೂಪಃ |** ಚಂದ್ರಶಬ್ದವು ಹಿರಣ್ಯ ನಾಮಗಳಲ್ಲಿ (ನಿ. ೨-೧೦) ಉಕ್ತವಾಗಿದೆ. ಅಗ್ನಿಯು ಪ್ರಭೂತವಾದ (ಹಿರಣ್ಯ) ಸುವರ್ಣವುಳ್ಳವನು ಅಥವಾ ಅತಿಶಯವಾದ ತೇಜಸ್ಸುಳ್ಳ ಸ್ವರೂಪದಿಂದ ಇರುವವನು ಎಂದು ಎರಡುವಿಧ ಅರ್ಥವನ್ನು ವಿವರಿಸಿದೆ.

**ವಾಜೈಃ ನಮೋಭಿಃ— ಬಲೈಃ ಅನ್ನೈಶ್ಚ ಸಹಿತಃ |** ವಾಜಶಬ್ದವು ಬಲ ಅನ್ನ ಉದಕ ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿದೆ ಎಂದು ಯಾಸ್ಕರು ವಿವರಿಸಿದ್ದಾರೆ. ನಮಶ್ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಅಗ್ನಿಯು ಬಲವುಳ್ಳವನೂ ಅನ್ನವುಳ್ಳವನೂ ಆಗಿರುವನೆಂದು ಅರ್ಥವನ್ನು ಹೇಳಿದೆ.

**ವಿಶ್ವಜನ್ಯೇ— ವಿಶ್ವಸ್ಯ ಜನಯಿತ್ರ್ಯೌ ಯದ್ವಾ ವಿಶ್ವಂ ಜನ್ಯಂ ಉತ್ಪಾದ್ಯಂ ಯಾಭ್ಯಾಂ ತೇ** ದುರ್ಗಾಚಾರ್ಯರು ವಿಶ್ವಜನ್ಯಶಬ್ದಕ್ಕೆ ಸರ್ವಲೋಕಹಿತವೆಂಬ ಅರ್ಥವನ್ನು ವರ್ಣಿಸಿದ್ದಾರೆ. ದ್ಯಾವಾಪೃಥಿವಿಗಳು ಜಗತ್ತನ್ನು ಉತ್ಪನ್ನಮಾಡುವವರು, ಅಥವಾ ಉತ್ಪನ್ನವಾಗುವ ಜಗತ್ತಿಗೆ ಕಾರಣವಾಗಿರುವವರು ಎಂದು ಅರ್ಥವನ್ನು ಹೇಳಿ, ಇವರು **ದ್ಯೋತಮಾನೇ ಮರಣಧರ್ಮರಹಿತೇ**— ಪ್ರಕಾಶವುಳ್ಳವರಾಗಿಯೂ ಮರಣವಿಲ್ಲದವರಾಗಿಯೂ ಇರುವರೆಂದೂ, ಈ ದ್ಯಾವಾಪೃಥಿವಿಗಳನ್ನು ಅಗ್ನಿಯು **ಆಭಾತಿ ಆಸಮಂತಾತ್ ಪ್ರಕಾಶಯತಿ** ಪ್ರಕಾಶಗೊಳಿಸುವನೆಂದೂ ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ದ್ಯಾವಾಪೃಥಿವೀ**— ದೌಶ್ಚ ಪೃಥಿವೀ ಚ ದ್ಯಾವಾಪೃಥಿವ್ಯೌ. **ದಿವೋದ್ಯಾವಾ** (ಪಾ. ಸೂ. ೬-೩-೨೯) ಎಂಬುದರಿಂದ ದಿವ್ ಶಬ್ದಕ್ಕೆ ದ್ಯಾವಾದೇಶ. ಇದು ಆದ್ಯುದಾತ್ತವಾಗುತ್ತದೆ. ಪೃಥಿವೀಶಬ್ದವು ಙೀಷ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತವಾಗುತ್ತದೆ. **ದೇವತಾದ್ವಂದ್ವೇಚ** (ಪಾ. ಸೂ. ೬-೨-೧೪೧) ಎಂಬುದರಿಂದ ಸಮಾಸದಲ್ಲಿ ಉಭಯಪದ ಪ್ರಕೃತಿಸ್ವರ ಬರುತ್ತದೆ. **ಸುಪಾಂ ಸುಲುಕ್** ಸೂತ್ರದಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ.

**ವಿಶ್ವಜನ್ಯೇ**— ವಿಶ್ವಂ ಜನ್ಯಂ ಯಾಭ್ಯಾಂ ತೇ. ವಿಶ್ವಜನ್ಯೇ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್** (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಇಲ್ಲಿ ತತ್ಪುರುಷ ಸಮಾಸಮಾಡಿದರೆ ಸ್ವರವಿಷಯದಲ್ಲಿ ಛಾಂದಸತ್ವವನ್ನು ಸ್ವೀಕರಿಸಬೇಕು.

**ಆಭಾತಿ**—ಭಾ ದೀಪ್ತೌ ಧಾತು. ಪ್ರಯೋಜಕವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಕ್ಷಯನ್**—ಕ್ಷಿ ಐಶ್ವರ್ಯೇ. ಧಾತು. ಲಟಿಗೆ ಶತ್ರಾದೇಶ. ಶಪ್ ನಿಮಿತ್ತವಾಗಿ ಧಾತುವಿನ ಇಕಾರಕ್ಕೆ ಗುಣ. ಅಯಾದೇಶ. **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ.

**ಪುರುಶ್ಚಂದ್ರಃ**—**ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರೇ** (ಪಾ. ಸೂ. ೬-೧-೧೫೧) ಎಂಬುದರಿಂದ ಹ್ರಸ್ವದ ಪರದಲ್ಲಿ ಚಂದ್ರರೂಪ ಉತ್ತರಪದ ಪರವಾದುದರಿಂದ ಸುಟಾಗಮ. ಚಕಾರಯೋಗವಿರುವುದರಿಂದ **ಸ್ತೋಃ ಶ್ಚುನಾ ಶ್ಚುಃ** ಎಂಬುದರಿಂದ ಅದಕ್ಕೆ ಶಕಾರಾದೇಶ. ಉತ್ತರಪದಕ್ಕೆ ಅಂತೋದಾತ್ತಸ್ವರವಿಧಾನಪ್ರಸಂಗದಲ್ಲಿ ತ್ರಿಚಕ್ರಾದೀನಾಂ **ಛಂದಸ್ಯುಪಸಂಖ್ಯಾನಮ್** ಎಂಬ ವಚನವಿರುವುದರಿಂದ ಈ ಶಬ್ದವು ತ್ರಿಚಕ್ರಾದಿಗಣದಲ್ಲಿ ಪಠಿತವಾದುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಅಥವಾ ಬಾಧಕವಿಲ್ಲದಿರುವುದರಿಂದ **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

**ಅಗ್ನ ಇಂದ್ರಶ್ಚ ದಾಶುಷೋ ದುರೋಣೇ ಸುತಾವತೋ ಯಜ್ಞಮಿಹೋಪಯಾತಂ।**
**ಅಮರ್ಧಂತಾ ಸೋಮಪೇಯಾಯ ದೇವಾ ॥ ೪ ॥**

ಪದಪಾಠಃ

ಅಗ್ನೇ । ಇಂದ್ರಃ । ಚ । ದಾಶುಷಃ । ದುರೋಣೇ । ಸುತಽವತಃ । ಯಜ್ಞಂ । ಇಹ । ಉಪ । ಯಾತಂ ।
ಅಮರ್ಧಂತಾ । ಸೋಮಽಪೇಯಾಯ । ದೇವಾ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಮಿಂದ್ರಶ್ಚೋಭೌ ದೇವಾ ದೇವೌ ಯುವಾಮಮರ್ಧಂತಾ ಅನಾಗಮನೇನ ಯಜ್ಞಹಿಂಸಾಮಕುರ್ವಂತೌ ಸಂತೌ ಸುತವತಃ ಸೋಮಾಭಿಷವಂ ಕುರ್ವತೋ ದಾಶುಷೋ ಹವಿರ್ದತ್ತವತೋ ಯಜಮಾನಸ್ಯೇಹ ದುರೋಣೇ ಗೃಹೇ ಕ್ರಿಯಮಾಣಮಿಮಂ ಯಜ್ಞಮಭಿಲಕ್ಷ್ಯ ಸೋಮಪೇಯಾಯ ಸೋಮಪಾನಾರ್ಥಮುಪ ಯಾತಂ । ಉಪ ಸಮೀಪ ಆಗಚ್ಛತಂ ॥ ಯಾತಂ । ಯಾ ಪ್ರಾಪಣ ಇತ್ಯಸ್ಯ ಲೋಟಿ ರೂಪಂ । ನಿಘಾತಃ । ಅಮರ್ಧಂತಾ । ಮೃಧು ಹಿಂಸಾಯಾಮಿತ್ಯಸ್ಯ ಶತರಿ ರೂಪಂ । ನಞಾ ಸಮಾಸಃ । ಸುಪೋ ಡಾದೇಶಃ । ತತ್ಪುರುಷೇ ನಞ್ಸ್ವರಃ । ಸೋಮಪೇಯಾಯ । ಪಾ ಪಾನೇ । ಅಚೋ ಯದಿತಿ ಯತ್ । ಈದ್ಯತೀತೀಕಾರಾದೇಶಃ । ಆರ್ಧಧಾತುಕಲಕ್ಷಣೋ ಗುಣಃ । ಕೃದುತ್ತರಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ದೇವಾ**—ದೇವತಾತ್ಮರಾದ | (**ತ್ವಂ**—ನೀನೂ) | **ಇಂದ್ರಶ್ಚ**—ಇಂದ್ರನೂ ಸಹ | **ಅಮೃಧ್ಯಂತಾ**—(ಯಜ್ಞಕರ್ತನ ವಿಷಯದಲ್ಲಿ) ಅಹಿಂಸಕರಾಗಿ | **ಸುತವತಃ**—ಸೋಮರಸವನ್ನು ಹಿಂಡತಕ್ಕವನೂ | **ದಾಶುಷಃ**—ಹವಿಸ್ಸನ್ನು ಅರ್ಪಿಸುವವನೂ ಆದ ಯಜಮಾನನ | **ಇಹ ದುರೋಣೇ**—ಈ ಯಜ್ಞಗೃಹದಲ್ಲಿ | **ಯಜ್ಞಂ**—(ನೆರವೇರಿಸಲ್ಪಡುವ) ಯಜ್ಞವನ್ನುದ್ದೇಶಿಸಿ | **ಸೋಮಪೇಯಾಯ**—ಸೋಮರಸದ ಪಾನಕ್ಕಾಗಿ | **ಉಪ ಯಾತಂ**—ಬನ್ನಿರಿ ||

ಭಾವಾರ್ಥ

ಎಲೈ ಅಗ್ನಿಯೇ, ದೇವತಾತ್ಮರಾದ ನೀನೂ ಇಂದ್ರನೂ ಸಹ ಯಜ್ಞಕರ್ತನ ವಿಷಯದಲ್ಲಿ ಅಹಿಂಸಕರಾಗಿ, ಸೋಮರಸವನ್ನು ಹಿಂಡತಕ್ಕವನೂ, ಹವಿಸ್ಸನ್ನು ಅರ್ಪಿಸುವವನೂ ಆದ ಯಜಮಾನನ ಈ ಯಜ್ಞಗೃಹದಲ್ಲಿ ನೆರವೇರಿಸಲ್ಪಡುವ ಯಜ್ಞವನ್ನುದ್ದೇಶಿಸಿ ಸೋಮರಸದ ಪಾನಕ್ಕಾಗಿ ಬನ್ನಿರಿ.

English Translation

Agni, you and Indra, gods disdaining not (our rite), come to the sacrifice in thc dwelling of the offerer of the libation to drink the Soma juice.

ವಿಶೇಷವಿಷಯಗಳು

**ಅಮೃಧ್ಯಂತಾ—ಅನಾಗಮನೇನ ಯಜ್ಞಹಿಂಸಾಮಕುರ್ವಂತೌ** | ಇಂದ್ರನೂ ಮತ್ತು ಅಗ್ನಿಯೂ, ಯಜ್ಞದಲ್ಲಿ ತಮ್ಮ ಆಗಮನದಿಂದ ಯಜ್ಞವು ನೆರವೇರುವಂತೆ ಮಾಡಿ, **ಸುತವತಃ ದಾಶುಷಃ** ಸೋಮರಸವನ್ನು ಸಿದ್ಧಮಾಡಿ, ಹವಿಸ್ಸನ್ನು ಅರ್ಪಿಸಿ, ಇರುವ ಯಜಮಾನನ ಯಜ್ಞಗೃಹದಲ್ಲಿ ಆಚರಿಸಲ್ಪಡುವ ಯಜ್ಞದಲ್ಲಿ ಸೋಮಪಾನಕ್ಕಾಗಿ ಆಗಮಿಸಲಿ ಎಂದು ಯಜಮಾನನ ಆಶಂಸನೆಯು ಇಲ್ಲಿ ವರ್ಣಿತವಾಗಿದೆ.

**ದಾಶುಷಃ—ಹವಿರ್ದತ್ತವತಃ ಯಜಮಾನಸ್ಯ** ನಿರುಕ್ತಕಾರರು—

ಓಮಾಸಶ್ಚರ್ಷಣೀಧೃತಃ (ಋ. ಸಂ. ೧-೩-೭) ಎಂಬಲ್ಲಿ ದಾಶುಷಃ ಎಂಬ ಪದಕ್ಕೆ ದತ್ತವಂತಃ ಎಂದು ಅರ್ಥವನ್ನು ವರ್ಣಿಸಿದ್ದಾರೆ. ಇಲ್ಲಿ ಈ ಪದವು ಹವಿಸ್ಸನ್ನು ಅರ್ಪಿಸಿರುವ ಯಜಮಾನನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ.

**ದುರೋಣೇ—ಗೃಹೇ** | ದುರೋಣಶಬ್ದವು ಗೃಹನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. **ದುರೋಣ ಇತಿ ಗೃಹನಾಮ ದುರವಾ ಭವಂತಿ ದುಸ್ತರ್ಪಾಃ** (ನಿ. ೪-೫) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಇಲ್ಲಿ ಯಜಮಾನರು ಯಜ್ಞವನ್ನು ಆಚರಿಸುವ ಯಾಗಶಾಲೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ಯಜ್ಞಶಬ್ದಾರ್ಥವು ಮತಾಂತರ ಪ್ರದರ್ಶನಪೂರ್ವಕವಾಗಿ ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಸುತವತಃ**—ಷುಞ್ ಅಭಿಷವೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಇದರ ಮೇಲೆ ಮತುಪ್ ಬಂದಾಗ ಅಕಾರದ ಪರದಲ್ಲಿರುವುದರಿಂದ ಮಕಾರಕ್ಕೆ ವತ್ವ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್‌ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಮರ್ಧಂತಾ**—ಮೃಧು ಹಿಂಸಾಯಾಮ್. ಧಾತು. ಲಟಿಗೆ ಶತ್ರಾದೇಶ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ನ ಮರ್ಧಂತೌ ಅಮರ್ಧಂತೌ. **ತತ್ಪುರುಷೇ** (ಪಾ. ಸೂ. ೬-೨-೨) ಎಂಬುದರಿಂದ ನಞ್ ಪ್ರಕೃತಿಸ್ವರ ಬರುತ್ತದೆ. **ಸುಪಾಂಸುಲುಕ್** ಎಂಬುದರಿಂದ ವಿಭಕ್ತಿಗೆ (ಔ) ಡಾದೇಶ.

**ಸೋಮಪೇಯಾಯ**—ಪಾ ಪಾನೇ. ಧಾತು. **ಅಚೋಯತ್** (ಪಾ. ಸೂ. ೬-೪-೬೫) ಎಂಬುದರಿಂದ ಯತ್ ಪ್ರತ್ಯಯ. ಇದು ಪರವಾದಾಗ **ಈದ್ಯತಿ** (ಪಾ. ಸೂ. ೬-೪-೬೫) ಎಂಬುದರಿಂದ ಧಾತುವಿನ ಆಕಾರಕ್ಕೆ ಈತ್ವ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಈಕಾರಕ್ಕೆ ಗುಣ. ಕಾರಕಪೂರ್ವಪದವಾಗಿರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

## ಅಗ್ನೇ ಅಪಾಂ ಸಮಿಧ್ಯಸೇ ದುರೋಣೇ ನಿತ್ಯಃ ಸೂನೋ ಸಹಸೋ ಜಾತವೇದಃ ।
## ಸಧಸ್ಥಾನಿ ಮಹಯಮಾನ ಊತೀ ॥ ೫ ॥

ಪದಪಾಠಃ

ಅಗ್ನೇ । ಅಪಾಂ । ಸಂ । ಇಧ್ಯಸೇ । ದುರೋಣೇ । ನಿತ್ಯಃ । ಸೂನೋ ಇತಿ । ಸಹಸಃ । ಜಾತಽವೇದಃ ।
ಸಧಽಸ್ಥಾನಿ । ಮಹಯಮಾನಃ । ಊತೀ ॥ ೫ ॥

ಸಾಯಣಭಾಷ್ಯಂ

ಸಹಸಃ ಸೂನೋ ಬಲಸ್ಯ ಪುತ್ರ ಜಾತವೇದೋ ಜಾತಪ್ರಜ್ಞ ಹೇ ಅಗ್ನೇ ನಿತ್ಯೋಽವಿನಾಶೀ ಊತೀ ಊತ್ಯಾ ರಕ್ಷಣೇನ ಸಧಸ್ಥಾನಿ ಪ್ರಾಣಿನಾಂ ನಿವಾಸಭೂತಾಂಲ್ಲೋಕಾನ್ಮಹಯಮಾನಃ ಪರಿಚರಂಸ್ತ್ವಮಪಾಂ ದುರೋಣೇಽಪಾಂ ಸ್ಥಾನೇಽಂತರಿಕ್ಷೇ ಸಮಿಧ್ಯಸೇ। ಸಮ್ಯಗ್ದೀಪ್ಯಸೇ ॥ ದುರೋಣೇ। ಅವ ರಕ್ಷಣ ಇತ್ಯಸ್ಮಾದೌಣಾದಿಕೋ ನಕ್ಪ್ರತ್ಯಯಃ। ಜ್ವರತ್ವರೇತ್ಯಾದಿನಾ ಊಟ್। ಗುಣಃ। ದುರೋಣ ಇತಿ ಗೃಹನಾಮ। ದುರವಾ ಭವಂತಿ। ನಿ. ೪-೫। ಇತಿ ಯಾಸ್ಕಃ। ಪ್ರತ್ಯಯಸ್ವರಃ। ಮಹಯಮಾನಃ। ಮಹ ಪೂಜಾಯಾಂ। ವ್ಯತ್ಯಯೇನ ಶಾನಚ್। ಶಾನಚೋ ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಣಿಚ್‌ಸ್ವರಃ। ಊತೀ। ಅವ ರಕ್ಷಣಾದಿಷು। ಊತಿಯೂತಿಜೂತೀತ್ಯಾದಿನಾ ನಿಪಾತನಾದಂತೋದಾತ್ತಃ। ಸುಪಾಂ ಸುಲುಗಿತಿ ತೃತೀಯಾಯಾಃ ಸವರ್ಣದೀರ್ಘಃ ॥

ಪ್ರತಿಪದಾರ್ಥ

**ಸಹಸಃ ಸೂನೋ**—ಶಕ್ತಿಪುತ್ರನೂ। **ಜಾತವೇದಃ**—ಜಾತಪ್ರಜ್ಞನೂ ಆದ। **ಅಗ್ನೇ**—ಎಲೈ ಅಗ್ನಿಯೇ। **ನಿತ್ಯಃ**—ಶಾಶ್ವತನಾದ ನೀನು। **ಊತೀ**—(ನಿನ್ನ) ರಕ್ಷಣೆಯೊಂದಿಗೆ। **ಸಧಸ್ಥಾನಿ**—ಪ್ರಾಣಿಗಳ ವಾಸಸ್ಥಾನವಾದ

ಲೋಕಗಳನ್ನೆಲ್ಲಾ | **ಮಹಯಮಾನಃ**—ಸಂಚರಿಸುತ್ತಾ | **ಅಪಾಂ ದುರೋಣೇ**—ಉದಕಗಳಿಗೆ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ | **ಸಮಿಧ್ಯಸೇ**—ಪೂರ್ಣವಾಗಿ ಪ್ರಜ್ವಲಿಸುತ್ತೀಯೆ.

ಭಾವಾರ್ಥ

ಶಕ್ತಿಪುತ್ರನೂ, ಜಾತಪ್ರಜ್ಞನೂ ಆದ ಎಲೈ ಅಗ್ನಿಯೇ, ಕ್ಷಯರಹಿತನಾಗಿ ಶಾಶ್ವತವಾದ ಸ್ಥಿತಿಯುಳ್ಳ ನೀನು ನಿನ್ನ ರಕ್ಷಣೆಯೊಂದಿಗೆ ಪ್ರಾಣಿಗಳ ವಾಸಸ್ಥಾನವಾದ ಲೋಕಗಳನ್ನೆಲ್ಲಾ ಸಂಚರಿಸುತ್ತಾ ಉದಕಗಳಿಗೆ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ ಪೂರ್ಣವಾಗಿ ಪ್ರಜ್ವಲಿಸುತ್ತೀಯೆ.

English ranslation

Agni, son of strength, Jatavedas, the eternal, traversing the inhabited regions with your protection, you are kindled in the dwelling of the waters.

ವಿಶೇಷವಿಷಯಗಳು

**ಸಹಸಃ ಸೂನೋ, ಜಾತವೇದಃ**—ಈ ಪದಗಳಿಗೆ ಅಗ್ನಿಯು ಬಲದಿಂದ ಅರಣಿಗಳಲ್ಲಿ ಮಥನದಿಂದ ಉತ್ಪನ್ನನಾಗುವ ಕಾರಣ ಬಲದ ಪುತ್ರನೆಂದೂ, ಪ್ರಜ್ಞಾವಂತನಾಗಿರುವ ಕಾರಣ ಜಾತಪ್ರಜ್ಞನೆಂದೂ, ಅರ್ಥವನ್ನು ವಿವರಿಸಿ, ಈ ಪದಗಳಿಂದ ಅಗ್ನಿಯನ್ನು ಸಂಬೋಧಿಸಿದೆ.

**ನಿತ್ಯಃ**—ನಾಶವನ್ನು ಹೊಂದದೆ ಇರುವ ಈ ಅಗ್ನಿಯು ತನ್ನ ರಕ್ಷಣೆಯಿಂದ ಎಲ್ಲವನ್ನೂ ರಕ್ಷಿಸುವವನಾಗಿ, **ಸಧಸ್ಥಾನಿ**—ಪ್ರಾಣಿಗಳು ವಾಸಮಾಡುವ ಲೋಕಗಳಲ್ಲಿ ಸಂಚರಿಸುವವನಾಗಿ, ಉದಕಗಳಿಗೆ ವಾಸಸ್ಥಾನವಾದ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವನೆಂಬ ಅರ್ಥವನ್ನು ವಿವರಿಸಿದೆ. ಸಧಸ್ಥಶಬ್ದವು ಯಾಸ್ಕರಿಂದ—

ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ |
ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ ||
(ಋ. ಸಂ. ೧೦-೪೦-೨)

ಈ ಋಕ್ಕಿನಲ್ಲಿ ಸಧಸ್ಥಶಬ್ದವು ಸಹಸ್ಥಾನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಊತಿ** ಶಬ್ದವು **ಊತಿರವನಾತ್** (ನಿ. ೫-೩) ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ರಕ್ಷಣೇ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. **ಅಪಾಂ ಸಮಿಧ್ಯಸೇ-ಅಪಾಂ ಸ್ಥಾನೇ ಅಂತರಿಕ್ಷೇ ಸಮಿಧ್ಯಸೇ** ಎಂದು ಅರ್ಥವನ್ನು ವಿವರಿಸಿರುವುದರಿಂದ ಇಲ್ಲಿ ವೈದ್ಯುತಾಗ್ನಿಯು ವರ್ಣಿತವಾಗಿರುವುದೆಂಬ ಸೂಚಿತವಾಗಿದೆ. ಪಾರ್ಥಿವಾಗ್ನಿ, ಜಾತವೇದಾಗ್ನಿ, ವೈದ್ಯುತಾಗ್ನಿ ಎಂದು ಅಗ್ನಿಗಳಲ್ಲಿರುವ ಭೇದವನ್ನು ಪ್ರದರ್ಶಿಸಿ, ಅವುಗಳಿಗೆ ಇರುವ ತಾದಾತ್ಮ್ಯವನ್ನೂ ಇಲ್ಲಿ ಸೂಚಿಸಿದೆ.

ವ್ಯಾಕರಣಪ್ರಕ್ರಿಯಾ

**ಅಪಾಂ**—ಷಷ್ಠೀ ಬಹುವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಇಧ್ಯಸೇ**—ಞಿ ಇಂಧೀ ದೀಪ್ತೌ. ಧಾತು. ಕರ್ಮಣಿಯಲ್ಲಿ ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದುರೋಣೇ**—ಅವ ರಕ್ಷಣೇ. ಧಾತು. ಇದಕ್ಕೆ ಔಣಾದಿಕ ನಕ್‌ಪ್ರತ್ಯಯ. **ಜ್ವರತ್ವರಸ್ರಿವ್ಯವಿ**—(ಪಾ. ಸೂ. ೬-೪-೨೦) ಎಂಬುದರಿಂದ ಉಪಧಾವಕಾರಗಳಿಗೆ ಊಠ್ ಪ್ರತ್ಯಯನಿಮಿತ್ತವಾಗಿ ಅದಕ್ಕೆ ಗುಣ. ದುರೋಣ

ಇತಿ ಗೃಹನಾಮ ದುರವಾ ಭವಂತಿ (ನಿರು. ೪-೫) ಎಂದು ಯಾಸ್ಕರು ಹೇಳಿರುತ್ತಾರೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನಿತ್ಯಃ—ತ್ಯಬ್‌ನೇರ್ಧ್ರುವ ಇತಿ ವಕ್ತವ್ಯಮ್** ಎಂಬ ವಚನದಿಂದ ನಿಗೆ ತ್ಯಪ್ ಪ್ರತ್ಯಯ. ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ.

**ಸೂನೋ ಸಹಸಃ—ಸುಬಾಮಂತ್ರಿತೇ ಪರಾಂಗವತ್‌ಸ್ವರೇ** ಎಂಬಲ್ಲಿ ಕೆಲವೆಡೆ ಪೂರ್ವಾಂಗವದ್ಭಾವವನ್ನೂ ಹೇಳಿರುವುದರಿಂದ ಸಮುದಾಯಕ್ಕೆ ಆಮಂತ್ರಿತನಿಘಾತಸ್ವರ ಬರುತ್ತದೆ.

**ಸಧಸ್ಥಾನಿ—ಸಧಮಾದಸ್ಥಯೋಶ್ಛಂದಸಿ** (ಪಾ. ಸೂ. ೬-೩-೯೬) ಎಂಬುದರಿಂದ ಸಹ ಎಂಬುದಕ್ಕೆ ಸಧಾದೇಶ.

**ಮಹಯಮಾನಃ**—ಮಹ ಪೂಜಾಯಾಮ್. ಧಾತು. ಲಟಿಗೆ ವ್ಯತ್ಯಯದಿಂದ ಶಾನಚಾದೇಶ. ಣಿಚಿಗೆ ಶಪ್ ನಿಮಿತ್ತವಾಗಿ ಗುಣ. ಅಯಾದೇಶ. **ತಾಸ್ಯನುದಾತ್ತೇತ್**—ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ.

**ಊತೀ**—ಅವ ರಕ್ಷಣಾದಿಷು. **ಊತಿಯೂತಿಜೂತಿ**—(ಉ. ೩-೩-೯೭) ಎಂಬುದರಿಂದ ನಿಪಾತನಮಾಡಿರುವುದರಿಂದ ಅಂತೋದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

---

# ಇಪ್ಪತ್ತಾರನೆಯ ಸೂಕ್ತವು

---

### ಸಾಯಣಭಾಷ್ಯಂ

**ವೈಶ್ವಾನರಂ ಮನಸೇತಿ ನವರ್ಚಂ ಚತುರ್ದಶಂ ಸೂಕ್ತಂ । ತತ್ರಾನುಕ್ರಮಣಿಕಾ । ವೈಶ್ವಾನರಂ ನವ ತೃಚೌ ವೈಶ್ವಾನರೀಯಮಾರುತೌ ಜಾಗತೌ ದ್ವ್ಯೃಚ ಆತ್ಮಸ್ತುತಿರ್ವಾ ಪೂರ್ವಾತ್ಮಗೀತಾಂತ್ಯೋಪಾಧ್ಯಾಯಸ್ತುತಿರಿತಿ । ವೈಶ್ವಾನರಂ ಮನಸೇತ್ಯಾದ್ಯೌ ತೃಚೌ ಜಾಗತೌ । ಪ್ರಥಮಸ್ಯ ವೈಶ್ವಾನರೋಽಗ್ನಿರ್ದೇವತಾ ದ್ವಿತೀಯಸ್ಯ ಮರುತಃ । ಸಪ್ತಮ್ಯಾದ್ಯಾಸ್ತಿಸ್ರಸ್ತ್ರಿಷ್ಟುಭಃ । ಅಗ್ನಿರಸ್ಮೀತಿ ದ್ವ್ಯೃಚಸ್ಯಾಗ್ನಿಃ ಪರಂ ಬ್ರಹ್ಮ ವಾ ದೇವತಾ । ನವಮ್ಯಾಸ್ತು ವಿಶ್ವಾಮಿತ್ರೋಪಾಧ್ಯಾಯಸ್ಯ ಸ್ತುತ್ಯತ್ವಾತ್ಸ ಏವ ದೇವತಾ । ಸಪ್ತಮೀವರ್ಜಿತಸ್ಯ ಸೂಕ್ತಸ್ಯ ವಿಶ್ವಾಮಿತ್ರ ಋಷಿಃ । ಸಪ್ತಮ್ಯಾ ಬ್ರಹ್ಮವಾಕ್ಯದ್ವಾದ್ಯಸ್ಯ ವಾಕ್ಯಂ ಸ ಋಷಿರಿತಿ ನ್ಯಾಯೇನ ಬ್ರಹ್ಮ ಋಷಿಃ ॥ ವೈಶ್ವಾನರಂ ಮನಸೇತ್ಯಾದ್ಯಸ್ತೃಚ ಆಭಿಪ್ಲವಿಕೇ ಚತುರ್ಥೇಽಹನಿ ಆಗ್ನಿಮಾರುತೇ ವೈಶ್ವಾನರೀಯನಿವಿದ್ಧಾನೇ ವಿನಿಯುಕ್ತಃ । ತೃತೀಯಸ್ಯೇತಿ ಖಂಡೇ ಸೂತ್ರಿತಂ । ವೈಶ್ವಾನರಂ ಮನಸೇತಿ ತಿಸ್ರಃ । ಆ. ೭-೭ । ಇತಿ ॥ ಅಯಮೇವ ತೃಚೋ ಬೃಹಸ್ಪತಿಸವೇಽಪ್ಯಾಗ್ನಿಮಾರುತೇ ವೈಶ್ವಾನರೀಯನಿವಿದ್ಧಾನೀಯಃ । ಪ್ರ ಯಂತು ವಾಜಾ ಇತಿ ದ್ವಿತೀಯತೃಚೋ ಬೃಹಸ್ಪತಿಸವೇ ಮಾರುತನಿವಿ-**

**ದ್ಧಾನೀಯಃ । ಉಭಯಮುಪ್ಯುಶನಸಃ ಸ್ತೋಮೇನೇತಿ ಖಂಡೇ ಸೂತ್ರಿತಂ । ವೈಶ್ವಾನರಂ ಮನಸಾಗ್ನಿಂ ನಿಚಾಯ್ಯ ಪ್ರ ಯಂತು ವಾಜಾಸ್ತವಿಷೀಭಿರಗ್ನಯಃ । ಆ. ೯-೫ । ಇತಿ ॥ ಅಗ್ನಿಚಯನೇ ಸಂಚಿತಾಗ್ನ್ಯ-ನುಶಂಸನೇಽಗ್ನಿರಸ್ಮೀತ್ಯೇಷಾ । ಅಥಾಗ್ನಿಂ ಸಂಚಿತಮನುಗೀತಮನುಶಂಸೇದಿತ್ಯುಪಕ್ರಮ್ಯ ಸೂತ್ರಿತಂ । ಅಗ್ನಿರಸ್ಮಿ ಜನ್ಮನಾ ಜಾತವೇದಾ ಇತಿ ತ್ರಿರ್ಮಧ್ಯಮಯಾ ವಾಚಾ । ಆ. ೪-೮ । ಇತಿ ॥**

**ಅನುವಾದವು**—**ವೈಶ್ವಾನರಂ ಮನಸಾ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ವೈಶ್ವಾನರಂ ನವ ತೃಚೌ ವೈಶ್ವಾನ-ರೀಯಮಾರುತೌ ಜಾಗತೌ ದ್ವ್ಯೃಚ ಆತ್ಮಸ್ತುತಿರ್ವಾ ಪೂರ್ವಾತ್ಮಗೀತಾಂತ್ಯೋಪಾಧ್ಯಾಯಸ್ತುತಿಃ** ಎಂದು ಹೇಳಿರುವುದು. ವೈಶ್ವಾನರಂ ಮನಸಾ ಎಂಬ ಈ ಸೂಕ್ತದ ಮೊದಲಿನ ಎರಡು ತೃಚಗಳು (ತೃಚವೆಂದರೆ ಮೂರು ಋಕ್ಕುಗಳು) ಜಗತೀಛಂದಸ್ಕವು. ಮೊದಲನೆಯ ತೃಚಕ್ಕೆ (೧-೩ ಋಕ್ಕುಗಳಿಗೆ) ವೈಶ್ವಾನರೋಽಗ್ನಿಯು ದೇವತೆಯು ; ಎರಡನೆಯ ತೃಚಕ್ಕೆ (೪-೬ ಋಕ್ಕುಗಳಿಗೆ) ಮರುತ್ತುಗಳು ದೇವತೆಯು. ಏಳರಿಂದ ಒಂಭತ್ತರವರೆಗಿನ ಮೂರು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅಗ್ನಿರಸ್ಮಿ ಎಂದು ಮೊದಲಾದ ಎರಡು ಋಕ್ಕುಗಳಿಗೆ (೭-೮ ಋಕ್ಕುಗಳಿಗೆ) ಅಗ್ನಿ ಅಥವಾ ಪರಬ್ರಹ್ಮವು ದೇವತೆಯು. ಒಂಭತ್ತನೆಯ ಋಕ್ಕಿನಲ್ಲಿ ವಿಶ್ವಾಮಿತ್ರಋಷಿಯು ತನ್ನ ಉಪಾಧ್ಯಾಯನನ್ನು (ಗುರುವನ್ನು) ಸ್ತುತಿಸಿರುವುದರಿಂದ ಈ ಋಕ್ಕಿಗೆ ಉಪಾಧ್ಯಾಯನೇ ದೇವತೆಯು. ಈ ಸೂಕ್ತದ ಏಳನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳಿಗೆ ವಿಶ್ವಾಮಿತ್ರನು ಋಷಿಯು. ಏಳನೆಯ ಋಕ್ಕು ಬ್ರಹ್ಮನು ಹೇಳಿದ ವಾಕ್ಯವಾಗಿರುವುದ ರಿಂದ, **ಯಸ್ಯ ವಾಕ್ಯಂ ಸ ಋಷಿಃ**-ಋಕ್ಕಿನಲ್ಲಿ ಯಾರ ವಾಕ್ಯವಿರುವುದೇ ಆ ಋಕ್ಕಿಗೆ ಅವನೇ ಋಷಿಯು ಎಂಬ ನ್ಯಾಯದ ಪ್ರಕಾರ ಈ ಏಳನೆಯ ಋಕ್ಕಿಗೆ ಬ್ರಹ್ಮನೇ ಋಷಿಯು. **ವೈಶ್ವಾನರಂ ಮನಸಾ** ಎಂಬ ಈ ಸೂಕ್ತದ ಮೊದಲನೇ ತೃಚವು (೧-೩ ಋಕ್ಕುಗಳು) ಅಭಿಪ್ಲವವೆಂಬ ಯಾಗದ ನಾಲ್ಕನೆಯ ದಿವಸ ಅಗ್ನಿಮಾರುತಶಸ್ತ್ರಮಂತ್ರ ಗಳನ್ನು ಪಠಿಸುವಾಗ ವೈಶ್ವಾನರದೇವತಾಕವಾದ ನಿವಿದ್ಧಾನಮಂತ್ರಗಳಿಗಾಗಿ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ತೃತೀಯಸ್ಯ** ಎಂಬ ಖಂಡದ—**ವೈಶ್ವಾನರಂ ಮನಸೇತಿ ತಿಸ್ರಃ** ಎಂಬ ಸೂತ್ರದಿಂದ (ಆ. ೭-೭) ವಿವೃತವಾಗಿರುವುದು. ಮತ್ತು ಮೇಲೆ ಹೇಳಿದ ಈ ಮೂರು ಋಕ್ಕುಗಳು ಬೃಹಸ್ಪತಿಸವವೆಂಬ ಯಾಗದಲ್ಲಿ ಅಗ್ನಿಮಾರುತ ಶಸ್ತ್ರಮಂತ್ರಪಠನಮಾಡುವಾಗ ವೈಶ್ವಾನರದೇವತಾಕವಾದ ನಿವಿನ್ಮಂತ್ರಗಳಿಗಾಗಿಯೂ ವಿನಿಯೋಗವಿರುವುದು. **ಪ್ರ ಯಂತು ವಾಜಾಃ** ಎಂಬ ಎರಡನೆಯ ತೃಚವು (೪-೬ ಋಕ್ಕುಗಳು) ಬೃಹಸ್ಪತಿಸವವೆಂಬ ಯಾಗದಲ್ಲಿ ಮರುದ್ದೇವ ತಾಕವಾದ ನಿವಿನ್ಮಂತ್ರಗಳಿಗಾಗಿ ವಿನಿಯೋಗವಿರುವುದು. ಈ ಎರಡು ವಿನಿಯೋಗಗಳೂ ಆಶ್ವಲಾಯನಶ್ರೌತಸೂತ್ರದ **ಉಶನಸಸ್ತೋಮೇನ** ಎಂಬ ಖಂಡದ **ವೈಶ್ವಾನರಂ ಮನಸಾಗ್ನಿಂ ನಿಚಾಯ್ಯ ಪ್ರ ಯಂತು ವಾಜಾಸ್ತವಿಷೀಭಿ-ರಗ್ನಯಃ** ಎಂಬ ಸೂತ್ರದಲ್ಲಿ (ಆ. ೯-೫) ನಿರ್ದೇಶಿಸಲ್ಪಟ್ಟಿವೆ. ಅಗ್ನಿಚಯನದಲ್ಲಿ ಸಂಚಿತಾಗ್ನಿಯನ್ನು ಅನುಶಂಸನೆ ಮಾಡುವಾಗ **ಅಗ್ನಿರಸ್ಮಿ** ಎಂಬ ಋಕ್ಕಿನ (೭ನೇ ಋಕ್ಕು) ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಸಂಚಿತಮನುಗೀತಮನುಶಂಸೇತ್** ಎಂದು ಪ್ರಾರಂಭವಾಗುವ ವಾಕ್ಯಗಳಲ್ಲಿ **ಅಗ್ನಿರಸ್ಮಿ ಜನ್ಮನಾ ಜಾತವೇದಾ ಇತಿ ತ್ರಿರ್ಮಧ್ಯಮಯಾ ವಾಚಾ** (೪-೮) ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು.

———

## ಸೂಕ್ತ—೨೬

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೬ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೬, ೨೭ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೯

ಋಷಿಃ—೧-೬, ೮-೯. ವಿಶ್ವಾಮಿತ್ರಃ । ೭. ಆತ್ಮಾ ॥

ದೇವತಾ—೧-೩. ವೈಶ್ವಾನರಃ । ೪-೬. ಮರುತಃ । ೭-೮. ಅಗ್ನಿ. ರಾತ್ಮಾ ವಾ । ೯. ವಿಶ್ವಾಮಿತ್ರೋಪಾಧ್ಯಾಯಃ ॥

ಛಂದಃ—೧-೬. ಜಗತೀ । ೭-೯. ತ್ರಿಷ್ಟುಪ್ ॥

ಸಂಹಿತಾಪಾಠಃ

ವೈಶ್ವಾನರಂ ಮನಸಾಗ್ನಿಂ ನಿಚಾಯ್ಯಾ ಹವಿಷ್ಮಂತೋ ಅನುಷತ್ಯಂ ಸ್ವರ್ವಿದಂ ।
ಸುದಾನುಂ ದೇವಂ ರಥಿರಂ ವಸೂಯವೋ ಗೀರ್ಭೀ ರಣ್ವಂ ಕುಶಿಕಾಸೋ ಹವಾಮಹೇ ॥ ೧ ॥

ಪದಪಾಠಃ

ವೈಶ್ವಾನರಂ । ಮನಸಾ । ಅಗ್ನಿಂ । ನಿಽಚಾಯ್ಯ । ಹವಿಷ್ಮಂತಃ । ಅನುಽಸತ್ಯಂ । ಸ್ವಃಽವಿದಂ ।
ಸುಽದಾನುಂ । ದೇವಂ । ರಥಿರಂ । ವಸುಽಯವಃ । ಗೀಃಽಭಿಃ । ರಣ್ವಂ । ಕುಶಿಕಾಸಃ । ಹವಾಮಹೇ ॥

ಸಾಯಣಭಾಷ್ಯಂ

ವಿಶ್ವಾಮಿತ್ರಃ ಸ್ತೌತಿ । ಹೇ ಅಗ್ನೇ ಹವಿಷ್ಮಂತಃ ಸಂಭೃತಹವಿಷ್ಕಾ ವಸೂಯವೋ ಧನಮಾತ್ಮನ ಇಚ್ಛಂತಃ ಕುಶಿಕಾಸಃ ಕುಶಿಕಗೋತ್ರೋತ್ಪನ್ನಾ ವಯಂ ವೈಶ್ವಾನರಂ । ವಿಶ್ವೇ ನರಾ ಅಗ್ನಿಪ್ರಣಯನಾದಿಕ್ರಿಯಾಯಾ ನೇತಾರೋ ಯಸ್ಯೇತಿ ವಿಶ್ವಾನರೋಽಗ್ನಿಃ । ತಸ್ಯ ಸಂಬಂಧೀ ವೈಶ್ವಾನರಃ । ಅಪತ್ಯಮಿತಿ ಯಾವತ್ । ಯದ್ವಾ ವಿಶ್ವಾನರ ಏವ ವೈಶ್ವಾನರಃ । ತದ್ಧಿತೋಽನನ್ಯಾರ್ಥೋ ರಾಕ್ಷಸವಾಯಸಾದಿವತ್ । ತಮನುಷತ್ಯಂ ಸತ್ಯೇನಾನುಗತಂ ಕರ್ಮಾನುರೂಪಫಲಪ್ರದಾನೇ ಸತ್ಯಪ್ರತಿಜ್ಞಂ ಸ್ವರ್ವಿದಂ ಸ್ವರ್ಗಾದಿಲಕ್ಷಣಫಲಸ್ಯ ಜ್ಞಾತಾರಂ ಅತ ಏವ ಸುದಾನಂ ಸುಷ್ಠು ಫಲಸ್ಯ ದಾತಾರಂ ರಥಿರಂ ರಥವಂತಂ ಅತ ಏವ ರಣ್ವಂ ಯಜ್ಞಾನ್ಗಚ್ಛಂತಂ ದೇವಂ ದ್ಯೋತಮಾನಂ ತಮಿಮಮಗ್ನಿಂ ಮನಸಾ ನಿಚಾಯ್ಯ ಅಂತಃಕರಣೇನೈವಂವಿಧಗುಣವಿಶಿಷ್ಟಸ್ತ್ವಮಿತಿ ಜ್ಞಾತ್ವಾ ಗೀರ್ಭಿಃ ಸ್ತುತಿಲಕ್ಷಣಾಭಿರ್ವಾಗ್ಭಿರ್ಹವಾಮಹೇ। ಇಹ ಕರ್ಮಣಿ ತ್ವಾಮಾಹ್ವಯಾಮಃ ॥ ವೈಶ್ವಾನರಂ । ನರೇ ಸಂಜ್ಞಾಯಾಮಿತಿ ಪೂರ್ವಪದಸ್ಯ ದೀರ್ಘತ್ವಂ । ವಿಶ್ವಾನರಸ್ಯೇದಮಿತ್ಯರ್ಥೇ ತಸ್ಯೇದಮಿತ್ಯಣ್ । ಪ್ರತ್ಯಯಸ್ವರಃ । ನಿಚಾಯ್ಯ । ಚಾಯೃ ಪೂಜಾನಿಶಾಮನಯೋರಿತ್ಯಸ್ಯ ಲ್ಯಪಿ ರೂಪಂ । ಲಿತ್ಸ್ವರಃ । ಅನುಷತ್ಯಂ । ಅನುಗತಂ ಸತ್ಯೇನ। ಅವ್ಯಾದಯಃ ಕ್ರುಷ್ಟಾ-

ದ್ಯರ್ಥೇ ತೃತೀಯೆಯೇತಿ ಸಮಾಸಃ | ಸುಷಾಮಾದಿತ್ವಾತ್ಷತ್ವಂ | ನಿರುಪಕಾದಿತ್ವಾದಂತೋದಾತ್ತತ್ವಂ | ಸುದಾನುಂ | ಡುದಾಞ್ ದಾನೇ | ದಾಭಾಭ್ಯಾಂ ನುರಿತಿ ಕರ್ತರಿ ನುಪ್ರತ್ಯಯಃ | ಪರಾದಿಶ್ಛಂದಸಿ ಬಹು-ಲಮಿತ್ಯುತ್ತರಪದಾದ್ಯುದಾತ್ತತ್ವಂ | ರಥಿರಂ | ರಥಶಬ್ದಾನ್ಮತುಬರ್ಥೇ ಮೇಧಾರಥಾಭ್ಯಾಮಿರನಿರಚೌ ವಕ್ತವ್ಯಾವಿತೀರಚ್ | ಚಿತ್ಸ್ವರಃ | ವಸೂಯವಃ | ವಸ್ವಾತ್ಮನ ಇಚ್ಛಂತ ಇತಿ ಸುಪ ಆತ್ಮನಃ ಕ್ಯಚ್ | ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ | ಕ್ಯಾಚ್ಛಂದಸೀತ್ಯುಪ್ರತ್ಯಯಃ | ಅತೋ ಲೋಪಃ| ಪ್ರತ್ಯಯ-ಸ್ವರಃ | ರಣ್ವಂ | ರವಿರ್ಗತ್ಯರ್ಥಃ | ರಣ್ವತಿ ಯಜ್ಞಾನ್ಗಚ್ಛತೀತಿ ರಣ್ವಃ | ಪಚಾದ್ಯಜಂತಃ | ಚಿತ್ಸ್ವರಃ | ಕುಶಿಕಾಸಃ | ಕುಶಿಕಶಬ್ದಾದ್ಗೋತ್ರಮಿತ್ಯರ್ಥೇ ವಿದಾದಿತ್ವಾದಞ್ | ತಸ್ಯ ಬಹುಷು ಯಞಞೋಶ್ಚ | ಪಾ. ೨-೪-೬೪ | ಇತಿ ಲುಕ್ | ಹವಾಮಹೇ | ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣಂ | ನಿಘಾತಃ ||

ಪ್ರತಿಪದಾರ್ಥ

**ಹವಿಷ್ಮಂತಃ**—(ಯಜ್ಞಕ್ಕಾಗಿ) ಹವಿಸ್ಸನ್ನು ಹೊಂದಿರುವವರೂ | **ವಸೂಯವಃ**—ಧನವನ್ನು ಇಚ್ಛಿಸುವವರೂ | **ಕುಶಿಕಾಸಃ**—ಕುಶಿಕಋಷಿಯ ವಂಶದಲ್ಲಿ ಹುಟ್ಟಿದವರೂ ಆದ ನಾವು | **ವೈಶ್ವಾನರಂ**—ವಿಶ್ವಕ್ಕೆಲ್ಲಾ ನೇತೃವಾದವನೂ | **ಅನುಷತ್ಯಂ**—ಸತ್ಯದ ಪಾಲಕನೂ | **ಸ್ವರ್ವಿದಂ**—ಸ್ವರ್ಗಾದಿರೂಪವಾದ ಫಲಗಳನ್ನು ತಿಳಿದವನೂ | **ಸುದಾನುಂ**—ಶ್ರೇಷ್ಠವಾದ ದಾತೃವೂ | **ರಥಿರಂ**—ಶೀಘ್ರಗಾಮಿಯೂ (ಅಥವಾ ರಥವಂತನೂ) | **ರಣ್ವಂ**—ಯಜ್ಞಾಭಿಮುಖವಾಗಿ ಹೋಗುವವನೂ | **ದೇವಂ**—ಪ್ರಕಾಶಮಾನನೂ ಆದ | **ಅಗ್ನಿಂ**—ಅಗ್ನಿಯನ್ನು | **ಮನಸಾ ನಿಚಾಯ್ಯ**—ಮನಸ್ಸಿನಲ್ಲಿ ಧ್ಯಾನಾತ್ಮಕವಾದ ಜ್ಞಾನದಿಂದ ತಿಳಿದು | **ಗೀರ್ಭಿಃ**—ಸ್ತುತಿರೂಪವಾದ ವಾಕ್ಕುಗಳಿಂದ | **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ ||

ಭಾವಾರ್ಥ

ಯಜ್ಞಕ್ಕಾಗಿ ಹವಿಸ್ಸನ್ನು ಹೊಂದಿರುವವರೂ, ಧನವನ್ನು ಇಚ್ಛಿಸುವವರೂ, ಕುಶಿಕಋಷಿಯ ವಂಶದಲ್ಲಿ ಹುಟ್ಟಿದವರೂ ಆದ ನಾವು ವಿಶ್ವಕ್ಕೆಲ್ಲಾ ನೇತೃವಾದವನೂ, ಸತ್ಯದ ಪಾಲಕನೂ, ಸ್ವರ್ಗಾದಿರೂಪವಾದ ಫಲಗಳನ್ನು ತಿಳಿದವನೂ, ಶ್ರೇಷ್ಠವಾದ ದಾತೃವೂ, ಶೀಘ್ರಗಾಮಿಯಾದ ರಥವನ್ನು ಹೊಂದಿರುವವನೂ, ಯಜ್ಞಾಭಿಮುಖವಾಗಿ ಹೋಗುವವನೂ ಪ್ರಕಾಶಮಾನನೂ ಆದ ಅಗ್ನಿಯನ್ನು ಮನಸ್ಸಿನಲ್ಲಿ ಧ್ಯಾನಾತ್ಮಕವಾದ ಜ್ಞಾನದಿಂದ ತಿಳಿದು ಸ್ತುತಿರೂಪವಾದ ವಾಕ್ಕುಗಳಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation

We of the race of Kushika offering oblations, desirous of wealth, having contemplated him in our minds, invoke with praises the devine Vaishwanara, the observer of truth, the cognizant of heaven, the bountiful, the charioteer, the frequenter (of sacrifices).

ವಿಶೇಷವಿಷಯಗಳು

**ವಸೂಯವಃ—ಧನಮಾತ್ಮನ ಇಚ್ಛಂತಃ** | ಯಾಸ್ಕರು—

**ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ** |

**ನಾನಾಥಿಯೋ ವಸೂಯವೋऽನು ಗಾ ಇವ ತಸ್ಥಿಮೇಂದ್ರಾಯೇಂದೋ ಪರಿ ಸ್ರವ ||**

(ಋ. ಸಂ. ೯-೧೧೨-೩)

ಈ ಋಕ್ಕಿನಲ್ಲಿ **ವಸೂಯವಃ ವಸುಕಾಮಾಃ** ಎಂದು ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಇಲ್ಲಿ ಧನವನ್ನು ತನಗೆ ಅಪೇಕ್ಷಿಸುವವರೆಂದು ಅರ್ಥವನ್ನು ವಿವರಿಸಿದ್ದಾರೆ.

**ಕುಶಿಕಾಸಃ—ಕುಶಿಕಗೋತ್ರೋತ್ಪನ್ನಾಃ** ಕುಶಿಕಗೋತ್ರದಲ್ಲಿ ಉತ್ಪನ್ನರಾದವರು ಎಂಬ ಅರ್ಥದಲ್ಲಿ ಈ ಪದವು ಪ್ರಯುಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು—

**ಉಪ ಪ್ರೇತ ಕುಶಿಕಾಶ್ಚೇತಯಧ್ವಮಶ್ವಂ ರಾಯೇ ಪ್ರ ಮುಂಚತಾ ಸುದಾಸಃ ||**
**ರಾಜಾ ವೃತ್ರಂ ಜಂಘನತ್ಪ್ರಾಗಪಾಗುದಗಥಾ ಯಜಾತೇ ವರ ಆ ಪೃಥಿವ್ಯಾಃ ||**

(ಋ. ಸಂ. ೩-೫೩-೧೧)

ಇಲ್ಲಿ ಕುಶಿಕಶಬ್ದಕ್ಕೆ **ಸ್ತುತಿಕರ್ತಾರಃ ಋತ್ವಿಜಃ** ಸ್ತುತಿಗಳನ್ನು ಪಠಿಸುವ ಋತ್ವಿಜರು ಎಂದು ಅರ್ಥವನ್ನು ಹೇಳಿದ್ದಾರೆ.

**ವೈಶ್ವಾನರಂ—ವಿಶ್ವೇ ನರಾ ಅಗ್ನಿಪ್ರಣಯನಾದಿಕ್ರಿಯಾಯಾ ನೇತಾರೋ ಯಸ್ಯೇತಿ ವಿಶ್ವಾನರೋ ಅಗ್ನಿಃ । ತಸ್ಯ ಸಂಬಂಧೀ ವೈಶ್ವಾನರಃ । ಯದ್ವಾ ವಿಶ್ವಾನರ ಏವ ವೈಶ್ವಾನರಃ ।** ಯಜ್ಞವನ್ನು ಆಚರಿಸುವವರೆಲ್ಲರೂ ಅಗ್ನಿಪ್ರಣಯನ ಎಂಬ ಕ್ರಿಯೆಯನ್ನು ಆಚರಿಸುವಕಾರಣ ಅಗ್ನಿಯು ವಿಶ್ವಾನರಶಬ್ದಸಂಬಂಧಿಯಾದವನಾಗಿ ವೈಶ್ವಾನರಶಬ್ದದಿಂದ ಬೋಧ್ಯನಾಗಿರುವನೆಂದು ಅರ್ಥವನ್ನು ವಿವರಿಸಿದ್ದಾರೆ. ಅಥವಾ ವಿಶ್ವಾನರನೇ ವೈಶ್ವಾನರನೆಂದು ವ್ಯವಹೃತನಾಗಿರುವನೆಂದೂ ವರ್ಣಿಸಿದ್ದಾರೆ. ನಿರುಕ್ತಕಾರರು ಈ ವೈಶ್ವಾನರಶಬ್ದದ ಅರ್ಥವನ್ನು ವಿಶದವಾಗಿ ವಿವರಿಸಿರುತ್ತಾರೆ.

ಅಹಶ್ಚ ಕೃಷ್ಣಮಹರರ್ಜುನಂ ಚ ವಿವರ್ತೇತೇ ರಜಸೀ ವೇದ್ಯಾಭಿಃ ।
ವೈಶ್ವಾನರೋ ಜಾಯಮಾನೋ ನ ರಾಜಾವಾತಿರಜ್ಜ್ಯೋತಿಷಾಗ್ನಿಸ್ತಮಾಂಸಿ ||

ಇಲ್ಲಿ **ವೈಶ್ವಾನರೋ ಜಾಯಮಾನ ಇವ ಉದ್ಯನ್ನಾದಿತ್ಯಃ ಸರ್ವೇಷಾಂ ಜ್ಯೋತಿಷಾಂ ರಾಜಾ ವಾಹನ್ನಗ್ನಿ-ರ್ಜ್ಯೋತಿಷಾ ತಮಾಂಸಿ ।** ಎಂದು ವೈಶ್ವಾನರಾಗ್ನಿಯನ್ನು ಆದಿತ್ಯನಿಗೆ ಹೋಲಿಸಿದ್ದಾರೆ. ದುರ್ಗಾಚಾರ್ಯರು **ಯಥಾ ಹ್ಯುದ್ಯನ್ನಾದಿತ್ಯಸ್ತಮಾಂಸಿ ಅಪಹಂತಿ ದಿವಾ ಏವಮಗ್ನಿರಪಿ ರಾತ್ರಾವಪಹಂತಿ** ಉದಯವನ್ನು ಹೊಂದಿರುವ ಸೂರ್ಯನು ಹಗಲಿನಲ್ಲಿ ಕತ್ತಲೆಯನ್ನು ನಾಶಗೊಳಿಸುವಹಾಗೆ ರಾತ್ರಿಯಲ್ಲಿ ಅಗ್ನಿಯು ಕತ್ತಲೆಯನ್ನು ನಾಶಪಡಿಸುವನು ಎಂದು ವರ್ಣಿಸಿರುವರು. ಪುತ್ತು **ವಿಶ್ವ ಏನಂ ನರಾ ನಯಂತೀತಿ ವಾ । ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।** ಎಂದು ಯಾಸ್ಕರಿಂದ ವ್ಯಾಖ್ಯಾತವಾದ ವೈಶ್ವಾನರಪದದ ಅರ್ಥವನ್ನುದುರ್ಗಾಚಾರ್ಯರು **ವಿಶ್ವಾನ್ ನರಾನ್ ಇತೋ ಲೋಕಾತ್ ಅಮುಂ ಲೋಕಂ ಸರ್ವಾಸು ಪ್ರವೃತ್ತಿಷು ನಯತಿ ।** ಜನರೆಲ್ಲರೂ ಈ ಲೋಕದಲ್ಲಿ ಆಯಾಯ ವ್ಯವಹಾರಗಳನ್ನು ಆಚರಿಸುವಂತೆ ಅವರವರನ್ನು ಪ್ರೇರಿಸುವವನು ಎಂದೂ, **ಅಥವಾ, ಸತಿ ತಸ್ಮಿನ್ ಸರ್ವಾಃ ಪ್ರವೃತ್ತಯಃ ಫಲವತ್ಯೋ ನರಾಣಾಂ ಭವಂತೀತಿ ಸರ್ವಾಸು ಪ್ರವೃತ್ತಿಷು ಅಯಮೇವ ನರಾನ್ ಪ್ರವರ್ತಯತಿ** ಜನಗಳ (ಸರ್ವವಿಧವಾದ) ಎಲ್ಲಾ ವಿಧವಾದ ಕಾರ್ಯಗಳೂ, ಫಲಕಾರಿಯಾಗುವಂತೆ ಎಲ್ಲರನ್ನೂ ಆಯಾಯ ಆವಶ್ಯಕರ್ತವ್ಯಗಳಲ್ಲಿ ಪ್ರವೃತ್ತಿಯನ್ನು ಉಂಟುಮಾಡಿ ಜನರ ಪ್ರವೃತ್ತಿಗೆ ಪ್ರವರ್ತಕನಾಗಿರುವಕಾರಣ ವೈಶ್ವಾನರನಾಗಿರುವನು ಎಂದು ಎರಡು ವಿಧವಾದ ವಿವರಣೆಯನ್ನು ಹೇಳಿದ್ದಾರೆ. **ವಿಶ್ವೇ ನರಾ ಏನಂ ನಯಂತಿ ಸ ನೀಯಮಾನಃ ತಾಸು ತಾಸು ಕ್ರಿಯಾಸು ಅಂಗಭಾವಂ ನರೈಃ**

**ಕರ್ಮ ಸಂಪದ್ಯತೇ** । ಆಯಾಯ ಯಜ್ಞಕರ್ಮಗಳಲ್ಲಿ ಆಯಾಯ ಯಜಮಾನರಿಂದ ಅಗ್ನಿಯು ಒಯ್ಯಲ್ಪಟ್ಟು ಆಯಾಯ ಕರ್ಮಗಳನ್ನು ತನಗೆ ಅಂಗವನ್ನಾಗಿ ಮಾಡಿಕೊಳ್ಳುವಕಾರಣ ಈ ಅಗ್ನಿಯನ್ನು ವೈಶ್ವಾನರನೆಂದು ವ್ಯವಹರಿಸುವರೆಂದೂ, **ಅಥವಾ ವಿಶ್ವಾನಿ ಹ್ಯಸೌ ಭೂತಾನಿ ಪ್ರತಿಯತಃ ಪ್ರವಿಷ್ಟಃ ವಿಶ್ವಾನರಃ ತಸ್ಯ ಅಪತ್ಯಂ ವೈಶ್ವಾನರಃ** ವಿಶ್ವಾನರನೆಂದು ಪ್ರಸಿದ್ಧನಾದವನು ಎಲ್ಲಾ ಪ್ರಾಣಿಗಳಲ್ಲಿಯೂ ಪ್ರವಿಷ್ಟನಾಗಿ ಜಾಠರಾಗ್ನಿರೂಪದಿಂದ ಇರುವಕಾರಣ ಆ ವಿಶ್ವಾನರನ ಪುತ್ರನು ವೈಶ್ವಾನರನೆಂದೂ ಇನ್ನೊಂದು ವಿಧವಾದ ಅರ್ಥವನ್ನು ವರ್ಣಿಸಿದೆ.

**ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾಮಭಿಶ್ರೀಃ ।**
**ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ॥**
(ಋ. ಸಂ. ೧-೯೮-೧).

ಈ ಋಕ್ಕನ್ನು ಉದಹರಿಸಿ ಯಾಸ್ಕರು—

**ಇತೋ ಜಾತಃ ಸರ್ವಮಿದಮಭಿವಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಃ ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮ ॥** (ನಿ. ೭-೨೨).

ಈ ಅಗ್ನಿಯು. ಪೃಥ್ವಿಯಲ್ಲಿ ಓಷಧಿವನಸ್ಪತಿಗಳಿಂದ ಉತ್ಪನ್ನನಾಗಿ ಎಲ್ಲವನ್ನೂ ಪ್ರಕಾಶಗೊಳಿಸುವವನಾಗಿಯೂ, ಸರ್ವಕ್ಕೂ ಉಪಕಾರಕನಾಗಿಯೂ ಇರುತ್ತಾ ತನ್ನ ತೇಜಸ್ಸಿನಿಂದ ಸೂರ್ಯನನ್ನೂ ತನಗೆ ಸಮಾನನನ್ನಾಗಿ ತಿಳಿಯುವನು. ಆದ್ದರಿಂದ ಈ ವೈಶ್ವಾನರನೆಂಬ ಅಗ್ನಿಯು ಎಲ್ಲಾ ಪ್ರಾಣಿಗಳಿಗೂ ಆಶ್ರಯಣೀಯನಾಗಿರುವನು. ಈ ವೈಶ್ವಾನರಾಗ್ನಿಯು ಸರ್ವರಿಗೂ ಉಪಕಾರವನ್ನು ಆಚರಿಸುವ ಮಂಗಲಕರವಾದ ಪ್ರವೃತ್ತಿಯಲ್ಲಿ (ವಿಷಯದಲ್ಲಿ) ನಾವು ವಿಷಯರಾಗಿ ಇರಬೇಕೆಂದು ಆಶಿಸಿರುವ ಆಶಂಸನೆಯು ವರ್ಣಿತವಾಗಿದೆ ಎಂದು ವಿವರಿಸಿದೆ. ವೈಶ್ವಾನರ ವಿದ್ಯೆಯಲ್ಲಿ ಆತ್ಮನೇ ವೈಶ್ವಾನರನಾಗಿರುವನು ಎಂದೂ, ಇಂದ್ರ, ಆದಿತ್ಯ, ವಾಯು, ಆಕಾಶ, ಉದಕ, ಪೃಥಿವೀ, ಇವರೆಲ್ಲರೂ, ಪ್ರತ್ಯೇಕವಾಗಿ ವೈಶ್ವಾನರ ಶಬ್ದದಿಂದಲೇ ವ್ಯಪದಿಷ್ಟರಾಗಿರುವರೆಂದೂ ಶಾಸ್ತ್ರಗಳಲ್ಲಿ ಉಕ್ತವಾಗಿರುವಕಾರಣ **ತತ್ಕೋ ವೈಶ್ವಾನರಃ** ಎಂಬ ಪ್ರಶ್ನೆಯನ್ನು ಉಲ್ಲೇಖಿಸಿ, **ಮಧ್ಯಮ ಇತ್ಯಾಚಾರ್ಯಾಃ** ಯಾಗಾದಿಕರ್ಮಗಳಲ್ಲಿ ವ್ಯಪದಿಷ್ಟನಾಗಿರುವ ವೈಶ್ವಾನರಾಗ್ನಿಯು ಮಧ್ಯಮಸ್ಥಾನನಾಗಿ ಇರುವನೆಂದು ನೈರುಕ್ತಪಕ್ಷವನ್ನೂ ಇತರ ಆಚಾರ್ಯರಸಮ್ಮತಿಯನ್ನೂ ಹೇಳಿದೆ.

**ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।**
**ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥**
(ಋ. ಸಂ. ೧-೫೯-೬).

ಈ ಋಕ್ಕಿನಲ್ಲಿ ಈ ವೈಶ್ವಾನರಾಗ್ನಿಯನ್ನು ವರ್ಷಕ್ರಿಯಾಕಾರಿತ್ವೇನ ಸ್ತುತಿಸಿದೆ. ಇದರಿಂದ ಈ ವೈಶ್ವಾನರಾಗ್ನಿಯು ಮಧ್ಯಮಸ್ಥಾನದೇವತೆಯೆಂದು ಅಭಿಪ್ರಾಯಪಡುವ ಕೆಲವು ಆಚಾರ್ಯರ ಮತವು ಉಕ್ತವಾಗಿದೆ.

ಪ್ರಾಚೀನರಾದ ಯಾಜ್ಞಿಕರು **ಅಥಾಸಾವಾದಿತ್ಯ ಇತಿ ಪೂರ್ವೇ ಯಾಜ್ಞಿಕಾಃ** । ಆಯಾಯ ಸವನಗಳಲ್ಲಿ **ರೋಹಾತ್ ಪ್ರತ್ಯವರೋಹಶ್ಚಿಕೀರ್ಷಿತಃ** ಎಂಬ ನ್ಯಾಯಾನುಗುಣವಾಗಿ ವೈಶ್ವಾನರೀಯಸೂಕ್ತದಿಂದ ಶಸ್ತ್ರಮಂತ್ರವನ್ನು ಪಠಿಸುವಕಾರಣ ಆದಿತ್ಯನೂ ವೈಶ್ವಾನರನೇ ಆಗಿರುವನೆಂದು ಹೇಳುವರು ಎಂದು ಮತಾಂತರವು ನಿರ್ದಿಷ್ಟವಾಗಿದೆ. ಆದಿತ್ಯನೇ ವೈಶ್ವಾನರನಾಗಿರುವನು ಎಂದು ಹೇಳುವವರು—

**ಅಥಾಪಿ ವೈಶ್ವಾನರೀಯೋ ದ್ವಾದಶಕಪಾಲೋ ಭವತ್ಯೇತಸ್ಯ ಹಿ ದ್ವಾದಶವಿಧಂ ಕರ್ಮ ।**
**ಅಥಾಪಿ ಬ್ರಾಹ್ಮಣಂ ಭವತ್ಯಸೌ ವಾ ಆದಿತ್ಯೋಽಗ್ನಿಃ ವೈಶ್ವಾನರ ಇತಿ ॥**

**ದೇವತಾಗುಣಸಾಮಾನ್ಯೇನ ಅಥಿಯಜ್ಞೇಷು ಗುಣವಿಧಯಃ ಕಲ್ಪ್ಯಂತೇ ವೈಶ್ವಾನರೀಯಶ್ಚ ಸರ್ವತ್ರ ದ್ವಾದಶಮಾಸಪ್ರವಿಭಾಗಲಕ್ಷಣಂ ಕರ್ಮ । ದೇವತಾಗುಣಕಪಾಲವಿಧ್ಯನುಕರಣಾತ್ ಪಶ್ಯಾಮ ಆದಿತ್ಯೋ ವೈಶ್ವಾನರ ಇತಿ ।** ದೇವತಾಗುಣಸ್ವರೂಪಗಳಿಗೆ ಅನುಸಾರವಾದ ಗುಣವಿಧಿಗಳನ್ನು ಕಲ್ಪನೆಮಾಡುವುದರಿಂದಲೂ, ವೈಶ್ವಾನರೀಯ ಕಪಾಲವು ದ್ವಾದಶವಿಧವಾಗಿ ದ್ವಾದಶಮಾಸಗಳಿಗನುಗುಣವಾಗಿರುವುದರಿಂದಲೂ, ಈ ದೇವತಾಗುಣ ಕಪಾಲವಿಧಿಗೆ ಉಪಷ್ಟಂಭಕವಾಗಿ "ಭವತ್ಯಸೌ ವಾ ಆದಿತ್ಯೋಽಗ್ನಿರ್ವೈಶ್ವಾನರಃ" ಎಂಬ ಬ್ರಾಹ್ಮಣವಾಕ್ಯವೂ ಇರುವುದೆಂದು ಯುಕ್ತಿಗಳನ್ನು ಉಪಪಾದಿಸುವರು. ಮತ್ತು **"ಅಥಾಪಿ ಛಾಂದೋಮಿಕಂಸೂಕ್ತಂ ಸೌರ್ಯವೈಶ್ವಾನರಂ ಭವತಿ"** ಛಾಂದೋಮಿಕವಾದ ಸೂಕ್ತವು ಸೂರ್ಯ ಮತ್ತು ವೈಶ್ವಾನರ ದೇವತಾಕವಾಗಿರುವುದು ಎಂದು ಹೇಳಿ,

**ದಿವಿ ಪೃಷ್ಟೋ ಅರೋಚತಾಗ್ನಿರ್ವೈಶ್ವಾನರೋ ಬೃಹನ್ ।**
**ಕ್ಷ್ಮಯಾ ವೃಧಾನ ಓಜಸಾ ಚನೋಹಿತೋ ಜ್ಯೋತಿಷಾ ಬಾಧತೇ ತಮಃ ॥**
(ವಾ. ಸಂ. ೩೩-೯೨)

ಈ ಋಕ್ಕನ್ನು ಉದಹರಿಸಿ ಈ ವೈಶ್ವಾನರಾಗ್ನಿಯು ದ್ಯುಲೋಕದಲ್ಲಿ ಅವಸ್ಥಿತನಾಗಿ ಪ್ರಕಾಶಿಸುವನು. ತನ್ನ ಕಾಂತಿಯಿಂದ ಮಹತ್ತ್ವಪೂರಿತನಾಗಿರುವನು ಎಂದು ವರ್ಣಿಸಿದ್ದಾರೆ. ಮತ್ತು **ಅಥಾಪಿ ಹವಿಷ್ಪಾಂತೀಯಂ ಸೂಕ್ತಂ ಸೌರ್ಯವೈಶ್ವಾನರಂ ಭವತಿ—**

**ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ವೈಶ್ವಾನರಂ ಕೇತುಮಹ್ನಾಮಕೃಣ್ವನ್ ॥**
(ಋ. ಸಂ. ೧೦-೮೮-೧೨)

ಹವಿಷ್ಪಾಂತೀಯ ಸೂಕ್ತವೂ ಸೂರ್ಯವೈಶ್ವಾನರೀಯವಾಗಿರುವುದೆಂದು ನಿರ್ದೇಶಮಾಡಿ ಅದರಲ್ಲಿ ಒಂದು ಋಕ್ಕನ್ನು ಉದಹರಿಸಿ, **ಆದಿತ್ಯ ಏವ ಹ್ಯುದಯಾಸ್ತಮಯಾಭ್ಯಾಮಹಾನಿ ಕರೋತಿ ತೇನ ವಯಮೇತೈರ್ಹೇತುಭಿಃ ಸೂರ್ಯೋ ವೈಶ್ವಾನರ ಇತಿ ಪಶ್ಯಾಮಃ** ಆದಿತ್ಯನೇ ಅಹಸ್ಸುಗಳನ್ನು ವಿಭಾಗಿಸಿ ತದನುಗುಣವಾಗಿ ಉದಯಾಸ್ತಗಳನ್ನು ಆಚರಿಸುವವನು ಎಂದು ಹೇಳಿ, ಈ ಕಾರಣಗಳಿಂದ ಆದಿತ್ಯನೇ ವೈಶ್ವಾನರನಾಗಿರುವನೆಂದು ಸಿದ್ಧಾಂತವನ್ನು ಹೇಳುತ್ತಾರೆ.

**ಅಯಮೇವಾಗ್ನಿರ್ವೈಶ್ವಾನರ ಇತಿ ಶಾಕಪೂಣಿಃ । ವಿಶ್ವಾನರಾವೇತೇ ಉತ್ತರೇ ಜ್ಯೋತಿಷೀ ವೈಶ್ವಾನರೋಽಯಂ ಯತ್ತಾಭ್ಯಾಂ ಜಾಯತೇ ॥**

ಈ ಪಾರ್ಥಿವಾಗ್ನಿಯೇ ವೈಶ್ವಾನರನಾಗಿರುವನು ಎಂದು ಶಾಕಪೂಣಿ ಎಂಬ ಆಚಾರ್ಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿ ಯುಕ್ತಿಪ್ರದರ್ಶನಪೂರ್ವಕವಾಗಿ ತಮ್ಮ ಸಿದ್ಧಾಂತವನ್ನು ವರ್ಣಿಸಿದ್ದಾರೆ. ಈ ಪಾರ್ಥಿವಾಗ್ನಿಯು ಮಧ್ಯಮಸ್ಥಾನನಾದ ವೈದ್ಯುತಾಗ್ನಿಯೂ ಅಲ್ಲ. ಆದಿತ್ಯನೂ ಅಲ್ಲ ಎಂಬ ವಿಷಯದಲ್ಲಿ ಯುಕ್ತಿಯನ್ನು ಹೇಳಿದ್ದಾರೆ.

**ಕಥಂ ನ್ವಯಮೇತಾಭ್ಯಾಂ ಜಾಯತ ಇತಿ ಯತ್ರ ವೈದ್ಯುತಃ ಶರಣಮಭಿಹಂತಿ ಯಾವದನುಪಾತ್ತೋ ಭವತಿ ಮಧ್ಯಮಧರ್ಮೈವ ತಾವದ್ಭವತ್ಯುದಕೇಂಧನಃ ಶರೀರೋಪಶಮನ ಉಪಾದೀಯಮಾನ ಏವಾಯಂ ಸಂಪದ್ಯತ ಉದಕೋಪಶಮನಃ ಶರೀರದೀಪ್ತಿಃ ॥**

ವೈದ್ಯುತಾಗ್ನಿಯು ತನ್ನ ಆಶ್ರಯವಾದ ಉದಕವನ್ನಾಗಲಿ ಮರವನ್ನಾಗಲಿ ಹೊಂದುತ್ತದೆ. ಇದು ಮನುಷ್ಯರಿಂದ ಪರಿಗೃಹೀತವಾಗಿರುವುದಿಲ್ಲ. ಇದು ಯಾವಾಗಲೂ ಉದಕದಿಂದಲೇ ಅಭಿವೃದ್ಧಿಯನ್ನು ಹೊಂದುತ್ತದೆ. ಪ್ರವರೂಪದಿಂದ ಇರುವ ಆಕಾರವನ್ನು ಹೊಂದಿರುವ ಅಥವಾ ಪೃಥಿವೀಸಂಬಂಧವಾದ ಸರ್ವದಾ (ಆಕಾರವನ್ನು) ರೂಪವನ್ನಾಗಲಿ ಅಥವಾ ರೂಪಾಂತರವನ್ನಾಗಲಿ ಹೊಂದಿರುವ ಆಶ್ರಯದಲ್ಲಿ ಉಪಶಾಂತಿಯನ್ನು ಹೊಂದುವ ಮಧ್ಯಮಧರ್ಮದಿಂದಲೇ ಇರುತ್ತದೆ. ಸ್ಥಾನ, ಜಾತಿ, ಇವುಗಳಿಂದ ಉಂಟಾಗುವ ಸ್ವಭಾವವನ್ನು ಹೊಂದದೆ, ಯಾವವಿಧವಾದ ಕಾರಣದಿಂದಲೂ ಉತ್ಪನ್ನವಾಗದಿರುವುದು ಮಧ್ಯಮವಾಗಿರುತ್ತದೆ. ಹೀಗೆ ಮಧ್ಯಮವಾಗಿರುವ ವೈದ್ಯುತಾಗ್ನಿಯು ವಿಶ್ವಾನರನೆಂದು ವ್ಯಪದಿಷ್ಟವಾಗಿರುವುದು. ಇದರ ಸಂಬಂಧವನ್ನು ಹೊಂದಿರುವ ಪಾರ್ಥಿವಾಗ್ನಿಯು ಮನುಷ್ಯರಿಂದ ಸ್ವೀಕೃತವಾಗಿ ತನ್ನ ಧರ್ಮವನ್ನು ಬಿಟ್ಟು ಮಧ್ಯಮವಾದ ವೈದ್ಯುತಾಗ್ನಿಯ ಧರ್ಮಕ್ಕಿಂತ ವ್ಯತ್ಯಾಸವಾದ ಧರ್ಮವನ್ನು ಹೊಂದಿ, ಉದಕದಿಂದ ತಿರಸ್ಕಾರವನ್ನು ಹೊಂದುವುದು, ಶರೀರಗಳಲ್ಲಿ ಕಾಂತಿಯನ್ನು ಉಂಟುಮಾಡುವುದು ಎಂಬ ಧರ್ಮಗಳಿಂದ ಯುಕ್ತವಾಗಿ ಇರುವುದು. ಇದರಿಂದ ಈ ಪಾರ್ಥಿವಾಗ್ನಿಯನ್ನು ವಿಶ್ವಾನರನಿಂದ (ಮಧ್ಯಮವಾದ ವೈದ್ಯುತಾಗ್ನಿಯಿಂದ) ಉಂಟಾಗುವಕಾರಣ ವೈಶ್ವಾನರಾಗ್ನಿ ಎಂದು ವ್ಯವಹರಿಸುವರೆಂದು ವಿವರಿಸಿದೆ. ವಿಶ್ವಾನರಸ್ಯಾಪತ್ಯಂ ವೈಶ್ವಾನರಃ ಎಂಬ ವಿಗ್ರಹವಾಕ್ಯವನ್ನೂ ಪ್ರದರ್ಶಿಸಿದೆ.

ವೈದ್ಯುತಾಗ್ನಿ ಮತ್ತು ಪಾರ್ಥಿವಾಗ್ನಿಗಳಿಗೆ ಇರುವ ವ್ಯತ್ಯಾಸವನ್ನು ಯುಕ್ತಿಗಳಿಂದ ಸಮರ್ಥನೆ ಮಾಡಿ, ವೈದ್ಯುತಾಗ್ನಿಯಿಂದ ಪಾರ್ಥಿವಾಗ್ನಿಯ ಉತ್ಪತ್ತಿಯನ್ನೂ ನಿರ್ವಚನ ಮಾಡಿ, ಆದಿತ್ಯನಿಂದ ಪಾರ್ಥಿವಾಗ್ನಿಯ ಉತ್ಪತ್ತಿಯನ್ನೂ ನಿರ್ವಚನಮಾಡಿ, ಆದಿತ್ಯನಿಂದ ಪಾರ್ಥಿವಾಗ್ನಿಯ ಉತ್ಪತ್ತಿಯನ್ನು ವಿವರಿಸಿದೆ—

> ಅಥಾದಿತ್ಯಾದುದೀಚಿಪ್ರಥಮಸಮಾವೃತ್ತೇ ಆದಿತ್ಯೇ ಕಂಸಂ ವಾ ಮಣಿಂ ವಾ ಪರಿಮೃಜ್ಯ ಪ್ರತಿಸ್ವರೇ ಯತ್ರ ಶುಷ್ಕಗೋಮಯಮಸಂಸ್ಪರ್ಶಯನ್ ಧಾರಯತಿ ತತ್ಪ್ರದೀಪ್ಯತೇ ಸೋಽಯಮೇವ ಸಂಪದ್ಯತೇ ॥
>
> (ನಿ. ೭-೨೩)

ಆದಿತ್ಯನು ಉತ್ತರಾಯಣದಲ್ಲಿರುವ ಕಾಲದಲ್ಲಿ ಸೂರ್ಯಕಾಂತಶಿಲೆಯನ್ನು ಆದಿತ್ಯರಶ್ಮಿಗೆ ಸಂಬಂಧಿಸಿದಲ್ಲಿ (ಒಣಗಿದ ಗೋಮಯದಲ್ಲಿ ಅಗ್ನಿಯು ಉತ್ಪನ್ನವಾಗುವಂತೆ) ಅಗ್ನಿಯು ಉತ್ಪನ್ನವಾಗುವುದರಿಂದ ಆದಿತ್ಯನಿಂದ ಈ ಅಗ್ನಿಯು ಉತ್ಪನ್ನವಾಗಿ ಆದಿತ್ಯನಿಗಿಂತ ಬೇರೆಯಾದ ಪಾರ್ಥಿವಾಗ್ನಿ ಎಂಬ ಹೆಸರಿನಿಂದ ವ್ಯಪದಿಷ್ಟವಾಗಿರುತ್ತದೆ ಎಂದೂ ವರ್ಣಿಸಿದೆ.

> ಅಥಾಪ್ಯಾಹ—"ವೈಶ್ವಾನರೋ ಯತತೇ ಸೂರ್ಯೇಣ" ಇತಿ । ನ ಚ ಪುನರಾತ್ಮನಾತ್ಮಾ ಸಂಯತತೇಽನ್ಯೇನೈವಾನ್ಯಃ ಸಂಯತತ ಇತ್ಯ ಇಮಮಾದಧಾತ್ಯಮುತೋಽಮುಷ್ಯ ರಶ್ಮಯಃ ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯತ್ ॥

"ವೈಶ್ವಾನರೋ ಯತತೇ ಸೂರ್ಯೇಣ" ಎಂದು ಹಿಂದೆ ಹೇಳಿರುವ ಆಚಾರ್ಯರ ಸಮ್ಮತಿಯು ಒಬ್ಬ ಆತ್ಮನಲ್ಲಿ ಇನ್ನೊಬ್ಬ ಆತ್ಮನ ಸ್ಥಿತಿಯು ವಿರುದ್ಧವಾದುದರಿಂದ, ಆದಿತ್ಯನ ರಶ್ಮಿಗಳ ಸಂಬಂಧದಿಂದ ಆದಿತ್ಯ ಮತ್ತು ಈ ಪಾರ್ಥಿವಾಗ್ನಿಗಳ ರಶ್ಮಿಗಳ ಸಂಬಂಧವು ಉಕ್ತವಾಗಿರುವುದೆಂದು ಯುಕ್ತಿಯನ್ನು ವಿವರಿಸಿರುವುದು ನಿರಾಕೃತವಾಗಿದೆ.

**ಅಥ ಯಾನ್ಯೇತಾನ್ಯೌತ್ತಮಿಕಾನಿ ಸೂಕ್ತಾನಿ ಭಾಗಾನಿ ವಾ ಸಾವಿತ್ರಾಣಿ ವಾ ಸೌರ್ಯಾಣಿ ವಾ ಪೌಷ್ಣಾನಿ ವಾ ವೈಷ್ಣವಾನಿ ವಾ ವೈಶ್ವದೇವ್ಯಾನಿ ವಾ ತೇಷು ವೈಶ್ವಾನರೀಯಾಃ ಪ್ರವಾದಾ ಅಭವಿಷ್ಯನ್ನಾದಿತ್ಯಕರ್ಮಣಾ ಚೈನಮಸ್ತೋಷ್ಯನ್ನಿತ್ಯುದೇಷೀತ್ಯಸ್ತಮೇಷೀತಿ ವಿಪರ್ಯೇಷೀತಿ ।**

ಸವಿತೃ, ಸೂರ್ಯ, ಪೂಷಾ, ವಿಷ್ಣು, ವಿಶ್ವೇದೇವತೆಗಳು, ಇವರೇ ಮೊದಲಾದ ದೇವತೆಗಳಿಗೆ ಸಂಬಂಧಪಟ್ಟ ಉತ್ತಮ ದೇವತಾವಿಷಯವಾದ ಸೂಕ್ತಗಳಲ್ಲಿ ವೈಶ್ವಾನರಾಗ್ನಿಯನ್ನೂ ಗುಣಭಾವದಿಂದ ಮಂತ್ರಗಳಲ್ಲಿ ಸ್ತುತಿಸಲಾಗಿದೆ. ಆದಿತ್ಯನ (ಧರ್ಮವನ್ನು) ಉದಯ, ಅಸ್ತ, ಇವುಗಳನ್ನು ಪ್ರಾಧಾನ್ಯರೀತಿಯಿಂದ ಮಂತ್ರಗಳಲ್ಲಿ ಹೇಳಿರುವಂತೆ ಈ ವೈಶ್ವಾನರಾಗ್ನಿಯ ವಿಷಯದಲ್ಲಿ ಉದಯಾಸ್ತವಿಪರ್ಯಾಸಗಳನ್ನು ಹೇಳದಿರುವಕಾರಣ ಈ ವೈಶ್ವಾನರಾಗ್ನಿಯು ಆದಿತ್ಯನೆಂದು ಹೇಳಿರುವುದು ನಿರಾಕೃತವಾಗಿದೆ.

**ಆಗ್ನೇಯೇಷ್ವೇವ ಹಿ ಸೂಕ್ತೇಷು ವೈಶ್ವಾನರೀಯಾಃ ಪ್ರವಾದಾ ಭವಂತಿ ।**
**ಅಗ್ನಿಕರ್ಮಣಾ ಚೈನಂ ಸ್ತೌತೀತಿ ವಹಸೀತಿ ಪಚಸೀತಿ ದಹಸೀತಿ ॥**

(ನಿ. ೭-೨೩)

**ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ।**
**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥**

(ಋ. ಸಂ. ೧-೧೬೪-೫೧)

ಅಗ್ನಿವಿಷಯಕವಾದ ಸೂಕ್ತಗಳಲ್ಲಿಯೇ ವೈಶ್ವಾನರಾಗ್ನಿಯ ಮಹಿಮೆಯನ್ನು ಸ್ತುತಿಸಿದೆ. ಆಹುತಿ ವಹನ, ಪಚನ, ದಾಹಕ್ರಿಯೆಗಳು ಅಗ್ನಿಕರ್ಮಗಳಾಗಿ ಪ್ರಾಧಾನ್ಯರೀತಿಯಿಂದಲೇ ವೈಶ್ವಾನರಾಗ್ನಿಯ ವಿಷಯಕವಾಗಿಯೇ ಉಕ್ತವಾಗಿವೆ ಎಂದು ವರ್ಣಿಸಿ, **ಏಕಮೇವೋದಕಂ ಪರ್ಯಾಯೇಣೋತ್ತರಾಯಣದಕ್ಷಿಣಾಯನಯೋಃ ಜಗದ್ಯಾತ್ರಾಸಿದ್ಧಯೇ ತದುದೇತಿ ಚಾವೈತಿ ಚ ವರ್ಷಕರ್ಮಭಾವೇನ । ಆಹುತಯೋ ಹ್ಯಗ್ನೌ ಪ್ರಕ್ಷಿಪ್ತಾಃ ತೇನ ದಗ್ಧಾಸ್ತಾಃ ಸ್ವಾರ್ಚಿರ್ಭಿಃ ಕೃತ್ವೋದಕಭಾವಮಾಪಾದ್ಯ ಪರಮಂ ಸೂಕ್ಷ್ಮಂ ದೇವೋಪಭೋಗಯೋಗ್ಯಂ ದ್ಯಾಂ ಪ್ರತಿ ವರ್ಷಭಾವೇನೋನ್ನೀಯಂತೇ ತಲ್ಲೋಕನಿವಾಸಿನಾಂ ತೃಪ್ತಯೇ ತತಸ್ತ ಇಹ ವರ್ಷಂ ಪ್ರಕಲ್ಪಯಂತಿ ।** ಉದಕವು ಜಗತ್ತಿನ ರಕ್ಷಣೆಗಾಗಿ ಉತ್ತರಾಯನ ದಕ್ಷಿಣಾಯನಗಳಲ್ಲಿ ವೃಷ್ಟಿರೂಪದಿಂದ ಊರ್ಧ್ವ ಅಧೋಗಮನಭಾವವನ್ನು ಹೊಂದುವುದು ಎಂದೂ, ಅಗ್ನಿಯಲ್ಲಿ ಅರ್ಪಿಸಿದ ಆಹುತಿಗಳು ಅಗ್ನಿಯಿಂದ ದಗ್ಧವಾಗಿ ಅಗ್ನಿಯ ರಶ್ಮಿಗಳ ಮೂಲಕ ಉದಕಭಾವವನ್ನು ಹೊಂದಿ, ಅತಿಸೂಕ್ಷ್ಮವಾದ ಮತ್ತೂ ನಿರತಿಶಯವಾದ ರೂಪದಿಂದ ದೇವತೆಗಳಿಗೆ ತೃಪ್ತಿಯನ್ನು ಉಂಟುಮಾಡುವುದರ ಮೂಲಕ ದೇವಲೋಕವನ್ನೂ, ವೃಷ್ಟಿಯ ಮೂಲಕ ಪೃಥ್ವಿಯನ್ನೂ ರಕ್ಷಿಸುವುದು ಎಂದೂ, ವರ್ಣಿಸಿ, ವರ್ಷಕರ್ಮವು ಅಗ್ನಿಯಿಂದಲೇ ಉಂಟಾಗಿರುವ ಕಾರಣದಿಂದ ಆದಿತ್ಯನೇ ವರ್ಷಕರ್ಮವನ್ನು ಆಚರಿಸುವನೆಂದು ಹೇಳಿರುವ ಆಚಾರ್ಯರ ಸಮ್ಮತಿಯು ನಿರಾಕೃತವಾಗಿದೆ. " ಕೃಷ್ಣಂ ನಿಯಾನಂ ಹರಯಃ ಸುಪರ್ಣಾಃ " (ಋ. ಸಂ. (೧-೧೬೪-೪೭) ಎಂಬ ಋಕ್ಕನ್ನೂ ಉದಹರಿಸಿ, **ಯಸ್ಮಿನ್ನಗ್ನಿರಾದಿತ್ಯೋ ವರ್ಷಕರ್ಮಣಾ ಸ್ತೂಯತೇ** ಅಗ್ನಿಯೇ ಆದಿತ್ಯನರೂಪದಿಂದ ವೃಷ್ಟಿಪ್ರದನಾಗಿರುವನೆಂದು ವಿವರಿಸಿದೆ.

**ವೈಶ್ವಾನರೀಯೋ ದ್ವಾದಶಕಪಾಲೋ ಭವತೀತ್ಯನಿರ್ವಚನಂ ಕಪಾಲಾನಿ ಭವಂತ್ಯಸ್ತಿ ಹಿ ಸೌರ್ಯ ಏಕ ಕಪಾಲಃ ಪಂಚಕಪಾಲಶ್ಚ । ಬಹುಭಕ್ತಿವಾದೀನಿ ಹಿ ಬ್ರಾಹ್ಮಣಾನಿ ಭವಂತಿ— ಪೃಥಿವೀ ವೈಶ್ವಾನರಃ, ಸಂವತ್ಸರೋ ವೈಶ್ವಾನರೋ ಬ್ರಾಹ್ಮಣೋ ವೈಶ್ವಾನರ ಇತಿ ॥**

(ನಿ. ೭-೨೪)

ಹಿಂದೆ ಉಕ್ತವಾಗಿರುವ ಆದಿತ್ಯನನ್ನು ವೈಶ್ವಾನರನೆಂದು ಹೇಳುವ ಯುಕ್ತಿಗಳೂ, ಬ್ರಾಹ್ಮಣವಾಕ್ಯವೂ ಉದಾಹೃತವಾಗಿರುವ ಪೃಥಿವೀ, ಸಂವತ್ಸರ, ಬ್ರಾಹ್ಮಣ ಇವರಿಗೂ ವೈಶ್ವಾನರತ್ವಪ್ರತಿಪಾದಕವಾದ ಬ್ರಾಹ್ಮಣವಾಕ್ಯದಿಂದ ನಿರಾಕೃತವಾಗಿ, " ಹವಿಷ್ಪಾಂತಂ " ಎಂಬ ಸೂಕ್ತವು ಅಗ್ನಿ ಪರವಾಗಿರುವುದು ಎಂದು ಅರ್ಥವನ್ನು ವಿವರಿಸಿದೆ.

**ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪ ತಸ್ಥುರ್ಋಗ್ಮಿಯಂ ।**
**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ॥**
(ಋ. ಸಂ. ೬-೮-೪)

ಈ ಋಕ್ಕಿನಲ್ಲಿ ವೈಶ್ವಾನರಾಗ್ನಿಯನ್ನು ಮಹತ್ವಪೂರಿತರಾದ ದೇವತೆಗಳು ಅಂತರಿಕ್ಷದಲ್ಲಿ ಸ್ತುತಿಮಾಡಿರುವರು ಎಂದು ವರ್ಣಿಸಿ,

**ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಸ್ಸೂರ್ಯೋ ಜಾಯತೇ ಪ್ರಾತರುದ್ಯನ್ ।**
**ಮಾಯಾಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ॥**
(ಋ. ಸಂ. ೧೦-೮೮-೬)

ಈ ಪಾರ್ಥಿವಾಗ್ನಿಯು ವೈಶ್ವಾನರನೆಂಬ ವ್ಯಪದೇಶದಿಂದ, ಎಲ್ಲಾ ಪ್ರಾಣಿಗಳಲ್ಲಿಯೂ ಪ್ರಧಾನಭಾವದಿಂದ ಇರುವನು. ಭೂಮಿಯಲ್ಲಿ ಪ್ರಾಧಾನ್ಯವನ್ನು ಹೊಂದಿರುವನು. ರಾತ್ರಿಯಲ್ಲಿ ತನ್ನ ಕಾಂತಿಯಿಂದ ಬೆಳಗುತ್ತಿರುವನು. ಪ್ರಾತಃಕಾಲದಲ್ಲಿ ಉದಯವನ್ನು ಹೊಂದಿ ಸೂರ್ಯರೂಪದಿಂದ ಪ್ರಕಾಶಿಸುತ್ತಿರುವನು. ಇವನು ಆದಿತ್ಯರೂಪದಿಂದಲೂ, ಅಗ್ನಿಯ ರೂಪದಿಂದಲೂ ತನ್ನ ಕರ್ತವ್ಯವನ್ನು ಆಚರಿಸುತ್ತಾ ಆಯಾಯ ಸ್ಥಾನಗಳಲ್ಲಿ ಸಂಚರಿಸುತ್ತಿರುವನು ಎಂದು ವರ್ಣಿಸಿದೆ.

ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಚ್ಛಕ್ತಿಭೀ ರೋದಸಿಪ್ರಾಂ ।
ತಮೂ ಅಕೃಣ್ವಂಸ್ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ॥
(ಋ. ಸಂ. ೧೦-೮೮-೧೦)

ಜಗತ್ತಿನ ರಕ್ಷಣೆಗಾಗಿ ಸರ್ವಾತ್ಮಭಾವದಿಂದ ಇರುವ ಈ ಅಗ್ನಿಯನ್ನು ದೇವತೆಗಳು ಯಜಮಾನರೂಪದಿಂದ ಹವಿಸ್ಸನ್ನು ಅರ್ಪಿಸಿ, ಪೃಥಿವೀ, ಅಂತರಿಕ್ಷ, ದ್ಯುಲೋಕಗಳಲ್ಲಿ, ಮೂರು ವಿಧವಾಗಿ ರಕ್ಷಕನನ್ನಾಗಿ ತಿಳಿದು ಪೂಜಿಸುತ್ತಿರುವರು ಎಂದು ವಿವರಿಸಿದೆ.

**ಯದೇದೇನಮದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿತೇಯಂ ।**
(ಋ. ಸಂ. ೧೦-೮೮-೧೧)

ಎಂಬ ಋಕ್ಕಿನಲ್ಲಿ ಈ ವೈಶ್ವಾನರಾಗ್ನಿಯನ್ನು ಆದಿತ್ಯನೆಂದು ದೇವತೆಗಳು ಪೂಜಿಸುವರೆಂದು ವರ್ಣಿಸಿ, **ಯತ್ರಾ ವದೇತೇ ಅವರಃ ಪರಶ್ಚ** (ಋ. ಸಂ. ೧೦-೮೮-೧೭) ಎಂಬ ಋಕ್ಕಿನಿಂದ ಈ ವೈಶ್ವಾನರಾಗ್ನಿಯೇ ಮಧ್ಯಮಸ್ಥಾನನಾಗಿರುವನೆಂದು ವಿವರಿಸಿದೆ.

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರಃ ।**
(ನಿ. ೭-೩೧)

ಎಂಬ ವಾಕ್ಯದಿಂದ ಆಯಾಯ ಮಂತ್ರಗಳಿಂದ ಹವಿಸ್ಸನ್ನು ಸಿದ್ಧಪಡಿಸಿ ಪಾರ್ಥಿವಾಗ್ನಿಯನ್ನೇ ವೈಶ್ವಾನರಾಗ್ನಿ ಎಂದು ಯಜಮಾನರು ಪೂಜಿಸುವರೆಂದು ಶಾಕಪೂಣಿಆಚಾರ್ಯರ ಮತವನ್ನು ನಿರುಕ್ತಕಾರರು ಸಿದ್ಧಾಂತಮಾಡಿ ಹೇಳಿದ್ದಾರೆ. ವೈಶ್ವಾನರಾಗ್ನಿಯ ವಿಷಯವು ಮೊದಲನೆಯ ಸಂಪುಟದಲ್ಲಿ ವಿಸ್ತಾರವಾಗಿ ವಿವರಿಸಿದೆ.

ಸಾಯಣರು ಇಲ್ಲಿ ವಿಶ್ವಾನರ ಏವ ವೈಶ್ವಾನರಃ ಎಂದು ವಿಗ್ರಹವಾಕ್ಯವನ್ನು ಪ್ರದರ್ಶಿಸಿ ತದ್ಧಿತಪ್ರತ್ಯಯವು ಸ್ವಾರ್ಥದಲ್ಲಿ ಬಂದಿರುತ್ತದೆ ಎಂದು ಹೇಳಿ **ರಾಕ್ಷಸವಾಯಸಾದಿವತ್** ರಾಕ್ಷಸನೇ ವಾಯಸವಾಗಿರುವನು ಎಂದು ವ್ಯವಹಾರವಿರುವಂತೆ ವೈಶ್ವಾನರಪದದ ವ್ಯುತ್ಪತ್ತಿಯು ಇರುವುದು ಎಂದು ವರ್ಣಿಸಿದ್ದಾರೆ.

**ಅನುಷತ್ಯಂ—ಸತ್ಯೇನಾನುಗತಂ** | ತನ್ನನ್ನು ಸೇವಿಸುವವರಿಗೆ ಅವರವರ ಕರ್ಮಗಳಿಗೆ ಅನುರೂಪವಾದ ಫಲವನ್ನು ಅನುಗ್ರಹಿಸುವ ವಿಷಯದಲ್ಲಿ ಸತ್ಯಪ್ರತಿಜ್ಞೆಯುಳ್ಳವನಾಗಿ ಅಗ್ನಿಯು ಇರುವನು ಎಂದೂ, **ಸ್ವರ್ವಿದಂ—** ಸ್ವರ್ಗವೇ ಮೊದಲಾದ ಫಲಗಳನ್ನು ಆಯಾಯ ಅಧಿಕಾರಿಗಳಿಗನುಗುಣವಾಗಿ ಅನುಗ್ರಹಿಸುವ ಜ್ಞಾನವಂತನೆಂದೂ, ವರ್ಣಿಸಿ, **ಸುದಾನುಂ** ಅಗ್ನಿಯು ದಾನಶೀಲನಾಗಿರುವನು, **ರಥಿರಂ,** -**ರಣ್ವಂ** ರಥವುಳ್ಳವನಾದಕಾರಣ ಯಜ್ಞಗಳಿಗೆ ಆಗಮಿಸುವವನೂ ಮತ್ತು **ದೇವಂ** ಕಾಂತಿಯಿಂದ ಬೆಳಗುತ್ತಿರುವವನು ಎಂದು ಅಗ್ನಿಯ ಮಹಾತ್ಮ್ಯವನ್ನು **ಮನಸಾ ನಿಚಾಯ್ಯ** ಯಜಮಾನರಾದ ಮಂತ್ರದ್ರಷ್ಟೃಗಳು ತಮ್ಮ ಮನಸ್ಸಿನಿಂದ ತಿಳಿದು ಅಗ್ನಿಯನ್ನು ಸ್ತುತಿಮಾಡಿ ಯಜ್ಞಗಳಲ್ಲಿ ಆಹ್ವಾನಮಾಡುತ್ತಾರೆಂದು ಅರ್ಥವು ವಿವೃತವಾಗಿದೆ.

**ರಣ್ವಂ—ರಣ್ವತಿ ಯಜ್ಞಾನ್ ಗಚ್ಛತಿ** ಯಜ್ಞಗಳಿಗೆ ಆಗಮಿಸುವವನಾದಕಾರಣ ರಣ್ವನೆಂದು ರಣ್ವಶಬ್ದದ ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ವೈಶ್ವಾನರಮ್—ನರೇ ಸಂಜ್ಞಾಯಾಮ್** ಎಂಬುದರಿಂದ ಪೂರ್ವಪದಕ್ಕೆ ದೀರ್ಘ ಬರುತ್ತದೆ. ವಿಶ್ವಾನರಸ್ಯ ಇದಮ್ ಎಂದು ಅರ್ಥ ವಿವಕ್ಷಾಮಾಡಿದಾಗ **ತಸ್ಯೇದಮ್** (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಯಸ್ಯೇತಿಚ** ಎಂಬುದರಿಂದ ಪ್ರತ್ಯಯದ ಪೂರ್ವದಲ್ಲಿರುವ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನಿಚಾಯ್ಯ—**ಚಾಯೃ ಪೂಜಾನಿಶಾಮನಯೋಃ ಧಾತು. ಇದಕ್ಕೆ ಕ್ತ್ವಾ ಪ್ರತ್ಯಯ ಬಂದಾಗ ಸಮಾಸದಲ್ಲಿ **ಸಮಾಸೇನಞ್‌ಪೂರ್ವೇಕ್ತ್ವೋಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಅದಕ್ಕೆ ಲ್ಯಬಾದೇಶ. ಇದು ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅನುಷತ್ಯಂ—**ಅನುಗತಂ ಸತ್ಯೇನ ಅನುಷತ್ಯಂ. **ಅವಾದಯಃ ಕ್ರುಷ್ಟಾದ್ಯರ್ಥೇ ತೃತೀಯಯಾ** (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ. ಸುಷಾಮಾದಿಗಣ ಪಠಿತವಾದುದರಿಂದ **ಸುಷಾಮಾದಿಷುಚ** (ಪಾ. ಸೂ. ೮-೩-೯೮) ಎಂಬುದರಿಂದ ಸಕಾರಕ್ಕೆ ಷತ್ವ. ನಿರುದಕಾದಿಪಠಿತವಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸುದಾನಂ—**ಡುದಾಞ್ ದಾನೇ. ಧಾತು. **ದಾಭಾಭ್ಯಾಂನುಃ** (ಪಾ. ಸೂ. ೬-೨-೧೯೯) ಎಂಬುದರಿಂದ ಕರ್ತರಿಯಲ್ಲಿ ನು ಪ್ರತ್ಯಯ. **ಪರಾದಿಶ್ಛಂದಸಿಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಸಮಾಸದಲ್ಲಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ರಥಿರಂ—**ರಥಃ ಅಸ್ಯ ಅಸ್ತಿ ಎಂದು ವಿವಕ್ಷಾಮಾಡಿದಾಗ ಮತ್ವರ್ಥದಲ್ಲಿ **ಮೇಧಾರಥಾಭ್ಯಾಮಿರನ್ನಿರಚೌ ವಕ್ತವ್ಯೌ** ಎಂಬುದರಿಂದ ಇರಚ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಅಕಾರಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಸೂಯವಃ**—ವಸು ಆತ್ಮನಃ ಇಚ್ಛಂತಃ ವಸೂಯವಃ **ಸುಪಆತ್ಮನಃಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. **ಅಕೃತ್‌ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಪೂರ್ವಕ್ಕೆ ದೀರ್ಘ. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದಮೇಲೆ ಉ ಪ್ರತ್ಯಯ. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಣ್ವಂ**—ರವಿ ಗತೌ ಧಾತು. ರಣ್ವತಿ ಯಜ್ಞಾನ್ ಗಚ್ಛತೀತಿ ರಣ್ವಃ. ಪಚಾದಿಪಠಿತವಾದುದರಿಂದ **ನಂದಿಗ್ರಹಪಚಾದಿಭ್ಯಃ** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಇದಿತೋನುಮ್ಧಾತೋಃ** ಎಂಬುದರಿಂದ ನುಮಾಗಮ. ರಣ್ವ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕುಶಿಕಾಸಃ**—ಕುಶಿಕ ಶಬ್ದದ ಮೇಲೆ ಗೋತ್ರಾಪತ್ಯವೆಂಬ ಅರ್ಥ ವಿವಕ್ಷಾಮಾಡಿದಾಗ ಬಿದಾದಿಗಣ ಪಠಿತವಾದುದರಿಂದ ಅಞ್ ಪ್ರತ್ಯಯ. ಕೌಶಿಕ ಎಂದು ರೂಪವಾಗುತ್ತದೆ. ಇದಕ್ಕೆ ಬಹುತ್ವವಿವಕ್ಷಾಮಾಡಿದಾಗ **ಯಞ್ಞೋಶ್ಚ** (ಪಾ. ಸೂ. ೨-೪-೬೪) ಎಂಬುದರಿಂದ ಪ್ರತ್ಯಯಕ್ಕೆ ಲುಕ್. ಆಗ ಪ್ರತ್ಯಯನಿಮಿತ್ತವಾಗಿ ಬಂದ ವೃದ್ಧಿ ರೂಪಕಾರ್ಯವೂ ಹೋಗುತ್ತದೆ. **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್ ಪ್ರಥಮಪುರುಷಬಹುವಚನದಲ್ಲಿ ಮಹಿಙ್‌ಪ್ರತ್ಯಯ. ಟಿಗೆ ಏತ್ವ. **ಬಹುಲಂಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ಅದಂತಾಂಗಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಂ ।
ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಂ ॥

ಪದಪಾಠಃ

ತಂ । ಶುಭ್ರಂ । ಅಗ್ನಿಂ । ಅವಸೇ । ಹವಾಮಹೇ । ವೈಶ್ವಾನರಂ । ಮಾತರಿಶ್ವಾನಂ । ಉಕ್ಥ್ಯಂ ।
ಬೃಹಸ್ಪತಿಂ । ಮನುಷಃ । ದೇವಽತಾತಯೇ । ವಿಪ್ರಂ । ಶ್ರೋತಾರಂ । ಅತಿಥಿಂ । ರಘುಽಸ್ಯದಂ ॥ ೨ ॥

ಸಾಯಣಭಾಷ್ಯಂ

ಯೋಽಗ್ನಿಃ ಪೂರ್ವಮಂತ್ರೇ ಪ್ರತಿಪಾದಿತಸ್ತಂ ಶುಭ್ರಂ ದ್ಯೋತಮಾನಂ ವೈಶ್ವಾನರಂ ವಿಶ್ವಾನರಸಂಬಂಧಿನಂ ಮಾತರಿಶ್ವಾನಂ । ಮಾತರ್ಯಂತರಿಕ್ಷೇ ಶ್ವಸಿತಿ ವಿದ್ಯುದಾದಿರೂಪತಯಾ ಚೇಷ್ಟತ ಇತಿ ಮಾತರಿಶ್ವಾಗ್ನಿಃ । ತಮುಕ್ಥ್ಯಮುಕ್ಥೈಃ ಶಸ್ತ್ರೈಃ ಶಂಸನೀಯಂ ಬೃಹಸ್ಪತಿಂ ಬೃಹತೋ ಯಜ್ಞಸ್ಯ ಪತಿಂ ಪಾಲಕತಯಾ ಸ್ವಾಮಿನಂ ವಿಪ್ರಂ ಮೇಧಾವಿನಂ ಶ್ರೋತಾರಂ ಸ್ತೋತ್ರಶಸ್ತ್ರಾದಿಮಂತ್ರವಾಕ್ಯಂ ಶೃಣ್ವಂತ-

ಮತಿಥಿಮಾತಿಥೇಯಪೂಜಾರ್ಹತಯಾ ಯದೃಚ್ಛಯಾ ಪ್ರಾಪ್ತಂ ರಘುಸ್ಯದಂ ಲಘುಸ್ಯದಂ। ರಘುರ್ಲಘುಃ ಸ್ಯದೋ ವೇಗೋ ಯಸ್ಯೇತಿ ಕ್ಷಿಪ್ರಗಂತಾರಂ । ಯದ್ವಾ ಸ್ಯದಶಬ್ದೇನಾಧ್ವಾ ಲಕ್ಷ್ಯತೇ ರಘುಸ್ಯದಃ ಕ್ಷಿಪ್ರಗಂತೇತ್ಯರ್ಥಃ । ತಮೇವಂವಿಧಗುಣಯುಕ್ತಮಗ್ನಿಮವಸೇಽಸ್ಮಾಕಂ ರಕ್ಷಣಾಯ ಹವಾಮಹೇ । ಕುಶಿಕಗೋತ್ರಜಾ ವಯಮಾಹ್ವಯಾಮಃ । ಕಿಂಚ । ಮನುಷೋ ಮನುಷ್ಯಸ್ಯ ದೇವತಾತಯೇ ಯಜ್ಞಾರ್ಥಂ ತ್ವಾಮಾಹ್ವಯಾಮಃ ॥ ಶುಭ್ರಂ । ಶುಭ ದೀಪ್ತೌ । ಅಸ್ಮಾತ್ ಸ್ಫಾಯಿತಂಚೀತ್ಯಾದಿನಾ ಕರ್ತರಿ ರಕ್ । ಕಿತ್ತ್ವಾದ್ಗುಣಾಭಾವಃ । ಪ್ರತ್ಯಯಸ್ವರಃ । ಮಾತರಿಶ್ವಾನಂ । ನಿರ್ಮಾಣಹೇತುತ್ವಾನ್ಮಾತಾಂತರಿಕ್ಷಂ । ತತ್ರ ಶ್ವಸಿತಿ ಪ್ರಾಣಿತೀತಿ ಮಾತರಿಶ್ವಾಗ್ನಿಃ । ಶ್ವನ್ನುಕ್ಷನ್ನಿತ್ಯಾದಿನಾ ಮಾತರಿಶ್ವಞ್ಶಬ್ದಸ್ಯ ಕನ್ಪ್ರತ್ಯಯಾಂತತ್ವೇನ ನಿಪಾತನಾತ್ಪೂರ್ವಪದಾಂತೋದಾತ್ತತ್ವಂ । ಉಕ್ಥ್ಯಂ । ಉಕ್ಥೇನ ಸ್ತೋತ್ರೇಣ ಸ್ತುತ್ಯಃ । ತತ್ರ ಭವ ಇತ್ಯರ್ಥೇ ಭವೇ ಛಂದಸೀತಿ ಯತ್ । ತಿತ್ಸ್ವರಿತಮಿತಿ ಸ್ವರಿತಃ । ದೇವತಾತಯೇ । ದೇವ ಏವ ದೇವತಾತಿಃ । ಸ್ವಾರ್ಥಿಕಸ್ತಾತಿಲ್ । ದೇವತಾತಿಶಬ್ದೇನ ಯಜ್ಞೋ ಲಕ್ಷ್ಯತೇ ತತ್ಸಂಪ್ರದಾನಕತ್ವಾದ್ಯಜ್ಞಸ್ಯ । ಲಿತ್ಸ್ವರಃ । ರಘುಷ್ಯದಂ । ಸ್ಯಂದೂ ಪ್ರಸ್ರವಣ ಇತ್ಯಸ್ಮಾದ್ಘಞಂತಃ ಸ್ಯದಶಬ್ದಃ । ಸ್ಯದೋ ಜವ ಇತಿ ನಿಪಾತನಾದನುನಾಸಿಕಲೋಪಃ । ಕೃದುತ್ತರಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

**ತಂ ಶುಭ್ರಂ**-ಮೇಲೆ ವರ್ಣಿತವಾದಂತೆ ಶುದ್ಧವಾದ ಪ್ರಕಾಶವುಳ್ಳವನೂ । **ವೈಶ್ವಾನರಂ**-ವಿಶ್ವದ ನೇತೃವೂ । **ಮಾತರಿಶ್ವಾನಂ**—ಅಂತರಿಕ್ಷದಲ್ಲಿ ಸಂಚರಿಸುವವನೂ । **ಉಕ್ಥ್ಯಂ**—ಉಕ್ಥಾದಿಗಳಿಂದ ಪ್ರಶಂಸಿತನೂ । **ಬೃಹಸ್ಪತಿಂ**—ಬೃಹತ್ತಾದ ಯಜ್ಞಕ್ಕೆ ಸ್ವಾಮಿಯೂ । **ವಿಪ್ರಂ**—ಮೇಧಾವಿಯೂ । **ಶ್ರೋತಾರಂ**—ಸ್ತುತಿಗಳನ್ನು ಪ್ರೀತಿಯಿಂದ ಕೇಳುವವನೂ । **ಅತಿಥಿಂ**—ಯಜ್ಞದಲ್ಲಿ ಅತಿಥಿಯಾಗುವವನೂ । **ರಘುಷ್ಯದಂ**—ಶೀಘ್ರಗಾಮಿಯಾದವನೂ ಆದ । **ಅಗ್ನಿಂ**—ಅಗ್ನಿಯನ್ನು । **ಅವಸೇ**—ನಮ್ಮ ರಕ್ಷಣೆಗಾಗಿಯೂ । **ಮನುಷಃ**—ಮಾನವನ । **ದೇವತಾತಯೇ**—ಯಜ್ಞಾರ್ಥವಾಗಿಯೂ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ ॥

ಭಾವಾರ್ಥ

ಮೇಲಿನ ಮಂತ್ರಗಳಲ್ಲಿ ವರ್ಣಿತವಾದಂತೆ ಶುದ್ಧವಾದ ಪ್ರಕಾಶವುಳ್ಳವನೂ, ವಿಶ್ವದ ನೇತೃವಾದವನೂ, ಅಂತರಿಕ್ಷದಲ್ಲಿ ಸಂಚರಿಸುವವನೂ ಉಕ್ಥಾದಿಮಂತ್ರಗಳಿಂದ ಪ್ರಶಂಸಿತನಾಗುವವನೂ, ಬೃಹತ್ತಾದ ಯಜ್ಞಕ್ಕೆ ಸ್ವಾಮಿಯೂ, ಮೇಧಾವಿಯೂ, ಸ್ತುತಿಗಳನ್ನು ಪ್ರೀತಿಯಿಂದ ಕೇಳುವವನೂ, ಯಜ್ಞದಲ್ಲಿ ಅತಿಥಿಯಾಗುವವನೂ, ಶೀಘ್ರಗಾಮಿಯಾದವನೂ ಆದ ಅಗ್ನಿಯನ್ನು ನಮ್ಮ ರಕ್ಷಣೆಗಾಗಿಯೂ, ಮಾನವನ ಯಜ್ಞಾರ್ಥವಾಗಿಯೂ ಪ್ರಾರ್ಥಿಸಿ ಕರೆಯುತ್ತೇವೆ.

English Translation

We invoke you for our own protection and for the devotions of mankind, the radiant Agni, Vaishwanara, the illuminator of the firmament, the adorable lord of sacred rites, the wise, the hearer (of supplications), the guest (of men), the quick-moving.

ವಿಶೇಷವಿಷಯಗಳು

**ಶುಭ್ರಂ ವೈಶ್ವಾನರಂ ಮಾತರಿಶ್ವಾನಂ**—ಶುಭ್ರಶಬ್ದವು ಕಾಂತಿಯಿಂದ ಬೆಳಗುತ್ತಿರುವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ಹೇಳಿದೆ. ಮಾತರಿಶ್ವಾ ಎಂಬ ಪದಕ್ಕೆ ಸಾಯಣರು **ಮಾತರಿ ಅಂತರಿಕ್ಷೇ**

**ಶ್ವಸಿತಿ ವಿದ್ಯುದಾದಿರೂಪತಯಾ ಚೇಷ್ಟತ ಇತಿ ಮಾತರಿಶ್ವಾ ಅಗ್ನಿಃ ಅಥವಾ ನಿರ್ಮಾಣಹೇತುತ್ವಾತ್ ಮಾತಾ ಅಂತರಿಕ್ಷಂ ತತ್ರ ಶ್ವಸಿತಿ ಪ್ರಾಣಿತೀತಿ ಮಾತರಿಶ್ವಾ ಅಗ್ನಿಃ** | ಎಲ್ಲವನ್ನೂ ನಿರ್ಮಿಸುವುದರಲ್ಲಿ ಮುಖ್ಯಕಾರಣ ವಾಗಿರುವುದರಿಂದ ಅಂತರಿಕ್ಷವು ಮಾತೃಶಬ್ದದಿಂದ ವ್ಯಪದಿಷ್ಟವಾಗಿರುವುದು. ಅಂತರಿಕ್ಷದಲ್ಲಿ ಮಿಂಚಿನ ರೂಪದಿಂದ ಇರುವ ಕಾರಣ ಅಗ್ನಿಯು ಮಾತರಿಶ್ವನಾಗಿರುವನು ಅಥವಾ ಅಂತರಿಕ್ಷದಲ್ಲಿ (ಸಂಚರಿಸುವ) ಉತ್ಪನ್ನನಾಗಿರುವಕಾರಣದಿಂದ ಅಗ್ನಿಯು ಮಾತರಿಶ್ವನೆನಿಸಿರುವನು ಎಂದು ಅರ್ಥವನ್ನು ವಿವರಿಸಿದ್ದಾರೆ.

ಈ ವೈಶ್ವಾನರಾಗ್ನಿಯು ತೇಜಸ್ಸಿನಿಂದ ಪ್ರಕಾಶಿಸುವವನು, ಅಂತರಿಕ್ಷದಲ್ಲಿ ಮಿಂಚಿನರೂಪದಲ್ಲಿ ಬೆಳಗುವವನು, ಸ್ತೋತ್ರಗಳಿಂದ ಸ್ತುತಿಸಲು ಅರ್ಹನಾಗಿರುವನು, ಯಜ್ಞಗಳನ್ನು ರಕ್ಷಿಸುವ ಪ್ರಭುವಾಗಿರುವನು, ಮೇಧಾವಿಯಾಗಿರುವನು, ಯಜಮಾನರು ಪಠಿಸುವ ಸ್ತೋತ್ರಮಂತ್ರಾದಿಗಳನ್ನು ಶ್ರವಣಮಾಡುವವನು, ಅತಿಥಿಯಾಗಿ ಪೂಜಾರ್ಹತೆಯಿಂದ ಯಾದೃಚ್ಛಿಕವಾಗಿ ಯಜ್ಞಕ್ಕೆ ಬಂದಿರುವವನು, ವೇಗದಿಂದ ಶೀಘ್ರಗಾಮಿಯು, ಎಂದು ಅಗ್ನಿಯು ಪ್ರಭೂತವಾದ ಮಹಿಮೆಯನ್ನು ವರ್ಣಿಸಿ, ಕುಶಿಕಗೋತ್ರದಲ್ಲಿ ಉತ್ಪನ್ನರಾದ ಯಜಮಾನರಾದ ನಾವು ನಮ್ಮ ರಕ್ಷಣೆಗಾಗಿಯೂ, ಮನುಷ್ಯರಾದ ನಾವು ಆಚರಿಸುವ ಯಜ್ಞಗಳಲ್ಲಿ ಆಗಮಿಸಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿಯೂ ಅಗ್ನಿಯನ್ನು ಆಹ್ವಾನಮಾಡಿರುವೆವು ಎಂಬ ಅರ್ಥವು ವರ್ಣಿತವಾಗಿದೆ.

**ರಘುಷ್ಯದಂ—ರಘುಃ ಲಘುಃ ಸ್ಯದೋ ವೇಗೋ ಯಸ್ಯ ಯದ್ವಾ ಸ್ಯದಶಬ್ದೇನ ಅಧ್ವಾ ಲಕ್ಷ್ಯತೇ ಕ್ಷಿಪ್ರಗಂತಾ** ಲಘುವಾದ ವೇಗವುಳ್ಳವನು, ಅಥವಾ ಶೀಘ್ರವಾಗಿ ದಾರಿಯಲ್ಲಿ ನಡೆಯುವವನು ಎಂದು ಅರ್ಥವನ್ನು ವಿವರಿಸಿ, ಅಗ್ನಿಯು ಈ ವಿಧವಾದ ಗುಣದಿಂದ ಯುಕ್ತನಾಗಿರುವನೆಂದು ವರ್ಣಿಸಿದೆ.

**ಮನುಷಃ—ಮನುಷ್ಯಸ್ಯ** | ನಿರುಕ್ತಕಾರರು—

**ಯುವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ||**

(ಋ. ಸ. ೧-೧೧೭-೨೧)

ಎಂಬಲ್ಲಿಯೂ,

**ಸಮಿದ್ಧೋ ಅದ್ಯ ಮನುಷೋ ದುರೋಣೇ** (ಋ. ಸಂ. ೧೦-೧೧೦-೧) ಎಂಬಲ್ಲಿಯೂ ಮನುಷ ಶಬ್ದವು ಮನುಷ್ಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಉದಾಹರಿಸಿದ್ದಾರೆ. ಸಾಯಣರೂ ಇದೇ ಅರ್ಥವನ್ನು ವಿವರಿಸಿದ್ದಾರೆ.

**ದೇವತಾತಯೇ—ಯಜ್ಞಾರ್ಥಂ** | ಸಾಯಣರು **ದೇವ ಏವ ದೇವತಾತಿಃ ದೇವತಾತಿಶಬ್ದೇನ ಯಜ್ಞೋ ಲಕ್ಷ್ಯತೇ ತತ್ಸಂಪ್ರದಾನಕತ್ವಾತ್ ಯಜ್ಞಸ್ಯ** | ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ಯಜ್ಞಕರ್ಮವೂ ದೇವಪದದಿಂದ ವ್ಯಪದಿಷ್ಟವಾಗಿದೆ ಎಂದು ಅರ್ಥವನ್ನು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಶುಭ್ರಂ**—ಶುಭ ದೀಪ್ತೌ ಧಾತು. ಇದಕ್ಕೆ **ಸ್ಫಾಯಿತಂಚಿವಂಚಿ**—(ಉ. ಸೂ. ೨-೧೭೦) ಎಂಬುದರಿಂದ ಕರ್ತರಿಯಲ್ಲಿ ರಕ್ ಪ್ರತ್ಯಯ. ಇದು ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮಾತರಿಶ್ವಾನಂ**—ಸೃಷ್ಟಿನಿರ್ಮಾಣಕ್ಕೆ ಕಾರಣವಾದುದರಿಂದ ಮಾತಾ (ತಾಯಿ) ಎಂಬುದೇ ಅಂತರಿಕ್ಷ. (ಆಕಾಶ). ತತ್ರ ಶ್ವಸಿತಿ ಪ್ರಾಣಿತಿ ಇತಿ ಮಾತರಿಶ್ವಾ. (ಅವಕಾಶವಿದ್ದರೇ ಜೀವಿಸುವುದು ಅಗ್ನಿ) ಅಗ್ನಿಃ **ಶ್ವನ್ನು**-

ಕ್ಷನ್ (ಉ. ಸೂ. ೧-೧೫೭) ಎಂಬುದರಿಂದ ಮಾತರಿಶ್ವನ್ ಎಂದು ಕನ್ ಪ್ರತ್ಯಯಾಂತವಾಗಿ ನಿಪಾತಮಾಡಿರುವುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಉಕ್ಥ್ಯಂ**—ಉಕ್ಥೇನ ಸ್ತೋತ್ರೇಣ ಸ್ತುತ್ಯಃ ಉಕ್ಥ್ಯಃ ತತ್ರ ಭವಃ ಎಂದು ಅರ್ಥವಿವಕ್ಷಾ ಮಾಡಿದಾಗ **ಭವೇಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. ಭಸಂಜ್ಞಾ ಇರುವುದರಿಂದ **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯ ತಿತ್ತಾದುದರಿಂದ **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ದೇವತಾತಯೇ**—ದೇವ ಏವ ದೇವತಾತಿಃ **ಸರ್ವದೇವಾತ್ತಾತಿಲ್** (ಪಾ. ಸೂ. ೪-೪-೧೪೨) ಎಂಬುದರಿಂದ ದೇವಶಬ್ದಕ್ಕೆ ಸ್ವಾರ್ಥದಲ್ಲಿ ತಾತಿಲ್ ಪ್ರತ್ಯಯ. ಇದು ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ. ಇಲ್ಲಿ ಲಕ್ಷಣಾವೃತ್ತಿಯಿಂದ ದೇವತಾತಿ ಶಬ್ದಕ್ಕೆ ಯಜ್ಞವೆಂದು ಅರ್ಥ ಹೇಳಬೇಕು. ದೇವತೆಗಳನ್ನುದ್ದೆಶಿಸಿಯೇ ಯಜ್ಞಮಾಡುವುದರಿಂದ ಯಜ್ಞವೂ ದೇವತೆಯೇ.

**ಶ್ರೋತಾರಂ**—ಶ್ರು ಶ್ರವಣೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಘುಷ್ಯದಂ**—ಸ್ಯಂದೂ ಪ್ರಸ್ರವಣೇ. ಧಾತು. ಇದಕ್ಕೆ ಘಙ್ ಪ್ರತ್ಯಯ ಬಂದಾಗ ಸ್ಯದ ಎಂದು ರೂಪವಾಗುತ್ತದೆ. **ಸ್ಯದೋಜವೇ** (ಪಾ. ಸೂ. ೬-೪-೨೮) ಎಂಬುದರಿಂದ ನಿಪಾತಮಾಡಿರುವುದರಿಂದ ಧಾತುವಿನ ಅನುನಾಸಿಕಕ್ಕೆ ಲೋಪ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

**ಅಶ್ವೋ ನ ಕ್ರಂದಞ್ಜನಿಭಿಃ ಸಮಿಧ್ಯತೇ ವೈಶ್ವಾನರಃ ಕುಶಿಕೇಭಿರ್ಯುಗೇಯುಗೇ ।**
**ಸ ನೋ ಅಗ್ನಿಃ ಸುವೀರ್ಯಂ ಸ್ವಶ್ವ್ಯಂ ದಧಾತು ರತ್ನಮಮೃತೇಷು ಜಾಗೃವಿಃ ॥**

ಪದಪಾಠಃ

**ಅಶ್ವಃ । ನ । ಕ್ರಂದನ್ । ಜನಿಽಭಿಃ । ಸಂ । ಇಧ್ಯತೇ । ವೈಶ್ವಾನರಃ । ಕುಶಿಕೇಭಿಃ । ಯುಗೇಽಯುಗೇ ।**
**ಸಃ । ನಃ । ಅಗ್ನಿಃ । ಸುಽವೀರ್ಯಂ । ಸುಽಅಶ್ವ್ಯಂ । ದಧಾತು । ರತ್ನಂ । ಅಮೃತೇಷು । ಜಾಗೃವಿಃ ॥**

ಸಾಯಣಭಾಷ್ಯಂ

**ಯೋ ವೈಶ್ವಾನರೋಽಗ್ನಿಃ ಕುಶಿಕೇಭಿಃ ಸ್ತೋತ್ರಂ ಕುರ್ವಾಣೈರ್ಹೋತ್ರಾದಿಭಿರ್ಯುಗೇ ಯುಗೇ ಪ್ರತಿದಿನಂ ಸಮಿಧ್ಯತ ಆಜ್ಯಾಹುತಿಪ್ರಕ್ಷೇಪೇಣ ಸಮ್ಯಕ್ ದೀಪ್ಯತೇ । ತತ್ರ ದೃಷ್ಟಾಂತಃ । ಅಶ್ವೋ ನೇತಿ । ಯಥಾ ಜಾತೋಽಶ್ವಃ ಕ್ರಂದನ್ ಹೇಷಾರವಂ ಕುರ್ವನ್ ಜನಿಭಿರ್ಜನಯಿತ್ರೀಭಿರ್ಬಡವಾಭಿಃ ಸ್ತನ್ಯಪ್ರದಾ-**

ನೇನ ಪ್ರತಿದಿನಂ ಸಮ್ಯಕ್ ಪೋಷ್ಯತೇ ತದ್ವತ್|ಅಮೃತೇಷು ಮರಣಧರ್ಮರಹಿತೇಷು ದೇವೇಷು ಮಧ್ಯೇ ಜಾಗೃವಿಜ್ವಾಲಯಾ ಜಾಗ್ರತ್ ದೀಪ್ಯಮಾನಃ ಸೋಽಗ್ನಿಃ ಸುವೀರ್ಯಂ ಶೋಭನಾಪತ್ಯಯುಕ್ತಂ ಸ್ವಶ್ವ್ಯಂ ಶೋಭನಾಶ್ವಾದಿಪಶುಯುಕ್ತಂ ರತ್ನಮುತ್ತಮಂ ಧನಂ ನೋಽಸ್ಮಾಕಂ ದಧಾತು | ವಿದಧಾತು | ಪ್ರಯಚ್ಛತು || ಯುಗೇಯುಗೇ | ನಿತ್ಯವೀಪ್ಸಯೋರಿತಿ ದ್ವಿರ್ವಚನಂ | ಪರಸ್ಯಾಮ್ರೇಡಿತತ್ವಾದನು-ದಾತ್ತತ್ವೇ ಪೂರ್ವಪದಪ್ರಕೃತಿಸ್ವರಃ | ಸ್ವಶ್ವ್ಯಂ | ಅಶ್ವಶಬ್ದಃ ಕ್ವನ್ಪ್ರತ್ಯಯಾಂತ ಆದ್ಯುದಾತ್ತಃ | ಬಹು-ವ್ರೀಹಾವಾದ್ಯುದಾತ್ತಂ ದ್ವ್ಯಚ್ ಛಂದಸೀತ್ಯುತ್ತರಪದಾದ್ಯುದಾತ್ತತ್ವಂ | ಯಕಾರೋಪಜನಶ್ಛಾಂದಸಃ | ಯದ್ವಾ| ಅಶ್ವೇಷು ಸಾಧವೋಽಶ್ವ್ಯಾಃ | ತತ್ರ ಸಾಧುರಿತಿ ಯತ್| ಯತೋಽನಾವ ಇತ್ಯಾದ್ಯುದಾತ್ತತ್ವಂ | ಬಹುವ್ರೀಹೌ ಪೂರ್ವೋಕ್ತಸ್ಸ್ವರಃ | ದಧಾತು| ದಧಾತೇರ್ಲೋಟಿ ರೂಪಂ | ರತ್ನಂ| ರಮು ಕ್ರೀಡಾಯಾಂ| ರಮೇಸ್ತ ಚೇತ್ಯಧಿಕರಣೇ ನಪ್ರತ್ಯಯಸ್ತಕಾರಶ್ಚಾಂತಾದೇಶಃ | ರಮತೇಽಸ್ಮಿನ್ನಿತಿ ರತ್ನಂ | ನಿದಿತ್ಯಸು-ವೃತ್ತಾವಾದ್ಯುದಾತ್ತಃ | ಜಾಗೃವಿಃ | ಕ್ವಿನ್ಪ್ರತ್ಯಯಾಂತಃ | ನಿತ್ತ್ವಾದಾದ್ಯುದಾತ್ತಃ ||

ಪ್ರತಿಪದಾರ್ಥ

ಜನಿಭಿಃ—ಜನನಿಯರಾದ ಕುದುರೆಗಳಿಂದ ಉತ್ತೇಜಿತವಾದುದೂ | **ಕ್ರಂದನ್**—ಹೇಷಾರವವನ್ನೂ ಮಾಡುವುದೂ ಆದ | **ಅಶ್ವೋ ನ**—ಜಾತ್ಯಶ್ವದಂತೆ | **ವೈಶ್ವಾನರಃ**—ವೈಶ್ವಾನರಾಗ್ನಿಯು | **ಕುಶಿಕೇಭಿಃ**—ಕುಶಿಕವಂಶೋತ್ಪನ್ನರಾದ ಋಷಿಗಳಿಂದ | **ಯುಗೇ ಯುಗೇ**—ಪ್ರತಿದಿನವೂ (ಅಥವಾ ಪ್ರತಿಯುಗದಲ್ಲಿಯೂ) | **ಸಮಿಧ್ಯತೇ**—ಆಜ್ಯಾಹುತಿಗಳಿಂದ ಪ್ರಜ್ವಲಿತನಾಗುತ್ತಾನೆ | **ಅಮೃತೇಷು**—ಮರಣಧರ್ಮರಹಿತರಾದ ದೇವತೆಗಳ ನಡುವೆ | **ಜಾಗೃವಿಃ**—ಜ್ವಾಲೆಯಿಂದ ಪ್ರಬುದ್ಧನಾಗಿರತಕ್ಕ | **ಸಃ ಅಗ್ನಿಃ**—ಆ ಅಗ್ನಿಯು | **ಸುವೀರ್ಯಂ**—ಶ್ರೇಷ್ಠವಾದ ಅಪತ್ಯದಿಂದ ಕೂಡಿದುದೂ | **ಸ್ವಶ್ವ್ಯಂ**—ಉತ್ತಮವಾದ ಅಶ್ವಗಳಿಂದ ಕೂಡಿದುದೂ ಆದ | **ರತ್ನಂ**—ಉತ್ತಮವಾದ ಧನವನ್ನು | **ನಃ**—ನಮಗೆ | **ದಧಾತು**—ಕೊಡಲಿ ||

ಭಾವಾರ್ಥ

ಜನನಿಯರಾದ ಅಶ್ವಗಳಿಂದ ಉತ್ತೇಜಿತವಾದುದೂ, ಹೇಷಾರವವನ್ನು ಮಾಡತಕ್ಕದ್ದೂ ಆದ ಜಾತ್ಯಶ್ವದಂತೆ ವೈಶ್ವಾನರಾಗ್ನಿಯು ಕುಶಿಕವಂಶೋತ್ಪನ್ನರಾದ ಋಷಿಗಳಿಂದ ಪ್ರತಿದಿನವೂ ಆಜ್ಯಾಹುತಿಗಳಿಂದ ಪ್ರಜ್ವಲಿತನಾಗುತ್ತಾನೆ. ಮರಣಧರ್ಮರಹಿತರಾದ ದೇವತೆಗಳ ನಡುವೆ ಜ್ವಾಲೆಯಿಂದ ಪ್ರಬುದ್ಧನಾಗಿರತಕ್ಕ ಆ ಅಗ್ನಿಯು ಶ್ರೇಷ್ಠವಾದ ಅಪತ್ಯದಿಂದ ಕೂಡಿದುದೂ, ಉತ್ತಮವಾದ ಅಶ್ವಗಳಿಂದ ಕೂಡಿದುದೂ ಆದ ಉತ್ತಮವಾದ ಧನವನ್ನು ನಮಗೆ ಕೊಡಲಿ.

## English Translation

Vaishwanara is kindled in every age by the Kushikas as a neighing foal (is nourished) by its mother: may that Agni, vigilant amongst the immortals, give us wealth with excellent offspring and good horses.

ವಿಶೇಷವಿಷಯಗಳು

**. ಅಶ್ವೋ ನ ಕ್ರಂದನ್ ಜನಿಭಿಃ—ಯಥಾ ಜಾತೋ ಅಶ್ವಃ ಹೇಷಾರವಂ ಕುರ್ವನ್ ಜನಯಿತ್ರೀಭಿಃ ವಡವಾಭಿಃ ಸ್ತನ್ಯಪಾನೇನ ಪ್ರತಿದಿನಂ ಸಮ್ಯಕ್ ಪೋಷ್ಯತೇ ತದ್ವತ್ ವೈಶ್ವಾನರೋ ಅಗ್ನಿಃ ಸ್ತೋತ್ರಂ-**

**ಕುರ್ವಾಣೈಃ ಹೋತ್ರಾದಿಭಿಃ ಪ್ರತಿದಿನಂ ಆಜ್ಯಾಹುತಿಪ್ರಕ್ಷೇಪೇಣ ಸಮ್ಯಕ್ ದೀಪ್ಯತೇ** | ಉತ್ಪನ್ನವಾದ ಅಶ್ವವು ಧ್ವನಿಯನ್ನು ಮಾಡುತ್ತಿರುವ ಹೆಣ್ಣು ಕುದುರೆಗಳಿಂದ ಪ್ರತಿದಿನವೂ (ಎದೆಹಾಲನ್ನು) ಸ್ತನ್ಯಪಾನದಿಂದ ಪೋಷಿಸಲ್ಪಡುವಹಾಗೆ ಈ ವೈಶ್ವಾನರಾಗ್ನಿಯು ಸ್ತುತಿಯನ್ನು ಪಠಿಸುವ ಹೋತೃವೇ ಮೊದಲಾದ ಋತ್ವಿಜರಿಂದ ಪ್ರತಿದಿನವೂ ಅರ್ಪಿತವಾಗುವ ಆಜ್ಯವೇ ಮೊದಲಾದ ಆಹುತಿಗಳಿಂದ ವೃದ್ಧಿಯನ್ನು ಹೊಂದುವನು ಎಂದು ಅಶ್ವದ ಉಪಮಾನವನ್ನು ಪ್ರದರ್ಶನೆ ಮಾಡಿ ವರ್ಣಿಸಿದೆ.

**ಅಮೃತೇಷು ಜಾಗೃವಿಃ**— ಈ ವೈಶ್ವಾನರಾಗ್ನಿಯು ಮರಣಧರ್ಮವಿಲ್ಲದವರಾದ ದೇವತೆಗಳ ಮಧ್ಯದಲ್ಲಿ ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವವನಾಗಿ ಜಾಗರೂಕನಾಗಿರುವನೆಂದು ವರ್ಣಿತನಾಗಿದ್ದಾನೆ.

ಈ ಅಗ್ನಿಯು **ಸುವೀರ್ಯಂ ಸ್ವಶ್ವ್ಯಂ ರತ್ನಂ ನಃ ದಧಾತು.** ಉತ್ತಮವಾದ ಅಪತ್ಯದಿಂದ ಕೂಡಿರುವ, ಉತ್ತಮವಾದ ಅಶ್ವ, ಪಶುಗಳಿಂದ ಯುಕ್ತವಾಗಿರುವ, ಶ್ರೇಷ್ಠವಾದ ಅಥವಾ ಆನಂದವನ್ನು ಉಂಟುಮಾಡುವ ಧನವನ್ನು ಯಜಮಾನರಾದ ನಮಗೆ ಅನುಗ್ರಹಿಸಲಿ ಎಂದು ಆಶಿಸಿದೆ.

ರತ್ನಶಬ್ದವು **ರಮಂತೇಽಸ್ಮಿನ್ನಿತಿ** ರತ್ನಂ ಜನರನ್ನು ತನ್ನ ಪ್ರಾಪ್ತಿಯಿಂದ ಆನಂದಗೊಳಿಸುವುದರಿಂದ ರತ್ನವೆಂದು ವ್ಯವಹೃತವಾಗಿರುವುದೆಂದು ರತ್ನಶಬ್ದಾರ್ಥವು ವಿವೃತವಾಗಿದೆ.

**ಯುಗೇಯುಗೇ-ಪ್ರತಿದಿನಂ** | ಯುಗಶಬ್ದವು ಕೃತ, ತ್ರೇತಾದಿ ನಾಮಗಳಿಂದ ಪ್ರಸಿದ್ಧವಾಗಿರುವ ಪ್ರಭೂತವಾದ ಕಾಲವನ್ನು ಬೋಧಿಸುವುದಾಗಿದ್ದರೂ ಇಲ್ಲಿ ದಿನವಾಚಕವೆಂದು ಅರ್ಥಮಾಡಿದೆ. ಮತ್ತೂ ದ್ವಿರುಕ್ತಿಯನ್ನು ಹೇಳಿರುವುದರಿಂದ ಪ್ರತಿದಿನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವು ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಕ್ರಂದನ್**—ಕ್ರದಿ ಆಹ್ವಾನೇ ರೋದನೇ ಚ. ಧಾತು. ಲಟಿಗೆ ಶತ್ರಾದೇಶ. ಇದಿತ್ತಾದುದರಿಂದ ನುಮಾಗಮ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಶತೃ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಯುಗೇಯುಗೇ—ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ ಬರುತ್ತದೆ. **ತಸ್ಯಪರಮಾಮ್ರೇಡಿತಂ** ಎಂಬುದರಿಂದ ಪರಕ್ಕೆ ಆಮ್ರೇಡಿತಸಂಜ್ಞಾ ಬರುತ್ತದೆ. **ಅನುದಾತ್ತಂಚ** (ಪಾ. ಸೂ. ೮-೧-೩) ಎಂಬುದರಿಂದ ಅದಕ್ಕೆ ಸರ್ವಾನುದಾತ್ತಸ್ವರ ಬರುವುದರಿಂದ ಪೂರ್ವಪದಪ್ರಕೃತಿಸ್ವರ ಉಳಿಯುತ್ತದೆ.

**ಸುವೀರ್ಯಮ್—ವೀರ ವೀರ್ಯೌಚ** (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಸ್ವಶ್ವ್ಯಂ**—ಶೋಭನಃ ಅಶ್ವಃ ಯಸ್ಯ ತತ್. ಅಶ್ವಶಬ್ದ ಕ್ವನ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾದುದರಿಂದ **ಆದ್ಯುದಾತ್ತಂ ದ್ವ್ಯಚ್ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಸಮಾಸದಲ್ಲಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಇಲ್ಲಿ ಯಕಾರವು ಛಾಂದಸವಾಗಿ ಅಧಿಕವಾಗಿ ಬಂದಿದೆ. ಅಥವಾ ಅಶ್ವೇಷು ಸಾಧವಃ ಅಶ್ವ್ಯಾಃ **ತತ್ರಸಾಧುಃ** (ಪಾ. ಸೂ. ೪-೪-೯೮) ಎಂಬುದರಿಂದ ಸಾಧ್ವರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಪೂರ್ವದ ಆಕಾರಕ್ಕೆ ಲೋಪ. **ಯತೋಽನಾವಃ** (ಪಾ. ಸೂ. ೬-೧-೩೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುವುದರಿಂದ ಬಹುವ್ರೀಹಿಯಲ್ಲಿ ಹಿಂದಿನಂತೆ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ದಧಾತು**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಪ್ರಥಮಪುರುಷ ಏಕವಚನಾಂತ ರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ರತ್ನಂ—ರಮು ಕ್ರೀಡಾಯಾಂ. ಧಾತು. **ರಮೇಸ್ತ ಚ** (ಉ. ಸೂ. ೨-೨೯ಳ) ಎಂಬುದರಿಂದ ಅಧಿಕರಣಾರ್ಥದಲ್ಲಿ ನ ಪ್ರತ್ಯಯ. ಅದರೊಡನೆ ತಕಾರಾಂತಾದೇಶವಾಗಿ ಬರುತ್ತದೆ. ರಮಂತೇ ಅಸ್ಮಿನ್ ಇತಿ ರತ್ನಂ. ನಿತ್ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಜಾಗೃವಿಃ—ಜಾಗೃ ನಿದ್ರಾಕ್ಷಯೇ. ಧಾತು. ಇದಕ್ಕೆ ಔಣಾದಿಕ ಕ್ವಿನ್ ವಿ ಪ್ರತ್ಯಯ ಉಳಿಯುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. ನಿತ್ತಾದುದರಂದ ಹಿಂದಿನಂತೆ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಪ್ರ ಯಂತು ವಾಜಾಸ್ತವಿಷೀಭಿರಗ್ನಯಃ ಶುಭೇ ಸಂಮಿಶ್ಲಾಃ ಪೃಷತೀರಯುಕ್ಷತ ।
ಬೃಹದುಕ್ಷೋ ಮರುತೋ ವಿಶ್ವವೇದಸಃ ಪ್ರ ವೇಪಯಂತಿ ಪರ್ವತಾँ ಅದಾಭ್ಯಾಃ ॥

ಪದಪಾಠಃ

ಪ್ರ । ಯಂತು । ವಾಜಾಃ । ತವಿಷೀಭಿಃ । ಅಗ್ನಯಃ । ಶುಭೇ । ಸಂऽಮಿಶ್ಲಾಃ । ಪೃಷತೀಃ । ಅಯುಕ್ಷತ ।
ಬೃಹತ್ऽಉಕ್ಷಃ । ಮರುತಃ । ವಿಶ್ವऽವೇದಸಃ । ಪ್ರ । ವೇಪಯಂತಿ । ಪರ್ವತಾನ್ । ಅದಾಭ್ಯಾಃ ॥ ೪ ॥

ಸಾಯಣಭಾಷ್ಯಂ

ವಾಜಾ ವೇಗವಂತೋಽಗ್ನಯಃ ಪ್ರಯಂತು । ಜಲಮಭಿಲಕ್ಷ್ಯ ಗಚ್ಛಂತು । ಗತಾಶ್ಚ ತೇಽಗ್ನಯಸ್ತವಿಷೀಭಿರ್ಬಲಯುಕ್ತೈರ್ಮರುದ್ಭಿಃ ಶುಭೇ ಜಲೇ ಸಂಮಿಶ್ಲಾಃ ಪರಸ್ಪರಂ ಸಂಗತಾಃ ಸಂತಃ ಪೃಷತೀರ್ಬಿಂದೂನಯುಕ್ಷತ । ಅಯುಂಜನ್ । ಜಲೇ ಬಿಂದೂನಕುರ್ವನ್ । ಯದ್ವಾ ವಾಜಾ ವೇಗವಂತೋಽಗ್ನಯಸ್ತವಿಷೀಭಿರ್ಬಲಯುಕ್ತೈರ್ಮರುದ್ಭಿರ್ಜಲಮನುಲಕ್ಷ್ಯ ಪ್ರಯಂತು । ಗಚ್ಛಂತು । ತೇ ಚ ಮರುತಃ ಶುಭೇ ಜಲೇ ಸಂಮಿಶ್ಲಾ ಅಗ್ನಿಭಿಃ ಸಂಗತಾಃ ಸಂತಃ ಪೃಷತೀಶ್ಚಿತ್ರವರ್ಣಾ ವಾಹನರೂಪಾ ವಡವಾ ಅಯುಕ್ಷತ । ರಥೇ ಮೇಘಭೇದನಾರ್ಥೇ ತಾ ಅಯೌಕ್ಷುಃ । ರಥಾರೂಢಾಸ್ತೇ ವಿಶ್ವವೇದಸಃ ಪ್ರಾಣಿಕೃತಕರ್ಮಾಭಿಜ್ಞಾನಯುಕ್ತಾ ಅದಾಭ್ಯಾಃ ಕೇನಾಪ್ಯತಿರಸ್ಕಾರ್ಯಾ ಮರುತ ಏವಂವಿಧಾ ವಾಯವೋ ಬೃಹದುಕ್ಷಃ ಪ್ರಭೂತಸೇಕ್ತೄನ್ ಪರ್ವತಾನ್ಮೇಘಾನ್ ಪ್ರವೇಪಯಂತಿ । ಯಥಾ ಪ್ರಭೂತಾ ವೃಷ್ಟಿರ್ಭವತಿ ತಥಾ ಮೇಘಾನ್ ಚಾಲಯಂತಿ ॥ ತವಿಷೀಭಿಃ । ತವ ಗತಾವಿತಿ ಸೌತ್ರೋ ಧಾತುಃ । ಅಸ್ಮಾತ್ತವೇರ್ಣಿದ್ವೇತಿ ಟಿಷಚ್ ಣಿಚ್ಚ । ತವಂತಿ ಸಂಚರಂತ್ಯಾಕಾಶ ಇತಿ ತವಿಷಾ ವಾಯವಃ । ಟಿಡ್ಢಾಣಞಿತಿ ಙೀಪ್ । ಲಿಂಗವ್ಯತ್ಯಯಃ । ನಿತ್ತ್ವಾದಾದ್ಯುದಾತ್ತಃ । ಪೃಷತೀಃ । ಪೃಷು ಸೇಚನೇ ಪೄ ಪಾಲನಪೂರಣ-

**ಯೋರಿತಿ ವಾ । ಅಸ್ಮಾದ್ವರ್ತಮಾನೇ ಪೃಷ್ಟೃಹನ್ಮಹದಿತಿ ನಿಪಾತನಾದತಿಪ್ರತ್ಯಯಃ ಶತೃವಚ್ಚವತಿ। ಉಗಿತಶ್ಚೇತಿ ಜೀಪ್। ಪರ್ಷಂತೀತಿ ಪೃಷತ್ಯಃ ಶೀಕರಾಃ। ಪೃಣಂತಿ ಪಾಲಯಂತೀತಿ ಪೃಷತ್ಯೋ ವಡವಾಃ। ಅಯುಕ್ಷತ। ಯುಜಿರ್ ಯೋಗ ಇತ್ಯಸ್ಯ ಲುಙಿ ಸಿಚಿ ರೂಪಂ । ನಿಘಾತಃ । ಬೃಹದುಕ್ಷಃ। ಉಕ್ಷ ಸೇಚನ ಇತ್ಯಸ್ಮಾತ್ ಕ್ವಿಪ್। ಕೃದುತ್ತರಪದಪ್ರಕೃತಿಸ್ವರಃ। ವೇಪಯಂತಿ । ಟುವೇಪೃ ಕಂಪನೇ। ನಿಘಾತಃ। ಪರ್ವತಾನ್। ಪರ್ವ ಪೂರಣ ಇತ್ಯಸ್ಮಾತ್ ಭೃಮೃದೃಶೀತ್ಯಾದಿನಾ ಅತಚ್। ಪರ್ವತಿ ಪೂರಯತಿ ಭೂಮಿಮುದಕೇನೇತಿ ಪರ್ವತೋ ಮೇಘಃ। ವ್ಯತ್ಯಯೇನಾದ್ಯುದಾತ್ತಃ॥**

ಪ್ರತಿಪದಾರ್ಥ

**ವಾಜಾಃ**—ವೇಗವಾದ ಸಂಚಾರವುಳ್ಳ । **ಅಗ್ನಯಃ**—ಅಗ್ನಿಗಳು । **ಪ್ರಯಂತು**—ಉದಕಪ್ರದೇಶಗಳ ಕಡೆಗೆ ಹೋಗಲಿ. (ಅನಂತರ) । **ತವಿಷೀಭಿಃ**—ಬಲಶಾಲಿಗಳಾದ ಮರುತ್ತುಗಳೊಡನೆ । **ಶುಭೇ**—ಪವಿತ್ರವಾದ ಉದಕದಲ್ಲಿ। **ಸಂಮಿಶ್ಲಾಃ**—ಸೇರಿಕೊಂಡು । **ಪೃಷತೀಃ**—ಉದಕಬಿಂದುಗಳನ್ನು । **ಅಯುಕ್ಷತ**—ಒಟ್ಟುಗೂಡಿಸಿದರು. (ಒಂದಾಗಿ ಸೇರಿಸಲಿ)। **ವಿಶ್ವವೇದಸಃ**—ಸಕಲವನ್ನೂ ತಿಳಿದವರೂ । **ಅದಾಭ್ಯಾಃ**—ಅಪ್ರತಿಹತರೂ ಆದ। **ಮರುತಃ**—ಮರುತ್ತುಗಳು (ವಾಯುಗಳು)। **ಬೃಹದುಕ್ಷಃ**—ಪ್ರಭೂತವಾಗಿ ಉದಕವನ್ನು ಸುರಿಸತಕ್ಕ । **ಪರ್ವತಾನ್**—ಮೇಘಗಳನ್ನು। **ಪ್ರ ವೇಪಯಂತಿ**—ಚಲಿಸುವಂತೆ ಮಾಡುತ್ತವೆ.

ಭಾವಾರ್ಥ

ವೇಗವಾದ ಸಂಚಾರವುಳ್ಳ ಅಗ್ನಿಗಳು ಉದಕಪ್ರದೇಶಗಳ ಕಡೆಗೆ ಹೋಗಲಿ. ಅನಂತರ ಬಲಶಾಲಿಗಳಾದ ಮರುತ್ತುಗಳೊಡನೆ ಪವಿತ್ರವಾದ ಉದಕದಲ್ಲಿ ಸೇರಿಕೊಂಡು ಉದಕಬಿಂದುಗಳನ್ನು ಒಟ್ಟುಗೂಡಿಸಲಿ. ಸಕಲವನ್ನೂ ತಿಳಿದವರೂ, ಅಪ್ರತಿಹತರೂ ಆದ ವಾಯುಗಳು ಪ್ರಭೂತವಾಗಿ ಉದಕವನ್ನು ಸುರಿಸತಕ್ಕ ಮೇಘಗಳನ್ನು ಚಲಿಸುವಂತೆ ಮಾಡುತ್ತವೆ.

## English Translation

May the swift fires combained with the vigorous winds proceed to the pure (region of water), uniting the drops (of rain) : the Maruts irresistible, all knowing, agitate the copious-shedding clouds.

ವಿಶೇಷವಿಷಯಗಳು.

ಈ ಋಕ್ಕಿನಲ್ಲಿ ಸಾಮಾನ್ಯವಾಗಿ ಅಗ್ನಿಯ ಸ್ತುತಿಯು ಇರುವುದಾದರೂ ಮರುದ್ದೇವತೆಗಳ ಸ್ತುತಿಯು ಪ್ರಾಧಾನ್ಯಭಾವದಿಂದ ಉಕ್ತವಾಗಿದೆ.

**ವಾಜಾಃ ಅಗ್ನಯಃ ಪ್ರಯಂತು**—ಇಲ್ಲಿ ವಾಜಶಬ್ದವು ವೇಗದಿಂದ ಯುಕ್ತವಾಗಿರುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅನ್ನನಾಮಗಳಲ್ಲಿ ನಿರುಕ್ತಕಾರರು ಪಾಠಮಾಡಿದ್ದಾರೆ. ವೇಗದಿಂದ ಕೂಡಿರುವ ಅಗ್ನಿಗಳು **ಜಲಮಭಿಲಕ್ಷ್ಯ ಗಚ್ಛಂತು** ಉದಕಗಳೊಡನೆ ಸೇರಿಇರಲಿ ಎಂದು ಅರ್ಥವನ್ನು ಹೇಳಿದೆ.

**ತವಿಷೀಭಿಃ—ಬಲಯುಕ್ತೈಃ ಮರುದ್ಭಿಃ। ತವಂತಿ ಸಂಚರಂತ್ಯಾಕಾಶೇ ಇತಿ ತವಿಷಾಃ ವಾಯವಃ** ಅಂತರಿಕ್ಷದಲ್ಲಿ ಸಂಚರಿಸುವುದರಿಂದ ವಾಯುಗಳಿಗೆ ತವಿಷಾಃ ಎಂದು ಹೆಸರು ಇರುವುದೆಂದು ಅರ್ಥವನ್ನು ವಿವರಿಸಿದೆ.

ಆದರೆ ಇಲ್ಲಿ ತವಿಷೀ ಶಬ್ದವು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದ್ದರೂ, ಬಲಯುಕ್ತವಾದವು ಎಂದು ಅರ್ಥವನ್ನು ವರ್ಣಿಸಿ, ಅಗ್ನಿಗಳು ಬಲವುಳ್ಳ ವಾಯುಗಳೊಡನೆ ಕೂಡಿ, ಉದಕಗಳೊಡಗೂಡಿ ಉದಕದ ಹನಿಗಳನ್ನು ಉಂಟುಮಾಡಿರುತ್ತವೆ ಎಂದು ಒಂದು ವಿಧವಾದ ಅರ್ಥವನ್ನು ವರ್ಣಿಸಿದೆ. ಎರಡನೆಯ ಅರ್ಥದಲ್ಲಿ—**ಯದ್ವಾ ವಾಜಾಃ ವೇಗವಂತೋ ಅಗ್ನಯಃ ತವಿಷೀಭಿರ್ಬಲಯುಕ್ತೈರ್ಮರುದ್ಭಿಃ ಜಲಮನುಲಕ್ಷ್ಯ ಗಚ್ಛಂತು । ತೇ ಚ ಮರುತಃ ಶುಭೇ ಜಲೇಽಗ್ನಿಭಿಃಸ್ಸಂಗತಾಃ ಚಿತ್ರವರ್ಣಾಃ ವಾಹನರೂಪಾಃ ವಡವಾಃ ಅಯುಕ್ಷತ ರಥೇ ಮೇಘಭೇದನಾರ್ಥೇ ಅಯೌಕ್ಷುಃ** । ವೇಗಶಾಲಿಗಳಾದ ಅಗ್ನಿಗಳು ಬಲವುಳ್ಳ ಮರುತ್ತುಗಳೊಡಗೂಡಿ ಉದಕಗಳನ್ನು ಸೇರಿದಾಗ ಅಗ್ನಿಗಳೊಡನೆ ಇರುವ (ವಾಯುಗಳು) ಮರುದ್ದೇವತೆಗಳು ತಮ್ಮ ವಾಹನವಾದ ಚಿತ್ರವರ್ಣಗಳಿಂದ ಇರುವ ಹೆಣ್ಣುಕುದುರೆಗಳನ್ನು ಕಟ್ಟಿರುವ ರಥವನ್ನು ಮೇಘವನ್ನು ಭೇದಿಸುವುದಕ್ಕಾಗಿ ಹತ್ತಿದರು ಎಂದು ಅರ್ಥವನ್ನು ವಿವರಿಸಿದೆ. ಆಯಾಯ ದೇವತೆಗಳ ವಾಹನಗಳನ್ನು ವಿವರಿಸುವಾಗ ನಿರುಕ್ತಕಾರರು **ಪೃಷತ್ಯೋ ಮರುತಾಂ** (ನಿ. ೨-೨೮) ಎಂದು ವರ್ಣಿಸಿದ್ದಾರೆ. ಇಲ್ಲಿ ಸಾಯಣರು **ಪೃಷತೀಃ** ಎಂಬ ಪದಕ್ಕೆ ಉದಕದ ಬಿಂದುಗಳು ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ವಿಶ್ವವೇದಸಃ ಅದಾಭ್ಯಾಃ**— ಈ ಪದಗಳು ಮರುತಃ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿವೆ. ಎಂದು ಹೇಳಿದೆ. ಆಯಾಯ ಪ್ರಾಣಿಗಳು ಆಚರಿಸಿರುವ ಕರ್ಮಗಳನ್ನು (ತಿಳಿದಿರುವ) ತಿಳಿಯುವುದರಲ್ಲಿ ನಿಪುಣರೂ, ಇತರರಿಂದ ತಿರಸ್ಕಾರಾನರ್ಹರೂ ಆಗಿರುವ ಮರುದ್ದೇವತೆಗಳು **ಯಥಾ ಪ್ರಭೂತಾ ವೃಷ್ಟಿರ್ಭವತಿ ತಥಾ ಮೇಘಾನ್ ಚಾಲಯಂತಿ** । ಬಹಳವಾದ ವೃಷ್ಟಿಯನ್ನು ಮೇಘಗಳು ಸುರಿಸುವಹಾಗೆ ಮೇಘಗಳನ್ನು ಪ್ರೇರಿಸುವರು ಎಂದು ವಿವರಿಸಿದೆ.

**ಪೃಷತೀಃ—ಬಿಂದೂನ್ । ವರ್ಷಂತೀತಿ ಪೃಷತ್ಯಃ ಶೀಕರಾಃ । ಪೃಣಂತಿ ಪಾಲಯಂತಿ ಇತಿ ಪೃಷತ್ಯೋ ವಡವಾಃ** । ಸೇಚನಾರ್ಥದಲ್ಲಿರುವ ಪೃಷಧಾತುವಿನಿಂದ ನಿಷ್ಪನ್ನವಾದ ಪೃಷತೀಶಬ್ದವು ಉದಕದಹನಿಗಳು ಎಂಬ ಅರ್ಥವನ್ನು ಬೋಧಿಸುವುದು ಅಥವಾ ಪಾಲನ ಅಥವಾ ಪೂರಣಾರ್ಥಕವಾದ ಪೃಧಾತುವಿನಿಂದ ನಿಷ್ಪನ್ನವಾಗಿ ರಕ್ಷಿಸುವುದು ಎಂಬ ಅರ್ಥವನ್ನು ಬೋಧಿಸುವುದು ಎಂದು ಹೇಳಿ, ರಕ್ಷಣಾಕಾರ್ಯವು ಮರುದ್ದೇವತೆಗಳ ವಾಹನಗಳಿಂದ ನೆರವೇರುವುದರಿಂದ **ಪೃಷತ್ಯಃ ವಡವಾಃ** ಎಂಬ ಅರ್ಥವನ್ನು ವಿವರಿಸಿದೆ.

**ಪರ್ವತಾಃ—ಪೂರಯತಿ ಭೂಮಿಮುದಕೇನ ಇತಿ ಪರ್ವತೋ ಮೇಘಃ "ಪರ್ವ ಪೂರಣೇ"** ಎಂದು ಪೂರಣಾರ್ಥಕವಾದ ಪರ್ವಧಾತುವಿನಿಂದ ಪರ್ವತಶಬ್ದವು ನಿಷ್ಪನ್ನವಾಗಿ ಉದಕಗಳಿಂದ ಭೂಮಿಯನ್ನು ತುಂಬುವ ಕಾರಣ ಮೇಘವು ಪರ್ವತಶಬ್ದದಿಂದ ಬೋಧ್ಯವಾಗಿರುವುದು ಎಂದು ಅರ್ಥವನ್ನು ನಿರ್ದೇಶಮಾಡಿ ಹೇಳಿದೆ. ವೈದ್ಯುತಾಗ್ನಿಯನ್ನು ವರ್ಣಿಸಿ, ವೈದ್ಯುತಾಗ್ನಿಯ ಸಂಬಂದದಿಂದ ವಾಯುಗಳು ಮೇಘಗಳನ್ನು ಶೀಳಿ ವೃಷ್ಟಿಯು ಸುರಿಯುವಂತೆ ಮಾಡುವುವು ಎಂದು ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಯಂತು**— ಇಣ್ ಗತೌ ಧಾತು. ಲೋಟ್ ಪ್ರಥಮಪುರುಷಬಹುವಚನಕ್ಕೆ ಅಂತಾದೇಶ. **ಏರುಃ** ಎಂಬುದರಿಂದ ಉತ್ವ. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತವಿಷೀಭಿಃ**—ತವ ಗತೌ. ಇದು ಸೌತ್ರವಾದ ಧಾತು. ಇದಕ್ಕೆ **ತವೇರ್ಣಿದ್ವಾ** (ಉ. ಸೂ. ೧–೪೮) ಎಂಬುದರಿಂದ ಟಿಷಚ್ ಪ್ರತ್ಯಯ. ಇದು ಣಿತ್ತಾಗುತ್ತದೆ. ತವಂತಿ ಸಂಚರಂತಿ ಆಕಾಶೇ ಇತಿ (ಆಕಾಶದಲ್ಲಿ ಸಂಚರಿಸುವವುಗಳು) ತವಿಷಾಃ ವಾಯವಃ ಇದಕ್ಕೆ ಸ್ತ್ರೀತ್ವ ವಿವಕ್ಷಾಮಾಡಿದಾಗ ಟಿತ್ತಾದುದರಿಂದ **ಟಿಡ್ಢಾಣಞ್ದ್ವಯಸಚ್**—(ಪಾ. ಸೂ. ೪–೧–೧೫) ಎಂಬುದರಿಂದ ಙೀಪ್‌ಪ್ರತ್ಯಯ. ಪೂರ್ವದ ಅಕಾರಕ್ಕೆ ಲೋಪ. ವ್ಯತ್ಯಯದಿಂದ ಸ್ತ್ರೀಲಿಂಗ ಹೇಳಬೇಕು. ನಿತ್‌ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪೃಷತೀಃ**—ಪೃಷು ಸೇಚನೇ ಧಾತು. ಅಥವಾ ಪೄ ಪಾಲನಪೂರಣಯೋಃ ಕ್ರ್ಯಾದಿ. ಇದಕ್ಕೆ ವರ್ತಮಾನಾರ್ಥವಿವಕ್ಷಾಮಾಡಿದಾಗ **ವರ್ತಮಾನೇ ಪೃಷತ್ ಬೃಹತ್ ಮಹತ್**—(ಉ. ಸೂ. ೨–೨೪೧) ಎಂಬುದರಿಂದ ನಿಪಾತಮಾಡಿರುವುದರಿಂದ ಅದಿಪ್ರತ್ಯಯವು ಶತೃವದ್ಭಾವವನ್ನು ಹೊಂದುತ್ತದೆ. ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ** ಎಂಬುದರಿಂದ ಙೀಪ್. ಪೃಷಂತಿ ಇತಿ ಪೃಷತ್ಯಃ ಶೀಕರಾಃ ಅಥವಾ ಪೃಣಂತಿ ಪಾಲಯಂತಿ ಇತಿ ಪೃಷತ್ಯಃ ಬಡವಾಃ

**ಅಯುಕ್ಷತ**—ಯುಜಿರ್ ಯೋಗೇ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಆತ್ಮನೇಪದೇಷ್ವನತಃ** (ಪಾ. ಸೂ. ೭–೧–೫) ಎಂಬುದರಿಂದ ಅತಾದೇಶ. ಚ್ಲಿಗೆ ಕ್ಸಾದೇಶ. ಅದನ್ನು ನಿಮಿತ್ತೀಕರಿಸಿ ಧಾತು ಜಕಾರಕ್ಕೆ ಕುತ್ವ, ಚರ್ತ್ವ. ಸಕಾರಕ್ಕೆ ಷತ್ವ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಬೃಹದುಕ್ಷಃ**—ಉಕ್ಷ ಸೇಚನೇ ಧಾತು. **ಕ್ವಿಪ್‌ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವೇಪಯಂತಿ**—ಟುವೇಪೃ ಕಂಪನೇ ಧಾತು. **ಹೇತುಮತಿಚ** ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವಾಗ ಣಿಚ್. ಣಿಜಂತದ ಮೇಲೆ ಲಟ್. ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪರ್ವತಾನ್**—ಪರ್ವ ಪೂರಣೇ ಧಾತು. ಇದಕ್ಕೆ **ಭೃಮೃದೃಶಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. ಪರ್ವತಿ ಪೂರಯತಿ ಭೂಮಿಮುದಕೇನ ಇತಿ ಪರ್ವತೋ ಮೇಘಃ (ನೀರಿನಿಂದ ಭೂಮಿಯನ್ನು ತುಂಬಿಸುವುದರಿಂದ ಮೋಡವು ಪರ್ವತವೆನಿಸಿಕೊಳ್ಳುತ್ತದೆ). ಪ್ರತ್ಯಯ ಚಿತ್ತಾದರೂ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅದಾಭ್ಯಾಃ**—**ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸಂಹಿತಾಪಾಠಃ**

ಅಗ್ನಿಶ್ರಿಯೋ ಮರುತೋ ವಿಶ್ವಕೃಷ್ಟಯ ಆ ತ್ವೇಷಮುಗ್ರಮವ ಈಮಹೇ ವಯಂ।
ತೇ ಸ್ವಾನಿನೋ ರುದ್ರಿಯಾ ವರ್ಷನಿರ್ಣಿಜಃ ಸಿಂಹಾ ನ ಹೇಷಕ್ರತವಃ ಸುದಾನವಃ ॥

ಪದಪಾಠಃ

ಅಗ್ನಿಽಶ್ರಿಯಃ । ಮರುತಃ । ವಿಶ್ವಽಕೃಷ್ಟಯಃ । ಆ । ತ್ವೇಷಂ । ಉಗ್ರಂ । ಅವಃ । ಈಮಹೇ । ವಯಂ ॥
ತೇ । ಸ್ವಾನಿನಃ । ರುದ್ರಿಯಾಃ । ವರ್ಷಽನಿರ್ನಿಜಃ । ಸಿಂಹಾಃ । ನ । ಹೇಷಽಕ್ರತವಃ । ಸುಽದಾನವಃ ॥

ಸಾಯಣಭಾಷ್ಯಂ

ಅಗ್ನಿಶ್ರಿಯೋ ವೈದ್ಯುತಮಗ್ನಿಂ ಶ್ರಯಂತೋ ವಿಶ್ವಕೃಷ್ಟಯಃ । ವಿಶ್ವಸ್ಯ ವೃಕ್ಷಾದೇಃ ಕೃಷ್ಟಿರಾಕರ್ಷಣಂ ನಮನೋನ್ನಮನಾದಿಲಕ್ಷಣಂ ಕರ್ಮ ಯೇಭ್ಯೋ ಭವತಿ ತೇ ವಿಶ್ವಕೃಷ್ಟಯಃ । ಏವಂವಿಧಾಯೇ ಮರುತೋ ವಿದ್ಯಂತೇ ತೇಷಾಂ ಚ ಮರುತಾಂ ತ್ವೇಷಂ ದೀಪ್ತಮುಗ್ರಮುದ್ಗೂರ್ಣಮವೋ ರಕ್ಷಣಮೇಮಹೇ । ಕುಶಿಕಾ ವಯಮಾ ಸಮಂತಾದ್ಯಾಚಾಮಹೇ । ತೇ ಮರುತೋ ರುದ್ರಿಯಾ ರುದ್ರಪುತ್ರಾ ವರ್ಷನಿರ್ಣಿಜಃ । ನಿರ್ಣಿಕ್‌ಶಬ್ದೋ ರೂಪವಾಚೀ ನಿರ್ಣಿಗ್ರೂಪಮಿತಿ ತನ್ನಾಮಸು ಪಾಠಾತ್ । ವರ್ಷಣಂ ರೂಪಂ ಸ್ವಭಾವೋ ಯೇಷಾಂ ತೇ ವರ್ಷನಿರ್ಣಿಜೋ ವರ್ಷಕಾಃ । ಹೇಷಕ್ರತವಃ । ಹೇಷಾರವಸ್ಯ ಕ್ರತುಃ ಕರಣಂ ಯೇಷಾಂ ತೇ ಕೃತಹೇಷಾರವಾಃ ಸಿಂಹಾ ನ ಸಿಂಹಾ ಇವ ಸ್ವಾನಿನಃ ಶಬ್ದವಂತಃ । ಏವಂವಿಧಾಸ್ತೇ ಮರುತಃ ಸುದಾನವಃ ಸುಷ್ಠು ಜಲಸ್ಯ ದಾತಾರೋ ಭವಂತಿ ॥ ಅಗ್ನಿಶ್ರಿಯಃ । ಶ್ರಿಞ್ ಸೇವಾಯಾಂ । ವಚಿಪ್ರಚ್ಛೀತ್ಯಾದಿನಾ ಕ್ವಿಪ್ ಸಂಪ್ರಸಾರಣಾಭಾವೋ ಧಾತೋರ್ದೀರ್ಘಶ್ಚ । ಜಸಿ ಇಯಙಾದೇಶಃ । ಕೃತ್ಸ್ವರಃ । ಉಗ್ರಂ । ಗಮ್ಲೃ ಗತೌ । ಉತ್ಪೂರ್ವಃ । ಋಜ್ರೇಂದ್ರಾಗ್ರೇತಿ ನಿಪಾತನಾದ್ರಪ್ರತ್ಯಯೋ ಮಕಾರಲೋಪ ಉಪಸರ್ಗಾಸ್ಯಾಂತಲೋಪಶ್ಚ । ಉದ್ಗಚ್ಛತೀತ್ಯುಗ್ರಃ । ಪ್ರತ್ಯಯಸ್ವರಃ । ಈಮಹೇ । ಈ ಕಾಂತಿಗತ್ಯಾದಿಷು । ವ್ಯತ್ಯಯೇನಾತ್ಮನೇಪದಂ । ಅದಾದಿತ್ವಾಚ್ಛಪೋ ಲುಕ್ । ನಿಘಾತಃ । ಸ್ವಾನಿನಃ । ಸ್ವಾನೋ ಘೋಷಃ ಇಂತಃ । ತದ್ವಂತಃ । ಅತ ಇನಿಠನಾವಿತೀನಿಃ । ಪ್ರತ್ಯಯಸ್ವರಃ । ರುದ್ರಿಯಾಃ । ರುದ್ರಶಬ್ದಾಚ್ಛಾಂದಸೋ ಘಃ । ತಸ್ಯೇಯಾದೇಶಃ । ಪ್ರತ್ಯಯಸ್ವರಃ ॥ ೨೬ ॥

ಪ್ರತಿಪದಾರ್ಥ

**ಮರುತಃ**—ಮರುತ್ತ್ರಗಳು । **ಅಗ್ನಿಶ್ರಿಯಃ**—ವಿದ್ಯುದ್ರೂಪದ ಅಗ್ನಿಯನ್ನು ಆಶ್ರಯಿಸಿ ಪ್ರಕಾಶಿಸುವುವೂ । **ವಿಶ್ವಕೃಷ್ಟಯಃ**—ವೃಕ್ಷಾದಿ ವಿಶ್ವದ ಪದಾರ್ಥಗಳನ್ನೆಲ್ಲಾ ಆಕರ್ಷಿಸಿ ಚಲಿಸುವಂತೆ ಮಾಡುವುವೂ ಆಗಿವೆ । **ವಯಂ**—ಕುಶಿಕವಂಶೋತ್ಪನ್ನರಾದ ನಾವು । **ಉಗ್ರಂ**—ಉಗ್ರಸ್ವರೂಪವನ್ನು ಹೊಂದಿದ । **ತ್ವೇಷಂ**—(ಆ ಮರುತ್ತುಗಳ) ಪ್ರಭಾವವನ್ನು । **ಅವಃ**—ರಕ್ಷಣೆಗಾಗಿ । **ಆ ಈಮಹೇ**—ಪೂರ್ಣವಾಗಿ ಪ್ರಾರ್ಥಿಸುತ್ತೇವೆ । **ರುದ್ರಿಯಾಃ**—ರುದ್ರಪುತ್ರರೂ । **ವರ್ಷನಿರ್ಣಿಜಃ**—ವೃಷ್ಟ್ಯಾತ್ಮಕವಾದ ಸ್ವರೂಪವುಳ್ಳವರೂ । **ಹೇಷಕ್ರತವಃ**—ಗಭೀರವಾದ ಶಬ್ದವನ್ನು ಮಾಡುವವರೂ ಆದ । **ತೇ**—ಆ ಮರುತ್ತುಗಳು । **ಸಿಂಹಾ ನ**—ಸಿಂಹಗಳಂತೆ । **ಸ್ವಾನಿನಃ**—ಗರ್ಜನೆಯ ಶಬ್ದವನ್ನು ಮಾಡುತ್ತಾ । **ಸುದಾನವಃ**—ಉದಕದ ದಾತೃಗಳಾಗಿ ಆಗುತ್ತಾರೆ ॥

ಭಾವಾರ್ಥ

ಮರುತ್ತುಗಳು ವಿದ್ಯುದ್ರೂಪದ ಅಗ್ನಿಯನ್ನು ಆಶ್ರಯಿಸಿ ಪ್ರಕಾಶಿಸುವುವೂ, ವಿಶ್ವದ ವೃಕ್ಷಾದಿಪದಾರ್ಥಗಳನ್ನೆಲ್ಲಾ ಆಕರ್ಷಿಸಿ ಚಲಿಸುವಂತೆ ಮಾಡುವುವೂ ಆಗಿವೆ. ಕುಶಿಕವಂಶೋತ್ಪನ್ನರಾದ ನಾವು ಉಗ್ರಸ್ವರೂಪವನ್ನು

ಹೊಂದಿದ ಆ ಮರುತ್ತುಗಳ ಪ್ರಭಾವವನ್ನು ರಕ್ಷಣೆಗಾಗಿ ಪೂರ್ಣವಾಗಿ ಪ್ರಾರ್ಥಿಸುತ್ತೇವೆ. ರುದ್ರಪುತ್ರರೂ, ವೃಷ್ಟ್ಯಾತ್ಮಕವಾದ ಸ್ವರೂಪವುಳ್ಳವರೂ, ಗಭೀರವಾದ ಶಬ್ದವನ್ನು ಮಾಡುವವರೂ ಆದ ಆ ಮರುತ್ತುಗಳು ಸಿಂಹಗಳಂತೆ ಗರ್ಜನೆಯ ಶಬ್ದವನ್ನು ಮಾಡುತ್ತಾ ಉದಕದ ದಾತೃಗಳಾಗಿ ಆಗುತ್ತಾರೆ.

## English Translation.

The fire-beautified, all-agitating Maruts : we seek their fierce radiance for protection : they, the sons of Rudra, the bountiful Maruts, whose form is the rain, are loud like roaring lions.

### ವಿಶೇಷವಿಷಯಗಳು

**ಅಗ್ನಿಶ್ರಿಯಃ—ವೈದ್ಯುತಮಗ್ನಿಂ ಶ್ರಯಂತಃ** ಮರುತ್ತುಗಳು ವಿದ್ಯುದ್ರೂಪವಾದ ಅಗ್ನಿಯನ್ನು ಹೊಂದಿರುವುವು. ಮೇಘಗಳಲ್ಲಿರುವ ಉದಕಗಳಲ್ಲಿರುವ ಅಗ್ನಿಯು ವಿದ್ಯುತ್ತಿನ (ಮಿಂಚಿನ) ರೂಪದಿಂದ ಇರುವನು. ಅವನು ಇತರರಿಗೆ ತನ್ನ ಸ್ವರೂಪವನ್ನು ಪ್ರಕಟವಾಗುವಹಾಗೆ ವಾಯುಗಳು ಆಚರಿಸುವುದರಿಂದ ಇಲ್ಲಿ ಹೀಗೆ ವರ್ಣಿಸಿದೆ.

**ವಿಶ್ವಕೃಷ್ಟಯಃ—ವಿಶ್ವಸ್ಯ ಕೃಷ್ಟ್ಯಾದೇಃ । ಕೃಷ್ಟಿಃ ಆಕರ್ಷಣಂ । ವೃಕ್ಷಾಣಾಂ ನಮನೋನ್ನಮನಾದಿಲಕ್ಷಣಂ ಕರ್ಮ ಯೇಭ್ಯೋ ಭವತಿ ತೇ ವಿಶ್ವಕೃಷ್ಟಯಃ** । ಇಲ್ಲಿ ವಿಶ್ವಶಬ್ದಕ್ಕೆ ವೃಕ್ಷವೆಂದು ಅರ್ಥವನ್ನು ಹೇಳಿದೆ. ವೃಕ್ಷಗಳನ್ನು ಎಳೆಯುವುದು, ಬಗ್ಗಿಸುವುದು ಮೇಲುಮುಖವಾಗಿ ಒಯ್ಯುವುದು ಎಂಬ ಕಾರ್ಯಗಳನ್ನು ವಾಯುವು ಆಚರಿಸುವುದರಿಂದ ವಿಶ್ವಕೃಷ್ಟಿಶಬ್ದದಿಂದ ವಾಯುವು ಬೋಧಿತನಾಗಿರುವನು ಎಂದು ವರ್ಣಿತವಾಗಿದೆ.

**ಮರುತಃ ತ್ವೇಷಂ ಉಗ್ರಂ ಅವಃ ಈಮಹೇ—** ಈ ಮರುದ್ದೇವತೆಗಳ ಪ್ರಭೂತವಾದ ಬಲದಿಂದ ಕೂಡಿದ ರಕ್ಷಣೆಯನ್ನು ಯಜಮಾನರಾದ ನಾವು ಆಶಿಸಿದ್ದೇವೆ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.

**ರುದ್ರಿಯಾಃ ವರ್ಷನಿರ್ಣಿಜಃ—ವರ್ಷಣಂ ರೂಪಂ ಸ್ವಭಾವೋ ಯೇಷಾಂ ತೇ ವರ್ಷನಿರ್ಣಿಜಃ ವರ್ಷಕಾಃ** । ನಿರ್ಣಿಕ್ ಎಂಬ ಪದವು ರೂಪನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಮರುತ್ತುಗಳು ರುದ್ರಪುತ್ರರೆಂದೂ, ವೃಷ್ಟಿಯನ್ನು ಉಂಟುಮಾಡುವ ಸ್ವಭಾವವುಳ್ಳವರೆಂದೂ ವರ್ಣಿಸಿದೆ.

**ಹೇಷಕ್ರತವಃ ಸಿಂಹಾ ನ ಸ್ವಾನಿನಃ— ಹೇಷಾರವಸ್ಯ ಕ್ರತುಃ ಕರಣಂ ಯೇಷಾಂ ತೇ ಕೃತಹೇಷಾರವಾಃ ಸಿಂಹಾ ಇವ ಶಬ್ದವಂತಃ** । ಸಿಂಹಗಳ ಹಾಗೆ (ಶಬ್ದವನ್ನು) ಆರ್ಭಟವನ್ನು ಮರುದ್ದೇವತೆಗಳು ಆಚರಿಸುವ ಸ್ವಭಾವವವರೆಂದು ಸಿಂಹವನ್ನು ದೃಷ್ಟಾಂತವಾಗಿ ಹೇಳಿ ಮರುತ್ತುಗಳ ಸ್ವಭಾವವನ್ನು ವಿವರಿಸಿದೆ. ಹೀಗೆ ಪ್ರಭೂತವಾದ ಮಹಿಮೆಯನ್ನು ಹೊಂದಿರುವ ಮರುತ್ತುಗಳು ಉದಕಗಳನ್ನು ಲೋಕದ ಉಪಕಾರಕ್ಕಾಗಿ ಅನುಗ್ರಹಿಸುವರೆಂದು ವರ್ಣಿಸಿದೆ.

### ವ್ಯಾಕರಣಪ್ರಕ್ರಿಯಾ

**ಅಗ್ನಿಶ್ರಿಯಃ—**ಶ್ರಿಞ್ ಸೇವಾಯಾಂ. ಧಾತು. **ವಚಿಪ್ರಚ್ಛಿ—**(ಉ. ಸೂ. ೨-೨-೧೫) ಎಂಬುದರಿಂದ ಕ್ವಿಪ್ ಪ್ರತ್ಯಯವೂ ಸಂಪ್ರಸಾರಣಾಭಾವವೂ ಧಾತುವಿಗೆ ದೀರ್ಘವೂ ಬರುತ್ತವೆ. ಜಸ್ ಪರವಾದಾಗ **ಅಚಿಶ್ನುಧಾತುಭ್ರುವಾಂ** ಎಂಬುದರಿಂದ ಇಯಜಾದೇಶ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಿಶ್ವಕೃಷ್ಟಯಃ—**ಕೃಷ ವಿಲೇಖನೇ ಧಾತು. ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ. ವಿಶ್ವಸ್ಯ ಕೃಷ್ಟಿಃ ಯೇಭ್ಯಃ ತೇ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಉಗ್ರಂ—ಉತ್ ಉಪಸರ್ಗ. ಗಮ್ಲೃ ಗತೌ ಧಾತು. ಋಜ್ರೇಂದ್ರಾಗ್ರ—(ಉ. ಸೂ. ೨-೧೮೦) ಎಂಬುದರಿಂದ ನಿಪಾತಮಾಡಿರುವುದರಿಂದ ರಪ್ರತ್ಯಯವೂ ಧಾತುವಿನ ಮಕಾರಕ್ಕೆ ಲೋಪವೂ ಉಪಸರ್ಗದ ಅಂತ್ಯಕ್ಕೆ ಲೋಪವೂ ಬರುತ್ತವೆ. ಉದ್ಗಚ್ಛತೀತಿ ಉಗ್ರಃ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಈಮಹೇ—ಈ ಕಾಂತಿಗತ್ಯಾದಿಷು. ಧಾತು. ವ್ಯತ್ಯಯೋಬಹುಲಂ ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಉತ್ತಮಪುರುಷಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿತಆತ್ಮನೇಪದಾನಾಂ ಎಂಬುದರಿಂದ ಟಿಗೆ ಏತ್ವ. ಅದಿಪ್ರಭೃತಿಭ್ಯಃ ಶಪಃ (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸ್ವಾನಿನಃ—ಸ್ವಾನ ಎಂಬುದು ಘಞಂತವಾದ ಶಬ್ದ. ಸ್ವಾನಃ ಅಸ್ಯ ಅಸ್ತಿ ಇತಿ ಎಂದು ಅರ್ಥ ವಿವಕ್ಷಾ ಮಾಡಿದಾಗ ಅತ ಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಸ್ವಾನಿನ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

ರುದ್ರಿಯೋಃ—ರುದ್ರಶಬ್ದದ ಮೇಲೆ ಛಾಂದಸವಾಗಿ ಘ ಪ್ರತ್ಯಯ. ಆಯನೇಯೀನೀ (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಇಯಾದೇಶ. ಯಸ್ಯೇತಿ ಚ ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ವ್ರಾತಂವ್ರಾತಂ ಗಣಂಗಣಂ ಸುಶಸ್ತಿಭಿರಗ್ನೇರ್ಭಾಮಂ ಮರುತಾಮೋಜ ಈಮಹೇ।
ಪೃಷದಶ್ವಾಸೋ ಅನವಭ್ರರಾಧಸೋ ಗಂತಾರೋ ಯಜ್ಞಂ ವಿದಥೇಷು ಧೀರಾಃ ॥

ಪದಪಾಠಃ

ವ್ರಾತಂऽವ್ರಾತಂ । ಗಣಂऽಗಣಂ । ಸುಶಸ್ತಿऽಭಿಃ । ಅಗ್ನೇಃ । ಭಾಮಂ । ಮರುತಾಂ । ಓಜಃ । ಈಮಹೇ ।
ಪೃಷತ್ऽಅಶ್ವಾಸಃ । ಅನವಭ್ರऽರಾಧಸಃ । ಗಂತಾರಃ । ಯಜ್ಞಂ । ವಿದಥೇಷು । ಧೀರಾಃ ॥ ೬ ॥

ಸಾಯಣಭಾಷ್ಯಂ

ಕುಶಿಕಾ ವಯಮಗ್ನೇರ್ಭಾಮಂ ಭಾಸಕಂ ಮರುತಾಮೋಜಸ್ತೇಜೋ ವ್ರಾತಂವ್ರಾತಂ ವ್ರಾತೇವ್ರಾತೇ ಪ್ರತಿಸಮೂಹಂ ಗಣಂಗಣಂ ಗಣೇ ಗಣೇ ಮಹತಿ ಸಮೂಹೇ ಕ್ರಿಯಮಾಣಾಭಿಃ ಸುಶಸ್ತಿಭಿಃ । ಶೋಭನಾಃ ಶಸ್ತಯಃ ಸ್ತುತಯೋ ಯೈರ್ಮಂತ್ರೈಃ ಕ್ರಿಯಂತೇ ತೇ ಸುಶಸ್ತಯಃ । ತೈರ್ಮಂತ್ರೈರೀಮಹೇ । ತಾದೃಶಂ ಮಾರುತಂ ತೇಜೋ ಯಾಚಾಮಹೇ । ಪೃಷದಶ್ವಾಸಃ । ಪೃಷತ್ಯಶ್ಚಿತ್ರವರ್ಣಾ ಅಶ್ವಾ ಯೇಷಾಂ ತೇ ತಾದೃಶಾಃ । ಅನವಭ್ರರಾಧಸಃ । ನ ವಿದ್ಯತೇಽವಭ್ರಂಶೋ ಯಸ್ಯ ತದನವಭ್ರಂ । ಅನವಭ್ರಂ ರಾಧೋ ಧನಂ ಯೇಷಾಂ ತೇಽನವಭ್ರರಾಧಸಃ । ಸಂಪೂರ್ಣಧನಾ ಇತಿ ಯಾವತ್ । ಧೀರಾಃ ಕರ್ಮಾಭಿಜ್ಞಾಸ್ತೇ ಮರುತೋ ವಿದಥೇಷು ಯಜ್ಞೇಷು ಯಜ್ಞಂ ಯಜನೀಯಂ ಹವಿರಭಿಲಕ್ಷ್ಯ ಗಂತಾರೋ

ಗಮನಶೀಲಾ ಭವಂತಿ ॥ ಗಣಂ ಗಣಂ । ಗಣ ಸಂಖ್ಯಾನೇ । ಪಚಾದ್ಯಚ್ । ನಿತ್ಯವೀಪ್ಸಯೋರಿತಿ ದ್ವಿರ್ವಚನಂ । ಪರಸ್ಯಾಮ್ರೇಡಿತತ್ವಾದನುದಾತ್ತತ್ವೇ ಪೂರ್ವಪದಸ್ವರಃ । ಸುಶಸ್ತಿಭಿಃ । ಬಹುವ್ರೀಹೌ ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಭಾಮಂ । ಭಾ ದೀಪ್ತೌ । ಅರ್ತಿಸ್ತುಸ್ಸಿತ್ಯಾದಿನಾ ಮನ್ । ನಿತ್ಸ್ವರಃ । ಓಜಃ । ಉಬ್ಜ ಆರ್ಜವೇ । ಉಬ್ಜೇರ್ಬಲೇ ಬಲೋಪಶ್ಚ । ಉ. ४-೧೯೧ । ಇತ್ಯಸುನ್ । ತತ್ಸಂನಿಯೋಗೇನ ಬಕಾರಲೋಪಃ । ಆರ್ಧಧಾತುಕಲಕ್ಷಣೋ ಗುಣಃ । ನಿತ್ಸ್ವರಃ । ಈಮಹೇ । ಕಾಂತ್ಯಾದಿಷು । ನಿಘಾತಃ । ಅನವಭ್ರರಾಧಸಃ । ಅನವಭ್ರಂ । ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಗಂತಾರಃ । ತಾಚ್ಛೀಲಿಕಸ್ತೃನ್ । ವಿದಥೇಷು । ವಿದ ಜ್ಞಾನೇ । ರುದಿವಿದಿಭ್ಯಾಂ ಕಿದಿತ್ಯಥಪ್ರತ್ಯಯಃ । ಕಿತ್ತ್ವಾದಗುಣಃ । ವಿದಂತ್ಯಸ್ಮಿನ್ಕರ್ಮಜಾತಮಧ್ವರ್ಯ್ವಾದಯ ಇತಿ ವಿದಥೋ ಯಜ್ಞಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಅಗ್ನೇಃ**—ಅಗ್ನಿಯ । **ಭಾಮಂ**—ಪ್ರಭಾರೂಪವಾದುದೂ । **ಮರುತಾಂ**—ಮರುತ್ತುಗಳ । **ಓಜಃ**—ತೇಜೋರೂಪವಾದುದೂ ಆದ ಶಕ್ತಿಸಮೂಹವನ್ನು । **ವ್ರಾತಂವ್ರಾತಂ**—(ಯಜ್ಞಕರ್ತರ) ಗುಂಪುಗಳಿರುವ ಕಡೆಗಳಲ್ಲೆಲ್ಲಾ (ಮತ್ತು) । **ಗಣಂ ಗಣಂ**—ದೊಡ್ಡ ದೊಡ್ಡ ಸಭೆಗಳು ಸೇರಿದ ಕಡೆಗಳಲ್ಲೆಲ್ಲಾ । **ಸುಶಸ್ತಿಭಿಃ**—ಉತ್ತಮವಾದ ಮಂತ್ರಗಳಿಂದ । **ಈಮಹೇ**—ಪ್ರಾರ್ಥಿಸುತ್ತೇವೆ । **ಪೃಷದಶ್ವಾಸಃ**—ಚಿತ್ರವರ್ಣಗಳನ್ನು ಹೊಂದಿರುವ ಅಶ್ವಗಳುಳ್ಳವರೂ, । **ಅನವಭ್ರರಾಧಸಃ**—ನ್ಯೂನವಿಲ್ಲದೇ ಪೂರ್ಣವಾಗಿರತಕ್ಕ ಧನವುಳ್ಳವರೂ, । **ಧೀರಾಃ**—ಧೀಮಂತರೂ ಆದ ಮರುತ್ತುಗಳು । **ವಿದಥೇಷು**—ಯಜ್ಞಗಳಲ್ಲಿ । **ಯಜ್ಞಂ**—ಪೂಜ್ಯವಾದ ಹವಿಸ್ಸನ್ನುದ್ದೇಶಿಸಿ । **ಗಂತಾರಃ**—ಹೋಗುವವರಾಗಿ ಆಗುತ್ತಾರೆ.

ಭಾವಾರ್ಥ

ಅಗ್ನಿಯ ಪ್ರಭಾರೂಪವಾದುದೂ, ಮರುತ್ತುಗಳ ತೇಜೋರೂಪವಾದುದೂ ಆದ ಶಕ್ತಿಸಮೂಹವನ್ನು ಯಜ್ಞಕರ್ತರ ಗುಂಪುಗಳಿರುವ ಕಡೆಗಳಲ್ಲೂ, ದೊಡ್ಡದೊಡ್ಡ ಸಭೆಗಳು ಸೇರಿದ ಕಡೆಗಳಲ್ಲೂ ಉತ್ತಮವಾದ ಮಂತ್ರಗಳಿಂದ ಪ್ರಾರ್ಥಿಸುತ್ತೇವೆ. ಚಿತ್ರವರ್ಣಗಳನ್ನು ಹೊಂದಿರುವ ಅಶ್ವಗಳುಳ್ಳವರೂ, ನ್ಯೂನವಿಲ್ಲದೇ ಪೂರ್ಣವಾಗಿರತಕ್ಕ ಧನವುಳ್ಳವರೂ ಧೀಮಂತರೂ ಆದ ಮರುತ್ತುಗಳು ಯಜ್ಞಗಳಲ್ಲಿ ಪೂಜ್ಯವಾದ ಹವಿಸ್ಸನ್ನುದ್ದೇಶಿಸಿ ಹೋಗುತ್ತಾರೆ.

## English Translation

We solicit the might of the Maruts, the irradiation of Agni with solemn prayers in every assembly and company (of worshippers); those Maruts who have party-coloured steeds, who are dispensers of unfailing wealth, firm (of purpose), and frequenters of sacrifices.

ವಿಶೇಷವಿಷಯಗಳು

**ಸುಶಸ್ತಿಭಿಃ—ಶೋಭನಾಃ ಶಸ್ತಯಃ ಸ್ತುತಯೋ ಯೈರ್ಮಂತ್ರೈಃ ಕ್ರಿಯಂತೇ ತೇ ಸುಶಸ್ತಯಃ।** ಉತ್ತಮವಾದ ಸ್ತುತಿಗಳ ರೂಪದಿಂದ ಇರುವ ಮಂತ್ರಗಳು ಎಂದು ಸುಶಸ್ತಿಶಬ್ದಾರ್ಥವು ವಿವೃತವಾಗಿದೆ. **ಮರುತಾಂ ಓಜಃ ಅಗ್ನೇರ್ಭಾಮಂ** ಮರುತ್ತುಗಳ ತೇಜಸ್ಸು ಅಗ್ನಿಯನ್ನು ಪ್ರಕಾಶಗೊಳಿಸುವುದೆಂದು ವಿವರಿಸಿದೆ.

ಕುಶಿಕಗೋತ್ರೋತ್ಪನ್ನರಾದ ಯಜಮಾನರು **ವ್ರಾತಂವ್ರಾತಂ, ಗಣಂಗಣಂ—** ಅಗ್ನಿಯನ್ನು ಪ್ರಕಾಶ ಗೊಳಿಸುವ ಮರುತ್ತುಗಳ ತೇಜಸ್ಸನ್ನು ಪ್ರತಿಸಮೂಹದಲ್ಲಿಯೂ, ಆಯಾಯ ಗಣಗಳಂತೆಯೂ ವಿಂಗಡಮಾಡಿ ಮರು ತ್ತುಗಳ ಸ್ತುತಿಯನ್ನು ವ್ಯಕ್ತಗೊಳಿಸುವ ಮಂತ್ರಗಳಿಂದ ಸ್ತುತಿಸಿ, ಆ ತೇಜಸ್ಸನ್ನು ತಮಗೆ ರಕ್ಷಕವಾಗಿರುವಂತೆ ಆಶಿಸಿ ದ್ದಾರೆ ಎಂದು ಅರ್ಥವನ್ನು ಹೇಳಿದೆ.

**ಪೃಷದಶ್ವಾಸಃ—ಪೃಷತ್ಯಶ್ಚಿತ್ರವರ್ಣಾಃ ಅಶ್ವಾಃ ಯೇಷಾಂ ತೇ.** ಮರುತ್ತುಗಳು ಚಿತ್ರವರ್ಣವುಳ್ಳ ಅಶ್ವಗಳನ್ನು ವಾಹನವಾಗಿ ಉಳ್ಳವರೆಂದೂ, **ಅನವಭ್ರರಾಧಸಃ—ನ ವಿದ್ಯತೇ ಅವಭ್ರಂಶೋ ಯಸ್ಯ ತದನ- ವಭ್ರಂ । ಅನವಭ್ರಂ ರಾಧೋ ಧನಂ ಯೇಷಾಂ ತೇ।** (ಕಡಿಮೆಯಾಗುವಿಕೆ) ನ್ಯೂನತೆಯು ಅವಭ್ರಂಶಪದದಿಂದ ಉಕ್ತವಾಗಿದೆ. ನ್ಯೂನತೆಯು ಇಲ್ಲದಿರುವುದು ಅನವಭ್ರವಾಗಿರುವುದು. **ಅನವಭ್ರಷ್ಟಧನಾಃ, ಸಂಪೂರ್ಣಧನಾಃ।** ನ್ಯೂನತೆಯನ್ನು ಹೊಂದದೆ ಇರುವ ಧನವನ್ನು ಹೊಂದಿದವರು ಅಂದರೆ—ಮರುದ್ದೇವತೆಗಳು ಅಕ್ಷಯವಾದ ಧನವನ್ನು ಹೊಂದಿರುವವರು ಎಂದು ಅರ್ಥವನ್ನು ವಿವರಿಸಿದೆ.

**ವಿದಥೇಷು—ವಿದಂತ್ಯಸ್ಮಿನ್ ಕರ್ಮಜಾತಮೃತ್ವಿಗ್ಯಜಮಾನಾದಯಃ ಇತಿ ವಿದಥೋ ಯಜ್ಞಃ ।** ಅಧ್ವ ರ್ಯುವೇ ಮೊದಲಾದವರು ಅವಶ್ಯ ಕರ್ತವ್ಯವನ್ನು ತಿಳಿಯುವ ಸನ್ನಿವೇಶವು ಯಜ್ಞವಾಗಿರುವ ಕಾರಣ ವಿದಥ ಎಂಬ ಪದವು ಯಜ್ಞವಾಚಿಯಾಗಿರುವುದೆಂದು ಅರ್ಥವನ್ನು ವಿವರಿಸಿದೆ. ಮರುತ್ತುಗಳು ಧೀರಶಬ್ದವಾಚ್ಯರಾದ ಕರ್ಮಾಭಿಜ್ಞ ರಾಗಿರುವರೆಂದು ಅರ್ಥವನ್ನು ವಿವರಿಸಿ, ಈ ಮರುದ್ದೇವತೆಗಳು ಯಜ್ಞಗಳಲ್ಲಿ ಅರ್ಪಿಸುವ ಹವಿಸ್ಸನ್ನು ಉದ್ದೇಶಮಾಡಿ ಕೊಂಡು ಯಜಮಾನರು ಆಚರಿಸುವ ಆಯಾಯ ಯಜ್ಞಗಳಿಗೆ ಆಗಮಿಸುವರೆಂದು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಗಣಂಗಣಂ—**ಗಣ ಸಂಖ್ಯಾನೇ. ಧಾತು. **ನಂದಿಗ್ರಹಪಚಾದಿಭ್ಯಃ** (ಪಾ. ಸೂ. ೩-೧-೧೩೪) ಎಂಬುದ ರಿಂದ ಅಚ್ ಪ್ರತ್ಯಯ. **ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ ಬರುತ್ತದೆ. ಪರದ ಆಮ್ರೇಡಿತ ಸಂಜ್ಞೆಯುಳ್ಳರೂಪವು **ಅನುದಾತ್ತಂಚ** (ಪಾ. ಸೂ. ೮-೧-೩) ಎಂಬುದರಿಂದ ಸರ್ವಾನುದಾತ್ತವಾಗುವು ದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸುಶಸ್ತಿಭಿಃ—**ಭಾ ದೀಪ್ತೌ. ಧಾತು. ಕ್ತಿನ್ ಪ್ರತ್ಯಯಪರವಾದಾಗ ಧಾತುವಿನ ಅನುನಾಸಿಕಕ್ಕೆ ಲೋಪ. ಬಹುವ್ರೀಹಿಸಮಾಸವಾದಾಗ **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಭಾಮಂ—**ಭಾ ದೀಪ್ತೌ. ಧಾತು. **ಅರ್ತಿಸ್ತುಸು—**(ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಓಜಃ—**ಉಬ್ಜ ಆರ್ಜವೇ. ಧಾತು. **ಉಬ್ಜೇರ್ಬಲೇ ಬಲೋಪಶ್ಚ** (ಉ. ಸೂ. ೪-೬೩೧) ಎಂಬುದ ರಿಂದ ಅಸುನ್ ಪ್ರತ್ಯಯ. ಅದರೊಡನೆ ಧಾತುವಿನ ಬಕಾರಕ್ಕೆ ಲೋಪ. ಉಜ್+ಅಸ್ ಎಂದಿರುವಾಗ **ಪುಗಂತ- ಲಘೂಪದಸ್ಯಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಈಮಹೇ—**ಈ ಕಾಂತ್ಯಾದಿಷು. ಧಾತು. ಲಟ್ ಉತ್ತಮಪುರುಷ ಬಹುವಚನಾಂತರೂಪ ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅನವಭ್ರರಾಧಸಃ**—ನ ವಿದ್ಯತೇ ಅವಭ್ರಂಶಃ ಯಸ್ಯ ತತ್ ಅನವಭ್ರಂ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಅನವಭ್ರಂ ರಾಧಃ ಯೇಷಾಂ ತೇ ಅನವಭ್ರ-ರಾಧಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಗಂತಾರಃ**—ಗಮ್ಲೃ ಗತೌ. ಧಾತು. ತಾಚ್ಛೀಲ್ಯಾರ್ಥದಲ್ಲಿ ತೃನ್ ಪ್ರತ್ಯಯ. ಮಕಾರಕ್ಕೆ ಅನುಸ್ವಾರ ಪರಸವರ್ಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿದಥೇಷು**—ವಿದ ಜ್ಞಾನೇ. ಧಾತು. **ರುದಿವಿದಿಭ್ಯಾಂ ಕಿತ್** (ಉ. ಸೂ. ೪-೩೯೫) ಎಂಬುದರಿಂದ ಅಥ ಪ್ರತ್ಯಯ. ಕಿತ್ವ ಅತಿದೇಶಮಾಡಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ವಿದಂತಿ ಅಸ್ಮಿನ್ ಕರ್ಮಜಾತಂ ಅಧ್ವರ್ಯ್ವಾದಯಃ ಇತಿ ವಿದಥಃ ಯಜ್ಞಃ (ಅಧ್ವರ್ಯು ಮುಂತಾದವರು ಇದರಲ್ಲಿ ಮಾಡತಕ್ಕ ಕಾರ್ಯಗಳನ್ನು ತಿಳಿಯುತ್ತಾರೆ.) ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತ ಪದವಾಗುತ್ತದೆ.

ಸಂಹಿತಾಪಾಠಃ

ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।
ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥ ೭ ॥

ಪದಪಾಠಃ

ಅಗ್ನಿಃ । ಅಸ್ಮಿ । ಜನ್ಮನಾ । ಜಾತಽವೇದಾಃ । ಘೃತಂ । ಮೇ । ಚಕ್ಷುಃ । ಅಮೃತಂ । ಮೇ । ಆಸನ್ ।
ಅರ್ಕಃ । ತ್ರಿಽಧಾತುಃ । ರಜಸಃ । ವಿಽಮಾನಃ । ಅಜಸ್ರಃ । ಘರ್ಮಃ । ಹವಿಃ । ಅಸ್ಮಿ । ನಾಮ ॥ ೭ ॥

ಸಾಯಣಭಾಷ್ಯಂ

ಸಾಕ್ಷಾತ್ಕೃತಪರತತ್ತ್ವರೂಪೋಽಗ್ನಿರ್ವ್ಯಾಜೇನ ಸ್ವಾತ್ಮನಃ ಸರ್ವಾತ್ಮಕತ್ವಾನುಭವಮಾವಿಷ್ಕರೋತಿ। ಹೇ ಕುಶಿಕಾಃ । ಭೋಕ್ತೃಭೋಗ್ಯಭಾವೇನ ದ್ವಿವಿಧಂ ಹೀದಂ ಸರ್ವಂ ಜಗತ್ । ಏತಾವದ್ವಾ ಇದಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದ ಇತಿ ಶ್ರುತೇಃ । ತತ್ರ ಸಕಲಭೋಕ್ತೃವರ್ಗರೂಪೇಣಾ-ನ್ನಾದೋಽಗ್ನಿಃ । ಸ ಚಾಗ್ನಿವಾಯ್ವಾದಿತ್ಯಭೇದೇನ ತ್ರೇಧಾ ಭೂತ್ವಾ ಪೃಥಿವ್ಯಂತರಿಕ್ಷದ್ಯುಲೋಕಾನಧಿ-ತಿಷ್ಠತಿ । ತದುಕ್ತಂ ವಾಜಸನೇಯಕೇ । ಸ ತ್ರೇಧಾತ್ಮಾನಂ ವ್ಯಭಜತ । ಆದಿತ್ಯಂ ತೃತೀಯಂ ವಾಯುಂ ತೃತೀಯಮಿತಿ । ತತ್ರ ಸೋಽಗ್ನಿರಹಂ ಜನ್ಮನೈವ ಜಾತವೇದಾ ಅಸ್ಮಿ । ಶ್ರವಣಮನನಾದಿಸಾಧನನಿರಪೇ-ಕ್ಷೇಣ ಸ್ವಭಾವತ ಏವ ಸಾಕ್ಷಾತ್ಕೃತಪರತತ್ತ್ವಸ್ವರೂಪೋಽಸ್ಮಿ । ಘೃತಂ ಮೇ ಚಕ್ಷುಃ । ಯದೇತದ್ವಿಶ್ವಸ್ಯ ವಿಭಾಸಕಂ ಮಮ ಸ್ವಭಾವಭೂತಪ್ರಕಾಶಾತ್ಮಕಂ ಚಕ್ಷುಸ್ತದ್ಘೃತಂ । ಇದಾನೀಮತ್ಯಂತಂ ದೀಪ್ತಂ । ಯದೇತದಮೃತಂ ಕರ್ಮಫಲಂ ದಿವ್ಯಾದಿವ್ಯವಿವಿಧವಿಷಯೋಪಭೋಗಾತ್ಮಕಂ ತನ್ಮೇ ಮಮಾಸನ್ । ಆಸ್ಯೇ ವರ್ತತೇ । ಸಕಲಭೋಕ್ತೃವರ್ಗಾತ್ಮನಾ ಸ್ವಯಮೇವಾವಸ್ಥಾನಾತ್ । ಏವಂ ಸ್ವಾತ್ಮನಃ ಪೃಥಿವ್ಯ-

ಧಿಷ್ಠಾತೃರೂಪತಾಮಭಿಧಾಯ ವಾಯ್ವಾತ್ಮನಾಂತರಿಕ್ಷಾಧಿಷ್ಠಾತೃತಾಮಾಹ । ಅರ್ಕೋ ಜಗತ್ಸ್ರಷ್ಟಾ ಪ್ರಾಣಃ । ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯಂತಾರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯಾರ್ಕತ್ವಂ । ಶ. ಬ್ರಾ. ೧೦-೬-೫ । ಇತಿ ಶ್ರುತೇಃ । ಸ ಪ್ರಾಣೋಽಹಂ ತ್ರಿಧಾತುಃ । ತ್ರೇಧಾತ್ಮಾನಂ ವಿಭಜ್ಯ ತತ್ರ ವಾಯ್ವಾತ್ಮನಾ ರಜಸೋಽಂತರಿಕ್ಷಸ್ಯ ವಿಮಾನೋ ವಿಮಾತಾಧಿಷ್ಠಾತಾಸ್ಮಿ । ತಥಾದಿತ್ಯರೂಪೇಣ ದ್ಯುಲೋಕಾಧಿಷ್ಠಾತೃತಾಮಾಹ । ಅಜಸ್ರೋ ಘರ್ಮ ಇತಿ । ಅಜಸ್ರೋಽನುಪಕ್ಷೀಣೋ ಘರ್ಮಃ ಪ್ರಕಾಶಾತ್ಮಾ ದ್ಯುಲೋಕಾಧಿಷ್ಠಾತಾದಿತ್ಯೋಽಹಮಸ್ಮಿ । ಏವಂ ಭೋಕ್ತೃರೂಪಮಾತ್ಮನೋಽನುಸಂಧಾಯ ಭೋಗ್ಯರೂಪತಾಮಪ್ಯನುಸಂಧತ್ತೇ । ಯದ್ಧವಿರ್ಭೋಗ್ಯಂ ಪ್ರಸಿದ್ಧಮಸ್ತಿ ತದಪ್ಯಹಮೇವಾಸ್ಮಿ । ಯದ್ವಾ । ಅಹಮಗ್ನಿರಸ್ಮಿ । ದೇವಾನಾಂ ಹವಿಷ್ಪ್ರಾಪಣಾದಂಗನಾದಿಗುಣಯುಕ್ತೋಽಸ್ಮಿ । ಕಿಂಚ ಜನ್ಮನೋತ್ಪತ್ತ್ಯಾ ಜಾತವೇದಾ ಜಾತಪ್ರಜ್ಞೋಽಸ್ಮಿ । ಉತ್ಪತ್ತಿಕ್ಷಣ ಏವ ಸರ್ವಜ್ಞೋಽಹಮಸ್ಮಿ । ಅಥವಾ ಜಾತಂ ಸರ್ವಂ ಸ್ವಾತ್ಮರೂಪತಯಾ ವೇತ್ತೀತಿ ಜಾತವೇದಾಃ । ಸರ್ವಾತ್ಮಕ ಇತ್ಯರ್ಥಃ । ತತ್ಕಥಮಿತ್ಯುಚ್ಯತೇ । ಘೃತಂ ಮೇ ಚಕ್ಷುಃ । ಯದೇತದ್ಘೃತಂ ಪ್ರಸಿದ್ಧಮಸ್ತಿ ತನ್ಮೇ ಚಕ್ಷುಃ ಸ್ಥಾನೀಯಂ । ಯಥಾ ಲೋಕೇ ಚಕ್ಷುರ್ಭಾಸಕಂ ಏವಂ ಘೃತಂ ಮಯಿ ಪ್ರಕ್ಷಿಪ್ತಂ ಜ್ವಾಲಾಮುತ್ಪಾದಯನ್ಮಮ ಭಾಸಕಂ । ಅಮೃತಂ ಪ್ರಭಾರೂಪಂ ಯದಮೃತಮವಿನಾಶಿ ಜ್ಯೋತಿರ್ಮೇ ಮಮಾಸನ್ । ಆಸ್ಯೇ ವರ್ತತೇ । ತ್ರಿಧಾತುಃ ಪ್ರಾಣಾಪಾನವ್ಯಾನಾತ್ಮನಾ ತ್ರಿಧಾ ವರ್ತಮಾನೋಽರ್ಕೋಽರ್ಚನೀಯೋ ಯೋ ಪ್ರಾಣೋಽಸ್ತಿ ಸೋಽಪ್ಯಹಮೇವಾಸ್ಮಿ । ತಥಾ ಚ ರಜಸೋಽನ್ತರಿಕ್ಷಸ್ಯ ವಿಮಾನೋ ವಿಶೇಷೇಣ ಮಾತಾ ಪರಿಚ್ಛೇತ್ತಾ ವಾಯುಶ್ಚಾಹಮಸ್ಮಿ । ಕಿಂಚ । ಅಜಸ್ರೋ ಘರ್ಮೋ ನೈರಂತರ್ಯೇಣ ಸಂತಾಪಕಾರೀ ಸೂರ್ಯಶ್ಚಾಹಮಸ್ಮಿ । ಕಿಂ ಬಹುನಾ ಆಜ್ಯಪುರೋಡಾಶಾದಿರೂಪಂ ಯದೇತದ್ಧವಿರಸ್ತಿ ತದುಪಲಕ್ಷಿತಂ ಸರ್ವಮಪ್ಯಹಮಸ್ಮಿ । ಸರ್ವಂ ಖಲ್ವಿದಂ ಬ್ರಹ್ಮೇತಿ ಶ್ರುತೇಃ । ನಾಮಶಬ್ದಃ ಪ್ರಸಿದ್ಧೌ । ತದನೇನಾಗ್ನೇಃ ಸರ್ವಾತ್ಮಕತ್ವಪ್ರತಿಪಾದನೇನ ಪರಬ್ರಹ್ಮತ್ವಮುಕ್ತಂ ಭವತಿ ॥ ಚಕ್ಷುಃ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ಉಸಿನ್ನಿತ್ಯನುವೃತ್ತೌ ಚಕ್ಷೇಃ ಶಿಚ್ಚೇತ್ಯುಸಿನ್ । ಶಿದ್ವದ್ಭಾವಾತ್ ಖ್ಯಾಞಾದೇಶಾಭಾವಃ । ನಿತ್ಸ್ವರಃ । ಆಸನ್ । ಆಸ್ಯಶಬ್ದಸ್ಯ ಪದ್ದನ್ನೋಮಾಸಿತ್ಯಾದಿನಾ ಆಸನಾದೇಶಃ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ವಿಮಾನಃ । ಮಾಙ್ ಮಾನೇ । ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಲ್ಯುಟ್ । ಲಿತ್ಸ್ವರಃ । ಅಜಸ್ರಃ । ಜಸು ಮೋಕ್ಷಣೇ । ನಞ್ಪೂರ್ವಃ । ನಮಿಕಂಪಿಸ್ಮ್ಯಜಸಕಮಹಿಂಸದೀಪೋ ರಃ । ಪಾ. ೩-೨-೧೬೭ । ಇತಿ ತಾಚ್ಛೀಲಿಕೋ ರಪ್ರತ್ಯಯಃ । ನಞ್ಪೂರ್ವೋ ಜಸಿರ್ನೈರಂತರ್ಯೇ ವರ್ತತೇ । ನಞ್ಸ್ವರಃ । ಜಸ ಉಪಕ್ಷಯೇ ವಾ ॥

ಪ್ರತಿಪದಾರ್ಥ

**ಅಗ್ನಿಃ**—ಅಗ್ನಿಯೆಂದು ಪ್ರಸಿದ್ಧನಾದ ನಾನು । **ಜನ್ಮನಾ**—ನನ್ನ ಉತ್ಪತ್ತಿಯ ಸ್ವರೂಪದಿಂದಲೇ । **ಜಾತವೇದಾಃ**—ಸಕಲವನ್ನೂ ತಿಳಿದವನಾಗಿ । **ಅಸ್ಮಿ**—ಆಗಿದ್ದೇನೆ । **ಘೃತಂ**—ಘೃತವೇ । **ಮೇ**—ನನ್ನ । **ಚಕ್ಷುಃ**—ಪ್ರಕಾಶಾತ್ಮಕವಾದ ಕಣ್ಣಾಗಿದೆ । **ಅಮೃತಂ**—ಅಮೃತವು । **ಮೇ**—ನನ್ನ । **ಆಸನ್**—ವದನದಲ್ಲಿದೆ । **ತ್ರಿಧಾತುಃ**—ವಾಯುರೂಪದಲ್ಲಿ (ಪ್ರಾಣ, ಅಪಾನ, ವ್ಯಾನ ಎಂದು) ಮೂರು ಭಾಗವಾಗಿ ವಿಂಗಡಿಸಲ್ಪಟ್ಟ । **ಅಕ:ಃ**—ಪ್ರಾಣವೇ ನಾನಾಗಿದ್ದೇನೆ । **ರಜಸಃ**—ಅಂತರಿಕ್ಷದ । **ವಿಮಾನಃ**—ಅಧಿಷ್ಠಾತೃವೂ ಆಗಿದ್ದೇನೆ । **ಅಜಸ್ರಃ**—ಕ್ಷಯ

ರಹಿತನೂ । **ಘರ್ಮಃ**—ಪ್ರಕಾಶಾತ್ಮನೂ ಆದ ಆದಿತ್ಯನು ನನ್ನ ರೂಪಾಂತರವು ಮತ್ತು । **ಹವಿಃ ಅಸ್ಮಿ ನಾಮ**—ಭೋಗಿಸಲು ಯೋಗ್ಯವಾದ ಹವಿಸ್ಸೂ ನಾನೇ ಆಗಿದ್ದೇನೆಯಲ್ಲವೇ ॥

ಭಾವಾರ್ಥ

ಅಗ್ನಿ ಎಂಬ ಹೆಸರಿನಿಂದ ಪ್ರಸಿದ್ಧನಾದ ನಾನು ನನ್ನ ಉತ್ಪತ್ತಿಯ ಸ್ವರೂಪದಿಂದಲೇ ಸಕಲವನ್ನೂ ತಿಳಿದವನಾಗಿದ್ದೇನೆ. ಘೃತವೇ ನನ್ನ ಪ್ರಕಾಶಾತ್ಮಕವಾದ ಕಣ್ಣು. ಅಮೃತವು ನನ್ನ ಮುಖದಲ್ಲಿದೆ. ವಾಯುರೂಪದಲ್ಲಿ ಮೂರು ಭಾಗವಾಗಿ ವಿಂಗಡಿಸಲ್ಪಟ್ಟ ಪ್ರಾಣವೂ ನಾನೇ. ನಾನು ಅಂತರಿಕ್ಷದ ಅಧಿಷ್ಠಾತೃವೂ ಆಗಿದ್ದೇನೆ. ಕ್ಷಯರಹಿತನೂ, ಪ್ರಕಾಶಾತ್ಮನೂ ಆದ ಆದಿತ್ಯನು ನನ್ನ ರೂಪಾಂತರವು ಮತ್ತು ಭೋಗಿಸಲು ಯೋಗ್ಯವಾದ ಹವಿಸ್ಸೂ ನಾನೇ ಆಗಿದ್ದೇನೆ.

## English Translation

I, Agni, am by birth endowed with knowledge of all that exists : clarified butter is my eye : ambrosia is my mouth : I am the living breath of threefold nature, the measure of the firmament, eternal warmth : I am also the oblation.

ವಿಶೇಷವಿಷಯಗಳು

ಸಾಯಣರು ಈ ಋಕ್ಕಿನ ಅರ್ಥವನ್ನು ಎರಡು ವಿಧವಾಗಿ ವರ್ಣಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಅಗ್ನಿಯು ತನ್ನ ಪರತತ್ತ್ವಾತ್ಮಭಾವದಿಂದ ಇರುವನೆಂದೂ, ಭೋಕ್ತೃಭೋಗ್ಯರೂಪದಿಂದ ಪೃಥಿವೀ ಅಂತರಿಕ್ಷದ್ಯುಲೋಕಗಳನ್ನು ವ್ಯಾಪಿಸಿ ಇರುವನೆಂದೂ ವಿವರಿಸಿ, ಎರಡನೆಯ ಅರ್ಥದಲ್ಲಿ ಅಗ್ನಿಯ ಸರ್ವಾತ್ಮಭಾವವೂ ವಿವೃತವಾಗಿರುವುದೆಂದು ಹೇಳಿದ್ದಾರೆ. ಮತ್ತು—

ಕುಶಿಕಗೋತ್ರೋತ್ಪನ್ನರಾದ ಋಷಿಗಳಿಂದ ಅಗ್ನಿಯು ಸ್ತುತನಾಗಿ ತನ್ನ ಪರತತ್ತ್ವಾನುಭವವನ್ನು **ಅಹಮಸ್ಮಿ ಜನ್ಮನಾ ಜಾತವೇದಾಃ** ಎಂಬ ಮಂತ್ರದಿಂದಲೂ, **ತ್ರಿಭಿಃ ಪವಿತ್ರೈಃ** ಎಂಬ ಮಂತ್ರದಿಂದಲೂ ತಾನೇ ವಿವರಿಸಿರುವನು ಎಂದು ವ್ಯಾಖ್ಯಾನಮಾಡಿದ್ದಾರೆ.

**ಸಾಕ್ಷಾತ್ಕೃತಪರತತ್ತ್ವರೂಪಃ ಅಗ್ನಿಃ ದ್ವಾಭ್ಯಾಮೃಗ್ಭ್ಯಾಂ ಸ್ವಾತ್ಮನಃ ಸರ್ವಾತ್ಮಕತ್ವಾನುಭವಮಾವಿಷ್ಕರೋತಿ** ಅಗ್ನಿಯು ಪರಬ್ರಹ್ಮಸ್ವರೂಪವನ್ನು ಸಾಕ್ಷಾತ್ಕಾರಮಾಡಿ ಅದರಿಂದ ತನಗೆ ಉಂಟಾಗಿರುವ ಸರ್ವಾತ್ಮಸ್ಥಿತಿಯನ್ನು ಎರಡು ಋಕ್ಕುಗಳಿಂದ ವಿಶದಮಾಡಿದ್ದಾನೆ.

> **ಭೋಕ್ತೃಭೋಗ್ಯಭಾವೇನ ದ್ವಿವಿಧಂ ಹಿ ಇದಂ ಜಗತ್। ಏತಾವದ್ವಾ ಇದಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ (ಬೃ. ಉ. ೧-೪-೬) ತತ್ರ ಸಕಲ ಭೋಕ್ತೃವರ್ಗರೂಪೇಣಾನ್ನಾದೋಽಗ್ನಿಃ । ಸ ಚ ಅಗ್ನಿವಾಯ್ವಾದಿತ್ಯಭೇದೇನ ತ್ರೇಧಾ ಭೂತ್ವಾ ಪೃಥಿವ್ಯಂತರಿಕ್ಷದ್ಯುಲೋಕಾನಧಿತಿಷ್ಠತಿ । ಸ ತ್ರೇಧಾ ಆತ್ಮಾನಂ ವ್ಯಭಜತ । ಆದಿತ್ಯಂ ತೃತೀಯಂ ವಾಯುಂ ತೃತೀಯಂ ಇತಿ. (ಬೃ. ಉ. ೧-೨-೩).**

ಈ ಪ್ರಪಂಚವು ಭೋಕ್ತೃರೂಪದಿಂದಲೂ, ಭೋಗ್ಯರೂಪದಿಂದಲೂ, ಎರಡುವಿಧವಾಗಿ ಇರುವುದು. ಈ ವಿಷಯವನ್ನು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಅನ್ನ, ಅನ್ನವನ್ನು ಭೋಜನಮಾಡುವವನು ಎಂದು ಎರಡು ವಿಧವಾಗಿರುವ ಈ ಪ್ರಪಂಚದಲ್ಲಿ ಸೋಮವೇ ಅನ್ನವೆಂದೂ, ಅಗ್ನಿಯು ಅನ್ನವನ್ನು ಭೋಜನಮಾಡುವವನೆಂದೂ ವಿವರಿಸಿದೆ.

ಭೋಕ್ತೃವಾಗಿರುವ ಅಗ್ನಿಯು ಅಗ್ನಿ ವಾಯು ಆದಿತ್ಯರೆಂಬ ಮೂರು (ವಿಧದಿಂದ) ವಿಧವಾದ ರೂಪದಿಂದ ಪೃಥಿವೀ ಅಂತರಿಕ್ಷದ್ಯುಲೋಕವೆಂಬ ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವನೆಂದು ಅದಕ್ಕೆ ಆಧಾರವಾದ ಬೃಹದಾರಣ್ಯಕ ಉಪನಿಷತ್ತಿನ ವಾಕ್ಯವನ್ನೂ ಉದಹರಿಸಿದೆ.

**ಅಹಮಸ್ಮಿ ಜನ್ಮನಾ ಜಾತವೇದಾಃ—ಶ್ರವಣಮನನಾದಿಸಾಧನನಿರಪೇಕ್ಷೇಣ ಸ್ವಭಾವತ ಏವ ಸಾಕ್ಷಾತ್ಕೃತಪರತತ್ತ್ವರೂಪಃ ಅಸ್ಮಿ** | ಈ ವಾಕ್ಯದಲ್ಲಿ ಜಾತವೇದಶ್ಶಬ್ದಕ್ಕೆ ಪ್ರತ್ಯಕ್ಷವಾಗಿ ಜಾತವಾದ ಪರತತ್ತ್ವ-ರೂಪವುಳ್ಳವನೆಂದು ಅರ್ಥವನ್ನು ವರ್ಣಿಸಿದೆ. ಪರಬ್ರಹ್ಮನ ತತ್ತ್ವಸ್ವರೂಪವು ಜ್ಞಾತವಾಗಲು ಉಪನಿಷದಾದಿಗಳಲ್ಲಿ ಉಕ್ತವಾದ ಅರ್ಥವನ್ನು ಶ್ರವಣಮಾಡುವುದು, ಶ್ರವಣಮಾಡಿದುದನ್ನು ಮನನಮಾಡುವುದು (ಮನಸ್ಸಿನಿಂದ ವಿಮರ್ಶೆ ಮಾಡುವುದು) ಅನಂತರದಲ್ಲಿ ಸರ್ವದಾ ಆ ಸ್ವರೂಪವನ್ನು ಧ್ಯಾನಮಾಡುವುದು ಎಂಬ ಸಾಧನಗಳು ಪ್ರಸಿದ್ಧವಾಗಿವೆ. ಆದರೆ ಅಗ್ನಿಯು ಈ ವಿಧವಾದ ಪರತತ್ತ್ವಸಾಕ್ಷಾತ್ಕಾರಸಾಧನಗಳ ಸಹಾಯವನ್ನು ಅಪೇಕ್ಷಿಸದೆ ಸ್ವಭಾವದಿಂದಲೇ ಪರತತ್ತ್ವವನ್ನು ಸಂಪೂರ್ಣವಾಗಿ ತಿಳಿದು, ಪ್ರತ್ಯಕ್ಷಮಾಡಿಕೊಂಡು ಇರುವನೆಂದು ಆ ಅನುಭವವನ್ನು ಅಹಮಸ್ಮಿ ಎಂದು ವಿವರಿಸಿದೆ.

**ಘೃತಂ ಮೇ ಚಕ್ಷುಃ—ವಿಶ್ವಸ್ಯ ವಿಭಾಸಕಂ ಮಮ ಸ್ವಭಾವಭೂತಪ್ರಕಾಶಾತ್ಮಕಂ ಚಕ್ಷುಸ್ತದ್ ಘೃತಂ ಇದಾನೀಂ ತತ್ ಅತ್ಯಂತಂ ದೀಪ್ತಂ** | ಘೃತಶಬ್ದವು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿದೆ. ಚಕ್ಷುಶ್ಶಬ್ದವು **ಚಕ್ಷೇಃ ಖ್ಯಾತೇರ್ವಾ ಚಷ್ಟೇರ್ವಾ** (ನಿ. ೪-೩) ಪ್ರಕಟಮಾಡು ಎಂಬ ಅರ್ಥವನ್ನು ಬೋಧಿಸುವ ಖ್ಯಾಧಾತುವಿನಿಂದಲಾಗಲಿ, ಅಥವಾ ದರ್ಶನಾರ್ಥಕವಾದ ಚಕ್ಷಿಙ್ ಧಾತುವಿನಿಂದಲಾಗಲಿ ಉತ್ಪನ್ನವಾಗಿರುವುದೆಂದು ವ್ಯಾಖ್ಯಾತವಾಗಿದೆ. ಪ್ರಪಂಚವೆಲ್ಲವನ್ನೂ ಪ್ರಕಾಶಗೊಳಿಸುವ ಪರಬ್ರಹ್ಮಸ್ವಭಾವರೂಪವಾದ ತನ್ನನ್ನೂ ಇತರವೆಲ್ಲವನ್ನೂ ಪ್ರಕಾಶಗೊಳಿಸಿ ಪ್ರಕಾಶದಿಂದ ಇರುವ ಸ್ವರೂಪವು (ವೈದ್ಯುತಾಗ್ನಿಸ್ವರೂಪವು) ನಿರತಿಶಯವಾದ ಪ್ರಕಾಶರೂಪದಿಂದ ಬೆಳಗುತ್ತಿರುವುದು. ಈ ಸ್ವರೂಪದಿಂದಲೇ ಅಗ್ನಿಯು ತನ್ನ ದ್ಯುಲೋಕಸ್ಥಿತಿಯಲ್ಲಿ ಇರುವ ಅಗ್ನಿಸ್ವರೂಪವನ್ನು ವ್ಯಕ್ತಗೊಳಿಸಿರುವನೆಂದು ಅರ್ಥವನ್ನು ವಿವರಿಸಿದೆ. ಹಿಂದಿನವಾಕ್ಯದಲ್ಲಿ ಜ್ಞಾನಸ್ವರೂಪವನ್ನು ಹೇಳಿ ಈ ವಾಕ್ಯದಿಂದ ಸನ್ಮಾತ್ರರೂಪದಿಂದ ಇರುವಿಕೆಯು ಉಕ್ತವಾಗಿದೆ.

**ಅಮೃತಂ ಮ ಆಸ್ಯ**—ಅಮೃತಶಬ್ದವು ನಿರುಕ್ತಕಾರರಿಂದ **ಮರಣಧರ್ಮರಹಿತಂ** ಎಂದು (ನಿ. ೨-೨೦) ವ್ಯಾಖ್ಯಾತವಾಗಿದೆ. ಉದಕನಾಮಗಳಲ್ಲಿಯೂ (ನಿ. ೨-೨೪) ಉಕ್ತವಾಗಿದೆ. ಇಲ್ಲಿ **ದಿವ್ಯಾದಿವ್ಯವಿವಿಧವಿಷಯೋಪಭೋಗಾತ್ಮಕಂ ಕರ್ಮಫಲಂ** ಸ್ವರ್ಗಾದಿಲೋಕಗಳಲ್ಲಿ ಅನುಭವಿಸಬಹುದಾದ ಅಥವಾ ಈ ಲೋಕದಲ್ಲಿ ಅನುಭವಿಸಬಹುದಾದ ಸ್ವರೂಪದಿಂದ ಇರುವ ಆಯಾಯ ಪ್ರಕಾರಗಳಿಂದ ಸರ್ವರಿಂದಲೂ ಅನುಭವಗೋಚರವಾದ ಸುಖವನ್ನು ಉಂಟುಮಾಡುವ ಅಯಾಯ ಕರ್ಮಫಲವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವರಿಸಿ, ಈ ವಿಧವಾದ ಕರ್ಮಫಲಸ್ವರೂಪವೂ **ಮಮ ಆಸ್ಯ** ಪರಬ್ರಹ್ಮಸ್ವರೂಪದಿಂದ ಇರುವ ಅಗ್ನಿಯ ಮುಖದಿಂದಲೇ ಇರುವುದು ಎಂದು ವರ್ಣಿಸಿ, ಅಗ್ನಿಯು ಆನಂದರೂಪದಿಂದ ಇರುವನೆಂದು ಸ್ಪಷ್ಟವಾಗಿ ಹೇಳಿದೆ. ಇದರಿಂದ ಆತ್ಮನ ಸಚ್ಚಿದಾನಂದರೂಪಾವಸ್ಥಾನವು ಅಗ್ನಿಯಲ್ಲಿ ಉಕ್ತವಾಗಿರುವಕಾರಣ ಅಗ್ನಿಯು **ಸಕಲ ಭೋಕ್ತೃವರ್ಗಾತ್ಮನಾ ಅವಸ್ಥಾನಾತ್** ಧರ್ಮವು ಧರ್ಮಿಯನ್ನು ಹೊರತಾಗಿ ಬೇರೆಯಾಗಿಲ್ಲದಿರುವುದರಿಂದ ಭೋಗ್ಯವಾದ ರೂಪಾಂತರವನ್ನು ಹೊಂದಿರುವ ಅಗ್ನಿಯೇ ತನಗಿಂತಲೂ ಬೇರೆಯಾದ ಭೋಕ್ತೃವಿನ ರೂಪವನ್ನು ಹೊಂದಬಹುದಾಗಿದ್ದರೂ, ತನ್ನ ಸ್ವೈಜವಾದ ರೂಪದಿಂದ ಸರ್ವವಿಧವಾದ ಭೋಗ್ಯವನ್ನೂ ಅನುಭವಿಸಲರ್ಹವಾದ ಭೋಕ್ತೃವಿನ ರೂಪದಿಂದಲೇ ಇರುವನು ಎಂದು ವಿವರಿಸಿ, ಅಗ್ನಿಯ ಧರ್ಮಧರ್ಮಿಗಳ ತಾದಾತ್ಮ್ಯರೂಪದಿಂದ ಇರುವ ಪರಬ್ರಹ್ಮಭಾವವು ವಿವೃತವಾಗಿದೆ.

**ಅರ್ಕಃ–ಜಗತ್ಸ್ರಷ್ಟಾ ಪ್ರಾಣಃ।** ಅರ್ಕಶಬ್ದವು ಅನ್ನನಾಮಗಳಲ್ಲಿಯೂ (ನಿ.೩–೯) ವಜ್ರನಾಮಗಳಲ್ಲಿಯೂ (ನಿ. ೩–೧೧) ಉಕ್ತವಾಗಿ, ದೇವ, ಮಂತ್ರ, ಅನ್ನ, ವೃಕ್ಷ, ಎಂಬ ಅರ್ಥದಲ್ಲಿ (ನಿ. ೫–೪) ಪ್ರಯುಕ್ತವಾಗಿದೆ. ಇಲ್ಲಿ ಜಗತ್ತನ್ನು ಸೃಷ್ಟಿಮಾಡುವುದು ಪ್ರಾಣರೂಪದಿಂದ ಇರುವ ವಾಯುವು ಎಂದು ಅರ್ಥವನ್ನು ವಿವರಿಸಿ, " **ಸೋಽರ್ಚನಚರತ್ತಸ್ಯಾರ್ಚತ ಆಪೋ ಅಜಾಯಂತ ಅರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯ ಅರ್ಕತ್ವಂ** (ಶ. ಬ್ರಾ. ೧೦–೬–೫) ಈ ಅರ್ಥವನ್ನು ಉಪಪಾದಿಸಿರುವ ಬ್ರಾಹ್ಮಣವಾಕ್ಯವನ್ನು ಉದಾಹರಿಸಿದೆ.

**ತ್ರಿಧಾತುಃ ರಜಸೋ ವಿಮಾನಃ— ಸಃ ಪ್ರಾಣಃ ಅಹಂ ತ್ರೇಧಾ ಆತ್ಮಾನಂ ವಿಭಜ್ಯ ತತ್ರ ವಾಯ್ವಾತ್ಮನಾ ಅಂತರಿಕ್ಷಸ್ಯ ವಿಮಾತಾ ಅಧಿಷ್ಠಾತಾ ಅಸ್ಮಿ।** ಹಿಂದಿನ ವಾಕ್ಯದಲ್ಲಿ ಸಕಲ ಭೋಕ್ತೃರೂಪದಿಂದ ಅಗ್ನಿಯ ಸ್ಥಿತಿಯು ಪೃಥಿವಿಯಲ್ಲಿ ಇರುವುದೆಂದು ಉಕ್ತವಾಗಿದೆ. ವಾಯುವಿನರೂಪದಿಂದ ಅಗ್ನಿಯ ಅಂತರಿಕ್ಷಸ್ಥಿತಿಯು ಇಲ್ಲಿ ಉಕ್ತವಾಗಿದೆ ಎಂಬ ಅರ್ಥವನ್ನು ಸಾಯಣರು ಪ್ರಾಣರೂಪದಿಂದ ಇರುವ ಅಗ್ನಿಯು (ಅಗ್ನಿ ವಾಯು ಆದಿತ್ಯ) ಮೂರು ರೂಪಗಳಿಂದ ಇರುವಕಾರಣ ಅವುಗಳಲ್ಲಿ ಒಂದುರೂಪವಾದ ವಾಯುವಿನ ರೂಪದಿಂದ ಅಂತರಿಕ್ಷದಲ್ಲಿ ಇರುವನು ಎಂದು ವಿವರಿಸಿದ್ದಾರೆ. ರಜಸ್ ಎಂಬ ಪದವು ನಾನಾರ್ಥಬೋಧಕವಾಗಿರುವುದು. ಇಲ್ಲಿ **ರಜೋ ರಜತೇಃ ಜ್ಯೋತೀ ರಜ ಉಚ್ಯತೇ, ಉದಕಂ ರಜ ಉಚ್ಯತೆ, ಲೋಕಾ ರಜಾಂಸ್ಯುಚ್ಯಂತೇ, ಆಸೃಗಹನೀ ರಜಸೀ ಉಚ್ಯೇತೆ,** (ನಿ. ೪–೧೯) ಎಂಬ ನಿರುಕ್ತಕಾರರ ವಚನದಂತೆ, ರಜಶ್ಶಬ್ದಕ್ಕೆ ಲೋಕವೆಂದು ಅರ್ಥವನ್ನು ಹೇಳಿ, ಅದರಲ್ಲಿಯೂ ಅಂತರಿಕ್ಷಲೋಕವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿದೆ.

**ಅಜಸ್ರೋ ಘರ್ಮಃ— ಅಜಸ್ರೋ ಅನುಪಕ್ಷೀಣೋ ಪ್ರಕಾಶಾತ್ಮಾ ದ್ಯುಲೋಕಾಧಿಷ್ಠಾತಾ ಆದಿತ್ಯೋಽಹಮಸ್ಮಿ।** ಘರ್ಮಶಬ್ದವು ಅಹರ್ನಾಮಗಳಲ್ಲಿ (ನಿ. ೩–೧೯) ಯೂ ಉಕ್ತವಾಗಿದೆ. ಇಲ್ಲಿ (ಸರ್ವಕಾಲದಲ್ಲಿಯೂ) ಒಂದೇ ವಿಧವಾಗಿರುವ ಅಥವಾ ನಾಶವನ್ನು ಹೊಂದದೆ ಇರುವ ಪ್ರಕಾಶರೂಪದಿಂದ ಇರುವ ದ್ಯುಲೋಕದಲ್ಲಿ ಬೆಳಗುತ್ತಿರುವ ಆದಿತ್ಯನೆಂದು ಅರ್ಥವನ್ನು ವಿವರಿಸಿ, ಅಗ್ನಿಯು ಈ ಆದಿತ್ಯರೂಪದಿಂದಲೇ ದ್ಯುಲೋಕದಲ್ಲಿರುವನು ಎಂದು ಅಗ್ನಿಗೆ ಆದಿತ್ಯರೂಪದಿಂದ ಇರುವ ಸ್ಥಿತಿಯನ್ನು ವಿವರಿಸಿದ್ದಾರೆ.

**ಹವಿಃ ಅಸ್ಮಿ— ಭೋಗ್ಯಂ ಪ್ರಸಿದ್ಧಮಸ್ತಿ ತದಪ್ಯಹಮಸ್ಮಿ.** ಹವಿಃ ಎಂಬ ಪದವು ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ. ಅಗ್ನಿಯ ಪ್ರಾಣವಾಯುರೂಪ, ಅಗ್ನಿಸ್ವರೂಪ, ಆದಿತ್ಯರೂಪ ಇವುಗಳು ಭೋಕ್ತೃರೂಪಗಳಾಗಿರುತ್ತವೆ ಎಂದು ಹಿಂದೆ ಉಕ್ತವಾಗಿದೆ. ಈಗ (ಆತ್ಮನ ಭೋಕ್ತೃರೂಪ ಭೋಗ್ಯರೂಪಗಳನ್ನು ವಿವರಿಸಿರುವಂತೆ) ಅಗ್ನಿಯ ಭೋಗ್ಯರೂಪದ ಸ್ಥಿತಿಯನ್ನು **ಹವಿಃ ಅಸ್ಮಿ** ಎಂಬ ವಾಕ್ಯದಿಂದ ವರ್ಣಿಸಿದೆ. ಭೋಕ್ತೃವಾದವನಿಗೆ ಅವಶ್ಯವಾಗಿ ಬೇಕಾಗಿರುವ ಭೋಗ್ಯವಸ್ತುವು ಭೋಕ್ತೃರೂಪದಿಂದ ಬೇರೆಯಾಗಿರುವುದು ನಿಯತವಾಗಿರುವುದು. ಪರಬ್ರಹ್ಮಸಾಕ್ಷಾತ್ಕಾರಾನುಭವದಿಂದ ಇರುವ ಬ್ರಹ್ಮಾತ್ಮಸ್ವರೂಪಾನುಭವದಲ್ಲಿ ಭೋಕ್ತೃಭೋಗ್ಯವೆಂಬ ಭೇದವು ಪ್ರತೀತವಾಗದೆ ಇರುವುದರಿಂದ ಆ ಅನುಭವವನ್ನು ಅಗ್ನಿಯು ಹೊಂದಿ ತಾನು ಭೋಕ್ತೃಭೋಗ್ಯರೂಪದಿಂದ ಇರುವಿಕೆಯನ್ನು ವ್ಯಕ್ತಗೊಳಿಸಿದ್ದಾನೆ ಎಂದು ವರ್ಣಿಸಿದೆ.

ಎರಡನೆಯ ಅರ್ಥದಲ್ಲಿ— ಸಾಯಣರ ವ್ಯಾಖ್ಯಾನವು ಇನ್ನೊಂದು ವಿಧವಾಗಿದೆ— ಈ ಅರ್ಥದಲ್ಲಿ ಅಗ್ನಿಯು ಸಾಕ್ಷಾತ್ಕೃತಪರಬ್ರಹ್ಮರೂಪನಾಗಿರುವ ಕಾರಣ ಅವನ ಸರ್ವಾತ್ಮಭಾವವು ವಿವೃತವಾಗಿದೆ.

**ಅಗ್ನಿರಸ್ಮಿ— ಈ ವಾಕ್ಯಕ್ಕೆ ದೇವಾನಾಂ ಹವಿಃಪ್ರಾಪಣಾತ್ ಅಂಗನಾದಿಗುಣಯುಕ್ತೋಽಸ್ಮಿ।** ಯಜಮಾನರು ಅರ್ಪಿಸಿರುವ ಹವಿಸ್ಸುಗಳನ್ನು ದೇವತೆಗಳಿಗೆ ತಲಪಿಸುವಕಾರಣ ಅಂಗಾಂಗಿಭಾವರೂಪವಾದ ಧರ್ಮಗಳಿಂದ ಯುಕ್ತನಾಗಿರುವೆನು ಎಂದು ಅಗ್ನಿಯ ಸ್ವರೂಪವು ಉಕ್ತವಾಗಿದೆ.

**ಜನ್ಮನಾ ಜಾತವೇದಾಃ**—ಈ ವಾಕ್ಯದಲ್ಲಿ ಜಾತವೇದಶ್ಶಬ್ದವು ಜಾತಪ್ರಜ್ಞನೆಂಬ ಅರ್ಥದಲ್ಲಿ ಪ್ರಯುಕ್ತ ವಾಗಿದೆ ಎಂದು ವಿವೃತವಾಗಿದೆ. ಅಗ್ನಿಯು ಉತ್ಪನ್ನನಾದ ಕ್ಷಣದಿಂದಲೂ ಸರ್ವಜ್ಞನಾಗಿರುವನೆಂದು ಅರ್ಥವನ್ನು ವರ್ಣಿಸಿದೆ ಅಥವಾ **ಜಾತಂ ಸರ್ವಂ ಸ್ವಾತ್ಮತಯಾ ವೇತ್ತೀತಿ** ಉತ್ಪನ್ನವಾದುದೆಲ್ಲವನ್ನು ಆತ್ಮಸ್ವರೂಪದಿಂದಲೇ ಇರು ವುದೆಂದು ಅಗ್ನಿಯು ತಿಳಿದು ಇರುವನೆಂದು ಜಾತವೇದಶ್ಶಬ್ದಾರ್ಥವನ್ನು ವಿವರಿಸಿ, ಅಗ್ನಿಯ ಸರ್ವಾತ್ಮಭಾವವನ್ನು ಉಪಪಾದನೆಮಾಡಿದೆ.

**ಘೃತಂ ಮೇ ಚಕ್ಷುಃ**—ಲೋಕದಲ್ಲಿ ಆಜ್ಯವೆಂದು ಪ್ರಸಿದ್ಧವಾಗಿರುವುದು ಅಗ್ನಿಗೆ ಚಕ್ಷುಸ್ಸಿನರೂಪದಿಂದ ಇರುವುದೆಂದು ಈ ವಾಕ್ಯಕ್ಕೆ ಅರ್ಥವನ್ನುವಿವರಿಸಿ, **ಯಥಾ ಲೋಕೇ ಚಕ್ಷುರ್ಭಾಸಕಂ ಏವಂ ಮಯಿ ಪ್ರಕ್ಷಿಪ್ತಂ ಘೃತಂ ಮಯಿ ಜ್ವಾಲಾಮುತ್ಪಾದಯನ್ ಮಮ ಭಾಸಕಂ** ।ಲೋಕದಲ್ಲಿ ನೇತ್ರವು (ಕಣ್ಣು) ಎಲ್ಲಾ ಪದಾರ್ಥ ಗಳನ್ನು ನೋಡುವ ಸಾಮರ್ಥ್ಯವನ್ನು ಪ್ರಕಟಮಾಡುವಹಾಗೆ, ಅಗ್ನಿಯಲ್ಲಿ ಅರ್ಪಿಸಿದ ಘೃತವು ಜ್ವಾಲೆಯನ್ನು ಉಂಟು ಮಾಡಿ, ಅಗ್ನಿಯ ಸ್ವರೂಪವನ್ನು ಪ್ರಕಾಶಗೊಳಿಸುವುದು ಎಂದು ಘೃತಕ್ಕೆ ಚಕ್ಷುಸ್ಸಿನ ರೂಪವನ್ನು ಸಮರ್ಥನೆ ಮಾಡಿದೆ.

**ಅಮೃತಂ ಮ ಆಸನ್**—ಅಮೃತಪದವು **ಪ್ರಭಾರೂಪಂ ಅವಿನಾಶಿ ಜ್ಯೋತಿಃ** ನಾಶವನ್ನು ಹೊಂದದೆ ಸ್ವರೂಪವನ್ನು ತ್ಯಜಿಸದೆ ಇರುವ ಪ್ರಭಾರೂಪದಿಂದ ಪ್ರಕಾಶಿಸುವ ಜ್ಯೋತೀರೂಪವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವರಿಸಿ, ಈ ಪ್ರಕಾಶಿಸುವ ಜ್ಯೋತಿಸ್ವರೂಪವು ಅಗ್ನಿಯ ಮುಖದಲ್ಲಿರುವುದು ಎಂದು ವರ್ಣಿಸಿದೆ.

**ತ್ರಿಧಾತುಃ ಅರ್ಕಃ ರಜಸೋ ವಿಮಾನಃ**—ಪ್ರಾಣ ಅಪಾನ, ವ್ಯಾನ ಎಂಬ ಮೂರು ವಿಧವಾಗಿರುವ ಪ್ರಾಣವಾಯುವಿನ ಸ್ವರೂಪವೂ ಅಗ್ನಿಯೇ ಆಗಿರುವುದು. ಪೂಜ್ಯವಾದ ವಾಯುಸ್ವರೂಪವು ಅಗ್ನಿಯ ರೂಪದಿಂದಲೇ ಅಂತರಿಕ್ಷದಲ್ಲಿ ವಿಶೇಷವಾಗಿ ಪ್ರಕಾಶಿಸುತ್ತಿರುವುದು ಎಂದು ವರ್ಣಿಸಿ, ಅಗ್ನಿಗೆ ವಾಯುವಿನ ರೂಪದಿಂದ ಅಂತರಿಕ್ಷದಲ್ಲಿ ಸ್ಥಿತಿಯು ಉಕ್ತವಾಗಿದೆ.

**ಅಜಸ್ರೋ ಘರ್ಮಃ**—ಎಂಬ ವಾಕ್ಯದಿಂದ **ನೈರಂತರ್ಯೇಣ ಸಂತಾಪಕಾರೀ ಸೂರ್ಯಶ್ಚಾಹಮಸ್ಮಿ**। ಸರ್ವಕಾಲದಲ್ಲಿಯೂ ಸರ್ವರಿಗೂ ಸಂತಾಪವನ್ನು (ಸೆಕೆಯನ್ನು) ಅತಿಶಯವಾಗಿ ಉಂಟುಮಾಡುವ ಸೂರ್ಯರೂಪ ದಿಂದಲೂ ಅಗ್ನಿಯೇ ಇರುವನು ಎಂದು ಅಗ್ನಿಗೆ ಸೂರ್ಯರೂಪಾವಸ್ಥಿತಿಯು ಉಕ್ತವಾಗಿದೆ.

**ಹವಿರಸ್ಮಿ ನಾಮ**—ಈ ವಾಕ್ಯವು ಅಗ್ನಿಯು ಹವಿಸ್ಸಿನರೂಪದಿಂದ ಇರುವನೆಂಬ ಅರ್ಥವನ್ನು ಬೋಧಿಸುವು ದೆಂದು ವರ್ಣಿಸಿ, **ಆಜ್ಯಪುರೋಡಾಶಾದಿರೂಪಂ ಹವಿರಸ್ಮಿ ತದುಪಲಕ್ಷಿತಂ ಸರ್ವಮಪ್ಯಹಮಸ್ಮಿ** ಆಜ್ಯ, ಪುರೋಡಾಶ ಇವೇ ಮೊದಲಾದ ರೂಪದಿಂದ ಇರುವ ಹವಿಸ್ಸುಗಳೂ ಮತ್ತು ಇತರ ವಿಧವಾದ ಭೋಗ್ಯವಸ್ತುಗಳೂ ಕೂಡ ಅಗ್ನಿಯ ರೂಪದಿಂದಲೇ ಇರುವುವು ಎಂದು ವಿವರಿಸಿದೆ. ಇದರಿಂದ "ಸರ್ವಂ ಖಲ್ವಿದಂ ಬ್ರಹ್ಮ" (ಛಾ. ಉ. ೩-೧೪-೧) ಎಂಬ ಶ್ರುತಿಯಲ್ಲಿ ಉಕ್ತವಾಗಿರುವ ಪರಬ್ರಹ್ಮನ ಸರ್ವಾತ್ಮಭಾವವೂ ಅಗ್ನಿಯ ವಿಷಯದಲ್ಲಿ ಉಕ್ತವಾಗಿ, **ಅನೇನಾಗ್ನೇಃ ಸರ್ವಾತ್ಮಕತ್ವಪ್ರತಿಪಾದನೇನ ಪರಬ್ರಹ್ಮತ್ವಂ ಉಕ್ತಂ ಭವತಿ** । ಅಗ್ನಿಯು ಸರ್ವಾತ್ಮಕತ್ವವು ಪ್ರತಿಪಾದಿಕವಾಗಿರುವುದರಿಂದ ಪರಬ್ರಹ್ಮಭಾವವು ಅಗ್ನಿಗೆ ಇಲ್ಲಿ ಉಕ್ತವಾಗಿದೆ ಎಂದು ವಿವರಿಸಿದೆ.

ನಿರುಕ್ತಕಾರರು **ಅಥಾತ ಊರ್ಧ್ವಗತಿಂ ವ್ಯಾಖ್ಯಾಸ್ಯಾಮಃ** ಎಂದು ಪ್ರತಿಜ್ಞೆಯನ್ನು ಮಾಡಿ, **ಮಹಾಂತ-ಮಾತ್ಮಾನಮೇಷರ್ಗ್ಗಣಃ ಪ್ರವದಂತಿ**, ಮಹತ್ವಪೂರಿತವಾದ ಪರಮಾತ್ಮಸ್ವರೂಪವನ್ನು ಋಕ್ಕುಗಳು ವರ್ಣಿಸಿರು ತ್ತವೆ, ಎಂದು ಹೇಳಿ, **ಆತ್ಮಜಿಜ್ಞಾಸಯಾ ಆತ್ಮಾನಂ ಪ್ರೋವಾಚಾಗ್ನಿರಸ್ಮಿ ಜನ್ಮನಾ ಜಾತವೇದಾಃ** (ನಿ. ೧೦-೪)

ಆತ್ಮಸ್ವರೂಪವನ್ನು ತಿಳಿಸುವ ವಿಷಯದಲ್ಲಿ ಅಗ್ನಿಯು ತನಗೆ ಇರುವ ಪರಬ್ರಹ್ಮಾನುಭವವನ್ನು ಹೇಳಿರುವನು ಎಂದು ಈ ಋಕ್ಕನ್ನು ಉದಹರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಅಸ್ಮಿ**—ಅಸ ಭುವಿ ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಜನ್ಮನಾ**—ಜನೀ ಪ್ರಾದುರ್ಭಾವೇ ಧಾತು. ಔಣಾದಿಕ ಮನಿನ್‌ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚಕ್ಷುಃ**—ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ಅದಾದಿ. **ಉಸಿನ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ಚಕ್ಷೇ ಶಿಚ್ಚ** ಎಂಬುದರಿಂದ ಉಸಿನ್ ಪ್ರತ್ಯಯ. ಪ್ರತ್ಯಯಕ್ಕೆ ಶಿದ್ವದ್ಭಾವವಿಧಾನಮಾಡಿರುವುದರಿಂದ ಧಾತುವಿಗೆ ಖ್ಯಾಞಾದೇಶ ಬರುವುದಿಲ್ಲ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಮೃತಂ**—**ನಞೋಜರಮರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಆಸನ್**—ಆಸ್ಯ ಶಬ್ದ. ಇವಕ್ಕೆ ಸಪ್ತಮಿ ಏಕವಚನ ಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಆಸನ್ ಆದೇಶ. **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್ ಬರುತ್ತದೆ.

**ಅಜಸ್ರಃ**—ಜಸು ಮೋಕ್ಷಣೇ ಧಾತು. **ನಮಿಕಂಪಿಸ್ಮ್ಯಜಸಕಮಹಿಂಸದೀಪೋರಃ** (ಪಾ. ಸೂ. ೩-೨-೧೬೭) ಎಂಬುದರಿಂದ ರ ಪ್ರತ್ಯಯ. ನಞ್‌ಪೂರ್ವಕವಾದ ಈ ಜಸ್‌ಧಾತುವು ನೈರಂತರ್ಯ (ಸತತ) ಎಂಬ ಅರ್ಥವನ್ನು ಕೊಡುತ್ತದೆ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಜಸ ಉಪಕ್ಷಯೇ ಧಾತು. ಇದಕ್ಕೂ ಹಿಂದಿನಂತೆ ರ ಪ್ರತ್ಯಯ ಬಂದರೆ ಪೂರ್ವದಂತೇ ರೂಪವಾಗುತ್ತದೆ.

ಸಂಹಿತಾಪಾಠಃ

**ತ್ರಿಭಿಃ ಪವಿತ್ರೈರಪುಪೋದ್ಧ್ಯ೧ರ್ಕಂ ಹೃದಾ ಮತಿಂ ಜ್ಯೋತಿರನು ಪ್ರಜಾನನ್ ।**
**ವರ್ಷಿಷ್ಠಂ ರತ್ನಮಕೃತ ಸ್ವಧಾಭಿರಾದಿದ್ದ್ಯಾವಾಪೃಥಿವೀ ಪರ್ಯಪಶ್ಯತ್ ॥ ೮ ॥**

ಪದಪಾಠಃ

**ತ್ರಿಭಿಃ । ಪವಿತ್ರೈಃ । ಅಪುಪೋತ್ । ಹಿ । ಅರ್ಕಂ । ಹೃದಾ । ಮತಿಂ । ಜ್ಯೋತಿಃ । ಅನು । ಪ್ರಜಾನನ್ । ವರ್ಷಿಷ್ಠಂ । ರತ್ನಂ । ಅಕೃತ । ಸ್ವಧಾಭಿಃ । ಆತ್ । ಇತ್ । ದ್ಯಾವಾಪೃಥಿವೀ ಇತಿ । ಪರಿ । ಅಪಶ್ಯತ್ ॥**

ಸಾಯಣಭಾಷ್ಯಂ

**ಸರ್ವಾತ್ಮಕೋಽಗ್ನಿರ್ಹೃದಾಂತಃಕರಣವೃತ್ತ್ಯಾ ಮತಿಂ ಮನನೀಯಂ ಜ್ಯೋತಿಃ ಸ್ವಪ್ರಕಾಶರೂಪಂ ಪರಬ್ರಹ್ಮಾಖ್ಯಂ ತೇಜೋಽನು ಪ್ರಜಾನನ್ ಶ್ರವಣಮನನಾದಿಕ್ರಮೇಣ ಪ್ರಕರ್ಷೇಣ ಸಂಶಯವಿಪ-**

ರ್ಯೋಗಸಭಾವನಾಬುದ್ಧಿನಿರಾಸೇನ ಸ್ವಾತ್ಮರೂಪತಯಾ ಜಾನಾನಃ ಸನ್ ಪವಿತ್ರೈಃ ಪಾವನೈಸ್ತ್ರಿಭಿರಗ್ನಿ-ವಾಯುಸೂರ್ಯೈರರ್ಕಮರ್ಚನೀಯಂ ಸ್ವಾತ್ಮಾನಮಪುಪೋದ್ಧಿ| ತೇಭ್ಯೋಽಪಿ ನಿರ್ಮಲತಯಾ ಪಾವನಂ ಪರಿಚ್ಛಿಚ್ಛೇದ ಖಲು| ಯಥಾ ದಶಾಪವಿತ್ರೇಣ ಸೋಮಂ ಪಾವಯತಿ ತದ್ವತ್ | ಏವಂ ಜಾನಾನೋಽಗ್ನಿರ್ವ-ರ್ಷಿಷ್ಠಂ ಸ್ವಾತ್ಮಾನಮುತ್ತಮಂ ಸ್ವಧಾಭಿಃ | ಸ್ವೇನ ಲೋಕಾನ್ದಧಾತೀತಿ ಸ್ವಧಾ | ತೈರಗ್ನಿವಾಯುಸೂರ್ಯೈ ರತ್ನಂ ರಮಣೀಯಮಕೃತ | ಅಕಾರ್ಷೀತ್ | ಆದಿತ್ ಅನಂತರಮೇವಮಾತ್ಮನಿ ಜ್ಞಾತೇ ಸತಿ ದ್ಯಾವಾ-ಪೃಥಿವೀ ತತ್ರ ಪರಿಕಲ್ಪಿತೇ ದ್ಯಾವಾಪೃಥಿವ್ಯೌ ತದುಪಲಕ್ಷಿತಂ ಸರ್ವಂ ಜಗಚ್ಚ ಪರ್ಯಪಶ್ಯತ್ | ಪರಿತಃ ಸರ್ವತಃ ಸ್ವಾತ್ಮತಯಾದರ್ಶತ್ | ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ಶ್ರುತೇಃ || ಪವಿತ್ರೈಃ | ಪೂಞ್ ಪವನೇ | ಅಸ್ಮಾತ್ಕರ್ತರಿ ಚರ್ಷಿದೇವತಯೋಃ | ಪಾ. ೩-೨-೧೮೬ | ಇತಿ ದೇವ-ತಾಯಾಮಭಿಧೇಯಾಯಾಂ ಕರ್ತರಿ ಇತ್ರಪ್ರತ್ಯಯಃ | ಪುನಂತೀತಿ ಪವಿತ್ರಾ ಅಗ್ನಿವಾಯುಸೂರ್ಯಾಃ | ಪ್ರತ್ಯಯಸ್ವರಃ | ಅಪುಪೋತ್ | ಪೂಞ್ ಪವನೇ ಇತ್ಯಸ್ಯ ಯಙ್‌ಲುಗಂತಸ್ಯ ರೂಪಂ | ಸಂಜ್ಞಾ-ಪೂರ್ವಕಸ್ಯ ವಿಧೇರನಿತ್ಯತ್ವಾದಭ್ಯಾಸಸ್ಯ ಗುಣಾಭಾವಃ | ಯದ್ಧಿತುಪರಂ ಛಂದಸಿ | ಪಾ. ೮-೧-೫೬ | ಇತಿ ನ ನಿಘಾತಃ | ಅರ್ಕಂ | ಅರ್ಚ ಪೂಜಾಯಾಂ | ಕೃದಾಧಾರಾರ್ಚಿಕಲಿಭ್ಯಃ ಕ ಇತಿ ಕಪ್ರತ್ಯಯಃ | ಹೃದಾ | ಹೃದಯಶಬ್ದಸ್ಯ ಪದ್ದನ್ನೋಮಾಸಿತ್ಯಾದಿನಾ ಹೃದಾದೇಶಃ | ಮತಿಂ | ಮನಜ್ಞಾನೇ | ಮಂತ್ರೇ ವೃಷೇಷಪಚೇತ್ಯಾದಿನಾ ಕರ್ಮಣಿ ಕ್ತಿನ್ ಉದಾತ್ತಃ | ಅಕೃತ | ಪರೋಽತೇರ್ಲುಙಃ ಸಿಚ್ | ತಸ್ಯ ಹ್ರಸ್ವಾದಂಗಾದಿತಿ ಲೋಪಃ | ದ್ಯಾವಾಪೃಥಿವೀ | ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರಃ ||

### ಪ್ರತಿಪದಾರ್ಥ

(ಅಗ್ನಿಃ—ಸರ್ವಾತ್ಮನಾದ ಅಗ್ನಿಯು) | ಹೃದಾ—ಅಂತಃಕರಣವೃತ್ತಿಯಿಂದ | ಮತಿಂ—ಧ್ಯಾನಿಸಲ್ಪಡಲು ಯೋಗ್ಯವಾದ | ಜ್ಯೋತಿಃ—ತೇಜಸ್ಸನ್ನು | ಅನುಪ್ರಜಾನನ್—ಶ್ರವಣಮನನಾದಿಸಾಧನಗಳಿಂದ ಅರ್ಥಮಾಡಿಕೊಂಡು | ಪವಿತ್ರೈಃ—ಪಾವನಗಳಾದ | ತ್ರಿಭಿಃ—ಅಗ್ನಿ, ವಾಯು ಮತ್ತು ಸೂರ್ಯ ಈ ಮೂರು ತತ್ತ್ವಗಳಿಂದ | ಅರ್ಕಂ—ಪೂಜ್ಯವಾದ ತನ್ನ ಸ್ವರೂಪವನ್ನು | ಅಪುಪೋದ್ಧಿ—ಶುದ್ಧಿಮಾಡಿಕೊಂಡನಲ್ಲವೇ | ವರ್ಷಿಷ್ಠಂ—ಶ್ರೇಷ್ಠತಮವಾದ ತನ್ನ ಆತ್ಮವನ್ನು | ಸ್ವಧಾಭಿಃ—ಲೋಕಗಳನ್ನು ಧರಿಸಿರತಕ್ಕ ಅಗ್ನಿ, ವಾಯು ಮತ್ತು ಸೂರ್ಯರಿಂದ | ರತ್ನಂ—ರಮಣೀಯವಾದದ್ದನ್ನಾಗಿ | ಅಕೃತ—ಮಾಡಿಕೊಂಡನು | ಆದಿತ್—ಒಡನೆಯೇ | ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳನ್ನೂ ಸಹ | ಪರ್ಯಪಶ್ಯತ್—ತನ್ನ ರೂಪದ ವಿಸ್ತೃತಿಯನ್ನಾಗಿಯೇ ತಿಳಿದನು ||

### ಭಾವಾರ್ಥ

ಸರ್ವಾತ್ಮಕನಾದ ಅಗ್ನಿಯು ಅಂತಃಕರಣವೃತ್ತಿಯಿಂದ ಧ್ಯಾನಿಸಲ್ಪಡಲು ಯೋಗ್ಯವಾದ ತೇಜಸ್ಸನ್ನು ಶ್ರವಣ ಮನನಾದಿ ಸಾಧನಗಳಿಂದ ಅರ್ಥಮಾಡಿಕೊಂಡು ಪಾವನಗಳಾದ ಅಗ್ನಿ, ವಾಯು ಮತ್ತು ಸೂರ್ಯ ಈ ಮೂರು ತತ್ತ್ವಗಳಿಂದ ಪೂಜ್ಯವಾದ ತನ್ನ ಸ್ವರೂಪವನ್ನು ಶುದ್ಧಿಮಾಡಿಕೊಂಡನು. ಲೋಕಗಳೆಲ್ಲವನ್ನೂ ಧರಿಸಿರತಕ್ಕ ಅಗ್ನಿ, ವಾಯು ಮತ್ತು ಸೂರ್ಯರಿಂದ ಶ್ರೇಷ್ಠತಮವಾದ ತನ್ನ ಆತ್ಮವನ್ನು ರಮಣೀಯವಾದದ್ದನ್ನಾಗಿ ಮಾಡಿಕೊಂಡನು. ಒಡನೆಯೇ ದ್ಯಾವಾಪೃಥಿವಿಗಳನ್ನೂ ಸಹ ತನ್ನ ರೂಪದ ವಿಸ್ತೃತಿಯೆಂಬುದಾಗಿಯೇ ತಿಳಿದನು.

### English Translation

Agni, thoroughly comprehending the light that is to be understood

by the heart, has purified himself (by the three) purifying (forms); he has made himself most excellent treasure by (these) self-manifestations, and has thence contemplated heaven and earth.

ವಿಶೇಷವಿಷಯಗಳು

**ಹೃದಾ ಮತಿಂ ಜ್ಯೋತಿರನು ಪ್ರಜಾನನ್**—**ಸರ್ವಾತ್ಮಕಃ ಅಗ್ನಿಃ ಅಂತಃಕರಣವೃತ್ತ್ಯಾ ಮನನೀಯಂ ಸ್ವಪ್ರಕಾಶರೂಪಂ ಪರಬ್ರಹ್ಮಾಖ್ಯಂ ತೇಜಃ ಶ್ರವಣಮನನಾದಿಕ್ರಮೇಣ ಸಂಶಯವಿಪರ್ಯಾಸಭಾವನಾಬುದ್ಧಿನಿರಾಸೇನ ಸ್ವಾತ್ಮರೂಪತಯಾ ಜಾನಾನಃ** । ಹೃದಯವೆಂಬುವುದು ಜ್ಞಾನವನ್ನು ಗ್ರಹಿಸುವ ಇಂದ್ರಿಯವಾಗಿರುವುದರಿಂದ ಅಂತರಿಂದ್ರಿಯವೆಂದು ಉಕ್ತವಾಗಿ, ಐದು ಚಕ್ಷುರಾದಿಜ್ಞಾನೇಂದ್ರಿಯಗಳಿಗೂ, ಐದು ಕರ್ಮೇಂದ್ರಿಯಗಳಿಗೂ ತನ್ನ ಸಂಬಂಧವನ್ನು ಕಲ್ಪಿಸಿ, ಆತ್ಮನನ್ನು ಧ್ಯಾನಮಾಡುವ ಸ್ಥಾನವಾಗಿ ಶರೀರದಲ್ಲಿರುವ ಮುಖ್ಯವಾದ ಅಂಗವೆಂದು ಪರಿಗಣಿತವಾಗಿದೆ. ಈ ಅಂತರಿಂದ್ರಿಯವು ಮನಸ್ಸು, ಬುದ್ಧಿ ಚಿತ್ತ, ಅಹಂಕಾರ, ಎಂದು ನಾಲ್ಕುವಿಧವಾಗಿದ್ದು, ಮನಸ್ಸಿನಿಂದ ಸಂಶಯಜ್ಞಾನವನ್ನೂ, ಬುದ್ಧಿಯಿಂದ ನಿಶ್ಚಯಜ್ಞಾನವನ್ನೂ, ಚಿತ್ತವೆಂಬ ಹೆಸರಿನಿಂದ ಗರ್ವವನ್ನೂ, ಅಹಂಕಾರವೆಂಬ ಹೆಸರಿನಿಂದ ಸ್ಮೃತಿಜ್ಞಾನವನ್ನೂ ಗ್ರಹಿಸುವ ಶಕ್ತಿಯನ್ನು ಹೊಂದಿ, ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳೆರಡರಲ್ಲಿಯೂ ಆಯಾಯ ಜ್ಞಾನಜನಕವಾಗಿದೆ ಎಂದು ಶಾಸ್ತ್ರಕಾರರು ಹೇಳಿದ್ದಾರೆ. ಇಲ್ಲಿ ಹೃದಾ ಎಂಬ ಪದಕ್ಕೆ ಅಂತಃಕರಣವೆಂದು ಅರ್ಥವನ್ನು ಹೇಳಿದೆ. ಈ ಅಂತಃಕರಣದ ಸಂಬಂಧಿಯಾದ ಜ್ಞಾನಾಂಶವು ಬುದ್ಧಿಪದಪರ್ಯಾಯವಾದ ಮತಿಶಬ್ದದಿಂದ ಉಕ್ತವಾಗಿದೆ. ಮತಿಯು ನಿಶ್ಚಯಜ್ಞಾನಜನಕವಾಗಿರುವುದಾದುದರಿಂದ, ಪರಬ್ರಹ್ಮನ ಸರ್ವಾತ್ಮಭಾವವನ್ನು ಹೊಂದಿರುವ ಅಗ್ನಿಯು, ತನ್ನ ಬುದ್ಧಿಯಿಂದ ಧ್ಯಾನಮಾಡಿ ತನ್ನ ನಿಜಸ್ವರೂಪವಾದ ಸರ್ವದಾ ಪ್ರಕಾಶರೂಪದಿಂದ ಬೆಳಗುತ್ತಿರುವ ಪರಬ್ರಹ್ಮನೆಂದು ಪ್ರಸಿದ್ಧವಾಗಿರುವ ತೇಜಸ್ಸಿನ ರೂಪವನ್ನು ತಿಳಿಯುವವನು ಎಂದೂ, ತನ್ನ ಸ್ವಸ್ವರೂಪವನ್ನು ಧ್ಯಾನದಿಂದ ಸಾಕ್ಷಾತ್ಕರಿಸುವಾಗ ಉಂಟಾಗುವ ಸಂಶಯಜ್ಞಾನ ಮತ್ತು ಒಂದು ವಸ್ತುವನ್ನು ಬೇರೊಂದನ್ನಾಗಿ ತಿಳಿಯುವ ವಿಪರ್ಯಾಸಜ್ಞಾನಗಳನ್ನು ಶಾಸ್ತ್ರಗಳಲ್ಲಿ ಉಕ್ತವಾಗಿರುವ ಅರ್ಥವನ್ನು ಶ್ರವಣಮಾಡಿ, ವಿಮರ್ಶೆಮಾಡುವುದರಿಂದ ನಾಶಗೊಳಿಸಿ ತನ್ನ ಪರಬ್ರಹ್ಮವಿಷಯಕವಾದ ಜ್ಞಾನವನ್ನು ಸ್ಥಿರಭಾವನೆಯಿಂದ ತನ್ನ ಸ್ವರೂಪವೆಂದು ನಿಶ್ಚಯಿಸಿರುವ ಜ್ಞಾನವುಳ್ಳವನೆಂದೂ ಹೇಳಿ, ಅಗ್ನಿಯು ಸರ್ವಾತ್ಮನಾಗಿರುವುದನ್ನು ದೃಢಪಡಿಸಿ ವರ್ಣಿಸಿದೆ.

**ಪವಿತ್ರೈಃ ತ್ರಿಭಿಃ ಅರ್ಕಂ ಅಪುಪೋದ್ಧಿ**—ಈ ವಾಕ್ಯದಿಂದ ಅಗ್ನಿಯು ಆತ್ಮಧ್ಯಾನದಲ್ಲಿ ನಿಷ್ಠನಾಗಿ ತನ್ನ ಪರಬ್ರಹ್ಮಭಾವನೆಯಿಂದ ಹೊಂದಿರುವ ಪರಬ್ರಹ್ಮರೂಪವನ್ನೇ ಮೂರು ವಿಧವಾಗಿ ವಿಂಗಡಿಸಿರುವನೆಂದು ಹೇಳಿದೆ. ಈ ಮೂರು ರೂಪಗಳು ಪರಿಶುದ್ಧವಾದ, ಇತರರಿಂದ ಪೂಜಿಸಲರ್ಹವಾದ, ಅಗ್ನಿ, ವಾಯು, ಮತ್ತು ಸೂರ್ಯ, ಎಂಬ ಹೆಸರುಗಳಿಂದ ಲೋಕಗಳಲ್ಲಿ ಪ್ರಸಿದ್ಧವಾದ ರೂಪಗಳಾಗಿರುತ್ತವೆಯಾಗಿ, ಇವುಗಳಿಗಿಂತಲೂ ಪರಿಶುದ್ಧವಾದ, ಪೂಜಾರ್ಹವಾದ ತನ್ನ ಪರಬ್ರಹ್ಮಭಾವದಲ್ಲಿಯೂ ಬೆಳಗುತ್ತಿರುವನೆಂದೂ ಇತರರಿಗೆ ಈ ವಿಧವಾದ ನಿಶ್ಚಯವು ಉಂಟಾಗುವಂತೆ ಇರುವವನೆಂದೂ, **ಪರಿಚಿಚ್ಛೇದ ಖಲು** ಎಂಬ ವಾಕ್ಯದಿಂದ ವಿವರಿಸಿದೆ. ಮತ್ತು ಈ ವಿಷಯದಲ್ಲಿ **ತ್ರಿಭಿಃ ಪವಿತ್ರೈಃ** ಎಂದು ದೃಷ್ಟಾಂತವನ್ನೂ ಹೇಳಿದೆ. ಯಾಗ ಮಾಡುವಕಾಲದಲ್ಲಿ ಸೋಮವನ್ನು ಮೂರು ಪವಿತ್ರಗಳಿಂದ ಶೋಧಿಸುವ ಹಾಗೆ ತನ್ನ ರೂಪಾಂತರಗಳಾದ ಅಗ್ನಿ, ವಾಯು ಸೂರ್ಯ ರೂಪಗಳಿಂದ ಸರ್ವವನ್ನೂ ಪರಿಶುದ್ಧಿಮಾಡುವನೆಂದು ಹೋಲಿಸಿದೆ.

**ವರ್ಷಿಷ್ಠಂ ಸ್ವಧಾಭಿಃ ರತ್ನಮಕೃತ**—ಸ್ವಧಾಶಬ್ದವು ಉದಕನಾಮುಗಳಲ್ಲಿಯೂ (ನಿ. ೨-೨೪) ಅನ್ನನಾಮುಗಳಲ್ಲಿಯೂ (ನಿ. ೩-೯) ಸ್ವಧೇ ಎಂದು (ನಿ. ೩-೨೨) ದ್ಯಾವಾಪೃಥಿವೀನಾಮುಗಳಲ್ಲಿಯೂ ಉಕ್ತವಾಗಿದೆ. ಇಲ್ಲಿ ಸ್ವಧಾ ಶಬ್ದವು **ಸ್ವೇನ ಲೋಕಾನ್ ದಧಾತೀತಿ ಸ್ವಧಾ** ಎಂದು ವಿವೃತವಾಗಿ, ಲೋಕವನ್ನು ಧಾರಣಮಾಡುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅಗ್ನಿಯು ತನ್ನ ಉತ್ತಮವಾದ (ಸ್ಥಾನವನ್ನು) ಪರಬ್ರಹ್ಮಸ್ವರೂಪವನ್ನು ಅಗ್ನಿ ವಾಯು, ಸೂರ್ಯ, ಎಂಬ ಮೂರು ರೂಪಗಳಿಂದ ಧರಿಸಿ, ಸರ್ವರೂ ಆನಂದಗೊಳ್ಳುವಂತೆ ಮಾಡಿ, ಲೋಕಗಳನ್ನು ಆನಂದಗೊಳಿಸಿರುವನು ಎಂದು ಅರ್ಥವನ್ನು ಹೇಳಿದೆ.

**ಆದಿತ್ ದ್ಯಾವಾಪೃಥಿವೀ ಪರ್ಯಪಶ್ಯತ್**—ಆದಿತ್ ಎಂಬ ಪದಕ್ಕೆ ಆತ್ಮಜ್ಞಾನವು ಉಂಟಾದನಂತರ, ಎಂದು ಅರ್ಥವನ್ನು ವರ್ಣಿಸಿ, **ತತ್ರ ಪರಿಕಲ್ಪಿತೇ ದ್ಯಾವಾಪೃಥಿವ್ಯೌ ತದುಪಲಕ್ಷಿತಂ ಸರ್ವಂ ಜಗತ್ ಪರಿತಃ ಸರ್ವತಃ ಸ್ವಾತ್ಮತಯಾ, ಅದರ್ಶತ್.** ಅಗ್ನಿಯು ತನ್ನ ನಿಜರೂಪವಾದ ಪರಬ್ರಹ್ಮಸ್ವರೂಪವನ್ನು ತಿಳಿಯುವ ಜ್ಞಾನದಲ್ಲಿಯೇ ಇರುವವನಾಗಿ, ಪರಬ್ರಹ್ಮನಲ್ಲಿಯೇ ಕಲ್ಪಿತವಾಗಿರುವುದೆಂದು ಜಗತ್ತನ್ನು ತಿಳಿದು, ಸಕಲ ಲೋಕಗಳೂ, ಮತ್ತು ದ್ಯಾವಾಪೃಥಿವಿಯೂ ಕೂಡ ಪರಬ್ರಹ್ಮರೂಪದಿಂದ ಇರುವ ತನ್ನ ಸ್ವರೂಪದಲ್ಲಿ ಕಲ್ಪಿತವಾಗಿರುವುದೆಂದು ತಿಳಿದನು ಎಂದು ವರ್ಣಿಸಿ, "ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಆತ್ಮಸಾಕ್ಷಾತ್ಕಾರವಾದನಂತರ ಆತ್ಮನಿಗಿಂತ ಬೇರೆಯಾಗಿರುವಂತೆ ಕಲ್ಪಿತವಾಗಿರುವ ಎಲ್ಲಾ ವಸ್ತುಗಳ ನಿಜಸ್ವರೂಪಜ್ಞಾನವು ಉಂಟಾಗುವುದೆಂದು ಬೋಧಿಸುವ ಶ್ರುತಿವಾಕ್ಯವನ್ನು ಉದಾಹರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಪವಿತ್ರೈಃ**—ಪೂಞ್ ಪವನೇ ಧಾತು. **ಕರ್ತರಿಚರ್ಷಿದೇವತಯೋಃ** (ಪಾ. ಸೂ. ೩-೨-೧೮೭) ಎಂಬುದರಿಂದ ದೇವತಾರೂಪ ಅರ್ಥ ತೋರುವಾಗ ಕರ್ತರಿಯಲ್ಲಿ ಇತ್ರ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ಅವಾದೇಶ ಪುನಂತಿ (ಪವಿತ್ರವಾಗಿ ಮಾಡುತ್ತದೆ) ಇತಿ ಪವಿತ್ರಾಃ ಅಗ್ನಿವಾಯುಸೂರ್ಯಾಃ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ಅಪುಪೋತ್**—ಪೂಞ್ ಪವನೇ ಧಾತು. ಅತಿಶಯಾರ್ಥದಲ್ಲಿ ಯಙ್ ಬಂದಾಗ ಅದಕ್ಕೆ ಲುಕ್. ಯಙ್ ಲುಗಂತದ ಮೇಲೆ ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಇಕಾರ ಲೋಪ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಅಭ್ಯಾಸಕ್ಕೆ ಗುಣ ಬರುವುದಿಲ್ಲ. ಹಿ ಎಂಬುದು ಪರವಾಗಿರುವುದರಿಂದ **ಯದ್ಧಿತುಪರಂ ಛಂದಸಿ** (ಪಾ. ಸೂ. ೮-೧-೫೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅರ್ಕಂ**—ಅರ್ಚ ಪೂಜಾಯಾಂ ಧಾತು. **ಕೃದಾಧಾರಾರ್ಚಿಕಲಿಭ್ಯಃ ಕಃ** (ಉ. ಸೂ. ೩-೩೭೦) ಎಂಬುದರಿಂದ ಕ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹೃದಾ—ಊಡಿದಂಪದಾದಿ**—(ಪಾ.ಸೂ. ೬-೧-೧೭೧)ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. **ಪದ್ದನ್ನೋಮಾಸ್** ಎಂಬುದರಿಂದ ಹೃದಯಶಬ್ದಕ್ಕೆ ಹೃದಾದೇಶ.

**ಮತಿಂ**—ಮನ ಜ್ಞಾನೇ. ಧಾತು. **ಮಂತ್ರೇ ವೃಷೇಷಪಚ**—(ಪಾ. ಸೂ. ೩-೩-೯೬) ಎಂಬುದರಿಂದ ಕರ್ಮಣಿಯಲ್ಲಿ ಕ್ತಿನ್ ಪ್ರತ್ಯಯ. ಇದು ಉದಾತ್ತವಾಗುತ್ತದೆ.

**ಪ್ರಜಾನನ್**—ಜ್ಞಾ ಅವಬೋಧನೇ. ಧಾತು. ಲಟಿಗೆ ಶತ್ರಾದೇಶ. ಶ್ನಾ ವಿಕರಣ. **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಕೃತ**—ಡುಕೃಞ್ ಕರಣೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಚ್ಲಿಗೆ ಸಿಚಾದೇಶ. ಹ್ರಸ್ವದ ಪರದಲ್ಲಿ ಬಂದುದರಿಂದ **ಹ್ರಸ್ವಾದಂಗಾತ್** (ಪಾ. ಸೂ. ೮-೨-೨೭) ಎಂಬುದರಿಂದ ಅದಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದ್ಯಾವಾಪೃಥಿವೀ**—**ದೇವತಾ ದೇವತಾದ್ವಂದ್ವೇ ಚ** ಎಂಬುದರಿಂದ ಸಮಾಸದಲ್ಲಿ ಉಭಯಪದಪ್ರಕೃತಿ ಸ್ವರ ಬರುತ್ತದೆ. **ಸುಪಾಂಸುಲುಕ್** ಎಂಬುದರಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ.

**ಅಪಶ್ಯತ್**—ದೃಶಿರ್ ಪ್ರೇಕ್ಷಣೇ ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

ಸಂಹಿತಾಪಾಠಃ

**ಶತಧಾರಮುತ್ಸಮಕ್ಷೀಯಮಾಣಂ ವಿಪಶ್ಚಿತಂ ಪಿತರಂ ವಕ್ತ್ವಾನಾಂ ।**
**ಮೇಳಿಂ ಮದಂತಂ ಪಿತ್ರೋರುಪಸ್ಥೇ ತಂ ರೋದಸೀ ಪಿಪೃತಂ ಸತ್ಯವಾಚಂ ॥ ೯ ॥**

ಪದಪಾಠಃ

**ಶತಽಧಾರಂ । ಉತ್ಸಂ । ಅಕ್ಷೀಯಮಾಣಂ । ವಿಪಃಽಚಿತಂ । ಪಿತರಂ । ವಕ್ತ್ವಾನಾಂ ।**
**ಮೇಳಿಂ । ಮದಂತಂ । ಪಿತ್ರೋಃ । ಉಪಽಸ್ಥೇ । ತಂ । ರೋದಸೀ ಇತಿ । ಪಿಪೃತಂ । ಸತ್ಯಽವಾಚಂ ॥ ೯॥**

ಸಾಯಣಭಾಷ್ಯಂ

ಯಸ್ಮಾದುಪಾಧ್ಯಾಯಾದ್ವಿಶ್ವಾಮಿತ್ರೋ ವೈಶ್ವಾನರಾಖ್ಯಂ ಪರಂ ಬ್ರಹ್ಮಾಜ್ಞಾಸೀತ್ತಮಿಮಮುಪಾಧ್ಯಾಯಮನಯರ್ಚಾ ಸ್ತೌತಿ । ಹೇ ರೋದಸೀ ದ್ಯಾವಾಪೃಥಿವ್ಯೌ ಶತಧಾರಮಪರಿಮಿತಜಲಧಾರಾಯುಕ್ತಮಕ್ಷೀಯಮಾಣಂ ನ ಕದಾಪಿ ವಿಚ್ಛಿನ್ನಪ್ರವಾಹಮುತ್ಸಂ ಉತ್ಸಮಿವ ಶತಪ್ರವಾಹೋಪೇತಂ ಸ್ರೋತ ಇವಾವಿಚ್ಛಿನ್ನವಾಕ್ಸರಣೀಸಮೇತಂ ವಿಪಶ್ಚಿತಂ ಮೇಧಾವಿನಂ ಸಕಲಶಾಸ್ತ್ರಾಭಿಜ್ಞಂ ಪಿತರಂ ಶಿಷ್ಯಾಣಾಂ ವಿದ್ಯೋಪದೇಶೇನ ಪಾಲಕಂ ವಕ್ತ್ವಾನಾಂ ವಕ್ತವ್ಯಾನಾಂ ವೇದವಾಕ್ಯಾನಾಂ ಮೇಳಿಂ ಮೇಲಕಂ ನಾನಾಶಾಖಾಗತಾನಾಂ ವಾಕ್ಯಾನಾಮೇಕಸ್ಮಿನ್ನರ್ಥೇ ಸಂಕಲಯ್ಯ ವಕ್ತಾರಂ ಪಿತ್ರೋರ್ದ್ಯಾವಾಪೃಥಿವ್ಯೋರುಪಸ್ಥೇ ಸಮೀಪೇ ಮದಂತಂ ಜ್ಞಾನಾತಿಶಯೇನ ಹೃಷ್ಯಂತಂ ಅತ ಏವ ಸತ್ಯವಾಚಮಜ್ಞಾತಾರ್ಥಭಾವಾತ್ಪರಪ್ರತಾರಣೇ ಚ ಕಾರಣಾಭಾವಾತ್ಸತ್ಯವಾದಿನಂ । ತಮಿಮಮುಪಾಧ್ಯಾಯಂ ಪಿಪೃತಂ । ಅಪೇಕ್ಷಿತಫಲಪ್ರದಾನೇನ ಸಂಪೂರ್ಣಂ ಕುರುತಂ । ಯದ್ವಾ ಪಾಲಯಂತಂ ॥ ಉತ್ಸಂ । ಉನ್ದೀ

ಕ್ಲೇದನೇ | ಅಸ್ಮಾದುನ್ದ್ಯಮಿಗುಧಿಕುಷಿಭ್ಯಃ ಕಿತ್ | ಉ. ೩-೬೮ | ಇತಿ ಸಪ್ರತ್ಯಯಃ | ಕಿತ್ತ್ವಾನ್ನಕಾರಲೋಪಃ | ಉನತ್ತ್ರೀತ್ಯುತ್ಸಃ | ವ್ಯತ್ಯಯೇನಾದ್ಯುದಾತ್ತಃ | ವಿಪಶ್ಚಿತಂ | ವಿಶೇಷೇಣ ಪಾತೀತಿ ವಿಪಾ ವಾಕ್ | ವಿಪೋ ವಾಚಶ್ಚಿನೋತೀತಿ ಕ್ವಿಪ್ | ಹ್ರಸ್ವಸ್ಯ ಪಿತೀತಿ ತುಕ್ | ತತ್ಪುರುಷೇ ಕೃತಿ ಬಹುಲಮಿತಿ ಬಹುಲವಚನಾತ್ ದ್ವಿತೀಯಾಯಾ ಅಪ್ಯಲುಕ್ | ಕೃದುತ್ತರಪದಸ್ವರಃ | ವಕ್ವಾನಾಂ | ವಚ ಪರಿಭಾಷಣೇ | ಅಸ್ಮಾತ್ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ತ್ವನ್ಪ್ರತ್ಯಯಃ | ಚೋಃ ಕುರಿತಿ ಕುತ್ವಂ | ನಿತ್ಸ್ವರಃ | ಮೇಳಿಂ | ಮಿಲಿಃ ಸಂಪರ್ಕಾರ್ಥೋ ಧಾತುಃ | ಅಸ್ಮಾದೌಣಾದಿಕ ಇಪ್ರತ್ಯಯಃ | ರೋದಸೀ | ಆಮಂತ್ರಿತತ್ವಾನ್ನಿಘಾತಃ | ಪಿಪೃತಂ | ಪೃ ಪಾಲನಪೂರಣಯೋಃ | ಛಾಂದಸೋ ಜುಹೋತ್ಯಾದಿಃ | ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ | ನಿಘಾತಃ ||

ಪ್ರತಿಪದಾರ್ಥ

**ರೋದಸೀ**—ಎಲೈ ದ್ಯಾವಾಪೃಥಿವಿಗಳೇ| **ಶತಧಾರಂ**—ಅಪರಿಮಿತವಾದ ಜಲಧಾರೆಯಿಂದ ಕೂಡಿದವನೂ| **ಅಕ್ಷೀಯಮಾಣಂ**—ಕ್ಷಯರಹಿತನೂ | **ಉತ್ಸಂ**—ಅನುಸ್ಯೂತವಾದ ಪ್ರವಾಹವುಳ್ಳವನೂ | **ವಿಪಶ್ಚಿತಂ**—ಮೇಧಾವಿಯೂ | **ಪಿತರಂ**—ಶಿಷ್ಯರಪಾಲಕನೂ | **ವಕ್ವಾನಾಂ**—ವೇದವಾಕ್ಯಗಳಿಗೆ | **ಮೇಳಿಂ**—ಸಮನ್ವಯವನ್ನು ತೋರಿಸಿ ಐಕ್ಯತೆಯನ್ನು ಪ್ರತಿಪಾದಿಸುವವನೂ | **ಪಿತ್ರೋಃ**—ಲೋಕಕ್ಕೆಲ್ಲಾ ಪಿತೃಗಳಾದ ದ್ಯಾವಾಪೃಥಿವಿಗಳ | **ಉಪಸ್ಥೇ**—ಸಮೀಪದಲ್ಲಿ | **ಮದಂತಂ**—(ಅತಿಶಯವಾದ ಜ್ಞಾನದಿಂದ) ಹರ್ಷಿಸುವವನೂ | **ಸತ್ಯವಾಚಂ**—ಸತ್ಯವನ್ನು ಹೇಳತಕ್ಕವನೂ ಆದ | **ತಂ**—ಈ ಉಪಾಧ್ಯಾಯನನ್ನು (ಋಷಿಯನ್ನು) | **ಪಿಪೃತಂ**—ಪೂರ್ಣವಾಗಿ ತೃಪ್ತಿಗೊಳಿಸಿರಿ ||

ಭಾವಾರ್ಥ

ಎಲೈ ದ್ಯಾವಾಪೃಥಿವಿಗಳೇ, ಅಪರಿಮಿತವಾದ ಜಲಧಾರೆಯಿಂದ ಕೂಡಿದವನೂ, ಕ್ಷಯರಹಿತನೂ, ಅನುಸ್ಯೂತವಾದ ಪ್ರವಾಹವುಳ್ಳವನೂ, ಮೇಧಾವಿಯೂ, ಶಿಷ್ಯರ ಪಾಲಕನೂ, ವೇದವಾಕ್ಯಗಳಿಗೆ ಸಮನ್ವಯವನ್ನು ತೋರಿ ಐಕ್ಯತೆಯನ್ನು ಪ್ರತಿಪಾದಿಸುವವನೂ, ಲೋಕಕ್ಕೆಲ್ಲಾ ಪಿತೃಗಳಾದ ದ್ಯಾವಾಪೃಥಿವಿಗಳ ಸಮೀಪದಲ್ಲಿ ಅತಿಶಯವಾದ ಜ್ಞಾನದಿಂದ ಹರ್ಷಿಸುವವನೂ, ಸತ್ಯಾರ್ಥವನ್ನು ಹೇಳತಕ್ಕವನೂ ಆದ ಈ ಋಷಿಯನ್ನು ಪೂರ್ಣವಾಗಿ ತೃಪ್ತಿಗೊಳಿಸಿರಿ.

English translation

Heaven and earth bc kind to that sage who is as it were a many-channelled and inexhaustible stream (of knowledge); the parent (of his disciples), the collater of holy texts, rejoicing on the lap of his parents, whose words are truth.

ವಿಶೇಷವಿಷಯಗಳು

ವಿಶ್ವಾಮಿತ್ರಋಷಿಯು ವೈಶ್ವಾನರನೆಂದು ಪ್ರಸಿದ್ಧನಾಗಿರುವ ಅಗ್ನಿಯ ಪರಬ್ರಹ್ಮರೂಪವನ್ನು ಸಾಕ್ಷಾತ್ಕರಿಸಲು ಉಪದೇಶಮಾಡಿದ ಗುರುವನ್ನು ಈ ಋಕ್ಕಿನಿಂದ ಸ್ತುತಿಮಾಡಿರುವನು ಎಂದು ವರ್ಣಿಸಿದೆ. ಈ ಋಕ್ಕಿನಲ್ಲಿ ಉಕ್ತವಾಗಿರುವ ದ್ವಿತೀಯಾಂತ್ಯಪದಗಳೆಲ್ಲವೂ ಪಿತರಂ ಎಂಬ ಪದಕ್ಕೆ ವಿಶೇಷಣವಾಗಿರುತ್ತವೆ ಎಂದು ವಿವರಿಸಿದೆ.

**ಶತಧಾರಂ ಅಕ್ಷೀಯಮಾಣಂ ಉತ್ಸಂ**—ಉತ್ಸ ಶಬ್ದವು ಕೂಪನಾಮಗಳಲ್ಲಿ (ನಿ. ೩-೯೯) ಉಕ್ತವಾಗಿದೆ. **ಉತ್ಸ ಉತ್ಸರಣಾದ್ವೋತ್ಸಾದನಾದ್ವಾ ಉತ್ಸ್ಯಂದನಾದ್ವಾ ಉನತ್ತೇರ್ವಾ** (ನಿ. ೧೦-೧೦) ಕ್ಲೇದನಾರ್ಥಕವಾದ ಉಂದ್ ಧಾತುವಿನಿಂದ ನಿಷ್ಪನ್ನವಾಗಿರುವ ಉತ್ಸ ಶಬ್ದವು ಉತ್ಸರಣ, ಉತ್ಸಾದನ, ಉತ್ಸ್ಯಂದನ, ಎಂದರೆ ಮೇಲುಮುಖವಾಗಿ ಉಕ್ಕುವುದು, ಹರಿಯುವುದು ಎಂಬ ಅರ್ಥವನ್ನು ಬೋಧಿಸುವುದು ಎಂದು ವಿವೃತವಾಗಿದೆ. ಮತ್ತು—

**ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।**
**ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹು ಸಾಕಂ ಸಿಸಿಚುರುತ್ಸಮುದ್ರಿಣಂ ॥**

(ಋ. ಸಂ. ೨-೨೪-೪).

ಇಲ್ಲಿ **ಉತ್ಸಂ ಮೇಘಂ** ಎಂದು ಉತ್ಸಶಬ್ದಕ್ಕೆ ಮೇಘವೆಂಬ ಅರ್ಥವನ್ನು ದುರ್ಗಾಚಾರ್ಯರು ವಿವರಿಸಿದ್ದಾರೆ.

ಸಾಯಣರು ಈ ಋಕ್ಕಿನಲ್ಲಿ ಪ್ರಯುಕ್ತವಾಗಿರುವ ಉತ್ಸಶಬ್ದಕ್ಕೆ ಉತ್ಸಮಿವ ಎಂದು ಲುಪ್ತೋಪಮವಾಗಿದೆ ಎಂದು ಅರ್ಥವನ್ನು ಹೇಳಿದ್ದಾರೆ. ವಿಶ್ವಾಮಿತ್ರಋಷಿಯ ಗುರುವು **ಸತತಪ್ರವಾಹೋಪೇತಂ ಸ್ರೋತ ಇವ ಅವಿಚ್ಛಿನ್ನವಾಕ್ಸರಣೇಸಮೇತಂ.** ಅಪರಿಮಿತವಾದ ಉದಕಗಳ ಧಾರೆಗಳಿಂದ ಕೂಡಿ, ಯಾವಾಗಲೂ (ನಿಲ್ಲದಿರುವ) ನಶಿಸದೆ ಇರುವ, ಸರ್ವಕಾಲದಲ್ಲಿಯೂ ಹರಿಯುವ, ಪ್ರವಾಹವುಳ್ಳ ಉದಕಗಳಹಾಗೆ, ಸರ್ವದಾ ನಿಲ್ಲದೆ ಇರುವ ವಾಕ್ಕುಗಳನ್ನು (ಪ್ರಸರಣೆಯಿಂದ) ಉಚ್ಚರಿಸುತ್ತಿರುವ ಪ್ರಭಾವವುಳ್ಳವನೆಂದು ವಿವರಿಸಿದ್ದಾರೆ.

**ವಿಪ್ರಂ ಪಿತರಂ**—ಮೇಧಾವಿನಾಮಗಳಲ್ಲಿ ವಿಪ್ರಶಬ್ದವು ನಿರುಕ್ತಕಾರರಿಂದ ಉಕ್ತವಾಗಿರುತ್ತದೆಯಾಗಿ, ವಿಶ್ವಾಮಿತ್ರನ ಗುರುವು ಎಲ್ಲಾ ಶಾಸ್ತ್ರಗಳಲ್ಲಿಯೂ ನಿಪುಣನಾಗಿರುವನೆಂದೂ, ತನ್ನ ಶಿಷ್ಯರನ್ನು ವಿದ್ಯೋಪದೇಶಮಾಡುವುದರಿಂದ ತಂದೆಯು ರಕ್ಷಿಸುವಂತೆ ರಕ್ಷಿಸುತ್ತಿರುವನೆಂದೂ ಅರ್ಥವನ್ನು ಹೇಳಿದೆ.

**ವಕ್ಮ್ಯಾನಾಂ ಮೇಳಿಂ—ವಕ್ತವ್ಯಾನಾಂ ವೇದವಾಕ್ಯಾನಾಂ ನಾನಾಶಾಖಾಗತಾನಾಂ ವಾಕ್ಯಾನಾಮೇಕಸ್ಮಿನ್ನರ್ಥೇ ಸಂಕಲಯ್ಯ ವಕ್ತಾರಂ**—ವಿಶ್ವಾಮಿತ್ರ ಋಷಿಯ ಗುರುವು ತನ್ನ ಶಿಷ್ಯರಿಗೆ ಅನೇಕವಾದ ಬೇರೆ ಬೇರೆಯಾದ ಶಾಖೆಗಳಲ್ಲಿರುವ ವೇದವಾಕ್ಯಗಳ ಅರ್ಥವನ್ನು ವಿವರಿಸಿ, ಅವುಗಳೆಲ್ಲವೂ ಒಂದೇ ಅಭಿಪ್ರಾಯವನ್ನು ಬೋಧಿಸುವ ತಾತ್ಪರ್ಯವುಳ್ಳವುಗಳೆಂಬ ಅರ್ಥವನ್ನು ವೇದವಾಕ್ಯಗಳ ವಿಷಯದಲ್ಲಿ ಅವಶ್ಯವಾಗಿ ಬೋಧಿಸುವನು ಎಂದು ವಿವರಿಸಿದೆ.

**ಪಿತ್ರೋಃ ಉಪಸ್ಥೇ ಮದಂತಂ—ದ್ಯಾವಾಪೃಥಿವ್ಯೋಃ ಸಮೀಪೇ ಜ್ಞಾನಾತಿಶಯೇನ ಹೃಷ್ಯಂತಂ.** ಇಲ್ಲಿ ಪಿತೃಶಬ್ದಕ್ಕೆ ದ್ಯಾವಾಪೃಥಿವಿಗಳೆಂದು ಅರ್ಥವನ್ನು ವಿವರಿಸಿದೆ. ಪ್ರಭೂತವಾದ ಜ್ಞಾನವನ್ನು ಹೊಂದಿ, ಆ ಜ್ಞಾನದ ಮಹಿಮೆಯಿಂದ ದ್ಯಾವಾಪೃಥಿವಿಗಳ ಸಮೀಪದಲ್ಲಿ (ಭೂಮ್ಯಂತರಿಕ್ಷಗಳಲ್ಲಿ) ಆನಂದದಿಂದ ಇರುವನು ಎಂದು ಅರ್ಥವನ್ನು ಹೇಳಿದೆ.

**ಸತ್ಯವಾಚಂ—ಅಜ್ಞಾತಾರ್ಥಾಭಾವಾತ್ ಪರಪ್ರತಾರಣೇ ಚ ಕಾರಣಾಭಾವಾತ್ ಸತ್ಯವಾಚಂ**—ಶಾಸ್ತ್ರಾರ್ಥವೆಲ್ಲವನ್ನೂ ತಿಳಿದುಕೊಂಡು ಇರುವುದರಿಂದಲೂ, ಇನ್ನೊಬ್ಬರನ್ನು ಮೋಸಪಡಿಸುವುದರ ಉದ್ದೇಶವು ಇಲ್ಲದಿರುವ ಕಾರಣದಿಂದಲೂ ನಿಜವಾದ ವಾಕ್ಕುಗಳನ್ನು ಹೇಳುತ್ತಿರುವನೆಂದು ಅರ್ಥವನ್ನು ವರ್ಣಿಸಿ, ಈ ರೀತಿಯಾದ ಮಹಿಮೆಯುಳ್ಳ ಗುರುವನ್ನು ದ್ಯಾವಾಪೃಥಿವಿಗಳು ಅಪೇಕ್ಷಿತವಾದ ಫಲವನ್ನು ಗುರುವಿಗೆ ಅನುಗ್ರಹಿಸುವುದರಿಂದ ಗುರುವಿನ ಇಷ್ಟವನ್ನು ನೆರವೇರಿಸಲಿ, ಅಥವಾ ರಕ್ಷಿಸಲಿ ಎಂದು ಆಶಂಸನೆಯು ಉಕ್ತವಾಗಿದೆ ಎಂದು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಉತ್ಸಂ**—ಉಂದೀ ಕ್ಲೇದನೇ, ಧಾತು. **ಉಂದ್ಯಮಿಗುಧಿ ಕುಷಿಭ್ಯಃಕಿತ್** (ಉ. ಸೂ. ೩-೩೪೮) ಎಂಬುದರಿಂದ ಸ ಪ್ರತ್ಯಯ. ಇದಕ್ಕೆ ಕಿತ್ವ ವಿಧಾನಮಾಡಿರುವುದರಿಂದ **ಅನಿದಿತಾಂ ಹಲಉ**—ಎಂಬುದರಿಂದ ಧಾತು ವಿನ ಉಪಧಾನಕಾರಕ್ಕೆ ಲೋಪ. ಉನತ್ತಿ ಇತಿ ಉತ್ಸಃ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಕ್ಷೀಯಮಾಣಂ**—ಕ್ಷಿ, ಕ್ಷಯೇ ಧಾತು. ಕರ್ಮಣಿಯಲ್ಲಿ ಲಟ್. ಅದಕ್ಕೆ ಶಾನಚಾದೇಶ. ಯಕ್ ನಿಮಿತ್ತವಾಗಿ ಧಾತುವಿನ ಇಕಾರಕ್ಕೆ ದೀರ್ಘ. ನಞ್ ತತ್ಪುರುಷಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಿಪಶ್ಚಿತಂ**—ವಿಶೇಷೇಣ ಪಾತೀತಿ ವಿಪಾ ವಾಕ್. ವಿಪೋ ವಾಚಶ್ಚಿನೋತಿ ಇತಿ. ಕ್ವಿಪ್‌ಪ್ರತ್ಯಯ. **ಹ್ರಸ್ವಸ್ಯ ಪಿತಿಕೃತಿತುಕ್** ಎಂಬುದರಿಂದ ಚಿ ಧಾತುವಿಗೆ ತುಕಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. **ತತ್ಪುರುಷೇಕೃತಿಬಹುಲಂ** (ಪಾ. ಸೂ. ೬-೩-೧೪) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಇಲ್ಲಿ ಸಮಾಸವಾದಾಗ ದ್ವಿತೀಯಾವಿಭಕ್ತಿಗೆ ಅಲುಕ್ ಬರುತ್ತದೆ. ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋ**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ವಕ್ತ್ವಾನಾಂ**—ವಚ ಪರಿಭಾಷಣೇ ಧಾತು. ಇದಕ್ಕೆ **ಕೃತ್ಯಾರ್ಥೇ ತವೈಕೇನ್‌ಕೇನ್ಯತ್ವನಃ** (ಪಾ.ಸೂ. ೩-೪-೧೪) ಎಂಬುದರಿಂದ ತ್ವನ್ ಪ್ರತ್ಯಯ. **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಧಾತುವಿನ ಚಕಾರಕ್ಕೆ ಕಕಾರಾದೇಶ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಬಹುವಚನಾಂತರೂಪ.

**ಮೇಳಿಂ**—ಮಿಳ ಸಂಪರ್ಕೇ, ಧಾತು. ಇದಕ್ಕೆ ಔಣಾದಿಕ ಇ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರೋದಸೀ**—**ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಪಿಪೃತಂ**—ಪೄ ಪಾಲನಪೂರಣಯೋಃ ಧಾತು. ಛಾಂದಸವಾಗಿ ಜುಹೋತ್ಯಾದಿಯಲ್ಲಿ ಪಠಿತವಾಗಿದೆ. ಲೋಟ್ ಮಧ್ಯಮಪುರುಷ. ದ್ವಿವಚನಕ್ಕೆ ತಮಾದೇಶ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಆತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

## ಇಪ್ಪತ್ತೇಳನೆಯ ಸೂಕ್ತವು

**ಪ್ರ ವೋ ವಾಜಾ ಇತಿ ಪಂಚದಶರ್ಚಂ ಪಂಚದಶಂ ಸೂಕ್ತಂ । ಅತ್ರಾನುಕ್ರಮಣಿಕಾ । ಪ್ರ ವಃ ಪಂಚೋನಾ ಗಾಯತ್ರಂ ತ್ವೃತವ್ಯಾ ವಾದ್ಯೇತಿ । ವಿಶ್ವಾಮಿತ್ರ ಋಷಿಃ । ಗಾಯತ್ರೀ ಛಂದಃ । ಅಗ್ನಿರ್ದೇವತಾ । ಆದ್ಯಾ ಋತುದೇವತ್ಯಾ ವಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಗಾಯತ್ರೇ ಛಂದಸ್ಯಸ್ಯ ಸೂಕ್ತಸ್ಯ ವಿನಿಯೋಗಃ । ಪ್ರ ವೋ ವಾಜಾ ಉಪಸದ್ಯಾಯ । ಆ. ೪-೧೩ । ಇತಿ ॥ ಆಭಿಪ್ಲವಿಕೇಷೂಕ್ಥ್ಯೇಷು ಪ್ರ ವೋ ವಾಜಾ ಇತಿ ವೈಕಲ್ಪಿಕಃ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಪ್ರ ವೋ ವಾಜಾ ಅಭಿದ್ಯವೋಽಭಿ ಪ್ರಯಾಂಸಿ ವಾಹಸಾ । ಆ. ೭-೮ । ಇತಿ । ಸೂಕ್ತಸ್ಯಾದ್ಯಾ ಸಾಮಿಧೇನೀ । ಸೂತ್ರಿತಂ ಚ । ಪ್ರ ವೋ ವಾಜಾ ಅಭಿದ್ಯವೋಽಗ್ನ ಆ ಯಾಹಿ ವೀತಯೇ । ಆ. ೧-೨ । ಇತಿ ॥ ಸಾಮಿಧೇನೀಷು ಸಮಿಧ್ಯ-**

ಮಾನ ಇತ್ಯೇಕಾ| ಸೂತ್ರಿತಂ ಚ| ಸಮಿಧ್ಯಮಾನೋ ಅಧ್ವರೇ ಸಮಿದ್ಧೋ ಅಗ್ನ ಆಹುತೇತಿ ದ್ವೇ| ಆ. ೧-೨ ಇತಿ|| ಆಧಾನೇ ತೃತೀಯಾಯಾಮಿಷ್ಟೌ ಸಾಮಿಧೇನೀಭಿಃ ಸಮಿಧ್ಯಮಾನೇಽಧ್ವರವತ್ಯೋರ್ಮಧ್ಯೇ ಪೃಥುಪಾಜಾ ಇತಿ ದ್ವೇ ಧಾಯ್ಯೇ| ಸೂತ್ರಿತಂ ಚ | ಪ್ರಾಗುಪೋತ್ತಮಾಯಾಃ ಪೃಥುಪಾಜಾ ಅಮರ್ತ್ಯ ಇತಿ ದ್ವೇ | ಆ, ೨-೧| ಇತಿ || ಏವಮನ್ಯತ್ರಾಪಿ ಯತ್ರ ಯತ್ರ ಸಪ್ತದಶ ಸಾಮಿಧೇನ್ಯಸ್ತತ್ರ ತತ್ರೈತೇ ಧಾಯ್ಯೇ ಇತಿ ದ್ರಷ್ಟವ್ಯಂ | ವಿಷುವತ್ಯೇಕವಿಂಶತಿಃ ಸಾಮಿಧೇನ್ಯಃ| ತತ್ರ ಪೃಥುಪಾಜಾ ಅಮರ್ತ್ಯ ಇತಿ ಷಡೃಚೋ ಧಾಯ್ಯಾಃ| ಪೃಥುಪಾಜಾ ಅಮರ್ತ್ಯ ಇತಿ ಷಟ್ ಧಾಯ್ಯಾಃ ಸಾಮಿಧೇನೀನಾಂ | ಆ. ೮-೬ | ಇತಿ ಸೂತ್ರಿತಂ | ಮಹಾವ್ರತೇಽಪಿ ಪಂಚವಿಂಶತಿಸಂಖ್ಯಾಕಾಃ ಸಾಮಿಧೇನ್ಯಃ | ತತ್ರಾಪ್ಯೇತಾಃ ಷಡೃಚೋ ದ್ರಷ್ಟವ್ಯಾಃ || ಅಗ್ನೀಷೋಮಪ್ರಣಯನೇ ಹೋತಾ ದೇವೋ ಅಮರ್ತ್ಯ ಇತಿ ತೃಚಃ | ಸೂತ್ರಿತಂ ಚ | ಹೋತಾ ದೇವೋ ಅಮರ್ತ್ಯಃ ಪುರಸ್ತಾದುಪ ತ್ವಾಗ್ನೇ ದಿವೇದಿವೇ | ಆ. ೪-೧೦ | ಇತಿ || ಈಳೇನ್ಯೋ ನಮಸ್ಯಸ್ತಿರ ಇತಿ ತಿಸ್ರಃ ಸಾಮಿಧೇನ್ಯಃ | ಸೂತ್ರಿತಂ ಚ | ಈಳೇನ್ಯೋ ನಮಸ್ಯಸ್ತಿರೋಽಗ್ನಿಂ ದೂತಂ ವೃಣೀಮಹೇ | ಆ. ೧-೨ | ಇತಿ ||

**ಅನುವಾದವು**—ಪ್ರ ವೋ ವಾಜಾ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಪ್ರ ವಃ ಪಂಚೋನಾ ಗಾಯತ್ರಂ ತ್ವೃತವ್ಯಾ ವಾದ್ಯಾ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು, ಗಾಯತ್ರೀಛಂದಸ್ಸು, ಅಗ್ನಿಯು ದೇವತೆಯು. ಮೊದಲನೆಯ ಋಕ್ಕು ಅಗ್ನಿ ಅಥವಾ ಋತುದೇವತಾಕವು, ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರ ಪಠನಕಾಲದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿ. ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ—**ಪ್ರ ವೋ ವಾಜಾ ಉಪಸದ್ಯಾಯ** ಎಂಬ ಸೂತ್ರದಿಂದ (ಆ. ೪-೧೩)ವಿವೃತವಾಗಿರುವುದು, ಅಭಿಪ್ಲವ ಸಂಬಂಧವಾದ ಉಕ್ಥ್ಯಯಾಗದಲ್ಲಿ **ಪ್ರ ವೋ ವಾಜಾಃ** ಎಂಬ ತೃಚವನ್ನು(೩ ಋಕ್ಕುಗಳನ್ನು)ವಿಕಲ್ಪದಿಂದಸ್ತೋತ್ರಿಯ ತೃಚವನ್ನಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ವೋ ವಾಜಾ ಅಭಿದ್ಯವೋಽಭಿಪ್ರಯಾಂಸಿ ವಾಹಸಾ** ಎಂಬ ಸೂತ್ರದಿಂದ ( ಆ. ೭-೮ ) ವಿವೃತವಾಗಿರುವುದು. ಈ ಸೂಕ್ತದ ಮೊದಲನೆಯ ಋಕ್ಕು ಸಾಮಿಧೇನೀಮಂತ್ರಗಳಲ್ಲಿ ಮೊದಲನೆಯ ಋಕ್ಕಾಗಿ ವಿನಿಯೋಗಿಸಲ್ಪಡುವುದೆಂದು ಆಶ್ವಲಾಯನಶ್ರೌತಸೂತ್ರದ-**ಪ್ರ ವೋ ವಾಜಾ ಅಭಿದ್ಯವೋಽಗ್ನ ಆ ಯಾಹಿ ವೀತಯೇ** ಎಂಬ ಸೂತ್ರದಿಂದ (ಆ. ೧-೨) ವಿವೃತವಾಗಿರುವುದು. ಮತ್ತು ಈ ಸೂಕ್ತದ **ಸಮಿಧ್ಯಮಾನಃ** ಎಂಬ ನಾಲ್ಕನೆಯ ಋಕ್ಕನ್ನು ಹಿಂದೆ ಹೇಳಿದ ಸಾಮಿಧೇನೀಮಂತ್ರಗಳಲ್ಲಿ ಒಂದನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸಮಿಧ್ಯಮಾನೋ ಅಧ್ವರೇ ಸಮಿದ್ಧೋ ಅಗ್ನ ಆಹುತೇತಿ ದ್ವೇ** ಎಂಬ ಸೂತ್ರದಿಂದ (ಆ. ೧-೨) ವಿವೃತವಾಗಿರುವುದು; ಆಧಾನವೆಂಬ ಯಜ್ಞದ ಮೂರನೆಯ ಇಷ್ಟಿಯಲ್ಲಿ ಸಾಮಿಧೇನೀಮಂತ್ರಗಳಿಂದ ಅಗ್ನಿಯನ್ನು ಪ್ರಜ್ವಲಿತಗೊಳಿಸಿದ ನಂತರ ಪಠಿಸುವ ಎರಡು ಧಾಯ್ಯಾಮಂತ್ರಗಳಿಗಾಗಿ **ಪೃಥುಪಾಜಾಃ** ಎಂಬ ಈ ಸೂಕ್ತದ ಐದನೆಯ ಮತ್ತು ಆರನೆಯ ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರಾಗುಪೋತ್ತಮಾಯಾಃ ಪೃಥುಪಾಜಾ ಅಮರ್ತ್ಯ ಇತಿ ದ್ವೇ** (ಆ. ೨-೧) ಎಂಬ ಸೂತ್ರದಿಂದ ವಿವೃತವಾಗಿರುವುದು, ಮತ್ತು ಯಾವಯಾವ ಕರ್ಮಗಳಲ್ಲಿ ೧೭ ಸಾಮಿಧೇನೀಮಂತ್ರಗಳನ್ನು ಉಪಯೋಗಿಸುವರೋ ಅಲ್ಲೆಲ್ಲಾ **ಪೃಥುಪಾಜಾಃ** ಎಂದು ಮೊದಲಾಗುವ (ಈ ಸೂಕ್ತದ ೫-೬ ಋಕ್ಕುಗಳ) ಎರಡು ಋಕ್ಕುಗಳನ್ನು ಧಾಯ್ಯಾಮಂತ್ರಗಳಿಗಾಗಿ ವಿನಿಯೋಗಿಸಬೇಕೆಂದು ಹೇಳಲಾಗಿದೆ. ಮತ್ತು ವಿಷುವತಿ ಎಂಬ ಯಾಗದಲ್ಲಿ ೨೧ ಸಾಮಿಧೇನೀಮಂತ್ರಗಳಿರುವವು. ಅವುಗಳ ಮಧ್ಯದಲ್ಲಿ **ಪೃಥುಪಾಜಾ ಅಮರ್ತ್ಯಃ** ಎಂದು ಮೊದಲಾಗುವ ಈ ಸೂಕ್ತದ ೬ ಋಕ್ಕುಗಳನ್ನು ಎಂದರೆ

೫-೧೦ ನೇ ಋಕ್ಕುಗಳನ್ನು ಧಾಯ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪೃಥುಪಾಜಾ ಅಮರ್ತ್ಯ ಇತಿ ಷಟ್ ಧಾಯ್ಯಾ ಸಾಮಿಧೇನೀನಾಂ** ಎಂಬ ಸೂತ್ರದಿಂದ (ಆ. ೮-೬) ವಿವೃತವಾಗಿರುವುದು; ಮಹಾವ್ರತದಲ್ಲಿಯೂ ಕೂಡ ಇಪ್ಪತ್ತೈದು ಸಾಮಿಧೇನೀಮಂತ್ರಗಳಿರುವವು. ಅವುಗಳಲ್ಲಿ ಮೇಲೆ ಹೇಳಿದ ಆರು ಋಕ್ಕುಗಳೂ ಧಾಯ್ಯಾಮಂತ್ರಗಳಾಗಿ ಸೇರಿರುವವು; ಅಗ್ನೀಷೋಮ ಪ್ರಣಯನಕಾಲದಲ್ಲಿ—**ಹೋತಾ ದೇವೋ ಅಮರ್ತ್ಯಃ** ಎಂಬ ಮೂರು ಋಕ್ಕುಗಳನ್ನು (ಈ ಸೂಕ್ತದ ೭-೯ ಋಕ್ಕುಗಳು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಹೋತಾ ದೇವೋ ಅಮರ್ತ್ಯಃ ಪುರಸ್ತಾದುಪ ತ್ವಾಗ್ನೇ ದಿವೇದಿವೇ** ಎಂಬ ಸೂತ್ರದಿಂದ (ಆ.೪-೧೦) ವಿವೃತವಾಗಿರುವುದು ಮತ್ತು ಆಗ ಈ ಸೂಕ್ತದ—**ಈಳೇನ್ಯೋ ನಮಸ್ಯಸ್ತಿರಃ** ಎಂಬ ಋಕ್ಕುಗಳನ್ನು (ಈ ಸೂಕ್ತದ ೧೩-೧೫ ಋಕ್ಕುಗಳು) ಸಾಮಿಧೇನೀಮಂತ್ರಗಳಿಗಾಗಿ ವಿನಿಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಈಳೇನ್ಯೋ ನಮಸ್ಯಸ್ತಿರೋಽಗ್ನಿಂ ದೂತಂ ವೃಣೀಮಹೇ** ಎಂಬ ಸೂತ್ರದಿಂದ (೧-೨) ವಿವೃತವಾಗಿರುವುದು.

## ಸೂಕ್ತ—೨೭

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೭ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೨೮, ೨೯, ೩೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

ಋಷಿಃ—ವಿಶ್ವಾಮಿತ್ರಃ ॥
ದೇವತಾ—೧. ಋತವ ಅಗ್ನಿರ್ವಾ । ೨-೧೫. ಅಗ್ನಿಃ ॥
ಛಂದಃ—ಗಾಯತ್ರೀ ॥

ಸಂಹಿತಾಪಾಠಃ

ಪ್ರ ವೋ ವಾಜಾ ಅಭಿದ್ಯವೋ ಹವಿಷ್ಮಂತೋ ಘೃತಾಚ್ಯಾ ।
ದೇವಾಞ್ಜಿಗಾತಿ ಸುಮ್ನಯುಃ ॥ ೧ ॥

ಪದಪಾಠಃ

ಪ್ರ । ವಃ । ವಾಜಾಃ । ಅಭಿऽದ್ಯವಃ । ಹವಿಷ್ಮಂತಃ । ಘೃತಾಚ್ಯಾ ।
ದೇವಾನ್ । ಜಿಗಾತಿ । ಸುಮ್ನಯುಃ ॥ ೧ ॥

ಸಾಯಣಭಾಷ್ಯಂ

ಹೇ ಋತವೋ ವಾಜಾಃ । ವಜಂತಿ ಗಚ್ಛಂತೀತಿ ವಾಜಾ ಮಾಸಾಃ । ಅಭಿದ್ಯವಃ । ಅಭಿತೋ ದ್ಯವೋ ದಿವಸಾ ಯೇಷ್ವಿತ್ಯಭಿದ್ಯವೋಽರ್ಧಮಾಸಾಶ್ಚ । ಹವಿಷ್ಮಂತೋ ಹವಿರ್ಭಾಜೋ ದೇವಾಃ । ಘೃತಾಚ್ಯಾ । ಘೃತಮಂಚತೀತಿ ಘೃತಾಚೀ ಗೌಃ । ತಥಾ ಚ ತೈತ್ತಿರೀಯಕಂ । ದೇವಾ ಹವಿಷ್ಮಂತೋ ಗೌರ್ಘೃತಾಚೀ । ತೈ.ಸಂ. ೨-೫-೭-೪ । ಇತಿ । ಯದ್ವಾ । ಹವಿಷ್ಮಂತೋ ಹವಿಷಃ ಕ್ಷೀರಾದೇಃ ಪ್ರದಾತಾರಃ ಪಶವೋ

ಘೃತಾಚ್ಯಾ । ಘೃತಮಂಚತಿ ಪ್ರಾಪ್ನೋತೀತಿ ಘೃತಾಚೀ ಸ್ರುಕ್ । ತಥಾ ಚ ವಾಜಸನೇಯಕಂ । ಪಶವೋ ಹವಿಷ್ಮಂತಃ ಸ್ರುಗ್ಘೃತಾಚೀತಿ । ತಯಾ ಘೃತಾಚ್ಯಾ ಸಹಿತಾ ಹವಿಷ್ಮಂತೋ ದೇವಾಃ ಪಶವಶ್ಚ ಮಾಸಾಶ್ಚಾರ್ಧಮಾಸಾಶ್ಚೇತಿ ಸರ್ವೇ ವೋ ಯುಷ್ಮಾಕಂ ಯಜನಾರ್ಥಂ ಪ್ರಭವಂತಿ । ತೇಷು ವಾಜಾದಿಷು ಪ್ರಭವತ್ಸು ಸತ್ಸು ಸುಮ್ನಯುಃ ಸುಖಮಾತ್ಮನ ಇಚ್ಛನ್ಯಜಮಾನೋ ದೇವಾಞ್ಜಿಗಾತಿ । ಯಜ್ಞದ್ವಾರಾ ದೇವಾನ್ಪ್ರಾಪ್ನೋತಿ । ಉಕ್ತಾರ್ಥೇ ತೈತ್ತಿರೀಯಬ್ರಾಹ್ಮಣಂ । ಪ್ರ ವೋ ವಾಜಾ ಇತ್ಯನ್ವಾಹ ಮಾಸಾ ವೈ ವಾಜಾ ಅರ್ಧಮಾಸಾ ಅಭಿದ್ಯವೋ ದೇವಾ ಹವಿಷ್ಮಂತೋ ಗೌರ್ಘೃತಾಚೀ ಯಜ್ಞೋ ದೇವಾಞ್ಜಿಗಾತಿ ಯಜಮಾನಃ ಸುಮ್ನಯುಃ। (ತೈ.ಸಂ. ೨-೫-೭-೪)। ಇತಿ॥ ಅಭಿದ್ಯವಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಘೃತಾಚ್ಯಾ । ಘೃ ಕ್ಷರಣದೀಪ್ತ್ಯೋಃ । ಅಸ್ಮಾದಂಜಿಘೃಷಿಭ್ಯಃ ಕ್ತಃ । ಉ. ೩-೮೯ । ಇತಿ ಕರ್ಮಣಿ ಕ್ತಃ । ಘೃತಮಾಜ್ಯಮಂಚತೀತ್ಯೃತ್ವಿಗ್ದಧೃಗಿತ್ಯಾದಿನಾ ಕ್ವಿನ್। ಅನಿದಿತಾಮಿತ್ಯುಪಧಾಲೋಪಃ। ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಚಾವಿತಿ ಪೂರ್ವಪದಾಂತೋದಾತ್ತತ್ವಂ । ಜಿಗಾತಿ । ಗಾತಿರ್ಗತ್ಯರ್ಥಃ । ಛಾಂದಸೋ ಜುಹೋತ್ಯಾದಿಃ । ನಿಘಾತಃ । ಸುಮ್ನಯುಃ । ಸುಮ್ನಂ ಸುಖಮಾತ್ಮನ ಇಚ್ಛನ್ನಿತಿ ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ವಾಜಾಃ**—ಮಾಸಗಳೂ । **ಅಭಿದ್ಯವಃ**—ಅರ್ಧಮಾಸಗಳೂ । **ಹವಿಷ್ಮಂತಃ**—ಕ್ಷೀರಾದಿ ಹವಿಸ್ಸುಗಳನ್ನು ಹೊಂದಿರತಕ್ಕ । **ಘೃತಾಚ್ಯಾ**—ಪಶುಗಳೂ (ಅಥವಾ ಸ್ರುಕ್ಕುಗಳೂ) । **ವಃ**—ನಿಮ್ಮ ಯಜ್ಞದಲ್ಲಿ । **ಪ್ರ**—ಪ್ರಭುಗಳಾಗಿರುತ್ತಾರೆ । **ಸುಮ್ನಯುಃ**—ಸುಖವನ್ನು ಇಚ್ಛಿಸತಕ್ಕ ಯಜಮಾನನು—**ದೇವಾನ್**—ದೇವತೆಗಳನ್ನು। **ಜಿಗಾತಿ**—ಪೂಜಿಸಿ ಸಮಾಪಿಸುತ್ತಾನೆ.

ಭಾವಾರ್ಥ

ಹವಿಸ್ಸುಗಳನ್ನು ಸೇವಿಸತಕ್ಕ ಮಾಸಗಳೂ, ಅರ್ಧಮಾಸಗಳೂ, ಇತರ ದೇವತೆಗಳೂ ಮತ್ತು ಕ್ಷೀರಾದಿರೂಪವಾದ ಹವಿಸ್ಸನ್ನು ಕೊಡತಕ್ಕ ಪಶುಗಳೂ ಯಜ್ಞದ ಅಧಿಪತಿಗಳಾಗಿರುತ್ತಾರೆ. ಸುಖವನ್ನು ಇಚ್ಛಿಸತಕ್ಕ ಯಜಮಾನನು ದೇವತೆಗಳನ್ನು ಪೂಜಿಸಿ ಸಮಾಪಿಸುತ್ತಾನೆ.

English translation

The months, the half months, (the gods) who are the receivers of oblations, with the butter-yielding cows, preside over your rite; the sacrificer, desirous of prosperity, worships the gods.

ವಿಶೇಷವಿಷಯಗಳು

**ವಾಜಾಃ**—ಇಲ್ಲಿ ವಾಜಪದವು **ವಜಂತಿ ಗಚ್ಛಂತಿ** ಕಳದುಹೋಗುತ್ತವೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ ಮಾಸಗಳು ಎಂಬ ಅರ್ಥವನ್ನು ಬೋಧಿಸುತ್ತದೆ.

**ಅಭಿದ್ಯವಃ—ಅಭಿತಃ ದ್ಯವೋ ದಿವಸಾ ಯೇಷ್ವಿತಿ ಅಭಿದ್ಯವೋ ಅರ್ಧಮಾಸಾಃ** ಪ್ರತಿಮಾಸದಲ್ಲಿಯೂ ಆಯಾಯ ರಾತ್ರಿಗಳ ಎರಡು ಪಾರ್ಶ್ವಗಳಲ್ಲಿಯೂ ದಿವಸಗಳು (ಹಗಲುಗಳು) ಇರುವುದರಿಂದ ಅರ್ಧಮಾಸಗಳು ಎಂದು ಅಭಿದ್ಯುಪದಕ್ಕೆ ಅರ್ಥವನ್ನು ವರ್ಣಿಸಿದೆ.

**ಘೃತಾಚ್ಯಾ**—**ಘೃತಮಂಚತೀತಿ ಘೃತಾಚೀ ಗೌಃ । ಘೃತಮಂಚತಿ ಪ್ರಾಪ್ನೋತಿ ಇತಿ ಘೃತಾಚೀ ಸ್ರುಕ್ ।** ಘೃತಾಚೀ ಶಬ್ದವು ರಾತ್ರಿನಾಮುಗಳಲ್ಲಿ (ನಿ. ೨-೧೮) ಉಕ್ತವಾಗಿದೆ. ಸಾಯಣರು ಘೃತ (ಆಜ್ಯ) ವನ್ನು ಶೇಖರಿಸಲು ಕೊಡುವುದರಿಂದ ಗೋವೆಂದೂ, ಅಥವಾ ಆಜ್ಯವನ್ನು ಹೋಮಮಾಡುವುದರಿಂದ (ಸ್ರುಕ್ಕು) ಹೋಮಸಾಧನವಾದ ಪಾತ್ರೆ ಎಂದೂ ಘೃತಾಚೀಪದದ ಅರ್ಥವನ್ನು ವಿವರಿಸಿದ್ದಾರೆ. ಮತ್ತು—**ಹವಿಷ್ಮಂತಃ** ಎಂಬ ಪದಕ್ಕೆ ಹವಿರ್ಭಾಗವನ್ನು ಹೊಂದಿರುವ ದೇವತೆಗಳೂ, ಅಥವಾ **ಹವಿಷಃ ಕ್ಷೀರಾದೇಃ ಪ್ರದಾತಾರಃ** ಹವಿಸ್ಸಿನ ರೂಪವಾದ ಕ್ಷೀರ (ಹಾಲು) ಇವೇ ಮೊದಲಾದುವುಗಳನ್ನು ಕೊಡುವ (ಪಶುಗಳು) ಹಸುಗಳು, ಎಂದೂ ಅರ್ಥವನ್ನು ವರ್ಣಿಸಿ, ಈ ಎರಡು ಅರ್ಥಗಳಿಗೂ ಸರಿಯಾದ ಶ್ರುತಿವಾಕ್ಯಗಳನ್ನು "ದೇವಾಹವಿಷ್ಮಂತೋ ಗೌರ್ಘೃತಾಚೀ" (ತೈ. ಸಂ. ೨-೬-೫-೪) " ಪಶವೋ ಹವಿಷ್ಮಂತಃ ಸ್ರುಕ್ ಘೃತಾಚೀ " ಎಂದು ಉದಾಹರಿಸಿದ್ದಾರೆ.

**ಘೃತಾಚ್ಯಾ ಸಹಿತಾ ಹವಿಷ್ಮಂತೋ ದೇವಾಃ** ಆಜ್ಯವನ್ನು ಹೋಮಕ್ಕಾಗಿ ತುಂಬಿರುವ ಹೋಮಪಾತ್ರೆಯೊಡಗೂಡಿರುವ ಹವಿಸ್ಸನ್ನು ಹೊಂದಲರ್ಹರಾದ ದೇವತೆಗಳನ್ನು ಸಂಬೋಧಿಸಿ, ಪಶುಗಳೂ, ಮಾಸಗಳೂ, ಅರ್ಧಮಾಸಗಳೂ ಇವೆಲ್ಲವೂ ದೇವತೆಗಳಿಗಾಗಿ ಅಂದರೆ ದೇವತೆಗಳನ್ನು ಯಾಗದಮೂಲಕ ತೃಪ್ತಿಪಡಿಸುವುದಕ್ಕಾಗಿ ಸಿದ್ಧವಾಗಿವೆ ಎಂದೂ, **ಸುಮ್ನಯುಃ ದೇವಾನ್ ಜಿಗಾತಿ.** ಸುಖವನ್ನು ಹೊಂದಲು ಅಪೇಕ್ಷಿಸುವ ಯಜಮಾನನು ಇವುಗಳಿಂದ ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಯಾಗವನ್ನು ಆಚರಿಸಲು ಸಿದ್ಧನಾಗಿರುವನು ಎಂದು ಅರ್ಥವನ್ನು ವರ್ಣಿಸಿ ಇದೇ ಅಭಿಪ್ರಾಯವನ್ನು ಬೋಧಿಸುವ ಶ್ರುತಿವಾಕ್ಯವನ್ನು ಉದಹರಿಸಿರುವರು. ಉಕ್ತಾರ್ಥೇ ತೈತ್ತಿರೀಯಬ್ರಾಹ್ಮಣಂ—

> **ಪ್ರವೋ ವಾಜಾ ಇತ್ಯನ್ವಾಹ ಮಾಸಾ ವೈ ವಾಜಾಃ ಅರ್ಧಮಾಸಾ ಅಭಿದ್ಯವೋ ದೇವಾ ಹವಿಷ್ಮಂತೋ ಗೌರ್ಘೃತಾಚೀ ಯಜ್ಞೋ ದೇವಾ‌ನ್ ಜಿಗಾತಿ ಯಜಮಾನೋ ಸುಮ್ನಯುಃ** (ತೈ. ಸಂ. ೨-೬-೮-೪).

ಈ ಬ್ರಾಹ್ಮಣವಾಕ್ಯದಲ್ಲಿ ಈ ಋಕ್ಕಿನ ಅರ್ಥವು ಸ್ಪಷ್ಟವಾಗಿ ವಿವೃತವಾಗಿದೆ.

**ಸುಮ್ನಯುಃ**—**ಸುಮ್ನಂ ಸುಖಂ ಆತ್ಮನ ಇಚ್ಛತಿ-** ಸುಮ್ನ ಶಬ್ದವು ಸುಖನಾಮುಗಳಲ್ಲಿ (ನಿ. ೨-೧೩) ಉಕ್ತವಾಗಿದೆ. ಸುಖವು ತನಗೆ ಆಗಬೇಕೆಂದು ಇಚ್ಛೆಮಾಡುವವನು ಎಂದು ಸುಮ್ನಯು ಪದದ ಅರ್ಥವು ವಿವೃತವಾಗಿದೆ.

### ವ್ಯಾಕರಣಪ್ರಕ್ರಿಯಾ

ಅಭಿದ್ಯವಃ—ಅಭಿತೋ ದ್ಯವಃ ಯೇಷು ಅಭಿದ್ಯವಃ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಘೃತಾಚ್ಯಾ**—ಘೃ ಕ್ಷರಣದೀಪ್ತ್ಯೋಃ ಧಾತು. **ಅಂಜಿಘೃಷಿಭ್ಯಃ ಕ್ತಃ** (ಉ. ಸೂ. ೩-೩೬-೯) ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಘೃತಂ ಆಜ್ಯಂ ಅಂಚತಿ ಇತಿ ಘೃತಾಚೀ; ಅಂಚು ಗತಿಪೂಜನಯೋಃ ಧಾತು. ಘೃತರೂಪವಾದ ಸುಬಂತವು ಉಪಪದವಾಗಿರುವಾಗ **ಋತ್ವಿಕ್ ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಅನಿದಿತಾಂ ಹಲಉ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ **ಅಂಚತೇಶ್ಚೋಪಸಂಖ್ಯಾನಂ** ಎಂಬ ವಚನದಿಂದ ಙೀಪ್. **ಚೌ** (ಪಾ. ಸೂ. ೬-೧-೨೨೨) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

-**ಜಿಗಾತಿ**—ಗಾ ಗತೌ. ಧಾತು. ಜುಹೋತ್ಯಾದಿ. ಛಂದಸ್ಸಿನಲ್ಲಿ ಮಾತ್ರ ಪ್ರಯುಕ್ತವಾಗುತ್ತದೆ. ಶ್ಲು ವಿಕರಣ

ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಮ್ನಯುಃ**—ಸಮ್ನಂ ಸುಖಂ ಆತ್ಮನಃ ಇಚ್ಛನ್ ಇತಿ ಸುಮ್ನಯುಃ **ಸುಪ ಆತ್ಮನಃ ಕ್ಯಚ್**) (ಪಾ. ಸೂ. ೩-೧-೮) ಎಂಬುದರಿಂದ ಸುಮ್ನಶಬ್ದದಮೇಲೆ ಕ್ಯಚ್. **ಕ್ಯಾಚ್ಛಂದಸಿ** ( ಪಾ. ಸೂ. ೩-೨-೧೭೦ ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಪೂರ್ವದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಇದು ಅಂತೋದಾತ್ತವಾಗುತ್ತದೆ.

ಸಂಹಿತಾಪಾಠಃ

**ಈಳೇ ಅಗ್ನಿಂ ವಿಪಶ್ಚಿತಂ ಗಿರಾ ಯಜ್ಞಸ್ಯ ಸಾಧನಂ ।**
**ಶ್ರುಷ್ಟೀವಾನಂ ಧಿತಾವಾನಂ ॥ ೨ ॥**

ಪದಪಾಠಃ

**ಈಳೇ । ಅಗ್ನಿಂ । ವಿಪಃಽಚಿತಂ । ಗಿರಾ । ಯಜ್ಞಸ್ಯ । ಸಾಧನಂ ।**
**ಶ್ರುಷ್ಟೀಽವಾನಂ । ಧಿತಽವಾನಂ ॥ ೨ ॥**

ಸಾಯಣಭಾಷ್ಯಂ

**ವಿಪಶ್ಚಿತಂ ಮೇಧಾವಿನಂ ಯಜ್ಞಸ್ಯ ಸಾಧನಂ ಯಜ್ಞಸ್ಯ ನಿರ್ವಾಹಕಂ ಶ್ರುಷ್ಟೀವಾನಂ ಸುಖವಂತಂ ಯದ್ವಾ ವೇಗವಂತಂ ಧಿತಾವಾನಂ । ವಾನಂ ವನನೀಯಂ ಧನಂ ಧಿತಂ ನಿಹಿತಂ ಯಸ್ಯ ತಂ ನಿಹಿತಧನಂ। ತಮಿಮಮಗ್ನಿಂ ಗಿರಾ ಸ್ತುತಿಲಕ್ಷಣಯಾ ವಾಚೇಳೇ । ವಿಶ್ವಾಮಿತ್ರೋಽಹಂ ಸ್ತೌಮಿ ॥ ಈಳೇ । ಈಡ ಸ್ತುತೌ । ಶ್ರುಷ್ಟೀವಾನಂ । ವನ ಷಣ ಸಂಭಕ್ತಾವಿತ್ಯಸ್ಮಾದ್ವಿಚ್। ಶ್ರುಷ್ಟೀ ವನತೀತಿ ಶ್ರುಷ್ಟೀವಾ । ಕೃದುತ್ತರಪದಸ್ವರಃ । ಧಿತಾವಾನಂ । ದಧಾತೇರ್ನಿಷ್ಠಾಯಾಂ ಧಿರಾದೇಶಶ್ಛಾಂದಸಃ । ವನ ಸಂಭಕ್ತೌ । ಕರ್ಮಣಿ ಘಞ್ । ಬಹುವ್ರೀಹೌ ನಿಷ್ಠೇತಿ ಧಿತಶಬ್ದಸ್ಯ ಪೂರ್ವನಿಪಾತಃ । ಪೂರ್ವಪದಪ್ರಕೃತಿಸ್ವರಃ ॥**

ಪ್ರತಿಪದಾರ್ಥ

**ವಿಪಶ್ಚಿತಂ**—ಮೇಧಾವಿಯೂ । **ಯಜ್ಞಸ್ಯ ಸಾಧನಂ**—ಯಜ್ಞದ ನಿರ್ವಾಹಕನೂ । **ಶ್ರುಷ್ಟೀವಾನಂ**—ಸುಖವಂತನೂ ಅಥವಾ ವೇಗಶಾಲಿಯೂ । **ಧಿತಾವಾನಂ**—ಧನವ ನಿಕ್ಷೇಪವುಳ್ಳವನೂ ಆದ । **ಅಗ್ನಿಂ**—ಅಗ್ನಿಯನ್ನು। **ಗಿರಾ**—ಸ್ತುತಿರೂಪವಾದ ವಾಕ್ಕಿನಿಂದ । **ಈಳೇ**—ಸ್ತುತಿಸುತ್ತೇನೆ.

ಭಾವಾರ್ಥ

ಮೇಧಾವಿಯೂ, ಯಜ್ಞದ ನಿರ್ವಾಹಕನೂ, ಸುಖವಂತನೂ, ಧನದ ನಿಕ್ಷೇಪವುಳ್ಳವನೂ ಆದ ಅಗ್ನಿಯನ್ನು ಸ್ತುತಿರೂಪವಾದ ವಾಕ್ಕಿನಿಂದ ಸ್ತುತಿಸುತ್ತೇನೆ.

## English translation

I worship with praise the wise Agni, the accomplisher of sacrifice the possessor of happiness, the repository of wealth.

### ವಿಶೇಷವಿಷಯಗಳು

**ಶ್ರುಷ್ಟೀವಾನಂ—ಸುಖವಂತಂ ಯದ್ವಾ ವೇಗವಂತಂ** | ನಿರುಕ್ತಕಾರರು ಶ್ರುಷ್ಟೀತಿ ಕ್ಷಿಪ್ರನಾಮ (ನಿ. ೬-೧೩) ಎಂದು ಶ್ರುಷ್ಟಿಪದದ ಅರ್ಥವನ್ನು ವಿವರಿಸಿದ್ದಾರೆ. ಮತ್ತು **ಶ್ರುಷ್ಟೀವರೀಃ ಸುಖವತ್ಯಃ** ಎಂದೂ ಅರ್ಥವನ್ನು ಹೇಳಿದ್ದಾರೆ. ಅಗ್ನಿಯು ಸುಖವುಳ್ಳವನೂ, ವೇಗವುಳ್ಳವನೂ ಆಗಿರುವನೆಂದು ಸಾಯಣರು ವರ್ಣಿಸಿದ್ದಾರೆ.

**ಧಿತಾವಾನಂ—ವಾನಂ ವನನೀಯಂ ಧನಂ ಧಿತಂ ಯಸ್ಯ ತಂ ನಿಹಿತಧನಂ** | ವಾನ ಎಂಬ ಪದಕ್ಕೆ ಅಪೇಕ್ಷಿತವಾದುದು ಎಂಬ ಅರ್ಥವನ್ನು ವರ್ಣಿಸಿ, ಅಪೇಕ್ಷಿತವಾದ ಧನವು ಯಜಮಾನರಿಗಾಗಿ ಅಗ್ನಿಯಿಂದ ಇರಿಸಲ್ಪಟ್ಟಿರುವ ಕಾರಣ ಅಗ್ನಿಯು ಧಿತಾವಾನನಾಗಿರುವನು ಎಂದು ಅರ್ಥವನ್ನು ವಿವರಿಸಿದೆ.

ಮಂತ್ರದ್ರಷ್ಟೃವಾದ ವಿಶ್ವಾಮಿತ್ರ ಋಷಿಯು ಮೇಧಾವಿಯಾಗಿರುವ, ಯಜ್ಞವನ್ನು ನಿರ್ವಹಿಸಲು ಸಮರ್ಥನಾದ, ಸುಖವಂತನೂ, ಅಥವಾ ವೇಗವಂತನೂ ಆಗಿರುವ, ಯಜಮಾನರಿಗಾಗಿ ಧನವನ್ನು ಅವರವರ ಇಚ್ಛಾನುಸಾರವಾಗಿ ಅನುಗ್ರಹಿಸುವ, ಅಗ್ನಿಯನ್ನು ಸ್ತುತಿರೂಪವಾದ ವಾಕ್ಕುಗಳಿಂದ ಸ್ತುತಿಮಾಡುವನು ಎಂದು ಅರ್ಥವನ್ನು ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಈಳೇ**—ಈಡ ಸ್ತುತೌ ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅನುದಾತ್ತೇತ್ತಾದ ಧಾತುವಿನ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಿಪಶ್ಚಿತಂ**—ವಿಪಃ ಚಿನೋತೀತಿ ವಿಪಶ್ಚಿತ್ ತಂ | ಬಹುಲಗ್ರಹಣದಿಂದ ಪೂರ್ವಪದ ವಿಭಕ್ತಿಗೆ ಸಮಾಸದಲ್ಲಿ ಲುಕ್ ಬರುವುದಿಲ್ಲ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಗಿರಾ—ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ತೃತೀಯಾ ಏಕವಚನಕ್ಕೆ ಉದಾತ್ತಸ್ವರ ಬರುತ್ತದೆ.

**ಶ್ರುಷ್ಟೀವಾನಂ**—ವನ ಷಣ ಸಂಭಕ್ತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವಿಚ್ ಪ್ರತ್ಯಯ. ಇದರಲ್ಲಿ ಸರ್ವಲೋಪವಾಗುತ್ತದೆ. ಶ್ರುಷ್ಟೀ ವನತಿ ಇತಿ ಶ್ರುಷ್ಟೀವಾ. **ಗತಿಕಾರಕೋಪಪದಾತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಧಿತಾವಾನಂ**—ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ಕ್ತ ಪ್ರತ್ಯಯ ಬಂದಾಗ ಛಾಂದಸವಾಗಿ ಧಾತುವಿಗೆ ಧಿ ಭಾವ ಬರುತ್ತದೆ. ಧಿತ ಎಂದು ರೂಪವಾಗುತ್ತದೆ. ವನ ಸಂಭಕ್ತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ಘಞ್‌ಪ್ರತ್ಯಯ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ವಾನಂ ಧಿತಂ ಯಸ್ಯ ಸಃ ಧಿತಾವಾನಃ ಬಹುವ್ರೀಹಿಯಲ್ಲಿ **ನಿಷ್ಠಾ ಚ** (ಪಾ. ಸೂ. ೬-೧-೨೦೫) ಎಂಬುದರಿಂದ ಧಿತ ಶಬ್ದಕ್ಕೆ ಪೂರ್ವನಿಪಾತ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನೇ ಶಕೇಮ ತೇ ವಯಂ ಯಮಂ ದೇವಸ್ಯ ವಾಜಿನಃ ।
ಅತಿ ದ್ವೇಷಾಂಸಿ ತರೇಮ ॥ ೩ ॥

ಪದಪಾಠಃ

ಅಗ್ನೇ । ಶಕೇಮ । ತೇ । ವಯಂ । ಯಮಂ । ದೇವಸ್ಯ । ವಾಜಿನಃ ।
ಅತಿ । ದ್ವೇಷಾಂಸಿ । ತರೇಮ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ವಾಜಿನಃ ಸಂಭೃತಹವಿಷ್ಕಾ ವಯಂ ದೇವಸ್ಯ ದ್ಯೋತಮಾನಸ್ಯ ತೇ ತವ ಯಮಂ ಯಮನಮಾ ಯಜ್ಞಸಮಾಪ್ತೇರತ್ರಾವಸ್ಥಾನಂ ಕರ್ತುಂ ಶಕೇಮ । ಶಕ್ಯಾಸ್ಮ । ವಾಜಿನೋ ವೇಗವತೋ ದೇವಸ್ಯೇತಿ ವಾ ಯೋಜನೀಯಂ । ತತಃ ಕಾರಣಾತ್ ದ್ವೇಷಾಂಸ್ಯಸ್ಮದೀಯಾನಿ ಪಾಪಾನ್ಯತಿತರೇಮ । ಪಾಪೇಭ್ಯ ಉತ್ತೀರ್ಣಾ ಭವೇಮ ॥ ಶಕೇಮ । ಶಕ್ಲೃ ಶಕ್ತಾವಿತ್ಯಸ್ಯಾಶೀರ್ಲಿಙಿ ಲಿಙ್ಯಾಶಿಷ್ಯ ಙ್ಙಿತ್ಯಙ್ ಪ್ರತ್ಯಯಃ । ಕಿದಾಶಿಷೀತಿ ಯಾಸುಟ್ । ಸಲೋಪೇಯಾದೇಶಯಲೋಪಗುಣಸಲೋಪಾಃ । ಆಮಂತ್ರಿತಸ್ಯಾವಿದ್ಯಮಾನತ್ವೇನ ಪಾದಾದಿತ್ವಾದನಿಘಾತಃ । ಉದಾತ್ತನಿವೃತ್ತಿಸ್ವರಃ । ಯಮಂ । ಯಮ ಉಪರಮ ಇತ್ಯಸ್ಮಾದ್ಭಾವೇ ಘಞ್ । ಯಮ ಉಪರಮ ಇತಿ ನಿಪಾತನಾದ್ವೃದ್ಧ್ಯಭಾವಃ । ಞಿತ್ಸ್ವರಃ । ತರೇಮ । ತೄಪ್ಲವನತರಣಯೋಃ । ಪ್ರಾರ್ಥನೇ ಲಿಙಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ವಾಜಿನಃ**—ಹವಿಸ್ಸನ್ನು ಶೇಖರಿಸಿರುವ । **ವಯಂ**—ನಾವು । **ದೇವಸ್ಯ**—ಪ್ರಕಾಶಮಾನನಾದ । **ತೇ ಯಮಂ**-ನಿನ್ನನ್ನು (ಯಜ್ಞಸಮಾಪ್ತಿಯಾಗುವವರೆಗೆ) ಇರಿಸಿಕೊಳ್ಳುವುದಕ್ಕೆ । **ಶಕೇಮ**-ಶಕ್ತರಾಗುವಂತೆ ಅನುಗ್ರಹಿಸು । **ದ್ವೇಷಾಂಸಿ**—ನಮ್ಮ ಪಾಪಗಳನ್ನು । **ಅತಿ ತರೇಮ**—ದಾಟಿ ಅವುಗಳಿಂದ ಮುಕ್ತರಾಗುವಂತೆಯೂ ಅನುಗ್ರಹಿಸು.

ಭಾವಾರ್ಥ

ಎಲೈ ಅಗ್ನಿಯೇ, ಹವಿಸ್ಸನ್ನು ಹೊಂದಿ ಯಜ್ಞಕ್ಕೆ ಸಿದ್ಧರಾಗಿರುವ ನಾವು ನಮ್ಮ ಯಜ್ಞವು ಮುಗಿಯುವವರೆಗೂ ಸಹ ಪ್ರಕಾಶಮಾನನಾದ ನಿನ್ನನ್ನು ಇರಿಸಿಕೊಳ್ಳುವುದಕ್ಕೆ ಶಕ್ತರಾಗುವಂತೆ ಅನುಗ್ರಹಿಸು, ನಮ್ಮ ಪಾಪಗಳನ್ನು ದಾಟಿ ಅವುಗಳಿಂದ ಮುಕ್ತರಾಗುವಂತೆಯೂ ಅನುಗ್ರಹಿಸು.

English translation

May we offering oblations effect the detention of you who are divine (until the completion of the rite), and may we (thereby) overcome all animosities.

ವಿಶೇಷವಿಷಯಗಳು.

ಇಲ್ಲಿ ಸಾಯಣರು ವಾಜಿನಃ ಎಂಬ ಪದಕ್ಕೆ ಸಂಭೃತಹವಿಷ್ಕಾಃ-ಹವಿಸ್ಸನ್ನು ಅಗ್ನಿಯಲ್ಲಿ ಅರ್ಪಿಸುವುದಕ್ಕಾಗಿ ಸಿದ್ಧಪಡಿಸಿರುವ ಯಜಮಾನರು ಎಂದು ಒಂದು ವಿಧವಾಗಿಯೂ, **ವಾಜಿನಃ ವೇಗವತಃ ದೇವಸ್ಯ** ವೇಗವುಳ್ಳವನಾದ ಅಗ್ನಿಯು ಎಂದು ಇನ್ನೊಂದು ವಿಧವಾಗಿಯೂ ಅರ್ಥವನ್ನು ವರ್ಣಿಸಿದ್ದಾರೆ.

ಮೊದಲನೆಯ ಅರ್ಥದಲ್ಲಿ **ವಾಜಿನಃ** ಎಂಬ ಈ ಪದವು ಯಜಮಾನರಿಗೆ ವಿಶೇಷಣವಾಗಿರುವುದರಿಂದ ಯಾಗ ಮಾಡಲು ಹವಿಸ್ಸನ್ನು ಸಿದ್ಧಪಡಿಸಿರುವ ಯಜಮಾನರಾದ ನಾವು ಪ್ರಕಾಶಶೀಲನಾದ ಅಗ್ನಿಯು, **ಆಯಜ್ಞಸಮಾಪ್ತೇಃ ಅವಸ್ಥಾನಂ** ಯಜ್ಞವು ಪೂರ್ತಿಯಾಗುವವರಿಗೂ ಸನ್ನಿಹಿತವಾಗಿರುವ ಸ್ಥಿತಿಯರೂಪವಾದ ಯಮನವನ್ನು ಅಗ್ನಿಯಲ್ಲಿ ಉಂಟಾಗುವಹಾಗೆ ಮಾಡಲು ಶಕ್ತರಾಗೋಣವೆಂದು ಅರ್ಥವನ್ನು ವರ್ಣಿಸಿದೆ.

ಎರಡನೆಯ ಅರ್ಥದಲ್ಲಿ ಯಜಮಾನರಾದ ನಾವು ವೇಗವುಳ್ಳವನಾದ ಅಗ್ನಿಯು ಯಜ್ಞಸಮಾಪ್ತಿಯವರಿಗೂ ನಮ್ಮ ಯಜ್ಞದಲ್ಲಿ ಸನ್ನಿಹಿತವಾಗಿರಲೆಂದು ಆಶಂಸನೆಯು ವಿವೃತವಾಗಿದೆ.

**ದ್ವೇಷಾಂಸಿ ಅತಿತರೇಮ—ಅಸ್ಮದೀಯಾನಿ** (ನಮ್ಮ ಸಂಬಂಧವಾದ) ನಾವು ಆಚರಿಸಿರುವ ಪಾತಕಗಳು ಎಂದು ದ್ವೇಷಾಂಸಿ ಎಂಬ ಪದಕ್ಕೆ ಅರ್ಥವನ್ನು ವಿವರಿಸಿದೆ. ಆ ಪಾತಕಗಳೆಲ್ಲದರಿಂದಲೂ, ಅಗ್ನಿಯ ಸನ್ನಿಧಾನವು ನಮ್ಮ ಯಾಗದಲ್ಲಿರುವ ಕಾರಣ ಬಿಡುಗಡೆಯನ್ನು ಹೊಂದೋಣ ಎಂಬ ಯಜಮಾನರ ಆಶಂಸನೆಯು ವಿವರಿಸಲ್ಪಟ್ಟಿದೆ. ಪ್ರಕಾಶಶೀಲನಾಗಿಯೂ, ವೇಗವುಳ್ಳವನಾಗಿಯೂ ಇರುವ ಅಗ್ನಿಯನ್ನು ಯಜ್ಞಸಮಾಪ್ತಿಪರ್ಯಂತವೂ ಯಜ್ಞದಲ್ಲಿ ಸನ್ನಿಹಿತನಾಗಿ ಇರುವಂತೆ ಮಾಡಲು ಶಕ್ತರಾಗಿರುವ ಯಜಮಾನರ ಪ್ರಭೂತವಾದ ಪ್ರಭಾವವೂ ಸೂಚಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ಶಕೇಮ**— ಶಕ್ಲೃ ಶಕ್ತೌ ಧಾತು. ಆಶೀರರ್ಥದಲ್ಲಿ ಲಿಙ್. ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುದರಿಂದ ಅಙ್ ಪ್ರತ್ಯಯ. **ಕಿದಾಶಿಷಿ** (ಪಾ. ಸೂ. ೩-೪-೧೦೪) ಎಂಬುದರಿಂದ ಕಿತ್ತಾದ ಯಾಸುಟಾಗಮ ಛಂದಸ್ಸಿನಲ್ಲಿ ಸಾರ್ವಧಾತುಕಸಂಜ್ಞೆ ಇರುವುದರಿಂದ **ಲಿಙಃಸಲೋಪೋ**—(ಪಾ. ಸೂ. ೭-೨-೭೯) ಎಂಬುದರಿಂದ ಸಕಾರಲೋಪ. **ಅತೋಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಅದಂತ ಪರದಲ್ಲಿ ಯಾಸುಟಾಗಮ ಬಂದುದರಿಂದ ಅದಕ್ಕೆ ಇಯಾದೇಶ. ಯಲೋಪ. ಗುಣ. ಶಕೇಮ ಎಂದು ರೂಪವಾಗುತ್ತದೆ. ಪೂರ್ವದಲ್ಲಿ ಆಮಂತ್ರಿತವಿರುವುದರಿಂದ ಅದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಇದು ಪಾದಾದಿಯಲ್ಲಿ ಬಂದುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಉದಾತ್ತನಿವೃತ್ತಿಸ್ವರದಿಂದ ಏಕಾರ ಉದಾತ್ತವಾದುದರಿಂದ ಮಧ್ಯೋದಾತ್ತವಾಗುತ್ತದೆ.

**ಯಮಂ**—ಯಮ ಉಪರಮೇ. ಧಾತು. ಇದಕ್ಕೆ ಭಾವಾರ್ಥದಲ್ಲಿ ಘಞ್ ಪ್ರತ್ಯಯ. **ಯಮ ಉಪರಮೇ** ಎಂಬುದರಿಂದ ನಿಪಾತಮಾಡಿರುವುದರಿಂದ ಉಪಧಾವೃದ್ಧಿ ಬರುವುದಿಲ್ಲ. ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದ್ವೇಷಾಂಸಿ**—ದ್ವಿಷ, ಅಪ್ರೀತೌ, ಧಾತು. ಔಣಾದಿಕ ಅಸುನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತರೇಮ** — ತೄ ಪ್ಲವನತರಣಯೋಃ ಧಾತು. ಪ್ರಾರ್ಥನಾರ್ಥದಲ್ಲಿ ಲಿಙ್. ಉತ್ತಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಸಮಿಧ್ಯಮಾನೋ ಅಧ್ವರೇ೩ಗ್ನಿಃ ಪಾವಕ ಈಡ್ಯಃ ।
ಶೋಚಿಷ್ಕೇಶಸ್ತಮೀಮಹೇ ॥ ೪ ॥

ಪದಪಾಠಃ

ಸಂऽಇಧ್ಯಮಾನಃ । ಅಧ್ವರೇ । ಅಗ್ನಿಃ । ಪಾವಕಃ । ಈಡ್ಯಃ ।
ಶೋಚಿಃऽಕೇಶಃ । ತಂ । ಈಮಹೇ ॥೪॥

ಸಾಯಣಭಾಷ್ಯಂ

ಯೋಽಗ್ನಿರಧ್ವರೇ ಯಜ್ಞೇ ಸಮಿಧ್ಯಮಾನೋ ಘೃತಾಜ್ಯಾಹುತಿಭಿಃ ಸಮ್ಯಕ್ ಪ್ರಜ್ವಾಲ್ಯಮಾನೋಽತ ಏವ ಶೋಚಿಷ್ಕೇಶೋ ಜ್ವಾಲಾಕೇಶಃ ಪಾವಕಃ ಶೋಧಕ ಈಡ್ಯಃ ಸ್ತೋತೃಭಿಃ ಪ್ರಶಸ್ಯೋ ಭವತಿ ತಮಿಮಮಭಿಮತಫಲಾರ್ಥಮೀಮಹೇ । ವಯಂ ಯಾಚಾಮಹೇ ॥ ಈಡ್ಯಃ । ಈಡ ಸ್ತುತಾವಿತ್ಯಸ್ಮಾಣ್ಣ್ಯತ್ । ಅಸ್ಯ ತಿತ್ಸ್ವರಿತಮಿತಿ ಸ್ವರಿತತ್ವೇ ಪ್ರಾಪ್ತೆ ಈಡವಂದೇತ್ಯಾದಿನಾದ್ಯುದಾತ್ತತ್ವಂ। ಈಮಹೇ । ಈ ಕಾಂತ್ಯಾದಿಷು । ಅಯಂ ಧಾತುರತ್ರ ಯಾಚ್ಞಾರ್ಥಃ । ನಿಘಾತಃ ॥

ಪ್ರತಿಪದಾರ್ಥ

ಅಗ್ನಿಃ—ಅಗ್ನಿಯು । ಅಧ್ವರೇ—ಯಜ್ಞದಲ್ಲಿ । ಸಮಿಧ್ಯಮಾನಃ—ಪ್ರಜ್ವಲಿತನಾಗಿ । ಶೋಚಿಷ್ಕೇಶಃ-ಜ್ವಾಲಾರೂಪವಾದ ಕೇಶಗಳುಳ್ಳವನಾಗಿಯೂ । ಪಾವಕಃ—ಶುದ್ಧಿಕಾರಕನಾಗಿಯೂ । ಈಡ್ಯಃ—ಸ್ತುತ್ಯರ್ಹನಾಗಿಯೂ ಇದ್ದಾನೆ । ತಂ—ಅಂತಹ ಪೂಜ್ಯನಾದ ಅಗ್ನಿಯನ್ನು । ಈಮಹೇ—ಫಲಾರ್ಥವಾಗಿ ಯಾಚಿಸುತ್ತೇವೆ ॥

ಭಾವಾರ್ಥ

ಅಗ್ನಿಯು ಯಜ್ಞದಲ್ಲಿ ಪ್ರಜ್ವಲಿತನಾಗಿ ಜ್ವಾಲಾರೂಪವಾದ ಕೇಶಗಳುಳ್ಳವನಾಗಿಯೂ, ಶುದ್ಧಿಕಾರಕನಾಗಿಯೂ, ಸ್ತುತ್ಯರ್ಹನಾಗಿಯೂ ಇದ್ದಾನೆ. ಅಂತಹ ಪೂಜ್ಯನಾದ ಅಗ್ನಿಯನ್ನು ಫಲಾರ್ಥವಾಗಿ ಯಾಚಿಸುತ್ತೇವೆ.

## English translation

We solicit that Agni, who is being kindled at the sacrifice, the purifier, the adorable, whose hair is flame.

ವಿಶೇಷವಿಷಯಗಳು

ಅಗ್ನಿಃ—ಅಗ್ನಿಶಬ್ದಾರ್ಥವು ಹಿಂದೆ ವಿವೃತವಾಗಿದೆ. ಈ ಅಗ್ನಿಯು ಯಜ್ಞದಲ್ಲಿ ಘೃತಾಜ್ಯಾಹುತಿಭಿಃ ಸಮ್ಯಕ್ ಪ್ರಜ್ವಾಲ್ಯಮಾನಃ ಆಜ್ಯರೂಪವಾದ ಹವಿಸ್ಸುಗಳಿಂದ ಅತಿಶಯವಾಗಿರುವ ಜ್ವಾಲೆಗಳನ್ನು ಹೊಂದಿರುವವನಂತೆ ಭಾವಿಸಲ್ಪಟ್ಟು ಯಜಮಾನರಿಂದ ಆಹೂತನಾಗಿರುವನು ಎಂದೂ, ಶೋಚಿಷ್ಕೇಶಃ—ಜ್ವಾಲಾರೂಪವಾದ

ಕೇಶಗಳುಳ್ಳವನೆಂದೂ, **ಪಾವಕಃ** — ಪರಿಶುದ್ಧಿಯನ್ನು ಉಂಟುಮಾಡುವವನೆಂದೂ ವರ್ಣಿತನಾಗಿ ಈ ಅಗ್ನಿಯು **ಸ್ತೋತೃಭಿಃ ಪ್ರಶಸ್ತ್ಯೋ ಭವತಿ** ಸ್ತುತಿಮಾಡುವವರಿಂದ ಸ್ತುತ್ಯರ್ಹನಾಗಿರುವನೆಂದೂ ವರ್ಣಿಸಿದೆ.

ಈಮಹೇ ಎಂಬಲ್ಲಿ ಕಾಂತಿಯೇ ಮೊದಲಾದ ಅರ್ಥದಲ್ಲಿ ಶಕ್ತವಾದ ಈ ಧಾತುವು ಇಲ್ಲಿ ಯಾಚ್ಞಾ(ಪ್ರಾರ್ಥನಾ) ರೂಪವಾದ ಅರ್ಥಬೋಧಕವಾಗಿರುವುದೆಂದು ಹೇಳಿ, ಶೋಚಿಷ್ಕೇಶನಾಗಿಯೂ, ಪಾವಕನಾಗಿಯೂ, ಈಡ್ಯನಾಗಿಯೂ ಇರುವ ಅಗ್ನಿಯನ್ನು ಯಜಮಾನರಾದ ನಾವು, ನಮ್ಮ ಇಷ್ಟವು ನೆರವೇರುವುದಕ್ಕಾಗಿ ಪ್ರಾರ್ಥಿಸುತ್ತೇವೆ ಎಂಬ ಅರ್ಥವು ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಸಮಿಧ್ಯಮಾನಃ**— ಞಿಇಂಧೀ ದೀಪ್ತೌ. ಧಾತು. ಕರ್ಮಣಿಯಲ್ಲಿ ಲಟಿಗೆ ಶಾನಚಾದೇಶ. ಯಕ್ ನಿಮಿತ್ತವಾಗಿ ಧಾತುವಿನ ನಕಾರಕ್ಕೆ ಲೋಪ. ಕೃದುತ್ತರಪದ ಪ್ರಕೃತಿಸ್ವರದಿಂದ ಯಕ್ ಸ್ವರ ಉಳಿಯುತ್ತದೆ.

**ಈಡ್ಯಃ**— ಈಡ ಸ್ತುತೌ. ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಇದು ತಿತ್ತಾದ್ದುದರಿಂದ **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರವು ಪ್ರಾಪ್ತವಾದರೆ **ಈಡವಂದವೃ**—(ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶೋಚಿಷ್ಕೇಶಃ**— ಶೋಚೀಂಷಿ ಕೇಶಾಃ ಯಸ್ಯ ಸಃ ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಈಮಹೇ**— ಈ ಕಾಂತಾದಿಷು. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಯಾಚನಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಉತ್ತಮಪುರುಷ, ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಪೃಥುಪಾಜಾ ಅಮರ್ತ್ಯೋ ಘೃತನಿರ್ಣಿಕ್ಸ್ವಾಹುತಃ ।
ಅಗ್ನಿರ್ಯಜ್ಞಸ್ಯ ಹವ್ಯವಾಟ್ ॥ ೫ ॥

ಪದಪಾಠಃ

ಪೃಥುಽಪಾಜಾಃ । ಅಮರ್ತ್ಯಃ । ಘೃತಽನಿರ್ನಿಕ್ । ಸುಽಆಹುತಃ ।
ಅಗ್ನಿಃ । ಯಜ್ಞಸ್ಯ । ಹವ್ಯಽವಾಟ್ ॥೫॥

ಸಾಯಣಭಾಷ್ಯಂ

ಪೃಥುಪಾಜಾಃ ಪ್ರಭೂತತೇಜೋರೂಪೋಽಮರ್ತ್ಯೋ ಮರಣಧರ್ಮರಹಿತೋ ಘೃತನಿರ್ಣಿಕ್ । ಘೃತಸ್ಯ ವಿಲಯನದ್ವಾರಾ ಶೋಧನಂ ಯೇನೇತಿ ಘೃತನಿರ್ಣಿಕ್ । ಸ್ವಾಹುತಃ ಸುಷ್ಠು ಹೋತ್ರಾದಿಭಿಃ ಸಮ್ಯಗಿಷ್ಟಃ । ಏವಂಭೂತೋಗ್ನಿರ್ಯಜ್ಞಸ್ಯ ಜ್ಯೋತಿಷ್ಟೋಮಾದೇರ್ಹವ್ಯವಾಟ್ ಹವ್ಯಾನಾಂ ವೋಢಾ ಭವತಿ॥ ಪೃಥುಪಾಜಾಃ । ಕೃದುತ್ತರಪದಸ್ವರಃ । ಸ್ವಾಹುತಃ । ಜುಹೋತೇಃ ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಹವ್ಯವಾಟ್ । ವಹಶ್ಚೇತಿ ಣ್ವಿಃ ॥

ಪ್ರತಿಪದಾರ್ಥ

**ಪೃಥುಪಾಜಾಃ**— ಪ್ರಭೂತವಾದ ತೇಜೋರೂಪವುಳ್ಳವನೂ | **ಅಮರ್ತ್ಯಃ** — ಮರಣಧರ್ಮರಹಿತನೂ | **ಘೃತನಿರ್ಣಿಕ್**-ಘೃತದ ವಿಲಯನದಿಂದ ಪವಿತ್ರವಾದ ಸ್ವರೂಪವನ್ನು ಹೊಂದಿರುವವನೂ | **ಸ್ವಾಹುತಃ**—ಹೋತ್ರಾದಿಗಳಿಂದ ವಿಶೇಷರೀತಿಯಲ್ಲಿ ಆದರಿಸಲ್ಪಡುವವನೂ ಆದ | **ಅಗ್ನಿಃ**—ಅಗ್ನಿಯು | **ಯಜ್ಞಸ್ಯ**—ಯಜ್ಞದ | **ಹವ್ಯವಾಟ್**—ಹವಿಸ್ಸನ್ನು ವಹಿಸತಕ್ಕ ಸಾಧನವಾಗಿದ್ದಾನೆ.

ಭಾವಾರ್ಥ

ಪ್ರಭೂತವಾದ ತೇಜೋರೂಪವುಳ್ಳವನೂ, ಮರಣಧರ್ಮರಹಿತನೂ, ಘೃತದ ವಿಲಯನದಿಂದ ಪವಿತ್ರವಾದ ಸ್ವರೂಪವನ್ನು ಹೊಂದಿರುವವನೂ ಆದ ಅಗ್ನಿಯು ಯಜ್ಞದ ಹವಿಸ್ಸನ್ನು ವಹಿಸತಕ್ಕ ಸಾಧನವಾಗಿದ್ದಾನೆ.

English translation

Agni, the bright-shining, the immortal, the cleanser with clarified butter, the fitly-invoked, the bearer of the oblation in the sacrifice.

ವಿಶೇಷವಿಷಯಗಳು

**ಪೃಥುಪಾಜಾಃ—ಪ್ರಭೂತತೇಜೋರೂಪಃ** ಪಾಜಶ್ಶಬ್ದವು ಬಲನಾಮುಗಳಲ್ಲಿ (ನಿ. ೩-೯) ಉಕ್ತವಾಗಿದೆ. ಅಗ್ನಿಯು ತನ್ನ ಪ್ರಭೂತವಾದ (ಮಿಗಿಲಾದ) ತೇಜಸ್ಸಿನ ರೂಪದಿಂದ ಇರುವ ಬಲವನ್ನು ಹೊಂದಿರುವನೆಂದು ಅರ್ಥವನ್ನು ವಿವರಿಸಿದೆ.

**ಘೃತನಿರ್ಣಿಕ್—ಘೃತಸ್ಯ ವಿಲಯನದ್ವಾರಾ ಶೋಧನಂ ಯೇನೇತಿ** | ನಿರ್ಣಿಕ್ ಎಂಬ ಪದವು ರೂಪನಾಮಗಳಲ್ಲಿ (ನಿ, ೩-೧೩) ಉಕ್ತವಾಗಿದೆ. ಅಗ್ನಿಯು ತನ್ನಲ್ಲಿ ಅರ್ಪಿತವಾದ ವಸ್ತುಗಳನ್ನು ಶೋಧಿಸುವ ರೂಪವುಳ್ಳವನು ಎಂದು ಅರ್ಥ.

**ಸ್ವಾಹುತಃ—ಸುಷ್ಠು ಹೋತ್ರಾದಿಭಿಃ ಸಮ್ಯಗಿಷ್ಟಃ** ಹೋತೃವೇ ಮೊದಲಾದ ಋತ್ವಿಗ್ಜನರಿಂದ ಶಾಸ್ತ್ರವಿಧಿಗನುಸಾರವಾಗಿ ಅರ್ಚಿತನಾದವನು ಎಂದು ಅರ್ಥಮಾಡಿದೆ.

ಅತಿಶಯವಾದ ತೇಜೋರೂಪವಾದ ಶಕ್ತಿಯುಳ್ಳ ತನ್ನಲ್ಲಿ ಅರ್ಪಿತವಾದ (ದ್ರವ್ಯವನ್ನು) ವಸ್ತುವನ್ನು ಶೋಧಿಸುವವನೂ, ಹೋತೃಗಳಿಂದ ಶಾಸ್ತ್ರಕ್ರಮವಾಗಿ ಅರ್ಚಿತನಾಗಿರುವವನೂ ಆದ ಅಗ್ನಿಯು ಜ್ಯೋತಿಷ್ಟೋಮವೇ ಮೊದಲಾದ ಯಜ್ಞದಲ್ಲಿ ದೇವತೆಗಳನ್ನುದ್ದೇಶಿಸಿ ಅರ್ಪಿತವಾದ ಹವಿಸ್ಸುಗಳನ್ನು ವಹಿಸುವವನಾಗಿರುವನು ಎಂದು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಪೃಥುಪಾಜಾಃ—ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪಾಜವೆಂಬುದು ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಘೃತನಿರ್ಣಿಕ್—ಘೃತಸ್ಯ ನಿರ್ಣಿಕ್** (ನಿರ್ಣೇಜನಂ) ಯೇನ ಸಃ ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸ್ವಾಹುತಃ**—ಸು ಆಙ್ ಉಪಸರ್ಗ. **ಹು ದಾನಾದನಯೋಃ** ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕಿತ್ತ್ವಾದುದರಿಂದ ಗುಣ ಬರುವುದಿಲ್ಲ. ಕರ್ಮಣಿಕ್ತಾಂತ ಪರದಲ್ಲಿರುವುದರಿಂದ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸ್ವಾ) ಉದಾತ್ತಸ್ವರ ಬರುತ್ತದೆ.

**ಹವ್ಯವಾಟ್**—ಹವ್ಯಂ ವಹತೀತಿ ಹವ್ಯವಾಟ್. ವಹ ಪ್ರಾಪಣೇ ಧಾತು. **ವಹಶ್ಚ** (ಪಾ.ಸೂ. ೩-೨-೬೪) ಎಂಬುದರಿಂದ ಛಂದಸ್ಸಿನಲ್ಲಿ ಣ್ವಿ ಪ್ರತ್ಯಯ. ಣಿತ್ತ್ವಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಪ್ರತ್ಯಯದಲ್ಲಿ ಸರ್ವವೂ ಲೋಪವಾಗುತ್ತದೆ. ಪದಾಂತದಲ್ಲಿ ಹಕಾರಕ್ಕೆ ಢತ್ವ, ಜಸ್ತ್ವ, ಚರ್ತ್ವ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ತಂ ಸಬಾಧೋ ಯತಸ್ರುಚ ಇತ್ಥಾ ಧಿಯಾ ಯಜ್ಞವಂತಃ ।
ಆ ಚಕ್ರುರಗ್ನಿಮೂತಯೇ ॥ ೬ ॥

ಪದಪಾಠಃ

ತಂ । ಸಽಬಾಧಃ । ಯತಽಸ್ರುಚಃ । ಇತ್ಥಾ । ಧಿಯಾ । ಯಜ್ಞಽವಂತಃ ।
ಆ । ಚಕ್ರುಃ । ಅಗ್ನಿಂ । ಊತಯೇ ॥೬॥

ಸಾಯಣಭಾಷ್ಯಂ

ಸಬಾಧಃ । ರಕ್ಷೋಘ್ನಮಂತ್ರೋಚ್ಚಾರಣೇನ ತದ್ವಿಷಯಬಾಧಾ ಸಹ ವರ್ತಂತ ಇತಿ ಸಬಾಧಃ । ಯಜ್ಞವಂತೋ ಯಜನೀಯಹವಿರ್ಯುಕ್ತಾ ಯತಸ್ರುಚಃ । ಯತಾಃ ಸಂಯತಾಃ ಸ್ರುಚೋ ಜುಹ್ವಾದ್ಯಾ ಯೈಸ್ತೇ ಯತಸ್ರುಚಃ । ಋತ್ವಿಜಃ । ಇತ್ಥೇತ್ಥಮನೇನ ಪ್ರಕಾರೇಣ ಕ್ರಿಯಮಾಣಯಾ ಧಿಯಾ ಸ್ತುತ್ಯಾ ತಮೇವಂಭೂತಮಗ್ನಿಮೂತಯೇ ರಾಕ್ಷಸಬಾಧಾಪ್ರಕ್ಷಣಾಯ ಆ ಅಭಿಮುಖಂ ಚಕ್ರುಃ । ಕುರ್ವಂತಿ ॥ ಸಬಾಧಃ । ಬಾಧೃ ವಿಲೋಡನ ಇತ್ಯಸ್ಮಾತ್ ಕ್ವಿಪ್ । ಕೃದುತ್ತರಪದಸ್ವರಃ । ಇತ್ಥಾ । ಇದಂಶಬ್ದಾತ್ಪ್ರಕಾರಾರ್ಥ ಇದಮುಸ್ಥಮುಃ । ತಸ್ಯ ಸುಪಾಂ ಸುಲುಗಿತಿ ಡಾದೇಶಃ । ಉದಾತ್ತನಿವೃತ್ತಿಸ್ವರೇಣಾಂತೋದಾತ್ತಃ । ಚಕ್ರುಃ । ಡುಕೃಞ್ ಕರಣ ಇತ್ಯಸ್ಯ ಲಿಟ್ಯುಸಿ ಯಣಾದೇಶೇ ಕೃತೇ ತಸ್ಯ ದ್ವಿರ್ವಚನೇಽಚೀತಿ ಸ್ಥಾನಿವದ್ಭಾವಾದ್ದ್ವಿರ್ವಚನಂ । ನಿಘಾತಃ ॥

ಪ್ರತಿಪದಾರ್ಥ

**ಸಬಾಧಃ**—ರಾಕ್ಷಸಾದಿಗಳ ತೊಂದರೆಗೆ ಸಿಕ್ಕಿದವರೂ । **ಯಜ್ಞವಂತಃ**—ಪೂಜ್ಯವಾದ ಹವಿಸ್ಸನ್ನು ಹೊಂದಿರುವವರೂ । **ಯತಸ್ರುಚಃ**—ಸ್ರುಕ್ಪಾತ್ರೆಯನ್ನು ಹಿಡಿದಿರುವವರೂ ಆದ ಋತ್ವಿಕ್ಕುಗಳು । **ಇತ್ಥಾ**—ಈ ರೀತಿಯಾದ ।

**ಧಿಯಾ**—ಸ್ತುತಿಯಿಂದ | **ತಂ ಅಗ್ನಿಂ**—ಮೇಲೆ ವರ್ಣಿತವಾದ ಗುಣಗಳುಳ್ಳ ಅಗ್ನಿಯನ್ನು | **ಊತಯೇ**—ರಕ್ಷಣೆಗಾಗಿ | **ಆ ಚಕ್ರುಃ**—ತಮ್ಮ ಅಭಿಮುಖವಾಗುವಂತೆ ಮಾಡಿಕೊಳ್ಳುತ್ತಾರೆ ||

ಭಾವಾರ್ಥ

ರಾಕ್ಷಸಾದಿಗಳ ತೊಂದರೆಗೆ ಸಿಕ್ಕಿದವರೂ, ಪೂಜ್ಯವಾದ ಹವಿಸ್ಸನ್ನು ಹೊಂದಿರುವವರೂ ಆದ ಋತ್ವಿಕ್ಕುಗಳು ಈ ರೀತಿಯಾದ ಸ್ತುತಿಯಿಂದ ಮೇಲೆ ವರ್ಣಿತವಾದ ಗುಣಗಳುಳ್ಳ ಅಗ್ನಿಯನ್ನು ರಕ್ಷಣೆಗಾಗಿ ತಮ್ಮ ಅಭಿಮುಖವಾಗುವಂತೆ ಮಾಡಿಕೊಳ್ಳುತ್ತಾರೆ.

English translation

The exorcisers (of the demons), lifting up their ladles, and offering sacrifice, have called upon Agni by this ceremony for their protection,

ವಿಶೇಷವಿಷಯಗಳು

**ಸಬಾಧಃ—ರಕ್ಷೋಘ್ನಮಂತ್ರೋಚ್ಚಾರಣೇನ ತದ್ವಿಷಯಬಾಧಾಸಹವರ್ತಮಾನಾಃ** | ಋತ್ವಿಜರು ಯಾಗಗಳಲ್ಲಿ ರಾಕ್ಷಸರು ಉಂಟುಮಾಡುವ ವಿಘ್ನಪರಿಹಾರಕ್ಕಾಗಿ ಮಂತ್ರಗಳನ್ನು ಪಠಿಸುವಾಗ ಆ ಕಾಲದಲ್ಲಿ ಸಂಭಾವಿತವಾದ ಬಾಧೆಗಳಿಂದ ಕೂಡಿರುವವರು ಎಂದೂ, **ಯಜ್ಞವಂತಃ**—ಯಜ್ಞಶಬ್ದಕ್ಕೆ ಯಾಗದಲ್ಲಿ ಅರ್ಪಿಸಲು ಅರ್ಹವಾದ ಹವಿಸ್ಸುಗಳೆಂದು ಅರ್ಥಮಾಡಿ, ಆ ಪ್ರಕಾರದಿಂದ ಇರುವ ಹವಿಸ್ಸುಗಳನ್ನು ಸಿದ್ಧಮಾಡಿರುವವರು ಎಂದೂ, **ಯತಸ್ರುಚಃ**—ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಹವಿಸ್ಸುಗಳನ್ನು ಅರ್ಪಿಸಲು ಸಿದ್ಧವಾಗಿರುವ ಹೋಮ ಪಾತ್ರೆಗಳನ್ನು ಹಿಡಿದಿರುವವರು ಎಂದೂ ಋತ್ವಿಜರನ್ನು ವರ್ಣಿಸಿ, ಈ ಋತ್ವಿಜರು **ಇತ್ಥಾ ಧಿಯಾ ತಂ ಅಗ್ನಿಂ ಊತಯೇ ಆ ಚಕ್ರುಃ—ಅನೇನ ಪ್ರಕಾರೇಣ ಕ್ರಿಯಮಾಣಯಾ ಸ್ತುತ್ಯಾ ಏವಂಭೂತಮಗ್ನಿಂ ರಾಕ್ಷಸಬಾಧಾತ್ ರಕ್ಷಣಾಯ ಅಭಿಮುಖಂ ಕುರ್ವಂತಿ** | ಆಯಾಯ ರೀತಿಯಿಂದ ಪಠಿಸುವ ಸ್ತುತಿಗಳಿಂದ, ಅಗ್ನಿಯಿಂದ ರಾಕ್ಷಸಬಾಧೆಯ ಪರಿಹಾರರೂಪವಾದ ರಕ್ಷಣೆಯನ್ನು ಹೊಂದುವುದಕ್ಕಾಗಿ ಅಗ್ನಿಯನ್ನು ಅಭಿಮುಖನನ್ನಾಗಿ ಮಾಡಿಕೊಂಡು ಸೇವಿಸುವರು ಎಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಸಬಾಧಃ**—ಬಾಧೃ ವಿಲೋಡನೇ ಧಾತು. **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಯತಸ್ರುಚಃ**—ಯತಾಃ ಸ್ರುಚಃ ಯೈಸ್ತೇ. **ಬಹುವ್ರೀಹೌ**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಇತ್ಥಾ**—ಇದಂಶಬ್ದ. ಪ್ರಕಾರಾರ್ಥ ತೋರುವಾಗ **ಇದಮಸ್ಥಮುಃ** (ಪಾ. ಸೂ. ೫-೩-೨೪) ಎಂಬುದರಿಂದ ಥಮು ಪ್ರತ್ಯಯ. **ಸುಪಾಂಸುಲುಕ್**—ಎಂಬುದರಿಂದ ಪದಕ್ಕೆ ಡಾ ದೇಶ. ಟಿಲೋಪ. **ಅನುದಾತ್ತಸ್ಯಚಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಆಕಾರ ಉದಾತ್ತವಾಗುತ್ತದೆ.

**ಧಿಯಾ—ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಚಕ್ರುಃ**—ಡುಕೃಞ್ ಕರಣೇ. ಧಾತು. ಲಿಟ್ ಪ್ರಥಮಪುರುಷಬಹುವಚನಕ್ಕೆ ಉಸಾದೇಶ. ಅದನ್ನು ನಿಮಿತ್ತೀಕರಿಸಿ ಯಣಾದೇಶ. **ದ್ವಿರ್ವಚನೇಽಚಿ** (ಪಾ. ಸೂ. ೧-೧-೫೯) ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಲಿಣ್ನಿಮಿತ್ತವಾಗಿ ಧಾತುವಿನ ಏಕಾಚಿಗೆ ದ್ವಿತ್ವ. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಚುತ್ವ. ತಿಙಂತಸ್ವರ ಬರುತ್ತದೆ.

ಸಂಹಿತಾಪಾಠಃ

ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ ।
ವಿದಥಾನಿ ಪ್ರಚೋದಯನ್ ॥ ೭ ॥

ಪದಪಾಠಃ

ಹೋತಾ । ದೇವಃ । ಅಮರ್ತ್ಯಃ । ಪುರಸ್ತಾತ್ । ಏತಿ । ಮಾಯಯಾ ।
ವಿದಥಾನಿ । ಪ್ರಽಚೋದಯನ್ ॥ ೭ ॥

ಸಾಯಣಭಾಷ್ಯಂ

ಹೋತಾ ಹೋಮನಿಷ್ಪಾದಕೋಽಮರ್ತ್ಯೋ ಮರಣಧರ್ಮರಹಿತೋ ದೇವೋ ದ್ಯೋತಮಾನೋ ವಿದಥಾನಿ ವೇದಿತವ್ಯಾನಿ ಕರ್ಮಾಣಿ ಪ್ರಚೋದಯನ್ ಪ್ರಕರ್ಷೇಣ ಪ್ರೇರಯನ್ ಸೋಽಗ್ನಿರ್ಮಾಯಯಾ ಕರ್ಮವಿಷಯಾಭಿಜ್ಞಾನೇನ ಯುಕ್ತಃ ಸನ್ ಪುರಸ್ತಾತ್ಕರ್ಮಪ್ರಾರಂಭಕಾಲ ಏವೈತಿ । ಅಸ್ಮಾನಾಗಚ್ಛತಿ ॥ ಮಾಯಯಾ । ಮಾಙ್ ಮಾನೇ ಶಬ್ದೇ ಚೇತ್ಯಸ್ಮಾಚ್ಛಾಸಸಿಸೂಭ್ಯೋ ಯ ಇತಿ ಕರ್ತರಿ ಕರ್ಮಣಿ ವಾ ಯಪ್ರತ್ಯಯಃ । ಮಿಮೀತೇ ಜಾನೀತೇ ಕರ್ಮ ಮೀಯತೇಽನಯೇತಿ ವಾ ಮಾಯಾ ಕರ್ಮವಿಷಯ-ಜ್ಞಾನಂ । ಪ್ರತ್ಯಯಸ್ವರಃ । ವಿದಥಾನಿ । ವಿದ ಜ್ಞಾನ ಇತ್ಯಸ್ಮಾದ್ರುದಿವಿದಿಭ್ಯಾಂ ಕಿದಿತಿ ಕರ್ಮಣ್ಯಥಪ್ರತ್ಯ-ಯಃ । ಕಿತ್ತ್ವಾದಗುಣಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಹೋತಾ**—ಹೋಮಸಂಪಾದಕನೂ । **ಅಮರ್ತ್ಯಃ** — ಮರಣಧರ್ಮರಹಿತನೂ । **ದೇವಃ**—ಪ್ರಕಾಶ ಮಾನನೂ ಆದ ಅಗ್ನಿಯು । **ವಿದಥಾನಿ**—ಯಜ್ಞಾರ್ಹವಾದ ಕರ್ಮಗಳನ್ನು । **ಪ್ರಚೋದಯನ್**—ಪ್ರೇರಿಸುತ್ತಾ । **ಮಾಯಯಾ**—ಕರ್ಮವಿಷಯಕವಾದ ಜ್ಞಾನದಿಂದ ಕೂಡಿಕೊಂಡು। **ಪುರಸ್ತಾತ್**—ಕರ್ಮದ ಪ್ರಾರಂಭಕಾಲದಲ್ಲೇ। **ಏತಿ**—ನಮ್ಮ ಅಭಿಮುಖವಾಗಿ ಬರುತ್ತಾನೆ.

ಭಾವಾರ್ಥ

ಹೋಮಸಂಪಾದಕನೂ, ಮರಣಧರ್ಮರಹಿತನೂ, ಪ್ರಕಾಶಮಾನನೂ ಆದ ಅಗ್ನಿಯು ಯಜ್ಞಾರ್ಹವಾದ ಕರ್ಮವನ್ನು ಪ್ರೇರಿಸುತ್ತಾ ಕರ್ಮವಿಷಯಕವಾದ ಜ್ಞಾನದಿಂದ ಕೂಡಿಕೊಂಡು ಕರ್ಮದ ಪ್ರಾರಂಭದ ಕಾಲದಲ್ಲೇ ನಮ್ಮ ಅಭಿಮುಖವಾಗಿ ಬರುತ್ತಾನೆ.

## English translation

The offerer of the oblation, the divine, immortal Agni, comes first ( at the ceremony ) directing solemnities by his experience.

ವಿಶೇಷವಿಷಯಗಳು

**ಮಾಯಯಾ**—ಮಿಮೀತೇ ಜಾನೀತೇ ಕರ್ಮ, ಮೀಯತೇ ಅನಯೇತಿ ವಾ ಮಾಯಾ ಕರ್ಮ-ವಿಷಯಜ್ಞಾನಂ | ಪರಿಚ್ಛಿನ್ನಭಾವದಿಂದ ತಿಳಿಯಲ್ಪಡುವುದು, ಅಥವಾ ಪರಿಚ್ಛಿನ್ನಭಾವವನ್ನು ಅರಿಯಲು ಸಾಧನವಾದುದು ಮಾಯೆಯು ಎಂದು ಮಾಯಾ ಶಬ್ದಾರ್ಥವು ವಿವೃತವಾಗಿ, **ಕರ್ಮವಿಷಯಾಭಿಜ್ಞಾನೇನ ಯುಕ್ತಃ** ಅಗ್ನಿಯು (ಕರ್ಮವಿಷಯಕವಾದ) ಕರ್ಮಗಳ ಸ್ವರೂಪವನ್ನು ಅರಿಯಲು ಅರ್ಹವಾದ ಪಾಂಡಿತ್ಯರೂಪದಿಂದ ಇರುವ ಮಾಯೆಯಿಂದ ಕೂಡಿರುವವನು ಎಂದು ವಿವರಿಸಿದೆ.

ಅಗ್ನಿಯು, ಹೋಮವನ್ನು ನೆರವೇರಿಸುವ ಹೋತೃವೂ, ಮರಣಧರ್ಮವಿಲ್ಲದವನೂ ಪ್ರಕಾಶದಿಂದ ಬೆಳಗುತ್ತಿರುವ ದೇವನಾಗಿಯೂ ಯಜಮಾನರು ಯಜ್ಞಕರ್ಮಗಳನ್ನು ಆಚರಿಸುವಂತೆ ಅವರನ್ನು ಪ್ರೇರಿಸುವನಾಗಿಯೂ, ಆಯಾಯ ಯಜ್ಞಕರ್ಮಗಳನ್ನು ಆಚರಿಸುವ ವಿಷಯದಲ್ಲಿ ಪೂರ್ಣವಾದ ಪಾಂಡಿತ್ಯವುಳ್ಳವನಾಗಿಯೂ ಇರುತ್ತಾ, ಆಯಾಯ ಯಜ್ಞಕರ್ಮಗಳನ್ನು ಆಚರಿಸುವ ಪ್ರಾರಂಭಕಾಲದಲ್ಲಿ ಯಜಮಾನರ ಮುಂಭಾಗದಲ್ಲಿ ಪ್ರತ್ಯಕ್ಷರೂಪದಿಂದ ಆಗಮಿಸುವನೆಂಬ ಅರ್ಥವು ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಪುರಸ್ತಾತ್**—ಪೂರ್ವಶಬ್ದಕ್ಕೆ ಅಸ್ತಾತಿಪ್ರತ್ಯಯ ಬಂದಾಗ **ಪೂರ್ವಾವರಾಧರಾಣಾ** — (ಪಾ. ಸೂ. ೫-೩-೩೯) ಎಂಬುದರಿಂದ ಪರಾದೇಶಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಏತಿ**—ಇಣ್ ಗತೌ ಧಾತು, ಅದಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮಾಯಯಾ**—ಮಾಙ್ ಮಾನೇ ಶಬ್ದೇ ಚ. ಧಾತು. **ಮಾಚ್ಛಾಸಸಿ ಸೂಭ್ಯೋಯಃ** (ಉ.ಸೂ. ೪-೧೪೯) ಎಂಬುದರಿಂದ ಕರ್ತರಿಯಲ್ಲಾಗಲೀ ಕರ್ಮಣಿಯಲ್ಲಾಗಲೀ ಯಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. ಮಿಮೀತೇ ಜಾನೀತೇ-ಕರ್ಮ ಮೀಯತೇ ಅನಯಾ ಇತಿ ವಾ ಮಾಯಾ ಕರ್ಮವಿಷಯಜ್ಞಾನಂ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ.

**ವಿದಥಾನಿ**—ವಿದ ಜ್ಞಾನೇ. ಧಾತು. **ರುದಿವಿದಿಭ್ಯಾಂಕಿತ್** (ಉ. ಸೂ. ೩-೧೧೫) ಎಂಬುದರಿಂದ ಕರ್ಮಣಿಯಲ್ಲಿ ಅಥ ಪ್ರತ್ಯಯ. ಕಿತ್ವ ಅತಿದೇಶಮಾಡಿರುವುದರಿಂದ ಗುಣ ಬರುವದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಚೋದಯನ್**—ಚುದ ಪ್ರೇರಣೇ. ಧಾತು. ಣಿಜಂತದಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಶಪ್‌ನಿಮಿತ್ತವಾಗಿ ಣಿಚಿಗೆ ಗುಣ, ಅಯಾದೇಶ. ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ.

ಸಂಹಿತಾಪಾಠಃ

ವಾಜೀ ವಾಜೇಷು ಧೀಯತೇಽಧ್ವರೇಷು ಪ್ರ ಣೀಯತೇ ।
ವಿಪ್ರೋ ಯಜ್ಞಸ್ಯ ಸಾಧನಃ ॥ ೮ ॥

ಪದಪಾಠಃ

ವಾಜೀ । ವಾಜೇಷು । ಧೀಯತೇ । ಅಧ್ವರೇಷು । ಪ್ರ । ನೀಯತೇ ।
ವಿಪ್ರಃ । ಯಜ್ಞಸ್ಯ । ಸಾಧನಃ ॥ ೮ ॥

ಸಾಯಣಭಾಷ್ಯಂ

ವಾಜೀ ಬಲವಾನಗ್ನಿರ್ವಾಜೇಷು ಯುದ್ಧೇಷು ಧೀಯತೇ । ದೇವೈಃ ಶತ್ರುಹನನಾರ್ಥಂ ನಿಧೀಯತೇ । ಕಿಂಚ । ಅಧ್ವರೇಷ್ವಗ್ನಿಹೋತ್ರಾದಿಷು ಪ್ರಣೀಯತೇ । ಅಧ್ವರ್ಯ್ವಾದಿಭಿಃ ಪ್ರಕರ್ಷೇಣಾಹವನೀಯಾದಿಸ್ಥಾನೇಷು ಪ್ರಕ್ಷಿಪ್ಯತೇ । ಅತ ಏವ ವಿಪ್ರೋ ಮೇಧಾವೀ ಸನ್ನಗ್ನಿರ್ಯಜ್ಞಸ್ಯಾಗ್ನಿಹೋತ್ರಾದೇಃ ಸಾಧನಃ ಸಾಧಕೋ ಭವತಿ ॥ ಧೀಯತೇ । ದಧಾತೇಃ ಕರ್ಮಣಿ ಯಕ್ । ಘುಮಾಸ್ಥಾಗಾಪೇತ್ಯಾದಿನಾ ಈತ್ವಂ । ನಿಘಾತಃ । ನೀಯತೇ । ಣೀಞ್ ಪ್ರಾಪಣ ಇತ್ಯಸ್ಯ ಕರ್ಮಣಿ ಯಕಿ ರೂಪಂ । ಉಪಸರ್ಗಾದಸಮಾಸೇಽಪಿ ಣೋಪದೇಶಸ್ಯೇತಿ ಣತ್ವಂ । ಸಾಧನಃ । ಸಾಧ ಸಂಸಿದ್ಧೌ । ನಂದ್ಯಾದಿತ್ವಾತ್ಕರ್ತರಿ ಲ್ಯುಃ । ಲಿತ್ಸ್ವರಃ ॥

ಪ್ರತಿಪದಾರ್ಥ

**ವಾಜೀ**—ಬಲಶಾಲಿಯಾದ ಅಗ್ನಿಯು । **ವಾಜೇಷು**—ಯುದ್ಧಗಳಲ್ಲಿ । **ಧೀಯತೇ**—(ಶತ್ರುಹನನಕ್ಕಾಗಿ ದೇವತೆಗಳಿಂದ) ಮುಂಭಾಗದಲ್ಲಿ ಸ್ಥಾಪಿತನಾಗುತ್ತಾನೆ । **ಅಧ್ವರೇಷು**—ಯಜ್ಞಗಳಲ್ಲಿ । **ಪ್ರಣೀಯತೇ**—(ಋತ್ವಿಕ್ಕುಗಳಿಂದ) ಆಹವನೀಯಾದಿ ಸ್ಥಾನಗಳಲ್ಲಿ ಇರಿಸಲ್ಪಡುತ್ತಾನೆ.(ಆದುದರಿಂದಲೇ) । **ವಿಪ್ರಃ**—ಮೇಧಾವಿಯಾದ ಅಗ್ನಿಯು । **ಯಜ್ಞಸ್ಯ**—ಅಗ್ನಿಹೋತ್ರಾದಿ ಯಜ್ಞಗಳ । **ಸಾಧನಃ**—ಸಾಧಕನಾಗಿ ಆಗುತ್ತಾನೆ ॥

ಭಾವಾರ್ಥ

ಬಲಶಾಲಿಯಾದ ಅಗ್ನಿಯು ಯುದ್ಧಗಳಲ್ಲಿ ಶತ್ರುಹನನಕ್ಕಾಗಿ ದೇವತೆಗಳಿಂದ ಮುಂಭಾಗದಲ್ಲಿ ಸ್ಥಾಪಿತನಾಗುತ್ತಾನೆ. ಋತ್ವಿಕ್ಕುಗಳಿಂದ ಯಜ್ಞಕಾಲದಲ್ಲಿ ಆಹವನೀಯಾದಿ ಸ್ಥಾನಗಳಲ್ಲಿರಿಸಲ್ಪಡುತ್ತಾನೆ. ಆದುದರಿಂದಲೇ ಮೇಧಾವಿಯಾದ ಅಗ್ನಿಯು ಅಗ್ನಿಹೋತ್ರಾದಿಯಜ್ಞಗಳ ಸಾಧಕನಾಗಿ ಆಗುತ್ತಾನೆ.

English translation

The mighty Agni is placed ( foremost by the gods ) in battle ; he is brought forward reverently at holy rites ; for he is the sage fulfiller of the sacrifice.

### ವಿಶೇಷವಿಷಯಗಳು

**ವಾಜೀ—ಬಲವಾನ್ |** ಅಶ್ವನಾಮಗಳಲ್ಲಿ (ನಿ. ೨-೨೭) ವಾಜೀ ಎಂಬ ಪದವು ಪಠಿತವಾಗಿದೆ. ಇಲ್ಲಿ ಅಗ್ನಿಯು ಬಲವುಳ್ಳವನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ವಾಜೇಷು—ಯುದ್ಧೇಷು |** ವಾಜ ಎಂಬ ಪದವು ಅನ್ನ, ಸಂಗ್ರಾಮ, ಎಂಬ ಅರ್ಥಗಳಲ್ಲಿ ನಿರುಕ್ತಕಾರರಿಂದ ಉಕ್ತವಾಗಿದೆ. ಇಲ್ಲಿ ಯುದ್ಧವೆಂಬ ಅರ್ಥದಲ್ಲಿ ಪ್ರಯುಕ್ತವಾಗಿ, ಬಲವುಳ್ಳವನಾದ ಅಗ್ನಿಯು ದೇವತೆಗಳಿಂದ ಯುದ್ಧಗಳಲ್ಲಿ ಶತ್ರುಗಳನ್ನು ನಿಗ್ರಹಮಾಡುವುದಕ್ಕಾಗಿ ಪ್ರೇರಿತನಾಗುತ್ತಾನೆಂದು ಸಾಯಣರಿಂದ ಅರ್ಥವು ವಿವೃತವಾಗಿದೆ.

**ಅಧ್ವರೇಷು ಪ್ರಣೀಯತೇ—**ಅಧ್ವರಶಬ್ದವು ಯಜ್ಞನಾಮಗಳಲ್ಲಿ ನಿರುಕ್ತಕಾರರಿಂದ ಪಠಿತವಾಗಿದ್ದರೂ, ಇಲ್ಲಿ ಸಾಯಣರಿಂದ ಅಗ್ನಿಯನ್ನು ಪೂಜಿಸುವ ಕರ್ಮವೆಂಬ ಅರ್ಥದಲ್ಲಿ ಪ್ರಯುಕ್ತವಾಗಿ, ಅಗ್ನಿಹೋತ್ರಗಳಲ್ಲಿ ಅಧ್ವರ್ಯುವೇ ಮೊದಲಾದ ಋತ್ವಿಜರು ಅಗ್ನಿಯನ್ನು ಆಹವನೀಯವೆಂಬಿವೇ ಮೊದಲಾದ ಯಾಗಶಾಲೆಯಲ್ಲಿ ವಿಂಗಡಿಸಲ್ಪಟ್ಟ ಪ್ರದೇಶಗಳಲ್ಲಿ ಪ್ರತಿಷ್ಠೆಮಾಡುವರು ಎಂಬ ಅರ್ಥವು ವಿವೃತವಾಗಿದೆ.

**ವಿಪ್ರಃ ಯಜ್ಞಸ್ಯ ಸಾಧನಃ—**ವಿಪ್ರಶಬ್ದವು ಮೇಧಾವಿನಾಮಗಳಲ್ಲಿ ಉಕ್ತವಾಗಿರುವುದರಿಂದ ಅಗ್ನಿಯು ಮೇಧಾವಿಯಾಗಿರುವನೆಂದೂ, ಯಜ್ಞಕರ್ಮಗಳನ್ನು ಯಜಮಾನರಿಗೆ ಸಾಧಿಸಿಕೊಡುವವನೆಂದೂ ಅರ್ಥವು ವರ್ಣಿತವಾಗಿವೆ.

### ವ್ಯಾಕರಣಪ್ರಕ್ರಿಯಾ

**ಧೀಯತೇ—**ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಲಟ್. ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. ಟಗೆ ಏತ್ವ. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. **ಘುಮಾಸ್ಥಾಗಾ—**(ಪಾ. ಸೂ. ೬-೪-೬೬) ಎಂಬುದರಿಂದ ಕಿತ್‌ಪ್ರತ್ಯಯ ಪರವಾದುದರಿಂದ ಧಾತುವಿನ ಆಕಾರಕ್ಕೆ ಈತ್ವ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನೀಯತೇ—**ಣೀಞ್ ಪ್ರಾಪಣೇ. ಧಾತು. **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಕರ್ಮಣಿಯಲ್ಲಿ ಲಟ್. ಹಿಂದಿನಂತೆ ರೂಪ ಸಿದ್ಧಿಯಾಗುತ್ತದೆ. ತಿಜಂತನಿಘಾತಸ್ವರ ಬರುತ್ತದೆ. ಪ್ರ ಎಂಬ ಉಪಸರ್ಗದ ಪರದಲ್ಲಿರುವುದರಿಂದ, **ಉಪಸರ್ಗಾದಸಮಾಸೇಽಪಿ ಣೋಪದೇಶಸ್ಯ** (ಪಾ. ಸೂ. ೮-೪-೧೪) ಎಂಬುದರಿಂದ ಧಾತು ನಕಾರಕ್ಕೆ ಣತ್ವ.

**ಸಾಧನಃ—**ಸಾಧ ಸಂಸಿದ್ಧೌ. ಧಾತು. ನಂದ್ಯಾದಿಗಣದಲ್ಲಿ ಪಠಿತವಾದುದರಿಂದ **ನಂದಿಗ್ರಹಪಚಾದಿಭ್ಯಃ—**(ಪಾ. ಸೂ. ೩-೧-೧೩೪) ಎಂಬುದರಿಂದ ಕರ್ತರಿಯಲ್ಲಿ ಲ್ಯು ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

### ಸಂಹಿತಾಪಾಠಃ

**ಧಿಯಾ ಚಕ್ರೇ ವರೇಣ್ಯೋ ಭೂತಾನಾಂ ಗರ್ಭಮಾ ದಧೇ ।**
**ದಕ್ಷಸ್ಯ ಪಿತರಂ ತನಾ ॥ ೯ ॥**

ಪದಪಾಠಃ

ಧಿಯಾ । ಚಕ್ರೇ । ವರೇಣ್ಯಃ । ಭೂತಾನಾಂ । ಗರ್ಭಂ । ಆ । ದಧೇ ।
ದಕ್ಷಸ್ಯ । ಪಿತರಂ । ತನಾ ॥ ೯ ॥

ಸಾಯಣಭಾಷ್ಯಂ

ಯೋಽಗ್ನಿರ್ಧಿಯಾಧಾನಪವಮಾನೇಷ್ಟಿರೂಪೇಣ ಕರ್ಮಣಾ ಚಕ್ರೆ ಆಹವನೀಯರೂಪತಯಾ ಕೃತೋಽಭೂತ್ ಅತ ಏವ ವರೇಣ್ಯಃ ಸರ್ವೈರ್ಯಜಮಾನೈಃ ಕರ್ಮಾಂಗತ್ವೇನ ವರಣೀಯಃ ಯಶ್ಚಾಗ್ನಿರ್ಭೂತಾನಾಂ ಸ್ಥಾವರಜಂಗಮಾತ್ಮಕಾನಾಂ ಭೂತಜಾತಾನಾಮಂತರ್ಗರ್ಭಂ ಸ್ವಾತ್ಮಾನಮೇವ ಗರ್ಭರೂಪತಯಾ ಆದಧೇ ಸರ್ವತ್ರ ದಧಾರ ಪಿತರಂ ಸರ್ವಸ್ಯ ಜಗತಃ ಪಾಲಕಂ ತಮಿಮಮಗ್ನಿಂ ದಕ್ಷಸ್ಯ ದಕ್ಷಪ್ರಜಾಪತೇಸ್ತನಾ ತನಯಾ ವೇದಿರೂಪಾ ಭೂಮಿರ್ದರ್ಶಪೂರ್ಣಮಾಸಾಗ್ನಿಹೋತ್ರಾದಿಕರ್ಮಸಿದ್ಧ್ಯರ್ಥಂ ಧಾರಯತಿ । ಭೂಮೇರ್ದಕ್ಷದುಹಿತೃತ್ವೇ ಮಂತ್ರವರ್ಣಃ । ಅದಿತಿರ್ಹ್ಯಜನಿಷ್ಟ ದಕ್ಷ ಯಾ ದುಹಿತಾ ತವ । ಋಗ್ವೇ ೧೦-೭೨-೫ ॥ ಇತಿ ॥ ಚಕ್ರೇ । ಕರೋತೇಃ ಕರ್ಮಣಿ ಲಿಟಿ ರೂಪಂ । ಗರ್ಭಂ । ಗೄ ನಿಗರಣ ಇತ್ಯಸ್ಮಾದರ್ತಿಗೃಭ್ಯಾಂ ಭನ್ನಿತಿ ಭನ್ । ಗಿರತಿ ಗೀರ್ಯತೇ ವಾ ಗರ್ಭಃ । ನಿತ್ತ್ವಾದಾದ್ಯುದಾತ್ತಃ । ದಧೇ । ದಧಾತೇರ್ಲಿಟಿ ರೂಪಂ । ಪಿತರಂ । ಪಾ ರಕ್ಷಣೇ । ನಪ್ತೃನೇಷ್ಟೃ ಇತ್ಯಾದಿನಾ ತೃಜಂತತ್ವೇನ ನಿಪಾತನಾದಿತ್ವಂ । ಪಾತಿ ಪಾಲಯತೀತಿ ಪಿತಾ ಪಾಲಕಃ । ಚಿತ್ಸ್ವರಃ । ತನಾ । ಯಲೋಪಶ್ಛಾಂದಸಃ ॥

ಪ್ರತಿಪದಾರ್ಥ

(ಅಗ್ನಿಃ—ಅಗ್ನಿಯು) । ಧಿಯಾ—ಯಜ್ಞಾಂಗವಾದ ಕರ್ಮದಿಂದ । ಚಕ್ರೇ—ಆಹವನೀಯಾದಿರೂಪದಲ್ಲಿ ನಿರ್ಮಿತನಾಗಿದ್ದಾನೆ । ವರೇಣ್ಯಃ—ಎಲ್ಲರಿಂದಲೂ ವರಿಸಲ್ಪಟ್ಟ (ಅಪೇಕ್ಷಿತನಾದ) ಅಗ್ನಿಯು । ಭೂತಾನಾಂ—ಸಕಲ ಭೂತಗಳಿಗೂ । ಗರ್ಭಂ—(ತನ್ನನ್ನೇ) ಗರ್ಭರೂಪವಾಗಿ । ಆ ದಧೇ—ಧರಿಸಿಕೊಂಡನು । ಪಿತರಂ—ಸಕಲಜಗತ್ತಿಗೂ ಪಾಲಕನಾದ ಅಗ್ನಿಯನ್ನು । ದಕ್ಷಸ್ಯ—ದಕ್ಷಪ್ರಜಾಪತಿಯ । ತನಾ—ಪುತ್ರಿಯಾದ ಪೃಥ್ವಿಯು (ಕರ್ಮಸಿದ್ಧಿಗಾಗಿ ತನ್ನಲ್ಲಿ ಧರಿಸಿದಳು)

ಭಾವಾರ್ಥ

ಅಗ್ನಿಯು ಯಜ್ಞಾಂಗವಾದ ಕರ್ಮದಿಂದ ಆಹವನೀಯಾದಿರೂಪದಲ್ಲಿ ನಿರ್ಮಿತನಾಗಿದ್ದಾನೆ, ಎಲ್ಲರಿಂದಲೂ ಅಪೇಕ್ಷಿತನಾದ ಅಗ್ನಿಯು ಸಕಲಭೂತಗಳಿಗೂ ಗರ್ಭರೂಪನಾಗಿದ್ದಾನೆ, ಸಕಲಜಗತ್ತಿಗೂ ಪಾಲಕನಾದ ಅಗ್ನಿಯನ್ನು ದಕ್ಷಪ್ರಜಾಪತಿಯ ಪುತ್ರಿಯಾದ ಪೃಥ್ವಿಯು ತನ್ನಲ್ಲಿ ಧರಿಸಿದ್ದಾಳೆ.

English translation

He who has been made by the sacred rite, the choice (of the worshipper) who comprehends ( within himself ) the germ of all creatures, and whom the daughter of Daksha ( receives ) as the parent of the world.

ವಿಶೇಷವಿಷಯಗಳು

**ಧಿಯಾ**—ಧೀಶಬ್ದವು ಪ್ರಜ್ಞಾ ಅಥವಾ ಕರ್ಮ ಎಂಬ ಅರ್ಥದಲ್ಲಿ ನಿರುಕ್ತಕಾರರಿಂದ ಉಕ್ತವಾಗಿರುವ ಕಾರಣ ಸಾಯಣರಿಂದ ಅಗ್ನಿಯು ಆಧಾನ ಪವಮಾನೇಷ್ಟಿ ಮೊದಲಾದ ಕರ್ಮಗಳನ್ನು ಆಚರಿಸುವುದಕ್ಕಾಗಿ ಯಾಗಶಾಲೆಯ ವೇದಿಯಲ್ಲಿ ಯಜಮಾನರಿಂದ ಆಹವನೀಯ ಎಂಬ ಹೆಸರಿನಿಂದ ಸ್ಥಾಪಿತನಾಗಿರುವನು ಎಂದು ವಿವೃತವಾಗಿದೆ.

**ವರೇಣ್ಯಃ**—ಅಗ್ನಿಯು ಯಜಮಾನರಿಂದ ಯಜ್ಞಕರ್ಮಗಳಲ್ಲಿ ಅಂಗವಾಗಿರುವಂತೆ ವೃತನಾಗಿರುವನೆಂದೂ, ಸ್ಥಾವರ ಜಂಗಮರೂಪದಿಂದ ಇರುವ ಪ್ರಾಣಿಗಳ ಶರೀರದ ಮಧ್ಯಭಾಗದಲ್ಲಿ ತನ್ನ ರೂಪಾಂತರದಿಂದ ಇದ್ದುಕೊಂಡು ಆ ಪ್ರಾಣಿಗಳನ್ನು ಧರಿಸಿರುವನೆಂದೂ ವರ್ಣಿಸಿ, ಈ ಪ್ರಕಾರದಿಂದ ಎಲ್ಲವನ್ನೂ ಧರಿಸಿ ಇರುವುದರಿಂದ ಸರ್ವಕ್ಕೂ ಪಿತೃವಿನ ಹಾಗೆ ಪಾಲಕನಾಗಿರುವ ಅಗ್ನಿಯನ್ನು ದಕ್ಷನೆಂದು ಹೆಸರುಳ್ಳ ಪ್ರಜಾಪತಿಯ ಪುತ್ರಿಯಾದ ಭೂಮಿಯು ಯಜ್ಞದಲ್ಲಿ ಅಗ್ನಿಯ ವಾಸಸ್ಥಾನವಾದ ವೇದಿಯ ರೂಪದಿಂದ ದರ್ಶ ಪೂರ್ಣಮಾಸ, ಅಗ್ನಿಹೋತ್ರರೂಪವಾದ ಕರ್ಮಗಳ ಸಿದ್ಧಿಗಾಗಿ ಧರಿಸಿರುವುದೆಂದೂ ವರ್ಣಿಸಿದ್ದಾರೆ. ಮತ್ತು ದಕ್ಷಬ್ರಹ್ಮನ ಪುತ್ರಿಯು ಭೂಮಿಯು ಎಂಬ ವಿಷಯವನ್ನು ಬೋಧಿಸುವ "ಅದಿತಿರ್ಹ್ಯಜನಿಷ್ಟ ದಕ್ಷ ಯಾ ದುಹಿತಾ ತವ" (ಋ. ಸಂ. ೧೦-೭೨-೫) ಎಂಬ ಶ್ರುತಿವಾಕ್ಯವನ್ನು ಉದಾಹರಿಸಿದ್ದಾರೆ.

**ನಿರುಕ್ತಕಾರರು**—ದಕ್ಷ ಶಬ್ದವನ್ನು—ಬಲನಾಮಗಳಲ್ಲಿ (ನಿ. ೩-೯) ಪಾಠಮಾಡಿ, "ದಕ್ಷಸ್ಯ ವಾದಿತೇ ಜನ್ಮನಿ ವ್ರತೇ" (ಋ. ಸಂ. ೮-೨-೫-೬) ಎಂಬಲ್ಲಿ ದಕ್ಷಶಬ್ದಕ್ಕೆ ಆದಿತ್ಯನೆಂಬ ಅರ್ಥವನ್ನು ವಿವರಿಸಿ, "ಆದಿತ್ಯೋ ದಕ್ಷ ಇತ್ಯಾಹುಃ" ಎಂದು ಹೇಳಿ,

**ಭೂರ್ಜಜ್ಞ ಉತ್ತಾನಪದೋ ಭುವ ಆಶಾ ಅಜಾಯಂತ ||**
**ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ |** (ಋ. ಸಂ. ೧೦-೭೨-೪)

ಎಂಬ ಈ ಮಂತ್ರವನ್ನು ಉದಹರಿಸಿ, ದಕ್ಷ ಮತ್ತು ಅದಿತಿ ಇವರುಗಳ ಜನ್ಮವಿಷಯದಲ್ಲಿ ಕಂಡು ಬರುವ ವಿರೋಧವನ್ನೂ ಅದರ ಪರಿಹಾರವನ್ನೂ ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಚಕ್ರೇ**—ಡುಕೃಞ್ ಕರಣೇ. ಧಾತು. ಕರ್ಮಣಿಯಲ್ಲಿ ಲಿಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಗರ್ಭಂ**—ಗೃ ನಿಗರಣೇ ಧಾತು. **ಅರ್ತಿಗೃಭ್ಯಾಂಭನ್.** (ಉ. ಸೂ. ೪-೪೩೨) ಎಂಬುದರಿಂದ ಭನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತು**— ಎಂಬುದರಿಂದ ಋಕಾರಕ್ಕೆ ಗುಣ ರಪರವಾಗಿ ಬರುತ್ತದೆ. ಗಿರತಿ, ಗೀರ್ಯತೇ ವಾ ಗರ್ಭಃ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಧೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪಿತರಂ**—ಪಾ ರಕ್ಷಣೇ ಧಾತು. **ನಪ್ತೃನೇಷ್ಟೃ**—(ಉ. ಸೂ. ೨-೨೫೨) ಎಂಬುದರಿಂದ ತೃಜಂತವಾಗಿ ನಿಪಾತಮಾಡಿರುವುದರಿಂದ ಇತ್ವಬರುತ್ತದೆ. ಪಾತಿ ಪಾಲಯತೀತಿ ವಾ ಪಿತಾ ಪಾಲಕಃ **ಚಿತಃ** (ಪಾ.ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ತೆನಾ**—ತನಯಾ ಎಂದು ರೂಪವಾದಾಗ ಛಾಂದಸವಾಗಿ ಯಕಾರಲೋಪ ಬರುತ್ತದೆ.

ಸಂಹಿತಾಪಾಠಃ

ನಿ ತ್ವಾ ದಧೇ ವರೇಣ್ಯಂ ದಕ್ಷಸ್ಯೇಳಾ ಸಹಸ್ಕೃತ ।
ಅಗ್ನೇ ಸುದೀತಿಮುಶಿಜಂ ॥ ೧೦ ॥

ಪದಪಾಠಃ

ನಿ । ತ್ವಾ । ದಧೇ । ವರೇಣ್ಯಂ । ದಕ್ಷಸ್ಯ । ಇಳಾ । ಸಹಃऽಕೃತ ।
ಅಗ್ನೇ । ಸುऽದೀತಿಂ । ಉಶಿಜಂ ॥ ೧೦ ॥

ಸಾಯಣಭಾಷ್ಯಂ

ಉಕ್ತಾರ್ಥೋಽನಯರ್ಚಾ ವಿವ್ರಿಯತೇ । ಸಹಸ್ಕೃತ ಮಥನಾಖ್ಯೇನ ಬಲೇನ ನಿಷ್ಪನ್ನ ಹೇ ಅಗ್ನೇ ಸುದೀತಿಂ ಶೋಭನದೀಪ್ತಿಯುಕ್ತಮುಶಿಜಂ ಪುರೋಡಾಶಾದಿಹವಿಃ ಕಾಮಯಮಾನಂ । ಯದ್ವಾ ಕರ್ಮಾರ್ಥಿಭಿಃ ಕಾಮ್ಯಮಾನಂ । ಅತ ಏವ ವರೇಣ್ಯಂ ಸರ್ವೈರ್ವರಣೀಯಂ ತ್ವಾ ಏವಂವಿಧಂ ತ್ವಾಂ ದಕ್ಷಸ್ಯ ದುಹಿತೇಳಾ ವೇದ್ಯಾದಿಲಕ್ಷಣಾ ಭೂಮಿರ್ನಿ ದಧೇ । ಅಗ್ನಿಹೋತ್ರಾದಿಕರ್ಮಸಮೃದ್ಧ್ಯರ್ಥಂ ನಿತರಾಂ ದಧಾರ ॥ ಇಳಾ । ಈಡ ಸ್ತುತೌ । ಪುಂಸಿ ಸಂಜ್ಞಾಯಾಮಿತ್ಯತ್ರ ಪ್ರಾಯಿಕವಚನಾತ್ ಸ್ತ್ರಿಯರ್ಥೇಽಪಿ ಘಪ್ರತ್ಯಯಃ । ಹ್ರಸ್ವಶ್ಛಾಂದಸಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದಗುಣಃ । ಈಡ್ಯಂತೇ ಸ್ತೂಯಂತೇಽಸ್ಯಾಂ ಯಜಮಾನೈರ್ದೇವಾ ಇತೀಳಾ ಭೂಮಿಃ । ಉದಾತ್ತನಿವೃತ್ತಿಸ್ವರೇಣಾಂತೋದಾತ್ತಃ । ಪ್ರತ್ಯಯಸ್ವರಃ । ಉಶಿಜಂ । ವಶ ಕಾಂತಾವಿತ್ಯಸ್ಮಾದ್ವಶಃ ಕಿಚ್ಚೇತೀಜಿಪ್ರತ್ಯಯಃ । ಕಿತ್ತ್ವಾತ್ಸಂಪ್ರಸಾರಣಂ । ವಷ್ಟಿ ಹವಿಃ ಕಾಮಯತೇ ಉಶ್ಯತೇ ಕಾಮ್ಯತೇ ಕರ್ಮಾರ್ಥಿಭಿರಿತಿ ವಾ ಉಶಿಕ್ ಅಗ್ನಿಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಸಹಸ್ಕೃತ—ಮಥನರೂಪವಾದ ಶಕ್ತಿಯಿಂದ ಉತ್ಪನ್ನನಾದ । **ಅಗ್ನೇ**—ಅಗ್ನಿಯೇ । **ಸುದೀತಿಂ**—ಶ್ರೇಷ್ಠವಾದ ಕಾಂತಿಯಿಂದ ಕೂಡಿದವನೂ । **ಉಶಿಜಂ**—ಹವಿಸ್ಸನ್ನು ಅಪೇಕ್ಷಿಸುವವನೂ ಅಥವಾ ಯಜ್ಞಕರ್ತರಿಂದ ಅಪೇಕ್ಷಿತನಾದವನೂ । **ವರೇಣ್ಯಂ**—ಸಕಲರಿಗೂ ಪ್ರಿಯನಾದವನೂ ಆದ । **ತ್ವಾಂ**—ನಿನ್ನನ್ನು । **ದಕ್ಷಸ್ಯ**—ದಕ್ಷಪ್ರಜಾಪತಿಯ ಪುತ್ರಿಯಾದ । ಇಳಾ—ವೇದಿರೂಪಿಯಾದ ಪೃಥ್ವಿಯು । **ನಿ ದಧೇ**—ಕರ್ಮಾರ್ಥವಾಗಿ ಧರಿಸಿದ್ದಾಳೆ ॥

ಭಾವಾರ್ಥ

ಮಥನರೂಪವಾದ ಶಕ್ತಿಯಿಂದ ಉತ್ಪನ್ನನಾದ ಅಗ್ನಿಯೇ, ಶ್ರೇಷ್ಠವಾದ ಕಾಂತಿಯಿಂದ ಕೂಡಿದವನೂ, ಹವಿಸ್ಸನ್ನು ಅಪೇಕ್ಷಿಸುವವನೂ, ಸಕಲರಿಂದಲೂ ಅಪೇಕ್ಷಿತನಾದವನೂ ಆದ ನಿನ್ನನ್ನು ದಕ್ಷಪ್ರಜಾಪತಿಯ ಪುತ್ರಿಯಾದ ವೇದಿರೂಪವಾದ ಪೃಥ್ವಿಯು ಕರ್ಮಾರ್ಥವಾಗಿ ಧರಿಸಿದ್ದಾಳೆ.

## English translation

Agni, strength-engendered, Ila ( the daughter ) of Daksha has sustained you, the desirable, the resplendent, and longing ( for the oblation ).

### ವಿಶೇಷವಿಷಯಗಳು

**ಸಹಸ್ಕೃತ**—ಸಹಃ ಎಂದು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಅಗ್ನಿಯು ಋತ್ವಿರಿಂದ ಅರಣಿಗಳಲ್ಲಿ ಮಥನಮಾಡುವಾಗ ಬಲಪ್ರಯೋಗದಿಂದ ಉತ್ಪನ್ನನಾಗುವಕಾರಣ ಬಲದಿಂದ ಉತ್ಪನ್ನನಾಗುವನೆಂದು ಈ ಪದದಿಂದ ಸಂಬೋಧಿತನಾಗುತ್ತಾನೆ.

**ಉಶಿಜಂ-ಉಶಿಕ್ ವಷ್ಟೇಃ ಕಾಂತಿಕರ್ಮಣಃ**(ನಿ. ೬-೬೧)ಎಂದು ನಿರುಕ್ತಕಾರರಿಂದ ವ್ಯಾಖ್ಯಾತವಾಗಿದೆ. ಸಾಯಣರು **ಪುರೋಡಾಶಾದಿಹವಿಃ ಕಾಮ್ಯಮಾನಂ, ಯದ್ವಾ ಕರ್ಮಾರ್ಥಿಭಿಃ ಕಾಮ್ಯಮಾನಂ.** ಪುರೋಡಾಶವೇ ಮೊದಲಾದ ಹವಿಸ್ಸುಗಳನ್ನು ಅಗ್ನಿಯು ಅಪೇಕ್ಷಿಸುತ್ತಿರುವನು ಎಂದೂ ಅಥವಾ ಯಜ್ಞಾದಿಕರ್ಮಗಳನ್ನು ಆಚರಿಸಲು ಅಪೇಕ್ಷೆಯುಳ್ಳವರಿಂದ ಅಗ್ನಿಯು ಅಪೇಕ್ಷಿತನಾಗಿರುವನು ಎಂದೂ ಎರಡುವಿಧವಾದ ಅರ್ಥವನ್ನೂ ಈ ಪದಕ್ಕೆ ವಿವರಿಸಿದ್ದಾರೆ.

**ದಕ್ಷಸ್ಯ ದುಹಿತಾ ಇಳಾ ನಿದಧೇ**—ಮಂಗಳಕರವಾದ ಕಾಂತಿಯಿಂದ ಬೆಳಗುತ್ತಿರುವ, ಯಜ್ಞಮಾಡುವ ಯಜಮಾನರಿಂದ ವರಣೀಯನಾದ ಅಗ್ನಿಯನ್ನು ದಕ್ಷಬ್ರಹ್ಮನ ಪುತ್ರಿಯಾದ ಭೂಮಿಯು ಅಗ್ನಿಹೋತ್ರವೇ ಮೊದಲಾದ ಯಜ್ಞಕರ್ಮಗಳನ್ನು ಅತಿಶಯವಾಗಿ ಆಚರಿಸುವುದಕ್ಕಾಗಿ ಯಜ್ಞವೇದಿಯ ಸ್ವರೂಪದಿಂದ ಧರಿಸಿದ್ದಾಳೆಂಬ ಅರ್ಥವು ವಿವೃತವಾಗಿದೆ.

**ಇಳಾ**—ಎಂಬ ಪದವು ಪೃಥಿವೀನಾಮಗಳಲ್ಲಿಯೂ (ನಿ. ೨-೫) ವಾಙ್ನಾಮಗಳಲ್ಲಿಯೂ (ನಿ. ೨-೨೩) ಅನ್ನನಾಮಗಳಲ್ಲಿಯೂ ( ನಿ. ೩-೯ ) ಗೋನಾಮಗಳಲ್ಲಿಯೂ ( ನಿ. ೩-೯ ) ಉಕ್ತವಾಗಿ **ಈಟ್ಟೇಃ ಸ್ತುತಿಕರ್ಮಣಃ** (ನಿ. ೧೧-೫೦) ಎಂದು ವ್ಯಾಖ್ಯಾತವಾಗಿದೆ. ಸಾಯಣರು **ವೇದ್ಯಾದಿಲಕ್ಷಣಾ ಭೂಮಿಃ** ಎಂದು ಅರ್ಥವನ್ನು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಇಳಾ**—ಈಡ ಸ್ತುತೌ ಧಾತು. **ಪುಂಸಿ ಸಂಜ್ಞಾಯಾಂ ಘಃಪ್ರಾಯೇಣ** (ಪಾ. ಸೂ. ೩-೩-೧೧೮) ಎಂಬಲ್ಲಿ ಪ್ರಾಯ ಗ್ರಹಣದಿಂದ ಸ್ವಾರ್ಥದಲ್ಲಿಯೂ ಘ ಪ್ರತ್ಯಯಃ ಇದು ಪರವಾದಾಗ ಧಾತುವಿಗೆ ಛಾಂದಸವಾಗಿ ಪ್ರಸ್ವ ಬರುತ್ತದೆ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ವಚನದಿಂದ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವದಿಲ್ಲ. ಈಡ್ಯಂತೇ ಸ್ತೂಯಂತೇ ಅಸ್ಯಾಂ ಯಜಮಾನೈರ್ದೇವಾ ಇತಿ ಇಳಾ ಭೂಮಿಃ (ಯಜಮಾನರು ದೇವತೆಗಳನ್ನು ಸ್ತೋತ್ರಮಾಡುವ ಪ್ರದೇಶ) ಸ್ತ್ರೀತ್ವದಲ್ಲಿ ಟಾಪ್. **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಟಾಪಿಗೆ ಉದಾತ್ತಸ್ವರ ಬರುತ್ತದೆ.

**ಉಶಿಜಂ**—ವಶ ಕಾಂತೌ. ಧಾತು. **ವಶೇಃ ಕಿಚ್ಚ** (ಉ. ಸೂ. ೨-೭೧) ಎಂಬುದರಿಂದ ಇಜಿ ಪ್ರತ್ಯಯ. ಕಿತ್ವವಿಧಾನಮಾಡಿರುವುದರಿಂದ ಧಾತುವಿಗೆ ಸಂಪ್ರಸಾರಣ (ಉ) ಪೂರ್ವರೂಪ. ವಷ್ಟಿ ಹವಿಃ ಕಾಮಯತೇ ಉಶ್ಯತೇ ಕಾಮ್ಯತೇ ಕಾಮಾರ್ಥಿಭಿಃ ಇತಿ ವಾ ಉಶಿಕ್ ಅಗ್ನಿಃ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಅಗ್ನಿಂ ಯಂತುರಮಪ್ತುರಮೃತಸ್ಯ ಯೋಗೇ ವನುಷಃ ।
ವಿಪ್ರಾ ವಾಜೈಃ ಸಮಿಂಧತೇ ॥ ೧೧ ॥

ಪದಪಾಠಃ

ಅಗ್ನಿಂ । ಯಂತುರಂ । ಅಪ್ऽತುರಂ । ಋತಸ್ಯ । ಯೋಗೇ । ವನುಷಃ ।
ವಿಪ್ರಾಃ । ವಾಜೈಃ । ಸಂ । ಇಂಧತೇ ॥ ೧೧ ॥

ಸಾಯಣಭಾಷ್ಯಂ

ವನುಷಃ ಕರ್ಮಸಿದ್ಧ್ಯರ್ಥಂ ಸಂಭಜಮಾನಾ ವಿಪ್ರಾ ಮೇಧಾವಿನೋऽಧ್ವರ್ಯ್ವಾದಯೋ ಯಂತುರಂ ಸರ್ವಸ್ಯ ನಿಯಂತಾರಂ । ಯದ್ವಾ ಕ್ಷಿಪ್ರಂ ಗಂತಾರಂ । ಅಪ್ತುರಮಪಾಂ ಪ್ರೇರಕಂ ತಮಿಮಮಗ್ನಿಮೃತಸ್ಯ ಸತ್ಯಭೂತಸ್ಯ ಜ್ಯೋತಿಷ್ಟೋಮಾದೇರ್ಯೋಗೇ ಪ್ರಯೋಗಾರ್ಥಂ ವಾಜೈರ್ಹವಿಲಕ್ಷಣೈರನ್ನೈಃ ಸಮಿಂಧತೇ । ಸಮ್ಯಗ್ದೀಪಯಂತಿ ॥ ಯಂತುರಂ । ವರ್ಣವ್ಯತ್ಯಯಃ । ಯಂತಾರಮಿತ್ಯರ್ಥಃ । ಅಪ್ತುರಂ । ತುರ ತ್ವರಣೇ । ಅಪಸ್ತುತೋರ್ತಿ ತ್ವರಯತೀತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರಃ । ಯೋಗೇ । ಯುಜಿರ್ ಯೋಗೇ । ಭಾವೇ ಘಞ್ । ಚಜೋಃ ಕು ಘಿಣ್ಣ್ಯತೋರಿತಿ ಕುತ್ವಂ ಞಿತ್ಸ್ವರಃ । ವನುಷಃ । ವನ ಷಣ ಸಂಭಕ್ತೌ । ಜನೇರುಸಿರಿತ್ಯಧಿಕಾರೇ ಬಹುಲವಚನಾದಸ್ಮಾದಪ್ಯುಸಿಃ । ಪ್ರತ್ಯಯಸ್ವರಃ । ಇಂಧತೇ । ಞಿಇಂಧೀ ದೀಪ್ತೌ । ನಿಘಾತಃ ॥

ಪ್ರತಿಪದಾರ್ಥ

**ವನುಷಃ**—ಕರ್ಮಸಿದ್ಧಿಗಾಗಿ ಭಜಿಸುವವರೂ । **ವಿಪ್ರಾಃ**—ಮೇಧಾವಿಗಳೂ ಆದ ಋತ್ವಿಕ್ಕುಗಳು । **ಯಂತುರಂ**—ಸಕಲಕ್ಕೂ ನಿಯಂತೃವಾದವನೂ ಅಥವಾ ಶೀಘ್ರಗಾಮಿಯಾದವನೂ । **ಅಪ್ತುರಂ**—ವೃಷ್ಟಿರೂಪವಾದ ಉದಕವನ್ನು ಸುರಿಸುವವನೂ ಆದ । **ಅಗ್ನಿಂ**—ಅಗ್ನಿಯನ್ನು । **ಋತಸ್ಯ**—ಸತ್ಯಭೂತವಾದ ಯಜ್ಞದ । **ಯೋಗೇ**—ಪ್ರಯೋಗಾರ್ಥವಾಗಿ । **ವಾಜೈಃ**—ಹವಿಸ್ಸಿನ ರೂಪದ ಅನ್ನಗಳಿಂದ । **ಸಮಿಂಧತೇ**—ಪ್ರಜ್ವಲಿಸುವಂತೆ ಮಾಡುತ್ತಾರೆ ॥

ಭಾವಾರ್ಥ

ಕರ್ಮಸಿದ್ಧಿಗಾಗಿ ಭಜಿಸುವವರೂ, ಮೇಧಾವಿಗಳೂ ಆದ ಋತ್ವಿಕ್ಕುಗಳು ಸಕಲಕ್ಕೂ ನಿಯಂತೃವಾದವನೂ, ವೃಷ್ಟಿರೂಪವಾದ ಉದಕವನ್ನು ಸುರಿಸುವವನೂ ಆದ ಅಗ್ನಿಯನ್ನು ಸತ್ಯಭೂತವಾದ ಯಜ್ಞದ ಪ್ರಯೋಗಾರ್ಥವಾಗಿ ಹವಿಸ್ಸಿನ ರೂಪದ ಅನ್ನಗಳಿಂದ ಪ್ರಜ್ವಲಿಸುವಂತೆ ಮಾಡುತ್ತಾರೆ.

English translation

The wise ( priests ) performers ( of the ceremony ) kindle with oblations for the due celebration of the rite, Agni, the regulator ( of all ), the sender of the rain.

ವಿಶೇಷವಿಷಯಗಳು

**ವನುಷಃ ವಿಪ್ರಾಃ**—ಯಜ್ಞಕರ್ಮಗಳ ಸಿದ್ಧಿಗಾಗಿ ಅಗ್ನಿಯನ್ನು ಅಪೇಕ್ಷಿಸುವ ಮೇಧಾವಿಗಳಾದ ಋತ್ವಿಜರು ಶೀಘ್ರವಾಗಿ ಸಂಚರಿಸುವ, ಅಥವಾ ಸರ್ವಕ್ಕೂ ನಿಯಮಕನಾದ, ಉದಕಗಳನ್ನು ಪ್ರೇರಿಸುವ ಅಗ್ನಿಯನ್ನು ಜ್ಯೋತಿಷ್ಟೋಮವೇ ಮೊದಲಾದ ಯಜ್ಞಗಳನ್ನು ಆಚರಿಸುವುದಕ್ಕಾಗಿ ಹವಿಸ್ಸಿನ ರೂಪವಾಗಿರುವ ಅನ್ನಗಳಿಂದ ಉದ್ದೀಪ್ತನಾಗಿ ಇರುವಂತೆ ಮಾಡುವರು ಎಂದು ಅರ್ಥವನ್ನು ವರ್ಣಿಸಿದೆ.

**ಯಂತುರಂ—ಯಂತಾರಃ** ಎಂದು ಯಾಜ್ಞಾಕರ್ಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. ಸಾಯಣರು **ವರ್ಣವ್ಯತ್ಯಯಃ ಯಂತಾರಂ** ಎಂದು ರೂಪನಿಷ್ಪತ್ತಿಯನ್ನು ನಿರ್ದೇಶಮಾಡಿ, ಅಗ್ನಿಯು ಸರ್ವಕ್ಕೂ ನಿಯಾಮಕನಾಗಿರುವನೆಂದೂ, ಪ್ರಾಪಣಾರ್ಥಕವಾದ ಯಾಧಾತುವಿನಿಂದ ನಿಷ್ಪನ್ನವಾದ ಈ ಪದವು ವೇಗವಾಗಿ ನಡೆಯುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಎಂದೂ ಅರ್ಥವನ್ನು ವಿವರಿಸಿದ್ದಾರೆ.

**ಋತಸ್ಯ**—ಋತಶಬ್ದವು ಸತ್ಯ ಅಥವಾ ಯಜ್ಞ ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿರುವುದರಿಂದ ಇಲ್ಲಿ ಜ್ಯೋತಿಷ್ಟೋಮವೇ ಮೊದಲಾದ ಯಜ್ಞಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ವಾಜೈಃ**—ವಾಜ ಶಬ್ದಕ್ಕೆ ಅನೇಕಾರ್ಥಗಳು ಇರುವುದರಿಂದ ಇಲ್ಲಿ ಹವಿಸ್ಸಿನ ರೂಪದಿಂದ ಇರುವ ಅನ್ನವೆಂದು ಅರ್ಥವನ್ನು ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಯಂತುರಂ**—ಯಾ ಪ್ರಾಪಣೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಛಾಂದಸವಾಗಿ ವರ್ಣವ್ಯತ್ಯಯ ಬರುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಪ್ತುರಂ**—ತುರ ತ್ವರಣೇ ಧಾತು. ಜುಹೋತ್ಯಾದಿ. ಅಪಃ ತುತೋರ್ತಿ ತ್ವರಯತಿ ಇತಿ ಅಪ್ತೂಃ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಯೋಗೇ**—ಯುಜಿರ್ ಯೋಗೇ ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಘಕಾರ ಇತ್ತಾದುದರಿಂದ **ಚಜೋಃ ಕು ಘಿಣ್ಯತೋಃ** ಎಂಬುದರಿಂದ ಧಾತು ಜಕಾರಕ್ಕೆ ಕುತ್ವದಿಂದ ಗಕಾರಾದೇಶ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವನುಷಃ**—ವನ ಷಣ ಸಂಭಕ್ತೌ ಧಾತು. ಉಣಾದಿಯಲ್ಲಿ ಬಹುಲಗ್ರಹಣವಿರುವುದರಿಂದ ತತ್‌ಸಾಮರ್ಥ್ಯದಿಂದ **ಜನೇರುಸಿಃ** (ಉ. ಸೂ. ೨-೧೭೨) ಎಂಬುದರಿಂದ ವಿಹಿತವಾದ ಉಸಿ ಪ್ರತ್ಯಯವು ಇದಕ್ಕೂ ಬರುತ್ತದೆ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ಇಂಧತೇ**—ಞಿಇಂಧೀ ದೀಪ್ತೌ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

ಸಂಹಿತಾಪಾಠಃ

ಊರ್ಜೋ ನಪಾತಮಧ್ವರೇ ದೀದಿವಾಂಸಮುಪ ದ್ಯವಿ ।
ಅಗ್ನಿಮೀಳೇ ಕವಿಕ್ರತುಂ ॥ ೧೨ ॥

ಪದಪಾಠಃ

ಊರ್ಜಃ । ನಪಾತಂ । ಅಧ್ವರೇ । ದೀದಿऽವಾಂಸಂ । ಉಪ । ದ್ಯವಿ ।
ಅಗ್ನಿಂ । ಈಳೇ । ಕವಿऽಕ್ರತುಂ ॥ ೧೨ ॥

ಸಾಯಣಭಾಷ್ಯಂ

ಊರ್ಜೋ ನಪಾತಂ ಹವಿರ್ಲಕ್ಷಣೈರನ್ನೈಃ ಸಮಿಧ್ಯಮಾನತ್ವೇನಾನ್ನಸ್ಯ ಪುತ್ರಂ । ಯದ್ವಾನ್ನಸ್ಯ ಚತುರ್ಥಂ । ಯಥಾನ್ನಾದಾಹುತಿರಾಹುತೇರಾದಿತ್ಯ ಆದಿತ್ಯಾದಗ್ನಿರಿತಿ । ಉಪ ದ್ಯವ್ಯಂತರಿಕ್ಷಸ್ಯ ಸಮೀಪೇ ದೀದಿವಾಂಸಮತಿಶಯೇನ ದೀಪ್ಯಮಾನಂ ಕವಿಕ್ರತುಂ । ಕವಯೋ ಮೇಧಾವಿನೋಽಧ್ವರ್ಯ್ವಾದಯೋ ಮಥನೇನ ಕ್ರತವಃ ಕರ್ತಾರೋ ಯಸ್ಯೇತಿ । ಅಧ್ವರ್ಯ್ವಾದಿಭಿರ್ನಿಷ್ಪಾದ್ಯಮಾನಂ ತಮಿಮಮಗ್ನಿಮಧ್ವರೇಽಸ್ಮಿನ್‌ಯಜ್ಞ ಈಳೇ । ಸ್ತುತಿಲಕ್ಷಣಾಭಿರ್ಗೀರ್ಭಿರಹಂ ಸ್ತೌಮಿ ॥ ಊರ್ಜಃ । ಊರ್ಜ ಬಲ ಇತ್ಯಸ್ಮಾದ್ಭ್ರಾಜಭಾಸೇತ್ಯಾದಿನಾ ತಾಚ್ಛೀಲಿಕಃ ಕ್ವಿಪ್ । ಊರ್ಜಯತಿ ಶರೀರಮಿತ್ಯೂರ್ಕ್ ಅನ್ನಂ। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ದ್ಯವಿ । ದ್ಯುತ ದೀಪ್ತಾವಿತ್ಯಸ್ಮಾದೌಣಾದಿಕೋ ಡುನ್ಪ್ರತ್ಯಯಃ । ದ್ಯೋತತೇ ಕಿರಣಸಂಬಂಧಾದಿತಿ ದ್ಯುರಂತರಿಕ್ಷಂ । ನಿತ್ಸ್ವರಃ । ಈಳೇ। ಲಟಿ ರೂಪಂ॥

ಪ್ರತಿಪದಾರ್ಥ

**ಊರ್ಜಃ ನಪಾತಂ**—ಹವಿಸ್ಸಿನರೂಪವಾದ ಅನ್ನದ ಪುತ್ರನೂ। **ಉಪ ದ್ಯವಿ**—ಅಂತರಿಕ್ಷದ ಸಮೀಪದಲ್ಲಿ **ದೀದಿವಾಂಸಂ**—ಅತಿಶಯವಾಗಿ ಪ್ರಕಾಶಿಸುವವನೂ । **ಕವಿಕ್ರತುಂ**—ಮೇಧಾವಿಗಳಾದ ಋತ್ವಿಕ್ಕುಗಳಿಂದ ನಿಷ್ಪಾದಿತನಾದವನೂ ಆದ । **ಅಗ್ನಿಂ**—ಅಗ್ನಿಯನ್ನು । **ಅಧ್ವರೇ**—ಈ ಯಜ್ಞದಲ್ಲಿ । **ಈಳೇ**—ಸ್ತುತಿಸುತ್ತೇನೆ.

ಭಾವಾರ್ಥ

ಹವಿಸ್ಸಿನರೂಪವಾದ ಅನ್ನದಿಂದ ಉತ್ಪನ್ನನಾದವನೂ, ಅಂತರಿಕ್ಷದ ಸಮೀಪದಲ್ಲಿ ಅತಿಶಯವಾಗಿ ಪ್ರಕಾಶಿಸುವವನೂ, ಮೇಧಾವಿಗಳಾದ ಋತ್ವಿಕ್ಕುಗಳಿಂದ ನಿಷ್ಪಾದಿತನಾದವನೂ ಆದ ಅಗ್ನಿಯನ್ನು ಈ ಯಜ್ಞದಲ್ಲಿ ಸ್ತುತಿಸುತ್ತೇನೆ.

English translation

I adore at this sacrifice Agni the grandson of (sacrificial) food, shining above in the firmament, the creation of the wise.

### ವಿಶೇಷವಿಷಯಗಳು

**ಊರ್ಜೋನಪಾತಂ**—ಇಲ್ಲಿ ನಪಾತ್ ಎಂಬ ಪದವು ನಪ್ತೃ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಸಾಯಣರು ವಿವರಿಸಿ, ಅಗ್ನಿಯು **ಹವಿರ್ಲಕ್ಷಣೈರನ್ನೈಃ ಸಮಿಧ್ಯಮಾನತ್ವೇನ ಅನ್ನಸ್ಯ ಪುತ್ರಂ** । ಹವಿಸ್ಸಿನ ರೂಪದಿಂದ ಇರುವ ಅನ್ನಗಳಿಂದ ವೃದ್ಧಿಯನ್ನು ಹೊಂದುವುದರಿಂದ ಅಗ್ನಿಯು ಅನ್ನದ ಪುತ್ರನೆಂದು, ಒಂದು ವಿಧವಾದ ಅರ್ಥವನ್ನೂ **ಯದ್ವಾ ಯಶ್ಚಾನ್ನಾದಾಹುತಿರಾಹುತೇರಾದಿತ್ಯ ಆದಿತ್ಯಾದಗ್ನಿರಿತಿ**—ಅನ್ನದಿಂದ ಆಹುತಿಯೂ, ಆಹುತಿಯಿಂದ ಆದಿತ್ಯನೂ, ಆದಿತ್ಯನಿಂದ ಅಗ್ನಿಯೂ, ಉತ್ಪನ್ನವಾಗುವುದೆಂದೂ ಅರ್ಥವನ್ನು ವರ್ಣಿಸಿ, ಅನ್ನದಿಂದ ಅಗ್ನಿಯು ನಾಲ್ಕನೆಯವನಾಗುವ ಕಾರಣ **ಅನ್ನಸ್ಯ ಚತುರ್ಥಂ** ವಂಶದಲ್ಲಿ ಮೂಲಪುರುಷನಿಂದ ನಾಲ್ಕನೆಯವನು ನಪ್ತೃವಾಗಿರುವಂತೆ ಅನ್ನಕ್ಕೆ ಇವನು ನಾಲ್ಕನೆಯವನಾಗಿರುವನೆಂದು ವಿವರಿಸಿದ್ದಾರೆ.

**ಕವಿಕ್ರತುಂ**—ಕವಿ ಎಂಬ ಪದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. ಕವಿಶಬ್ದಕ್ಕೆ ಮೇಧಾವಿ ಎಂದು ಅರ್ಥವನ್ನು ವಿವರಿಸಿದೆ. ಅಧ್ವರ್ಯುವೇ ಮೊದಲಾದ ಮೇಧಾವಿಗಳಾವ ಋತ್ವಿಜರಿಂದ ಉತ್ಪನ್ನನಾಗುವನು ಆದ್ದರಿಂದ ಕವಿಕ್ರತುವಾಗಿರುವನು ಎಂಬ ಅರ್ಥವನ್ನು **ಮೇಧಾವಿನೋ ಅಧ್ವರ್ಯ್ವಾದಯಃ ಮಥನೇನ ಕರ್ತಾರೋ ಯಸ್ಯ** । **ಅಧ್ವರ್ಯ್ವಾದಿಭಿಃ ನಿಷ್ಪಾದ್ಯಮಾನಂ** ಎಂಬ ವ್ಯಾಖ್ಯಾನದಿಂದ ವರ್ಣಿಸಿದೆ.

**ಉಪ ದ್ಯವಿ ದೀದಿವಾಂಸಂ**—**ಅಂತರಿಕ್ಷಸಮೀಪೇ ಅತಿಶಯೇನ ದೀಪ್ಯಮಾನಂ** ಅಗ್ನಿಯು ಅಂತರಿಕ್ಷದ ಸಮೀಪದಲ್ಲಿ ಪ್ರಭೂತವಾದ ಕಾಂತಿಯಿಂದ ಬೆಳಗುತ್ತಿರುವನು ಎಂದು ಅರ್ಥವನ್ನು ಹೇಳಿದೆ.

ಈ ಪ್ರಕಾರವಾದ ಮಹಿಮೆಯಿಂದ ಕೂಡಿರುವ ಅಗ್ನಿಯನ್ನು (ಋತ್ವಿಜರಾದ ಅಧ್ವರ್ಯುವೇ ಮೊದಲಾದವರೂ) ಮಂತ್ರದ್ರಷ್ಟೃವಾದ ವಿಶ್ವಾಮಿತ್ರ ಋಷಿಯು ಯಜ್ಞದಲ್ಲಿ ಸ್ತುತಿರೂಪವಾದ ವಾಕ್ಕುಗಳಿಂದ ಸ್ತುತಿಮಾಡುವನೆಂದು ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಊರ್ಜಃ**—ಊರ್ಜ ಬಲೇ ಧಾತು. **ಭ್ರಾಜಭಾಸಧುರ್ವಿ**— (ಪಾ. ಸೂ. ೩-೨-೧೭೭) ಎಂಬುದರಿಂದ ಕ್ವಿಪ್ ಪ್ರತ್ಯಯ. ಊರ್ಜಯತಿ ಶರೀರಮಿತಿ ಊರ್ಕ್-ಅನ್ನಂ (ಶರೀರವನ್ನು ಬೆಳೆಸುವುದು ಅನ್ನ) ಷಷ್ಠೀಏಕವಚನಾಂತರೂಪ. ಏಕಾಚಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಸಾವೇಕಾಚಸ್ತೃ**— (ಪಾ. ಸೂ. ೬-೧-೧೬೮) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ನಪಾತ್**—**ನಭ್ರಾಣ್ನಪಾತ್**—(ಪಾ. ಸೂ. ೬-೩-೭೫) ಎಂಬುದರಿಂದ ಸಮಾಸದಲ್ಲಿ ನಲೋಪ ಬಾರದೆ ನಿಪಾತಿತವಾಗಿದೆ. ನಞ್ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ದ್ಯವಿ**—ದ್ಯುತ ದೀಪ್ತೌ ಧಾತು. ಇದಕ್ಕೆ ಔಣಾದಿಕವಾದ ಡುನ್ ಪ್ರತ್ಯಯ. ದ್ಯೋತತೇ ಕಿರಣಸಂಬಂಧಾದಿತಿ ದ್ಯುಃ ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ (ಉತ್) ಲೋಪ. ದ್ಯು ಎಂದು ರೂಪವಾಗುತ್ತದೆ. ಕಿರಣಸಂಬಂಧದಿಂದ ಪ್ರಕಾಶಿಸುವುದು ಆಕಾಶ. ನಿತ್ಸ್ವರದಿಂದ ಆದ್ಯುದಾತ್ತವಾಗುತ್ತದೆ. ಸಪ್ತಮೀಏಕವಚನಾಂತರೂಪ.

**ಈಳೇ**—ಈಡ ಸ್ತುತೌ ಧಾತು. **ಲಟ್** ಉತ್ತಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕವಿಕ್ರತುಂ**—ಕವಯಃ ಕ್ರತವಃ ಯಸ್ಯ ಸಃ ತಂ । ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ಈಳೇನ್ಯೋ ನಮಸ್ಯಸ್ತಿರಸ್ತಮಾಂಸಿ ದರ್ಶತಃ ।
ಸಮಗ್ನಿರಿಧ್ಯತೇ ವೃಷಾ ॥ ೧೩ ॥

ಪದಪಾಠಃ

ಈಳೇನ್ಯಃ । ನಮಸ್ಯಃ । ತಿರಃ । ತಮಾಂಸಿ । ದರ್ಶತಃ ।
ಸಂ । ಅಗ್ನಿಃ । ಇಧ್ಯತೇ । ವೃಷಾ ॥ ೧೩ ॥

ಸಾಯಣಭಾಷ್ಯಂ

ಈಳೇನ್ಯಃ ಸ್ತೋತೃಭಿರೀಡ್ಯೋಽತ ಏವ ನಮಸ್ಯಃ ಸರ್ವೈರ್ನಮಸ್ಕಾರ್ಯಸ್ತಮಾಂಸಿ ತಿರೋಧ್ವಾಂತಾನಿ ಸ್ವಪ್ರಭಾಭಿಸ್ತಿರಸ್ಕುರ್ವನ್ ದರ್ಶತಃ ಕಮನೀಯತಯಾ ಸರ್ವೈರ್ದರ್ಶನೀಯಃ । ತಾದೃಶೋಽಗ್ನಿರ್ವೃಷಾ ಯಜಮಾನಸ್ಯ ಕಾಮಾನಾಂ ವರ್ಷಿತಾ ಸಮಿಧ್ಯತೇ । ಆಹುತಿಪ್ರಕ್ಷೇಪೇಣ ಪ್ರಜ್ವಾಲ್ಯತೇ । ಉಕ್ತಾರ್ಥೇ ವಾಜಸನೇಯಕಂ । ಈಡೇನ್ಯೋ ಹ್ಯೇಷ ನಮಸ್ಯೋ ಹ್ಯೇಷ ತಿರಸ್ತಮಾಂಸಿ ದದೃಶೇ ಸಮಿದ್ಧ ಇತಿ ॥ ಈಳೇನ್ಯಃ । ಈಡ ಸ್ತುತೌ । ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ಕೇನ್ಯಃ । ಪ್ರತ್ಯಯಸ್ವರಃ । ನಮಸ್ಯಃ । ನಮಸ್ಯತೇರಚೋ ಯದಿತಿ ಯತ್ । ಅತೋಲೋಪಯಲೋಪೌ । ತಿತ್ಸ್ವರಿತಮಿತಿ ಸ್ವರಿತಃ । ದರ್ಶತಃ । ದೃಶಿರ್ ಪ್ರೇಕ್ಷಣೇ । ಅಸ್ಮಾದ್ಭೃಮೃದೃಶೀತ್ಯಾದಿನಾ ಕರ್ಮಣ್ಯತಚ್‌ಪ್ರತ್ಯಯಃ । ಚಿತ್ಸ್ವರಃ । ವೃಷಾ । ವೃಷು ಸೇಚನ ಇತ್ಯಸ್ಮಾತ್ಕನಿನ್ಯುವೃಷೀತ್ಯಾದಿನಾ ಕನಿನ್ । ಕಿತ್ತ್ವಾದಗುಣಃ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

**ಈಳೇನ್ಯಃ**—ಶ್ರೇಷ್ಠವಾದ ಸ್ತುತಿಗೆ ಅರ್ಹನೂ । **ನಮಸ್ಯಃ**—ಪೂಜಾರ್ಹನೂ । **ತಮಾಂಸಿ**—ಅಂಧಕಾರಗಳನ್ನು । **ತಿರಃ**—ದೂರಮಾಡತಕ್ಕವನೂ,। **ದರ್ಶತಃ**—ಆಕರ್ಷಕವಾದ ರೂಪವುಳ್ಳವನೂ ಆದ। **ಅಗ್ನಿಃ**—ಅಗ್ನಿಯು **ವೃಷಾ**—ಯಜಮಾನನ ಇಷ್ಟಾರ್ಥಗಳನ್ನು ಸುರಿಸುವವನಾಗಿ । **ಸಮಿಧ್ಯತೇ**—ಚೆನ್ನಾಗಿ ಪ್ರಜ್ವಲಿತನಾಗುತ್ತಾನೆ.

ಭಾವಾರ್ಥ

ಉತ್ತಮವಾದ ಸ್ತುತಿಗೆ ಅರ್ಹನೂ, ಪೂಜಾರ್ಹನೂ, ಅಂಧಕಾರಗಳನ್ನು ದೂರಮಾಡತಕ್ಕವನೂ, ಆಕರ್ಷಕವಾದ ರೂಪವುಳ್ಳವನೂ ಆದ ಅಗ್ನಿಯು ಯಜಮಾನನ ಇಷ್ಟಾರ್ಥಗಳನ್ನು ನೆರವೇರಿಸುವವನಾಗಿ ಪ್ರಜ್ವಲಿತನಾಗುತ್ತಾನೆ

English translation

Agni, who is to be worshipped with praise and with prostration, the dispeller of darkness, the beautiful, the showerer ( of benefits ) is kindled.

ವಿಶೇಷವಿಷಯಗಳು.

**ಈಳೇನ್ಯಃ**—ಸ್ತುತಿಮಾಡುವವರಿಂದ ಸ್ತುತಿಗಳಿಂದ ಅಗ್ನಿಯು ಸ್ತುತಿಮಾಡಲ್ಪಡುವವನು ಮತ್ತು **ನಮಸ್ಯಃ** ಎಲ್ಲರಿಗೂ ನಮಸ್ಕಾರಾರ್ಹನಾಗಿರುವನು, **ತಮಾಂಸಿ ತಿರಃ** ತನ್ನ ಕಾಂತಿಗಳಿಂದ ಅಂಧಕಾರವನ್ನು ನಾಶಮಾಡಿ, ಎಲ್ಲ ರಿಂದಲೂ ದೃಶ್ಯವಾಗಿರುವ ಕಾಂತಿಯುಕ್ತವಾದ ರೂಪದಿಂದ ದರ್ಶನೀಯನಾಗಿರುವನು ಎಂದು ಅಗ್ನಿಯ ಪ್ರಭಾವವೂ ಸ್ವರೂಪವೂ ಉಕ್ತವಾಗಿದೆ.

**ವೃಷಾ—ಯಜಮಾನಸ್ಯ ಕಾಮಾನಾಂ ವರ್ಷಿತಾ** । ನಿರುಕ್ತಕಾರರಿಂದ ಈ ಪದವು **ವೃಷಾ ವರ್ಷಿತಾ** (ನಿ. ೧೧–೪೮) ಎಂದು ವ್ಯಾಖ್ಯಾತವಾಗಿದೆ. ಸಾಯಣರು ಸ್ತೋತ್ರಗಳಿಂದ ಸ್ತುತ್ಯನಾಗಿರುವ, ಸರ್ವರಿಗೂ ನಮಸ್ಕಾರಾ ರ್ಹನಾದ, ತನ್ನ ತೇಜಸ್ಸುಗಳಿಂದ ಕಗ್ಗತ್ತಲೆಯನ್ನು ನಾಶಗೊಳಿಸುವ, ಸರ್ವರಿಗೂ ದರ್ಶನೀಯವಾದ ಆಕಾರವನ್ನು ಹೊಂದಿರುವ ಅಗ್ನಿಯು ಯಜಮಾನರ ಇಷ್ಟಾರ್ಥಗಳನ್ನು ಅವರವರ ಇಷ್ಟಾನುಸಾರವಾಗಿ ನೆರವೇರಿಸುವವನಾಗಿ ಯಜ- ಮಾನರಿಂದ ಆಹುತಿಗಳನ್ನು ಅರ್ಪಿಸುವುದರಿಂದ ಉದ್ದೀಪ್ತನಾಗುವನೆಂದು ಅರ್ಥವು ವಿವೃತವಾಗಿದೆ. ಮತ್ತು ಇದೇ ಅಭಿಪ್ರಾಯವನ್ನು ಬೋಧಿಸುವ ವಾಜಸನೇಯಶ್ರುತಿಯು—**ಈಡೇನ್ಯೋ ಹ್ಯೇಷ ನಮಸ್ಯೋ ಹ್ಯೇಷ ತಿರಸ್ತ- ಮಾಂಸಿ ದದೃಶೇ ಸಮಿದ್ಧಃ** ಎಂದು ಉದಾಹೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಈಳೇನ್ಯಃ**— ಈಡ ಸ್ತುತೌ ಧಾತು. **ಕೃತ್ಯಾರ್ಥೇತವೈಕೇನ್‌ಕೇನ್ಯತ್ವನಃ** ( ಪಾ. ಸೂ. ೩–೪–೧೪ ) ಎಂಬುದರಿಂದ ಕೇನ್ಯಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ನಮಸ್ಯಃ**—ನಮಸ್ಯ ಎಂಬ ಕ್ಯಜಂತ ಧಾತುವಿನ ಮೇಲೆ **ಅಚೋಯತ್** (ಪಾ. ಸೂ. ೩–೧–೯೭) ಎಂಬು ದರಿಂದ ಯತ್‌ಪ್ರತ್ಯಯ. **ಅತೋಲೋಪಃ** (ಪಾ. ಸೂ. ೬-೪.೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. **ಯಸ್ಯಹಲಃ** ಎಂಬುದರಿಂದ ಯಕಾರಕ್ಕೆ ಲೋಪ. ಪ್ರತ್ಯಯ ಕಿತ್ತಾದುದರಿಂದ **ತಿತ್‌ಸ್ವರಿತಂ** (ಪಾ. ಸೂ. ೬–೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ದರ್ಶತಃ**—ದೃಶಿರ್ ಪ್ರೇಕ್ಷಣೇ ಧಾತು. **ಭೃಮೃದೃಶಿ**—(ಉ. ಸೂ. ೩–೩೯೦) ಎಂಬುದರಿಂದ ಇದಕ್ಕೆ ಕರ್ಮಣಿಯಲ್ಲಿ ಅತಚ್ ಪ್ರತ್ಯಯ. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಚಿತಃ** (ಪಾ. ಸೂ. ೬–೧–೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವೃಷಾ**—ವೃಷು ಸೇಚನೇ ಧಾತು. **ಕನಿನ್‌ಯುವೃಷಿ**—(ಉ. ಸೂ. ೧–೧೫೬) ಎಂಬುದರಿಂದ ಕನಿನ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

**ವೃಷೋ ಅಗ್ನಿಃ ಸಮಿಧ್ಯತೇಽಶ್ವೋ ನ ದೇವವಾಹನಃ ।**
**ತಂ ಹವಿಷ್ಮಂತ ಈಳತೇ ॥ ೧೪ ॥**

ಪದಪಾಠಃ

ವೃಷೋ ಇತಿ । ಅಗ್ನಿಃ । ಸಂ । ಇಧ್ಯತೇ । ಅಶ್ವಃ । ನ । ದೇವವಾಹನಃ ।

ತಂ । ಹವಿಷ್ಮಂತಃ । ಈಳತೇ ॥ ೧೪ ॥

ಸಾಯಣಭಾಷ್ಯಂ

ವೃಷೋ ವೃಷ್ಯೈವ ಕಾಮಾನಾಂ ವರ್ಷಿತಾ ದೇವವಾಹನಃ। ದೇವಾನ್ ಹವೀಂಷಿ ವಾಹಯತಿ ಪ್ರಾಪಯತೀತಿ ದೇವವಾಹನಃ । ತತ್ರ ದೃಷ್ಟಾಂತಃ । ಅಶ್ವೋ ನೇತಿ । ಯಥಾಶ್ವೋ ರಾಜಾನಂ ವಾಹಯತಿ ಸ್ವಪುರಂ ಪ್ರಾಪಯತೀತಿ । ವಾಹನಮಶ್ವಃ । ತದ್ವತ್ ವಾಹನಭೂತೋ ಯೋಽಗ್ನಿಃ ಸಮಿಧ್ಯತೇ ಆಹುತಿಪ್ರದಾನೇನ ಸಮ್ಯಗ್ದೀಪ್ಯತೇ । ತಂ ತಾದೃಶಮಗ್ನಿಂ ಹವಿಷ್ಮಂತಃ ಸಂಭೃತಹವಿಷ್ಕಾ ಯಜಮಾನಾ ಈಳತೇ । ಕರ್ಮಸಿದ್ಧ್ಯರ್ಥಂ ಸ್ತುವಂತಿ ॥ ವೃಷಾ ಉ । ಗುಣಃ । ಉ ಇಾಮವಲಂಬ್ಯ ಪ್ರಗೃಹ್ಯಸಂಜ್ಞಾ । ದೇವವಾಹನಃ । ವಹ ಪ್ರಾಪಣ ಇತ್ಯಸ್ಮಾಣ್ಣ್ಯಂತಾತ್ಕರ್ತರಿ ಲ್ಯುಃ । ಲಿತ್ಸ್ವರಃ । ಸಮಾಸೇ ಕೃದುತ್ತರಪದಸ್ವರಃ ॥

ಪ್ರತಿಪದಾರ್ಥ

**ವೃಷೋ**—ಇಷ್ಟಾರ್ಥಗಳನ್ನು ನೆರವೇರಿಸುವವನೂ, । **ಅಶ್ವೋ ನ**—ಅಶ್ವವು ರಾಜನನ್ನು ವಹಿಸುವಂತೆ । **ದೇವವಾಹಃ**—ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ ಆದ । **ಅಗ್ನಿಃ**—ಅಗ್ನಿಯು । **ಸಮಿಧ್ಯತೇ**—ಪ್ರಜ್ವಲಿತನಾಗುತ್ತಾನೆ । **ತಂ**—ಅಂತಹ ಪೂಜ್ಯನಾದ ಅಗ್ನಿಯನ್ನು । **ಹವಿಷ್ಮಂತಃ**—ಹವಿಸ್ಸನ್ನು ಹೊಂದಿರತಕ್ಕ ಯಜಮಾನರು । **ಈಳತೇ**—ಸ್ತುತಿಸುತ್ತಾರೆ. ॥

ಭಾವಾರ್ಥ

ಇಷ್ಟಾರ್ಥಗಳನ್ನು ನೆರವೇರಿಸುವವನೂ, ಅಶ್ವವು ರಾಜನನ್ನು ವಹಿಸುವಂತೆ ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ ಆದ ಅಗ್ನಿಯು ಪ್ರಜ್ವಲಿತನಾಗುತ್ತಾನೆ. ಅಂತಹ ಪೂಜ್ಯನಾದ ಅಗ್ನಿಯನ್ನು ಹವಿಸ್ಸನ್ನು ಹೊಂದಿರತಕ್ಕ (ಸಿದ್ಧಪಡಿಸಿಕೊಂಡಿರುವ) ಯಜಮಾನರು ಸ್ತುತಿಸುತ್ತಾರೆ.

English translation

The offerers of oblations glorify that Agni who is the showerer (of benefits) and is the bearer of the offerings to the gods as a horse (bears his rider to his home).

ವಿಶೇಷವಿಷಯಗಳು

**ವೃಷೋ-ವೃಷೇವ ಕಾಮಾನಾಂ ವರ್ಷಿತಾ** । ಅಗ್ನಿಯು ಯಜಮಾನರ ಇಷ್ಟಗಳನ್ನು, ವೃಷ್ಟಿಯಲ್ಲಿ ಉದಕಗಳು ಪ್ರಭೂತವಾಗಿ ಸುರಿಯುವ ಹಾಗೆ ಅತಿಶಯವಾಗಿ ನೆರವೇರಿಸುವವನೆಂಬ ಅರ್ಥವನ್ನು ಸಾಯಣರು **ವೃಷಾ** ಪದದ

ಜೊತೆಯಲ್ಲಿ ಪ್ರಯುಕ್ತವಾಗಿರುವ ಉ ಎಂಬ ನಿಪಾತಕ್ಕೆ ಇವಾರ್ಥವನ್ನು ಹೇಳಿ ವಿವರಿಸಿದ್ದಾರೆ. ನಿರುಕ್ತಕಾರರು—ನಿಪಾತಗಳ ಅರ್ಥವನ್ನು ವಿಮರ್ಶೆಮಾಡಿ ವಿವರಿಸುವಾಗ **ಅಥಾಪ್ಯುಕಾರ ಏತಸ್ಮಿನ್ನೇವಾರ್ಥ ಉತ್ತರೇಣ । ಮೃಷೇಮೇ ವದಂತಿ ಸತ್ಯಮುತೇ ವಂದತೀತಿ । ಅಥಾಪಿ ಪದಪೂರಣ ಇದಮು ತದು** (ನಿ. ೧-೫) ಉ ಎಂಬ ನಿಪಾತವು ವಿನಿಗ್ರಹಾರ್ಥದಲ್ಲಿಯೂ, ಪದಪೂರಣರೂಪವಾದ ಅರ್ಥದಲ್ಲಿಯೂ ಪ್ರಯುಕ್ತವಾಗಿರುವುದು ಎಂದು ವಿಶೇಷಾರ್ಥದಪ್ರಯೋಗವನ್ನು ವಿವರಿಸಿ, ನಿಪಾತಗಳಿಗೆ **ಉಚ್ಚಾವಚೇಷ್ವರ್ಥೇಷು ನಿಪತಂತಿ । ಅಪ್ಯುಪಮಾರ್ಥೇಪಿ ಕರ್ಮೋಪಸಂಗ್ರಹಾರ್ಥೇಪಿ ಪದಪೂರಣಾಃ** (ನಿ. ೧-೪) ನಿಪಾತಗಳು ಅನೇಕವಿಧವಾದ ಅರ್ಥಗಳನ್ನು ಬೋಧಿಸುವವು. ಇವು ಉಪಮಾರ್ಥವನ್ನೂ ಸಮುಚ್ಚಯರೂಪವಾದ ಅರ್ಥವನ್ನೂ ಬೋಧಿಸುವುವು. ಪದಪೂರಣಾರ್ಥದಲ್ಲಿಯೂ ಪ್ರಯುಕ್ತವಾಗಿರುವುವು ಎಂದು ಸಾಮಾನ್ಯಾರ್ಥದಲ್ಲಿಯೂ ಪ್ರಯೋಗವನ್ನು ಪ್ರದರ್ಶಿಸಿದ್ದಾರೆ. ಇದನ್ನು ಅನುಸರಿಸಿ ಸಾಯಣರು ಇಲ್ಲಿ ಉಪಮಾರ್ಥದಲ್ಲಿ ಪ್ರಯೋಗವನ್ನು ಸಮರ್ಥನೆ ಮಾಡಿ, ಅರ್ಥವನ್ನು ವರ್ಣಿಸಿದ್ದಾರೆ.

**ಅಶ್ವೋ ನ ದೇವವಾಹನಃ—ಯಥಾ ಅಶ್ವೋ ರಾಜಾನಂ ವಾಹಯತಿ ಸ್ವಪುರಂ ಪ್ರಾಪಯತಿ ತದ್ವತ್ ದೇವಾನ್ ಹವೀಂಷಿ ಪ್ರಾಪಯತಿ ।** ಅಶ್ವವು ರಾಜನನ್ನು ಅವನ ನಗರಕ್ಕೆ ತಲಪಿಸುವ ಹಾಗೆ, ಅಗ್ನಿಯು ದೇವತೆಗಳ ಉದ್ದೇಶದಿಂದ ತನ್ನಲ್ಲಿ ಅರ್ಪಿತವಾಗಿರುವ ಹವಿಸ್ಸುಗಳನ್ನು ಆಯಾಯ ದೇವತೆಗಳಿಗೆ ತಲಪಿಸುವನು ಎಂದು ಅಶ್ವವನ್ನು ದೃಷ್ಟಾಂತವನ್ನಾಗಿ ಹೇಳಿರುತ್ತಾರೆ. ಇಲ್ಲಿ ನ ಎಂಬ ನಿಪಾತವು ಉಪಮಾರ್ಥದಲ್ಲಿ ಪ್ರಯುಕ್ತವಾಗಿವೆ ಎಂದು ವರ್ಣಿಸಿದ್ದಾರೆ.

**ಅಗ್ನಿಃ ಸಮಿಧ್ಯತೇ—ವಾಹನಭೂತೋ ಅಗ್ನಿಃ ಆಜ್ಯಾಹುತಿಪ್ರದಾನೇನ ಸಮ್ಯಕ್** ದೀಪ್ಯತೇ ಇಲ್ಲಿ ಅಗ್ನಿ ಶಬ್ದಕ್ಕೆ ದೇವವಾಹನನಾದ ಅಂದರೆ ಅಶ್ವದ ಹಾಗೆ, **ದೇವಾನಾಂ ಹವೀಂಷಿ ವಾಹಯತೀತಿ** ದೇವತೆಗಳ ಹವಿಸ್ಸುಗಳನ್ನು ಅವರಿಗೋಸ್ಕರವಾಗಿ ಒಯ್ಯುವವನು ಎಂದು ಅರ್ಥವನ್ನು ಹೇಳಿದೆ. ಈ ಅಗ್ನಿಯನ್ನು ಯಜಮಾನರು ಆಜ್ಯವೇ ಮೊದಲಾದ ಆಹುತಿಗಳನ್ನು ಅರ್ಪಿಸುವುದರಿಂದ ಉದ್ದೀಪನೆಮಾಡುವರೆಂದು ಅರ್ಥವು ವಿವೃತವಾಗಿದೆ.

**ಹವಿಷ್ಮಂತ ಈಳತೇ-ಸಂಭೃತಹವಿಷ್ಕಾಃ ಯಜಮಾನಾಃ ಕರ್ಮಸಿದ್ಧ್ಯರ್ಥಂ ಸ್ತುವಂತಿ** ಅಗ್ನಿಯನ್ನು ಯಜಮಾನರು ಹವಿಸ್ಸುಗಳನ್ನು ಸಿದ್ಧಪಡಿಸಿ ತಮ್ಮ ಕರ್ಮಗಳ ಸಿದ್ಧಿಯನ್ನು ಹೊಂದುವುದಕ್ಕಾಗಿ ಸ್ತುತಿಮಾಡುತ್ತಾರೆಂದು ಅರ್ಥವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ವೃಷೋ ಇತಿ**—ವೃಷ-ಉ ಎಂದಿರುವಾಗ **ಆದ್ಗುಣಃ** ಎಂಬುದರಿಂದ ಗುಣ. **ಉಞಃ** ಎಂಬುದರಿಂದ ಉಞಿಗೆ ಪ್ರಗೃಹಸಂಜ್ಞಾ ಇರುವುದರಿಂದ ಓ ಎಂಬಲ್ಲಿ ಉಞನ್ನು ಆಶ್ರಯಿಸಿ (ಏಕಾದೇಶಕ್ಕೆ ಪರಾದಿವದ್ಭಾವವನ್ನು ಆಶ್ರಯಿಸಿ) ಪದಕಾಲದಲ್ಲಿ ಪ್ರಗೃಹ್ಯಸಂಜ್ಞಾ ಬರುತ್ತದೆ. ಇದರಿಂದ ಅವಾದೇಶಾದಿ ಸಂಧಿಕಾರ್ಯಗಳಿಗೆ ಅವಕಾಶವಿಲ್ಲ.

**ದೇವವಾಹನಃ**—ವಹ ಪ್ರಾಪಣೇ ಧಾತು. **ಹೇತುಮತಿಚ** ಎಂಬುದರಿಂದ ಣಿಚ್. **ಅತ ಉಪಧಾಯಾಃ** ಎಂಬುದರಿಂದ ಧಾತುವಿನ ಉಪಧಾಸಕಾರಕ್ಕೆ ವೃದ್ಧಿ. ಣ್ಯಂತದಮೇಲೆ ಕರ್ತರಿಯಲ್ಲಿ ಲ್ಯು ಪ್ರತ್ಯಯ. **ಣೇರನಿಟ**—(ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಲ್ಯು ಪ್ರತ್ಯಯದಲ್ಲಿ ಉಳಿದಿರುವ ಯು ಎಂಬುದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ವೃಷ॑ಣಂ ತ್ವಾ ವ॒ಯಂ ವೃ॑ಷ॒ನ್ವೃಷ॑ಣಃ॒ ಸಮಿ॑ಧೀಮಹಿ ।
ಅಗ್ನೇ॒ ದೀದ್ಯ॑ತಂ ಬೃ॒ಹತ್ ॥ ೧೫ ॥

ಪದಪಾಠಃ

ವೃಷ॑ಣಂ । ತ್ವಾ॒ । ವ॒ಯಂ । ವೃ॒ಷ॒ನ್ । ವೃಷ॑ಣಃ । ಸಂ । ಇ॒ಧೀ॒ಮ॒ಹಿ॒ ।
ಅಗ್ನೇ॑ । ದೀದ್ಯ॑ತಂ । ಬೃ॒ಹತ್ ॥ ೧೫ ॥

ಸಾಯಣಭಾಷ್ಯಂ

ವೃಷನ್ ಕಾಮಾನಾಂ ವರ್ಷಿತರ್ಹೇ ಅಗ್ನೇ ವೃಷಣೋ ವೃಷಾಣೋ ಘೃತಾಜ್ಯಾಹುತೀನಾಂ ಸೇಕ್ತಾರೋ ವಯಂ ವೃಷಣಮಾಹುತಿದ್ವಾರೋದಕಸ್ಯ ಸೇಕ್ತಾರಂ । ತಥಾ ಚ ಸ್ಮೃತಿಃ । ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ । ಮನು. ೩-೭೬ । ಇತಿ । ದೀದ್ಯತಂ ದೀಪ್ಯಮಾನಂ ಬೃಹದತ ಏವ ಮಹಾಂತಂ ತಮಿಮುಮಗ್ನಿಂ ಸಮಿಧೀಮಹಿ । ಸಮ್ಯಗ್ದೀಪಯಾಮಃ । ಇಧೀಮಹಿ । ಞಿಇಂಧೀ ದೀಪ್ತಾವಿತ್ಯಸ್ಯ ಪ್ರಾರ್ಥನೇ ಲಿಙಿ ನಕಾರಲೋಪಶ್ಛಾಂದಸಃ । ನಿಘಾತಃ । ದೀದ್ಯತಂ । ದೀದೇತಿರ್ದೀಪ್ತಿಕರ್ಮಾ । ತಸ್ಯ ಶತರಿ ರೂಪಂ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ

ಪ್ರತಿಪದಾರ್ಥ

**ವೃಷನ್**—ಇಷ್ಟಾರ್ಥಗಳನ್ನು ನೆರವೇರಿಸುವ । **ಅಗ್ನೇ**—ಅಗ್ನಿಯೇ । **ವೃಷಣಃ**—ಆಜ್ಯಾಹುತಿಗಳ ಧಾರೆಯನ್ನು ಸುರಿಸತಕ್ಕ । **ವಯಂ**—ನಾವು । **ವೃಷಣಂ**—ವೃಷ್ಟಿರೂಪವಾದ ಉದಕವನ್ನು ಸುರಿಸುವವನೂ । **ದೀದ್ಯತಂ** ಪ್ರಕಾಶಮಾನನೂ । **ಬೃಹತ್**—ಅಧಿಕವಾದ ಮಹತ್ತುಳ್ಳವನೂ ಆದ । **ತ್ವಾ**—ನಿನ್ನನ್ನು । **ಸಮಿಧೀಮಹಿ**—ಪ್ರಜ್ವಲಿಸುವಂತೆ ಮಾಡುತ್ತೇವೆ.

ಭಾವಾರ್ಥ

ಇಷ್ಟಾರ್ಥಗಳನ್ನು ನೆರವೇರಿಸುವ ಎಲೈ ಅಗ್ನಿಯೇ, ಆಜ್ಯಾಹುತಿಗಳನ್ನು ಅರ್ಪಿಸುವ ನಾವು ವೃಷ್ಟಿರೂಪವಾದ ಉದಕವನ್ನು ಸುರಿಸುವವನೂ ಪ್ರಕಾಶಮಾನನೂ ಅಧಿಕವಾದ ಮಹತ್ತುಳ್ಳವನೂ ಆದ ನಿನ್ನನ್ನು ಪ್ರಜ್ವಲಿಸುವಂತೆ ಮಾಡುತ್ತೇವೆ.

English translation

Showerer ( of benefits ) we profusely offering ( oblations ) kindle you, mighty and resplendent Agni; you are the sender of showers.

ವಿಶೇಷವಿಷಯಗಳು

**ವೃಷನ್**—ಈ ಪದದಿಂದ ಅಗ್ನಿಯನ್ನು ಸಂಬೋಧಿಸಿ, ಅಗ್ನಿಯು ಯಜಮಾನರ ಇಷ್ಟಗಳನ್ನು ನೆರವೇರಿಸುವವನೆಂದು ಅರ್ಥವನ್ನು ವಿವರಿಸಿದೆ.

**ವೃಷಣಃ—ವೃಷಾಣಃ ಘೃತಾಜ್ಯಾಹುತೀನಾಂ ಸೇಕ್ತಾರಃ** ದೇವತೆಗಳ ಉದ್ದೇಶದಿಂದ ಉದಕ, ಆಜ್ಯ ಎಂಬಿವೇಮೊದಲಾದ ಹವಿಸ್ಸುಗಳನ್ನು ಅಗ್ನಿಯಲ್ಲಿ ಅರ್ಪಿಸುವ ಯಜಮಾನರು ಎಂದು ಅರ್ಥವನ್ನು ವರ್ಣಿಸಿದೆ.

**ವೃಷಣಂ—ಆಹುತಿದ್ವಾರಾ ಉದಕಸ್ಯ ಸೇಕ್ತಾರಂ ।** ಅಗ್ನಿಯು ತನ್ನಲ್ಲಿ ಅರ್ಪಿತವಾಗುವ ಹವಿಸ್ಸುಗಳ ಮೂಲಕವಾಗಿ ವೃಷ್ಟಿಯನ್ನು ಉಂಟುಮಾಡುವವನೆಂದು ಅರ್ಥವನ್ನು ವಿವರಿಸಿ,

**ಅಗ್ನೌ ಪ್ರಾಸ್ತಾಹುತಿಸ್ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥** (ಮನು ೩-೭೬)

ಅಗ್ನಿಯಲ್ಲಿ ಅರ್ಪಿತವಾದ ಹವಿಸ್ಸು ಆದಿತ್ಯನಲ್ಲಿ ಸೇರಿ, ಆದಿತ್ಯನಿಂದ ವೃಷ್ಟಿಯೂ, ವೃಷ್ಟಿಯಿಂದ ಧಾನ್ಯಗಳು ಬೆಳೆಯುವುದರಿಂದ ಅನ್ನಾಭಿವೃದ್ಧಿಯೂ, ಅನ್ನಾಭಿವೃದ್ಧಿಯಿಂದ ಪ್ರಜೆಗಳೂ ಉತ್ಪನ್ನರಾಗುವರು ಎಂದು ಅರ್ಥವನ್ನು ಬೋಧಿಸುವ ಮನುಸ್ಮೃತಿಯ ವಚನವನ್ನೂ ಉದಹರಿಸಿ, ಅಗ್ನ್ಯಾದಿತ್ಯರಿಗೆ ತಾದಾತ್ಮ್ಯವನ್ನು ಹೇಳುವುದರಿಂದ ಅಗ್ನಿಯು ವೃಷ್ಟಿಪ್ರದನಾಗಿರುವನೆಂದು ವಿವರಿಸಿದೆ.

**ದೀದ್ಯತಂ ಬೃಹತ್ ಸಮಧೀಮಹಿ—ದೀಪ್ಯಮಾನಂ ಮಹಾಂತಂ ಅಗ್ನಿಂ ಸಮ್ಯಕ್ ದೀಪಯಾಮಃ** ವೃಷ್ಟಿಪ್ರದನಾಗಿರುವ, ಯಜಮಾನರ ಇಷ್ಟಗಳನ್ನು ಸಾಧಿಸಿಕೊಡುವ, ಕಾಂತಿಗಳಿಂದ ಬೆಳಗುತ್ತಿರುವ, ಪ್ರಭೂತವಾದ ಮಾಹಾತ್ಮ್ಯವುಳ್ಳವನಾದ ಅಗ್ನಿಯನ್ನು ಯಜಮಾನರಾದ ನಾವು ಆಹುತಿಗಳನ್ನು ಅರ್ಪಿಸುವುದರಿಂದ ಉದ್ದೀಪ್ತನನ್ನಾಗಿ ಮಾಡುತ್ತೇವೆ ಎಂದು ಆಶಂಸನೆಯು ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ಇಧೀಮಹಿ**—ಞಿಇಂಧೀ ದೀಪ್ತೌ. ಧಾತು. **ವಿಧಿನಿಮಂತ್ರ**—(ಪಾ. ಸೂ. ೩-೩-೧೬೧) ಎಂಬುದರಿಂದ ಪ್ರಾರ್ಥನಾರ್ಥ ತೋರುವಾಗ ಲಿಙ್. ಉತ್ತಮ ಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಅದಕ್ಕೆ ಸೀಯುಟಾಗಮ. ಛಾಂದಸವಾಗಿ ಧಾತುವಿನ ಉಪಧಾ ನಕಾರಕ್ಕೆ ಲೋಪ. **ಲಿಙಃ ಸಲೋಪೋನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಸೀಯುಟಿನ ಸಕಾರಕ್ಕೆ ಲೋಪ. **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಲೋಪ. ಇಧೀಮಹಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೀದ್ಯತಂ**—ಇದು ದೀಪ್ತ್ಯರ್ಥದಲ್ಲಿ ಪಠಿತವಾದ ಧಾತು. ಲಟಿಗೆ ಶತ್ರಾದೇಶ. ಜಕ್ಷಿತ್ಯಾದಿಯಲ್ಲಿ ಪಠಿತವಾದುದರಿಂದ ಅಭ್ಯಸ್ತಸಂಜ್ಞಾ ಬರುತ್ತದೆ. **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

---

# ಇಪ್ಪತ್ತೆಂಟನೆಯ ಸೂಕ್ತವು

**ಅಗ್ನೇ ಜುಷಸ್ವೇತಿ ಷಡೃಚಂ ಷೋಡಶಂ ಸೂಕ್ತಂ ವೈಶ್ವಾಮಿತ್ರಮಾಗ್ನೇಯಂ । ಅತ್ರಾನುಕ್ರಮಣಿಕಾ । ಅಗ್ನೇ ಜುಷಸ್ವ ಷಟ್ ತೃತೀಯೊದ್ಯುಷ್ಣಿಕ್ ತ್ರಿಷ್ಟುಬ್ಜಗತ್ಯ ಇತಿ । ಪೂರ್ವಸೂಕ್ತೇ ಗಾಯತ್ರಂ ತ್ವಿತ್ಯುಕ್ತತ್ವಾದೇತದಪಿ ಗಾಯತ್ರಂ । ತೃತೀಯಾ ತೂಷ್ಣಿಕ್ ಚತುರ್ಥೀ ತ್ರಿಷ್ಟುಪ್ ಪಂಚಮೀ ಜಗತೀ ॥ ಅಗ್ನೇ ಜುಷಸ್ವೇತಿ ಸವನೀಯಪುರೋಡಾಶೇ ಸ್ವಿಷ್ಟಕೃತಃ ಪ್ರಾತಃಸವನೀಯಾನುವಾಕ್ಯಾ । ಸೂತ್ರಿತಂ ಚ । ಅಥ ಸ್ವಿಷ್ಟಕೃತೋಽಗ್ನೇ ಜುಷಸ್ವ ನೋ ಹವಿಃ । ಆ ೫-೪ । ಇತಿ ॥ ಅತಿರಾತ್ರ ಆಶ್ವಿನಶಸ್ತ್ರೇ ಪರಿಹಿತೇ ಸತಿ ಚಮಸಗಣೈಃ ಸಹಾಶ್ವಿನೋರ್ದ್ವಿಕಪಾಲಃ ಪುರೋಡಾಶಃ ಸರ್ವಹುತೋ ಹೋತವ್ಯಃ । ಯದಿ ಪುರೋಡಾಶಮವಶೇಷ್ಯ ಸ್ವಿಷ್ಟಕೃತಂ ಕುರ್ಯುಸ್ತಸ್ಯ ಸ್ವಿಷ್ಟಕೃತಃ ಪುರೋಳಾ ಅಗ್ನ ಇತ್ಯೇಷಾ ಯಾಜ್ಯಾ । ಯದ್ಯೇತಸ್ಯ ಪುರೋಡಾಶಸ್ಯ ಸ್ವಿಷ್ಟಕೃತಾ ಚರೇಯುಃ ಪುರೋಳಾ ಅಗ್ನೇ ಪಚತಃ । ಆ. ೬-೫ । ಇತಿ ಸೂತ್ರಿತಂ ॥ ಮಾಧ್ಯಂದಿನೇ ಸವನೇ ಸವನೀಯಪುರೋಡಾಶೇ ಸ್ವಿಷ್ಟಕೃತೋಽನುವಾಕ್ಯಾ ಮಾಧ್ಯಂದಿನೇ ಸವನ ಇತ್ಯೇಷಾ । ಸೂತ್ರಿತಂ ಚ । ಅಗ್ನೇ ಜುಷಸ್ವ ನೋ ಹವಿರ್ಮಾಧ್ಯಂದಿನೇ ಸವನೇ ಜಾತವೇದಃ ಆ. ೫-೪ । ಇತಿ ॥ ತೃತೀಯಸವನೇ ಸವನೀಯಪುರೋಡಾಶಸ್ಯ ಸ್ವಿಷ್ಟಕೃತೋಽನುವಾಕ್ಯಾಗ್ನೇ ತೃತೀಯೇ ಸವನ ಇತ್ಯೇಷಾ। ಸೂತ್ರಿತಂ ಚ।ಅಗ್ನೇ ತೃತೀಯೇ ಸವನೇ ಹಿ ಕಾನಿಷ ಇತ್ಯನುಸವನಮನುವಾಕ್ಯಾಃ। ಆ. ೫-೪ । ಇತಿ ॥ ಆಶ್ವಿನಪುರೋಡಾಶಸ್ಯ ಸ್ವಿಷ್ಟಕೃತೋ ಯಾಜ್ಯಾಗ್ನೇ ವೃಧಾನ ಇತ್ಯೇಷಾ । ಸೂತ್ರಿತಂ ಚ । ಅಗ್ನೇ ವೃಧಾನ ಆಹುತಿಮಿತಿ ಸಂಯಾಜ್ಯೇ । ಆ. ೬-೫ ಇತಿ ॥**

**ಅನುವಾದವು— ಅಗ್ನೇ ಜುಷಸ್ವ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ— **ಅಗ್ನೇ ಜುಷಸ್ವ ಷಟ್ ತೃತೀಯೊದ್ಯುಷ್ಣಿಕ್‌ತ್ರಿಷ್ಟುಬ್ಜಗತ್ಯಃ** ಎಂದು ಹೇಳಿರುವುದು. ಹಿಂದಿನ ಸೂಕ್ತದ ವಿಷಯದಲ್ಲಿ **ಗಾಯತ್ರಂ ತು** ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದರಿಂದ ಈ ಸೂಕ್ತವೂ ಗಾಯತ್ರೀಛಂದಸ್ಕವು. ಆದರೆ ಈ ಸೂಕ್ತದ ಮೂರನೆಯ ಋಕ್ಕು ಉಷ್ಣಿಕ್‌ಛಂದಸ್ಕವು; ನಾಲ್ಕನೆಯದು ತ್ರಿಷ್ಟುಪ್ ಛಂದಸ್ಕವು ; ಐದನೆಯದು ಜಗತೀಛಂದಸ್ಕವು. **ಅಗ್ನೇ ಜುಷಸ್ವ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಸವನೀಯಪುರೋಡಾಶದ ಸ್ವಿಷ್ಟಕೃದ್ಧೋಮದಲ್ಲಿ ಪ್ರಾತಃಸವನಕಾಲದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ – **ಅಥ ಸ್ವಿಷ್ಟಕೃತೋಽಗ್ನೇ ಜುಷಸ್ವ ನೋ ಹವಿಃ** ಎಂಬ ಸೂತ್ರದಿಂದ (ಆ. ೫-೪) ವಿವೃತವಾಗಿರುವುದು: ಅತಿರಾತ್ರವೆಂಬ ಯಾಗದಲ್ಲಿ ಆಶ್ವಿನಶಸ್ತ್ರಮಂತ್ರಪಠನಮಾಡಿದನಂತರ ಚಮಸಗಳಿಂದ ಅಶ್ವಿನೀ ದೇವತೆಗಳನ್ನುದ್ದೇಶಿಸಿ ಎರಡು ಕಪಾಲಗಳಲ್ಲಿ ಪಕ್ವವಾದ ಪುರೋಡಾಶವು ಹೋಮಮಾಡಲ್ಪಡಬೇಕು. ಆಗ ಹೋಮ ಮಾಡಿ ಉಳಿದ ಪುರೋಡಾಶವನ್ನು ಸ್ವಿಷ್ಟಕೃದ್ಧೋಮಕ್ಕಾಗಿ ಉಪಯೋಗಿಸಬೇಕು. ಆ ಸ್ವಿಷ್ಟಕೃದ್ಧೋಮದಲ್ಲಿ **ಪುರೋಳಾ ಅಗ್ನೇ** (ಈ ಸೂಕ್ತದ ೨ನೆಯ ಋಕ್ಕು) ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ– **ಯದ್ಯೇತಸ್ಯ ಪುರೋಡಾಶಸ್ಯ ಸ್ವಿಷ್ಟಕೃತಾ ಚರೇಯುಃ ಪುರೋಳಾ ಅಗ್ನೇ ಪಚತಃ** ಎಂಬ ಸೂತ್ರದಿಂದ (ಆ. ೫-೫) ವಿವೃತವಾಗಿರುವುದು. ಮಾಧ್ಯಂದಿನಸವನದಲ್ಲಿಯೂ ಸವನೀಯಪುರೋಡಾಶದ ಸ್ವಿಷ್ಟಕೃದ್ಧೋಮದಲ್ಲಿ– **ಮಾಧ್ಯಂದಿನೇ ಸವನೇ** (ಈ ಸೂಕ್ತದ ೪ ನೆಯ ಋಕ್ಕು) ಎಂಬ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಅಗ್ನೇ ಜುಷಸ್ವ ನೋ ಹವಿರ್ಮಾಧ್ಯಂದಿನೇ**

**ಸವನೇ ಜಾತವೇದಃ** ಎಂಬ ಸೂತ್ರದಿಂದ (ಆ ೫-೪) ವಿವೃತವಾಗಿರುವುದು. ತೃತೀಯಸವನದಲ್ಲಿಯೂ ಸವನೀಯ ಪುರೋಡಾಶದ ಸ್ವಿಷ್ಟಕೃದ್ಧೋಮದಲ್ಲಿ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ-**ಅಗ್ನೇ ತೃತೀಯಸವನೇ ಹಿ ಕಾನಿಷ ಇತ್ಯನುಸವನಮನುವಾಕ್ಯಾಃ** ಎಂಬ ಸೂತ್ರದಿಂದ ( ಆ. ೫-೪) ವಿವೃತವಾಗಿರುವುದು; ಮತ್ತು ಅಶ್ವಿನೀದೇವತೆಗಳನ್ನುದ್ದೇಶಿಸಿ ಮಾಡುದ ಪುರೋಡಾಶಹೋಮದ ಸ್ವಿಷ್ಟಕೃದ್ಧೋಮದಲ್ಲಿ **ಅಗ್ನೇ ವೃಧಾನಃ** (ಈ ಸೂಕ್ತದ ೬ನೇ ಋಕ್ಕು) ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಅಗ್ನೇ ವೃಧಾನ ಆಹುತಿಮಿತಿ ಸಂಯಾಜ್ಯೇ** ಎಂಬ ಸೂತ್ರದಿಂದ (ಆ. ೬-೫ ವಿವೃತವಾಗಿರುವುದು.

## ಸೂಕ್ತ—೨೮

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೮ ॥

ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೩೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬

ಋಷಿಃ—ವಿಶ್ವಾಮಿತ್ರಃ ॥

ದೇವತಾ—ಅಗ್ನಿಃ ॥

ಛಂದಃ—೧, ೨, ೬ ಗಾಯತ್ರೀ । ೩ ಉಷ್ಣಿಕ್ । ೪ ತ್ರಿಷ್ಟುಪ್ । ೫. ಜಗತೀ ॥

ಸಂಹಿತಾಪಾಠಃ

ಅಗ್ನೇ ಜುಷಸ್ವ ನೋ ಹವಿಃ ಪುರೋಳಾಶಂ ಜಾತವೇದಃ ।

ಪ್ರಾತಃಸಾವೇ ಧಿಯಾವಸೋ ॥ ೧ ॥

ಪದಪಾಠಃ

ಅಗ್ನೇ । ಜುಷಸ್ವ । ನಃ । ಹವಿಃ । ಪುರೋಳಾಶಂ । ಜಾತಽವೇದಃ ।

ಪ್ರಾತಃಽಸಾವೇ । ಧಿಯಾವಸೋ ಇತಿ ಧಿಯಾಽವಸೋ ॥ ೧ ॥

ಸಾಯಣಭಾಷ್ಯಂ

ವಿಶ್ವಾಮಿತ್ರಃ ಸ್ತೌತಿ । ಜಾತವೇದಃ ಜಾತಪ್ರಜ್ಞ ಧಿಯಾವಸೋ । ಧಿಯಾ ಸ್ತೋತ್ರೇಣ ವಸು ಧನಂ ಯಸ್ಮಾದ್ಭವತಿ ಸೋಽಯಂ ಧಿಯಾವಸುಃ । ತಸ್ಯ ಸಂಬುದ್ಧಿಃ । ಕರ್ಮಾನುರೂಪಧನಪ್ರದ ಹೇ ಅಗ್ನೇ ಪ್ರಾತಃಸಾವೇಽಗ್ನಿಷ್ಟೋಮೇ ಪ್ರಾತಃಸವನೇ ನೋಽಸ್ಮತ್ಸಂಬಂಧಿಪುರೋಡಾಶಂ ಪುರೋಡಾಶಾಖ್ಯಂ ಹವಿರ್ಜುಷಸ್ವ । ಸೇವಸ್ವ ॥ ಜುಷಸ್ವ । ಜುಷೀಪ್ರೀತಿಸೇವನಯೋರಿತ್ಯಸ್ಮಾಲ್ಲೋಟಿ ರೂಪಂ । ಆಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪಾದಾದಿತ್ವಾದನಿಘಾತಃ। ಪ್ರಾತಃಸಾವೇ। ಷುಞ್ ಅಭಿಷವೇ । ಸವನಂ ಸಾವಃ

ಭಾವೇ ಘಞ್ | ಥಾಥಘಞ್ಕ್ತಾಜಬಿತ್ರಕಾಣಾಮಿತ್ಯಂತೋದಾತ್ತತ್ವಂ | ಧಿಯಾವಸೋ | ವಿಭಕ್ತ್ಯ-ಲೋಪಶ್ಛಾಂದಸಃ | ಆಮಂತ್ರಿತತ್ವಾನ್ನಿಘಾತಃ ||

ಪ್ರತಿಪದಾರ್ಥ

ಜಾತವೇದಃ—ಸಕಲವನ್ನೂ ಉತ್ಪನ್ನವಾದೊಡನೆಯೇ ತಿಳಿಯುವವನೂ | ಧಿಯಾವಸೋ—ಕರ್ಮಾನು ರೂಪವಾದ ಫಲವನ್ನು ಕೊಡುವವನೂ ಆದ | ಅಗ್ನೇ—ಅಗ್ನಿಯೇ, | ಪ್ರಾತಃಸಾವೇ — ಅಗ್ನಿಷ್ಟೋಮರೂಪವಾದ ಪ್ರಾತಃಸವನದಲ್ಲಿ | ನಃ—ನಮ್ಮಿಂದ ದತ್ತವಾದ | ಪುರೋಡಾಶಂ—ಪುರೋಡಾಶರೂಪವಾದ | ಹವಿಃ—ಹವಿಸ್ಸನ್ನು ಜುಷಸ್ವ—ಸೇವಿಸು.

ಭಾವಾರ್ಥ

ಜಾತಪ್ರಜ್ಞನೂ ಕರ್ಮಾನುರೂಪವಾದ ಫಲವನ್ನು ಕೊಡುವವನೂ ಆದ ಎಲೈ ಅಗ್ನಿಯೇ, ಅಗ್ನಿಷ್ಟೋಮ ರೂಪವಾದ ಪ್ರಾತಃಸವನದಲ್ಲಿ ನಮ್ಮಿಂದ ದತ್ತವಾದ ಪುರೋಡಾಶವನ್ನು ಸ್ವೀಕರಿಸಿ ಸೇವಿಸು.

English translation

Agni, by whom all is known, you reward pious acts with wealth; accept our cakes offered with butter at the morning worship.

ವಿಶೇಷವಿಷಯಗಳು

ಧಿಯಾವಸೋ—ಧಿಯಾ ಸ್ತೋತ್ರೇಣ ವಸು ಧನಂ ಯಸ್ಮಾತ್ ಭವತಿ ಸೋಽಯಂ ಧಿಯಾವಸುಃ ಸ್ತೋತ್ರಮಾಡುವುದರಿಂದ ಅಗ್ನಿಯು ಧನವನ್ನು ಅವರವರ ಕರ್ಮಾನುಗುಣವಾಗಿ ಅನುಗ್ರಹಿಸುವನು ಎಂದು ಅರ್ಥವನ್ನು ವಿವರಿಸಿ, ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ. ನಿರುಕ್ತಕಾರರು—

ಪಾವಕಾ ನ ಸ್ಸರಸ್ವತೀ ವಾಜೇಭಿರ್ವಾಜಿನೀವತೀ |
ಯಜ್ಞಂ ವಷ್ಟು ಧಿಯಾವಸುಃ ||　　(ಋ. ಸಂ. ೧-೩-೧೦)

ಈ ಋಕ್ಕಿನಲ್ಲಿರುವ ಧಿಯಾವಸುಪದಕ್ಕೆ ಕರ್ಮವಸುಃ ಎಂದು ಅರ್ಥವನ್ನು ವರ್ಣಿಸಿದ್ದಾರೆ. ದುರ್ಗಾಚಾರ್ಯರು ಕರ್ಮಧನ ಎಂಬ ಅರ್ಥವನ್ನು ಹೇಳಿದ್ದಾರೆ. ಸಾಯಣರು ಧೀ ಶಬ್ದವು ಕರ್ಮ ಅಥವಾ ಪ್ರಜ್ಞಾ ಎಂಬ ಎರಡ ರ್ಥದಲ್ಲಿಯೂ ಪ್ರಯುಕ್ತವಾಗಿರುವುದರಿಂದ ಪ್ರಜ್ಞಾರೂಪವಾದ ಸ್ತೋತ್ರ ಎಂದು ಅರ್ಥವನ್ನು ವಿವರಿಸಿ, ಕರ್ಮಾನುರೂಪ ಧನಪ್ರದನೆಂದು ಅಗ್ನಿಯ ಮಾಹಾತ್ಮ್ಯವನ್ನು ವರ್ಣಿಸಿದ್ದಾರೆ.

ಜಾತವೇದಃ—ಜಾತವೇದಶ್ಶಬ್ದಕ್ಕೆ ನಾಲ್ಕು ವಿಧವಾದ ಅರ್ಥಗಳು ನಿರುಕ್ತಕಾರರಿಂದ ವಿವೃತವಾಗಿರುವುದ ರಿಂದ ಇಲ್ಲಿ ಜಾತಪ್ರಜ್ಞನೆಂಬ ಅರ್ಥವನ್ನು ವಿವರಿಸಿ, ಈ ಪದದಿಂದ ಅಗ್ನಿಯು ಸಂಬೋಧಿತನಾಗಿರುವನೆಂದೂ, ಈ ಅಗ್ನಿಯು, ಪ್ರಾತಃಸ್ಸಾವೇ ನಃ ಪುರೋಡಾಶಂ ಹವಿಃ ಜುಷಸ್ವ ಯಜಮಾನರು ಆಚರಿಸುವ ಅಗ್ನಿಷ್ಟೋಮಯಾಗ ದಲ್ಲಿ ಪ್ರಾತಸ್ಸವನಕಾಲದಲ್ಲಿ ಅರ್ಪಿಸುವ ಪುರೋಡಾಶವೆಂಬ ಹವಿಸ್ಸನ್ನು ಸ್ವೀಕರಿಸಲಿ ಎಂಬ ಆಶಂಸನೆಯು ವರ್ಣಿತ ವಾಗಿದೆ ಎಂಬ ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

ಜುಷಸ್ವ—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್‌ಮಧ್ಯಮಪುರುಷಏಕವಚನಾಂತರೂಪ. ಇದರ ಹಿಂದೆ ಆಮಂತ್ರಿತಸಂಜ್ಞೆಯುಳ್ಳ ಅಗ್ನೇ ಎಂಬ ಪದವಿದ್ದರೂ ಅದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಪಾದಾದಿ

ಯಲ್ಲಿ ಬಂದಂತಾಗುತ್ತದೆ. ಆದುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಶ ವಿಕರಣಸ್ವರ ಉಳಿಯುತ್ತದೆ.

**ಪ್ರಾತಃಸಾವೇ**—ಷೂಞ್ ಅಭಿಷವೇ ಧಾತು. ಸವನಂ ಸವಃ. ಭಾವಾರ್ಥದಲ್ಲಿ ಘಞ್ ಪ್ರತ್ಯಯ. **ಅಚೋ ಞ್ಣಿತಿ** ಎಂಬುದರಿಂದ ಧಾತುವಿನ ಉಕಾರಕ್ಕೆ ವೃದ್ಧಿ. ಅವಾದೇಶ. **ಥಾಥಘಞ್ಕ್ತಾಜಬಿತ್ರಕಾಣಾಂ** (ಪಾ. ಸೂ. ೬-೨-೧೪೪) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಸಪ್ತಮಿಾಏಕವಚನಾಂತರೂಪ.

**ಧಿಯಾವಸೋ**—ಧಿಯಾ ವಸು ಯಸ್ಯ ಸಃ ಧಿಯಾವಸುಃ ಛಾಂದಸವಾಗಿ ತೃತೀಯಾವಿಭಕ್ತಿಗೆ ಲೋಪ. ಬರುವುದಿಲ್ಲ. **ಹ್ರಸ್ವಸ್ಯ ಗುಣಃ** ಎಂಬುದರಿಂದ ಸಂಬುದ್ಧಿಯಲ್ಲಿ ಗುಣ. **ಆಮಂತ್ರಿತಸ್ಯ ಚ** (ಪಾ.ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

**ಪುರೋಳಾ ಅಗ್ನೇ ಪಚತಸ್ತುಭ್ಯಂ ವಾ ಘಾ ಪರಿಷ್ಕೃತಃ ।**
**ತಂ ಜುಷಸ್ವ ಯವಿಷ್ಠ್ಯ ॥ ೨ ॥**

ಪದಪಾಠಃ

**ಪುರೋಳಾಃ । ಅಗ್ನೇ । ಪಚತಃ । ತುಭ್ಯಂ । ವಾ । ಘ । ಪರಿಽಕೃತಃ ।**
**ತಂ । ಜುಷಸ್ವ । ಯವಿಷ್ಠ್ಯ ॥ ೨ ॥**

ಸಾಯಣಭಾಷ್ಯಂ

**ಯವಿಷ್ಠ್ಯ ಯುವತಮ ಹೇ ಅಗ್ನೇ ಯಃ ಪುರೋಳಾಃ । ಪುರೋಡಾಶಂತೇಽಧ್ವರ್ಯ್ವೋದಯ ಏನಮಿತಿ ಪುರೋಡಾಃ ಪುರೋಡಾಶಃ । ಪಚತಃ ಕಪಾಲಯೋಃ ಪಕ್ವೋಽಸ್ತಿ । ಸ ಚ ತುಭ್ಯಂ ತ್ವದರ್ಥಂ ಪರಿಷ್ಕೃತೋ ವಾ ಘ ಪರ್ಯಗ್ನಿಕರಣಾದಿಭಿರಲಂಕೃತಃ ಖಲು । ತಮಿಮಂ ಪುರೋಡಾಶಂ ಜುಷಸ್ವ । ಸೇವಸ್ವ ॥ ಪುರೋಳಾಃ । ದಾಶೃ ದಾನ ಇತ್ಯಸ್ಮಾತ್ಪುರಸ್ಪೂರ್ವಾನ್ಮಂತ್ರೇ ಶ್ವೇತವಹೋಕ್ಥಶಸ್ಪುರೋ- ಡಾಶೋ ಣ್ವಿನ್ । ಪಾ. ೩-೨-೭೧ । ಇತಿ ಕರ್ಮಣಿ ಣ್ವಿನಿ ಕೃತೇ ಶ್ವೇತವಹಾದೀನಾಂ ಡಸ್ಪದಸ್ಯ । ಪಾ. ೩- ೨-೭೧-೧ । ಇತಿ ಡಸ್ಪ್ರತ್ಯಯೇ ಚ ಕೃತೇ ಅವಯಾಃ ಶ್ವೇತವಾಃ ಪುರೋಡಾಶಾಶ್ಚೇತಿ ನಿಪಾತನಾದ್ದಕಾ- ರಸ್ಯ ಡತ್ವಂ । ಪುರೋಡಾಶಂತೆ ಏನಮಿತಿ ಪುರೋಡಾಃ ಪುರೋಡಾಶಃ । ಡಕಾರಸ್ಯ ಳಕಾರೋ ಬಹ್ವೃಚ- ಸಾಂಪ್ರದಾಯಿಕಃ । ಕೃದುತ್ತರಪದಸ್ವರಃ । ಪಚತಃ । ಡುಪಚಷ್ ಪಾಕ ಇತ್ಯಸ್ಮಾದ್ಭೃಮೃದೃಶೀತ್ಯಾದಿನಾ ಕರ್ಮಣ್ಯತಚ್‌ಪ್ರತ್ಯಯಃ । ಪಚ್ಯತೇಽಸಾವಿತಿ ಪಚತಃ ಪಕ್ವಃ । ಚಿತ್ಸ್ವರಃ । ಘಾ । ಋಚಿತುನುಘೇತ್ಯಾ- ದಿನಾ ಸಂಹಿತಾಯಾಂ ದೀರ್ಘಃ । ಪರಿಷ್ಕೃತಃ । ಸಂಪರ್ಯುಪೇಭ್ಯಃ ಕರೋತೌ ಭೂಷಣ ಇತಿ ಕರೋತೇಃ ಸುಡಾಗಮಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಯವಿಷ್ಠ್ಯ । ಯವಿಷ್ಠ ಏವ ಯವಿಷ್ಠ್ಯಃ ।**

ಪಾದಾರ್ಘಾಭ್ಯಾಂ ಚ | ಪಾ. ೫-೪-೨೫ | ಇತ್ಯತ್ರ ಚಕಾರೇಣ ವಸ್ವಾದೀನಾಂ ಸ್ವಾರ್ಥೇ ಯತ್ಪ್ರತ್ಯಯ-ಸ್ಯೋಪಾದಾನಾದ್ಯವಿಷ್ಠ್ಯೇತ್ಯತ್ರ ಸ್ವಾರ್ಥಿಕೋ ಯತ್ಪ್ರತ್ಯಯಃ | ಆಮಂತ್ರಿತತ್ವಾನ್ನಿಘಾತಃ ||

ಪ್ರತಿಪದಾರ್ಥ

**ಯವಿಷ್ಠ್ಯ**—ಅತ್ಯಂತ ಯುವಕನಾದ| **ಅಗ್ನೇ**—ಎಲೈ ಅಗ್ನಿಯೇ | **ಪುರೋಳಾಃ**—(ಅಧ್ವರ್ಯುಗಳು ಸಮರ್ಪಿಸತಕ್ಕ) ಪುರೋಡಾಶವು | **ಪಚತಃ**—ಪಕ್ವಮಾಡಲ್ಪಟ್ಟು | **ತುಭ್ಯಂ**—ನಿನಗಾಗಿ | **ಪರಿಷ್ಕೃತೋ ವಾ ಘ**—ಪರ್ಯಗ್ನಿಕರಣಾದಿಗಳಿಂದ ಅಲಂಕೃತವಾಗಿಯೇ ಇವೆ | **ತಂ**—ಆ ಪುರೋಡಾಶವನ್ನು | **ಜುಷಸ್ವ**—ಸೇವಿಸು ||

ಭಾವಾರ್ಥ

ಅತ್ಯಂತಯುವಕನಾದ ಎಲೈ ಅಗ್ನಿಯೇ, ಅಧ್ವರ್ಯುಗಳು ಸಮರ್ಪಿಸತಕ್ಕ ಪುರೋಡಾಶವು ಪಕ್ವಮಾಡಲ್ಪಟ್ಟು ನಿನಗೆ ಅರ್ಪಿಸುವುದಕ್ಕಾಗಿ ಪರ್ಯಗ್ನಿಕರಣಾದಿಗಳಿಂದ ಅಲಂಕೃತವಾಗಿ ಸಿದ್ಧವಾಗಿಯೇ ಇದೆ, ಆ ಪುರೋಡಾಶವನ್ನು ಸೇವಿಸು.

English translation

The cakes and butter are dressed, Agni, and verily prepared for you; accept them youngest ( of the gods ).

ವಿಶೇಷವಿಷಯಗಳು.

**ಯವಿಷ್ಠ್ಯ**—ಈ ಪದಕ್ಕೆ **ಯುವತಮ** ಯೌವ್ವನದಲ್ಲಿಯೇ ಯಾವಾಗಲೂ ಇರುವವನು ಎಂದು ಅರ್ಥವನ್ನು ವರ್ಣಿಸಿ, ಅಗ್ನಿಯು ಕಾಷ್ಠಾದಿಗಳ ದಹನದಿಂದ ಯಾವಾಗಲೂ ಯೌವ್ವನದಲ್ಲಿಯೇ ಇರುವನಾದುದರಿಂದ ಈ ಪದದಿಂದ ಸಂಬೋಧಿಸಿದೆ. ಯವಿಷ್ಠ ಏವ ಯವಿಷ್ಠ್ಯಃ ಎಂದು ನಿರ್ವಚನವನ್ನು ವಿವರಿಸಿದೆ.

**ಪುರೋಳಾಃ**—**ಪುರೋಡಾಶಂತೆ ಅಧ್ವರ್ಯ್ವಾದಯಃ ಏನಂ ಇತಿ ಪುರೋಡಾಃ ಪುರೋಡಾಶಃ** | ಅಧ್ವರ್ಯುವೇ ಮೊದಲಾದ ಋತ್ವಿಜರು ಅಗ್ನಿಯ ಮುಂಭಾಗದಲ್ಲಿ ಇರಿಸಿ, ಹೋಮಮಾಡುವ ಕಾರಣ ಪುರೋಡಾಶವೆಂಮ ಹವಿಸ್ಸಿಗೆ ಹೆಸರು ಇರುವುದು ಎಂದು ಅರ್ಥವನ್ನು ವಿವರಿಸಿದೆ.

**ಪಚತಃ**—**ಪಚ್ಯತೇ ಅಸಾವಿತಿ ಪಚತಃ ಪಕ್ವಃ** | ಪಾಕಮಾಡಲ್ಪಡುವ ಕಾರಣದಿಂದ ಅಥವಾ **ಕಪಾಲಯೋಃ ಪಕ್ವಃ** ಎರಡು ಕಪಾಲಗಳಲ್ಲಿ (ಮಡಕೆಯ ಅರ್ಧಭಾಗದಲ್ಲಿ) ಪಕ್ವಮಾಡಲ್ಪಡುವ ಕಾರಣ ಪುರೋಡಾಶವು ಅಗ್ನಿಗೋಸ್ಕರವಾಗಿ **ಪರಿಷ್ಕೃತಃ ವಾ ಘ ಪರ್ಯಗ್ನಿಕರಣಾದಿಭಿರಲಂಕೃತಃ** ಯಾಗದಲ್ಲಿ ಅವಶ್ಯಕರ್ತವ್ಯವಾದ ಪರ್ಯಗ್ನಿಕರಣವೆಂಬಿವೇ ಮೊದಲಾದ ಸಂಸ್ಕಾರಗಳಿಂದ ಸಿದ್ಧಮಾಡಲ್ಪಟ್ಟಿರುವುದೆಂದೂ, **ತಮಿಮಂ ಜುಷಸ್ವ** ಅಗ್ನಿಯು ಯಜಮಾನರಿಂದ ತನಗಾಗಿ ಅರ್ಪಿತವಾಗುವ ಈ ಪುರೊಡಾಶವೆಂಬ ಹವಿಸ್ಸನ್ನು ಸೇವಿಸಲಿ ಎಂದೂ ಯಜಮಾನರ ಆಶಂಸನೆಯು ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ಪುರೋಳಾಃ**—ದಾಶೃ ದಾನೇ. ಧಾತು. ಪರಸ್ ಎಂಬುದು ಉಪಪದವಾಗಿರುವಾಗ **ಮಂತ್ರೇ ಶ್ವೇತವಹೋಕ್ಥ ಶಸ್ ಪುರೋಡಾಶೋ ಣ್ವಿನ್** (ಪಾ.ಸೂ. ೩-೨-೭೧) ಎಂಬುದರಿಂದ ಕರ್ಮಣಿಯಲ್ಲಿ ಣ್ವಿನಿ ಪ್ರತ್ಯಯ. **ಶ್ವೇತವಹೋದೀನಾಂ ಡಸ್‌ಪದಸ್ಯ** (ಪಾ. ಸೂ. ೩-೨-೭೧-೧) ಎಂಬ ವಚನದಿಂದ ಪ್ರತ್ಯಯ ಪರವಾದಾಗ ಡಸ್

ಪ್ರತ್ಯಯ. ಆಗ **ಅವಯಾಃ ಶ್ವೇತವಾಃ ಪುರೋಡಾಶ್ಚ** (ಪಾ. ಸೂ. ೮-೨-೬೭) ಎಂಬುದರಿಂದ ನಿಪಾತಮಾಡಿರುವುದರಿಂದ ಧಾತು ದಕಾರಕ್ಕೆ ಡಕಾರಾದೇಶ. ಪುರೋಡಾಶಂತೇ ಏನಮಿತಿ ಪುರೋಡಾಃ ಪುರೋಡಾಶಃ. ಇಲ್ಲಿ ಡಕಾರಕ್ಕೆ ಳಕಾರವು ಋಗ್ವೇದಿಗಳಲ್ಲಿ ಸಂಪ್ರದಾಯಸಿದ್ಧವಾದುದು. **ಗತಿಕಾರಕೋಪಪದಾತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪಚತಃ**— ಡುಪಚಷ್ ಪಾಕೇ. ಧಾತು. ಇದಕ್ಕೆ **ಭೃಮೃದೃಶಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. ಪಚ್ಯತೇ ಅಸೌ ಇತಿ ಪಚತಃ ಪಕ್ವಃ (ಬೇಯಿಸಲ್ಪಡತಕ್ಕದ್ದು) ಪ್ರತ್ಯಯಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಘಾ**—**ಋಚಿತುನುಘ**—(ಪಾ.ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ.

**ಪರಿಷ್ಕೃತಃ**—ಡುಕೃಞ್ ಕರಣೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಪರಿ ಎಂಬ ಉಪಸರ್ಗದ ಪರದಲ್ಲಿರುವುದರಿಂದ **ಸಂಪರಿಭ್ಯಾಂಕರೋತೌ ಭೂಷಣೇ** (ಪಾ. ಸೂ. ೬-೧-೧೩೭) ಎಂಬುದರಿಂದ ಕೃಞ್‌ಗೆ ಸುಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಆದಕ್ಕೆ ಷತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಕರ್ಮಣಿಕ್ತಾಂತಪರದಲ್ಲಿರುವುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಯವಿಷ್ಠ್ಯ**—ಯವಿಷ್ಠ ಏವ ಯವಿಷ್ಠ್ಯಃ **ಪಾದಾರ್ಘಾಭ್ಯಾಂಚ** (ಪಾ. ಸೂ. ೫-೪-೨೫) ಎಂಬಲ್ಲಿ ಚಕಾರಸಾಮರ್ಥ್ಯದಿಂದ ಸ್ವಾರ್ಥದಲ್ಲಿ ವಸ್ವಾದಿಗಳಿಗೆ ಯತ್ ಪ್ರತ್ಯಯವನ್ನು ವಿಧಾನಮಾಡಿರುವುದರಿಂದ ಇದು ವಸ್ವಾದಿಯಲ್ಲಿ ಸೇರಿರುವುದರಿಂದ ಸ್ವಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಆಮಂತ್ರಿತ ಸಂಜ್ಞೆ (ಸಂಬುದ್ಧಿಯಲ್ಲಿ) ಇರುವುದರಿಂದ ನಿಘಾತಸ್ವರ ಬರುತ್ತದೆ.

**ಸಂಹಿತಾಪಾಠಃ**

ಅಗ್ನೇ ವೀಹಿ ಪುರೋಳಾಶಮಾಹುತಂ ತಿರೋಅಹ್ನ್ಯಂ ।
ಸಹಸಃ ಸೂನುರಸ್ಯಧ್ವರೇ ಹಿತಃ ॥ ೩ ॥

**ಪದಪಾಠಃ**

ಅಗ್ನೇ । ವೀಹಿ । ಪುರೋಳಾಶಂ । ಆಽಹುತಂ । ತಿರಃಽಅಹ್ನ್ಯಂ ।
ಸಹಸಃ । ಸೂನುಃ । ಅಸಿ । ಅಧ್ವರೇ । ಹಿತಃ ॥ ೩ ॥

**ಸಾಯಣಭಾಷ್ಯಂ**

ಹೇ ಅಗ್ನೇ ತಿರೋಅಹ್ನ್ಯಂ ಅಹ್ನಿ ತಿರೋಹಿತೇ ಸತ್ಯಾಹುತಮಾ ಸಮಂತಾದ್ಧುತಂ ಪುರೋಡಾಶಂ ಪುರೋಡಾಶಾಖ್ಯಂ ಹವಿರ್ವೀಹಿ । ಭಕ್ಷಯ । ಅಧ್ವರೇಽಸ್ಮಿನ್ಯಜ್ಞೇ ಸಹಸಃ ಸೂನುರ್ಬಲಸ್ಯ ಪುತ್ರಸ್ತ್ವಂ ಹಿತೋಽಸಿ। ಆಹವನೀಯಾದಿಸ್ಥಾನೇಷ್ವಸ್ಮಾಭಿರ್ನಿಹಿತೋಽಸಿ । ತಸ್ಮಾದ್ವೀಹೀತಿ ಶೇಷಃ ॥ ವೀಹಿ,

**ವೀ** ಕಾಂತಿಗತ್ಯಾದಿಷು । **ಲೋಟಿ** ರೂಪಂ । **ಹೇರಪಿತ್ತ್ವಾದಂತೋದಾತ್ತತ್ವಂ** । **ಆಹುತಂ** । **ಜುಹೋತೇಃ** **ಕರ್ಮಣಿ ಕ್ತೇ** । **ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ** । **ತಿರೋಅಹ್ನ್ಯಂ** । **ಅಹ್ನಿ ಭವಮಹ್ನ್ಯಂ** । **ಭವೇ ಛಂದಸೀತಿ ಯತ್** । **ತಿರೋಭೂತಮಹ್ನ್ಯಂ ಯಸ್ಮಿನ್ ಕಾಲೇ ಸ ತಿರೋಅಹ್ನ್ಯಃ** । **ರಾತ್ರಿಕಾಲ ಇತ್ಯರ್ಥಃ** । **ಕಾಲಾಧ್ವನೋರತ್ಯಂತಸಂಯೋಗ ಇತಿ ದ್ವಿತೀಯಾ** । **ಪ್ರಕೃತ್ಯಾಂತಃಪಾದಮಿತ್ಯೇಜಃ** । **ಪ್ರಕೃತಿಭಾವಃ** । **ಬಹುವ್ರೀಹೌ ಪೂರ್ವಪದಸ್ವರಃ** ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ಸಹಸಃ ಸೂನುಃ**—ಶಕ್ತಿಪುತ್ರನಾದ ನೀನು । **ಅಧ್ವರೇ** —ಈ ಯಜ್ಞದಲ್ಲಿ । **ಹಿತಃ ಅಸಿ**—ಆಹವನೀಯಾದಿಸ್ಥಾನಗಳಲ್ಲಿ ಸ್ಥಾಪಿತನಾಗಿದ್ದೀಯೆ. (ಆದುದರಿಂದ) । **ತಿರೋಅಹ್ನ್ಯಂ** — ಅಹಸ್ಸು ತಿರೋಹಿತವಾಗುವ ಕಾಲದಲ್ಲಿ (ಸಾಯಂಕಾಲದಲ್ಲಿ) । **ಆಹುತಂ**—ಸುತ್ತಲೂ ಅರ್ಪಿಸಿದ । **ಪುರೋಡಾಶಂ**—ಪುರೋಡಾಶರೂಪವಾದ ಹವಿಸ್ಸನ್ನು । **ವೀಹಿ**—ಭಕ್ಷಿಸು.

ಭಾವಾರ್ಥ

ಎಲೈ ಅಗ್ನಿಯೇ, ಶಕ್ತಿಪುತ್ರನಾದ ನೀನು ಈ ಯಜ್ಞದಲ್ಲಿ ಆಹವನೀಯಾದಿಸ್ಥಾನಗಳಲ್ಲಿ ಸ್ಥಾಪಿತನಾಗಿದ್ದೀಯೆ. ಆದುದರಿಂದ ಅಹಸ್ಸು ತಿರೋಹಿತವಾಗುವ ಕಾಲದಲ್ಲಿ (ಸಾಯಂಕಾಲದಲ್ಲಿ) ಸುತ್ತಲೂ ಅರ್ಪಿಸಿದ ಪುರೋಡಾಶರೂಪವಾದ ಹವಿಸ್ಸನ್ನು ಭಕ್ಷಿಸು.

English translation

Eat, Agni, the cakes and butter offered as the day disappears: you, son of strength, are stationed (by us) at the sacrifice.

ವಿಶೇಷವಿಷಯಗಳು

**ತಿರೋಅಹ್ನ್ಯಂ**—**ಅಹ್ನಿಭವಮಹ್ನ್ಯಂ ತಿರೋಭೂತಮಹ್ನ್ಯಂ ಯಸ್ಮಿನ್** । **ಯಸ್ಮಿನ್‌ಕಾಲೇ ಸ ತಿರೋಅಹ್ನ್ಯಃ ರಾತ್ರಿಕಾಲಃ** । **ಅಹ್ನಿ ತಿರೋಹಿತೇ ಸತಿ** । (ದಿವಸವು) ಹಗಲು ಕಳೆದನಂತರ ಪ್ರಾಪ್ತವಾಗುವ ರಾತ್ರಿಕಾಲದಲ್ಲಿ ಯಜಮಾನರು ಅರ್ಪಿಸುವ ಪುರೋಡಾಶವೆಂಬ ಹವಿಸ್ಸನ್ನು **ವೀಹಿ** ಅಗ್ನಿಯು ಭಕ್ಷಿಸಲಿ ಎಂದು ಅಗ್ನಿಯನ್ನು ಸಂಬೋಧಿಸಿ ಆಶಿಸಿದೆ.

**ಅಧ್ವರೇ ಸಹಸಃ ಸೂನುಃ ಹಿತಃ**—ಅಧ್ವರಶಬ್ದವು ಯಾಸ್ಕರಿಂದ **ಅಧ್ವರ ಇತಿ ಯಜ್ಞನಾಮ ಧ್ವರತಿಹಿಂಸಾಕರ್ಮಾ ತತ್ಪ್ರತಿಷೇಧಃ** (ನಿ. ೧-೮) ಎಂದು ವ್ಯಾಖ್ಯಾತವಾಗಿದೆ. ಯಜ್ಞಗಳಲ್ಲಿ ಬಲದಿಂದ ಉತ್ಪನ್ನನಾಗುವಕಾರಣ ಸಹಸಸ್ಸೂನು ಎಂಬ ಪದದಿಂದ ಅಗ್ನಿಯು ವ್ಯವಹೃತನಾಗಿದ್ದಾನೆ ಎಂದೂ, ಈ ಅಗ್ನಿಯು ಆಹವನೀಯವೇ ಮೊದಲಾದ ಸ್ಥಾನಗಳಲ್ಲಿ ಯಜಮಾನರಿಂದ ಇಡಲ್ಪಟ್ಟಿರುವನೆಂದೂ ಅಗ್ನಿಯ ಉತ್ಪತ್ತಿ ಮತ್ತು ಉಪವೇಶನಗಳನ್ನು ವಿವರಿಸಿ, ಈ ಅಗ್ನಿಯು ಪುರೋಡಾಶವೆಂಬ ಹವಿಸ್ಸನ್ನು ಭಕ್ಷಿಸಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ವೀಹಿ**—ವೀ ಕಾಂತಿಗತ್ಯಾದಿಷು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಹಿಗೆ ಅಪಿತ್ವವಿಧಾನ ಮಾಡಿರುವುದರಿಂದ ಅಂತೋದಾತ್ತಸ್ವರ ಬರುತ್ತದೆ. ಪೂರ್ವದಲ್ಲಿ ಆಮಂತ್ರಿತವಿರುವುದರಿಂದ ಪಾದಾದಿಯಲ್ಲಿ ಬಂದಂತಾಗುವುದರಿಂದ ನಿಘಾತಸ್ವರ ಬರುವುದಿಲ್ಲ.

**ಆಹುತಂ**—ಹು ದಾನಾದನಯೋಃ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಆಙ್) ಉದಾತ್ತಸ್ವರ ಬರುತ್ತದೆ.

**ತಿರೋಅಹ್ನ್ಯಂ**—ಅಹ್ನಿ ಭವಂ ಅಹ್ನ್ಯಂ. **ಭವೇಚ್ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್‌ಪ್ರತ್ಯಯ. ತಿರೋಭೂತಂ ಅಹ್ನ್ಯಂ ಯಸ್ಮಿನ್ ಕಾಲೇ ಸಃ ತಿರೋಅಹ್ನ್ಯಃ ರಾತ್ರಿಕಾಲವೆಂದರ್ಥ. ಅತ್ಯಂತ ಸಂಯೋಗ ತೋರುವುದರಿಂದ **ಕಾಲಾಧ್ವನೋರತ್ಯಂತಸಂಯೋಗೇ** (ಪಾ. ಸೂ. ೨-೩-೫) ಎಂಬುದರಿಂದ ದ್ವಿತೀಯಾ ಬಂದಿದೆ. **ಪ್ರಕೃತ್ಯಾಂತಃಪಾದಮವ್ಯಯಪರೇ** (ಪಾ. ಸೂ. ೬-೧-೧೧೫) ಎಂಬುದರಿಂದ ಓಕಾರಕ್ಕೆ ಪ್ರಕೃತಿಭಾವ ಬರುವುದರಿಂದ ಸಂಧಿಕಾರ್ಯ ಬರುವುದಿಲ್ಲ. **ಬಹುವ್ರೀಹೌ ಪ್ರ**— (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಹಿತಃ**—**ದಧಾತೇರ್ಹಿಃ** ಎಂಬುದರಿಂದ ಕ್ತ ಪ್ರತ್ಯಯ ಪರವಾದಾಗ ಧಾ ಧಾತುವಿಗೆ ಹಿ ಆದೇಶ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

ಸಂಹಿತಾಪಾಠಃ

ಮಾಧ್ಯಂದಿನೇ ಸವನೇ ಜಾತವೇದಃ ಪುರೋಳಾಶಮಿಹ ಕವೇ ಜುಷಸ್ವ ।
ಅಗ್ನೇ ಯಹ್ವಸ್ಯ ತವ ಭಾಗಧೇಯಂ ನ ಪ್ರ ಮಿನಂತಿ ವಿದಥೇಷು ಧೀರಾಃ ॥

ಪದಪಾಠಃ

ಮಾಧ್ಯಂದಿನೇ । ಸವನೇ । ಜಾತಽವೇದಃ । ಪುರೋಳಾಶಂ । ಇಹ । ಕವೇ । ಜುಷಸ್ವ ।
ಅಗ್ನೇ । ಯಹ್ವಸ್ಯ । ತವ । ಭಾಗಽಧೇಯಂ । ನ । ಪ್ರ । ಮಿನಂತಿ । ವಿದಥೇಷು । ಧೀರಾಃ ॥ ೪ ॥

ಸಾಯಣಭಾಷ್ಯಂ

ಕವೇ ಮೇಧಾವಿನ್ ಹೇ ಜಾತವೇದ ಇಹಾಸ್ಮಿನ್ನಗ್ನಿಷ್ಟೋಮಾಖ್ಯೇ ಕರ್ಮಣಿ ತತ್ರ ಚ ಮಾಧ್ಯಂದಿನೇ ಮಧ್ಯಂದಿನಸಂಬಂಧಿನಿ ಸವನೇ ಪುರೋಡಾಶಂ ಮಾಧ್ಯಂದಿನಸವನೀಯಪುರೋಡಾಶಂ । ಜುಷಸ್ವ । ಸೇವಸ್ವ ।ಹೇ ಅಗ್ನೇ ವಿದಥೇಷು ಯಜ್ಞೇಷು ಧೀರಾಃ ಕರ್ಮಕುಶಲಾ ಅಧ್ವರ್ಯ್ವಾದಯೋ ಯಹ್ವಸ್ಯ । ಯಾಂತಿ ಪ್ರಾಪ್ನುವಂತಿ ದೇವಾ ಹವೀಂಷ್ಯನೇನೇತಿ ಯಹ್ವೋ ಮಹಾನಗ್ನಿಃ। ಯಹ್ವಸ್ಯ ಮಹತಸ್ತವ ಭಾಗಧೇಯಂ ಭಾಗತಯಾ ಪರಿಕಲ್ಪಿತಮಿಮಂ ಪುರೋಡಾಶಂ ನ ಪ್ರಮಿನಂತಿ । ನ ಹಿಂಸಂತಿ । ಕಿಂತು ತುಭ್ಯಂ ಪ್ರಯಚ್ಛಂತಿ । ತಂ ಜುಷಸ್ವೇತಿ ಶೇಷಃ ॥ ಮಾಧ್ಯಂದಿನೇ । ಮಧ್ಯಂದಿನಸ್ಯೇದಮಿತ್ಯರ್ಥ ಉತ್ಸಾದಿತ್ವಾದಞ್ । ಞಿತ್ತ್ವಾದಾದಿವೃದ್ಧಿಃ। ಞಿತ್ತ್ವಾದೇವಾದ್ಯುದಾತ್ತತ್ವಂ। ಯಹ್ವಸ್ಯ । ಯಾ ಪ್ರಾಪಣ ಇತ್ಯಸ್ಮಾತ್ ಶೇವಯಹ್ವಜಿಹ್ವೇತಿ ನಿಪಾತನಾತ್ಕರಣೇ ವನ್ಪ್ರತ್ಯಯಃ । ಹುಗಾಗಮಧಾತುಹ್ರಸ್ವೌ । ಯಾಂತ್ಯನೇನೇತಿ ಯಹ್ವೋಽಗ್ನಿಃ । ವ್ಯತ್ಯಯೇನಾಂತೋದಾತ್ತಃ । ಭಾಗಧೇಯಂ । ಭಾಗಶಬ್ದಾತ್ಸ್ವಾರ್ಥೇ ಭಾಗರೂಪನಾಮಭ್ಯೋ ಧೇಯಪ್ರತ್ಯಯೋ ವಕ್ತವ್ಯಃ । ಪಾ- ೫-೪-೩೬-೨ । ಇತಿ ಧೇಯಃ । ಪ್ರತ್ಯಯಸ್ವರಃ । ಮಿ-

ನಂತಿ | ಮಿ ಞ್ ಹಿಂಸಾಯಾಮಿತ್ಯಸ್ಯ ಕ್ರ್ಯಾದಿತ್ವಾತ್ ಶ್ನಾ | ತಸ್ಮಿನ್ ಮೀನಾತೇರ್ನಿಗಮ ಇತಿ ಹ್ರಸ್ವತ್ವಂ| ಹಿನು ಮೀನಾ | ಪಾ- ೮-೪-೧೫ | ಇತಿ ಣತ್ವಂ ನ ಭವತಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದಿತಿ ||

ಪ್ರತಿಪದಾರ್ಥ

**ಕವೇ**—ಮೇಧಾವಿಯೂ | **ಜಾತವೇದಃ**—ಜಾತಪ್ರಜ್ಞನೂ ಆದ ಅಗ್ನಿಯೇ | **ಇಹ**—ಈ ಯಜ್ಞದಲ್ಲಿ | **ಮಾಧ್ಯಂದಿನೇ ಸವನೇ**—ಮಾಧ್ಯಂದಿನ ಸವನಸಮಯದಲ್ಲಿ | **ಪುರೋಡಾಶಂ**—ಪುರೋಡಾಶರೂಪವಾದ ಹವಿಸ್ಸನ್ನು **ಜುಷಸ್ವ**—ಸೇವಿಸು | **ಅಗ್ನೇ**—ಎಲೈ ಅಗ್ನಿಯೇ | **ವಿದಥೇಷು**—ಯಜ್ಞಗಳಲ್ಲಿ | **ಧೀರಾಃ**—ಕರ್ಮಕುಶಲರಾದ ಋತ್ವಿಕ್ಕುಗಳು | **ಯಹ್ವಸ್ಯ**—ಯಜ್ಞಾರ್ಹನಾದ | **ತವ**—ನಿನ್ನ | **ಭಾಗಧೇಯಂ**—ಭಾಗಕ್ಕೆ ಪರಿಕಲ್ಪಿತವಾದ ಹವಿಸ್ಸನ್ನು | **ನ ಪ್ರ ಮಿನಂತಿ**—ನ್ಯೂನಮಾಡುವುದಿಲ್ಲ (ಎಂದರೆ ಪೂರ್ಣವಾಗಿ ಅರ್ಪಿಸುತ್ತಾರೆ).

ಭಾವಾರ್ಥ

ಮೇಧಾವಿಯೂ, ಜಾತಪ್ರಜ್ಞನೂ ಆದ ಎಲೈ ಅಗ್ನಿಯೇ, ಈ ಯಜ್ಞದ ಮಾಧ್ಯಂದಿನಸವನದಕಾಲದಲ್ಲಿ ಅರ್ಪಿತವಾದ ಪುರೋಡಾಶರೂಪವಾದ ಹವಿಸ್ಸನ್ನು ಸೇವಿಸು. ಎಲೈ ಅಗ್ನಿಯೇ, ಯಜ್ಞಗಳಲ್ಲಿ ಕರ್ಮಕುಶಲರಾದ ಋತ್ವಿಕ್ಕುಗಳು ಯಜ್ಞಾರ್ಹನಾದ ನಿನ್ನ ಭಾಗಕ್ಕೆ ಪರಿಕಲ್ಪಿತವಾದ ಹವಿಸ್ಸನ್ನು ನ್ಯೂನಮಾಡದೇ ಪೂರ್ಣವಾಗಿ ಅರ್ಪಿಸುತ್ತಾರೆ.

English translation

Wise Jatavedas, accept the cakes and butter offered in this sacrifice at the mid-day rite; prudent (worshippers), withhold not at solemn ceremonies the portion of you who are mighty.

ವಿಶೇಷವಿಷಯಗಳು

**ಕವೇ**—ಕವಿಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಪಠಿತವಾಗಿದೆ. ಅಗ್ನಿಯು ಮೇಧಾವಿಯಾಗಿರುವನೆಂದೂ, ಜಾತಪ್ರಜ್ಞನಾಗಿರುವನೆಂದೂ, ಕವಿ, ಜಾತವೇದಶ್ಶಬ್ದಗಳಿಂದ ಅಗ್ನಿಯನ್ನು ಸಂಬೋಧಿಸಿದೆ.

**ಇಹ ಮಾಧ್ಯಂದಿನೇ ಸವನೇ ಪುರೋಡಾಶಂ ಜುಷಸ್ವ**—ಇಹ ಎಂಬ ಪದವು ಇಲ್ಲಿ ಅಗ್ನಿಷ್ಟೋಮ ಎಂಬ ಯಾಗ (ವಾಚಿ) ಬೋಧಕವಾಗಿರುವುದೆಂದೂ, ಅಗ್ನಿಯು ಈ ಅಗ್ನಿಷ್ಟೋಮಯಾಗದ ಮಾಧ್ಯಂದಿನಸವನದಲ್ಲಿ ಯಜಮಾನರಿಂದ ಅರ್ಪಿತವಾಗುವ ಪುರೋಡಾಶವೆಂಬ ಹವಿಸ್ಸನ್ನು ಸೇವಿಸಲಿ ಎಂದೂ ವರ್ಣಿಸಿದೆ.

**ಧೀರಾಃ**—ಧೀರಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿ **ಯಜ್ಞೇಷು ಕರ್ಮಕುಶಲಾಃ** ಯಜ್ಞಕರ್ಮಗಳನ್ನು ಆಚರಿಸುವುದರಲ್ಲಿ ನಿಪುಣರಾದ ಅಧ್ವರ್ಯುವೇ ಮೊದಲಾದ ಋತ್ವಿಜರು ಎಂದು ಅರ್ಥವನ್ನು ವಿವರಿಸಿದೆ.

**ಯಹ್ವಸ್ಯ—ಯಾಂತಿ ಪ್ರಾಪ್ನುವಂತಿ ದೇವಾ ಹವೀಂಷ್ಯನೇನೇತಿ ಯಹ್ವೋ ಮಹಾನಗ್ನಿಃ**—ಅಗ್ನಿಯ ಮೂಲಕವಾಗಿ ದೇವತೆಗಳು ಹವಿಸ್ಸುಗಳನ್ನು ಹೊಂದುವುದರಿಂದ ಅಗ್ನಿಯು ಯಹ್ವನೆನಿಸಿರುವನು ಎಂದು ಅರ್ಥಮಾಡಿದೆ. ಯಹ್ವಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೩-೧೩)

**ಭಾಗಧೇಯಂ**—ದೇವತೆಗಳು ಯಜ್ಞದಲ್ಲಿ ತಮಗಾಗಿ ಅರ್ಪಿತವಾಗುವ ಹವಿಸ್ಸುಗಳನ್ನು ಅಗ್ನಿಯಮೂಲಕವಾಗಿ ಹೊಂದುವುದರಿಂದ, ಅಗ್ನಿಗೋಸ್ಕರವಾಗಿ ಪ್ರತ್ಯೇಕವಾಗಿ ವಿಂಗಡಿಸಿ ಅರ್ಪಿಸುವ ಹವಿಸ್ಸನ್ನು ಅಗ್ನಿಯು ಹೊಂದು

ವಂತೆ ಮಾಡುವರು. ಇಂತಹ ಈ (ಹವಿಸ್ಸನ್ನು) ಹವಿಸ್ಸಿನರೂಪವಾದ ಪುರೋಡಾಶವನ್ನು ಅಗ್ನಿಯು ಸೇವಿಸಲಿ ಎಂಬ ಯಜಮಾನರ ಆಶಂಸನೆಯು ವಿವೃತವಾಗಿದೆ.

ವ್ಯಾಕರಣಪ್ರಕ್ರಿಯಾ

**ಮಾಧ್ಯಂದಿನೇ**—ಮಧ್ಯಂದಿನಸ್ಯ ಇದಂ ಮಾಧ್ಯಂದಿನಂ. ಉತ್ಸಾದಿಗಣ ಪಠಿತವಾದುದರಿಂದ ಅಞ್ ಪ್ರತ್ಯಯ. ಞಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಞ್ನಿತ್ಯಾದಿರ್ನಿತ್ಯಂ ಎಂಬು ದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಹ್ವಸ್ಯ**—ಯಾ ಪ್ರಾಪಣೇ. ಧಾತು. **ಶೇವಯಹ್ವಜಿಹ್ವ**—ಎಂಬುದರಿಂದ ನಿಪಾತಮಾಡಿರುವುದರಿಂದ ವನ್ ಪ್ರತ್ಯಯ. ಹುಕಾಗಮ. ಧಾತುವಿಗೆ ಹ್ರಸ್ವ. ಯಾಂತಿ ಅನೇನ ಇತಿ ಯಹ್ವಃ ಅಗ್ನಿಃ ಪ್ರತ್ಯಯ ನಿತ್ತಾದರೂ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಭಾಗಧೇಯಂ**—ಭಾಗ ಶಬ್ದ. ಇದರಮೇಲೆ ಸ್ವಾರ್ಥದಲ್ಲಿ **ಭಾಗರೂಪನಾಮಭ್ಯೋ ಧೇಯ ಪ್ರತ್ಯಯೋ ವಕ್ತವ್ಯಃ** (ವಾ. ಸೂ. ೫-೪-೩೬-೨) ಎಂಬ ವಾರ್ತಿಕದಿಂದ ಧೇಯ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

**ಮಿನಂತಿ**—ಮಿಾಞ್ ಹಿಂಸಾಯಾಂ. ಧಾತು. ಕ್ರ್ಯಾದಿ. ಲಿಟ್ ಪ್ರಥಮಪುರುಷ ಬಹುವಚನದ ಝಿಗೆ ಅಂತಾದೇಶ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಅಕಾರಕ್ಕೆ ಲೋಪ. **ಮಿಾನಾತೇರ್ನಿಗಮೇ** (ಪಾ. ಸೂ. ೭-೩-೮೧) ಎಂಬುದರಿಂದ ಧಾತುವಿಗೆ ಹ್ರಸ್ವ. ಮಿನಂತಿ ಎಂದು ರೂಪವಾಗುತ್ತದೆ. ಪ್ರ ಎಂಬ ಉಪ ಸರ್ಗವು ಪೂರ್ವದಲ್ಲಿರುವುದರಿಂದ **ಹಿನುಮಿಾನಾ** (ಪಾ. ಸೂ. ೮-೪-೧೫) ಎಂಬುದರಿಂದ ನಕಾರಕ್ಕೆ ಣತ್ವ ಪ್ರಾಪ್ತವಾದರೂ **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ ಇಲ್ಲಿ ಣತ್ವ ಬರುವುದಿಲ್ಲ. ಅತಿಙಂತದ ಪರ ದಲ್ಲಿರುವುದರಿಂದ ನಿಘಾತಸ್ವರ ಬರುತ್ತತೆ.

ಸಂಹಿತಾಪಾಠಃ

ಅಗ್ನೇ ತೃತೀಯೇ ಸವನೇ ಹಿ ಕಾನಿಷಃ ಪುರೋಳಾಶಂ ಸಹಸಃ ಸೂನವಾಹುತಂ ।
ಅಥಾ ದೇವೇಷ್ವಧ್ವರಂ ವಿಪನ್ಯಯಾ ಧಾ ರತ್ನವಂತಮಮೃತೇಷು ಜಾಗೃವಿಂ ॥ ೫॥

ಪದಪಾಠಃ

ಅಗ್ನೇ । ತೃತೀಯೇ । ಸವನೇ । ಹಿ । ಕಾನಿಷಃ । ಪುರೋಳಾಶಂ । ಸಹಸಃ । ಸೂನೋ ಇತಿ । ಆऽಹುತಂ।
ಅಥ । ದೇವೇಷು । ಅಧ್ವರಂ । ವಿಪನ್ಯಯಾ । ಧಾಃ । ರತ್ನऽವಂತಂ । ಅಮೃತೇಷು । ಜಾಗೃವಿಂ ॥ ೫ ॥

ಸಾಯಣಭಾಷ್ಯಂ

ಸಹಸಃ ಸೂನೋ ಬಲಸ್ಯ ಪುತ್ರ ಹೇ ಅಗ್ನೇ ತ್ವಂ ತೃತೀಯೇ ಸವನ ಆಹುತಂ ಹೂಯಮಾನಂ ಪುರೋಡಾಶಂ ಕಾನಿಷಃ । ಕಾಮಯಸೇ । ಅಥ ಅನಂತರಮಧ್ವರಮವಿನಾಶಿನಂ ರತ್ನವಂತಂ । ರತ್ನಶಬ್ದೇನ ಸ್ವರ್ಗಾದಿಲಕ್ಷಣಮುತ್ತಮಂ ಫಲಮಭಿಧೀಯತೇ । ತದ್ವಂತಂ ಫಲಪ್ರದಂ ಜಾಗೃವಿಂ ಜಾಗರಣಕಾರಣಂ । ಪ್ರಾತಃಸೋಮೋ ಜಾಗೃವಿರ್ಭವತಿ ಸ್ವಪ್ನನಿವಾರಕ ಇತಿ । ತಮಿಮಂ ಸೋಮಂ ವಿಪನ್ಯಯಾ ಸ್ತುತಿಲಕ್ಷಣಯಾ ವಾಚಾ ಸ್ತುತಸ್ತ್ವಮಮೃತೇಷು ಮರಣಧರ್ಮರಹಿತೇಷು ದೇವೇಷ್ವಿಂದ್ರಾದಿಷು ಧಾಃ । ಧೇಹಿ ಹಿ ಪೂರಣಃ ॥ ತೃತೀಯೇ । ತ್ರಿಶಬ್ದಾತ್ಪೂರಣಾರ್ಥೇ ತ್ರೇಃ ಸಂಪ್ರಸಾರಣಂ । ಪಾ. ೫-೨-೫೫ । ಇತಿ ತೀಯಪ್ರತ್ಯಯಃ । ತತ್ಸಂನಿಯೋಗೇನ ಸಂಪ್ರಸಾರಣಂ । ಹಲ ಇತಿ ದೀರ್ಘೋ ನ ಭವತಿ । ಅನ್ನಿತಿ ತತ್ರ ನಾನುವರ್ತನಾತ್ ಪ್ರತ್ಯಯಸ್ವರಃ । ಕಾನಿಷಃ । ಕನೀ ಕಾಂತ್ಯಾದಿಷು । ಲೇಟಿ ಸಿಬ್ಬಹುಲಮಿತಿ ಸಿಪ್ । ತಸ್ಯಾರ್ಧಧಾತುಕತ್ವಾದಿಡಾಗಮಃ । ಕಾಂತಿರಭಿಲಾಷಃ । ಅಕಾರಸ್ಯ ಆಕಾರೋ ವ್ಯತ್ಯಯೇನ । ಹಿಯೋಗಾದನಿಘಾತಃ । ಧಾತುಸ್ವರಃ । ವಿಪನ್ಯಯಾ । ಪನ ಸ್ತುತೌ । ಭಾವೇ ಕ್ವಿಪ್ । ವಿಪನಂ ಯಾತೀತಿ ಕಪ್ರತ್ಯಯಃ । ಪ್ರತ್ಯಯಸ್ವರಃ । ಧಾಃ । ದಧಾತೇರ್ಧಾತೋಶ್ಛಾಂದಸೇ ಲುಙಿ ರೂಪಂ । ಪಾದಾದಿತ್ವಾದನಿಘಾತಃ । ಜಾಗೃವಿಂ । ಕ್ವಿನ್ಪ್ರತ್ಯಯಾಂತೋ ಜಾಗೃವಿಶಬ್ದಃ । ನಿತ್ಸ್ವರಃ ॥

ಪ್ರತಿಪದಾರ್ಥ

**ಸಹಸಃ ಸೂನೋ**—ಶಕ್ತಿಪುತ್ರನಾದ। **ಅಗ್ನೇ**—ಅಗ್ನಿಯೇ। **ತೃತೀಯೇ ಸವನೇ**—ತೃತೀಯಸವನದಲ್ಲಿ। **ಆಹುತಂ**—ಅರ್ಪಿತವಾದ । **ಪುರೋಡಾಶಂ**—ಪುರೋಡಾಶವನ್ನು । **ಕಾನಿಷಃ**—( ನೀನು ) ಇಚ್ಛಿಸುತ್ತೀಯೆ. । **ಅಥ**—ಅನಂತರ । **ಅಧ್ವರಂ**--ವಿನಾಶರಹಿತವಾದುದೂ । **ರತ್ನವಂತಂ**—ಸ್ವರ್ಗಾದಿಫಲಗಳನ್ನು ಕೊಡತಕ್ಕುದೂ । **ಜಾಗೃವಿಂ**—ಸ್ವಪ್ನನಿವಾರಕವಾಗಿ ಪ್ರಬೋಧವನ್ನುಂಟುಮಾಡತಕ್ಕದ್ದೂ ಆದ ಸೋಮವನ್ನು । **ವಿಪನ್ಯಯಾ**—ಸ್ತುತಿರೂಪವಾದ ವಾಕ್ಕಿನಿಂದ (ಸ್ತುತನಾದ ನೀನು) । **ಅಮೃತೇಷು**—ಮರಣಧರ್ಮರಹಿತರಾದ । **ದೇವೇಷು**—ಇಂದ್ರಾದಿದೇವತೆಗಳಲ್ಲಿ । **ಧಾಃ**—ಸ್ಥಾಪಿಸು.

ಭಾವಾರ್ಥ

ಶಕ್ತಿಪುತ್ರನಾದ ಅಗ್ನಿಯೇ, ನೀನು ತೃತೀಯಸವನದಲ್ಲಿ ಅರ್ಪಿತವಾದ ಪುರೋಡಾಶವನ್ನು ಇಚ್ಛಿಸುತ್ತೀಯೆ. ಅನಂತರ ವಿನಾಶರಹಿತವಾದುದೂ ಸ್ವರ್ಗಾದಿಫಲಗಳನ್ನು ಕೊಡತಕ್ಕುದೂ, ಸ್ವಪ್ನನಿವಾರಕವಾಗಿ ಪ್ರಬೋಧವನ್ನುಂಟುಮಾಡತಕ್ಕುದೂ ಆದ ಸೋಮವನ್ನು ಸ್ತುತಿರೂಪವಾದ ವಾಕ್ಕಿನಿಂದ ಸ್ತುತನಾದ ನೀನು ಮರಣಧರ್ಮರಹಿತರಾದ ಇಂದ್ರಾದಿದೇವತೆಗಳಲ್ಲಿ ಸ್ಥಾಪಿಸು.

## English translation

Be pleased, Agni, son of strength, with the cakes and butter offered at the third (daily sacrifice), and (propitiated) by praise, convey the precious imperishable and awakening (oblation) to the immortal gods.

ವಿಶೇಷವಿಷಯಗಳು

ಅಗ್ನಿಯು **ಸಹಸಃ ಸೂನೋ** ಎಂಬ ಪದದಿಂದ ಸಂಬೋಧಿತನಾಗಿದ್ದಾನೆ. ಅರಣಿಗಳಲ್ಲಿ ಮಥನಮಾಡುವಾಗ ಬಲವನ್ನು ಉಪಯೋಗಿಸುವಕಾರಣ ಬಲದ ಪುತ್ರನೆಂದು ಅರ್ಥವನ್ನು ವರ್ಣಿಸಿದೆ.

**ತೃತೀಯೇ ಸವನೇ ಆಹುತಂ ಪುರೋಡಾಶಂ ಕಾನಿಷಃ**—ಜ್ಯೋತಿಷ್ಟೋಮಯಾಗದ ತೃತೀಯಸವನ ಕಾಲದಲ್ಲಿ ಯಜಮಾನರು ಅರ್ಪಿಸಿದ ಹವಿಸ್ಸಿನರೂಪವಾದ ಪುರೋಡಾಶವನ್ನು ಅಗ್ನಿಯು ಅಪೇಕ್ಷಿಸುವನೆಂದು ಅರ್ಥವನ್ನು ವಿವರಿಸಿದೆ.

**ಅಧ್ವರಂ**—ಈ ಪದವು ಯಜ್ಞನಾಮಗಳಲ್ಲಿ (ನಿ. ೩-೧೭) ಉಕ್ತವಾಗಿದೆ. ಸಾಯಣರು ಈ ಪದಕ್ಕೆ **ಅವಿನಾಶಿನಂ** ನಾಶವನ್ನು ಹೊಂದದೇ ಇರುವುದು ಎಂದು ಅರ್ಥವನ್ನು ವಿವರಿಸಿ ಸೋಮವಿಶೇಷಣವನ್ನಾಗಿ ಹೇಳಿದ್ದಾರೆ.

**ರತ್ನವಂತಂ—ರತ್ನಶಬ್ದೇನ ಸ್ವರ್ಗಾದಿಲಕ್ಷಣಮುತ್ತಮಂ ಫಲಮಭಿಧೀಯತೇ ತತ್ಫಲಪ್ರದಂ** ರತ್ನಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿ ರಮಣೀಯವಾದ ಧನವೆಂಬ ಅರ್ಥಬೋಧಕವಾಗಿ **ಹೋತಾರಂ ರತ್ನಧಾತಮಂ** ಎಂಬಲ್ಲಿ ಪ್ರಯುಕ್ತವಾಗಿದೆ. ಸಾಯಣರು ಈ ಪದಕ್ಕೆ ಸ್ವರ್ಗವೇ ಮೊದಲಾದ ಉತ್ತಮರೂಪದಿಂದ ಇರುವ ಫಲವೆಂದು ಅರ್ಥವನ್ನು ವರ್ಣಿಸಿ, ಸೋಮವು ಸ್ವರ್ಗ, ಧನ ಎಂಬ ರೂಪದಿಂದ ಇರುವ ಫಲವನ್ನು ಉಂಟುಮಾಡುವುದೆಂದು ವರ್ಣಿಸಿದ್ದಾರೆ.

**ಜಾಗೃವಿಂ—ಜಾಗರಣಕಾರಿಣಂ** ! ಜಾಗೃವಿಶಬ್ದವು **ಜಾಗೃವಿರ್ಜಾಗರಣಾತ್** (ನಿ. ೯-೮) ಎಂದು ವ್ಯಾಖ್ಯಾತವಾಗಿದೆ. ಸೋಮವು ಎಚ್ಚರದಿಂದ ಇರಿಸುವುದು(ನಿದ್ರೆಬರದಂತೆ ಮಾಡುವುದು)ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವರಿಸಿ, **ಪ್ರಾತಸ್ಸೋಮೋ ಜಾಗೃವಿರ್ಭವತಿ ಸ್ವಪ್ನನಿವಾರಕಃ** ಎಂಬ ಶ್ರುತಿವಾಕ್ಯವನ್ನು ಉದಾಹರಿಸಿ ಈ ಸೋಮವನ್ನು ಅಗ್ನಿಯು ಮರಣಧರ್ಮವನ್ನು ಹೊಂದದೆ ಇರುವ ಅಮೃತಶಬ್ದವಾಚ್ಯರಾದ ದೇವತೆಗಳಿಗೆ ಅರ್ಪಿಸಲಿ ಎಂದು ಯಜಮಾನರ ಅಭಿಮತವು ವಿವೃತವಾಗಿದೆ ಎಂದು ಅರ್ಥವನ್ನು ವರ್ಣಿಸಿದೆ.

**ವಿಪನ್ಯಯಾ—ಸ್ತುತಿಲಕ್ಷಣಯಾ ವಾಚಾ** । ವಿಪನ್ಯಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಪಠಿತವಾಗಿದೆ. ಇಲ್ಲಿ ಸ್ತುತಿರೂಪವಾದ ವಾಕ್ಕೆಂಬ ಅರ್ಥಬೋಧಕವಾಗಿ ಉಕ್ತವಾಗಿರುವುದೆಂದು ವಿವರಿಸಿ ಅಗ್ನಿಯು ಸ್ತುತಿಗಳಿಂದ ಸ್ತುತನಾಗಿರುವನೆಂದು ವರ್ಣಿಸಿದೆ. ನಿರುಕ್ತಕಾರರು—

> **ಯಥೋ ಏತದೋಜಸೋ ಜಾತಮುತಮನ್ಯ ಏನಮಿತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ**

ಎಂದು ಅಗ್ನಿಯು ಬಲದಿಂದ ಉತ್ಪನ್ನನಾಗಿರುವಕಾರಣ ಸಹಸಸ್ಪುತ್ರ, ಸಹಸಸ್ಸೂನು, ಸಹಸೋ ಯಹು, ಎಂಬ ಪದಗಳಿಂದ ವ್ಯಪದಿಷ್ಟನಾಗಿರುವನೆಂದು ವಿವರಿಸಿ,

> **ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತ ।**
> **ಋತಾವಾ ಯಜ್ಞಿಯೋ ಭುವಃ ॥** (ಋ. ಸಂ. ೮-೭೫-೩)

ಅಗ್ನೇ ವಾಜಸ್ಯ ಗೋಮತ ಈಶಾನಸ್ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥　　　　(ಋ. ಸಂ. ೧-೭೯-೪)

ಎಂಬ ಋಕ್ಕುಗಳಲ್ಲಿ ಸಹಸಸ್ಸೂನು, ಸಹಸೋ ಯಹು, ಎಂಬ ಪದಗಳಿಂದ ಅಗ್ನಿಯು ವ್ಯಪದಿಷ್ಟನಾಗಿರುವನೆಂದು ಉದಾಹರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ತೃತೀಯೇ**—ತ್ರಿ ಶಬ್ದ. ಇದರಮೇಲೆ ಪೂರಣಾರ್ಥತೋರುವಾಗ **ತ್ರೇಃ ಸಂಪ್ರಸಾರಣಂ** (ಪಾ. ಸೂ. ೫-೨-೫೫) ಎಂಬುದರಿಂದ ತೀಯ ಪ್ರತ್ಯಯ. ರೇಫಕ್ಕೆ ಋಕಾರರೂಪ ಸಂಪ್ರಸಾರಣ. ಹಲಃ (ಪಾ. ಸೂ. ೬-೩-೧೧೧) ಎಂಬಲ್ಲಿ ಅಣಿಗೆ (ಇ. ಉ.) ಮಾತ್ರ ದೀರ್ಘವೆಂಬುದರಿಂದ ಇಲ್ಲಿ ಋಕಾರವಿರುವುದರಿಂದ ದೀರ್ಘ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುವುದರಿಂದ ಮಧ್ಯೋದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತರೂಪ.

**ಕಾನಿಷಃ**—ಕನೀ ಕಾಂತ್ಯಾದಿಷು, ಧಾತು. ಲೇಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚಲೋಪ**—(ಪಾ. ಸೂ. ೩-೪-೯೭) ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಇದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೫) ಎಂಬುದರಿಂದ ಇಡಾಗಮ. **ಆದೇಶಪ್ರತ್ಯಯಯೋಃ** ಎಂಬುದರಿಂದ ಸಿಪಿನ ಸಕಾರಕ್ಕೆ ಷತ್ವ. ಪ್ರತ್ಯಯನಕಾರಕ್ಕೆ ರುತ್ವ ವಿಸರ್ಗ ಧಾತುವಿನ ಅಕಾರಕ್ಕೆ ವ್ಯತ್ಯಯದಿಂದ ಆಕಾರದೇಶ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಥಾ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವಿಪನ್ಯಯಾ**—ಪನ ಸ್ತುತೌ. ಧಾತು. ವಿ ಉಪಸರ್ಗ ಪೂರ್ವದಲ್ಲಿರುವಾಗ ಭಾವಾರ್ಥದಲ್ಲಿ ಸಂಪದಾದಿಗಣ ಪಠಿತವಾದುದರಿಂದ ಕ್ವಿಪ್ ಪ್ರತ್ಯಯ. ವಿಪನಂ ಯಾತಿ ಇತಿ ವಿಪನ್ಯಾ. ಯಾ ಪ್ರಾಪಣೇ. ಧಾತು. **ಆತೋನುಪಸರ್ಗೇಕಃ** (ಪಾ. ಸೂ. ೩-೨-೩) ಎಂಬುದರಿಂದ ಕ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. **ಛಂದಸಿಲುಙ್‌ಲಙ್**—ಎಂಬುದರಿಂದ ಬೋಧಾರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬಂದಾಗ **ಇತಶ್ಚ** ಎಂಬುದರಿಂದ ಇಕಾರಲೋಪ. **ಗಾತಿಸ್ಥಾ ಸಿ**—(ಪಾ. ಸೂ. ೨-೪-೭೭) ಎಂಬುದರಿಂದ ಚ್ಲಿಗೆ ಸಿಚಾದೇಶ ಬಂದಾಗ ಅದಕ್ಕೆ ಲುಕ್- ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ಅನುದಾತ್ತಸ್ವರ ಬರುವುದಿಲ್ಲ. ಧಾತುಸ್ವರದಿಂದ ಉದಾತ್ತವಾಗುತ್ತದೆ.

**ಜಾಗೃವಿಂ**—ಜಾಗೃ ನಿದ್ರಾಕ್ಷಯೇ. ಧಾತು. ಔಣಾದಿಕ ಕ್ವಿನ್ ಪ್ರತ್ಯಯ. ವಿ ಉಳಿಯುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

———

ಸಂಹಿತಾಪಾಠಃ

ಅಗ್ನೇ ವೃಧಾನ ಆಹುತಿಂ ಪುರೋಳಾಶಂ ಜಾತವೇದಃ ।
ಜುಷಸ್ವ ತಿರೋಅಹ್ನ್ಯಂ ॥ ೬ ॥

ಪದಪಾಠಃ

ಅಗ್ನೇ । ವೃಧಾನಃ । ಆಽಹುತಿಂ । ಪುರೋಳಾಶಂ । ಜಾತಽವೇದಃ ।
ಜುಷಸ್ವ । ತಿರಃಽಅಹ್ನ್ಯಂ ॥ ೬ ॥

ಸಾಯಣಭಾಷ್ಯಂ

ಜಾತವೇದೋ ಜಾತಪ್ರಜ್ಞ ಹೇ ಅಗ್ನೇ ವೃಧಾನ ಆಹುತಿಭಿರ್ವರ್ಧಮಾನಸ್ತ್ವಂ ತಿರೋಅಹ್ನ್ಯಂ। ಅಹ್ನಿ ಭವಮಹ್ನ್ಯಂ ದಿವಸಕೃತ್ಯಂ । ತಿರೋಭೂತಮಹ್ನ್ಯಂ ಯಸ್ಮಿನ್ಕಾಲೇ ಸ ತಿರೋಅಹ್ನ್ಯೋ ರಾತ್ರಿಕಾಲಃ । ತಸ್ಮಿನ್ಕಾಲ ಆಹುತಿಂ ಪುರೋಡಾಶಾಖ್ಯಂ ಹವಿರ್ಜುಷಸ್ವ । ಸೇವಸ್ವ ॥ ಆಹುತಿಂ । ಜುಹೋತೇಃ ಕರ್ಮಣಿ ಕ್ತಿನ್ । ತಾದೌ ಚ ನಿತಿ ಕೃತ್ಯತಾವಿತಿ ಗತೇಃ ಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ಜಾತವೇದಃ—ಜಾತಪ್ರಜ್ಞನಾದ । ಅಗ್ನೇ—ಅಗ್ನಿಯೇ । ವೃಧಾನಃ—ಆಹುತಿಗಳಿಂದ ಪ್ರವೃದ್ಧನಾಗತಕ್ಕ ನೀನು । ತಿರೋಅಹ್ನ್ಯಂ—ತೃತೀಯಸವನದಲ್ಲಿ ಅರ್ಪಿತವಾದ । ಆಹುತಿಂ ಪುರೋಡಾಶಂ—ಪುರೋಡಾಶರೂಪವಾದ ಆಹುತಿಯನ್ನು । ಜುಷಸ್ವ—ಸೇವಿಸು ॥

ಭಾವಾರ್ಥ

ಜಾತಪ್ರಜ್ಞನಾದ ಎಲೈ ಅಗ್ನಿಯೇ, ಆಹುತಿಗಳಿಂದ ಪ್ರವೃದ್ಧನಾಗತಕ್ಕ ನೀನು ತೃತೀಯಸವನದಲ್ಲಿ ಅರ್ಪಿತವಾದುದೂ ಪುರೋಡಾಶರೂಪವಾದುದೂ ಆದ ಆಹುತಿಯನ್ನು ಸೇವಿಸು.

English translation

Agni, you are Jasavedas and are thriving upon oblations, accept the cakes and butter as the day disappears.

ವಿಶೇಷವಿಷಯಗಳು

ಜಾತವೇದಃಶಬ್ದವು ಇಲ್ಲಿ ಅಗ್ನಿಗೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ಜಾತಪ್ರಜ್ಞನೆಂಬ ಅರ್ಥವು ವಿವೃತವಾಗಿರುವುದರಿಂದ ಅಗ್ನಿಯು ಸರ್ವಜ್ಞನಾಗಿರುವನೆಂದು ವಿವರಿಸಿ ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ.

**ವೃಧಾನಃ—ಆಹುತಿಭಿರ್ವರ್ಧಮಾನಃ** ಅಗ್ನಿಯು ಯಜಮಾನರಿಂದ ಅರ್ಪಿತವಾಗುವ ಹವಿಸ್ಸಿನರೂಪವಾದ ಆಹುತಿಗಳಿಂದ ವೃದ್ಧಿಯನ್ನು ಹೊಂದುವನೆಂದು ಅರ್ಥವನ್ನು ವಿವರಿಸಿದೆ.

**ತಿರೋ ಅಹ್ನ್ಯಂ ಪುರೋಡಾಶಂ ಜುಷಸ್ವ**—ಹಗಲಿನ ಕಾರ್ಯವು ಆಚರಿತವಾದನಂತರ ಪ್ರಾಪ್ತವಾಗುವ ಕಾರ್ಯವನ್ನು ಆಚರಿಸಲರ್ಹವಾದ ಕಾಲವು; ಹಗಲು ಕಳೆದನಂತರ ಪ್ರಾಪ್ತವಾಗುವುದರಿಂದ ರಾತ್ರಿಕಾಲವೆಂದು ಈ ಶಬ್ದಕ್ಕೆ ಅರ್ಥವು ವಿವೃತವಾಗಿದೆ. ರಾತ್ರಿಯಕಾಲದಲ್ಲಿ ಅರ್ಪಿತವಾಗುವ ಪುರೋಡಾಶರೂಪವಾದ ಹವಿಸ್ಸನ್ನು ಅಗ್ನಿಯು ಸೇವಿಸಲಿ ಎಂಬ ಯಜಮಾನರ ಆಶಂಸನೆಯು ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

ವೃಧಾನಃ—ವೃಧು ವೃದ್ಧೌ. ಧಾತು. ಲಟಿಗೆ ಶಾನಚಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಪ್ರತ್ಯಯಕ್ಕೆ ಙಿತ್ವ ಅತಿದೇಶವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಆಹುತಿಂ**—ಹು ದಾನಾದನಯೋಃ ಧಾತು. ಕರ್ಮಣಿಯಲ್ಲಿ ಕ್ತಿನ್ ಪ್ರತ್ಯಯ. ತಕಾರಾದಿಯಾಗಿ ನಿತ್ತಾದ ಪ್ರತ್ಯಯ ಪರವಾದುದರಿಂದ **ತಾದೌ ಚ ನಿತಿ ಕೃತ್ಯತೌ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಆಙ್) ಉದಾತ್ತಸ್ವರ ಬರುತ್ತದೆ.

**ಜುಷಸ್ವ**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್. ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಎಂಬುದರಿಂದ ಅನುದಾತ್ತವಾಗುವುದರಿಂದ ವಿಕರಣಸ್ವರ ಉಳಿಯುತ್ತದೆ.

---

## ಇಪ್ಪತ್ತೊಂಬತ್ತನೆಯ ಸೂಕ್ತವು

**ಅಸ್ತೀದಮಿತಿ ಷೋಡಶರ್ಚಂ ಸಪ್ತದಶಂ ಸೂಕ್ತಂ ವೈಶ್ವಾಮಿತ್ರಂ । ಅತ್ರಾನುಕ್ರಮಣಿಕಾ । ಅಸ್ತೀದಂ ಷೋಳಶಾದ್ಯಾ ಚತುರ್ಥೀದಶಮಿದ್ವಾದಶ್ಯೋಽನುಷ್ಟುಭಃ ಷಷ್ಠ್ಯೇಕಾದಶ್ಯುಪಾಂತ್ಯೇ ಚ ಜಗತ್ಯಃ ಪಂಚಮ್ಯೃಷ್ಟಿಗ್ಭ್ಯೋ ವೇತಿ । ಆದ್ಯಾ ಚತುರ್ಥೀದಶಮಿದ್ವಾದಶ್ಯೋಽನುಷ್ಟುಭಃ ಷಷ್ಠ್ಯೇಕಾದಶ್ಯುಪಾಂತ್ಯೇ ಚ ಜಗತ್ಯಃ ಷಷ್ಠ್ಯೇಕಾದಶೀ ಚತುರ್ದಶೀ ಪಂಚದಶೀ ಚ ಜಗತ್ಯಃ । ಶಿಷ್ಟಾ ಅಷ್ಟೌ ತ್ರಿಷ್ಟುಭಃ । ಪಂಚಮೀ ಮಂಥತಾ ನರ ಇತ್ಯೇಷಾ ಋತ್ವಿಗ್ದೇವತಾಕಾಗ್ನಿದೇವತಾಕಾ ವಾ ಶಿಷ್ಟಾ ಅಗ್ನಿದೇವತಾಕಾಃ ॥ ಸೂಕ್ತವಿನಿಯೋಗೋ ಲೈಂಗಿಕಃ । ವರುಣಪ್ರಘಾಸೇಷ್ವಗ್ನಿಪ್ರಣಯನ ಇಳಾಯಾಸ್ತ್ವಾ ಪದ ಇತ್ಯೇಷಾ । ಸೂತ್ರಿತಂ ಚ । ಇಳಾಯಾಸ್ತ್ವಾ ಪದೇ ವಯಮಗ್ನೇ ವಿಶ್ವೇಭಿಃ ಸ್ವನೀಕ ದೇವೈರಿತ್ಯರ್ಧರ್ಚ ಆರಮೇತ್ । ಆ. ೨-೧೭ । ಇತಿ ॥ ತತ್ರೈವಾಗ್ನಿಪ್ರಣಯನ ಉತ್ತರವೇದ್ಯಾಮಗ್ನೌ ಸ್ಥಾಪಿತೇ ಸತಿ ಸೀದ ಹೋರಿತ್ಯೇಷಾ । ನಿಹಿತೇಽಗ್ನೌ ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನ್ । ಆ. ೨-೧೭ । ಇತಿ ಸೂತ್ರಿತಂ ॥ ಅರಣ್ಯಾಮಗ್ನಿಸಮಾರೋಪಣೇಽಯಂ ತೇ ಯೋನಿರಿತ್ಯೇಷಾ । ಸೂತ್ರಿತಂ ಚ । ಅಯಂ ತೇ ಯೋನಿರ್ಋತ್ವಿಯ ಇತ್ಯರಣೀ ಗಾರ್ಹಪತ್ಯೇ ಪ್ರತಿತಪೇತ್ಪಾಣೀ ವಾ । ಆ. ೩-೧೦ । ಇತಿ ॥**

**ಅನುವಾದವು—ಅಸ್ತೀದಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು. ಅನುಕ್ರಮಣಿಕೆಯಲ್ಲಿ—**ಅಸ್ತೀದಂ ಷೋಳಶಾದ್ಯಾ ಚತುರ್ಥೀ ದಶಮೀ ದ್ವಾದಶ್ಯೋಽನುಷ್ಟುಭಃ ಷಷ್ಠ್ಯೇಕಾದಶ್ಯುಪಾಂತ್ಯೇ ಚ ಜಗತ್ಯಃ ಪಂಚಮ್ಯೃತ್ವಿಗ್ಭ್ಯೋ ವಾ** ಎಂದು ಹೇಳಿರುವುದು. ಈ ಸೂಕ್ತದ ೧, ೪, ೧೦, ೧೨ ನೆಯ ಋಕ್ಕುಗಳು ಅನುಷ್ಟುಪ್ ಛಂದಸ್ಕವು; ೬, ೧೧, ೧೪, ೧೫ ನೆಯ ಋಕ್ಕುಗಳು ಜಗತೀಛಂದಸ್ಕವು; ಉಳಿದ ಎಂಟು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಈ ಸೂಕ್ತದ—**ಮಂಥತಾ ನರಃ** ಎಂಬ ಐದನೆಯ ಋಕ್ಕು ಋತ್ವಿಗ್ದೇವತಾಕವು ಅಥವಾ ಅಗ್ನಿದೇವತಾಕವು; ಉಳಿದ ಎಲ್ಲಾ ಋಕ್ಕುಗಳೂ ಅಗ್ನಿದೇವತಾಕವು. ಸೂಕ್ತವಿನಿಯೋಗವು ಲೈಂಗಿಕವು. ವರುಣಪ್ರಘಾಸವೆಂಬ ಯಾಗದ ಅಗ್ನಿಪ್ರಣಯನವೆಂಬ ಕರ್ಮದ ಮಂತ್ರಗಳಲ್ಲಿ **ಇಳಾಯಾಸ್ತ್ವಾ ಪದೇ** (ಈ ಸೂಕ್ತದ ೪ ನೇ ಋಕ್ಕು) ಎಂಬ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಇಳಾಯಾಸ್ತ್ವಾ ಪದೇ ವಯಮಗ್ನೇ ವಿಶ್ವೇಭಿಃ ಸ್ವನೀಕ ದೇವೈರಿತ್ಯರ್ಧರ್ಚ ಆರಮೇತ್** ಎಂಬ ಸೂತ್ರದಿಂದ (ಆ. ೨-೧೭) ವಿವೃತವಾಗಿರುವುದು; ಮೇಲೆ ಹೇಳಿದ ಅಗ್ನಿಪ್ರಣಯನಕರ್ಮದಲ್ಲಿ ಅಗ್ನಿಯನ್ನು ಉತ್ತರವೇದಿಯಲ್ಲಿ ಸ್ಥಾಪಿಸುವಾಗ **ಸೀದ ಹೋತಃ** (ಈ ಸೂಕ್ತದ ೮ ನೇ ಋಕ್ಕು) ಎಂಬ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ನಿಹಿತೇಽಗ್ನೌ ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನ್** ಎಂಬ ಸೂತ್ರದಿಂದ (ಆ. ೨-೧೭) ವಿವೃತವಾಗಿರುವುದು; ಮತ್ತು ಅಗ್ನಿಯನ್ನು ಕಡೆಯುವ ಅರಣಿಯಲ್ಲಿ ಅಗ್ನಿಸಮಾರೋಪಣಮಾಡುವಾಗ **ಅಯಂ ತೇ ಯೋನಿಃ** (ಈ ಸೂಕ್ತದ ೧೦ ನೇ ಋಕ್ಕು) ಎಂಬ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಯಂ ತೇ ಯೋನಿರ್ಋತ್ವಿಯ ಇತ್ಯರಣೀ ಗಾರ್ಹಪತ್ಯೇ ಪ್ರತಿತಪೇತ್ಪಾಣೀ ವಾ** ಎಂಬ ಸೂತ್ರದಿಂದ (ಆ. ೩-೧೦) ವಿವೃತವಾಗಿರುವುದು.

———

## ಸೂಕ್ತ—೨೯

ಮಂಡಲ—೩ ॥ ಅನುವಾಕ—೨ ॥ ಸೂಕ್ತ—೨೯ ॥
ಅಷ್ಟಕ—೩ ॥ ಅಧ್ಯಾಯ—೧ ॥ ವರ್ಗ—೩೨. ೩೩, ೩೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬

ಋಷಿಃ—ವಿಶ್ವಾಮಿತ್ರಃ ॥
ದೇವತಾ—೧-೪, ೬-೧೬ ಅಗ್ನಿಃ । ೫. ಋತ್ವಿಜಃ ಅಗ್ನಿರ್ವಾ ॥
ಛಂದಃ—೧, ೪, ೧೦, ೧೨. ಅನುಷ್ಟುಪ್ । ೨, ೩, ೫, ೭-೯, ೧೩, ೧೬. ತ್ರಿಷ್ಟುಪ್ । ೬, ೧೧, ೧೪, ೧೫. ಜಗತೀ ॥

ಸಂಹಿತಾಪಾಠಃ

ಅಸ್ತೀದಮಧಿಮಂಥನಮಸ್ತಿ ಪ್ರಜನನಂ ಕೃತಂ ।
ಏತಾಂ ವಿಶ್ಪತ್ನೀಮಾ ಭರಾಗ್ನಿಂ ಮಂಥಾಮ ಪೂರ್ವಥಾ ॥ ೧ ॥

ಪದಪಾಠಃ

ಅಸ್ತಿ । ಇದಂ । ಅಧಿಽಮಂಥನಂ । ಅಸ್ತಿ । ಪ್ರಽಜನನಂ । ಕೃತಂ ।
ಏತಾಂ । ವಿಶ್ಪತ್ನೀಂ । ಆ । ಭರ । ಅಗ್ನಿಂ । ಮಂಥಾಮ । ಪೂರ್ವಽಥಾ ॥ ೧ ॥

ಸಾಯಣಭಾಷ್ಯಂ

ಯಜಮಾನೋಽಧ್ವರ್ಯುರ್ವಾದೀನ್ಸ್ರ್ತತಿ ಬ್ರೂತೇ । ಇದಮಗ್ನ್ಯರ್ಥಂ ಯೂಪಶಕಲಮಸ್ತ್ವಧಿಮಂಥನಂ । ಅರಣ್ಯಾ ಉಪರಿ ನಿಧೇಯಂ ಮಂಥನಸಾಧನಭೂತಂ ದಂಡರಜ್ಜ್ವಾದಿಕಮಸ್ತಿ । ಪ್ರಜನನಮಗ್ನಿಜನನಸಾಧನಭೂತಂ ದರ್ಭಪಿಂಜೂಲಂ ಕೃತಂ ಸಂಪಾದಿತಮಸ್ತಿ । ಯದ್ವಾ । ಪ್ರಜನನಂ ಮಂಥನದಂಡಸ್ಯ ವಿನ್ಯಾಸವಿಶೇಷಃ । ಯಸ್ಮಾದೇತಾನಿ ಯೂಪಶಕಲಾದೀನ್ಯಗ್ನಿಮಂಥನಸಾಧನಾನ್ಯಾಹೃತಾನಿ ಸಂತಿ ತಸ್ಮಾದ್ವಿಶ್ಪತ್ನೀಂ ವಿಶಾಂ ಪ್ರಜಾನಾಮಗ್ನಿಸಾಧ್ಯಾಗ್ನಿಹೋತ್ರದ್ವಾರಾ ಸ್ವರ್ಗಾದಿಫಲಸಂಪಾದನೇನ ಪಾಲಯಿತ್ರೀಮೇತಾಮರಣೀಮಾಭರ । ಹೇ ಅಧ್ವರ್ಯೋ ಆಹರ । ತಸ್ಯಾಮಾಹೃತಾಯಾಂ ಪೂರ್ವಥಾ ಯಥಾ ವಯಮಾಧಾನಕಾಲೇಽಗ್ನಿಮಮಥ್ನೀಮ ಯಥಾ ವಾ ಪೂರ್ವೇ ಮಹರ್ಷಯೋಽಗ್ನಿಮಮಂಥಿಷುಸ್ತದ್ವದ್ವಯಮೇನಮಗ್ನಿಮಸ್ಮಿನ್ಕರ್ಮಣಿ ಮಂಥಾಮ । ಮಂಥನೇನ ನಿಷ್ಪನ್ನಂ ಕರವಾಮ ॥ ಅಸ್ತೀತಿ ಪದದ್ವಯಸ್ಯ ಪಾದಾದಿತ್ವಾದನಿಘಾತಃ । ವಿಶ್ಪತ್ನೀಂ । ಪತಿಶಬ್ದಸ್ಯ ವಿಭಾಷಾ ಸಪೂರ್ವಸ್ಯೇತಿ ಙೀಪ್ ನಕಾರಶ್ಚಾಂತಾದೇಶಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಭರ । ಹೃಞ್ ಹರಣ ಇತ್ಯಸ್ಯ ಲೋಟಿ ಹೃಗ್ರಹೋರ್ಭಶ್ಛಂದಸೀತಿ ಭಕಾರಃ । ಮಂಥಾಮ । ಮಂಥ ವಿಲೋಡನೇ । ಲೋಟಿ ರೂಪಂ । ನಿಘಾತಃ। ಪೂರ್ವಥಾ । ಪೂರ್ವಶಬ್ದಾದಿವಾರ್ಥೇ ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸೀತಿ ಥಾಲ್ ಪ್ರತ್ಯಯಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥

ಪ್ರತಿಪದಾರ್ಥ

ಇದಂ—ಅಗ್ನ್ಯರ್ಥವಾದ ಈ ಯೂಪಶಕಲವು । **ಅಸ್ತಿ**—ಸಿದ್ಧವಾಗಿದೆ । **ಅಧಿಮಂಥನಂ**—ಅರಣಿಯ ಮೇಲೆ ಇಟ್ಟು ಕಡೆಯುಲು ಸಾಧನವಾದ ದಂಡವೂ ರಜ್ಜುವೂ ಸಹ । **ಅಸ್ತಿ**—ಸಿದ್ಧವಾಗಿದೆ । **ಪ್ರಜನನಂ**—ಅಗ್ನ್ಯುತ್ಪಾದನೆಗೆ ಬೇಕಾದ ದರ್ಭದ ಕೂರ್ಚವು । **ಕೃತಂ**—ಮಾಡಿ ಸಿದ್ಧವಾಗಿದೆ । **ವಿಶ್ಪತ್ನೀಂ**—ಯಜ್ಞಕರ್ತರಾದ ಪ್ರಜೆಗಳನ್ನು ಪಾಲಿಸತಕ್ಕ । **ಏತಾಂ**—ಈ ಅರಣಿಯನ್ನು । **ಆ ಭರ**—ತೆಗೆದುಕೊಂಡು ಬಾ (ಅನಂತರ) । **ಪೂರ್ವಥಾ**—ಹಿಂದಿನಕಾಲದಲ್ಲಿ ಋಷಿಗಳು ಅಗ್ನಿಮಥನವನ್ನು ಮಾಡಿದಂತೆಯೇ ಈ ಯಾಗಕಾಲದಲ್ಲಿಯೂ ಸಹ । **ಅಗ್ನಿಂ**—ಅಗ್ನಿಯನ್ನು । **ಮಂಥಾಮ**—ಕಡೆದು ಉತ್ಪನ್ನವಾಗುವಂತೆ ಮಾಡೋಣ ॥

ಭಾವಾರ್ಥ

ಅಗ್ನ್ಯರ್ಥವಾದ ಯೂಪಶಕಲವು ಸಿದ್ಧವಾಗಿದೆ. ಅರಣಿಯಮೇಲೆ ಇಟ್ಟು ಕಡೆಯುವ ಸಾಧನವಾದ ದಂಡವೂ, ರಜ್ಜುವೂ ಸಹ ಸಿದ್ಧವಾಗಿದೆ. ಅಗ್ನ್ಯುತ್ಪಾದನೆಗೆ ಬೇಕಾದ ದರ್ಭದ ಕೂರ್ಚವೂ ಸಹ ನಿರ್ಮಿತವಾಗಿದೆ. ಎಲೈ ಅಧ್ವರ್ಯುವೇ, ಯಜ್ಞಕರ್ತರಾದ ಪ್ರಜೆಗಳನ್ನು ಪಾಲಿಸತಕ್ಕ ಅರಣಿಯನ್ನು ತೆಗೆದುಕೊಂಡು ಬಾ. ಅನಂತರ ಹಿಂದಿನಕಾಲದಲ್ಲಿ ಋಷಿಗಳು ಅಗ್ನಿಮಥನವನ್ನು ಮಾಡಿದಂತೆಯೇ, ಈ ಯಾಗಕಾಲದಲ್ಲಿಯೂ ಸಹ ಅಗ್ನಿಯನ್ನು ಕಡೆದು ಉತ್ಪನ್ನವಾಗುವಂತೆ ಮಾಡೋಣ.

## English translation

This, the apparatus of attrition is ready ; the generation ( of the flame ) is ready ; take up this ( stick ) the protectress of mankind, and let us churn the fire as has been done of old.

### ವಿಶೇಷವಿಷಯಗಳು

ಯಜಮಾನನು ಅಧ್ವರ್ಯುವೇ ಮೊದಲಾದ ಋತ್ವಿಜರನ್ನು ಕುರಿತು ಹೇಳುವ ವಾಕ್ಯವೆಂದು ಸಾಯಣರು ವಿವರಿಸಿದ್ದಾರೆ.

**ಇದಂ ಅಸ್ತಿ**—ಇದಂ ಶಬ್ದವು ಸರ್ವನಾಮನಳಲ್ಲಿ ಪರಿಗಣಿತವಾಗಿದೆ. ಬುದ್ಧಿಸ್ಥವಾದ ವಿಷಯಪರಾಮರ್ಶಕವೆಂದು ಇದಂ ಶಬ್ದಾರ್ಥವನ್ನು ನಿರ್ಣಯಮಾಡಿರುವುದರಿಂದ ಇಲ್ಲಿ ಯೂಪಶಕಲವು (ಯೂಪಸ್ತಂಭವು) ಇದಂ ಶಬ್ದದಿಂದ ಬೋಧ್ಯವಾಗಿರುವುದೆಂದೂ ಯಜಮಾನನ ಯಜ್ಞಮಾಡುವ ಉದ್ದೇಶವು ಗಮ್ಯವಾಗಿ ಯಜ್ಞಸಾಮಗ್ರಿಗಳು ಸಿದ್ಧವಾಗಿರುವುದೆಂದೂ ಈ ಮಂತ್ರದಲ್ಲಿ ಸೂಚಿತವಾಗಿದೆ. ಅದರಲ್ಲಿ ಈ ವಾಕ್ಯದಿಂದ ದೇವತೆಗಳನ್ನು ಯಾಗದಿಂದ ತೃಪ್ತಿಪಡಿಸಲು ಪಶುಬಂಧನಕ್ಕಾಗಿ ಯೂಪಸ್ತಂಭವು ಆಹೃತವಾಗಿ ಸಿದ್ಧವಾಗಿರುತ್ತದೆ ಎಂದು ಅರ್ಥವು ವಿವೃತವಾಗಿದೆ.

**ಅಧಿಮಂಥನಂ ಅಸ್ತಿ**—ಅಧಿಮಂಥನ ಶಬ್ದದಿಂದ ಅಗ್ನಿಯನ್ನು ಉತ್ಪನ್ನಮಾಡಲು ಮಥನಕ್ರಿಯಾಸಾಧನವಾದ ಅರಣಿಯ ಮೇಲುಭಾಗದಲ್ಲಿ ಇಟ್ಟು ಕಡೆಯುವ ದಂಡವೂ ರಜ್ಜುವೂ (ಹಗ್ಗವೂ) ಇವೇ ಮೊದಲಾದವುಗಳು ಉಕ್ತವಾಗಿರುತ್ತವೆ ಎಂದು ಅರ್ಥವು ವರ್ಣಿತವಾಗಿದೆ.

**ಪ್ರಜನನಂ ಕೃತಂ—ಅಗ್ನಿಜನನಸಾಧನಂ ದರ್ಭಪಿಂಜೂಲಂ ಸಂಪಾದಿತಂ । ಯದ್ವಾ ಪ್ರಜನನಂ ಮಂಥನದಂಡಸ್ಯ ವಿನ್ಯಾಸವಿಶೇಷಃ ।** ಪ್ರಜನನ ಶಬ್ದಾರ್ಥವು ದ್ರವ್ಯರೂಪವಾಗಿಯೂ ಅಥವಾ ಕ್ರಿಯಾರೂಪವಾಗಿಯೂ ಇರಲು ಸಾಧ್ಯವೆಂದು ಅರ್ಥವನ್ನು ವಿವರಿಸಿ, ಅರಣಿಗಳಲ್ಲಿ ಉತ್ಪನ್ನನಾಗುವ ಅಗ್ನಿಯ ಉತ್ಪತ್ತಿಯು ಉಂಟಾಗಲು ಅರಣಿಗಳ ಮೇಲುಗಡೆಯಲ್ಲಿ ಇರಿಸುವ ದರ್ಭೆಯ ಚೂರುಗಳು ಸಿದ್ಧಮಾಡಲ್ಪಟ್ಟವೆ ಎಂದೂ, ಅಥವಾ ಅರಣಿಯಲ್ಲಿ ಅಗ್ನಿಯ ಉತ್ಪತ್ತಿಗಾಗಿ ಮಥನಕ್ರಿಯೆಯನ್ನು ಆಚರಿಸಲು ಅನುಕೂಲವಾಗಿರುವಂತೆ ಮಂಥನದಂಡವೂ ಕೃತವಾಗಿರುವುದೆಂದೂ ವಿವೃತವಾಗಿದೆ.

**ವಿಶ್ಪತ್ನೀಮೇತಾಮಾಭರ**- ಈ ವಾಕ್ಯದಿಂದ ಯಜಮಾನನು ಅಧ್ವರ್ಯುವೆಂಬ ಋತ್ವಿಜನನ್ನು ಸಂಬೋಧಿಸಿ ಅಗ್ನಿಯನ್ನು ಮಥನಮಾಡಿ, ಉತ್ಪನ್ನಮಾಡಲು ಅನುಗುಣವಾದ ಸಾಧನಗಳು ಎಲ್ಲವೂ ಸಿದ್ಧವಾಗಿರುವ ಕಾರಣ ಅರಣಿಯನ್ನು ಅಧ್ವರ್ಯುವು ಅಗ್ನಿಮಥನಕ್ಕಾಗಿ ತರಬೇಕೆಂಬ ಯಜಮಾನನ ಆಶಂಸನೆಯು ಸೂಚಿತವಾಗಿರುತ್ತದೆ. ವಿಶ್ಪತ್ನೀ ಎಂಬ ಪದಕ್ಕೆ **ಪ್ರಜಾನಾಂ ಪಾಲಯಿತ್ರೀ** ಅಗ್ನಿಯಿಂದ ಸಾಧ್ಯವಾಗುವ ಅಗ್ನಿಹೋತ್ರವನ್ನು ಆಚರಿಸುವುದರ ಮೂಲಕ ಸ್ವರ್ಗವೇ ಮೊದಲಾದ ಪ್ರಭೂತಸುಖಜನಕವಾದ ಫಲಗಳನ್ನು ಉಂಟುಮಾಡಿ ಪ್ರಜೆಗಳನ್ನು ರಕ್ಷಿಸುವ ಅರಣಿಯು ಎಂದು ಅರ್ಥವು ವಿವೃತವಾಗಿದೆ.

**ಪೂರ್ವಥಾ**—ಈ ಪದಕ್ಕೆ ಯಜ್ಞವನ್ನು ಆಚರಿಸಲು ಉಕ್ತವಾದ ಆಯಾಯ ಕಾಲಗಳಲ್ಲಿ ಯಜಮಾನರು ಅಗ್ನಿಯನ್ನು ಮಥನಮಾಡಿರುವಂತೆ ಎಂದು ಒಂದುವಿಧವಾದ ಅರ್ಥವನ್ನು ಹೇಳಿದೆ. ಅಥವಾ **ಯಥಾ ವಾ ಪೂರ್ವೇ ಮಹರ್ಷಯೋ ಅಗ್ನಿಮಂಥಿಷುಸ್ತದ್ವತ್.** ಈಗ ಯಾಗವನ್ನು ಆಚರಿಸಲು ಅಭಿಸಂಧಿಯನ್ನು ಹೊಂದಿರುವ

ಯಜಮಾನರಿಗಿಂತಲೂ ಹಿಂದಿನವರಾದ ಮಹರ್ಷಿಗಳು ಯಾಗವನ್ನು ಆಚರಿಸುವುದಕ್ಕಾಗಿ ಅಗ್ನಿಯನ್ನು ಮಥನಮಾಡಿರುವಂತೆ, ಎಂದು ಎರಡನೆಯ ಅರ್ಥವೂ ವಿವೃತವಾಗಿದೆ.

**ಅಗ್ನಿಂ ಮಂಥಾಮ**—**ಅಸ್ಮಿನ್ ಕರ್ಮಣಿ ಮಂಥನೇನ ನಿಷ್ಪನ್ನಂ ಕರವಾಮ.** ಅಗ್ನ್ಯಾಧಾನರೂಪವಾದ ಕರ್ಮದಲ್ಲಿ (ಅಗ್ನಿಯನ್ನು) ಅರಣಿಗಳಲ್ಲಿ ಮಥನಮಾಡಿ ಅಗ್ನಿಯು ಉತ್ಪನ್ನವಾಗುವಂತೆ ಮಾಡೋಣವೆಂಬ ಯಜಮಾನನ ಆಶಂಸೆಯು ಉಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

**ಅಸ್ತಿ**—ಅಸ ಭುವಿ. ಧಾತು. ಅದಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ. ಮುಂದೆ ಇರುವ ಅಸ್ತಿ ಎಂಬುದೂ ಇದೂ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಧಿಮಂಥನಂ**—ಮಂಥ ವಿಲೋಡನೇ ಧಾತು. ಲ್ಯುಟ್ ಪ್ರತ್ಯಯ ಬಂದಾಗ **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಿಶ್ಪತ್ನೀಃ**—ಪತಿ ಶಬ್ದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ ಸಪೂರ್ವಕವಾದುದರಿಂದ **ವಿಭಾಷಾಸಪೂರ್ವಸ್ಯ** (ಪಾ. ಸೂ. ೪-೧-೩೪) ಎಂಬುದರಿಂದ ಙೀಷ್ ಪ್ರತ್ಯಯ. ನಕಾರ ಅಂತಾದೇಶವಾಗಿ ಬರುತ್ತದೆ. ವಿಶ್ಪತ್ನೀ ಎಂದು ರೂಪವಾಗುತ್ತದೆ. **ಪರಾದಿಶ್ಛಂದಸಿ ಬಹುಲಂ** ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಭರ**—ಹೃಞ್ ಹರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಂಥಾಮ**—ಮಂಥ ವಿಲೋಡನೇ. ಧಾತು. ಲೋಟ್ ಉತ್ತಮಪುರುಷ ಬಹುವಚನಾಂತರೂಪ. ಹಿಂದಿನಂತೆ ತಿಙಂತನಿಘಾತಸ್ವರ ಬರುತ್ತದೆ.

**ಪೂರ್ವಥಾ**—ಪೂರ್ವ ಶಬ್ದದಮೇಲೆ ಸಾದೃಶ್ಯಾರ್ಥತೋರುವಾಗ **ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸಿ** (೫-೩-೧೧೧) ಎಂಬುದರಿಂದ ಥಾಲ್ ಪ್ರತ್ಯಯ. ಇದು ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭಇವ ಸುಧಿತೋ ಗರ್ಭಿಣೀಷು ।**

**ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥ ೨ ॥**

ಪದಪಾಠಃ

ಅರಣ್ಯೋಃ । ನಿऽಹಿತಃ । ಜಾತऽವೇದಾಃ । ಗರ್ಭಃऽಇವ । ಸುऽಧಿತಃ । ಗರ್ಭಿಣೀಷು ।
ದಿವೇऽದಿವೇ । ಈಡ್ಯಃ । ಜಾಗೃವತ್ऽಭಿಃ । ಹವಿಷ್ಮತ್ऽಭಿಃ । ಮನುಷ್ಯೇಭಿಃ । ಅಗ್ನಿಃ ॥ ೨ ॥

ಸಾಯಣಭಾಷ್ಯಂ .

ಜಾತವೇದಾಃ ಸರ್ವವಿಷಯಜ್ಞಾನವಾನಯಮಗ್ನಿರರಣ್ಯೋರ್ನಿಹಿತಃ । ದೇವೈರ್ಯಜ್ಞಾರ್ಥಂ ನಿತರಾಂ ಸ್ಥಾಪಿತೋಽಸ್ತಿ । ಅತ್ರ ದೃಷ್ಟಾಂತಃ । ಗರ್ಭ ಇವೇತಿ । ಯಥಾ ಗರ್ಭೋ ಗರ್ಭಿಣೀಷು ಸ್ತ್ರೀಷು ಸುಧಿತಃ ಸುಷ್ಠು ನಿಹಿತೋ ವರ್ತತೇ ತದ್ವತ್ । ಸ ತಾದೃಶೋಽಗ್ನಿರ್ಹವಿಷ್ಮದ್ಭಿಃ ಸಂಭೃತಹವಿಷ್ಕೈರತ ಏವ ಜಾಗೃವದ್ಭಿಃ ಕರ್ಮಣಿ ಜಾಗರೂಕೈರ್ಮನುಷ್ಯೇಭಿರ್ಮನುಷ್ಯೈರಸ್ಮಾಭಿರ್ದಿವೇ ದಿವೇ ಪ್ರತ್ಯಹಮುತ್ಪತ್ತ್ಯರ್ಥಮೀಡ್ಯಃ । ಸ್ತುತಿರೂಪಾಭಿರ್ಗೀರ್ಭಿಃ ಸ್ತೋತವ್ಯಃ ॥ ಅರಣ್ಯೋಃ । ಋ ಗತೌ ಅರ್ತಿಸೃಧೃಧಮೀತ್ಯಾದಿನಾ ಅನಿಃ । ಪ್ರತ್ಯಯಸ್ವರಃ । ನಿಹಿತಃ । ದಧಾತೇಃ ಕರ್ಮಣಿ ನಿಷ್ಠಾಯಾಂ ದಧಾತೇರ್ಹಿರಿತಿ ಹಿರಾದೇಶಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸುಧಿತಃ । ದಧಾತೇಃ ಕರ್ಮಣಿ ನಿಷ್ಠಾ । ತಸ್ಮಿನ್ ಸುಧಿತ ವಸುಧಿತೇತ್ಯಾದಿನಾ ನಿಪಾತನಾದ್ಧಿರಾದೇಶಃ । ದಿವೇದಿವೇ । ದಿವು ಕ್ರೀಡಾದೌ । ಇಗುಪಧಲಕ್ಷಣಃ ಕಃ । ನಿತ್ಯವೀಪ್ಸಯೋರಿತಿ ದ್ವಿರ್ವಚನಂ । ತಸ್ಯಾಮ್ರೇಡಿತತ್ವಾದನುದಾತ್ತತ್ವೇ ಪೂರ್ವಪದಸ್ವರಃ । ಜಾಗೃವದ್ಭಿಃ । ಜಾಗೃ ನಿದ್ರಾಕ್ಷಯೇ ಇತ್ಯಸ್ಯ ಕ್ವಸೌ ರೂಪಂ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮಿತಿ ವಿಕಲ್ಪಿತತ್ವಾದ್ದ್ವಿರ್ವಚನಾಭಾವಃ । ವಸುಸ್ರಂಸುಧ್ವಂಸ್ವನಡುಹಾಂ ದಃ । ಪಾ. ೮-೨-೭೨ । ಇತಿ ವಸೋಃ ಸಕಾರಸ್ಯ ದತ್ವಂ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಗರ್ಭಿಣೀಷು**—ಗರ್ಭಿಣೀಸ್ತ್ರೀಯರಲ್ಲಿ । **ಸುಧಿತಃ**—ರಕ್ಷಿತವಾಗಿಡಲ್ಪಟ್ಟ । **ಗರ್ಭಇವ**—ಗರ್ಭದಂತೆ । **ಜಾತವೇದಾಃ**—ಸಕಲವಿಷಯಜ್ಞನಾದ ಅಗ್ನಿಯು । **ಅರಣ್ಯೋಃ**—ಅರಣಿಗಳಲ್ಲಿ । **ನಿಹಿತಃ**—ರಕ್ಷಿತನಾಗಿಡಲ್ಪಟ್ಟಿದ್ದಾನೆ । **ಅಗ್ನಿಃ**—ಪೂಜ್ಯನಾದ ಅಗ್ನಿಯು । **ಹವಿಷ್ಮದ್ಭಿಃ**—ಹವಿಸ್ಸನ್ನು ಶೇಖರಿಸಿರುವವರೂ । **ಜಾಗೃವದ್ಭಿಃ**—ಕರ್ಮಗಳಲ್ಲಿ ಜಾಗರೂಕರಾಗಿರುವವರೂ ಆದ । **ಮನುಷ್ಯೇಭಿಃ**—ಯಜ್ಞಕರ್ತರಾದ ಮಾನವರಿಂದ । **ದಿವೇದಿವೇ**—ಪ್ರತಿದಿನವೂ । **ಈಡ್ಯಃ**—ಸ್ತುತಿಸಲ್ಪಡುವವನಾಗುತ್ತಾನೆ ॥

ಭಾವಾರ್ಥ

ಗರ್ಭಿಣೀಸ್ತ್ರೀಯರಲ್ಲಿ ರಕ್ಷಿತವಾಗಿಡಲ್ಪಟ್ಟ ಗರ್ಭದಂತೆ ಸಕಲವಿಷಯಜ್ಞನಾದ ಅಗ್ನಿಯು ಅರಣಿಗಳಲ್ಲಿ ರಕ್ಷಿತವಾಗಿಡಲ್ಪಟ್ಟಿದ್ದಾನೆ. ಪೂಜ್ಯನಾದ ಅಗ್ನಿಯು, ಹವಿಸ್ಸನ್ನು ಸಂಪಾದಿಸಿರುವವರೂ ಕರ್ಮಗಳಲ್ಲಿ ಜಾಗರೂಕರಾಗಿರುವವರೂ, ಯಜ್ಞಕರ್ತರೂ ಆದ ಮಾನವರಿಂದ ಪ್ರತಿದಿನವೂ ಸ್ತುತಿಸಲ್ಪಡುವವನಾಗುತ್ತಾನೆ.

## English Ttranslation

Jatavedas has been deposited in the two sticks as the embryo is deposited in pregnant women : Agni is to be adored day by day by vigilant men laden with oblations.

ವಿಶೇಷವಿಷಯಗಳು.

**ಜಾತವೇದಾಃ ಆರಣ್ಯೋರ್ನಿಹಿತಃ**— **ಸರ್ವವಿಷಯಜ್ಞಾನವಾನಯಮಗ್ನಿಃ ದೇವೈರ್ಯಜ್ಞಾರ್ಥಂ ನಿತರಾಂ ಸ್ಥಾಪಿತೋಽಸ್ತಿ** । ಎಲ್ಲವನ್ನೂ ತಿಳಿಯುವ ಪ್ರಭೂತವಾದ ಜ್ಞಾನವನ್ನು ಹೊಂದಿರುವ ಅಗ್ನಿಯು ಎಂದು ಜಾತವೇದಶ್ಶಬ್ದಕ್ಕೆ ಅರ್ಥವನ್ನು ವಿವರಿಸಿ, ಈಪ್ರಕಾರವಾದ ಮಾಹಾತ್ಮ್ಯವುಳ್ಳ ಅಗ್ನಿಯು ಯಜ್ಞವನ್ನು ಆಚರಿಸುವುದ ಕ್ಕಾಗಿ ದೇವತೆಗಳಿಂದ ಅರಣಿಗಳಲ್ಲಿ ಇಡಲ್ಪಟ್ಟಿದ್ದಾನೆಂದು ವರ್ಣಿಸಿದೆ.

**ಗರ್ಭ ಇವ ಸುಧಿತೋ ಗರ್ಭಿಣೀಷು**— ಈ ವಾಕ್ಯವು, ಅಗ್ನಿಯು ಅರಣಿಗಳಲ್ಲಿ ಸ್ಥಿತನಾಗಿರುವ ವಿಷಯದಲ್ಲಿ ಉಪಮಾನವಾಕ್ಯವಾಗಿ ಪ್ರಯುಕ್ತವಾಗಿದೆ. ಗರ್ಭವತಿಯಾಗಿರುವ ಸ್ತ್ರೀಯರಲ್ಲಿ ಗರ್ಭವು ಸ್ಥಾಪಿತವಾಗಿರುವಂತೆ, ಅಗ್ನಿಯು ದೇವತೆಗಳಿಂದ ಅರಣಿಗಳಲ್ಲಿ ಇಡಲ್ಪಟ್ಟಿರುವನೆಂದು ಹೋಲಿಸಿ ಹೇಳಿದೆ.

**ಹವಿಷ್ಮದ್ಭಿಃ ಜಾಗೃವದ್ಭಿಃ ದಿವೇದಿವೇ ಈಡ್ಯಃ**— ಯಜ್ಞವನ್ನು ಆಚರಿಸಲು ಹವಿಸ್ಸನ್ನು ಸಿದ್ಧಪಡಿಸಿ, ಯಜ್ಞಕರ್ಮದ ಆಚರಣೆಯಲ್ಲಿ ಜಾಗರೂಕತೆಯನ್ನು ಹೊಂದಿರುವ ಋತ್ವಿಜರೊಡನೆ ಕೂಡಿರುವ ಯಜಮಾನರು ಆಯಾಯ ದಿವಸಗಳಲ್ಲಿ ಅಗ್ನಿಯು (ಉತ್ಪನ್ನಮಾಡುವುದಕ್ಕಾಗಿಯೂ) ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿಯೂ ಆಯಾಯ ಸ್ತುತಿಗಳಿಂದ ಸ್ತುತ್ಯರ್ಹನಾಗಿರುವವನೂ ಆಗಿರುವಕಾರಣ ಈ ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡಿ, ಯಜ್ಞವನ್ನು ಆಚರಿಸಿ, ಸ್ತುತಿಸುವರು ಎಂದು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಅರಣ್ಯೋಃ**— ಋ ಗತೌ. ಧಾತು. **ಅರ್ತಿಸೃಧೃಧಮಿ**—(ಉ. ಸೂ. ೨–೨೪೯) ಎಂಬುದರಿಂದ ಅನಿ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯ ಯದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ದ್ವಿವಚನಾಂತರೂಪ.

**ನಿಹಿತಃ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. **ಗತಿರನಂತರಃ** (ಪಾ. ಸೂ. ೬–೨–೪೯) ಎಂಬುದ ರಿಂದ ಗತಿಗೆ (ನಿ) ಉದಾತ್ತಸ್ವರ ಬರುತ್ತದೆ.

**ಸುಧಿತಃ**— ಪೂರ್ವೋಕ್ತ ಧಾತುವಿಗೆ ಕರ್ಮಣಿಯಲ್ಲಿ ಕ್ತಪ್ರತ್ಯಯ ಪರವಾದಾಗ ಸು ಉಪಪದವಾಗಿರುವಾಗ **ಸುಧಿತವಸುಧಿತ**—(ಪಾ. ಸೂ. ೭-೪-೪೫) ಎಂಬುದರಿಂದ ಧಿ ಭಾವ ಬಂದು ನಿಪಾತಿತವಾಗಿದೆ. ಹಿಂದಿನಂತೇ ಗತಿಗೆ ಉದಾತ್ತಸ್ವರ ಬರುತ್ತದೆ

**ದಿವೇದಿವೇ**—ದಿವು ಕ್ರೀಡಾದಿಷು. ಧಾತು. ಇಕಾರ ಉಪಧೆಯಾಗಿರುವುದರಿಂದ **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ನಿತ್ಯವೀಪ್ಸಯೋಃ** (ಪಾ. ಸೂ. ೮-೧-೧) ಎಂಬುದರಿಂದ ದ್ವಿರ್ವಚನ. ಅವರಲ್ಲಿ ಪರರೂಪಕ್ಕೆ **ತಸ್ಯ ಪರಮಾಮ್ರೇಡಿತಂ** ಎಂಬುದರಿಂದ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂಚ** (ಪಾ. ಸೂ. ೮-೧-೩) ಎಂಬುದರಿಂದ ಅದು ಸರ್ವಾನುದಾತ್ತ ಸ್ವರ ವನ್ನು ಹೊಂದುತ್ತದೆ.

**ಈಡ್ಯಃ**—**ಈಡವಂಡವೃ**— (ಪಾ. ಸೂ. ೬-೧-೧೧೪) ಎಂಬುದರಿಂದ ಣ್ಯತ್ ಪ್ರತ್ಯಯಾಂತವಾದಾಗ **ಆದ್ಯುದಾತ್ತಸ್ವರ ಬರುತ್ತದೆ.**

**ಜಾಗೃವದ್ಭಿಃ**—ಜಾಗೃ ನಿದ್ರಾಕ್ಷಯೇ. ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ ಕ್ವಸುರಾದೇಶ. **ದ್ವಿರ್ವಚನಪ್ರಕರಣೇಛಂದಸಿ ವೇತಿ ವಕ್ತವ್ಯಂ** ಎಂಬ ವಚನದಿಂದ ದ್ವಿತ್ವ ವಿಕಲ್ಪವೆಂದುದರಿಂದ ಇಲ್ಲಿ ಕ್ವಸುಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬರುವುದಿಲ್ಲ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಜಾಗೃವಸ್ ಶಬ್ದವಾಗುತ್ತದೆ. ಇದಕ್ಕೆ ತೃತೀಯಾ ಬಹುವಚನ ಪರವಾದಾಗ **ವಸುಸ್ರಂಸು ಧ್ವಂಸ್ವನಡುಹಾಂ ದಃ** (ಪಾ. ಸೂ. ೮-೨-೭೨) ಎಂಬುದರಿಂದ ವಸುವಿನ ಸಕಾರಕ್ಕೆ ದತ್ವ. ಪ್ರತ್ಯಯಸ್ವರದಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಮನುಷ್ಯೇಭಿಃ**—ವಾ ಛಂದಸಿ ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪವಾದುದರಿಂದ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

ಸಂಹಿತಾಪಾಠಃ

**ಉತ್ತಾನಾಯಾಮವ ಭರಾ ಚಿಕಿತ್ವಾನ್ತ್ಸದ್ಯಃ ಪ್ರವೀತಾ ವೃಷಣಂ ಜಜಾನ ।**
**ಅರುಷಸ್ತೂಪೋ ರುಶದಸ್ಯ ಪಾಜ ಇಳಾಯಾಸ್ಪುತ್ರೋ ವಯುನೇಽಜನಿಷ್ಟ ॥ ೩ ॥**

ಪದಪಾಠಃ

**ಉತ್ತಾನಾಯಾಂ । ಅವ । ಭರ । ಚಿಕಿತ್ವಾನ್ । ಸದ್ಯಃ । ಪ್ರಽವೀತಾ । ವೃಷಣಂ । ಜಜಾನ ।**
**ಅರುಷಽಸ್ತೂಪಃ । ರುಶತ್ । ಅಸ್ಯ । ಪಾಜಃ । ಇಳಾಯಾಃ । ಪುತ್ರಃ । ವಯುನೇ । ಅಜನಿಷ್ಟ ॥ ೩ ॥**

ಸಾಯಣಭಾಷ್ಯಂ

ಚಿಕಿತ್ವಾನ್ ಜ್ಞಾನವಾನಧ್ವರ್ಯುಸ್ತ್ವಮುತ್ತಾನಾಯಾಮುಧರಾರಣ್ಯಾಮುತ್ತಾನಶಯಾಯಾಮುತ್ತರಾರಣಿಮವ ಭರ । ಅಧೋಮುಖಾಂ ಧಾರಯ । ಅನಂತರಂ ಸಾಧರಾರಣಿಃ ಸದ್ಯಃ ಪ್ರವೀತಾ ತದಾನೀಮೇವ ನಿಷಿಕ್ತರೇತಸ್ಕಾ ಸತೀ ವೃಷಣಂ ಕಾಮಾನಾಂ ವರ್ಷಕಮಗ್ನಿಂ ಜಜಾನ । ಜನಯತು । ಅಥಾಸ್ಯಾಗ್ನೇರುಶತ್ತಮೋ ವಿನಾಶಯತ್ ಪಾಜಸ್ತೇಜೋಮಾತ್ರಂ ತತ್ರಾಭೂತ್ । ಅನಂತರಮರುಷಸ್ತೂಪ ಆರೋಚಮಾನತೇಜಃಸಂಘೋಪೇತ ಇಳಾಯಾಸ್ಪುತ್ರ ಉತ್ತರವೇದ್ಯಾ ಉತ್ಪನ್ನೋಽಗ್ನಿರ್ವಯುನೇಽರಣ್ಯಾಂ ಯೋನಿಸ್ಥಾನೇಽಜನಿಷ್ಟ । ಅಜನಿ । ಜಜಾನ । ಜನ ಜನನೇ । ಲೋಪರ್ಥೇ ಲಿಟಿ ಬಹುಲಮನ್ಯತ್ರಾಪಿ ಸಂಜ್ಞಾಛಂದಸೋರಿತಿ ಣಿಲೋಪಃ । ಪ್ರತ್ಯಯಾಂತತ್ವಾಭಾವಾದಾಮ್ನ ಭವತಿ । ನಿಘಾತಃ । ಅರುಷಸ್ತೂಪಃ । ನ ವಿದ್ಯತೇ ರುಷಃ ಕ್ರೋಧೋ ಯಸ್ಯೇತ್ಯರುಷಃ । ಕ್ರೋಧರಾಹಿತ್ಯೇನ ರೋಚಮಾನ ಇತ್ಯರ್ಥಃ । ನಞ್‌ಸುಭ್ಯಾಮಿತ್ಯುತ್ತರ ಪದಾಂತೋದಾತ್ತತ್ವಂ । ಷ್ಟುಞ್ ಸ್ತುತೌ । ಸ್ತ್ಯಾತೇರ್ದೀರ್ಘಶ್ಚ । ಉ. ೩-೩೦೫ । ಇತಿ ಪಪ್ರತ್ಯಯಃ ಕಿಚ್ಚ ಧಾತೋರ್ದೀರ್ಘಶ್ಚ । ಸ್ತೂಯತ ಇತಿ ಸ್ತೂಪಸ್ತೇಜಃಸಂಘಃ । ಅರುಷ ಆರೋಚಮಾನಸ್ತೇಜಃಸಂಘೋ ಯಸ್ಯೇತಿ ಬಹುವ್ರೀಹೌ ಪೂರ್ವಪದಸ್ವರಃ । ರುಶತ್ । ರುಶ ಹಿಂಸಾಯಾಂ । ಶತರಿ ರೂಪಂ । ವಯುನೇ । ಅಜ ಗತಿಕ್ಷೇಪಣಯೋಃ । ಅಜಿ ಯಮಿ ಶೀಙ್‌ಭ್ಯಶ್ಚೇತ್ಯುನನ್ ಚಿತ್ಸಂಜ್ಞಕಃ । ಅಜತಿ ವೀಯತೇ ವಾ ವಯುನಮುಂಗಂ । ಪ್ರತ್ಯಯಸ್ಯ ವ್ಯತ್ಯಯೇನಾದ್ಯುದಾತ್ತತ್ವಂ । ಅಜನಿಷ್ಟ । ಜನೀ ಪ್ರಾದುರ್ಭಾವೇ । ಲುಙಿ ಸಿಚಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**ಚಿಕಿತ್ವಾನ್**—ಪ್ರಜ್ಞಾವಂತನಾದ ನೀನು (ಅಧ್ವರ್ಯುವು) | **ಉತ್ತಾನಾಯಾಂ**—ಮೇಲುಭಾಗಕ್ಕೆ ಮುಖವನ್ನು ಮಾಡಿಕೊಂಡಿರತಕ್ಕ ಕೆಳಗಡೆಯ ಅರಣಿಯಮೇಲೆ | **ಅವ ಭರ**—ಮೇಲುಗಡೆಯ ಅರಣಿಯನ್ನು ಅಧೋಮುಖವಾಗಿ ಮಾಡಿ ಇಡು | **ಸದ್ಯಃ**—ಹಾಗೆ ಮಾಡಿದೊಡನೆಯೇ (ಅರಣಿಯು) | **ಪ್ರವೀತಾ**—ರೇತೋಯುಕ್ತಳೂ ಗರ್ಭವತಿಯೂ ಆಗಿ | **ವೃಷಣಂ**—ಇಷ್ಟಾರ್ಥಗಳನ್ನು ಸುರಿಸತಕ್ಕ ಅಗ್ನಿಯನ್ನು | **ಜಜಾನ**—ಸೃಷ್ಟಿಸುತ್ತಾಳೆ (ಅನಂತರ) | **ಅಸ್ಯ**—ಈ ಅಗ್ನಿಯ | **ರುಶತ್**—ತಮಸ್ಸನ್ನು ನಾಶಮಾಡತಕ್ಕ | **ಪಾಜಃ**—ತೇಜಸ್ಸು (ಉತ್ಪನ್ನವಾಗುತ್ತದೆ) | **ಅರುಷಸ್ತೂಪಃ**—ಆಕರ್ಷಕವಾದ ತೇಜಃಪುಂಜದಿಂದ ಕೂಡಿದ | **ಇಳಾಯಾಃಪುತ್ರಃ**—ಉತ್ತರವೇದಿರೂಪವಾದ ಪೃಥ್ವಿಯಲ್ಲಿ ಉತ್ಪನ್ನನಾದ ಅಗ್ನಿಯು | **ವಯುನೇ**—ಅರಣಿರೂಪವಾದ ಯೋನಿಯಲ್ಲಿ | **ಅಜನಿಷ್ಟ**—ಉತ್ಪನ್ನನಾಗಿದ್ದಾನೆ ||

ಭಾವಾರ್ಥ

ಅಧ್ವರ್ಯುವೇ, ಪ್ರಜ್ಞಾವಂತನಾದ ನೀನು ಮೇಲುಭಾಗಕ್ಕೆ ಮುಖವನ್ನು ಮಾಡಿಕೊಂಡಿರತಕ್ಕ ಕೆಳಗಡೆಯ ಅರಣಿಯಮೇಲೆ ಮೇಲುಗಡೆಯ ಅರಣಿಯನ್ನು ಅಧೋಮುಖವಾಗಿ ಮಾಡಿ ಇಡು. ಹಾಗೆ ಮಾಡಿದೊಡನೆಯೇ ಅಧೋಭಾಗದ ಅರಣಿಯು ರೇತೋಯುಕ್ತಳೂ ಗರ್ಭವತಿಯೂ ಆಗಿ ಇಷ್ಟಾರ್ಥಗಳನ್ನು ಸುರಿಸತಕ್ಕ ಅಗ್ನಿಯನ್ನು ಸೃಷ್ಟಿಸುತ್ತಾಳೆ. ಅನಂತರ ಈ ಅಗ್ನಿಯ ತಮೋನಾಶಕವಾದ ತೇಜಸ್ಸು ಉತ್ಪನ್ನವಾಗುತ್ತದೆ. ಆಕರ್ಷಕವಾದ ತೇಜಃಪುಂಜದಿಂದ ಕೂಡಿದ ಉತ್ತರವೇದಿರೂಪವಾದ ಪೃಥ್ವಿಯಲ್ಲಿ ಉತ್ಪನ್ನನಾದ ಅಗ್ನಿಯು ಅರಣಿರೂಪವಾದ ಯೋನಿಯಲ್ಲಿ ಉತ್ಪನ್ನನಾಗಿದ್ದಾನೆ.

English Ttranslation

Let the intelligent priest place the lower of the sticks with the face upwards, the upper ( with the surface ) downwards, so that quickly impregnated it may generate the showerer ( of benefits ) Agni : then the bright blazing son of Ila whose light dissipates the darkness is born of the wood of attrition.

ವಿಶೇಷವಿಷಯಗಳು

**ಚಿಕಿತ್ವಾನ್ ಉತ್ತಾನಾಯಾಂ ಅವ ಭರ**—ನಿರುಕ್ತಕಾರರು ಚಿಕಿತ್ವಾನ್ ಎಂಬ ಪದಕ್ಕೆ ಚೇತನಾವಾನ್ (ನಿ. ೮–೫, ನಿ. ೨–೧೨) ಎಂಬ ಅರ್ಥವನ್ನು ಹೇಳಿದ್ದಾರೆ. ಸಾಯಣರು ಇಲ್ಲಿ ಜ್ಞಾನವುಳ್ಳವನಾದ ಅಧ್ವರ್ಯುವೆಂಬ ಋತ್ವಿಜನೆಂದು ಅರ್ಥವನ್ನು ಹೇಳಿ, ಈ ಅಧ್ವರ್ಯುವು ಅಧರಾರಣಿಯನ್ನು ಮೇಲುಮುಖವಾಗಿರುವಂತೆಯೂ, ಉತ್ತರಾರಣಿಯನ್ನು ಕೆಳಮುಖವಾಗಿರುವಂತೆಯೂ ಇರಿಸಬೇಕೆಂದು ಯಜಮಾನನ ಆದೇಶವನ್ನು ವರ್ಣಿಸಿದ್ದಾರೆ.

**ಸದ್ಯಃ ಪ್ರವೀತಾ ವೃಷಣಂ ಜಜಾನ** ಎಂಬ ಈ ವಾಕ್ಯದಿಂದ ಅಗ್ನಿಯು ಅಧರಾರಣಿಯಿಂದ ಉತ್ಪನ್ನನಾಗುವನೆಂದು ವಿವರಿಸಿದೆ. ಮತ್ತು ಅಗ್ನಿಯು **ವೃಷಣಂ** ಯಜಮಾನರ ಅಭಿಲಾಷೆಯನ್ನು ನೆರವೇರಿಸುವವನೆಂದೂ, **ರುಶತ್ ಪಾಜಃ** ಅಗ್ನಿಯ ಸಂಬಂಧಿಯಾದ ತಮೋನಿವಾರಕವಾದ ತೇಜಸ್ಸು ಉತ್ತರಾರಣಿಯಿಂದ ಮಥನಮಾಡುವಾಗ ಅಧರಾರಣಿಯಲ್ಲಿ ಉತ್ಪನ್ನವಾಗುವುದೆಂದೂ, ವರ್ಣಿಸಿದೆ. ಪಾಜಃ ಎಂಬ ಪದವು ಬಲನಾಮಗಳಲ್ಲಿ (ನಿ. ೩–೯) ಉಕ್ತವಾಗಿ, ಇಲ್ಲಿ ತೇಜಸ್ಸೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಅರುಷಸ್ತೂಪಃ**—ನ ವಿದ್ಯತೇ ರುಷಃ ಕ್ರೋಧೋ ಯಸ್ಯ । ಕ್ರೋಧರಾಹಿತ್ಯೇನ ರೋಚಮಾನಃ। ಅಗ್ನಿಯು ಕ್ರೋಧವಿಲ್ಲವನನಾಗಿ ಪ್ರಕಾಶಿಸುತ್ತಿರುವನೆಂದೂ, **ಆರೋಚಮಾನಃ ತೇಜಸ್ಸಂಘೋ ಯಸ್ಯ । ಸ್ತೂಯತ ಇತಿ ಸ್ತೂಪಃ ತೇಜಸ್ಸಂಘಃ** ಸ್ತುತಿಮಾಡಲು ಅರ್ಹವಾಗಿರುವುದರಿಂದ ತೇಜಸ್ಸಿನ ಸಮೂಹವು ಸ್ತೂಪ ಶಬ್ದದಿಂದ ವ್ಯವಹೃತವಾಗಿರುವುದೆಂದೂ, ಸರ್ವಪ್ರದೇಶಗಳಲ್ಲಿಯೂ (ಪ್ರಕಾಶಿಸುವುದರಿಂದ) ಬೆಳಗುವುದರಿಂದ ಅರುಷ ಶಬ್ದದಿಂದ ತೇಜಸ್ಸಿನ ಸಂಘವು ಬೋಧ್ಯವಾಗಿರುವುದೆಂದೂ ಅರ್ಥವನ್ನು ವಿವರಿಸಿದೆ.

**ಅರುಷಸ್ತೂಪಃ ಇಳಾಯಾಸ್ಪುತ್ರಃ ವಯುನೇ ಅಜನಿಷ್ಟ**—**ಆರೋಚಮಾನತೇಜಸ್ಸಂಘೋಪೇತಃ ಉತ್ತರವೇದ್ಯಾಃ ಉತ್ಪನ್ನಃ ಅಗ್ನಿಃ ಅರಣ್ಯಾಂ ಯೋನಿಸ್ಥಾನೇ ಅಜನಿಷ್ಟ** । ಸರ್ವತೋಮುಖವಾಗಿ ಬೆಳಗುತ್ತಿರುವ ತೇಜಸ್ಸಿನ ಸಮೂಹದಿಂದ ಯುಕ್ತನಾದ ಅಗ್ನಿಯು ಯಾಗಶಾಲೆಯ ಉತ್ತರವೇದಿಯಲ್ಲಿ ಪ್ರಭೂತವಾದ ತೇಜಸ್ಸಿನಿಂದ ಬೆಳಗುವುದಕ್ಕಿಂತ ಮೊದಲು ಅಧರಾರಣಿಯಲ್ಲಿ ಮಥನದಿಂದ ಸೂಕ್ಷ್ಮರೂಪದಿಂದ ಉತ್ಪತ್ತಿಯನ್ನು ಹೊಂದುವನು ಎಂಬ ಅರ್ಥವು ವಿವೃತವಾಗಿದೆ.

**ವಯುನೇ**—**ಅರಣ್ಯಾಂ ಯೋನಿಸ್ಥಾನೇ ಅಜತಿ ವೀಯತೇ ವಾ ವಯುನಮಂಗಂ** । ಉತ್ಪತ್ತಿಯನ್ನು ಹೊಂದುವುದರಲ್ಲಿ ಆಧಾರವಾದ (ಅಂಗ) ಅವಯವ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ವಯುನ ಶಬ್ದವನ್ನು ಪ್ರಜ್ಞಾನಾಮಗಳಲ್ಲಿ (ನಿ. ೩-೧೩) ಪಾಠಮಾಡಿ, **ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ** ವಿಧಾತುವಿನಿಂದ ನಿಷ್ಪನ್ನವಾದ ವಯುನ ಶಬ್ದಕ್ಕೆ ಕಾಂತಿ, ಅಥವಾ ಪ್ರಜ್ಞಾ ಎಂದು ಅರ್ಥವು ಎಂದು ವ್ಯಾಖ್ಯಾನಮಾಡಿ.

**ಸ ಇತ್ತಮೋಽವಯುನಂ ತತನ್ವತ್ಸೂರ್ಯೇಣ ವಯುನವಚ್ಚಕಾರ ।**
**ಕದಾ ತೇ ಮರ್ತಾ ಅಮೃತಸ್ಯ ಧಾಮೇಯಕ್ಷಂತೋ ನ ಮಿನಂತಿ ಸ್ವಧಾವಃ ॥**

(ಋ. ಸಂ. ೬-೨೧-೩)

ಎಂಬ ಮಂತ್ರವನ್ನು ಉದಹರಿಸಿ, **ವಯುನವಚ್ಚಕಾರ** ಎಂಬಲ್ಲಿ **ವಯುನ** ಎಂಬ ಪದಕ್ಕೆ ಪ್ರಜ್ಞಾನವೆಂದು ಅರ್ಥವನ್ನು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಭರ**—ಭೃಞ್ ಭರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತ ರೂಪ. ತಿಙಂತನಿಘಾತಸ್ವರ ಬರುತ್ತದೆ. ಎರಡು ಅಚ್ ಇರುವುದರಿಂದ **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ **ದೀರ್ಘ** ಬರುತ್ತದೆ.

**ಚಿಕಿತ್ವಾನ್**—ಕಿತ ಜ್ಞಾನೇ. ಧಾತು. ಲಿಟಗೆ ಕ್ವಸುರಾದೇಶ. ಪ್ರಥಮಾವಿಭಕ್ತಿ ಏಕವಚನಾಂತರೂಪ ಪ್ರತ್ಯಯಸ್ವರ ಬರುತ್ತದೆ.

**ಪ್ರವೀತಾ**—ವೀ ಗತ್ಯಾದಿಷು. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಸ್ತ್ರೀತ್ವದಲ್ಲಿ ಅದಂತವಾದುದರಿಂದ **ಟಾಪ್ ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ.

**ಜಜಾನ**—ಜನ ಜನನೇ. ಧಾತು. ಪ್ರಯೋಜಕವ್ಯಾಪಾರತೋರುವಾಗ ಇದರ ಮೇಲೆ ಣಿಚ್. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲಿಟ್. **ಬಹುಲಮನ್ಯತ್ರಾಪಿ ಸಂಜ್ಞಾಛಂದಸೋಃ** ಎಂಬ ವಚನದಿಂದ ಲಿಟ್ ಪರವಾದಾಗ ಣಿಚಿಗೆ ಲೋಪ. ಆಗ ಪ್ರತ್ಯಯಾಂತವಾಗದಿರುವುದರಿಂದ **ಕಾಸ್‌ಪ್ರತ್ಯಯಾ**—(ಪಾ.

ಸೂ. ೩-೧-೩೫) ಎಂಬುದರಿಂದ ಆಮ್ ಬರುವುದಿಲ್ಲ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಆದೇಶ ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. ಅತಿಙಂತ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರುಷಸ್ತೂಪಃ**—ನ ವಿದ್ಯತೇ ರುಷಃ ಕ್ರೋಧೋ ಯಸ್ಯ ಇತಿ ಅರುಷಃ | ಸಿಟ್ಟಿಲ್ಲದೆ ಪ್ರಕಾಶಿಸುವುದು ಎಂದರ್ಥವಾಗುತ್ತದೆ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ. ಸ್ತೂಪಃ. ಷ್ಟುಞ್ ಸ್ತುತೌ ಧಾತು. **ಸ್ತೌತೇರ್ದೀರ್ಘಶ್ಚ** (ಉ. ಸೂ. ೩-೩೦೫) ಎಂಬುದರಿಂದ ಪ ಪ್ರತ್ಯಯ. ಇದರೊಡನೆ ಧಾತುವಿಗೆ ದೀರ್ಘ. ಕಿತ್ವ ವಿಧಾನಮಾಡಿರುವುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಸ್ತೂಯತೇ ಇತಿ ಸ್ತೂಪಃ ತೇಜಃ ಸಂಘಃ. ಅರುಷಃ ಆರೋಚಮಾನಃ ತೇಜಃ ಸಂಘಃ ಯಸ್ಯ, ಅರುಷಸ್ತೂಪಃ, **ಬಹುವ್ರೀಹೌ ಪ್ರಕೃತ್ಯಾ**— ( ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ರುಶತ್**—ರುಶ ಹಿಂಸಾಯಾಂ. ಧಾತು. ಲಟಿಗೆ ಶತ್ರಾದೇಶ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಯುನೇ**—ಅಜ ಗತಿಕ್ಷೇಪಣಯೋಃ ಧಾತು. **ಅಜಿಯಮಿಶೀಙ್ಭ್ಯಶ್ಚ.** (ಉ. ಸೂ. ೩-೩೪೧) ಎಂಬುದರಿಂದ ಉನನ್ ಪ್ರತ್ಯಯ. ಚಿತ್‌ಸಂಜ್ಞೆಯನ್ನು ಹೊಂದುತ್ತದೆ. **ಅಜೇರ್ವ್ಯಘಞಪೋಃ** (ಪಾ. ಸೂ. ೨-೪-೫೬) ಎಂಬುದರಿಂದ ಧಾತುವಿಗೆ ವೀ ಭಾವ. ಪ್ರತ್ಯಯನಿಮಿತ್ತವಾಗಿ ಅದರ ಇಕಾರಕ್ಕೆ ಗುಣ, ಅಯಾದೇಶ. ಅಜತಿ ವೀಯತೇ ವಾ ವಯುನಂ. ಅಂಗಂ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಪ್ರಾಪ್ತವಾದರೂ ಇಲ್ಲಿ ವ್ಯತ್ಯಯದಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅಜನಿಷ್ಟ**—ಜನೀ ಪ್ರಾದುರ್ಭಾವೇ. ಧಾತು. ಲುಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

**ಇಳಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧಿ ।**
**ಜಾತವೇದೋ ನಿ ಧೀಮಹ್ಯಗ್ನೇ ಹವ್ಯಾಯ ವೋಳ್ಹವೇ ॥ ೪ ॥**

ಪದಪಾಠಃ

**ಇಳಾಯಾಃ । ತ್ವಾ । ಪದೇ । ವಯಂ । ನಾಭಾ । ಪೃಥಿವ್ಯಾಃ । ಅಧಿ ।**
**ಜಾತಽವೇದಃ । ನಿ । ಧೀಮಹಿ । ಅಗ್ನೇ । ಹವ್ಯಾಯ । ವೋಳ್ಹವೇ ॥ ೪ ॥**

ಸಾಯಣಭಾಷ್ಯಂ

**ಜಾತವೇದೋ ಜಾತಪ್ರಜ್ಞ ಹೇ ಅಗ್ನೇ ಅಧ್ವರ್ಯ್ವಾದಯೋ ವಯಂ ಪೃಥಿವ್ಯಾಂ ಅಧಿ ಭೂಮೇರುಪರ್ಯುತ್ತರವೇದ್ಯಾಂ ನಾಭಾ ನಾಭೌ ತಸ್ಯಾ ನಾಭಿಸ್ಥಾನೇ ಮಧ್ಯಪ್ರದೇಶೇ | ತದೇವ ಸ್ಥಾನಂ ವಿಶೇ-**

ಷ್ಯತೇ | ಇಳಾಯಾಃ ಪದೇ ಮಾನವ್ಯಾ ಇಡಾಯಾ ಗೋಃ ಪದ ಇಡಾಪದರೂಪ ಉತ್ತರವೇದ್ಯಾತ್ಮಕೇ ಸ್ಥಾನೇ ತ್ವಾ ತ್ವಾಂ ಹವ್ಯಾಯ ವೋಳ್ಹವೇ ಪುರೋಡಾಶಾದಿಲಕ್ಷಣಂ ಹವಿರ್ವೋಢುಂ ನಿ ಧೀಮಹಿ | ನಿದಧೀಮಹಿ | ಉಕ್ತಾರ್ಥೇ ಬ್ರಾಹ್ಮಣಂ | ಇಳಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧೀತ್ಯೇದದ್ವಾ ಇಳಾಯಾಸ್ಪದಂ ಯದುತ್ತರವೇದೀನಾಭಿರ್ಜಾತವೇದೋ ನಿ ಧೀಮಹೀತಿ ನಿಧಾಸ್ಯಂತೋ ಹ್ಯೇನಂ ಭವಂತ್ಯಗ್ನೇ ಹವ್ಯಾಯ ವೋಳ್ಹವ ಇತಿ ಹವ್ಯಂ ಹಿ ವಕ್ಷ್ಯನ್ಭವತಿ | ಐ. ಬ್ರಾ. ೧-೨೮ | ಇತಿ || ನಾಭಾ | ಣಹ ಬಂಧನೇ | ಇಞಿತ್ಯನುವೃತ್ತೌ ನಹೋ ಭಶ್ಚೇತೀಞ್ ಭಕಾರಶ್ಚಾಂತಾದೇಶಃ | ಞಿತ್ತ್ವಾದುಪಧಾವೃದ್ಧಿಃ | ನಹ್ಯತೀತಿ ನಾಭಿರ್ಮಧ್ಯಸ್ಥಾನಂ | ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ | ಞಿತ್ಸ್ವರಃ | ಧೀಮಹಿ | ದಧಾತೇರ್ಲಿಙಿ ರೂಪಂ | ಲಿಙಃ ಸೀಯುಟ್ | ಪಾ. ೩-೪-೧೦೨ | ಇತಿ ಸೀಯುಟ್ | ದ್ವಿರ್ವಚನಾಭಾವಶ್ಛಾಂದಸಃ | ನಿಘಾತಃ | ವೋಳ್ಹವೇ | ವಹ ಪ್ರಾಪಣೇ | ತುಮರ್ಥೇ ತವೇನ್ | ಸಹಿವಹೋರೋದವರ್ಣಸ್ಯೇತಿ ಧಾತ್ವಕಾರಸ್ಯೌತ್ವಂ | ಢತ್ವಧತ್ವಷ್ಟುತ್ವಢಲೋಪಾಃ | ನಿತ್ತ್ವಾದಾದ್ಯುದಾತ್ತಃ ||

ಪ್ರತಿಪದಾರ್ಥ

**ಜಾತವೇದಃ**—ಜಾತಪ್ರಜ್ಞನಾದ | **ಅಗ್ನೇ**—ಎಲೈ ಅಗ್ನಿಯೇ | **ವಯಂ**—ನಾವು (ಋತ್ವಿಕ್ಕುಗಳು) | **ತ್ವಾ**—ನಿನ್ನನ್ನು | **ಪೃಥಿವ್ಯಾ ಅಧಿ**—ಭೂಮಿಯ ಮೇಲೆ | **ನಾಭಾ**—ಮಧ್ಯಸ್ಥಾನವಾದ | **ಇಳಾಯಾಃ ಪದೇ**—ಉತ್ತರವೇದಿಯ ಪ್ರದೇಶವಲ್ಲಿ | **ಹವ್ಯಾಯ ವೋಳ್ಹವೇ**—ಪುರೋಡಾಶಾದಿರೂಪವಾದ ಹವಿಸ್ಸನ್ನು ವಹಿಸುವುದಕ್ಕಾಗಿ | **ನಿ ಧೀಮಹಿ**—ಸ್ಥಾಪಿಸುತ್ತೇವೆ ||

ಭಾವಾರ್ಥ

ಜಾತಪ್ರಜ್ಞನಾದ ಎಲೈ ಅಗ್ನಿಯೇ, ಋತ್ವಿಕ್ಕುಗಳಾದ ನಾವು ನಿನ್ನನ್ನು ಭೂಮಿಯ ಮಧ್ಯಪ್ರದೇಶವಾದ ಉತ್ತರವೇದಿಸ್ಥಾನದಲ್ಲಿ ಪುರೋಡಾಶಾದಿರೂಪವಾದ ಹವಿಸ್ಸನ್ನು ವಹಿಸುವುದಕ್ಕಾಗಿ ಸ್ಥಾಪಿಸುತ್ತೇವೆ.

English Translation

Agni you are Jatavedas, we place you upon the earth in the centre, in the place of Ila, for the purpose of receiving the oblation.

ವಿಶೇಷವಿಷಯಗಳು

**ಜಾತವೇದಃ**—ಈ ಪದವು ಜಾತಪ್ರಜ್ಞ—ಅಗ್ನಿಯು ಸರ್ವಜ್ಞನೆಂಬ ಅರ್ಥಬೋಧಕವಾಗಿದೆ. ಅಗ್ನಿಯು ಈ ಪದದಿಂದ ಸಂಬೋಧಿತನಾಗಿದ್ದಾನೆ.

**ಪೃಥಿವ್ಯಾಃ ಅಧಿ ನಾಭಾ—ಭೂಮೇರುಪರಿ ಉತ್ತರವೇದ್ಯಾಂ ನಾಭೌ ತಸ್ಯಾ ನಾಭಿಸ್ಥಾನೇ ಮಧ್ಯಪ್ರದೇಶೇ** | ನಿರುಕ್ತಕಾರರು ಪೃಥಿವೀಪದವನ್ನು ಪೃಥಿವೀನಾಮಗಳಲ್ಲಿಯೂ (ನಿ. ೨-೩) ಅಂತರಿಕ್ಷನಾಮಗಳಲ್ಲಿಯೂ, (ನಿ. ೨-೧೦) ಪಾಠಮಾಡಿದ್ದಾರೆ. ಮತ್ತು "ಬಳಿತ್ಥಾ ಪರ್ವತಾನಾಂ" ( ಋ. ಸಂ. ೫-೮೪-೧ ) ಎಂಬ ಋಕ್ಕಿನಲ್ಲಿರುವ ಪೃಥಿವೀಶಬ್ದಕ್ಕೆ ಪೃಥು ದರ್ಶನಾತ್ ಪೃಥಿವೀ ಎಂದು ವ್ಯಾಖ್ಯಾನಮಾಡಿ, **ಮಧ್ಯಮಸ್ಥಾನಾ** ಮಧ್ಯಸ್ಥಾನದೇವತೆಯೆಂದು ವಿವರಿಸಿದ್ದಾರೆ. ಸಾಯಣರು ಭೂಮಿ ಎಂದು ಅರ್ಥವನ್ನು ವರ್ಣಿಸಿ ಯಾಗಭೂಮಿಯ (ನಾಭಿಸ್ಥಾನದಲ್ಲಿ) ಮಧ್ಯಪ್ರದೇಶವಾದ ಉತ್ತರವೇದಿಯಲ್ಲಿ (ಅಗ್ನಿಯು ಆಹಿತನಾಗಿರುವನು) ಎಂದು ಅರ್ಥವನ್ನು ವರ್ಣಿಸಿದ್ದಾರೆ. **ನಹ್ಯತೀತಿ ನಾಭಿರ್ಮಧ್ಯಸ್ಥಾನಂ** ಎಂದು ನಾಭಿಶಬ್ದಾರ್ಥವನ್ನು ವಿವರಿಸಿದ್ದಾರೆ.

ಇಳಾಯಾಃ ಪದೇ ತ್ವಾ ಹವ್ಯಾಯ ವೋಳ್ಹವೇ ನಿ ಧೀಮಹಿ—ಮಾನವ್ಯಾ ಗೋಃಪದೇ ಇಡಾಪದ ರೂಪೇ ಉತ್ತರವೇದ್ಯಾತ್ಮಕೇ ಸ್ಥಾನೇ ಪುರೋಡಾಶಾದಿಲಕ್ಷಣಂ ಹವಿರ್ವೋಢುಂ ನಿದಧೀಮಹಿ ನಿರುಕ್ತ ಕಾರರಿಂದ ಇಳಾಪದವು ಪೃಥ್ವೀನಾಮುಗಳಲ್ಲಿಯೂ(ನಿ.೨-೫) ವಾಙ್ನಾಮಗಳಲ್ಲಿಯೂ(ನಿ.೨-೧೧) ಅನ್ನನಾಮಗಳಲ್ಲಿಯೂ (ನಿ ೩-೯) ಗೋನಾಮುಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಮತ್ತು ಈಟ್ಟೇಃ ಸ್ತುತಿಕರ್ಮಣಃ ಸ್ತುತಿಮಾಡು ಎಂಬ ಅರ್ಥವುಳ್ಳ ಈಡಧಾತುವಿನಿಂದ ನಿಷ್ಪನ್ನವಾಗಿದೆ ಎಂದು ವ್ಯಾಖ್ಯಾತವಾಗಿದೆ. "ಅಭಿ ನ ಇಳಾ ಯೂಥಸ್ಯ ಮಾತಾ" (ಋ.ಸಂ. ೫-೧೪-೧೯, ೨೦) ಎಂಬ ಋಕ್ಕಿನಲ್ಲಿ ಇಡಾ ಎಂಬ ದೇವಿಯು ಮೇಘಯೂಥವನ್ನು ನಿರ್ಮಾಣ ಮಾಡುವ ಮಧ್ಯಮಸ್ಥಾನದೇವತೆಯೆಂದು ವಿವೃತವಾಗಿದೆ. ಸಾಯಣರು ಮನು ಎಂಬ ರಾಜನ ಸಂಬಂಧಿಯಾಗಿರುವ ಇಡಾಶಬ್ದದಿಂದ ಬೋಧ್ಯವಾದ (ಗೋವಿನ) ಯಾಗಭೂಮಿಯ ಉತ್ತರವೇದಿರೂಪವಾದ ಸ್ಥಾನದಲ್ಲಿ ಪುರೋಡಾಶಾದಿ ರೂಪವಾದ ಹವಿಸ್ಸನ್ನು ವಹಿಸುವುದಕ್ಕಾಗಿ ಅಧ್ವರ್ಯುವೇ ಮೊದಲಾದ ಋತ್ವಿಜರು ಅಗ್ನಿಯನ್ನು ಸ್ಥಾಪಿಸುವರು ಎಂದು ಅರ್ಥವನ್ನು ವಿವರಿಸಿ, ಈ ಅಭಿಪ್ರಾಯವನ್ನು ಬೋಧಿಸುವ "ಇಳಾಯಾಸ್ತ್ವಾ ಪದೇ ನಾಭಾ ಪೃಥಿವ್ಯಾ ಅಧೀತ್ಯೇತದ್ವಾ ಇಳಾಯಾಸ್ಪದಂ ಯದುತ್ತರವೇದೀ ನಾಭಿರ್ಜಾತವೇದೋ ನಿಧೀಮಹೀತಿ ನಿಧಾರಯಂ-ತೋ ಹ್ಯೇನಂ ಭವಂತ್ಯಗ್ನೇ ಹವ್ಯಾಯ ವೋಳ್ಹವ ಇತಿ ಹವ್ಯಂ ಹಿ ವಕ್ಷ್ಯನ್ ಭವತಿ" (ಐ. ಬ್ರಾ. ೧-೨೮) ಎಂಬ ಬ್ರಾಹ್ಮಣವಾಕ್ಯವನ್ನು ಉದಾಹರಿಸಿ ಈ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಪದೇ**—ಸಪ್ತಮೀ ಏಕವಚನಾಂತರೂಪ. ಪ್ರಾದಿಪದಿಕಸ್ವರದಿಂದ ಅಂತೋದಾತ್ತವಾಗುತ್ತದೆ.

**ನಾಭಾ**—ಣಹ ಬಂಧನೇ. ಧಾತು. **ಣೋನಃ** (ಪಾ.ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಇಞ್ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವಾಗ **ನಹೋಭಶ್ಚ** (ಉ. ಸೂ. ೪-೫೬೫) ಎಂಬುದರಿಂದ ಈ ಧಾತುವಿಗೆ ಇಞ್ ಪ್ರತ್ಯಯ ಬಂದಾಗ ಧಾತುವಿನ ಹಕಾರಕ್ಕೆ ಭಕಾರಾದೇಶ. ನಾಭಿ ಎಂದು ರೂಪವಾಗುತ್ತದೆ. ಪ್ರತ್ಯಯ ಞಿತ್ತಾ ದುದರಿಂದ ಧಾತುವಿನ ಉಪಧೆಗೆ ವೃದ್ಧಿ. ಆದ್ಯುದಾತ್ತಸ್ವರ ಬರುತ್ತದೆ. ನಹ್ಯತಿ ಇತಿ ನಾಭಿಃ ಮಧ್ಯಸ್ಥಾನಂ. (ಎರಡು ಶರೀರಭಾಗವನ್ನು ಕೂಡಿಸಿ ಹಿಡಿಯುತ್ತದೆ) ಇದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ.೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ಡಿತ್ವಸಾಮರ್ಥ್ಯದಿಂದ ಇಕಾರಕ್ಕೆ ಲೋಪ.

**ಧೀಮಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಆದಕ್ಕೆ ಸೀಯುಟಾಗಮ. **ಲೋಪೋವ್ಯೋರ್ವಲಿ** ಎಂಬುದರಿಂದ ಯಲೋಪ. ಸಾರ್ವಧಾತುಕಾವಯವವಾದುದರಿಂದ ಸಕಾರಕ್ಕೆ ಲೋಪ. ಛಾಂದಸವಾಗಿ ಶ್ಲು ವಿಕರಣನಿಮಿತ್ತವಾಗಿ ದ್ವಿತ್ವ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ವೋಳ್ಹವೇ**—ವಹ ಪ್ರಾಪಣೇ. ಧಾತು. ತುಮುನರ್ಥತೋರುವಾಗ **ತುಮರ್ಥೇ ಸೇಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. **ಸಹಿವಹೋರೋದವರ್ಣಸ್ಯ** (ಪಾ. ಸೂ. ೬-೩-೧೧೨) ಎಂಬುದ ರಿಂದ ಧಾತುವಿನ ಅಕಾರಕ್ಕೆ ಓಕಾರಾದೇಶ. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋ**— ಎಂಬುದರಿಂದ ಪ್ರತ್ಯಯತಕಾರಕ್ಕೆ ಧತ್ವ ಷ್ಟುತ್ವ. **ಢೋಢೇಲೋಪಃ** ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಏಜಂತವಾದುದರಿಂದ **ಕೃನ್ಮೇಜಂತಃ** ಎಂಬುದರಿಂದಅವ್ಯಯ ಸಂಜ್ಞಾ ಬರುತ್ತದೆ.

———

ಸಂಹಿತಾಪಾಠಃ

ಮಂಥತಾ ನರಃ ಕವಿಮದ್ವಯಂತಂ ಪ್ರಚೇತಸಮಮೃತಂ ಸುಪ್ರತೀಕಂ ।
ಯಜ್ಞಸ್ಯ ಕೇತುಂ ಪ್ರಥಮಂ ಪುರಸ್ತಾದಗ್ನಿಂ ನರೋ ಜನಯತಾ ಸುಶೇವಂ ॥

ಪದಪಾಠಃ

ಮಂಥತ । ನರಃ । ಕವಿಂ । ಅದ್ವಯಂತಂ । ಪ್ರಚೇತಸಂ । ಅಮೃತಂ । ಸುಽಪ್ರತೀಕಂ ।
ಯಜ್ಞಸ್ಯ । ಕೇತುಂ । ಪ್ರಥಮಂ । ಪುರಸ್ತಾತ್ । ಅಗ್ನಿಂ । ನರಃ । ಜನಯತ । ಸುಽಶೇವಂ ॥ ೫ ॥

ಸಾಯಣಭಾಷ್ಯಂ

ನರಃ ಕರ್ಮಣಾಂ ನೇತಾರೋ ಹೇ ಅಧ್ವರ್ಯ್ವಾದಯಃ ಕವಿಂ ಕ್ರಾಂತದರ್ಶಿನಮದ್ವಯಂತಂ ದ್ವಯಮನಾಚರಂತಮದ್ವೈತಂ ಕುರ್ವಾಣಂ ಮನಸಾ ವಾಚಾ ಚೈಕವಿಧಮೇವ ಕರ್ಮ ಕುರ್ವಾಣಮುತ ಏವ ಪ್ರಚೇತಸಂ ಪ್ರಕೃಷ್ಟಜ್ಞಾನೋಪೇತಮಮೃತಂ ಮರಣಧರ್ಮರಹಿತಂ ಸುಪ್ರತೀಕಂ ಶೋಭನೈ-ರಂಗೈರ್ಜ್ವಾಲಾಭಿಃ ಸಮೇತಂ ತಮಿಮಮಗ್ನಿಂ ಮಂಥತ । ಮಂಥನೇನ ನಿಷ್ಪಾದಯತ । ಕಿಂಚ । ಹೇ ನರಃ ಕರ್ಮಣಾಂ ನೇತಾರೋಽಧ್ವರ್ಯ್ವಾದಯೋ ಯೂಯಂ ಯಜ್ಞಸ್ಯ ಜ್ಯೋತಿಷ್ಟೋಮಾದೇಃ ಕೇತುಂ ಪ್ರಜ್ಞಾಪಕಂ ಪ್ರಥಮಂ ಮುಖ್ಯಾಂಗಭೂತಂ । ಅಗ್ನಿಪೂರ್ವಕತ್ವಾತ್ಸರ್ವೇಷಾಮುತ್ತರಕ್ರ-ತೂನಾಂ । ಸುಶೇವಂ ಶೋಭನಸುಖೋಪೇತಂ ತಾದೃಶಮಗ್ನಿಂ ಪುರಸ್ತಾತ್ಕರ್ಮಣಃ ಪ್ರಾರಂಭೇ ಜನ-ಯತ । ತಮಿಮಮಗ್ನಿಮೇವಂಗುಣಯುಕ್ತಂ ಕುರುತೇತಿ ಭಾವಃ ॥ ಮಂಥತ । ಮಂಥ ವಿಲೋಡನೇ । ಲೋಟಿ ರೂಪಂ । ಪಾದಾದಿತ್ವಾದನಿಘಾತಃ । ನರಃ । ಣೀಞ್ ಪ್ರಾಪಣೇ ನಯತೇರ್ಡಿಚ್ಚ । ಉ. ೨-೧೫೭ । ಇತಿ ಋಪ್ರತ್ಯಯಃ । ಡಿತ್ವಾಟ್ಟಿಲೋಪಃ । ನಯಂತಿ ಕರ್ಮಾಣಿ ನೀಯಂತೇ ಕರ್ಮಾಣ್ಯೇಭಿರಿತಿ ವಾ ನರಃ । ಆಮಂತ್ರಿತತ್ವಾನ್ನಿಘಾತಃ । ಅದ್ವಯಂತಂ । ದ್ವಯಮಿವಾಚರತೀತ್ಯರ್ಥೇ ಸರ್ವಪ್ರಾತಿಪದಿಕೇಭ್ಯಃ ಕ್ವಿಪ್ ವಕ್ತವ್ಯ ಇತ್ಯಾಚಾರಾರ್ಥೇ ಕ್ವಿಪ್ । ದ್ವಯತಿ । ತಸ್ಯ ಶತರಿ ರೂಪಂ ದ್ವಯನ್ನಿತಿ । ನ ದ್ವಯನ್ನ-ದ್ವಯನ್ । ತಂ । ತತ್ಪುರುಷೇ ನಞ್ಸ್ವರಃ । ಸುಪ್ರತೀಕಂ । ಬಹುವ್ರೀಹೌ ಕ್ರತ್ವಾದಯಶ್ಚೇತ್ಯುತ್ತರಪ-ದಾದ್ಯುದಾತ್ತತ್ವಂ । ಜನಯತ । ಜನೀ ಪ್ರಾದುರ್ಭಾವೇ । ಣಿಚ್ । ಅತ ಉಪಧಾಯಾ ಇತಿ ವೃದ್ಧೌ ಪ್ರಾ; ಪ್ತಾಯಾಂ ಜನೀಜ್ವಾಷ್ಕ್ನಸುರಂಜೋಽಮಂತಾಶ್ಚೇತಿ ಮಿದ್ವದ್ಭಾವಾನ್ಮಿತಾಂ ಹ್ರಸ್ವ ಇತಿ ಹ್ರಸ್ವಃ । ನಿಘಾತಃ । ಸುಶೇವಂ । ಶೇವಶಬ್ದೋ ವನ್ಪ್ರತ್ಯಯಾಂತ ಆದ್ಯುದಾತ್ತಃ । ಬಹುವ್ರೀಹಾವಾದ್ಯುದಾತ್ತಂ ದ್ವಚ್ಛಂದ-ಸೀತ್ಯುತ್ತರಪದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ನರಃ—ಕರ್ಮಕ್ಕೆ ನೇತೃಗಳಾದ ಋತ್ವಿಕ್ಕುಗಳೇ । ಕವಿಂ—ಕ್ರಾಂತದರ್ಶಿಯಾದವನೂ । ಅದ್ವಯಂತಂ—ಮನಸ್ಸಿನಿಂದಲೂ ವಾಕ್ಕಿನಿಂದಲೂ ಕರ್ಮದ ಐಕ್ಯವನ್ನು ಹೊಂದಿರುವವನೂ । ಪ್ರಚೇತಸಂ—ಉತ್ಕೃಷ್ಟವಾದ ಜ್ಞಾನ

ದಿಂದ ಕೂಡಿದವನೂ | **ಅಮೃತಂ**—ಮರಣಧರ್ಮರಹಿತನೂ | **ಸುಪ್ರತೀಕಂ**—ಆಕರ್ಷಕವಾದ ಅಂಗಗಳಿಂದ ಕೂಡಿದವನೂ ಆದ | **ಅಗ್ನಿಂ**—ಅಗ್ನಿಯನ್ನು | **ಮಂಥತ**—ಮಥನಕ್ರಿಯೆಯಿಂದ ಸಂಪಾದಿಸಿರಿ | **ನರಃ**—ಕರ್ಮಕ್ಕೆ ನೇತೃಗಳಾದ ನೀವು | **ಯಜ್ಞಸ್ಯ**—ಜ್ಯೋತಿಷ್ಟೋಮಾದಿರೂಪವಾದ ಯಜ್ಞಕ್ಕೆ | **ಕೇತುಂ**—ಪ್ರಜ್ಞಾಪಕನೂ | **ಪ್ರಥಮಂ**—ಮುಖ್ಯವಾದ ಅಂಗವಾದವನೂ | **ಸುಶೇವಂ**—ಉತ್ತಮವಾದ ಸುಖದಿಂದ ಯುಕ್ತನೂ ಆದ ಅಗ್ನಿಯನ್ನು | **ಪುರಸ್ತಾತ್**—ಕರ್ಮದ ಪ್ರಾರಂಭಕಾಲದಲ್ಲಿ | **ಜನಯತ**—ಉತ್ಪನ್ನವಾಗುವಂತೆ ಮಾಡಿರಿ ||

ಭಾವಾರ್ಥ

ಕರ್ಮಗಳಿಗೆಲ್ಲಾ ನೇತೃಗಳಾದ ಎಲೈ ಋತ್ವಿಕ್ಕುಗಳೇ, ಕ್ರಾಂತದರ್ಶಿಯಾದವನೂ, ಮನಸ್ಸಿನಿಂದಲೂ ವಾಕ್ಕಿನಿಂದಲೂ ಕರ್ಮದ ಐಕ್ಯತೆಯನ್ನು ಸಂಪಾದಿಸಿರುವವನೂ, ಉತ್ಕೃಷ್ಟವಾದ ಜ್ಞಾನದಿಂದ ಕೂಡಿದವನೂ, ಮರಣಧರ್ಮರಹಿತನೂ, ಆಕರ್ಷಕವಾದ ಅಂಗಗಳಿಂದ ಕೂಡಿದವನೂ ಆದ ಅಗ್ನಿಯನ್ನು ಮಥನಕ್ರಿಯೆಯಿಂದ ಸಂಪಾದಿಸಿರಿ. ಮತ್ತು, ಜ್ಯೋತಿಷ್ಟೋಮಾದಿರೂಪವಾದ ಯಜ್ಞಕ್ಕೆ ಪ್ರಜ್ಞಾಪಕನೂ, ಅದಕ್ಕೆ ಮುಖ್ಯವಾದ ಅಂಗವಾದವನೂ, ಉತ್ತಮವಾದ ಸುಖದಿಂದ ಯುಕ್ತನಾದವನೂ ಆದ ಅಗ್ನಿಯನ್ನು ಕರ್ಮದ ಪ್ರಾರಂಭದಕಾಲದಲ್ಲಿ ಉತ್ಪನ್ನವಾಗುವಂತೆ ಮಾಡಿರಿ.

English Translation

Conductors of the rite, produce by attrition the far-seeing, single-minded, intelligent, immortal, radiant-limbed Agni : generate him, leaders ( of the solemnity ), in the first place the chief standard of the sacrifice, who is the source of felicity.

ವಿಶೇಷವಿಷಯಗಳು

**ನರಃ—ನಯಂತಿ ಕರ್ಮಾಣಿ, ನೀಯಂತೇ ಕರ್ಮಾಣ್ಯೇಭಿರಿತಿ ವಾ** ಯಜ್ಞಕರ್ಮವೇ ಮೊದಲಾದ ಅವಶ್ಯಕರ್ತವ್ಯಗಳನ್ನು ಆಚರಿಸುವವರು, ಅಥವಾ ಯಜ್ಞಕರ್ಮವೇ ಮೊದಲಾದವುಗಳು ಇವರಿಂದ ಆಚರಿತವಾಗುವ ಕಾರಣ ಇವರಿಗೆ ನರ ಎಂಬ ಹೆಸರು ಬಂದಿರುತ್ತದೆ ಎಂದು ನರಶಬ್ದಾರ್ಥವನ್ನು ನಿರ್ವಚನಮಾಡಿ ವಿವರಿಸಿ, ಸಾಯಣರು ಕರ್ಮಣಾಂ ನೇತಾರೋ ಅಧ್ವರ್ಯ್ವಾದಯಃ ಕರ್ಮಗಳನ್ನು ಆಚರಿಸುವ ಅಧ್ವರ್ಯುವೇ ಮೊದಲಾದ ಋತ್ವಿಜರು ನರ ಶಬ್ದದಿಂದ ಇಲ್ಲಿ ಉಕ್ತವಾಗಿದ್ದಾರೆಂಬ ಅರ್ಥವನ್ನು ವರ್ಣಿಸಿ, ಈ ಪದದಿಂದ ಅಧ್ವರ್ಯುವೇ ಮೊದಲಾದ ಋತ್ವಿಜರು ಸಂಬೋಧಿತರಾಗಿದ್ದಾರೆಂದು ವಿವರಿಸಿದ್ದಾರೆ. ಯಾಸ್ಕರು ಈ ಪದವನ್ನು ಮನುಷ್ಯನಾಮಗಳಲ್ಲಿ (ನಿ. ೩-೭) ಪಾಠ ಮಾಡಿ, " **ನರಾ ಮನುಷ್ಯಾ ನೃತ್ಯಂತಿ ಕರ್ಮಸು** " (ನಿ. ೫-೧) ಎಂದು ನರಶಬ್ದಾರ್ಥವನ್ನು ವಿವರಿಸಿದ್ದಾರೆ.

**ಕವಿಂ—ಕ್ರಾಂತದರ್ಶಿನಂ** ಕವಿಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. ಇಲ್ಲಿ ಅಗ್ನಿಯು ಕರ್ಮಗಳ ಕೊನೆಯನ್ನು ತಿಳಿದಿರುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ.

**ಅದ್ವಯಂತಂ—ದ್ವಯಂ ಅನಾಚರಂತಂ** ಅಗ್ನಿಯು (ಭೇದವನ್ನು) ತನ್ನನ್ನು ಆಶ್ರಯಿಸಿ ಸೇವಿಸುವವರ ವಿಷಯದಲ್ಲಿ ಭೇದವನ್ನು ಮಾಡದಿರುವವನು ಎಂದು ಅರ್ಥವನ್ನು ಹೇಳಿ, **ಮನಸಾ, ವಾಚಾ, ಕರ್ಮಣಾ ಚ ಏಕವಿಧಮೇವ ಕರ್ಮ ಕುರ್ವಾಣಂ** ಭೇದವನ್ನು ಆಚರಿಸುವುದರಲ್ಲಿ ಕಾರಣವನ್ನು ತೋರಿಸಿ, ಮನಸ್ಸು, ವಾಕ್ಕು, ಕರ್ಮ ಇವುಗಳೆಲ್ಲದರಲ್ಲಿಯೂ ಒಂದೇವಿಧವಾಗಿರುವ ಅನುಗ್ರಹರೂಪವಾದ ಕರ್ಮವನ್ನು ಅಗ್ನಿಯು ಆಚರಿಸುವನು ಎಂದು ವಿವರಿಸಿದ್ದಾರೆ.

**ಪ್ರಚೇತಸಂ—ಪ್ರಕೃಷ್ಟಜ್ಞಾನೋಪೇತಂ** । ಯಾಸ್ಕರು “ **ಅಶ್ವಾಜನಿ ಪ್ರಚೇತಸಃ** (ಋ. ಸಂ. ೬–೭೫–೧೩) ಎಂಬ ಋಕ್ಕಿನಲ್ಲಿ ಪ್ರಚೇತಸಃ ಎಂಬ ಪದಕ್ಕೆ **ಪ್ರವೃದ್ಧಚೇತಸಃ** ಎಂದು ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಅಗ್ನಿಯು ಅತಿಶಯವಾದ ಜ್ಞಾನದಿಂದ ಯುಕ್ತನಾಗಿರುವನು ಎಂದು ಅರ್ಥವನ್ನು ಹೇಳಿದ್ದಾರೆ.

**ಅಮೃತಂ ಸುಪ್ರತೀಕಂ**—ಅಗ್ನಿಯು ಮರಣಧರ್ಮರಹಿತನಾಗಿರುವನೆಂದೂ, **ಶೋಭನೈರಂಗೈರ್ಜ್ವಾಲಾಭಿಃ ಸಮೇತಂ** ಮಂಗಳಕರವಾದ ಅವಯವಗಳಂತೆ ಇರುವ ಜ್ವಾಲೆಗಳಿಂದ ಯುಕ್ತನಾಗಿರುವನೆಂದೂ ವರ್ಣಿಸಿ ಈ ಅಗ್ನಿಯನ್ನು **ಮಂಥತ** ಅರಣಿಗಳಲ್ಲಿ ಮಥನಮಾಡುವುದರಿಂದ ಉತ್ಪನ್ನಮಾಡಿರಿ ಎಂದು ಅಧ್ವರ್ಯುರ್ಯು ಮೊದಲಾದ ಋತ್ವಿಜರಿಗೆ ಯಜಮಾನನ ಆದೇಶವನ್ನು ವರ್ಣಿಸಿದ್ದಾರೆ.

**ಯಜ್ಞಸ್ಯ ಕೇತುಂ ಪ್ರಥಮಂ—ಜ್ಯೋತಿಷ್ಟೋಮಾದೇಃ ಪ್ರಜ್ಞಾಪಕಂ, ಅಗ್ನಿಪೂರ್ವಕತ್ವಾತ್ ಸರ್ವೇಷಾಮುತ್ತರಕ್ರತೂನಾಂ ಯಜ್ಞಾನಾಂ ಮುಖ್ಯಾಂಗಭೂತಂ.** ಯಜ್ಞಸಾಮಾನ್ಯವಾಚಿಯಾದ ಯಜ್ಞಶಬ್ದವು ಜ್ಯೋತಿಷ್ಟೋಮವೇ ಮೊದಲಾದ ಕ್ರತುರೂಪವಾದ ಅರ್ಥದಲ್ಲಿ ಪ್ರಯುಕ್ತವಾಗಿ ಇರುವುದೆಂದೂ, ಅಗ್ನಿಯು ಈ ಯಜ್ಞಗಳ (ವಿಷಯದಲ್ಲಿ ಸೂಚಕ) ಸಮ್ಯಗಾಚರಣೆಯಲ್ಲಿ ಸೂಚಕನಾಗಿರುವನೆಂದೂ, ಕ್ರತುಗಳೆಲ್ಲವೂ ಅಗ್ನಿಯಿಂದಲೇ ಆಚರಿತವಾಗುವುದರಿಂದ ಅಗ್ನಿಯು ಯಜ್ಞಗಳೆಲ್ಲಕ್ಕೂ ಮುಖ್ಯವಾದ ಅಂಗವಾಗಿರುವನೆಂದೂ, ಅರ್ಥವು ವರ್ಣಿತವಾಗಿದೆ.

**ಸುಶೇವಂ—ಶೋಭನಸುಖೋಪೇತಂ** । ಯಾಸ್ಕರು—

**ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ । ಸಖಾ ಸುಶೇವ ಏಧಿ ನಃ ॥** (ಋ ಸಂ. ೭–೫೫–೧) ಎಂಬ ಋಕ್ಕಿನಲ್ಲಿರುವ ಸುಶೇವ ಎಂಬ ಪದಕ್ಕೆ **ಶೇವ ಇತಿ ಸುಖನಾಮ. ಶಿಷ್ಯತೇರ್ವಕಾರೋ ನಾಮಕರಣೋ ಅಂತಸ್ಥಾಂತರೋಪಲಿಂಗೀ । ವಿಭಾಷಿತಗುಣಃ । ಶಿವಮಿತ್ಯಪ್ಯಸ್ಯ ಭವತಿ** । ಶಿಷಿಧಾತುವಿನ ಷಕಾರಕ್ಕೆ ಬದಲಾಗಿ ವಕಾರವು ಬಂದು ಇಕಾರಕ್ಕೆ ಗುಣವು ಬಂದಿರುವುದರಿಂದ ಶೇವ ಎಂಬ ರೂಪವು (ಶಿವ ಎಂದು ರೂಪವಾಗುವುದಕ್ಕೆ ಬದಲಾಗಿ ಏಕಾರವು ಬಂದಿರುವುದರಿಂದ) ಆಗಿರುತ್ತದೆ. ಶೇವ ಎಂದರೆ ಸುಖವು. **ಸುಶೇವಃ ಸುಸುಖಃ** ಉತ್ತಮವಾದ ಸುಖವನ್ನು ಹೊಂದಿರುವವನು, ಅಥವಾ ಉತ್ತಮವಾದ ಸುಖವನ್ನು ಅನುಭವಿಸುತ್ತಿರುವವನು ಎಂದು ಅರ್ಥವನ್ನು ವಿವರಿಸಿದ್ದಾರೆ.

**ಪುರಸ್ತಾತ್ ಜನಯತಃ—ಕರ್ಮಣಃ ಪ್ರಾರಂಭೇ.** ಯಜ್ಞದ ಕರ್ಮಗಳನ್ನು ಆಚರಿಸುವಾಗ ಮೊದಲು ಮೇಧಾವಿಯಾಗಿ ಕರ್ಮಗಳನ್ನು ಕೊನೆಯವರಿಗೂ ತಿಳಿದು ಇರುವ, ಮನೋವಾಕ್ಕಾಯಗಳಿಂದಲೂ ಏಕರೂಪವಾದ ಫಲವನ್ನು ಅನುಗ್ರಹಿಸುವ, ಜ್ವಾಲಾರೂಪವಾದ ಅವಯವಗಳಿಂದ ಯುಕ್ತನಾಗಿರುವ, ಯಜ್ಞಗಳಿಗೆ ಕೇತುವಾಗಿರುವ, ಉತ್ತಮವಾದ ಸುಖವನ್ನು ಹೊಂದಿರುವ ಅಗ್ನಿಯನ್ನು ಯಜಮಾನರಾದ ನಮಗೆ ಈ ವಿಧವಾದ ಮಹಿಮೆಯನ್ನು ಅನುಗ್ರಹಿಸುವುದಕ್ಕಾಗಿ, ಯಜ್ಞವನ್ನು ಪ್ರಾರಂಭಮಾಡುವ ಕಾಲದಲ್ಲಿಯೇ ಅರಣಿಗಳಲ್ಲಿ ಮಥನಮಾಡಿ ಉತ್ಪನ್ನಮಾಡಿರಿ ಎಂದು ಅಧ್ವರ್ಯುವೇ ಮೊದಲಾದ ಋತ್ವಿಜರಿಗೆ ಯಜಮಾನರು ಹೇಳಿರುವ ಆದೇಶವು ಉಕ್ತವಾಗಿದೆ ಎಂಬ ಅರ್ಥವು ಇಲ್ಲಿ ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ಮಂಥತ**—ಮಂಥ ವಿಲೋಡನೇ ಧಾತು. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ. **ತಾಸ್ಯನುದಾತ್ತೇ**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ನರಃ**—ಣೀಞ್ ಪ್ರಾಪಣೇ. ಧಾತು. **ನಯತೇರ್ಡಿಚ್ಚ** (ಉ. ಸೂ. ೨-೧೫೭) ಎಂಬುದರಿಂದ ಇದಕ್ಕೆ ಋ ಪ್ರತ್ಯಯ. ಇದಕ್ಕೆ ಡಿತ್ವವಿಧಾನ ಮಾಡಿರುವುದರಿಂದ ಧಾತುವಿನ ಟಗೆ ಲೋಪ. ನೃ ಎಂಬ ರೂಪವಾಗುತ್ತದೆ, ನಯಂತಿ ಕರ್ಮಾಣಿ, ನೀಯಂತೇ ಕರ್ಮಾಣಿ ಏಭಿಃ ಇತಿ ವಾ ನರಃ (ಕಾರ್ಯವನ್ನು ಮಾಡುವವರು ಅಥವಾ ಇವರಿಂದ ಕಾರ್ಯ ನೆರವೇರುತ್ತದೆ) ಸಂಬೋಧನಾ ಜಸ್ ಪರವಾದಾಗ **ಋತೋಙಿ ಸರ್ವನಾಮಸ್ಥಾನಯೋಃ** ಎಂಬುದರಿಂದ ಗುಣ ರಪರವಾಗಿ ಬರುತ್ತದೆ. ಆಮಂತ್ರಿತಸಂಜ್ಞೆ ಇರುವುದರಿಂದ ನಿಘಾತಸ್ವರ ಬರುತ್ತದೆ.

**ಅದ್ವಯಂತಂ** — ದ್ವಯಮಿವ ಆಚರತಿ ಎಂದು ಅರ್ಥವಿವಕ್ಷಾಮಾಡಿದಾಗ **ಸರ್ವಪ್ರಾದಿಪದಿಕೇಭ್ಯಃ ಕ್ವಿಬ್ವಕ್ತವ್ಯಃ** ಎಂಬ ವಾರ್ತಿಕದಿಂದ ಆಚಾರಾರ್ಥದಲ್ಲಿ ದ್ವಯ ಶಬ್ದದ ಮೇಲೆ ಕ್ವಿಪ್ ಪ್ರತ್ಯಯ. ಇದು ಸನಾದಿಯಲ್ಲಿ ಪಠಿತವಾದುದರಿಂದ **ಸನಾದ್ಯಂತಾಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ಕ್ವಿಬಂತಕ್ಕೆ ಧಾತುಸಂಜ್ಞಾ ಬರುತ್ತದೆ. ಕ್ವಿಪಿನಲ್ಲಿ ಸರ್ವವೂ ಲೋಪವಾಗುತ್ತವೆ. ಇದರ ಮೇಲೆ ಲಟ್ ಬಂದಾಗ **ಲಟಃ ಶತೃಶಾನ**—(ಪಾ. ಸೂ. ೩-೨-೧೨೪) ಎಂಬುದರಿಂದ ಅದಕ್ಕೆ ಶತ್ರಾದೇಶ. ದ್ವಯತಿ ಇತಿ ದ್ವಯನ್. ನ ದ್ವಯನ್ " ಅದ್ವಯನ್ ತಂ. **ತತ್ಪುರುಷೇತು**—(ಪಾ. ಸೂ. ೬-೨-೧) ಎಂಬುದರಿಂದ ನಞ್ ಪ್ರಕೃತಿಸ್ವರ ಬರುತ್ತದೆ.

**ಸುಪ್ರತೀಕಂ**—ಶೋಭನಂ ಪ್ರತೀಕಂ ಯಸ್ಯ ಸಃ ತಂ ಕ್ರತ್ವಾದಿಗಣದಲ್ಲಿ ಸೇರಿರುವುದರಿಂದ ಬಹುವ್ರೀಹಿಯಲ್ಲಿ **ಕ್ರತ್ವಾದಯಶ್ಚ.** (ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ, ದ್ವಿತೀಯಾ ಏಕ ವಚನಾಂತರೂಪ.

**ಜನಯತಃ**—ಜನೀ ಪ್ರಾದುರ್ಭಾವೇ. ಧಾತು. **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಅತ **ಉಪಧಾಯಾಃ** ಎಂಬುದರಿಂದ ಉಪಧಾವೃದ್ಧಿ ಪ್ರಾಪ್ತವಾದರೆ, **ಜನೀಜ್ಯಾಷ್ಕ್ನಸುರಂಜೋಮಾಂ-ತಾಶ್ಚ** ಎಂಬ ವಚನದಿಂದ ಈ ಧಾತುವಿಗೆ ಮಿತ್ವವಿಧಾನಮಾಡಿರುವುದರಿಂದ **ಮಿತಾಂ ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಹ್ರಸ್ವಸ್ವರ ಬರುತ್ತದೆ. ಣಿಜಂತದಮೇಲೆ ಲೋಟ್. ಮಧ್ಯಮಪುರುಷ ಬಹುವಚನದಲ್ಲಿ ಜನಯತ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಶೇವಂ**—ಶೇವ ಎಂಬುದು ಔಣಾದಿಕವನ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಬಹು ವ್ರೀಹಿಯಲ್ಲಿ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತ ಸ್ವರ ಬರುತ್ತದೆ.

---

ಸಂಹಿತಾಪಾಠಃ

**ಯದೀ ಮಂಥಂತಿ ಬಾಹುಭಿರ್ವಿ ರೋಚತೇಽಶ್ವೋ ನ ವಾಜ್ಯರುಷೋ ವನೇಷ್ವಾ ।**

**ಚಿತ್ರೋ ನ ಯಾಮನ್ನಶ್ವಿನೋರನಿವೃತಃ ಪರಿ ವೃಣಕ್ತ್ಯಶ್ಮನಸ್ತೃಣಾ ದಹನ್ ॥ ೬ ॥**

ಪದಪಾಠಃ

ಯದಿ । ಮಂಥಂತಿ । ಬಾಹುಽಭಿಃ । ವಿ । ರೋಚತೇ । ಅಶ್ವಃ । ನ । ವಾಜೀ । ಅರುಷಃ । ವನೇಷು । ಆ ।
ಚಿತ್ರಃ । ನ । ಯಾಮನ್ । ಅಶ್ವಿನೋಃ । ಅನಿಽವೃತಃ । ಪರಿ । ವೃಣಕ್ತಿ । ಅಶ್ಮನಃ । ತೃಣಾ । ದಹನ್ ॥

ಸಾಯಣಭಾಷ್ಯಂ

ಯದ್ಯಧ್ವರ್ಯ್ವಾದಯೋ ಬಾಹುಭಿಃ ಸ್ವಕೀಯೈರ್ಹಸ್ತೈರಗ್ನಿಂ ಮಂಥಂತಿ ಮಥ್ನಂತಿ ತತಃ ಸ ಜಾತೋಽಗ್ನಿರ್ವನೇಷು ಕಾಷ್ಠೇಷು ವಾಜೀ ಶೀಘ್ರಗಮನವಾನ್ ಅರುಷ ಆರೋಚಮಾನಃ ಸರ್ವೇಷಾಂ ಪ್ರೀತಿಕರಃ ಸನ್ ಆ ವಿ ರೋಚತೇ । ಆ ಸಮಂತಾದ್ವಿಶೇಷೇಣ ದೀಪ್ಯತೇ । ತತ್ರ ದೃಷ್ಟಾಂತಃ । ಅಶ್ವೋ ನೇತಿ । ಯಥಾಶ್ವೋ ವನೇಷು ವನನೀಯೇಷು ವಾಹ್ಯಾಲೀಸ್ಥಾನೇಷು ವೇಗವಾನಾರೋಚಮಾನೋ ವರ್ತತೇ ತದ್ವತ್ । ತತ್ರೈವ ದೃಷ್ಟಾಂತಾಂತರಂ । ಚಿತ್ರೋ ನೇತಿ । ಯಥಾ ಯಾಮನ್ ಯಾಮನಿ ವೇಗಗಮನೇಽಶ್ವಿನೋರ್ದೇವಭಿಷಜೋಶ್ಚಿತ್ರೋ ನಾನಾವಿಧವರ್ಣೋ ರಥ ಆರೋಚಮಾನೋ ವರ್ತತೇ ತದ್ವತ್ । ಅನಿವೃತಃ ಕೇನಾಪ್ಯಪ್ರತಿಬದ್ಧಗಮನಃ ಸೋಽಯಮಗ್ನಿರಶ್ಮನ ಉಪಲಾನ್ ತೃಣಾ ತೃಣಾನಿ ಚ ದಹನ್ ಭಸ್ಮಸಾತ್ಕುರ್ವನ್ ಪರಿ ವೃಣಕ್ತಿ । ದಗ್ಧಸ್ಥಾನಾನಿ ಪರಿತೋ ವರ್ಜಯತಿ । ತಾದೃಶೋಽಗಿರಾರೋಚತ ಇತಿ ಪೂರ್ವೇಣಾನ್ವಯಃ ॥ ಮಂಥಂತಿ । ಮಂಥ ವಿಲೋಡನೇ । ಲಟಿ ರೂಪಂ । ಯದಿಯೋಗಾದನಿಘಾತಃ । ರೋಚತೇ । ರುಚ ದೀಪ್ತೌ ಭೌವಾದಿಕಃ । ಲಟಿ ರೂಪಂ । ನಿಘಾತಃ । ಯಾಮನ್ ಯಾ ಪ್ರಾಪಣೇ । ಆತೋ ಮನಿನ್ಕ್ವನಿಬ್ವನಿಪಶ್ಚೇತಿ ಮನಿನ್ । ಸುಪಾಂ ಸುಲುಗಿತ್ಯಾದಿನಾ ಸಪ್ತಮ್ಯಾ ಲುಕ್ । ನಿತ್ಸ್ವರಃ । ಅನಿವೃತಃ । ವೃಞ್ ವರಣೇ । ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ನಿಪೂರ್ವೋ ವೃಣೋತಿರ್ನಿವಾರಣೇ ವರ್ತತೇ । ನ ನಿವೃತೋಽನಿವೃತಃ । ನಞ್ಸ್ವರಃ । ವೃಣಕ್ತಿ । ವೃಜೀ ವರ್ಜನೇ ರುಧಾದಿಃ । ಚೋಃ ಕುರಿತಿ ಕುತ್ವಂ । ನಿಘಾತಃ । ತೃಣಾ । ತೃಹ ಹಿಂಸಾಯಾಂ । ತೃಹೇಃ ಕ್ನೋ ಹಲೋಪಶ್ಚ । ಉ. ೫-೮ । ಇತಿ ಕ್ನಃ ಕಿತ್ತ್ವಾದಗುಣಃ । ಹಲೋಪಶ್ಚ । ತೃಹ್ಯತೇ ತದ್ಗವಾದಿಭಿರಿತಿ ತೃಣಂ । ನಿತ್ಸ್ವರಃ ॥

ಪ್ರತಿಪದಾರ್ಥ

**ಬಾಹುಭಿಃ**—ತಮ್ಮ ಹಸ್ತಗಳಿಂದ । **ಯದಿ ಮಂಥಂತಿ**—(ಋತ್ವಿಕ್ಕುಗಳು) ಮಥನವನ್ನು ಮಾಡಿದಮೇಲೆ ಉತ್ಪನ್ನನಾದ ಅಗ್ನಿಯು । **ವನೇಷು**—ಕಾಷ್ಠಾದಿಗಳಲ್ಲಿ । **ವಾಜೀ**—ಶೀಘ್ರಗಾಮಿಯಾದ । **ಅಶ್ವೋ ನ**—ಅಶ್ವದಂತೆ । **ಅರುಷಃ** — ಆರೋಚಮಾನವಾದ ರೂಪವುಳ್ಳವನಾಗಿ । **ಆ ವಿ ರೋಚತೇ** — ಅತಿಶಯವಾಗಿ ಪ್ರಕಾಶಿಸುತ್ತಾನೆ । **ಯಾಮನ್**—ಅವನ ಸಂಚಾರಕಾಲದಲ್ಲಿ । **ಅಶ್ವಿನೋಃ**—ಅಶ್ವಿನೀ ದೇವತೆಗಳ । **ಚಿತ್ರೋ ನ**—ಚಿತ್ರವರ್ಣವುಳ್ಳ ರಥದಂತೆ । **ಅನಿವೃತಃ**—ಅಪ್ರತಿಹತವಾದ ಸಂಚಾವುಳ್ಳವನಾಗಿ । **ಅಶ್ಮನಃ**—ಕಲ್ಲುಗಳನ್ನೂ । **ತೃಣಾ**—ತೃಣಗಳನ್ನೂ । **ದಹನ್**—ಸುಡುತ್ತಾ । **ಪರಿ ವೃಣಕ್ತಿ**—ಸುತ್ತಲೂ ಸಂಚರಿಸುತ್ತಾನೆ. (ದಹಿಸಿದ ಪ್ರದೇಶವನ್ನು ಬಿಟ್ಟು ಮುಂದುವರಿಯುತ್ತಾನೆ) ॥

ಭಾವಾರ್ಥ

ಋತ್ವಿಕ್ಕುಗಳು ತಮ್ಮ ಹಸ್ತಗಳಿಂದ ಮಥನವನ್ನು ಮಾಡಿದ ಮೇಲೆ ಉತ್ಪನ್ನನಾದ ಅಗ್ನಿಯು ಶೀಘ್ರಗಾಮಿಯಾದ ಅಶ್ವದಂತೆ ಆರೋಚಮಾನವಾದ ರೂಪಉಳ್ಳವನಾಗಿಯೂ, ಅತಿಶಯವಾಗಿಯೂ ಸಹ ಕಾಷ್ಠಾದಿಗಳಲ್ಲಿ ಪ್ರಕಾ

ಶಿಸುತ್ತಾನೆ. ಅಶ್ವಿನೀದೇವತೆಗಳ ನಾನಾವಿಧವಾದ ವರ್ಣಗಳುಳ್ಳ ರಥದಂತೆ ಅಪ್ರತಿಹತವಾದ ಸಂಚಾರವುಳ್ಳವನಾಗಿ ಶಿಲೆಗಳನ್ನೂ ತೃಣಗಳನ್ನೂ ಸುಡುತ್ತಲೂ ದಹಿಸಿದ ಪ್ರದೇಶಗಳನ್ನು ಬಿಟ್ಟು ಮುಂದುವರಿಯುತ್ತಲೂ ಸುತ್ತಲೂ ಸಂಚರಿಸುತ್ತಾನೆ.

## English Ttranslation

When they rub ( the sticks ) with their arms the radiant Agni bursts forth from the wood like a fleet courser, and like the many-coloured car of the Ashwins unresisted in its course, Agni spreads wide around consuming stones and trees.

### ವಿಶೇಷವಿಷಯಗಳು

**ಯದಿ ಬಾಹುಭಿಃ ಮಂಥಂತಿ ವಾಜೀ ವನೇಷು**—ಅಧ್ವರ್ಯುವೇ ಮೊದಲಾದವರು ತಮ್ಮ ಹಸ್ತಗಳಿಂದ ಅಗ್ನಿಯು ಉತ್ಪನ್ನನಾಗುವಂತೆ ಮಥನಮಾಡಿದಾಗ ಉತ್ಪನ್ನನಾದ ಅಗ್ನಿಯು ಕಾಷ್ಠಗಳಲ್ಲಿ (ಕಟ್ಟಿಗೆಗಳಲ್ಲಿ) ವ್ಯಾಪಿಸುವವನಾಗುತ್ತಾನೆಂದು ವಾಜೀ ಎಂಬ ಪದಕ್ಕೆ ಶೀಘ್ರಗಮನವಾನ್ ಎಂಬ ಅರ್ಥವನ್ನು ವರ್ಣಿಸಿ ವಿವರಿಸಿದೆ.

**ಅರುಷಃ—ಆರೋಚಮಾನಃ ಸರ್ವೇಷಾಂ ಪ್ರೀತಿಕರಃ** | ಅಗ್ನಿಯು ಸರ್ವತೋಮುಖನಾಗಿ ಪ್ರಕಾಶಿಸುತ್ತಾ ಎಲ್ಲರಿಗೂ ಆನಂದವನ್ನು ಉಂಟುಮಾಡುತ್ತಿರುವನು ಎಂದು ವರ್ಣಿಸಿ, ಅಗ್ನಿಯ ಪ್ರಕಾಶವು ವೇಗದಿಂದ ವ್ಯಾಪಿಸುವ ವಿಷಯದಲ್ಲಿ ಅಶ್ವೋ ನ ಎಂದು ಉಪಮಾನವನ್ನು ನಿರ್ದೇಶಮಾಡಿದೆ. **ಯಥಾ ಅಶ್ವಃ ವನೇಷು ಬಾಹ್ಯಾಲೀಸ್ಥಾನೇಷು ವೇಗವಾನಾರೋಚಮಾನಃ ವರ್ತತೇ ತದ್ವತ್** | ಉತ್ತಮಜಾತಿಯಲ್ಲಿ ಉತ್ಪನ್ನವಾದ ಕುದುರೆಯು (ಹುಲ್ಲುಗಾವಲಿನಲ್ಲಿ) ಸಂಚರಿಸಲು ಅರ್ಹವಾದ ವಿಸ್ತಾರವಾವ ಪ್ರದೇಶದಲ್ಲಿ ವೇಗದಿಂದ ಸಂಚರಿಸುಶಿಸುತ್ತಿರುವ ಹಾಗೆ ಅಗ್ನಿಯು ತನ್ನ ಪ್ರಕಾಶದಿಂದ ವ್ಯಾಪಿಸುತ್ತಿರುವನು ಎಂದು ಅರ್ಥವನ್ನು ವಿವರಿಸಿ, ಹೋಲಿಸಿದೆ.

**ಚಿತ್ರೋ ನ-ವೇಗಗಮನೇ ದೇವಭಿಷಜೋಃ ನಾನಾವಿಧವರ್ಣಃ ರಥಃ ಆರೋಚಮಾನಃ ವರ್ತತೇ ತದ್ವತ್**—ಅಗ್ನಿಯ ವ್ಯಾಪನೆಯು ಬಹಳ ವೇಗಯುಕ್ತವಾಗಿರುವದೆಂಬ ವಿಷಯದಲ್ಲಿಯೂ, ಅನೇಕವಿಧವಾದ ಕಾಂತಿಯಿಂದ ಬೆಳಗುತ್ತಿರುವುದೆಂಬ ವಿಷಯದಲ್ಲಿಯೂ ಅಶ್ವಿನೀದೇವತೆಗಳ ರಥವನ್ನು ಉಪಮಾನವಾಗಿ ಹೇಳಿ, ವರ್ಣಿಸಿದೆ.

**ಅನಿವೃತಃ ಅಶ್ಮನಃ ತೃಣಾ ದಹನ್ ಪರಿ ವೃಣಕ್ತಿ — ಕೇನಾಪ್ಯಪ್ರತಿಬದ್ಧಗಮನಃ ಅಗ್ನಿಃ ಉಪಲಾನ್ ತೃಣಾನಿ ಚ ಭಸ್ಮಸಾತ್‌ಕುರ್ವನ್ ದಗ್ಧಸ್ಥಾನಾನಿ ಪರಿತೋ ವರ್ಜಯತಿ**—ಈ ಮಂತ್ರದಲ್ಲಿ ದಾವಾಗ್ನಿರೂಪದಿಂದ ಅಗ್ನಿಯು ವರ್ಣಿತನಾಗಿದ್ದಾನೆಂದು ಸೂಚಿತವಾಗಿರುವ ಕಾರಣ, ಅಗ್ನಿಯು ಯಾರಿಂದಲೂ ತಡೆಯಲು ಅಸಾಧ್ಯವಾದ ವೇಗವುಳ್ಳವನಾಗಿ ಕಲ್ಲುಗಳನ್ನೂ ತೃಣಗಳನ್ನೂ ಸಹ ಭಸ್ಮವಾಗುವ ಮಟ್ಟಿಗೂ ಸುಡುತ್ತಾ ತಾನು ಸುಟ್ಟಿರುವ ಪ್ರದೇಶಗಳನ್ನು ತ್ಯಾಗಮಾಡಿ ಮುಂದಿನಪ್ರದೇಶಗಳಲ್ಲಿ ವ್ಯಾಪಿಸುವನೆಂದು ಅರ್ಥವನ್ನು ವಿವರಿಸಿದೆ. ಪಾರ್ಥಿವಾಗ್ನಿಯು ದಾವಾಗ್ನಿ, ಜಾತವೇದಾಗ್ನಿಎಂಬ ಅನೇಕವಿಧವಾದ ಪ್ರಭೇದಗಳಿಂದ ಉಪಾಸ್ಯನಾಗಿದ್ದಾನೆಂದು ಸೂಚಿಸಿದೆ.

### ವ್ಯಾಕರಣಪ್ರಕ್ರಿಯಾ

**ಯದಿ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಮಂಥಂತಿ**—ಮಂಥ ವಿಲೋಡನೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದಿ

ಎಂಬುದು ಪೂರ್ವದಲ್ಲಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮–೧–೩೦) ಎಂಬುದರಿಂದ ನಿಘಾತ ಸ್ವರ ಪ್ರತಿಷೇಧ ಬರುತ್ತದೆ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ರೋಚತೇ**—ರುಚ ದೀಪ್ತೌ ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಯಾಮನ್**—ಯಾ ಪ್ರಾಪಣೇ. ಧಾತು. ಆಕಾರಾಂತವಾದುದರಿಂದ **ಆತೋ ಮನಿನ್‌ಕ್ವನಿಬ್‌ವನಿಪಶ್ಚ** (ಪಾ. ಸೂ. ೩-೨-೭೪) ಎಂಬುದರಿಂದ ಇದಕ್ಕೆ ಮನಿನ್ ಪ್ರತ್ಯಯ. ಯಾಮನ್ ಶಬ್ದವಾಗುತ್ತದೆ. ಸಪ್ತಮೀ ಏಕವಚನಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅನಿವೃತಃ**—ವೃಞ್ ವರಣೇ. ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಯಸ್ಯ ವಿಭಾಷಾ** (ಪಾ. ಸೂ. ೭-೨-೧೫) ಎಂಬುದರಿಂದ ಇಡಾಗಮ ನಿಷೇಧ ಬರುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. ನಿಪೂರ್ವವಾದ ವೃಞ್ ಧಾತುವು ಇಲ್ಲಿ ನಿವಾರಣಾರ್ಥದಲ್ಲಿ ಪ್ರಯುಕ್ತವಾಗಿದೆ. ನ ನಿವೃತಃ ಅನಿವೃತಃ **ತತ್ಪುರುಷೇತುಲ್ಯಾರ್ಥ**—(ಪಾ. ಸೂ- ೬-೨-೨) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೃಣಕ್ತಿ**—ವೃಜೀ ವರ್ಜನೇ ಧಾತು. ರುಧಾದಿ. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ, **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಧಾತುವಿನ ಜಕಾರಕ್ಕೆ ಕುತ್ವ. **ಖರಿಚ** ಎಂಬುದರಿಂದ ಅದಕ್ಕೆ ಚಕಾರಾದೇಶ. **ರುಧಾದಿಭ್ಯಃ ಶ್ನಂ** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಂ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಋಕಾರದ ಪರದಲ್ಲಿ ಬಂದುದರಿಂದ ಣತ್ವ. ಇದಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ತೃಣಾ**—ತೃಹ ಹಿಂಸಾಯಾಂ ಧಾತು. **ತೃಹೇಃ ಕ್ನೋಹಲೋಪಶ್ಚ** (ಉ. ಸೂ. ೫-೬೮೬) ಎಂಬುದರಿಂದ ಕ್ನ ಪ್ರತ್ಯಯ. ಹಕಾರಕ್ಕೆ ಲೋಪ. ಕ್ನ ಎಂಬಲ್ಲಿ ಕಕಾರಲೋಪವಾಗುವುದರಿಂದ ಧಾತುವಿನ ಋಕಾರಕ್ಕೆ ಗುಣ ಬರುವುದಿಲ್ಲ. ತೃಹ್ಯತೇ ತತ್ ಗವಾದಿಭಿರಿತಿ ತೃಣಂ (ಗೋವು ಮುಂತಾದವುಗಳಿಂದ ತಿನ್ನುವುದರ ಮೂಲಕ ಹಿಂಸಿಸಲ್ಪಡುವುದು.) ನಿತ್ವಾತಿದೇಶವಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಹನ್**—ದಹ ಭಸ್ಮೀಕರಣೇ ಧಾತು. ಲಟಿಗೆ ಶತ್ರಾದೇಶ. **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

**ಸಂಹಿತಾಪಾಠಃ**

**ಜಾತೋ ಅಗ್ನೀ ರೋಚತೇ ಚೇಕಿತಾನೋ ವಾಜೀ ವಿಪ್ರಃ ಕವಿಶಸ್ತಃ ಸುದಾನುಃ ।**
**ಯಂ ದೇವಾಸ ಈಡ್ಯಂ ವಿಶ್ವವಿದಂ ಹವ್ಯವಾಹಮದಧುರಧ್ವರೇಷು ॥ ೭ ॥**

ಪದಪಾಠಃ

ಜಾತಃ । ಅಗ್ನಿಃ । ರೋಚತೇ । ಚೇಕಿತಾನಃ । ವಾಜೀ । ವಿಪ್ರಃ । ಕವಿಽಶಸ್ತಃ । ಸುಽದಾನುಃ ।

ಯಂ । ದೇವಾಸಃ । ಈಡ್ಯಂ । ವಿಶ್ವಽವಿದಂ । ಹವ್ಯಽವಾಹಂ । ಅದಧುಃ । ಅಧ್ವರೇಷು ॥ ೭ ॥

ಸಾಯಣಭಾಷ್ಯಂ

ಜಾತೋ ಮಂಥನಾನಂತರಮುತ್ಪನ್ನಃ ಸ ಚ ಚೇಕಿತಾನೋ ಸರ್ವಂ ಜಾನಾನಃ ಸನ್ ವಾಜೀ ಸತತಗಮನಸ್ವಭಾವೋ ವಿಪ್ರಃ ಕರ್ಮಾಭಿಜ್ಞೋಽತ ಏವ ಕವಿಶಸ್ತಃ ಕವಿಭಿರ್ಮೇಧಾವಿಭಿರ್ಹೋತೃಭಿಃ ಸ್ತುತಃ ಸುದಾನುಃ ಸುಷ್ಠು ಕರ್ಮಫಲಸ್ಯ ದಾತಾ ಏವಂವಿಧೋಽಗ್ನೀ ರೋಚತೇ । ದೀಪ್ಯತೇ । ದೇವಾಸೋ ದೇವಾ ಇಂದ್ರಾದಯ ಈಡ್ಯಂ ಹೋತ್ರಾದಿಭಿಃ ಸ್ತುತ್ಯಂ ವಿಶ್ವವಿದಂ ಸರ್ವಸ್ಯ ಜಗತೋ ವೇದಿತಾರಂ ಯಮುಗ್ನಿಮಧ್ವರೇಷು ಜ್ಯೋತಿಷ್ಟೋಮಾದಿಯಜ್ಞೇಷು ಹವ್ಯವಾಹಂ ಹವ್ಯಾನಾಂ ವೋಢಾರಮದಧುರ್ವ್ಯದಧುಃ ಸೋಽಗ್ನಿರ್ದೀಪ್ಯತ ಇತಿ ಪೂರ್ವೇಣಾನ್ವಯಃ ॥ ಚೇಕಿತಾನಃ । ಕಿತ ಜ್ಞಾನ ಇತ್ಯಸ್ಯ ಯಙ್‌ಲುಕಿ ಗುಣೋ ಯಙ್‌ಲುಕೋರಿತ್ಯಭ್ಯಾಸಸ್ಯ ಗುಣಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ಕವಿಶಸ್ತಃ । ಥಾಥಘಞ್‌ಕ್ತಾಜಬಿತ್ರಕಾಣಾಮಿತ್ಯಂತೋದಾತ್ತತ್ವಂ । ಅದಧುಃ । ದಧಾತೇರ್ಲಙಿ ಝೋಃ ಸಿಜಭ್ಯಸ್ತವಿದಿಭ್ಯಶ್ಚೇತಿ ಜುಸ್ । ಯದ್ವೃತ್ತಯೋಗಾದನಿಘಾತಃ । ಅಡಾಗಮಸ್ವರಃ ॥

ಪ್ರತಿಪದಾರ್ಥ

ದೇವಾಸಃ—ಮಥನಮಾಡಿದನಂತರ ಉತ್ಪನ್ನನಾದವನೂ, । ಈಡ್ಯಂ—ಸ್ತುತ್ಯನಾದವನೂ। ವಿಶ್ವವಿದಂ—ಸಕಲ ಜಗತ್ತನ್ನೂ ತಿಳಿದವನೂ ಆದ । ಯಂ—ಯಾವ ಅಗ್ನಿಯನ್ನು । ಅಧ್ವರೇಷು—ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ । ಹವ್ಯವಾಹಂ—ಹವಿಸ್ಸನ್ನು ವಹಿಸುವವನನ್ನಾಗಿ । ಅದಧುಃ—ನಿಯೋಜಿಸಿದರೋ (ಅಂತಹ) । ಜಾತಃ—ಮಥನಮಾಡಿದನಂತರ ಉತ್ಪನ್ನನಾದವನೂ । ಚೇಕಿತಾನಃ—ಉತ್ತಮವಾದ ಪ್ರಜ್ಞೆಯುಳ್ಳವನೂ । ವಾಜೀ—ಸತತವಾದ ಗಮನಸ್ವಭಾವವುಳ್ಳವನೂ । ವಿಪ್ರಃ—ಕರ್ಮದ ಸ್ವರೂಪವನ್ನು ತಿಳಿದವನೂ (ಆದುದರಿಂದಲೇ)। ಕವಿಶಸ್ತಃ—ಮೇಧಾವಿಗಳಾದ ಹೋತೃಗಳಿಂದ ಸ್ತುತಿಸಲ್ಪಡುವವನೂ । ಸುದಾನುಃ—ಉತ್ತಮವಾದ ಕರ್ಮಫಲವನ್ನು ಕೊಡತಕ್ಕವನೂ ಆದ । ಅಗ್ನಿಃ—ಅಗ್ನಿಯು । ರೋಚತೇ—ಪ್ರಕಾಶಿಸುತ್ತಾನೆ ।

ಭಾವಾರ್ಥ

ಸ್ತುತ್ಯನಾದವನೂ, ಸಕಲ ಜಗತ್ತನ್ನೂ ತಿಳಿದವನೂ ಆದ ಯಾವ ಅಗ್ನಿಯನ್ನು ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ ಹವಿಸ್ಸನ್ನು ವಹಿಸುವವನನ್ನಾಗಿ ಇಂದ್ರಾದಿದೇವತೆಗಳು ನಿಯೋಜಿಸಿದರೋ ಅಂತಹ ಮಥನಮಾಡಿದನಂತರ ಉತ್ಪನ್ನನಾಗುವವನೂ, ಉತ್ತಮವಾದ ಪ್ರಜ್ಞೆಯುಳ್ಳವನೂ, ಸತತವಾದ ಗಮನಸ್ವಭಾವವುಳ್ಳವನೂ, ಕರ್ಮದ ಸ್ವರೂಪವನ್ನು ತಿಳಿದವನೂ, ಆದುದರಿಂದಲೇ ಮೇಧಾವಿಗಳಾದ ಹೋತೃಗಳಿಂದ ಸ್ತುತಿಸಲ್ಪಡುವವನೂ, ಉತ್ತಮವಾದ ಕರ್ಮಫಲವನ್ನು ಕೊಡತಕ್ಕವನೂ ಆದ ಅಗ್ನಿಯು ಪ್ರಕಾಶಿಸುತ್ತಾನೆ.

## English Translation

As soon as born Agni, shines intelligent, swift-moving, skilled in rites, praised by the wise, and liberal in gifts ; ( and it is he ) whom the gods have held as the bearer of oblations at sacrifices, adorable and all-knowing.

ವಿಶೇಷವಿಷಯಗಳು.

**ಅಗ್ನಿಃ ಜಾತಃ ಚೇಕಿತಾನಃ ವಾಜೀ**—**ಮಂಥನಾನಂತರಸಮುತ್ಪನ್ನಃ ಅಗ್ನಿಃ ಸರ್ವಂ ಜಾನಾನಃ, ಸತತಗಮನಸ್ವಭಾವಃ** । ಅಗ್ನಿಯು ಅರಣಿಗಳಲ್ಲಿ ಮಥನಮಾಡಿದನಂತರ ಉತ್ಪನ್ನನಾಗುವನು ಎಂದೂ, ಎಲ್ಲವನ್ನೂ ತಿಳಿಯುವ ಜ್ಞಾನವಂತನಾಗಿರುವನೆಂದೂ, ಅರ್ಥವನ್ನು ವರ್ಣಿಸಿದೆ. **ವಾಜೀ** ಎಂಬ ಪದವು ಅಶ್ವನಾಮಗಳಲ್ಲಿ (ನಿ. ೨-೨೭) ಉಕ್ತವಾಗಿ, ಯಾಸ್ಕರಿಂದ

**ನಹಿ ಗ್ರಭಾಯಾರಣಃ ಸುಶೇವೋಽನ್ಯೋ ದರ್ಯೋ ಮನಸಾ ಮನ್ತವಾ ಉ |**
**ಅಧಾ ಚಿದೋಕಃ ಪುನರಿತ್ಸ ಏತ್ಯಾ ನೋ ವಾಜ್ಯಭೀಷಾಳೇತು ನವ್ಯಃ ||**

(ಋ. ಸಂ. ೭-೪-೮)

ಎಂಬ ಋಕ್ಕಿನಲ್ಲಿ **ವೇಜನವಾನ್** ಎಂಬ ಅರ್ಥಬೋಧಕವಾಗಿದೆ ಎಂದು ವ್ಯಾಖ್ಯಾತವಾಗಿದೆ. ದುರ್ಗಾಚಾರ್ಯರು **ವೇಜನೆವಾ ಪರೇಭ್ಯೋ ಭಯದಾತಾ** ಶತ್ರುಗಳಿಗೆ ಭಯವನ್ನು ಉಂಟುಮಾಡುವವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಈ ಪದಕ್ಕೆ ಅಗ್ನಿಯು ಸರ್ವಕಾಲದಲ್ಲಿಯೂ ಸಂಚರಿಸುವ ಸ್ವಭಾವವುಳ್ಳವನೆಂಬ ಅರ್ಥವನ್ನು ವಿವರಿಸಿದ್ದಾರೆ.

**ವಿಪ್ರಃ**—ವಿಪ್ರಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. ಸಾಯಣರು ಅಗ್ನಿಯು ಕರ್ಮಗಳ ಸ್ವರೂಪ ಮತ್ತು ಆಚರಿಸುವ ಕ್ರಮ ಇವುಗಳನ್ನು ತಿಳಿದಿರುವವನೆಂಬ ಅರ್ಥವನ್ನು ವರ್ಣಿಸಿದ್ದಾರೆ.

**ಕವಿಶಸ್ತಃ**—ನಿರುಕ್ತಕಾರರಿಂದ ಈ ಪದವು

**ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ಪೃಥಿವೀ ಸಮುದ್ರಃ |**
**ವಿಶ್ವೇ ದೇವಾ ಋತಾವೃಧೋ ಹುವಾನಾಃ ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ||**

(ಋ. ಸಂ. ೬-೫೦-೧೪)

**ಕವಿಶಸ್ತಾ ಮೇಧಾವಿಶಸ್ತಾಃ** ಎಂದು ವ್ಯಾಖ್ಯಾತವಾಗಿದೆ. ದುರ್ಗಾಚಾರ್ಯರು **ಕವಿಭಿಃ ಮೇಧಾವಿಭಿಃ ಶಸ್ತ್ರೈಶ್ಚ ಶಸ್ತಾಃ ಸ್ತುತಾಃ** ಮೇಧಾವಿಗಳಿಂದ ಶಸ್ತ್ರಮಂತ್ರಗಳಿಂದ ಸ್ತುತಿಸಲ್ಪಟ್ಟಿರುವರು ಎಂದು ಅರ್ಥಮಾಡಿದ್ದಾರೆ. ಸಾಯಣರು ಕವಿಶಬ್ದಕ್ಕೆ ಮೇಧಾವಿಗಳಾದ (ಹೋತೃಗಳು) ಹೋಮವನ್ನು ಆಚರಿಸುವ ಋತ್ವಿಜರೆಂದು ಅರ್ಥಮಾಡಿ ಈ ಋತ್ವಿಜರಿಂದ ಅಗ್ನಿಯು ಸ್ತುತನಾಗಿರುವನು ಎಂದು ಅರ್ಥವನ್ನು ವಿವರಿಸಿದ್ದಾರೆ.

ಅಗ್ನಿಯು ಕರ್ಮಫಲವನ್ನು ಅತಿಶಯವಾಗಿ ಅನುಗ್ರಹಿಸುವವನಾದುದರಿಂದ **ಸುದಾನುಃ** ಎಂಬ ಪದದಿಂದ ಬೋಧ್ಯನಾಗಿರುವನೆಂದು ಸಾಯಣರು ವಿವರಿಸಿದ್ದಾರೆ. ಯಾಸ್ಕರು **ಅಸಾಮ್ಯೋಜೋ ಬಿಭೃಥಾ ಸುದಾನವಃ** (ಋ. ಸಂ. ೧-೩೯-೧೦) ಎಂಬ ಋಕ್ಕಿನಲ್ಲಿ **ಸುದಾನವಃ ಕಲ್ಯಾಣದಾನಾಃ** ಎಂದು ವ್ಯಾಖ್ಯಾನಮಾಡಿದ್ದಾರೆ.

**ಈಡ್ಯಂ ವಿಶ್ವವಿದಂ**—ಅಗ್ನಿಯು ಉದ್ದೀಪ್ತನಾಗಿ ಪ್ರಭೂತವಾದ ಮಾಹಾತ್ಮ್ಯದಿಂದ ಪೂರ್ಣವಾಗಿರುವನೆಂದೂ, ಹೋತೃವೇ ಮೊದಲಾದ ಋತ್ವಿಜರಿಂದ ಸ್ತುತಿಯನ್ನು ಮಾಡಲು ಅರ್ಹನಾಗಿರುವನೆಂದೂ, ಸೃಷ್ಟವಾದ ಪ್ರಪಂಚವೆಲ್ಲವನ್ನೂ ತಿಳಿದಿರುವನೆಂದೂ, ವರ್ಣಿಸಿ, ಇಂದ್ರನೇ ಮೊದಲಾದ ದೇವತೆಗಳು ಜ್ಯೋತಿಷ್ಟೋಮವೇ ಮುಂತಾದ ಕ್ರತುಗಳಲ್ಲಿ ಈ ಅಗ್ನಿಯನ್ನು ಯಜಮಾನರು ಅರ್ಪಿಸಿದ ಹವಿಸ್ಸುಗಳನ್ನು ವಹಿಸುವವನ್ನಾಗಿ ಮಾಡಿಕೊಂಡಿರುವರು ಎಂದು ಅರ್ಥವು ವರ್ಣಿತವಾಗಿದೆ ಎಂದು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಚೇಕಿತಾನಃ**—ಕಿತ ಜ್ಞಾನೇ. ಧಾತು. ಇದಕ್ಕೆ ಯಙ್ ಬಂದಾಗ **ಯಙೋಽಚಿಚ** ಎಂಬುದರಿಂದ ಅದಕ್ಕೆ ಲುಕ್. ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಗುಣೋಯಙ್ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸದ ಇಕಾರಕ್ಕೆ ಗುಣ. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಲಟಿಗೆ ಶಾನಚಾದೇಶ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕವಿಶಸ್ತಃ**—ಕವಿಭಿಃ ಶಸ್ತಃ ಕವಿಶಸ್ತಃ ಶಂಸ ಸ್ತುತೌ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಅನಿದಿ..ಾಂ** ಎಂಬುದರಿಂದ ಉಪಧಾನಕಾರಲೋಪ. **ಥಾಥಘಞ್ಕ್ತಾಜಬಿತ್ರಕಾಣಾಂ** (ಪಾ. ಸೂ. ೬-೨-೧೪೪) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ದೇವಾಸಃ**—**ಆಜ್ಜಸೇರಸುಕ್** (ಪಾ. ಸೂ ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ. ಸಕಾರಕ್ಕೆ ರುತ್ವವಿಸರ್ಗ.

**ಈಡ್ಯಂ**—ಈಡ ಸ್ತುತೌ ಧಾತು. **ಋಹಲೋರ್ಣ್ಯತ್** ಎಂಬುದರಿಂದ ಣ್ಯತ್ ಪ್ರತ್ಯಯ. **ಈಡವಂ..-ವೃಶಂಸ**—(ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಶ್ವವಿದಂ**—ವಿಶ್ವಂ ವೇತ್ತಿ ಇತಿ ವಿಶ್ವವಿತ್, ತಂ. ವಿದ ಜ್ಞಾನೇ. ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅದಧುಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಸಿಜಭ್ಯಸ್ತವಿದಿಭ್ಯಶ್ಚ** (ಪಾ. ಸೂ. ೩-೪-೧೦೯) ಎಂಬುದರಿಂದ ಝಿಗೆ ಜುಸಾದೇಶ. **ಉಸ್ಯಪದಾಂತಾತ್** ಎಂಬುದರಿಂದ ಪರರೂಪ. ಅಂಗಕ್ಕೆ ಅಡಾಗಮ. ಯಚ್ಛಬ್ದಸಂಬಂಧ ವಿರುವುದರಿಂದ **ಯದ್ವೃತ್ತಾನ್ನಿತ್ಯಂ** ( ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಸಂಹಿತಾಪಾಠಃ

ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನ್ತ್ಸಾದಯಾ ಯಜ್ಞಂ ಸುಕೃತಸ್ಯ ಯೋನೌ ।
ದೇವಾವೀರ್ದೇವಾನ್ಹವಿಷಾ ಯಜಾಸ್ಯಗ್ನೇ ಬೃಹದ್ಯಜಮಾನೇ ವಯೋ ಧಾಃ ॥ ೮ ॥

ಪದಪಾಠಃ

ಸೀದ । ಹೋತರಿತಿ । ಸ್ವೇ । ಊಂ ಇತಿ । ಲೋಕೇ । ಚಿಕಿತ್ವಾನ್ । ಸಾದಯ । ಯಜ್ಞಂ । ಸುಕೃತಸ್ಯ । ಯೋನೌ ।
ದೇವಃಅವೀಃ । ದೇವಾನ್ । ಹವಿಷಾ । ಯಜಾಸಿ । ಅಗ್ನೇ । ಬೃಹತ್ । ಯಜಮಾನೇ । ವಯಃ । ಧಾಃ ॥

ಸಾಯಣಭಾಷ್ಯಂ

**ಯಜಮಾನೋ ಬ್ರೂತೇ । ಹೋತರ್ಹೋಮನಿಷ್ಪಾದಕ ಹೇ ಅಗ್ನೇ ಸ್ವೇ ಸ್ವಕೀಯೇ ಲೋಕ ಉತ್ತಾರವೇದ್ಯಾ ನಾಭೌ ಸೀದೋ ತ್ವಂ ಹೋಮನಿಮಿತ್ತಮುಪವಿಶ್ಯೈವ । ತಥಾ ಚಿಕಿತ್ವಾನ್ ಜ್ಞಾನ-ವಾಂಸ್ತ್ವಂ ಸುಕೃತಸ್ಯ ಸುಕೃತಜನ್ಯೋಪಭೋಗಸ್ಯ ಯೋನೌ ಸ್ಥಾನ ಉತ್ತಮುಲೋಕೇ ಯಜ್ಞಂ ಯ-ಜ್ಞಸ್ಯ ಕರ್ತಾರಂ ಯಜಮಾನಂ ಸಾದಯ । ಸ್ಥಾಪಯ । ಕಿಂಚ ದೇವಾವೀಃ । ದೇವಾನ್ ಹವಿಷ್ಪ್ರದಾ-ನೇನಾವತೀತಿ ದೇವಾವೀಃ । ತಾದೃಶಸ್ತ್ವಂ ಹವಿಷಾ ಪುರೋಡಾಶಾದಿಲಕ್ಷಣೇನ ಹವ್ಯೇನ ದೇವಾನ್ ಯ-ಜಾಸಿ । ಯಜ । ಅಥ ತ್ವಂ ಯಜಮಾನೇ ಯಾಗಂ ಕುರ್ವಾಣೇ ಮಯಿ ಬೃಹತ್ಪ್ರಭೂತಂ ಪಶುಪುತ್ರಾದಿ-ಸಮೇತಂ ವಯೋಽನ್ನಂ ಧಾಃ । ವಿಧೇಹಿ ॥ ಸೀದ । ಸದೇರ್ಲೋಟಿ ರೂಪಂ । ಸಾದಯ । ಸದೇರ್ಣ್ಯಂ-ತಸ್ಯ ಲೋಟಿರೂಪಂ । ಣಿಚ್‌ಸ್ವರಃ । ದೇವಾವೀಃ । ಅವ ರಕ್ಷಣಾದಿಷು । ಅವಿತ್ಯಸ್ತ್ರೃತಂತ್ರಿಭ್ಯ ಈರಿತೀ-ಪ್ರತ್ಯಯಃ । ಕೃದುತ್ತರಪದಸ್ವರಃ । ಯಜಾಸಿ । ಯಜೇರ್ಲೇಟ್ಯಾಡಾಗಮಃ । ಧಾಃ । ದಧಾತೇಶ್ಛಾಂದಸೇ ಲುಙಿ ರೂಪಂ ॥**

ಪ್ರತಿಪದಾರ್ಥ

**ಹೋತಃ**—ಹೋಮಸಂಪಾದಕನಾದ। **ಅಗ್ನೇ**—ಅಗ್ನಿಯೇ। **ಸ್ವೇ**—ನಿನಗೆ ನಿಯುಕ್ತವಾದ । **ಲೋಕೇ**—ಉತ್ತರವೇದಿಪ್ರದೇಶದಲ್ಲಿ । **ಸೀದ ಉ**—(ಹೋಮಾರ್ಥವಾಗಿ) ಕುಳಿತುಕೋ । **ಚಿಕಿತ್ವಾನ್**—ಪ್ರಜ್ಞಾವಂತನಾದ ನೀನು । **ಸುಕೃತಸ್ಯ**—ಸತ್ಕರ್ಮಕ್ಕೆ ಫಲವಾದ ಸುಖಾನುಭವದ । **ಯೋನೌ**—ಉತ್ಪತ್ತಿಸ್ಥಾನವಾದ ಯಜ್ಞವೇದಿಯಲ್ಲಿ । **ಯಜ್ಞಂ**—ಯಜ್ಞಕರ್ತೃವಾದ ಯಜಮಾನನನ್ನು । **ಸಾದಯ**—ಸ್ಥಾಪಿಸು । **ದೇವಾವೀಃ**—(ಹವಿಷ್ಪ್ರದಾನದಿಂದ) ದೇವತೆಗಳ ರಕ್ಷಕನಾದ ನೀನು । **ಹವಿಷಾ**—ಪುರೋಡಾಶಾದಿರೂಪವುಳ್ಳ ಹವಿಸ್ಸುಗಳಿಂದ । **ದೇವಾನ್**—ದೇವತೆಗಳನ್ನು । **ಯಜಾಸಿ**—ಪೂಜಿಸು । **ಯಜಮಾನೇ**—ಯಜ್ಞಕರ್ತನಾದ ನನ್ನಲ್ಲಿ । **ಬೃಹತ್**—ಪ್ರಭೂತವಾದ । **ವಯಃ**—ಅನ್ನವನ್ನು । **ಧಾಃ**—ಸ್ಥಾಪಿಸು ॥

ಭಾವಾರ್ಥ

ಹೋಮಸಂಪಾದಕನಾದ ಅಗ್ನಿಯೇ, ನಿನಗಾಗಿ ನಿಯುಕ್ತವಾದ ಉತ್ತರವೇದಿಪ್ರದೇಶದಲ್ಲಿ ಹೋಮಾರ್ಥವಾಗಿ ಕುಳಿತುಕೋ, ಪ್ರಜ್ಞಾವಂತನಾದ ನೀನು ಸತ್ಕರ್ಮಕ್ಕೆ ಫಲವಾದ ಸುಖಾನುಭವದ ಉತ್ಪತ್ತಿಸ್ಥಾನವಾದ ಯಜ್ಞವೇದಿಯಲ್ಲಿ ಯಜ್ಞಕರ್ತೃವಾದ ಯಜಮಾನನನ್ನು ಸ್ಥಾಪಿಸು. ಹವಿಷ್ಪ್ರದಾನಾದಿಗಳಿಂದ ದೇವತೆಗಳ ರಕ್ಷಕನಾದ ನೀನು ಪುರೋಡಾಶಾದಿ ರೂಪವುಳ್ಳ ಹವಿಸ್ಸುಗಳಿಂದ ದೇವತೆಗಳನ್ನು ಪೂಜಿಸು. ಯಜ್ಞಕರ್ತನಾದ ನನ್ನಲ್ಲಿ ಪ್ರಭೂತವಾದ ಅನ್ನವನ್ನು ಸ್ಥಾಪಿಸು.

## English Translation

Offerer of oblations, sit down in your own sphere, for you are cognizant ( of holy acts ), and station the institutor of the ceremony in the chief place of the sacred rite : cherisher of the gods, worship the gods, Agni, and bestow abundant food on the founder of the sacrifice.

### ವಿಶೇಷವಿಷಯಗಳು

**ಹೋತಃ ಅಗ್ನೇ ಸ್ವೇ ಲೋಕೇ ಸೀದ ಉ**–ಯಜ್ಞಗಳಲ್ಲಿ ದೇವತೆಗಳನ್ನು ಹವಿಸ್ಸ್ವೀಕಾರಕ್ಕಾಗಿ ಆಯಾಯ ಮಂತ್ರಗಳಿಂದ ಆಹ್ವಾನಮಾಡುವ ಋತ್ವಿಜನು ಹೋತೃವೆನಿಸಿರುವನು. ಅಗ್ನಿಯು, ಅರ್ಪಿಸಿದ ಹವಿಸ್ಸುಗಳನ್ನು ಆಯಾಯದೇವತೆಗಳಿಗೋಸ್ಕರ ವಹಿಸಿ, ಅವರವರಿಗೆ ತಲಪಿಸುವುದಕ್ಕಾಗಿ ಅವರನ್ನು ಆಹ್ವಾನಮಾಡುವಕಾರಣ ಹೋತೃವಾಗಿರುವನೆಂದು ಅರ್ಥವನ್ನು ಮಾಡಿ, ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ. ಸಾಯಣರು ಹೋತೃಶಬ್ದಕ್ಕೆ **ಹೋಮನಿಷ್ಪಾದಕ** ಎಂಬ ಅರ್ಥವನ್ನು ವಿವರಿಸಿ, ಅಗ್ನಿಯು ಹೋಮವನ್ನು ನೆರವೇರಿಸುವುದರಿಂದ ಹೋತೃವಾಗಿರುವನೆಂದೂ, ಲೋಕ ಶಬ್ದವು ಉತ್ತರವೇದಿಯ (ನಾಭಿಯ) ಮಧ್ಯಪ್ರದೇಶವೆಂದು ಅರ್ಥದಲ್ಲಿ ಪ್ರಯುಕ್ತವಾಗಿರುವುದೆಂದೂ, ಈ ಪ್ರದೇಶವು ಅಗ್ನಿಯ ಉಪವೇಶನ ಸ್ಥಾನವಾಗಿ ಇರುವುದರಿಂದ ಅಗ್ನಿಯು ಈ ಉತ್ತರವೇದಿಯ ಮಧ್ಯದಲ್ಲಿ ಉಪವಿಷ್ಟನಾಗಿರುವನೆಂಬ ಅರ್ಥವನ್ನು ವಿವರಿಸಿ, ಉ ಎಂಬ ನಿಪಾತಕ್ಕೆ ಅವಧಾರಣಾರ್ಥವನ್ನು ಹೇಳಿ, ಅಗ್ನಿಯು ಉತ್ತರವೇದಿಯ ಮಧ್ಯಪ್ರದೇಶರೂಪವಾದ ತನ್ನ ಸ್ಥಾನದಲ್ಲಿ ಉಪವಿಷ್ಟನಾಗಿರಬೇಕೆಂಬ ಯಜಮಾನನ ಆಶಂಸನೆಯು ವಿವೃತವಾಗಿದೆ ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಚಿಕಿತ್ವಾನ್ ಸುಕೃತಸ್ಯ ಯೋನೌ ಯಜ್ಞಂ ಸಾಧಯ**—ಚಿಕಿತ್ವಾನ್ ಎಂಬ ಪದವು ಜ್ಞಾನವಂತನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಯಜ್ಞಶಬ್ದವು ಯಜ್ಞವನ್ನು ಆಚರಿಸುವ ಯಜಮಾನನೆಂಬ ಅರ್ಥದಲ್ಲಿ ಉಕ್ತವಾಗಿದೆ. ಜ್ಞಾನವಂತನಾದ ಅಗ್ನಿಯು ಯಜ್ಞಕರ್ತೃವಾದ ಯಜಮಾನನನ್ನು, ಉತ್ತಮವಾದ ಕರ್ಮವನ್ನು ಆಚರಿಸಿರುವುದರ ಫಲರೂಪವಾದ ಉತ್ತಮಲೋಕದಲ್ಲಿ ಅದರ ಭೋಗವನ್ನು ಅನುಭವಿಸುವುದಕ್ಕಾಗಿ ಸ್ಥಾಪಿಸಲಿ ಎಂದು ಆಶಂಸನೆಯು ವರ್ಣಿತವಾಗಿದೆ.

**ದೇವಾವೀಃ—ದೇವಾನ್ ಹವಿಷ್ಪ್ರದಾನೇನ ಅವತೀತಿ** ಅಗ್ನಿಯು ದೇವತೆಗಳಿಗಾಗಿ ಅರ್ಪಿಸಿದ ಹವಿಸ್ಸುಗಳನ್ನು ಅವರವರಿಗೆ ಅರ್ಪಿಸಿ ಅವರನ್ನು ರಕ್ಷಿಸುವುದರಿಂದ ದೇವಾವಿಶಬ್ದದಿಂದ ಬೋಧ್ಯನಾಗಿರುವನೆಂದು ವರ್ಣಿಸಿದೆ. ಈ ಅಗ್ನಿಯು ಪುರೋಡಾಶರೂಪವಾಗಿರುವ ಹವಿಸ್ಸುಗಳಿಂದ ದೇವತೆಗಳನ್ನು ತೃಪ್ತಿಪಡಿಸಲಿ ಎಂಬ ಆಶಂಸನೆಯು ವರ್ಣಿತವಾಗಿರುವುದೆಂದು ವಿವರಿಸಿದೆ.

**ಯಜಮಾನೇ ಬೃಹತ್ ವಯಃ ಧಾಃ—ಯಾಗಂ ಕುರ್ವಾಣೇ ಮಯಿ ಪ್ರಭೂತಪಶುಪುತ್ರಾದಿಸಮೇತಂ ಅನ್ನಂ ವಿಧೇಹಿ** **ವಯಃ** ಶಬ್ದವು ಅನ್ನನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. ಯಜ್ಞವನ್ನು ಆಚರಿಸುವ ಯಜಮಾನರಿಗೆ ಅಗ್ನಿಯು ಪ್ರಭೂತವಾದ ಪಶುಪುತ್ರರೇ ಮೊದಲಾದ ರೂಪದಿಂದ ಇರುವ ಧನದಿಂದ ಸಹಿತವಾದ ಅನ್ನವನ್ನು ಅನುಗ್ರಹಿಸಲಿ ಎಂದು ಯಜಮಾನರ ಆಶಂಸನೆಯು ವಿವೃತವಾಗಿದೆ.

### ವ್ಯಾಕರಣಪ್ರಕ್ರಿಯಾ

**ಸೀದ** — ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಕ್ಕೆ ಹಿ ಆದೇಶ. ಶಪ್ ವಿಕರಣ. ಇದು ಪರವಾದಾಗ **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಸೀದಾದೇಶ. **ಅತೋಹೇಃ** ಎಂಬುದರಿಂದ ಹಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಾದಯ**—ಪೂರ್ವೋಕ್ತವಾದ ಧಾತುವಿಗೆ ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ

ಉಪಧಾವೃದ್ಧಿ. ಣ್ಯಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಾದಯ ಎಂದು ರೂಪವಾಗುತ್ತದೆ. ಛಾಂದಸವಾಗಿ ದೀರ್ಘ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುವುದರಿಂದ ಮಧ್ಯೋದಾತ್ತವಾಗುತ್ತದೆ.

**ದೇವಾವೀಃ**—ಅವ ರಕ್ಷಣಾದಿಷು. ಧಾತು. **ಅವಿತ್ಯಸ್ತೃತಂತ್ರಿಭ್ಯ ಈಃ** (ಉ. ಸೂ. ೪-೪೩೪) ಎಂಬುದರಿಂದ ಈ ಪ್ರತ್ಯಯ. ಅವೀ ಎಂದು ರೂಪವಾಗುತ್ತದೆ. ಇದಕ್ಕೆ ಸು ಪರವಾದಾಗ ಙೀಪಿನ ಪರದಲ್ಲಿ ಬಾರದಿರುವುದರಿಂದ ಅದಕ್ಕೆ ಲೋಪ ಬರುವುದಿಲ್ಲ. ಕಾರಕ ಪೂರ್ವಪದವಾಗಿರುವುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯಜಾಸಿ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಡರ್ಥ ತೋರುವಾಗ **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್. ಮಧ್ಯಮಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

**ಕೃಣೋತ ಧೂಮಂ ವೃಷಣಂ ಸಖಾಯೋಽಸ್ರೇಧಂತ ಇತನ ವಾಜಮಚ್ಛ ।**
**ಅಯಮಗ್ನಿಃ ಪೃತನಾಷಾಟ್ ಸುವೀರೋ ಯೇನ ದೇವಾಸೋ ಅಸಹಂತ ದಸ್ಯೂನ್॥**

ಪದಪಾಠಃ

**ಕೃಣೋತ । ಧೂಮಂ । ವೃಷಣಂ । ಸಖಾಯಃ । ಅಸ್ರೇಧಂತಃ । ಇತನ । ವಾಜಂ । ಅಚ್ಛ ।**
**ಅಯಂ । ಅಗ್ನಿಃ । ಪೃತನಾಷಾಟ್ । ಸುಽವೀರಃ । ಯೇನ । ದೇವಾಸಃ । ಅಸಹಂತ । ದಸ್ಯೂನ್ ॥ ೯ ॥**

ಸಾಯಣಭಾಷ್ಯಂ

**ಯಜಮಾನೋಽಧ್ವರ್ಯ್ವಾದೀನ್ಪ್ರತಿ ಬ್ರೂತೇ । ಹೇ ಸಖಾಯಃ ಕರ್ಮಸಹಕಾರಿಣೋ ಯೂಯಂ ವೃಷಣಂ ಕಾಮಾನಾಂ ವರ್ಷಿತಾರಂ ಧೂಮಂ । ಧುನೋತಿ ಕಂಪಯತೀತಿ ಧೂಮೋಽಗ್ನಿಃ । ಏವಂವಿಧಮಗ್ನಿಂ ಕೃಣೋತ । ಕುರುತ । ಮಂಥನೇನೋತ್ಪಾದಯತ । ಯದ್ಯಗ್ನಿರ್ನ ಜಾಯತೇ ತದಾನೀಮಾಹ । ಅಸ್ರೇಧಂತೋಽಕ್ಷೀಣಾ ಅನುಪರತಸಾಮರ್ಥ್ಯಾಃ ಸಂತೋ ಯೂಯಂ ವಾಜಂ ಮಂಥನಲಕ್ಷಣಂ ಯುದ್ಧಮಚ್ಛಾಗ್ನ್ಯಭಿಮುಖ್ಯೇನೇತನ । ಪ್ರಾಪ್ನುತ । ಸುವೀರಃ । ಶೋಭನಸಾಮರ್ಥ್ಯೋಪೇತೋಽಯಮಗ್ನಿಃ ಪೃತನಾಷಾಟ್ ಪೃತನೋಪಲಕ್ಷಿತಂ ಯುದ್ಧಂ ಸಹಮಾನೋ ಭವತಿ । ಯೇನ ಯುದ್ಧಂ ಸಹಮಾನೇನಾಗ್ನಿನಾ ದೇವಾಸೋ ದೇವಾ ದಸ್ಯೂನುಪಕ್ಷಪಯಿತ್ನೂನಸುರಾನಸಹಂತ ಅಭ್ಯಭವನ್ । ತಸ್ಮಾದಕ್ಷೀಣಬಲಾ ಯೂಯಂ ಮಂಥನಂ ಕುರುತೇತಿ ಭಾವಃ ॥ ಕೃಣೋತ । ಕೃವಿ ಹಿಂಸಾಕರ-**

ಣಯೋಃ । ಲೋಟಿ ತಪ್ರತ್ಯಯಸ್ಯ ತಪ್ತನಪ್ತನಥನಾಶ್ಚೇತಿ ತಬಾದೇಶಃ । ಪಿತ್ತ್ವಾದ್ಗುಣಃ । ಪಾದಾದಿತ್ವಾದನಿಘಾತಃ । ಉಪ್ರತ್ಯಯಸ್ವರಃ । ಧೂಮಂ । ಧೂಞ್ ಕಂಪನೇ । ಇಷಿಯುಧೀಂಧಿದಸೀತ್ಯಾದಿನಾ ಮಕ್ । ಕಿತ್ತ್ವಾದ್ಗುಣಾಭಾವಃ । ಧುನೋತಿ ಕಂಪಯತಿ ದಾಹ್ಯಾನೀತಿ ಧೂಮೋಽಗ್ನಿಃ । ಪ್ರತ್ಯಯಸ್ವರಃ ಇತನ । ಇಣ್ ಗತಾವಿತ್ಯಸ್ಯ ಲೋಟಿ ತಪ್ರತ್ಯಯಸ್ಯ ತನಾದೇಶಃ । ನಿಘಾತಃ । ಪೃತನಾಷಾಟ್ । ಷಹ ಮರ್ಷಣೇ । ಛಂದಸಿ ಸಹ ಇತಿ ಣ್ವಿಃ । ಣಿತ್ತ್ವಾದುಪಧಾವೃದ್ಧಿಃ । ಸಹೇ ಸಾಡಃ ಸ ಇತಿ ಷತ್ವಂ । ಕೃದುತ್ತರಪದಪ್ರಕೃತಿಸ್ವರಃ । ಅಸಹಂತ । ಷಹ ಮರ್ಷಣ ಇತ್ಯಸ್ಯ ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ । ದಸ್ಯೂನ್ । ದಸು ಉಪಕ್ಷಯೇ । ಯಜಿಮನಿಶುಂಧಿದಸಿಜನಿಭ್ಯೋ ಯುಜಿತಿ ಯುಚ್ । ದಸ್ಯಂತೀತಿ ದಸ್ಯವಃ ಶತ್ರವಃ । ವ್ಯತ್ಯಯೇನಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ಸಖಾಯಃ**—ಕರ್ಮಕ್ಕೆ ಸಹಕಾರಿಗಳಾದ ಎಲೈ ಋತ್ವಿಕ್ಕುಗಳೇ । **ವೃಷಣಂ**—ಇಷ್ಟಾರ್ಥಗಳನ್ನು ಸುರಿಸುವವನೂ । **ಧೂಮಂ**—ಧೂಮದೊಡನೆ ಕೂಡಿರುವವನೂ ಆದ ಅಗ್ನಿಯನ್ನು । **ಕೃಣೋತ**—(ಮಥನಕ್ರಿಯೆಯಿಂದ) ಉತ್ಪನ್ನವಾಗುವಂತೆ ಮಾಡಿ । **ಅಸ್ರೇಧಂತಃ**—ಕ್ಷಯರಹಿತವಾದ ಸಾಮರ್ಥ್ಯವುಳ್ಳ ನೀವು । **ವಾಜಂ ಅಚ್ಛ**—ಮಥನರೂಪವಾದ ಯುದ್ಧವನ್ನು ಲಕ್ಷಿಸಿ । **ಇತನ**—ನಿಯುಕ್ತರಾಗಿ । **ಯೇನ**—ಯಾವ ಅಗ್ನಿಯ ಸಹಾಯದಿಂದ । **ದೇವಾಸಃ**—ದೇವತೆಗಳು । **ದಸ್ಯೂನ್**—ಹಿಂಸಕರಾದ ಶತ್ರುಗಳನ್ನು । **ಅಸಹಂತ**—ಪ್ರತಿಭಟಿಸಿ ಸೋಲಿಸಿದರೋ ಅಂತಹ । **ಸುವೀರಃ**—ಶ್ರೇಷ್ಠವಾದ ಸಾಮರ್ಥ್ಯದಿಂದ ಯುಕ್ತನಾದ । **ಅಯಂ ಅಗ್ನಿಃ**—ಈ ಅಗ್ನಿಯು । **ಪೃತನಾಷಾಟ್**—ಯುದ್ಧದಲ್ಲಿ ಶತ್ರುಗಳನ್ನು ಜಯಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆ

ಭಾವಾರ್ಥ

ಕರ್ಮಕ್ಕೆ ಸಹಕಾರಿಗಳಾದ ಎಲೈ ಋತ್ವಿಕ್ಕುಗಳೇ, ಇಷ್ಟಾರ್ಥಗಳನ್ನು ಸುರಿಸುವವನೂ, ಧೂಮದೊಡನೆ ಕೂಡಿರುವವನೂ ಆದ ಅಗ್ನಿಯನ್ನು ಮಥನಕ್ರಿಯೆಯಿಂದ ಉತ್ಪನ್ನವಾಗುವಂತೆ ಮಾಡಿ. ಕ್ಷಯರಹಿತವಾದ ಸಾಮರ್ಥ್ಯವುಳ್ಳ ನೀವು ಮಥನರೂಪವಾದ ಯುದ್ಧಕ್ಕೆ ನಿಯುಕ್ತರಾಗಿ. ಆ ಒಡನೆಯೇ, ಯಾವ ಅಗ್ನಿಯ ಸಹಾಯದಿಂದ ದೇವತೆಗಳು ಹಿಂಸಕರಾದ ಶತ್ರುಗಳನ್ನು ಪ್ರತಿಭಟಿಸಿ ಸೋಲಿಸಿದರೋ ಅಂತಹ ಶ್ರೇಷ್ಠವಾದ ಸಾಮರ್ಥ್ಯದಿಂವ ಕೂಡಿದ ಈ ಅಗ್ನಿಯು ಯುದ್ಧದಲ್ಲಿ ಶತ್ರುಗಳನ್ನು ಜಯಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆ.

## English Translation.

Produce, friends, smoke, the showerer (of benefits); indefatigable persist in the contest with (Agni): the heroic Agni is able to encounter hosts, and by him the gods overcome their foes.

ವಿಶೇಷವಿಷಯಗಳು

ಯಜಮಾನನು ಅಧ್ವರ್ಯುವೇ ಮೊದಲಾದ ಋತ್ವಿಜರನ್ನು ಸಖಾಯಃ ಎಂಬ ಪದದಿಂದ ಸಂಬೋಧಿಸಿದ್ದಾನೆ. ಈ ಋತ್ವಿಜರು ಯಜ್ಞಕರ್ಮದಲ್ಲಿ ಸಹಾಯಕರಾಗಿ ಕಾರ್ಯವನ್ನು ಆಚರಿಸುವುದರಿಂದ ಕರ್ಮಸಹಕಾರಿಣಃ ಎಂದು ಅರ್ಥವನ್ನು ವಿವರಿಸಿದೆ.

**ಧೂಮಂ—ಧುನೋತಿ ಕಂಪಯತಿ (ದಾಹ್ಯಾನ್) ಇತಿ ಧೂಮಃ ಅಗ್ನಿಃ** ಧೂಮ ಎಂಬ ಪದವು ಇಲ್ಲಿ ಸುಡುವ ವಸ್ತುಗಳನ್ನು ಅಗ್ನಿಯು ಅಲುಗಾಡಿಸುವುದರಿಂದ, ಕಂಪನಮಾಡಿಸುವುದರಿಂದ ಧೂಮಪದಬೋಧ್ಯನಾಗಿರುವನೆಂದು ಅಗ್ನಿಪರವಾಗಿ ಪ್ರಯುಕ್ತವಾಗಿದೆ ಎಂದೂ, ಅಗ್ನಿಯು ಯಜಮಾನರ ಇಷ್ಟಗಳನ್ನು ನೆರವೇರಿಸುವುದರಿಂದ **ವೃಷಣಂ-ಕಾಮಾನಾಂ ವರ್ಷಿತಾರಂ** ಎಂದೂ ಅರ್ಥವು ವಿವೃತವಾಗಿದೆ. ಈ ಪ್ರಕಾರವಾದ ಮಹಿಮೆಯುಳ್ಳ ಅಗ್ನಿಯನ್ನು ಋತ್ವಿಜರು ಮಥನಮಾಡುವುದರಿಂದ ಉತ್ಪನ್ನಮಾಡಲಿ ಎಂದು ಯಜಮಾನನ ಆಶಂಸೆಯು ವಿವರಿಸಲ್ಪಟ್ಟಿದೆ.

**ಅಸ್ರೇಧಂತಃ—ಅಕ್ಷೀಣಾಃ ಅನುಪರತಸಾಮರ್ಥ್ಯಾಃ** ಅಗ್ನಿಯು ಮಥನದಿಂದ ಉತ್ಪನ್ನನಾಗದಿರುವಾಗ ಋತ್ವಿಜರು ತಮ್ಮ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು **ವಾಜಂ ಅಚ್ಛ ಇತನ.** ಮಥನರೂಪವಾದ ಯುದ್ಧವನ್ನು ಆಚರಿಸಿ ಅಗ್ನಿಯು ಉತ್ಪನ್ನನಾಗುವಂತೆ, ಮಾಡಿ ಎಂದು ಯಜಮಾನನ ಆದೇಶವು ವರ್ಣಿತವಾಗಿದೆ. ವಾಜ ಎಂಬ ಪದವು ನಿರುಕ್ತಕಾರರಿಂದ ಅನ್ನ, ಬಲ, ಎಂಬ ಅರ್ಥಗಳಲ್ಲಿ ಉಕ್ತವಾಗಿರುವುದರಿಂದ ಬಲವನ್ನು ಅತಿಶಯವಾಗಿ ಆಶ್ರಯಿಸಿಕೊಂಡು ಆಚರಿಸುವ ಕರ್ಮವೆಂದು ಅರ್ಥಮಾಡಿ ಯುದ್ಧವೆಂಬ ಅರ್ಥವನ್ನು ವಿವರಿಸಿದೆ.

**ಪೃತನಾಷಾಟ್—ಪೃತನಾ** ಎಂಬ ಪದವು ಸಂಗ್ರಾಮನಾಮಗಳಲ್ಲಿ (ನಿ. ೩೯) ಉಕ್ತವಾಗಿದೆ. ಅಗ್ನಿಯು ಯುದ್ಧಗಳಲ್ಲಿ ಉಂಟಾಗುವ ನ್ಯೂನಾತಿರೇಕಗಳನ್ನು ಸಹಿಸುವವನಾದುದರಿಂದ ಋತ್ವಿಜರು ಅಗ್ನಿಯ ಉತ್ಪತ್ತಿಗಾಗಿ ಆಚರಿಸುವ ಅತಿಶಯವಾದ ಸಾಮರ್ಥ್ಯದಿಂದ ಕೂಡಿರುವ ಕರ್ಮವನ್ನು ಅಗ್ನಿಯು ಸಹಿಸತಕ್ಕವನು ಎಂದು ಅರ್ಥವನ್ನು ವಿವರಿಸಿದೆ.

**ಯೇನ ದೇವಾಸಃ ದಸ್ಯೂನ್ ಅಸಹಂತ—ದಸ್ಯಂತೀತಿ ದಸ್ಯವಃ** ಎಂದು ಹಿಂಸೆಯನ್ನು ಉಂಟುಮಾಡುವಕಾರಣ ಶತ್ರುಗಳು ದಸ್ಯುಪದದಿಂದ ಉಕ್ತರಾಗಿರುವರೆಂದು ಹೇಳಿ, ದೇವತೆಗಳು ತಮ್ಮ ಶತ್ರುಗಳಾದ ಅಸುರರನ್ನು ನಿಗ್ರಹಿಸುವಂತೆ ಅಗ್ನಿಯು ದೇವತೆಗಳಿಗೆ ಸಾಮರ್ಥ್ಯವನ್ನು ಅನುಗ್ರಹಿಸುವವನಾದುದರಿಂದ ಋತ್ವಿಜರು ಅಗ್ನಿಯನ್ನು ಮಥನಮಾಡುವಾಗ ಬಲವನ್ನುಪಯೋಗಿಸಿ ಮಾಡುವ ಕರ್ಮವನ್ನು ಅಗ್ನಿಯು ಸಹಿಸಬಲ್ಲನೆಂದು ಯಜಮಾನರು ಋತ್ವಿಜರಿಗೆ ಹೇಳಿರುವ ಅಗ್ನಿಮಥನಕರಣರೂಪವಾಪ ಅವಶ್ಯಕರ್ತವ್ಯವು ಉಕ್ತವಾಗಿದೆ ಎಂದು ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಕೃಣೋತ—**ಕೃವಿ ಹಿಂಸಾಕಾರಣಯೋಃ ಧಾತು. **ಇದಿತೋನುಂಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲೋಟ್ ಮಧ್ಯಮಪುರುಷ ಬಹುವಚನಕ್ಕೆ **ತಸ್‌ಥಸ್‌ಥಮಿಪಾಂ—**ಎಂಬುದರಿಂದ ತಾದೇಶ ಬಂದಾಗ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಪುನಃ ಅದಕ್ಕೆ ತಬಾದೇಶ. **ತನಾದಿಕೃಞ್‌ಭ್ಯಉಃ** (ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣ. ತಪ್ ಪಿತ್ತಾದುದರಿಂದ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಉಕಾರಕ್ಕೆ ಗುಣ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಧೂಮಂ—**ಧೂಞ್ ಕಂಪನೇ. ಧಾತು. **ಇಷಿಯುಧೀಂಧಿದಸಿ—** (ಉ. ಸೂ. ೧-೧೪೨) ಎಂಬುದರಿಂದ ಇದಕ್ಕೆ ಮಕ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಊಕಾರಕ್ಕೆ ಗುಣ ಬರುವುದಿಲ್ಲ. ಧುನೋತಿ ಕಂಪಯತಿ ದಾಹ್ಯಾನ್ ಇತಿ ಧೂಮಃ ಅಗ್ನಿಃ (ಸುಡಲ್ಪಡುವವುಗಳನ್ನು ಅಲ್ಲಾಡಿಸುವುದು ಅಂದರೆ ಬೆಂಕಿ) ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಸ್ರೇಧಂತಃ**—**ತತ್ಪುರುಷೇ ತುಲ್ಯಾರ್ಥ**—ಎಂಬುದರಿಂದ ನಞ್‌ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಇತನ**—ಇಣ್ ಗತೌ. ಧಾತು. ಲೋಟ್. ಮಧ್ಯಮಪುರುಷ ಬಹುವಚನಕ್ಕೆ ತಾದೇಶ. **ತಪ್ತನಪ್ತನಥ-ನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಅದಕ್ಕೆ ತನಾದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಅದಕ್ಕೆ ಙಿತ್ವಾತಿದೇಶವಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರು ವುದರಿಂದ ನಿಘಾತಸ್ವರ ಬರುತ್ತದೆ.

**ಪೃತನಾಷಾಟ್**—ಷಹ ಮರ್ಷಣೇ. ಧಾತು. **ಛಂದಸಿಸಹಃ** (ಪಾ. ಸೂ. ೩-೨-೬೩) ಎಂಬುದರಿಂದ ಇದಕ್ಕೆ ಣ್ವಿ ಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆವೃದ್ಧಿ. **ಸಹೇಃ ಸಾಡಃ ಸಃ** (ಪಾ. ಸೂ- ೮-೩-೫೬) ಎಂಬುದರಿಂದ ಪದಾಂತದಲ್ಲಿ ಧಾತುವಿನ ಸಕಾರಕ್ಕೆ ಷತ್ವ. ಸು ಪರವಾದಾಗ ಹಕಾರಕ್ಕೆ ಢತ್ವ ಜಸ್ತ್ವ, ಚರ್ತ್ವ. **ಗತಿಕಾರಕೋಪಪದಾತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುವೀರಃ**—ವೀರವೀರ್ಯೌಚ (ಪಾ. ಸೂ. ೬-೨-೧೨೦) ಎಂಬುದರಿಂದ ಬಹುವ್ರೀಹಿಯಲ್ಲಿ ಉತ್ತರಪದಾದ್ಯು ದಾತ್ತಸ್ವರ ಬರುತ್ತದೆ.

**ಅಸಹಂತ**—ಷಹ ಮರ್ಷಣೇ. ಧಾತು. ಲಙ್. ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ. ಅಂಗಕ್ಕೆ ಅಡಾಗಮ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯು ದಾತ್ತವಾಗುತ್ತದೆ.

**ದಸ್ಯೂನ್**—ದಸು ಉಪಕ್ಷಯೇ. ಧಾತು. **ಯಜಿಮನಿಶುಂಧಿದಸಿಜನಿಭ್ಯೋ ಯುಚ್** (ಉ. ಸೂ. ೩-೩೦೦) ಎಂಬುದರಿಂದ ಇದಕ್ಕೆ ಯುಚ್‌ಪ್ರತ್ಯಯ. ದಸ್ಯಂತೀತಿ ದಸ್ಯವಃ ಶತ್ರವಃ (ಪೀಡೆಯನ್ನುಂಟುಮಾಡುವವರು) ಪ್ರತ್ಯಯ ಚಿತ್ತಾದರೂ ವ್ಯತ್ಯಯದಿಂದ ಆದ್ಯುದಾತ್ತವಾಗುತ್ತದೆ.

ಸಂಹಿತಾಪಾಠಃ

**ಅಯಂ ತೇ ಯೋನಿರ್ಋತ್ವಿಯೋ ಯತೋ ಜಾತೋ ಅರೋಚಥಾಃ ।**
**ತಂ ಜಾನನ್ನಗ್ನ ಆ ಸೀದಾಥಾ ನೋ ವರ್ಧಯಾ ಗಿರಃ ॥ ೧೦ ॥**

ಪದಪಾಠಃ

**ಅಯಂ । ತೇ । ಯೋನಿಃ । ಋತ್ವಿಯಃ । ಯತಃ । ಜಾತಃ । ಅರೋಚಥಾಃ ।**
**ತಂ । ಜಾನನ್ । ಅಗ್ನೇ । ಆ । ಸೀದ । ಅಥ । ನಃ । ವರ್ಧಯ । ಗಿರಃ ॥ ೧೦ ॥**

ಸಾಯಣಭಾಷ್ಯಂ

**ಹೇ ಅಗ್ನೇ ಋತ್ವಿಯೋ ವಸಂತಾದ್ಯೃತೌ ಭವೋಽಯಮಂಗುಲ್ಯಾ ನಿರ್ದಿಶ್ಯಮಾನಃ ಪಾಲಾಶಾ-ಶ್ವತ್ಥಾದಿಮಯಃ ಕಾಷ್ಠವಿಶೇಷೋಽರಣಿಸ್ತೇ ತವ ಯೋನಿರುತ್ಪತ್ತಿಸ್ಥಾನಂ ಯತೋಽರಣೇರ್ಜಾತಸ್ತ್ವಮು-**

**ರೋಚಥಾಃ** | ಅಶೋಭಥಾಃ | ಜಾನಂಸ್ತ್ವಂ ತಮುರಣಿರೂಪಂ ಕಾಷ್ಠವಿಶೇಷಮಾಸೀದ | ತಸ್ಯಾಮುರಣ್ಯಾಮಾರೋಪಿತಃ ಸನ್ ನೈರಂತರ್ಯೇಣ ತಿಷ್ಠ | ಅಥಾನಂತರಂ ನೋಽಸ್ಮಾಕಂ ಗಿರಃ ಸ್ತುತಿಲಕ್ಷಣಾ ವಾಚೋ ವರ್ಧಯ | ಯದ್ವಾ ಗೀಃಶಬ್ದೇನ ತದ್ವಂತೋ ಲಕ್ಷ್ಯಂತೇ | ತಥಾ ಸ್ತೋತೄನಸ್ಮಾನ್ ವರ್ಧಯ | ಪಶುಪುತ್ರಾದಿಭಿಃ ಸಮೃದ್ಧಾನ್ ಕುರು || ಯೋನಿಃ | ಯು ಮಿಶ್ರಣೇ | ವಹಿಶ್ರೀತ್ಯಾದಿನಾ ನಿಪ್ರತ್ಯಯಃ | ನಿದಿತ್ಯುಕ್ತತ್ವಾದಾದ್ಯುದಾತ್ತಃ | ಋತ್ವಿಯಃ | ಛಂದಸಿ ಘಸಿತ್ಯೃತುಶಬ್ದಾತ್ಪ್ರಾಪ್ತಾರ್ಥೇ ಘಸ್‌ಪ್ರತ್ಯಯಃ | ಘಸ್ಯ ಇಯಾದೇಶಃ | ಸಿತೀತಿ ಪದಸಂಜ್ಞಾಯಾಂ ಓರ್ಗುಣಃ | ಪಾ. ೬-೪-೧೪೬ | ಇತಿ ಸಂಜ್ಞಾಧೀನೋ ಗುಣೋ ನ ಭವತಿ| ಪ್ರತ್ಯಯಸ್ವರಃ | ಅರೋಚಥಾಃ| ರುಚ ದೀಪ್ತಾವಿತ್ಯಸ್ಯ ಲಙಿ ರೂಪಂ| ಯದ್ವೃತ್ತಯೋಗಾದನಿಘಾತಃ| ಸೀದ | ಸದೇರ್ಲೋಟಿ ಪಾಘ್ರೇತ್ಯಾದಿನಾ ಸೀದಾದೇಶಃ | ನಿಘಾತಃ | ಅಥಾ | ನಿಪಾತಸ್ಯ ಚೇತಿ ಸಾಂಹಿತಿಕೋ ದೀರ್ಘಃ | ವರ್ಧಯ | ವೃಧು ವರ್ಧನೇ | ಹೇತುಮತಿ ಣಿಚ್ | ನಿಘಾತಃ ||

### ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ಋತ್ವಿಯಃ**—ವಸಂತಾದಿ ಋತುಗಳಲ್ಲಿ ಉತ್ಪನ್ನವಾದುದೂ, (ಮತ್ತು) | **ಯತಃ**—ಯಾವುದರಿಂದ | **ಜಾತಃ**—ಉತ್ಪನ್ನನಾದ ನೀನು | **ಅರೋಚಥಾಃ**—ಪ್ರಕಾಶಿಸಿದೆಯೋ ಅಂತಹುದೂ ಆದ | **ಅಯಂ**—ಇಲ್ಲಿ ನಿರ್ದಿಷ್ಟವಾಗಿರತಕ್ಕ ಅರಣಿಯು | **ತೇ**—ನಿನಗೆ | **ಯೋನಿಃ**—ಉತ್ಪತ್ತಿಸ್ಥಾನವಾಗಿದೆ | **ಜಾನನ್**—ಇದನ್ನು ಅರಿತ ನೀನು | **ತಂ**—ಈ ಅರಣಿಯನ್ನು ಆಶ್ರಯಿಸಿ | **ಆಸೀದ**—ಕುಳಿತುಕೊ | **ಅಥ**—ಅನಂತರ | **ನಃ**—ನಮ್ಮ | **ಗಿರಃ**—ಸ್ತುತಿರೂಪವಾದ ವಾಕ್ಕನ್ನು | **ವರ್ಧಯ**—ವೃದ್ಧಿಯಾಗುವಂತೆ ಮಾಡು (ಸ್ತುತಿಕರ್ತರನ್ನೂ ವೃದ್ಧಿಯಾಗುವಂತೆ ಮಾಡು) ||

### ಭಾವಾರ್ಥ

ಎಲೈ ಅಗ್ನಿಯೇ, ವಸಂತಾದಿ ಋತುಗಳಲ್ಲಿ ಉತ್ಪನ್ನವಾದುದೂ, ಮತ್ತು ಯಾವುದರಿಂದ ನೀನು ಉತ್ಪನ್ನನಾಗಿ ಪ್ರಕಾಶಿಸುತ್ತಿದ್ದೀಯೋ ಅಂತಹುದೂ ಆದ ಇಲ್ಲಿ ನಿರ್ದಿಷ್ಟವಾಗಿರತಕ್ಕ ಅರಣಿಯು ನಿನಗೆ ಉತ್ಪತ್ತಿಸ್ಥಾನವಾಗಿದೆ. ಇದನ್ನು ನೀನು ಅರಿತು ಇದರಲ್ಲಿ ಸ್ಥಾಪಿತನಾಗು. ಅನಂತರ ನಮ್ಮ ಸ್ತುತಿರೂಪವಾದ ವಾಕ್ಕನ್ನೂ, ಹಾಗೆಯೇ ಸ್ತುತಿಕರ್ತರಾದ ನಮ್ಮನ್ನೂ ವೃದ್ಧಿಯಾಗುವಂತೆ ಮಾತು.

### English Translation

This in every season, Agni, is your place, whence, as soon as generated, you have ever shone : knowing that to be so, Agni, there abide, and thrive by our praises.

### ವಿಶೇಷವಿಷಯಗಳು

**ಋತ್ವಿಯಃ—ವಸಂತಾದ್ಯೃತೌ ಭವಃ** ಅಗ್ನಿಯನ್ನು ಸಂಭೋಧಿಸಿ, ಅಗ್ನಿಯು ವಸಂತ, ಗ್ರೀಷ್ಮ ಎಂಬಿವೇ ಮೊದಲಾದ ಋತುಗಳಲ್ಲಿ ಉತ್ಪನ್ನನಾಗುವನೆಂದೂ, ಈ ಅಗ್ನಿಗೆ, ಪಲಾಶ, (ಮುತ್ತುಗದಮರ) ಅಶ್ವತ್ಥವೃಕ್ಷ ಇವುಗಳ ಸಂಬಂಧಿಯಾದ ಅರಣಿಯು ಉತ್ಪತ್ತಿಸ್ಥಾನವೆಂದೂ ವರ್ಣಿಸಿವೆ. ಅಗ್ನಿಯು ಈ ಅರಣಿಗಳಿಂದ ಉತ್ಪನ್ನನಾಗಿ ಪ್ರಕಾಶಿಸುತ್ತಿರುವಕಾರಣ, **ತಸ್ಯಾಮುರಣ್ಯಾಮಾರೋಪಿತಃ ನೈರಂತರ್ಯೇಣ ತಿಷ್ಠ** ಅರಣಿಗಳಲ್ಲಿ ಸರ್ವಕಾಲದಲ್ಲಿಯೂ ಅಗ್ನಿಯು ಗೂಢನಾಗಿರಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.

**ಯೋನಿಃ**—ಉತ್ಪತ್ತಿಸ್ಥಾನಃ—ಯೋನಿಶಬ್ದವು **ಯೋನಿರಂತರಿಕ್ಷಂ ಮಹಾನವಯವಃ ಪರಿವೀತೋ ವಾಯುನಾ ಅಯಮಪೀತರೋ ಯೋನಿರೇತಸ್ಮಾದೇವ ಪರಿಯುತೋ ಭವತಿ** (ನಿ. ೨-೮) ಎಂದು ವ್ಯಾಖ್ಯಾತವಾಗಿದೆ. ದುರ್ಗಾಚಾರ್ಯರು **ಭೂತಾನಾಂ ಜಾಯಮಾನಾನಾಂ ಆಕಾಶಸ್ಯೈವ ಪ್ರದೇಶವಿಶೇಷಃ ಕಶ್ಚಿತ್ ವಾಯುಸಂಯುತಃ ಉದಕಯೋನಿಭಾವಂ ಪುಷ್ಣಾತಿ** ಉತ್ಪನ್ನವಾಗುವ ಪ್ರಾಣಿಗಳಿಗೆ ಉಪಕಾರಕವಾಗಿರುವ ಆಕಾಶದ ಪ್ರದೇಶವು ವಾಯುವಿನಿಂದ ಕೂಡಿರುವುದಾಗಿ ಉದಕದ ಅಭಿವ್ಯಕ್ತಿಗೆ ಕಾರಣವಾಗಿರುವುದರಿಂದ ಅಂತರಿಕ್ಷವು ಯೋನಿಶಬ್ದದಿಂದ ವ್ಯಪದಿಷ್ಟವಾಗಿರುವುದೆಂದೂ, ಮಾಂಸದಿಂದಲೂ ಸ್ನಾಯುವಿನಿಂದಲೂ ಕೂಡಿರುವ ಸ್ತ್ರೀಯೋನಿಯೂ ಗರ್ಭದ ಉತ್ಪತ್ತಿಗೆ ಕಾರಣವಾಗಿರುವುದರಿಂದ ಯೋನಿಶಬ್ದದಿಂದಲೇ ನಿರ್ದಿಷ್ಟವಾಗುವುದೆಂದೂ ಅರ್ಥವನ್ನು ವಿವರಿಸಿದ್ದಾರೆ. ಮತ್ತು ಮಿಶ್ರೀಭವನರೂಪವಾದ ಕ್ರಿಯೆಯನ್ನು ಬೋಧಿಸುವ ಯುಧಾತುವಿನಿಂದ ನಿಷ್ಪನ್ನವಾದ ಯೋನಿ ಶಬ್ದಕ್ಕೆ ಸ್ಥಾನವೆಂದು ಅರ್ಥವನ್ನು ಮಿಶ್ರೀಭಾವಸಾಮಾನ್ಯಧರ್ಮಪುರಸ್ಕಾರದಿಂದ ವಿವರಿಸಿದ್ದಾರೆ. **ಅಭಿಯುತ ಏನಾಂ ಗರ್ಭಃ ಆಮಿಶ್ರೀಭೂತಃ** ಎಂದು ವ್ಯಾಖ್ಯಾನಮಾಡಿದ್ದಾರೆ. ಗೃಹನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಯೋನಿ ಎಂದರೆ ಗೃಹವೆಂದೂ, ಅರ್ಥವು ವರ್ಣಿತವಾಗಿದೆ.

ನಃ ಗಿರಃ **ವರ್ಧಯ**—ಸ್ತುತಿಲಕ್ಷಣಾಃ ವಾಚಃ । **ಯದ್ವಾ ಗೀಶ್ಶಬ್ದೇನ ತದ್ವಂತೋ ಲಕ್ಷ್ಯಂತೇ । ಸ್ತೋತೄನಸ್ಮಾನ್ ವರ್ಧಯ** ಯಾಸ್ಕರು ಗೀಶ್ಶಬ್ದವನ್ನು ವಾಙ್ನಾಮಗಳಲ್ಲಿ (ನಿ. ೨-೨೩) ಪಾಠಮಾಡಿದ್ದಾರೆ. ಮತ್ತು,

**ಮಾತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ ।**

(ಋ. ಸಂ. ೮-೧-೨೦)

ಎಂಬಲ್ಲಿ ಗಿರಾ **ಗೀತ್ಯಾ ಸ್ತುತ್ಯಾ** ಎಂದು ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಸ್ತುತಿರೂಪವಾದ ವಾಕ್ಕೆಂದು ಒಂದು ವಿಧವಾದ ಅರ್ಥವನ್ನು ವಿವರಿಸಿ ಅಗ್ನಿಯು ಯಜಮಾನರ ಸ್ತುತಿಗಳನ್ನು ವೃದ್ಧಿಹೊಂದಿಸಲಿ ಎಂದೂ, ಸ್ತುತಿರೂಪವಾದ ವಾಕ್ಕುಗಳುಳ್ಳವರು ಎಂದು ಎರಡನೆಯ ಅರ್ಥದಲ್ಲಿ ಸ್ತುತಿರೂಪವಾದ ವಾಕ್ಕುಗಳುಳ್ಳ ಯಜಮಾನರನ್ನು ಅಗ್ನಿಯು ವೃದ್ಧಿಗೊಳಿಸಲಿ ಎಂದೂ ಎರಡು ವಿಧವಾದ ಅರ್ಥವನ್ನು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಯೋನಿಃ**—ಯು ಮಿಶ್ರಣೇ. ಧಾತು. **ವಹಿಶ್ರಿಶ್ರು**—(ಉ. ಸೂ. ೪-೪೯೧) ಎಂಬುದರಿಂದ ನಿ ಪ್ರತ್ಯಯ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. **ನಿತ್** ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಋತ್ವಿಯಃ**—ಋತು ಶಬ್ದ. **ಛಂದಸಿಘಸ್** (ಪಾ. ಸೂ. ೫-೧-೧೦೬) ಎಂಬುದರಿಂದ ಇದಕ್ಕೆ ಪ್ರಾಪ್ತ ಎಂಬರ್ಥದಲ್ಲಿ ಘಸ್ ಪ್ರತ್ಯಯ. **ಆಯನೇಯೀನೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಸಿತಿಚ** (ಪಾ. ಸೂ. ೧-೪-೧೬) ಎಂಬುದರಿಂದ ಪದಸಂಜ್ಞಾ ಬರುವುದರಿಂದ ಪ್ರತ್ಯಯನಿಮಿತ್ತವಾಗಿ **ಓರ್ಗುಣಃ** (ಪಾ. ಸೂ. ೬-೪-೧೪೬) ಎಂಬುದರಿಂದ ಪೂರ್ವದ ಉಕಾರಕ್ಕೆ ಗುಣ ಬರುವುದಿಲ್ಲ. ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅರೋಚಥಾಃ**—ರುಚ ದೀಪ್ತೌ. ಧಾತು. ಲಙ್ ಮಧ್ಯಮಪುರುಷ ಏಕವಚನಾಂತರೂಪ. **ಯದ್ವೃತ್ತಾನ್ನಿತ್ಯಂ**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಅಡಾಗಮ ಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಜಾನನ್**—ಜ್ಞಾ ಅವಬೋಧನೇ. ಧಾತು. ಲಟಿಗೆ ಶತ್ರಾದೇಶ. ಶ್ನಾ ವಿಕರಣ. **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಬುದರಿಂದ ಧಾತುವಿಗೆ ಜಾದೇಶ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸೀದ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಸೀದಾದೇಶ. **ಅತೋಹೇಃ** ಎಂಬುದರಿಂದ ಹಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ಅಥಾ—ನಿಪಾತಸ್ಯಚ** (೩-೧-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವರ್ಧಯ**—ವೃಧು ವರ್ಧನೇ. ಧಾತು. ಪ್ರೇರಣಾತೋರುವುದರಿಂದ **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಣಿಜಂತದ ಮೇಲೆ ಲೋಟ್. ಮಧ್ಯಮಪುರುಷ ಏಕವಚನದಲ್ಲಿ ವರ್ಧಯ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಸಂಹಿತಾಪಾಠಃ

**ತನೂನಪಾದುಚ್ಯತೇ ಗರ್ಭ ಆಸುರೋ ನರಾಶಂಸೋ ಭವತಿ ಯದ್ವಿಜಾಯತೇ ।**
**ಮಾತರಿಶ್ವಾ ಯದಮಿಮೀತ ಮಾತರಿ ವಾತಸ್ಯ ಸರ್ಗೋ ಅಭವತ್ಸರೀಮಣಿ ॥ ೧೧॥**

ಪದಪಾಠಃ

**ತನೂಽನಪಾತ್ । ಉಚ್ಯತೇ । ಗರ್ಭಃ । ಆಸುರಃ । ನರಾಶಂಸಃ । ಭವತಿ । ಯತ್ । ವಿಽಜಾಯತೇ ।**
**ಮಾತರಿಶ್ವಾ । ಯತ್ । ಅಮಿಮೀತ । ಮಾತರಿ । ವಾತಸ್ಯ । ಸರ್ಗಃ । ಅಭವತ್ । ಸರೀಮಣಿ ॥ ೧೧ ॥**

ಸಾಯಣಭಾಷ್ಯಂ

**ಯೋಽಗ್ನಿರ್ಯದಾ ಗರ್ಭೋಽರಣೀಷು ಗರ್ಭರೂಪತಯಾ ವರ್ತತೇ ತದಾ ಸೋಽಗ್ನಿಸ್ತನೂನಪಾದುಚ್ಯತೇ । ಯಸ್ತ್ವಪಾಂ ತನೂಃ ಶರೀರಾಣಿ ನ ಪಾತಯತಿ ನ ದಹತೀತಿ ವ್ಯುತ್ಪತ್ತೇಃ । ಯದ್ವಾ ತನೂಶಬ್ದೇನಾಪೋಽಭಿಧೀಯಂತೇ ನಪಾಚ್ಛಬ್ದೇನೈಕಾಂತರಿತಾಃ ಪ್ರಜಾಃ । ತಥಾ ಚಾಪಾಂ ನಪ್ತಾ । ಕಥಮೋತತ್ । ಆಪಸ್ತತಾ ಅಂತರಿಕ್ಷೇ । ತಾಭ್ಯ ಓಷಧಿವನಸ್ಪತಯೋ ಜಾಯಂತೇ । ತೇಭ್ಯೋ ಹ್ಯೇಷ ಇತಿ । ಯದ್ಯದಾ ವಿಜಾಯತೇ ವಿಶೇಷೇಣ ಪ್ರತ್ಯಕ್ಷತಯಾ ಜಾಯತೇ ತದಾಸುರಃ ಕರ್ಮವಿಘ್ನಕಾರಿಣಾಮಸುರಾಣಾಂ ಹಂತಾತ ಏವ ನರಾಶಂಸಃ ನರೈಃ ಕರ್ಮಣಾಂ ನೇತೃಭಿರಧ್ವರ್ಯ್ವಾದಿಭಿಃ ಶಂಸನೀಯೋ ಭವತಿ ಯದ್ಯದಾ ಮಾತರ್ಯಂತರಿಕ್ಷೇ ಸ್ವಂ ತೇಜೋಽಮಿಮೀತ ನಿರ್ಮಿಮೀತೇ ತದಾ ಮಾತರಿಶ್ವಾ ಭವತಿ । ಮಾತರ್ಯಂತರಿಕ್ಷೇ ಶ್ವಸಿತಿ ಚೇಷ್ಟತ ಇತಿ ವ್ಯುತ್ಪತ್ತೇಃ । ಏವಂವಿಧಸ್ಯಾಗ್ನೇಃ ಸರೀಮಣಿ ಸರಣೇ ಶೀಘ್ರ—**

ಗಮನೇ ವಾತಸ್ಯ ವಾಯೋಃ ಸರ್ಗಃ ಸೃಷ್ಟಿರಭವತ್ । ಭವತಿ । ಯದಾಗ್ನಿರರಣೀಷು ಗರ್ಭರೂಪತಯಾ ವರ್ತತೇ ತದಾ ತನೂನಪಾನ್ನಾಮಕೋ ಭವತಿ । ಯದಾ ಜಾಯತೇ ತದಾ ನರಾಶಂಸನಾಮಕೋ ಭವತಿ । ಯದಾಂತರಿಕ್ಷೇ ವಿದ್ಯೋತತೇ ತದಾ ಮಾತರಿಶ್ವನಾಮಕೋ ಭವತೀತಿ ॥ ತನೂಪಾತ್ । ತನು ವಿಸ್ತಾರೇ । ಕೃಷಿಚಮಿತನಿಧನಿಸರ್ಜಿಖರ್ಜಿಭ್ಯ ಊರಿತ್ಯೂಪ್ರತ್ಯಯಃ । ವ್ಯತ್ಯಯೇನಾದ್ಯುದಾತ್ತಃ । ನಪಾತ್ । ಪಾ ರಕ್ಷಣೇ ಪತ್ಲೃ ಗತೌ ವಾ ಣ್ಯಂತಃ । ಕ್ವಿಪ್ । ನಪಾತಿ ನ ಪಾತಯತೀತಿ ವಾ ನಪಾತ್ । ನಭ್ರಾಣ್ನಪಾನ್ನವೇದಾ ಇತ್ಯಾದಿನಾ ನಿಪಾತನಾನ್ನಞಃ ಪ್ರಕೃತಿಭಾವಃ। ನಞ್ಸ್ವರಃ। ತನೂರ್ನ ಪಾತೀತಿ ತನೂನಪಾತ್। ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತ ಉಭೇ ವನಸ್ಪತ್ಯಾದಿಷು ಯುಗಪದಿತ್ಯುಭಯಪದಪ್ರಕೃತಿಸ್ವರತ್ವಂ। ಆಸುರಃ । ಅಸುರಸ್ಯಾಯಮಾಸುರಃ । ಅಹಿತಕಾರಿತ್ವೇನ ಸಂಬಂಧೀ । ತಸ್ಯೇದಮಿತ್ಯಣ್ । ಪ್ರತ್ಯಯಸ್ವರಃ । ನರಾಶಂಸಃ । ಣ್ವಾ ನಯೇ । ಋದೋರಬಿತ್ಯಪ್ । ಪ್ರತ್ಯಯಸ್ಯ ಪಿತ್ತ್ವಾನ್ನರಶಬ್ದ ಆದ್ಯುದಾತ್ತಃ। ಶಸ್ತು ಸ್ತುತಾವಿತ್ಯಸ್ಮಾದ್ಘಞಂತ ಆದ್ಯುದಾತ್ತಃ ।ನರಶಬ್ದಸ್ಯಾನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ । ವನಸ್ಪತ್ಯಾದಿತ್ವಾದುಭಯೋಃ ಪ್ರಕೃತಿಸ್ವರತ್ವಂ । ವಿಜಾಯತೇ । ಜನೀ ಪ್ರಾದುರ್ಭಾವೇ । ದಿವಾದಿತ್ವಾತ್ ಶ್ಯನ್ । ಧಾತುಸ್ವರಃ । ಅಮಿಮೀತ । ಮಾಙ್ ಮಾನೇ ಶಬ್ದೇ ಚ । ಜುಹೋತ್ಯಾದಿಃ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ। ಯದ್ಯೋಗಾದನಿಘಾತಃ । ಸರೀಮಣಿ । ಸೃ ಗತೌ । ಹೃಭೃಸೃಸ್ತೃಸೂಭ್ಯಃ । ಉ. ೪-೧೪೭ । ಇತೀಮನಿನ್ಪ್ರತ್ಯಯಃ । ನಿತ್ಸ್ವರಃ ॥

ಪ್ರತಿಪದಾರ್ಥ

**ಗರ್ಭಃ**—ಅರಣಿಗಳಲ್ಲಿ ಗರ್ಭರೂಪದಲ್ಲಿರತಕ್ಕ ಅಗ್ನಿಯು । **ತನೂನಪಾತ್**—"ತನೂನಪಾತ್" ಎಂಬ ಹೆಸರಿನಿಂದ । **ಉಚ್ಯತೇ**—ಕರೆಯಲ್ಪಡುತ್ತಾನೆ । **ಯತ್**—ಯಾವಾಗ । **ವಿಜಾಯತೇ**—ಅರಣಿಗಳಿಂದ ಉತ್ಪನ್ನನಾದ ಅಗ್ನಿಯು ಪ್ರತ್ಯಕ್ಷವಾಗಿ ಗೋಚರನಾಗುತ್ತಾನೆಯೋ ಆಗ । **ಆಸುರಃ**-ಅಸುರರ ನಾಶಕನಾದ । **ನರಾಶಂಸಃ**-"ನರಾಶಂಸ" ಎಂಬ ಹೆಸರಿನಿಂದ ಪ್ರಸಿದ್ಧನಾಗಿ । **ಭವತಿ**—ಆಗುತ್ತಾನೆ । **ಯತ್**—ಯಾವಾಗ । **ಮಾತರಿ**—ಅಂತರಿಕ್ಷದಲ್ಲಿ । **ಅಮಿಮೀತ**—(ತನ್ನ ತೇಜಸ್ಸನ್ನು) ಸೃಷ್ಟಿಸುತ್ತಾನೆಯೋ ಆಗ । **ಮಾತರಿಶ್ವಾ**—"ಮಾತರಿಶ್ವಾ" ಎಂಬ ಹೆಸರಿನಿಂದ ಕರೆಯಲ್ಪಡುತ್ತಾನೆ । **ಸರೀಮಣಿ**—ಈ ಅಗ್ನಿಯ ಸಂಚಾರಕಾಲದಲ್ಲಿ । **ವಾತಸ್ಯ**—ವಾಯುವಿನ । **ಸರ್ಗಃ**—ಉತ್ಪತ್ತಿಯು । **ಅಭವತ್**—ಆಯಿತು ॥

ಭಾವಾರ್ಥ

ಅಗ್ನಿಯು ಅರಣಿಗಳಲ್ಲಿ ಗರ್ಭರೂಪದಲ್ಲಿರುವಾಗ "ತನೂನಪಾತ್" ಎಂಬ ಹೆಸರಿನಿಂದಲೂ, ಅರಣಿಗಳಿಂದ ಉತ್ಪನ್ನನಾಗಿ ಪ್ರತ್ಯಕ್ಷವಾಗಿ ಗೋಚರನಾದಾಗ ಅಸುರರ ನಾಶಕನಾದ "ನರಾಶಂಸ" ಎಂಬ ಹೆಸರಿನಿಂದಲೂ ಮತ್ತು ಅಂತರಿಕ್ಷದಲ್ಲಿ ತನ್ನ ದಿವ್ಯ ತೇಜಸ್ಸನ್ನು ಸೃಷ್ಟಿಸಿದಾಗ "ಮಾತರಿಶ್ವಾ" ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದಾನೆ. ಈ ಅಗ್ನಿಯ ವೇಗವಾದ ಸಂಚಾರಕಾಲದಲ್ಲಿ ವಾಯುವಿನ ಉತ್ಪತ್ತಿಯುಂಟಾಯಿತು.

## English Translation

When ( existing ) as an embryo ( in the wood ), Agni is called Tanunapat ; when he is generated ( he is called ) the Asura-destroying Narashansa ;

when he has displayed ( his energy ) in the material firmament, Matarishwan ; and the creation of the wind is in his rapid motion.

ವಿಶೇಷವಿಷಯಗಳು

**ಗರ್ಭಃ ತನೂಪಾತ್**— **ಅರಣೀಷು ಗರ್ಭರೂಪತಯಾ ಅಗ್ನಿಃ ವರ್ತಮಾನಃ ತನೂನಪಾದಿತ್ಯುಚ್ಯತೇ। ಯದ್ವಾ ತನೂಶಬ್ದೇನಾಪೋ ಅಭಿಧೀಯಂತೇ। ನಪಾತಃಶಬ್ದೇನೈಕಾಂತರಿತಾಃ ಪ್ರಜಾಃ । ತಥಾ ಚ ಅಪಾಂ ನಪ್ತಾ । ಆಪಸ್ತತಾ ಅಂತರಿಕ್ಷೇ । ತಾಭ್ಯ ಓಷಧಿವನಸ್ಪತಯೋ ಜಾಯಂತೇ ತೇಭ್ಯೋ ಹ್ಯೇಷಃ ।** ಅಗ್ನಿಯು ಅರಣಿಗಳಲ್ಲಿ (ಮಥಿತನಾಗುವುದಕ್ಕಿಂತ ಪೂರ್ವದಲ್ಲಿ) ಅಭಿವ್ಯಕ್ತನಾಗದಿರುವಾಗ ಗರ್ಭರೂಪದಿಂದ ಇರುವವನಾಗಿ, ತನೂನಪಾತ್ ಎಂದು ವ್ಯಪದಿಷ್ಟನಾಗಿರುವನು ಎಂದು ಒಂದು ವಿಧವಾದ ಅರ್ಥವು ಉಕ್ತವಾಗಿದೆ. ಎರಡನೆಯ ಅರ್ಥದಲ್ಲಿ ತನೂ ಎಂಬ ಶಬ್ದಕ್ಕೆ ಉದಕಗಳೆಂದು ಅರ್ಥವನ್ನು ವಿವರಿಸಿದೆ. ನಪಾತ್ ಶಬ್ದದಿಂದ ಮೊಮ್ಮಕ್ಕಳು ಎಂಬ ಅರ್ಥವು ಉಕ್ತವಾಗಿದೆ. ಇದರಿಂದ ಅಗ್ನಿಯು ಉದಕಗಳಿಗೆ ಮೊಮ್ಮಗನಾಗಿರುವನೆಂದು ವರ್ಣಿಸಿದೆ. ಉದಕಗಳು ಅಂತರಿಕ್ಷದಲ್ಲಿ ಇರುತ್ತವೆ. ಅವುಗಳಿಂದ ಮೂಲಿಕೆಗಳೂ, ವನಸ್ಪತಿಗಳೂ ಉತ್ಪನ್ನವಾಗುತ್ತವೆ. ಈ ಮೂಲಿಕೆಗಳು ಅಥವಾ ವನಸ್ಪತಿಗಳಿಂದ ಅಗ್ನಿಯು ಉತ್ಪನ್ನನಾಗುವನೆಂದು ಅಗ್ನಿಯ ಅಪಾಂ ನಪ್ತೃತ್ವವು ಉಪಪಾದಿತವಾಗಿದೆ ಎಂದು ಸಾಯಣರು ವಿವರಿಸಿ, ಅಗ್ನಿಗೆ ತನೂನಪಾತ್ ಎಂಬ ಹೆಸರಿನಿಂದ ವ್ಯಪದೇಶವನ್ನು ವರ್ಣಿಸಿದ್ದಾರೆ.

**ತನೂನಪಾದಾಜ್ಯಮಿತಿ ಕಾತ್ಥಕ್ಯಃ** (ನಿ. ೮-೫) **ತನೂನಪಾತ್** ಶಬ್ದದಿಂದ ಆಜ್ಯವು (ತುಪ್ಪವು) ಉಕ್ತವಾಗಿದೆ ಎಂದು ಕಾತ್ಥಕ್ಯರೆಂಬರ ಮತವನ್ನು ಉಪನ್ಯಾಸಮಾಡಿ, **ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ। ಗೌರತ್ರ ತನೂರುಚ್ಯತೇ। ತಸ್ಯಾಃ ಪಯೋ ಜಾಯತೇ, ಪಯಸಃ ಆಜ್ಯಂ ಜಾಯತೇ** । ನಪಾತ್ ಶಬ್ದದಿಂದ ವ್ಯವಹಿತವಾದ ಪ್ರಜೆಯು ಉಕ್ತವಾಗುವುದು, ತನೂ ಶಬ್ದದಿಂದ ಗೋವು ಎಂಬ ಅರ್ಥವು ನಿರ್ದಿಷ್ಟವಾಗಿರುವುದು. ಈ ಗೋವಿನಿಂದ ಹಾಲೂ, ಹಾಲಿನಿಂದ ಆಜ್ಯವೂ ಉತ್ಪನ್ನವಾಗುವುದರಿಂದ ತನೂನಪಾತ್ ಎಂದರೆ ಆಜ್ಯವು ಎಂದು ಅವರು ಹೇಳಿರುವ ವಿವರಣೆಯನ್ನು ಪ್ರದರ್ಶಿಸಿದ್ದಾರೆ. ಮತ್ತು—

**ಅಗ್ನಿರಿತಿ ಶಾಕಪೂಣಿಃ—ಆಪೋऽತ್ರ ತನ್ವ ಉಚ್ಯಂತೇ। ತತಾ ಅಂತರಿಕ್ಷೇ,ತಾಭ್ಯ ಓಷಧಿವನಸ್ಪತಯೋ ಜಾಯಂತೇ ಓಷಧಿವನಸ್ಪತಿಭ್ಯ ಏಷ ಜಾಯತೇ** । ಶಾಕಪೂಣಿ ಎಂಬ ಆಚಾರ್ಯರು ತನೂ ಶಬ್ದಕ್ಕೆ ಉದಕಗಳೆಂದು ಅರ್ಥವನ್ನು ಹೇಳಿ, ಅಂತರಿಕ್ಷದಲ್ಲಿ ಇರುವ ಉದಕಗಳು ವೃಷ್ಟಿಭಾವವನ್ನು ಹೊಂದಿದನಂತರ ಅವುಗಳಿಂದ ಓಷಧಿ ವನಸ್ಪತಿಗಳ ಉತ್ಪತ್ತಿಯೂ, ಓಷಧಿ ವನಸ್ಪತಿಗಳಿಂದ ಅಗ್ನಿಯ ಉತ್ಪತ್ತಿಯೂ ಆಗುವುದೆಂದು ಹೇಳಿದ್ದಾರೆ. ಸಾಯಣರು ಶಾಕಪೂಣಿಆಚಾರ್ಯರ ಮತವನ್ನು ಅಂಗೀಕರಿಸಿ ಇಲ್ಲಿ ವ್ಯಾಖ್ಯಾನವನ್ನು ಮಾಡಿದ್ದಾರೆ.

**ಯತ್ ವಿಜಾಯತೇ ಆಸುರಃ ನರಾಶಂಸಃ ಭವತಿ**—ಅಗ್ನಿಯು ಅರಣಿಗಳಲ್ಲಿ ಮಥನದಿಂದ ಅಭಿವ್ಯಕ್ತರೂಪವನ್ನು ಹೊಂದಿ ಉತ್ಪನ್ನನಾದನಂತರ ಅವನು **ಕರ್ಮವಿಘ್ನಕಾರಿಣಾಂ ಅಸುರಾಣಾಂ ಹಂತಾ**, ಯಜ್ಞಕರ್ಮಗಳಿಗೆ ವಿಘ್ನವನ್ನು ಉಂಟುಮಾಡುವ ಅಸುರರನ್ನು ನಾಶಮಾಡುವವನಾಗುವನೆಂದೂ, **ಕರ್ಮಣಾಂ ನೇತೃಭಿಃ ಅಧ್ವರ್ಯ್ವಾದಿಭಿಃ ಶಂಸನೀಯಃ** ಯಜ್ಞಕರ್ಮಗಳನ್ನು ಆಚರಿಸುವ ಅಧ್ವರ್ಯವೇ ಮೊದಲಾದ ಋತ್ವಿಜರಿಂದ ಸ್ತುತ್ಯನಾಗಿ ಇರುವಕಾರಣ ನರಾಶಂಸನೆಂಬ ಹೆಸರಿನಿಂದ ನಿರ್ದಿಷ್ಟನಾಗುವನೆಂದೂ ವರ್ಣಿಸಿದೆ.

ಯಾಸ್ಕರು—**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ ನರಾ ಆಸೀನಾಃ ಶಂಸಂತಿ । ಅಗ್ನಿರಿತಿ ಶಾಕಪೂಣಿಃ ನರೈಃ ಪ್ರಶಸ್ಯೋ ಭವತಿ ।** (ನಿ. ೮-೬) ಕಾತ್ಥಕ್ಯರೆಂಬವರು-ಯಾಗಶಾಲೆಯಲ್ಲಿ ಉಪವಿಷ್ಟರಾದವರು ಸ್ತುತಿ

ಮಾಡುವಕಾರಣ ಸ್ತುತಿಗೆ ಯಜ್ಞವು ವಿಷಯವಾಗಿ ನರಾಶಂಸ ಪದದಿಂದ ಉಕ್ತವಾಗಿದೆ ಎಂದು ಹೇಳುವರು, ಎಂದು ಒಂದು ಮತವನ್ನು ಪ್ರದರ್ಶಿಸಿ, ಯಾಗಶಾಲೆಯಲ್ಲಿ ಯಜ್ಞಕರ್ಮಗಳನ್ನು ಆಚರಿಸುವವರ ಸ್ತುತಿಗೆ ಪಾತ್ರನಾದ ಅಗ್ನಿಯು ನರಾಶಂಸ ಪದದಿಂದ ನಿರ್ದಿಷ್ಟನಾಗಿದ್ದಾನೆಂದು ಶಾಕಪೂಣಿ ಆಚಾರ್ಯರ ಮತವನ್ನು ವಿವರಿಸಿ, "ನರಾಶಂಸಸ್ಯ ಮಹಿ-ಮಾನಮೇಷಾಂ" ಎಂಬ ಋಕ್ಕನ್ನು ನರಾಶಂಸನೆಂಬ ಅಗ್ನಿಯ ಪ್ರಭಾವಪ್ರದರ್ಶಕವಾಗಿ ಉದಾಹರಿಸಿದ್ದಾರೆ.

**ಮಾತರಿ ಯತ್ ಅಮಿಮೀತ ಮಾತರಿಶ್ವಾ—ಯದಾ ಅಂತರಿಕ್ಷೇ ಸ್ವಂ ತೇಜಃ ನಿರ್ಮಿಮೀತೇ ತದಾ ಮಾತರಿಶ್ವಾ ಭವತಿ । ಮಾತರಿ ಅಂತರಿಕ್ಷೇ ಶ್ವಸಿತಿ ಚೇಷ್ಟತೇ ಇತಿ ।** ಅಗ್ನಿಯು ಮಾತೃವಿನಂತೆ ಸರ್ವಪ್ರಾಣಿಗಳಿಗೂ ಆಸ್ಪದವಾಗಿರುವ ಅಂತರಿಕ್ಷದಲ್ಲಿ ತನ್ನ ಕಾಂತಿಯನ್ನು ಬೆಳಗುತ್ತಿರುವಾಗ, ಅಂತರಿಕ್ಷದಲ್ಲಿಯೇ ಸೂಕ್ಷ್ಮರೂಪದಿಂದ ವ್ಯಾಪಿಸಿರುವ ಅಗ್ನಿಯನ್ನು ಮಾತರಿಶ್ವನೆಂಬ ಶಬ್ದದಿಂದ ವ್ಯವಹರಿಸುವರು ಎಂದು ವರ್ಣಿಸಿದೆ.

ಯಾಸ್ಕರು—**ಮಾತರಿ ಅಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತಿ ಇತಿ ವಾ** (ನಿ. ೭–೨೬) ಎಂದು ಮಾತರಿಶ್ವ ಶಬ್ದದ ಅರ್ಥವನ್ನು ವಿವರಿಸಿ, ಮಾತರಿಶ್ವಪದದಿಂದ ವಾಯುವು ಬೋಧ್ಯನಾಗಿರುವನೆಂದು ವಿವರಿಸಿದ್ದಾರೆ.

**ಸರೀಮಣಿ ವಾತಸ್ಯ ಸರ್ಗಃ ಅಭವತ್**—ಅಗ್ನಿಯು ತನ್ನ ಶೀಘ್ರಗಮನಭಾವವನ್ನು ವ್ಯಕ್ತಗೊಳಿಸುವಾಗ ವಾಯುವಿನ ಸೃಷ್ಟಿಯು ಉಂಟಾಗಿದೆ ಎಂದು ವಿವರಿಸಿದ್ದಾರೆ.

**ಯದಾ ಅಗ್ನಿರರಣೀಷು ಗರ್ಭರೂಪತಯಾ ವಿದ್ಯತೇ ತದಾ ತನೂನಪಾತ್ ನಾಮಕೋ ಭವತಿ । ಯದಾ ಜಾಯತೇ ತದಾ ನರಾಶಂಸಃ । ಯದಾ ಅಂತರಿಕ್ಷೇ ವಿದ್ಯೋತತೇ ತದಾ ಮಾತರಿಶ್ವಾ ಭವತಿ ।** ಅಗ್ನಿಯು ಅರಣಿಗಳಲ್ಲಿ ಗೂಢನಾಗಿ ಅನಭಿವ್ಯಕ್ತನಾಗಿರುವಾಗ ತನೂನಪಾತ್ ಎಂಬ ಹೆಸರಿನಿಂದ ವ್ಯಪದೇಶವನ್ನು ಹೊಂದುವನು. ಅಭಿವ್ಯಕ್ತನಾದಾಗ ನರಾಶಂಸನೆಂದು ನಿರ್ದಿಷ್ಟನಾಗುವನು. ಅಂತರಿಕ್ಷದಲ್ಲಿ ವಿಶೇಷವಾದ ಪ್ರಕಾಶದಿಂದ ಬೆಳಗುವಾಗ (ವೈದ್ಯುತಾಗ್ನಿರೂಪದಿಂದ) ಮಾತರಿಶ್ವನಾಗುವನೆಂದು ಅಗ್ನಿಗೆ ಮೂರುವಿಧವಾದ ಹೆಸರುಗಳು ಬಂದಿರುವ ಕ್ರಮವನ್ನು ವಿವರಿಸಿ ಉಪಪಾದನೆಮಾಡಿರುತ್ತದೆ. (ಯಾಸ್ಕರು ಮಾತರಿಶ್ವನ್ ಶಬ್ದವು ವಾಯುವನ್ನು ಬೋಧಿಸುವುದೆಂದು ಅರ್ಥವನ್ನು ಹೇಳಿ ವಾಯುವಿನಿಂದಲೇ ವೈಶ್ವಾನರಾಗ್ನಿಯು ಉತ್ಪನ್ನವಾಗುವುದೆಂದು ವಿವರಿಸಿರುವಕಾರಣ ಈ ಎರಡು ವಚನಗಳಿಗೂ ವಿರೋಧವು ಸಂಭಾವಿತವಾಗಿದೆ.) ಆದರೆ ಮಾತರಿಶ್ವನ್ ಶಬ್ದದ ರೂಢ್ಯರ್ಥವನ್ನು ತ್ಯಾಗಮಾಡಿ ಯೌಗಿಕಾರ್ಥದಿಂದ ಇಲ್ಲಿ ಅಗ್ನಿಯು ಮಾತರಿಶ್ವನ್ ಶಬ್ದದಿಂದ ನಿರ್ದಿಷ್ಟನಾಗಿರುವನೆಂದು ವಿರೋಧಪರಿಹಾರವು ಗಮ್ಯವಾಗಿದೆ.

### ವ್ಯಾಕರಣಪ್ರಕ್ರಿಯಾ

**ತನೂನಪಾತ್**—ತನು ವಿಸ್ತಾರೇ. ಧಾತು. **ಕೃಷಿಚಮಿತನಿಧನಿಸರ್ಜಿಖರ್ಜಿಭ್ಯ ಊಃ** (ಉ. ಸೂ. ೧-೮೧) ಎಂಬುದರಿಂದ ಊ ಪ್ರತ್ಯಯಃ. ವ್ಯತ್ಯಯದಿಂದ ತನೂ ಶಬ್ದವು ಆದ್ಯುದಾತ್ತವಾಗುತ್ತದೆ. **ನಪಾತ್.** ಪಾ ರಕ್ಷಣೇ ಅಥವಾ ಪತ್ಲೃ ಗತೌ. ಧಾತು. ಣ್ಯಂತದ ಮೇಲೆ ಕ್ವಿಪ್ ಪ್ರತ್ಯಯ. ನಪಾತಿನ ಪಾತಯತಿ ಇತಿ ವಾ ನಪಾತ್. **ನಭ್ರಾಣ್ ನಪಾತ್ ನವೇದಾ**—(ಪಾ. ಸೂ. ೬–೩-೭೫) ಎಂಬುದರಿಂದ ನಿಪಾತಮಾಡಿರುವುದರಿಂದ ನಞಿಗೆ ಪ್ರಕೃತಿಭಾವ ಬರುತ್ತದೆ (ನಲೋಪ ಬರುವುದಿಲ್ಲ) ತನೂರ್ನ ಪಾತಿ ಇತಿ ತನೂನಪಾತ್. ಕೃದುತ್ತರಪದ ಪ್ರಕೃತಿಸ್ವರ ಪ್ರಾಪ್ತವಾದರೆ **ಉಭೇವನಸ್ಪತ್ಯಾದಿಷು ಯುಗಪತ್** (ಪಾ.ಸೂ. ೬-೧-೧೪೦) ಎಂಬುದರಿಂದ ಉಭಯಪದಪ್ರಕೃತಿಸ್ವರ ಬರುತ್ತದೆ.

**ಉಚ್ಯತೇ**—ವಚ ಪರಿಭಾಷಣೇ ಧಾತು. ಕರ್ಮಣಿಯಲ್ಲಿ ಲಟ್. ಪ್ರಥಮಪುರುಷ ಏಕವಚನಾಂತ ರೂಪ. ತಿಙಂತನಿಘಾತಸ್ವರ ಬರುತ್ತದೆ.

**ಆಸುರಃ**—ಅಸುರಸ್ಯ ಅಯಂ ಆಸುರಃ **ತಸ್ಯೇದಂ** (ಪಾ. ಸೂ. ೪-೩-೧೨೦) ಎಂಬುದರಿಂದ ಅಹಿತ ಕಾರಿತ್ವರೂಪ ಸಂಬಂಧ ತೋರುವಾಗ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬು ದರಿಂದ ಆದಿವೃದ್ಧಿ. **ಯಸ್ಯೇತಿಚ** ಎಂಬುದರಿಂದ ಪ್ರತ್ಯಯಪೂರ್ವದ ಅಕಾರಕ್ಕೆ ಲೋಪ: ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನರಾಶಂಸಃ**—ನೃ ನಯೇ. ಧಾತು. **ಋದೋರಪ್** (ಪಾ. ಸೂ. ೩-೩-೫೭) ಎಂಬುದರಿಂಡ ಇದಕ್ಕೆ ಅಪ್ ಪ್ರತ್ಯಯ. **ಸಾರ್ವಧಾತುಕಾ**—ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ. ಶಂಸು ಸ್ತುತೌ ಧಾತು. ಘಞ್ ಪ್ರತ್ಯಯ. ಇದು ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಅನ್ಯೇಷಾಮಪಿದೃ-ಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ( ನರ ) ದೀರ್ಘ ಬರುತ್ತದೆ. ವನಸ್ಪತ್ಯಾದಿಗಣದಲ್ಲಿ ಸೇರಿರುವುದರಿಂದ **ಉಭೇವನಸ್ಪತ್ಯಾದಿಷು** (ಪಾ. ಸೂ. ೬-೧-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

**ವಿಜಾಯತೇ**—ಜನೀ ಪ್ರಾದುರ್ಭಾವೇ. ಧಾತು. ದಿವಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ, ಟಗೆ ಏತ್ವ. **ದಿವಾದಿಭ್ಯಃಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಜ್ಞಾಜ-ನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುಗೆ ಜಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಎಂಬುದರಿಂದ ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾ ದುದರಿಂದ ಧಾತುಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ವಿ) ಅನುದಾತ್ತಸ್ವರ ಬರುತ್ತದೆ.

**ಅಮಿಮೀತ**—ಮಾಙ್ ಮಾನೇ ಶಬ್ದೇ ಚ. ಧಾತು. ಜುಹೋತ್ಯಾದಿ. ಲಙ್ ಪ್ರಥಮಪುರುಷ ಏಕವಚನ ದಲ್ಲಿ ತಪ್ರತ್ಯಯ. ಶ್ಲು ವಿಕರಣ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದ ರಿಂದ ಅಭ್ಯಾಸಕ್ಕೆ ಇತ್ವ. **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಧಾತುವಿನ ಆಕಾರಕ್ಕೆ ಈತ್ವ. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮಸ್ವರ ಉಳಿಯುತ್ತದೆ.

**ಸರೀಮಣಿ**—ಸೃ ಗತೌ ಧಾತು. **ಹೃಭೃಸೃಸ್ತೃಸೂಭ್ಯಃ**—(ಉ. ಸೂ. ೪-೫೪೭) ಎಂಬುದರಿಂದ ಇದಕ್ಕೆ ಈಮನಿನ್ ಪ್ರತ್ಯಯ. **ಸಾರ್ವಧಾತುಕಾರ್ಧ**—ಎಂಬುದರಿಂದ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಸರೀಮನ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ.

———

ಸಂಹಿತಾಪಾಠಃ

ಸುನಿರ್ಮಥಾ ನಿರ್ಮಥಿತಃ ಸುನಿಧಾ ನಿಹಿತಃ ಕವಿಃ ।

ಅಗ್ನೇ ಸ್ವಧ್ವರಾ ಕೃಣು ದೇವಾನ್ದೇವಯತೇ ಯಜ ॥ ೧೨ ॥

ಪದಪಾಠಃ

ಸುನಿಃऽಮಥಾ । ನಿಃऽಮಥಿತಃ । ಸುऽನಿಧಾ । ನಿऽಹಿತಃ । ಕವಿಃ ।

ಅಗ್ನೇ । ಸುऽಅಧ್ವರಾ । ಕೃಣು । ದೇವಾನ್ । ದೇವऽಯತೇ । ಯಜ ॥ ೧೨ ॥

ಸಾಯಣಭಾಷ್ಯಂ

ಹೇ ಅಗ್ನೇ ಕವಿರ್ಮೇಧಾವೀ ಸುನಿರ್ಮಥಾ ಶೋಭನೇನ ಮಂಥನೇನ ನಿರ್ಮಥಿತಃ । ನಿತರಾಂ ಮಥಿತೋಽಸಿ । ತಥಾ ಸುನಿಧಾ ಶೋಭನೇನ ನಿಧಾನೇನ ನಿಹಿತೋಽಸಿ । ಉತ್ತರವೇದ್ಯಾದಿಸ್ಥಾನೇಷು ನಿತರಾಂ ಪ್ರಕ್ಷಿಪ್ತೋಽಸಿ । ಕಿಂಚ ಸ್ವಧ್ವರಾಸ್ಮಾಭಿಃ ಕ್ರಿಯಮಾಣಾನಿ ಕರ್ಮಾಣಿ ಸುಷ್ಠು ಹಿಂಸಾರಹಿತಾನಿ ಕೃಣು । ಕುರು । ತಥಾ ದೇವಯತೇ ದೇವಾನ್ಕಾಮಯಮಾನಾಯ ಯಜಮಾನಾಯ ದೇವಾನ್ಯಜನೀಯಾನಿಂದ್ರಾದೀನ್ ಯಜ। ಪೂಜಯ॥ ಸುನಿರ್ಮಥಾ। ಮಥೇ ವಿಲೋಡನೇ । ಅಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಪ್ರಾದಿಸಮಾಸಃ । ಕೃದುತ್ತರಪದಸ್ವರಃ । ನಿರ್ಮಥಿತಃ। ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸುನಿಧಾ । ನಿಪೂರ್ವಸ್ಯ ದಧಾತೇರ್ಭಾವ ಆತಶ್ಚೋಪಸರ್ಗ ಇತ್ಯಙ್ । ಸುಪಾಂ ಸುಲುಗಿತಿ ತೃತೀಯಾಯಾ ಲುಕ್ । ಕೃದುತ್ತರಪದಸ್ವರಃ । ಕೃಣು । ಕೃವಿ ಹಿಂಸಾಕರಣಯೋರಿತ್ಯಸ್ಯ ಲೋಟಿ ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಉತಶ್ಚ ಪ್ರತ್ಯಯಾದಿತಿ ಹೇರ್ಲುಕ್ । ನಿಘಾತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । **ಕವಿಃ**—ಮೇಧಾವಿಯಾದ ನೀನು । **ಸುನಿರ್ಮಥಾ**—ಶ್ರೇಷ್ಠವಾದ ಮಂಥನಕ್ರಿಯೆಯಿಂದ । **ನಿರ್ಮಥಿತಃ**—ಮಥನಮಾಡಲ್ಪಟ್ಟು ಉತ್ಪನ್ನನಾಗಿದ್ದೀಯೆ । **ಸುನಿಧಾ**—ಭಕ್ತಿಪೂರ್ವಕವಾದ ವಿಧಾನದಿಂದ । **ನಿಹಿತಃ**—ಸ್ಥಾಪಿತನಾಗಿದ್ದೀಯೆ । **ಸ್ವಧ್ವರಾ**—ನಾವು ನೆರವೇರಿಸತಕ್ಕ ಕ್ರಿಯೆಗಳನ್ನು ಹಿಂಸಾರಹಿತಗಳನ್ನಾಗಿ । **ಕೃಣು**—ಮಾಡು । **ದೇವಯತೇ**—ದೇವತೆಗಳ ಸಹಾಯವನ್ನಪೇಕ್ಷಿಸುವ ಯಜಮಾನನಿಗೋಸ್ಕರವಾಗಿ । **ದೇವಾನ್**—ಇಂದ್ರಾದಿ ದೇವತೆಗಳನ್ನು । **ಯಜ**—ಪೂಜಿಸು ॥

ಭಾವಾರ್ಥ

ಎಲೈ ಅಗ್ನಿಯೇ, ಮೇಧಾವಿಯಾದ ನೀನು ಶ್ರೇಷ್ಠವಾದ ಮಂಥನಕ್ರಿಯೆಯಿಂದ ಮಥನಮಾಡಲ್ಪಟ್ಟು ಉತ್ಪನ್ನನಾಗಿದ್ದೀಯೆ. ಭಕ್ತಿಪೂರ್ವಕವಾದ ವಿಧಾನದಿಂದ ಸ್ಥಾಪಿತನಾಗಿದ್ದೀಯೆ. ನಾವು ನೆರವೇರಿಸತಕ್ಕ ಕ್ರಿಯೆ

ಗಳನ್ನು ಹಿಂಸಾರಹಿತಗಳನ್ನಾಗಿ ಮಾಡು. ದೇವತೆಗಳ ಸಹಾಯವನ್ನಪೇಕ್ಷಿಸತಕ್ಕ ಯಜಮಾನನಿಗಾಗಿ ಇಂದ್ರಾದಿ ದೇವತೆಗಳನ್ನು ಪೂಜಿಸು.

## English Translation

Agni, you are pronounced by reverential attrition, and deposited with reverential care, and you are far-seeing, render our rites ( exempt from defects ), and worship the gods ( on behalf ) of the devout worshipper.

### ವಿಶೇಷವಿಷಯಗಳು

**ಕವಿಃ ಸುನಿರ್ಮಥಾ ನಿರ್ಮಥಿತಃ-ಮೇಧಾವೀ ಶೋಭನೇನ ಮಥನೇನ ನಿತರಾಂ ಮಥಿತೋಽಸಿ ।** ಅಗ್ನಿಯನ್ನು ಸಂಬೋಧಿಸಿ, ಮೇಧಾವಿಯಾದ ಅಗ್ನಿಯು ಮಂಗಳಕರವಾದ ರೀತಿಯಿಂದ ಅರಣಿಗಳಲ್ಲಿ ಅತಿಶಯವಾಗಿ ಮಥನದಂಡದಿಂದ ಮಥಿತನಾಗಿರುವನೆಂದು ವರ್ಣಿಸಿದೆ.

**ಸುನಿಧಾ ನಿಹಿತಃ — ಶೋಭನೇನ ನಿಧಾನೇನ ಉತ್ತರವೇದ್ಯಾದಿಸ್ಥಾನೇಷು ನಿತರಾಂ ಪ್ರಕ್ಷಿಪ್ತಃ** (ಯಥಾವಿಧಿ) ವಿಧಿಯಲ್ಲಿ ಉಕ್ತವಾದ ಕ್ರಮವನ್ನು ಅನುಸರಿಸಿ ಯಜಮಾನರೇ ಮೊದಲಾದವರಿಂದಲೂ ಋತ್ವಿಜರಿಂದಲೂ ಅಗ್ನಿಯು ಯಾಗಶಾಲೆಯ ಉತ್ತರವೇದಿಯಲ್ಲಿ ಇಡಲ್ಪಟ್ಟಿರುವನೆಂದು ಹೇಳಿದೆ.

**ಸ್ವಧ್ವರಾ ಕೃಣು — ಅಸ್ಮಾಭಿಃ ಕ್ರಿಯಾಮಾಣಾನಿ ಕರ್ಮಾಣಿ ಸುಷ್ಠು ಹಿಂಸಾರಹಿತಾನಿ ಕುರು । ಅಧ್ವರ ಇತಿ ಯಜ್ಞನಾಮ ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ** (ನಿ. ೧-೮) ಯಾಸ್ಕರು ಅಧ್ವರ ಎಂಬ ಪದವನ್ನು ಯಜ್ಞನಾಮಗಳಲ್ಲಿ ಪಾಠಮಾಡಿದ್ದಾರೆ. ಹಿಂಸೆಯನ್ನು ಮಾಡುವುದು ಎಂಬ ಅರ್ಥವನ್ನು ಧ್ವರಧಾತುವು ಬೋಧಿಸುವುದು. ಆ ಹಿಂಸಾಕರ್ಮವು ಯಜ್ಞದಲ್ಲಿ ಪ್ರತಿಷಿದ್ಧವಾಗಿದೆ ಎಂದು ವ್ಯಾಖ್ಯಾನ ಮಾಡಿರುವರು. ಯಜಮಾನರು ಆಚರಿಸುವ ಯಜ್ಞಕರ್ಮಗಳು ಹಿಂಸಾರೂಪವಾದ ಕರ್ಮಗಳಿಂದ ರಹಿತವಾಗಿರುವಂತೆ ಅಗ್ನಿಯು ಅನುಗ್ರಹಿಸಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.

**ದೇವಯತೇ ಯಜ** — ದೇವತೆಗಳ ಅನುಗ್ರಹವನ್ನು ಹೊಂದಲು ಅವರನ್ನು ಸಂತೋಷಪಡಿಸುವುದಕ್ಕಾಗಿ ಯಜ್ಞವನ್ನು ಆಚರಿಸುವ ಯಜಮಾನನಿಗಾಗಿ ಎಂದು ದೇವಯತೇ ಎಂಬ ಶಬ್ದಕ್ಕೆ ಅರ್ಥವನ್ನು ವಿವರಿಸಿ, ಅಗ್ನಿಯು ಯಜಮಾನನಿಗಾಗಿ ಯಾಗಾರ್ಹರಾದ (ದೇವತೆಗಳನ್ನು) ಇಂದ್ರನೇ ಮೊದಲಾದ ದೇವತೆಗಳನ್ನು ಪೂಜಿಸಲಿ ಎಂದು ವರ್ಣಿಸಿದೆ. ಯಾಸ್ಕರು **ಅಂಜಂತಿ ತ್ವಾಮಧ್ವರೇ ದೇವಯಂತಃ** ಎಂಬಲ್ಲಿ **ದೇವಯಂತಃ** ಎಂಬ ಪದಕ್ಕೆ **ದೇವಾನ್ ಕಾಮಯಮಾನಾಃ** ದೇವತೆಗಳ ಅನುಗ್ರಹವನ್ನು ಹೊಂದುವುದಕ್ಕಾಗಿ ದೇವತೆಗಳನ್ನು ಪೂಜಿಸುವ ಯಜಮಾನರು ಎಂಬ ಅರ್ಥವನ್ನು ವಿವರಿಸಿದ್ದಾರೆ. ಇದನ್ನು ಅನುಸರಿಸಿ ಸಾಯಣರೂ ಅರ್ಥವನ್ನು ವರ್ಣಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಸುನಿರ್ಮಥಾ** — ಮಥೇ ವಿಲೋಡನೇ. ಧಾತು. **ಸಂಪದಾದಿಭ್ಯಃಕ್ವಿಪ್** ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. ಸುನಿರ್ ಎಂಬುದರೊಡನೆ ಪ್ರಾದಿಸಮಾಸ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ನಿರ್ಮಥಿತಃ**—ಪೂರ್ವೋಕ್ತವಾದ ಧಾತುವಿಗೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಅನಿದಿತಾಂಹಲ ಉ-** ಎಂಬುದರಿಂದ ಉಪಧಾನಕಾರಲೋಪ. ಪ್ರತ್ಯಯಕ್ಕೆ ಇಡಾಗಮ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ನಿರ್) ಉದಾತ್ತಸ್ವರ ಬರುತ್ತದೆ.

**ಸುನಿಧಾ**—ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ನಿ ಎಂಬ ಉಪಸರ್ಗ ಪೂರ್ವದಲ್ಲಿರುವಾಗ **ಆತಶ್ಚೋಪಸರ್ಗೇ** (ಪಾ. ಸೂ. ೩-೩-೧೦೬) ಎಂಬುದರಿಂದ ಭಾವಾರ್ಥದಲ್ಲಿ ಅಙ್ ಪ್ರತ್ಯಯ. **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಸ್ತ್ರೀತ್ವ ವಿವಕ್ಷಾ ಮಾಡಿದಾಗ ಟಾಪ್. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಇದಕ್ಕೆ ತೃತೀಯಾ ವಿಭಕ್ತಿ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ನಿಹಿತಃ**—ಧಾಞ್ ಧಾತುವಿಗೆ ಕ್ತ ಪ್ರತ್ಯಯ ಪರವಾದಾಗ ಹಿ ಆದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ನಿ) ಉದಾತ್ತಸ್ವರ ಬರುತ್ತದೆ.

**ಸ್ವಧ್ವರಾ**—**ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. **ಶೇಶ್ಛಂದಸಿಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕದಲ್ಲಿ ಶಿಗೆ ಲೋಪ.

**ಕೃಣು**—ಕೃವಿ ಹಿಂಸಾಕರಣಯೋಶ್ಚ ಧಾತು. ಲೋಟ್. ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಉ ಪ್ರತ್ಯಯ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ **ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್** ಎಂಬುದರಿಂದ ಹಿಗೆ ಲುಕ್. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವಯತೇ**—ದೇವ ಶಬ್ದದ ಮೇಲೆ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. ಕ್ಯಜಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಚತುರ್ಥೀ ಏಕವಚನಾಂತರೂಪ. **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಜ**—ಯಜ ದೇವಪೂಜಾದಿಷು. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

**ಅಜೀಜನನ್ನಮೃತಂ ಮರ್ತ್ಯಾಸೋಽಸ್ರೇಮಾಣಂ ತರಣಿಂ ವೀಳುಜಂಭಂ ।**
**ದಶ ಸ್ವಸಾರೋ ಅಗ್ರುವಃ ಸಮೀಚೀಃ ಪುಮಾಂಸಂ ಜಾತಮಭಿ ಸಂ ರಭಂತೇ ॥**

ಪದಪಾಠಃ

**ಅಜೀಜನನ್ । ಅಮೃತಂ । ಮರ್ತ್ಯಾಸಃ । ಅಸ್ರೇಮಾಣಂ । ತರಣಿಂ । ವೀಳುಽಜಂಭಂ ।**
**ದಶ । ಸ್ವಸಾರಃ । ಅಗ್ರುವಃ । ಸಂಽಈಚೀಃ । ಪುಮಾಂಸಂ । ಜಾತಂ । ಅಭಿ । ಸಂ । ರಭಂತೇ ॥ ೧೩ ॥**

ಸಾಯಣಭಾಷ್ಯಂ

**ಮರ್ತ್ಯಾಸೋ ಮರ್ತ್ಯಾ ಋತ್ವಿಜೋಽಮೃತಂ ಮರಣಧರ್ಮರಹಿತಂ ಅತ ಏವಾಸ್ರೇಮಾಣಂ ಕ್ಷಯರಹಿತಂ ವೀಳುಜಂಭಂ ಹವಿರ್ಭಕ್ಷಣಾರ್ಥಂ ದೃಢದಂತಂ ತರಣಿಂ । ತರಂತಿ ಯಜಮಾನಾಃ ಪಾಪಮನೇನೇತಿ ತರಣಿರಗ್ನಿಃ । ತಮಜೀಜನನ್ । ಮಂಥನೇನೋದಪೀಪದನ್ । ಅಥ ಜಾತಂ ತಮಗ್ನಿಮಭಿಲಕ್ಷ್ಯ ಸ್ವಸಾರಃ ಸರಂತ್ಯೋ ದಶ ದಶಸಂಖ್ಯಾಕಾ ಅಗ್ರುವಃ । ಕರ್ಮಕರಣಾರ್ಥಮಗ್ರಮಂಗಂತೀತ್ಯಗ್ರುವೋಂಗುಲಯಃ । ತಾದೃಶಾ ಅಂಗುಲಯಃ ಸಮೀಚೀಃ ಪರಸ್ಪರಂ ಸಂಗತಾಃ ಸತ್ಯಃ ಸಂರಭಂತೇ । ಶಬ್ದಂ ಕುರ್ವತೇ । ಜಾತಮಗ್ನಿಂ ದೃಷ್ಟ್ವಾಧ್ವರ್ಯ್ವಾದಯೋ ಹರ್ಷಾದ್ಧಸ್ತದ್ವಯಸಂಪುಟೇನ ಶಬ್ದಂ ಕುರ್ವಂತೀತ್ಯರ್ಥಃ । ತತ್ರ ದೃಷ್ಟಾಂತಃ । ಪುಮಾಂಸಮಿತಿ । ಯಥಾ ಜಾತಂ ಪುತ್ರಮುಪಲಭ್ಯ ತತ್ರತ್ಯಾಃ ಪಿತ್ರಾದಯೋ ಹರ್ಷಾದುದ್ಘೋಷಂತಿ ತದ್ವತ್ ॥ ಅಜೀಜನನ್ । ಜನೀ ಪ್ರಾದುರ್ಭಾವ ಇತ್ಯಸ್ಯ ಣ್ಯಂತಸ್ಯ ಲುಙಿ ಚಙಿ ರೂಪಂ । ಅಸ್ರೇಮಾಣಂ । ಸ್ರಿವು ಗತಿಶೋಷಣಯೋಃ । ಭಾವೇ ಮನಿನ್ನಿತಿ ಮನಿನ್ಪ್ರತ್ಯಯಃ । ಲಘೂಪಧಗುಣಃ । ಲೋಪೋ ವ್ಯೋರ್ವಲೀತಿ ವಲೋಪಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ತರಣಿಂ । ತೄ ಪ್ಲವನತರಣಯೋಃ । ಅರ್ತಿಸೃಧೃಧಮ್ಯಮ್ಯಶ್ಯವಿತೃಭ್ಯೋಽನಿರಿತ್ಯನಿಪ್ರತ್ಯಯಃ । ಗುಣಃ । ಪ್ರತ್ಯಯಸ್ವರಃ । ಸ್ವಸಾರಃ । ಅಸು ಕ್ಷೇಪಣ ಇತ್ಯಸ್ಮಾತ್ಸುಞ್ಯಸೇರ್ಋನ್ನಿತಿ ಋನ್ ಪ್ರತ್ಯಯಃ । ಸುಷ್ಠು ಅಸ್ಯಂತಿ ಕರ್ಮಸು ಪದಾರ್ಥಾನಿತಿ ಸ್ವಸಾರಃ । ನ ಷಟ್ಸ್ವಸ್ರಾದಿಭ್ಯ ಇತಿ ಙೀಪಃ ಪ್ರತಿಷೇಧಃ । ನಿತ್ತ್ವಾದಾದ್ಯುದಾತ್ತಃ । ಅಗ್ರುವಃ । ಅಗಿ ಗತೌ । ಜತ್ರ್ವಾದಯಶ್ಚ । ಉ. ೪-೧೦೨ । ಇತಿ ರುಪ್ರತ್ಯಯಃ । ನಿಪಾತನಾನ್ನಲೋಪಃ । ಜಸಿ ತನ್ವಾದಿತ್ವಾದುವಙಾದೇಶಃ । ಪ್ರತ್ಯಯಸ್ವರಃ । ಸಮೀಚೀಃ । ಇಣ್ ಗತಾವಿತ್ಯಸ್ಮಾತ್ಸಮೀಣಃ । ಉ. ೪-೯೨ । ಇತಿ ಚಟ್ಪ್ರತ್ಯಯೋ ಧಾತೋರ್ದೀರ್ಘಶ್ಚ । ಟಿತ್ತ್ವಾಟ್ಟಿಡ್ಢಾಣಞಿತ್ಯಾದಿನಾ ಙೀಪ್ । ಸಂಯಂತೀತಿ ಸಮೀಚ್ಯಃ । ಯದ್ವಾ ಸಂಪೂರ್ವಸ್ಯಾಂಚತೇಃ ಕ್ವಿನ್ । ಸಮಃ ಸಮೀತಿ ಸಮಿ ಇತ್ಯಾದೇಶಃ । ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಅಚ ಇತ್ಯಾಕಾರಲೋಪಃ । ಚಾವಿತಿ ದೀರ್ಘಃ । ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಏಕಾದೇಶಸ್ವರಃ । ಪುಮಾಂಸಂ । ಪಾ ರಕ್ಷಣ ಇತ್ಯಸ್ಮಾತ್ಪಾತೇರ್ಡುಮ್ಸುನ್ । ಉ. ೪-೧೭೭ । ಇತಿ ಡುಮ್ಸುನ್ಪ್ರತ್ಯಯಃ । ಪುಂಸೋಽಸುಙ್ । ಪಾ. ೭-೧-೮೯ । ಇತ್ಯಸುಙಾದೇಶಃ । ಪಾತಿ ಕುಲಮಿತಿ ಪುಮಾನ್ । ನಿತ್ಸ್ವರಃ । ರಭಂತೇ । ರಭ ಶಬ್ದ ಇತ್ಯಸ್ಯ ಲಟಿ ರೂಪಂ । ನಿಘಾತಃ ॥**

ಪ್ರತಿಪದಾರ್ಥ

**ಮರ್ತ್ಯಾಸಃ**—ಮಾನವರಾದ ಋತ್ವಿಕ್ಕುಗಳು । **ಅಮೃತಂ**—ಮರಣಧರ್ಮದಿಂದ ರಹಿತನಾದವನೂ । **ಅಸ್ರೇಮಾಣಂ**—ಕ್ಷಯರಹಿತನೂ । **ವೀಳುಜಂಭಂ** — ಹವಿಸ್ಸನ್ನು ಭಕ್ಷಿಸಲು ದೃಢವಾಗಿರತಕ್ಕ ದಂತವುಳ್ಳವನೂ । **ತರಣಿಂ**—ಯಜಮಾನರನ್ನು ಪಾಪದಿಂದ ದಾಟಿಸುವವನೂ ಆದ ಅಗ್ನಿಯನ್ನು । **ಅಜೀಜನನ್**—ಉತ್ಪನ್ನವಾಗುವಂತೆ ಮಾಡಿದರು । **ಜಾತಂ ಅಭಿ**—ಉತ್ಪನ್ನನಾದ ಅಗ್ನಿಯನ್ನು ನಿರ್ದೇಶಿಸಿ । **ಸ್ವಸಾರಃ**—ಸರಿಸತಕ್ಕ ( ಅಗ್ನಿಯ ಸೃಷ್ಟಿಯಲ್ಲಿ ತೊಡಗಿರತಕ್ಕ) । **ದಶ ಅಗ್ರುವಃ** — ಹತ್ತು ಬೆರಳುಗಳೂ ಸಹ । **ಸಮೀಚೀಃ** — ಒಟ್ಟಿಗೆ ಸೇರಿಕೊಂಡು । **ಪುಮಾಂಸಂ** — ಪುತ್ರೋತ್ಸವವಾದಾಗ ಪಿತೃಗಳು ಹರ್ಷವನ್ನು ಪ್ರಕಟಿಸುವಂತೆ । **ಸಂರಭಂತೇ** — ಶಬ್ದಮಾಡಿ ಪ್ರಕಟಿಸುತ್ತವೆ ॥

ಭಾವಾರ್ಥ

ಮಾನವರಾದ ಋತ್ವಿಕ್ಕುಗಳು ಮರಣಧರ್ಮದಿಂದ ರಹಿತನಾದವನೂ, ಕ್ಷಯರಹಿತನೂ, ಹವಿಸ್ಸನ್ನು ಭಕ್ಷಿಸಲು ದೃಢವಾಗಿರತಕ್ಕ ದಂತಗಳುಳ್ಳವನೂ, ಯಜಮಾನರನ್ನು ಪಾಪದಿಂದ ದಾಟಿಸುವವನೂ ಆದ ಅಗ್ನಿಯನ್ನು ಉತ್ಪನ್ನವಾಗುವಂತೆ ಮಾಡಿದರು. ಅವರ ಹಸ್ತದ ಹತ್ತು ಬೆರಳುಗಳೂ ಸಹ ಒಟ್ಟಿಗೆ ಸೇರಿಕೊಂಡು ಉತ್ಪನ್ನನಾದ ಅಗ್ನಿಯನ್ನು ನಿರ್ದೇಶಿಸಿ ಪುತ್ರೋತ್ಸವವಾದಾಗ ಪಿತೃಗಳು ತಮ್ಮ ಪುತ್ರನ ಉತ್ಪತ್ತಿಯನ್ನು ಹೇಗೆ ಪ್ರಕಟಿಸುತ್ತಾರೆಯೋ ಹಾಗೆ ಪ್ರಕಟಿಸುತ್ತವೆ.

English Ttranslation

Mortals have begotten the immortals, the undecaying (Agni), the devourer of oblations, the conveyance (by which they cross over sin), the ten sister fingers intertwined proclaim him born as if it was a male (infant).

ವಿಶೇಷವಿಷಯಗಳು

**ಮರ್ತಾ್ಯಸಃ—ಮರ್ತಾ್ಯಃ ಋತ್ವಿಜಃ** ಮರ್ತ್ಯ ಶಬ್ದವು ಮನುಷ್ಯನಾಮಗಳಲ್ಲಿ (ನಿ. ೩-೮) ಉಕ್ತವಾಗಿದೆ. ಸಾಯಣರು ಮನುಷ್ಯರಾದ ಋತ್ವಿಜರೆಂದು ಅರ್ಥವನ್ನು ವರ್ಣಿಸಿದ್ದಾರೆ.

**ಅಮೃತಂ ಅಸ್ರೇಮಾಣಂ ವೀಳುಜಂಭಂ**—ಅಗ್ನಿಯು ಮರಣಧರ್ಮರಹಿತನಾಗಿರುವನೆಂದು ಅಮೃತ ಶಬ್ದದ ಅರ್ಥವನ್ನು ವಿವರಿಸಿದೆ. ಅಸ್ರೇಮನ್ ಎಂಬ ಪದವು ಪ್ರಶಸ್ಯನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಸಾಯಣರು ಕ್ಷಯರಹಿತ ಎಂದು ಅರ್ಥವನ್ನು ಹೇಳಿ ಅಗ್ನಿಯು ನಿತ್ಯನಾಗಿರುವನು, ಅಥವಾ ನಾಶವಿಲ್ಲದವನು ಎಂಬ ಅರ್ಥವನ್ನು ವರ್ಣಿಸಿದ್ದಾರೆ. ವೀಳು ಎಂಬ ಪದವು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಅಗ್ನಿಯು **ಹವಿರ್ಭಕ್ಷಣಾರ್ಥಂ ದೃಢದಂತಂ** ಹವಿಸ್ಸನ್ನು ಭಕ್ಷಿಸುವುದಕ್ಕಾಗಿ ಗಟ್ಟಿಯಾದ ಹಲ್ಲುಗಳನ್ನು ಹೊಂದಿ ಇರುವವನೆಂದು ಅರ್ಥವನ್ನು ಹೇಳಿದೆ.

**ತರಣಿಮಜೀಜನನ್—ತರಣಿಃ** ಎಂದು ಯಾಸ್ಕರಿಂದ ಕ್ಷಿಪ್ರನಾಮಗಳಲ್ಲಿ ( ನಿ. ೭-೯ ) ಉಕ್ತವಾಗಿದೆ. ಸಾಯಣರು **ತರಂತಿ ಯಜಮಾನಾಃ ಪಾಪಮನೇನ** ಯಜಮಾನರು ಪಾತಕಗಳನ್ನು ಕಳೆದುಕೊಳ್ಳುವ ಕಾರಣ ಅಗ್ನಿಯು ತರಣಿಯಾಗಿರುವನು ಎಂದು ಅರ್ಥವನ್ನು ವಿವರಿಸಿ, ಪ್ರಭೂತವಾದ ಪ್ರಭಾವದಿಂದ ಯುಕ್ತವಾದ ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡುವುದರಿಂದ ಉತ್ಪನ್ನಮಾಡಿರುತ್ತಾರೆಂಬ ಅರ್ಥವನ್ನು ವರ್ಣಿಸಿದ್ದಾರೆ.

**ಸ್ವಸಾರಃ ದಶ ಅಗ್ರುವಃ—ಸಮೀಚೀಃ ಸಂ ರಭಂತೇ—ಸುಷ್ಠು ಅಸ್ಯಂತಿ ಪದಾರ್ಥಾನ್** ವಸ್ತುಗಳನ್ನು ಸರಿಯಾಗಿ ಇಡುವಕಾರಣ **ಸ್ವಸಾರಃ** ಎಂದು ಅರ್ಥವು ನಿವೃತವಾಗಿದೆ. **ಅಗ್ರುವಃ** ಎಂಬ ಪದವು ನದೀನಾಮಗಳಲ್ಲಿಯೂ (ನಿ. ೨-೨-೨೪) ಅಂಗುಲಿನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. **ಸ್ವಸಾರಃ** ಎಂಬ ಪದವು ಅಂಗುಲಿನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಸಾಯಣರು **ಜಾತಮಭಿಲಕ್ಷ್ಯ ಸರಂತ್ಯಃ ದಶಸಂಖ್ಯಾಕಾಃ ಕರ್ಮಕರಣಾರ್ಥಮಗ್ರಮಂಚಂತೀತಿ ಅಂಗುಲಯಃ ಪರಸ್ಪರಂ ಸಂಗತಾಃ ಶಬ್ದಂ ಕುರ್ವತೇ |** ಕಾರ್ಯವನ್ನು ಆಚರಿಸುವುದಕ್ಕಾಗಿ ಅಗ್ರಭಾಗವನ್ನು ಮುಟ್ಟುವಕಾರಣ ಅಗ್ರು ಎಂದು ಪ್ರಸಿದ್ಧವಾದ ಹತ್ತು ಬೆರಳುಗಳನ್ನು ಸೇರಿಸಿ ಅಗ್ನಿಯು

ಉತ್ಪನ್ನನಾದ ಕೂಡಲೆ ಋತ್ವಿಜರು ಶಬ್ದಮಾಡುತ್ತಾರೆ (ಚಪ್ಪಾಳೆ ಹಾಕುತ್ತಾರೆ) **ಜಾತಮಗ್ನಿಂ ದೃಷ್ಟ್ವಾ ಅಧ್ವರ್ಯ್ವಾದಯೋ ಹರ್ಷಾತ್ ಹಸ್ತದ್ವಯಸಂಪುಟೇನ ಶಬ್ದಂ ಕುರ್ವಂತಿ** ಎಂದು ಅರ್ಥವನ್ನು ವಿವರಿಸಿದ್ದಾರೆ.

ಪುಮಾಂಸಂ— **ಯಥಾ ಜಾತಂ ಪುತ್ರಮುಪಲಭ್ಯ ತತ್ರತ್ಯಾಃ ಪಿತ್ರಾದಯೋ ಹರ್ಷಾತ್ ಉದ್ಘೋಷಂತಿ ತದ್ವತ್** ಗಂಡು ಮಗುವು ಉತ್ಪನ್ನವಾದುದನ್ನು ನೋಡಿ ಅದರ ತಂದೆಯೇ ಮೊದಲಾದವರು ಸಂತೋಷದಿಂದ ಧ್ವನಿಯನ್ನು ಮಾಡುವಹಾಗೆ ಅಧ್ವರ್ಯುಮೊದಲಾದ ಋತ್ವಿಜರು ಅಗ್ನಿಯು ಉತ್ಪನ್ನನಾದಕೂಡಲೇ ಧ್ವನಿಮಾಡುವರೆಂದು ಹರ್ಷವನ್ನು ಸೂಚಿಸುವ ವಿಷಯದಲ್ಲಿ ಉದಾಹರಣೆಯಾಗಿ ಪುತ್ರ ಜನನವು ಉಕ್ತವಾಗಿದೆ.

ವ್ಯಾಕರಣಪ್ರಕ್ರಿಯಾ

**ಅಜೀಜನನ್**—ಜನೀ ಪ್ರಾದುರ್ಭಾವೇ. ಧಾತು. ಪ್ರೇರಣಾರ್ಥದಲ್ಲಿ ಣಿಚ್ ಣಿಜಂತದಮೇಲೆ ಲುಙ್. ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅಂತ್ಯಲೋಪ. ಅಂತಾದೇಶ. **ಣಿಶ್ರಿದ್ರುಸ್ರುಭ್ಯಃ ಕರ್ತರಿಚಙ್** (ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** ಎಂಬುದರಿಂದ ಧಾತುವಿಗೆ ದ್ವಿತ್ವ. ಸನ್ವದ್ಭಾವವಿರುವುದರಿಂದ ಧಾತುವಿನ ಅಭ್ಯಾಸಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತಪದವಾಗುತ್ತದೆ.

**ಅಸ್ರೇಮಾಣಂ**—ಸ್ರಿವು ಗತಿಶೋಷಣಯೋಃ ಧಾತು. ಇದಕ್ಕೆ ಭಾವಾರ್ಥದಲ್ಲಿ ಮನಿನ್ ಪ್ರತ್ಯಯ. **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಲೋಪೋ-ವ್ಯೋರ್ವಲಿ** ಎಂಬುದರಿಂದ ವಕಾರಕ್ಕೆ ಲೋಪ. ಬಹುವ್ರೀಹಿ ಸಮಾಸದಲ್ಲಿ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ತರಣಿಂ**—ತೄ ಪ್ಲವನತರಣಯೋಃ ಧಾತು. **ಅರ್ತಿಸೃಧೃಧಮ್ಯಮ್ಯಾಶ್ಯವಿತೄಭ್ಯೋಽನಿಃ** (ಉ. ಸೂ. ೨-೨೯೫) ಎಂಬುದರಿಂದ ಅನಿಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. **ಅಟ್‌ಕುಪ್ವಾಙ್‌ನು**—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವಸಾರಃ**—ಅಸು ಕ್ಷೇಪಣೇ. ಧಾತು. **ಸುಙ್ಯಾಸೇರ್‌ಋನ್** (ಉ. ಸೂ. ೨-೫೫೩) ಎಂಬುದರಿಂದ ಇದಕ್ಕೆ ಋನ್ ಪ್ರತ್ಯಯ. ಸುಷ್ಠು ಅಸ್ಯಂತಿ ಕರ್ಮಸು ಪದಾರ್ಥಾನ್ ಇತಿ ಸ್ವಸಾರಃ. ಸುವಿನ ಉಕಾರಕ್ಕೆ ಯಣಾದೇಶ. ಸ್ವಸೃ ಎಂಬುದು ಋಕಾರಾಂತವಾದರೂ ಸ್ತ್ರೀತ್ವದಲ್ಲಿ **ನಷಟ್‌ಸ್ವಸ್ರಾದಿಭ್ಯಃ** (ಪಾ. ಸೂ. ೪-೧-೧೦) ಎಂದು ನಿಷೇಧವಿರುವುದರಿಂದ ಙೀಪ್ ಬರುವುದಿಲ್ಲ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಗ್ರುವಃ**—ಅಗಿ ಗತೌ. ಧಾತು. **ಜತ್ರ್ವಾದಯಶ್ಚ** (ಉ. ಸೂ. ೪-೫೪೭) ಎಂಬುದರಿಂದ ರು ಪ್ರತ್ಯಯ. ಇದಿತ್ತಾದುದರಿಂದ ನುಮಾಗಮ. ನಿಪಾತನದಿಂದ ಆ ನಕಾರಕ್ಕೆ ಲೋಪ. ಅಗ್ರು ಶಬ್ದವಾಗುತ್ತದೆ. ಇದಕ್ಕೆ ಜಸ್ ಪರವಾದಾಗ ತನ್ವಾದಿಯಲ್ಲಿ ಪಠಿತವಾದುದರಿಂದ ಉವಙಾದೇಶ ಬರುತ್ತದೆ. ಪ್ರತ್ಯಯಸ್ವರ ಬರುತ್ತದೆ.

**ಸಮೀಚೀಃ**—ಇಣ್ ಗತೌ. ಧಾತು. ಇದಕ್ಕೆ ಸಂ ಎಂಬುದು ಪೂರ್ವದಲ್ಲಿರುವಾಗ **ಸಮೀಣಃ** (೪-೫೩೨) ಎಂಬುದರಿಂದ ಚಟ್ ಪ್ರತ್ಯಯ. ಧಾತುವಿಗೆ ದೀರ್ಘ. ಪ್ರತ್ಯಯ ಟಿತ್ತಾದುದರಿಂದ ಸ್ತ್ರೀತ್ವ ವಿವಕ್ಷಾಮಾಡಿದಾಗ

**ಟಿಡ್ಢಾಣಞ್ ದ್ವಯಸಚ್** (ಪಾ. ಸೂ. ೪–೧–೧೫) ಎಂಬುದರಿಂದ ಙೀಪ್. ಸಂಯಂತೀತಿ ಸಮೀಚ್ಯಃ ಅಥವಾ ಸಂ ಪೂರ್ವಕವಾದ ಅಂಚು (ಗತಿಪೂಜನಯೋಃ) ಧಾತುವಿಗೆ ಕ್ವಿಪ್ ಪ್ರತ್ಯಯ. **ಸಮಃ ಸಮಿ** (ಪಾ. ಸೂ. ೬–೩–೯೩) ಎಂಬುದರಿಂದ ಸಂ ಎಂಬುದಕ್ಕೆ ಸಮ್ಯಾದೇಶ. **ಅಂಚತೇಶ್ಚೋಪಸಂಖ್ಯಾನಂ** ಎಂಬ ವಚನದಲ್ಲಿ ಸ್ತ್ರೀತ್ವದಲ್ಲಿ ಙೀಪ್. ಭಸಂಜ್ಞಾ ಇರುವುದರಿಂದ **ಅಚಃ** (ಪಾ. ಸೂ. ೬–೪–೧೩೮) ಎಂಬುದರಿಂದ ಧಾತುವಿದ ಅಕಾರಕ್ಕೆ ಲೋಪ. **ಚೌ** (ಪಾ. ಸೂ. ೬–೩–೧೩೮) ಎಂಬುದರಿಂದ ಪೂರ್ವಕ್ಕೆ ದೀರ್ಘ. ವಿಭಕ್ತಿಪರವಾದಾಗ **ವಾಛಂದಸಿ** (ಪಾ. ಸೂ. ೬–೧–೧೦೬) ಎಂಬುದರಿಂದ ಪೂರ್ವಸವರ್ಣ ದೀರ್ಘ. ಏಕಾದೇಶಸ್ವರದಿಂದ ಈಕಾರ ಉದಾತ್ತವಾಗುತ್ತದೆ.

**ಪುಮಾಂಸಂ**—ಪಾ ರಕ್ಷಣೇ. ಧಾತು. **ಪಾತೇರ್ಡುಂಸುನ್** (ಉ. ಸೂ. ೪–೬೧೭) ಎಂಬುದರಿಂದ ಡುಂಸುನ್ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಪುಂಸ್ ಶಬ್ದವಾಗುತ್ತದೆ. ಇದಕ್ಕೆ ದ್ವಿತೀಯಾ ಏಕವಚನ ಪರವಾದಾಗ **ಪುಂಸೋಸುಙ್** (ಪಾ. ಸೂ. ೭–೧–೮೯) ಎಂಬುದರಿಂದ ಅಸುಙಾದೇಶ. ಪಾತಿ ಕುಲಮಿತಿ ಪುಮಾನ್ (ತನ್ನ ಕುಲವನ್ನು ಕಾಪಾಡುವವನು) ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಭಂತೇ**—ರಭ ಶಬ್ದೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಪ್ರ ಸಪ್ತಹೋತಾ ಸನಕಾದರೋಚತ ಮಾತುರುಪಸ್ಥೇ ಯದಶೋಚದೂಧನಿ ।
ನ ನಿ ಮಿಷತಿ ಸುರಣೋ ದಿವೇದಿವೇ ಯದಸುರಸ್ಯ ಜಠರಾದಜಾಯತ ॥ ೧೪ ॥

ಪದಪಾಠಃ

ಪ್ರ । ಸಪ್ತಽಹೋತಾ । ಸನಕಾತ್ । ಅರೋಚತ । ಮಾತುಃ । ಉಪಽಸ್ಥೇ । ಯತ್ । ಅಶೋಚತ್ ।
ಊಧನಿ ।
ನ । ನಿ । ಮಿಷತಿ । ಸುಽರಣಃ । ದಿವೇಽದಿವೇ । ಯತ್ । ಅಸುರಸ್ಯ । ಜಠರಾತ್ । ಅಜಾಯತ ॥ ೧೪ ॥

ಸಾಯಣಭಾಷ್ಯಂ

ಸನಕಾತ್ಸನಾತನೋಽಗ್ನಿಃ ಸಪ್ತ ಹೋತಾ । ಸಪ್ತಹೋತಾರೋ ಹೋತ್ರಕಾ ಯಸ್ಯಾಸೌ ಸಪ್ತಹೋತಾ–ಸನ್ ಪ್ರಾರೋಚತ । ಗಾರ್ಹಪತ್ಯಸ್ಥಾನೇಽದೀಪ್ಯತ । ಯದ್ಯದಾ ಮಾತುಃ ಪೃಥಿವ್ಯಾ ಉಪಸ್ಥ ಉತ್ಸಂಗೇ ತತ್ರಾಪ್ಯೂಧನ್ಯೂಧಃಸ್ಥಾನ ಉತ್ತರವೇದ್ಯಾಮಶೋಚತ್ ಅಶೋಭತ ತದಾ ಸೋಽಗ್ನಿಃ ಸುರಣಃ । ಸುಷ್ಠು ರಣಯತಿ ಶಬ್ದಯತೀತಿ ಸುರಣಃ । ಸರ್ವೈಃ ಕಮನೀಯತಯಾ ದೃಶ್ಯಮಾನಃ ಸನ್ ದಿವೇದಿವೇ

ಪ್ರತಿದಿನಂ ನ ನಿಮಿಷತಿ । ನ ನಿದ್ರಾತಿ । ಕಿಂತು ಸರ್ವದಾ ಯಜ್ಞಾರ್ಥಂ ಜಾಗರ್ತ್ಯೇವ । ಯದ್ಯಸ್ಮಾದ-ಸುರಸ್ಯಾಗ್ನೇಃ ಪ್ರೇರಕಸ್ಯಾರಣೀರೂಪಸ್ಯ ಕಾಷ್ಠಸ್ಯ ಜಠರಾದುದರಾದಜಾಯತ ಕರ್ಮಾರ್ಥಮುದಪದ್ಯತ ತಸ್ಮಾನ್ನ ನಿಮಿಷತೀತಿ ಪೂರ್ವೇಣಾನ್ವಯಃ ॥ ಅರೋಚತ । ರುಚ ದೀಪ್ತಾವಿತ್ಯಸ್ಯ ಲಙಿ ರೂಪಂ । ನಿ-ಘಾತಃ । ಅಶೋಚತ್ । ಶುಚ ದೀಪ್ತೌ । ಊಧನಿ । ಸಕಾರಸ್ಯ ನಕಾರಶ್ಛಾಂದಸಃ । ಮಿಷತಿ । ಮಿಷು-ಸೇಚನ ಇತ್ಯಸ್ಯ ಲಟಿ ರೂಪಂ । ಸುರಣಃ । ರಣ ಶಬ್ದೇ । ತತ್ಕರೋತೀತಿ ಣಿಚ್ । ತಸ್ಮಾದಕೃಚ್ಛಾರ್ಥೇ ಖಲ್ । ಲಿತ್ಸ್ವರಃ । ಅಸುರಸ್ಯ । ಅಸು ಕ್ಷೇಪಣ ಇತ್ಯಸ್ಮಾದಸೇರುರನ್ನಿತ್ಯುರನ್ಪ್ರತ್ಯಯಃ । ಅಸ್ಯತೀತ್ಯಸುರಃ ನಿತ್ಸ್ವರಃ । ಜಠರಾತ್ । ಜನೀ ಪ್ರಾದುರ್ಭಾವ ಇತ್ಯಸ್ಮಾತ್ ಜನೇರರಷ್ಠ ಚ । ಉ ೫-೩೮ । ಇತ್ಯರಪ್ರ-ತ್ಯಯಃ । ಥಕಾರಶ್ಛಾಂತಾದೇಶಃ । ಪ್ರತ್ಯಯಸ್ವರಃ । ಅಜಾಯತ । ಜನೀ ಪ್ರಾದುರ್ಭಾವ ಇತ್ಯಸ್ಯ ಲಙಿ ಶ್ಯನಿ ಜ್ಞಾಜನೋರ್ಜೇತಿ ಧಾತೋರ್ಜಾದೇಶಃ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ಸನಕಾತ್**—ಸನಾತನನಾದ ಅಗ್ನಿಯು । **ಸಪ್ತಹೋತಾ**—ಸಪ್ತಸಂಖ್ಯಾಕವಾದ ಹೋತೃಗಳುಳ್ಳವನಾಗಿ । **ಪ್ರಾರೋಚತ**—ಪ್ರಕಾಶಿಸಿದನು । **ಯತಃ**—ಯಾವಾಗ । **ಮಾತುಃ**—ಜನನಿಯಾದ ಪೃಥಿವಿಯ । **ಉಪಸ್ಥೇ**—ತೊಡೆಯರೂಪವಾದ । **ಊಧನಿ**—ಉತ್ತರವೇದಿಸ್ಥಾನದಲ್ಲಿ । **ಅಶೋಚತ್**—ಪ್ರಕಾಶಿಸಿದನೋ ಆಗ । **ಸುರಣಃ**—ಶಬ್ದಮಾಡುತ್ತಾನೆ । **ಯತ್**—ಯಾವ ಕಾರಣದಿಂದ । **ಅಸುರಸ್ಯ**—ಅರಣೀರೂಪವಾದಕಾಷ್ಠದ । **ಜಠರಾತ್**—ಉದರದಿಂದ । **ಅಜಾಯತ**—ಉತ್ಪನ್ನನಾದನೋ (ಆದುದರಿಂದ) । **ದಿವೇದಿವೇ**—ಪ್ರತಿದಿನವೂ । **ನ ನಿಮಿಷತಿ**—ನಿದ್ರೆಮಾಡದೇ ಯಜ್ಞಾರ್ಥವಾಗಿ ಎಚ್ಚರವಾಗಿಯೇ ಇದ್ದಾನೆ ।

ಭಾವಾರ್ಥ

ಸನಾತನನಾದ ಅಗ್ನಿಯು ಸಪ್ತಸಂಖ್ಯಾಕಗಳಾದ ಹೋತೃಗಳುಳ್ಳವನಾಗಿ ಪ್ರಕಾಶಿಸಿದನು. ಯಾವಾಗ ಅಗ್ನಿಯು ಜನನಿಯಾದ ಪೃಥ್ವಿಯ ಕೆಚ್ಚಲುರೂಪವಾದ ಉತ್ತರವೇದಿಸ್ಥಾನದಲ್ಲಿ ಪ್ರಕಾಶಿಸಿದನೋ ಆಗ ಶಬ್ದಮಾಡುತ್ತಾನೆ. ಯಾವ ಕಾರಣದಿಂದ ಅರಣೀರೂಪವಾದ ಕಾಷ್ಠದ ಉದರದಿಂದ ಉತ್ಪನ್ನನಾದನೋ ಆದುದರಿಂದ ಪ್ರತಿದಿನವೂ ನಿದ್ರೆಮಾಡದೇ ಯಜ್ಞಾರ್ಥವಾಗಿ ಎಚ್ಚರವಾಗಿಯೇ ಇದ್ದಾನೆ.

## English Ttranslation

Agni, who has seven ministering priests, shines eternally : when he has blazed upon the bosom and lap of his mother ( earth ), he is vociferous ( with delight ) : day by day he never slumbers after he is born from the interior of the ( spark ) emitting wood.

ವಿಶೇಷವಿಷಯಗಳು

**ಸನಕಾತ್ ಸಪ್ತಹೋತಾ ಪ್ರರೋಚತ**—**ಸನಕಾತ್** ಎಂಬ ಪದಕ್ಕೆ **ಸನಾತನ** ಬಹಳ ಕಾಲದಿಂದಲೂ ಇರುವವನು ಎಂದು ಅರ್ಥವನ್ನು ವಿವರಿಸಿ, ಚಿರಂತನನಾಗಿರುವ ಅಗ್ನಿಯು ಸಪ್ತಹೋತೃವಾಗಿ ಯಾಗಶಾಲೆಯಲ್ಲಿ ಗಾರ್ಹಪತ್ಯವೆಂಬ ಪ್ರದೇಶದಲ್ಲಿ ಪ್ರಕಾಶಿಸಿದನು ಎಂದು ಅರ್ಥವನ್ನು ವರ್ಣಿಸಿದೆ.

ಸಪ್ತಹೋತಾ ಎಂಬ ಪದವು ಸಪ್ತಹೋತಾರೋ ಹೋತೃಕಾ ಯಸ್ಯ ಎಂದು ವಿವೃತವಾಗಿ ಅಗ್ನಿಯು ಹೋತೃ, ಅಧ್ವರ್ಯು, ಇವರೇ ಮೊದಲಾದ ಏಳು ಜನ ಋತ್ವಿಜರನ್ನೂ ಹೋಮಮಾಡುವವರನ್ನಾಗಿ ಹೊಂದಿರುವನೆಂದು ವಿವರಿಸಿದೆ. ಯಾಸ್ಕರು—

**ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ |**
**ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪಾಷು ಜನ್ಮಸು ||**
(ಋ. ಸಂ. ೧೦-೬೪-೫)

ಎಂಬ ಋಕ್ಕನ್ನು ಉದಹರಿಸಿ, **ಸಪ್ತಹೋತಾ ಸಪ್ತಾಸ್ಮೈ ರಶ್ಮಯೋ ರಸಾನಭಿ ಸನ್ನಾಮಯಂತಿ, ಸಪ್ತೈನಮೃಷಯಸ್ಸ್ತುವಂತೀತಿ ವಾ** | ಎಂದು ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು ಸಪ್ತರಶ್ಮಯಃ ಅಸ್ಮೈ ರಸಾನಭಿಸನ್ನಾಮಯಂತಿ ತದಸ್ಯ ಸಪ್ತಹೋತೃತ್ವಂ | ಏಳು ಕಿರಣಗಳೂ ಉದಕಗಳನ್ನು ಹೀರಲು ಅವಕಾಶಮಾಡುತ್ತವೆಯಾಗಿ ಸಪ್ತಹೋತೃತ್ವವು ಉಂಟಾಗಿರುವುದು. ಅಥವಾ **ವಸಿಷ್ಠಾದ್ಯಾಃ ಸಪ್ತಋಷಯಃ ಏನಮಾಹ್ವಯಂತಿ, ನಮಂತಿ, ಸ್ತುವಂತಿ ತದ್ವಾ ಅಸ್ಯ ಸಪ್ತಹೋತೃತ್ವಂ** (ನಿ. ೧೧-೨೩) ವಸಿಷ್ಠನೇ ಮೊದಲಾದ ಏಳುಜನ ಋಷಿಗಳೂ ಈ ಅಗ್ನಿಯನ್ನು ಆಹ್ವಾನಮಾಡಿ, ನಮಸ್ಕಾರಮಾಡಿ, ಸ್ತೋತ್ರಮಾಡುವಕಾರಣದಿಂದ ಅಗ್ನಿಗೆ ಸಪ್ತಹೋತೃತ್ವವೂ ಉಪಪನ್ನವಾಗಿರುವುದು ಎಂದು ವಿವರಿಸಿದ್ದಾರೆ.

**ಮಾತುರುಪಸ್ಥೇ ಅಶೋಚದೂಧನಿ—ಪೃಥಿವ್ಯಾಃ ಉತ್ಸಂಗೇ ತತ್ರಾಪಿ ಊಧಸ್ಸ್ಥಾನೇ ಉತ್ತರವೇದ್ಯಾಂ ಅಶೋಭತ** | ಯಾಸ್ಕರು ಮಾತೃಶಬ್ದವನ್ನು ನದೀನಾಮಗಳಲ್ಲಿ (ನಿ. ೨-೨೪) ಪಾಠಮಾಡಿದ್ದಾರೆ. **ಮಾತಾ ಅಂತರಿಕ್ಷಂ ನಿರ್ಮೀಯಂತೇ ಅಸ್ಮಿನ್ ಭೂತಾನಿ** (ನಿ. ೨-೮) ಎಂದು ವ್ಯಾಖ್ಯಾನಮಾಡಿ ಅಂತರಿಕ್ಷವೆಂಬ ಅರ್ಥದಲ್ಲಿ ಪ್ರಯೋಗವನ್ನು ವಿವರಿಸಿದ್ದಾರೆ. ಮತ್ತು

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ |**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥೇ ||**
(ಋ. ಸಂ. ೩-೮-೧)

ಎಂಬ ಋಕ್ಕಿನಲ್ಲಿ **ಮಾತುಃ ಪೃಥಿವ್ಯಾಃ ಉಪಸ್ಥೇ ಉಪರಿ** ಎಂದು ವ್ಯಾಖ್ಯಾನಮಾಡಿದ್ದಾರೆ. ಉಪಸ್ಥೇ ಎಂಬ ಪದಕ್ಕೆ ಉಪರಿ ಎಂದು ಅರ್ಥವನ್ನು ಹೇಳಿರುವಂತೆ, "ಅಪಾಮುಪಸ್ಥೇ" (ಋ. ಸಂ. ೬-೮-೪) ಎಂಬಲ್ಲಿ "ಅಪಾಮುಪಸ್ಥ ಉಪಸ್ಥಾನೇ **ಯತ್ರೋಪಗಮ್ಯ ತಿಷ್ಠಂತ್ಯಾಪಃ ಸೋಽಪಾಮುಪಸ್ಥಃ ಅಂತರಿಕ್ಷಲೋಕಃ** ಉದಕಗಳು ಒಟ್ಟಾಗಿ ಸೇರುವ ಅಂತರಿಕ್ಷಪ್ರದೇಶವೆಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಗೋರೂಧ ಉದ್ಧತತರಂ ಭವತಿ ಉಪೋನ್ನದ್ಧಮಿತಿ ವಾ ಸ್ನೇಹಾನುಪ್ರದಾನಸಾಮಾನ್ಯಾದ್ರಾತ್ರಿರಪ್ಯೂಧ ಉಚ್ಯತೇ** (ನಿ. ೬-೧೯) ಗೋವಿನ ಊಧಃ ಪ್ರದೇಶವು ಇತರ ಅಂಗಗಳಿಗಿಂತಲೂ ಉನ್ನತವಾಗಿರುವುದು. ಯಾವುದೋ ಒಂದು ವಿಧದಿಂದ ಗೋವಿನ ಉದರಪ್ರದೇಶದಲ್ಲಿ ಸಂಬದ್ಧವಾಗಿರುವುದೆಂದೂ ಊಧಶ್ಶಬ್ದಾರ್ಥವು ಯಾಸ್ಕರಿಂದ ವಿವೃತವಾಗಿರುವುದು. ಮತ್ತೂ ಓಷಧಿ, ವನಸ್ಪತಿಗಳಿಗೆ ವೃದ್ಧಿಯಾಗಲು ಅನುಕೂಲವಾಗುವಂತೆ ಹಿಮೋದಕವನ್ನು ಸುರಿಸುವುದರಿಂದ ರಾತ್ರಿಯೂ ಊಧಶ್ಶಬ್ದದಿಂದ ಬೋಧ್ಯವಾಗಿರುವುದೆಂದೂ ಉಕ್ತವಾಗಿದೆ. ಇಲ್ಲಿ ಸಾಯಣರು ಅಗ್ನಿಯು ಅರಣಿಗಳಲ್ಲಿ ಮಥನದಿಂದ ಉತ್ಪನ್ನನಾಗಿ, ಪೃಥಿವಿಯ ಉತ್ಸಂಗರೂಪವಾಗಿರುವ ಅಲ್ಲಿಯೂ ಊಧಸ್ಸಿನ ಸ್ಥಾನವಾದ ಯಾಗಶಾಲೆಯ ಉತ್ತರವೇದಿಯಲ್ಲಿ ಪ್ರಕಾಶಿಸುವಾಗ, **ಸುರಣಃ** ಮನೋಹರವಾದ ಶಬ್ದವನ್ನು ಮಾಡು

ವನು. ಮತ್ತು **ಸರ್ವೈಃ ಕಮನೀಯತಯಾ ದೃಶ್ಯಮಾನಃ** ಎಲ್ಲರಿಗೂ ಮನೋಹರನಾಗಿ ಕಾಣುತ್ತಿರುವನು ಎಂದೂ, **ದಿವೇ ದಿವೇ ನ ನಿಮಿಷತಿ** ಪ್ರತಿದಿನದಲ್ಲಿಯೂ ಅಂದರೆ ಯಾವಾಗಲೂ ಯಾಗಶಾಲೆಯಲ್ಲಿ ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಜಾಗೃತನಾಗಿ (ಎಚ್ಚರದಿಂದ) ಇರುವನು ಎಂದೂ ಅರ್ಥವನ್ನು ವಿವರಿಸಿದ್ದಾರೆ.

**ಸುರಣಃ**—ಈ ಶಬ್ದಕ್ಕೆ ಸಾಯಣರು **ಸುಷ್ಠು ರಣಯತಿ ಶಬ್ದಯತೀತಿ ಸುರಣಃ** ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ಯಾಸ್ಕರು

**ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ ।**
**ಆ ಯಸ್ಮಿನ್ ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ॥**

(ಋ. ಸಂ. ೫-೫೬-೮)

ಎಂಬಲ್ಲಿ—**ಸುರಣಾನಿ ಸುಷ್ಠು ರಮಣೀಯಾನಿ ಉದಕಾನಿ** ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ಅಸುರಸ್ಯ ಜಠರಾದಜಾಯತ**—ಯಾಸ್ಕರು — **ಅಸುರ**ಶಬ್ದವನ್ನು ಮೇಘನಾಮಗಳಲ್ಲಿ (ನಿ. ೧-೧೦) ಪಾಠಮಾಡಿದ್ದಾರೆ. ಇದರಿಂದ ಮೇಘವೆಂದು ಅರ್ಥವೂ ಆಗಬಹುದು. **ಅಸುರಾಃ ಅಸುರತಾಃ ಸ್ಥಾನೇಷ್ವಸ್ತಾಃ, ಸ್ಥಾನೇಭ್ಯ ಇತಿವಾ, ಅಪಿವಾ ಅಸುರಿತಿ ಪ್ರಾಣನಾಮಾಸ್ತಃ ಶರೀರೇ ಭವತಿ ತೇನ ತದ್ವಂತಃ । ಸೋರ್ದೇವಾನಸೃಜತ ತತ್ ಸುರಾಣಾಂ ಸುರತ್ವಂ ಅಸೋರಸುರಾನಸೃಜತ ತದಸುರಾಣಾಮಸುರತ್ವಮಿತಿ ವಿಜ್ಞಾಯತೇ** ಎಂದು ಅಸುರ ಶಬ್ದಾರ್ಥವನ್ನು ಅಸುರರು ಎಂದೂ ಅರ್ಥವಾಗಬಹುದು ಎಂದು ಹೇಳಿ ವಿವರಿಸಿದ್ದಾರೆ.

ಸಾಯಣರು **ಅಗ್ನೇಃಪ್ರೇರಕಸ್ಯ ಅರಣೀರೂಪಸ್ಯ ಕಾಷ್ಠಸ್ಯ** ಅಗ್ನಿಯ ಅಭಿವ್ಯಕ್ತಿಗೆ ಕಾರಣವಾಗಿರುವ ಕಾಷ್ಠವಿಶೇಷವು ಅರಣಿಯರೂಪದಿಂದ ಇರುವುದು ಎಂದು ಅಸುರಶಬ್ದಾರ್ಥವನ್ನು ವರ್ಣಿಸಿ, ಅಗ್ನಿಯು ಈ ಅರಣಿಯ ಮಧ್ಯಪ್ರದೇಶದಿಂದ ಯಜ್ಞಕರ್ಮಗಳ ಅನುಷ್ಠಾನಕ್ಕಾಗಿ ಉತ್ಪನ್ನನಾಗಿರುವ ಕಾರಣ ಯಾವಾಗಲೂ ಜಾಗೃತನಾಗಿರುವನು ಎಂದು ಅರ್ಥವನ್ನು ವರ್ಣಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಅರೋಚತ**—ರುಚ ದೀಪ್ತೌ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಶೋಚತ್**—ಶುಚ ದೀಪ್ತೌ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಊಧನಿ**—ಊಧಸ್ ಶಬ್ದ. ಸಪ್ತಮೀ ಏಕವಚನಾಂತರೂಪ. ಛಾಂದಸವಾಗಿ ಸಕಾರಕ್ಕೆ ನಕಾರಾದೇಶ ಬಂದಿರುತ್ತದೆ.

**ಮಿಷತಿ**—ಮಿಷು ಸೇಚನೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸುರಣಃ**—ರಣ ಶಬ್ದೇ. ಧಾತು. **ತತ್ಕರೋತಿ ತದಾಚಷ್ಟೇ** ಎಂಬುದರಿಂದ ಇದರಮೇಲೆ ಣಿಚ್. ಣಿಜಂತದ ಮೇಲೆ **ಈಷದ್ದುಃಸುಷು**— (ಪಾ. ಸೂ. ೩-೩-೧೨೬) ಎಂಬುದರಿಂದ ಸು ಉಪಪದವಾಗಿರುವಾಗ ಖಲ್ ಪ್ರತ್ಯಯ.

ಣೇರನಿಟಿ (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಪ್ರತ್ಯಯ ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯವ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ದಿವೇದಿವೇ—ನಿತ್ಯವೀಪ್ಸಯೋಃ (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ ಬಂದಾಗ ಅನು-ದಾತ್ತಂಚ (ಪಾ. ಸೂ. ೮-೧-೩) ಎಂಬುದರಿಂದ ಪರಭಾಗವು ಸರ್ವಾನುದಾತ್ತವಾಗುತ್ತದೆ.

ಅಸುರಸ್ಯ—ಅಸು ಕ್ಷೇಪಣೇ. ಧಾತು. ಅಸೇರುರನ್ (ಉ. ಸೂ. ೧-೪೨) ಎಂಬುದರಿಂದ ಉರನ್‌ಪ್ರತ್ಯಯ. ಅಸ್ಯತಿ ಇತಿ ಅಸುರಃ ಪ್ರತ್ಯಯನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

ಜಠರಾತ್—ಜನೀ ಪ್ರಾದುರ್ಭಾವೇ. ಧಾತು. ಜನೇರರಷ್ಠಶ್ಚ (ಉ. ಸೂ. ೫-೭೧೬) ಎಂಬುದರಿಂದ ಅರ ಪ್ರತ್ಯಯ. ಧಾತುವಿನ ಅಂತ್ಯಕ್ಕೆ ಠಕಾರಾದೇಶ. ಜಠರ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಜಾಯತ—ಜನೀ ಪ್ರಾದುರ್ಭಾವೇ. ಧಾತು. ದಿವಾದಿ. ಲಙ್‌ಪ್ರಥಮಪುರುಷ ಏಕವಚನಾಂತ ರೂಪ. ಜ್ಞಾಜನೋರ್ಜಾ (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. ಶ್ಯನ್ ವಿಕರಣ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಸಂಹಿತಾಪಾಠಃ

ಅಮಿತ್ರಾಯುಧೋ ಮರುತಾಮಿವ ಪ್ರಯಾಃ ಪ್ರಥಮಜಾ ಬ್ರಹ್ಮಣೋ ವಿಶ್ವ-
ಮಿದ್ವಿದುಃ ।
ದ್ಯುಮ್ನವದ್ಬ್ರಹ್ಮ ಕುಶಿಕಾಸ ಏರಿರ ಏಕಏಕೋ ದಮೇ ಅಗ್ನಿಂ ಸಮೀಧಿರೇ ॥ ೧೩ ॥

ಪದಪಾಠಃ

ಅಮಿತ್ರಽಯುಧಃ । ಮರುತಾಂಽಇವ । ಪ್ರಽಯಾಃ । ಪ್ರಥಮಽಜಾಃ । ಬ್ರಹ್ಮಣಃ । ವಿಶ್ವಂ । ಇತ್ । ವಿದುಃ । ದ್ಯುಮ್ನಽವತ್ । ಬ್ರಹ್ಮ । ಕುಶಿಕಾಸಃ । ಆ । ಈರಿರೇ । ಏಕಃಽಏಕಃ । ದಮೇ । ಅಗ್ನಿಂ । ಸಂ । ಈಧಿರೇ ॥

ಸಾಯಣಭಾಷ್ಯಂ

ಅಮಿತ್ರಾಯುಧೋಽಮಿತ್ರೈಃ ಕರ್ಮವಿಘ್ನಕಾರಿಭಿರಸುರೈಃ ಸಹ ಯೋದ್ಧಾರಃ । ಯದ್ವಾ ಅಮಿತ್ರಾಣಿ ಪಾಪಾನಿ । ತೈಃ ಸಹ ಯೋದ್ಧಾರಃ । ತತ್ರ ದೃಷ್ಟಾಂತಃ । ಮರುತಾಮಿವ ಪ್ರಯಾ ಇತಿ । ಯಥಾ ಮರುತಾಂ ದೇವಾನಾಂ ಪ್ರಯಾಃ ಪ್ರಕರ್ಷೇಣ ಶತ್ರೂನಭಿಯಾಂತೀತಿ ಪ್ರಯಾ ಬಲಾನಿ ಶತ್ರೂಣಾಂ ಹಂತೄಣಿ ತದ್ವತ್ಕರ್ಮವಿಘ್ನಕಾರಿಣಾಂ ಪಾಪಾನಾಂ ಚ ಹಂತಾರೋ ಬ್ರಹ್ಮಣಃ ಸರ್ವಸ್ಯ ಜಗತಃ ಸ್ರಷ್ಟುಃ ಪ್ರ-

ಥಮಜಾಃ ಪ್ರಥಮಮುತ್ಪನ್ನಾಃ ಕುಶಿಕಾಸಃ ಕುಶಿಗೋತ್ರೋತ್ಪನ್ನಾ ಋಷಯೋ ವಿಶ್ವಂ ಸ್ಥಾವರಜಂಗ-ಮಾತ್ಮಕಂ ಸರ್ವಂ ಜಗದ್ವಿದುರಿತ್ | ಜಾನಂತ್ಯೇವ | ತೇಽಮೀ ಕುಶಿಕಾದ್ಯುಮ್ನವದ್ಧವಿರ್ಯುಕ್ತಂ ಬ್ರಹ್ಮ ಸ್ತೋತ್ರಮೇರಿರೇ | ಅಗ್ನಯ ಆ ಸಮಂತಾತ್ಪ್ರೇರಯತಿ | ತೇ ಚ ದಮೇ ಸ್ವೇ ಸ್ವೇ ಗೃಹ ಏಕ ಏಕ ಏ-ಕೈಕೋ ಭೂತ್ವಾಗ್ನಿಂ ಸಮೀಧಿರೇ | ಆಜ್ಯಾದ್ಯಾಹುತಿಭಿಃ ಸಮ್ಯಗ್ದೀಪಯಂತಿ|| ಅಮಿತ್ರಾಯುಧಃ | ಯುಧ ಸಂಪ್ರಹಾರೇ| ಕ್ವಿಪ್| ಕೃದುತ್ತರಪದಪ್ರಕೃತಿಸ್ವರತ್ವೇನ ... ಸಂಹಿತಾಯಾಂ ಪೂರ್ವಪದಸ್ಯ ದೀರ್ಘಶ್ಛಾಂದಸಃ| ಪ್ರಯಾಃ ಯಾ ಪ್ರಾಪಣೇ.| ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ | ಪ್ರಥಮಜಾಃ | ಜನೀ ಪ್ರಾದುರ್ಭಾವೇ | ಜನ ಸನೇತ್ಯಾದಿನಾ ವಿಟ್ | ವಿಡ್ವನೋರಿತ್ಯಾತ್ವಂ | ವಿದುಃ | ವಿದೇರ್ಲಟಿ ವಿದೋ ಲಟೋ ವೇತಿ ಝೇ-ರುಸಾದೇಶಃ | ಈರಿರೇ | ಈರ ಗತಾವಿತ್ಯಸ್ಯ ಲಿಟಿ ರೂಪಂ | ಮಂತ್ರತ್ವಾದಾಮ್ನ ಭವತಿ | ದಮೇ | ದಮು ಉಪಶಮನೇ | ಕರಣೇ ಘಞ್ | ನೋದಾತ್ತೋಪದೇಶಸ್ಯೇತಿ ವೃದ್ಧಿಪ್ರತಿಷೇಧಃ | ಞಿತ್ಸ್ವರಃ | ಈಧಿರೇ | ಞಿಇಂಧೀ ದೀಪ್ತಾವಿತ್ಯಸ್ಯ ಲಿಟಿ ಇಂಧಿಭವತಿಭ್ಯಾಂ ಚೇತಿ ಕಿದ್ವದ್ಭಾವಾನ್ನಕಾರಲೋಪಃ | ನಿಘಾತಃ ||

ಪ್ರತಿಪದಾರ್ಥ

**ಮರುತಾಂ ಇವ**—ಮರುತ್ತಗಳ ಸಂಘವು ಶತ್ರುಗಳನ್ನು ಸದೆಬಡಿಯುವಂತೆ | **ಪ್ರಯಾಃ**—ಶತ್ರುಗಳನ್ನು ಹೊಡೆದೋಡಿಸುತ್ತಾ | **ಅಮಿತ್ರಾಯುಧಃ**—ಕರ್ಮವಿಘ್ನಕಾರಿಗಳಾದ ಅಸುರರೊಂದಿಗೆ ಯುದ್ಧಮಾಡುವವರೂ | **ಬ್ರಹ್ಮಣಃ**—ಜಗತ್ಸ್ರಷ್ಟೃವಾದ ಬ್ರಹ್ಮನಿಗೆ | **ಪ್ರಥಮಜಾಃ**—ಮೊದಲು ಹುಟ್ಟಿದವರೂ ಆದ | **ಕುಶಿಕಾಸಃ**—ಕುಶಿಕಗೋತ್ರೋತ್ಪನ್ನರಾದ ಋಷಿಗಳು | **ವಿಶ್ವಂ**—ಸ್ಥಾವರಜಂಗಮಾತ್ಮಕವಾದ ಸಕಲಜಗತ್ತನ್ನೂ | **ವಿದುಃ ಇತ್**—ತಿಳಿದೇ ಇದ್ದಾರೆ (ಅವರು) | **ದ್ಯುಮ್ನವತ್**—ಹವಿಸ್ಸಿನಿಂದ ಕೂಡಿದ | **ಬ್ರಹ್ಮ**—ಸ್ತೋತ್ರವನ್ನು | **ಏರಿರೇ**—ಅಗ್ನಿಯ ಸುತ್ತಲೂ ಪಠಿಸುತ್ತಾರೆ (ಮತ್ತು) | **ದಮೇ**—ಅವರವರ ಗೃಹದಲ್ಲಿ | **ಏಕಏಕಃ**—ಪ್ರತಿಯೊಬ್ಬ ಋಷಿಯೂ | **ಅಗ್ನಿಂ**—ಅಗ್ನಿಯನ್ನು | **ಸಮೀಧಿರೇ**—ಪೂರ್ಣವಾಗಿ ಪ್ರಜ್ವಲಿಸುವಂತೆ ಮಾಡುತ್ತಾರೆ ||

ಭಾವಾರ್ಥ

ಮರುತ್ತಗಳ ಸಂಘವು ಶತ್ರುಗಳನ್ನು ಸದೆಬಡಿಯುವಂತೆ ಶತ್ರುಗಳನ್ನು ಹೊಡೆದೋಡಿಸುತ್ತಾ ಕರ್ಮವಿಘ್ನಕಾರಿಗಳಾದ ಅಸುರರೊಂದಿಗೆ ಯುದ್ಧಮಾಡುವವರೂ, ಜಗತ್ಸ್ರಷ್ಟೃವಾದ ಬ್ರಹ್ಮನಿಗೆ ಪ್ರಥಮತಃ ಉತ್ಪನ್ನರಾದವರೂ ಆದ ಕುಶಿಕಗೋತ್ರೋತ್ಪನ್ನರಾದ ಋಷಿಗಳು ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತನ್ನೂ ತಿಳಿದೇ ಇದ್ದಾರೆ. (ಅವರು) ಹವಿಸ್ಸಿನಿಂದ ಕೂಡಿದ ಸ್ತೋತ್ರವನ್ನು ಅಗ್ನಿಯ ಸುತ್ತಲೂ ಪಠಿಸುತ್ತಾರೆ. ಮತ್ತು ಅವರವರ ಗೃಹದಲ್ಲಿ ಪ್ರತಿಯೊಬ್ಬ ಋಷಿಯೂ ಅಗ್ನಿಯನ್ನು ಪೂರ್ಣವಾಗಿ ಪ್ರಜ್ವಲಿಸುವಂತೆ ಮಾಡುತ್ತಾರೆ.

English Translation

The Kushikas, the first-born of Brahma, armed against enemies like the energies of the Maruts, comprehend the universe : they have uttered the prayer accompanied by the oblation : they have one by one lighted Agni in this dwelling.

ವಿಶೇಷವಿಷಯಗಳು.

ಈ ಋಕ್ಕಿನಲ್ಲಿ ಕುಶಿಕಗೋತ್ರೋತ್ಪನ್ನರಾದ ಋಷಿಗಳ ಪ್ರಭಾವವು ಉಕ್ತವಾಗಿದೆ, ಮತ್ತು ಅವರುಗಳು ಅಗ್ನಿಯನ್ನು (ಉಪಾಸನೆ ಮಾಡುವ) ಅರ್ಚನೆಮಾಡುವ ವಿಷಯವೂ ಉಕ್ತವಾಗಿದೆ.

**ಮರುತಾಮಿವ ಪ್ರಯಾಃ ಅಮಿತ್ರಾಯುಧಃ—ಮರುತಾಂ ದೇವಾನಾಂ ಪ್ರಕರ್ಷೇಣ ಶತ್ರೂನಭಿಯೊಂತೀತಿ ಪ್ರಯಾಃ ಬಲಾನಿ ಶತ್ರೂಣಾಂ ಹಂತ್ರ್ಯಾಣಿ ತದ್ವತ್ ಕರ್ಮವಿಘ್ನಕಾರಿಣಾಂ ಪಾಪಾನಾಂ ಹಂತಾರಃ** ದೇವತೆಗಳ ಸೇನೆಗಳು ಶತ್ರುಗಳನ್ನು ಅತಿಶಯವಾಗಿ ನಾಶಮಾಡುವಹಾಗೆ ಸತ್ಕರ್ಮಗಳ ಆಚರಣೆಯಲ್ಲಿ ವಿಘ್ನವನ್ನು ಉಂಟುಮಾಡುವ ಪಾಪಗಳನ್ನೂ ನಾಶಪಡಿಸುವುವು. ಇದರಂತೆಯೇ ಕುಶಿಕಗೋತ್ರದಲ್ಲಿ ಉತ್ಪನ್ನರಾದವರು **ಕರ್ಮವಿಘ್ನಕಾರಿಭಿರಸುರೈಃ ಸಹ ಯೋದ್ಧಾರಃ, ಯದ್ವಾ ಅಮಿತ್ರಾಣಿ ಪಾಪಾನಿ ತೈಸ್ಸಹ ಯೋದ್ಧಾರಃ** | ಕರ್ಮಗಳಿಗೆ ವಿಘ್ನವನ್ನು ಉಂಟುಮಾಡುವ ಅಸುರರ ಸಂಗಡ, ಅಥವಾ ಪಾಪಗಳ ಸಂಗಡ ಯುದ್ಧಮಾಡಿ, ಅವರನ್ನು ನಾಶಮಾಡುವರು ಎಂದೂ, ವರ್ಣಿಸಿ, ದೇವತೆಗಳ ಸೇನೆಯಹಾಗೆ ಇರುವ ಮಾಹಾತ್ಮ್ಯಪೂರಿತರಾದವರೆಂದು ವಿವರಿಸಿದೆ.

**ಬ್ರಹ್ಮಣಃ ಪ್ರಥಮಜಾಃ ಕುಶಿಕಾಸಃ ವಿಶ್ವಂ ವಿದುರಿತ್—ಸರ್ವಸ್ಯ ಜಗತಃ ಸ್ರಷ್ಟುಃ ಪ್ರಥಮಮುತ್ಪನ್ನಾಃ ಕುಶಿಕಗೋತ್ರೋತ್ಪನ್ನಾ ಋಷಯಃ ವಿಶ್ವಂ ಸ್ಥಾವರಜಂಗಮಾತ್ಮಕಂ ಸರ್ವಂ ಜಗತ್ ಜಾನಂತ್ಯೇವ.** ಕುಶಿಕಗೋತ್ರೋತ್ಪನ್ನರಾದ ಋಷಿಗಳು ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡಿರುವ ಬ್ರಹ್ಮನಿಂದ ಮೊದಲು ಉತ್ಪನ್ನರಾಗಿ, ಸ್ಥಾವರಜಂಗಮರೂಪದಿಂದ ಇರುವ (ಜಗತ್ತೆಲ್ಲವನ್ನೂ) ಜಗತ್ತಿನ ಸ್ವರೂಪವೆಲ್ಲವನ್ನೂ ತಿಳಿದು ಇರುವರು ಎಂದು ಇವರ ಉತ್ಪತ್ತಿಯ ವರ್ಣನೆಯ ಮೂಲಕವಾಗಿ ಇವರ ಪ್ರಭಾವವು ಸೂಚಿತವಾಗಿದೆ.

**ದ್ಯುಮ್ನವತ್ ಬ್ರಹ್ಮ ಏರಿರೇ—**ದ್ಯುಮ್ನಶಬ್ದವೂ ಬ್ರಹ್ಮಶಬ್ದವೂ ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. **ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ** ಎಂದು ವ್ಯಾಖ್ಯಾತವಾಗಿದೆ. **ತೇಷಾಮಿ ಕುಶಿಕಾಃ ಹವಿರ್ಯುಕ್ತಂ ಬ್ರಹ್ಮ ಸ್ತೋತ್ರಂ ಅಗ್ನಯೇ ಆ ಸಮಂತಾತ್ ಪ್ರೇರಯಂತಿ** ಈ ಕುಶಿಕಗೋತ್ರದಲ್ಲಿ ಉತ್ಪನ್ನರಾದ ಋಷಿಗಳು ಅಗ್ನಿಯನ್ನು ಸ್ತೋತ್ರಗಳಿಂದ ಸ್ತುತಿಮಾಡಿ, ಹವಿಸ್ಸುಗಳನ್ನು ಅಗ್ನಿಗಾಗಿ ಅರ್ಪಿಸುವರು ಎಂದು ಅರ್ಥವನ್ನು ವಿವರಿಸಿದೆ.

**ದಮೇ ಏಕಏಕಃ ಅಗ್ನಿಂ ಸಮೀಧಿರೇ—ಸ್ವೇ ಸ್ವೇ ಗೃಹೇ ಏಕೈಕಃ ಭೂತ್ವಾ ಅಗ್ನಿಂ ಆಜ್ಯಾದ್ಯಾಹುತಿಭಿಃ ಸಮ್ಯಕ್ ದೀಪಯಂತಿ** | ಈ ಋಷಿಗಳು ತಮ್ಮತಮ್ಮ ಮನೆಗಳಲ್ಲಿ ಬೇರೆಬೇರೆಯಾಗಿ ಪ್ರತಿಯೊಬ್ಬರೂ ಅಗ್ನಿಯನ್ನು ಆಜ್ಯವೇ ಮೊದಲಾದ ಹವಿಸ್ಸುಗಳಿಂದ ಅಗ್ನಿಯನ್ನು ಪೂಜಿಸಿ, ತೃಪ್ತಿಗೊಳಿಸುವರು ಎಂದು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಅಮಿತ್ರಾಯುಧಃ—**ಯುಧ ಸಂಪ್ರಹಾರೇ. ಧಾತು. ಕ್ವಿಪ್ ಪ್ರತ್ಯಯ. **ಅಮಿತ್ರೈಃ ಯುಧ್ಯಂತಿ ಇತಿ ಅಮಿತ್ರಾಯುಧಃ. ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೯-೨-೧೩೯) ಎಂಬುವರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪ್ರಯಾಃ—**ಯಾ ಪ್ರಾಪಣೇ ಧಾತು. **ಅನ್ಯೇಭ್ಯೋಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವಿಚ್ ಪ್ರತ್ಯಯ. ಗತಿಪೂರ್ವಪದವಾಗಿರುವುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪ್ರಥಮಜಾಃ—**ಜನೀ ಪ್ರಾದುರ್ಭಾವೇ. ಧಾತು. **ಜನಸನಖ—**(ಪಾ. ಸೂ. ೬-೪-೪೨) ಎಂಬುವರಿಂದ ವಿಟ್. ಇದು ಪರವಾದಾಗ **ವಿಡ್ವನೋರನುನಾಸಿಕಸ್ಯಾತ್**(ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿಗೆ ಆತ್ವ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಿದುಃ—**ವಿದ ಜ್ಞಾನೇ. ಧಾತು, ಲಟ್. **ವಿದೋಲಟೋವಾ** (ಪಾ. ಸೂ. ೩-೪-೮೩) ಎಂಬುದರಿಂದ ಝಿಗೆ ಉಸಾದೇಶ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಈರಿರೇ**—ಈರ ಗತೌ. ಧಾತು. ಲಿಟ್. ಇಜಾದಿಯಾದರೂ **ಅಮಂತ್ರೇ** (ಪಾ. ಸೂ. ೩-೧-೩೫) ಎಂಬುದರಲ್ಲಿ ನಿಷೇಧಮಾಡಿರುವುದರಿಂದ ಆಮ್ ಬರುವುದಿಲ್ಲ. ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದಮೇ**—ದಮು ಉಪಶಮೇ. ಧಾತು. ಕರಣಾರ್ಥತೋರುವಾಗ ಘಞ್‌ಪ್ರತ್ಯಯ. **ನೋದಾತ್ತೋಪದೇಶಸ್ಯ**—(ಪಾ. ಸೂ. ೭-೩-೩೪) ಎಂಬುದರಿಂದ ವೃದ್ಧಿಪ್ರತಿಷೇಧ ಬರುತ್ತದೆ. ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಈಧಿರೇ**—ಞಿಇಂಧೀ ದೀಪ್ತೌ. ಧಾತು. ಲಿಟ್. ಪ್ರಥಮಪುರುಷಬಹುವಚನಕ್ಕೆ ಇರೇಚ್ ಆದೇಶ. ಧಾತುವಿನಲ್ಲಿ ಸಂಯೋಗವಿರುವುದರಿಂದ ಲಿಟಿಗೆ ಕಿತ್ವವಿಲ್ಲದಿರುವುದರಿಂದ **ಇಂಧಿಭವತಿಭ್ಯಾಂಚ** (ಪಾ. ಸೂ. ೧-೨-೬) ಎಂಬುದರಿಂದ ಕಿದ್ವದ್ಭಾವ ಬರುವುದರಿಂದ **ಅನಿದಿತಾಂಹಲಉ**—ಎಂಬುದರಿಂದ ಉಪಧಾ ನಕಾರಕ್ಕೆ ಲೋಪ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

**ಯದದ್ಯ ತ್ವಾ ಪ್ರಯತಿ ಯಜ್ಞೇ ಅಸ್ಮಿನ್ಹೋತಶ್ಚಿಕಿತ್ವೋಽವೃಣೀಮಹೀಹ ।**
**ಧ್ರುವಮಯಾ ಧ್ರುವಮುತಾಶಮಿಷ್ಠಾಃ ಪ್ರಜಾನನ್ವಿದ್ವಾ ಉಪ ಯಾಹಿ ಸೋಮಂ ॥**

ಪದಪಾಠಃ

**ಯತ್ । ಅದ್ಯ । ತ್ವಾ । ಪ್ರಯತಿ । ಯಜ್ಞೇ । ಅಸ್ಮಿನ್ । ಹೋತರಿತಿ । ಚಿಕಿತ್ವಃ । ಅವೃಣೀಮಹಿ । ಇಹ । ಧ್ರುವಂ । ಅಯಾಃ । ಧ್ರುವಂ । ಉತ । ಅಶಮಿಷ್ಠಾಃ । ಪ್ರಜಾನನ್ । ವಿದ್ವಾನ್ । ಉಪ । ಯಾಹಿ । ಸೋಮಂ ॥ ೧೬ ॥**

ಸಾಯಣಭಾಷ್ಯಂ

ಹೋತರ್ಹೋಮನಿಷ್ಪಾದಕ ಚಿಕಿತ್ವಃ ಕರ್ಮವಿಷಯಜ್ಞಾನವನ್ ಹೇ ಅಗ್ನೇ ಅದ್ಯೇದಾನೀಂ ಪ್ರಯತಿ ಪ್ರವರ್ತಮಾನೇಽಸ್ಮಿನ್ ಜ್ಯೋತಿಷ್ಟೋಮಾದೌ ಯಜ್ಞೇ ತ್ವಾ ತ್ವಾಂ ಯದ್ಯಸ್ಮಾತ್ಕಾರಣಾದವೃಣೀಮಹಿ ತ್ವದ್ವಿಷಯಂ ವರಣಮಕುರ್ಮ ತಸ್ಮಾತ್ತ್ವಾದೃಶಸ್ತ್ವಮಿಹ ಕರ್ಮಣಿ ದೇವಾನ್ ಧ್ರುವಮಯಾಃ । ಧ್ರುವಂ ಯಥಾ ಭವತಿ ತಥಾಸ್ಮಾಭಿರ್ದತ್ತಾನಿ ಹವೀಂಷಿ ಪ್ರಾಪಯ । ಉತ ಅಪಿ ಚಾಶಮಿಷ್ಠಾಃ । ಹವಿಃಸ್ವೀಕರಣಾತ್ತೃಪ್ತೈರ್ದೇವೈಃ ಶಾಂತಸ್ತ್ವಮಕಾರಿಷ್ಠಾಃ । ಅಥ ಪ್ರಜಾನನ್ನಿಮಂ ಯಜ್ಞಂ ಸಮ್ಯಕ್ ಜಾನನ್ವಿದ್ವಾನ್ಯತ್ಕಿಂಚಿತ್ಸರ್ವಂ ಜಾನಾನಸ್ತ್ವಂ ಸೋಮಮಸ್ಮಾಭಿಃ ಕ್ರಿಯಮಾಣಮಿಮಮಭಿಷುತಂ ಸೋಮಮಭಿಲಕ್ಷ್ಯೋಪ ಯಾಹಿ । ಸಮೀಪ ಆಗಚ್ಛ ॥ ಪ್ರಯತಿ । ಇಣ್ ಗತಾವಿತ್ಯಸ್ಯ ಶತರಿ ರೂಪಂ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಅವೃಣೀಮಹಿ । ವೃಞ್ ವರಣೇ । ಕ್ರ್ಯಾದಿತ್ವಾತ್ ಶ್ನಾ । ಲಙ್ಯು-

ತ್ರೆಮುಬಹುವಚನ ಈಹಲ್ಯಘೋರಿತೀತ್ವಂ। ಆಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪಾದಾದಿತ್ವಾದನಿಘಾತಃ। ಅಯೋಃ । ಯಾ ಪ್ರಾಪಣ ಇತ್ಯಸ್ಯ ಲಙಾ ಸಿಪಿ ರೂಪಂ । ನಿಘಾತಃ । ಅಶಮಿಷ್ಠಾಃ । ಶಮು ಉಪಶಮನ ಇತ್ಯಸ್ಯ ಣ್ಯಂತಸ್ಯ ಕರ್ಮಣಿ ಲುಙಿ ಸ್ಯಸಿಚ್ಸೀಯುಟ್ । ಪಾ. ೬-೪-೬೨ । ಇತಿ ವಿಕಲ್ಪೇನೇಡಾಗಮಃ । ತಸ್ಯಾಸಿದ್ಧತ್ವಾಣ್ಣೇರನಿಟೀತಿ ಣಿಲೋಪಃ । ನಿಘಾತಃ । ಪ್ರಜಾನನ್ । ಜ್ಞಾ ಅವಬೋಧನೇ । ಶತರಿ ರೂಪಂ । ಯಾಹಿ । ಯಾತೇರ್ಲೋಟಿ ರೂಪಂ ॥ ೩೪ ॥ ॥ ೨ ॥

ಪ್ರತಿಪದಾರ್ಥ

**ಹೋತಃ**—ಹೋಮಸಂಪಾದಕನೂ । **ಚಿಕಿತ್ವಃ**—ಕರ್ಮವಿಷಯಜ್ಞಾನವುಳ್ಳವನೂ ಆದ ಎಲೈ ಅಗ್ನಿಯೇ । **ಅದ್ಯ**—ಈ ಕರ್ಮಕಾಲದಲ್ಲಿ । **ಪ್ರಯತಿ**—ನೆರವೇರಿಸಲ್ಪಡತಕ್ಕ । **ಅಸ್ಮಿನ್**—ಜ್ಯೋತಿಷ್ಟೋಮಾದಿರೂಪವಾದ । **ಯಜ್ಞೇ**—ಯಜ್ಞದಲ್ಲಿ । **ತ್ವಾ**—ನಿನ್ನನ್ನು । **ಯತ್**—ಯಾವ ಸಹಾಯವನ್ನಪೇಕ್ಷಿಸಿ । **ಅವೃಣೀಮಹಿ**—ವರಿಸಿ ಸಮೀಪಿಸುತ್ತೇವೆಯೋ (ಆದ್ದರಿಂದ) । **ಇಹ**—ಈ ಕರ್ಮದಲ್ಲಿ । **ಧ್ರುವಮಯಾಃ**—ನಮ್ಮ ಹವಿಸ್ಸುಗಳು ಧ್ರುವವಾಗಿರುವಂತೆ ದೇವತೆಗಳಿಗೆ ಸೇರಿಸು । **ಉತ**—ಮತ್ತು । **ಧ್ರುವಂ**—ನಿಶ್ಚಯವಾಗಿಯೂ । **ಅಶಮಿಷ್ಠಾಃ**—ಪ್ರಶಾಂತಚಿತ್ತನಾದ ನೀನು ಹವಿಸ್ಸುಗಳಿಂದ ದೇವತೆಗಳನ್ನೂ ತೃಪ್ತಿಪಡಿಸು । **ಪ್ರಜಾನನ್**—ಈ ಯಜ್ಞದ ಉದ್ದಿಶ್ಯವನ್ನು ತಿಳಿದು । **ವಿದ್ವಾನ್**—ಪ್ರಾಜ್ಞನಾದ ನೀನು । **ಸೋಮಂ**—ನಮ್ಮಿಂದ ಅರ್ಪಿಸಲ್ಪಡುವ ಸೋಮವನ್ನು ಅಭಿಲಕ್ಷಿಸಿ । **ಉಪಯಾಹಿ**—ನಮ್ಮ ಸಮೀಪಕ್ಕೆ ದಯಮಾಡು ॥

ಭಾವಾರ್ಥ

ಹೋಮಸಂಪಾದಕನೂ, ಕರ್ಮವಿಷಯಜ್ಞಾನವುಳ್ಳವನೂ ಆದ ಎಲೈ ಅಗ್ನಿಯೇ, ಈ ಕರ್ಮಕಾಲದಲ್ಲಿ ನೆರವೇರಿಸಲ್ಪಡತಕ್ಕ ಜ್ಯೋತಿಷ್ಟೋಮಾದಿರೂಪವಾದ ಯಜ್ಞದಲ್ಲಿ ನಿನ್ನನ್ನು ವರಿಸಿ ಯಾವ ಸಹಾಯವನ್ನಪೇಕ್ಷಿಸಿ ಸಮೀಪಿಸುತ್ತೇವೆಯೋ, ಆದ್ದರಿಂದ ಈ ಕರ್ಮದಲ್ಲಿ ನಮ್ಮ ಹವಿಸ್ಸುಗಳು ಧ್ರುವವಾಗಿರುವಂತೆ ದೇವತೆಗಳಿಗೆ ಸೇರಿಸು. ಮತ್ತು ಪ್ರಶಾಂತಚಿತ್ತನಾದ ನೀನು ಹವಿಸ್ಸುಗಳಿಂದ ದೇವತೆಗಳನ್ನೂ ತೃಪ್ತಿಪಡಿಸು. ಈ ಯಜ್ಞದ ಉದ್ದಿಶ್ಯವನ್ನು ತಿಳಿದು ಪ್ರಾಜ್ಞನಾದ ನೀನು ನಮ್ಮಿಂದ ಅರ್ಪಿಸಲ್ಪಡುವ ಸೋಮವನ್ನು ಅಭಿಲಕ್ಷಿಸಿ ದಯಮಾಡು.

English Translation

Agni, offerer of oblations, cognizant of rites, inasmuch as we have recourse to you to-day in this progressing sacrifice, therefore steadily convey (the offering to the gods), or tranquilly be at rest, and knowing (the purport of our acts), and wise (in all respects), approach (and accept) the Soma libation.

ವಿಶೇಷವಿಷಯಗಳು

**ಹೋತಃ**—ಅಗ್ನಿಯು ಹೋಮವನ್ನು ನೆರವೇರಿಸುವವನಾದುದರಿಂದ ಹೋಮನಿಷ್ಪಾದಕನೆಂದೂ **ಚಿಕಿತ್ವಃ** ಯಜ್ಞವಿಷಯವಾದ ಜ್ಞಾನವಂತನೆಂದೂ, ವರ್ಣಿಸಿ ಈ ಪದಗಳಿಂದ ಸಂಬೋಧಿಸಿದೆ.

**ಅದ್ಯ ಪ್ರಯತಿ ಅಸ್ಮಿನ್ ಯಜ್ಞೇ ತ್ವಾ ಅವೃಣೀಮಹಿ**—ಹೋಮನಿಷ್ಪಾದಕನಾಗಿಯೂ ಯಜ್ಞದ ಜ್ಞಾನವುಳ್ಳವನಾಗಿಯೂ ಇರುವ ಅಗ್ನಿಯನ್ನು ಈಗ ನಡೆಯುತ್ತಿರುವ ಯಜ್ಞದಲ್ಲಿ ಯಜಮಾನರು ಯಜ್ಞವು ನೆರವೇರು

ಭಾವಾರ್ಥ

ಎಲೈ ಇಂದ್ರನೇ, ಕರ್ಮಕ್ಕೆ ವಿಘ್ನಕಾರಿಯಾದ ರಾಕ್ಷಸರನ್ನು ಮೂಲಸಹಿತವಾಗಿ ನಾಶಮಾಡು. ಅವರನ್ನು ಮಧ್ಯಪ್ರದೇಶದಲ್ಲಿ ಕತ್ತರಿಸು, ಅವರ ಅಗ್ರಭಾಗವನ್ನು ನಾಶಪಡಿಸು. ಸ್ವೇಚ್ಛೆಯಾಗಿ ಸಂಚರಿಸತಕ್ಕ ಅಸುರರನ್ನು ಅತ್ಯಂತ ದೂರವಾದ ಪ್ರದೇಶಕ್ಕೆ ಓಡಿಸಿಬಿಡು. ಬ್ರಾಹ್ಮಣದ್ವೇಷಿಯಾದ ರಾಕ್ಷಸನ ಮೇಲೆ ದಹಿಸತಕ್ಕ ಆಯುಧವನ್ನು ಎಸೆ.

English Translation

Pluck up the Rakshasas, Indra, by the root ; cut asunder the middle, blight the summit : to whatever remote (regions) you have driven the sinner, cast upon the enemy of the Veda your consuming weapon.

ಸಂಹಿತಾಪಾಠ

ಸ್ವಸ್ತಯೇ ವಾಜಿಭಿಶ್ಚ ಪ್ರಣೇತಃ ಸಂ ಯನ್ಮಹೀರಿಷ ಆಸತ್ಸಿ ಪೂರ್ವೀಃ ।
ರಾಯೋ ವಂತಾರೋ ಬೃಹತಃ ಸ್ಯಾಮಾಸ್ಮೇ ಅಸ್ತು ಭಗ ಇಂದ್ರ ಪ್ರಜಾವಾನ್ ॥

ಪದಪಾಠಃ

ಸ್ವಸ್ತಯೇ । ವಾಜಿಽಭಿಃ । ಚ । ಪ್ರನೇತರಿತಿ ಪ್ರಽನೇತಃ । ಸಂ । ಯತ್ । ಮಹೀಃ । ಇಷಃ । ಆಽಸತ್ಸಿ । ಪೂರ್ವೀಃ ।
ರಾಯಃ । ವಂತಾರಃ । ಬೃಹತಃ । ಸ್ಯಾಮ । ಅಸ್ಮೇ ಇತಿ । ಅಸ್ತು । ಭಗಃ । ಇಂದ್ರ । ಪ್ರಜಾಽವಾನ್ ॥

ಸಾಯಣಭಾಷ್ಯಂ

ಪ್ರಣೇತಃ ಪ್ರಕರ್ಷೇಣ ಜಗತೋ ನಿರ್ವಾಹಕ ಹೇ ಇಂದ್ರ ಅಸ್ಮಾನ್ವಾಜಿಭಿರಶ್ವೈಃ ಸಹಿತಾನ್ ಕುರು । ಸ್ವಸ್ತಯೇ ಚಾವಿನಾಶಾಯ ಕುರು । ಯದಾ ತ್ವಂ ಸಮಾಸತ್ಸಿ ಅಸ್ಮಾಕಂ ಸಮೀಪೇ ಯಜ್ಞನಿರ್ವಾಹಾರ್ಥಮಾಸೀದಸಿ ತದಾ ವಯಂ ಮಹೀರ್ಮಹಾಂತೀರಿಷೋಽನ್ನಾನಿ ಪೂರ್ವೀಃ ಪ್ರಭೂತಾನಿ ರಾಯೋ ಧನಾನಿ ವಂತಾರಸ್ತೇಷಾಂ ಸಂಭಕ್ತಾರಃ ಸಂತೋ ಬೃಹತೋ ಮಹಾಂತಃ ಸ್ಯಾಮ । ಭವೇಮ । ಕಿಂಚ ಪ್ರಜಾವಾನ್ ಅಪತ್ಯೋಪೇತಂ ಭಗೋ ಧನಮಸ್ಮೇ ಅಸ್ಮಾಸ್ವಸ್ತು । ಭವತು ॥ ಆಸತ್ಸಿ । ಷದ್ಲೃ ವಿಶರಣಾದಿಷು। ಆಸತ್ಸಿ । ಬಹುಲಂ ಛಂದಸೀತಿ ಶಪೋ ಲುಕ್ । ಯದ್ವೃತ್ತಯೋಗಾದನಿಘಾತಃ । ಇಷೋ ರಾಯ ಇತಿ ಚ ದ್ವೇ ಷಷ್ಠ್ಯರ್ಥೇ ದ್ವಿತೀಯೇ । ವಂತಾರಃ । ವನ ಷಣ ಸಂಭಕ್ತಾವಿತ್ಯಸ್ಯ ತೃಚಿ ಆಗಮಾನುಶಾಸನಸ್ಯಾನಿತ್ಯತ್ವಾದಿಡಭಾವಃ । ಚಿತ್ಸ್ವರಃ । ಸ್ಯಾಮ । ಅಸ ಭುವೀತ್ಯಸ್ಯ ಲಿಙಿ ರೂಪಂ । ಅಸ್ಮೇ । ಅಸ್ಮಚ್ಛಬ್ದಸ್ಯ ಸಪ್ತಮ್ಯಾಃ ಸುಪಾಂ ಸುಲುಗಿತಿ ಶೇ ಇತ್ಯಾದೇಶಃ ॥

ಪ್ರತಿಪದಾರ್ಥ

**ಪ್ರಣೇತಃ**—ಉತ್ತಮವಾದ ಮಾರ್ಗದರ್ಶಕನಾದ | **ಇಂದ್ರ**— ಇಂದ್ರನೇ | **ಸ್ವಸ್ತಯೇ ಚ**—ನಮ್ಮ ಕ್ಷೇಮಕ್ಕಾಗಿ | **ವಾಜಿಭಿಃ**—ಅಶ್ವಯುಕ್ತರನ್ನಾಗಿ ಮಾಡು | **ಯತ್**—ಯಾವಾಗ | **ಸಂ ಅಸತ್ಸಿ**—(ಯಜ್ಞನಿರ್ವಾಹಾರ್ಥವಾಗಿ) ನಮ್ಮ ಅಭಿಮುಖವಾಗಿ ಕುಳಿತಿರುತ್ತೀಯೋ (ಆಗ ನಾವು) | **ಮಹೀಃ**—ಮಹತ್ತಾದ | **ಇಷಃ**—ಅನ್ನಗಳನ್ನೂ | **ಪೂರ್ವೀಃ**—ಪ್ರಭೂತಗಳಾದ | **ರಾಯಃ**—ಧನಗಳನ್ನೂ | **ವಂತಾರಃ**—ಅನುಭವಿಸುತ್ತಾ | **ಬೃಹತಃ**—ಮಹತ್‌ಸ್ಥಿತಿಯುಳ್ಳವರಾಗಿ | **ಸ್ಯಾಮ**—ಆಗುತ್ತೇವೆ (ಮತ್ತು) | **ಪ್ರಜಾವಾನ್**—ಪುತ್ರರಿಂದ ಕೂಡಿದ | **ಭಗಃ**—ಧನವು | **ಅಸ್ಮೇ**—ನಮ್ಮಲ್ಲಿ | **ಅಸ್ತು**—ತುಂಬಿರಲಿ ||

ಭಾವಾರ್ಥ

ಉತ್ತಮವಾದ ಮಾರ್ಗದರ್ಶಕನಾದ ಎಲೈ ಇಂದ್ರನೇ, ನಮ್ಮನ್ನು ನಮ್ಮ ಮುಂದಿನ ಕ್ಷೇಮಕ್ಕಾಗಿ ಅಶ್ವಯುಕ್ತರನ್ನಾಗಿ ಮಾಡು. ಯಾವಾಗ ನೀನು ಯಜ್ಞನಿರ್ವಾಹಾರ್ಥವಾಗಿ ನಮ್ಮ ಅಭಿಮುಖವಾಗಿ ಕುಳಿತಿರುತ್ತೀಯೋ ಆಗ ನಾವು ಮಹತ್ತಾದ ಅನ್ನಗಳನ್ನೂ ಪ್ರಭೂತಗಳಾದ ಧನಗಳನ್ನೂ ಅನುಭವಿಸುತ್ತಾ ಮಹತ್‌ಸ್ಥಿತಿಯುಳ್ಳವರಾಗಿ ಆಗುತ್ತೇವೆ. ಮತ್ತು ಪುತ್ರರೊಡಗೂಡಿದ ಧನವು ನಮ್ಮಲ್ಲಿ ತುಂಬಿರಲಿ.

English Translation

Regulator (of the world, provide us) with horses for our welfare, and when you are seated near to us may we become mighty, enjoying abundant food, and ample riches, and may there be to us wealth accompanied by progeny,

ಸಂಹಿತಾಪಾಠಃ

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**
**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥೧೯॥**

ಪದಪಾಠಃ

**ಆ । ನಃ । ಭರ । ಭಗಂ । ಇಂದ್ರ । ದ್ಯುಽಮಂತಂ । ನಿ । ತೇ । ದೇಷ್ಣಸ್ಯ । ಧೀಮಹಿ । ಪ್ರಽರೇಕೇ ।**
**ಊರ್ವಃಽಇವ । ಪಪ್ರಥೇ । ಕಾಮಃ। ಅಸ್ಮೇ ಇತಿ । ತಂ । ಆ । ಪೃಣ । ವಸುಽಪತೇ । ವಸೂನಾಂ ॥ ೧೯ ॥**

ಸಾಯಣಭಾಷ್ಯಂ

**ಹೇ ಇಂದ್ರ ನೋಽಸ್ಮದರ್ಥಂ ದ್ಯುಮಂತಂ ದೀಪ್ತಿಯುಕ್ತಂ ಭಗಂ ಧನಮಾಭರ | ಆ ಸಮಂತಾತ್ಸಂಭರ | ದೇಷ್ಣಸ್ಯ ದಾನಶೀಲಸ್ಯ ತೇ ತವ ಸಂಬಂಧಿನೋ ಧನಸ್ಯ ಪ್ರೇರಕೇ ಪ್ರರೇಚನೇ ದಾನೇ ನಿಧೀ-**

ಮಹಿ । ಧನದಾನಸ್ಯ ವಯಂ ಪಾತ್ರಭೂತಾಃ ಸ್ಮ ಇತ್ಯರ್ಥಃ । ಕುತ ಇತ್ಯತ ಆಹ । ಅಸ್ಮೇ ಅಸ್ಮಾಕಂ ಕಾಮೋಽಭಿಲಾಷ ಊರ್ವ ಇವ ಅನವಾಪ್ತಕಾಮೋ ವಡವಾನಲ ಇವ ಪಪ್ರಥೇ । ಪ್ರಭೂತೋ ವರ್ತತೇ। ವಸೂನಾಂ ವಸುಪತೇ ಧನಾನಾಂ ಮಧ್ಯ ಉತ್ತಮಧನಾನಾಮಧಿಪತೇ ಹೇ ಇಂದ್ರ ತಂ ಮಹಾಂತಂ ಕಾಮಮಾಪೃಣ । ಬಹುಧನಪ್ರದಾನೇನಾಪೂರಯ ॥ ಭರ । ಭೃಞ್ ಭರಣ ಇತ್ಯಸ್ಯ ಲೋಟಿ ರೂಪಂ । ದೇಷ್ಣಸ್ಯ । ಡುದಾಞ್ ದಾನೇ । ಗಾದಾಭ್ಯಾಮಿಷ್ಣುಜತೀಷ್ಣುಚ್‌ಪ್ರತ್ಯಯಃ । ಅತ್ಯರ್ಥಂ ದದಾತೀತಿ ದೇಷ್ಣಃ । ಚಿತ್ಸ್ವರಃ । ಧೀಮಹಿ । ದಧಾತೇರ್ಲಿಙಿ ಬಹುಲಂ ಛಂದಸೀತಿ ಶಪೋ ಲುಕ್ । ಛಂದಸ್ಯುಭಯಥೇತಿ ಮಹಿಙಃ ಸಾರ್ವಧಾತುಕತ್ವಾತ್ಸೀಯುಟಃ ಸಲೋಪಃ । ಆರ್ಧಧಾತುಕತ್ವಾದಾತೋ ಲೋಪಃ । ನಿಘಾತಃ । ಊರ್ವ ಇವ । ಪೂರ್ವಪದಸ್ವರಃ । ಪಪ್ರಥೇ ಪ್ರಥ ಪ್ರಖ್ಯಾನ ಇತ್ಯಸ್ಯ ಲಿಟಿ ರೂಪಂ । ಪೃಣ। ಪೃಣ ಪ್ರೀಣನ ಇತ್ಯಸ್ಯ ಲೋಟಿ ಸೇರ್ಹಿಃ । ತುದಾದಿಃ । ಉತೋ ಹೇರಿತಿ ಹೇರ್ಲುಕ್ । ವಸೂನಾಂ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ನಃ**—ನಮಗಾಗಿ । **ದ್ಯುಮಂತಂ**-ಕಾಂತಿಯುತವಾದ । **ಭಗಂ**—ಧನವನ್ನು । **ಆ ಭರ**—ತೆಗೆದುಕೊಂಡು ಬಾ । **ದೇಷ್ಣಸ್ಯ**—ದಾನಶೀಲನಾದ । **ತೇ**—ನಿನ್ನ । **ಪ್ರರೇಕೇ**—ದಾನಕ್ಕೆ । **ನಿ ಧೀಮಹಿ**—ನಾವು ಪಾತ್ರರಾಗಿದ್ದೇವೆ. । **ಅಸ್ಮೇ**—ನಮ್ಮ । **ಕಾಮಃ**—ಅಭಿಲಾಷೆಯು । **ಊರ್ವ ಇವ**—ಬಡಬಾನಲದಂತೆ । **ಪಪ್ರಥೇ**—ಪ್ರಭೂತವಾಗಿರುತ್ತದೆ । **ವಸೂನಾಂ**—ಧನಗಳಲ್ಲೆಲ್ಲಾ । **ವಸುಪತೇ**—ಉತ್ತಮವಾದ ಧನಕ್ಕೆ ಒಡೆಯನಾದ ಎಲೈ ಇಂದ್ರನೇ । **ತಂ**—(ನಮ್ಮ) ಅಭಿಲಾಷೆಯನ್ನು । **ಆ ಪೃಣ**—(ಪ್ರಭೂತವಾದ ಧನದಾನದಿಂದ) ತೃಪ್ತಿಪಡಿಸು

ಭಾವಾರ್ಥ

ಎಲೈ ಇಂದ್ರನೇ, ನಮಗಾಗಿ ಕಾಂತಿಯುತವಾದ ಧನವನ್ನು ತೆಗೆದುಕೊಂಡು ಬಾ. ದಾನಶೀಲನಾದ ನಿನ್ನ ದಾನಕ್ಕೆ ನಾವು ಪಾತ್ರರಾಗಿದ್ದೇವೆ. ನಮ್ಮ ಅಭಿಲಾಷೆಯು ಬಡಬಾನಲದಂತೆ ಪ್ರಭೂತವಾಗಿರುತ್ತದೆ. ಉತ್ತಮವಾದ ಧನಕ್ಕೆ ಒಡೆಯನಾದ ಎಲೈ ಇಂದ್ರನೇ, ನಮ್ಮ ಅಗಾಧವಾದ ಅಭಿಲಾಷೆಯನ್ನು ಪ್ರಭೂತವಾದ ಧನದ ದಾನದಿಂದ ತೃಪ್ತಿಪಡಿಸು.

English Translation

Bring to us, Indra, splendid affluence: we rely on the bounty of you who are fond of giving: our desire is as insatiable as the fire of the ocean: appease it, lord of infinite riehes.

ಸಂಹಿತಾಪಾಠಃ

ಇಮಂ ಕಾಮಂ ಮಂದಯಾ ಗೋಭಿರಶ್ವೈಶ್ಚಂದ್ರವತಾ ರಾಧಸಾ ಪಪ್ರಥಶ್ಚ ।
ಸ್ವರ್ಯವೋ ಮತಿಭಿಸ್ತುಭ್ಯಂ ವಿಪ್ರಾ ಇಂದ್ರಾಯ ವಾಹಃ ಕುಶಿಕಾಸೋ ಅಕ್ರನ್॥

ಪದಪಾಠಃ

ಇಮಂ । ಕಾಮಂ । ಮಂದಯ । ಗೋಭಿಃ । ಅಶ್ವೈಃ । ಚಂದ್ರವತಾ । ರಾಧಸಾ । ಪಪ್ರಥಃ । ಚ ।
ಸ್ವಃಯವಃ । ಮತಿಭಿಃ । ತುಭ್ಯಂ । ವಿಪ್ರಾಃ । ಇಂದ್ರಾಯ । ವಾಹಃ । ಕುಶಿಕಾಸಃ । ಅಕ್ರನ್ ॥ ೨೦ ॥

ಸಾಯಣಭಾಷ್ಯಂ

ಹೇ ಇಂದ್ರ ಇಮಂ ಧನಾದಿವಿಷಯಂ ಕಾಮಮಸ್ಮದೀಯಮಭಿಲಾಷಂ ಗೋಭಿರಗ್ನಿಹೋತ್ರಾದಿಕರ್ಮಸಾಧನಭೂತೈರ್ಗವಾದಿಭಿರ್ವಾಹನಸಾಧನಭೂತೈರಶ್ವೈಶ್ಚ ಚಂದ್ರವತಾ ದೀಪ್ತಿಯುಕ್ತೇನ ರಾಧಸಾ ಧನೇನ ಚ ಮಂದಯ । ಏತಾನಿ ದತ್ತ್ವೇಮಮಭಿಲಾಷಂ ಪೂರಯ । ಕಿಂಚ । ಏತೈರಸ್ಮಾನ್ಪಪ್ರಥಃ । ಪ್ರಥಿತಾಂಶ್ಚ ಕುರು । ಪಶ್ಚಾತ್ಸ್ವರ್ಯವಃ । ಸ್ವರ್ಗಾದಿಸುಖಮಾತ್ಮನ ಇಚ್ಛಂತೋ ವಿಪ್ರಾಃ ಕರ್ಮಕುಶಲಾಃ ಕುಶಿಕಾಸಃ ಕುಶಿಕಾ ಮತಿಭಿರ್ಮನನೀಯೈರ್ಮಂತ್ರೈರ್ವಾಹಃ ಸ್ತೋತ್ರಮಿಂದ್ರಾಯ ತುಭ್ಯಮಕ್ರನ್ । ಅಕಾರ್ಷುಃ ॥ ಮಂದಯ । ಮದಿ ಸ್ತುತ್ಯಾದಿಷ್ವಿತ್ಯಸ್ಯ ಲೋಟಿ ರೂಪಂ । ಗೋಭಿಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವೇ ಪ್ರಾಪ್ತೇ ನ ಗೋಶ್ವನ್ಸಾವವರ್ಣೇತ್ಯಾದಿನಾ ಪ್ರತಿಷೇಧಃ । ಪ್ರಕೃತಿಸ್ವರಃ । ಪಪ್ರಥಃ । ಪ್ರಥ ಪ್ರಖ್ಯಾನೇ । ಕ್ವಿಪ್ । ಛಂದಸ್ಯುಭಯಥೇತಿ ತಸ್ಯ ಸಾರ್ವಧಾತುಕತ್ವಾತ್ ಶಪ್ । ತಸ್ಯ ಬಹುಲಂ ಛಂದಸೀತಿ ಶ್ಲುಃ । ಧಾತುಸ್ವರಃ । ಅಕ್ರನ್ । ಕರೋತೇರ್ಲುಙಿ ಮಂತ್ರೇ ಘಸಹ್ವರೇತ್ಯಾದಿನಾ ಲುಕ್ । ನಿಘಾತಃ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । **ಇಮಂ ಕಾಮಂ**—ನಮ್ಮ ಈ ಇಷ್ಟಾರ್ಥವನ್ನು । **ಗೋಭಿಃ**—ಗೋವುಗಳಿಂದಲೂ । **ಅಶ್ವೈಃ**—ಅಶ್ವಗಳಿಂದಲೂ । **ಚಂದ್ರವತಾ**—ಕಾಂತಿಯುಕ್ತವಾದ । **ರಾಧಸಾ ಚ**—ಧನವನ್ನು ಕೊಡೋಣದರಿಂದಲೂ ಸಹ । **ಮಂದಯ**—ತೃಪ್ತಿಗೊಳ್ಳುವಂತೆ ಮಾಡು (ಅನಂತರ) । **ಸ್ವರ್ಯವಃ**—ಸ್ವರ್ಗವನ್ನು ಇಚ್ಛಿಸುವವರೂ । **ವಿಪ್ರಾಃ**—ಕರ್ಮಕುಶಲರೂ । **ಕುಶಿಕಾಸಃ**—ಕುಶಿಕವಂಶಸ್ಥರೂ ಆದ (ನಿನ್ನ ಭಕ್ತರು) । **ಮತಿಭಿಃ**—ಮನನೀಯವಾದ ಮಂತ್ರಗಳಿಂದೊಡಗೂಡಿದ । **ವಾಹಃ**—ಸ್ತೋತ್ರವನ್ನು । **ತುಭ್ಯಂ**—ನಿನ್ನನ್ನುದ್ದೇಶಿಸಿ । **ಅಕ್ರನ್**—ಅರ್ಪಿಸುವರು

ಭಾವಾರ್ಥ

ಎಲೈ ಇಂದ್ರನೇ, ಗೋವುಗಳನ್ನೂ ಅಶ್ವಗಳನ್ನೂ ಕಾಂತಿಯುಕ್ತವಾದ ಧನವನ್ನೂ ಸಹ ನಮಗೆ ಕೊಡುವುದರ ಮೂಲಕ ನಮ್ಮ ಸಕಲವಾದ ಇಷ್ಟಾರ್ಥಗಳನ್ನೂ ತೃಪ್ತಿಗೊಳ್ಳುವಂತೆ ಮಾಡು. ಅನಂತರ, ಸ್ವರ್ಗಕಾಮಿಗಳೂ, ಕರ್ಮಕುಶಲರೂ ಕುಶಿಕವಂಶಸ್ಥರೂ ಆದ ನಿನ್ನ ಭಕ್ತರು ನಿನ್ನನ್ನುದ್ದೇಶಿಸಿ ಮನನೀಯವಾದ ಮಂತ್ರದಿಂದೊಡಗೂಡಿದ ಸ್ತುತಿಯನ್ನರ್ಪಿಸುತ್ತಾರೆ.

## English Translation

Gratify this our desire (of wealth) with cows, with horses, with shining treasure, and make us renowned : the wise Kushikas, desirous of heaven, offer praise to you, Indra, with pious (prayers).

ಸಂಹಿತಾಪಾಠಃ

ಆ ನೋ ಗೋತ್ರಾ ದರ್ದೃಹಿ ಗೋಪತೇ ಗಾಃ ಸಮಸ್ಮಭ್ಯಂ ಸನಯೋ ಯಂತು ವಾಜಾಃ ।

ದಿವಕ್ಷಾ ಅಸಿ ವೃಷಭ ಸತ್ಯಶುಷ್ಮೋಽಸ್ಮಭ್ಯಂ ಸು ಮಘವನ್ಬೋಧಿ ಗೋದಾಃ ॥೨೧॥

ಪದಪಾಠಃ

ಆ । ನಃ । ಗೋತ್ರಾ । ದರ್ದೃಹಿ । ಗೋಽಪತೇ । ಗಾಃ । ಸಂ । ಅಸ್ಮಭ್ಯಂ । ಸನಯಃ । ಯಂತು । ವಾಜಾಃ ।
ದಿವಕ್ಷಾಃ । ಅಸಿ । ವೃಷಭ । ಸತ್ಯಽಶುಷ್ಮಃ । ಅಸ್ಮಭ್ಯಂ । ಸು । ಮಘಽವನ್ । ಬೋಧಿ । ಗೋಽದಾಃ ॥

ಸಾಯಣಭಾಷ್ಯಂ

ಗೋಪತೇ ಗವಾಂ ಪತೇ ಸ್ವರ್ಗಾಧಿಪತೇ ಹೇ ಇಂದ್ರ ನೋಽಸ್ಮದರ್ಥಂ ಗೋತ್ರಾ ಗೋತ್ರಾಣ್ಯಭ್ರಾಣಿ ಗಾ ಅಪಃ ಪ್ರತ್ಯಾ ದರ್ದೃಹಿ । ಆದ್ರಿಯಸ್ವ । ಅಭ್ರಾಣಿ ವಿದಾರ್ಯ ಜಲಾನಿ ಪ್ರಾಪಯೇತ್ಯರ್ಥಃ । ತತಃ ಸನಯಃ ಸಂಭಜನೀಯಾನಿ ವಾಜಾ ಅನ್ನಾನ್ಯಸ್ಮಭ್ಯಮಸ್ಮದರ್ಥಂ ಸಂಯಂತು । ಸಮಾಗಚ್ಛಂತು । ವೃಷಭ ಕಾಮಾನಾಂ ವರ್ಷಿತರ್ಹೇ ಇಂದ್ರ ತ್ವಂ ದಿವಕ್ಷಾ ಅಸಿ । ದಿವಂ ವ್ಯಾಪ್ಯ ವರ್ತಮಾನತ್ವೇನ ಮಹಾನಸಿ । ಅತ ಏವ ಸತ್ಯಶುಷ್ಮಃ ಸತ್ಯಸಾಮರ್ಥ್ಯೋ ಮಘವನ್ ಧನವನ್ ಹೇ ಇಂದ್ರ ಅಸ್ಮಭ್ಯಂ ಗೋದಾ ಗವಾಂ ಪ್ರದಾತಾ ಭವಾಮೀತಿ ಸು ಬೋಧಿ । ಸುಷ್ಠು ಬುಧ್ಯಸ್ವ ॥ ದರ್ದೃಹಿ । ದೃಙ್ ಆದರೇ । ಯಙ್ಲುಕಿ ಲೋಟಿ ರೂಪಂ । ಋತಶ್ಚ । ಪಾ. ೭-೪-೯೨ । ಇತ್ಯಭ್ಯಾಸಸ್ಯ ರುಗಾಗಮಃ । ನಿಘಾತಃ । ಗಾಃ । ಔತೋಮ್ಶಸೋಃ । ಪಾ. ೬-೧-೯೩ । ಇತ್ಯೋಕಾರಸ್ಯಾಕಾರಃ । ಏಕಾದೇಶಸ್ವರಃ । ಅಸ್ಮಭ್ಯಂ । ಭ್ಯಸೋ ಭ್ಯಮಿತಿ ಚತುರ್ಥೀಬಹುವಚನಸ್ಯ ಭ್ಯಮಾದೇಶಃ । ಯಂತು । ಇಣ್ ಗತೌ । ಲೋಟಿ ರೂಪಂ । ದಿವಕ್ಷಾಃ । ಅಕ್ಷೂ ವ್ಯಾಪ್ತೌ । ಅಸುನ್ । ದಿವಂ ವ್ಯಾಪ್ನೋತೀತಿ ದಿವಕ್ಷಾಃ । ಕೃದುತ್ತರಪದಸ್ವರಃ । ಗೋದಾಃ । ಡುದಾಞ್ ದಾನ ಇತ್ಯಸ್ಮಾದ್ವಿಚ್ । ಕೃದುತ್ತರಪದಸ್ವರಃ ॥

ಪ್ರತಿಪದಾರ್ಥ

**ಗೋಪತೇ**—ಸ್ವರ್ಗಕ್ಕೆ ಅಧಿಪತಿಯಾದ ಎಲೈ ಇಂದ್ರನೇ । **ನಃ**–ನಮ್ಮ ಸೌಕರ್ಯಕ್ಕಾಗಿ । **ಗೋತ್ರಾ**–ಮೇಘಗಳನ್ನು । **ಗಾಃ**—ಉದಕಾರ್ಥವಾಗಿ । **ಆ ದರ್ದೃಹಿ**—ಹಿಂಡಿ (ಉದಕವನ್ನು ಸುರಿಸು ಅನಂತರ ಅದರ ಫಲವಾಗಿ) । **ಸನಯಃ**—ಪೂಜ್ಯವಾದ । **ವಾಜಾಃ**—ಅನ್ನಗಳು । **ಅಸ್ಮಭ್ಯಂ**—ನಮಗೆ । **ಸಂ ಯಂತು**—ಪೂರ್ಣವಾಗಿ ಬಂದೊದಗಲಿ । **ವೃಷಭ**—ಕಾಮವರ್ಷಕನಾದ ಇಂದ್ರನೇ । **ದಿವಕ್ಷಾಃ ಅಸಿ**—ನೀನು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ (ಮಹತ್ತ್ವವುಳ್ಳವನಾಗಿ) ಇದ್ದೀಯೆ (ಆದುದರಿಂದ) । **ಮಘವನ್**—ಧನವಂತನಾದ ಎಲೈ ಇಂದ್ರನೇ । **ಅಸ್ಮಭ್ಯಂ**—ನಮಗೆ । **ಗೋದಾಃ**—ಗೋವುಗಳ ಪ್ರದಾತನಾಗಿರುವಂತೆ । **ಸು ಬೋಧಿ**—ಸಂಕಲ್ಪಮಾಡಿ ತಿಳಿದುಕೋ

ಭಾವಾರ್ಥ

ಸ್ವರ್ಗಾಧಿಪತಿಯಾದ ಎಲೈ ಇಂದ್ರನೇ, ನಮ್ಮ ಸೌಕರ್ಯಾರ್ಥವಾಗಿ ಮೇಘಗಳನ್ನು ಹಿಂಡಿ ಉದಕವನ್ನು ಸುರಿಸು. ಅನಂತರ, ಅದರ ಫಲವಾಗಿ ಪೂಜ್ಯವಾದ ಅನ್ನಗಳು ನಮ್ಮನ್ನು ಸೇರಲಿ. ಕಾಮವರ್ಷಕನೂ ಧನವಂತನೂ ಆದ ಇಂದ್ರನೇ, ನೀನು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ಮಹತ್ತ್ವವುಳ್ಳವನಾಗಿದ್ದೀಯೆ. ಆದುದರಿಂದಲೇ, ನಮಗೆ ಗೋವುಗಳನ್ನು ಕೊಡಿಸುವವನಾಗು ಮತ್ತು ಅದೇರೀತಿ ಸಂಕಲ್ಪವನ್ನು ಮಾಡು.

English Translation

Indra, lord of cattle, (divide the clouds and send us) rain, whence nutritious food may come to us: showerer (of benefits), you are spread through the sky, and powerful through truth: Maghavan, consider yourself as our protector.

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಂ ॥

ಪದಪಾಠಃ

ಶುನಂ । ಹುವೇಮ । ಮಘಽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃಽತಮಂ । ವಾಜಽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ಽಸು । ಘ್ನಂತಂ । ವೃತ್ರಾಣಿ । ಸಂಽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ, ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ। ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋಽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ। ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾಭಾವಶ್ಛಾಂದಸಃ।

ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚತ್ತೇ ಲಿಙಃ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧ್ವಾ- ಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾಗತ್ಯೋರಿ- ತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥　॥ ೪ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ವಾಜಸಾತೌ—ಅನ್ನಾರ್ಥವಾಗಿ ನಡೆಯತಕ್ಕ । ಭರೇ—ಯುದ್ಧದಲ್ಲಿ । ಶುನಂ—(ಉತ್ಸಾಹದಿಂದ) ವೃದ್ಧಿಯನ್ನು ಹೊಂದತಕ್ಕವನೂ, ಅಥವಾ ಸುಖವನ್ನುಂಟುಮಾಡುವವನೂ) । ಮಘ- ವಾನಂ—ಧನವಂತನೂ । ಇಂದ್ರಂ—(ನಿರತಿಶಯವಾದ) ಐಶ್ವರ್ಯಸಂಪನ್ನನೂ । ನೃತಮಂ—ನೇತೃವಾದವನೂ ಆದ ನಿನ್ನನ್ನು । ಹುವೇಮ—ಪ್ರಾರ್ಥಿಸಿ ಕರೆಯುತ್ತೇವೆ (ಹಾಗೆಯೇ) । ಶೃಣ್ವಂತಂ—(ನಮ್ಮ ಸ್ತುತಿಗಳನ್ನು) ಆಲಿಸಿ ಕೇಳುವವನೂ । ಉಗ್ರಂ-ಶತ್ರುಗಳಿಗೆ ಭಯಂಕರನೂ। ಸಮತ್ಸು-ಸಂಗ್ರಾಮಗಳಲ್ಲಿ। ವೃತ್ರಾಣಿ—ವೃತ್ರನೇ ಮುಂತಾದ ಅಸುರರನ್ನು । ಘ್ನಂತಂ—ಹಿಂಸಿಸಿ ನಾಶಮಾಡುವವನೂ । ಧನಾನಾಂ—(ಶತ್ರುಗಳ) ಧನಗಳನ್ನು । ಸಂಜಿತಂ— (ನಮಗೆ) ಸೇರಿಸುವವನೂ ಆದ ನಿನ್ನನ್ನು । ಊತಯೇ—ರಕ್ಷಣಾರ್ಥವಾಗಿ । (ಹುವೇಮ—ಪ್ರಾರ್ಥಿಸಿ ಕರೆ ಯುತ್ತೇವೆ) ॥

ಭಾವಾರ್ಥ

ಎಲೈ ಇಂದ್ರನೇ, ಅನ್ನಾರ್ಥವಾಗಿ ನಡೆಯತಕ್ಕ ಯುದ್ಧದಲ್ಲಿ ಸುಖವನ್ನುಂಟುಮಾಡುವವನೂ, ಧನವಂತನೂ, ನಿರತಿಶಯವಾದ ಐಶ್ವರ್ಯಸಂಪನ್ನನೂ, ನೇತೃವಾದವನೂ, ನಮ್ಮ ಸ್ತುತಿಗಳನ್ನು ಆಲಿಸಿ ಕೇಳುವವನೂ, ಶತ್ರುಗಳಿಗೆ ಭಯಂಕರನೂ ಸಂಗ್ರಾಮಗಳಲ್ಲಿ ವೃತ್ರನೇ ಮುಂತಾದ ಅಸುರರನ್ನು ಹಿಂಸಿಸಿ ನಾಶಮಾಡುವವನೂ ಶತ್ರುಗಳ ಧನಗಳನ್ನು ನಮಗೆ ಸೇರಿಸುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation

We invoke for our protection the opulent Indra, distinguished in this combat; the leader in the foodbestowing (strife), hearing (our praises), terrible in battles, the destroyer of foes, the conqueror of wealth.

———

## ಮೂವತ್ತೊಂದನೆಯ ಸೂಕ್ತವು

ಸಾಯಣಭಾಷ್ಯಂ

ಶಾಸದ್ವಹ್ನಿರಿತಿ ದ್ವಾವಿಂಶತ್ಯೃಚಂ ದ್ವಿತೀಯಂ ಸೂಕ್ತಂ । ಅತ್ರಾನುಕ್ರಮಣಿಕಾ । ಶಾಸತ್ ಕುಶಿಕೋ ವಿಶ್ವಾಮಿತ್ರ ಏವ ವಾ ಶ್ರುತೇರಿತಿ । ಇಷೀರಥಸ್ಯ ಪುತ್ರಃ ಕುಶಿಕೋ ವಿಶ್ವಾಮಿತ್ರ ಏವ ವಾ ಋಷಿಃ । ಇಂದ್ರೋ ದೇವತಾ । ತ್ರಿಷ್ಟುಪ್ ಛಂದಃ ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಸವನೇಽಚ್ಛಾ-

**ವಾಕಶಸ್ತ್ರ ಆರಂಭಣೀಯಾಯಾ ಊರ್ಧ್ವಮಹೀನಸೂಕ್ತಸಂಜ್ಞಕಮೇತತ್ಸೂಕ್ತಂ ಶಂಸನೀಯಂ । ಸೂತ್ರಿತಂ ಚ । ಅಸ್ಮಾ ಇದು ಪ್ರ ತವಸೇ ಶಾಸದ್ವಹ್ನಿರಿತೀತರಾವಹೀನಸೂಕ್ತೇ । ಆ. ೭-೪ । ಇತಿ ॥ ಪೃಷ್ಠ್ಯಾಭಿಪ್ಲವಷಡಹಯೋಃ ಪ್ರಥಮೇಽಹನಿ ಮಾಧ್ಯಂದಿನಸವನೇಽಚ್ಛಾವಾಕಶಸ್ತ್ರೇಽಹೀನಸೂಕ್ತಸ್ಯ ಸ್ಥಾನೇ ತ್ರೀಣಿ ಸಂಪಾತಸೂಕ್ತಾನಿ । ತತ್ರೇದಂ ತೃತೀಯಂ ಸಂಪಾತಸೂಕ್ತಂ । ಇಮಾಮೂ ಷ್ವಿಚ್ಛಂತಿ ತ್ವಾ ಶಾಸದ್ವಹ್ನಿರಿತಿ ಸಂಪಾತಾಃ । ಆ. ೭-೫ । ಇತಿ ॥**

**ಅನುವಾದವು—ಶಾಸದ್ವಹ್ನಿಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಶಾಸತ್ ಕುಶಿಕೋ ವಿಶ್ವಾಮಿತ್ರ ಏವ ವಾ ಶ್ರುತೇರಿತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಇಷೀರಥಪುತ್ರನಾದ ಕುಶಿಕ ಎಂಬುವನು ಅಥವಾ ವಿಶ್ವಾಮಿತ್ರನೇ ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಯಾಗದ ಇಪ್ಪತ್ತನಾಲ್ಕನೆಯ ದಿವಸ ಮಾಧ್ಯಂದಿನ ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಪ್ರಾರಂಭದಲ್ಲಿ ಪಠಿಸುವ ಊರ್ಧ್ವ ಮಹೀನಸೂಕ್ತವನ್ನಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಸ್ಮಾ ಇದು ಪ್ರ ತವಸೇ ಶಾಸದ್ವಹ್ನಿರಿತೀತರಾವಹೀನಸೂಕ್ತೇ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು. ಮತ್ತೂ, ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಮೊದಲನೆಯ ದಿವಸ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಅಹೀನಸೂಕ್ತಕ್ಕಾಗಿ ಮೂರು ಸಂಪಾತಸೂಕ್ತಗಳನ್ನು ಪಠಿಸಬೇಕು. ಆ ಮೂರು ಸೂಕ್ತಗಳಲ್ಲಿ ಈ ಸೂಕ್ತವು ಮೂರನೆಯ ಸಂಪಾತಸೂಕ್ತವು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಇಮಾಮೂ ಷ್ವಿಚ್ಛಂತಿ ತ್ವಾ ಶಾಸದ್ವಹ್ನಿರಿತಿ ಸಂಪಾತಾಃ** ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು.

## ಸೂಕ್ತ—೩೧

---

ಮಂಡಲ—೩ ॥ ಅನುವಾಕ—೩ ॥ ಸೂಕ್ತ—೩೧ ॥
ಅಷ್ಟಕ—೩ ॥ ಅಧ್ಯಾಯ—೨ ॥ ವರ್ಗ—೫, ೬, ೭, ೮ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨

ಋಷಿಃ—ವಿಶ್ವಾಮಿತ್ರಃ ಕುಶಿಕೋ ವಾ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಶಾಸದ್ವಹ್ನಿರ್ದುಹಿತುರ್ನಪ್ತ್ಯಂ ಗಾದ್ವಿದ್ವಾಁ ಋತಸ್ಯ ದೀಧಿತಿಂ ಸಪರ್ಯನ್ ।**
**ಪಿತಾ ಯತ್ರ ದುಹಿತುಃ ಸೇಕಮೃಂಜನ್ತ್ಸಂ ಶಗ್ಮ್ಯೇನ ಮನಸಾ ದಧನ್ವೇ ॥ ೧ ॥**

ಪದಪಾಠಃ

ಶಾಸತ್ । ವಹ್ನಿಃ । ದುಹಿತುಃ । ನಪ್ತ್ಯಂ । ಗಾತ್ । ವಿದ್ವಾನ್ । ಋತಸ್ಯ । ದೀಧಿತಿಂ । ಸಪರ್ಯನ್ ।
ಪಿತಾ । ಯತ್ರ । ದುಹಿತುಃ । ಸೇಕಂ । ಋಂಜನ್ । ಸಂ । ಶಗ್ಮ್ಯೇನ । ಮನಸಾ । ದಧನ್ವೇ ॥ ೧ ॥

ಸಾಯಣಭಾಷ್ಯಂ

ಕುಶಿಕಃ ಪ್ರಸಂಗಾತ್ ಕಂಚಿತ್ ಶಾಸ್ತ್ರಾರ್ಥಂ ಬ್ರೂತೇ । ಅಪುತ್ರಸ್ಯ ಪಿತುಃ ಪುತ್ರೀ ದಾಯಾದಾ ಪುತ್ರಿಕಾ ಸತೀ । ಯತಃ ಸಂತಾನಕೃತ್ತಸ್ಯಾಃ ಪುತ್ರ ಇತ್ಯನಯೋಚ್ಯತ ಇತಿ । ಅಪುತ್ರೋ ಯಃ ಪಿತಾ ಕನ್ಯಾಮನ್ಯಕುಲಂ ಪ್ರಾಪಯತಿ ಸ ವಹ್ನಿರಿತ್ಯುಚ್ಯತೇ । ಸ ಪಿತಾ ಶಾಸತ್ । ಅಭ್ರಾತೃಕಾಂ ಪ್ರದಾಸ್ಯಾಮಿ ತುಭ್ಯಂ ಕನ್ಯಾಮಲಂಕೃತಾಂ । ಅಸ್ಯಾಂ ಯೋ ಜಾಯತೇ ಪುತ್ರಃ ಸ ಮೇ ಪುತ್ರೋ ಭವೇದಿತಿ । ವಾಸಿ. ೧೭-೧೭ । ಸ್ಮೃತ್ಯುಕ್ತಮನುಶಾಸನಂ ಕುರ್ವನ್ ದುಹಿತುಃ ಪುತ್ರಿಕಾಯಾ ನಪ್ತ್ಯಂ ನಪ್ತಾರಂ ಪೌತ್ರಂ ಗಾತ್ । ಗಚ್ಛತಿ । ದುಹಿತುಃ ಪುತ್ರತ್ವೇನ ಸ್ವೀಕಾರಾದ್ದೌಹಿತ್ರಂ ನಪ್ತೃಭವಂ ಪಿಂಡದಾನಾದಿಕಂ ಕರ್ತವ್ಯತಯಾ ಗಾತ್ । ಗಚ್ಛತಿ । ಕಿಂ ಕುರ್ವನ್ । ವಿದ್ವಾನ್ ಅಸ್ಯಾಂ ದುಹಿತರಿ ಜಾತಃ ಪುತ್ರೋ ಮಮ ಸ್ವಧಾಕರೋ ಭವಿಷ್ಯತೀತಿ ಜ್ಞಾನನ್ ಋತಸ್ಯ ಸತ್ಯಸ್ಯ ಪುತ್ರೋತ್ಪಾದನಸಮರ್ಥಸ್ಯ ರೇತಸೋ ದೀಧಿತಿಂ ಧರ್ತಾರಂ ಜಾಮಾತರಂ ತತ್ಪತಿಂ ಸಪರ್ಯನ್ ವಸ್ತ್ರಾಲಂಕಾರಾದಿನಾ ಪೂಜಯನ್ ಪಿತಾ ನಪ್ತೃಭವಂ ಗಚ್ಛತಿ । ಯತ್ರ ಯಸ್ಮಿನ್ವಿಷಯೇ ಪಿತಾಪುತ್ರೋ ಜನಕೋ ದುಹಿತುರಪ್ರತ್ತಾಯಾಃ ಸ್ವಕನ್ಯಾಯಾಃ ಸೇಕಂ ರೇತಸಃ ಸೇಕಂ ತಸ್ಯಾಂ ರೇತಃಸೇಕಮೃಂಜನ್ ಪ್ರಸಾಧಯನ್ ಶಗ್ಮ್ಯೇನ ಸುಖನಿಮಿತ್ತೇನ ಮನಸಾ ಸಂದಧನ್ವೇ । ಆತ್ಮಾನಂ ಸಂಧತ್ತೇ । ಅಪುತ್ರತ್ವನಿಮಿತ್ತದುಃಖಾಪಗಮಾತ್ । ಯಸ್ಯಾ ದುಹಿತುಃ ಪಿತಾ ಪಾಲಕಃ ಪತಿರ್ಜಾಮಾತಾ ಸೇಕಂ ತಸ್ಯಾಂ ರೇತಃಸೇಕಮೃಂಜನ್ ಪ್ರಸಾಧಯನ್ ಸಂ ಶಗ್ಮ್ಯೇನ ಕೇವಲಂ ಸುಖನಿಮಿತ್ತೇನ ಮನಸಾ ತಯಾ ಸ್ವಶರೀರಂ ಸಂದಧನ್ವೇ । ಸಂಧತ್ತೇ । ನ ತು ಪುತ್ರನಿಮಿತ್ತೇನ ಮನಸಾ । ಏತಮರ್ಥಂ ಯಾಸ್ಕೋಽಪ್ಯಾಹ । ಪ್ರಶಾಸ್ತಿ ವೋಢಾ ಸಂತಾನಕರ್ಮಣೇ ದುಹಿತುಃ ಪುತ್ರಭಾವಂ । ದುಹಿತಾ ದುರ್ಹಿತಾ ದೂರೇ ಹಿತಾ ದೋಗ್ಧೇರ್ವಾ । ನಪ್ತಾರಮುಪಾಗಮದ್ದೌಹಿತ್ರಂ ಪೌತ್ರಮಿತಿ ವಿದ್ವಾನ್ಪ್ರಜನನಯಜ್ಞಸ್ಯ ರೇತಸೋ ವಾಂಗಾದಂಗಾತ್ಸಂಭೂತಸ್ಯ ಹೃದಯಾದಧಿ ಜಾತಸ್ಯ ಮಾತರಿ ಪ್ರತ್ಯೃತಸ್ಯ ವಿಧಾನಂ ಪೂಜಯನ್ನಿತ್ಯಾದಿನಾ । ನಿ. ೩-೪ ॥ ಶಾಸತ್ । ಶಾಸೇಃ ಶತರ್ಯಭ್ಯಸ್ತತ್ವಾನ್ನುಮಭಾವಃ । ದುಹಿತುಃ । ದುಹ ಪ್ರಪೂರಣೇ । ನಪ್ತೃನೇಷ್ಟೃ ಇತ್ಯಾದಿನಾ ತೃಚಿ ನಿಪಾತನಾದಿಡಾಗಮಃ । ಚಿತ್ಸ್ವರಃ । ನಪ್ತ್ಯಂ । ನಪ್ತರಿ ಭವಂ । ಭವೇ ಛಂದಸೀತಿ ಯತ್ । ರೀಙೃತ ಇತಿ ರೀಙಾದೇಶಃ । ಯಸ್ಯೇತಿ ಲೋಪಃ । ರೇಫಲೋಪಶ್ಛಾಂದಸಃ । ತಿತ್ಸ್ವರಿತಃ । ಗಾತ್ । ಇಣ್ ಗತಾವಿತ್ಯಸ್ಯ ಛಾಂದಸೇ ಲುಙಿ ರೂಪಂ । ಋಂಜನ್ । ಋಂಜತಿಃ ಪ್ರಸಾಧನಕರ್ಮಾ । ಶಗ್ಮ್ಯೇನ । ಶಂ ಸುಖಂ ಗಚ್ಛಂತೀತಿ ಗಮೇರೌಣಾದಿಕಃ ಕಪ್ರತ್ಯಯಃ । ಕಿತ್ತ್ವಾದ್ಗಮಹನೇತ್ಯಾದಿನೋಪಧಾಲೋಪಃ । ಶಗ್ಮೇ ಸಾಧುರಿತಿ ತತ್ರ ಸಾಧುರಿತಿ ಯತ್ಪ್ರತ್ಯಯಃ । ವೀರವೀರ್ಯೌ ಚೇತ್ಯತ್ರ ಯತೋಽನಾವ ಇತ್ಯಸ್ಯಾನಿತ್ಯತ್ವಸ್ಯ ಜ್ಞಾಪಿತತ್ವಾದತ್ರ ತಿತ್ಸ್ವರಃ । ದಧನ್ವೇ । ಧವಿ ಸೌತ್ರೋ ಧಾತುಃ । ಲಿಟಿ ರೂಪಂ । ಪ್ರತ್ಯಯಸ್ವರಃ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ವಹ್ನಿಃ**—(ಪುತ್ರಿಯನ್ನು ಜಾಮಾತೃವಿಗೆ) ವಹಿಸಿಕೊಡತಕ್ಕ ಪಿತೃವು | **ಶಾಸತ್**—(ಸ್ವಪುತ್ರಿಯ ಮಗನೇ ತನಗೂ ಪುತ್ರನಾಗುವನೆಂದು) ಆದೇಶವನ್ನು ಕೊಡುತ್ತಲೂ | **ವಿದ್ವಾನ್**—ಅದೇ ವಿಧವಾಗಿ ತಾನೂ ತಿಳಿಯುತ್ತಲೂ **ಋತಸ್ಯ**—ಪುತ್ರೋತ್ಪಾದಕವಾದ ರೇತಸ್ಸನ್ನು | **ದೀಧಿತಿಂ**—ವಹಿಸಿರುವ ಅಳಿಯನನ್ನು | **ಸಪರ್ಯನ್** — ಆದರಿಸಿ ಸತ್ಕರಿಸುತ್ತಲೂ | **ನಪ್ತ್ಯಂ ಗಾತ್**—ನಪ್ತೃವಿಗೆ ಪಿತನಾಗುತ್ತಾನೆ | **ದುಹಿತುಃ ಪಿತಾ**—(ಅವನ) ಪುತ್ರಿಯಪಾಲಕನಾದ ಜಾಮಾತೃವು | **ಸೇಕಂ**—(ಅವಳಲ್ಲಿ) ರೇತಃಸೇಚನವನ್ನು | **ಋಂಜನ್**—ಉಂಟುಮಾಡುತ್ತಾ | **ಶಗ್ಮ್ಯೇನ**—ಸುಖನಿಮಿತ್ತವಾದ ಮನಸ್ಸಿನೊಡನೆ | **ಸಂ ದಧನ್ವೇ**—ಅವಳೊಂದಿಗೆ ಸೇರಿಕೊಳ್ಳುತ್ತಾನೆ ||

ಭಾವಾರ್ಥ

ಪುತ್ರಿಯನ್ನು ಜಾಮಾತೃವಿಗೆ (ಅಳಿಯನಿಗೆ) ವಹಿಸಿಕೊಡತಕ್ಕ ಪಿತೃವು ಸ್ವಪುತ್ರಿಯ ಮಗನೇ ತನಗೂ ಪುತ್ರನಾಗುವನೆಂಬ ಆದೇಶವನ್ನು ಕೊಡುತ್ತಲೂ, ಅದೇ ಭಾವನೆಯಿಂದ ಸ್ವಪುತ್ರಿಯಲ್ಲಿ ಪುತ್ರೋತ್ಪಾದಕನಾದ ಜಾಮಾತೃವನ್ನು ಅಲಂಕಾರಾದ್ಯಾದರಗಳಿಂದ ಸತ್ಕರಿಸುತ್ತಲೂ ( ಅವನಿಗೆ ತನ್ನ ಪುತ್ರಿಯನ್ನು ಕೊಟ್ಟು ) ತನ್ನ ನಪ್ತೃವಿಗೆ (ಮೊಮ್ಮಗನಿಗೆ) ಪಿತೃರೂಪದಲ್ಲಿರುತ್ತಾನೆ. ಆವನ ಜಾಮಾತೃವಾದರೋ, ಅವಳಲ್ಲಿ ರೇತಃಸೇಚನವನ್ನುಂಟುಮಾಡುತ್ತಾ ಸ್ವಸುಖದ ಅಭಿಲಾಷೆಯಿಂದ ಅವಳೊಂದಿಗೆ ಸೇರಿಕೊಳ್ಳುತ್ತಾನೆ.

## English Translation

The sonless father, regulating (the contract), refers to his grandson, (the son) of his daughter, and relying on the efficiency of the rite, honours (his son-in-law) with valuable gifts: the father, trusting to the impregnation of the daughter, supports himself with a tranquil mind.

ವಿಶೇಷವಿಷಯಗಳು

**ವಹ್ನಿಃ**—**ಅಪುತ್ರೋ ಯಃ ಪಿತಾ ಕನ್ಯಾಮನ್ಯಕುಲಂ ಪ್ರಾಪಯತಿ ಸ ವಹ್ನಿರಿತ್ಯುಚ್ಯತೇ** | ಪುತ್ರಹೀನನಾದ ಪುರುಷನು ತನ್ನ ಪುತ್ರಿಯನ್ನು ಬೇರೆ ಕುಲದ (ಗೋತ್ರದ) ಯುವಕನಿಗೆ ಮದುವೆಮಾಡಿಕೊಡುವನು. ಆ ಪುತ್ರಿಯಲ್ಲಿ ಹುಟ್ಟುವ ಮಗನು ( ದೌಹಿತ್ರವು ) ತನಗೆ ಪುತ್ರನಂತಿರುವನು ಎಂಬ ಉದ್ದೇಶದಿಂದ ಆರೀತಿ ಮಾಡುವನು. ಇಂತಹ ಕನ್ಯಾಪಿತೃವಿಗೆ **ವಹ್ನಿಃ** ಎಂದು ಹೆಸರು ಎಂದು ಭಾಷ್ಯಕಾರರು ವಹ್ನಿಶಬ್ದಕ್ಕೆ ಅರ್ಥವಿವರಣೆಮಾಡಿರುವರು.

**ಅಪುತ್ರಸ್ಯ ಪಿತುಃ ಪುತ್ರೀ ದಾಯಾದಾ ಪುತ್ರಿಕಾ ಸತೀ |**
**ಯತಃ ಸಂತಾನಕೃತ್ತಸ್ಯಾಃ ಪುತ್ರ ಇತ್ಯನಯೋಚ್ಯತೇ ||**

ಪುತ್ರನಿಲ್ಲದೆ ಪುತ್ರಿಯನ್ನು ಮಾತ್ರ ಪಡೆದಿರುವ ತಂದೆಗೆ ಪುತ್ರಿಯೇ ಪುತ್ರನೆಂದು ಹೇಳಲ್ಪಡುವಳು. ಏಕೆಂದರೆ, ಈ ಪುತ್ರಿಯಿಂದ ಸಂತಾನಾದಿಗಳು ಉಂಟಾಗಿ ಇವನ ವಂಶಾಭಿವೃದ್ಧಿಯಾಗುವುದು. ವಾಸಿಷ್ಠಸ್ಮೃತಿಯಲ್ಲಿ—

**ಅಭ್ರಾತೃಕಾಂ ಪ್ರದಾಸ್ಯಾಮಿ ತುಭ್ಯಂ ಕನ್ಯಾಮಲಂಕೃತಾಂ |**
**ಅಸ್ಯಾಂ ಯೋ ಜಾಯತೇ ಪುತ್ರಃ ಸ ಮೇ ಪುತ್ರೋ ಭವೇದಿತಿ ||**

(ವಾಸಿಷ್ಠಸ್ಮೃತಿ ೧೭-೧೭)

ಎಂದು ಹೇಳಿದೆ. ಎಂದರೆ ಈ ವಾಕ್ಯವನ್ನು ಜಾಮಾತೃವಿಗೆ (ಅಳಿಯನಿಗೆ) ಕನ್ಯಾದಾನಮಾಡುವಾಗ ಕನ್ಯಾಪಿತೃವು ಹೇಳಿದ ವಾಕ್ಯವು. ಸಾಲಾಂಕೃತಳಾದ ಮತ್ತು ಸಹೋದರರಿಲ್ಲದ ಈ ನನ್ನ ಕನ್ಯೆಯನ್ನು ನಿನಗೆ ವಿವಾಹಮಾಡಿಕೊಡುವೆನು. ಇವಳಲ್ಲಿ ಹುಟ್ಟುವ ಪುತ್ರನು ನನಗೂ ಪುತ್ರಸಮಾನನಾಗಿಯೇ ಇರುವನು ಎಂದರೆ ಈ ಮೂಲಕ ನನ್ನ ವಂಶಾಭಿವೃದ್ಧಿಯು ಆಗಲಿ ಎಂಬು ಇವರ ಅಭಿಪ್ರಾಯವು. ಈ ವಿಷಯವನ್ನು ವಿವರಿಸುತ್ತಾ Wilson ಎಂಬ ಆಂಗ್ಲಪಂಡಿತನು ಈ ರೀತಿ ಹೇಳಿರುವನು—

The latter (ವಹ್ನಿಃ) is said to be the father of a daughter only, not of a son, because he conveys away (ವಹತಿ, ಪ್ರಾಪಯತಿ) his property through his married daughter into another family; ಶಾಸತ್, ಶಸ್ತಿ—he stipulates, that his daughter's son, his grandson ದುಹಿತುರ್ನಪ್ತ್ಯಂ shall be his son, a mode of affiliation recognised by law; and relying on an heir thus obtained, and one who can perform his funeral rites, he is satisfied.

ಯಾಸ್ಕರು ಈ ಋಕ್ಕಿನ ವಿಷಯದಲ್ಲಿ ನಿರ್ವಚನವನ್ನು (ನಿ. ೩-೩) ಹೇಳಿದ್ದಾರೆ—

ಅಥೈನಾಂ ದುಹಿತೃದಾಯಾದ್ಯ ಉದಾಹರಂತಿ ।
ಪುತ್ರದಾಯಾದ್ಯ ಇತ್ಯೇಕೇ ॥
ಶಾಸದ್ವಹ್ನಿರ್ದುಹಿತುರ್ನಪ್ತ್ಯಂಗಾದ್ವಿದ್ವಾँ ಋತಸ್ಯ ದೀಧಿತಿಂ ಸಪರ್ಯನ್ ।
ಪಿತಾ ಯತ್ರ ದುಹಿತುಃ ಸೇಕಮೃಂಜನ್ತ್ಸಂಶಗ್ಮ್ಯೇನ ಮನಸಾ ದಧನ್ವೇ ॥

(ಋ. ಸಂ. ೩-೧೩-೧).

ದುಹಿತಾ ದುರ್ಹಿತಾ ದೂರೇ ಹಿತಾ । ದೋಗ್ಧೇರ್ವಾ ॥

ನಪ್ತಾರಮುಪಾಗಮದ್ದೌಹಿತ್ರಂ ಪೌತ್ರಮಿತಿ । ವಿದ್ವಾನ್ ಪ್ರಜನನಯಜ್ಞಸ್ಯ ರೇತಸೋ ವಾ ಅಂಗಾದಂಗಾತ್ಸಂಭೂತಸ್ಯ ಹೃದಯಾದಧಿಜಾತಸ್ಯ ಮಾತರಿ ಪ್ರತ್ಯೃತಸ್ಯ । ವಿಧಾನಂ ಪೂಜಯನ್ನವಿಶೇಷೇಣ ಮಿಥುನಾಃ ಪುತ್ರಾ ದಾಯಾದಾ ಇತಿ ॥

ತದೇತದೃಕ್ಶ್ಲೋಕಾಭ್ಯಾಮಭ್ಯುಕ್ತಂ—

ಅಂಗಾದಂಗಾತ್ಸಂಭವಸಿ ಹೃದಯಾದಧಿ ಜಾಯಸೇ ।
ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ ಶತಂ ॥

(ಗೋಭಿಲಗೃಹ್ಯ. ಸೂ. ೨-೮-೨೧ ಮತ್ತು ತೈ. ಆ,).

ಅವಿಶೇಷೇಣ ಪುತ್ರಾಣಾಂ ದಾಯೋ ಭವತಿ ಧರ್ಮತಃ ।
ಮಿಥುನಾನಾಂ ವಿಸರ್ಗಾದೌ ಮನುಃ ಸ್ವಾಯಂಭುವೋಽಬ್ರವೀತ್ ॥

ನ ದುಹಿತರ ಇತ್ಯೇಕೇ । ತಸ್ಮಾತ್ಪುಮಾನ್ ದಾಯಾದೋಽದಾಯಾದಾ ಸ್ತ್ರೀತಿ ವಿಜ್ಞಾಯತೇ । ತಸ್ಮಾತ್ಸ್ತ್ರಿಯಂ ಪರಾಸ್ಯಂತಿ ನ ಪುಮಾಂಸಮಿತಿ ಚ ॥ ಸ್ತ್ರೀಣಾಂ ದಾನವಿಕ್ರಯಾತಿಸರ್ಗಾ ವಿದ್ಯಂತೇ ನ ಪುಂಸಃ ॥

ಪುಂಸೋಽಪೀತ್ಯೇಕೇ, ಶೌನಃಶೇಪೇ ದರ್ಶನಾತ್ ।
ಅಭ್ರಾತೃಮತೀವಾದ ಇತ್ಯಪರಂ ॥

(ನಿ. ೩-೩, ೪, ೫).

ಈಗ ದುಹಿತೃದಾಯಾದಿಗಳ ಎಂದರೆ ಪುತ್ರಿಯ ಮೂಲಕ ಸಂತಾನಾಭಿವೃದ್ಧಿಯ ವಿಷಯವನ್ನು ಪರಿಶೀಲಿಸುವೆವು. ಒಬ್ಬ ಪುರುಷನಿಗೆ ಪುತ್ರನೂ, ಪುತ್ರಿಯೂ ಇದ್ದರೆ ಅವರ ಮೂಲಕ ಆ ಪುರುಷನ ಸಂತಾನಾಭಿವೃದ್ಧಿಯಾಗುತ್ತದು. ಎಂದರೆ ವಂಶಾಭಿವೃದ್ಧಿಯಾಗುವುದು. ಪುತ್ರನಿಂದ ಉಂಟಾಗುವ ಸಂತತಿಗೆ ಪುತ್ರದಾಯಾದಿಗಳೆಂದೂ ಪುತ್ರಿಯಿಂದ ಉಂಟಾಗುವ ಸಂತತಿಗೆ ದುಹಿತೃದಾಯಾದಿಗಳೆಂದೂ ವ್ಯವಹಾರವಿರುವುದು. ಇಲ್ಲಿ ದಾಯಾದ ಶಬ್ದದ ಅರ್ಥವಿವರಣೆಮಾಡುವುದು ಅವಶ್ಯಕವಾಗಿರುವುದು. ದಾಯವೆಂದರೆ ಆಸ್ತಿಯಲ್ಲಿ ಪುತ್ರ ಅಥವಾ ಪುತ್ರಿಗೆ ಸಲ್ಲುವ ಭಾಗ. ದಾಯಾ + ಆದಃ = ದಾಯಾದಃ ಆ ಆಸ್ತಿಭಾಗವನ್ನು ಅನುಭವಿಸಲು ಹಕ್ಕಿರುವ ಪುತ್ರ ಅಥವಾ ಪುತ್ರಿಗೆ ದಾಯಾದ ಎಂದು ಹೇಳುವ ರೂಢಿ ಇರುವುದು. ಪ್ರಕೃತಋಕ್ಕಿನಲ್ಲಿ ದುಹಿತೃದಾಯಾದಿಗಳ ವಿಷಯವು ಉಕ್ತವಾಗಿದೆ.

ಕೆಲವು ಧರ್ಮಶಾಸ್ತ್ರಜ್ಞರು ಪುತ್ರನಂತೆ ಪುತ್ರಿಗೂ ದಾಯಭಾಗ ಸಲ್ಲಬೇಕಾದುದು ನ್ಯಾಯವೆಂದು ಹೇಳುತ್ತಾರೆ. ಕನ್ಯಾಪಿತೃವು ತನ್ನ ಪುತ್ರಿಯನ್ನು ಬೇರೆ ಗೋತ್ರದ ಓರ್ವಪುರುಷನಿಗೆ ವಿವಾಹಮಾಡಿಕೊಡುವಾಗ ತನ್ನ ಪುತ್ರಿಯಲ್ಲಿ ಉತ್ಪನ್ನನಾಗುವ ಪುತ್ರನು ತನಗೂ ಪುತ್ರಸಮಾನನಾಗುವನೆಂಬ ಎಂದರೆ ತನಗೆ ಮರಣಾನಂತರ ಉತ್ತರಕ್ರಿಯಾದಿಗಳನ್ನು ಪುತ್ರರಂತೆ ಮಾಡುವನೆಂಬ ಭರವಸೆಯನ್ನು ಇಟ್ಟುಕೊಂಡಿರುವನು ಮತ್ತು ಆ ವಿವಾಹವನ್ನು ವಿಧ್ಯುಕ್ತಕ್ರಿಯೆಯಿಂದ ಮಾಡಿ ಮನಶ್ಶಾಂತಿಯನ್ನು ಹೊಂದುವನು. ಅಳಿಯನೂ ಸಹ ತನ್ನ ಪತ್ನಿಯಲ್ಲಿ ಹುಟ್ಟುವ ಪುತ್ರನು ತನ್ನ ಮಾವನಿಗೆ ಪುತ್ರನಂತೆ ಇರಬಹುದೆಂಬ ವಿಷಯವನ್ನು ಸಂಮತಿಸುವನು. ಇಲ್ಲಿ ದುಹಿತೃಶಬ್ದಕ್ಕೆ ಯಾಸ್ಕರು ಈರೀತಿ ಅರ್ಥವಿವರಣೆ ಮಾಡಿರುವರು—ತನ್ನ ಪುತ್ರಿಯ ಯೋಗಕ್ಷೇಮದ ವ್ಯವಸ್ಥೆಮಾಡುವುದು ಕಷ್ಟವಾದ್ದರಿಂದ ಅಥವಾ ಆ ಪುತ್ರಿಯು (ವಿವಾಹಾನಂತರ) ತನ್ನ ಸಮೀಪವನ್ನು ತ್ಯಜಿಸಿ ದೂರದಲ್ಲಿ (ಎಂದರೆ ತನ್ನ ಪತಿಯಗೃಹದಲ್ಲಿ) ವಾಸಮಾಡುವವಳಾದ್ದರಿಂದ ಪುತ್ರಿಗೆ ದುಹಿತೃವೆಂದು ಹೆಸರು. ಅಥವಾ ಹಸುವು ಹಾಲನ್ನು ಕರೆಯುವಂತೆ ಪುತ್ರಿಯು ಪುತ್ರನನ್ನು ಉತ್ಪತ್ತಿಮಾಡುವಳೆಂಬ ಅರ್ಥವನ್ನು ಸೂಚಿಸುವ ದುಹ್ (ಹಾಲನ್ನು) ಕರಿ ಎಂಬ ಧಾತುವಿನಿಂದ ನಿಷ್ಪನ್ನವಾಗಬಹುದೆಂದೂ ನಿರ್ವಚನವನ್ನು ಹೇಳಿರುವರು.

ಪುತ್ರನೂ, ಪುತ್ರಿಯೂ ಸಹ ತಂದೆಯ ಅಂಗದಿಂದ ಮತ್ತೂ ಹೃದಯದಿಂದ ಉತ್ಪನ್ನರಾಗುವ ಕಾರಣ ಪುತ್ರಪುತ್ರಿಯರಿಬ್ಬರೂ ದಾಯಾರ್ಹರೆಂದು ಕೆಲವರ ಅಭಿಮತ. ಈ ವಿಷಯವು ಅಂಗಾದಂಗಾತ್ಸಂಭವಸಿ ಎಂಬ ಮೇಲೆ ಉದಾಹರಿಸಿರುವ ಋಕ್ಕಗಳಲ್ಲಿ ಉಕ್ತವಾಗಿದೆಯೆಂದು ಹೇಳುವರು. ಈ ಋಕ್ಕುಗಳನ್ನು ಪುತ್ರ ಅಥವಾ ಪುತ್ರಿಯ ಜಾತಕರ್ಮಕಾಲದಲ್ಲಿ ಶಿಶುವಿನ ಶಿರಸ್ಸನ್ನು ಆಘ್ರಾಣಿಸುವಾಗ ತಂದೆಯು ಹೇಳಬೇಕಾದ ಮಂತ್ರಗಳೆಂದು ಗೃಹ್ಯಸೂತ್ರಾದಿಗಳಲ್ಲಿ ಹೇಳಿದೆ. ಸ್ವಾಯಂಭುವಮನುವೂ ಕೂಡ ಸೃಷ್ಟ್ಯಾದಿಯಲ್ಲಿ—ಪುತ್ರ ಮತ್ತು ಪುತ್ರಿ ಎಂಬ ಸಂತತಿಯು ಸ್ತ್ರೀಪುರುಷರ ಮಿಥುನದಿಂದ ಜನಿಸುವವರಾದ್ದರಿಂದ ಪುತ್ರಪುತ್ರಿಯರಿಬ್ಬರಿಗೂ ದಾಯವು (ಆಸ್ತಿಯಲ್ಲಿ ಭಾಗವು) ಸಲ್ಲಬೇಕೆಂದು ಹೇಳಿದಾನೆ. ಕೆಲವರು ಪುತ್ರನಿಗೇ ದಾಯವು ಸಲ್ಲಬೇಕು ಪುತ್ರಿಗೆ ಸೇರಕೂಡದೆಂದು ವಾದಿಸುತ್ತಾರೆ ಏಕೆಂದರೆ, ಹೆಣ್ಣು ಶಿಶುವು ಉತ್ಪನ್ನವಾದರೆ ಅದನ್ನು ಅಷ್ಟಾಗಿ ಗೌರವಿಸುವುದಿಲ್ಲ. ಎಂದಿದ್ದರೂ ಆ ಶಿಶುವು ಬೇರೆಯವರ ಮನೆಗೆ ಹೊರಟುಹೋಗುವುದು. ಮತ್ತು ದಾನ (ಕನ್ಯಾದಾನ) ಕ್ರಯ ಮೊದಲಾದವುಗಳಿಂದ ಪುತ್ರಿಯನ್ನು ತ್ಯಜಿಸಬೇಕಾಗುವುದು, ಪುತ್ರನ ವಿಷಯ ಹಾಗಲ್ಲ. ಅವನು ಪಿತೃವಿನ ಮನೆಯಲ್ಲಿಯೇ ಇರುವನು ಎಂದು ಇವರ ವಾದವು.

ಇನ್ನು ಕೆಲವರು–ಪುತ್ರನನ್ನು ತ್ಯಜಿಸಬೇಕಾದ ಸಂದರ್ಭಗಳೂ ಇರುವವು. ಶುನಃಶೇಪನ ವಿಷಯವೇ ಇದಕ್ಕೆ ದೃಷ್ಟಾಂತವು ಎಂದು ವಾದಿಸುವರು. ಮತ್ತೆ ಕೆಲವರು–ಒಬ್ಬ ತಂದೆಗೆ ಪುತ್ರಿಮಾತ್ರ ಇದ್ದು ಆ ಪುತ್ರಿಗೆ ಅಣ್ಣನಾಗಲಿ, ತಮ್ಮನಾಗಲಿ ಇಲ್ಲದಿದ್ದರೆ (ಅಭ್ರಾತೃಮತೀ) ಅಂತಹ ಸಂದರ್ಭದಲ್ಲಿ ಪುತ್ರಿಯೇ ತಂದೆಯ ಸಮಸ್ತ ಆಸ್ತಿಗೂ ಬಾಧ್ಯಳು ಎಂದು ಹೇಳುವರು. ಈರೀತಿ ಈ ವಿಷಯದಲ್ಲಿ ಅನೇಕ ಮತಭೇದಗಳಿರುವುದನ್ನು ಯಾಸ್ಕರು ವಿವರಿಸಿದಾರೆ.

ಸಂಹಿತಾಪಾಠಃ

ನ ಜಾಮಯೇ ತಾನ್ವೋ ರಿಕ್ಥಮಾರೈಕ್ಚಕಾರ ಗರ್ಭಂ ಸನಿತುರ್ನಿಧಾನಂ ।
ಯದೀ ಮಾತರೋ ಜನಯಂತ ವಹ್ನಿಮನ್ಯಃ ಕರ್ತಾ ಸುಕೃತೋರನ್ಯ ಋಂಧನ್ ॥

ಪದಪಾಠಃ

ನ । ಜಾಮಯೇ । ತಾನ್ವಃ । ರಿಕ್ಥಂ । ಅರೈಕ್ । ಚಕಾರ । ಗರ್ಭಂ । ಸನಿತುಃ । ನಿಽಧಾನಂ ।
ಯದಿ । ಮಾತರಃ । ಜನಯಂತ । ವಹ್ನಿಂ । ಅನ್ಯಃ । ಕರ್ತಾ । ಸುಽಕೃತೋಃ । ಅನ್ಯಃ । ಋಂಧನ್ ॥೨॥

ಸಾಯಣಭಾಷ್ಯಂ

ಅಭ್ರಾತೃಕಾಯಾ ದುಹಿತುಃ ಪುತ್ರಿಕಾಕರಣಾತ್ ಸಾ ರಿಕ್ಥಭಾಗಿತ್ಯುಕ್ತಂ । ಭ್ರಾತೃಮತ್ಯಾಸ್ತಸ್ಯಾ ರಿಕ್ತಭಾಕ್ತ್ವಂ ನಾಸ್ತೀತಿ ಬ್ರೂತೇ । ತಾನ್ವಸ್ತನೂಜ ಔರಸಃ ಪುತ್ರೋ ಜಾಮಯೇ ಭಗಿನ್ಯೈ ರಿಕ್ಥಂ ಪಿತ್ರ್ಯಂ ಧನಂ ನಾರೈಕ್ । ವ ಪ್ರರೇಚಯತಿ । ನ ಪ್ರದದಾತಿ । ಕಿಂ ತರ್ಹಿ । ಸನಿತುರೇನಾಂ ಸಂಭಜಮಾನಸ್ಯ ಭರ್ತುರ್ಗರ್ಭಂ । ಷಷ್ಠ್ಯರ್ಥೇ ದ್ವಿತೀಯಾ । ಗರ್ಭಸ್ಯ ನಿಧಾನಂ ರೇತಃಸೇಕನಿಧಾನೀಮೇನಾಂ ಚಕಾರ । ಪಾಣಿಗ್ರಹಣೇನ ಸಂಸ್ಕೃತಾಮೇನಾಂ ಕರೋತಿ । ನ ತು ತಸ್ಯೈ ರಿಕ್ಥಂ ದದಾತೀತ್ಯಭಿಪ್ರಾಯಃ । ಅಸಂಸ್ಕೃತಾಸ್ತು ಸಂಸ್ಕಾರ್ಯಾ ಭ್ರಾತೃಭಿಃ ಪೂರ್ವಸಂಸ್ಕೃತೈಃ । ಭಗಿನ್ಯಶ್ಚ ನಿಜಾದಂಶಾದ್ದತ್ವಾಂಶಂ ತು ತುರೀಯಕಮಿತಿ ಯಾಜ್ಞವಲ್ಕ್ಯಸ್ಮರಣಾತ್ । ೨-೧೨೪ । ಸ್ತ್ರೀಪುಂಸಲಣಸ್ಯಾಪತ್ಯಸ್ಯೈಕೋತ್ಪಾದ್ಯತ್ವಾವಿಶೇಷಾತ್ಪುಮಪತ್ಯಸ್ಯ ಕೋ ವಿಶೇಷ ಇತ್ಯಾಶಂಕ್ಯ ವಿಶೇಷಂ ದರ್ಶಯತಿ । ಯದಿ ಯದ್ಯಪಿ ಮಾತರೋ ಮಾತಾಪಿತರೌ ವಹ್ನಿಂ । ಅವಹ್ನಿಃ ಸ್ತ್ರೀ ವಹ್ನಿಃ ಪುಮಾನ್ ಸ್ವಭಾರ್ಯಯಾ ವೋಢೃತ್ವಾತ್ । ಅವಹ್ನಿಶ್ಚ ವಹ್ನಿಃ ತಾಪೃಶಂ ಸ್ತ್ರೀಪುಂಸಲಕ್ಷಣಮಪತ್ಯಂ ಜನಯಂತ । ತಥಾಪಿ ತಯೋರ್ಮಧ್ಯೇಽನ್ಯಃ ಪುಂಲಕ್ಷಣಃ ಸುಕೃತೋಃ ಶೋಭನಸ್ಯ ಪಿಂಡದಾನಾದೇಃ ಕರ್ಮಣಃ ಕರ್ತಾ ಭವತಿ । ಅನ್ಯಃ ಸ್ತ್ರೀಲಕ್ಷಣ ಋಂಧನ್ ವಸ್ತ್ರಾಲಂಕಾರಾದಿನಾ ಋಧ್ಯಮಾನ ಏವ ಭವತಿ । ಪಿಂಡದಾನಾದಿಕರ್ತೃತ್ವಾತ್ಪುತ್ರೋ ದಾಯಾರ್ಹಃ ದುಹಿತಾ ತಥಾ ನೇತಿ ನ ದಾಯಾರ್ಹಾ ಸಾ ತು ಕೇವಲಂ ಪರಸ್ಮೈ ದೀಯತೇ । ತಥಾ ಚ ನಿರುಕ್ತಂ । ನ ಜಾಮಯೇ ಭಗಿನ್ಯೈ । ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ । ತಾನ್ವ ಆತ್ಮಜಃ ಪುತ್ರೋ ರಿಕ್ಥಂ ಪ್ರಾರಿಚತ್ಪ್ರಾದಾಚ್ಚಕಾರೈನಾಂ ಗರ್ಭನಿಧಾನೀಂ ಸನಿತುರ್ಹಸ್ತಗ್ರಾಹಸ್ಯ ಯದಿಹ ಮಾತರೋಽಜನಯಂತ ವಹ್ನಿಂ ಪುತ್ರಮವಹ್ನಿಂ ಚ ಸ್ತ್ರಿಯಮನ್ಯತರಃ ಸಂತಾ-

ನಕರ್ತಾ ಭವತಿ ಪುಮಾನ್ದಾಯಾದೋಽನ್ಯತರೋರ್ಧಯಿತ್ವಾ ಜಾಮಿಃ ಪ್ರದೀಯತೇ ಪರಸ್ಮೈ । ನಿ ೩-೬। ಇತಿ ॥ ತಾನ್ವಃ । ತನ್ವಾಃ ಪ್ರಾಣಾಧಿಷ್ಠಿತತ್ವಾತ್ತನೂಃ ಪ್ರಾಣವತೀ । ತದ್ವಿಕಾರ ಇತ್ಯರ್ಥೇ ಪ್ರಾಣಿರಜತಾದಿಭ್ಯೋಽಞಿತ್ಯತ್ರ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದುಗ್ಣಾಭಾವಃ । ರಿಕ್ಥಂ । ರಿಚಿರ್ ವಿರೇಚನೇ । ಪಾತೃತುದಿವಚಿರಿಚಿಭ್ಯಸ್ಥಕ್ । ಪ್ರತ್ಯಯಸ್ವರಃ । ಅರೈಕ್ । ರಿಚಿರ್ ವಿರೇಚನ ಇತ್ಯಸ್ಯ ಲುಙಿ ಸಿಚಿ ವದವ್ರಜೇತ್ಯಾದಿನಾ ವೃದ್ಧಿಃ । ಬಹುಲಂ ಛಂದಸೀತೀಡಭಾವಃ । ಹಲ್ಡ್ಯಾದಿಸಂಯೋಗಾಂತಲೋಪೌ । ನಿಧಾತಃ । ಸನಿತುಃ । ಷಣ ಸಂಭಕ್ತಾವಿತ್ಯಸ್ಯ ತೃಚಿ ರೂಪಂ । ನಿಧಾನಂ । ದಧಾತೇರ್ಲ್ಯುಟಿ ರೂಪಂ । ತಿತ್ಸ್ವರಃ । ಮಾತರಃ । ಪಿತಾ ಮಾತ್ರೇತಿ ಪಿತುಃ ಶೇಷೇ ಪ್ರಾಪ್ತೇ ಮಾತುಃ ಶೇಷಶ್ಛಾಂದಸಃ । ದ್ವಿವರ್ಚನಸ್ಯ ಬಹುವಚನಂ ಪೂಜಾರ್ಥಂ । ಜನಯಂತ । ಜನೇರ್ಣಿಚಿ ರೂಪಂ । ವಹ್ನಿಂ । ಪುಮಾನ್ ಸ್ತ್ರಿಯಾ । ಪಾ. ೧-೨-೬೭ । ಇತಿ ವಹ್ನೇಃ ಶೇಷಃ । ಸುಕೃತೋಃ । ಕರೋತೇರೌಣಾದಿಕಃ ಕ್ತುಪ್ರತ್ಯಯಃ । ಋಂಧನ್ । ಋಧು ವೃದ್ಧೌ । ವ್ಯತ್ಯಯೇನ ಶ್ನಮ್ ॥

ಪ್ರತಿಪದಾರ್ಥ

**ತಾನ್ವಃ**—ಹೊಟ್ಟೆಯಲ್ಲಿ ಹುಟ್ಟಿದ ಪುತ್ರನು । **ಜಾಮಯೇ**—ತನ್ನ ಸಹೋದರಿಗೆ । **ರಿಕ್ಥಂ**—ಪಿತ್ರಾರ್ಜಿತವಾದ ಧನವನ್ನು । **ನ ಅರೈಕ್**—ಕೊಡುವುದಿಲ್ಲ. (ಆದರೆ)। **ಸನಿತುಃ**—ಅವಳನ್ನು ಆದರಿಸತಕ್ಕ ಪತಿಯ । **ಗರ್ಭಂ**—ಗರ್ಭಕ್ಕೆ । **ನಿಧಾನಂ**—ಪಾತ್ರಳಾಗುವಂತೆ । **ಚಕಾರ**—ಮಾಡುತ್ತಾನೆ । **ಯದಿ**—ಒಂದುವೇಳೆ । **ಮಾತರಃ**—ಮಾತಾಪಿತೃಗಳು । **ವಹ್ನಿಂ**—ಸ್ತ್ರೀ ಮತ್ತು ಪುಂರೂಪದ ಸಂತಾನವನ್ನು । **ಜನಯಂತ**—ಹಡೆದರೂ ಸಹ । **ಅನ್ಯಃ**—ಪುಂರೂಪದ (ಪುತ್ರನು)ವನು । **ಸುಕೃತೋಃ**—ಶ್ರೇಷ್ಠವಾದ ಕರ್ಮಕ್ಕೆ । **ಕರ್ತಾ**—ಕರ್ತನಾಗುತ್ತಾನೆ । **ಅನ್ಯಃ**—ಸ್ತ್ರೀರೂಪದವಳು (ಪುತ್ರಿಯು) । **ಋಂಧನ್**—ವಸ್ತ್ರಾಲಂಕಾರಾದ್ಯಲಂಕಾರಗಳಿಗೆ ಪಾತ್ರಳಾಗುತ್ತಾಳೆ ॥

ಭಾವಾರ್ಥ

ಔರಸಪುತ್ರನು ಪಿತ್ರಾರ್ಜಿತವಾದ ಧನವನ್ನು ತನ್ನ ಸಹೋದರಿಗೆ ದಾನಮಾಡುವುದಿಲ್ಲ. ಅವಳನ್ನು ಆದರಿಸತಕ್ಕ ಪತಿಗೆ ಒಪ್ಪಿಸಿ ಅವಳನ್ನು ಅವನ ಗರ್ಭಕ್ಕೆ ಪಾತ್ರಳಾಗುವಂತೆ ಮಾಡುತ್ತಾನೆ. ಒಂದು ವೇಳೆ ಮಾತಾಪಿತೃಗಳು ಸ್ತ್ರೀ ಮತ್ತು ಪುಂರೂಪದ ಸಂತಾನವನ್ನು ಹಡೆದರೂ ಸಹ ಅವರಲ್ಲಿ ಪುತ್ರನು ಪಿಂಡಾರ್ಪಣಾದಿ ಶ್ರೇಷ್ಠವಾದ ಕರ್ಮದ ಕರ್ತನಾಗುತ್ತಾನೆ. ಪುತ್ರಿಯು ವಸ್ತ್ರಾಭರಣಾದ್ಯಲಂಕಾರಗಳಿಗೆ ಮಾತ್ರ ಪಾತ್ರಳಾಗುತ್ತಾಳೆ.

## English Translation

(A son) born of the body, does not transfer (paternal) wealth to a sister : he has made (her) the receptacle of the embryo of the husband : if the parents procreate children (of either sex), one is the performer of holy acts, the other is to be enriched (with gifts).

ಸಂಹಿತಾಪಾಠಃ

ಅಗ್ನಿರ್ಜಜ್ಞೇ ಜುಹ್ವಾ೩ ರೇಜಮಾನೋ ಮಹಸ್ಪುತ್ರಾ ಅರುಷಸ್ಯ ಪ್ರಯಕ್ಷೇ ।

ಮಹಾನ್ಗರ್ಭೋ ಮಹ್ಯಾ ಜಾತಮೇಷಾಂ ಮಹೀ ಪ್ರವೃದ್ಧರ್ಯಶ್ವಸ್ಯ ಯಜ್ಞೈಃ ॥

ಪದಪಾಠಃ

ಅಗ್ನಿಃ । ಜಜ್ಞೇ । ಜುಹ್ವಾ । ರೇಜಮಾನಃ । ಮಹಃ । ಪುತ್ರಾನ್ । ಅರುಷಸ್ಯ । ಪ್ರಯಕ್ಷೇ ।

ಮಹಾನ್ । ಗರ್ಭಃ । ಮಹಿ । ಆ । ಜಾತಂ । ಏಷಾಂ । ಮಹೀ । ಪ್ರವೃತ್ । ಹರಿಅಶ್ವಸ್ಯ । ಯಜ್ಞೈಃ ॥

ಸಾಯಣಭಾಷ್ಯಂ

ಹೇ ಇಂದ್ರ ಅರುಷಸ್ಯಾರೋಚಮಾನಸ್ಯ ತವ ಪ್ರಯಕ್ಷೇ ಯಜ್ಞಾರ್ಥಂ ಜುಹ್ವಾ ಜ್ವಾಲಾಭೀ ರೇಜಮಾನಃ ಕಂಪಮಾನೋಽಗ್ನಿರ್ಮಹಃ ಪ್ರಭೂತಾನ್ ಪುತ್ರಾನ್ ರಶ್ಮೀನ್ ಜಜ್ಞೇ । ಉತ್ಪಾದಯಾಮಾಸ । ಏಷಾಂ ರಶ್ಮೀನಾಂ ಗರ್ಭೋ ಜಲಾತ್ಮನಾ ಕ್ರೋಡೀಕಾರೋ ಮಹಾನಾಸೀತ್ । ಕಿಂಚ ಏಷಾಂ ರಶ್ಮೀನಾಂ ಮೇಲನಂ ಆ ಜಾತಂ ಸರ್ವತ ಓಷಧ್ಯಾತ್ಮನಾ ಜಾತಂ ಮಹಿ ಮಹದಭೂತ್ । ಕಿಂಚ ಏಷಾಂ ರಶ್ಮೀನಾಂ ಪ್ರವೃತ್ ಅನೇನ ಪ್ರಕಾರೇಣ ಪ್ರವೃತ್ತಿರ್ಹರ್ಯಶ್ವಸ್ಯೇಂದ್ರಸ್ಯ ಯಜ್ಞೈರ್ಯಜ್ಞಾರ್ಹೈಃ ಸೋಮಾಹುತಿಭಿರ್ಮಹೀ ಮಹತೀ ಭವತಿ ॥ ಜಜ್ಞೇ । ಜನೀ ಪ್ರಾದುರ್ಭಾವ ಇತ್ಯಸ್ಯ ಲಿಟಿ ರೂಪಂ । ಅಂತರ್ಭಾವಿತಣ್ಯರ್ಥಃ । ಜುಹ್ವಾ । ಜುಹೋತೇರ್ದ್ವೇ ದೀರ್ಘಶ್ಚೇತಿ ಕ್ವಿಪ್ ದ್ವಿರ್ವಚನಂ ದೀರ್ಘಶ್ಚ ಧಾತೋಃ । ಉದಾತ್ತಸ್ವರಿತಯೋರಿತಿ ಸ್ವರಿತತ್ವಂ । ಹರ್ಯಶ್ವಸ್ಯ । ಹರೀ ಅಶ್ವೌ ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । **ಅರುಷಸ್ಯ**—ಪ್ರಕಾಶಮಾನನಾದ ನಿನ್ನನ್ನು ಉದ್ದೇಶಿಸಿದ । **ಪ್ರಯಕ್ಷೇ**—ಯಜ್ಞಾರ್ಥವಾಗಿ । **ಜುಹ್ವಾ**—ಜ್ವಾಲೆಗಳಿಂದ । **ರೇಜಮಾನಃ**—ಪ್ರಜ್ವಲಿಸುವ । **ಅಗ್ನಿಃ**—ಅಗ್ನಿಯು । **ಮಹಃ**—ಪ್ರಭೂತವಾದ । **ಪುತ್ರಾನ್**—ರಶ್ಮಿರೂಪರಾದ ಪುತ್ರರನ್ನು । **ಜಜ್ಞೇ**—ಉತ್ಪಾದನಮಾಡಿದ್ದಾನೆ । **ಏಷಾಂ**—ಈ ರಶ್ಮಿಗಳ । **ಗರ್ಭಃ**—ಉದಕರೂಪವಾದ ಗರ್ಭವು । **ಮಹಾನ್**—ಮಹತ್ತ್ವವುಳ್ಳದ್ದಾಯಿತು (ಇವುಗಳ ಸಂಮೇಳನವು) । **ಆ ಜಾತಂ**—ಓಷಧ್ಯಾದಿಗಳ ರೂಪದಲ್ಲಿ ಪರಿಣಮಿಸಿ । **ಮಹಿ**—ಮಹತ್ತ್ವವುಳ್ಳದ್ದಾಯಿತು । **ಪ್ರವೃತ್**—ರಶ್ಮಿಗಳ ಈ ವಿಧವಾದ ಪ್ರಸರಣಶಕ್ತಿಯು । **ಹರ್ಯಶ್ವಸ್ಯ**—ಇಂದ್ರನ । **ಯಜ್ಞೈಃ**—ಯಾಗಾರ್ಹವಾದ ಸೋಮಾದ್ಯಾಹುತಿಗಳಿಂದ । **ಮಹೀ**—ಮಹತ್ತ್ವವುಳ್ಳದ್ದಾಯಿತು ॥

ಭಾವಾರ್ಥ

ಎಲೈ ಇಂದ್ರನೇ, ಪ್ರಕಾಶಮಾನನಾದ ನಿನ್ನನ್ನುದ್ದೇಶಿಸಿದ ಯಜ್ಞಾರ್ಥವಾಗಿ ಜ್ವಾಲೆಗಳಿಂದ ಪ್ರಜ್ವಲಿಸುವ ಅಗ್ನಿಯು ರಶ್ಮಿರೂಪರಾದ ಪುತ್ರರನ್ನು ಪ್ರಭೂತವಾಗಿ ಉತ್ಪಾದನಮಾಡಿದ್ದಾನೆ. ಈ ರಶ್ಮಿಗಳ ಉದಕರೂಪವಾದ ಗರ್ಭವೂ, ಓಷಧ್ಯಾದಿರೂಪಗಳಲ್ಲಿ ಇವುಗಳ ಪರಿಣಾಮವೂ ಮಹತ್ತ್ವವುಳ್ಳದ್ದಾದವು. ಮತ್ತು ಈ ವಿಧವಾದ ಇವುಗಳ ಪ್ರಸರಣಶಕ್ತಿಯು ಯಾಗಾರ್ಹವಾದ ಸೋಮಾದ್ಯಾಹುತಿಗಳಿಂದ ಮತ್ತೂ ಹೆಚ್ಚಾದ ಮಹತ್ತ್ವವನ್ನು ಪಡೆದವು.

## English Translation

For the worship of the resplendent (Indra), Agni, glowing with flame, has begotten mighty sons: great was the germ, and great was their birth, and great was their efficacy, for the worship of Haryashwa.

ಸಂಹಿತಾಪಾಠಃ

ಅಭಿ ಜೈತ್ರೀರಸಚಂತ ಸ್ಪೃಧಾನಂ ಮಹಿ ಜ್ಯೋತಿಸ್ತಮಸೋ ನಿರಜಾನನ್ ।
ತಂ ಜಾನತೀಃ ಪ್ರತ್ಯುದಾಯನ್ನುಷಾಸಃ ಪತಿರ್ಗವಾಮಭವದೇಕ ಇಂದ್ರಃ ॥ ೪ ॥

ಪದಪಾಠಃ

ಅಭಿ । ಜೈತ್ರೀಃ । ಅಸಚಂತ । ಸ್ಪೃಧಾನಂ । ಮಹಿ । ಜ್ಯೋತಿಃ । ತಮಸಃ । ನಿಃ । ಅಜಾನನ್ ।
ತಂ । ಜಾನತೀಃ । ಪ್ರತಿ । ಉತ್ । ಆಯನ್ । ಉಷಸಃ । ಪತಿಃ । ಗವಾಂ । ಅಭವತ್ । ಏಕಃ । ಇಂದ್ರಃ ॥

ಸಾಯಣಭಾಷ್ಯಂ

ಜೈತ್ರೀರ್ಜೇತ್ರ್ಯೋ ವಿಶೋ ಮರುತಃ ಸ್ಪೃಧಾನಂ ವೃತ್ರೇಣ ಸಹ ಸ್ಪರ್ಧಮಾನಮಿಂದ್ರಮಭ್ಯಸಚಂತ । ಸರ್ವತಃ ಸಮಗಚ್ಛನ್ । ತೇ ಚ ಮರುತಸ್ತಸ್ಮಿನ್ವೃತ್ರೇ ಹತೇ ಮಹಿ ಮಹತ್ ಜ್ಯೋತಿಃ ಸೂರ್ಯಾಖ್ಯಂ ತೇಜಸ್ತಮಸಸ್ತಮೋರೂಪಾದ್ವೃತ್ರಾನ್ನಿರಜಾನನ್ । ನಿರ್ಗತಮಜ್ಞಾಸಿಷುಃ । ತತ ಇಂದ್ರಂ ವೃತ್ರಹಂತಾರಮುದಿತಂ ಸೂರ್ಯಂ ಜಾನತೀರ್ಜಾನಾನಾ ಉಷಸಸ್ತಂ ಪ್ರತ್ಯುತ್ ಅಭಿಲಕ್ಷ್ಯೈವ ಆಯನ್ ಪ್ರಾಪ್ನುವನ್ । ಅಥ ತತ್ರೋದ್ಭೂತಾನಾಂ ಗವಾಂ ರಶ್ಮೀನಾಮೇಕೋಽದ್ವಿತೀಯ ಏವೇಂದ್ರಃ ಪತಿರಭವತ್॥ ಜೈತ್ರೀಃ । ಜಯತೇಸ್ತೃನಿ ರೂಪಂ । ಗುಣಸ್ಯ ಸ್ಥಾನೇ ವ್ಯತ್ಯಯೇನ ವೃದ್ಧಿಃ । ನಿತ್ಸ್ವರಃ । ಅಸಚಂತ । ಷಚ ಸಮವಾಯ ಇತ್ಯಸ್ಯ ಲಙಿ ರೂಪಂ । ಸ್ಪೃಧಾನಂ । ಸ್ಪರ್ಧ ಸಂಘರ್ಷೇ । ಛಂದಸಿ ಕಾನಜಾದೇಶಃ । ಛಂದಸಿ ದ್ವಿರ್ವಚನಸ್ಯ ವಿಕಲ್ಪಿತತ್ವಾದ್ದ್ವಿರ್ವಚನಾಭಾವಃ । ಚಿತ್ಸ್ವರಃ । ಅಜಾನನ್ । ಜ್ಞಾ ಅವಬೋಧನ ಇತ್ಯಸ್ಯ ಲಙಿ ರೂಪಂ । ನಿಘಾತಃ । ಆಯನ್ । ಅಯ ಪಯ ಗತಾವಿತ್ಯಸ್ಯ ಲಙಿ ರೂಪಂ ॥

ಪ್ರತಿಪದಾರ್ಥ

**ಜೈತ್ರೀಃ**—ಜಯಶಾಲಿಗಳಾದ ಮರುತ್ತುಗಳು । **ಸ್ಪೃಧಾನಂ**—ವೃತ್ರನೊಂದಿಗೆ ಸ್ಪರ್ಧಿಸುತ್ತಿದ್ದ ಇಂದ್ರನನ್ನು । **ಅಭಿ ಅಸಚಂತ**—ಸುತ್ತಲೂ ಬಂದು ಸೇರಿಕೊಂಡವು ಮತ್ತು । **ಮಹಿ**—ಮಹತ್ತಾದ । **ಜ್ಯೋತಿಃ**—ಸೂರ್ಯರೂಪವಾದ ತೇಜಸ್ಸು । **ತಮಸಃ**—ತಮೋರೂಪನಾದ ವೃತ್ರನ ದೇಹದಿಂದ (ಹೊರಕ್ಕೆ ಹೊರಟು ಪ್ರಕಾಶಿಸುತ್ತಿದ್ದುದನ್ನು) । **ನಿಃ ಅಜಾನನ್**—ಅರಿತವು । **ಜಾನತೀಃ**—(ಉದಿತನಾದ) ಸೂರ್ಯನ ಉದಯವನ್ನು ಅರಿತು । **ಉಷಸಃ**—ಉಷೋದೇವತೆಗಳು । **ತಂ ಪ್ರತಿ**—ಅವನ ಅಭಿಮುಖವಾಗಿ । **ಉತ್ ಆಯನ್**—ಬಂದು ಸೇರಿದವು । **ಇಂದ್ರಃ**—ಇಂದ್ರನು । **ಗವಾಂ**—ಉದ್ಭವಿಸಿದ ಸೂರ್ಯರಶ್ಮಿಗಳಿಗೆ । **ಏಕಃ ಪತಿಃ**—ಅದ್ವಿತೀಯನಾದ ಪ್ರಭುವಾಗಿ । **ಅಭವತ್**—ಆದನು.

ಭಾವಾರ್ಥ

ಜಯಶಾಲಿಗಳಾದ ಮರುತ್ತುಗಳು ವೃತ್ರನೊಂದಿಗೆ ಸ್ಪರ್ಧಿಸುತ್ತಿದ್ದ ಇಂದ್ರನನ್ನು ಸುತ್ತಲೂ ಬಂದು ಸೇರಿಕೊಂಡವು. ಮತ್ತು ಮಹತ್ತಾದ ಸೂರ್ಯರೂಪವಾದ ತೇಜಸ್ಸು ತಮೋರೂಪನಾದ ವೃತ್ರನ ದೇಹದಿಂದ ಹೊರಕ್ಕೆ ಹೊರಟು ಪ್ರಕಾಶಿಸುತ್ತಿದ್ದುದನ್ನು ಅರಿತವು. ಸೂರ್ಯನ ಉದಯವನ್ನರಿತ ಉಷಸ್ಸುಗಳು ಅವನ ಅಭಿಮುಖವಾಗಿ ಬಂದು ಸೇರಿದವು. ಇಂದ್ರನು ಉದ್ಭವಿಸಿದ ಸಕಲ ಸೂರ್ಯರಶ್ಮಿಗಳಿಗೂ ಸಹ ಅದ್ವಿತೀಯನಾದ ಪ್ರಭುವಾಗಿ ಆದನು.

English Translation

The victorious (Maruts) associated (with Indra when contending with Vritra) perceived a great light issuing from the darkness. The dawns recognizing him (as the sun) arose, and Indra was the sole sovereign of the rays (of light).

ಸಂಹಿತಾಪಾಠಃ

ವೀಳೌ ಸತೀರಭಿ ಧೀರಾ ಅತೃಂದನ್ಪ್ರಾಚಾಹಿನ್ವನ್ಮನಸಾ ಸಪ್ತ ವಿಪ್ರಾಃ ।
ವಿಶ್ವಾಮವಿಂದನ್ಪಥ್ಯಾಮೃತಸ್ಯ ಪ್ರಜಾನನ್ನಿತ್ತಾ ನಮಸಾ ವಿವೇಶ ॥ ೫ ॥

ಪದಪಾಠಃ

ವೀಳೌ । ಸತೀಃ । ಅಭಿ । ಧೀರಾಃ । ಅತೃಂದನ್ । ಪ್ರಾಚಾ । ಅಹಿನ್ವನ್ । ಮನಸಾ । ಸಪ್ತ । ವಿಪ್ರಾಃ ।
ವಿಶ್ವಾಂ । ಅವಿಂದನ್ । ಪಥ್ಯಾಂ । ಋತಸ್ಯ । ಪ್ರಜಾನನ್ । ಇತ್ । ತಾ । ನಮಸಾ । ಆ । ವಿವೇಶ ॥ ೫ ॥

ಸಾಯಣಭಾಷ್ಯಂ

ಪುರಾ ಕಿಲಾಂಗಿರಸಾಂ ಗಾವಃ ಪಣಿನಾಮಕೈರಸುರೈರಪಹೃತ್ಯ ನಿಗೂಢೇ ಕಸ್ಮಿಂಶ್ಚಿತ್ಪರ್ವತೇ ಸ್ಥಾಪಿತಾಃ । ತೇ ಚಾಂಗಿರಸಸ್ತತ್ಪ್ರಾಪ್ತ್ಯರ್ಥಮಿಂದ್ರಂ ತುಷ್ಟುವುಃ । ಸ್ತುತಶ್ಚ ಸ ಇಂದ್ರೋ ಗವಾನ್ವೇಷಣಾಯ ದೇವಶುನೀಂ ಪ್ರಾಹಿಣೋತ್। ಸಾ ಚ ಗವಾಂ ಗವೇಷಣಪರಾ ಸತೀ ತತ್ಸ್ಥಾನಮುಲಭತ। ತಯಾ ವಿಜ್ಞಾಪಿತ ಇಂದ್ರಸ್ತಾ ಗಾ ಆನೀಯಾಂಗಿರೋಭ್ಯಃ ಪ್ರಾದಾದಿತ್ಯೈತಿಹಾಸಿಕೀ ಕಥಾ । ತಥಾ ಚಾಸ್ಯಾ ಋಚೋಽಯಮರ್ಥಃ । ಧೀರಾ ಧೀಮಂತಃ ಸಪ್ತ ವಿಪ್ರಾ ಮೇಧಾವಿನಃ ಸಪ್ತಸಂಖ್ಯಾಕಾ ಅಂಗಿರಸೋ ವೀಳೌ ದೃಢೇ ಪರ್ವತೇ ಸತೀರ್ನಿರುದ್ಧಾಃ ಸತೀರ್ಗಾ ಅಭಿ ಅಭಿಲಕ್ಷ್ಯಾತೃಂದನ್ । ನಿಧಾನಮುಪಾವೃಣ್ವನ್ । ಉಪೇಕ್ಷಾಮಕುರ್ವನ್ । ತತಸ್ತೇಽಂಗಿರಸಃ ಪರ್ವತವಿಲೇ ಗಾವಃ ಸಂತೀತಿ ಮನಸಾ ನಿಶ್ಚಿತ್ಯ ಪ್ರಾಚಾ ಯೇನ ಮಾರ್ಗೇಣ ಪ್ರವಿಷ್ಟಾಸ್ತೇನೈವ ಪ್ರಾಚೀನೇನ ಮಾರ್ಗೇಣ ತಾ ಗಾ ಅಹಿನ್ವನ್ । ನಿರಗಮಯನ್ । ಯದ್ವಾ ಪ್ರಾಚಾ । ಪ್ರಕರ್ಷೇಣೇಂದ್ರಮಂಚತಿ ಪ್ರಾಪ್ನೋತೀತಿ ಪ್ರಾಕ್ । ತೇನೇಂದ್ರವಿಷಯೇಣ ಮನಸಾ। ಮನ್ಯತ ಇತಿ ಮನಃ ಸ್ತೋತ್ರಂ । ತೇನ ಸ್ತೋತ್ರೇಣಾಹಿನ್ವನ್ । ಅವರ್ಧಯನ್ । ಇಂದ್ರಂ ತುಷ್ಟಮಕುರ್ವನ್ ।

ಸ್ತುತ್ವಾ ಚ ಋತಸ್ಯ ಪಥ್ಯಾಂ ಯಜ್ಞಸ್ಯ ಮಾರ್ಗೇ ಸಾಧುಭೂತಾಂ ವಿಶ್ವಾಂ ಸರ್ವಾಮುಪಹೃತಾಂ ಗಾಮವಿಂದನ್ । ಅಲಭಂತ । ತತಃ ಸ ಇಂದ್ರಸ್ತಾ ತಾನ್ಯಂಗಿರಸಾಂ ಕರ್ಮಾಣಿ ಪ್ರಜಾನನ್ನಿತ್ ಪ್ರಕರ್ಷೇಣ ಜಾನನ್ನಿಂದ್ರೋ ನಮಸಾ ನಮಸ್ಕಾರೇಣಾಂಗಿರಸಃ ಸಂಭಾವಯನ್ ತೈರಧಿಷ್ಠಿತಂ ಪರ್ವತಮಾವಿವೇಶ ॥ ಅತೃಂದನ್ । ಉತೃದಿರ್ಹಿಂಸಾನಾದರಯೋರಿತ್ಯಸ್ಯ ಲಙಿ ರುಧಾದಿತ್ವಾತ್ ಶ್ನಮ್ । ತಸ್ಯ ಶ್ನಸೋರಿತ್ಯಲ್ಲೋಪಃ । ನಿಘಾತಃ । ಪ್ರಾಚಾ । ಅಂಚೇಶ್ಛಂದಸ್ಯಸರ್ವನಾಮಸ್ಥಾನಮಿತಿ ವಿಭಕ್ತೇರುದಾತ್ತತ್ವಂ । ಅಹಿನ್ವನ್ । ಹಿ ಗತಿವರ್ಧನಯೋರಿತ್ಯಸ್ಯ ಲಙಿ ರೂಪಂ । ಅವಿಂದನ್ । ವಿದ್ಲೃ ಲಾಭ ಇತ್ಯಸ್ಯ ಲಙಿ ಮುಚಾದಿತ್ವಾನ್ನುಮ್ । ನಿಘಾತಃ । ಪಥ್ಯಾಂ । ಪಥಿ ಸಾಧುರಿತ್ಯರ್ಥೇ ತತ್ರ ಸಾಧುರಿತಿ ಯತ್ಪ್ರತ್ಯಯಃ । ಯಚಿ ಭಮಿತಿ ಭಸಂಜ್ಞಾಯಾಂ ನಸ್ತದ್ಧಿತ ಇತಿ ಟಿಲೋಪಃ । ಯತೋಽನಾವ ಇತ್ಯಸ್ಯಾನಿತ್ಯತ್ವಾತ್ತಿತ್ಸ್ವರಿತ ಇತಿ ಸ್ವರಿತಃ । ವಿವೇಶ । ವಿಶ ಪ್ರವೇಶನ ಇತ್ಯಸ್ಯ ಲಿಟಿ ರೂಪಂ ॥ ॥ ೫ ॥

ಪ್ರತಿಪದಾರ್ಥ

**ಧೀರಾಃ**—ಧೀಮಂತರೂ । **ಸಪ್ತ**—ಸಪ್ತಸಂಖ್ಯಾಕರೂ । **ವಿಪ್ರಾಃ**—ಮೇಧಾವಿಗಳೂ ಆದ ಅಂಗಿರಸ್ಸುಗಳು। **ವೀಳೌ**—ದೃಢವಾದ ಪರ್ವತದಲ್ಲಿ । **ಸತೀಃ**—ಗುಪ್ತವಾಗಿರಿಸಲ್ಪಟ್ಟ ಗೋವುಗಳನ್ನು । **ಅಭಿ**—ನಿಷ್ಕೃಷ್ಟವಾಗಿ ತಿಳಿದುಕೊಂಡು । **ಅತೃಂದನ್**—ಮೌನವಾಗಿದ್ದರು (ಅನಂತರ) । **ಮನಸಾ**—(ಗೋವುಗಳು ಅಲ್ಲಿರುವ ನಂಬಿಕೆಯಿಂದ ಕೂಡಿದ) ಮನಸ್ಸಿನಿಂದಲೂ । **ಪ್ರಾಚಾ**—ಇಂದ್ರನನ್ನು ಸ್ತುತಿಸುವ ಬುದ್ಧಿಯಿಂದಲೂ । **ಅಹಿನ್ವನ್**—(ಇಂದ್ರನನ್ನು) ಸ್ತುತಿಗಳಿಂದ ತುಷ್ಟಿಗೊಳಿಸಿದರು । **ಋತಸ್ಯ**—ಯಜ್ಞದ । **ಪಥ್ಯಾಂ**—ಮಾರ್ಗದಲ್ಲಿದ್ದ । **ವಿಶ್ವಾಂ**—ಅಪಹೃತವಾದ ಸಕಲ ಗೋವುಗಳನ್ನೂ । **ಅವಿಂದನ್**—ಪಡೆದರು । **ತಾ**—ಅಂಗಿರಸ್ಸುಗಳ ಕರ್ಮಗಳನ್ನು । **ಪ್ರಜಾನನ್ ಇತ್**—ಪೂರ್ಣವಾಗಿ ತಿಳಿದವನಾಗಿ ಇಂದ್ರನು । **ನಮಸಾ**—ನಮಸ್ಕಾರದಿಂದ ಅಂಗಿರಸ್ಸುಗಳನ್ನು ಗೌರವಿಸುತ್ತಾ । **ಆ ವಿವೇಶ**—(ಪರ್ವತಗುಹೆಯನ್ನು) ಪ್ರವೇಶಿಸಿದನು ॥

ಭಾವಾರ್ಥ

ಧೀಮಂತರೂ ಮೇಧಾವಿಗಳೂ ಆದ ಸಪ್ತ ಅಂಗಿರಸ್ಸುಗಳು ದೃಢವಾದ ಪರ್ವತದಲ್ಲಿ ಗುಪ್ತವಾಗಿರಿಸಲ್ಪಟ್ಟ ಗೋವುಗಳನ್ನು ನಿಷ್ಕೃಷ್ಟವಾಗಿ ತಿಳಿದುಕೊಂಡು ಮೌನವಾಗಿದ್ದರು. ಅನಂತರ ಅವರು ಆ ಪರ್ವತದಲ್ಲಿ ಗೋವುಗಳಿವೆಯೆಂಬ ನಂಬಿಕೆಯಿಂದಲೂ ಇಂದ್ರನನ್ನು ಸ್ತುತಿಸುವ ಬುದ್ಧಿಯಿಂದಲೂ ಕೂಡಿ ಇಂದ್ರನನ್ನು ಸ್ತುತಿಸಿ ಅವನನ್ನು ತುಷ್ಟಿಗೊಳಿಸಿದರು. ಮತ್ತು ಯಜ್ಞಮಾರ್ಗದಲ್ಲಿ ಅಪಹೃತವಾದ ಸಕಲ ಗೋವುಗಳನ್ನೂ ಪಡೆದರು. ಅಂಗಿರಸ್ಸುಗಳ ಕರ್ಮಗಳನ್ನು ಪೂರ್ಣವಾಗಿ ತಿಳಿದ ಇಂದ್ರನು ನಮಸ್ಕಾರಗಳಿಂದ ಅವರನ್ನು ಗೌರವಿಸುತ್ತಾ ಪರ್ವತಗುಹೆಯನ್ನು ಪ್ರವೇಶಿಸಿದನು.

## English Translation

The seven intelligent sages (the Angirasas) having ascertained that (the cows) were concealed in the strong (cavern), propitiated (Indra) by mental devotion : they recovered them all by the path of sacrifice; for Indra knowing (their pious acts), and offering them homage, entered (the cave).

ಸಂಹಿತಾಪಾಠಃ

ವಿದದ್ಯದೀ ಸರಮಾ ರುಗ್ಣಮದ್ರೇರ್ಮಹಿ ಪಾಥಃ ಪೂರ್ವ್ಯಂ ಸಧ್ರ್ಯಕ್ಕಃ ।
ಅಗ್ರಂ ನಯತ್ಸುಪದ್ಯಕ್ಷರಾಣಾಮಚ್ಛಾ ರವಂ ಪ್ರಥಮಾ ಜಾನತೀ ಗಾತ್ ॥ ೬ ॥

ಪದಪಾಠಃ

ವಿದತ್ । ಯದಿ । ಸರಮಾ । ರುಗ್ಣಂ । ಅದ್ರೇಃ । ಮಹಿ । ಪಾಥಃ । ಪೂರ್ವ್ಯಂ । ಸಧ್ರ್ಯಕ್ । ಕರಿತಿ ಕಃ ।
ಅಗ್ರಂ । ನಯತ್ । ಸುಽಪದೀ । ಅಕ್ಷರಾಣಾಂ । ಅಚ್ಛ । ರವಂ । ಪ್ರಥಮಾ । ಜಾನತೀ । ಗಾತ್ ॥ ೬ ॥

ಸಾಯಣಭಾಷ್ಯಂ

ಯದಿ ಯದಾ ಸರಮೇಂದ್ರೇಣ ಗವಾನ್ವೇಷಣಾರ್ಥಂ ಪ್ರೇಷಿತಾ ಸರಮಾ ನಾಮ ದೇವಶುನ್ಯದ್ರೇ ರುಗ್ಣಂ ಭಗ್ನಂ ದ್ವಾರಂ ವಿದತ್ ಅಲಭತ ತದಾನೀಮಿಂದ್ರೋ ಮಹಿ ಮಹತ್ಪೂರ್ವ್ಯಂ ಪೂರ್ವಂ ಪ್ರೇಷಣಕಾಲೇಽನ್ನಾದಿನೀಂ ತೇ ಪ್ರಜಾಂ ಕರಿಷ್ಯಾಮೀತಿ ಪ್ರತಿಜ್ಞಾತಂ ಸಧ್ರ್ಯಕ್ ಇತರೈರಪಿ ಭೋಜ್ಯೈಃ ಸಧ್ರೀಚೀನಂ ಪಾಥೋ ಗವ್ಯಾದಿಲಕ್ಷಣಮನ್ನಂ ಕಃ । ಅಕಾರ್ಷೀತ್ । ತಸ್ಮೈ ದತ್ತವಾನ್ । ತತಃ ಸುಪದೀ ಶೋಭನಪಾದಯುಕ್ತಾ ಸಾ ಸರಮಾಕ್ಷರಾಣಾಂ ಕ್ಷಯರಹಿತಾನಾಂ ಗವಾಮಗ್ರಂ ಪ್ರಾಂತಂ ನಯತ್ । ಪ್ರಾಪ್ನೋತ್ । ಕುತ ಇತ್ಯತ ಆಹ । ಯಶೋ ರವಂ ತೇಷಾಂ ಹಂಭಾರವಂ ಪ್ರಥಮಾ ಪ್ರಥಮಂ ಜಾನತೀ ಸತೀ ಅಚ್ಛ ಶಬ್ದಾಭಿಮುಖ್ಯೇನ ಗಾತ್ । ಜಗಾಮ ॥ ವಿದತ್ । ವಿದ್ಲೃ ಲಾಭ ಇತ್ಯಸ್ಯ ಲುಙಿ ಲೃದಿತ್ವಾತ್ಚ್ಲೇರಙಾದೇಶಃ । ತಸ್ಯ ಸ್ವರಃ । ಸರಮಾ । ಸೃ ಗತೌ । ಔಣಾದಿಕೋಽಮಪ್ರತ್ಯಯಃ । ಸರತೀತಿ । ಸರಮಾ ಸರಣಾದಿತಿ ಯಾಸ್ಕಃ । ಪ್ರತ್ಯಯಸ್ವರಃ । ರುಗ್ಣಂ । ರುಜೋ ಭಂಗ ಇತ್ಯಸ್ಯ ನಿಷ್ಠಾಯಾಮೋದಿತಶ್ಚೇತಿ ನತ್ವಂ । ಪ್ರತ್ಯಯಸ್ವರಃ । ಪಾಥಃ । ಪಾ ರಕ್ಷಣೇ । ಅನ್ನೇ ಚ । ಉ. ೪-೨೦೪ । ಇತ್ಯಸುನ್ಪ್ರತ್ಯಯಃ । ಥುಡಾಗಮಃ । ಪಾತೀತಿ ಪಾಥೋಽನ್ನಂ । ನಿತ್ಸ್ವರಃ । ಸಧ್ರ್ಯಕ್ । ಅಂಚು ಗತಿಪೂಜನಯೋಃ । ಋತ್ವಿಗಿತ್ಯಾದಿನಾ ಕ್ವಿನ್ । ಸಹಾಂಚತೀತಿ । ಸಹಸ್ಯ ಸಧ್ರಿರಿತಿ ಸಧ್ರ್ಯಾದೇಶಃ । ಕ್ವಿನ್ಪ್ರತ್ಯಯಸ್ಯ ಕುತ್ವಂ । ಅದ್ರಿಸಧ್ರ್ಯೋರಂತೋದಾತ್ತತ್ವನಿಪಾತನಂ ಕೃತ್ಸ್ವರನಿವೃತ್ತ್ಯರ್ಥಮಿತಿ ಸಧ್ರಿ ಇತ್ಯಾದೇಶೋಽಂತೋದಾತ್ತಃ । ಯಣಾದೇಶೇ ಕೃತ ಉದಾತ್ತಸ್ವರಿತಯೋರ್ಯಣಃ ಸ್ವರಿತ ಇತಿ ಯಣಃ ಸ್ವರಿತತ್ವಂ । ಕಃ । ಕರೋತೇರ್ಲುಙಿ ಸಿಪಿ ಚ್ಲೇರ್ಮಂತ್ರೇ ಘಸಹ್ವರೇತ್ಯಾದಿನಾ ಲುಕ್ । ಗುಣೇ ಕೃತೇ ಹಲ್ಙ್ಯಾದಿನಾ ಸಿಪೋ ಲೋಪಃ । ವಿಸರ್ಜನೀಯಃ । ನಿಘಾತಃ । ನಯತ್ । ನಯತೇರ್ಲಙಿ ರೂಪಂ । ಸುಪದೀ । ಪಾದೋಽನ್ಯತರಸ್ಯಾಂ । ಪಾ. ೪-೧-೮ । ಇತಿ ಙೀಪ್ । ಗಾತ್ । ಇಣೋ ಲುಙಿ ರೂಪಂ ॥

ಪ್ರತಿಪದಾರ್ಥ

ಯದಿ—ಯಾವಾಗ । ಸರಮಾ—ಇಂದ್ರನಿಂದ ಕಳುಹಲ್ಪಟ್ಟ ಸರಮೆಯು (ದೇವಶುನಿಯು)। ಅದ್ರೇಃ—ಪರ್ವತದ। ರುಗ್ಣಂ—ದ್ವಾರವನ್ನು । ವಿದತ್—ಹೋಗಿ ಸೇರಿತೋ (ಆ ಒಡನೆಯೇ) ಇಂದ್ರನು । ಮಹಿ—ಮಹ

ತ್ತಾದುದೂ । **ಪೂರ್ವ್ಯಂ**—ಹಿಂದೆ (ಸರಮೆಗೆ) ಪ್ರತಿಜ್ಞೆಮಾಡಿದುದೂ । **ಸಧ್ರ್ಯಕ್**—ಪ್ರಭೂತವಾದುದೂ ಆದ । **ಪಾಥಃ**—ಅನ್ನವನ್ನು । **ಕಃ**—ಒದಗಿಸಿದನು (ಅನಂತರ) । **ರವಂ**—(ಗೋವುಗಳ) ಶಬ್ದವನ್ನು । **ಪ್ರಥಮಾ**—ಪೂರ್ವಭಾವಿಯಾಗಿ । **ಜಾನತೀ**—ತಿಳಿದುಕೊಂಡು । **ಅಚ್ಛ**—ಶಬ್ದಾಭಿಮುಖವಾಗಿ । **ಗಾತ್**—ಮುಂದುವರೆದು । **ಸುಪದೀ**—ಶ್ರೇಷ್ಠವಾದ ಪಾದವುಳ್ಳ ಸರಮೆಯು । **ಅಕ್ಷರಾಣಾಂ**—ಕ್ಷಯರಹಿತವಾದ ಗೋವುಗಳ । **ಅಗ್ರಂ**—ಮುಂಭಾಗಕ್ಕೆ । **ನಯತ್**—ಹೋಗಿ ಸೇರಿದಳು ॥

ಭಾವಾರ್ಥ

ಗವಾನ್ವೇಷಣಕ್ಕಾಗಿ ಇಂದ್ರನಿಂದ ಕಳುಹಲ್ಪಟ್ಟ ಸರಮೆಯು (ದೇವಶುನಿ) ಪರ್ವತದ ದ್ವಾರವನ್ನು ಹೋಗಿ ಸೇರಿದೊಡನೆಯೇ, ಮಹತ್ತಾದುದೂ, ಹಿಂದೆ ಸರಮೆಗೆ ಪ್ರತಿಜ್ಞೆಮಾಡಿದುದೂ ಮತ್ತು ಪ್ರಭೂತವಾದುದೂ ಆದ ಅನ್ನವನ್ನು ಇಂದ್ರನು ಒದಗಿಸಿದನು. ಅನಂತರ ಶ್ರೇಷ್ಠವಾದ ಪಾದವುಳ್ಳ ಆ ಸರಮೆಯು ಗೋವುಗಳ ಶಬ್ದವನ್ನು ಪೂರ್ವಭಾವಿಯಾಗಿಯೇ ತಿಳಿದು ಆ ಶಬ್ದಾಭಿಮುಖವಾಗಿ ಮುಂದುವರೆಯುತ್ತಾ, ಕ್ಷಯರಹಿತವಾದ-ಆ ಗೋವುಗಳ ಮುಂಭಾಗಕ್ಕೆ ಹೋಗಿ ಸೇರಿದಳು.

English Translation

When Sarama discovered the broken (entrance) of the mountain, then Indra made great and ample (provision) for her young, as previously (promised): then the sure-footed (animal), first recognizing their lowing, proceeded, and came to the presence of the imperishable cows.

ಸಂಹಿತಾಪಾಠಃ

ಅಗಚ್ಛದು ವಿಪ್ರತಮಃ ಸಖೀಯನ್ನಸೂದಯತ್ಸುಕೃತೇ ಗರ್ಭಮದ್ರಿಃ ।
ಸಸಾನ ಮರ್ಯೋ ಯುವಭಿರ್ಮಖಸ್ಯನ್ನಥಾಭವದಂಗಿರಾಃ ಸದ್ಯೋ ಅರ್ಚನ್ ॥೭॥

ಪದಪಾಠಃ

ಅಗಚ್ಛತ್ । ಊಂ ಇತಿ । ವಿಪ್ರತಮಃ । ಸಖಿಯನ್ । ಅಸೂದಯತ್ । ಸುಕೃತೇ । ಗರ್ಭಂ । ಅದ್ರಿಃ ।
ಸಸಾನ । ಮರ್ಯಃ । ಯುವಭಿಃ । ಮಖಸ್ಯನ್ । ಅಥ । ಅಭವತ್ । ಅಂಗಿರಾಃ । ಸದ್ಯಃ । ಅರ್ಚನ್ ॥

ಸಾಯಣಭಾಷ್ಯಂ

ವಿಪ್ರತಮೋಽತಿಶಯೇನ ಮೇಧಾವೀ ಸಖೀಯನ್ ಅಂಗಿರೋಭಿಃ ಸಾಕಮಾತ್ಮನಃ ಸಖಿತ್ವಮಿಚ್ಛನ್ ಇಂದ್ರೋಽಗಚ್ಛತ್ । ಗೋಭಿರಧಿಷ್ಠಿತಂ ಪರ್ವತಮುಗಮದೇವ । ಸೋಽದ್ರಿಃ ಸಖಿತ್ವಮಿಚ್ಛನ್ ಸುಕೃತೇ ಸುಷ್ಠು ಯುದ್ಧಕರ್ತ್ರ ಇಂದ್ರಾಯ ಗರ್ಭಂ ಗವಾತ್ಮಕಂ ಗರ್ಭಮಸೂದಯತ್ । ನಿರಗಮಯತ್ । ಯುವಭಿರ್ನಿತ್ಯತರುಣೈರ್ಮರುದ್ಭಿಃ ಸಹ ಮಖಸ್ಯನ್ ಗೋಧನಮಂಗಿರಸಾಮಿಚ್ಛನ್ ಮರ್ಯೋಽಸುರಾಣಾಂ ಮಾರಯಿತೇಂದ್ರಃ ಸಸಾನ । ಅಸುರೈರಪಹೃತಾಸ್ತಾ ಗಾ ಭೇಜೇ । ಅಥಾನಂತರಮಂಗಿರಾಃ ಸಪ್ತಾ-

ನಾಮಂಗಿರಸಾಂ ಮಧ್ಯೇ ವರಿಷ್ಠೋಂಗಿರಾ ಋಷಿರಿಂದ್ರಾತ್ತ್ವಾ ಗಾ ಲಬ್ಧ್ವಾ ಸದ್ಯಸ್ತದಾನೀಮೇವಾರ್ಚನ್ ಇಂದ್ರಂ ಪೂಜಯನ್ನಭವತ್ ॥ ಅಗಚ್ಛತ್ । ಗಮೇರ್ಲಙಿ ರೂಪಂ । ಸಖೀಯನ್ । ಸುಪಃ ಆತ್ಮನಃ ಕ್ಯಚ್ । ಅಸೂದಯತ್ । ಷೂದ ನಿರಾಸ ಇತ್ಯಸ್ಯ ಣ್ಯಂತಸ್ಯ ಲಙಿ ರೂಪಂ । ಸಸಾನ । ಷಣ ಸಂಭಕ್ತಾ-ವಿತ್ಯಸ್ಯ ಲಿಟಿ ಬಿಲಿ ರೂಪಂ । ಲಿತ್ಸ್ವರಃ । ಮ ಖಸ್ಯನ್ । ಛಂದಸಿ ಪರೇಚ್ಛಾಯಾಮಿತಿ ಪರೇಚ್ಛಾಯಾಮಪಿ ಕ್ಯಚ್ । ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಂ ಸುಗ್ವಕ್ತವ್ಯ ಇತಿ ಸುಗಾಮಃ । ಏಕಾದೇಶಸ್ವರಃ । ಅಂಗಿರಾಃ । ಸೃ ಗತೌ । ಅಂಗಾರಶಬ್ದ ಉಪಪದೇ ಸರ್ತೇರ್ಧಾತೋರಸುನ್ಪ್ರತ್ಯಯಃ । ಉಪಪದೇ ಗಕಾ-ರಾತ್ಪರಸ್ಯೇತ್ತ್ವಮುಂತ್ಯಲೋಪಶ್ಚ ಧಾತೋರ್ಲೋಪಶ್ಚ ಅಂಗಿರಾಃ । ಉ, ೪-೨೩೫ । ಇತಿ ಸೂತ್ರೇಣ ನಿಪಾ-ತ್ಯತೇ । ಭೂತಕಾಲೇಽಂಗಾರೇಭ್ಯಃ ಸೃತ ಇತ್ಯಂಗಿರಾ ಋಷಿಃ । ಅಂಗಾರೇಷ್ವಂಗಿರಾ ಇತಿ ಯಾಸ್ಕಃ । ನಿತ್ಸ್ವರಃ ॥

ಪ್ರತಿಪದಾರ್ಥ

ವಿಪ್ರತಮಃ—ಅತ್ಯಂತ ಮೇಧಾವಿಯೂ । ಸಖೀಯನ್—(ಅಂಗಿರಸ್ಸುಗಳೊಂದಿಗೆ) ಸೌಹಾರ್ದವನ್ನಿಚ್ಛಿಸಿದವನೂ ಆದ ಇಂದ್ರನು । ಅಗಚ್ಛತ್ ಉ—ಪರ್ವತದ ದ್ವಾರಕ್ಕೆ ಬಂದು ಸೇರಿಯೇ ಸೇರಿದನು । ಅದ್ರಿಃ—(ಇಂದ್ರನೊಡನೆ ಸ್ನೇಹವನ್ನಿಚ್ಛಿಸಿದ) ಪರ್ವತವೂ ಸಹ । ಸುಕೃತೇ—ಶ್ರೇಷ್ಠವಾದ ಕರ್ಮಕರ್ತನಾದ ಇಂದ್ರನಿಗೆ । ಗರ್ಭಂ—ತನ್ನ ಗುಹೆಯೊಳಗಿದ್ದ ಗೋಸಮೂಹವನ್ನು । ಅಸೂದಯತ್—ಒಪ್ಪಿಸಿತು । ಯುವಭಿಃ—ನಿತ್ಯತರುಣರಾದ ಮರುತ್ತುಗಳೊಡಗೂಡಿ । ಮಖಸ್ಯನ್—ಅಂಗಿರಸ್ಸುಗಳಿಗೆ ಗೋವುಗಳನ್ನು ಕೊಡಬೇಕೆಂದಿಚ್ಛಿಸಿದವನೂ । ಮರ್ಯಃ—ಅಸುರರನ್ನು ನಾಶಮಾಡಿದವನೂ ಆದ ಇಂದ್ರನು । ಸಸಾನ—(ಗೋವುಗಳೊಡನೆ) ಸೇರಿಕೊಂಡನು। ಅಥ—ಅನಂತರ। ಅಂಗಿರಾಃ—ಅಂಗಿರಾ ಋಷಿಯು । ಸದ್ಯಃ—ಕೂಡಲೇ । ಅರ್ಚನ್ ಅಭವತ್—ಇಂದ್ರನನ್ನು ಪೂಜಿಸತೊಡಗಿದನು ॥

ಭಾವಾರ್ಥ

ಅತ್ಯಂತ ಮೇಧಾವಿಯೂ, ಅಂಗಿರಸ್ಸುಗಳೊಂದಿಗೆ ಸೌಹಾರ್ದವನ್ನಿಚ್ಛಿಸಿದವನೂ ಆದ ಇಂದ್ರನು, ಪರ್ವತದ ದ್ವಾರಕ್ಕೆ ಬಂದು ಸೇರಿದನು. ಪರ್ವತವೂ ಸಹ ಇಂದ್ರನೊಡನೆ ಸ್ನೇಹವನ್ನಿಚ್ಛಿಸಿ ಶ್ರೇಷ್ಠವಾದ ಕರ್ಮಕರ್ತನಾದ ಅವನಿಗೆ ತನ್ನ ಗುಹೆಯೊಳಗಿದ್ದ ಗೋಸಮೂಹವನ್ನು ಒಪ್ಪಿಸಿತು. ನಿತ್ಯತರುಣರಾದ ಮರುತ್ತುಗಳೊಡಗೂಡಿ ಅಂಗಿರಸ್ಸುಗಳಿಗೆ ಗೋವುಗಳನ್ನು ಕೊಡಬೇಕೆಂದಿಚ್ಛಿಸಿದವನೂ, ಅಸುರರನ್ನು ನಾಶಮಾಡಿದವನೂ ಆದ ಇಂದ್ರನು ಗೋವುಗಳೊಡನೆ ಸೇರಿಕೊಂಡನು. ಆ ಒಡನೆಯೇ ಅಂಗಿರಾ ಋಷಿಯು ಇಂದ್ರನನ್ನು ಪೂಜಿಸತೊಡಗಿದನು.

## English Translation

The most sage (Indra), desirous of the friendship of the (Angirasas), went to the cave, and the mountain yielded its contents to the valiant (deity), aided by the youthful Maruts, equally wishing (to conciliate the sages): the destroyer (of the Asuras) recovered (the cattle), and immediately Angiras became his worshipper.

ಸಂಹಿತಾಪಾಠಃ

ಸತಃಸತಃ ಪ್ರತಿಮಾನಂ ಪುರೋಭೂರ್ವಿಶ್ವಾ ವೇದ ಜನಿಮಾ ಹಂತಿ ಶುಷ್ಣಂ ।
ಪ್ರ ಣೋ ದಿವಃ ಪದವೀರ್ಗವ್ಯುರರ್ಚನ್ತ್ಸಖಾ ಸಖೀಁರಮುಂಚನ್ನಿರವದ್ಯಾತ್ ॥ ೮ ॥

ಪದಪಾಠಃ

ಸತಃಽಸತಃ । ಪ್ರತಿಽಮಾನಂ । ಪುರಃಽಭೂಃ । ವಿಶ್ವಾ । ವೇದ । ಜನಿಮ । ಹಂತಿ । ಶುಷ್ಣಂ ।
ಪ್ರ । ನಃ । ದಿವಃ । ಪದಽವೀಃ । ಗವ್ಯುಃ । ಅರ್ಚನ್ । ಸಖಾ । ಸಖೀನ್ । ಅಮುಂಚತ್ । ನಿಃ । ಅವ-
ದ್ಯಾತ್ ॥ ೮ ॥

ಸಾಯಣಭಾಷ್ಯಂ

ಯೋಽಯಮಿಂದ್ರಃ ಸತಃ ಸತ ಉತ್ಪನ್ನಸ್ಯ ವಸ್ತುನಃ ಪ್ರತಿಮಾನಂ । ಪ್ರತಿಮೀಯತೇ ಉಪಮೀಯತೇಽನೇನ ಸರ್ವಮಿತಿ ಪ್ರತಿಮಾನಂ ಪ್ರತಿಸಿಧಿಃ । ಯದ್ವಾ ಸತಃ ಸತೋ ಜಾತಸ್ಯ ಸರ್ವಸ್ಯ ಪ್ರತಿಮಾನಂ ಸ್ವಸ್ಯ ಮಹತ್ತ್ವೇನ ಪ್ರತಿಮಾತೀಯತ್ತಯಾ ಸರ್ವಂ ಪರಿಚ್ಛಿನತ್ತೀತ್ಯರ್ಥಃ। ಪುರೋಭೂರ್ಯುದ್ಧೇ ಪುರತಃ ಶತ್ರೂನವಾಪ್ನೋತೀತಿ ಪುರೋಭೂಶ್ಚ ವಿಶ್ವಾ ಜನಿಮ ಸರ್ವಾಣಿ ಜಾತಾನಿ ವೇದ । ಜಾನಾತಿ । ಶುಷ್ಣಂ ಶುಷ್ಣನಾಮಾನಮಸುರಂ ಹಂತಿ । ಪದವೀಃ ಕವಿತಮೋ ಗವ್ಯುರ್ಗೋಧನಮಂಗಿರಸಾಮಿಚ್ಛನ್ ಅಸ್ಮಾಕಂ ಸಖೇಂದ್ರಃ ಸಖೀನ್ನೋಽಸ್ಮಾನ್ ದಿವೋ ದ್ಯುಲೋಕಾದಾಗತ್ಯ ಪ್ರಾರ್ಚನ್ ಪ್ರಕರ್ಷೇಣ ಪೂಜಯನ್ ಅವದ್ಯಾದ್ವೃತ್ರಬಾಧರೂಪಾದ್ದೋಷಾನ್ನಿರಮುಂಚತ್ । ನಿಶರಾಂ ಮುಂಚತು ॥ ಪ್ರತಿಮಾನಂ । ಮಾತೀತಿ ಮಾನಂ । ಔಣಾದಿಕೋ ನನ್ಪ್ರತ್ಯಯಃ । ಯದ್ವಾ ಕರಣೇ ಲ್ಯುಟ್ । ಪುರೋಭೂಃ । ಭೂ ಪ್ರಾಪ್ತೌ । ಕ್ವಿಪ್। ವೇದ । ವೇತ್ತೇರ್ಲಟಿ ರೂಪಂ । ಜನಿಮ । ಜನೀ ಪ್ರಾದುರ್ಭಾವೇ । ಜನಿಘೃಭ್ಯಾಮಿಮನಿನ್ನಿತೀಮನಿನ್ಪ್ರತ್ಯಯಃ । ಭೂತಕಾಲೇ ಜಾತಾನೀತಿ ಜನಿಮ । ಸುಪಾಂ ಸುಲುಗಿತಿ ಸುಪೋ ಲುಕ್ । ನಿತ್ಸ್ವರಃ । ಹಂತಿ । ಹಂತೇರ್ಲಟಿ ರೂಪಂ । ವಾಕ್ಯಭೇದಾದನಿಘಾತಃ । ಶುಷ್ಣಂ ಶೋಷಯತೀತಿ ಶುಷ್ಣಃ । ಪ್ರ ಣಃ । ಉಪಸರ್ಗಾದ್ಬಹುಲಮಿತಿ ಸಂಹಿತಾಯಾಂ ಣತ್ವಂ । ಪದವೀಃ । ವೀ ಕಾಂತ್ಯಾದಿಷು । ಕ್ವಿಪ್ । ಪದಾನಿ ವೇತ್ತಿ ಪರಸ್ಪರಸಂಗತಾನಿ ಕರೋತೀತಿ ಪದವೀಃ ಕವಿಃ। ಗವ್ಯುಃ। ಗೋಶಬ್ದಾತ್ಪರೇಚ್ಛಾಯಾಂ ಛಂದಸೀತಿ ಕ್ಯಚ್। ವಾಂತೋ ಯಿ ಪ್ರತ್ಯಯ ಇತಿ ವಾಂತಾದೇಶಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಪ್ರತ್ಯಯಸ್ವರಃ । ಅರ್ಚನ್ । ಅರ್ಚತೇಃ ಶತರಿ ರೂಪಂ । ಸಖೀನ್ । ಸಂಹಿತಾಯಾಂ ನಕಾರಸ್ಯ ದೀರ್ಘಾದಟೀತಿ ರುಃ । ಪೂರ್ವಸ್ಯ ವರ್ಣಸ್ಯ ಅತ್ರಾನುನಾಸಿಕ ಇತ್ಯನುನಾಸಿಕಾದೇಶಃ । ಅಮುಂಚತ್ । ಮುಚ್ಲೃ ಮೋಕ್ಷಣ ಇತ್ಯಸ್ಯ ಲಙಿ ಶೇ ಮುಚಾದೀನಾಮಿತಿ ನುಮಾಗಮಃ । ನಿಘಾತಃ । ಅವದ್ಯಾತ್ । ವದ ವ್ಯಕ್ತಾಯಾಂ ವಾಚೀತ್ಯಸ್ಯ ನಞ್ಪೂರ್ವಸ್ಯ ಗರ್ಹ್ಯಾರ್ಥೇಽವದ್ಯಪಣ್ಯವರ್ಯಾ ಇತಿ ನಿಪಾತನಾತ್ । ಪಾ, ೩-೧ ೧೦೧ । ಯತ್ಪ್ರತ್ಯಯಃ ॥

ಪ್ರತಿಪದಾರ್ಥ

**ಸತಃಸತಃ**—(ಅದೇ ಇಂದ್ರನು) ಉತ್ತಮವಾದ ಧನಸ್ಸೆಲ್ಲಾ ಅಥವಾ ಉತ್ಪನ್ನವಾದ ಸಕಲ ಭೂತಜಾತಕ್ಕೂ ಸಹ । **ಪ್ರತಿಮಾನಂ**—ಮಾದರಿಯಾಗಿದ್ದಾನೆ । **ಪುರೋಭೂಃ**—(ಯುದ್ಧದಲ್ಲಿ) ಮುಂದೆ ನಿಂತಿರುವವನೂ ಆದ ಇಂದ್ರನು । **ವಿಶ್ವಾ ಜನಿಮ**—ಉತ್ಪನ್ನವಾದ ಸಕಲ ಪ್ರಾಣಿಗಳ ಸ್ವರೂಪವನ್ನೂ । **ವೇದ**—ತಿಳಿಯುತ್ತಾನೆ । **ಶುಷ್ಣಂ**—ಶುಷ್ಣನೆಂಬ ಅಸುರನನ್ನು । **ಹಂತಿ**—ನಾಶಮಾಡುತ್ತಾನೆ । **ಪದವೀಃ**—ಕವಿಯಾದವನೂ । **ಗವ್ಯುಃ**—(ಅಂಗಿರಸ್ಸುಗಳಿಗೆ) ಗೋವುಗಳನ್ನು ಕೊಡಲಿಚ್ಛಿಸಿದವನೂ । **ಸಖಾ**—(ನಮ್ಮ) ಸಖನೂ ಆದ ಇಂದ್ರನು । **ಸಖೀನ್ನಃ**—ಅವನಿಗೆ ಆಪ್ತರಾದ ನಮ್ಮಲ್ಲಿಗೆ । **ದಿವಃ**—ದ್ಯುಲೋಕದಿಂದ ಬಂದು । **ಪ್ರ ಅರ್ಚನ್**—ಅತಿಶಯವಾಗಿ ಆದರಿಸುತ್ತಾ । **ಅವದ್ಯಾತ್**—ವೃತ್ರವಧರೂಪವಾದ ದೋಷದಿಂದ । **ನಿಃ ಅಮುಂಚತ್**—ಪೂರ್ಣವಾಗಿ ಮುಕ್ತನಾಗಲಿ.

ಭಾವಾರ್ಥ

ಉತ್ತಮವಾದ ಸಮಸ್ತಕ್ಕೂ ಮಾದರಿಯಾದವನೂ, ಯುದ್ಧದಲ್ಲಿ ಮುಂದೆ ಮುನ್ನುಗ್ಗುವವನೂ ಆದ ಇಂದ್ರನು ಉತ್ಪನ್ನವಾದ ಸಕಲ ಭೂತಗಳ ಸ್ವರೂಪವನ್ನೂ ತಿಳಿಯುತ್ತಾನೆ. ಅದೇ ಇಂದ್ರನು ಶುಷ್ಣನೆಂಬ ಅಸುರನ ನಾಶಕನಾಗಿದ್ದಾನೆ. ಕವಿಯಾದವನೂ, ಅಂಗಿರಸ್ಸುಗಳಿಗೆ ಗೋವುಗಳನ್ನು ಕೊಡಲಿಚ್ಛಿಸಿದವನೂ ಮತ್ತು ನಮ್ಮ ಸಖನೂ ಆದ ಇಂದ್ರನು ಅವನಿಗೆ ಆಪ್ತರಾದ ನಮ್ಮಲ್ಲಿಗೆ ದ್ಯುಲೋಕದಿಂದ ಬಂದು ಸೇರಿ ನಮ್ಮನ್ನು ಅತಿಶಯವಾಗಿ ಆದರಿಸುತಾ ವೃತ್ರವಧರೂಪವಾದ ದೋಷದಿಂದ ಪೂರ್ಣವಾಗಿ ಮುಕ್ತನಾಗಲಿ.

## English Translation

May he who is the type of all that is excellent, the anticipator (of his foes), he who knows all that his born, who destroys Sushna, the far-seeing, the rcstorer of cattle, may he, a friend coming from heaven, honouring us as his friends, be free from all reproach.

---

ಸಂಹಿತಾಪಾಠಃ

ನಿ ಗವ್ಯತಾ ಮನಸಾ ಸೇದುರರ್ಕೈಃ ಕೃಣ್ವಾನಾಸೋ ಅಮೃತತ್ವಾಯ ಗಾತುಂ ।
ಇದಂ ಚಿನ್ನು ಸದನಂ ಭೂರ್ಯೇಷಾಂ ಯೇನ ಮಾಸಾಁ ಅಸಿಷಾಸನ್ನೃತೇನ ॥ ೯ ॥

ಪದಪಾಠಃ

ನಿ । ಗವ್ಯತಾ । ಮನಸಾ । ಸೇದುಃ । ಅರ್ಕೈಃ । ಕೃಣ್ವಾನಾಸಃ । ಅಮೃತತ್ವಾಯ । ಗಾತುಂ ।
ಇದಂ । ಚಿತ್ । ನು । ಸದನಂ । ಭೂರಿ । ಏಷಾಂ । ಯೇನ । ಮಾಸಾನ್ । ಅಸಿಸಾಸನ್ । ಋತೇನ ॥೯॥

ಸಾಯಣಭಾಷ್ಯಂ

ಗವ್ಯತಾ ಗಾ ಇಚ್ಛತಾ ಮನಸಾ ಯುಕ್ತಾ ಅರ್ಕೈರರ್ಚನೀಯೈಃ ಸ್ತೋತ್ರೈರಮೃತತ್ವಾಯ ದೇವತ್ವಪ್ರಾಪ್ತ್ಯರ್ಥಂ ಗಾತುಂ । ಗಚ್ಛಂತ್ಯನೇನೇತಿ ಗಾತುರ್ಮಾರ್ಗಃ । ಅಮೃತತ್ವಪ್ರಾಪ್ತ್ಯುಪಾಯಭೂತಂ ಮಾರ್ಗಂ ಕೃಣ್ವಾನಾಸಃ ಕುರ್ವಾಣಾಸ್ತೇಽಂಗಿರಸೋ ನಿಷೇದುಃ । ಸತ್ರಾಖ್ಯೇ ಕರ್ಮಣ್ಯಾಸೀದನ್ । ಏಷಾಮಂಗಿರಸಾಮಿದಂ ಚಿತ್ಸದನಂ ಇದಮೇವ ಸತ್ರಾಖ್ಯೇ ಕರ್ಮಣ್ಯಾಸದನಂ ಭೂರಿ ನು । ಪ್ರಭೂತಂ । ಅಮೃತತ್ವಪ್ರಾಪ್ತ್ಯರ್ಥಂ ಮಹಾನುಪಾಯಃ ಖಲು । ಕುತ ಇತ್ಯತ ಆಹ । ಋತೇನ ಸತ್ಯಭೂತೇನ ಯೇನ ಸತ್ರಕರ್ಮಣಾ ತೇಽಂಗಿರಸೋ ಮಾಸಾನಭಿಪ್ಲವಪೃಷ್ಠ್ಯಷಡಹೈಃ ಕಲ್ಪಿತಾನ್ ಮಾಸಾನ್ ಅಸಿಸಾಸನ್ । ಸಂಭಕ್ತುಮೈಚ್ಛನ್ ॥ ಗವ್ಯತಾ । ಗೋಶಬ್ದಾತ್ ಕ್ಯಚಿ ರೂಪಂ । ವಾಂತೋ ಯಿ ಪ್ರತ್ಯಯ ಇತಿ ವಾಂತಾದೇಶಃ । ಏಕಾದೇಶಸ್ವರಃ । ಸೇದುಃ । ಸದೇರ್ಲಿಟಿ ಅತ ಏಕಹಲ್ಮಧ್ಯೇಽನಾದೇಶಾದೇರ್ಲಿಟೀತ್ಯೇತ್ವಾಭ್ಯಾಸಲೋಪೌ । ನಿಘಾತಃ । ಕೃಣ್ವಾನಾಸಃ । ಕೃವಿ ಹಿಂಸಾಕರಣಯೋರಿತ್ಯಸ್ಯ ತಾಚ್ಛೀಲಿಕಶ್ಚಾನಶ್ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಚಿತ್ಸ್ವರಃ । ಗಾತುಂ । ಗಾಙ್ ಗತೌ । ಕಮಿಮನಿಜನಿಗಾಭಾಪಾಯಾಹಿಭ್ಯ ಇತಿ ಕರಣೇ ತು ಪ್ರತ್ಯಯಃ। ಪ್ರತ್ಯಯಸ್ವರಃ । ಅಸಿಷಾಸನ್ । ಷಣ ಸಂಭಕ್ತಾವಿತ್ಯಸ್ಯ ಸನಿ ಜನಸನಖನಾಂ ಸಞ್ಝಲೋರಿತ್ಯಾತ್ವಂ । ಅಭ್ಯಾಸಸ್ಯ ಸನ್ಯತ ಇತೀತ್ವಂ । ಸನೋತೇರನ ಇತಿ ಸಂಹಿತಾಯಾಂ ಷತ್ವಂ । ತದಂತಾಲ್ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ಗವ್ಯತಾ**—ಗೋವುಗಳನ್ನು ಇಚ್ಛಿಸುವ । **ಮನಸಾ**—ಮನಸ್ಸಿನಿಂದ ಕೂಡಿದ (ಅಂಗಿರಸ್ಸುಗಳು)। **ಅರ್ಕೈಃ**—ಮನನೀಯವಾದ ಸ್ತುತಿಗಳಿಂದ । **ಅಮೃತತ್ವಾಯ**—ದೇವತ್ವವನ್ನು ಪಡೆಯುವ । **ಗಾತುಂ**—ಮಾರ್ಗವನ್ನು । **ಕೃಣ್ವಾನಾಸಃ**—ಸಿದ್ಧಪಡಿಸುತ್ತಾ । **ನಿ ಸೇದುಃ**—ಕರ್ಮಗಳಲ್ಲಿ ನಿರತರಾಗಿ ಕುಳಿತರು । **ಯೇನ ಋತೇನ**—ಸತ್ಯಭೂತಗಳಾದ ಯಾವ ಕರ್ಮಗಳಿಂದ । **ಮಾಸಾನ್**—(ಅಭಿಪ್ಲವಪೃಷ್ಠ್ಯಷಡಹಗಳಿಂದ ಕಲ್ಪಿತವಾದ) ಮಾಸಗಳನ್ನು **ಅಸಿಸಾಸನ್**—ಯೋಜಿಸಲು ಇಚ್ಛಿಸಿದರೋ ಅಂತಹ । **ಏಷಾಂ**—ಅಂಗಿರಸ್ಸುಗಳ । **ಇದಂ ಚಿತ್ ಸದನಂ**—ಕರ್ಮಾಂಗವಾದ ಆ ಸದನವು । **ಭೂರಿ ನು**—ಅತ್ಯಂತ ಮಹತ್ತ್ವವುಳ್ಳದ್ದಾಗಿದೆ

ಭಾವಾರ್ಥ

ಗೋವುಗಳನ್ನು ಇಚ್ಛಿಸುವ ಮನೋಯುಕ್ತರಾದ ಅಂಗಿರಸ್ಸುಗಳು ಮನನೀಯವಾದ ಸ್ತುತಿಗಳಿಂದ ದೇವತ್ವವನ್ನು ಪಡೆಯುವ ಮಾರ್ಗವನ್ನು ಸಿದ್ಧಪಡಿಸುತ್ತಾ ಕರ್ಮಗಳಲ್ಲಿ ನಿರತರಾಗಿ ಕುಳಿತರು. ಸತ್ಯಭೂತಗಳಾದ ಯಾವ ಕರ್ಮಗಳಿಂದ ಅಭಿಪ್ಲವಪೃಷ್ಠ್ಯಷಡಹಾತ್ಮಕಗಳಾದ ಮಾಸಗಳನ್ನು ಕಳೆಯಲು ಇಚ್ಛಿಸಿದರೋ ಅಂತಹ ಅಂಗಿರಸ್ಸುಗಳ ಕರ್ಮಾಂಗವಾದ ಆ ಸದನವು ಅತ್ಯಂತ ಮಹತ್ತ್ವವುಳ್ಳದ್ದಾಗಿದೆ.

## English Translation.

The Angirasas, with minds intent on their cattle, (sat down to worship Indra) with hymns, following the road to immortality: great was this their perseverance, by which they sought for months to accomplish (their ends).

ಸಂಹಿತಾಪಾಠಃ

ಸಂಪಶ್ಯಮಾನಾ ಅಮದನ್ನಭಿ ಸ್ವಂ ಪಯಃ ಪ್ರತ್ನಸ್ಯ ರೇತಸೋ ದುಘಾನಾಃ ।
ವಿ ರೋದಸೀ ಅತಪದ್ಘೋಷ ಏಷಾಂ ಜಾತೇ ನಿಃಷ್ಠಾಮದಧುರ್ಗೋಷು ವೀರಾನ್ ॥

ಪದಪಾಠಃ

ಸಂಽಪಶ್ಯಮಾನಾಃ । ಅಮದನ್ । ಅಭಿ । ಸ್ವಂ । ಪಯಃ । ಪ್ರತ್ನಸ್ಯ । ರೇತಸಃ । ದುಘಾನಾಃ ।
ವಿ । ರೋದಸೀ ಇತಿ । ಅತಪತ್ । ಘೋಷಃ । ಏಷಾಂ । ಜಾತೇ । ನಿಃಽಸ್ಥಾಂ । ಅದಧುಃ । ಗೋಷು ।
ವೀರಾನ್ ॥ ೧೦ ॥

ಸಾಯಣಭಾಷ್ಯಂ

ಸ್ವಂ ಸ್ವಕೀಯಂ ಗೋಧನಮಭಿ ಅಭಿಲಕ್ಷ್ಯ ಸಂಪಶ್ಯಮಾನಾ ಮದೀಯಾ ಏತಾ ಗಾವ ಇತ್ಯಾತ್ಮೀಯತಯಾ ಜಾನಾನಾಸ್ತೇಽಂಗಿರಸಃ ಪ್ರತ್ನಸ್ಯ ಪುರಾ ಜಾತಸ್ಯ ರೇತಸಸ್ತದುಪಲಕ್ಷಿತಸ್ಯ ಪುತ್ರಸ್ಯ ಧಾರಣಾರ್ಥಂ ಪಯೋ ದುಘಾನಾಸ್ತಾ ಗಾಃ ಪಯೋ ದುಹಂತಃ ಸಂತೋಽಮದನ್ । ಅಹೃಷ್ಯನ್ । ಏಷಾಮಂಗಿರಸಾಂ ಘೋಷೋ ಹರ್ಷಾದುತ್ಪನ್ನೋ ಮಹಾಧ್ವನಿಃ ಸ್ತುತಿಜಾತೋ ವಾ ರೋದಸೀ ದ್ಯಾವಾಪೃಥಿವ್ಯೌ ವ್ಯತಪತ್ । ತೇ ವ್ಯಾಪ್ಯಾತಪೂರ್ವಾಃ । ತತಸ್ತೇಽಂಗಿರಸೋ ಜಾತೇ ಆತ್ಮೀಯತಯಾ ಸಂಪನ್ನೇ ಚರಾಚರಾತ್ಮಕೇ ವಸ್ತುನಿ ನಿಷ್ಠಾಂ ಪೂರ್ವಂ ಯಥಾ ಸ್ಥಿತಿಮಕಾರ್ಷುಃ । ತಥಾ ಗೋಷ್ವಾಹೃತಾಸು ವೀರಾನ್ ರಕ್ಷಾಕರ್ಮಣ್ಯತಿಶೂರಾನ್ಪುರುಷಾನದಧುಃ ಸ್ಥಾಪಯಾಮಾಸುಃ ॥ ಸಂಪಶ್ಯಮಾನಾಃ । ಸಂಪೂರ್ವಸ್ಯ ದೃಶೇರ್ದೃಶೇಶ್ಚೇತಿ ವಕ್ತವ್ಯಮಿತ್ಯಾತ್ಮನೇಪದಂ । ಶಾನಚೋ ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಕೃತೇ ಧಾತುಸ್ವರಃ । ಅಮದನ್ । ಮದೀ ಹರ್ಷ ಇತ್ಯಸ್ಯ ಲುಙಿ ಣಿಚ್ಯಙಿ ರೂಪಂ । ನಿಘಾತಃ । ದುಘಾನಾಃ । ದುಹ ಪ್ರಪೂರಣ ಇತ್ಯಸ್ಮಾತ್ ಶಾನಚ್ । ಅದಾದಿತ್ವಾಚ್ಛಪೋ ಲುಕ್ । ಘತ್ವಂ ಛಾಂದಸಂ । ವೃಷಾದಿತ್ವಾದಾದ್ಯುದಾತ್ತಃ । ಅತಪತ್ । ವಿಪೂರ್ವಸ್ಯ ತಪತೇರತ್ರ ಸಕರ್ಮಕತ್ವಾದಾತ್ಮನೇಪದಾಭಾವಃ । ಲಙಿ ರೂಪಂ । ಘೋಷಃ । ಘುಷ ಸಂಶಬ್ದನೇ । ಘಞಂತಃ । ಞಿತ್ಸ್ವರಃ । ನಿಷ್ಠಾಂ । ಷ್ಠಾ ಗತಿನಿವೃತ್ತೌ । ಸ್ಥಃ ಕ ಚ । ಪಾ. ೩-೨-೭೭ । ಇತಿ ಕ್ವಿಪ್ । ಕೃದುತ್ತರಸ್ವರಃ । ಅದಧುಃ । ದಧಾತೇರ್ಲಙಿ ಝೇಃ ಸಿಜಭ್ಯಸ್ತೇತಿ ಜುಸಾದೇಶಃ । ವಾಕ್ಯಭೇದಾನ್ನಿಘಾತಾಭಾವಃ । ಗೋಷು । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವೇ ಪ್ರಾಪ್ತೇ ನ ಗೋಶ್ವನ್ನಿತಿ ಪ್ರತಿಷಿದ್ಧತ್ವಾತ್ಪ್ರಾತಿಪದಿಕಸ್ವರಃ ॥ ॥ ೬ ॥

ಪ್ರತಿಪದಾರ್ಥ

**ಸ್ವಂ**—ತಮ್ಮ ಗೋಧನವನ್ನು । **ಅಭಿ ಸಂಪಶ್ಯಮಾನಾಃ**—ಆದರದಿಂದ ನೋಡುತ್ತಲೂ । **ಪ್ರತ್ನಸ್ಯ**—ಪೂರ್ವದಲ್ಲಿ ಉತ್ಪನ್ನವಾದ । **ರೇತಸಃ**—ತಮ್ಮ ಪುತ್ರಧಾರಣಾರ್ಥವಾಗಿ । **ಪಯಃ**—ಕ್ಷೀರವನ್ನು । **ದುಘಾನಾಃ**—ಕರೆಯುತ್ತಲೂ ಇದ್ದ (ಅಂಗಿರಸ್ಸುಗಳು) । **ಅಮದನ್**—ಹರ್ಷಚಿತ್ತರಾದರು । **ಏಷಾಂ**—ಈ ಅಂಗಿರಸ್ಸುಗಳ ।

**ಘೋಷಃ**—ಹರ್ಷಧ್ವನಿಯು | **ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ | **ವಿ ಅತೆಪತ್**—ವ್ಯಾಪಿಸಿತು (ಅನಂತರ)| **ಜಾತೇ**—(ತಮ್ಮಲ್ಲಿ) ಉತ್ಪನ್ನವಾದ ವಸ್ತುಗಳಲ್ಲಿ | **ನಿಷ್ಕಾಂ**—ಪೂರ್ವಸ್ಥಿತಿಯನ್ನುಂಟುಮಾಡಿ ಸ್ಥಾಪಿಸಿದರು | **ಗೋಷು**—ಆಹೃತವಾದ ಗೋವುಗಳಿಗಾಗಿ| **ವೀರಾನ್**—ರಕ್ಷಕರಾದ ವೀರಪುರುಷರನ್ನು| **ಅದಧುಃ**—ನಿಯಮಿಸಿದರು.

ಭಾವಾರ್ಥ

ಪುನರಾಹೃತವಾದ ತಮ್ಮ ಗೋಧನವನ್ನು ಆದರದಿಂದ ನೋಡುತ್ತಲೂ, ಪೂರ್ವದಲ್ಲಿ ಉತ್ಪನ್ನವಾದ ತಮ್ಮ ಪುತ್ರಧಾರಣಾರ್ಥವಾಗಿ ಕ್ಷೀರವನ್ನು ಕರೆಯುತ್ತಲೂ ಇದ್ದ ಅಂಗಿರಸ್ಸುಗಳು ಹೃಷ್ಟಚಿತ್ತರಾದರು. ಈ ಅಂಗಿರಸ್ಸುಗಳ ಹರ್ಷಧ್ವನಿಯು ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿತು. ಅನಂತರ ಅಂಗಿರಸ್ಸುಗಳು ತಮ್ಮ ವ್ಯವಹಾರಗಳಲ್ಲಿ ಯಾಥಾತ್ಮ್ಯವನ್ನು ಪಡೆದರು. ಮತ್ತು ಆಹೃತವಾದ ಗೋವುಗಳಿಗಾಗಿ ರಕ್ಷಕರಾದ ವೀರಪುರುಷರನ್ನು ನಿಯಮಿಸಿದರು.

## English Translation.

Contemplating their own (cattle) giving milk to their former progeny (the Angirasas) were delighted; their shouts spread through heaven and earth; they replaced the recovered cows in their places. and stationed guards over the cows.

ಸಂಹಿತಾಪಾಠಃ

ಸ ಜಾತೇಭಿರ್ವೃತ್ರಹಾ ಸೇದು ಹವ್ಯೈರುದುಸ್ರಿಯಾ ಅಸೃಜದಿಂದ್ರೋ ಅರ್ಕೈಃ |
ಉರೂಚ್ಯಸ್ಮೈ ಘೃತವದ್ಭರಂತೀ ಮಧು ಸ್ವಾದ್ಮ ದುದುಹೇ ಜೇನ್ಯಾ ಗೌಃ || ೧೧ ||

ಪದಪಾಠಃ

ಸಃ | ಜಾತೇಭಿಃ | ವೃತ್ರಽಹಾ | ಸಃ | ಇತ್ | ಊಂ ಇತಿ | ಹವ್ಯೈಃ | ಉತ್ | ಉಸ್ರಿಯಾಃ | ಅಸೃಜತ್ | ಇಂದ್ರಃ | ಅರ್ಕೈಃ |

ಉರೂಚೀ | ಅಸ್ಮೈ | ಘೃತಽವತ್ | ಭರಂತೀ| ಮಧು | ಸ್ವಾದ್ಮ | ದುದುಹೇ | ಜೇನ್ಯಾ | ಗೌಃ || ೧೧ ||

ಸಾಯಣಭಾಷ್ಯಂ

ಸ ಇಂದ್ರೋ ಜಾತೇಭಿಃ ಸಹಾಯತಯಾ ಸಂಪನ್ನೈರ್ಮರುದ್ಭಿಃ ಸಹಿತಃ ಸನ್ ವೃತ್ರಹಾ ವೃತ್ರಸ್ಯಾಸುರಸ್ಯ ಹಂತಾ ಭವತಿ | ಸೇದು ಸ ಏವೇಂದ್ರೋಽರ್ಕೈರರ್ಚನೀಯೈಃ ಅತ ಏವ ಹವ್ಯೈರ್ಹೋತವ್ಯೈರ್ಮರುದ್ಭಿಃ ಸಹಿತಃ ಸನ್ ಉಸ್ರಿಯಾಃ | ಊರ್ಧ್ವಂ ವಸುತ್ಯಾಸು ಕ್ಷೀರಾದಿರೂಪಂ ಹವಿರಿತ್ಯುಸ್ರಿಯಾ ಗಾವಃ | ಯದ್ವಾ ಊರ್ಧ್ವಂ ಕ್ಷೀರದಧಿನವನೀತಾದಿ ಕ್ರಮೇಣಾಸು ವಸತೀತಿ | ಉಸ್ರಿಯೇತಿ ಗೋನಾಮೋತ್ಸ್ರಾವಿಣೋಽಸ್ಯಾಂ ಭೋಗಾಃ | ನಿ. ೪-೧೯| ಇತಿ ಯಾಸ್ಕಃ | ತಾ ಗಾ ಉದಸೃಜತ್ | ಯಜ್ಞಾರ್ಥಂ

ಸಮ್ಯಕ್ ಸಸರ್ಜ | ಯಸ್ಮಾದೇವಂ ತಸ್ಮಾತ್ ಘೃತವತ್ ಘೃತೋಪೇತಂ ಕ್ಷೀರಾದಿಕಂ ಹವಿರ್ಭರಂತೀ ಬಿಭ್ರಾಣಾ ಅತ ಏವೋರೂಚೀ | ಉರು ಪ್ರಭೂತಮಗ್ನಿಹೋತ್ರಾದಿಕಮಾಂಚತಿ ಹವಿಃ ಪ್ರದಾತುಂ ಪ್ರಾಪ್ನೋತೀತ್ಯುರೂಚೀ | ಜೇನ್ಯಾ ಜೇತವ್ಯಾ ಪ್ರಶಸ್ತಾ ಗೌರಸ್ಮೈ ಯಜಮಾನಾಯ ಸ್ವಾದ್ಮ ಸ್ವಾದುತರಂ ಕ್ಷೀರಾದಿ ದುದುಹೇ | ದುಹ್ಯತೇ ಸ್ಮ || ಉಸ್ರಿಯಾಃ | ವಸ ನಿವಾಸ ಇತ್ಯಸ್ಮಾತ್ ಸ್ಫಾಯಿತಂಚೀತ್ಯಾದಿನಾ ರಕ್ಪ್ರತ್ಯಯಃ | ಉಸ್ರಶಬ್ದಾತ್ ಸ್ವಾರ್ಥೇ ಘಪ್ರತ್ಯಯಃ| ಪ್ರತ್ಯಯಸ್ವರಃ | ಯದ್ವಾ ಸೃ ಗತೌ | ಉತ್ಪೂರ್ವಸ್ಯ ಸರತೇಃ ಕಪ್ರತ್ಯಯಃ | ಪೂರ್ವಪದಸ್ಯಾಂತ್ಯಲೋಪಶ್ಛಾಂದಸಃ | ಅತ್ರಾಪಿ ಸ್ವಾರ್ಥಿಕೋ ಘಪ್ರತ್ಯಯಃ | ಆಸೃಜತ್ | ಸೃಜ ವಿಸರ್ಗ ಇತ್ಯಸ್ಯ ಲಙಿ ರೂಪಂ | ಉರೂಚೀ | ಉರ್ವಂಚತೀತಿ ಕ್ವಿನ್ | ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ | ಉದಾತ್ತನಿವೃತ್ತಿಸ್ವರೇಣಾಂತೋದಾತ್ತಃ | ದುದುಹೇ | ದುಹ ಪ್ರಪೂರಣ ಇತ್ಯಸ್ಯ ಲಿಟಿ ರೂಪಂ | ಜೇನ್ಯಾ | ಜಯತೇಃ ಕೃತ್ಯಾರ್ಥೇ ಕೇನ್ಯಪ್ರತ್ಯಯಃ | ಇಕಾರಲೋಪಶ್ಛಾಂದಸಃ | ಪ್ರತ್ಯಯಸ್ವರಃ ||

ಪ್ರತಿಪದಾರ್ಥ

ಸಃ ಇಂದ್ರಃ—ರಕ್ಷಕನಾದ ಇಂದ್ರನು | **ಜಾತೇಭಿಃ**—ತನ್ನ ಸಹಾಯಕ್ಕಾಗಿ ಉತ್ಪನ್ನರಾದ ಮರುತ್ತುಗಳೊಡನೆ ಕೂಡಿ | **ವೃತ್ರಹಾ**—ವೃತ್ರಾಸುರನ ಹಂತಕನಾಗುತ್ತಾನೆ | **ಸೇದು**—ಅವನೇನೆ | **ಅರ್ಕ್ಯೈಃ**—ಪೂಜ್ಯರಾದವರೂ | ಹವ್ಯೈಃ—ಹವಿಸ್ಸಿಗೆ ಯೋಗ್ಯರಾದವರೂ ಆದ ಮರುತ್ತುಗಳೊಡನೆ ಕೂಡಿ | **ಉಸ್ರಿಯಾಃ**—ಕ್ಷೀರವನ್ನು ಕರೆಯತಕ್ಕ ಗೋವುಗಳನ್ನು | **ಉದಸೃಜತ್**—ಯಜ್ಞಾರ್ಥವಾಗಿ ಬಿಡಿಸಿದನು (ಆದುದರಿಂದಲೇ) | **ಘೃತವತ್**—ಘೃತಾತ್ಮಕವಾದ ಹವಿಸ್ಸನ್ನು | **ಭರಂತೀ**—ವಹಿಸುವುವೂ | **ಉರೂಚೀ**—ಕರ್ಮಾಂಗವಾದ ಹವಿರಾದಿಗಳನ್ನು ಹೊಂದಿಸುವವೂ | **ಜೇನ್ಯಾ**—ಪ್ರಶಸ್ತವಾದವೂ ಆದ | **ಗೌಃ**—ಗೋವುಗಳು | **ಅಸ್ಮೈ**—ಯಜಮಾನನಿಗೆ | **ಸ್ವಾದ್ಮ**—ಸ್ವಾದುವಾದ ಕ್ಷೀರವನ್ನು | **ದುದುಹೇ**—ಕರೆಯುತ್ತವೆ ||

ಭಾವಾರ್ಥ

ರಕ್ಷಕನಾದ ಇಂದ್ರನು ತನ್ನ ಸಹಾಯಕ್ಕಾಗಿ ಉತ್ಪನ್ನರಾದ ಮರುತ್ತಗಳೊಡನೆ ಕೂಡಿ ವೃತ್ರಾಸುರನ ಹಂತಕನಾಗುತ್ತಾನೆ. ಅವನೇ ಪೂಜ್ಯರಾದವರೂ ಹವಿಸ್ಸಿಗೆ ಯೋಗ್ಯರಾದವರೂ ಆದ ಮರುತ್ತಗಳೊಡನೆ ಕೂಡಿ ಕ್ಷೀರವನ್ನು ಕರೆಯತಕ್ಕ ಗೋವುಗಳನ್ನು ಯಜ್ಞಾರ್ಥವಾಗಿ ಬಿಡಿಸಿದನು. ಆದುದರಿಂದಲೇ, ಘೃತಾತ್ಮಕವಾದ ಹವಿಸ್ಸನ್ನು ವಹಿಸುವವೂ, ಕರ್ಮಾಂಗವಾದ ಹವಿರಾದಿಗಳನ್ನು ಹೊಂದಿಸುವುವೂ ಪ್ರಶಸ್ತವೂ ಆದ ಗೋವುಗಳು ಯಜಮಾನನಿಗಾಗಿ ಮಧುರವಾದ ಕ್ಷೀರವನ್ನು ಕರೆಯುತ್ತವೆ.

## English Translation

Indra, the slayer of Vritra, let loose the milch cows, assisted by the Maruts, born for his aid, and entitled to praises and oblations, and the excellent (cows) contributing abundantly to sacred offerings, and yielding the butter of libation, milked for him sweet (sacrificial) food.

ಸಂಹಿತಾಪಾಠಃ

ಪಿತ್ರೇ ಚಿಚ್ಚಕ್ರುಃ ಸದನಂ ಸಮಸ್ಮೈ ಮಹಿ ತ್ವಿಷೀಮತ್ಸುಕೃತೋ ವಿ ಹಿ ಖ್ಯನ್
ವಿಷ್ಕಭ್ನಂತಃ ಸ್ಕಂಭನೇನಾ ಜನಿತ್ರೀ ಆಸೀನಾ ಊರ್ಧ್ವಂ ರಭಸಂ ವಿ ಮಿನ್ವನ್ ॥

ಪದಪಾಠಃ

ಪಿತ್ರೇ । ಚಿತ್ । ಚಕ್ರುಃ । ಸದನಂ । ಸಂ । ಅಸ್ಮೈ । ಮಹಿ । ತ್ವಿಷಿಽಮತ್ । ಸುಽಕೃತಃ । ವಿ । ಹಿ । ಖ್ಯನ್ ।
ವಿಽಸ್ಕಭ್ನಂತಃ । ಸ್ಕಂಭನೇನ । ಜನಿತ್ರೀ ಇತಿ । ಆಸೀನಾಃ । ಊರ್ಧ್ವಂ । ರಭಸಂ । ವಿ । ಮಿನ್ವನ್ ॥ ೧೨ ॥

ಸಾಯಣಭಾಷ್ಯಂ

ಸತ್ರಮನುತಿಷ್ಠಂತೋಽಂಗಿರಸಃ ಪಿತ್ರೇ ಚಿತ್ಪಾಲಕಾಯಾಸ್ಮಾ ಇಂದ್ರಾಯ ಮಹಿ ಮಹತ್ ತ್ವಿಷೀಮದ್ದೀಪ್ತಿಮತ್ ಸದನಮುತ್ತಮಂ ಸ್ಥಾನಂ ಸಂಚಕ್ರುಃ । ಕಥಮಿತಿ ಚೇದುಚ್ಯತೇ । ಯತಃ ಸುಕೃತಃ ಸಮುಪಾರ್ಜಿತಕರ್ಮಾಣಸ್ತೇಽಂಗಿರಸಸ್ತಾದೃಶಮಿಂದ್ರಸ್ಯೋಚಿತಂ ಸ್ಥಾನಂ ವಿ ಹಿ ಖ್ಯನ್ । ವಿಶೇಷೇಣಾದರ್ಶಯನ್ ಖಲು । ಕುತ ಇತ್ಯತ ಆಹ । ಆಸೀನಾಃ ಸತ್ರಮುಪತಿಷ್ಠಂತಸ್ತೇಽಂಗಿರಸೋ ಜನಿತ್ರೀ ಸರ್ವಸ್ಯ ಜಗತೋ ಜನಯಿತ್ರ್ಯೌ ದ್ಯಾವಾಪೃಥಿವ್ಯೌ ಸ್ಕಂಭನೇನ ಸ್ತಂಭನಸಾಧನೇನಾಂತರಿಕ್ಷೇಣ ವಿಷ್ಕಭ್ನಂತೋ ಯಥಾ ತೇ ರೋದಸ್ಯಾವಧೋ ನ ಪತತಸ್ತಥಾ ವಿಷ್ಟಬ್ಧೀಕುರ್ವಂತಃ ಸಂತೋ ರಭಸಂ ವೇಗವಂತಂ ತಮಿಂದ್ರಮೂರ್ಧ್ವಂ ದ್ಯುಲೋಕೇ ವಿ ಮಿನ್ವನ್ । ಹವಿಃಸ್ವೀಕರಣಾರ್ಥಂ ವಿಶೇಷೇಣಾಸ್ಥಾಪಯನ್ ॥ ಚಕ್ರುಃ । ಕರೋತೇರ್ಲಿಟ್ಯುಸಿ ರೂಪಂ । ನಿಘಾತಃ । ಖ್ಯನ್ । ಖ್ಯಾ ಪ್ರಕಥನೇ । ಅಸ್ಯ ಲುಙಿ ಚಕ್ಷಿಙಃ ಖ್ಯಾಞ್ । ಅಸ್ಯತಿವಕ್ತಿಖ್ಯಾತಿಭ್ಯೋಽಙ್ಇತ್ಯಙಾದೇಶಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಹಿಯೋಗಾದನಿಘಾತಃ । ವಿಷ್ಕಭ್ನಂತಃ । ಸ್ಕಂಭು ರೋಧನೇ । ಸೌತ್ರೋ ಧಾತುಃ । ತಸ್ಮಾಚ್ಛತರಿ ರೂಪಂ । ವೇಃ ಸ್ಕಭ್ನಾತೇರ್ನಿತ್ಯಂ । ಪಾ. ೮-೩-೭೭ । ಇತಿ ಷತ್ವಂ । ಶತೃಪ್ರತ್ಯಯಸ್ವರಃ । ಜನಿತ್ರೀ । ಶಬ್ದೇಭ್ಯೋ ಙೀಪ್ । ಜನಿತಾ ಮಂತ್ರೇ ಇತಿ ನಿಪಾತನಾಣ್ಣಿಲೋಪಃ । ವಾ ಛಂದಸೀತಿ ಸವರ್ಣದೀರ್ಘಃ । ಆಸೀನಾಃ । ಆಸ ಉಪವೇಶನ ಇತ್ಯಸ್ಮಾಚ್ಛಾನಚ್ । ಈದಾಸಃ । ಪಾ. ೭-೨-೮೩ । ಇತೀಕಾರಃ । ಶಾನಚೋ ಲಸಾರ್ವಧಾತುಕಸ್ವರೇ ಕೃತೇ ಧಾತುಸ್ವರಃ । ಮಿನ್ವನ್ । ಡುಮಿಞ್ ಪ್ರಕ್ಷೇಪಣ ಇತ್ಯಸ್ಯ ಲಙಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**ಸುಕೃತಃ**—ಶ್ರೇಷ್ಠವಾದ ಕರ್ಮಕರ್ತರಾದ ಅಂಗಿರಸ್ಸುಗಳು । **ಪಿತ್ರೇ, ಚಿತ್**—ಪಾಲಕನಾದ । **ಅಸ್ಮೈ**—ಇಂದ್ರನಿಗೆ । **ಮಹಿ**—ಮಹತ್ತಾದುದೂ । **ತ್ವಿಷೀಮತ್**—ಕಾಂತಿಯುಕ್ತವಾದುದೂ ಆದ । **ಸದನಂ**—ಉನ್ನತಸ್ಥಾನವನ್ನು । **ಸಂ ಚಕ್ರುಃ**—ನಿರ್ಮಿಸಿದರು (ಮತ್ತು) । **ವಿ ಹಿ ಖ್ಯನ್**—ಅದನ್ನು ಪ್ರಕಾಶಪಡಿಸಿದರು । **ಆಸೀನಾಃ**—ಯಜ್ಞಸ್ಥಾನದಲ್ಲಿ ಸ್ಥಿತರಾದ ಅವರು । **ಜನಿತ್ರೀ**—ಲೋಕಕ್ಕೆಲ್ಲಾ ಮಾತಾಪಿತೃಗಳಾದ ದ್ಯಾವಾಪೃಥಿವಿಗಳನ್ನು । **ಸ್ಕಂಭನೇನ**—ಆಧಾರಸ್ತಂಭಪ್ರಾಯವಾದ ಅಂತರಿಕ್ಷದಿಂದ । **ವಿಷ್ಕಭ್ನಂತಃ**—(ಕೆಳಕ್ಕೆ ಬೀಳದಿರುವಂತೆ) ಎತ್ತಿಹಿಡಿಯುತ್ತಾ । **ರಭಸಃ**—ವೇಗಶಾಲಿಯಾದ ಇಂದ್ರನನ್ನು । **ಊರ್ಧ್ವಂ**—ದ್ಯುಲೋಕದಲ್ಲಿ । **ವಿ ಮಿನ್ವನ್**—ಸ್ಥಾಪಿಸಿದರು ॥

ಭಾವಾರ್ಥ

ಶ್ರೇಷ್ಠವಾದ ಕರ್ಮಕರ್ತರಾದ ಅಂಗಿರಸ್ಸುಗಳು ಪಾಲಕನಾದ ಇಂದ್ರನಿಗೆ ಮಹತ್ತಾದುದೂ, ಕಾಂತಿಯುಕ್ತವಾದುದೂ ಆದ ಉನ್ನತಸ್ಥಾನವನ್ನು ನಿರ್ಮಿಸಿದರು. ಮತ್ತು ಅದನ್ನು ಲೋಕಕ್ಕೆ ಪ್ರಕಾಶಪಡಿಸಿದರು. ಯಜ್ಞಸ್ಥಾನದಲ್ಲಿ ಸ್ಥಿತರಾದ ಅವರು ಲೋಕಕ್ಕೆಲ್ಲಾ ಮಾತಾಪಿತೃಗಳಾದ ದ್ಯಾವಾಪೃಥಿವಿಗಳನ್ನು ಆಧಾರಸ್ತಂಭಪ್ರಾಯವಾದ ಅಂತರಿಕ್ಷದಿಂದ ಎತ್ತಿ ಹಿಡಿಯುತ್ತಾ ವೇಗಶಾಲಿಯಾದ ಇಂದ್ರನನ್ನು ದ್ಯುಲೋಕದಲ್ಲಿ ಸ್ಥಾಪಿಸಿದರು.

English Translation

They (the Angirasas) performing pious acts made for their protector a spacious and splendid abode which they celebrated : seated (at the sacrifice) and supporting with the pillar (of the firmament) the parents (of all things heaven and earth), they established the rapid Indra on high (in heaven).

ಸಂಹಿತಾಪಾಠಃ

ಮಹೀ ಯದಿ ಧಿಷಣಾ ಶಿಶ್ನಥೇ ಧಾತ್ಸದ್ಯೋವೃಧಂ ವಿಭ್ವಂ೧ ರೋದಸ್ಯೋಃ ।
ಗಿರೋ ಯಸ್ಮಿನ್ನನವದ್ಯಾಃ ಸಮೀಚೀರ್ವಿಶ್ವಾ ಇಂದ್ರಾಯ ತವಿಷೀರನುತ್ತಾಃ ॥೧೩॥

ಪದಪಾಠಃ

ಮಹೀ । ಯದಿ । ಧಿಷಣಾ । ಶಿಶ್ನಥೇ । ಧಾತ್ । ಸದ್ಯಃಽವೃಧಂ । ವಿಽಭ್ವಂ । ರೋದಸ್ಯೋಃ ।
ಗಿರಃ । ಯಸ್ಮಿನ್ । ಅನವದ್ಯಾಃ । ಸಂಽಈಚೀಃ । ವಿಶ್ವಾಃ । ಇಂದ್ರಾಯ । ತವಿಷೀಃ । ಅನುತ್ತಾಃ ॥ ೧೩ ॥

ಸಾಯಣಭಾಷ್ಯಂ

ಮಹೀ ಮಹತೀ ಧಿಷಣಾಸ್ಮಾಭಿಃ ಕ್ರಿಯಮಾಣೇಂದ್ರವಿಷಯಾ ಸ್ತುತೀ ರೋದಸ್ಯೋಃ ಶಿಶ್ನಥೇ ದ್ಯಾವಾಪೃಥಿವ್ಯೋರನ್ಯೋನ್ಯವಿಶ್ಲೇಷಾಯ ಸದ್ಯೋವೃಧಂ ತದಾನೀಮೇವ ವರ್ಧಮಾನಂ ವಿಭ್ವಂ ವಿಭುಂ ತಯೋರ್ಧಾರಣಸಮರ್ಥಂ ಸಾಧನಂ ಯದಿ ಧಾತ್ ಅಕರೋತ್ ತತಸ್ತತ್ರ ವರ್ತಮಾನೇ ಯಸ್ಮಿನ್ನಿಂದ್ರೇಽನವದ್ಯಾ ದೋಷರಹಿತಾ ಗಿರಃ ಸ್ತುತಿಲಕ್ಷಣಾ ವಾಚಃ ಸಮೀಚೀಃ ಸಂಗತಾ ಭವಂತಿ । ಇಂದ್ರಾಯೇತಿ ವಿಭಕ್ತಿವ್ಯತ್ಯಯಃ । ತಾದೃಶಸ್ಯೇಂದ್ರಸ್ಯ ವಿಶ್ವಾಸ್ತವಿಷೀಃ ಸರ್ವಾಣಿ ಬಲಾನ್ಯನುತ್ತಾ ಅಪರಪ್ರೇಷಿತಾನಿ ಸ್ವಭಾವಸಿದ್ಧಾನ್ಯೇವ ॥ ಧಿಷಣಾ । ಞಿಧೃಷಾ ಪ್ರಾಗಲ್ಭ್ಯೇ। ಧೃಷೇರ್ಧಿಷ ಚ ಸಂಜ್ಞಾಯಾಮಿತಿ ಕ್ಯುಪ್ರತ್ಯಯಃ । ಧಾತೋರ್ಧಿಷಾದೇಶಃ । ಧೃಷ್ಣೋತ್ಯನಯೇತಿ ಧಿಷಣಾ ಸ್ತುತಿಃ । ಪ್ರತ್ಯಯಸ್ವರಃ । ಶಿಶ್ನಥೇ । ಶ್ನಥ ಹಿಂಸಾರ್ಥಃ । ಅಸ್ಮಾತ್ತಿಕ್ತ್ವಸ್ । ಛಂದಸ್ಯುಭಯಥೇತಿ ತಸ್ಯ ಸಾರ್ವಧಾತುಕತ್ವಾಚ್ಛ್ನಪ್ । ತಸ್ಯ ಬಹುಲಂ ಛಂದಸೀತಿ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಧಾತುಸ್ವರಃ । ಧಾತ್ । ದಧಾತೇಶ್ಛಾಂದಸೇ

ಲುಙಾ ರೂಪಂ । ಯದಿಯೋಗಾದನಿಘಾತಃ । ವಿಭ್ವಂ । ಭವತೇಃ ಕ್ವಿಪ್ । ಛಂದಸ್ಯುಭಯಥೇತಿ ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ । ಅನುತ್ತಾಃ । ಣುದ ಪ್ರೇರಣ ಇತ್ಯಸ್ಯ ನಞ್ಪೂರ್ವಸ್ಯ ನಿಷ್ಠಾಯಾಂ ನಸತ್ತನಿಷತ್ತಾನುತ್ತೇತ್ಯಾದಿನಾ ನಿಪಾತನಾನ್ನಿಷ್ಠಾತಕಾರಸ್ಯ ನತ್ವಾಭಾವಃ । ನಞಃ ಸ್ವರಃ ॥

ಪ್ರತಿಪದಾರ್ಥ

**ಮಹೀ**—ಮಹತ್ತಾದ। **ಧಿಷಣಾ**—ನಮ್ಮ ಸ್ತುತಿಯು। **ರೋದಸ್ಯೋಃ**—ದ್ಯಾವಾಪೃಥಿವಿಗಳ। **ಶಿಶ್ನಥೇ**—ವೈಯಕ್ತಿಕವಾದ ಸ್ಥಾಪನೆಗಾಗಿ । **ಸದ್ಯೋವೃಧಂ**—ಒಡನೆಯೇ,ವೃದ್ಧಿಯನ್ನು ಹೊಂದತಕ್ಕವನೂ । **ವಿಭ್ವಂ**—ಅವುಗಳನ್ನು ಧರಿಸಲು ಸಮರ್ಥನಾದವನೂ ಆದ ನಾಯಕನನ್ನು । **ಯದಿ ಧಾತ್**—ಯಾವಾಗ ನಿಯಮಿಸಿತೋ (ಆಗ) ಅಂತಹ । **ಯಸ್ಮಿನ್**—ಆ ಇಂದ್ರನಲ್ಲಿ । **ಅನವದ್ಯಾಃ**—ದೋಷರಹಿತವೂ । **ಗಿರಃ**—ಸ್ತುತಿರೂಪವೂ ಆದ ವಾಕ್ಯುಗಳು । **ಸಮೀಚೀಃ**—ಒಟ್ಟಿಗೆ ಸೇರಿಕೊಳ್ಳುತ್ತವೆ । **ಇಂದ್ರಾಯ**—ಅದೇ ಇಂದ್ರನಿಗೆ । **ವಿಶ್ವಾಃ**—ಸಕಲ ವಿಧವಾದ । **ಶವಿಷೀಃ**—ಶಕ್ತಿಗಳೂ । **ಅನುತ್ತಾಃ**—ಬಾಹ್ಯಸಾಧನವಾಗಿರದ ಸ್ವಭಾವಸಿದ್ಧವಾದ ಗುಣಗಳೇ ಆಗಿರುತ್ತವೆ ।

ಭಾವಾರ್ಥ

ಮಹತ್ತಾದ ನಮ್ಮ ಸ್ತುತಿಯು ದ್ಯಾವಾಪೃಥಿವಿಗಳ ವೈಯಕ್ತಿಕವಾದ ಸ್ಥಾಪನೆಗಾಗಿ ಒಡನೆಯೇ ವೃದ್ಧಿಯನ್ನು ಹೊಂದತಕ್ಕವನೂ, ಅವುಗಳನ್ನು ಧರಿಸಲು ಸಮರ್ಥನಾದವನೂ, ಇಂದ್ರರೂಪನೂ ಆದ ನಾಯಕನನ್ನು ಯಾವಾಗ ನಿಯಮಿಸಿತೋ, ಆಗ ಅಂತಹ ಆ ಇಂದ್ರನಲ್ಲಿ ದೋಷರಹಿತವೂ ಸ್ತುತಿರೂಪವೂ ಆದ ವಾಕ್ಯುಗಳು ಒಟ್ಟಿಗೆ ಸೇರಿಕೊಳ್ಳುತ್ತವೆ. ಆದೇ ಇಂದ್ರನಿಗೆ ಸಕಲವಿಧವಾದ ಶಕ್ತಿಗಳೂ ಸಹ ಬಾಹ್ಯಸಾಧನವಾಗಿರದ ಸ್ವಭಾವಸಿದ್ಧವಾದ ಗುಣಗಳೇ ಆಗಿರುತ್ತವೆ.

## English Translation

Inasmuch as our devout praise has appointed a thriving ruler for the regulation of heaven and earth, to whom faultless and appropriate commendations (are due), therefore are all the energies of Indra spontaneously exerted.

ಸಂಹಿತಾಪಾಠಃ

ಮಹ್ಯಾ ತೇ ಸಖ್ಯಂ ವಶ್ಮಿ ಶಕ್ತೀರಾ ವೃತ್ರಘ್ನೇ ನಿಯುತೋ ಯಂತಿ ಪೂರ್ವೀಃ ।
ಮಹಿ ಸ್ತೋತ್ರಮವ ಆಗನ್ಮ ಸೂರೇರಸ್ಮಾಕಂ ಸು ಮಘವನ್ಬೋಧಿ ಗೋಪಾಃ ॥

ಪದಪಾಠಃ

ಮಹಿ । ಆ । ತೇ । ಸಖ್ಯಂ । ವಶ್ಮಿ । ಶಕ್ತೀಃ । ಆ । ವೃತ್ರಽಘ್ನೇ । ನಿಽಯುತಃ । ಯಂತಿ । ಪೂರ್ವೀಃ ।
ಮಹಿ । ಸ್ತೋತ್ರಂ । ಅವಃ । ಆ । ಅಗನ್ಮ । ಸೂರೇಃ । ಅಸ್ಮಾಕಂ । ಸು । ಮಘಽವನ್ । ಬೋಧಿ ।
ಗೋಪಾಃ ।

ಸಾಯಣಭಾಷ್ಯಂ

ಹೇ ಇಂದ್ರ ತೇ ತವ ಮಹಿ ಮಹತ್ಸಖ್ಯಮಾವಶ್ಮಿ । ಆಕಾಮಯೇ । ಶಕ್ತೀಸ್ತ್ವತ್ಸಂಬಂಧೀನಿ ದಾನಾನಿ ಚಾಕಾಮಯೇ । ವೃತ್ರಘ್ನೇ ವೃತ್ರಾಸುರಸ್ಯ ಹಂತ್ರೇ ತುಭ್ಯಂ ಪೂರ್ವೀರ್ಬಹ್ವ್ಯೋ ನಿಯುತೋ ವಡವಾ ಆಯಂತಿ । ವಹನಾರ್ಥಮಾಗಚ್ಛಂತಿ । ಸೂರೇರ್ವಿದುಷಸ್ತವ ಮಹಿ ಮಹತ್ ಸ್ತೋತ್ರಮವೋ ಹವಿರ್ಲಕ್ಷಣಮನ್ನಂ ಚಾಗನ್ಮ । ಪ್ರಾಪಯಾಮಃ । ಹೇ ಮಘವನ್ನಿಂದ್ರ ತಾದೃಶಸ್ತ್ವಮಸ್ಮಾಕಂ ಸು ಸುಷ್ಠು ಗೋಪಾಃ ಪಾಲಯಿತಾ ಭವಾಮೀತಿ ಬೋಧಿ । ಬುಧ್ಯಸ್ವ ॥ ಸಖ್ಯಂ । ಸಖ್ಯುರ್ಯ ಇತಿ ಭಾವಾರ್ಥೇ ಯ-ಪ್ರತ್ಯಯಃ । ಪ್ರತ್ಯಯಸ್ವರಃ । ವಶ್ಮಿ । ವಶ ಕಾಂತೌ । ಲಟಿ ರೂಪಂ । ನಿಯುತಃ । ಯು ಮಿಶ್ರಣೇ । ಕ್ವಿಪ್ । ನಿತರಾಂ ಯುವಂತಿ ಮಿಶ್ರಯಂತ್ಯಾತ್ಮಾನಂ ರಥೇಷ್ವಿತಿ ನಿಯುತೋ ವಡವಾಃ । ಅಗನ್ಮ । ಗಮೇರ್ಲಙ್ಯು-ತ್ತಮಬಹುವಚನೇ ಬಹುಲಂ ಛಂದಸೀತಿ ಶಪೋ ಲುಕ್ । ಮ್ವೋಶ್ಚೇತಿ ಮಕಾರಸ್ಯ ನಕಾರಃ । ನಿಘಾತಃ । ಬೋಧಿ । ಬುಧೇರ್ಲೋಟಿ ಹೇರ್ಧ್ಯಾ ರೂಪಂ । ನಿಘಾತಃ । ಗೋಪಾಃ । ಗುಪೂ ರಕ್ಷಣೇ । ಗುಪೂಧೂಪೇ-ತ್ಯಾದಿನಾ ಆಯಪ್ರತ್ಯಯಃ । ತದಂತಾತ್ ಕ್ವಿಪ್ । ಅತೋಲೋಪಯಲೋಪೌ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ತೇ—ನಿನ್ನ । ಮಹಿ—ಮಹತ್ತಾದ । ಸಖ್ಯಂ—ಸ್ನೇಹವನ್ನು । ಆ ವಶ್ಮಿ—ಅಪೇಕ್ಷಿಸುತ್ತೇನೆ । ಶಕ್ತೀಃ—ನಿನ್ನ ಶಕ್ತಿಸಾಧ್ಯವಾದ ದಾನಗಳನ್ನೂ (ಇಚ್ಛಿಸುತ್ತೇನೆ) । ವೃತ್ರಘ್ನೇ—ವೃತ್ರಾಸುರನ ಹಂತಕನಾದ ನಿನಗಾಗಿ । ಪೂರ್ವೀಃ—ಬಹುಸಂಖ್ಯಾಕವಾದ । ನಿಯುತಃ—ವಡವಾಗ್ನಿಗಳು (ಅಶ್ವಗಳು) । ಆ ಯಂತಿ—ಒಟ್ಟಿಗೆ ಬಂದು ಸೇರಿಕೊಳ್ಳುತ್ತವೆ । ಸೂರೇಃ—ಪ್ರಾಜ್ಞನಾದ ನಿನಗೆ। ಮಹಿ—ಮಹತ್ತಾದ। ಸ್ತೋತ್ರಂ—ಸ್ತೋತ್ರವನ್ನೂ । ಅವಃ—ಹವಿಸ್ಸಿನ ರೂಪದ ಅನ್ನವನ್ನೂ । ಆ ಅಗನ್ಮ—ಅರ್ಪಿಸುತ್ತೇವೆ । ಮಘವನ್—ಎಲೈ ಇಂದ್ರನೇ । ಅಸ್ಮಾಕಂ—ನಮಗೆ । ಸು—ಶ್ರೇಷ್ಠನಾದ। ಗೋಪಾಃ—ಪಾಲಕನಾಗಿರುವುದಾಗಿ। ಬೋಧಿ—ತಿಳಿದಿರು.

ಭಾವಾರ್ಥ

ಎಲೈ ಇಂದ್ರನೇ, ನಾನು ನಿನ್ನ ಮಹತ್ತಾದ ಸಖ್ಯವನ್ನೂ, ನಿನ್ನ ಶಕ್ತಿಯಿಂದ ಸಾಧ್ಯವಾಗತಕ್ಕ ದಾನಗಳನ್ನೂ ಅಪೇಕ್ಷಿಸುತ್ತೇನೆ. ವೃತ್ರಾಸುರನ ಹಂತಕನಾದ ನಿನ್ನ ವಾಹನಕ್ಕಾಗಿ ವಡವಾಗ್ನಿರೂಪವಾದ ಅಶ್ವಗಳು ಅನೇಕ ಸಂಖ್ಯೆಯಲ್ಲಿ ಬಂದು ಸೇರಿಕೊಳ್ಳುತ್ತವೆ. ಪ್ರಾಜ್ಞನಾದ ನಿನಗೆ ಮಹತ್ತಾದ ಸ್ತೋತ್ರವನ್ನೂ ಹವಿಸ್ಸಿನ ರೂಪದ ಅನ್ನವನ್ನೂ ಅರ್ಪಿಸುತ್ತೇವೆ. ಧನವಂತನಾದ ಎಲೈ ಇಂದ್ರನೇ, ನಮಗೆ ಶ್ರೇಷ್ಠವಾದ ಪಾಲಕನಾಗಿರುವುದಾಗಿ ತಿಳಿ.

## English Translation

I wish, Indra, for your friendship, and (the exercise of) your powers : many horses come to the slayer of Vritra : we offer to you, sage, great praise and oblations : consider yourself, Maghavan, as our protector.

ಸಂಹಿತಾಪಾಠಃ

ಮಹಿ ಕ್ಷೇತ್ರಂ ಪುರು ಶ್ಚಂದ್ರಂ ವಿವಿದ್ವಾನಾದಿತ್ಸಖಿಭ್ಯಶ್ಚರಥಂ ಸಮೈರತ್ ।

ಇಂದ್ರೋ᳚ ನೃಭಿ॑ರಜನ॒ದ್ದೀದ್ಯಾ॑ನಃ ಸಾ॒ಕಂ ಸೂರ್ಯ॑ಮು॒ಷಸಂ॑ ಗಾ॒ತುಮ॒ಗ್ನಿಂ ॥ ೧೫ ॥

ಪದಪಾಠಃ

ಮಹಿ । ಕ್ಷೇತ್ರಂ । ಪುರು । ಚಂದ್ರಂ । ವಿವಿದ್ವಾನ್ । ಆತ್ । ಇತ್ । ಸಖಿಽಭ್ಯಃ । ಚರಥಂ । ಸಂ । ಐರತ್

ಇಂದ್ರಃ । ನೃಽಭಿಃ । ಅಜನತ್ । ದೀದ್ಯಾನಃ । ಸಾಕಂ । ಸೂರ್ಯಂ । ಉಷಸಂ । ಗಾತುಂ । ಅಗ್ನಿಂ ॥೧೫॥

ಸಾಯಣಭಾಷ್ಯಂ

ಯೋಽಯಮಿಂದ್ರೋ ಮಹಿ ಮಹತ್ ಕ್ಷೇತ್ರಂ ಕೇದಾರಾದಿ ಪುರು ಪ್ರಭೂತಂ ಚಂದ್ರಂ ಹಿರಣ್ಯಂ ಚ ವಿವಿದ್ವಾನ್ ಅರ್ಥಿಭ್ಯಃ ಸಖಿಭ್ಯೋಽಸ್ಮಭ್ಯಂ ಲಂಭಯನ್ । ಆದಿತ್ ಅನಂತರಂ ಚರಥಂ ಚರಾತ್ಮಕಂ ಗವಾದಿಕಂ ಚ ಸಮೈರತ್ ಸಮ್ಯಕ್ ಪ್ರೈರಯತ್ । ದತ್ತವಾನಿತ್ಯರ್ಥಃ । ದೀದ್ಯಾನೋ ದೀಪ್ಯಮಾನಃ ಸೋಽಯಮಿಂದ್ರೋ ನೃಭಿರ್ನೇತೃಭಿಃ ಕರ್ಮಸಹಾಯಭೂತೈರ್ಮರುದ್ಭಿಃ ಸಾಕಂ ಸಹಿತಃ ಸನ್ ಸೂರ್ಯಂ ಕಾಲಸ್ಯ ನಿರ್ವಾಹಕಮಾದಿತ್ಯಂ ಉಷಸಮುಷಃಕಾಲಂ ಗಾತುಂ । ಗಾಯಂತಿ ಸ್ತುವಂತ್ಯಸ್ಯಾಮಿಂದ್ರಾದಿ-ದೇವಾನಿತಿ ಗಾತುಃ ಪೃಥಿವೀ। ತಾಂ । ಅಗ್ನಿಮಗ್ನಿಹೋತ್ರಾದಿಕರ್ಮಸಾಧನಭೂತಮಾವಹನೀಯಾದಿಲಕ್ಷಣ-ಮಗ್ನಿಂ ಚಾಜನತ್ । ಅಜನಯತ್ ॥ ಪುರು ಚಂದ್ರಂ । ಸಂಹಿತಾಯಾಂ ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರ ಇತಿ ಸುಡಾಗಮಃ । ತಸ್ಯ ಶ್ಚುತ್ವೇನ ಶಕಾರಃ । ಪದಕಾಲೇ ನಾಸ್ತಿ ಸುಡಾಗಮಃ । ಪುರು । ಕುಪ್ರ-ತ್ಯಯಸ್ಸ್ವರಃ । ಚಂದ್ರಂ । ರಕ್ । ಪ್ರತ್ಯಯಸ್ವರಃ । ಚರಥಂ । ಚರ ಗತ್ಯರ್ಥಃ ।ಆಸ್ಮಾದ್ಕಾದಿಕೋಽಥ-ಪ್ರತ್ಯಯಃ । ಪ್ರತ್ಯಯಸ್ವರಃ । ಐರತ್ । ಈರ ಗತಾವಿತ್ಯಸ್ಯ ಲಙಿ ಆಡಜಾದೀನಾಮಿತ್ಯಾಡಾಗಮಃ । ನಿಘಾತಃ । ಅಜನತ್ । ಜನೇರ್ಣ್ಯಂತಸ್ಯ ಲಙಿ ರೂಪಂ । ಬಹುಲಮನ್ಯತ್ರಾಪಿ ಸಂಜ್ಞಾಚ್ಛಂದಸೋರಿತಿ ಣೆಲುಕ್ । ಗಾತುಂ । ಗೈ ಶಬ್ದೇ । ಗಾಪಾಯಾಹಿಭ್ಯ ಇತಿ ತುಪ್ರತ್ಯಯಃ । ಪ್ರತ್ಯಯಸ್ವರಃ ॥ ॥ ೭ ॥

ಪ್ರತಿಪದಾರ್ಥ

ವಿವಿದ್ವಾನ್—ಸರ್ವಜ್ಞನಾದ । (ಇಂದ್ರಃ—ಇಂದ್ರನು) । ಸಖಿಭ್ಯಃ—ಅವನ ಆಪ್ತಸಖರಾದ ನಮಗೆ । ಮಹಿ—ಮಹತ್ತಾದ । ಕ್ಷೇತ್ರಂ—ಕ್ಷೇತ್ರವನ್ನೂ । ಪುರು—ಪ್ರಭೂತವಾದ। ಚಂದ್ರಂ—ಹಿರಣ್ಯವನ್ನೂ । ಆದಿತ್—ಒಡನೆಯೇ । ಚರಥಂ—ಚರಾತ್ಮಕವಾದ ಗವಾದಿಗಳನ್ನೂ । ಸಮೈರತ್—ಒದಗಿಸಿಕೊಟ್ಟನು । ದೀದ್ಯಾನಃ ಇಂದ್ರಃ—ಪ್ರಕಾಶಮಾನನಾದ ಇಂದ್ರನು । ನೃಭಿಃ ಸಾಕಂ—ನೇತೃಗಳಾದ ಮರುತ್ತಗಳೊಡಗೂಡಿ । ಸೂರ್ಯಂ—ಆದಿತ್ಯನನ್ನೂ । ಉಷಸಂ—ಉಷಸ್ಸನ್ನೂ । ಗಾತುಂ—ಪೃಥ್ವಿಯನ್ನೂ । ಅಗ್ನಿಂ—ಅಗ್ನಿಯನ್ನೂ । ಅಜನತ್—ಸೃಷ್ಟಿಮಾಡಿದನು ॥

ಭಾವಾರ್ಥ

ಸರ್ವಜ್ಞನಾದ ಇಂದ್ರನು ಅವನ ಆಪ್ತಸಖರಾದ ನಮಗೆ ಮಹತ್ತಾದ ಕ್ಷೇತ್ರವನ್ನೂ ಪ್ರಭೂತವಾದ ಹಿರಣ್ಯವನ್ನೂ ಹಾಗೆಯೇ ಚರಾತ್ಮಕವಾದ ಗವಾದಿಗಳನ್ನೂ ಒದಗಿಸಿಕೊಟ್ಟನು. ಪ್ರಕಾಶಮಾನನಾದ ಅದೇ ಇಂದ್ರನು ನೇತೃಗಳಾದ ಮರುತ್ತಗಳೊಡಗೂಡಿ ಆದಿತ್ಯನನ್ನೂ, ಉಷಸ್ಸನ್ನೂ, ಪೃಥ್ವಿಯನ್ನೂ ಮತ್ತು ಅಗ್ನಿಯನ್ನೂ ಉಂಟು ಮಾಡಿದನು.

## English Translation

Wide fields, vast treasure, (spacious) pastures, has the much-knowing (Indra) bestowed upon his friends: the radiant Indra with the leaders (of rites, the Maruts) generated the sun, the dawn, the earth, and fire.

### ಸಂಹಿತಾಪಾಠಃ

ಅಪಶ್ಚಿದೇಷ ವಿಭ್ವೋ೩ ದಮೂನಾಃ ಪ್ರ ಸಧ್ರೀಚೀರಸೃಜದ್ವಿಶ್ವಶ್ಚಂದ್ರಾಃ ।
ಮಧ್ವಃ ಪುನಾನಾಃ ಕವಿಭಿಃ ಪವಿತ್ರೈರ್ದ್ಯುಭಿರ್ಹಿನ್ವಂತ್ಯಕ್ತುಭಿರ್ಧನುತ್ರೀಃ ॥ ೧೬ ॥

### ಪದಪಾಠಃ

ಅಪಃ । ಚಿತ್ । ಏಷಃ । ವಿಽಭ್ವಃ । ದಮೂನಾಃ । ಪ್ರ । ಸಧ್ರೀಚೀಃ । ಅಸೃಜತ್ । ವಿಶ್ವಽಚಂದ್ರಾಃ ।
ಮಧ್ವಃ । ಪುನಾನಾಃ । ಕವಿಽಭಿಃ । ಪವಿತ್ರೈಃ । ದ್ಯುಽಭಿಃ । ಹಿನ್ವಂತಿ । ಅಕ್ತುಽಭಿಃ । ಧನುತ್ರೀಃ ॥ ೧೬ ॥

### ಸಾಯಣಭಾಷ್ಯಂ

ದಮೂನಾಃ । ದಾಂತಂ ಮನೋ ಯಸ್ಯಾಸೌ ದಮೂನಾಃ । ದಾಂತಮನಾಃ । ಯದ್ವಾ ದಾಮ್ಯತೀತಿ ದಮೂನಾಃ। ಉಪರತ ಇತ್ಯರ್ಥಃ । ಸ ಏಷ ಏವೇಂದ್ರೋ ವಿಭ್ವೋ ವ್ಯಾಪ್ತಾಃ ಸಧ್ರೀಚೀಃ ಪರಸ್ಪರ ಸಂಗತಾ ವಿಶ್ವಶ್ಚಂದ್ರಾ ವಿಶ್ವಸ್ಯಾಹ್ಲಾದಯಿತ್ರೀಃ । ವಿಶ್ವಸ್ಯಾಹ್ಲಾದೋ ಯಾಭ್ಯಸ್ತಾ ಇತಿ ವಾ । ಏವಂಭೂತಾ ಅಪಶ್ಚಿದಪೋಽಪಿ ಪ್ರಾಸೃಜತ್ । ಸೃಷ್ಟವಾನ್ । ಸೃಷ್ಟಾಶ್ಚ ತಾ ಆಪೋ ಮಧ್ವೋ ಮಾಧುರ್ಯೋಪೇತಾನ್ಸೋಮಾನ್ಕವಿಭಿಃ ಪವಿತ್ರೈರಗ್ನಿವಾಯುಸೂರ್ಯೈಃ ಪುನಾನಾಃ ಶೋಧಯಿತ್ರ್ಯೋ ಧನುತ್ರೀಃ ಸರ್ವಸ್ಯ ಜಗತಃ ಪ್ರೀಣಯಿತ್ರ್ಯಃ ಸತ್ಯೋ ದ್ಯುಭಿರ್ದಿವಸೈರಕ್ತುಭೀ ರಾತ್ರಿಭಿರ್ಹಿನ್ವಂತಿ । ರಾತ್ರಿದಿವಂ ಸರ್ವಂ ಜಗತ್ಸ್ವಸ್ವವ್ಯಾಪಾರಪ್ರವಣಂ ಕುರ್ವಂತೀತ್ಯರ್ಥಃ ॥ ದಮೂನಾಃ । ದಮು ಉಪಶಮೇ । ದಮೇರೂನಸಿಽತ್ಯೂನಸಿಪ್ರತ್ಯಯಃ । ದಾಮ್ಯತೀತಿ ದಮೂನಾಃ । ಯದ್ವಾ ದಾಂತಶಬ್ದಸ್ಯ ದಭಾವೋ ಮನಸೋ ಮಕಾರಾತ್ಪರಸ್ಯಾಕಾರಸ್ಯ ಊಕಾರಶ್ಛಾಂದಸಃ । ಅಸೃಜತ್ । ಸೃಜ ವಿಸರ್ಗೇ । ಹಿನ್ವಂತಿ । ಹಿ ಗತೌ । ನಿಘಾತಃ । ಧನುತ್ರೀಃ । ಧನ ಧಾನ್ಯ ಇತ್ಯಸ್ಮಾದಶಿತ್ರಾದಿಭ್ಯಾದುತ್ರಪ್ರತ್ಯಯಃ । ಶಾರ್ಙ್ಗರವಾದಿಷು ಙೀನ್ ದ್ರಷ್ಟವ್ಯಃ । ನಿತ್ಸ್ವರಃ ॥

### ಪ್ರತಿಪದಾರ್ಥ

ದಮೂನಾಃ—ದಾಂತಮನಸ್ಕನಾದ । ಏಷಃ—ಇಂದ್ರನು । ವಿಭ್ವಃ—ಸರ್ವತ್ರವ್ಯಾಪ್ತವಾದವೂ । ಸಧ್ರೀಚೀಃ—ಒಟ್ಟಿಗೆ ಸೇರಿಕೊಂಡು ಹರಿಯುವುವೂ । ವಿಶ್ವಚಂದ್ರಾಃ—ಲೋಕಕ್ಕೆಲ್ಲಾ ಆಹ್ಲಾದಕರವಾಗಿರುವುವೂ ಆದ । ಅಪಃ—ಉದಕಗಳನ್ನು । ಪ್ರ ಅಸೃಜತ್—ಸೃಷ್ಟಿಸಿದನು (ಆ ಉದಕಗಳು) । ಪವಿತ್ರೈಃ—ಶುದ್ಧಿಕಾರಕರಾದ । ಕವಿಭಿಃ—ಅಗ್ನಿ, ವಾಯು ಮತ್ತು ಸೂರ್ಯರ ಸಹಾಯದಿಂದ । ಮಧ್ವಃ—ಮಧುರವಾದ ಸೋಮರಸಗಳನ್ನು ।

ಪುನಾನಾಃ—ಶುದ್ಧಿಗೊಳಿಸುತ್ತಲೂ | ಶಸುತ್ರೀಃ—(ಲೋಕಕ್ಕೆಲ್ಲಾ) ಉಪಕಾರಕವಾಗಿರುತ್ತಲೂ ! ದ್ಯುಭಿಃ—ದಿವಸಗಳೊಂದಿಗೂ | ಅಕ್ತುಭಿಃ ಚಿಕ್—ರಾತ್ರಿಗಳೊಂದಿಗೂ | ಹಿನ್ವಂತಿ—ಪ್ರವಹಿಸುತ್ತವೆ ||

ಭಾವಾರ್ಥ

ದಾಂತಮನಸ್ಕನಾದ ಇಂದ್ರನು ಸರ್ವತ್ರವ್ಯಾಪ್ತವಾದವೂ, ಒಟ್ಟಿಗೆ ಸೇರಿಕೊಂಡು ಹರಿಯುವುವೂ ಲೋಕಕ್ಕೆಲ್ಲಾ ಆಹ್ಲಾದಕರವಾಗಿರುವುವೂ ಆದ ಉದಕಗಳನ್ನು ಸೃಷ್ಟಿಸಿದನು. ಆದೇ ಉದಕಗಳು ಶುದ್ಧಿಕಾರಕರಾದ ಅಗ್ನಿ, ವಾಯು, ಮತ್ತು ಸೂರ್ಯರ ಸಹಾಯದಿಂದ ಮಧುರವಾದ ಸೋಮರಸಗಳನ್ನು ಶುದ್ಧಿಗೊಳಿಸುತ್ತಲೂ, ಲೋಕಕ್ಕೆಲ್ಲಾ ಉಪಕಾರಕವಾಗಿರುತ್ತಲೂ, ಅಹೋರಾತ್ರಗಳ ಪ್ರವಾಹಗಳೊಡನೆ ತಾವೂ ಪ್ರವಹಿಸುತ್ತವೆ ||

English Translation

This lowly-minded Indra has created the widespread, commingled all-delighting waters; and they, purifying the sweet (libations) with the sage purifiers, and being benevolent (to all), proceed with (the revolutions) of days and nights.

ಸಂಹಿತಾಪಾಠಃ

ಅನು ಕೃಷ್ಣೇ ವಸುಧಿತೀ ಜಿಹಾತೇ ಉಭೇ ಸೂರ್ಯಸ್ಯ ಮಂಹನಾ ಯಜತ್ರೇ |
ಪರಿ ಯತ್ತೇ ಮಹಿಮಾನಂ ವೃಜಧ್ಯೈ ಸಖಾಯ ಇಂದ್ರ ಕಾಮ್ಯಾ ಋಜಿಪ್ಯಾಃ ||

ಪದಪಾಠಃ

ಅನು | ಕೃಷ್ಣೇ ಇತಿ | ವಸುಧಿತೀ ಇತಿ ವಸುಽಧಿತೀ | ಜಿಹಾತೇ ಇತಿ | ಉಭೇ ಇತಿ | ಸೂರ್ಯಸ್ಯ | ಮಂಹನಾ | ಯಜತ್ರೇ ಇತಿ |
ಪರಿ | ಯತ್ | ತೇ | ಮಹಿಮಾನಂ | ವೃಜಧ್ಯೈ | ಸಖಾಯಃ | ಇಂದ್ರ | ಕಾಮ್ಯಾಃ | ಋಜಿಪ್ಯಾಃ ||೧೭||

ಸಾಯಣಭಾಷ್ಯಂ

ಹೇ ಇಂದ್ರ ಸೂರ್ಯಸ್ಯ ಸುಷ್ಠು ಜಗತಃ ಪ್ರೇರಕಸ್ಯ ತವ ಮಂಹನಾ ಮಹತ್ತ್ವೇನ ಸಾಮರ್ಥ್ಯೇನ ವಸುಧಿತೀ ವಸ್ತವ್ಯಪದಾರ್ಥಧಾರಣೋಪೇತೇ ಯಜತ್ರೇ ಯಜನಾರ್ಹೇ ತೇ ಉಭೇ ಕೃಷ್ಣೇ ಅಹೋರಾತ್ರೇ ಅನು ಜಿಹಾತೇ | ಪುನಃಪುನರಾವೃತ್ಯ ವರ್ತೇತೇ | ಕಿಂಚ | ಋಜಿಪ್ಯಾ ಋಜುಗತಯಃ ಸಖಾಯಸ್ತೇ ಮಿತ್ರಭೂತಾಃ ಕಾಮ್ಯಾಃ ಕಮನೀಯಾ ಮರುತೋ ವೃಜಧ್ಯೈ | ಕರ್ಮವಿಘ್ನಕಾರಿಣಾಮಸುರಾಣಾಂ ವರ್ಜನಾಯ ಪರಿಭವಾಯ| ಯದ್ಯಸ್ಯ ತೇ ತವ ಮಹಿಮಾನಂ ಸಾಮರ್ಥ್ಯಮನುಸೃತ್ಯ ಪರಿ ಪರಿತಃ ಪ್ರಭವಂತಿ|| ಜಿಹಾತೇ| ಓಹಾಙ್ ಗತೌ| ಜುಹೋತ್ಯಾದಿಃ| ಭೃಞಾಮಿದಿತ್ಯಭ್ಯಾಸಸ್ಯೇತ್ವಂ| ನಿಘಾತಃ| ಮಂಹನಾ|

ಮಹಿ ವೃದ್ಧೌ । ಲ್ಯುಟ್ । ಲಿತ್ಸ್ವರಃ । ವೃಜಧ್ಯೈ । ವೃಜೀ ವರ್ಜನೇ । ತುಮರ್ಥೇ ಕಧ್ಯೈಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ। ಪ್ರತ್ಯಯಸ್ವರಃ । ಕಾಮ್ಯಾಃ । ಕಮೇರ್ಣ್ಯಂತೆಸ್ಯಾಚೋ ಯದಿತಿ ಯತ್ಪ್ರತ್ಯಯಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಋಜಿಪ್ಯಾಃ । ಓಪ್ಯಾಯೀ ವೃದ್ಧೌ । ಕ್ವಿಪ್ । ಲೋಪೋ, ವ್ಯೋ-ರ್ವಲೀತಿ ಯಲೋಪಃ । ಪೂರ್ವಪದಸ್ಯೋಕಾರಸ್ಯೇಕಾರೋ ವ್ಯತ್ಯಯೇನ । ಬಹುವಚನಸ್ಯೈಕವಚನಂ ಛಾಂದಸಂ । ಕೃದುತ್ತರಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಸೂರ್ಯಸ್ಯ—(ಜಗತ್ತಿಗೆಲ್ಲಾ) ಪ್ರೇರಕನಾದ ನಿನ್ನ । ಮಂಹನಾ—ಸಾಮರ್ಥ್ಯದಿಂದ । ವಸುಧಿತೀ—ಜಗತ್ತನ್ನು ಧರಿಸಿರುವುವೂ । ಯಜತ್ರೇ—ಪೂಜಾರ್ಹವೂ ಆದ । ಉಭೇ ಕೃಷ್ಣೇ—ಅಹೋರಾತ್ರಗಳೆರಡೂ ಸಹ । ಅನು ಜಿಹಾತೇ—ಆವೃತ್ತಿರೂಪವಾದ ಪರಿಭ್ರಮಣವನ್ನು ಹೊಂದುತ್ತಿವೆ । ಋಜಿಪ್ಯಾಃ—ಋಜುಗಮನವುಳ್ಳವರೂ । ಸಖಾಯಃ—ನಿನ್ನ ಸಖರೂ । ಕಾಮ್ಯಾಃ—ಆಕರ್ಷಕವಾದ ರೂಪವುಳ್ಳವರೂ ಆದ ಮರುತ್ತುಗಳು । ವೃಜಧ್ಯೈ—ಅಸುರರ ಹನನಕ್ಕಾಗಿ । ಯತ್ ತೇ—ನಿನ್ನ । ಮಹಿಮಾನಂ—ಪ್ರಭಾವವನ್ನು । ಪರಿ—ಸುತ್ತಲೂ ಪ್ರಸರಿಸುವಂತೆ ಮಾಡುತ್ತಾರೆ ॥

ಭಾವಾರ್ಥ

ಎಲೈ ಇಂದ್ರನೇ, ಜಗತ್ತಿಗೆಲ್ಲಾ ಪ್ರೇರಕನಾದ ನಿನ್ನ ಸಾಮರ್ಥ್ಯದಿಂದ ಜಗತ್ತನ್ನು ಧರಿಸಿರುವವೂ ಪೂಜಾರ್ಹವೂ ಆದ ಅಹೋರಾತ್ರಗಳೆರಡೂ ಸಹ ಆವೃತ್ತಿರೂಪವಾದ ಪರಿಭ್ರಮಣವನ್ನು ಹೊಂದುತ್ತಿವೆ. ಋಜುವಾದ ಗಮನವುಳ್ಳವರೂ ನಿನ್ನ ಸಖರೂ, ಆಕರ್ಷಕವಾದ ರೂಪವುಳ್ಳವರೂ ಆದ ಮರುತ್ತುಗಳು ಅಸುರರ ಹನನಕ್ಕಾಗಿ ನಿನ್ನ ಪ್ರಭಾವವನ್ನು ಸುತ್ತಲೂ ಪ್ರಸರಿಸುವಂತೆ ಮಾಡುತ್ತಾರೆ ॥

English Translation

The two adorable (alternations of) day and night, upholding (all things) by the might of the sun, successively revolve : your sincere and acceptable friends (the Maruts) are ready to encounter (your foes) and maintain your greatness.

ಸಂಹಿತಾಪಾಠಃ

ಪತಿರ್ಭವ ವೃತ್ರಹನ್ಸೂನೃತಾನಾಂ ಗಿರಾಂ ವಿಶ್ವಾಯುರ್ವೃಷಭೋ ವಯೋಧಾಃ ।
ಆ ನೋ ಗಹಿ ಸಖ್ಯೇಭಿಃ ಶಿವೇಭಿರ್ಮಹಾನ್ಮಹೀಭಿರೂತಿಭಿಃ ಸರಣ್ಯನ್ ॥ ೧೮ ॥

ಪದಪಾಠಃ

ಪತಿಃ । ಭವ । ವೃತ್ರಽಹನ್ । ಸೂನೃತಾನಾಂ । ಗಿರಾಂ । ವಿಶ್ವಽಆಯುಃ । ವೃಷಭಃ । ವಯಃಽಧಾಃ ।
ಆ । ನಃ । ಗಹಿ । ಸಖ್ಯೇಭಿಃ । ಶಿವೇಭಿಃ । ಮಹಾನ್ । ಮಹೀಭಿಃ । ಊತಿಽಭಿಃ । ಸರಣ್ಯನ್ ॥ ೧೮ ॥

ಸಾಯಣಭಾಷ್ಯಂ

ಹೇ ವೃತ್ರಹನ್ನಿಂದ್ರ ವಿಶ್ವಾಯುಃ ವಿಶ್ವಂ ಸಂಪೂರ್ಣಮಾಯುರ್ಯಸ್ಯಾಸೌ ವಿಶ್ವಾಯುಃ । ಅವಿನಾಶೀ ವೃಷಭಃ ಕಾಮಾನಾಂ ವರ್ಷಿತಾ ವಯೋಧಾ ಅನ್ನಸ್ಯ ದಾತಾ ತಾದೃಶಸ್ತ್ವಂ ಸೂನೃತಾನಾಂ ಗಿರಾಮಸ್ಮಾಭಿಃ ಕ್ರಿಯಮಾಣಾನಾಂ ಪ್ರಿಯತಮಾನಾಂ ವಾಚಾಂ ಪತಿಃ ಸ್ವಾಮೀ ಭವ । ತಥಾ ಸರಣ್ಯನ್ ಸರಣಂ ಯಜ್ಞಾರ್ಥಂ ಗಮನಮಿಚ್ಛನ್ ಮಹಾನ್ಮಹೀಭಿರ್ಮಹತೀಭಿರೂತಿಭೀ ರಕ್ಷಾಭಿಃ ಶಿವೇಭಿಃ ಕಲ್ಯಾಣೈಃ ಸಖ್ಯೇಭಿಃ ಫಲಪ್ರದಾನರೂಪೋಪಕಾರಲಕ್ಷಣೈಃ ಸಖ್ಯೈಶ್ಚ ಸಹಿತಸ್ತ್ವಂ ನೋಽಸ್ಮಾನ್ಪ್ರತ್ಯಾಗಹಿ । ಯಜ್ಞಾರ್ಥಮಾಗಚ್ಛ ॥ ಸೂನೃತಾನಾಂ । ಊನ ಪರಿಹಾಣೇ । ಸುತರಾಮೂನಯತ್ಯಪ್ರಿಯಮಿತಿ ಸೂನಿತಿ ಪ್ರಿಯಮುಚ್ಯತೇ । ತಚ್ಚ ತದೃತಂ ಸತ್ಯಂ ಚೇತಿ ಸೂನೃತಂ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ। ವಯೋಧಾಃ । ವಯಸ್ಯುಪಪದೇ ದಧಾತೇರ್ವಿಚ್ । ಗಹಿ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಸೇರ್ಹಿರಾದೇಶಃ । ಅಪಿಚ್ಚ । ತಸ್ಯ ಜುತ್ವಾತ್ತದನುದಾತ್ತೋಪದೇಶೇತ್ಯಾದಿನಾ ಮಲೋಪಃ। ತಸ್ಯಾಸಿದ್ಧತ್ವಾದತೋ ಹೇರಿತಿ ಹೇರ್ಲುಕ್ ನ ಭವತಿ । ನಿಘಾತಃ। ಸರಣ್ಯನ್ । ಸರಣಶಬ್ದಾತ್ಕ್ಯಚ್। ನಿಕಾದೇಶಸ್ವರಃ ॥

ಪ್ರತಿಪದಾರ್ಥ

**ವೃತ್ರಹನ್**—ವೃತ್ರಹಂತಕನೂ । **ವಿಶ್ವಾಯುಃ**—ದೀರ್ಘವಾದ ಆಯುಸ್ಸುಳ್ಳವನೂ । **ವೃಷಭಃ**—ಕಾಮವರ್ಷಕನೂ। **ವಯೋಧಾಃ**—ಅನ್ನದಾತೃವೂ ಆದ ಎಲೈ ಇಂದ್ರನೇ। **ಸೂನೃತಾನಾಂ**-ಪ್ರಿಯತಮುಗಳಾದ । **ಗಿರಾಂ**-ನಮ್ಮ ಸ್ತುತಿವಾಕ್ಯಗಳಿಗೆ । **ಪತಿಃ ಭವ**—ಸ್ವಾಮಿಯಾಗಿರು । **ಮಹಾನ್**—ಮಹಾತ್ಮನಾದ ನೀನು । **ಸರಣ್ಯನ್**—ಯಜ್ಞಗಮನಕ್ಕಾಗಿ । **ಮಹೀಭಿಃ**—ಮಹದ್ಗುಣವುಳ್ಳ । **ಊತಿಭಿಃ**—ರಕ್ಷಣೆಗಳೊಂದಿಗೂ । **ಶಿವೇಭಿಃ**—ಕಲ್ಯಾಣಾತ್ಮಕವಾದ । **ಸಖ್ಯೇಭಿಃ**—ಸಖರೊಂದಿಗೂ ಸಹ । **ನಃ**—ನಮ್ಮ ಅಭಿಮುಖವಾಗಿ । **ಆ ಗಹಿ**—ಬರುವವನಾಗು ॥

ಭಾವಾರ್ಥ

ವೃತ್ರಹಂತಕನೂ, ದೀರ್ಘವಾದ ಆಯುಸ್ಸುಳ್ಳವನೂ, ಕಾಮವರ್ಷಕನೂ, ಅನ್ನದಾತೃವೂ ಆದ ಎಲೈ ಇಂದ್ರನೇ, ಪ್ರಿಯತಮವಾದ ನಮ್ಮ ಸ್ತುತಿವಾಕ್ಯಗಳಿಗೆ ನೀನು ಸ್ವಾಮಿಯಾಗಿರು. ಮಹಾತ್ಮನಾದ ನೀನು, ಮಹದ್ಗುಣವುಳ್ಳ ರಕ್ಷಣೆಗಳೊಂದಿಗೂ, ಕಲ್ಯಾಣಾತ್ಮಕರಾದ ಸಖರೊಂದಿಗೂ ಸಹ ನಮ್ಮ ಅಭಿಮುಖವಾಗಿ ಬರುವವನಾಗು

English Translation

Slayer of Vritra, do you, who art long lived, the showerer, (of benefits), the giver of food, be the lord of our true praises, repairing (to the sacrifice), come to us great, with great, friendly, and auspicious protections.

ಸಂಹಿತಾಪಾಠಃ

ತಮುಂಗಿರಸ್ವನ್ನಮಸಾ ಸಪರ್ಯನ್ನವ್ಯಂ ಕೃಣೋಮಿ ಸನ್ಯಸೇ ಪುರಾಜಾಂ ।

ದ್ರುಹೋ ವಿ ಯಾಹಿ ಬಹುಲಾ ಅದೇವೀಃ ಸ್ವಶ್ಚ ನೋ ಮಘವನ್ತ್ಸಾತಯೇ ಧಾಃ ॥

ಪದಪಾಠಃ

ತಂ । ಅಂಗಿರಸ್ವತ್ । ನಮಸಾ । ಸಪರ್ಯನ್ । ನವ್ಯಂ । ಕೃಣೋಮಿ । ಸನ್ಯಸೇ । ಪುರಾಽಜಾಂ । ದ್ರುಹಃ । ವಿ । ಯಾಹಿ । ಬಹುಲಾಃ । ಅದೇವೀಃ । ಸ್ವಃ । ಇತಿ ಸ್ವಃ । ಚ । ನಃ । ಮಘಽವನ್ । ಸಾತಯೇ । ಧಾಃ ॥ ೧೯ ॥

ಸಾಯಣಭಾಷ್ಯಂ

ಹೇ ಇಂದ್ರ ಅಂಗಿರಸ್ವತ್ ಅಂಗಿರಸ ಇವ ನಮಸಾ ಸ್ತೋತ್ರೇಣ ಸಪರ್ಯನ್ ಪೂಜಯನ್ ವಿಶ್ವಾಮಿತ್ರೋಽಹಂ ತಂ ತಾದೃಶಮಹಿಮೋಪೇತಂ ಪುರಾಜಾಂ ಪುರಾತನಂ ತ್ವಾಂ ಸನ್ಯಸೇ ಸಂಭಜನಾಯ ನವ್ಯಂ ಕೃಣೋಮಿ । ಸ್ತೋತವ್ಯತಯಾಭಿನವಂ ಕರೋಮಿ । ಅದೇವೀಸ್ತಮೋರೂಪತ್ವೇನಾದ್ಯೋತಮಾನಾಸ್ಬಹುಲಾ ಬಹೂನ್ ದ್ರುಹೋ ದ್ರೋಗ್ಧ್ರೂನ್ ಶತ್ರುಭೂತಾನ್ ರಾಕ್ಷಸಾನ್ ವಿ ಯಾಹಿ । ವಿಶೇಷೇಣ ಮೃತಿಂ ಪ್ರಾಪಯ । ಹೇ ಮಘವನ್ನಿಂದ್ರ ನೋಽಸ್ಮಭ್ಯಂ ಸ್ವಃ ಸ್ವಂ ಧನಂ ಚ ಸಾತಯೇ ಸಂಭಜನಾರ್ಥಂ ಧಾಃ । ಧೇಹಿ ॥ ಅಂಗಿರಸ್ವತ್ । ಅಂಗಿರಸ ಇವ । ತೇನ ತುಲ್ಯಮಿತಿ ವತಿಪ್ರತ್ಯಯಃ । ನಭೋಽಂಗಿರೋಮನುಷಾಂ ವತ್ಯುಪಸಂಖ್ಯಾನಮಿತಿ ಭಸಂಜ್ಞಾಯಾಂ ಸಕಾರಸ್ಯ ರುತ್ವಾಭಾವಃ । ಸಪರ್ಯನ್ । ಸಪರಶಬ್ದಃ ಕಂಡ್ವಾದಿಃ। ನವ್ಯಂ ಣು ಸ್ತುತಾವಿತ್ಯಸ್ಮಾದಚೋ ಯದಿತಿ ಯತ್ಪ್ರತ್ಯಯಃ । ಧಾತೋಸ್ತನ್ನಿಮಿತ್ತಸ್ಯೇತಿ ವಾಂತಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಕೃಣೋಮಿ । ಕೃವೇರ್ಲಟಿ ರೂಪಂ । ಸನ್ಯಸೇ । ಸನತೇರ್ಭಾವೇ ಕ್ವಿಪ್ । ಯಸು ಪ್ರಯತ್ನೇ । ಅಸ್ಮಾತ್ ಕ್ವಿಪ್ । ಸನಃ ಸಂಭಜನಸ್ಯ ಯಸೇ ಯತ್ನಾಯ । ಸಂಭಜನಾರ್ಥಮಿತ್ಯರ್ಥಃ । ಪುರಾಜಾಂ । ಜನೇರ್ವಿಟ್ಯಾತ್ವೇ ರೂಪಂ । ಯಾಹಿ । ಯಾತೇರ್ಲೋಟಿ ರೂಪಂ । ಸ್ವಃ । ಸ್ವರಾದಿನಿಪಾತಮವ್ಯಯಮಿತ್ಯವ್ಯಯಸಂಜ್ಞಾಯಾಮವ್ಯಯಾದಾಪ್ಸುಪ ಇತಿ ಸುಪೋ ಲುಕ್ । ಸಾತಯೇ । ಷಣ ಸಂಭಕ್ತೌ । ಭಾವೇ ಕ್ತಿನ್ । ಜನಸನೇತ್ಯಾದಿನಾ ಆತ್ವಂ । ಊತಿಯೂತೀತ್ಯಾದಿನಾ ನಿಪಾತನಾದುದಾತ್ತಃ ॥

ಪ್ರತಿಪದಾರ್ಥ

ಅಂಗಿರಸ್ವತ್—(ಎಲೈ ಇಂದ್ರನೇ) ಅಂಗಿರಸ್ಸಿನಂತೆ । **ನಮಸಾ**—ಸ್ತೋತ್ರದಿಂದ । **ಸಪರ್ಯನ್**—ಪೂಜಿಸುವ (ವಿಶ್ವಾಮಿತ್ರನಾದ) ನಾನು । **ತಂ ಪುರಾಜಾಂ**—ಪುರಾತನನಾದ ನಿನ್ನನ್ನು । **ಸನ್ಯಸೇ**—ಆರಾಧಿಸುವುದಕ್ಕೋಸ್ಕರ । **ನವ್ಯಂ ಕೃಣೋಮಿ**—ನೂತನನನ್ನಾಗುವಂತೆ ಮಾಡುತ್ತೇನೆ । **ಅದೇವೀಃ**—ಪ್ರಕಾಶವಿಲ್ಲದೇ ಕತ್ತಲು ರೂಪದಲ್ಲಿರುವವರೂ । **ಬಹುಲಾಃ**—ಬಹುಸಂಖ್ಯಾಕರಾದವರೂ । **ದ್ರುಹಃ**—ದ್ರೋಹಿಗಳೂ ಆದ ಅಸುರರನ್ನು । **ವಿ ಯಾಹಿ**—ನಾಶಪಡಿಸು । **ಮಘವನ್**—ಧನವಂತನಾದ ಇಂದ್ರನೇ । **ನಃ**—ನಮಗೆ । **ಸ್ವಂ ಚ**—ನಿನ್ನ ಸಂಬಂಧಿಯಾದ ಧನವನ್ನೂ । **ಸಾತಯೇ**—ನಾವು ಅನುಭವಿಸುವುದಕ್ಕಾಗಿ । **ದಾಃ**—ಕೊಡು.

ಭಾವಾರ್ಥ

ಎಲೈ ಇಂದ್ರನೇ, ಅಗಿರಸ್ಸಿನಂತೆಯೇ, ಸ್ತೋತ್ರದಿಂದ ಪೂಜಿಸತಕ್ಕವನೂ ವಿಶ್ವಾಮಿತ್ರನೆಂಬ ನಾಮಧೇಯವುಳ್ಳವನೂ ಆದ ನಾನು ಪುರಾತನನಾದ ನಿನ್ನನ್ನು ಆರಾಧಿಸುವುದಕ್ಕಾಗಿ ಪುನಃ ನೂತನನಾಗುವಂತೆ ಮಾಡುತ್ತೇನೆ.

ಪ್ರಕಾಶವಿಲ್ಲದೇ ಕಗ್ಗತ್ತಲುರೂಪದಲ್ಲಿರುವವರೂ, ದ್ರೋಹಿಗಳೂ ಆದ ಅಸುರರನ್ನು ನಾಶಪಡಿಸು ಮತ್ತು ನಿನ್ನ ಸಂಬಂಧಿ ಯಾವ ಧನವನ್ನೆಲ್ಲಾ ನಾವು ಅನುಭವಿಸುವುದಕ್ಕಾಗಿ ನಮಗೂ ಕೊಡು.

English Translation

Worshiping him with reverence, like an Angiras, I make the aneient (Indra) renovate to accept the oblation : destroy the many impious oppressors (of your worshippers), and bestow upon us, Maghavan, your own (wealth) for our aeceptance.

ಸಂಹಿತಾಪಾಠಃ

ಮಿಹಃ ಪಾವಕಾಃ ಪ್ರತತಾ ಅಭೂವನ್ತ್ಸ್ವಸ್ತಿ ನಃ ಪಿಪೃಹಿ ಪಾರಮಾಸಾಂ ।
ಇಂದ್ರ ತ್ವಂ ರಥಿರಃ ಪಾಹಿ ನೋ ರಿಷೋ ಮಕ್ಷೂಮಕ್ಷೂ ಕೃಣುಹಿ ಗೋಜಿತೋ ನಃ ॥

ಪದಪಾಠಃ

ಮಿಹಃ । ಪಾವಕಾಃ । ಪ್ರऽತತಾಃ । ಅಭೂವನ್ । ಸ್ವಸ್ತಿ । ನಃ । ಪಿಪೃಹಿ । ಪಾರಂ । ಆಸಾಂ ।
ಇಂದ್ರ । ತ್ವಂ । ರಥಿರಃ । ಪಾಹಿ । ನಃ । ರಿಷಃ । ಮಕ್ಷುऽಮಕ್ಷು । ಕೃಣುಹಿ । ಗೋऽಜಿತಃ । ನಃ ॥ ೨೦ ॥

ಸಾಯಣಭಾಷ್ಯಂ

ಹೆ ಇಂದ್ರ ತೇ ಪಾವಕಾಃ ಪಾಪಾನಾಂ ಶೋಧಯಿತ್ರ್ಯೋ ಮಿಹಃ ಸೇಚನಸಾಧನಾನ್ಯಾಪಃ ಪ್ರತತಾ ಲೋಕೇ ಪ್ರಕರ್ಷೇಣ ವಿಸ್ತೃತಾ ಅಭೂವನ್ । ಆಸಾಮಪಾಂ ಸ್ವಸ್ತಿ ವಿನಾಶರಹಿತಂ ಪಾರಂ ತೀರಂ ನೋಽಸ್ಮದರ್ಥಂ ಪಿಪೃಹಿ । ಜಲೈಃ ಸಂಪೂರ್ಣಂ ಕುರು । ಜಲಮಪಾರಪಾರೀಣಂ ಕುರ್ವಿತ್ಯರ್ಥಃ । ರಥಿರೋ ರಥವಾಂಸ್ತ್ವಂ ರಿಷೋ ಹಿಂಸಕಾಚ್ಛತ್ರೋಃ ಸಕಾಶಾನ್ನೋಽಸ್ಮಾನ್ಪಾಹಿ । ಪಾಲಯ । ಅನಂತರಂ ನೋಽಸ್ಮಾನ್ ಮಕ್ಷು ಮಕ್ಷು ಅತಿಶೀಘ್ರಂ ಗೋಜಿತೋ ಗವಾದಿಪಶೂನಾಂ ಜೇತೄನ್ ಕೃಣಿಹಿ । ಕುರು । ವೃಷ್ಟಿಪ್ರದಾನೇನ ತಟಾಕಾದಿಜಲಾಶಯಾನ್ ಸಂಪೂರ್ಣಾನ್ ಕೃತ್ವಾ ಗವಾದಿಧನಯುಕ್ತಾನ್ ಕುರ್ವಿತಿ ಭಾವಃ ॥ ಅಭೂವನ್ । ಭೂ ಸತ್ತಾಯಾಮಿತ್ಯಸ್ಯ ಲುಙಿ ರೂಪಂ । ನಿಘಾತಃ । ಪಿಪೃಹಿ । ಪೃ ಪಾಲನಪೂರಣಯೋಃ । ಜುಹೋತ್ಯಾದಿಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಹೇರ್ಙಿತ್ತ್ವಾದಗುಣಃ । ನಿಘಾತಃ । ರಥಿರಃ । ಮತ್ವರ್ಥೇ ಮೇಧಾರಥಾಭ್ಯಾಮಿರನಿರಚಾವಿತೀರಚ್ ಪ್ರತ್ಯಯಃ । ರಿಷಃ । ರಿಷ ಹಿಂಸಾಯಾಂ । ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಮಕ್ಷೂ ಮಕ್ಷೂ । ನಿತ್ಯವೀಪ್ಸಯೋರಿತಿ ದ್ವಿರ್ವಚನಂ । ಸಂಹಿತಾಯಾಮೃಚಿ ತುನುಘಮಕ್ಷುತಙ್ಕ್ಷುತ್ರೋರುಷ್ಯಾಣಾಮಿತಿ ದೀರ್ಘಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಪಾವಕಾಃ—ಶುದ್ಧಿಕಾರಕಗಳೂ । ಮಿಹಃ—ಸೇಚನಸಾಧನಗಳೂ ಆದ ಉದಕಗಳು । **ಪ್ರತತಾಃ**—ವಿಸ್ತೃತವಾಗಿ ಹರಡಿಕೊಂಡವಾಗಿ । **ಅಭೂವನ್**—ಆಗಿವೆ। **ಆಸಾಂ**—ಈ ಉದಕಗಳಿಗೆ।

ಸ್ವಸ್ತಿ—ನಾಶರಹಿತವಾಗಿರುವಂತೆ । ಪಾರಂ—(ಅವುಗಳ) ಮೂಲಸ್ಥಾನವನ್ನು । ನಃ—ನಮ್ಮ ಹಿತಕ್ಕಾಗಿ । ಪಿಪೃಹಿ—ನೀರಿನಿಂದ ತುಂಬು । ರಥಿರಃ—ರಥವಂತನಾದ । ತ್ವಂ—ನೀನು । ರಿಷಃ—ಹಿಂಸಕರಾದ ಶತ್ರುಗಳಿಂದ । ನಃ—ನಮ್ಮನ್ನು । ಪಾಹಿ—ರಕ್ಷಿಸು । ನಃ—ನಮ್ಮನ್ನು । ಮಕ್ಷೂಮಕ್ಷು—ಅತಿಶೀಘ್ರವಾಗಿ । ಗೋಜಿತಃ—ಗವಾದಿಗಳ ಜೇತೃಗಳಾಗಿರುವಂತೆ । ಕೃಣುಹಿ—ಮಾಡು.

ಭಾವಾರ್ಥ

ಎಲೈ ಇಂದ್ರನೇ, ಶುದ್ಧಿಕಾರಕಗಳೂ, ಸೇಚನಸಾಧಕಗಳೂ ಆದ ಉದಕಗಳು ಲೋಕದಲ್ಲೆಲ್ಲಾ ಹರಡಿಬಿಟ್ಟಿವೆ. ಆ ಉದಕಗಳು ನಾಶರಹಿತವಾಗಿರಲು ಅವುಗಳ ಮೂಲಸ್ಥಾನವನ್ನು ನಮ್ಮ ಹಿತಕ್ಕಾಗಿ ನೀರಿನಿಂದ ತುಂಬು. ರಥವಂತನಾದ ನೀನು ಹಿಂಸಕರಾದ ಶತ್ರುಗಳಿಂದ ನಮ್ಮನ್ನು ರಕ್ಷಿಸು. ನಮ್ಮನ್ನು ಅತಿಶೀಘ್ರವಾಗಿ ಗವಾದಿಗಳ ಜೇತೃಗಳಾಗಿರುವಂತೆ ಮಾಡು.

English Translation

The purifying waters have been spread abroad : fill their beds for our welfare : riding on your car, defend us from the malevolent, and make us quickly the conquerors of cattle.

ಸಂಹಿತಾಪಾಠಃ

ಅದೇದಿಷ್ಟ ವೃತ್ರಹಾ ಗೋಪತಿರ್ಗಾ ಅಂತಃ ಕೃಷ್ಣಾಁ ಅರುಷೈರ್ಧಾಮಭಿರ್ಗಾತ್ ।
ಪ್ರ ಸೂನೃತಾ ದಿಶಮಾನ ಋತೇನ ದುರಶ್ಚ ವಿಶ್ವಾ ಅವೃಣೋದಪ ಸ್ವಾಃ ॥ ೨೧ ॥

ಪದಪಾಠಃ

ಅದೇದಿಷ್ಟ । ವೃತ್ರऽಹಾ । ಗೋऽಪತಿಃ । ಗಾಃ । ಅಂತರಿತಿ । ಕೃಷ್ಣಾನ್ । ಅರುಷೈಃ । ಧಾಮऽಭಿಃ । ಗಾತ್ ।

ಪ್ರ । ಸೂನೃತಾಃ । ದಿಶಮಾನಃ । ಋತೇನ । ದುರಃ । ಚ । ವಿಶ್ವಾಃ । ಅವೃಣೋತ್ । ಅಪ । ಸ್ವಾಃ ॥

ಸಾಯಣಭಾಷ್ಯಂ

ವೃತ್ರಹಾ ವೃತ್ರಸ್ಯ ಹಂತಾ ಗೋಪತಿರ್ಗವಾಂ ಸ್ವಾಮೀ ಸನ್ನಿಂದ್ರೋ ಗಾ ಅದೇದಿಷ್ಟ । ಅಸ್ಮಭ್ಯಂ ದಿಶತು । ತಥಾ ಕೃಷ್ಣಾನ್ ಕರ್ಮವಿಘ್ನಕಾರಿಣೋಽಸುರಾನರುಷೈರಾರೋಚಮಾನೈರ್ಧಾಮಭಿಸ್ತೇಜೋಭಿರಂತರಂತರ್ಧಾನಂ ವಿನಾಶಂ ಗಾತ್ । ಗಮಯತು । ತಥಾ ಸೂನೃತಾಃ ಪ್ರಿಯತಮಾ ಗಾ ಋತೇನ ಪ್ರತಾರಣವರ್ಜಿತೇನ ಸತ್ಯೇನ ವಾಕ್ಯೇನ ಪ್ರದಿಶಮಾನೋಽಂಗಿರೋಭ್ಯಃ ಪ್ರದಿಶನ್ನಿಂದ್ರೋ ವಿಶ್ವಾಃ ಸರ್ವಾಣಿ ದುರೋ ಗವಾಂ ಸ್ವೇಚ್ಛಯಾ ನಿರ್ಗಮನದ್ವಾರಾಣಿ ಸ್ವಾಃ ಸ್ವಕೀಯಾ ಗಾಶ್ಚಾಪಾವೃಣೋತ್ । ವ್ರಜೇ ಗಾಃ

ಸ್ಥಾಪಿಯಿತ್ವಾ ತಾನಿ ದ್ವಾರಾಣ್ಯಾಚ್ಛಾದಿತವಾನಿತ್ಯರ್ಥಃ ॥ ಅದೇದಿಷ್ಟ । ದಿಶ ಅತಿಸರ್ಜನ ಇತ್ಯಸ್ಮಾದ್ಯಜ್ಲ್ಲ ಜಾ ಲಜಾ ವ್ಯತ್ಯಯೇನಾತ್ಮನೇಪದಂ । ಅಡಾಗಮಸ್ವರಃ । ಗೋಪತಿಃ । ಪತ್ಯಾವೈಶ್ವರ್ಯೆ ಇತಿ ಪೂರ್ವಪದ-ಪ್ರಕೃತಿಸ್ವರಃ । ಗಾತ್ । ಇಙ್ ಗತೌ । ಅಂತರ್ಭಾವಿತಣ್ಯರ್ಥಃ । ದಿಶಮಾನಃ । ದಿಶೇರ್ವ್ಯತ್ಯಯೇನ ಶಾ-ನಚ್ । ತಸ್ಯ ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಧಾತುಸ್ವರಃ । ಅವೃಣೋತ್ । ವೃಞ್ ವರಣ ಇತ್ಯಸ್ಯ ಲಙಿ ರೂಪಂ ॥

ಪ್ರತಿಪದಾರ್ಥ

ವೃತ್ರಹಾ—ವೃತ್ರಹಂತಕನೂ । ಗೋಪತಿಃ—ಗೋವುಗಳಿಗೆ ಒಡೆಯನೂ ಆದ ಇಂದ್ರನು । ಗಾಃ—ಗೋವುಗಳನ್ನು । ಅದೇದಿಷ್ಟ—ತೋರಿಸಿಕೊಟ್ಟನು । ಕೃಷ್ಣಾನ್—ಕರ್ಮವಿಘ್ನಕಾರಿಗಳಾದ ಅಸುರರನ್ನು । ಅರುಷೈಃ—ಪ್ರಕಾಶಮಾನಗಳಾದ । ಧಾಮಭಿಃ—ತೇಜಸ್ಸುಗಳಿಂದ । ಅಂತರ್ಗಾತ್—ನಾಶಮಾಡಿದನು । ಸೂನೃತಾಃ—ಪ್ರಿಯತಮಗಳಾದ ಗೋವುಗಳನ್ನು । ಋತೇನ—ಆಕರ್ಷಕವಾದ ವಾಕ್ಯಗಳಿಂದ । ಪ್ರ ದಿಶಮಾನಃ—ಅಂಗಿರಸ್ಸುಗಳಿಗೆ ನಿರ್ದೇಶಿಸಿ ತೋರಿಸುತ್ತಾ । ವಿಶ್ವಾ—ಸಮಸ್ತವಾದ । ದುರಃ—ಕೊಟ್ಟಿಗೆಯ ಬಾಗಿಲನ್ನೂ । ಸ್ವಾಃ ಚ—ಗೋವುಗಳನ್ನೂ । ಅಪ ಅವೃಣೋತ್—ಮುಚ್ಚಿದನು.

ಭಾವಾರ್ಥ

ವೃತ್ರಹಂತಕನೂ ಗೋವುಗಳಿಗೆ ಒಡೆಯನೂ ಆದ ಇಂದ್ರನು ಗೋವುಗಳನ್ನು ತೋರಿಸಿಕೊಟ್ಟನು. ಕರ್ಮವಿಘ್ನಕಾರಿಗಳಾದ ಅಸುರರನ್ನು ಪ್ರಕಾಶಮಾನಗಳಾದ ತೇಜಸ್ಸುಗಳಿಂದ ನಾಶಮಾಡಿದನು. ಪ್ರಿಯತಮಗಳಾದ ಗೋವುಗಳನ್ನು ಆಕರ್ಷಕವಾದ ವಾಕ್ಯಗಳಿಂದ ಅಂಗಿರಸ್ಸುಗಳಿಗೆ ನಿರ್ದೇಶಿಸಿ ತೋರಿಸುತ್ತಾ ಸಮಸ್ತವಾದ ಕೊಟ್ಟಿಗೆಯ ಬಾಗಿಲುಗಳನ್ನೂ ಮತ್ತು ಗೋವುಗಳನ್ನೂ ಮುಚ್ಚಿದನು.

English Translation

Indra, the slayer of Vritra, the lord of herds, has discovered the cattle, and by his radiant effulgence driven away the black (Asuras), and indicating with veracity (to the Angirasas) the honest (cows), he shut the gate upon all their own cattle.

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಂ ॥

ಪದಪಾಠಃ

ಶುನಂ । ಹುವೇಮ । ಮಘऽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃऽತಮಂ । ವಾಜऽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ऽಸು । ಘ್ನಂತಂ । ವೃತ್ರಾಣಿ । ಸಂऽಜಿತಂ । ಧನಾನಾಂ ॥

ಸಾಯಣಭಾಷ್ಯಂ

[೩೦ ನೆಯ ಸೂಕ್ತದ ಕೊನೆಯ ಋಕ್ಕಿನ ಸಾಯಣಭಾಷ್ಯವನ್ನು ನೋಡಿ. ಅದೇ ಋಕ್ಕು ಇಲ್ಲಿಯೂ ಪುನಃ ಪಠಿತವಾಗಿರುವುದು].

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) | **ವಾಜಸಾತೌ**—ಅನ್ನಲಾಭಕ್ಕಾಗಿ ನಡೆಯತಕ್ಕ | **ಅಸ್ಮಿನ್ ಭರೇ**—ಈ ಸಂಗ್ರಾಮದಲ್ಲಿ | **ಶುನಂ**—ಸುಖಕಾರಕನೂ | **ಮಘವಾನಂ**—ಧನವಂತನೂ | **ಇಂದ್ರಂ**—ಐಶ್ವರ್ಯಕ್ಕೆಲ್ಲಾ ಪ್ರಭುವಾದವನೂ | **ನೃತಮಂ**—(ಜಗತ್ತಿಗೆ) ಅತ್ಯುತ್ತಮವಾದ ಮಾರ್ಗದರ್ಶಕನೂ | **ಶೃಣ್ವಂತಂ**—(ನಮ್ಮ ಸ್ತುತಿಯನ್ನು) ಕೇಳತಕ್ಕವನೂ | **ಉಗ್ರಂ**—(ಶತ್ರುಗಳಿಗೆ) ಭಯಂಕರನೂ | **ಸಮತ್ಸು**—ಸಂಗ್ರಾಮಗಳಲ್ಲಿ | **ವೃತ್ರಾಣಿ**—ಶತ್ರುಗಳನ್ನು | **ಘ್ನಂತಂ**—ಹಿಂಸಿಸುವವನೂ | **ಧನಾನಾಂ**—(ಶತ್ರುಗಳ) ಧನವನ್ನು | **ಸಂಜಿತಂ**—ಪೂರ್ಣವಾಗಿ ಜಯಿಸುವವನೂ ಆದ ನಿನ್ನನ್ನು | **ಊತಯೇ**—ರಕ್ಷಣಾರ್ಥವಾಗಿ | **ಹುವೇಮ**—ಕರೆಯುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ಅನ್ನಲಾಭಾರ್ಥವಾಗಿ ನಡೆಯತಕ್ಕ ಈ ಸಂಗ್ರಾಮದಲ್ಲಿ ಶಕ್ತಿಯನ್ನು ತೋರಿಸಿ ಸಹಾಯಕನಾಗಿರತಕ್ಕವನೂ, ಧನವಂತನೂ, ಐಶ್ವರ್ಯಕ್ಕೆಲ್ಲಾ ಪ್ರಭುವಾಗಿರುವವನೂ, ಜಗತ್ತಿಗೆ ಅತ್ಯುತ್ತಮವಾದ ಮಾರ್ಗದರ್ಶಕನೂ, ನಮ್ಮ ಸ್ತುತಿಯನ್ನು ಕೇಳತಕ್ಕವನೂ, ಶತ್ರುಗಳಿಗೆ ಭಯಂಕರನೂ, ಸಂಗ್ರಾಮಗಳಲ್ಲಿ ಶತ್ರುಗಳನ್ನು ಹಿಂಸಿಸುವವನೂ, ಶತ್ರುಗಳ ಧನವನ್ನು ಪೂರ್ಣವಾಗಿ ಜಯಿಸುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ.

English Translation

We invoke for our protection the opulent Indra, distinguished in this cambat, the leader in the food-bestowing (strife), hearing (our praises), terrible in battles, the destroyer of foes, the conqueor of wealth.

# ಮೂವತ್ತೆರಡನೆಯ ಸೂಕ್ತವು

ಸಾಯಣಭಾಷ್ಯಂ

**ಇಂದ್ರ ಸೋಮಂ ಸೋಮಪತೆ ಇತಿ ಸಪ್ತದಶರ್ಚಂ ತೃತೀಯಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ | ಅನುಕ್ರಾಂತಂ ಚ | ಇಂದ್ರ ಸೋಮಂ ತ್ರ್ಯೂನೇತಿ || ಪೃಷ್ಠ್ಯಾಭಿಪ್ಲವಷಡಹಯೋರ್ದ್ವಿತೀಯೇಽಹನಿ ಮರುತ್ವತೀಯ ಇಂದ್ರ ಸೋಮಮಿತೀದಂ ಸೂಕ್ತಂ ನಿವಿದ್ಧಾನೀಯಂ | ದ್ವಿತೀಯಸ್ಯೇತಿ ಖಂಡೇ ಸೂತ್ರಿತಂ | ಇಂದ್ರ ಸೋಮಂ ಯಾ ತ ಊತಿರವಮೇತಿ ಮಧ್ಯಂದಿನಃ | ಆ. ೭-೬ | ಇತಿ || ಗೋಸವವಿವಧಯೋರಪಿ ಮರುತ್ವತೀಯಶಸ್ತ್ರ ಏತತ್ಸೂಕ್ತಂ | ಸೂತ್ರಿತಂ ಚ | ಇಂದ್ರ ಸೋಮಮೇತಾಯಾಮೇತಿ ಮಧ್ಯಂದಿನಃ | ಆ. ೯-೮ | ಇತಿ || ಉದ್ಭಿದ್ವಲಭಿದೋರಪಿ ಮರುತ್ವತೀಯ ಏತತ್ಸೂಕ್ತಂ | ಸೂತ್ರಿತಂ ಚ | ಇಂದ್ರ ಸೋಮಮಿಂದ್ರಃ ಪೂರ್ಭಿದಿತಿ ಮಧ್ಯಂದಿನಃ | ಆ, ೯-೮ | ಇತಿ ||**

**ಅನುವಾದವು—ಇಂದ್ರ ಸೋಮಂ ಸೋಮಪತೇ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿನೇಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ಇಂದ್ರನು

ೀವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಇಂದ್ರ ಸೋಮಂ** ತ್ರ್ಯೂನಾ ಎಂದು ಹೇಳಿರುವುದು. ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಎರಡನೆಯ ದಿವಸ ಮರುತ್ವತೀಯಶಸ್ತ್ರಮಂತ್ರಪಠನಮಾಡುವಾಗ **ಇಂದ್ರ ಸೋಮಂ** ಎಂಬ ಈ ಸೂಕ್ತವನ್ನು ನಿವಿದ್ಧಾನೀಯಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ದ್ವಿತೀಯಸ್ಯ** ಎಂಬ ಖಂಡದಲ್ಲಿ **ಇಂದ್ರ ಸೋಮಂ ಯಾ ತ ಊತಿರವನೋತಿ ಮಧ್ಯಂದಿನಃ** ಎಂಬ ಸೂತ್ರದಿಂದ (ಆ. ೭–೬) ವಿವೃತವಾಗಿರುವುದು. ಮತ್ತು ಗೋಸವ, ವಿವಧ ಎಂಬ ಯಾಗಗಳಲ್ಲಿಯೂ ಸಹ ಮರುತ್ವತೀಯಶಸ್ತ್ರ ಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಇಂದ್ರ ಸೋಮಮೇತಾ-ಯೂಮೇತಿ ಮಧ್ಯಂದಿನಃ** ಎಂಬ ಸೂತ್ರದಿಂದ (ಆ ೯–೮) ವಿವೃತವಾಗಿರುವುದು. ಮತ್ತು ಉದ್ಭಿತ್ ವಲಭಿತ್ ಎಂಬ ಯಾಗಗಳಲ್ಲಿಯೂ ಮರುತ್ವತೀಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಇಂದ್ರ ಸೋಮಮಿಂದ್ರಃ ಪೂರ್ಭಿದಿತಿ ಮಧ್ಯಂದಿನಃ** ಎಂಬ ಸೂತ್ರದಿಂದ (ಆ. ೯–೮) ವಿವೃತ ವಾಗಿರುವುದು.

## ಸೂಕ್ತ—೩೨

ಮಂಡಲ—೩ ॥ ಅನುವಾಕ—೩ ॥ ಸೂಕ್ತ—೩೨ ॥
ಅಷ್ಟಕ—೩ ॥ ಅಧ್ಯಾಯ—೨ ॥ ವರ್ಗ—೯, ೧೦, ೧೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೭

ಋಷಿಃ—ವಿಶ್ವಾಮಿತ್ರಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಇಂದ್ರ ಸೋಮಂ ಸೋಮಪತೇ ಪಿಬೇಮಂ ಮಾಧ್ಯಂದಿನಂ ಸವನಂ ಚಾರು ಯತ್ತೇ।**
**ಪ್ರಪ್ರುಥ್ಯಾ ಶಿಪ್ರೇ ಮಘವನ್ನೃಜೀಷಿನ್ವಿಮುಚ್ಯಾ ಹರೀ ಇಹ ಮಾದಯಸ್ವ ॥ ೧ ॥**

ಪದಪಾಠಃ

**ಇಂದ್ರ । ಸೋಮಂ । ಸೋಮಽಪತೇ । ಪಿಬ । ಇಮಂ । ಮಾಧ್ಯಂದಿನಂ । ಸವನಂ । ಚಾರು। ಯತ್। ತೇ । ಪ್ರಽಪ್ರುಥ್ಯ । ಶಿಪ್ರೇ ಇತಿ । ಮಘಽವನ್ । ಋಜೀಷಿನ್ । ವಿಽಮುಚ್ಯ । ಹರೀ ಇತಿ । ಇಹ । ಮಾದ-ಯಸ್ವ ॥ ೧ ॥**

ಸಾಯಣಭಾಷ್ಯಂ

**ವಿಶ್ವಾಮಿತ್ರೋ ಬ್ರೂತೇ । ಸೋಮಪತೇ ಸೋಮಸ್ಯಾಧಿಪತೇ ಹೇ ಇಂದ್ರ ಇಮಮಸ್ಮಾಭಿರ್ಮಾ-ಧ್ಯಂದಿನೇ ಸವನೇ ಕ್ರಿಯಮಾಣಂ ಸೋಮಂ ಸೋಮರಸಂ ಪಿಬ । ಯದ್ಯಸ್ಮಾತ್ತೇ ತ್ವದರ್ಥಂ ಕ್ರಿಯ-**

ಮಾಣಂ ಮಾಧ್ಯಂದಿನಂ ಮಧ್ಯಂದಿನಸಂಬಂಧಿ ಸವನಂ ನಿಷ್ಕೇವಲ್ಯಾಖ್ಯಂ ಶಸ್ತ್ರಂ ಚಾರು ರಮಣೀಯಂ ವರ್ತತೇ । ಮಘವನ್ ಧನವನ್ ಋಜೀಷಿನ್ । ಋಜೀಷಶಬ್ದೇನ ಗತಸಾರಂ ಸೋಮದ್ರವ್ಯಮುಚ್ಯತೇ । ತಸ್ಮಿನ್ ಹೇ ಇಂದ್ರ ಹರೀ ರಥೇ ಯೋಜಿತಾವಶ್ವೌ ರಥಾದ್ವಿಮುಚ್ಯ ಶಿಪ್ರೇ ಹನೂ ಪ್ರಪೃಥ್ಯಾತ್ರತ್ಯೇನ ಗ್ರಾಸೇನ ಪೂರಯಿತ್ವೇಹ ದೇವಯಜನದೇಶೇ ಮಾದಯಸ್ವ । ತಾವಶ್ವೌ ಹರ್ಷಯ ॥ ಪ್ರಪೃಥ್ಯ । ಪೂರ್ಥ್ಯ ಪರ್ಯೋಷಸ್ತ್ರಾವಿತ್ಯಸ್ಯ ಲ್ಯಪಿ ರೂಪಂ । ಪ್ರಸ್ವಶ್ಛಾಂದಸಃ । ಲಿತ್ಸ್ವರಃ । ಋಜೀಷಿನ್ । ಅರ್ಜ ಷರ್ಜ ಅರ್ಜನ ಇತ್ಯಸ್ಮಾದರ್ಜೇಃ ಋಜಿ ಚ । ಉ. ೪-೨೮ । ಇತೀಷನ್ಪ್ರತ್ಯಯ ಋಜಿ ಇತ್ಯಾದೇಶಶ್ಚ ಧಾತೋಃ । ಅರ್ಜ್ಯತ ಇತ್ಯೃಜೀಷಂ । ತದಸ್ಯಾಸ್ತೀತೀನಿಪ್ರತ್ಯಯಃ । ಆಮಂತ್ರಿತತ್ವಾನ್ನಿಘಾತಃ । ಮಾದಯಸ್ವ । ಮದಿ ಸ್ತುತ್ಯಾದಿಷು । ಹೇತುಮಣ್ಣಿಚ್ । ನಿಘಾತಃ ॥

ಪ್ರತಿಪದಾರ್ಥ

**ಸೋಮಪತೇ**—ಸೋಮಕ್ಕೆ ಅಧಿಪತಿಯಾದ । **ಇಂದ್ರ**—ಇಂದ್ರನೇ । **ಇಮಂ**—(ಮಾಧ್ಯಂದಿನ ಸವನದಲ್ಲಿ ಅರ್ಪಿತವಾದ) । **ಸೋಮಂ**—ಈ ಸೋಮರಸವನ್ನು । **ಪಿಬ**—ಪಾನಮಾಡು । **ಯತ್**—ಏತಕ್ಕೆಂದರೆ । **ತೇ**—ನಿನ್ನನ್ನುದ್ದೇಶಿಸಿ ಅರ್ಪಿಸಿದ । **ಮಾಧ್ಯಂದಿನಂ**—ಮಾಧ್ಯಂದಿನ ಸಂಬಂಧಿಯಾದ । **ಸವನಂ**—ನಿಷ್ಕೇವಲ್ಯಾಖ್ಯವಾದ ಶಸ್ತ್ರಮಂತ್ರವು । **ಚಾರು**—ರಮಣೀಯವಾಗಿದೆ । **ಮಘವನ್**—ಧನವಂತನಾದವನೂ । **ಋಜೀಷಿನ್**—ಗತಸಾರವಾದ ಸೋಮಪಾನಮಾಡತಕ್ಕವನೂ ಆದ ಇಂದ್ರನೇ । **ಹರೀ**—ನಿನ್ನ ಅಶ್ವಗಳನ್ನು । **ವಿಮುಚ್ಯ**—(ರಥದಿಂದ) ಬಿಚ್ಚಿ । **ಶಿಪ್ರೇ**—ಅವುಗಳ ದವಡೆಯನ್ನು । **ಪ್ರಪೃಥ್ಯ**—(ಈ ಗ್ರಾಸಗಳಿಂದ) ತುಂಬಿ । **ಇಹ**—ಈ ಯಾಗಪ್ರದೇಶದಲ್ಲಿ । **ಮಾದಯಸ್ವ**—ಹರ್ಷಗೊಳಿಸು.

ಭಾವಾರ್ಥ

ಸೋಮಕ್ಕೆ ಅಧಿಪತಿಯಾದ ಎಲೈ ಇಂದ್ರನೇ, ಮಾಧ್ಯಂದಿನಸವನದಕಾಲದಲ್ಲಿ ಅರ್ಪಿತವಾದ ಈ ಸೋಮರಸವನ್ನು ಪಾನಮಾಡು. ಏತಕ್ಕೆಂದರೆ, ನಿನ್ನನ್ನುದ್ದೇಶಿಸಿ ಅರ್ಪಿಸಿದ ಮಾಧ್ಯಂದಿನದ ನಿಷ್ಕೇವಲ್ಯಾಖ್ಯವಾದ ಶಸ್ತ್ರಮಂತ್ರವು ರಮಣೀಯವಾಗಿದೆ. ಧನವಂತನಾದವನೂ, ಗತಸಾರವಾದ ಸೋಮದ್ರವ್ಯವುಳ್ಳವನೂ ಆದ ಇಂದ್ರನೇ ನಿನ್ನ ಅಶ್ವಗಳನ್ನು ರಥದಿಂದ ಬಿಚ್ಚಿ ಅವುಗಳ ದವಡೆಯನ್ನು ಈ ಗ್ರಾಸಗಳಿಂದ ತುಂಬಿ ಈ ಯಾಗಪ್ರದೇಶದಲ್ಲಿ ಹರ್ಷಗೊಳಿಸು.

## English Translation

Indra, lord of the Soma, drink this Soma juice which is grateful to you at noon-day sacrifice; Maghavan, partaker of the spiritless Soma, unyoke your horses, and, fillIng their jaws (with fodder) exhilarate them at this ceremony.

ಸಂಹಿತಾಪಾಠಃ

ಗವಾಶಿರಂ ಮಂಥಿನಮಿಂದ್ರ ಶುಕ್ರಂ ಪಿಬಾ ಸೋಮಂ ರರಿಮಾತೇ ಮದಾಯ ।
ಬ್ರಹ್ಮಕೃತಾ ಮಾರುತೇನಾ ಗಣೇನ ಸಜೋಷಾ ರುದ್ರೈಸ್ತೃಪದಾ ವೃಷಸ್ವ ॥ ೨ ॥

ಪದಪಾಠಃ

ಗೋಽಆಶಿರಂ | ಮಂಥಿನಂ | ಇಂದ್ರ | ಶುಕ್ರಂ | ಪಿಬ | ಸೋಮಂ | ರರಿಮ | ತೇ | ಮದಾಯ |
ಬ್ರಹ್ಮಽಕೃತಾ | ಮಾರುತೇನ | ಗಣೇನ | ಸಽಜೋಷಾಃ | ರುದ್ರೈಃ | ತೃಪತ್ | ಆ | ವೃಷಸ್ವ ||೨||

ಸಾಯಣಭಾಷ್ಯಂ

ಹೇ ಇಂದ್ರ ಗವಾಶಿರಂ ಗವ್ಯಸ್ಯ ಪಯಸ ಆಶೀರ್ಮಿಶ್ರಣಂ ಯಸ್ಮಿನ್ ತಂ ಸೋಮಂ | ಅಪಿ ಚ ಮಂಥಿನಂ ಮಂಥಸಂಯುಕ್ತಂ ಶುಕ್ರಮಭಿನವಂ ಯದ್ವಾ ಶುಕ್ರಾಮಂಥಿಗ್ರಹೇ ವರ್ತಮಾನಂ | ಏವಂ ತ್ರಿಷು ಸವನೇಷು ವರ್ತಮಾನಮಿಮಂ ಸೋಮಂ ಪಿಬ | ತೇ ತವ ಮದಾಯ ಹರ್ಷಾಯ ರರಿಮ | ತಂ ಸೋಮಂ ವಯಂ ಪ್ರಯಚ್ಛಾಮಃ | ಮಾರುತೇನ | ಮರುತಾಂ ಗಣೋ ಮಾರುತಃ | ಸ ಚ ಬ್ರಹ್ಮಕೃತ್ | ಬ್ರಹ್ಮ ಸ್ತೋತ್ರಂ ಕರೋತೀತಿ ಬ್ರಹ್ಮಕೃತ್| ಇಂದ್ರಸ್ತೋತ್ರಂ ಕುರ್ವಾಣೇನ ಮಾರುತೇನ ಗಣೇನ ರುದ್ರೈರೇಕಾದಶಸಂಖ್ಯಾಕೈ ರುದ್ರೈಶ್ಚ ಸಜೋಷಾಃ ಸಂಗತಸ್ತ್ವಂ ತೃಪತ್ ಸೋಮಪಾನೇನ ತೃಪ್ಯನ್ ಆ ವೃಷಸ್ವ | ತಮಿಮಂ ಸರ್ವತೋ ಜಠರೇ ಸಿಂಚ | ಧಾರಯ || ಗವಾಶಿರಂ | ಶ್ರೀಣಾತೇರಾಜ್‌ಪೂರ್ವಾತ್ಕ್ವಿಪ್ಯಪಸ್ಪೃಧೇಥಾಮಾನೃಚುರಿತ್ಯಾದಿನಾ ನಿಪಾತನಾದಾಶಿರಾದೇಶಃ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ | ಪಿಬಾ | ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ | ರರಿಮ | ರಾತೇಶ್ಛಾಂದಸೇ ವರ್ತಮಾನೇ ಲಿಟಿ ರೂಪಂ | ಅಸಮಾನವಾಕ್ಯತ್ವಾನ್ನಿಘಾತಾಭಾವಃ | ಆಗಮಾ ಅನುದಾತ್ತಾ ಇತೀಟೋಽನುದಾತ್ತತ್ವಾತ್ಪ್ರತ್ಯಯಸ್ವರಃ | ತೃಪತ್ | ತೃಪ ಪ್ರೀಣನೇ | ತುದಾದಿಃ | ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ | ವೃಷಸ್ವ | ವೃಷು ಸೇಚನೇ | ವ್ಯತ್ಯಯೇನ ಶಃ ||

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ | **ಗವಾಶಿರಂ**—ಕ್ಷೀರದಿಂದ ಮಿಶ್ರಿತವಾದ | **ಸೋಮಂ**—ಸೋಮವನ್ನೂ | **ಮಂಥಿನಂ**—ದಧ್ಯಾಶಿರವಾದ ಸೋಮವನ್ನೂ | **ಶುಕ್ರಂ**—ಶುದ್ಧವಾದ ಸೋಮವನ್ನೂ | **ಪಿಬ**—ಪಾನಮಾಡು | **ತೇ**—ನಿನ್ನ | **ಮದಾಯ**—ಹರ್ಷಕ್ಕಾಗಿ | **ರರಿಮ**—(ಸೋಮವನ್ನು) ಅರ್ಪಿಸುತ್ತೇವೆ | **ಮಾರುತೇನ**—ಮರುದ್ಗಣದಿಂದಲೂ | **ಗಣೇನ**—ಸಮೂಹಾತ್ಮಕವಾದ | **ರುದ್ರೈಃ**—ಏಕಾದಶರುದ್ರರೊಡನೆಯೂ | **ಸಜೋಷಾಃ**—ಕೂಡಿದವನಾಗಿ | **ತೃಪತ್**—ತೃಪ್ತಿಯನ್ನು ಪಡೆಯುತ್ತಾ | **ಆ ವೃಷಸ್ವ**—ರಸವನ್ನು ಜಠರದಲ್ಲಿ ತುಂಬಿಸು.

ಭಾವಾರ್ಥ

ಎಲೈ ಇಂದ್ರನೇ ಸವನತ್ರಯದಲ್ಲೂ ಅರ್ಪಿತವಾಗತಕ್ಕ ಗವಾಶಿರಾದಿ ಸೋಮರಸಗಳನ್ನು ಪಾನಮಾಡು. ನಿನ್ನ ತೃಪ್ತಿಗಾಗಿ ನಾವು ಅದನ್ನು ಅರ್ಪಿಸುತ್ತಿದ್ದೇವೆ. ಮರುತ್ತುಗಳೊಡನೆಯೂ ಸಮೂಹಾತ್ಮಕವಾದ ಏಕಾದಶರುದ್ರರೊಡನೆಯೂ ಕೂಡಿದವನಾಗಿ ಸೋಮರಸಪಾನದಿಂದ ಲಭಿಸುವ ತೃಪ್ತಿಯನ್ನು ಹೊಂದು.

## English Translation.

Indra, drink the Soma juice mixed with milk, with butter-milk, or fresh: we offer it for your exhilaration, associated with the devout company of the Maruts and the Rudras: drink it till you are satisfied.

ಸಂಹಿತಾಪಾಠಃ

ಯೇ ತೇ ಶುಷ್ಮಂ ಯೇ ತವಿಷೀಮವರ್ಧನ್ನರ್ಚಂತ ಇಂದ್ರ ಮರುತಸ್ತ ಓಜಃ ।
ಮಾಧ್ಯಂದಿನೇ ಸವನೇ ವಜ್ರಹಸ್ತ ಪಿಬಾ ರುದ್ರೇಭಿಃ ಸಗಣಃ ಸುಶಿಪ್ರ ॥ ೩ ॥

ಪದಪಾಠಃ

ಯೇ । ತೇ । ಶುಷ್ಮಂ । ಯೇ । ತವಿಷೀಂ । ಅವರ್ಧನ್ । ಅರ್ಚಂತಃ । ಇಂದ್ರ । ಮರುತಃ । ತೇ । ಓಜಃ ।
ಮಾಧ್ಯಂದಿನೇ । ಸವನೇ । ವಜ್ರಽಹಸ್ತ । ಪಿಬ । ರುದ್ರೇಭಿಃ । ಸಽಗಣಃ । ಸುಽಶಿಪ್ರ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ಯೇ ಮರುತಸ್ತೇ ತವ ಶುಷ್ಮಂ ಶತ್ರೂಣಾಂ ಶೋಷಕಂ ತೇಜೋ ಯೇ ಚ ಮರುತಸ್ತವಿಷೀಂ ಬಲಂ ಚಾವರ್ಧಯನ್ ಯುದ್ಧಸಹಕಾರಿತಯಾವರ್ಧಯನ್ ತೇ ಮರುತೋಽರ್ಚಂತಸ್ತ್ವಾಂ ಸ್ತುವಂತಃ ಸಂತಸ್ತೇ ತವೌಜೋ ಯುದ್ಧಸಾಮರ್ಥ್ಯಮವರ್ಧಯನ್ । ವಜ್ರಹಸ್ತ ವಜ್ರಯುಕ್ತೌ ಹಸ್ತೌ ಯಸ್ಯೇತಿ ತಾದೃಶ ಸುಸಿಪ್ರ ಶೋಭನಹನೋ । ಶಿಪ್ರೇ ಹನೂ ನಾಸಿಕೇ ವೇತಿ ಯಾಸ್ಕಃ । ಹೇ ಇಂದ್ರ ರುದ್ರೇಭಿಃ । ರೋದಯಂತಿ ಶತ್ರೂನಿತಿ ರುದ್ರಾ ಮರುತಃ । ತೈಃ ಸಗಣಸ್ತ್ವಂ ಮಾಧ್ಯಂದಿನೇ ಸವನೇ ಸೋಮಂ ಪಿಬ ॥ ಅವರ್ಧನ್ । ವೃಧು ವರ್ಧನೇ । ಅಂತರ್ಭಾವಿತಣ್ಯರ್ಥಃ । ಯದ್ವೃತ್ತಯೋಗಾದನಿಘಾತಃ । ಮಾಧ್ಯಂದಿನೇ । ಉತ್ಸಾದಿತ್ವಾದಞ್ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ಯೇ ಮರುತಃ**—ಯಾವ ಮರುತ್ತುಗಳು । **ತೇ**—ನಿನ್ನ । **ಶುಷ್ಮಂ**—(ಶತ್ರುನಾಶಕವಾದ) ತೇಜೋರೂಪರಾಗಿದ್ದಾರೆಯೋ । **ಯೇ**—ಯಾವ ಮರುತ್ತಗಳು । **ತವಿಷೀಂ**—(ನಿನ್ನ) ಶಕ್ತಿಯನ್ನು । **ಅವರ್ಧನ್**—ವೃದ್ಧಿಯಾಗುವಂತೆ ಮಾಡಿದರೋ (ಅದೇ ಮರುತ್ತುಗಳು) । **ತೇ**—ನಿನ್ನ । **ಓಜಃ**—ಯುದ್ಧಸಾಮರ್ಥ್ಯವನ್ನು (ವೃದ್ಧಿಪಡಿಸಿದರು) । **ವಜ್ರಹಸ್ತ**—ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ । **ಸುಶಿಪ್ರ**—ಶ್ರೇಷ್ಠವಾದ ಕೆನ್ನೆಯುಳ್ಳವನೂ ಆದ ಎಲೈ ಇಂದ್ರನೇ । **ರುದ್ರೇಭಿಃ**—ಮರುತ್ತುಗಳೊಡನೆ । **ಸಗಣಃ**—ಕೂಡಿದ ನೀನು । **ಮಾಧ್ಯಂದಿನೇ ಸವನೇ**—ಮಾಧ್ಯಂದಿನಸವನದಲ್ಲಿ (ಅರ್ಪಿತವಾದ ಸೋಮವನ್ನು) । **ಪಿಬ**—ಪಾನಮಾಡು.

ಭಾವಾರ್ಥ

ಎಲೈ ಇಂದ್ರನೇ, ಯಾವ ಮರುತ್ತುಗಳು ನಿನ್ನ ಶತ್ರುನಾಶಕವಾದ ತೇಜೋರೂಪರಾಗಿದ್ದಾರೆಯೋ, ಯಾರು ನಿನ್ನ ಶಕ್ತಿಯನ್ನು ವೃದ್ಧಿಯಾಗುವಂತೆ ಮಾಡಿದರೋ, ಅದೇ ಮರುತ್ತುಗಳು ನಿನ್ನ ಯುದ್ಧಸಾಮರ್ಥ್ಯವನ್ನು ವೃದ್ಧಿಪಡಿಸಿದರು: ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ, ಶ್ರೇಷ್ಠವಾದ ಕೆನ್ನೆಯುಳ್ಳವನೂ ಆದ ಎಲೈ ಇಂದ್ರನೇ, ಮರುತ್ತುಗಳೊಡನೆ ಕೂಡಿದ ನೀನು ಮಾಧ್ಯಂದಿನಸವನದಲ್ಲಿ ಅರ್ಪಿತವಾದ ಸೋಮರಸವನ್ನು ಪಾನಮಾಡು.

## English Translation

These are the Maruts, Indra, who worshipping your prowess, augment your withering force (by their aid): attended by the Rudras, drink, wielder of the thunderbolt, and handsome-chinned, at the noon-day sacrifice.

ಸಂಹಿತಾಪಾಠಃ

ತ ಇನ್ನ್ವಸ್ಯ ಮಧುಮದ್ವಿವಿಪ್ರ ಇಂದ್ರಸ್ಯ ಶರ್ಧೋ ಮರುತೋ ಯ ಆಸನ್ ।
ಯೇಭಿರ್ವೃತ್ರಸ್ಯೇಷಿತೋ ವಿವೇದಾಮರ್ಮಣೋ ಮನ್ಯಮಾನಸ್ಯ ಮರ್ಮ ॥ ೪ ॥

ಪದಪಾಠಃ

ತೇ । ಇತ್ । ನು । ಅಸ್ಯ । ಮಧುಽಮತ್ । ವಿವಿಪ್ರೇ । ಇಂದ್ರಸ್ಯ । ಶರ್ಧಃ । ಮರುತಃ । ಯೇ । ಆಸನ್ ।
ಯೇಭಿಃ । ವೃತ್ರಸ್ಯ । ಇಷಿತಃ । ವಿವೇದ । ಅಮರ್ಮಣಃ । ಮನ್ಯಮಾನಸ್ಯ । ಮರ್ಮ ॥ ೪ ॥

ಸಾಯಣಭಾಷ್ಯಂ

ಯೇ ಮರುತ ಇಂದ್ರಸ್ಯ ಶರ್ಧೋ ಬಲಭೂತಾ ಆಸನ್ ತ ಇತ್ ತ ಏವ ಮರುತೋಽಸ್ಯ । ದ್ವಿತೀಯಾರ್ಥೇ ಷಷ್ಠೀ । ಇಮಮಿಂದ್ರಂ ಮಧುಮತ್ । ತವ ಸಹಾಯಾ ವಯಮಾಸ್ಮಹೇ ತ್ವಂ ಯುದ್ಧಮಭಿಗಚ್ಛೇತಿ ಮಾಧುರ್ಯೋಪೇತಂ ವಾಕ್ಯಂ ಯಥಾ ಭವತಿ ತಥಾ ವಿವಿಪ್ರೇ ನು । ಕ್ಷಿಪ್ರಂ ಪ್ರೈರಯನ್ । ಯೇಭಿರ್ಯೈರ್ಯುದ್ಧಸಹಾಯೈರ್ಮರುದ್ಭಿರಿಷಿತಃ ಪ್ರೇರಿತ ಇಂದ್ರೋಽಮರ್ಮಣಃ ಪರೈರವಿದಿತಮರ್ಮಸ್ಥಾನಸ್ಯಾತ ಏವ ಮನ್ಯಮಾನಸ್ಯ ನ ಕೋಽಪಿ ಮಮ ಹಂತೇತ್ಯಭಿಮನ್ಯಮಾನಸ್ಯ ವೃತ್ರಸ್ಯಾಸುರಸ್ಯ ಮರ್ಮ ಯಸ್ಮಿನ್ ಸ್ಥಾನೇ ಪ್ರಹೃತೌ ಸತ್ಯಾಂ ಸ ಮರಿಷ್ಯತಿ ತಾದೃಶಂ ಸ್ಥಾನಂ ವಿವೇದ। ಅಜ್ಞಾಸೀತ್ ॥ ವಿವಿಪ್ರೇ। ವಿಪ ಕ್ಷೇಪಣ ಇತ್ಯಸ್ಯ ಲಿಟಿ ವ್ಯತ್ಯಯೇನಾತ್ಮನೇಪದಂ । ಇರೇಚಿ ಇರಯೋ ರ ಇತಿ ರೇ ಇತ್ಯಾದೇಶಃ । ನಿಘಾತಃ । ಆಸನ್ । ಅಸ ಭುವೀತ್ಯಸ್ಯ ಲಙಿ ರೂಪಂ । ಯದ್ವೃತ್ತಯೋಗಾನ್ನಿಘಾತಾಭಾವಃ । ವಿವೇದ । ವಿದ ಜ್ಞಾನ ಇತ್ಯಸ್ಯ ಲಿಟಿ ರೂಪಂ । ಲಿತ್ಸ್ವರಃ । ಮರ್ಮ । ಮೃಙ್ ಪ್ರಾಣತ್ಯಾಗ ಇತ್ಯಸ್ಮಾದೌಣಾದಿಕೋ ಮನಿನ್ । ನಿತ್ಸ್ವರಃ ॥

ಪ್ರತಿಪದಾರ್ಥ

**ಯೇ ಮರುತಃ**—ಯಾವ ಮರುತ್ತುಗಳು । **ಇಂದ್ರಸ್ಯ**—ಇಂದ್ರನ । **ಶರ್ಧಃ**—ಶಕ್ತಿರೂಪಗಳಾಗಿ । **ಆಸನ್**—ಇರುವುವೋ । **ತೇ ಇತ್**—ಅದೇ ಮರುತ್ತುಗಳು । **ಅಸ್ಯ**—ಈ ಇಂದ್ರನನ್ನು । **ಮಧುಮತ್**—ಆಕರ್ಷಕವಾದ ವಾಕ್ಯಗಳಿಂದ । **ವಿವಿಪ್ರೇ ನು**—ಹುರಿದುಂಬಿಸುತ್ತವೆ। **ಯೇಭಿಃ**—ಯಾವ ಅದೇ ಮರುತ್ತುಗಳಿಂದ। **ಇಷಿತಃ**—ಉತ್ತೇಜಿತನಾದ ಇಂದ್ರನು । **ಅಮರ್ಮಣಃ**—ತನ್ನ ರಹಸ್ಯವನ್ನು ಇತರರಾರಿಗೂ ತಿಳಿಸದಿರುವವನೂ । **ಮನ್ಯ-**

**ಮಾನಸ್ಯ**—(ತನ್ನನ್ನು ಯಾರೂ ಹಿಂಸಿಸಲು ಸಾಧ್ಯವಿಲ್ಲ) ಎಂಬ ಅಭಿಮಾನದಿಂದ ಕೂಡಿರುವವನೂ ಆದ| **ವೃತ್ರಸ್ಯ**—ವೃತ್ರಾಸುರನ | **ಮರ್ಮ**—ಮರ್ಮಸ್ಥಾನವನ್ನು | **ವಿವೇದ**—ತಿಳಿದುಕೊಂಡನು.

ಭಾವಾರ್ಥ

ಯಾವ ಮರುತ್ತುಗಳು ಇಂದ್ರನ ಶಕ್ತಿರೂಪಗಳಾಗಿರುವುವೋ ಅದೇ ಮರುತ್ತುಗಳು ಇಂದ್ರನನ್ನು ಆಕರ್ಷಕವಾದ ವಾಕ್ಯಗಳಿಂದ ಹುರಿದುಂಬಿಸುತ್ತವೆ. ಅದೇ ಮರುತ್ತುಗಳಿಂದ ಉತ್ತೇಜಿತನಾದ ಇಂದ್ರನು ತನ್ನ ರಹಸ್ಯವನ್ನು ಇತರರಿಗಾರಿಗೂ ತಿಳಿಸದೆಯೂ ಮತ್ತು ತನ್ನನ್ನು ಯಾರೂ ಹಿಂಸಿಸಲು ಸಾಧ್ಯವಿಲ್ಲವೆಂಬ ಅಭಿಮಾನದಿಂದ ಕೂಡಿಯೂ ಇರುವ ವೃತ್ರಾಸುರನ ಮರ್ಮಸ್ಥಾನವನ್ನು ತಿಳಿದುಕೊಂಡನು.

English Translation

Those were the Maruts who were the strength of Indra, and gently encouraged him : animated by whom he pierced the vital part of Vritra, fancying himself invulnerable.

ಸಂಹಿತಾಪಾಠಃ

ಮನುಷ್ವದಿಂದ್ರ ಸವನಂ ಜುಷಾಣಃ ಪಿಬಾ ಸೋಮಂ ಶಶ್ವತೇ ವೀರ್ಯಾಯ ।
ಸ ಆ ವವೃತ್ಸ್ವ ಹರ್ಯಶ್ವ ಯಜ್ಞೈಃ ಸರಣ್ಯುಭಿರಪೋ ಅರ್ಣಾ ಸಿಸರ್ಷಿ ॥ ೫ ॥

ಪದಪಾಠಃ

ಮನುಷ್ವತ್ । ಇಂದ್ರ । ಸವನಂ । ಜುಷಾಣಃ । ಪಿಬ । ಸೋಮಂ । ಶಶ್ವತೇ । ವೀರ್ಯಾಯ ।
ಸಃ । ಆ । ವವೃತ್ಸ್ವ । ಹರಿऽಅಶ್ವ । ಯಜ್ಞೈಃ । ಸರಣ್ಯುऽಭಿಃ । ಅಪಃ । ಅರ್ಣಾ । ಸಿಸರ್ಷಿ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ಮನುಷ್ವತ್ ಮನೋರ್ಯಜ್ಞಮಿವ ಮಮೇದಂ ಸವನಂ ಯಜ್ಞಂ ಜುಷಾಣಃ ಸೇವಮಾನಸ್ತ್ವಂ ಶಶ್ವತೇ ಶಾಶ್ವತಾಯ ವೀರ್ಯಾಯ ಪರಪರಿಭವಲಕ್ಷಣಾಯ ಸಾಮರ್ಥ್ಯಾಯೇಮಂ ಸೋಮಂ ಪಿಬ। ಹೇ ಹರ್ಯಶ್ವ ಸ ತಾದೃಶಸ್ತ್ವಂ ಯಜ್ಞೈರ್ಯಜನೀಯೈರ್ಮರುದ್ಭಿಃ ಸಾಕಮಾವವೃತ್ಸ್ವ। ಆಗಚ್ಛ। ಕಿಂಚ ಸರಣ್ಯುಭಿರೇಕಶ್ರುತಿಮನ್ಮಂತ್ರಾನಾತ್ಮನ ಇಚ್ಛದ್ಭಿಃ ಯದ್ವಾ ಸರಣ್ಯುಭಿಃ ಸರಣಶೀಲೈರ್ಮರುದ್ಭಿಃ ಸಹಿತಸ್ತ್ವಮಪೋಽಂತರಿಕ್ಷಸ್ಥಿತಾನ್ಯುದಕಾನಿ ಅರ್ಣಾ ಪಾರ್ಥಿವಾನ್ಯುದಕಾನಿ ಸಿಸರ್ಷಿ । ಪ್ರಾಪಯ। ಯದ್ವಾ ಅಪಃ । ಪಂಚಮ್ಯಂತಮೇತತ್ಪದಂ। ಅಪೋ ವ್ಯಾಪ್ತಾದಂತರಿಕ್ಷಾತ್ಸಕಾಶಾದರ್ಣಾಂಸಿ ಪ್ರಾಪಯ ॥ ವವೃತ್ಸ್ವ । ವೃತು ವರ್ತನೇ । ವ್ಯತ್ಯಯೇನ ಶ್ಲಪಃ ಶ್ಲುಃ । ಲೋಟಿ ರೂಪಂ । ಸರಣ್ಯುಭಿಃ । ರಣ ಶಬ್ದಾರ್ಥಃ । ಕ್ವಿಪ್ । ಸಮಾನೋ ರಣೋ ಧ್ವನಿರ್ಯೇಷಾಂ ತೇ ಸರಣಾ ಮಂತ್ರಾಃ । ತಾನಿಚ್ಛಂತಃ । ಸುಪಃ

ಕ್ಯಚ್‌ | ಕ್ಯಾದಿತ್ಯುಪ್ರತ್ಯಯಃ | ಯದ್ವಾ ಸೃ ಗತೌ | ಸೃಯುವಚಿಭ್ಯೋಽನ್ಯುಜಾಗೂಜಕ್ನುಚಃ | ಉ. ೩-೮೧ | ಇತ್ಯನ್ಯುಚ್‌ಪ್ರತ್ಯಯಃ | ರಷಾಭ್ಯಾಂ | ಪಾ. ೮-೪-೧ | ಇತಿ ಣತ್ವಂ | ಚಿತ್ತ್ವಾದಂತೋದಾತ್ತಃ | ಅಪಃ | ಆಪ್ಲೃ ವ್ಯಾಪ್ತೌ | ಆಪ್ನೋತೇಃ ಕ್ವಿಪ್ ಹ್ರಸ್ವಶ್ಚೇತಿ ಕ್ವಿಪ್ ಧಾತೋರ್ಹ್ರಸ್ವಶ್ಚ | ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ | ಸಿಸರ್ಷಿ | ಸೃ ಗತೌ | ಛಾಂದಸೋ ಜುಹೋತ್ಯಾದಿಃ | ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ || ||೮||

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ। ಮನುಷ್ವತ್—ಮನುವಿನ ಯಜ್ಞವನ್ನು ಸೇವಿಸಿದಂತೆ | ಸವನಂ—ಈ ಯಜ್ಞವನ್ನೂ | ಜುಷಾಣಃ—ಸೇವಿಸುತ್ತಾ | ಶಶ್ವತೇ—ನಾಶರಹಿತವಾದ। ವೀರ್ಯಾಯ—ಪರಾಕ್ರಮವನ್ನು ಪಡೆಯುವುದಕ್ಕಾಗಿ | ಸೋಮಂ—ಈ ಸೋಮರಸವನ್ನು | ಪಿಬ—ಪಾನಮಾಡು | ಹರ್ಯಶ್ವ—ಹರಿತವರ್ಣವುಳ್ಳ ಅಶ್ವಗಳಿಂದ ಕೂಡಿದ | ಸಃ—ಅದೇ ನೀನು | ಯಜ್ಞೈಃ—ಪೂಜ್ಯರಾದ ಮರುತ್ತುಗಳೊಡನೆ | ಆ ವವೃತ್ಸ್ವ—ದಯಮಾಡು | ಸರಣ್ಯುಭಿಃ—ಸಂಚರಿಸತಕ್ಕ ಮರುತ್ತುಗಳೊಡಗೂಡಿದ ನೀನು | ಅಪಃ—ಅಂತರಿಕ್ಷಸ್ಥವಾದ ಉದಕಗಳನ್ನು | ಅರ್ಣಾ—ಪಾರ್ಥಿವವಾದ ಉದಕಗಳೊಡನೆ | ಸಿಸರ್ಷಿ—ಸೇರಿಸಿ (ಒಂದಿಗೆ ಪ್ರವಹಿಸುವಂತೆ ಮಾಡು).

ಭಾವಾರ್ಥ

ಎಲೈ ಇಂದ್ರನೇ, ಹಿಂದೆ ಮನುವಿನ ಯಜ್ಞವನ್ನು ಸೇವಿಸಿದಂತೆ ಈ ಯಜ್ಞವನ್ನೂ ಸೇವಿಸುತ್ತಾ, ನಾಶರಹಿತವಾದ ಪರಾಕ್ರಮವನ್ನು ಪಡೆಯುವುದಕ್ಕಾಗಿ ಈ ಸೋಮರಸವನ್ನು ಪಾನಮಾಡು. ಹರಿತವರ್ಣವುಳ್ಳ ಅಶ್ವಗಳಿಂದ ಕೂಡಿದ ಅದೇ ನೀನು ಪೂಜ್ಯವಾದ ಮರುತ್ತುಗಳೊಡನೆ ದಯಮಾಡು. ಸಂಚರಿಸತಕ್ಕ ಮರುತ್ತುಗಳೊಡಗೂಡಿದ ನೀನು ಅಂತರಿಕ್ಷಸ್ಥವಾದ ಉದಕಗಳನ್ನು ಪಾರ್ಥಿವವಾದ ಉದಕಗಳೊಡನೆ ಸೇರಿಸಿ ಒಂದಿಗೆ ಪ್ರವಹಿಸುವಂತೆ ಮಾಡು.

English Translation.

Phased with the sacrifice, as if it was that of Manu, drink, Indra, the Soma juice, for the sake of perpetual vigour: come, lord of the tawny steeds, with the adorable Maruts, and with the traversers (of the air): send down the waters (of the firmament) to (blend with) the waters of the earth.

ಸಂಹಿತಾಪಾಠಃ

ತ್ವಮಪೋ ಯದ್ಧ ವೃತ್ರಂ ಜಘನ್ವಾँ ಅತ್ಯಾँಇವ ಪ್ರಾಸೃಜಃ ಸರ್ತವಾಜೌ ।
ಶಯಾನಮಿಂದ್ರ ಚರತಾ ವಧೇನ ವವ್ರಿವಾಂಸಂ ಪರಿ ದೇವೀರದೇವಂ ॥ ೬ ॥

ಪದಪಾಠಃ

ತ್ವಂ । ಅಪಃ । ಯತ್ । ಹ । ವೃತ್ರಂ । ಜಘನ್ವಾನ್ । ಅತ್ಯಾನ್ऽಇವ । ಪ್ರ । ಅಸೃಜಃ । ಸರ್ತವೈ । ಆಜೌ ।
ಶಯಾನಂ । ಇಂದ್ರ । ಚರತಾ । ವಧೇನ । ವವ್ರಿವಾಂಸಂ । ಪರಿ । ದೇವೀಃ । ಅದೇವಂ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ದೇವೀರ್ದೇವನಶೀಲಾ ಅಪಃ ಪರಿ ವವ್ರಿವಾಂಸಂ ಪರಿತ ಆವೃತ್ಯ ವರ್ತಮಾನಂ ಅತ ಏವಾದೇವಂ ಬಹೂದಕತಯಾಸ್ವಚ್ಛತ್ವೇನಾಪ್ರತಿಭಾಸಮಾನಂ ಶಯಾನಮೇಕತ್ರ ನಿಶ್ಚಲತಯಾ ವರ್ತಮಾನಂ ವೃತ್ರಂ ಮೇಘಂ ಯದ್ಯದಾ ಚರತಾ ತಮುದ್ದಿಶ್ಯ ವರ್ತಮಾನೇನ ವಧೇನ ಯುದ್ಧೇನ ಜಘನ್ವಾನ್ ಹತವಾನಸಿ ತದಾ ತ್ವಮಾಜೌ ಯುದ್ಧೇ ಸರ್ತವೈ ಅತಿವೇಗಗಮನಾಯಾತ್ಯಾನಿವ ಯಥಾಶ್ವಾನ್ ಪ್ರೇರಯಸಿ ತಥಾ ತ್ವಮುಪ ಉದಕಾನ್ಯಂತರಿಕ್ಷಾದಾಕಾಶಾತ್ ಪ್ರಾಸೃಜೋ ಹ । ಪ್ರಕರ್ಷೇಣ ಮೇಘಭೇದನಂ ಕೃತ್ವಾಸೃಜಃ ಖಲು । ತಂ ಯಜಾಮ ಇತ್ಯುತ್ತರೇಣಾನ್ವಯಃ ॥ ಜಘನ್ವಾನ್ । ಹನ ಹಿಂಸಾಗತ್ಯೋರಿತ್ಯಸ್ಯ ಕ್ವಸೌ ವಿಭಾಷಾ ಗಮಹನವಿದವಿಶಾಮಿತೀಟೋ ವಿಕಲ್ಪಿತತ್ವಾದತ್ರೇಡಭಾವಃ । ಅಭ್ಯಾಸಾಚ್ಚೇತಿ ಹಕಾರಸ್ಯ ಘುತ್ವಂ। ಪ್ರತ್ಯಯಸ್ವರಃ । ಅಸೃಜಃ । ಸೃಜ ವಿಸರ್ಗೇ । ಶವಿಕರಣೇ । ಯದ್ಯೋಗಾದನಿಘಾತಃ । ಸರ್ತವೈ । ಸೃ ಗತೌ । ತುಮರ್ಥೇ ತವೈಪ್ರತ್ಯಯಃ । ಅಂತಶ್ಚ ತವೈ ಯುಗಪದಿತಿ ಧಾತೋಃ ಪ್ರತ್ಯಯಸ್ಯ ಚೋದಾತ್ತತ್ವಂ । ಆಜೌ । ಅಜ ಗತಿಕ್ಷೇಪಣಯೋಃ । ಅಜ್ಯತಿಭ್ಯಾಂ ಚ । ಉ. ೪-೧೩೦ । ಇತಿ ಇಣ್ಪ್ರತ್ಯಯಃ । ಣಿತ್ವಾದುಪಧಾವೃದ್ಧಿಃ । ಅಜಂತಿ ಗಚ್ಛಂತ್ಯಸ್ಮಿನ್ನಿತ್ಯಾಜಿರ್ಯುದ್ಧಂ । ಪ್ರತ್ಯಯಸ್ವರಃ । ಸರ್ತವಾಜಾವಿತ್ಯತ್ರ ಸಂಹಿತಾಯಾಮಾಯಾದೇಶೇ ಕೃತೇ ತಸ್ಯ ಲೋಪಃ ಶಾಕಲ್ಯಸ್ಯೇತಿ ಯಕಾರಲೋಪಃ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾತ್ಸವರ್ಣದೀರ್ಘತ್ವೇ ಕರ್ತವ್ಯೇ ಯಲೋಪೋ ನಾಸಿದ್ಧೋ ಭವತಿ । ಸವರ್ಣದೀರ್ಘಃ । ಶಯಾನಂ । ಶೀಙ್ ಸ್ವಪ್ನೇ । ಶಾನಚ್ । ಅದಾದಿತ್ವಾಚ್ಛಪೋ ಲುಕ್ । ಙಿತ್ವಾಲ್ಲಸಾರ್ವಧಾತುಕಸ್ವರೇಣ ಶಾನಚೋಽನುದಾತ್ತತ್ವೇ ಧಾತುಸ್ವರಃ । ವಧೇನ । ಹಂತೇರ್ಭಾವೇ ಹನಶ್ಚ ವಧ ಇತ್ಯಪ್ಪ್ರತ್ಯಯೋ ವಧಾದೇಶಶ್ಚ ಧಾತೋರಂತೋದಾತ್ತತ್ವಂ ಚ । ವವ್ರಿವಾಂಸಂ । ವೃಞ್ ವರಣ ಇತ್ಯಸ್ಯ ಕ್ವಸಾವಿಡಾಗಮಶ್ಛಾಂದಸಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ದೇವೀಃ**—ಪ್ರಕಾಶಮಾನಗಳಾದ । **ಅಪಃ ಪರಿ**—ಉದಕಗಳ ಸುತ್ತಲೂ । **ವವ್ರಿವಾಂಸಂ**—ಆಕ್ರಮಿಸಿ ಹರಡಿರುವವನೂ । **ಅದೇವಂ**—ಪ್ರಕಾಶರಹಿತನೂ । **ಶಯಾನಂ**—ನಿಶ್ಚಲನಾಗಿ ಬಿದ್ದಿರುವವನೂ ಆದ । **ವೃತ್ರಂ**—ಮೇಘರೂಪಿಯಾದ ವೃತ್ರನನ್ನು । **ಯತ್**—ಯಾವಾಗ । **ಚರತಾ**—ಅವನನ್ನು ಅಟ್ಟಿಸಿಕೊಂಡುಹೋಗುವ । **ವಧೇನ**—ಯುದ್ಧಸಾಧನವಾದ ವಜ್ರಾಯುಧದಿಂದ । **ಜಘನ್ವಾನ್**—ಕೊಂದೆಯೋ (ಆಗ) । **ಆಜೌ**—ಯುದ್ಧದಲ್ಲಿ । **ಸರ್ತವೈ**—ಅತ್ಯಂತ ವೇಗವಾಗಿ ಓಡಲು । **ಅತ್ಯಾನಿವ**—ಕುದುರೆಗಳನ್ನು ಸಡಿಲಿಸಿ ಬಿಡುವಂತೆ । **ಪ್ರಾಸೃಜಃ ಹ**—(ಉದಕಗಳನ್ನು ವೇಗವಾಗಿ ಪ್ರವಹಿಸಲು) ಬಿಡಿಸಿದೆಯಲ್ಲವೇ.

ಭಾವಾರ್ಥ

ಎಲೈ ಇಂದ್ರನೇ, ನೀನು ಪ್ರಕಾಶಮಾನಗಳಾದ ಉದಕಗಳ ಸುತ್ತಲೂ ಆಕ್ರಮಿಸಿ ಹರಡಿರುವವನೂ, ಪ್ರಕಾಶರಹಿತನೂ ನಿಶ್ಚಲನಾಗಿ ಬಿದ್ದಿರುವವನೂ ಆದ ಮೇಘರೂಪಿಯಾದ ವೃತ್ರನನ್ನು ಯಾವಾಗ ನಿನ್ನ ವಜ್ರಾಯುಧದಿಂದ ಹೊಡೆದು ನಾಶಮಾಡಿದೆಯೋ ಆಗಲೇ ಯುದ್ಧದಲ್ಲಿ ಅತ್ಯಂತ ವೇಗವಾಗಿ ಓಡುವ ಕುದುರೆಯನ್ನು ಸಡಲಿಸಿಬಿಡುವಂತೆ ಪ್ರಭೂತವಾಗಿ ಪ್ರವಹಿಸಲು ಉದಕಗಳನ್ನೂ ಬಿಡಿಸಿದೆ.

## English Translation

Inasmuch as you have slain with active strife the slumbering, darkling, water-investing Vritra, you have let forth the bright waters like horses (rushing) into battle.

ಸಂಹಿತಾಪಾಠಃ

ಯಜಾಮ ಇನ್ನಮಸಾ ವೃದ್ಧಮಿಂದ್ರಂ ಬೃಹಂತಮೃಷ್ವಮಜರಂ ಯುವಾನಂ ।
ಯಸ್ಯ ಪ್ರಿಯೇ ಮಮತುರ್ಯಜ್ಞಿಯಸ್ಯ ನ ರೋದಸೀ ಮಹಿಮಾನಂ ಮಮಾತೇ ॥

ಪದಪಾಠಃ

ಯಜಾಮಃ । ಇತ್ । ನಮಸಾ । ವೃದ್ಧಂ । ಇಂದ್ರಂ । ಬೃಹಂತಂ । ಋಷ್ವಂ । ಅಜರಂ । ಯುವಾನಂ ।
ಯಸ್ಯ । ಪ್ರಿಯೇ ಇತಿ । ಮಮತುಃ । ಯಜ್ಞಿಯಸ್ಯ । ನ । ರೋದಸೀ ಇತಿ । ಮಹಿಮಾನಂ । ಮಮಾತೇ ಇತಿ ॥ ೭ ॥

ಸಾಯಣಭಾಷ್ಯಂ

ನಮಸಾ ಹವಿರ್ಲಕ್ಷಣೇನಾನ್ನೇನ ವೃದ್ಧಂ ಪ್ರವೃದ್ಧಂ ಅತ ಏವ ಬೃಹಂತಂ ಮಹಾಂತಮೃಷ್ವಂ । ಋಷ್ಯತೇ ಗಮ್ಯತೇ ಸ್ತುತಿಲಕ್ಷಣೈರ್ಮಂತ್ರೈರಿತಿ ಋಷ್ವಂ ಸ್ತೋತವ್ಯಂ । ಅಜರಂ ಜರಾರಹಿತಂ। ಅತ ಏವ ಯುವಾನಂ ನಿತ್ಯತರುಣಂ ಏವಂವಿಧಮಿಂದ್ರಂ ಯಜಾಮ ಇತ್ । ಕುಶಿಕಾ ವಯಂ ಯಜ್ಞಸಿದ್ಧ್ಯರ್ಥಂ ಸ್ತುತಿವಾಕ್ಯೈಃ ಪೂಜಯಾಮಃ । ಪ್ರಿಯೇ ಪ್ರಿಯತಮೇ ಅಪರಿಮಿತೇ ರೋದಸೀ ದ್ಯಾವಾಪೃಥಿವ್ಯೌ ಯಜ್ಞಿಯಸ್ಯ ಯಜ್ಞಾರ್ಹಸ್ಯ ಯಸ್ಯೇಂದ್ರಸ್ಯ ತವ ಮಹಿಮಾನಂ ವೈಭವಂ ನ ಮಮತುಃ । ನ ಪರಿಚ್ಛೇತ್ತುಂ ಶಕ್ನುತಃ । ನ ಮಮಾತೇ ಇತಿ ದ್ವಿತೀಯಂ ಕ್ರಿಯಾಪದಮಾದರಾರ್ಥಂ ॥ ಯಜಾಮಃ । ಯಜೇರ್ಲಟಿ ರೂಪಂ । ಋಷ್ವಂ । ಋಷೀ ಗತೌ । ಸರ್ವನಿಘೃಷ್ವರಿಷ್ವಲಷ್ವ...ಋಷ್ವೇತ್ಯಾದಿನಾ ವಪ್ರತ್ಯಯಾಂತೋ ನಿಪಾತಿತಃ । ಪ್ರತ್ಯಯಸ್ವರಃ । ಪ್ರಿಯೇ । ಈದೂದೇದಿತಿ ಪ್ರಗೃಹ್ಯಸಂಜ್ಞಾ । ಮಮತುಃ । ಮಾ ಮಾನ ಇತ್ಯಸ್ಯ ಲಿಟ್ಯತುಸಿ ರೂಪಂ । ಯದ್ವೃತ್ತಯೋಗಾದನಿಘಾತಃ । ಪ್ರತ್ಯಯಸ್ವರಃ । ಮಹಿಮಾನಂ । ಮಹಿಶಬ್ದಾತ್ತಸ್ಯ ಭಾವ ಇತ್ಯರ್ಥೇ ಪೃಥ್ವಾದಿತ್ವಾದಿಮನಿಜ್ । ಚಿತ್ಸ್ವರಃ । ಮಮಾತೇ । ಮಾಙ್ ಮಾನೇ ಶಬ್ದೇ ಚೇತ್ಯಸ್ಯ ಲಿಟ್ಯಾತಾಮಿ ರೂಪಂ ॥

ಪ್ರತಿಪದಾರ್ಥ

ನಮಸಾ—ಹವಿಸ್ಸಿನ ರೂಪದ ಅನ್ನದಿಂದ । ವೃದ್ಧಂ—ಪ್ರವೃದ್ಧನಾದವನೂ । ಬೃಹಂತಂ—ಮಹದಾಕಾರವುಳ್ಳವನೂ । ಋಷ್ವಂ—ಸ್ತುತ್ಯರ್ಹನೂ । ಅಜರಂ—ಜರಾರಹಿತನೂ । ಯುವಾನಂ—ನಿತ್ಯತರುಣನೂ ಆದ । ಇಂದ್ರಂ—ಇಂದ್ರನನ್ನು । ಯಜಾಮ ಇತ್—ಖಂಡಿತವಾಗಿಯೂ ಪೂಜಿಸುತ್ತೇವೆ । ಪ್ರಿಯೇ—ಪ್ರೀತಿಪಾತ್ರಂವಾದ ।

ರೋದಸೀ—ದ್ಯಾವಾಪೃಥಿವಿಗಳೆರಡೂ । ಯಜ್ಞಿಯಸ್ಯ—ಯಜ್ಞಾರ್ಹನಾದ । ಯಸ್ಯ—ಯಾವ ಅದೇ ಇಂದ್ರನ । ಮಹಿಮಾನಂ—ವೈಭವವನ್ನು । ನ ಮಮತುಃ—ಅಳೆಯಲಾರದವಾಗಿವೆ । (ನ) ಮಮಾತೇ—ಅಳೆಯಲು ಸಾಧ್ಯವೂ ಇಲ್ಲ.

ಭಾವಾರ್ಥ

ಹವಿಸ್ಸಿನ ರೂಪದ ಅನ್ನದಿಂದ ಪ್ರವೃದ್ಧನಾದವನೂ, ಮಹದಾಕಾರವುಳ್ಳವನೂ, ಸ್ತುತ್ಯರ್ಹನೂ ಜರಾರಹಿತನೂ । ನಿತ್ಯತರುಣನೂ ಆದ ಇಂದ್ರನನ್ನು ಖಂಡಿತವಾಗಿಯೂ ಪೂಜಿಸುತ್ತೇವೆ. ಅಪರಿಮಿತವಾದ ದ್ಯಾವಾಪೃಥಿವಿಗಳಿಂದ ಯಜ್ಞಾರ್ಹನಾದ ಇಂದ್ರನ ವೈಭವವನ್ನು ಅಳೆಯಲಾಗಲಿಲ್ಲ. ಅಳೆಯಲು ಸಾಧ್ಯವೂ ಇಲ್ಲ.

English Translation

Therefore we sacrifice with reverence to the vast and mighty Indra, who is adorable, undecaying, young; whose magnitude the unbounded heaven and earth have not measured, nor can measure.

ಸಂಹಿತಾಪಾಠಃ

ಇಂದ್ರಸ್ಯ ಕರ್ಮ ಸುಕೃತಾ ಪುರೂಣಿ ವ್ರತಾನಿ ದೇವಾ ನ ಮಿನಂತಿ ವಿಶ್ವೇ ।
ದಾಧಾರ ಯಃ ಪೃಥಿವೀಂ ದ್ಯಾಮುತೇಮಾಂ ಜಜಾನ ಸೂರ್ಯಮುಷಸಂ ಸು-
ದಂಸಾಃ ॥ ೮ ॥

ಪದಪಾಠಃ

ಇಂದ್ರಸ್ಯ । ಕರ್ಮ । ಸುಽಕೃತಾ । ಪುರೂಣಿ । ವ್ರತಾನಿ । ದೇವಾಃ । ನ । ಮಿನಂತಿ । ವಿಶ್ವೇ ।
ದಾಧಾರ । ಯಃ । ಪೃಥಿವೀಂ । ದ್ಯಾಂ । ಉತ । ಇಮಾಂ । ಜಜಾನ । ಸೂರ್ಯಂ । ಉಷಸಂ । ಸುಽ-
ದಂಸಾಃ ॥ ೮ ॥

ಸಾಯಣಭಾಷ್ಯಂ

ವಿಶ್ವೇ ಸರ್ವೇ ದೇವಾ ಇಂದ್ರಸ್ಯ ತವ ಕರ್ಮ ಕರ್ಮಾಣಿ ಸುಕೃತಾ ಸುಕೃತಾನಿ ಸುಷ್ಠು ನಿರ್ಮಿತಾನಿ ಪೃಥಿವ್ಯಾದೀನಿ ಪುರೂಣಿ ಬಹೂನಿ ವ್ರತಾನಿ ಯಜ್ಞಾದೀನಿ ಚ ನ ಮಿನಂತಿ । ಏತಾನಿ ಸರ್ವಾಣಿ ತವ ಕರ್ಮಾಣಿ ನ ಹಿಂಸಂತಿ । ಕಿಂತ್ವಾದ್ರಿಯಂತೇ । ಕಿಂಚ ಯೋಽಯಮಿಂದ್ರಃ ಪೃಥಿವೀಂ ಭೂಲೋಕಂ ದ್ಯಾಂ ದ್ಯುಲೋಕಂ ಉತ ಅಪಿ ಚೇಮಾಮಿಮಮಂತರಿಕ್ಷಲೋಕಂ ಚ ಏತಾಂಸ್ತ್ರೀನ್ ಲೋಕಾನ್ ದಾಧಾರ । ಸುದಂಸಾಃ ಸುಕರ್ಮಾ ಶೋಭನಕರ್ಮಾ ಸನ್ನಿಂದ್ರಃ ಸೂರ್ಯಂ ಲೋಕಪ್ರಕಾಶಕಮಾದಿತ್ಯಮುಷಸಮಗ್ನಿಹೋತ್ರಾದಿಕರ್ಮನಿರ್ವಾಹಕಮುಷಃಕಾಲಂ ಜಜಾನ । ಉತ್ಪಾದಯಾಮಾಸ ॥ ಇಂದ್ರಸ್ಯ

**ಕರ್ಮ ಸುಕೃತಾ ಪುರೂಣೀತ್ಯೇತತ್ಪದಕದಂಬಕಮೇಕೋ. ದ್ವೇ ವಸುಮತೀ ಇತ್ಯಸ್ಮಿನ್ಸರ್ಗೇ । ಋಗ್ವೇ. ೩-೨-೩ । ಪಠಿತಂ । ಅತ್ರಾಪಿ ತದೇವ ಪಠ್ಯತೇ ಕಿಮಿತಿ ಪದಕಾಲೇ ನೋತ್ಸೃಜ್ಯತ ಇತಿ ಚೇನ್ನ । ವಾಕ್ಯ-ಭೇದಾತ್ । ತತ್ರೇಂದ್ರಸ್ಯ ಕರ್ಮ ಸುಕೃತಾ ಪುರೂಣೀತ್ಯೇಕಂ ವಾಕ್ಯಂ ಅತ್ರ ತು ಕರ್ಮ ಸುಕೃತೇ-ತ್ಯೇಕಂ ವಾಕ್ಯಂ ಪುರೂಣಿ ವ್ರತಾನೀತ್ಯಪರಂ । ಕಿಂಚ ತತ್ರತ್ಯಂ ಪದಕದಂಬಕಂ ಪ್ರಥಮಾಂತಂ ಅತ್ರತ್ಯಂ ದ್ವಿತೀಯಾಂತಂ । ಅತೋ ವಾಕ್ಯಭೇದಾದ್ವಿಭಕ್ತಿಭೇದಾಚ್ಚ ಪದಕಾಲೇ ನೋತ್ಸೃಜ್ಯತೇ ॥ ಮಿನಂತಿ । ಮೀಙ್ ಹಿಂಸಾಯಾಮಿತ್ಯಸ್ಯ ಲಟಿ ರೂಪಂ । ನಿಘಾತಃ । ದಾಧಾರ । ಧೃಙ್ ಧಾರಣ ಇತ್ಯಸ್ಯ ಲಿಟಿ ರೂಪಂ । ತುಜಾದಿತ್ವಾದಭ್ಯಾಸಸ್ಯ ದೀರ್ಘಃ । ಲಿತ್ಸ್ವರಃ । ಜಜಾನ । ಜನ ಜನನ ಇತ್ಯಸ್ಮಾಂತರ್ಭಾವಿ-ತಣ್ಯರ್ಥಸ್ಯ ಲಿಟಿ ರೂಪಂ । ಲಿತ್ಸ್ವರಃ । ಸುದಂಸಾಃ । ಸೋರ್ಮನಸೀ ಇತ್ಯುತ್ತರಪದಾದ್ಯುದಾತ್ತತ್ವಂ ॥**

ಪ್ರತಿಪದಾರ್ಥ

**ವಿಶ್ವೇ**—ಸಮಸ್ತರಾದ । **ದೇವಾಃ**—ದೇವತೆಗಳೂ ಸಹ । **ಇಂದ್ರಸ್ಯ**—ಇಂದ್ರನ । **ಕರ್ಮ**—ಕಾರ್ಯರೂಪ ವಾದವೂ । **ಸುಕೃತಾ**—ಅತಿಶಯವಾದ ಸೌಂದರ್ಯದಿಂದ ನಿರ್ಮಿತವಾದವೂ ಆದ ಪೃಥಿವ್ಯಾದಿ ಲೋಕಗಳನ್ನೂ । **ಪುರೂಣಿ**—ಬಹುಸಂಖ್ಯಾಕವಾದ। **ವ್ರತಾನಿ**—ಯಜ್ಞಾದಿಗಳನ್ನೂ ಕೂಡ। **ನ ಮಿನಂತಿ**—ಹಿಂಸಿಸುವುದಿಲ್ಲ । **ಯಃ**—ಯಾವ ಅದೇ ಇಂದ್ರನು । **ಪೃಥಿವೀಂ**-ಪೃಥಿವಿಯನ್ನೂ । **ದ್ಯಾಂ**—ದ್ಯುಲೋಕವನ್ನೂ । **ಉತ**-ಮತ್ತು । **ಇಮಾಂ**—ಈ ಅಂತರಿಕ್ಷಲೋಕವನ್ನೂ । **ದಾಧಾರ**—ಧರಿಸಿದ್ದಾನೆ । **ಸುದಂಸಾಃ**—ಶ್ರೇಷ್ಠವಾದ ಕರ್ಮಕರ್ತನಾದ ಇಂದ್ರನು । **ಸೂರ್ಯಂ**—ಸೂರ್ಯನನ್ನೂ । **ಉಷಸಂ**—ಉಷಸ್ಸನ್ನೂ । **ಜಜಾನ**—ಸೃಷ್ಟಿಸಿದನು ।

ಭಾವಾರ್ಥ

ಸಮಸ್ತರಾದ ದೇವತೆಗಳೂ ಸಹ ಇಂದ್ರನಿಂದ ಸೃಷ್ಟವಾದವೂ ಅತಿಶಯವಾದ ಸೌಂದರ್ಯದೊಡನೆ ನಿರ್ಮಿತ ವಾದವೂ ಆದ ಪೃಥಿವ್ಯಾದಿಲೋಕಗಳನ್ನೂ ಮತ್ತು ಅನೇಕ ಯಜ್ಞಾದಿಕರ್ಮಗಳನ್ನೂ ಹಿಂಸಿಸುವುದಿಲ್ಲ. ಅದೇ ಇಂದ್ರನು ಪೃಥಿವಿಯನ್ನೂ, ದ್ಯುಲೋಕವನ್ನೂ ಮತ್ತು ಅಂತರಿಕ್ಷಲೋಕವನ್ನೂ ಧರಿಸಿದ್ದಾನೆ. ಶ್ರೇಷ್ಠವಾದ ಕರ್ಮಕರ್ತನಾದ ಇಂದ್ರನು ಸೂರ್ಯನನ್ನೂ ಮತ್ತು ಉಷಸ್ಸನ್ನೂ ಸೃಷ್ಟಿಸಿದ್ದಾನೆ.

English Translation

All the gods cannot detract from the many glorious exploits, and pious works of Indra : he who has upheld earth, and heaven, and the firmament, and who, the performer of great deeds, has engendered the sun and the dawn.

ಸಂಹಿತಾಪಾಠಃ

ಅದ್ರೋಘ ಸತ್ಯಂ ತವ ತನ್ಮಹಿತ್ವಂ ಸದ್ಯೋ ಯಜ್ಜಾತೋ ಅಪಿಬೋ ಹ ಸೋಮಂ।
ನ ದ್ಯಾವ ಇಂದ್ರ ತವಸಸ್ತ ಓಜೋ ನಾಹಾ ನ ಮಾಸಾಃ ಶರದೋ ವರಂತ ॥ ೯ ॥

ಪದಪಾಠಃ

ಅದ್ರೋಘ | ಸತ್ಯಂ | ತವ | ತತ್ | ಮಹಿತ್ವಂ | ಸದ್ಯಃ | ಯತ್ | ಜಾತಃ | ಅಪಿಬಃ | ಹ | ಸೋಮಂ |

ನ | ದ್ಯಾವಃ | ಇಂದ್ರ | ತವಸಃ | ತೇ | ಓಜಃ | ನ | ಅಹಾ | ನ | ಮಾಸಾಃ | ಶರದಃ | ವರಂತ ॥ ೯ ॥

ಸಾಯಣಭಾಷ್ಯಂ

ಅದ್ರೋಘ ದ್ರೋಹವರ್ಜಿತ ಹೇ ಇಂದ್ರ ತವ ತನ್ಮಹಿತ್ವಂ ತಾದೃಶಂ ಮಾಹಾತ್ಮ್ಯಂ ಸತ್ಯಂ ಯಥಾರ್ಥಂ | ಯದ್ಯಸ್ಮಾಜ್ಜಾತ ಉತ್ಪನ್ನಃ ಸದ್ಯಸ್ತದಾನೀಮೇವ ಸೋಮಮಸ್ಮಾಭಿರ್ದೀಯಮಾನಂ ಸೋಮರಸಮಪಿಬಃ | ಹ ಪ್ರಸಿದ್ಧೌ | ಕಿಂಚ ತವಸೋ ಬಲವತಸ್ತೇ ತವೌಜಃ ಸಾಮರ್ಥ್ಯಂ ದ್ಯಾವೋ ದಿವೋಪಲಕ್ಷಿತಾಃ ಸರ್ವೇ ಲೋಕಾ ನ ವರಂತ | ನ ವಾರಯಂತಿ | ಕಿಂಚ | ಅಹಾ ಪ್ರತಿಪದಾದೀನ್ಯಹಾನಿ ನ ವಾರಯಂತಿ | ತಥಾ ಮಾಸಾಶ್ಚೈತ್ರಾದ್ಯಾಃ ಶರದಃ ಸಂವತ್ಸರಾಶ್ಚ ತವ ಸಾಮರ್ಥ್ಯಂ ನ ವಾರಯಂತಿ | ಕಿಂತು ತವ ಸಾಮರ್ಥ್ಯಮನುಸೃತ್ಯ ಸರ್ವೇ ವರ್ತಂತೆ ಇತಿ ಭಾವಃ || ಅದ್ರೋಘ | ಆಮಂತ್ರಿತಸ್ಯ ಚೇತಿ ಷಾಷ್ಠಿಕಮಾದ್ಯುದಾತ್ತತ್ವಂ | ಅಪಿಬಃ | ಯದ್ಯೋಗಾದನಿಘಾತಃ | ಮಾಸಾಃ | ಮಸೀ ಪರಿಮಾಣೇ | ಮಸ್ಯತೇ ಪರಿಮೀಯತೇ ತ್ರಿಂಶತಾ ದಿನೈರಿತಿ ಮಾಸಃ | ಕರ್ಮಣಿ ಘಞ್ | ಞಿತ್ವಾದಾದ್ಯುದಾತ್ತಃ | ಶರದಃ | ಶೄ ಹಿಂಸಾಯಾಮಿತ್ಯಸ್ಮಾತ್ ಶೄದೃಭಸೋಽದಿರಿತ್ಯಧಿಕರಣೇಽದಿಪ್ರತ್ಯಯಃ | ಶೀರ್ಯತೇಽಸ್ಯಾಂ ತೃಣಗುಲ್ಮವನಸ್ಪತೀನಾಂ ತೇಜಾಂಸೀತಿ ಶರತ್ | ಪ್ರತ್ಯಯಸ್ವರಃ | ವರಂತ | ವೃಞ್ ವರಣೇ | ಅಂತರ್ಭಾವಿತಣ್ಯರ್ಥೋಽತ್ರ ನಿವಾರಣೇ ವರ್ತತೇ | ಭೌವಾದಿಕಃ | ಛಾಂದಸೇ ಲಙಿ ರೂಪಂ | ನಿಘಾತಃ ||

ಪ್ರತಿಪದಾರ್ಥ

ಅದ್ರೋಘ—ದ್ರೋಹರಹಿತನಾದ ಎಲೈ ಇಂದ್ರನೇ | ತವ—ನಿನ್ನ | ತನ್ಮಹಿತ್ವಂ—ಪ್ರಸಿದ್ಧವಾದ ಮಾಹಾತ್ಮ್ಯವು | ಸತ್ಯಂ—ಯಥಾರ್ಥವಾಗಿದೆ | ಯತ್—ಯಾವ ನಿಮಿತ್ತವಾಗಿ | ಜಾತಃ—ನೀನು ಉತ್ಪನ್ನನಾದೆಯೋ | ಸದ್ಯಃ—ಆ ಒಡನೆಯೇ | ಸೋಮಂ—ಸೋಮರಸವನ್ನು | ಅಪಿಬಃ ಹ—ಪಾನಮಾಡಿದೆಯೆಂಬುದು ಪ್ರಸಿದ್ಧವಾಗಿದೆ | ತವಸಃ—ಬಲಶಾಲಿಯಾದ | ತೇ—ನಿನ್ನ | ಓಜಃ—ಸಾಮರ್ಥ್ಯವನ್ನು | ದ್ಯಾವಃ—ದ್ಯುಲೋಕಾದಿಗಳು | ನ ವರಂತ—ತಡೆಯಲಾರವು | ಅಹಾ—ಅಹಸ್ಸುಗಳಾಗಲಿ | ಮಾಸಾಃ—ಮಾಸಗಳಾಗಲಿ | ಶರದಃ—ಸಂವತ್ಸರಗಳಾಗಲಿ (ತಡೆಯಲಾರವು).

ಭಾವಾರ್ಥ

ಯಾರಿಗೂ ದ್ರೋಹವನ್ನೆಸಗದಿರುವ ಎಲೈ ಇಂದ್ರನೇ, ನಿನ್ನ ಪ್ರಸಿದ್ಧವಾದ ಮಾಹಾತ್ಮ್ಯವು ಯಥಾರ್ಥವಾಗಿಯೇ ಇದೆ. ಯಾವ ನಿಮಿತ್ತವಾಗಿ ನೀನು ಉತ್ಪನ್ನನಾದೆಯೋ, ಆ ಒಡನೆಯೇ ನೀನು ಸೋಮರಸವನ್ನು ಪಾನಮಾಡಿದೆಯೆಂಬುದು ಲೋಕವಿದಿತವಾಗಿದೆ. ಬಲಶಾಲಿಯಾದ ನಿನ್ನ ಸಾಮರ್ಥ್ಯವನ್ನು ದ್ಯುಲೋಕಾದಿಗಳಾಗಲಿ, ಅಹಸ್ಸುಗಳಾಗಲಿ, ಮಾಸಗಳಾಗಲಿ ಅಥವಾ ಸಂವತ್ಸರಗಳಾಗಲಿ ತಡೆಯಲಾರವು.

English Translation

Doer of no wrong, such was your true greatness, that as soon as born, you have quaffed the Soma juice: neither the heavens, nor days, nor months, nor years, resist the force of you who are mighty.

ಸಂಹಿತಾಪಾಠಃ

ತ್ವಂ ಸದ್ಯೋ ಅಪಿಬೋ ಜಾತ ಇಂದ್ರ ಮದಾಯ ಸೋಮಂ ಪರಮೇ ವ್ಯೋಮನ್।
ಯದ್ಧ ದ್ಯಾವಾಪೃಥಿವೀ ಆವಿವೇಶೀರಥಾಭವಃ ಪೂರ್ವ್ಯಃ ಕಾರುಧಾಯಾಃ ॥ ೧೦ ॥

ಪದಪಾಠಃ

ತ್ವಂ । ಸದ್ಯಃ । ಅಪಿಬಃ । ಜಾತಃ । ಇಂದ್ರ । ಮದಾಯ । ಸೋಮಂ । ಪರಮೇ । ವಿಽಓಮನ್ ।
ಯತ್ । ಹ । ದ್ಯಾವಾಪೃಥಿವೀ ಇತಿ । ಆ । ಅವಿವೇಶೀಃ । ಅಥ । ಅಭವಃ । ಪೂರ್ವ್ಯಃ । ಕಾರುಽಧಾಯಾಃ

ಸಾಯಣಭಾಷ್ಯಂ

ಸದ್ಯಸ್ಕ್ರೀನಾಮ್ನ್ಯೇಕಾಹೇ ನಿಷ್ಕೇವಲ್ಯಶಸ್ತ್ರೇ ತ್ವಂ ಸದ್ಯೋ ಅಪಿಬ ಇತಿ ಸೂಕ್ತಮುಖೀಯಾ। ಸೂತ್ರಿತಂ ಚ । ತ್ವಂ ಸದ್ಯೋ ಅಪಿಬೋ ಜಾತ ಇಂದ್ರಾನು ತ್ವಾಹಿಘ್ನೇ ಅಧ ದೇವ ದೇವಾಃ । ಆ. ೯-೫ । ಇತಿ ॥

ಹೇ ಇಂದ್ರ ಸದ್ಯಸ್ತದಾನೀಮೇವ ಜಾತಃ ಪರಮೇ ವ್ಯೋಮನ್ ಉತ್ತಮೇ ಸ್ಥಾನೇ ಸ್ಥಿತಸ್ತ್ವಂ ಮದಾಯ ಹರ್ಷಾಯ ಸೋಮಮಪಿಬಃ । ಯದ್ಯದಾ ತ್ವಂ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವಾವಿವೇಶೀರ್ಹ । ಆ ಸಂಮತಾದ್ಭೃಶಂ ಪ್ರವಿಷ್ಟೋಽಸಿ ಖಲು । ಅಥಾನಂತರಂ ಪೂರ್ವ್ಯಃ ಪುರಾತನಃ ಸನ್ ಕಾರುಧಾಯಾಃ ಕರ್ಮಣಾಂ ವಿಧಾತಾಭವಃ ಖಲು ॥ ವ್ಯೋಮನ್ । ಅವ ರಕ್ಷಣಗತ್ಯಾದಿಷು । ವಿಪೂರ್ವಸ್ಯಾವತೇರ್ನಾಮನ್ ಸೀಮನ್ನಿತ್ಯಾದಿನಾ ಮನಿನ್ । ಜ್ವರತ್ವರೇತ್ಯಾದಿನಾ ಊಟ್ । ವಿಶೇಷೇಣೌಮ ವ್ಯಾಪ್ತಿರ್ಯಸ್ಯ ತತ್ । ಸುಪಾಂ ಸುಲುಗಿತ್ಯಾದಿನಾ ಸುಪೋ ಲುಕ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಅವಿವೇಶೀಃ । ವಿಶ ಪ್ರವೇಶನ ಇತ್ಯಸ್ಯ ಯಙ್‌ಲುಕಿ ಲಙಃ ಸಿಪಿ ಯಙೋ ವೇತೀಡಾಗಮಃ । ಇತಶ್ಚೇತಿ ಸಿಪ ಇಕಾರಲೋಪಃ । ಯದ್ಯೋಗಾದನಿಘಾತಃ । ಕಾರುಧಾಯಾಃ । ಕಾರುಃ । ಕರೋತೇಃ ಕೃವಾಪಾಜಿಮಿಸ್ವದಿಸಾಧ್ಯಶೂಭ್ಯ ಉಣ್ಣಿತ್ಯಯಃ । ಣಿತ್ತ್ವಾದ್ವೃದ್ಧಿಃ । ದಧಾತೇರ್ವಹಿಹಾಧಾಞ್ಭ್ಯಶ್ಛಂದಸೀತ್ಯಸುನ್ । ಣಿದಿತ್ಯನುವೃತ್ತೇರಾತೋ ಯುಕ್ ಚಿಣ್ ಕೃತೋರಿತಿ ಯುಗಾಗಮಃ । ಸಮಾಸೇ ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ಸೂತ್ರಾತ್ಪೂರ್ವಪದಪ್ರಕೃತಿಸ್ವರಃ ॥ ॥ ೧೦ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಸದ್ಯಃ ಜಾತಃ—ಉತ್ಪನ್ನನಾದೊಡನೆಯೇ । ಪರಮೇ ವ್ಯೋಮನ್—ಉತ್ಕೃಷ್ಟವಾದ ಅಂತರಿಕ್ಷದಲ್ಲಿ ನಿಂತು । ತ್ವಂ—ನೀನು । ಮದಾಯ—ಹರ್ಷಕ್ಕಾಗಿ । ಸೋಮಂ—ಸೋಮರಸವನ್ನು । ಅಪಿಬಃ—ಪಾನಮಾಡಿದೆ । ಯತ್—ಯಾವಾಗ (ನೀನು) । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳನ್ನು । ಆ ಅವಿವೇಶೀಃ ಹ—ಆವರಿಸುವಂತೆ ಪ್ರವೇಶಿಸಿದೆಯೋ । ಅಥ—ಆ ಒಡನೆಯೇ । ಪೂರ್ವ್ಯಃ—ಪುರಾತನನಾಗಿ । ಕಾರುಧಾಯಾಃ—ಕರ್ಮಗಳಿಗೆ ಕರ್ತನಾಗಿ । ಅಭವಃ—ಆಗಿದ್ದೀಯೆ ।

ಭಾವಾರ್ಥ

ಎಲೈ ಇಂದ್ರನೇ, ನೀನು ಉತ್ಪನ್ನನಾದೊಡನೆಯೇ, ಉತ್ಕೃಷ್ಟವಾದ ಅಂತರಿಕ್ಷದಲ್ಲಿ ನಿಂತು ಹರ್ಷಕಾರಕವಾದ ಸೋಮರಸವನ್ನು ಪಾನಮಾಡಿದೆ. ಯಾವಾಗ ನೀನು ದ್ಯಾವಾಪೃಥಿವಿಗಳನ್ನೆಲ್ಲಾ ಆವರಿಸುವಂತೆ ಈ ಲೋಕಗಳನ್ನು ಪ್ರವೇಶಿಸಿದೆಯೋ ಆ ಒಡನೆಯೇ, ಪುರಾತನನಾಗಿ ನೀನು ಕರ್ಮಗಳಿಗೆಲ್ಲಾ ಕರ್ತನಾದೆ.

English Translation.

As soon as born in the highest heaven, you have quaffed, Indra, the Soma juice for your exhilaration; and when you had pervaded the heaven and earth, you became the primary artificer (of creation).

ವಿಶೇಷವಿಷಯಗಳು

ಸದ್ಯಸ್ಕ್ರೀ ಎಂಬ ಒಂದುದಿನದ ಮಟ್ಟಿಗೆ ಮಾಡುವ ಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ತ್ವಂ ಸದ್ಯೋ ಅಪಿಬಃ ಎಂಬ ಈ ಋಕ್ಕನ್ನು ಪ್ರಾರಂಭದ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ತ್ವಂ ಸದ್ಯೋ ಅಪಿಬೋ ಜಾತ ಇಂದ್ರಾನು ತ್ವಾಹಿಷ್ನೇ ಅಥ ದೇವ ದೇವಾಃ ಎಂಬ ಸೂತ್ರದಿಂದ (ಆ. ೯-೫) ವಿವೃತವಾಗಿರುವುದು.

ಸಂಹಿತಾಪಾಠಃ

ಅಹನ್ನಹಿಂ ಪರಿಶಯಾನಮರ್ಣ ಓಜಾಯಮಾನಂ ತುವಿಜಾತ ತವ್ಯಾನ್ ।
ನ ತೇ ಮಹಿತ್ವಮನು ಭೂದಧ ದ್ಯೌರ್ಯದನ್ಯಯಾ ಸ್ಫಿಗ್ಯಾ೩ ಕ್ಷಾಮವಸ್ಥಾಃ ॥೧೧॥

ಪದಪಾಠಃ

ಅಹನ್ । ಅಹಿಂ । ಪರಿ೭ಶಯಾನಂ । ಅರ್ಣಃ । ಓಜಾಯಮಾನಂ । ತುವಿ೭ಜಾತ । ತವ್ಯಾನ್ ।
ನ । ತೇ । ಮಹಿ೭ತ್ವಂ । ಅನು । ಭೂತ್ । ಅಧ । ದ್ಯೌಃ । ಯತ್ । ಅನ್ಯಯಾ । ಸ್ಫಿಗ್ಯಾ । ಕ್ಷಾಂ ।
ಅವಸ್ಥಾಃ ॥ ೧೧ ॥

ಸಾಯಣಭಾಷ್ಯಂ

ತುವಿಜಾತ ಬಹೂನಿ ಜಾತಾನಿ ಪೃಥಿವ್ಯಾದೀನಿ ಯಸ್ಮಾತ್ಸೋಽಯಂ ತುವಿಜಾತಃ । ಹೇ ತುವಿಜಾತ ಇಂದ್ರ ತವ್ಯಾನತಿಶಯೇನ ಪ್ರವೃದ್ಧಸ್ತ್ವಮರ್ಣಃ ಪರಿಶಯಾನಮುದಕಂ ಪರಿತಃ ಶಯಾನಮುದಕಮಂತಃ ಕೃತ್ವಾ ಪರಿತೋ ವರ್ತಮಾನಂ ಅತ ಏವೌಜಾಯಮಾನಂ ಬಲಮಾಚರಂತಮಹಿಂ । ಆ ಸಮಂತಾದ್ಧಂತ್ಯ-ಪಹರತ್ಯುದಕಮಿತ್ಯಹಿರ್ಮೇಘಃ । ತಮಿಮಂ ಮೇಘಮಹನ್ । ಉದಕಪ್ರೇರಣಾಯ ಹತವಾನಸಿ । ಅಥ ಅಥ ತೇ ಮಹಿತ್ವಂ ಮಹಿಮಾನಂ ದ್ಯೌರ್ನಾನುಭೂತ್ । ನಾನುಭವಸಿ । ನ ಜಾನಾತಿ । ಯದ್ಯಸ್ಮಾತ್ತ್ವ-ಮನ್ಯಯೈಕತರಯಾ ಸ್ಫಿಗ್ಯಾ ಕಟ್ಯಾ ಕ್ಷಾಂ ಭೂಮಿಮವಸ್ಥಾಃ । ಅವಚ್ಛಾದ್ಯ ತಿಷ್ಠಸಿ ॥ ಅಹನ್ । ಹಂತೇ-

ರ್ಲಜಾ ಸಿಬ್ಲೋಪೇ ರೂಪಂ । ಅಹಿಂ । ಹನ ಹಿಂಸಾಗತ್ಯೋಃ। ಆಜಾ ಶ್ರಿಹನಿಭ್ಯಾಂ ಹ್ರಸ್ವಶ್ಚೇತಿ ಇಣ್ಪ್ರತ್ಯಯಃ ಡಿಚ್ಚ ಪೂರ್ವಪದಸ್ಯ ಹ್ರಸ್ವಶ್ಚ । ವೃಷಾದಿತ್ವಾದಾದ್ಯುದಾತ್ತತ್ವಂ । ಓಜಾಯಮಾನಂ । ಓಜಃಶಬ್ದಾದಾಚಾರಾರ್ಥೇ ಕರ್ತುಃ ಕ್ಯಙ್ ಸಲೋಪಶ್ಚೇತಿ ಕ್ಯಙ್ಪ್ರತ್ಯಯಃ ಸಲೋಪಶ್ಚ । ಙಿತ್ತ್ವಾದಾತ್ಮನೇಪದಂ । ಪ್ರತ್ಯಯಸ್ವರಃ । ತವ್ಯಾನ್ । ತು ಇತಿ ಸೌತ್ರೋ ಧಾತುಃ । ಅಸ್ಮಾತ್ತೃಜಂತಾತ್ತುತ್ಛಂದಸೀತೀಯಸುನ್ । ತುರಿಷ್ಠೇಮೇಯಃಸ್ವಿತಿ ತೃಚೋ ಲೋಪಃ । ಭಸಂಜ್ಞಾಯಾಮೋರ್ಗುಣಃ । ಇಕಾರಲೋಪಶ್ಛಾಂದಸಃ । ನಿತ್ಸ್ವರಃ । ಭೂತ್ । ಭವತೇರ್ಲುಙಿ ರೂಪಂ । ಸ್ನಿಗ್ವಾ । ಯಚಿ ಭಮಿತಿ ಭಸಂಜ್ಞಾಂ ಬಾಧಿತ್ವಾ ಸ್ವಾದಿಷ್ವಸರ್ವನಾಮಸ್ಥಾನ ಇತಿ ಪದಸಂಜ್ಞಾಯಾಂ ಜಶ್ತ್ವಂ । ತೃತೀಯಾಯಾಃ ಪೂರ್ವಸವರ್ಣಃ । ಕ್ಷಾಂ । ಕ್ಷಿ ನಿವಾಸಗತ್ಯೋಃ । ಅನ್ಯೇಭ್ಯೋಽಪಿ ದೃಶ್ಯತ ಇತಿ ನಿರುಪಪದಾದಪಿ ಡಪ್ರತ್ಯಯಃ । ತತಷ್ಟಾಪ್ । ಕ್ಷಿಯಂತಿ ನಿವಸಂತ್ಯಸ್ಯಾಂ ಪ್ರಾಣಿನ ಇತಿ ಕ್ಷಾ ಭೂಮಿಃ । ಉದಾತ್ತನಿವೃತ್ತಿಸ್ವರೇಣಾಂತೋದಾತ್ತಃ । ಅವಸ್ಥಾಃ । ವಸ ಆಚ್ಛಾದನ ಇತ್ಯಸ್ಯ ಲಙ್ಯನುದಾತ್ತತ್ತ್ವಾದಾತ್ಮನೇಪದಂ । ಥಾಸ್ಯದಾದಿತ್ವಾಚ್ಛಪೋ ಲುಕ್ । ಯದ್ವೃತ್ತಯೋಗಾದನಿಘಾತಃ । ಅಡಾಗಮಸ್ವರಃ ॥

ಪ್ರತಿಪದಾರ್ಥ

**ತುವಿಜಾತ**—ಪೃಥಿವ್ಯಾದಿ ಅನೇಕ ಲೋಕಗಳು ಉತ್ಪನ್ನವಾಗಲು ಕಾರಣನಾದ ಎಲೈ ಇಂದ್ರನೇ। ತವ್ಯಾನ್-ಅತಿಯವಾಗಿ ಪ್ರವೃದ್ಧನಾದ ನೀನು । **ಅರ್ಣಃ**—ಉದಕದ । **ಪರಿಶಯಾನಂ**—ಸುತ್ತಲೂ ವ್ಯಾಪಿಸಿ ಬಿದ್ದಿದ್ದವನೂ **ಓಜಾಯಮಾನಂ**—ಬಲಶಾಲಿಯಾದವನೂ ಆದ । **ಅಹಿಂ**—ಮೇಘರೂಪಿಯಾದ ಅಸುರನನ್ನು ! **ಅಹನ್**—ನಾಶ ಮಾಡಿದೆ । **ಯತ್**—ಯಾವ ನಿಮಿತ್ತವಾಗಿ । **ಅನ್ಯಯಾ**-(ಅನೇಕ ವಿಧಗಳಲ್ಲಿ) ಒಂದಾದ । **ಸ್ನಿಗ್ವಾ**-ಕಾಂತಿಯಿಂದ । **ಕ್ಷಾಂ**—ಭೂಮಿಯನ್ನು । **ಅವಸ್ಥಾಃ**—ಆಚ್ಛಾದಿಸಿ ನಿಂತಿರುವೆಯೋ । **ಅಥ**—ಆದುದರಿಂದಲೇ । **ತೇ**—ನಿನ್ನ । **ಮಹಿತ್ವಂ**-ಮಹಿಮೆಯನ್ನು । **ದೌಃ**-ದ್ಯುಲೋಕವು । **ನ ಅನುಭೂತ್**-ಅನುಭವಿಸಲಾಗಲಿಲ್ಲ (ತಿಳಿಯಲಾಗಲಿಲ್ಲ). ।

ಭಾವಾರ್ಥ

ಯಾವ ಪ್ರಭುವಿನಿಂದ ಪೃಥಿವ್ಯಾದಿ ನಾನಾ ಲೋಕಗಳೂ ಉತ್ಪನ್ನವಾದವೋ ಅಂತಹ ಎಲೈ ಇಂದ್ರನೇ, ಅತಿಶಯವಾಗಿ ಪ್ರವೃದ್ಧನಾದ ನೀನು ಉದಕದ ಸುತ್ತಲೂ ವ್ಯಾಪಿಸಿ ಬಿದ್ದಿದ್ದವನೂ ಬಲಶಾಲಿಯಾದವನೂ ಮೇಘರೂಪಿಯಾದವನೂ ಆದ ಅಸುರನನ್ನು ನಾಶಮಾಡಿದೆ. ಯಾವ ನಿಮಿತ್ತವಾಗಿ ನೀನು ನಿನ್ನ ಅನೇಕವಿಧವಾದ ಕಾಂತಿಗಳಲ್ಲಿ ಒಂದರಿಂದ ಮಾತ್ರ ಪೃಥಿವಿಯನ್ನು ಆಚ್ಛಾದಿಸಿ ನಿಂತಿರುವೆಯೋ, ಆ ಕಾರಣದಿಂದಲೇ, ನಿನ್ನ ಮಹಿಮೆಯನ್ನು ದ್ಯುಲೋಕವೂ ಸಹ ತಿಳಿಯಲಾಗಲಿಲ್ಲ.

## English Translation

Indra, from whom many are born; you who are vigorous have slain Ahi, enveloping the slumbering water, and confiding in his prowess: yet the heaven apprehended not your greatness as you remained concealing the earth by one of (your) flames.

ಸಂಹಿತಾಪಾಠಃ

ಯಜ್ಞೋ ಹಿ ತ ಇಂದ್ರ ವರ್ಧನೋ ಭೂದುತ ಪ್ರಿಯಃ ಸುತಸೋಮೋ ಮಿಯೇಧಃ।

ಯಜ್ಞೇನ ಯಜ್ಞಮವ ಯಜ್ಞಿಯಃ ಸನ್ಯಜ್ಞಸ್ತೇ ವಜ್ರಮಹಿಹತ್ಯ ಆವತ್ ॥ ೧೨ ||

ಪದಪಾಠಃ

ಯಜ್ಞಃ | ಹಿ | ತೇ | ಇಂದ್ರ | ವರ್ಧನಃ | ಭೂತ್ | ಉತ | ಪ್ರಿಯಃ | ಸುತಽಸೋಮಃ | ಮಿಯೇಧಃ |

ಯಜ್ಞೇನ | ಯಜ್ಞಂ | ಅವ | ಯಜ್ಞಿಯಃ | ಸನ್ | ಯಜ್ಞಃ | ತೇ | ವಜ್ರಂ | ಅಹಿಽಹತ್ಯೇ | ಆವತ್ ||

ಸಾಯಣಭಾಷ್ಯಂ

ಹೇ ಇಂದ್ರ ಅಸ್ಮದೀಯೋ ಯಜ್ಞಸ್ತೇ ತವ ವರ್ಧನೋ ಹವಿಷ್ಪ್ರದಾನೇನ ವರ್ಧಯಿತಾ ಭೂದ್ಧಿ | ಭವತಿ ಖಲು | ಉತ ಅಪಿ ಚ ಸುತಸೋಮೋಽಭಿಷುತಸೋಮವಾನ್ಮಿಯೇಧೋ ಯಜ್ಞಸ್ತವ ಪ್ರಿಯಃ | ಸ ತ್ವಂ ಯಜ್ಞಿಯೋ ಯಜ್ಞಾರ್ಹಃ ಸನ್ ಯಜ್ಞಂ ಯಜ್ಞಸ್ಯ ಕರ್ತಾರಂ ಯಜಮಾನಂ ಯಜ್ಞೇನಾನುಷ್ಠೀಯಮಾನೇನಾನೇನಾವ | ಫಲಪ್ರದಾನೇನ ರಕ್ಷ | ಕಿಂಚಾಯಂ ಯಜ್ಞಸ್ತೇ ತವ ವಜ್ರಮಹಿಹತ್ಯೇ ವೃತ್ರಹನನೇ ಕರ್ಮಣ್ಯಾವತ್ | ರಕ್ಷತು || ವರ್ಧನಃ | ವೃಧು ವರ್ಧನ ಇತ್ಯಸ್ಯ ಣ್ಯಂತಸ್ಯ ನಂದ್ಯಾದಿತ್ವಾತ್ ಲ್ಯುಪ್ರತ್ಯಯಃ | ಲಿತ್ಸ್ವರಃ | ಭೂತ್ | ಹಿಯೋಗಾದನಿಘಾತಃ | ಅವ | ಅವತೇರ್ಲೋಟಿ ರೂಪಂ | ನಿಘಾತಃ | ಸನ್ | ಅಸೇಃ ಶತರಿ ರೂಪಂ | ಪ್ರತ್ಯಯಸ್ವರಃ | ಅಹಿಹತ್ಯೇ | ಹನ ಹಿಂಸಾಗತ್ಯೋರಿತ್ಯಸ್ಯ ಭಾವೇ ಹನಸ್ತ ಚೇತಿ ಕ್ಯಪ್ ತಕಾರಶ್ಚಾಂತಾದೇಶಃ | ಕೃದುತ್ತರಪದಸ್ವರಃ | ಆವತ್ | ಅವತೇಶ್ಛಾಂದಸೇ ಲಙಿ ರೂಪಂ | ನಿಘಾತಃ ||

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ | **ಯಜ್ಞಃ**—ಈ ಯಜ್ಞವು | **ತೇ**—ನಿನಗೆ | **ವರ್ಧನಃ**—ಶಕ್ತಿವರ್ಧಕವಾಗಿ | **ಭೂತ್ ಹಿ**—ಖಂಡಿತವಾಗಿ ಆಗುತ್ತದೆ | **ಉತ**—ಮತ್ತು | **ಸುತಸೋಮಃ**—ಹಿಂಡಿದ ಸೋಮವುಳ್ಳದ್ದೂ | **ಮಿಯೇಧಃ**—ಸಾರಭೂತವಾದುದೂ ಆದ ಈ ಯಜ್ಞವು | **ಪ್ರಿಯಃ**—ನಿನಗೆ ಅತ್ಯಂತ ಪ್ರಿಯಕರವಾಗಿದೆ | **ಯಜ್ಞಿಯಃ ಸನ್**—(ನೀನು) ಯಜ್ಞಾರ್ಹನಾಗಿದ್ದು | **ಯಜ್ಞಂ**—ಯಜ್ಞಕರ್ತನಾದ ಯಜಮಾನನನ್ನು | **ಯಜ್ಞೇನ**—ಈಗ ನೆರವೇರತಕ್ಕ ಯಜ್ಞದ ಸಹಾಯದಿಂದ | **ಅವ**—(ಫಲಪ್ರದಾತನಾಗಿ) ರಕ್ಷಿಸು | **ಯಜ್ಞಃ**—ಇದೇ ಯಜ್ಞವು | **ತೇ**—ನಿನ್ನ | **ವಜ್ರಂ**—ವಜ್ರಾಯುಧವನ್ನು | **ಅಹಿಹತ್ಯೇ**—ಅಸುರನನ್ನು ನಾಶಮಾಡುವ ಕಾಲದಲ್ಲಿ | **ಆವತ್**—ರಕ್ಷಿಸಲಿ.

ಭಾವಾರ್ಥ

**ಎಲೈ ಇಂದ್ರನೇ, ಈ ಯಜ್ಞವು ಖಂಡಿತವಾಗಿಯೂ ನಿನಗೆ ಶಕ್ತಿವರ್ಧಕವಾಗಿರುತ್ತದೆ. ಮತ್ತು ಸಾರಭೂತವಾದ ಈ ಯಜ್ಞದಲ್ಲಿ ಸೋಮರಸವನ್ನು ಹಿಂಡಿರುವುದರಿಂದ ಅದು ನಿನಗೆ ಪ್ರಿಯವಾಗಿದೆ. ಯಜ್ಞಾರ್ಹನಾದ ನೀನು ಈ ಯಜಮಾನನನ್ನು ರಕ್ಷಿಸು. ಮತ್ತು ಇದೇ ಯಜ್ಞವು ಅಸುರರನ್ನು ನಾಶಮಾಡುವ ಕಾಲದಲ್ಲಿ ನಿನ್ನ ವಜ್ರಾಯುಧವನ್ನು ರಕ್ಷಿಸಲಿ.**

## English Translation

This our sacrifice, Indra, is your augmentation, for the rite in which the Soma is effused is acceptable to you: you who are deserving of worship protect the worshipper by (the efficacy of) the worship, and may this sacrifice strengthen your thundebolt for the slaying of Ahi.

ಸಂಹಿತಾಪಾಠಃ

ಯಜ್ಞೇನೇಂದ್ರಮವಸಾ ಚಕ್ರೇ ಅರ್ವಾಗೈನಂ ಸುಮ್ನಾಯ ನವ್ಯಸೇ ವವೃತ್ಯಾಂ ।
ಯಃ ಸ್ತೋಮೇಭಿರ್ವಾವೃಧೇ ಪೂರ್ವ್ಯೇಭಿರ್ಯೋ ಮಧ್ಯಮೇಭಿರುತ ನೂತನೇಭಿಃ ॥

ಪದಪಾಠಃ

ಯಜ್ಞೇನ । ಇಂದ್ರಂ । ಅವಸಾ । ಆ । ಚಕ್ರೇ । ಅರ್ವಾಕ್ । ಆ । ಏನಂ । ಸುಮ್ನಾಯ । ನವ್ಯಸೇ । ವವೃತ್ಯಾಂ ।
ಯಃ । ಸ್ತೋಮೇಭಿಃ । ವವೃಧೇ । ಪೂರ್ವ್ಯೇಭಿಃ । ಯಃ । ಮಧ್ಯಮೇಭಿಃ । ಉತ । ನೂತನೇಭಿಃ ॥ ೧೩॥

ಸಾಯಣಭಾಷ್ಯಂ

ಹೇ ಇಂದ್ರ ಸರ್ವೋ ಯಜಮಾನೋಽವಸಾ ಸ್ವರಕ್ಷಕೇಣ ಯಜ್ಞೇನೇಂದ್ರಂ ತ್ವಾಮರ್ವಾಗಾಚಕ್ರೇ । ಹವಿಷ್ಪ್ರದಾನೇನಾಭಿಮುಖಂ ಕರೋತಿ । ತಥಾಹಂ ನವ್ಯಸೇ ನವತರಾಯ ಸುಮ್ನಾಯ ಧನಾಯೈನಂ ತ್ವಾಮಾ ವವೃತ್ಯಾಂ । ಯಜ್ಞೇನಾವೃತ್ತಂ ಮದಭಿಮುಖಂ ಕುರ್ಯಾಂ । ಕೀದೃಶಸ್ತ್ವಂ । ಯಃ ಪೂರ್ವ್ಯೇಭಿಃ ಪುರಾತನೈಃ ಸ್ತೋಮೇಭಿಃ ಸ್ತೋತ್ರೈರ್ವವೃಧೇ । ತಥಾ ಯ ಇಂದ್ರೋ ಮಧ್ಯಮೇಭಿರ್ಮಧ್ಯೇ ಭವೈಃ ಸ್ತೋತ್ರೈರುತಾಪಿ ಚ ನೂತನೇಭಿರಸ್ಮಾಭಿಃ ಕ್ರಿಯಮಾಣೈರಧುನಾತನೈಃ ಸ್ತೋತ್ರೈರ್ವರ್ಧತೇ ॥ ಚಕ್ರೇ । ಕರೋತೇರ್ಲಿಟಿ ರೂಪಂ । ನವ್ಯಸೇ । ನವಶಬ್ದಾದೀಯಸುನಿ ಭಸಂಜ್ಞಾಯಾಮಕಾರಲೋಪ ಈಕಾರಲೋಪಶ್ಛಾಂದಸಃ । ನಿತ್ತ್ವಾದಾದ್ಯುದಾತ್ತಃ । ವವೃತ್ಯಾಂ । ವೃತು ವರ್ತನೇ । ಲಿಙಿ ಬಹುಲಂ ಛಂದಸೀತಿ ಶಪಃ ಶ್ಲುಃ । ವ್ಯತ್ಯಯೇನ ಪರಸ್ಮೈಪದಂ । ನಿಘಾತಃ । ವವೃಧೇ । ವೃಧು ವರ್ಧನ ಇತ್ಯಸ್ಯ ಲಿಟಿ ರೂಪಂ । ಪ್ರತ್ಯಯಸ್ವರಃ । ಮಧ್ಯಮೇಭಿಃ । ಮಧ್ಯಶಬ್ದಾತ್ ಶೈಷಿಕಾರ್ಥೇ ಮಧ್ಯಾನ್ಮಃ । ಪಾ, ೪-೩-೮ । ಇತಿ ಮಪ್ರತ್ಯಯಃ । ಪ್ರತ್ಯಯಸ್ವರಃ । ನೂತನೇಭಿಃ । ನವಶಬ್ದಸ್ಯ ತ್ನಪ್ತ್ನಸ್ಖಾಶ್ಚ ಪ್ರತ್ಯಯಾ ವಕ್ತವ್ಯಾ ನೂ ಇತ್ಯಾದೇಶಶ್ಚೇತಿ ತನಪ್ರತ್ಯಯೋ ನೂ ಇತ್ಯಾದೇಶಶ್ಚ ॥

ಪ್ರತಿಪದಾರ್ಥ

ಅವಸಾ—(ಸಕಲ ಯಜ್ಞಕರ್ತರೂ ಸಹ) ಸ್ವರಕ್ಷಕವಾದ । ಯಜ್ಞೇನ—ಯಜ್ಞದಿಂದ । ಇಂದ್ರಂ—ಪ್ರಭುವಾದ ನಿನ್ನನ್ನು । ಅರ್ವಾಕ್—ತಮ್ಮ ಅಭಿಮುಖವಾಗಿರುವಂತೆ । ಆ ಚಕ್ರೇ—ಮಾಡಿಕೊಳ್ಳುತ್ತಾರೆ (ಅದ

ರಂತೆಯೇ ನಾನೂ ಸಹ) | **ನವ್ಯಸೇ**—ನೂತನವಾದ | **ಸುಮ್ನಾಯ**—ಧನಕ್ಕಾಗಿ | **ಏನಂ**—ಇಂದ್ರನಾದ ನಿನ್ನನ್ನು | **ಆ ವವೃತ್ಯಾಂ**—(ನನ್ನ) ಅಭಿಮುಖನಾಗುವಂತೆ ಮಾಡುತ್ತೇನೆ | **ಯಃ**—ಯಾವ ನೀನು | **ಪೂರ್ವ್ಯೇಭಿಃ**—ಪುರಾತನಗಳಾದ | **ಸ್ತೋಮೇಭಿಃ**-ಸ್ತೋತ್ರಗಳಿಂದ | **ವವೃಧೇ**—ವೃದ್ಧಿಯನ್ನು ಹೊಂದುತ್ತೀಯೋ (ಅದರಂತೆಯೇ)| **ಮಧ್ಯಮೇಭಿಃ**—ಮಾಧ್ಯಮಿಕವಾದ ಸ್ತುತಿಗಳಿಂದಲೂ | **ಉತ**—ಮತ್ತು | **ನೂತನೇಭಿಃ**—ನಾವು ಮಾಡುತ್ತಿರುವ ಈ ನೂತನವಾದ ಸ್ತುತಿಗಳಿಂದಲೂ ಸಹ ವೃದ್ಧಿಯನ್ನು ಪಡೆಯುತ್ತೀಯೆ.

ಭಾವಾರ್ಥ

ಎಲೈ ಇಂದ್ರನೇ, ಸಕಲ ಯಜ್ಞಕರ್ತರೂ ಸಹ ಸ್ವರಕ್ಷಕವಾದ ಯಜ್ಞದಿಂದ ಪ್ರಭುವಾದ ನಿನ್ನನ್ನು ತಮ್ಮ ಅಭಿಮುಖವಾಗಿರುವಂತೆ ಮಾಡಿಕೊಳ್ಳುತ್ತಾರೆ. ಅದರಂತೆಯೇ ನಾನೂ ಸಹ ನೂತನವಾದ ಧನದ ಲಾಭಕ್ಕಾಗಿ ಇಂದ್ರನಾದ ನಿನ್ನನ್ನು ನನ್ನ ಅಭಿಮುಖನಾಗುವಂತೆ ಮಾಡಿಕೊಳ್ಳುತ್ತೇನೆ. ನೀನು ಪುರಾತನವಾದ ಸ್ತುತಿಗಳಿಂದಲೂ, ಮಧ್ಯಮವಾದ ಮತ್ತು ಅದರಂತೆಯೇ ನೂತನವಾದ ಸ್ತುತಿಗಳಿಂದಲೂ ಸಹ ವೃದ್ಧಿಯನ್ನು ಹೊಂದುತ್ತೀಯೆ.

English Translation

The worshipper, by his conservatory sacrifice, has made Indra present : may I bring him to my presence to obtain new wealth, him who has been exalted by praises, whether ancieut, mediæval, or recent.

ಸಂಹಿತಾಪಾಠಃ

ವಿವೇಷ ಯನ್ಮಾ ಧಿಷಣಾ ಜಜಾನ ಸ್ತವೈ ಪುರಾ ಪಾರ್ಯಾದಿಂದ್ರ ಮಹ್ನಃ ।
ಅಂಹಸೋ ಯತ್ರ ಪೀಪರದ್ಯಥಾ ನೋ ನಾವೇವ ಯಾಂತಮುಭಯೇ ಹವಂತೇ ॥

ಪದಪಾಠಃ

ವಿವೇಷ | ಯತ್ | ಮಾ | ಧಿಷಣಾ | ಜಜಾನ | ಸ್ತವೈ | ಪುರಾ | ಪಾರ್ಯಾತ್ | ಇಂದ್ರಂ | ಅಹ್ನಃ |
ಅಂಹಸಃ | ಯತ್ರ | ಪೀಪರತ್ | ಯಥಾ | ನಃ | ನಾವಾಽಇವ | ಯಾಂತಂ | ಉಭಯೇ | ಹವಂತೇ ||

ಸಾಯಣಭಾಷ್ಯಂ

ಯದ್ಯದಾ ಧಿಷಣೇಂದ್ರಂ ಸ್ತವಾನೀತಿ ಮದೀಯಾ ಬುದ್ಧಿರ್ಮಾಂ ವಿವೇಷ ವ್ಯಾಪ್ನೋತ್ ತದಾಹಂ ಸ್ತೋತ್ರಂ ಜಜಾನ | ಕರೋಮಿ | ಬುದ್ಧೇಃ ಸ್ವರೂಪಂ ದರ್ಶಯತಿ | ಅಹಂ ಪಾರ್ಯಾತ್ಪಾರೇ ಭವಾದತಿ-ದೂರವರ್ತಿನೋ ವಿಘ್ನಕಾರಿಣೋಽಹ್ನಃ ಪುರಾ ಪೂರ್ವಂ ಸ್ತವೈ | ಸ್ತವಾನಿ | ಯತ್ರ ಯಸ್ಯಾಂ ಧಿಷಣಾ-ಯಾಮೇವ ಜಾತಾಯಾಂ ಸತ್ಯಾಂ ಸ ಇಂದ್ರೋ ನೋಽಸ್ಮಾನಂಹಸಃ ಪಾಪರೂಪಾದ್ದಾರಿದ್ರ್ಯಾದ್ಯಥಾ ಪೀಪರತ್ ಯಥಾ ಪಾರಂ ನಯೇತ್ ತಥಾಸ್ಮದುಭಯಪಾರ್ಶ್ವವರ್ತಿಧನಾರ್ಥಿನೋ ಜನಾ ಹವಂತೇ | ಆಹ್ವಯಂತಿ | ತತ್ರ ದೃಷ್ಟಾಂತಃ | ನಾವೇವ ಯಾಂತಂ | ಯಥಾ ನದ್ಯಾದಿಷು ನೌಕಯಾ ಯಾಂತಂ

**ಗಚ್ಛಂತಂ ಪುರುಷಮುಭಯ ಉಭಯಕೂಲವರ್ತಿನೋ ಜನಾ ಹವಂತೇ । ಆಹ್ವಯಂತಿ । ತದ್ವತ್ ॥ ವಿವೇಷ। ವಿಶ್ಲೃ ವ್ಯಾಪ್ತಾವಿತ್ಯಸ್ಯ ಲಿಟಿ ಣಲಿ ರೂಪಂ। ಲಿತ್ಸ್ವರಃ। ಜಜಾನ। ಜನ ಜನನ ಇತ್ಯಸ್ಯ ಲಿಟ್ಯು- ತ್ತಮೇ ಣಲಿ ರೂಪಂ। ವಾಕ್ಯಭೇದಾದನಿಘಾತಃ। ಅಂಹಸಃ। ಅಮ ಗತ್ಯಾದಿಷು। ಅಮೇರ್ಹುಕ್ ಚ। ಉ. ೪-೨೧೨। ಇತ್ಯಸುನ್ಪ್ರತ್ಯಯೋ ಹುಗಾಗಮಶ್ಚ। ನಿತ್ಸ್ವರಃ। ಪೀಪರತ್। ಪೄ ಪಾಲನಪೂರಣಯೋ- ರಿತ್ಯಸ್ಯ ಲುಙಿ ಚಙಿ ಹ್ರಸ್ವಾಭ್ಯಾಸೇತ್ವದೀರ್ಘಗುಣಾಃ। ಯಥಾಯೋಗಾದನಿಘಾತಃ। ಲಿತ್ಸ್ವರಃ। ನಾ- ವೇವ। ನುದ ಪ್ರೇರಣ ಇತ್ಯಸ್ಮಾದ್ಗ್ಲಾನುದಿಭ್ಯಾಂ ಡೌಃ। ಉ. ೨-೬೪। ಇತಿ ಡೌಪ್ರತ್ಯಯಃ। ನುದ್ಯತೇ ಇತಿ ನೌಃ ಪ್ಲವಃ। ಸಾವೇಕಾಚ ಇತಿ ತೃತೀಯಾಯಾ ಉದಾತ್ತತ್ವಂ। ಇವೇನ ನಿತ್ಯಸಮಾಸೋ ವಿಭಕ್ತ್ಯ- ಲೋಪ ಇತ್ಯಾದಿ। ಉಭಯೇ। ಉಭಶಬ್ದಾತ್ಪರಸ್ಯ ತಯಪ ಉಭಾದುದಾತ್ತೋ ನಿತ್ಯಂ। ಪಾ. ೫-೨-೪೪। ಇತ್ಯಯಜಾದೇಶಃ। ವಚನಸಾಮರ್ಥ್ಯಾದಾದೇರುದಾತ್ತತ್ವಂ। ಹವಂತೇ। ಹ್ವಯತೇರ್ಲಟಿ ರೂಪಂ॥**

### ಪ್ರತಿಪದಾರ್ಥ

**ಯತ್**—ಯಾವಾಗ। **ಧಿಷಣಾ**—ಇಂದ್ರನನ್ನು ಸ್ತುತಿಸಬೇಕೆಂಬ ಬುದ್ಧಿಯು। **ವಿವೇಷ**—ನನ್ನನ್ನು ಪ್ರವೇಶಿಸಿತೋ (ಆ ಒಡನೆಯೇ)। **ಜಜಾನ**—(ಇಂದ್ರನನ್ನು ಸ್ತುತಿಸುವ ಸ್ತೋತ್ರವನ್ನು) ನಿರ್ಮಿಸುತ್ತೇನೆ। **ಪಾರ್ಯಾತ್**—ಅತಿದೂರದಲ್ಲಿದ್ದರೂ ಸಹ। **ಅಹ್ನಃ**—ವಿಘ್ನಕಾರಿಗಳಾದ ದಿವಸಗಳು (ಪ್ರಾಪ್ತವಾಗುವುದಕ್ಕೆ)। **ಪುರಾ**—ಪೂರ್ವಭಾವಿಯಾಗಿಯೇ। **ಸ್ತವೈ**—(ಇಂದ್ರನನ್ನು) ಸ್ತುತಿಸುತ್ತೇನೆ। **ಉಭಯೇ**—ಎರಡು ದಡಗಳಲ್ಲೂ ಇರುವ ಜನರು। **ನಾವೇವ ಯಾಂತಂ**—ದೋಣಿಯಲ್ಲಿ ಹೋಗುತ್ತಿರುವವನನ್ನು ಆದರಿಸಿ ಕರೆಯುವಂತೆ, (ನಾವೂ ಸಹ)। **ಯತ್ರ**—ಯಾವ ಸ್ತುತಿರೂಪವಾದ ಬುದ್ಧಿಯು ಉತ್ಪನ್ನವಾದೊಡನೆಯೇ। **ನಃ**—ನಮ್ಮನ್ನು। **ಅಂಹಸಃ**—ಪಾಪ ದಿಂದ। **ಯಥಾ**—ಯಾವ ರೀತಿಯಲ್ಲಿ। **ಪೀಪರತ್**—ಬಿಡಿಸಿ ಸುಖಿಗಳನ್ನಾಗಿ ಮಾಡುತ್ತಾನೆಯೋ ಆರೀತಿ। **ಹವಂತೇ**—ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತಾರೆ.

### ಭಾವಾರ್ಥ

ಯಾವಾಗ ಇಂದ್ರನನ್ನು ಸ್ತುತಿಸಬೇಕೆಂಬ ಬುದ್ಧಿಯು ನನ್ನನ್ನು ಪ್ರವೇಶಿಸಿತೋ, ಆ ಒಡನೆಯೇ ಇಂದ್ರ ಪರವಾದ ಸ್ತುತಿಯನ್ನು ನಿರ್ಮಿಸುತ್ತೇನೆ. ವಿಘ್ನಕಾರಿಗಳಾದ ದಿನಗಳು ಅತಿದೂರದಲ್ಲಿದ್ದರೂ ಸಹ ಅವುಗಳು ಪ್ರಾಪ್ತ ವಾಗುವುದಕ್ಕೆ ಪೂರ್ವಭಾವಿಯಾಗಿಯೇ ಇಂದ್ರನನ್ನು ಸ್ತುತಿಸುತ್ತೇನೆ. ಎರಡು ದಡಗಳಲ್ಲಿಯೂ ಇರುವ ಜನರು ದೋಣಿಯಲ್ಲಿ ಹೋಗುತ್ತಿರುವವನನ್ನು ಆದರಿಸಿ ಕರೆಯುವಂತೆ ನಮ್ಮ ಉಭಯಪಾರ್ಶ್ವಗಳಲ್ಲಿರುವ ಸಕಲರೂ ಸಹ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತಾರೆ.

## English Translation

When the thought of glorifying Indra entered my mind, then I gave birth (to his praises): may I laud him before encountering distant (evil) days, whereby he may guide us beyond sin; for those on both sides of us invoke him, as (those on either bank of a river hail) a passenger in a boat.

———

ಸಂಹಿತಾಪಾಠಃ

ಆಪೂರ್ಣೋ ಅಸ್ಯ ಕಲಶಃ ಸ್ವಾಹಾ ಸೇಕ್ತೇವ ಕೋಶಂ ಸಿಸಿಚೇ ಪಿಬಧ್ಯೈ ।
ಸಮು ಪ್ರಿಯಾ ಆವವೃತ್ರನ್ಮದಾಯ ಪ್ರದಕ್ಷಿಣಿದಭಿ ಸೋಮಾಸ ಇಂದ್ರಂ ॥ ೧೫ ॥

ಪದಪಾಠಃ

ಆಽಪೂರ್ಣಃ । ಅಸ್ಯ । ಕಲಶಃ । ಸ್ವಾಹಾ । ಸೇಕ್ತಾಽಇವ । ಕೋಶಂ । ಸಿಸಿಚೇ । ಪಿಬಧ್ಯೈ ।
ಸಂ । ಊಂ ಇತಿ । ಪ್ರಿಯಾಃ । ಆ । ಅವವೃತ್ರನ್ । ಮದಾಯ । ಪ್ರಽದಕ್ಷಿಣಿತ್ । ಅಭಿ । ಸೋ-ಮಾಸಃ । ಇಂದ್ರಂ ॥ ೧೫ ॥

ಸಾಯಣಭಾಷ್ಯಂ

ಮಾಧ್ಯಂದಿನೇ ಸವನ ಆಗ್ನೀಧ್ರೀಯಸ್ಯ ಆಪೂರ್ಣೋ ಅಸ್ಯೇತಿ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಆಪೂರ್ಣೋ ಅಸ್ಯಕಲಶಃ ಸ್ವಾಹೇತಿ ಮಾಧ್ಯಂದಿನ್ಯಃ । ಆ. ೫-೫ । ಇತಿ ॥

ಹೇ ಇಂದ್ರ ಅಸ್ಯ ತವ ಪಾನಾರ್ಥಂ ಕಲಶೋ ದ್ರೋಣಕಲಶಃ ಸೋಮೇನಾಪೂರ್ಣಃ । ಸ್ವಾಹಾ ಸ್ವಾಹಾಕೃತೋ ದತ್ತಶ್ಚ ಸೋಮಸಹಿತಃ ಕಲಶಃ ಪಿಬಧ್ಯೈ ತವ ಪಾನಾರ್ಥಂ । ಸಿಸಿಚೇ । ತಂ ಸೋಮಂ ಚೋದಿತಾಧಾರೇ ಸಿಂಚಾಮಿ । ತತ್ರ ದೃಷ್ಟಾಂತಃ । ಕೋಶಂ ಸೇಕ್ತೇವ । ಯಥಾ ಸೇಕ್ತೋತ್ಸೇಚಕೋ ಜಲಪೂರ್ಣಾತ್ಕೋಶಾತ್ ದೃತೇಃ ಸಕಾಶಾಜ್ಜಲಂ ಪಾತ್ರಾಂತರೇ ಸಿಂಚತಿ ತದ್ವತ್। ಪ್ರಿಯಾಃ ಸ್ವಾದುತಮಾಃ ಸೋಮಾಸೋ ದತ್ತಾಸ್ತೇ ಸೋಮಾ ಇಂದ್ರಂ ತ್ವಾಮಭಿ ಅಭಿಲಕ್ಷ್ಯೈವ ಮದಾಯ ತವ ಹರ್ಷಾರ್ಥಂ ಪ್ರ-ದಕ್ಷಿಣಿತ್ ಪ್ರಾದಕ್ಷಿಣ್ಯೇನ ಸಮಾವವೃತ್ರನ್ । ಸಮ್ಯಗಾವೃತ್ಯ ವರ್ತಂತಾಂ ॥ ಆಪೂರ್ಣಃ । ಪೃ ಪಾಲನ-ಪೂರಣಯೋರಿತ್ಯಸ್ಯ ಕರ್ಮಣಿ ನಿಷ್ಠಾ । ರದಾಭ್ಯಾಮಿತಿ ತಸ್ಯ ನತ್ವಂ । ಗತಿರನಂತರ ಇತಿ ಗತಿಸ್ವರಃ । ಸ್ವಾಹಾ । ನಿಪಾತತ್ವಾದಾದ್ಯುದಾತ್ತಃ । ಸೇಕ್ತೇವ ಕೋಶಂ । ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ । ಸಿಸಿಚೇ । ಷಿಚ ಕ್ಷರಣ ಇತ್ಯಸ್ಯ ಲಿಟಿ ರೂಪಂ । ಪಿಬಧ್ಯೈ । ಪಾ ಪಾನ ಇತ್ಯಸ್ಯ ತುಮರ್ಥೇ ಶಧ್ಯೈನ್ಪ್ರ-ತ್ಯಯಃ । ಶಿತ್ತ್ವಾತ್ಪಿಬಾದೇಶಃ । ನಿತ್ತ್ವಾದಾದ್ಯುದಾತ್ತಃ । ಅವವೃತ್ರನ್ । ವೃತು ವರ್ತನ ಇತ್ಯಸ್ಯ ಲಙಿ ಶಪ್ । ಬಹುಲಂ ಛಂದಸೀತಿ ತಸ್ಯ ಶಪಃ ಶ್ಲುಃ । ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಝೋ ರುಡಾಗಮಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಅಸ್ಯ—ನಿನ್ನ (ಪಾನಕ್ಕಾಗಿ) । ಕಲಶಃ—ದ್ರೋಣಕಲಶವು । ಆಪೂರ್ಣಃ—(ಸೋಮ ರಸದಿಂದ) ತುಂಬಿದೆ । ಕೋಶಂ—ಜಲಪೂರ್ಣವಾದ ಚೀಲದಿಂದ । ಸೇಕ್ತೇವ—ನೀರು ತುಂಬುವವನು ಬೇರೆ ಪಾತ್ರೆಗೆ ನೀರನ್ನು ಸುರಿಯುವಂತೆ । ಪಿಬಧ್ಯೈ—ನಿನ್ನ ಪಾನಕ್ಕಾಗಿ । ಸಿಸಿಚೇ—ಸೋಮರಸವು ಸುರಿಯಲ್ಪಡುತ್ತದೆ। ಪ್ರಿಯಾಃ—ಮಧುರವಾದ । ಸೋಮಾಸಃ—ಸೋಮರಸಗಳು । ಇಂದ್ರಂ—ಪ್ರಭುವಾದ ನಿನ್ನನ್ನು। ಅಭಿ—ಉದ್ದೇ

ಶಿಸಿ | ಮದಾಯ—(ನಿನ್ನ) ಹರ್ಷಕ್ಕಾಗಿ | ಪ್ರದಕ್ಷಿಣಿತ್—ಪ್ರದಕ್ಷಿಣಪೂರ್ವಕವಾಗಿ | ಸಂ ಆವವೃತ್ರನ್—ಸುತ್ತಲೂ ತುಂಬಿ ಹರಡಿವೆ.

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಪಾನಕ್ಕಾಗಿ ದ್ರೋಣಕಲಶವು ಸೋಮರಸದಿಂದ ತುಂಬಿದೆ. ಜಲಪೂರ್ಣವಾದ ಚೀಲದಿಂದ ನೀರು ತುಂಬುವವನು ಪ್ರಭೂತವಾದ ಉದಕವನ್ನು ಬೇರೆ ಪಾತ್ರೆಗೆ ಸುರಿಯುವಂತೆ ನಿನ್ನ ಪಾನಕ್ಕಾಗಿ ಸೋಮರಸವು ಸುರಿಯಲ್ಪಡುತ್ತದೆ. ಮಧುರವಾದ ಸೋಮರಸಗಳು ಪ್ರಭುವಾದ ನಿನ್ನನ್ನು ಉದ್ದೇಶಿಸಿ ನಿನ್ನ ಹರ್ಷಕಾರಕಗಳಾಗಿ ನಿನ್ನ ಸುತ್ತಲೂ ತುಂಬಿ ಹರಡಿದೆ.

English Translation

The vase is filled for him (with Soma); welcome Indra: I pour it out for you to drink, as a water-carrier (pours water) from his bag: may the grateful Soma juice flow in reverence round Indra for his exhilaration.

ವಿಶೇಷವಿಷಯಗಳು

ಮಾಧ್ಯಂದಿನಸವನಕಾಲದಲ್ಲಿ ಆಗ್ನೀಧ್ರನೆಂಬ ಋತ್ವಿಜನು ಪಠಿಸಬೇಕಾದ ಪ್ರಸ್ಥಿತಯಾಜ್ಯಾಮಂತ್ರಕ್ಕಾಗಿ ಆಪೂರ್ಣೋ ಅಸ್ಯ ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ-ಆಪೂರ್ಣೋ ಅಸ್ಯ ಕಲಶಃ ಸ್ವಾಹೇತಿ ಮಾಧ್ಯಂದಿನ್ಯಃ ಎಂಬ ಸೂತ್ರದಿಂದ (ಆ. ೫-೫) ವಿಸ್ತೃತವಾಗಿರುವುದು.

ಸಂಹಿತಾಪಾಠಃ

ನ ತ್ವಾ ಗಭೀರಃ ಪುರುಹೂತ ಸಿಂಧುರ್ನಾದ್ರಯಃ ಪರಿ ಷಂತೋ ವರಂತ |
ಇತ್ಥಾ ಸಖಿಭ್ಯ ಇಷಿತೋ ಯದಿಂದ್ರಾ ದೃಳ್ಹಂ ಚಿದರುಜೋ ಗವ್ಯಮೂರ್ವಂ ||೧೬||

ಪದಪಾಠಃ

ನ | ತ್ವಾ | ಗಭೀರಃ | ಪುರುऽಹೂತ | ಸಿಂಧುಃ | ನ | ಅದ್ರಯಃ | ಪರಿ | ಸಂತಃ | ವರಂತ |
ಇತ್ಥಾ | ಸಖಿऽಭ್ಯಃ | ಇಷಿತಃ | ಯತ್ | ಇಂದ್ರ | ಆ | ದೃಳ್ಹಂ | ಚಿತ್ | ಅರುಜಃ | ಗವ್ಯಂ | ಊರ್ವಂ ||

ಸಾಯಣಭಾಷ್ಯಂ

ಹೇ ಪುರುಹೂತೇಂದ್ರ ಗಭೀರೋ ಗಂಭೀರಃ ಸಿಂಧುಃ ಸಮುದ್ರಸ್ತ್ವಾ ತ್ವಾಂ ನ ವಾರಯತಿ | ತಥಾ ಪರಿ ಪರಿತೋ ವರ್ತಮಾನಾಃ ಸಂತೋಽದ್ರಯಃ ಶೈಲಾಸ್ತ್ವಾಂ ನ ವರಂತ | ನ ವಾರಯಂತಿ | ಕಿಂತು ತ್ವಾಮನುಸೃತ್ಯ ವರ್ತಂತೇ | ಯದ್ಯಸ್ಮಾದಿತ್ಥೇತ್ಥಮನೇನ ಪ್ರಕಾರೇಣ ಸಖಿಭ್ಯಃ ಸಖಿಭಿರ್ದೇವೈರಿಷಿತಃ ಪ್ರಾರ್ಥಿತಸ್ತ್ವಂ ದೃಳ್ಹಂ ಚಿದತಿಪ್ರಬಲಮಪಿ ಗವ್ಯಂ ಗವಿ ಭವಮವಟೇ ವರ್ತಮಾನಮೂರ್ವಮೂರ್ವಾ-

ನಲಮಾರುಜಃ । ಸಮ್ಯಗಭಾಂಕ್ಷೀಃ ॥ ಗಭೀರಃ ಗಾಧ್ಯ ಪ್ರತಿಷ್ಠಾಲಿಪ್ಸಯೋರ್ಗ್ರಂಥೇ ಚ । ಅಸ್ಮಾದೀರಚ್‌ಪ್ರತ್ಯಯಃ । ಧಕಾರಸ್ಯ ಭಕಾರ ಆಕಾರಸ್ಯ ಹ್ರಸ್ವಶ್ಚ ಗಭೀರಗಂಭೀರೌ । ಉ. ೪-೩೫ । ಇತ್ಯನೇನ ನಿಪಾತ್ಯತೇ । ಚಿತ್ಸ್ವರಃ । ಸಿಂಧುಃ । ಸ್ಯಂದೂ ಪ್ರಸ್ರವಣೇ । ಸ್ಯಂದೇಃ ಸಂಪ್ರಸಾರಣಂ ಧಶ್ಚೇತ್ಯುಪ್ರತ್ಯಯಃ ಸಂಪ್ರಸಾರಣಂ ದಕಾರಸ್ಯ ಧಕಾರಃ । ನಿದಿತ್ಯನುವೃತ್ತೇರಾದ್ಯುದಾತ್ತಃ । ಪರಿ ಷಂತಃ । ಸಂತಃ । ಅಸ್ತೇಃ ಶತರಿ ರೂಪಂ । ಉಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್‌ಪರ ಇತಿ ಷತ್ವಂ । ಕೇಚಿತ್ಪರೇಃ ಕ್ರಿಯಾನ್ವಯಮಿಚ್ಛಂತಿ । ತದಾ ಷತ್ವಮನುಪಪನ್ನಂ । ಪರಿ । ನಿಪಾತಸ್ವರಃ । ಸಂತಃ । ಪ್ರತ್ಯಯಸ್ವರಃ । ವರಂತ । ವೃಞ್ ವರಣೇ । ಭೌವಾದಿಕಃ । ಲಙಿ ರೂಪಂ । ನಿಘಾತಃ । ಅರುಜಃ । ರುಜೋ ಭಂಗ ಇತ್ಯಸ್ಯ ಲಙಿ ರೂಪಂ । ಗವ್ಯಂ । ಗೋರ್ವಿಕಾರ ಇತ್ಯರ್ಥೇ ಗೋಪಯಸೋರ್ಯದಿತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ಪುರುಹೂತ**—ಅನೇಕರಿಂದ ಅಪೇಕ್ಷಿಸಲ್ಪಡುವ । **ಇಂದ್ರ**—ಇಂದ್ರನೇ । **ಗಭೀರಃ**—ಬಹಳ ಆಳವಾದ । **ಸಿಂಧುಃ**—ಸಮುದ್ರವು । **ತ್ವಾ**—ನಿನ್ನನ್ನು । **ನ**—ತಡೆಯುವುದಿಲ್ಲ । **ಪರಿ ಸಂತಃ**—ಸುತ್ತಲೂ ವ್ಯಾಪಿಸಿರುವ । **ಅದ್ರಯಃ**—ಪರ್ವತಗಳೂ । **ನ ವರಂತ**—ತಡೆಯಲಾರವು । **ಯತ್**—ಆದುದರಿಂದಲೇ । **ಇತ್ಥಾ**—ಈ ಪ್ರಕಾರವಾಗಿ । **ಸಖಿಭ್ಯಃ**—ಮಿತ್ರರುಗಳಿಂದ । **ಇಷಿತಃ**—ಪ್ರಾರ್ಥಿತನಾದ ನೀನು । **ದೃಳ್ಹಂ ಚಿತ್**—ಅತ್ಯಂತ ಪ್ರಬಲವಾಗಿದ್ದಾಗ್ಯೂ । **ಗವ್ಯಂ**—ಪರ್ವತದ ಗಾಢವಾದ ಗುಹೆಯಲ್ಲಿದ್ದ । **ಊರ್ವಂ**—ಕಾಳ್ಗಿಚ್ಚನ್ನು । **ಆ ಅರುಜಃ**—ಆರಿಸಿದೆ.

ಭಾವಾರ್ಥ

ಅನೇಕರಿಂದ ಅಪೇಕ್ಷಿಸಲ್ಪಡತಕ್ಕ ಎಲೈ ಇಂದ್ರನೇ, ಅತ್ಯಂತ ಆಳವಾಗಿರತಕ್ಕ ಸಮುದ್ರವಾಗಲಿ, ಅತ್ಯಂತ ಎತ್ತರವಾಗಿ ವ್ಯಾಪಿಸಿರುವ ಪರ್ವತವಾಗಲಿ ನಿನ್ನ ಪ್ರಸರಣವನ್ನು ತಡೆಯುವುದಿಲ್ಲ. ಆದುದರಿಂದಲೇ ಮಿತ್ರರುಗಳಿಂದ ಪ್ರಾರ್ಥಿತನಾದ ನೀನು ಅತ್ಯಂತ ಪ್ರಬಲವಾಗಿದ್ದಾಗ್ಯೂ ಸಹ ಪರ್ವತದ ಗಾಢವಾದ ಗುಹೆಯಲ್ಲಿದ್ದ ಕಾಳ್ಗಿಚ್ಚನ್ನು ಆರಿಸಿದೆ.

## English Translation

Invoked of many, the deep ocean arrests you not, nor do the accompanying mountains (stay you); and therefore, summoned by your friends, you have repressed the strong flame abiding in the abyss.

———

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।

ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಂ ॥೧೨॥

ಪದಪಾಠಃ

ಶುನಂ । ಹುವೇಮ । ಮಘ್ಽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃಽತಮಂ । ವಾಜ್ಽಸಾತೌ ।

ಶೃಣ್ವಂತಂ । ಉಗ್ರಂ । ಊತಯೇ । ಸಮತ್ಽಸು । ಘ್ನಂತಂ । ವೃತ್ರಾಣಿ । ಸಮ್ಽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ। ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋಽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮ್ಯಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ। ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾಭಾವಶ್ಛಾಂದಸಃ। ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚ ಲಿಙಿ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥ ॥ ೪ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ವಾಜಸಾತೌ**—ಅನ್ನಲಾಭಕ್ಕಾಗಿ ನಡೆಯತಕ್ಕ । **ಅಸ್ಮಿನ್ ಭರೇ**—ಈ ಸಂಗ್ರಾಮದಲ್ಲಿ । **ಶುನಂ**—ಶಕ್ತಿಯನ್ನು ತೋರಿಸತಕ್ಕವನೂ । **ಮಘವಾನಂ**—ಧನವಂತನೂ (ಸಹಾಯಕನೂ) । **ಇಂದ್ರಂ**—ಪ್ರಭುವಾದವನೂ । **ನೃತಮಂ**—ಮಾರ್ಗದರ್ಶಕನೂ । **ಶೃಣ್ವಂತಂ**—(ನಮ್ಮ ಸ್ತುತಿಯನ್ನು) ಕೇಳತಕ್ಕವನೂ । **ಉಗ್ರಂ**—(ಶತ್ರುಗಳಿಗೆ) ಭಯಂಕರನೂ । **ಸಮತ್ಸು**—ಸಂಗ್ರಾಮಗಳಲ್ಲಿ । **ವೃತ್ರಾಣಿ**—ಶತ್ರುಗಳನ್ನು । **ಘ್ನಂತಂ**—ಹಿಂಸಿಸುವವನೂ । **ಧನಾನಾಂ**—(ಶತ್ರುಗಳ) ಧನವನ್ನು । **ಸಂಜಿತಂ**—ಪೂರ್ಣವಾಗಿ ಜಯಿಸುವವನೂ ಆದ ನಿನ್ನನ್ನು । **ಊತಯೇ**—ರಕ್ಷಣಾರ್ಥವಾಗಿ । **ಹುವೇಮ**—ಕರೆಯುತ್ತೇವೆ.

ಭಾವಾರ್ಥ

**ಎಲೈ ಇಂದ್ರನೇ, ಅನ್ನಲಾಭಾರ್ಥವಾಗಿ ನಡೆಯತಕ್ಕ ಈ ಸಂಗ್ರಾಮದಲ್ಲಿ ಶಕ್ತಿಯನ್ನು ತೋರಿಸಿ ಸಹಾಯಕನಾಗಿರತಕ್ಕವನೂ ಧನವಂತನೂ, ಐಶ್ವರ್ಯಕ್ಕೆಲ್ಲಾ ಪ್ರಭುವಾಗಿರುವವನೂ, ಜಗತ್ತಿಗೆ ಅತ್ಯುತ್ತಮವಾದ ಮಾರ್ಗ**

ದರ್ಶಕನೂ, ನಮ್ಮ ಸ್ತುತಿಯನ್ನು ಆಲಿಸಿ ಕೇಳತಕ್ಕವನೂ, ಶತ್ರುಗಳಿಗೆ ಭಯಂಕರನೂ, ಸಂಗ್ರಾಮಗಳಲ್ಲಿ ಶತ್ರುಗಳನ್ನು ಹಿಂಸಿಸುವವನೂ, ಶತ್ರುಗಳ ಧನವನ್ನು ಪೂರ್ಣವಾಗಿ ಜಯಿಸುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ.

### English Translation

We Invoke for our protection the opulent Indra, distinguished in this combat, the leader in the food-bestowing (strife), hearing (our praises) terrible in battles, the destroyer of foes, the conqueror of wealth.

## ಮೂವತ್ತಮೂರನೆಯ ಸೂಕ್ತವು

### ಪೀಠಿಕೆ

ವಿಶ್ವಾಮಿತ್ರಋಷಿಯ ವಿಷಯವಾಗಿ ಯಾಸ್ಕರು ತಮ್ಮ ನಿರುಕ್ತದಲ್ಲಿ—

ವಿಶ್ವಾಮಿತ್ರಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ । ವಿಶ್ವಾಮಿತ್ರಃ ಸರ್ವಮಿತ್ರಃ । ಸರ್ವ ಸಂಸೃತಂ । ಸುದಾಃ ಕಲ್ಯಾಣದಾನಃ । ಪೈಜವನಃ ಪಿಜವನಸ್ಯ ಪುತ್ರಃ । ಪಿಜವನಃ ಪುನಃ ಸ್ಪರ್ಧನೀಯಜವೋ ವಾ ಮಿಶ್ರೀಭಾವಗತಿರ್ವಾ ॥ ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ । ಅನುಯಯುರಿತರೇ । ಸ ವಿಶ್ವಾಮಿತ್ರೋ ನದೀಸ್ತುಷ್ಟಾವ-ಗಾಧಾ ಭವತ ಇತಿ। ಅಪಿ ದ್ವಿವದಪಿ ಬಹುವತ್ ತದ್ಯದ್ದ್ವಿವದುಪರಿಷ್ಟಾತ್ತದ್ವ್ಯಾಖ್ಯಾಸ್ಯಾಮಃ ॥

(ನಿ, ೨-೨೪)

ಎಂದು ಒಂದು ಪೂರ್ವೇತಿಹಾಸವನ್ನು ಹೇಳಿರುವರು. ವಿಶ್ವಾಮಿತ್ರನೆಂದರೆ ಈ ಋಷಿಯು ಸಕಲರಿಗೂ ಸ್ನೇಹಿತನು ಅಥವಾ ಸಕಲರೂ ಇವನ ಸ್ನೇಹಿತರು ಎಂದು ವಿಶ್ವಾಮಿತ್ರಶಬ್ದದ ಅವಯವಾರ್ಥವು. ಈ ಋಷಿಯು ಪಿಜವನ ಪುತ್ರನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು. ಒಂದು ಸಮಯದಲ್ಲಿ ಆ ರಾಜನು ಕೊಟ್ಟ ಧನವನ್ನು ತೆಗೆದು ಕೊಂಡು ತನ್ನ ಆಶ್ರಮಕ್ಕೆ ಹೋಗಬೇಕೆಂದು ಹೊರಟು ವಿಪಾಟ್ ಮತ್ತು ಶತುದ್ರಿ ಎಂಬ ನದಿಗಳ (ಪಂಜಾಬಿನಲ್ಲಿರುವ ಈಗಿನ Beas and Sutlej ಎಂಬ ನದಿಗಳು) ಸಂಗಮಸ್ಥಾನಕ್ಕೆ ಬಂದನು. ಇವನಲ್ಲಿದ್ದ ದ್ರವ್ಯವನ್ನು ಅಪಹರಿಸ ಬೇಕೆಂದು ಕಳ್ಳರು ಇವನನ್ನನುಸರಿಸಿ ಬರುತ್ತಿದ್ದರು. ಇದನ್ನು ತಿಳಿದು ವಿಶ್ವಾಮಿತ್ರನು ಹೇಗಾದರೂ ಮಾಡಿ ದಾರಿಗೆ ಅಡ್ಡಲಾಗಿರುವ ಈ ನದಿಗಳನ್ನು ದಾಟಬೇಕೆಂದು ಪ್ರಯತ್ನಿಸಲು ಅವು ಪ್ರವಾಹದ ನೀರಿನಿಂದ ಬಹಳ ಆಳವಾಗಿದ್ದುದರಿಂದ ಸಾಧ್ಯವಾಗಲಿಲ್ಲ. ಆಗ ಋಷಿಯು ಈ ನದಿಗಳನ್ನು ಪ್ರಾರ್ಥಿಸುತ್ತಾ ತಮ್ಮ ನೀರನ್ನು ಕಡಿಮೆಮಾಡಿಕೊಂಡು ತಾನು ಹಾದುಹೋಗಲು ಅನುಕೂಲವಾಗುವಂತೆ ಮಾಡಬೇಕೆಂದು ಸ್ತೋತ್ರಮಾಡಿದನೆಂದು (ಋ. ಸಂ. ೩-೩೩) ನೆಯ ಸೂಕ್ತದಲ್ಲಿಯೂ ಋ. ಸಂ. ೩-೫೩ರಲ್ಲಿ ೯-೧೧ ಋಕ್ಕುಗಳಲ್ಲಿಯೂ ಹೇಳಿದೆ.

ಈ ವಿಶ್ವಾಮಿತ್ರಋಷಿಯು ಮೇಲಿನ ಸೂಕ್ತದಲ್ಲಿ ಎಂದರೆ ಋ. ಸಂ. ೩-೩೩-೫ ರಲ್ಲಿ ತಾನು ಕುಶಿಕನ ಮಗನೆಂದು ಹೇಳಿಕೊಂಡಿದಾನೆ. ವಿಶ್ವಾಮಿತ್ರನಿಗೂ ವಸಿಷ್ಠಋಷಿಗೂ ದ್ವೇಷಾಸೂಯೆಗಳಿದ್ದವೆಂದು ರಾಮಾಯಣ ಭಾರತ ಮತ್ತು ಇತರ ಪುರಾಣಗಳಲ್ಲಿ ಹೇಳಿದೆ. ಇದಕ್ಕೆ ಆಧಾರವೂ ಋಗ್ವೇದದಲ್ಲಿ ಕೆಲವುಕಡೆ ಇದೆ. ಅದನ್ನು ಈ ಭಾಗದ ಪೀಠಿಕೆಯಲ್ಲಿ ಚರ್ಚಿಸಲಾಗುವುದು.

## ವಿಶ್ವಾಮಿತ್ರನಿಗೂ ವಿಪಾಟ್ ಮತ್ತು ಶತುದ್ರಿನದಿಗಳಿಗೂ ನಡೆದ ಸಂಭಾಷಣೆ.

**ತ್ರಯೋವಿಂಶತಿರೈಂದ್ರಾಣಿ ಇಚ್ಛಂತೀತಿ ಪರಾಣ್ಯತಃ ।**
**ಸೂಕ್ತೇ ಪ್ರೇತಿ ತು ನದ್ಯಶ್ಚ ವಿಶ್ವಾಮಿತ್ರಃ ಸಮೂದಿರೇ ॥**

(ಬೃ. ದೇ. ೪-೧೦೫)

**ಇಚ್ಛಂತಿ** ಎಂಬ ಮಂತ್ರದಿಂದ ಆರಂಭವಾಗಿ ಒಟ್ಟು ೨೩ ಸೂಕ್ತಗಳು ಎಂದರೆ ಮೂರನೆಯ ಮಂಡಲದ ೩೦ನೇ ಸೂಕ್ತ ದಿಂದ ೫೩ನೆಯ ಸೂಕ್ತದವರೆಗೆ ಇಂದ್ರನನ್ನು ಪ್ರಶಂಸಿಸುವ ಸೂಕ್ತಗಳಾಗಿವೆ. ಆದರೆ, **ಪ್ರ** ಎಂಬ ಮಂತ್ರದಿಂದ ಆರಂಭ ವಾಗುವ ಸೂಕ್ತವು ಮಾತ್ರ ವಿಶ್ವಾಮಿತ್ರ ಮತ್ತು ನದಿಗಳ ಸಂಭಾಷಣೆಯನ್ನು ವಿವರಿಸುತ್ತದೆ ಎಂಬ ಉಪೋದ್ಘಾತವನ್ನು ಹೇಳಿ ಅನಂತರ ಅವರ ಸಂಭಾಷಣೆಗೆ ಮೂಲವಾದ ಐತಿಹಾಸಿಕ ಸನ್ನಿವೇಶವನ್ನು ತಿಳಿಸುವುದರೊಂದಿಗೆ ಸಂಭಾಷಣೆಯ ಕ್ರಮವನ್ನೂ ಬೃಹದ್ದೇವತಾಕಾರರು ಸೂಕ್ಷ್ಮವಾಗಿ ತಿಳಿಸಿದ್ದಾರೆ.

**ಪುರೋಹಿತಸ್ಸನ್ನಿಜ್ಯಾರ್ಥಂ ಸುದಾಸಾ ಸಹ ಯನ್ನೃಷಿಃ ।**
**ವಿಪಾಟ್ಛುತುದ್ರ್ಯೋಃ ಸಂಭೇದಂ ಶಮಿತ್ಯೇತೇ ಉವಾಚ ಹ ॥**

(ಬೃ. ದೇ. ೪-೧೦೬)

ವಿಶ್ವಾಮಿತ್ರಋಷಿಯು **ಸುದಾಸ**ನಿಗೆ ಪುರೋಹಿತನಾಗಿ ಅವನ ಯಜ್ಞಕರ್ಮಗಳಲ್ಲಿ ನೆರವಾಗುತ್ತಿದ್ದನು. ಒಂದು ಸಲ **ಸುದಾಸ**ನೊಂದಿಗೆ ಹೋಗುತ್ತಿರುವಾಗ ದಾರಿಯಲ್ಲಿ **ವಿಪಾಟ್** ಮತ್ತು **ಶುತುದ್ರೀ** ನದಿಗಳ ಸಂಗಮವನ್ನು ಸೇರಿದನು. ಅವರ ದಾರಿಗೆ ಪ್ರತಿಬಂಧಕವಾಗಿದ್ದ ಆ ನದಿಗಳನ್ನು ಕುರಿತು ವಿಶ್ವಾಮಿತ್ರನು ಅವುಗಳನ್ನು ದಾರಿಬಿಡಬೇಕೆಂದು ಪ್ರಾರ್ಥಿಸಿ **ಶಂ** " ನಮಗೆ ಅನುಗ್ರಾಹಕಿಯರಾಗಿ ನಮಗೆ ಮಾರ್ಗವನ್ನು ಬಿಡಿರಿ " ಎಂಬುದಾಗಿ ಪ್ರಾರ್ಥಿಸಿದನು.

**ಪ್ರವಾದಾಸ್ತತ್ರ ದೃಶ್ಯಂತೇ ದ್ವಿವದ್ಬಹುವದೇಕವತ್ ।**
**ಅಚ್ಛೇತ್ಯರ್ಧರ್ಚೇ ಪಚ್ಛೋ ವಾ ನದೀಷ್ವಪ್ಯೇಕವನ್ನಿತೇ ॥**

(ಬೃ. ದೇ. ೪-೧೦೭)

ಈ ಸೂಕ್ತದಲ್ಲಿ ಏಕವಚನ, ದ್ವಿವಚನ ಮತ್ತು ಬಹುವಚನ ಈ ಮೂರರಲ್ಲೂ ಸಂಭಾಷಣೆಯ ನಿರೂಪಣವಿರುತ್ತದೆ. **ಅಚ್ಛಾ** (೩-೩೩-೩) ಎಂಬ ಪೂರ್ವಾರ್ಧದಲ್ಲೂ ಹಾಗೆಯೇ **ನಿತೇ** (೩-೩೩-೧೦,೧೧) ಇತ್ಯಾದಿ ಸಂದರ್ಭಗಳಲ್ಲೂ ಏಕವಚನದ ಪ್ರಯೋಗವಿರುತ್ತದೆ. ಇವು ನದಿಗಳನ್ನು ನಿರ್ದೇಶಿಸಿದವಾಗಿರುತ್ತವೆ.

**ಆದ್ಯೇ ದ್ವ್ಯೃಚೇ ದ್ವಿವತ್ತ್ವಾರ್ಧೇ ವಿಶ್ವಾಮಿತ್ರವಚಃ ಶ್ರುತೇಃ ।**
**ಏತಾಭಿರ್ಋಗ್ಭಿರ್ವಾ ನದ್ಯ ಋಷಿಂ ಬಹುವದೂಚಿರೇ ॥**

(ಬೃ. ದೇ. ೪-೧೦೮)

ಸೂಕ್ತದ ಮೊದಲನೆಯ ಎರಡು ಮಂತ್ರಗಳಲ್ಲೂ ಮತ್ತು ಮೂರನೆಯ ಮಂತ್ರದ ಉತ್ತರಾರ್ಧದಲ್ಲೂ ದ್ವಿವಚನದ ಪ್ರಯೋಗವಿರುತ್ತದೆ. ಇವು ವಿಶ್ವಾಮಿತ್ರನ ವಾಕ್ಯಗಳೆಂದು ಶ್ರುತಿಯು ತಿಳಿಸುತ್ತದೆ. ಅಲ್ಲದೇ, ಕೆಳಗೆ ತಿಳಿಸುವಂತೆ, ನದಿಗಳು ವಿಶ್ವಾಮಿತ್ರನನ್ನು ಬಹುವಚನದಲ್ಲಿ ನಿರ್ದೇಶಿಸುತ್ತವೆ.

**ಷಷ್ಠ್ಯಾಶ್ಚಷ್ಟಮ್ಯಾ ಚತುರ್ಥ್ಯಾ ಚ ದಶಮ್ಯಾ ಚೇತರಾ ಋಷೇಃ ।**
**ಸಪ್ತಮ್ಯಾಮೃಚಿ ಷಷ್ಠ್ಯಾಂ ಚ ಯೌ ದೇವೌ ಪರಿಕೀರ್ತಿತೌ**
**ನಿಪಾತಿನೌ ತು ತೌ. ಜ್ಞೇಯೌ ॥** (೪-೧೦೯, ೧೧೦).

ನಾಲ್ಕು, ಆರು, ಎಂಟು ಮತ್ತು ಹತ್ತನೆಯ ಮಂತ್ರಗಳಲ್ಲಿ ನದಿಗಳು ವಿಶ್ವಾಮಿತ್ರನನ್ನು ನಿರ್ದೇಶಿಸಿವೆ. ಉಳಿದವೆಲ್ಲಾ ಋಷಿವಾಕ್ಯಗಳು. ಆರು ಮತ್ತು ಏಳನೆಯ ಮಂತ್ರಗಳಲ್ಲಿ ನಿರ್ದಿಷ್ಟವಾಗಿರುವ ಎರಡು ದೇವತೆಗಳೂ ಸಹ ಯಥಾಸಂದರ್ಭವಾಗಿ ಪ್ರಶಂಸಿಸಲ್ಪಟ್ಟ ದೇವತೆಗಳು—

ಈ ರೀತಿಯಲ್ಲಿ ಸುದಾಸ ಮತ್ತು ವಿಶ್ವಾಮಿತ್ರ ಇವರಿಬ್ಬರೂ ಜತೆಯಲ್ಲಿದ್ದು ನದಿಗಳನ್ನು ದಾಟುವ ಸೌಕರ್ಯವನ್ನುಂಟುಮಾಡಬೇಕೆಂದು ಪ್ರಾರ್ಥಿಸಿರುವ ವಿಷಯವು ಬೃಹದ್ದೇವತೆಯಲ್ಲಿ ಉಕ್ತವಾಗಿದೆ. ಆದರೆ ಸಂಹಿತಾವಾಕ್ಯಗಳಲ್ಲಿ ಸುದಾಸನ ನಾಮನಿರ್ದೇಶವು ಈ ಸಂದರ್ಭದಲ್ಲಿರುವುದಿಲ್ಲ. ವಿಶ್ವಾಮಿತ್ರರು ತಮ್ಮ ಪ್ರಾರ್ಥನೆಯಲ್ಲಿ ಗೋವುಗಳ ಅನ್ವೇಷಣದಲ್ಲಿ ನಿರತರಾಗಿದ್ದ **ಭರತರಿಗೆ** ಉಪಕಾರವಾಗುವುದೆಂದು ತಿಳಿಸಿದ್ದಾರೆ. ಆದುದರಿಂದ ಬೃಹದ್ದೇವತೆಯಲ್ಲಿ ಉಕ್ತವಾಗಿರುವುದಕ್ಕೂ ಸಂಹಿತಾವಾಕ್ಯದಲ್ಲಿ ವಿವೃತವಾಗಿರುವುದಕ್ಕೂ ವ್ಯತ್ಯಾಸವಿದೆಯೇ ಅಥವಾ ಭರತರೂ ಮತ್ತು ಸುದಾಸನೂ ಒಂದೇ ಸಂಗಡದವರೇ ಇತ್ಯಾದಿ ವಿಷಯಗಳನ್ನು ಇಲ್ಲಿ ಪರ್ಯಾಲೋಚಿಸಬೇಕಾಗುತ್ತದೆ. ಈ ಪ್ರಕರಣವನ್ನು ಸಾಯಣ ಭಾಷ್ಯದಲ್ಲಿ ಸೂಕ್ತದ ಉಪೋದ್ಘಾತದಲ್ಲಿ ಈ ರೀತಿ ತಿಳಿಸಿದೆ.

> **ಪುರಾ ಕಿಲ ವಿಶ್ವಾಮಿತ್ರಃ ಪೈಜವನಸ್ಯ ಸುದಾಸೋ ರಾಜ್ಞಃ ಪುರೋಹಿತೋ ಬಭೂವ । ಸ ಚ ಪೌರೋಹಿತ್ಯೇನ ಲಬ್ಧಜನಃ ಸರ್ವಂ ಧನಮಾದಾಯ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ ಅನುಯಯುರಿತರೇ । ಅಥೋತ್ತಿತೀರ್ಷುರ್ವಿಶ್ವಾಮಿತ್ರಃ ಅಗಾಧಜಲೇ ತೇ ನದ್ಯೌ ದೃಷ್ಟ್ವಾ ಉತ್ತರಣಾರ್ಥಂ ಆದ್ಯಾಭಿಃ ತಿಸೃಭಿಃ ತುಷ್ಟಾವ ॥**
> (ಸಾ. ಭಾ. ಪೀಠಿಕಾ ೩-೩೩).

ಪೂರ್ವದಲ್ಲಿ ಪಿಜವನನ ಪುತ್ರನಾದ **ಸುದಾಸ** ನೆಂಬ ದೊರೆಗೆ ವಿಶ್ವಾಮಿತ್ರನು ಕುಲಪುರೋಹಿತನಾಗಿದ್ದನು. ಅವನು ತನ್ನ ಪೌರೋಹಿತ್ಯದಿಂದ ಜನರ ಬೆಂಬಲವನ್ನೆಲ್ಲಾ ಪಡೆದು ಸಕಲಧನವನ್ನೂ ತೆಗೆದುಕೊಂಡು **ವಿಪಾಟ್** ಮತ್ತು **ಶುತುದ್ರೀ** ಎಂಬ ನದಿಗಳ ಸಂಗಮವನ್ನು ಸೇರಿದನು. ಇತರರೂ ಇವನನ್ನು ಅನುಸರಿಸಿದರು. ಆಗ ಅತಿ ಆಳವಾದ ಪ್ರವಾಹಗಳುಳ್ಳ ನದಿಗಳನ್ನು ನೋಡಿ ಋಷಿಯು ಅದನ್ನು ದಾಟಲು ಮೊದಲನೆಯ ಮೂರು ಮಂತ್ರಗಳಿಂದ ಅವನ್ನು ಸ್ತುತಿಸಿದನು ಎಂದು ಕಥಾಸಂದರ್ಭವನ್ನು ತಿಳಿಸಿದ್ದಾರೆ. ಈ ವಾಕ್ಯಗಳು ಸುದಾಸನಿಗೂ ವಿಶ್ವಾಮಿತ್ರನಿಗೂ ಇರುವ ಸಂಬಂಧವನ್ನು ತಿಳಿಸುತ್ತವೆ. ಈ ಸುದಾಸನಾರು, ಭರತನಾರು, ಸುದಾಸನಿಗೂ ಭರತನಿಗೂ ಇರುವ ಸಂಬಂಧವೇನು, ಇವರಿಬ್ಬರಿಗೂ ಸಮಾನವಾದ ಪೌರೋಹಿತ್ಯವು ವಿಶ್ವಾಮಿತ್ರನದೇ ಇತ್ಯಾದಿ ವಿಷಯಗಳನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿದೆ. ಅವನ್ನು ಮುಂದುವರಿಸಲು ವಿಶ್ವಾಮಿತ್ರನಿಗೂ ನದಿಗಳಿಗೂ ನಡೆದ ಸಂಭಾಷಣೆಯ ವಿವರವೇನೆಂಬುದನ್ನು ಪ್ರಥಮತಃ ತಿಳಿಯಬೇಕಾಗಿದೆ.

ಪರ್ವತಗಳ ಉತ್ಸಂಗಪ್ರದೇಶಗಳಿಂದ ಉತ್ಪನ್ನವಾದವೂ, ಕಡಿವಾಣಗಳನ್ನು ಸಡಿಲಿಸಿರುವುದರಿಂದ ಶಿಥಿಲವಾದ ಬಂಧನವುಳ್ಳವಾಗಿ ಪರಸ್ಪರ ಸ್ಪರ್ಧಿಸುತ್ತಾ ಓಡುತ್ತಿರುವ ಅಶ್ವಗಳಂತೆಯೂ, ತಮ್ಮ ಕರುಗಳನ್ನು ಸಮೀಪಿಸಲು ಆತುರದಿಂದ ಓಡುತ್ತಿರುವ ಎರಡು ಗೋವುಗಳಂತೆಯೂ ಸಹ **ವಿಪಾಟ್** ಮತ್ತು **ಶುತುದ್ರೀ** ಎಂಬ ಎರಡು ನದಿಗಳೂ ಸಹ ತಮ್ಮ ಸಂಯುಕ್ತವಾದ ಪ್ರವಾಹಗಳೊಡನೆ ವೇಗವಾಗಿಹರಿಯುತ್ತವೆ. (೧)

ಎಲೈ ನದಿಗಳೇ, ರಥಿಕನು ತನ್ನ ಲಕ್ಷ್ಯಪ್ರದೇಶಕ್ಕೆ ರಥದೊಡನೆ ಓಡುವಂತೆ ನೀವಿಬ್ಬರೂ ಸಹ ಇಂದ್ರನಿಂದ ಪ್ರೇರಿತರಾಗಿಯೂ ಇಂದ್ರನ ಆಜ್ಞೆಯನ್ನು ಪಾಲಿಸುವವರಾಗಿಯೂ ಸಹ ಸಂಯುಕ್ತರಾಗಿ ಸಾಗರದ ಅಭಿಮುಖವಾಗಿ ಹೋಗುತ್ತಿದ್ದೀರಿ. ಒಟ್ಟಿಗೆ ಪ್ರವಹಿಸುತ್ತಲೂ, ನಿಮ್ಮ ನಿಮ್ಮ ಅಲೆಗಳಿಂದ ವೃದ್ಧಿಯನ್ನು ತೋರ್ಪಡಿಸುತ್ತಲೂ, ಎಲೈ ಪ್ರಕಾಶಮಾನರಾದ ನದಿಗಳೇ, ನಿಮ್ಮಲ್ಲಿ ಒಂದು ಇನ್ನೊಂದನ್ನು ಅನುಸರಿಸುತ್ತದೆ. (೨)

ಅತ್ಯಂತ ಅತಿಶಯವಾದ ಮಾತೃಪ್ರೇಮವುಳ್ಳ **ವಿಪಾಟ್** ನದಿಯನ್ನು ನಾನು ಸಮೀಪಿಸುತ್ತೇನೆ. ವಿಸ್ತೃತವಾದುದೂ, ಶೋಭನಾತ್ಮಕವಾದುದೂ ಆದ ಈ ನದಿಯು ವತ್ಸವನ್ನು ಪ್ರೀತಿಸಲು ವೇಗದಿಂದ ಮುನ್ನುಗ್ಗುವ ಗೋವುಗಳಂತೆ ಶುತುದ್ರಿಯೊಡನೆ ಕೂಡಿ ಇಬ್ಬರಿಗೂ ಸಮಾನವಾದ ಆಶ್ರಯವನ್ನೇ ಹೋಗಿ ಸೇರುತ್ತವೆ. (೩)

**ನದಿಗಳು :**—ನಮ್ಮ ಈ ಪ್ರವಾಹದಿಂದ ನಾವು ಪೃಥ್ವಿಯನ್ನು ಫಲವತ್ತನ್ನಾಗಿ ಮಾಡುತ್ತಾ ದೇವನಾದ ಇಂದ್ರನ ನಿಯಮಾನುಸಾರವಾಗಿ ಅವನಿಂದ ಕ್ಲೃಪ್ತವಾದ ಸಾಗರರೂಪವಾದ ನಮ್ಮ ಬೀಡಿಗೆ ಪ್ರವಹಿಸಿ ಹೋಗಿಸೇರುತ್ತೇವೆ. ಇಂದ್ರನಿಂದ ನಿರ್ಮಿತವಾದ ಮಾರ್ಗವನ್ನನುಸರಿಸಿ ನಮ್ಮ ಗಂತವ್ಯಪ್ರದೇಶಕ್ಕೆ ಹೋಗಿ ಸೇರಲು ನಮಗೆ ಕಾಲಾತೀತವಾಗಬಾರದು. ನಮ್ಮನ್ನು ಕುರಿತು ಪ್ರಾರ್ಥಿಸುವ ಈ ಋಷಿಯ ಇಷ್ಟಾರ್ಥವೇನಿರಬಹುದು ? ಅದನ್ನು ನಾವು ತಿಳಿಯಲಿಚ್ಛಿಸುತ್ತೇವೆ. (೪)

**ವಿಶ್ವಾಮಿತ್ರಃ**—ಎಲೈ ಉದಕಪ್ರವಾಹಪೂರಿತಗಳಾದ ನದಿಗಳೇ, ಸೋಮಾಹರಣಕ್ಕಾಗಿ ಹೊರಟಿರುವ ನನಗಾಗಿ ನಿಮ್ಮ ಪ್ರವಾಹವನ್ನು ಕೊಂಚ ತಡೆಗಟ್ಟಿರಿ. ಅದೇ ನನ್ನ ಪ್ರಾರ್ಥನೆಯು. ಕುಶಿಕಪುತ್ರನಾದ ನಾನು ರಕ್ಷಣೆಯನ್ನಪೇಕ್ಷಿಸಿದವನಾಗಿ ನನ್ನ ಮುಂದಿರತಕ್ಕ ಶುತುದ್ರೀ ನದಿಯನ್ನು ನಮ್ರತೆಯಿಂದ ಪ್ರಾರ್ಥಿಸುತ್ತೇನೆ. (೫)

**ನದಿಗಳು :**—ಉದಕಗಳ ಪ್ರವಾಹಕ್ಕೆಲ್ಲಾ ಅಡ್ಡಲಾಗಿದ್ದ **ಅಹಿ**ಯನ್ನು ಹನನಮಾಡಿದಾಗ ವಜ್ರಬಾಹುವಾದ ಇಂದ್ರನು ನಮ್ಮ ಪ್ರವಾಹಕ್ಕನುಗುಣವಾದ ಕಾಲುವೆಗಳನ್ನೆಲ್ಲಾ ನಿರ್ಮಿಸಿದನು. ಶ್ರೇಷ್ಠವಾದ ಪಾಣಿಯುಳ್ಳವನೂ ಜಗತ್ಪ್ರೇರಕನೂ ಆದ ಇಂದ್ರನ ನಿಯಮನಕ್ಕೆ ಅಧೀನರಾಗಿ ನಾವು ಪ್ರವಹಿಸುತ್ತಿದ್ದೇವೆ. (೬)

**ವಿಶ್ವಾಮಿತ್ರಃ**—ವೃತ್ರಾಸುರನನ್ನು ತನ್ನ ವಜ್ರಾಯುಧದಿಂದ ಕೊಂದು ಉದಕಗಳ ಸ್ವತಂತ್ರವಾದ ಪ್ರವಾಹಕ್ಕಿದ್ದ ಪ್ರತಿಬಂಧಕವನ್ನು ತಪ್ಪಿಸಿ ಅವುಗಳು ಸ್ವೇಚ್ಛೆಯಿಂದ ಹರಿಯುವಂತೆ ಮಾಡಿದ ಅಸಾಧಾರಣ ಕರ್ಮಗಳುಳ್ಳ ಇಂದ್ರನ ವೀರ್ಯಕರ್ಮಗಳೆಲ್ಲವೂ ಸರ್ವದಾ ಸ್ತುತ್ಯವಾಗಿಯೇ ಇರುತ್ತವೆ. (೭)

**ನದಿಗಳು :**—ಇಂದ್ರನನ್ನು ಸ್ತುತಿಸತಕ್ಕ ಎಲೈ ಋಷಿಯೇ, ನೀನು ಈಗ ಪಠಿಸಿದ ಸ್ತುತಿವಾಕ್ಯಗಳನ್ನು ಮರೆಯಬೇಡ. ಇದೇ ವಾಕ್ಯಗಳಿಂದ ಮುಂದಿನ ಯುಗಗಳಲ್ಲೂ ಇದೇ ಸ್ತುತಿಯು ನೆರವೇರಲ್ಪಡಬೇಕಾಗುತ್ತದೆ. ಉತ್ತಮವಾದ ಕರ್ಮಕರ್ತನಾದ ಎಲೈ ಋಷಿಯೇ, ನಮ್ಮನ್ನು ಇದೇ ಸಂವಾದಾತ್ಮಕವಾದ ಸ್ತುತಿವಾಕ್ಯಗಳಿಂದ ಸೇವಿಸು. ಆದರೆ ಮಾನವರಂತೆ ಪ್ರಗಲ್ಭಾತ್ಮಕವಾದ ರೀತಿಯಲ್ಲಿ ಮಾತ್ರ ನಮ್ಮ ವಿಷಯದಲ್ಲಿ ವ್ಯವಹರಿಸಬೇಡ. ನಿನಗೆ ನಮಸ್ಕಾರವಿರಲಿ. (೮)

**ವಿಶ್ವಾಮಿತ್ರಃ**—ನನಗೆ ಒಡಹುಟ್ಟಿದವರಂತಿರುವ ಎಲೈ ನದಿಗಳೇ, ನಿಮ್ಮನ್ನು ಸ್ತುತಿಸುವ ನನ್ನಲ್ಲಿ ಅನುಗ್ರಹವುಳ್ಳವರಾಗಿರಿ, ನಾನು ರಥದೊಂದಿಗೂ ಮತ್ತು ಇತರ ಭಾರಗಳೊಂದಿಗೂ ಬಹುದೂರದಿಂದ ಬಂದಿರುತ್ತೇನೆ. ನನಗೆ ಸಹಾಯಮಾಡುವುದಕ್ಕಾಗಿ ನಿಮ್ಮ ಪ್ರವಾಹಗಳನ್ನು ಕೊಂಚ ಕಡಿಮೆಮಾಡಿರಿ. ನಾನೂ ನನ್ನ ಅನುಚರರೂ ದಾಟಲು ಅನುಕೂಲವಾಗುವಂತೆ ಮಾಡಿರಿ. ನಮ್ಮ ರಥಚಕ್ರದ ಇರುಚಿಯ ಮಟ್ಟಕ್ಕಿಂತಲೂ ಕೊಂಚ ಕಡಿಮೆ ಮಟ್ಟದಲ್ಲಿ ಪ್ರವಾಹವನ್ನು ನಿಯಮನಮಾಡಿರಿ. (೯)

**ನದಿಗಳು :**—ಸ್ತುತಿಕರ್ತನಾದ ಋಷಿಯೇ, ನಾವು ನಿನ್ನ ಪ್ರಾರ್ಥನೆಯನ್ನು ಮನ್ನಿಸುವೆವು. ನೀನು ಭಾರವನ್ನು ಹೊತ್ತಿರುವ ರಥದೊಂದಿಗೆ ಬಹುದೂರಪ್ರದೇಶದಿಂದ ಬಂದಿರುವೆಯೆಂಬುದೂ ನಿಜ. ನಾವು ನಿನ್ನ ಮುಂದೆ ಬಾಗಿ ನಡೆಯುವೆವು. ತನ್ನ ಮುದ್ದು ಮಗುವನ್ನು ಎತ್ತಿಕೊಳ್ಳಲು ತಾಯಿಯು ಬಾಗುವಂತೆಯೂ, ತನ್ನ ಪ್ರಿಯನನ್ನು ಆಲಿಂಗಿಸಿಕೊಳ್ಳಲು ಯುವತಿಯು ಬಾಗುವಂತೆಯೂ, ನಾವು ಬಾಗಿ ಹರಿಯುತ್ತೇವೆ. (೧೦)

**ವಿಶ್ವಾಮಿತ್ರ :**—ಎಲೈ ನದಿಗಳೇ, ನಿಮ್ಮನ್ನು ಸುಲಭವಾಗಿ ದಾಟಲು ನೀವು ಬಹಳವಾದ ಅನುಕೂಲಗಳನ್ನು ಕಲ್ಪಿಸಿದ್ದೀರಿ, ನನ್ನೊಡನಿರುವ **ಭರತರೂ** ಸಹ ನಿಮ್ಮ ಸಂಯುಕ್ತಾತ್ಮಕವಾದ ಪ್ರವಾಹವನ್ನು ದಾಟಲಿ. ನಮ್ಮನ್ನು ಹಿಂಬಾಲಿಸುವ ಸಮಸ್ತ ಗುಂಪೂ ಸಹ ನಿಮ್ಮಿಂದ ಅನುಗ್ರಹಿಸಲ್ಪಟ್ಟವಾಗಿಯೂ ಇಂದ್ರನಿಂದ ಪ್ರೇರಿತರಾಗಿಯೂ ಸಹ ನಿಮ್ಮ ಪ್ರವಾಹವನ್ನು ದಾಟಲಿ. ನಮ್ಮ ಸ್ತುತಿಗೆ ಪಾತ್ರರಾದ ನಿಮ್ಮ ಅನುಗ್ರಹಕ್ಕೆ ಪಾತ್ರರಾಗಿದ್ದೇವೆ. ನಾವು ನಿಮ್ಮನ್ನು ದಾಟಿದನಂತರ ನಿಮ್ಮ ಪ್ರವಾಹವನ್ನು ಪೂರ್ವಸ್ಥಿತಿಗೆ ತಂದುಕೊಳ್ಳಿರಿ. (೧೧)

ಗೋವುಗಳ ಅನ್ವೇಷಣಮಾಡುತ್ತಾ ಹೊರಟ ಭರತರು ನದಿಗಳನ್ನು ದಾಟಿದರು. ಋಷಿಯು ನದಿಗಳ ಅಭಿಮಾನವನ್ನು ಸ್ವೀಕರಿಸಿ ಸಂತುಷ್ಟನಾದನು. "ಎಲೈ ನದಿಗಳೇ, ಅನ್ನಸಂಪತ್ತನ್ನು ಹಂಚುವವರಾಗಿಯೂ, ಅದನ್ನೇ ವೃದ್ಧಿಪಡಿಸುವವರಾಗಿಯೂ ನಿಮ್ಮ ಪ್ರವಾಹವನ್ನು ಮುಂದುವರೆಸಿರಿ. ನಿಮ್ಮ ಪಾತ್ರಗಳನ್ನೂ ತುಂಬುತ್ತಾ ಪೂರ್ಣ ಪ್ರವಾಹವುಳ್ಳವರಾಗಿ ಹರಿಯಿರಿ." (೧೨)

ಆದರೂ ಸಹ ನಮ್ಮ ರಥದ ನೊಗದ ಮೂಕಿಯು ಪ್ರವಾಹದ ಮಟ್ಟಕಿಂದ ಮೇಲಿರುವಂತಾಗಲಿ. ನೀವು ಆ ಪ್ರಮಾಣದಲ್ಲಿಯೇ ಹರಿಯಿರಿ. ದೋಷರಹಿತರೂ, ಅದೂಷ್ಯರೂ ಆದ ವಿಪಾಟ್ಛುತುದ್ರಿಗಳು ತುಂಬಿ ಹರಿಯಲಿ. (೧೩)

ಈ ರೀತಿಯಾಗಿ ವಿಶ್ವಾಮಿತ್ರನು ನದಿಗಳನ್ನು ಸ್ತುತಿಸಿ ಅವುಗಳನ್ನು ದಾಟಿದನು ಎಂಬುದೇ ಈ ಸೂಕ್ತದ ವಿಷಯವಾಗಿದೆ. ಪ್ರಕೃತದಲ್ಲಿ ವಿಚಾರಾರ್ಹವಾದ ವಿಷಯಗಳು ಯಾವುವೆಂದರೆ ;

(೧) ಸೂಕ್ತದಲ್ಲಿ **ಸುದಾಸನ** ನಾಮನಿರ್ದೇಶವಿಲ್ಲ. ಆದರೆ ಬೃಹದ್ದೇವತೆಯಲ್ಲಿಯೂ ಭಾಷ್ಯದ ಪೀಠಿಕೆಯಲ್ಲಿಯೂ ವಿಶ್ವಾಮಿತ್ರನು ಸುದಾಸನೊಂದಿಗೆ ಹೊರಟನೆಂದು ಸ್ಪಷ್ಟವಾಗಿ ತಿಳಿಸಿದೆ. ಅದಕ್ಕೆ ಆಧಾರವೇನು ?

(೨) ಸಂಹಿತೆಯಲ್ಲಿ ಭರತರ ಜೊತೆಯಲ್ಲಿ ವಿಶ್ವಾಮಿತ್ರನು ನದಿಯನ್ನು ದಾಟಿದನೆಂದು ತಿಳಿಸಿದೆ. ಸುದಾಸನೂ ಭರತರೂ ಒಂದೇ ಸಂತತಿಯವರೇ ಅಥವಾ ಬೇರೆ ಬೇರೆಯೇ ? ಕುಶಿಕಪುತ್ರನಾದ ವಿಶ್ವಾಮಿತ್ರನು ಪೈಜವನ ಸುದಾಸನ ಪೌರೋಹಿತ್ಯವನ್ನು ವಹಿಸಿದಾಗ ಅದೇ ಕಾರ್ಯದಲ್ಲಿ ವಿಹಿತನಾಗಿದ್ದ ವಸಿಷ್ಠನಿಗೂ ವಿಶ್ವಾಮಿತ್ರನಿಗೂ ಮೈತ್ರಿಯಿದ್ದಿತೇ ಇಲ್ಲವೇ ?

ಇತ್ಯಾದಿ ವಿಷಯಗಳು ಐತಿಹಾಸಿಕವಾದ ವಿಷಯಗಳ ವಿಮರ್ಶೆಗಳಿಗೆ ಅವಕಾಶವನ್ನು ಕಲ್ಪಿಸಿವೆ. ವಿಶ್ವಾಮಿತ್ರನ ವೈಯಕ್ತಿಕವಾದ ಸ್ವರೂಪ ಮತ್ತು ಸಾಮರ್ಥ್ಯ, ಅವನು ನಿರ್ವಹಿಸಿದ ಅಸಾಧಾರಣ ಕರ್ಮಗಳು ಇತ್ಯಾದಿ ವಿಷಯಗಳನ್ನು ಅರಿತರೆ ಆಗ ಮೇಲಿನ ಸಮಸ್ಯೆಗಳಿಗೆ ಸಮಾಧಾನರೂಪವಾದ ಉತ್ತರವು ಲಭಿಸಿದಂತಾಗುತ್ತದೆ. ವಿಶ್ವಾಮಿತ್ರನ ಪೂರ್ವಜರಾರು, ಅವರಿಗೂ ಭರತವಂಶದವರಿಗೂ ಹೇಗೆ ಸ್ನೇಹ ಇತ್ಯಾದಿ ವಿಷಯಗಳಿಗೂ ಮೇಲೆ ತಿಳಿಸಿದ ಸಮಸ್ಯೆಗಳ ವಿಮರ್ಶೆಗೂ ಅತ್ಯವಶ್ಯವಾದ ಅಂಶಗಳನ್ನು ಇದೇ ಭಾಗದ ಪೀಠಿಕೆಯಲ್ಲಿ ವಿವರಿಸಲಾಗಿದೆ.

**ಪೀಠಿಕೆ ಸಮಾಪ್ತವು.**

**ಸಾಯಣಭಾಷ್ಯಂ**

**ಪ್ರ ಪರ್ವತಾನಾಮಿತಿ ತ್ರಯೋದಶರ್ಚಂ ಚತುರ್ಥಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಪ್ರ ಪರ್ವತಾನಾಂ ಸಪ್ತೋನಾ ಸಂವಾದೋ ನದೀಭಿರ್ವಿಶ್ವಾಮಿತ್ರಸ್ಯೋತ್ತಿತೀರ್ಷೋಸ್ತತ್ರ ನದೀವಾಕ್ಯಂ ಚತುರ್ಥೀಷಷ್ಠ್ಯೌಷ್ಟಮೀದಶಮ್ಯಃ ಷಷ್ಠೀಸಪ್ತಮ್ಯೋಸ್ತ್ರಿಂದ್ರಸ್ತುತಿರಂತ್ಯಾನುಷ್ಟುಬಿತಿ । ಅತ್ರ ಚತುರ್ಥೀ**

ಷಷ್ಠ್ಯಷ್ಟಮೀದಶಮೀನಾಂ ನದೀವಾಕ್ಯತ್ವಾನ್ನದ್ಯ ಏವ ಋಷಯಃ ಶಿಷ್ಟಾನಾಂ ವಿಶ್ವಾಮಿತ್ರವಾಕ್ಯತ್ವಾತ್ಸ ಏವ ಋಷಿಃ । ಅಂತ್ಯಾನುಷ್ಟುಪ್ ಶಿಷ್ಟಾಸ್ತ್ರಿಷ್ಟುಭಃ । ಇಂದ್ರೋ ದೇವತಾ । ಯದ್ಯಪಿ ಷಷ್ಠ್ಯಾಂ ಸಪ್ತಮ್ಯಾಂ ಚ ವಿಶ್ವಾಮಿತ್ರೋ ನದ್ಯಶ್ಚ ಸ್ತುಯಂತೇ ತಥಾಪೀಂದ್ರ ಏವ ದೇವತಾ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಪುರಾ ಕಿಲ ವಿಶ್ವಾಮಿತ್ರಃ ಪೈಜವನಸ್ಯ ಸುದಾಸೋ ರಾಜ್ಞಃ ಪುರೋಹಿತೋ ಬಭೂವ । ಸ ಚ ಪೌರೋಹಿತ್ಯೇನ ಲಬ್ಧಧನಃ ಸರ್ವಂ ಧನಮಾದಾಯ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯಾವನುಯಯುರಿತರೇ । ಅಥೋತ್ತಿತೀರ್ಷುರ್ವಿಶ್ವಾಮಿತ್ರೋಽಗಾಧಜಲೇ ತೇ ನದ್ಯೌ ದೃಷ್ಟ್ವೋತ್ತರಣಾರ್ಥಮಾದ್ಯಾಭಿಸ್ತಿಸೃಭಿಸ್ತುಷ್ಟಾವ ॥

**ಅನುವಾದವು**— ಪ್ರ ಪರ್ವತಾನಾಂ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ಪ್ರ ಪರ್ವತಾನಾಂ ಸಪ್ತೋನಾ ಸಂವಾದೋ ನದೀಭಿರ್ವಿಶ್ವಾಮಿತ್ರಸ್ಯೋತ್ತಿತೀರ್ಷೋಸ್ತತ್ರ ನದೀವಾಕ್ಯಂ ಚತುರ್ಥೀಷಷ್ಠ್ಯಷ್ಟಮೀದಶಮ್ಯಃ ಷಷ್ಠೀಸಪ್ತಮ್ಯೋಸ್ತ್ವಿಂದ್ರಸ್ತುತಿರಂತ್ಯಾನುಷ್ಟುಪ್** ಎಂದು ಹೇಳಿರುವುದು. ಎಂದರೆ ಈ ಸೂಕ್ತದಲ್ಲಿ ನಾಲ್ಕು, ಆರು, ಎಂಟು ಮತ್ತು ಹತ್ತನೆಯ ಋಕ್ಕುಗಳು ನದೀವಾಕ್ಯಗಳಾದ್ದರಿಂದ ಆ ಋಕ್ಕುಗಳಿಗೆ ನದಿಗಳೇ ಋಷಿಗಳು; ಉಳಿದ ಋಕ್ಕುಗಳು ವಿಶ್ವಾಮಿತ್ರನ ವಾಕ್ಯಗಳಾದ್ದರಿಂದ ಅವುಗಳಿಗೆ ವಿಶ್ವಾಮಿತ್ರನೇ ಋಷಿಯು; ಈ ಸೂಕ್ತದ ಕೊನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಇಂದ್ರನು ದೇವತೆಯು. ಆದರೆ ಆರು, ಮತ್ತು ಏಳನೆಯ ಋಕ್ಕುಗಳಲ್ಲಿ ವಿಶ್ವಾಮಿತ್ರನೂ ಮತ್ತು ನದಿಗಳೂ ಸ್ತುತಿಸಲ್ಪಡುತ್ತವೆ. ಆದರೂ ಈ ಋಕ್ಕುಗಳಿಗೂ ಇಂದ್ರನೇ ದೇವತೆಯು. ಸೂಕ್ತವಿನಿಯೋಗವು ಲೈಂಗಿಕವು. ಪೂರ್ವದಲ್ಲಿ ಈ ಸೂಕ್ತ ದ್ರಷ್ಟೃವಾದ ವಿಶ್ವಾಮಿತ್ರಋಷಿಯು ಪಿಜವನನೆಂಬುವನ ಪುತ್ರನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು. ಆ ಪೌರೋಹಿತ್ಯದಿಂದ ಸಂಪಾದಿಸಿದ ಸಮಸ್ತ ದ್ರವ್ಯವನ್ನೂ ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗುವಾಗ ದಾರಿಯಲ್ಲಿ ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳ ಸಂಗಮವು ಸಿಕ್ಕಿ ಅದನ್ನು ದಾಟಬೇಕಾಗಿಬಂದಿತು. ಈ ಋಷಿಯ ದ್ರವ್ಯವನ್ನು ಅಪಹರಿಸಬೇಕೆಂದು ಕೆಲವು ದುಷ್ಟರು ಈ ಋಷಿಯನ್ನು ಹಿಂಬಾಲಿಸಿ ಬಂದರು. ಆಗ ಆ ನದಿಗಳಲ್ಲಿ ಬಹಳ ಜಲವಿದ್ದು ಆಳವಾಗಿದ್ದುದರಿಂದ ದಾಟುವುದಕ್ಕೆ ಸಾಧ್ಯವಾಗದೆ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳಿಂದ ಆ ನದಿಗಳನ್ನು ಸ್ತೋತ್ರಮಾಡಿದನು. ವಿಶ್ವಾಮಿತ್ರನಿಗೂ ನದಿಗಳಿಗೂ ನಡೆದ ಸಂಭಾಷಣೆಯು ಈ ಸೂಕ್ತದಲ್ಲಿ ಹೇಳಲಾಗಿದೆ.

## ಸೂಕ್ತ—೩೩

ಮಂಡಲ—೩ ॥ ಅನುವಾಕ—೩ ॥ ಸೂಕ್ತ—೩೩ ॥
ಅಷ್ಟಕ—೩ ॥ ಅಧ್ಯಾಯ—೨ ॥ ವರ್ಗ—೧೨, ೧೩, ೧೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩
ಋಷಿಃ—ವಿಶ್ವಾಮಿತ್ರಃ । ೪, ೬, ೮, ೧೦ ನದ್ಯಃ ॥
ದೇವತಾ—ನದ್ಯಃ । ೪, ೮, ೧೦. ವಿಶ್ವಾಮಿತ್ರಃ । ೬, ೭ ಇಂದ್ರಃ ॥
ಛಂದಃ—ತ್ರಿಷ್ಟುಪ್ । ೧೩. ಅನುಷ್ಟುಪ್ ॥

ಸಂಹಿತಾಪಾಠಃ

ಪ್ರ ಪರ್ವತಾನಾಮುಶತೀ ಉಪಸ್ಥಾದಶ್ವೇ ಇವ ವಿಷಿತೇ ಹಾಸಮಾನೇ ।

ಗಾವೇವ ಶುಭ್ರೇ ಮಾತರಾ ರಿಹಾಣೇ ವಿಪಾಟ್ಛುತುದ್ರೀ ಪಯಸಾ ಜವೇತೇ ॥೧॥

ಪದಪಾಠಃ

ಪ್ರ । ಪರ್ವತಾನಾಂ । ಉಶತೀ ಇತಿ । ಉಪಸ್ಥಾತ್ । ಅಶ್ವೇ ಇವೇತ್ಯಶ್ವೇಽಇವ । ವಿಸಿತೇ ಇತಿ ವಿಽಸಿತೇ । ಹಾಸಮಾನೇ ಇತಿ ।

ಗಾವಾಽಇವ । ಶುಭ್ರೇ ಇತಿ । ಮಾತರಾ । ರಿಹಾಣೇ ಇತಿ । ವಿಽಪಾಟ್ । ಶುತುದ್ರೀ । ಪಯಸಾ । ಜವೇತೇ ಇತಿ ॥ ೧ ॥

ಸಾಯಣಭಾಷ್ಯಂ

ಪರ್ವತಾನಾಂ ಗಿರೀಣಾಂ ಶೈಲಾನಾಮುಪಸ್ಥಾದುತ್ಸಂಗಾನ್ನಿರ್ಗತ್ಯೋಶತೀ.ಸಮುದ್ರಗಮನಂ ಕಾಮಯಮಾನೇ । ಗಮನೇ ದೃಷ್ಟಾಂತಃ। ಅಶ್ವೇ ಇವ । ಯಥಾ ವಿಷಿತೇ ಮಂದುರಾತೋ·ವಿಮುಕ್ತೇ ಹಾಸಮಾನೇ ಅನ್ಯೋನ್ಯಜವೇನ ಸ್ಪರ್ಧಮಾನೇ । ಯದ್ವಾ ಹೃಷ್ಯಂತ್ಯಾವಶ್ವೇ ಇವ ವಡವೇ ಇವ ತ್ವರಯಾ ಗಚ್ಛಂತ್ಯೌ ಪರಸ್ಪರಂ ಹೃಷ್ಯಂತ್ಯೌ। ತಥಾ ಗಾವೇವ ಶುಭ್ರೇ। ಯಥಾ ದ್ವೌ ಗಾವೌ ಶೋಭಮಾನೌ ವರ್ತೇತೇ ತದ್ವಚ್ಛುಭ್ರೇ ಶೋಭಮಾನೇ। ಕಿಂಚ ಮಾತರಾ । ಯಥಾ ಮಾತರೌ ಧೇನೂ ರಿಹಾಣೇ । ಅಂತರ್ಣೀತಸನರ್ಥೋ ಲಿಹಿಃ । ವತ್ಸಂ ಜಿಹ್ವಯಾ ಲೇಢುಮಿಚ್ಛಂತ್ಯೌ ಶೀಘ್ರಂ ಗಚ್ಛತಸ್ತದ್ವತ್ಸಮುದ್ರಂ ಗಂತುಂ ಜವಾದ್ಗಚ್ಛಂತ್ಯೌ ಪಯಸಾ ಸಂಯುಕ್ತೇ ವಿಪಾಟ್ । ಕೂಲವಿಪಾಟನಾತ್ ವಿಪಾಶನಾದ್ವಾ ವಿಮೋಚನಾದ್ವಾ ವಿಪಾಟ್ । ಶುತುದ್ರೀ । ಶು ಕ್ಷಿಪ್ರಂ ತು ತುನ್ನಾ ತುನ್ನೇವ ದ್ರವತಿ ಗಚ್ಛತೀತಿ ಶುತುದ್ರೀ.। ಏತನ್ನಾಮಕೇ ನದ್ಯೌ ಪ್ರ ಜವೇತೇ । ಸಮುದ್ರಂ ಪ್ರತಿ ಶೀಘ್ರಂ ಗಚ್ಛತಃ । ಅತ್ರ ನಿರುಕ್ತಂ । ಪರ್ವತಾನಾಮುಪಸ್ಥಾದುಪಸ್ಥಾನಾದುಶತ್ಯೌ ಕಾಮಯಮಾನೇ ಅಶ್ವೇ ಇವ ವಿಮುಕ್ತೇ ಇತಿ ವಾ ವಿಷಣ್ಣೇ ಇತಿ ವಾ ಹಾಸಮಾನೇ ಹಾಸತಿಃ ಸ್ಪರ್ಧಾಯಾಂ ಹರ್ಷಮಾಣೇವಾ ಗಾವಾವಿವ ಶುಭ್ರೇ ಶೋಭನೇ ಮಾತರೌ ಸಂರಿಹಾಣೇ ವಿಪಾಟ್ಛುತುದ್ರ್ಯೌ ಪಯಸಾ ಪ್ರಜವೇತೇ। ನಿ. ೯-೩೯ । ಇತಿ ॥ಉಶತೀ । ವಶ ಕಾಂತೌ । ಅಸ್ಯ ಶತುರ್ಙೀತ್ವಾದ್ಗ್ರಹಿಜ್ಯಾವಯೀತ್ಯಾದಿನಾ ಸಂಪ್ರಸಾರಣಂ । ವಿಷಿತೇ । ಷಿಞ್ ಬಂಧನ ಇತ್ಯಸ್ಯ ಕರ್ಮಣಿ ನಿಷ್ಠಾ । ಸಂಹಿತಾಯಾಂ ಪರಿನಿವಿಭ್ಯಃ ಸೇವಸಿತಸಯಸಿವುಸಹೇತ್ಯಾದಿನಾ । ಪಾ. ೮-೩-೭೦ । ಷತ್ವಂ । ಗತಿರನಂತರ ಗತೇಃ ಪ್ರಕೃತಿಸ್ವರಃ । ಹಾಸಮಾನೇ । ಹಾಸತಿಃ ಸ್ಪರ್ಧಾಕರ್ಮಾ ಹಸೇ ಹಸನೇ ವಾ । ಶಾನಚ್ । ತಸ್ಯ ಲಸಾರ್ವಧಾತುಕಸ್ವರೇ ಕೃತೇ ಧಾತುಸ್ವರಃ । ರಿಹಾಣೇ । ಲಿಹ ಆಸ್ವಾದನೇ । ಸ್ವರಿತೇತ್ತ್ವಾದುಭಯಪದೀ । ಶಾನಚ್ । ಅದಾದಿತ್ವಾಚ್ಛಪೋ ಲುಕ್ । ಲಕಾರಸ್ಯ ರೇಫಶ್ಛಾಂದಸಃ । ರೇಫಮುವಲಂಬ್ಯ ಣತ್ವಂ । ಚಿತ್ತ್ವಾದಂತೋದಾತ್ತಃ । ವಿಪಾಟ್ । ಪಟ ಗತೌ ಪಶ ಬಾಧನಸ್ಪರ್ಶನಯೋರಿತಿ ವಾ ಣ್ಯಂತಾವೇತೌ ವಿಪೂರ್ವೌ । ಶಕಾರಸ್ಯ ವ್ರಶ್ಚಾದಿನಾ ಷತ್ವಂ । ಶುತುದ್ರೀ । ಛಾಂದಸೀ ರೂಪಸಿದ್ಧಿಃ । ಜವೇತೇ । ಜುಙ್ ಗತೌ । ಭೌವಾದಿಕಃ । ಙಿತ್ತ್ವಾದಾತ್ಮನೇಪದಂ । ಆತೋ ಙಿತ ಇತೀಯಾದೇಶಃ । ನಿಘಾತಃ ॥

ಪ್ರತಿಪದಾರ್ಥ

**ವಿಷಿತೇ**—ಕೊಟ್ಟಿಗೆಯಿಂದ ಬಿಚ್ಚಲ್ಪಟ್ಟವೂ | **ಹಾಸಮಾನೇ**—ಪರಸ್ಪರವಾಗಿ ಸ್ಪರ್ಧಿಸುವುವೂ ಆದ | **ಅಶ್ವೇ ಇವ**—ಅಶ್ವಗಳಂತೆಯೂ | **ಶುಭ್ರೇ**—ಶೋಭಮಾನವಾದವೂ | **ರಿಹಾಣೇ**—(ಕರುಗಳನ್ನು) ಪ್ರೀತಿಯಿಂದ ನೆಕ್ಕಲಿಚ್ಛೆಯುಳ್ಳವೂ | **ಮಾತರಾ**—ಕರುಗಳನ್ನುಳ್ಳವೂ ಆದ | **ಗಾವೇವ**—ಗೋವುಗಳು (ಕರುಗಳನ್ನು ನೆನೆಸಿಕೊಂಡು) ಓಡುವಂತೆಯೂ ಸಹ | **ಪಯಸಾ**—ಉದಕದಿಂದ ಪೂರ್ಣವಾದ | **ವಿಪಾಟ್**—ವಿಪಾಟ್ ಎಂಬ ನದಿಯೂ | **ಶತುದ್ರೀ**—ಶುತುದ್ರಿಯೆಂಬ ನದಿಯೂ ಸಹ | **ಪರ್ವತಾನಾಂ**—ಪರ್ವತಗಳ | **ಉಪಸ್ಥಾತ್**—ಪಾರ್ಶ್ವಪ್ರದೇಶಗಳಿಂದ | **ಉಶತೀ**—ಸಮುದ್ರವನ್ನು ಸೇರಲಿಚ್ಛಿಸಿ | **ಪ್ರ ಜವೇತೇ**—ಪ್ರವಹಿಸಿ ಹರಿಯುತ್ತವೆ.

ಭಾವಾರ್ಥ

ಕೊಟ್ಟಿಗೆಯ ಬಂಧನದಿಂದ ಬಿಚ್ಚಲ್ಪಟ್ಟವೂ, ಪರಸ್ಪರವಾಗಿ ಸ್ಪರ್ಧಿಸುವುವೂ ಆದ ಅಶ್ವಗಳು ವೇಗವಾಗಿ ಓಡುವಂತೆಯೂ, ಶೋಭಮಾನವಾದವೂ, ಕರುಗಳನ್ನು ಪ್ರೀತಿಯಿಂದ ನೆಕ್ಕಲಿಚ್ಛೆಯುಳ್ಳವೂ ಕರುಗಳನ್ನು ಪಡೆದಿರುವುವೂ ಆದ ಗೋವುಗಳು ಕರುಗಳನ್ನು ನೆನೆಸಿಕೊಂಡು ಓಡುವಂತೆಯೂ ಸಹ ಉದಕದಿಂದ ಪೂರ್ಣವಾದ **ವಿಪಾಟ್** ಎಂಬ ನದಿಯೂ **ಶುತುದ್ರಿ**ಯೆಂಬ ನದಿಯೂ ಸಹ ಪರ್ವತಗಳ ಪಾರ್ಶ್ವಪ್ರದೇಶಗಳಿಂದ ಸಮುದ್ರವನ್ನು ಸೇರಲಿಚ್ಛಿಸಿ ವೇಗವಾದ ಪ್ರವಾಹದಿಂಧ ಹರಿಯುತ್ತಿವೆ,

## English Translation

Rushing from the flanks of the mountains, eager (to reach the sea) like two mares with loosened reins contending (with each other in speed), like two fair mother cows (hastening) to caress (their calves), the Vipash and Shutudri, flow rapidly with (united) waters.

ಸಂಹಿತಾಪಾಠಃ

**ಇಂದ್ರೇಷಿತೇ ಪ್ರಸವಂ ಭಿಕ್ಷಮಾಣೇ ಅಚ್ಛಾ ಸಮುದ್ರಂ ರಥ್ಯೇವ ಯಾಥಃ ।**

**ಸಮಾರಾಣೇ ಊರ್ಮಿಭಿಃ ಪಿನ್ವಮಾನೇ ಅನ್ಯಾ ವಾಮನ್ಯಾಮಪ್ಯೇತಿ ಶುಭ್ರೇ ॥ ೨ ॥**

ಪದಪಾಠಃ

**ಇಂದ್ರೇಷಿತೇ ಇತೀಂದ್ರಽಇಷಿತೇ । ಪ್ರಽಸವಂ । ಭಿಕ್ಷಮಾಣೇ ಇತಿ । ಅಚ್ಛ । ಸಮುದ್ರಂ । ರಥ್ಯಾಽಇವ । ಯಾಥಃ ।**

**ಸಮಾರಾಣೇ ಇತಿ ಸಂಽಆರಾಣೇ । ಊರ್ಮಿಽಭಿಃ । ಪಿನ್ವಮಾನೇ ಇತಿ । ಅನ್ಯಾ । ವಾಂ । ಅನ್ಯಾಂ । ಅಪಿ । ಏತಿ । ಶುಭ್ರೇ ಇತಿ ॥ ೨ ॥**

### ಸಾಯಣಭಾಷ್ಯಂ

ಹೇ ನದ್ಯೌ ಇಂದ್ರೇಷಿತೇ ಇಂದ್ರೇಣ ಪ್ರೇಷಿತೇ ಪ್ರಸವಂ ತಸ್ಯೇಂದ್ರಸ್ಯಾನುಜ್ಞಾಂ ಭಿಕ್ಷಮಾಣೇ ಪ್ರಾರ್ಥಯಮಾನೇ ಯುವಾಂ ಸಮುದ್ರಮುಚ್ಛಾಭಿಮುಖ್ಯೇನ ಯಾಥಃ । ಗಚ್ಛಥಃ । ತತ್ರ ದೃಷ್ಟಾಂತಃ । ರಥ್ಯೇವೇತಿ । ಯಥಾ ರಥಿನೌ ಲಕ್ಷ್ಯಂ ದೇಶಮಭಿಗಚ್ಛತಸ್ತದ್ವತ್ । ಕಿಂ ಕುರ್ವತ್ಯೌ । ಸಮಾರಾಣೇ ಪ-ರಸ್ಪರಂ ಸಂಗಚ್ಛಂತ್ಯಾವೂರ್ಮಿಭಿಸ್ತರಂಗೈಃ ಪಿನ್ವಮಾನೇ ಪರಿಸರಪ್ರದೇಶಂ ಸಂತರ್ಪಯಂತ್ಯೌ ಶುಭ್ರೇ ಶೋಭಮಾನೇ । ಯುವಾಂ ಸಮುದ್ರಂ ಗಚ್ಛಥ ಇತಿ ಪೂರ್ವೇಣಾನ್ವಯಃ । ತಥಾ ವಾಂ ಯುವಯೋ-ರ್ಮಧ್ಯೇಽನ್ಯೈಕಾನ್ಯಾಮಪರಾಂ ನದೀಮಪ್ಯೇತಿ । ಅಪಿಗಚ್ಛತಿ । ಪರಸ್ಪರಮೈಕ್ಯಮಾಪದ್ಯತ ಇತ್ಯರ್ಥಃ ॥ ಇಂದ್ರೇಷಿತೇ । ಇಷ ಗತಾವಿತ್ಯಸ್ಯ ಕರ್ಮಣಿ ನಿಷ್ಠಾ ಯಾಸ್ತಿ ಸಹೇತ್ಯಾದಿನಾ ಇಡಾಗಮಃ । ತೃತೀಯಾ ಕರ್ಮಣೀತಿ ಪೂರ್ವಪದಸ್ವರಃ । ಪ್ರಸವಂ । ಷೂ ಪ್ರೇರಣ ಇತ್ಯಸ್ಯಾಪ್ । ಥಾಥಾದಿಸ್ವರಃ । ಭಿಕ್ಷಮಾಣೇ । ಭಿಕ್ಷ ಯಚ್ಞಾಯಾಂ । ಆತ್ಮನೇಪದೀ । ಶಾನಚೋ ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಧಾತುಸ್ವರಃ । ರಥ್ಯೇವ । ರಥಸ್ಯೇಮೌ । ತಸ್ಯೇದಮಿತ್ಯರ್ಥೇ ರಥಾದ್ಯದಿತಿ ಯತ್ಪ್ರತ್ಯಯಃ । ತಿತ್ಸ್ವರಿತಃ । ಇವೇನ ವಿ-ಭಕ್ತ್ಯಲೋಪಃ । ಯಾಥಃ । ಯಾತೇರ್ಲಟಿ ರೂಪಂ । ಸಮಾರಾಣೇ । ಋ ಗತಾವಿತ್ಯಸ್ಯ ಲಿಟ್ । ಸಂ-ಪೂರ್ವಸ್ಯಾರ್ತೇಃ ಸಮೋ ಗಮ್ಯೃಚ್ಛಿಭ್ಯಾಮಿತ್ಯಾದಿನಾತ್ಮನೇಪದತ್ವಾತ್ತಸ್ಯ ಕಾನಜಾದೇಶಃ । ಋಚ್ಛತ್ಯೃತಾಮಿತಿ ಗುಣಃ । ಪಿನ್ವಮಾನೇ । ಪಿವಿ ಸೇಚನೇ । ಭೂವಾದಿಃ । ಲಸಾರ್ವಧಾತುಕಸ್ವರೇಣ ಶಾನಚೋಽನುದಾ-ತ್ತತ್ವೇ ಧಾತುಸ್ವರಃ ॥

### ಪ್ರತಿಪದಾರ್ಥ

**ಸಮಾರಾಣೇ**—(ಎಲೈ ನದಿಗಳೇ) ಪರಸ್ಪರವಾಗಿ ಸೇರಿಕೊಂಡು ಪ್ರವಹಿಸುವವರೂ । **ಊರ್ಮಿಭಿಃ**—ಅಲೆ ಗಳಿಂದ । **ಪಿನ್ವಮಾನೇ**—ಸುತ್ತುಮುತ್ತಲಿನ ಪ್ರದೇಶಗಳನ್ನು ತಂಪುಗೊಳಿಸುವವರೂ । **ಶುಭ್ರೇ**—ಪ್ರಕಾಶಮಾನರೂ ಆದ ನೀವಿಬ್ಬರೂ । **ಇಂದ್ರೇಷಿತೇ**—ಇಂದ್ರನಿಂದ ಪ್ರೇರಿತರಾಗಿಯೂ । **ಪ್ರಸವಂ**—ಅವನ ಅನುಜ್ಞೆಯನ್ನು । **ಭಿಕ್ಷ-ಮಾಣೇ**—ಯಾಚಿಸುವವರಾಗಿಯೂ ಇದ್ದು । **ಸಮುದ್ರಂ ಅಛ**—ಸಮುದ್ರವನ್ನು ಅಭಿಮುಖವಾಗಿಟ್ಟುಕೊಂಡು । **ರಥ್ಯೇವ**—ಇಬ್ಬರು ರಥಿಕರಂತೆ । **ಯಾಥಃ**—ಪ್ರವಹಿಸುತ್ತಿದ್ದೀರಿ । **ವಾಂ**—ನಿಮ್ಮಿಬ್ಬರಲ್ಲಿ । **ಅನ್ಯಾ**—ಒಬ್ಬಳು । **ಅನ್ಯಾಂ**—ಇನ್ನೊಬ್ಬಳನ್ನು । **ಅಪ್ಯೇತಿ**—ಸೇರಿಕೊಳ್ಳುತ್ತಾಳೆ.

### ಭಾವಾರ್ಥ

ಎಲೈ ನದಿಗಳೇ, ಪರಸ್ಪರವಾಗಿ ಸೇರಿಕೊಂಡು ಪ್ರವಹಿಸುವವರೂ, ಅಲೆಗಳಿಂದ ಸುತ್ತುಮುತ್ತಲಿನ ಪ್ರದೇಶ ಗಳನ್ನು ತಂಪುಗೊಳಿಸುವವರೂ ಪ್ರಕಾಶಮಾನರೂ ಆದ ನೀವಿಬ್ಬರೂ ಸಹ ಇಂದ್ರನಿಂದ ಪ್ರೇರಿತರಾಗಿಯೂ, ಅವನ ಅನುಜ್ಞೆಯನ್ನು ಯಾಚಿಸುವವರಾಗಿಯೂ ಇದ್ದು ಸಮುದ್ರದ ಅಭಿಮುಖವಾಗಿ ಇಬ್ಬರು ರಥಿಕರಂತೆ ಗಂಭೀರವಾಗಿ ಪ್ರವಹಿಸುತ್ತಿದ್ದೀರಿ. ನಿಮ್ಮಿಬ್ಬರಲ್ಲಿ ಒಬ್ಬಳು ಇನ್ನೊಬ್ಬಳನ್ನು ಸೇರಿಕೊಳ್ಳುತ್ತಾಳೆ.

## English Translation

Impelled by Indra, soliciting (his commands), you go to the ocean like charioteers (to their goal) : flowing together, and swelling with (your) waves, bright (rivers), one of you proceeds to the other.

ಸಂಹಿತಾಪಾಠಃ

ಅಚ್ಛಾ ಸಿಂಧುಂ ಮಾತೃತಮಾಮಯಾಸಂ ವಿಪಾಶಮುರ್ವೀಂ ಸುಭಗಾಮಗನ್ಮ ।
ವತ್ಸಮಿವ ಮಾತರಾ ಸಂರಿಹಾಣೇ ಸಮಾನಂ ಯೋನಿಮನು ಸಂಚರಂತೀ ॥ ೩ ||

ಪದಪಾಠಃ

ಅಚ್ಛ । ಸಿಂಧುಂ । ಮಾತೃತಮಾಂ । ಅಯಾಸಂ । ವಿಽಪಾಶಂ । ಉರ್ವೀಂ । ಸುಽಭಗಾಂ । ಅಗನ್ಮ ।
ವತ್ಸಂಽಇವ । ಮಾತರಾ । ಸಂರಿಹಾಣೇ ಇತಿ ಸಂಽರಿಹಾಣೇ । ಸಮಾನಂ । ಯೋನಿಂ । ಅನು । ಸಂಚರಂತೀ
ಇತಿ ಸಂಽಚರಂತೀ ॥ ೩ ॥

ಸಾಯಣಭಾಷ್ಯಂ

ಹೇ ನದ್ಯೌ ಮಾತೃತಮಾಮತಿಶಯೇನ ಮಾತರಂ ಸಿಂಧುಂ ಸ್ರವಂತೀಂ ಶುತುದ್ರೀಂ ತ್ವಾಮಚ್ಛಾಭಿಮುಖ್ಯೇನಾಯಾಸಂ । ವಿಶ್ವಾಮಿತ್ರೋಽಹಂ ಪ್ರಾಪ್ತೋಽಭೂವಂ । ಉರ್ವೀಂ ಮಹತೀಂ ಸುಭಗಾಂ ಸೌಭಾಗ್ಯವತೀಂ ವಿಪಾಶಂ ತ್ವಾಮಗನ್ಮ । ವಯಂ ಪ್ರಾಪ್ತಾಃ ಸ್ಮಃ । ಕಿಂ ಕುರ್ವತ್ಯೌ । ಮಾತರಾ ಮಾತರೌ ದ್ವೇ ಧೇನೂ ವತ್ಸಮಿವ ಸಂರಿಹಾಣೇ । ಅಂತರ್ಣೀತಸನರ್ಥೋ ಲಿಹಿಃ । ಜಿಹ್ವಯಾ ಲೇಢುಮಿಚ್ಛಂತ್ಯೌ ಯಥಾ ವತ್ಸಮನುಗಚ್ಛತಸ್ತದ್ವತ್ ಸಮಾನಮೇಕಂ ಯೋನಿಂ ಸ್ಥಾನಂ ಸಮುದ್ರಮನು ಅಭಿಲಕ್ಷ್ಯ ಸಂಚರಂತೀ ಸಮ್ಯಕ್ ಚರಂತ್ಯೌ । ಯುವಾಮಯಾಸಿಷಮಿತಿ ಪೂರ್ವೇಣಾನ್ವಯಃ ॥ ಅಯಾಸಂ । ಯಾ ಪ್ರಾಪಣ ಇತ್ಯಸ್ಯ ರೂಪಂ । ಇಡಭಾವಶ್ಛಾಂದಸಃ । ಅಗನ್ಮ । ಗಮೇರ್ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ಮ್ವೋಶ್ಚೇತಿ ಮಕಾರಸ್ಯ ನಕಾರಃ । ನಿಘಾತಃ । ಸಂಚರಂತೀ । ಚರತಿರ್ಗತ್ಯರ್ಥಃ । ತೃತೀಯಾಯುಕ್ತತ್ವಾಭಾವಾದಾತ್ಮನೇಪದಾಭಾವಃ । ಶತುರ್ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಕೃತೇ ಧಾತುಸ್ವರಃ ॥

ಪ್ರತಿಪದಾರ್ಥ

**ವತ್ಸಂ ಸಂರಿಹಾಣೇ**—ಕರುಗಳನ್ನು ಆಘ್ರಾಣಿಸಿ ನೆಕ್ಕಲು । **ಮಾತರಾ ಇವ**—ತಾಯಿಂದಿರಾದ ಧೇನುಗಳು ಒಟ್ಟಿಗೆ ಸೇರಿಕೊಂಡು ಒಂದೇ ಆಶ್ರಯವಾದ ಕೊಟ್ಟಿಗೆಯ ಅಭಿಮುಖವಾಗಿ ಓಡುವಂತೆ । **ಸಮಾನಂ**—ನಿಮ್ಮಿಬ್ಬರಿಗೂ ಸಮಾನವಾದ । **ಯೋನಿಂ**—ಸಮುದ್ರರೂಪದ ಪಾತ್ರವನ್ನು । **ಅನು**—ಅಭಿಮುಖವಾಗಿಟ್ಟು । **ಸಂಚರಂತೀ**—ಪ್ರವಹಿಸತಕ್ಕ ಎಲೈ ನದಿಗಳೇ (ನಿಮ್ಮಲ್ಲಿ) **ಮಾತೃತಮಾಂ**—ಮಾತೆಯರಲ್ಲೆಲ್ಲಾ ಶ್ರೇಷ್ಠವಾದ ಪೋಷಕಳಾದವಳೂ । **ಸಿಂಧುಂ**—ಪ್ರವಹಿಸುವವಳೂ ಆದ ಶುತುದ್ರಿಯನ್ನು । **ಅಚ್ಛ**—ಅಭಿಲಕ್ಷಿಸಿ । **ಅಯಾಸಂ**—ಬಂದು ಸೇರಿದ್ದೇನೆ । **ಉರ್ವೀಂ**—ಮಹತ್ಸ್ವರೂಪವುಳ್ಳವಳೂ । **ಸುಭಗಾಂ**—ಸೌಭಾಗ್ಯವುಳ್ಳವಳೂ ಆದ । **ವಿಪಾಶಂ**—ವಿಪಾಟ್ ನದಿಯನ್ನೂ । **ಅಗನ್ಮ**—ಬಂದು ಸೇರಿದ್ದೇವೆ.

ಭಾವಾರ್ಥ

ಕರುಗಳನ್ನು ಆಘ್ರಾಣಿಸಿ ನೆಕ್ಕಲು ತಾಯಿಂದಿರಾದ ಧೇನುಗಳು ಒಟ್ಟಿಗೆ ಸೇರಿಕೊಂಡು ಒಂದೇ ಆಶ್ರಯವಾದ ಕೊಟ್ಟಿಗೆಗೆ ಅಭಿಮುಖವಾಗಿ ಓಡುವಂತೆ ನಿಮ್ಮಿಬ್ಬರಿಗೂ ಸಮಾನವಾದ ಸಮುದ್ರರೂಪದ ಪಾತ್ರವನ್ನು ಅಭಿಮುಖ

ವಾಗಿ ಪ್ರವಹಿಸತಕ್ಕ ಎಲೈ ನದಿಗಳೇ, ನಿಮ್ಮಲ್ಲಿ **ಶುತುದ್ರಿ**ಯೆಂಬ ನದಿಯು ಪೋಷಕರಾದ ಮಾತೆಯರಲ್ಲೆಲ್ಲಾ ಶ್ರೇಷ್ಠಳಾತ ಮಾತೆಯಾಗಿದ್ದಾಳೆ. **ವಿಪಾಟ್** ಎಂಬುವಳು ಮಹತ್ಸ್ವರೂಪವುಳ್ಳವಳೂ ಸೌಭಾಗ್ಯವತಿಯೂ ಆಗಿದ್ದಾಳೆ ಇಂತಹ ನಿಮ್ಮಿಬ್ಬರನ್ನೂ ನಾನು ನನ್ನ ಪೋಷಣೆಗಾಗಿ ಬಂದು ಆಶ್ರಯಿಸುತ್ತೇನೆ.

## English Translation.

I repaired to the most maternal river ; I went to the wide auspicious Vipash, flowing together to a common receptacle, like parent cows (hastening to) caress the calf.

### ಸಂಹಿತಾಪಾಠಃ

ಏನಾ ವಯಂ ಪಯಸಾ ಪಿನ್ವಮಾನಾ ಅನು ಯೋನಿಂ ದೇವಕೃತಂ ಚರಂತೀಃ ।
ನ ವರ್ತವೇ ಪ್ರಸವಃ ಸರ್ಗತಕ್ತಃ ಕಿಂಯುರ್ವಿಪ್ರೋ ನದ್ಯೋ ಜೋಹವೀತಿ ॥ ೪ ॥

### ಪದಪಾಠಃ

ಏನಾ । ವಯಂ । ಪಯಸಾ । ಪಿನ್ವಮಾನಾಃ । ಅನು । ಯೋನಿಂ । ದೇವಽಕೃತಂ । ಚರಂತೀಃ ।
ನ । ವರ್ತವೇ । ಪ್ರಽಸವಃ । ಸರ್ಗಽತಕ್ತಃ । ಕಿಂಽಯುಃ । ವಿಪ್ರಃ । ನದ್ಯಃ । ಜೋಹವೀತಿ ॥ ೪ ॥

### ಸಾಯಣಭಾಷ್ಯಂ

ಏವಂ ಸ್ತುತೇ ನದ್ಯೌ ವಿಶ್ವಾಮಿತ್ರಂ ಪ್ರತ್ಯೂಚತುಃ। ಏನೈನೇನ ಪಯಸಾ ಪಿನ್ವಮಾನಾಃ ಸಂತರ್ಪಯಂತ್ಯೋ ದೇವಕೃತಂ ದೇವೇನೇಂದ್ರೇಣ ಕೃತಂ ಸಂದಿಷ್ಟಂ ಯೋನಿಂ ಸ್ಥಾನಂ ಸಮುದ್ರಮನು ಲಕ್ಷೀಕೃತ್ಯ ಚರಂತೀರ್ಗಚ್ಛಂತ್ಯೋ ವಯಮಾಸ್ಮಹೇ । ದ್ವಯೋರ್ಬಹುವಚನಂ ಪೂಜಾರ್ಥಂ । ತಾಸಾಮಸ್ಮಾಕಂ ಸರ್ಗತಕ್ತಃ ಸರ್ಗೇ ಗಮನೇ ಪ್ರವೃತ್ತಃ ಪ್ರಸವ ಉದ್ಯೋಗೋ ನ ವರ್ತ್ತವೇ । ನಿವರ್ತನಾಯ ನ ಭವತಿ। ಕಿಂಯುಃ ಕಿಮಿಚ್ಛನ್ನಸೌ ವಿಪ್ರೋ ಬ್ರಾಹ್ಮಣೋ ನದ್ಯೋ ನದೀರಸ್ಮಾನ್ ಜೋಹವೀತಿ । ಭೃಶಮಾಹ್ವಯತಿ ॥ ಏನಾ । ಇದಂಶಬ್ದಸ್ಯ ತೃತೀಯಾಯಾ ಏನಾದೇಶಃ । ಸುಪಾಂ ಸುಲುಗಿತಿ ತೃತೀಯಾಯಾ ಆಜಾದೇಶಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಪಿನ್ವಮಾನಾಃ । ಪಿವಿ ಸೇಚನೇ । ದೇವಕೃತಂ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರಃ । ವರ್ತ್ತವೇ । ವೃತು ವರ್ತನೇ । ತುಮರ್ಥೇ ತವೇನ್ಪ್ರತ್ಯಯಃ । ನಿತ್ಸ್ವರಃ । ಸರ್ಗತಕ್ತಃ । ಕ್ತೇ ಚೇತಿ ಪೂರ್ವಪದಪ್ರಕೃತಿಸ್ವರಃ । ಕಿಂಯುಃ । ಕಿಮಿಚ್ಛನ್ । ಕ್ಯಚಿ ಮಾಂತಾವ್ಯಯಪ್ರತಿಷೇಧಃ । ಪಾ. ೩-೧-೮-೧ । ಇತಿ ಛಾಂದಸತ್ವಾದತ್ರ ಪ್ರತಿಷೇಧೋ ನ ಭವತೀತಿ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಪ್ರತ್ಯಯಸ್ವರಃ । ನದ್ಯಃ । ಛಾಂದಸೋ ಯಣಾದೇಶಃ । ಜೋಹವೀತಿ । ಹ್ವಯೋ ಯಙ್ಲುಕ್ಯಭ್ಯಸ್ತಸ್ಯ ಚೇತಿ ಸಂಪ್ರಸಾರಣೇ ಕೃತೇ ಗುಣೋ ಯಙ್ಲುಕೋರಿತ್ಯಭ್ಯಾಸಸ್ಯ ಗುಣಃ । ಯಙೋ ವೇತೀಡಾಗಮಃ । ಗುಣಃ । ನಿಘಾತಃ ॥

ಪ್ರತಿಪದಾರ್ಥ

**ವಯಂ**—ವಿಪಾಟ್ ಮತ್ತು ಶುತುದ್ರಿಯೆಂಬ ನಾಮಧೇಯವುಳ್ಳ ನಾವಿಬ್ಬರೂ ಸಹ | **ಏನಾ ಪಯಸಾ**—ಪ್ರಭೂತವಾದ ಈ ಉದಕದಿಂದ | **ಪಿನ್ವಮಾನಾಃ**—ಲೋಕಕ್ಕೆಲ್ಲಾ ತೃಪ್ತಿಯನ್ನುಂಟುಮಾಡುತ್ತಾ | **ದೇವಕೃತಂ**—ಪ್ರಭುವಾದ ಇಂದ್ರನಿಂದ ಸಂದಿಷ್ಟವಾದ | **ಯೋನಿಂ**—ಸಮುದ್ರಸ್ಥಾನವನ್ನು | **ಅನು**—ಲಕ್ಷೀಕರಿಸಿ | **ಚರಂತೀಃ**—ಪ್ರವಹಿಸುತ್ತಿದ್ದೇವೆ | **ಸರ್ಗತಕ್ತಃ**—ನಮ್ಮ ಪ್ರವಾಹದಲ್ಲಿ ಆಸಕ್ತವಾದ | **ಪ್ರಸವಃ**—ಉದ್ಯೋಗವು| **ನ ವರ್ತವೇ**—ನಿಲ್ಲಲಾಗುವುದಿಲ್ಲ | **ಕಿಂಯುಃ**—ಯಾವ ಅಭಿಲಾಷೆಯನ್ನೂ ಇಟ್ಟುಕೊಂಡು | **ವಿಪ್ರಃ**—ಬ್ರಾಹ್ಮಣನಾದ ಈ ವಿಶ್ವಾಮಿತ್ರನು | **ನದ್ಯಃ**—ನದಿಗಳಾದ ನಮ್ಮನ್ನು । **ಜೋಹವೀತಿ**—ಕರೆಯುತ್ತಾನೆ.

ಭಾವಾರ್ಥ

**ವಿಪಾಟ್** ಮತ್ತು **ಶುತುದ್ರಿ**ಯೆಂಬ ನಾಮಧೇಯವುಳ್ಳ ನಾವಿಬ್ಬರೂ ಸಹ ಪ್ರಭೂತವಾದ ನಮ್ಮ ಉದಕದಿಂದ ಲೋಕಕ್ಕೆಲ್ಲಾ ಸಂತೃಪ್ತಿಯನ್ನುಂಟುಮಾಡುತ್ತಾ ಪ್ರಭುವಾದ ಇಂದ್ರನಿಂದ ಸಂದಿಷ್ಟವಾದ ಸಮುದ್ರಸ್ಥಾನವನ್ನು ಲಕ್ಷೀಕರಿಸಿ ಪ್ರವಹಿಸುತ್ತಿದ್ದೇವೆ. ನಮ್ಮ ಪ್ರವಾಹದ ಉದ್ಯೋಗವು ನಿಲ್ಲಲಾಗುವುದೇ ಇಲ್ಲ. ಯಾವ ಇಚ್ಛೆಯನ್ನು ಇಟ್ಟುಕೊಂಡು (ಏತಕ್ಕಾಗಿ) ಈ ವಿಶ್ವಾಮಿತ್ರನು ನಮ್ಮನ್ನು ಕರೆಯುತ್ತಿದ್ದಾನೆ?

English Translation

[The rivers speak] Fertilizing (the land) with this (our) current, we are flowing to the receptacle which has been appointed by the deity (Indra): the course appointed for our going (permits) not of delay: of what is the sage desirous, that he addresses the rivers?

ಸಂಹಿತಾಪಾಠಃ

**ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ |**
**ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯುರಹ್ವೇ ಕುಶಿಕಸ್ಯ ಸೂನುಃ ॥ ೫ ॥**

ಪದಪಾಠಃ

**ರಮಧ್ವಂ | ಮೇ | ವಚಸೇ | ಸೋಮ್ಯಾಯ | ಋತವರೀಃ | ಉಪ | ಮುಹೂರ್ತಂ | ಏವೈಃ |**
**ಪ್ರ | ಸಿಂಧುಂ | ಅಚ್ಛ | ಬೃಹತೀ | ಮನೀಷಾ | ಅವಸ್ಯುಃ | ಅಹ್ವೇ | ಕುಶಿಕಸ್ಯ | ಸೂನುಃ ॥ ೫ ॥**

ಸಾಯಣಭಾಷ್ಯಂ

**ವಿಶ್ವಾಮಿತ್ರೋ ನದೀಃ ಪ್ರತಿ ಬ್ರೂತೇ | ಋತಾವರೀಃ | ಋತಮುದಕಂ। ತದ್ವತ್ಯೋ ಹೇ ನದ್ಯೋ ಯೂಯಂ ಮೇ ವಿಶ್ವಾಮಿತ್ರಸ್ಯ ಮಮ ಸೋಮ್ಯಾಯ | ಉತ್ತ್ರೀಯರ್ಾಹಂ ಸೋಮಂ ಸಂಪಾದಯಾಮೀತ್ಯೇವಂ ಸೋಮಸಂಪಾದಿನೇ | ವಚಸೇ ತದರ್ಥಮೇವೈಃ | ಪಂಚಮ್ಯರ್ಥೇ ತೃತೀಯಾ | ಶೀಘ್ರ–**

ಗಮನೇಭ್ಯೋ ಮುಹೂರ್ತಂ ಮುಹೂರ್ತಮಾತ್ರಮುಪ ರಮಧ್ವಂ | ಉಪಪೂರ್ವೋ ರಮಿರುಪ-ಸಂಹಾರೇ ವರ್ತತೇ | ಕ್ಷಣಮಾತ್ರಂ ಶೀಘ್ರಗಮನಾದುಪರತಾ ಭವತ | ಸಾಮಾನ್ಯೇನ ನದೀಷೂಚ್ಯಮಾ-ನಾಸು ಸಮಿಹಿತಂ ಪ್ರಯೋಜನಮಕುರ್ವತೀಷು ಪುರೋವರ್ತಿನೀಂ ಶುತುದ್ರೀಂ ಪ್ರತಿ ಬ್ರೂತೇ | ಕುಶಿ-ಕಸ್ಯ ರಾಜರ್ಷೇಃ ಸೂನುರ್ವಿಶ್ವಾಮಿತ್ರೋಽಹಂ ಬೃಹತೀ ಮಹತ್ಯಾ ಮನೀಷಾ ಮನೀಷಯಾ ಸ್ತುತ್ಯಾ-ವಸ್ಯುರಾತ್ಮನೋ ರಕ್ಷಣಮಿಚ್ಛನ್ ಸನ್ ಸಿಂಧುಂ ಶುತುದ್ರೀಂ ತ್ವಾಮಚ್ಛಾಭಿಮುಖ್ಯೇನ ಪ್ರಾಹ್ವೇ | ಪ್ರಕ-ರ್ಷೇಣಾಹ್ವಯಾಮಿ | ಅತ್ರ ನಿರುಕ್ತಂ | ಉಪರಮಧ್ವಂ ಮೇ ವಚಸೇ ಸೋಮ್ಯಾಯ ಸೋಮಸಂಪಾದಿನ ಋತಾವರೀರೃತವತ್ಯ ಋತಮಿತ್ಯುದಕನಾಮ ಪ್ರತ್ಯೃತಂ ಭವತಿ ಮುಹೂರ್ತಮೇವೈರಯನ್ಯೈರವನ್ಯೈರ್ವಾ| ಪ್ರಾಭಿಹ್ವಯಾಮಿ ಸಿಂಧುಂ ಬೃಹತ್ಯಾ ಮಹತ್ಯಾ ಮನೀಷಯಾ ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ವಾವನಾಯ ಕುಶಿಕಸ್ಯ ಸೂನುಃ | ಕುಶಿಕೋ ರಾಜಾ ಬಭೂವ | ನಿ ೨-೨೫ | ಇತಿ || ರಮಧ್ವಂ | ರಮು ಉಪರಮೇ | ಉಪಪೂರ್ವಾದ್ರಮತೇರ್ವಿಭಾಷಾಕರ್ಮಕಾತ್ | ಪಾ. ೧-೩-೮೫ | ಇತ್ಯಾತ್ಮನೇಪದಂ | ಋತಾವರೀಃ | ಋತಶಬ್ದಾನ್ಮತ್ವರ್ಥೇ ಛಂದಸೀವನಿಪಾವಿತಿ ವನಿಪ್ | ವನೋ ರ ಚೇತಿ ಙೀಪ್ ರೇಫ-ಶ್ಚಾಂತಾದೇಶಃ | ವಾ ಛಂದಸೀತಿ ಸವರ್ಣದೀರ್ಘಃ | ಆಮಂತ್ರಿತಸ್ಯ ಪಾದಾದಿತ್ವಾತ್ವಾಷ್ಟಿಕಮಾದ್ಯು-ದಾತ್ತತ್ವಂ | ಏವೈಃ | ಇಣ್ ಗತೌ | ಇಣ್‌ಶೀಙ್ಭ್ಯಾಂ ವನ್ | ಆರ್ಧಧಾತುಕಲಕ್ಷಣೋ ಗುಣಃ | ನಿತ್ಸ್ವರಃ| ಬೃಹತೀ ಮನೀಷಾ | ಉಭಯತ್ರ ತೃತೀಯಾಯಾಃ ಪೂರ್ವಸವರ್ಣದೀರ್ಘಃ | ಅವಸ್ಯುಃ | ಅವೋ ರಕ್ಷಣಮಿಚ್ಛನ್ | ಸುಪ ಆತ್ಮನಃ ಕ್ಯಚ್ | ನಃ ಕ್ಯ ಇತಿ ನಕಾರಾಂತಸ್ಯ ಪದಸಂಜ್ಞಾಯಾ ನಿಯಮಿತ-ತ್ವಾದತ್ರ ಸಕಾರಸ್ಯ ರುರ್ನ ಭವತಿ | ಕ್ಯಾಚ್ಛಂದಸೀತ್ಯುಪ್ರತ್ಯಯಃ | ಅಹ್ವೇ | ಹ್ವಯತೇರ್ಲುಙಿ ಸಿಚಿ ಆತ್ಮನೇಪದೇಷ್ವನ್ಯತರಸ್ಯಾಂ | ಪಾ. ೩-೧-೫೪ | ಇತ್ಯಙಾದೇಶಃ | ಗುಣಃ ನಿಘಾತಃ || ೧೨ ||

ಪ್ರತಿಪದಾರ್ಥ

ಋತಾವರೀಃ—ಉದಕಪೂರ್ಣವಾದ ಎಲೈ ನದಿಗಳೇ | **ಸೋಮ್ಯಾಯ**—ಸೋಮಾಹರಣಾರ್ಥವಾಗಿ ಹೊರಟಿರುವ | **ಮೇ**—ನನ್ನ | **ವಚಸೇ**—ಪ್ರಾರ್ಥನೆಯ ನಿಮಿತ್ತವಾಗಿ | **ಏವೈಃ**—ನಿಮ್ಮ ಶೀಘ್ರಗಾಮಿಗಳಾದ ಪ್ರವಾಹಗಳಿಂದ | **ಮುಹೂರ್ತಂ**—ಕೊಂಚಕಾಲ | **ಉಪ ರಮಧ್ವಂ**—ಪ್ರಶಾಂತರಾಗಿರಿ (ಪ್ರವಾಹದ ವೇಗವನ್ನು ತಡೆಯಿರಿ) |**ಕುಶಿಕಸ್ಯ**—ಕುಶಿಕನೆಂಬ ರಾಜರ್ಷಿಯ | **ಸೂನುಃ**—ಪುತ್ರನಾದ ನಾನು (ವಿಶ್ವಾಮಿತ್ರನು)| **ಬೃಹತೀ**—ಮಹತ್ತಾದ | **ಮನೀಷಾ**—ಸ್ತುತಿಯಿಂದ | **ಅವಸ್ಯುಃ**—(ನನ್ನ) ರಕ್ಷಣೆಯನ್ನಿಚ್ಛಿಸಿ | **ಸಿಂಧುಂ**—ಶುತುದ್ರಿಯಾದ ನಿನ್ನನ್ನು | **ಅಚ್ಛ**—ನಿನ್ನ ಅಭಿಮುಖವಾಗಿ ನಿಂತು | **ಪ್ರ ಅಹ್ವೇ**—ನಮ್ರನಾಗಿ ಪ್ರಾರ್ಥಿಸುತ್ತೇನೆ.

ಭಾವಾರ್ಥ

ಉದಕಪೂರ್ಣವಾದ ಎಲೈ ನದಿಗಳೇ, ಸೋಮಾಹರಣಾರ್ಥವಾಗಿ ಹೊರಟಿರುವ ನನ್ನ ಪ್ರಾರ್ಥನೆಯ ನಿಮಿತ್ತವಾಗಿ ನಿಮ್ಮ ಶೀಘ್ರಗಾಮಿಗಳಾದ ಪ್ರವಾಹಗಳನ್ನೂ ಕೊಂಚಕಾಲ ತಡೆಯಿರಿ. ಎಲೈ ಶುತುದ್ರಿಯೇ, ಕುಶಿಕಪುತ್ರನಾದ ನಾನು ಆತ್ಮರಕ್ಷಣಾರ್ಥವಾಗಿ ಮಹತ್ತಾದ ಸ್ತುತಿಯಿಂದ ನಿನ್ನನ್ನು ನಮ್ರನಾಗಿ ಪ್ರಾರ್ಥಿಸುತ್ತೇನೆ.

English Translation

[Vishwamitra speaks] Rivers, charged with water, rest a moment from your course at my request, who go to gather the Soma (plant): I, the son of

Kushika, desirous of protection, address with earnest prayer especially the river before me.

ಸಂಹಿತಾಪಾಠಃ

ಇಂದ್ರೋ ಅಸ್ಮಾँ ಅರದದ್ವಜ್ರಬಾಹುರಪಾಹನ್ವೃತ್ರಂ ಪರಿಧಿಂ ನದೀನಾಂ ।
ದೇವೋಽನಯತ್ಸವಿತಾ ಸುಪಾಣಿಸ್ತಸ್ಯ ವಯಂ ಪ್ರಸವೇ ಯಾಮ ಉರ್ವೀಃ ॥ ೬ ॥

ಪದಪಾಠಃ

ಇಂದ್ರಃ । ಅಸ್ಮಾನ್ । ಅರದತ್ । ವಜ್ರಽಬಾಹುಃ । ಅಪ । ಅಹನ್ । ವೃತ್ರಂ । ಪರಿಽಧಿಂ । ನದೀನಾಂ ।
ದೇವಃ । ಅನಯತ್ । ಸವಿತಾ । ಸುಽಪಾಣಿಃ । ತಸ್ಯ । ವಯಂ । ಪ್ರಽಸವೇ । ಯಾಮಃ । ಉರ್ವೀಃ ॥

ಸಾಯಣಭಾಷ್ಯಂ

ನದ್ಯಃ ಪ್ರತ್ಯೂಚುಃ । ಹೇ ವಿಶ್ವಾಮಿತ್ರ ವಜ್ರಬಾಹುಃ । ವಜ್ರಯುಕ್ತೋ ಬಾಹುರ್ಯಸ್ಯಾಸೌ ವಜ್ರಬಾಹುಃ । ತಾದೃಶೋ ಬಲವಾನಿಂದ್ರೋ ನದೀರಸ್ಮಾನರದತ್ । ರದತಿಃ ಖನತಿಕರ್ಮಾ । ಅಖನತ್ । ಕಥಮಖನತ್ । ಉಚ್ಯತೇ । ನದೀನಾಂ ಶಬ್ದಕಾರಿಣೀನಾಮಪಾಂ ಪರಿಧಿಂ ಪರಿತೋ ನಿಹಿತಮುದಕಮಂತಃ ಕೃತ್ವಾ ಪರಿತೋ ವರ್ತಮಾನಮಿತ್ಯರ್ಥಃ । ತಾದೃಶಂ ವೃತ್ರಂ । ವೃಣೋತ್ಯಾಕಾಶಮಿತಿ ವೃತ್ರೋ ಮೇಘಃ । ತಂ ಮೇಘಮಪಾಹನ್ । ಜಘಾನ । ತಸ್ಮಿನ್ಹತ ಆಪಃ ಪತಿತಾಃ । ತಾಭಿರ್ಗಚ್ಛಂತೀಭಿರ್ವಯಂ ಖಾತಾಃ । ಏವಂ ಮೇಘಹನನದ್ವಾರೇಣಾಖನತ್ । ನ ಕೇವಲಮಖನತ್ ಕಿಂ ತರ್ಹಿ ಸವಿತಾ ಸರ್ವಸ್ಯ ಜಗತಃ ಪ್ರೇರಕಃ ಸುಪಾಣಿಃ ಶೋಭನಹಸ್ತ ಉತ್ಪತ್ತಿಸ್ಥಿತಿಕರ್ತೃತ್ವಾತ್ತಾದೃಶೋ ದೇವೋ ದ್ಯೋತಮಾನ ಇಂದ್ರೋಽಸ್ಮಾನನಯತ್ । ಮೇಘಭೇದನಂ ಕೃತ್ವೋದಕಪ್ರೇರಣೇನ ಸಮುದ್ರಮಪೂರಯತ್ । ತಸ್ಯ ತಾದೃಶಸಾಮರ್ಥ್ಯೋಪೇತಸ್ಯೇಂದ್ರಸ್ಯ ಪ್ರಸವೇಽಭ್ಯನುಜ್ಞಾಯಾಂ ವರ್ತಮಾನಾ ಉರ್ವೀರುದಕೈಃ ಪ್ರಭೂತಾ ವಯಂ ಯಾಮಃ । ಗಚ್ಛಾಮಃ । ನ ತವ ವಚನಾದುಪರಮಾಮಹೇ । ಉಕ್ತಾರ್ಥಂ ಯಾಸ್ಕೋ ಬ್ರವೀತಿ । ಇಂದ್ರೋ ಅಸ್ಮಾನರದದ್ವಜ್ರಬಾಹೂ ರದತಿಃ ಖನತಿಕರ್ಮಾಪಾಹನ್ವೃತ್ರಂ ಪರಿಧಿಂ ನದೀನಾಮಿತಿ ವ್ಯಾಖ್ಯಾತಂ । ದೇವೋಽನಯತ್ಸವಿತಾ ಸುಪಾಣಿಃ ಕಲ್ಯಾಣಪಾಣಿಃ । ಪಾಣಿಃ ಪಣಾಯತೇಃ ಪೂಜಾಕರ್ಮಣಃ ಪ್ರಗೃಹ್ಯ ಪಾಣೀ ದೇವಾನ್ಪೂಜಯಂತಿ । ತಸ್ಯ ವಯಂ ಪ್ರಸವೇ ಯಾಮ ಉರ್ವೀರುರ್ವ್ಯಃ । ನಿ. ೨-೨೬ । ಇತಿ ॥ ಅರದತ್ । ರದತೇರ್ಲಙಿ ರೂಪಂ । ವಜ್ರಬಾಹುಃ । ಬಹುವ್ರೀಹೌ ಪೂರ್ವಪದಸ್ವರಃ । ಅಹನ್ । ಹಂತೇರ್ಲಙಿ ರೂಪಂ । ನಿಘಾತಃ । ಪರಿಧಿಂ । ಡುಧಾಞ್ ಧಾರಣಪೋಷಣಯೋರಿತ್ಯಸ್ಮಾತ್ಕರ್ಮಣ್ಯುಪಸರ್ಗೇ ಘೋಃ ಕಿರಿತಿ ಕಿಪ್ರತ್ಯಯಃ । ಆತೋ ಲೋಪಃ । ಕೃದುತ್ತರಪದಸ್ವರಃ । ಅನಯತ್ । ನಯತೇರ್ಲಙಿ ರೂಪಂ । ಸುಪಾಣಿಃ । ಪಣ ವ್ಯವಹಾರೇ ಸ್ತುತೌ ಚ । ಅಶಿಪಣಾಯ್ಯೋ ರುಡಾಯಲುಕೌ ಚ । ಉ. ೪-೧೩೩ । ಇತೀಞ್ । ಆಯಲುಕ್ । ಬಹುವ್ರೀಹೌ ನಞ್ಸುಭ್ಯಾಮಿತಿ ಸ್ವರಃ । ಪ್ರಸವೇ । ಷೂ

ಪ್ರೇರಣೇ | ಖೂದೋರಬಿತಿ ಭಾವೇಽಪ್ರತ್ಯಯಃ | ಥಾಥಘಞ್ಕ್ತಾಜಿತ್ರಕಾಣಾಮಿತ್ಯುತ್ತರಪದಾಂತೋದಾತ್ತತ್ವಂ | ಯಾಮಃ | ಯಾ ಪ್ರಾಪಣ ಇತ್ಯಸ್ಯ ಲಟಿ ರೂಪಂ | ನಿಘಾತಃ | ಉರ್ವೀಃ | ಉರುಶಬ್ದಾದ್ವೋತೋ ಗುಣವಚನಾದಿತಿ ಙೀಷ್ | ವಾ ಛಂದಸೀತಿ ಸವರ್ಣದೀರ್ಘಃ | ಪ್ರತ್ಯಯಸ್ವರಃ ||

ಪ್ರತಿಪದಾರ್ಥ

(ಎಲೈ ವಿಶ್ವಾಮಿತ್ರನೇ) ವಜ್ರಬಾಹುಃ—ಹಸ್ತದಲ್ಲಿ ವಜ್ರಾಯುಧವನ್ನು ಧರಿಸಿರುವ | ಇಂದ್ರಃ—ಇಂದ್ರನು | ನದೀನಾಂ—ನದ್ಯುದಕಗಳಿಗೆ | ಪರಿಧಿಂ—ತಡೆಯಾಗಿ ಸುತ್ತಲೂ ಆವರಿಸಿ ನಿಂತಿದ್ದ | ವೃತ್ರಂ—ಮೇಘರೂಪಿಯಾದ ಅಸುರನ್ನು | ಅಪಾಹನ್—ನಾಶಮಾಡಿದನು (ಮತ್ತು) | ಅಸ್ಮಾನ್—ನಮ್ಮ ಪ್ರವಾಹದ್ವಾರಗಳನ್ನು | ಅರದತ್—ಸೀಳಿ ಬಿಡಿಸಿದನು | ಸವಿತಾ—ಜಗತ್ಪ್ರೇರಕನಾದವನೂ | ಸುಪಾಣಿಃ—ಶ್ರೇಷ್ಠವಾದ ಹಸ್ತವುಳ್ಳವನೂ | ದೇವಃ—ಪ್ರಕಾಶಮಾನನೂ ಆದ ಇಂದ್ರನು | ಅನಯತ್—ನಮ್ಮ ಪ್ರವಾಹಕ್ಕೆ ಅನುಕೂಲಮಾಡಿದನು | ತಸ್ಯ—ಆ ಇಂದ್ರನ ಅನುಜ್ಞಾಂ—ಆಜ್ಞಾನುವರ್ತಿಗಳಾಗಿಯೂ | ಉರ್ವೀಃ—ಪ್ರಭೂತವಾದ ಉದಕವುಳ್ಳವರಾಗಿಯೂ ಆದ | ವಯಂ—ನಾವು | ಯಾಮಃ—ಪ್ರಹಿಸುತ್ತಿದ್ದೇವೆ.

ಭಾವಾರ್ಥ

ಎಲೈ ವಿಶ್ವಾಮಿತ್ರನೆ, ವಜ್ರಹಸ್ತನಾದ ಇಂದ್ರನು ನದ್ಯುದಕಗಳಿಗೆ ತಡೆಯಾಗಿ ಸುತ್ತಲೂ ಆವರಿಸಿ ನಿಂತಿದ್ದ ಮೇಘರೂಪಿಯಾದ ಅಸುರನನ್ನು ನಾಶಮಾಡಿ ನಮ್ಮ ಪ್ರವಾಹದ್ವಾರಗಳನ್ನು ಬಿಡಿಸಿದನು. ಜಗತ್ಪ್ರೇರಕನಾದವನೂ, ಶ್ರೇಷ್ಠವಾದ ಹಸ್ತವುಳ್ಳವನೂ ಪ್ರಕಾಶಮಾನನೂ ಆದ ಇಂದ್ರನು ನಮ್ಮ ಪ್ರವಾಹಕ್ಕೆ ಅನುಕೂಲವನ್ನುಂಟುಮಾಡಿದನು. ಆ ಪ್ರಭೂತವಾದ ಉದಕದಿಂದ ಪೂರ್ಣರಾದ ನಾವು ಆ ಇಂದ್ರನ ಆಜ್ಞಾನುವರ್ತಿಗಳಾಗಿ ಪ್ರವಹಿಸುತ್ತಿದ್ದೇವೆ.

## English Translation

[The rivers speak] Indra, the wielder of the thunderbolt, dug our channels when he slew Ahi the blocker-up of rivers : the divine and well-handed Savitri has led us (on our path), and obedient to his commands we flow (as) ample (streams).

ಸಂಹಿತಾಪಾಠಃ

ಪ್ರವಾಚ್ಯಂ ಶಶ್ವಧಾ ವೀರ್ಯಂ೩ ತದಿಂದ್ರಸ್ಯ ಕರ್ಮ ಯದಹಿಂ ವಿವೃಶ್ಚತ್ ।
ವಿ ವಜ್ರೇಣ ಪರಿಷದೋ ಜಘಾನಾಯನ್ನಾಪೋಽಯನಮಿಚ್ಛಮಾನಾಃ ॥ ೭ ॥

ಪದಪಾಠಃ

ಪ್ರವಾಚ್ಯಂ । ಶಶ್ವಧಾ । ವೀರ್ಯಂ । ತತ್ । ಇಂದ್ರಸ್ಯ । ಕರ್ಮ । ಯತ್ । ಅಹಿಂ । ವಿವೃಶ್ಚತ್ ।
ವಿ । ವಜ್ರೇಣ । ಪರಿಸದಃ । ಜಘಾನ । ಆಯನ್ । ಆಪಃ । ಅಯನಂ । ಇಚ್ಛಮಾನಾಃ ॥ ೭ ॥

ಸಾಯಣಭಾಷ್ಯಂ

ಯೋಽಯಮಿಂದ್ರೋಽಹಿಂ ಮೇಘಂ ವಿವೃಶ್ಚತ್ ಉದಕಪ್ರೇರಣಾರ್ಥಂ ಜಘಾನೇತಿ ಯತ್ಕರ್ಮ ಛೇದನರೂಪಂ ತದಿದಂ ತಸ್ಯೇಂದ್ರಸ್ಯ ವೀರ್ಯಂ ಸಾಮರ್ಥ್ಯಂ ಶಶ್ವಧಾ ಸರ್ವದಾ ಪ್ರವಾಚ್ಯಂ । ಪ್ರಕರ್ಷೇಣ ವಚನೀಯಂ । ತಥಾ ಸ ಇಂದ್ರಃ ಪರಿಷದಃ ಪರಿತಃ ಸೀದತ ಆಸೀನಾನ್ ಪ್ರತಿಬಂಧಕಾರಿಣೋಽಸುರಾನ್ ವಜ್ರೇಣ ವಿ ಜಘಾನ । ಅಥಾಯನಂ ಸ್ಥಾನಮಿಚ್ಛಮಾನಾ ಇಚ್ಛಂತ್ಯ ಆಪ ಆಯನ್ । ಯಾಂತಿ ॥ ಪ್ರವಾಚ್ಯಂ । ವಚ ಪರಿಭಾಷಣ ಇತ್ಯಸ್ಮಾದೃಹಲೋರ್ಣ್ಯದಿತಿ । ಣ್ಯತ್ ಣಿತ್ತ್ವಾದುಪಧಾವೃದ್ಧಿಃ । ವಚೋಽಶಬ್ದಸಂಜ್ಞಾಯಾಂ । ಪಾ. ೭-೩-೬೭ । ಇತಿ ಕುತ್ವಾಭಾವಃ । ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವಾ ವಾಚೆಯತೇರಚೋ ಯತ್ । ಯತೋಽನಾವ ಇತಿ ಸ್ವರಃ । ಶಶ್ವಧಾ । ಶಶ್ವಚ್ಛಬ್ದಾತ್ಸ್ವಾರ್ಥೇ ಧಾಪ್ರತ್ಯಯಸ್ತಕಾರಲೋಪಶ್ಚ ದ್ರಷ್ಟವ್ಯಃ । ವಿವೃಶ್ಚತ್ । ಓವ್ರಶ್ಚೂ ಛೇದನೇ । ತುದಾದಿಃ । ಲಙ್ ಗ್ರಹಿಜ್ಯಾವಯಿವ್ಯಧಿವಷ್ಟಿವಿಚತಿವೃಶ್ಚತಿಪೃಚ್ಛತಿಭೃಜ್ಜತೀನಾಂ ಙಿತಿ ಚೇತ್ಯಾದಿನಾ ಸಂಪ್ರಸಾರಣಂ । ಸಹ ಸುಪೇತ್ಯತ್ರ ಸಹೇತಿ ಯೋಗವಿಭಾಗಾತ್ಸಮಾಸಃ । ಸಮಾಸಸ್ವರಃ । ಪರಿಷದಃ । ಕ್ವಿಪ್ । ಸಂಹಿತಾಯಾಂ ಸದೇರಪ್ರತೇರಿತಿ ಷತ್ವಂ । ಜಘಾನ । ಹಂತೇರ್ಲಿಟಿ ಣಲಿ ರೂಪಂ । ನಿಘಾತಃ । ಆಯನ್ । ಅಯ ಗತಾವಿತ್ಯಸ್ಯ ಲಙಿ ರೂಪಂ । ಪಾದಾದಿತ್ವಾದನಿಘಾತಃ । ಇಚ್ಛಮಾನಾಃ । ಇಷು ಇಚ್ಛಾಯಾಮಿತ್ಯಸ್ಮಾದ್ವ್ಯತ್ಯಯೇನ ಶಾನಚ್ । ತಸ್ಯ ಲಸಾರ್ವಧಾತುಕಸ್ವರೇ ಕೃತೇ ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಅಹಿಂ—ಮೇಘರೂಪಿಯಾದ ಅಸುರನನ್ನು । **ವಿವೃಶ್ಚತ್**—(ಉದಕಪ್ರವಾಹಕ್ಕೆ ಅನುಕೂಲವಾಗಲೆಂದು) ಕೊಂದನು ಎಂಬ । **ಯತ್ ಕರ್ಮ**—ಯಾವ ಕರ್ಮವಿದೆಯೋ । **ತತ್**—ಆ ಇಂದ್ರನ ಮಹತ್ಕರ್ಮವೂ । **ಇಂದ್ರಸ್ಯ**—ಇಂದ್ರನ । **ವೀರ್ಯಂ**—ಸಾಮರ್ಥ್ಯವೂ । **ಶಶ್ವಧಾ**—ಯಾವಾಗಲೂ । **ಪ್ರವಾಚ್ಯಂ**—ಅತ್ಯತಿಶಯವಾಗಿ ಸ್ತುತಿಸಲ್ಪಡತಕ್ಕದ್ದು । **ಪರಿಷದಃ**—ಸುತ್ತಲೂ ವ್ಯಾಪಿಸಿದ್ದ ಅಸುರರನ್ನು । **ವಜ್ರೇಣ**—ವಜ್ರಾಯುಧದಿಂದ । **ವಿ ಜಘಾನ**—ಕೊಂದನು, (ಅನಂತರ) । **ಆಯನಂ**—ತಮ್ಮ ಗಮ್ಯಸ್ಥಾನವನ್ನು । **ಇಚ್ಛಮಾನಾಃ**—ಅಪೇಕ್ಷಿಸಿ । **ಆಪಃ**—ಉದಕಗಳು । **ಆಯನ್**—ಪ್ರವಹಿಸುತ್ತವೆ.

ಭಾವಾರ್ಥ

ಮೇಘರೂಪಿಯಾದ ಅಸುರನನ್ನು ಉದಕಪ್ರವಾಹಕ್ಕೆ ಅನುಕೂಲವಾಗಲೆಂದು ಕೊಂದನು ಎಂಬ ಇಂದ್ರನ ಯಾವ ಕರ್ಮವಿದೆಯೋ ಆ ಮಹತ್ಕರ್ಮವೂ ಮತ್ತು ಇಂದ್ರನ ಸಾಮರ್ಥ್ಯವೂ ಸಹ ಯಾವಾಗಲೂ ಅತ್ಯತಿಶಯವಾಗಿ ಸ್ತುತಿಸಲ್ಪಡತಕ್ಕದ್ದಾಗಿದೆ. ಇಂದ್ರನು ಸುತ್ತಲೂ ವ್ಯಾಪಿಸಿದ್ದ ಅಸುರರನ್ನು ವಜ್ರಾಯುಧದಿಂದ ಕೊಂದನು. ಅನಂತರ ಉದಕಗಳು ತಮ್ಮ ಗಮ್ಯಸ್ಥಾನವನ್ನಪೇಕ್ಷಿಸಿ ಪ್ರವಹಿಸುತ್ತವೆ.

## English Translation

[Vishwamitra speaks] Ever is that heroic exploit of Indra to be celebrated when he cut Ahi to pieces, and with his thunderbolt destroyed the surrounding (obstructors of the rain), whence the waters proceed in the direction they desire.

ಸಂಹಿತಾಪಾಠಃ

ಏತದ್ವಚೋ ಜರಿತರ್ಮಾಪಿ ಮೃಷ್ಠಾ ಆ ಯತ್ತೇ ಘೋಷಾನುತ್ತರಾ ಯುಗಾನಿ ।
ಉಕ್ಥೇಷು ಕಾರೋ ಪ್ರತಿ ನೋ ಜುಷಸ್ವ ಮಾ ನೋ ನಿ ಕಃ ಪುರುಷತ್ರಾ ನಮಸ್ತೇ ॥

ಪದಪಾಠಃ

ಏತತ್ । ವಚಃ । ಜರಿತರಿತಿ । ಮಾ । ಅಪಿ । ಮೃಷ್ಠಾಃ । ಆ । ಯತ್ । ತೇ । ಘೋಷಾನ್ । ಉತ್ऽತರಾ ।
ಯುಗಾನಿ ।
ಉಕ್ಥೇಷು । ಕಾರೋ ಇತಿ । ಪ್ರತಿ । ನಃ । ಜುಷಸ್ವ । ಮಾ । ನಃ । ನಿ । ಕರಿತಿ ಕಃ । ಪುರುಷऽತ್ರಾ ।
ನಮಃ । ತೇ ॥ ೮ ॥

ಸಾಯಣಭಾಷ್ಯಂ

ನದ್ಯಃ ಪ್ರಸಂಗಾದಿಂದ್ರಸ್ತೋತ್ರಂ ಕೃತ್ವಾ ವಿಶ್ವಾಮಿತ್ರಂ ಪ್ರತ್ಯೂಚುಃ । ಜರಿತಃ ಸ್ತೋತರ್ಹೇ ವಿಶ್ವಾಮಿತ್ರ ತೇ ತ್ವದೀಯಂ ಯತ್ಸಂವಾದಾತ್ಮಕಂ ವಚಸ್ತ್ವಂ ನೋಽಭೀತ್ಯಾ ಘೋಷಾನುದ್ಘೋಷಯಿಸ್ಯಸೇ ತದ್ವಚೋ ಮಾಪಿ ಮೃಷ್ಠಾಃ । ಮಾ ವಿಸ್ಮಾರ್ಷೀಃ । ಕಿಂ ಕಾರಣಂ । ಉತ್ತರಾ ಯುಗಾನ್ಯುತ್ತರೇಷು ಯಾಜ್ಞಿಕೇಷು ಯುಗೇಷ್ವಹಃಸೂಕ್ಥೇಷು ಕಾರೋ ಶಸ್ತ್ರಾಣಾಂ ಕರ್ತಸ್ತ್ವಂ ನೋಽಸ್ಮಾನ್ಪ್ರತಿ ಜುಷಸ್ವ । ಸಂವಾದಾತ್ಮಕೇನ ತೇನ ವಾಕ್ಯೇನ ಪ್ರತಿಸೇವಸ್ವ । ಇದಾನೀಂ ನೋಽಸ್ಮಾನ್ ಪುರುಷತ್ರಾ ಪುರುಷೇಷು ಮಾ ನಿ ಕಃ । ಉಕ್ತಿಪ್ರತ್ಯುಕ್ತಿರೂಪಸಂವಾದವಾಕ್ಯಾಧ್ಯಾಪನೇನ ನಿತರಾಂ ಪುಂವತ್ ಪ್ರಾಗಲ್ಭ್ಯಂ ಮಾ ಕಾರ್ಷೀಃ । ತೇ ತುಭ್ಯಂ ನಮಃ ॥ ಮೃಷ್ಠಾಃ । ಮೃಜೂಷ್ ಶುದ್ಧಾವಿತ್ಯಸ್ಯ ಲಙಿ ವ್ಯತ್ಯಯೇನಾತ್ಮನೇಪದಂ । ಅದಾದಿತ್ವಾಚ್ಛಪೋ ಲುಕ್ । ವ್ರಶ್ಚಾದಿನಾ ಷತ್ವಂ । ನಿಘಾತಃ । ಘೋಷಾನ್ । ಘುಷಿರ್ ಸಂಶಬ್ದನ ಇತ್ಯಸ್ಯ ಶತರಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತೋ ಗುಣ ಇತಿ ಪರರೂಪತ್ವಾಭಾವಃ । ಸವರ್ಣದೀರ್ಘಃ । ಶತುರ್ಲಸಾರ್ವಧಾತುಕಸ್ವರೇ ಕೃತೇ ಧಾತುಸ್ವರಃ । ಯುಗಾನಿ । ಯುಜಿರ್ ಯೋಗೇ । ಉಂಛಾದಿಷು ಘಞಂತತ್ವೇನ ನಿಪಾತನಾದಗುಣತ್ವಂ । ವಿಶಿಷ್ಟವಿಷಯಂ ಚ ನಿಪಾತನಮಿಷ್ಯತೇ । ಕಾಲವಿಶೇಷೇ ರಥಾದ್ಯುಪಕರಣೇ ಚೇತಿ ತತ್ರ ಪಾಠಾದೇವಾಂತೋದಾತ್ತತ್ವಂ । ಕಾಲಾಧ್ವನೋರತ್ಯಂತಸಂಯೋಗ ಇತಿ ದ್ವಿತೀಯಾ । ಕಾರೋ । ಕರೋತೇಃ ಕೃವಾಪಾಜಿಮಿಸ್ವದಿಸಾಧ್ಯಶೂಭ್ಯ ಉಣ್ಪ್ರತ್ಯಯಃ । ಆಮಂತ್ರಿತತ್ವಾನ್ನಿಘಾತಃ । ಕಃ । ಕರೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಲುಕ್ । ಹಲ್ಙ್ಯಾದಿನಾ ಸಿಚೋ ಲೋಪಃ । ನ ಮಾಙ್ಯೋಗ ಇತ್ಯಡಭಾವಃ । ಪುರುಷತ್ರಾ । ದೇವಮನುಷ್ಯಪುರುಷಪುರುಮರ್ತ್ಯೇಭ್ಯೋ ದ್ವಿತೀಯಾಸಪ್ತಮ್ಯೋರ್ಬಹುಲಮಿತಿ ಸಪ್ತಮ್ಯರ್ಥೇ ತ್ರಾಪ್ರತ್ಯಯಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಜರಿತಃ**—ಸ್ತುತಿಕರ್ತನಾದ ಎಲೈ ವಿಶ್ವಾಮಿತ್ರನೇ । **ನಃ ಘೋಷಾನ್**—ನಮ್ಮನ್ನು ಸ್ತುತಿಸತಕ್ಕ । **ತೇ ಯದ್ವಚಃ**—ನಿನ್ನ ಯಾವ ಸ್ತುತಿವಾಕ್ಯಗಳಿವೆಯೋ ಅವನ್ನು । **ಮಾಪಿ ಮೃಷ್ಠಾಃ**—ಖಂಡಿತವಾಗಿಯೂ ಮರೆಯ

ಬೇಡ । **ಉತ್ತರಾ ಯುಗಾನಿ**—ಮುಂದಿನ ಯಜ್ಞಕಾಲಗಳಲ್ಲಿ ನಡೆಯುವ । **ಉಕ್ಥೇಷು**—ಪ್ರಾರ್ಥನಾಕಾಲಗಳಲ್ಲಿ । **ಕಾರೋ**—ಉತ್ತಮವಾದ ಎಲೈ ಶಸ್ತ್ರಕರ್ತನಾದವನೇ । **ನಃ**—ನಮ್ಮನ್ನೂ । **ಪ್ರತಿ ಜುಷಸ್ವ**—ಸೇವಿಸು । **ನಃ**—ನಮ್ಮನ್ನು । **ಪುರುಷತ್ರಾ**—ಇತರ ಪುರುಷರಲ್ಲಿ । **ಮಾ ನಿ ಕಃ**—ಕಠಿಣವಾದ ಮಾತುಗಳಿಗೆ ಎಡೆಮಾಡಬೇಡ । **ತೇ**—ನಿನಗೆ । **ನಮಃ**—ನಮಸ್ಕಾರವು.

ಭಾವಾರ್ಥ

ಸ್ತುತಿಕರ್ತನಾದ ಎಲೈ ವಿಶ್ವಾಮಿತ್ರನೇ, ನಮ್ಮನ್ನು ಸ್ತುತಿಸತಕ್ಕ ನಿನ್ನ ಯಾವ ಸ್ತುತಿವಾಕ್ಯಗಳಿವೆಯೋ ಅವನ್ನು ಖಂಡಿತವಾಗಿಯೂ ಯಾವಾಗಲೂ ಮರೆಯಬೇಡ. ಉತ್ತಮವಾದ ಎಲೈ ಶಸ್ತ್ರಕರ್ತನೇ, ಮುಂದಿನ ಯಜ್ಞಕಾಲಗಳಲ್ಲಿ ನಡೆಯುವ ಪ್ರಾರ್ಥನಾಕಾಲಗಳಲ್ಲಿ ನಮ್ಮನ್ನೂ ಸೇವಿಸು, ನಮ್ಮನ್ನು ಇತರ ಪುರುಷರ ನಡುವೆ ಕಠಿಣವಾದ ಮಾತುಗಳಿಗೆ ಎಡೆಮಾಡಬೇಡ. ನಿನಗೆ ನಮಸ್ಕಾರವು.

English Translation.

[The rivers speak] Praiser of Indra, forget not this speech, nor the words that (you have addressed to us) for future ages (to reverence): celebrator (of holy rites), be favourable to us in solemn prayers; treat us not after the (arrogant fashion) of men: salutation be to you!

ಸಂಹಿತಾಪಾಠಃ

ಓ ಷು ಸ್ವಸಾರಃ ಕಾರವೇ ಶೃಣೋತ ಯಯೌ ವೋ ದೂರಾದನಸಾ ರಥೇನ ।
ನಿ ಷೂ ನಮಧ್ವಂ ಭವತಾ ಸುಪಾರಾ ಅಧೋಅಕ್ಷಾಃ ಸಿಂಧವಃ ಸ್ರೋತ್ಯಾಭಿಃ ॥

ಪದಪಾಠಃ

ಓ ಇತಿ । ಸು । ಸ್ವಸಾರಃ । ಕಾರವೇ । ಶೃಣೋತ । ಯಯೌ । ವಃ । ದೂರಾತ್ । ಅನಸಾ । ರಥೇನ ।
ನಿ । ಸು । ನಮಧ್ವಂ । ಭವತ । ಸುಽಪಾರಾಃ । ಅಧಃಽಅಕ್ಷಾಃ । ಸಿಂಧವಃ । ಸ್ರೋತ್ಯಾಭಿಃ ॥ ೯ ॥

ಸಾಯಣಭಾಷ್ಯಂ

ವಿಶ್ವಾಮಿತ್ರೋ ನದೀಃ ಪ್ರತ್ಯುವಾಚ । ಸ್ವಸಾರೋ ಭಗಿನ್ಯಃ ಸಿಂಧವೋ ಹೇ ನದ್ಯಃ ಕಾರವೇ ಸ್ತೋತ್ರಂ ಕುರ್ವಾಣಸ್ಯ ಮಮ ವಚನಂ ಸು ಸುಷ್ಠು ಓ ಶೃಣೋತ । ಶೃಣುತೈವ । ಅನಸಾ ಶಕಟೇನ ರಥೇನ ಚ ಸಹ ದೂರಾದ್ವಿಪ್ರಕೃಷ್ಟಾದ್ದೇಶಾದ್ವೋ ಯುಷ್ಮಾನ್ಯಯೌ । ಪ್ರಾಪ್ತೋಽಸ್ಮಿ । ಯೂಯಂ ಸು ಸುಷ್ಠು ನಿ ನಮಧ್ವಂ । ಆತ್ಮನಾ ಸ್ವಯಂ ಪ್ರಹ್ವಾ ಭವತ । ತಥಾ ಸುಪಾರಾಃ । ರಥಾದೀನಾಂ ತೀರಾತ್ಸುಖೇನಾವರೋಹಣಾರೋಹಣೇ ಯಥಾ ಸ್ಯಾತಾಂ ತಥಾ ಶೋಭನರೋಧಸಶ್ಚ ಭವತ । ಕಿಂಚ ಯೂಯಂ ಸ್ರೋತ್ಯಾಭಿಃ ಪ್ರವಣಶೀಲಾಭಿರದ್ಭಿರಧೋಅಕ್ಷಾ ರಥಾಂಗಸ್ಯಾಕ್ಷಸ್ಯಾಧಸ್ತಾದ್ಭವತ । ಯದಾಪೋಽಕ್ಷಸ್ಯಾಧಸ್ತಾದ್ಭವಂತಿ ತದಾ ರಥಾದೀನಿ ನೇತುಂ ಶಕ್ಯಂತೇ । ತಸ್ಮಾತ್ತತ್ಪರಿಮಾಣೋದಕಾ ಭವತೇತ್ಯರ್ಥಾಭಿಪ್ರಾ-

ಯಃ ॥ ಓ ಇತಿ ಪ್ರಗೃಹ್ಯಸಂಜ್ಞಾ । ಶೃಣೋತ । ಶ್ರು ಶ್ರವಣ ಇತ್ಯಸ್ಯ ಲೋಟಿ ತಪ್ರತ್ಯಯಸ್ಯ ತಪ್ತನಪ್ತನಥನಾಶ್ಚೇತಿ ತಬಾದೇಶಃ । ಪಿತ್ತ್ವಾದ್ಗುಣಃ । ನಿಘಾತಃ । ಯಯೌ । ಯಾ ಪ್ರಾಪಣ ಇತ್ಯಸ್ಯ ಭೂತಮಾತ್ರೇ ಲಿಟ್ಯುತ್ತಮೇ ಣಲ್ಯಾತ ಔ ಣಲ ಇತ್ಯೌಕಾರಃ । ಏಕಾದೇಶಸ್ವರಃ । ವಃ । ಯುಷ್ಮಚ್ಛಬ್ದಸ್ಯ ದ್ವಿತೀಯಾಯಾ ಬಹುವಚನಸ್ಯ ವಸ್ನಸಾವಿತಿ ವಸಾದೇಶಃ । ಷೂ । ನಿಪಾತಸ್ಯೇತಿ ಸಂಹಿತಾಯಾಂ ದೀರ್ಘಃ । ನಮಧ್ವಂ । ಣಮು ಪ್ರಹ್ವತ್ವೇ ಶಬ್ದೇ ಚೇತ್ಯಸ್ಯ ಕರ್ಮಕರ್ತರಿ ನ ದುಹಸ್ನು ನಮಾಂ ಯಕ್ಚಿಣಾವಿತಿ ಪ್ರತಿಷೇಧಾದ್ಯಗಭಾವಃ । ಅಧೋಅಕ್ಷಾಃ । ಅಧರಶಬ್ದಸ್ಯ ಪೂರ್ವಾಧರಾವರಾಣಾಮಸಿ ಪುರಧವಶ್ಚೈಷಾಮಿತ್ಯಸಿಪ್ರತ್ಯಯೋಽಧಾದೇಶಶ್ಚ । ಅಕ್ಷಶಬ್ದೋಽಶೂ ವ್ಯಾಪ್ತಾವಿತ್ಯಸ್ಮಾದಶೇರ್ದೇವನೇ । ಉ. ೩-೬೫ । ಇತಿ ಸಪ್ರತ್ಯಯಾಂತಃ । ಕೃದುತ್ತರಪದಪ್ರಕೃತಿಸ್ವರಃ । ಸಿಂಧವಃ । ಆಮಂತ್ರಿತತ್ವಾನ್ನಿಘಾತಃ । ಸ್ರೋತ್ಯಾಭಿಃ । ಸ್ರೋತಃಶಬ್ದಾತ್ಸ್ರೋತಸೋ ವಿಭಾಷಾ ಡ್ಯಡ್ಡ್ಯೌ । ಪಾ. ೪-೪-೧೧೩ । ಇತಿ ಡ್ಯಪ್ರತ್ಯಯಃ । ಡಿತ್ತ್ವಾಟ್ಟಿಲೋಪಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಸ್ವಸಾರಃ**—ಸಹೋದರಿಯರಾದ । **ಸಿಂಧವಃ**—ಎಲೈ ನದಿಗಳೇ । **ಕಾರವೇ**—ಸ್ತುತಿಕರ್ತನಾದ ನನ್ನ (ಪ್ರಾರ್ಥನೆಯನ್ನು) । **ಸು ಓ ಶ್ರುಣೋತ**—ಚೆನ್ನಾಗಿ ಆಲಿಸಿ ಕೇಳಿರಿ। **ಅನಸಾ**—ಗಾಡಿಯೊಡನೆಯೂ । **ರಥೇನ**—ರಥದೊಡನೆಯೂ ಸಹ । **ದೂರಾತ್**—ಬಹಳ ದೂರಪ್ರದೇಶದಿಂದ । **ವಃ**—ನಿಮ್ಮ ಸಮೀಪಕ್ಕೆ । **ಯಯೌ**—ಬಂದು ಸೇರಿದ್ದೇನೆ । **ಸು ನಮಧ್ವಂ**—ನಿಮ್ಮ ಪ್ರವಾಹವನ್ನು ಕಡಿಮೆ ಮಾಡುವುದರ ಮೂಲಕ ಬಾಗಿದವರಾಗಿ । **ಭವತ**—ಆಗಿರಿ । **ಸ್ರೋತ್ಯಾಭಿಃ**—ನಿಮ್ಮ ಪ್ರವಾಹರೂಪದ ಉದಕಗಳಿಂದ । **ಅಧೋಅಕ್ಷಾಃ**—ನನ್ನ ರಥದ ಇರುಚಿಗಿಂತ ಕೆಳಭಾಗಕ್ಕೆ ಬಗ್ಗಿದವರಾಗಿ ಆಗಿ, ಮತ್ತು । **ಸುಪಾರಾಃ**—ದಾಟಲು ಸುಲಭವಾಗುವ ದಡವುಳ್ಳವರಾಗಿರಿ.

ಭಾವಾರ್ಥ

ಸಹೋದರಿಪ್ರಾಯರಾದ ಎಲೈ ನದಿಗಳೇ, ಸ್ತುತಿಕರ್ತನಾದ ನನ್ನ ಪ್ರಾರ್ಥನೆಯನ್ನು ಚೆನ್ನಾಗಿ ಆಲಿಸಿ ಕೇಳಿರಿ. ಗಾಡಿಯೊಡನೆಯೂ ರಥದೊಡನೆಯೂ ಸಹ ಬಹಳ ದೂರಪ್ರದೇಶದಿಂದ ನಿಮ್ಮ ಸಮೀಪಕ್ಕೆ ಬಂದು ಸೇರಿದ್ದೇನೆ. ನಿಮ್ಮ ಪ್ರವಾಹವನ್ನು ಕಡಿಮೆ ಮಾಡಿರಿ ಮತ್ತು ನಮ್ಮ ಗಾಡಿಯ ಇರುಚಿಗಿಂತ ಕೆಳಭಾಗಕ್ಕೆ ನಿಮ್ಮ ಪ್ರವಾಹವಿರಲಿ. ನನಗೆ ದಾಟಲು ಸುಲಭವಾಗುವಂತೆ ನಿಮ್ಮ ದಡವಿರಲಿ.

English Translation

[Vishwamitra speaks] Listen, sister (streams), kindly to him who praises you ; who has come from afar with a waggon and chariot: bow down lowlily ; become easily fordable ; remain, rivers, lower than the axle (of the wheel) with your currents.

ಸಂಹಿತಾಪಾಠಃ

**ಆ ತೇ ಕಾರೋ ಶೃಣವಾಮಾ ವಚಾಂಸಿ ಯಯಾಥ ದೂರಾದನಸಾ ರಥೇನ ।**

**ನಿ ತೇ ನಂಸೈ ಪೀಪ್ಯಾನೇವ ಯೋಷಾ ಮರ್ಯಾಯೇವ ಕನ್ಯಾ ಶಶ್ವಚೈ ತೇ ॥ ೧೦ ॥**

ಪದಪಾಠಃ

ಆ । ತೇ । ಕಾರೋ ಇತಿ । ಶೃಣವಾಮ । ವಚಾಂಸಿ । ಯಯಾಥ । ದೂರಾತ್ । ಅನಸಾ । ರಥೇನ ।

ನಿ । ತೇ । ನಂಸೈ । ಪೀಪ್ಯಾನಾಽಇವ । ಯೋಷಾ । ಮರ್ಯಾಯಽಇವ । ಕನ್ಯಾ । ಶಶ್ವಚೈ । ತೇ ಇತಿ ತೇ ॥

ಸಾಯಣಭಾಷ್ಯಂ

ನದ್ಯಃ ಪೂರ್ವಂ ವಿಶ್ವಾಮಿತ್ರವಾಕ್ಯಂ ಪ್ರತ್ಯಾಖ್ಯಾಯಾನಯರ್ಚಾ ತಸ್ಯ ವಾಕ್ಯಮಾಶುಶ್ರುವುಃ । ಕಾರೋ ಸ್ತೋತ್ರಂ ಕುರ್ವಾಣ ಹೇ ವಿಶ್ವಾಮಿತ್ರ ತೇ ತವ ವಚಾಂಸೀಮಾನಿ ವಾಕ್ಯಾನ್ಯಾ ಶೃಣವಾಮ । ಶೃಣುಮಃ । ತವ ಸಮೀಹಿತಂ ಪ್ರಯೋಜನ ಕುರ್ಮ ಇತ್ಯರ್ಥಃ । ಅನಸಾ ಶಕಟೇನ ರಥೇನ ಚ ಸಹ ಯಯಾಥ । ಯತೋ ದೂರಾದಾಗತೋಽಸಿ । ವಯಂ ಚ ತೇ ತ್ವದರ್ಥಂ ನಿ ನಂಸೈ । ನೀಚೈರ್ನಮಾಮ । ಪ್ರತ್ಯೇಕವಿವಕ್ಷಯಾತ್ರೈಕವಚನಂ। ರಥೇನ ಗಂತುಂ ಗಾಧೋದಕಾ ಭವಾಮೇತ್ಯರ್ಥಃ । ತತ್ರ ದೃಷ್ಟಾಂತಃ। ಪೀಪ್ಯಾನೇವ ಯೋಷಾ ।ಪೀಪ್ಯಾನಾ ಪುತ್ರಂ ಸ್ತನಂ ಪಾಯಯಂತೀ ಯೋಷಾ ಮಾತಾ ಯಥಾ ಪ್ರಹ್ವೀ-ಭವತಿ । ದೃಷ್ಟಾಂತಾಂತರಂ । ಯಥಾ ಕನ್ಯಾ ಯುವತಿರ್ಮರ್ಯಾಯೇವ ಮನುಷ್ಯಾಯ ಪಿತ್ರೇ ಭ್ರಾತ್ರೇ ವಾ ಶಶ್ವಚೈ ಪರಿಷ್ವಜನಾಯ ನಮ್ರಾ ಭವತಿ ತದ್ವತ್ತೇ ತ್ವದರ್ಥಂ ಪ್ರಹ್ವೀಭವಾಮಃ । ತೇ ಇತಿ ಪುನರುಕ್ತಿ-ರಾದರಾರ್ಥಂ । ಏತಾಮೃಚಂ ಯಾಸ್ಕ ಏವಂ ವ್ಯಾಚಷ್ಟೇ । ಆಶೃಣವಾಮ ತೇ ಕಾರೋ ವಚನಾನಿ ಯಾಹಿ ದೂರಾದನಸಾ ಚ ರಥೇನ ಚ ನಿನಮಾಮ ತೇ ಪಾಯಯಮಾನೇವ ಯೋಷಾ ಪುತ್ರಂ ಮರ್ಯಾಯೇವ ಕನ್ಯಾ ಪರಿಷ್ವಜನಾಯ ನಿನಮಾ ಇತಿ ವಾ । ನಿ. ೨-೨೭ । ಇತಿ ॥ ಕಾರೋ । ಸಂಬುದ್ಧೌ ಶಾಕಲ್ಯಸ್ಯೇತೌ । ಪಾ. ೧-೧-೧೬ । ಇತಿ ಪ್ರಗೃಹ್ಯಸಂಜ್ಞಾ । ಶೃಣವಾಮ । ಶ್ರು ಶ್ರವಣ ಇತ್ಯಸ್ಯ ಲೋಟ್ಯಾಡುತ್ತಮಸ್ಯ ಪಿಚ್ಚೇ-ತ್ಯಾಡಾಗಮಃ । ಪಿತ್ತ್ವಾದ್ಗುಣಃ । ನಿಘಾತಃ । ಯಯಾಥ । ಯಾ ಪ್ರಾಪಣ ಇತ್ಯಸ್ಯ ಭೂತಮಾತ್ರೇ ಲಿಟಿ ಥಲ್ಯೇಕಾಚ ಉಪದೇಶೇಽನುದಾತ್ತಾದಿತೀಟ್ಪ್ರತಿಷೇಧಃ । ಲಿತ್ಸ್ವರಃ । ಅನಸಾ । ಸಹಾರ್ಥೇ ತೃತೀಯಾ । ನಂಸೈ । ಣಮು ಪ್ರಹ್ವತ್ವೇ ಇತ್ಯಸ್ಯ ಲೇಟ್ಯುತ್ತಮೇ ಲೇಟಿ ಸಿಬ್ಬಹುಲಮಿತಿ ಸಿಪ್ । ವೈತೋಽನ್ಯತ್ರೇತ್ಯೈಕಾ-ರಾದೇಶಃ । ನಿಘಾತಃ । ಪೀಪ್ಯಾನೇವ । ಪೀಙ್ ಪಾನ ಇತ್ಯಸ್ಯಾಂತರ್ಭಾವಿತಣ್ಯರ್ಥಸ್ಯ ಲಿಟಿ ಕಾನಚಿ ರೂಪಂ । ಚಿತ್ಸ್ವರಃ । ಯೋಷಾ । ಯು ಮಿಶ್ರಣೇ । ವೃತ್ಯಾವದಿಹನೀತ್ಯಾದಿನಾ । ಉ. ೩-೬೨ । ಸಪ್ರ-ತ್ಯಯಃ । ಯೌತೀತಿ ಯೋಷಾ । ವೃಷಾದಿತ್ವಾದಾದ್ಯುದಾತ್ತಃ । ಶಶ್ವಚೈ । ಷ್ವಜ್ಜ ಪರಿಷ್ವಂಗ ಇತ್ಯಸ್ಮಾ-ತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಪೃಷೋದರಾದಿತ್ವಾದಿಷ್ಟರೂಪಸಿದ್ಧಿರಂತೋದಾತ್ತಶ್ಚ ॥ ॥೧೩॥

ಪ್ರತಿಪದಾರ್ಥ

ಕಾರೋ-ಸ್ತುತಿಕರ್ತನಾದ ಎಲೈ ವಿಶ್ವಾಮಿತ್ರನೇ । ತೇ-ನಿನ್ನ । ವಚಾಂಸಿ-ಸ್ತುತಿವಾಕ್ಯಗಳನ್ನು । ಆ ಶೃಣವಾಮ—ಆಲಿಸಿ ಕೇಳಿದ್ದೇವೆ । ಅನಸಾ—ಗಾಡಿಯೊಡನೆಯೂ । ರಥೇನ—ರಥದೊಡನೆಯೂ । ದೂರಾತ್—ಬಹು ದೂರಪ್ರದೇಶದಿಂದ । ಯಯಾಥ—ಬಂದಿದ್ದೀಯೆ । ಪೀಪ್ಯಾನಾ—ಮಗುವಿಗೆ ಸ್ತನ್ಯಪಾನಮಾಡಿಸುವುದಕ್ಕಾಗಿ । ಯೋಷಾ—ಮಾತೆಯಾದ ಸ್ತ್ರೀಯು ಬಗ್ಗುವಂತೆಯೂ । ಮರ್ಯಾಯ—ಪುರುಷನಿಗೆ । ಶಶ್ವಚೈ—ಆಲಿಂಗನಕ್ಕೆ ಅನುಕೂಲವಾಗಲು । ಕನ್ಯಾ ಇವ—ಯುವತಿಯು ಬಗ್ಗುವಂತೆಯೂ । ತೇ—ನಿನಗಾಗಿ । ನಿ ನಂಸೈ—ನಾವು ಪ್ರವಾಹವನ್ನು ತಗ್ಗಿಸಿ ಬಾಗುತ್ತೇವೆ.

ಇಂದ್ರ ವೃತ್ರಾಯ ಹಂತವೇ || ೬ ||

ಪದಪಾಠಃ

ವಾಜೇಷು । ಸಸಹಿಃ । ಭವ । ತ್ವಾಂ । ಈಮಹೇ । ಶತಕ್ರತೋ ಇತಿ ಶತಕ್ರತೋ ।

ಇಂದ್ರ । ವೃತ್ರಾಯ । ಹಂತವೇ || ೬ ||

ಸಾಯಣಭಾಷ್ಯಂ

ಶತ್ರಕ್ರತೋ ಹೇ ಇಂದ್ರ ವಾಜೇಷು ಸಂಗ್ರಾಮೇಷು ಸಾಸಹಿಃ ಶತ್ರೂಣಾಮಭಿಭವಿತಾ ಭವ । ವೃತ್ರಾಯ ಹಂತವೇ ವೃತ್ರಂ ಹಂತುಂ ತ್ವಾಮೀಮಹೇ । ಪ್ರಾರ್ಥಯಾಮಹೇ ॥ ಸಾಸಹಿಃ । ಸಹಿವಹಿಚಲಿಪತಿಭ್ಯೋ ಯಙಂತೇಭ್ಯಃ ಕಿಕಿನೌ ವಕ್ತವ್ಯಾವಿತಿ ಕಿಪ್ರತ್ಯಯಃ । ತಸ್ಯ ಸ್ವರಃ । ವೃತ್ರಾಯ । ಕರ್ಮಣಃ ಸಂಪ್ರದಾನಂ । ಹಂತವೇ । ತುಮರ್ಥೇ ತವೇನ್ಪ್ರತ್ಯಯಃ ॥

ಪ್ರತಿಪದಾರ್ಥ

ಶತಕ್ರತೋ—ಅನೇಕ ವೀರ್ಯಕರ್ಮಗಳಿಗೆ ಕರ್ತನಾದ । ಇಂದ್ರ—ಇಂದ್ರನೇ । ವಾಜೇಷು—ಸಂಗ್ರಾಮಗಳಲ್ಲಿ । ಸಾಸಹಿಃ—ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನಾಗಿ । ಭವ—ಆಗು । ವೃತ್ರಾಯ—ವೃತ್ರಾಸುರನನ್ನು । ಹಂತವೇ—ಹನನಮಾಡುವುದಕ್ಕಾಗಿ । ತ್ವಾಂ—ನಿನ್ನನ್ನು । ಈಮಹೇ—ಪ್ರಾರ್ಥಿಸುತ್ತೇವೆ.

ಭಾವಾರ್ಥ

ಅನೇಕ ಸಾಹಸಕರ್ಮಗಳಿಗೆ ಕರ್ತನಾದ ಎಲೈ ಇಂದ್ರನೇ, ಸಂಗ್ರಾಮಗಳಲ್ಲಿ ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನಾಗಿ ಆಗು. ವೃತ್ರಾಸುರನನ್ನು ಹನನಮಾಡುವುದಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತೇವೆ.

English Translation

Be victorious, Indra, in battle : we solicit you, object of many rites, to destroy Vrittra,

ಸಂಹಿತಾಪಾಠಃ

ದ್ಯುಮ್ನೇಷು ಪೃತನಾಜ್ಯೇ ಪೃತ್ಸುತೂರ್ಷು ಶ್ರವಃಸು ಚ ।

ಇಂದ್ರ ಸಾಕ್ಷ್ವಾಭಿಮಾತಿಷು || ೭ ||

ಪದಪಾಠಃ

ದ್ಯುಮ್ನೇಷು । ಪೃತನಾಜ್ಯೇ । ಪೃತ್ಸುತೂರ್ಷು । ಶ್ರವಃಸು । ಚ ॥

ಇಂದ್ರ । ಸಾಕ್ಷ್ವ । ಅಭಿಮಾತಿಷು ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ದ್ಯುಮ್ನೇಷು ದ್ಯೋತಮಾನೇಷು ಧನೇಷು ಪ್ರಾಪ್ತವ್ಯೇಷ್ವಭಿಮಾನಿನೋ ಯೇ ಸಪತ್ನಾಃ ಪೃತನಾಜ್ಯೇ । ಪೃತನಾನಾಮಜನಂ ಗಮನಂ ಯಸ್ಮಿನ್ನಿತಿ ಪೃತನಾಜ್ಯಂ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಚ ಪೃತ್ಸುತೂರ್ಷು ಪೃತನಾಸು ತರಣಶೀಲೇಷು ಶೂರೇಷು ಶ್ರವಃಸು ಬಲೇಷು ಚ ಯೇಽಭಿಮಾನಿನಃ ಸಪತ್ನಾಃ ಸಂತಿ ತಾನ್ ಸಾಕ್ಷ್ವ । ಅಭಿಭವ । ತಥಾಭಿಮಾತಿಷು ಸರ್ವತೋ ಗರ್ವಯುಕ್ತೇಷು ಶತ್ರುಷು ಪುರುಷೇಷು ಯೇ ಸಪತ್ನಾಃ ತಾಂಶ್ಚಾಭಿಭವ ॥ ಪೃತನಾಜ್ಯೇ । ಅಜ ಗತಿಕ್ಷೇಪಣಯೋರಿತ್ಯಸ್ಯ ಣ್ಯಂತಸ್ಯ ಅಚೋ ಯತ್ । ಪೃತನಾನಾಮಾಜ್ಯಂ ಪೃತನಾಜ್ಯಂ । ಏಕಾದೇಶಸ್ವರಃ । ಪೃತ್ಸುತೂರ್ಷು । ಪೃತನಾಶಬ್ದಸ್ಯ ಸೌ ಪರತಃ । ಮಾಂಸ್ಪೃತ್ಸ್ನೂನಾಮುಪಸಂಖ್ಯಾನಮಿತಿ ಪೃದಾದೇಶಃ । ಞಿತ್ವರಾ ಸಂಭ್ರಮೇ । ತಾಚ್ಛೀಲಿಕಃ ಕ್ವಿಪ್ । ಜ್ವರತ್ವರೇತ್ಯಾದಿನಾ ಊಟ್ । ತತ್ಪುರುಷೇ ಕೃತಿ ಬಹುಲಮಿತಿ ಪೂರ್ವಪದಸ್ಯ ಸಪ್ತಮ್ಯಾ ಅಲುಕ್ । ಕೃದುತ್ತರಪದಸ್ವರಃ । ಸಾಕ್ಷ್ವ । ಸಹ ಮರ್ಷಣ ಇತ್ಯಸ್ಯ ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಢತ್ವಕತ್ವೇ ದೀರ್ಘಶ್ಛಾಂದಸಃ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ದ್ಯುಮ್ನೇಷು**—ಧನದ ವಿಷಯದಲ್ಲಾಗಲಿ । **ಪೃತನಾಜ್ಯೇ**—ಯುದ್ಧದಲ್ಲಾಗಲಿ । **ಪೃತ್ಸುತೂರ್ಷು**—ಶೂರರ ಗುಂಪಿನಲ್ಲಾಗಲಿ । **ಶ್ರವಃಸು**—ಶಕ್ತಿಯಲ್ಲಾಗಲಿ । **ಅಭಿಮಾತಿಷು**—ಅಹಂಕಾರಯುಕ್ತರಾದ ಶತ್ರುಗಳಲ್ಲಾಗಲಿ ನಮಗೆ ವಿರೋಧಿಗಳು ಯಾರಿದ್ದಾರೋ ಅವರನ್ನೆಲ್ಲಾ । **ಸಾಕ್ಷ್ವ**—ಸೋಲಿಸಿ ನಾಶಮಾಡು.

ಭಾವಾರ್ಥ

ಎಲೈ ಇಂದ್ರನೇ, ಧನದ ವಿಷಯದಲ್ಲಾಗಲಿ, ಯುದ್ಧದಲ್ಲಾಗಲಿ, ಶೂರರ ಗುಂಪಿನಲ್ಲಾಗಲಿ, ಶಕ್ತಿಯಲ್ಲಾಗಲಿ, ಅಭಿಮಾನಯುಕ್ತರಾದ ಪುರುಷರಲ್ಲಾಗಲಿ, ನಮಗೆ ವಿರೋಧಿಗಳು ಯಾರಿದ್ದಾರೋ, ಅವರನ್ನೆಲ್ಲಾ ಸೋಲಿಸಿ ನಾಶಮಾಡು.

English Translation

Overcome Indra, those who are adverse to us in riches, in battle, in hostile hosts, in strength.

ಸಂಹಿತಾಪಾಠಃ

**ಶುಷ್ಮಿಂತಮಂ ನ ಊತಯೇ ದ್ಯುಮ್ನಿನಂ ಪಾಹಿ ಜಾಗೃವಿಂ ।**

**ಇಂದ್ರ ಸೋಮಂ ಶತಕ್ರತೋ ॥ ೮ ॥**

ಪದಪಾಠಃ

**ಶುಷ್ಮಿನ್ಽತಮಂ । ನಃ । ಊತಯೇ । ದ್ಯುಮ್ನಿನಂ । ಪಾಹಿ । ಜಾಗೃವಿಂ ॥**

**ಇಂದ್ರ । ಸೋಮಂ । ಶತಕ್ರತೋ ಇತಿ ಶತಽಕ್ರತೋ ॥ ೮ ॥**

ಸಾಯಣಭಾಷ್ಯಂ

ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ಶುಷ್ಮಿಂತಮಂ ನ ಊತಯ ಇತಿ ತೃಚೋ ವೈಕಲ್ಪಿಕೋಽನುರೂಪಃ । ಸೂತ್ರಿತಂ ಚ । ಶುಷ್ಮಿನ್ತಮಂ ನ ಊತಯೇ ಶ್ರಾಯಂತ ಇವ ಸೂರ್ಯಂ । ಆ. ೭-೪ । ಇತಿ ॥

ಶತಕ್ರತೋ ಹೇ ಇಂದ್ರ ಶುಷ್ಮಿನ್ತಮಂ ಬಲವತಾಂ ಮಧ್ಯೇಽತಿಶಯೇನ ಬಲವಂತಂ ದ್ಯುಮ್ನಿನಂ ದೀಪ್ತಿಮಂತಂ । ಯದ್ವಾ ಶುಷ್ಮಿನ್ತಮಂ ಶತ್ರೂಣಾಂ ಶೋಷಕತಮಂ ದ್ಯುಮ್ನಿನಂ ಯಶಸ್ವಿನಂ ಜಾಗೃವಿಂ ಜಾಗರಣಶೀಲಂ । ಪೀತಃ ಸೋಮೋ ಜಾಗೃವಿಃ ಸ್ವಪ್ನನಿವಾರಕ ಇತಿ । ತಾದೃಶಂ ನೋಽಸ್ಮಾಕಂ ಸಂಬಂಧಿನಂ ಸೋಮಮೂತಯೇಽಸ್ಮಾಕಂ ರಕ್ಷಣಾಯ ಪಾಹಿ । ಅತ್ರಾಗತ್ಯ ಪಿಬ ॥ ಶುಷ್ಮಿನ್ತಮಂ । ತಮಪಃ ಪಿತ್ತ್ವಾದನುದಾತ್ತತ್ವೇ ಪ್ರತ್ಯಯಸ್ವರಃ । ಪಾಹಿ । ಪಾತೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ನಿಘಾತಃ । ಜಾಗೃವಿಃ । ಕ್ವಿನ್ಪ್ರತ್ಯಯಾಂತಃ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

ಶತಕ್ರತೋ—ಅನೇಕ ಯಜ್ಞಕರ್ಮಗಳುಳ್ಳ ! ಇಂದ್ರ—ಎಲೈ ಇಂದ್ರನೇ । **ಶುಷ್ಮಿಂತಮಂ**—ಶಕ್ತಿವರ್ಧಕವಾದುದೂ । **ದುಮ್ನಿನಂ**—ಕಾಂತಿಯುತವಾದುದೂ । **ಜಾಗೃವಿಂ**—ಪ್ರಬೋಧಕವಾದುದೂ ಆದ । **ನಃ**—ನಮ್ಮಿಂದ ಅರ್ಪಿತವಾದ । **ಸೋಮಂ**—ಸೋಮವನ್ನು । **ಊತಯೇ**—ನಮ್ಮ ರಕ್ಷಣಾರ್ಥವಾಗಿ । **ಪಾಹಿ**—ಪಾನಮಾಡು.

ಭಾವಾರ್ಥ

ಅನೇಕ ಯಜ್ಞಕರ್ಮಗಳುಳ್ಳ ಎಲೈ ಇಂದ್ರನೇ, ಶಕ್ತಿವರ್ಧಕವಾದುದೂ, ಕಾಂತಿಯುತವಾದುದೂ, ಪ್ರಭೋಧಕವಾದುದೂ, ನಮ್ಮಿಂದ ಅರ್ಪಿತವಾದುದೂ ಆದ ಸೋಮವನ್ನು ನಮ್ಮ ರಕ್ಷಣಾರ್ಥವಾಗಿ ಪಾನಮಾಡು.

## English Translation

Drink, Indra, object of many rites, for our preservation, the most invigorating, fame-conferring, sleep-dispelling, soma juice.

ವಿಶೇಷವಿಷಯಗಳು

ಚಾತುರ್ವಿಂಶಕವೆಂಬ ಯಾಗದ ದಿನದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು **ಶುಷ್ಮಿನ್ತಮಂ ನ ಊತಯೇ** ಎಂಬ ತೃಚವನ್ನು (ಈ ಸೂಕ್ತದ ೮, ೯, ೧೦ ಋಕ್ಕುಗಳನ್ನು) ವೈಕಲ್ಪಿಕ ಅನುರೂಪ ಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಶುಷ್ಮಿಂತಮಂ ನ ಊತಯೇ ಶ್ರಾಯಂತ ಇವ ಸೂರ್ಯಂ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು.

ಸಂಹಿತಾಪಾಠಃ

ಇಂದ್ರಿಯಾಣಿ ಶತಕ್ರತೋ ಯಾ ತೇ ಜನೇಷು ಪಂಚಸು ।
ಇಂದ್ರ ತಾನಿ ತ ಆ ವೃಣೇ ॥ ೯ ॥

ಪದಪಾಠಃ

ಇಂದ್ರಿಯಾಣಿ । ಶತಕ್ರತೋ ಇತಿ ಶತsಕ್ರತೋ । ಯಾ । ತೇ । ಜನೇಷು । ಪಂಚsಸು ।

ಇಂದ್ರ । ತಾನಿ । ತೇ । ಆ । ವೃಣೇ ॥ ೯ ॥

ಸಾಯಣಭಾಷ್ಯಂ

ಶತಕ್ರತೋ ಹೇ ಇಂದ್ರ ತೇ ತವ ಸಂಬಂಧಿಷು ಪಂಚಸು ಜನೇಷು ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಷು ಯಾ ಯಾನೀಂದ್ರಿಯಾಣಿ ರೂಪಗ್ರಹಣಾದಿಸಾಮರ್ಥ್ಯಾನಿ ಸ್ಥಿತಾನಿ ತೇ ತ್ವದೀಯಾನಿ ತಾನೀಂದ್ರಿಯಾಣ್ಯಹಮಾ ವೃಣೇ । ಸಂಭಜೇ । ಯದ್ವಾ । ಪಂಚಜನೇಷು ನಿಷಾದಪಂಚಮೇಷು ಚತುರ್ಷು ಜನೇಷು ಯಾನೀಂದ್ರಿಯಾಣಿ ಸಾಮರ್ಥ್ಯಾನಿ ತಾನಿ ತ್ವದೀಯಾನ್ಯಹಮಾ ವೃಣೇ ॥ ಇಂದ್ರಿಯಾಣಿ । ಇಂದ್ರಿಯಮಿಂದ್ರಲಿಂಗಮಿಂದ್ರದೃಷ್ಟಮಿಂದ್ರಸೃಷ್ಟಮಿಂದ್ರಜುಷ್ಟಮಿಂದ್ರದತ್ತಮಿತಿ ವೇತಿ ಘಚ್‌ಪ್ರತ್ಯಯಾಂತತ್ವೇನ ನಿಪಾತನಾದಂತೋದಾತ್ತಃ । ವೃಣೇ । ವೃಜ್ ಸಂಭಕ್ತಾವಿತ್ಯಸ್ಯ ಲಟಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**ಶತಕ್ರತೋ**—ಅನೇಕ ಕರ್ಮಗಳಿಗೆ ಕರ್ತನಾದ । **ಇಂದ್ರ**—ಇಂದ್ರನೇ । **ತೇ**—ನಿನಗೆ ಸಂಬಂಧಿಸಿದ । **ಪಂಚಸು ಜನೇಷು**—ಗಂಧರ್ವಾದಿ ಪಂಚವಿಧಾತ್ಮಕವಾದ ಜನರಲ್ಲೂ ಸಹ । **ಯಾ**—ಯಾವ ನಿಧವಾದ । **ಇಂದ್ರಿಯಾಣಿ**—ಇಂದ್ರಿಯ ಶಕ್ತಿಗಳಿವೆಯೋ । **ತಾನಿ**—ಆ ಶಕ್ತಿಗಳೆಲ್ಲವೂ । **ತೇ**—ನಿನ್ನಿಂದ ಪ್ರೇರಿತವಾದವು ಎಂಬುದಾಗಿ । **ಆ ವೃಣೇ**—ತಿಳಿಯುತ್ತೇನೆ.

ಭಾವಾರ್ಥ

ನಾನಾವಿಧವಾದ ಕರ್ಮಗಳಿಗೆ ಕರ್ತನಾದ ಎಲೈ ಇಂದ್ರನೇ, ಪಂಚವಿಧಾತ್ಮಕವಾದ ಜನರಲ್ಲೂ ಸಹ ಯಾವ ವಿಧವಾದ ಇಂದ್ರಿಯಶಕ್ತಿಗಳಿವೆಯೋ, ಆ ಶಕ್ತಿಗಳೆಲ್ಲವೂ ನಿನ್ನಿಂದಲೇ ಪ್ರೇರಿತವಾದವು ಎಂಬುದಾಗಿ ತಿಳಿಯುತ್ತೇನೆ.

## English Translation

Indra, object of many rites, I regard the organs of sense that exist in the five races (of beings dependent) on you, as yours.

ಸಂಹಿತಾಪಾಠಃ

ಅಗನ್ನಿಂದ್ರ ಶ್ರವೋ ಬೃಹದ್ದ್ಯುಮ್ನಂ ದಧಿಷ್ವ ದುಷ್ಟರಂ ।

ಉತ್ತೇ ಶುಷ್ಮಂ ತಿರಾಮಸಿ ॥ ೧೦ ॥

ಪದಪಾಠಃ

ಅಗನ್ । ಇಂದ್ರ । ಶ್ರವಃ । ಬೃಹತ್ । ದ್ಯುಮ್ನಂ । ದಧಿಷ್ವ । ದುಸ್ತರಂ ।

ಉತ್ । ತೇ । ಶುಷ್ಮಂ । ತಿರಾಮಸಿ ॥ ೧೦ ॥

ಸಾಯಣಭಾಷ್ಯಂ

ಹೇ ಇಂದ್ರ ಬೃಹನ್ಮಹತ್ ಶ್ರವಃ ಸೋಮಲಕ್ಷಣಮಸ್ಮಾಭಿರ್ದೀಯಮಾನಮನ್ನಮಗನ್ । ತ್ವಾಂ ಗಚ್ಛತು । ತ್ವಂ ದುಷ್ಟರಂ ದುಸ್ತರಂ ಶತ್ರುಭಿಸ್ತರೀತುಮಶಕ್ಯಂ ದ್ಯುಮ್ನಂ ಧನಂ ದಧಿಷ್ವ । ಅಸ್ಮಭ್ಯಂ ಪ್ರಯಚ್ಛ । ವಯಂ ತು ತೇ ತ್ವದೀಯಂ ಶುಷ್ಮಂ ಬಲಮುತ್ಕೃಷ್ಟಂ ತಿರಾಮಸಿ । ಸೋಮಾಜ್ಯಾದಿಭಿರ್ವರ್ಧಯಾಮಃ ॥ ಅಗನ್ । ಗಮೇರ್ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ಹಲ್ಙ್ಯಾದಿನಾ ತಿಲೋಪಃ। ಮೋ ನೋ ಧಾತೋಃ । ಅಡಾಗಮಸ್ಸ್ವರಃ । ದಧಿಷ್ವ । ದಧಾತೇರ್ಲೋಟಿ ಛಂದಸ್ಯುಭಯಥೇತಿ ಥಾಸ ಆರ್ಧಧಾತುಕತ್ವಾದಿಡಾಗಮಃ। ನಿಘಾತಃ । ದುಸ್ತರಂ । ತರತೇಃ ಕೃಚ್ಛ್ರಾರ್ಥೇ ಖಲ್ । ಸುಷಾಮಾದಿತ್ವಾತ್ಸಂಹಿತಾಯಾಂ ಷತ್ವಂ । ಲಿತ್ಸ್ವರಃ । ತಿರಾಮಸಿ । ಇದಂತೋ ಮಸಿಃ । ನಿಘಾತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಬೃಹತ್—ಪ್ರಭೂತವಾದುದೂ । ಶ್ರವಃ—(ನಮ್ಮಿಂದ ಅರ್ಪಿತವಾದುದೂ ಆದ) ಅನ್ನವು । ಅಗನ್—ನಿನ್ನನ್ನು ಸೇರಲಿ । ದುಸ್ತರಂ—ಶತ್ರುಗಳ ಅಕ್ರಮಣಕ್ಕೆ ಸಿಲುಕದ । ದ್ಯುಮ್ನಂ—ಧನವನ್ನು । ದಧಿಷ್ವ—ನಮಗೆ ಒದಗಿಸಿಕೊಡು । ತೇ—ನಿನ್ನ । ಶುಷ್ಮಂ—ಶಕ್ತಿಯನ್ನು । ತಿರಾಮಸಿ—ವೃದ್ಧಿಯಾಗುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ಪ್ರಭೂತವಾದುದೂ, ನಮ್ಮಿಂದ ಅರ್ಪಿತವಾದುದೂ ಆದ ಅನ್ನವು ನಿನ್ನನ್ನು ಸೇರಲಿ. ಶತ್ರುಗಳ ಆಕ್ರಮಣಕ್ಕೆ ಸಿಲುಕದ ಧನವನ್ನು ನಮಗೆ ಒವಗಿಸಿಕೊಡು. ನಾವು ನಿನ್ನ ಶಕ್ತಿಯು ವೃದ್ಧಿಯಾಗುವಂತೆ ಮಾಡುತ್ತೇವೆ.

English Translation

May the abundant (sacrificial) food (we offer) reach you, Indra; grant us wealth that may not easily be surpassed : we augment your vigour (by our offerings).

ಸಂಹಿತಾಪಾಠಃ

ಅರ್ವಾವತೋ ನ ಆ ಗಹ್ಯಥೋ ಶಕ್ರ ಪರಾವತಃ ।

ಉ ಲೋಕೋ ಯಸ್ತೇ ಅದ್ರಿವ ಇಂದ್ರೇಹ ತತ ಆ ಗಹಿ ॥ ೧೧ ॥

ಪದಪಾಠಃ

ಅರ್ವಾಽವತಃ । ನಃ । ಆ । ಗಹಿ । ಅಥೋ ಇತಿ । ಶಕ್ರ । ಪರಾಽವತಃ ।
ಊಂ ಇತಿ । ಲೋಕಃ । ಯಃ । ತೇ । ಅದ್ರಿಽವಃ । ಇಂದ್ರ । ಇಹ । ತತಃ । ಆ । ಗಹಿ ॥ ೧೧ ॥

ಸಾಯಣಭಾಷ್ಯಂ

ಶಕ್ರ ಬಲವನ್ಹೇ ಇಂದ್ರ ಅರ್ವಾವತೋಽರ್ವಾಚೀನಾತ್ಸಮೀಪಾದ್ದೇಶಾತ್ ಅಥೋ ಅಪಿ ಚ ಪರಾವತೋಽತಿದೂರಾದ್ದೇಶಾನ್ನೋಽಸ್ಮಾನಭಿಲಕ್ಷ್ಯಾ ಗಹಿ । ಆಗಚ್ಛ । ಅದ್ರಿವಃ । ಅತ್ತಿ ಭಕ್ಷಯತಿ ಶತ್ರೂನಿತ್ಯದ್ರಿರ್ವಜ್ರಃ । ತದ್ವನ್ ಹೇ ಇಂದ್ರ ತೇ ತವ ಯ ಉ ಲೋಕ ಉತ್ತಮೋ ಲೋಕೋಽಸ್ತಿ ತತಸ್ತಸ್ಮಾದಪಿ ಲೋಕಾದಿಹಾಸ್ಮಿನ್ದೇವಯಜನೇ ದೇಶೇ ಸೋಮಪಾನಾರ್ಥಮಾ ಗಹಿ । ಆಗಚ್ಛ ॥ ಗಹಿ । ಗಮೇರ್ಲೋಟಿ ರೂಪಂ । ಪರಾವತಃ । ಉಪಸರ್ಗಾಚ್ಛಂದಸಿ ಧಾತ್ವರ್ಥ ಇತಿ ವತಿಃ । ಪ್ರತ್ಯಯಸ್ವರಃ । ಅದ್ರಿವಃ । ಮತುವಸೋ ರುರಿತಿ ರುಃ । ತತಃ । ಪಂಚಮ್ಯಾಸ್ತಸಿಲಿತಿ ತಸಿಲ್ । ಲಿತ್ಸ್ವರಃ ॥ ॥ ೨೨ ॥

ಪ್ರತಿಪದಾರ್ಥ

ಶಕ್ರ-ಶಕ್ತಿಯುತನಾದ ಎಲೈ ಇಂದ್ರನೇ। ಅರ್ವಾವತಃ—ಸಮೀಪಪ್ರದೇಶದಿಂದಾಗಲಿ । ಅಥೋ-ಮತ್ತು । ಪರಾವತಃ—ಅತಿದೂರಪ್ರದೇಶದಿಂದಾಗಲಿ । ನಃ—ನಮ್ಮ ಅಭಿಮುಖವಾಗಿ । ಆ ಗಹಿ—ದಯಮಾಡು । ಅದ್ರಿವಃ-ವಜ್ರಾಯುಧವನ್ನು ಹಿಡಿದಿರುವ । ಇಂದ್ರ—ಇಂದ್ರನೇ। ತೇ—ನಿನ್ನ । ಯ ಉ ಲೋಕಃ—ಯಾವ ಉತ್ತಮವಾದ ಲೋಕವಿದೆಯೋ । ತತಃ—ಅಲ್ಲಿಂದಲೂ ಸಹ । ಇಹ—ಈ ಯಜ್ಞಪ್ರದೇಶಕ್ಕೆ । ಆ ಗಹಿ—ದಯಮಾಡು.

ಭಾವಾರ್ಥ

ಶಕ್ತಿಯುತನಾದ ಇಂದ್ರನೇ, ಸಮೀಪಪ್ರದೇಶದಿಂದಾಗಲಿ, ಮತ್ತು ಅತಿದೂರಪ್ರದೇಶದಿಂದಾಗಲಿ, ನಮ್ಮ ಅಭಿಮುಖವಾಗಿ ದಯಮಾಡು. ವಜ್ರಾಯುಧವನ್ನು ಹಿಡಿದಿರುವ ಎಲೈ ಇಂದ್ರನೇ, ನಿನ್ನ ಯಾವ ಉತ್ತಮವಾದ ಲೋಕವಿದೆಯೋ ಅಲ್ಲಿಂದಲೂ ಸಹ ಈ ಯಜ್ಞಪ್ರದೇಶಕ್ಕೆ ದಯಮಾಡು.

English Translation

Come to us Sakra, whether from afar or nigh; whatever, Indra, wielder of the thunderbolt, be your region, come from thenee hither.



# ಮೂವತ್ತೆಂಟನೆಯ ಸೂಕ್ತವು

ಸಾಯಣಭಾಷ್ಯಂ

ಅಭಿ ತಷ್ಟೇವೇತಿ ದಶರ್ಚಂ ನವಮಂ ಸೂಕ್ತಂ । ಅತ್ರಾನುಕ್ರಮಣಿಕಾ । ಅಭಿ ತಷ್ಟೇವ ದಶ ಪ್ರಜಾಪತಿಃ ಸ ವೈಶ್ವಾಮಿತ್ರೋ ವಾಚ್ಯೋ ವಾ ದ್ವಾ ವಾ ತಾ ನ ವೈಕೋಽಪೀತಿ । ವಿಶ್ವಾಮಿತ್ರಗೋತ್ರೇ

**ಪ್ರಜಾಪತಿರ್ವಾಚಃ ಪುತ್ರಃ ಪ್ರಜಾಪ್ರತಿರ್ವಾ ಋಷಿಃ । ತಾವುಭಾವಪಿ ಸಮುಚ್ಚಿತಾವಸ್ಯ ಸೂಕ್ತಸ್ಯ ಋಷೀ ಇತಿ ದ್ವಿತೀಯಃ ಪಕ್ಷಃ । ಅಥವಾ ನೋಭಾವಪಿ ಕಿಂತು ವಿಶ್ವಾಮಿತ್ರ ಏವೇತಿ ತೃತೀಯಃ ಪಕ್ಷಃ । ತ್ರಿಷ್ಟುಪ್ ಛಂದಃ । ಇಂದ್ರೋ ದೇವತಾ ॥**

**ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಸವನೇಽಚ್ಛಾವಾಕಶಸ್ತ್ರೇಽಭಿ ತಷ್ಟೇವೇತ್ಯಹರಹಃ ಶಸ್ಯ- ನಾಮುಕಂ ಸೂಕ್ತಂ । ಸೂತ್ರಿತಂ ಚ । ಉದು ಬ್ರಹ್ಮಾಣ್ಯಭಿ ತಷ್ಟೇವೇತೀತರಾವಹರಹಃಶಸ್ಯೇ । ಆ ೭-೪ । ಇತಿ ॥ ಏವಂ ಸರ್ವತ್ರಾಹರ್ಗಣೇಷು ದ್ವಿತೀಯಾದಿಷ್ವಹಃಸು ಮಾಧ್ಯಂದಿನೇ ಸವನೇಽಚ್ಛಾವಾಕಶಸ್ತ್ರ ಏತತ್ಸೂಕ್ತಂ ॥**

**ಅನುವಾದವು**— **ಅಭಿ ತಷ್ಟೇವ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ಅಭಿ ತಷ್ಟೇವ ದಶ ಪ್ರಜಾಪತಿಃ ಸ ವೈಶ್ವಾಮಿತ್ರೋ ವಾಚ್ಯೋ ವಾ ದ್ವೌ ವಾ ತೌ ನ ವೈಕೋಽಪಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಿಶ್ವಾಮಿತ್ರಗೋತ್ರೋದ್ಭವ ನಾದ ವಚ ಎಂಬ ಋಷಿಯ ಪುತ್ರನಾದ ಪ್ರಜಾಪತಿಯೆಂಬುವನು ಋಷಿಯು ; ಅಥವಾ ಪ್ರಜಾಪತಿಯೆಂಬುವನೇ ಋಷಿಯು ; ಅಥವಾ ಇವರಿಬ್ಬರೂ ಋಷಿಗಳೆಂದೂ ಹೇಳಬಹುದು. ಅಥವಾ ಇವರಿಬ್ಬರೂ ಅಲ್ಲದೆ ವಿಶ್ವಾಮಿತ್ರನೇ ಋಷಿಯೆಂದೂ ಹೇಳಬಹುದು. ಈ ವಿಷಯದಲ್ಲಿ ಈರೀತಿ ಮೂರು ವಿಧವಾದ ಮತಭೇದಗಳಿವೆ. ಇಂದ್ರನು ದೇವ ತೆಯು ; ತ್ರಿಷ್ಟುಪ್‌ಛಂದಸ್ಸು. ಯಾಗದ ಚತುರ್ವಿಂಶವೆಂಬ ದಿವಸ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪ್ರತಿದಿನವೂ ಪಠಿಸಬೇಕಾದ ಸಂಪಾತ ಸೂಕ್ತಕ್ಕಾಗಿ **ಅಭಿತಷ್ಟೇವ** ಎಂಬ ಈ ಸೂಕ್ತದ ವಿನಿಯೋಗವಿರುವು ದೆಂದು ಆಶ್ವಲಾಯನ ಶ್ರೌತಸೂತ್ರದ— **ಉದು ಬ್ರಹ್ಮಾಣ್ಯಭಿ ತಷ್ಟೇವೇತೀತರಾವಹರಹಃ ಶಸ್ಯೇ** ಎಂಬ ಸೂತ್ರ ದಿಂದ (ಆ. ೭-೪) ವಿವೃತವಾಗಿರುವುದು. ಇದೇರೀತಿಯಾಗಿ ಎಲ್ಲಾ ಅಹರ್ಗಣವೆಂಬ ಯಾಗಗಳಲ್ಲಿಯೂ ಎರಡನೆಯ ದಿವಸದಿಂದ ಮುಂದೆ ಪ್ರತಿದಿವಸದಲ್ಲಿಯೂ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಈ ಸೂಕ್ತವನ್ನು ಶಸ್ತ್ರಮಂತ್ರವನ್ನಾಗಿ ಪಠಿಸಬೇಕೆಂದು ನಿರ್ದಿಷ್ಟವಾಗಿರುವುದು.

## ಸೂಕ್ತ—೩೮

ಮಂಡಲ—೩ ॥ ಅನುವಾಕ—೩ ॥ ಸೂಕ್ತ—೩೮ ॥
ಅಷ್ಟಕ—೩ ॥ ಅಧ್ಯಾಯ—೨ ॥ ವರ್ಗ—೨೩, ೨೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦

ಋಷಿಃ—ಪ್ರಜಾಪತಿರ್ವೈಶ್ವಾಮಿತ್ರೋ ವಾಚ್ಯೋ ವಾ ದ್ವೌ ವಾ ತೌ ವಿಶ್ವಾಮಿತ್ರೋ ವಾ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಅಭಿ ತಷ್ಟೇವ ದೀಧಯಾ ಮನೀಷಾಮತ್ಯೋ ನ ವಾಜೀ ಸುಧುರೋ ಜಿಹಾನಃ ।**
**ಅಭಿ ಪ್ರಿಯಾಣಿ ಮರ್ಮೃಶತ್ಪರಾಣಿ ಕವೀಁರಿಚ್ಛಾಮಿ ಸಂದೃಶೇ ಸುಮೇಧಾಃ ॥ ೧ ॥**

ಪದಪಾಠಃ

ಅಭಿ । ತಷ್ಟ್ವಾಇವ । ದೀಧಯ । ಮನೀಷಾಂ । ಅತ್ಯಃ । ನ । ವಾಜೀ । ಸುಧುರಃ । ಜಿಹಾನಃ ।

ಅಭಿ । ಪ್ರಿಯಾಣಿ । ಮರ್ಮೃಶತ್ । ಪರಾಣಿ । ಕವೀನ್ । ಇಚ್ಛಾಮಿ । ಸಂಽದೃಶೇ । ಸುಽಮೇಧಾಃ ॥ ೧ ॥

ಸಾಯಣಭಾಷ್ಯಂ

ಯಜಮಾನಃ ಸ್ತೋತಾರಂ ಪ್ರತಿ ಬ್ರೂತೇ । ಹೇ ಸ್ತೋತರ್ಮನೀಷಾಮಿಂದ್ರವಿಷಯಾಂ ಸ್ತುತಿಮಭಿ ದೀಧಯ ।ಸರ್ವತೋ ದೀಪ್ತಾಂ ಕುರು । ತತ್ರ ದೃಷ್ಟಾಂತಃ । ತಷ್ಟೇವ । ಯಥಾ ತಷ್ಟಾ ತಕ್ಷಣೇನ ಕಾಷ್ಠಂ ಸಂಸ್ಕರೋತಿ ತದ್ವತ್ । ಸುಧುರಃ ಶೋಭನಯಾ ಧುರಾನ್ವಿತೋ ವಾಜೀ ವೇಗವಾನತ್ಯೋ ನಾಶ್ವ ಇವ ಜಿಹಾನಃ ಕರ್ಮಣಿ ಪ್ರವರ್ತಮಾನಃ ಪರಾಣ್ಯುತ್ತಮಾನಿ ಪ್ರಿಯಾಣೀಂದ್ರಸ್ಯ ಪ್ರಿಯತಮಾನಿ । ಯದ್ವಾ। ಪರಾಣ್ಯುತ್ತರೇಷ್ವಹಃಸು ಕ್ರಿಯಮಾಣಾನಿ ಕರ್ಮಾಣ್ಯಭಿಮರ್ಮೃಶತ್ ಅತ್ಯರ್ಥಮಭಿ ಮೃಶನ್ ಸುಮೇಧಾಃ ಶೋಭನಮೇಧಾವಾನಹಂ ಕವೀನ್ । ಯೇ ಪೂರ್ವಮನುಷ್ಠಿತಯಜ್ಞಾ ದ್ಯೇವಭೂಯಂ ಗತಾಸ್ತೇ ಕವಯಃ । ತಾನ್ ಸಂದೃಶೇ ಸಂಪ್ರಷ್ಟುಮಿಚ್ಛಾಮಿ । ಉಕ್ತಾರ್ಥೇ ಬ್ರಾಹ್ಮಣಂ । ಅಭಿ ತಷ್ಟೇವ ದೀಧಯಾ ಮನೀಷಾಮಿತ್ಯಚ್ಛಾವಾಕೋಽಹರಹಃ ಶಂಸತ್ಯಭಿವತ್ತೈಕ್ಯಂ ರೂಪಮಭಿ ಪ್ರಿಯಾಣಿ ಮರ್ಮೃಶತ್ಪರಾಣೀತಿ ಯಾನ್ಯೇವ ಪರಾಣ್ಯಹಾನಿ ತಾನಿ ಪ್ರಿಯಾಣಿ ತಾನ್ಯೇವ ತದಭಿಮರ್ಮೃಶತೋ ಯಂತಭ್ಯಾರಭಮಾಣಾಃ ಪರೋ ವಾ ಅಸ್ಮಾಲ್ಲೋಕಾತ್ಸ್ವರ್ಗೋ ಲೋಕಸ್ತಮೇವ ತದಭಿವದತಿ ಕವೀರಿಚ್ಛಾಮಿ ಸಂದೃಶೇ ಸುಮೇಧಾ ಇತಿ ಯೇ ವೈ ತೇ ನ ಋಷಯಃ ಪೂರ್ವೇ ಪ್ರೇತಾಸ್ತೇ ವೈ ಕವಯಸ್ತಾನೇವ ತದಭ್ಯತಿವದತಿ। ಐ. ಬ್ರಾ. ೬-೨೦ । ಇತಿ ॥ ತಷ್ಟೇವ । ತಕ್ಷೂ ತ್ವಕ್ಷೂ ತನೂಕರಣ ಇತ್ಯಸ್ಯ ತೃನಿ ರೂಪಂ । ನಿತ್ಸ್ವರಃ । ದೀಧಯ । ದೀಧೀಙ್ ದೀಪ್ತಿದೇವನಯೋರಿತ್ಯಸ್ಯಾಂತರ್ಭಾವಿತಣ್ಯರ್ಥಸ್ಯ ಲೋಟಿ ಶಪೋ ಬಹುಲಂ ಛಂದಸೀತಿ ಲುಗಭಾವಃ । ವ್ಯತ್ಯಯೇನ ಪರಸ್ಮೈಪದಂ । ಸುಧುರಃ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ। ಜಿಹಾನಃ । ಓಹಾಙ್ ಗತಾವಿತ್ಯಸ್ಯ ಶಾನಚಿ ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಚಿತ್ತ್ವಾದಂತೋದಾತ್ತತ್ವೇ ಪ್ರಾಪ್ತೇಽಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಮರ್ಮೃಶತ್ । ಮೃಶ ಆಮರ್ಶನ ಇತ್ಯಸ್ಯ ಯಙ್ಲುಕಿ ರುಗ್ರಿಕೌ ಚ ಲುಕೀತ್ಯಭ್ಯಾಸಸ್ಯ ರುಗಾಗಮಃ । ತದಂತಾಚ್ಛತರಿ ರೂಪಂ । ನಾಭ್ಯಸ್ತಾಚ್ಛತುರಿತಿ ನುಮಭಾವಃ । ಅಭ್ಯಸ್ತಸ್ವರಃ । ಸಂದೃಶೇ । ದೃಶಿರ್ ಪ್ರೇಕ್ಷಣ ಇತ್ಯಸ್ಮಾತ್ತುಮರ್ಥೇ ದೃಶೇ ವಿಖ್ಯೇ ಚೇತಿ ಕೇನ್ಪ್ರತ್ಯಯಾಂತತ್ವೇನ ನಿಪಾತನಾದಾದ್ಯುದಾತ್ತಃ । ಸಮಾಸೇ ಕೃದುತ್ತರಪದಸ್ವರಃ । ಸುಮೇಧಾಃ । ನಿತ್ಯಮಸಿಚ್ ಪ್ರಜಾಮೇಧಯೋರಿತ್ಯಸಿಚ್‌ಪ್ರತ್ಯಯಃ । ಚಿತ್ಸ್ವರಃ ॥

ಪ್ರತಿಪದಾರ್ಥ

(ಎಲೈ ಸ್ತುತಿಕರ್ತನೇ) **ಮನೀಷಾಂ**—ಇಂದ್ರವಿಷಯವಾದ ಸ್ತುತಿಯನ್ನು । **ತಷ್ಟೇವ**—ಮರಗೆಲಸದವನು ತನ್ನ ಕಾಷ್ಠಾದಿಗಳನ್ನು ಪರಿಷ್ಕರಿಸಿ ಕೆತ್ತನೆಯ ಕೆಲಸವನ್ನು ಮಾಡುವಂತೆ । **ಅಭಿ ದೀಧಯ**—ಕಾಂತಿಯುತವಾಗಿ ನಿರ್ಮಿಸು । **ಸುಧುರಃ**—ಒಳ್ಳೆಯ ಭಾರವನ್ನು ವಹಿಸಿರುವುದೂ । **ವಾಜೀ**—ವೇಗಗಾಮಿಯಾದುದೂ ಆದ । **ಅತ್ಯೋ ನ**—ಅಶ್ವದಂತೆ । **ಜಿಹಾನಃ**—ಕರ್ಮಗಳನ್ನು ನೆರವೇರಿಸುವವನಾಗಿಯೂ । **ಪರಾಣಿ**—ಉತ್ತಮವಾದವೂ।

**ಪ್ರಿಯಾಣಿ**—ಇಂದ್ರನಿಗೆ ಪ್ರಿಯಕರವಾದವೂ ಆದ ಕರ್ಮಗಳನ್ನು | **ಅಭಿಮರ್ಮೃಶತ್**—ಶ್ರದ್ಧೆಯಿಂದ ನೆರವೇರಿಸು ವವನಾಗಿಯೂ | **ಸುಮೇಧಾಃ**—ಶ್ರೇಷ್ಠವಾದ ಪ್ರಜ್ಞೆಯುಳ್ಳವನೂ ಆದ ನಾನು | **ಕವೀನ್**—ದೇವತಾತ್ಮಕರಾದ ಕವಿಗಳನ್ನು | **ಸಂದೃಶೇ**—ದರ್ಶನಮಾಡಲು | **ಇಚ್ಛಾಮಿ**—ಇಚ್ಛಿಸುತ್ತೇನೆ.

ಭಾವಾರ್ಥ

ಎಲೈ ಸ್ತುತಿಕರ್ತನೇ, ಮರಗೆಲಸದವನು ತನ್ನ ಕಾಷ್ಠಾದಿಗಳನ್ನು ಪರಿಷ್ಕರಿಸಿ ಕೆತ್ತನೆಯ ಕೆಲಸವನ್ನು ಮಾಡು ವಂತೆ ಇಂದ್ರವಿಷಯಕವಾದ ಸ್ತುತಿಯನ್ನು ಕಾಂತಿಯುತವಾಗುವಂತೆ ನಿರ್ಮಿಸು. ಒಳ್ಳೆಯ ಭಾರವನ್ನು ವಹಿಸಿರು ವುದೂ, ವೇಗಗಾಮಿಯಾದುದೂ ಆದ ಅಶ್ವದಂತೆ ಕರ್ಮಗಳನ್ನು ನೆರವೇರಿಸುವವನಾಗಿಯೂ ಉತ್ತಮವೂ, ಇಂದ್ರನಿಗೆ ಪ್ರಿಯಕರವೂ ಆದ ಕರ್ಮಗಳನ್ನು ಶ್ರದ್ಧೆಯಿಂದ ನೆರವೇರಿಸುವವನಾಗಿಯೂ, ಶ್ರೇಷ್ಠವಾದ ಬುದ್ಧಿಯುಳ್ಳವನಾಗಿಯೂ ಇರುವ ನಾನು ದೇವತಾತ್ಮಕರಾದ ಕವಿಗಳನ್ನು ಸಂದರ್ಶಿಸಲಿಚ್ಛಿಸುತ್ತೇನೆ.

English Translation

Repeat (to Indra) pious praise, as a carpenter (planes the wood), and engaging (zealously in sacred rites), as a quick horse bearing well his burden: endowed with intelligence, and reflecting upon the future acts acceptable (to Indra), I desire to behold the sages (who have gone to heaven)

ಸಂಹಿತಾಪಾಠಃ

ಇನೋತ ಪೃಚ್ಛ ಜನಿಮಾ ಕವೀನಾಂ ಮನೋಧೃತಃ ಸುಕೃತಸ್ತಕ್ಷತ ದ್ಯಾಂ ।
ಇಮಾ ಉ ತೇ ಪ್ರಣ್ಯೋ೩ ವರ್ಧಮಾನಾ ಮನೋವಾತಾ ಅಧ ನು ಧರ್ಮಣಿ ಗ್ಮನ್ ॥ ೨ ॥

ಪದಪಾಠಃ

ಇನಾ । ಉತ । ಪೃಚ್ಛ । ಜನಿಮ । ಕವೀನಾಂ । ಮನಃಽಧೃತಃ । ಸುಽಕೃತಃ । ತಕ್ಷತ । ದ್ಯಾಂ ।
ಇಮಾಃ । ಊಂ ಇತಿ । ತೇ । ಪ್ರಽನ್ಯಃ । ವರ್ಧಮಾನಾಃ । ಮನಃಽವಾತಾಃ । ಅಧ । ನು । ಧರ್ಮಣಿ । ಗ್ಮನ್ ॥

ಸಾಯಣಭಾಷ್ಯಂ

ಉತೇತ್ಯಾಮಂತ್ರಣೇ । ಹೇ ಇಂದ್ರ ಕವೀನಾಂ ಸುಕೃತಕರ್ಮಣಾಂ ದೇವಭೂಯಗತಾನಾಂ ಜನಿಮ ಜನ್ಮ । ಕೇನ ಕರ್ಮಣಾ ದಿವಂ ಗತಾಃ ಕುತೋ ವಾ ತೇಷಾಮುತ್ಪತ್ತಿರಿತ್ಯೇತಮರ್ಥಮಿನಾ ಈಶ್ವ- ರಾನ್ ಗುರೂನ್ಪೃಚ್ಛ । ತೇ ಕವಯೋ ಮನೋಧೃತಃ ಸಂಯತಮನಸ್ಕಾ ಅತ ಏವ ಸುಕೃತಃ ಶೋಭನ- ಕರ್ಮಾಣಃ ಸಂತೋ ದ್ಯಾಂ ದಿವಂ ತಕ್ಷತ । ಅಕುರ್ವನ್ । ಅಧ ಅಥೇದಾನೀಂ ಧರ್ಮಣ್ಯಸ್ಮಿನ್ಯಜ್ಞೇ ತೇ

ಕ್ಷದರ್ಥಂ ಪ್ರಣ್ಯಃ ಪ್ರಣೀಯಮಾನಾ ಮನೋವಾತಾ ಮನೋವೇಗಾ ವರ್ಧಮಾನಾಸ್ತ್ವಾಂ ವರ್ಧಯಂತ್ಯ ಇಮಾ ಅಸ್ಮಾಭಿಃ ಕ್ರಿಯಮಾಣಾಃ ಸ್ತುತಯೋ ನು ಕ್ಷಿಪ್ರಂ ಗ್ಮನ್ । ತ್ವಾಂ ಗಚ್ಛಂತು । ಉ ಸರ್ವತ್ರ ಪ್ರಸಿದ್ಧ್ಯರ್ಥಃ ॥ ಪೃಚ್ಛ । ಪ್ರಚ್ಛ ಜ್ಞೀಪ್ಸಾಯಾಮಿತ್ಯಸ್ಯ ಲೋಟಿ ತುದಾದಿತ್ವಾಚ್ಛಃ । ತಸ್ಯ ಙಿತ್ತ್ವಾದ್ಗ್ರಹಿಜ್ಯಾದಿನಾ ಸಂಪ್ರಸಾರಣಂ । ನಿಘಾತಃ । ಪ್ರಣ್ಯಃ । ಣೀಞ್ ಪ್ರಾಪಣ ಇತ್ಯಸ್ಮಾದೌಣಾದಿಕಃ ಕರ್ಮಣಿ ಕ್ವಿಪ್ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದಿಯಙಾದೇಶಂ ಬಾಧಿತ್ವಾ ಯಣಾದೇಶಃ । ಉದಾತ್ತಸ್ವರಿತಯೋರಿತಿ ಸ್ವರಿತತ್ವಂ । ಗ್ಮನ್ । ಗಮೇರ್ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ಝೋಃಙಿತ್ತ್ವಾದ್ಗಮಹನೇತ್ಯಾದಿನೋಪಧಾಲೋಪಃ । ನಿಘಾತಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ಕವೀನಾಂ**—ದೇವತ್ವವನ್ನು ಪಡೆದ ಋಷಿಗಳ । **ಜನಿಮ**—ಉತ್ಪತ್ತಿಕ್ರಮವೇನೆಂಬುದನ್ನು । **ಇನಾ**—ಗುರುಗಳನ್ನು । **ಪೃಚ್ಛ**—ಕೇಳು । **ಮನೋಧೃತಃ**—ನಿಯಮನದಿಂದ ಕೂಡಿದ ಮನಸ್ಸುಳ್ಳವರೂ । **ಸುಕೃತಃ**—ಶ್ರೇಷ್ಠವಾದ ಕರ್ಮಕರ್ತರೂ ಆದ ಆ ಋಷಿಗಳು । **ದ್ಯಾಂ**—ದೇವಲೋಕವನ್ನು । **ತಕ್ಷತ**—ನಿರ್ಮಿಸಿದರು । **ಅಧ**—ಪ್ರಕೃತದಲ್ಲಿ । **ಧರ್ಮಣಿ**—ಈ ಯಜ್ಞಕಾಲದಲ್ಲಿ । **ತೇ**—ನಿನ್ನನ್ನುದ್ದೇಶಿಸಿದವೂ । **ಪ್ರಣ್ಯಃ**—ತೃಪ್ತಿಯನ್ನುಂಟುಮಾಡುವುವೂ । **ಮನೋವಾತಾಃ**—ಮನೋವೇಗವುಳ್ಳವೂ । **ವರ್ಧಮಾನಾಃ**—ನಿನ್ನ ವೃದ್ಧಿಗೆ ಕಾರಣವಾದವೂ ಆದ । **ಇಮಾಃ**—ಈ ನಮ್ಮ ಸ್ತುತಿಗಳು । **ನು**—ಶೀಘ್ರವಾಗಿ । **ಗ್ಮನ್**—ನಿನ್ನನ್ನು ಬಂದು ಸೇರಲಿ.

ಭಾವಾರ್ಥ

ಎಲೈ ಇಂದ್ರನೇ, ದೇವತ್ವವನ್ನು ಪಡೆದಿರುವ ಋಷಿಗಳ ಉತ್ಪತ್ತಿಕ್ರಮವೇನೆಂಬುದನ್ನು ಜಗತ್ಸೃಷ್ಟಿಗೆ ಕಾರಣರಾದ ಈಶ್ವರರನ್ನು ಕೇಳಿ ತಿಳಿದುಕೊ. ನಿಯಮನದಿಂದ ಕೂಡಿದ ಮನಸ್ಸುಳ್ಳವರೂ, ಶ್ರೇಷ್ಠವಾದ ಕರ್ಮಕರ್ತರೂ ಆದ ಆ ಋಷಿಗಳು ದೇವಲೋಕವನ್ನು ನಿರ್ಮಿಸಿದರು. ಈ ಯಜ್ಞಕಾಲದಲ್ಲಿ ನಿನ್ನನ್ನುದ್ದೇಶಿಸಿದವೂ, ನಿನಗೆ ತೃಪ್ತಿಕಾರಕವೂ, ಮನೋವೇಗವುಳ್ಳವೂ. ನಿನ್ನ ವೃದ್ಧಿಗೆ ಕಾರಣವಾದವೂ ಆದ ಈ ನಮ್ಮ ಸ್ತುತಿಗಳು ಶೀಘ್ರವಾಗಿ ನಿನ್ನನ್ನು ಬಂದು ಸೇರಲಿ.

## English Translation

Ask of the lords (of earth, the holy teachers), the birth of those deified sages, who with well-governed minds, and deligent in sacred rites, fabricated the heavens : and may these propitiatory (praises), augmenting (your power) and rapid as the wind, reach you at this solemn rite.

ಸಂಹಿತಾಪಾಠಃ

ನಿ ಷೀಮಿದತ್ರ ಗುಹ್ಯಾ ದಧಾನಾ ಉತ ಕ್ಷತ್ರಾಯ ರೋದಸೀ ಸಮಂಜನ್ ।
ಸಂ ಮಾತ್ರಾಭಿರ್ಮಮಿರೇ ಯೇಮುರುರ್ವೀ ಅಂತರ್ಮಹೀ ಸಮೃತೇ ಧಾಯಸೇ ಧುಃ ॥ ೩ ॥

ಪದಪಾಠಃ

ನಿ । ಸೀಂ । ಇತ್ । ಅತ್ರ । ಗುಹ್ಯಾ । ದಧಾನಾಃ । ಉತ । ಕ್ಷತ್ರಾಯ । ರೋದಸೀ ಇತಿ । ಸಂ । ಅಂಜನ್ । ಸಂ । ಮಾತ್ರಾಭಿಃ । ಮಮಿರೇ । ಯೇಮುಃ । ಉರ್ವೀ ಇತಿ । ಅಂತಃ । ಮಹೀ ಇತಿ । ಸಮೃತೇ ಇತಿ ಸಂ-ಋತೇ । ಧಾಯಸೇ । ಧುಃ ಇತಿ ಧುಃ ॥ ॥ ೩ ॥

ಸಾಯಣಭಾಷ್ಯಂ

ಅತ್ರ ಭೂಲೋಕೇ ಗುಹ್ಯಾ ಗೂಢಾನಿ ಕರ್ಮಾಣಿ ಸೀಮಿತ್ ಸರ್ವತ ಏವ ನಿದಧಾನಾಃ ಕುರ್ವಾಣಾ ಏತೇ ಕವಯ ಉತ ಅಪಿ ಚ ಕ್ಷತ್ರಾಯ ಬಲಾಯ ಧನಾಯ ವಾ ರೋದಸೀ ದ್ಯಾವಾಪೃಥಿವ್ಯೌ । ಸಮಂಜನ್ । ಓಷಧೀಭಿಃ ಪೃಥಿವೀಂ ದೇವೈಶ್ಚ ದಿವಂ ಸಂಗತಾಮಕಾರ್ಷುಃ । ಕಿಂ ಚ ತೇ ಮಾತ್ರಾಭಿಃ । ಮೀಯಂತೇ ಮಾಂತೀತಿ ವಾ ಮಾತ್ರಾಃ ಶಿಲೋಚ್ಚಯಾಃ। ತಾಭಿರ್ಮಾತ್ರಾಭಿಃ ಸಂ ಮಮಿರೇ । ತೇ ರೋದಸ್ಯಾವಿಯತ್ತಯಾ ಪರಿಚ್ಛಿನ್ನೇ ಚಕ್ರುಶ್ಚ । ಸಮೃತೇ ಪರಸ್ಪರಂ ಸಂಗತೇ ಉರ್ವೀ ವಿಸ್ತೀರ್ಣೇ ಮಹೀ ಮಹತ್ಯೌ ತೇ ದ್ಯಾವಾಪೃಥಿವ್ಯೌ ಯೇಮುಃ । ನಿಯಮಿತವಂತಃ । ವಿಷ್ಕಂಭಕೇನಾಂತರಿಕ್ಷೇಣಾಂತರುದಯಚ್ಛನ್ । ತಥಾ ಧಾಯಸೇ ತಯೋರ್ಧಾರಣಾರ್ಥಮಂತರಿಕ್ಷಂ ಧುಃ। ವ್ಯಧುಃ ॥ ಇದಮವಧಾರಣಾರ್ಥೇ । ಗುಹ್ಯಾ । ಗುಹಾಯಾಂ ಭವಾನಿ। ಭವಾರ್ಥೇ ಯತ್। ಯತೋಽನಾವ ಇತ್ಯಾದ್ಯುದಾತ್ತಃ । ದಧಾನಾಃ। ದಧಾತೇಃ ಶಾನಚಿ ರೂಪಂ । ಅಭ್ಯಸ್ತಸ್ವರಃ । ಅಂಜನ್ । ಅಂಜೂ ವ್ಯಕ್ತಿಮ್ರಕ್ಷಣಗತಿಷ್ವಿತ್ಯಸ್ಯ ಲಙಿ ಶ್ನಸೋರಲ್ಲೋಪಃ । ನಿಘಾತಃ । ಮಾತ್ರಾಭಿಃ । ಮಾ ಮಾನೇ ಮಾಙ್ ಮಾನೇ ವಾ । ಹುಯಾಮೇತ್ಯಾದಿನಾ ತ್ರನ್ಪ್ರತ್ಯಯಃ। ನಿತ್ಸ್ವರಃ । ಮಮಿರೇ । ಮಾಙ್ ಮಾನ ಇತ್ಯಸ್ಯ ಲಿಟಿ ರೂಪಂ । ಚಾದಿಲೋಪೇ ವಿಭಾಷೇತಿ ನ ನಿಘಾತಃ । ಯೇಮುಃ । ಯಮ ಉಪರಮ ಇತ್ಯಸ್ಯ ಲಿಟ್ಯುಸಿ ರೂಪಂ । ತಿಙುತ್ತರತ್ವಾದನಿಘಾತಃ । ಧಾಯಸೇ । ವಹಿಹಾಧಾಞ್ಭ್ಯಶ್ಛಂದಸೀತ್ಯಸುನ್ । ನಿತ್ಸ್ವರಃ । ಧುಃ । ದಧಾತೇರ್ಲುಙಿ ರೂಪಂ ॥

ಪ್ರತಿಪದಾರ್ಥ

**ಅತ್ರ**—ಈ ಭೂಲೋಕದಲ್ಲಿ । **ಗುಹ್ಯಾ**—ಗಹನವಾದ ಕರ್ಮಗಳನ್ನು । **ಸೀಮಿತ್**—ಸರ್ವಪ್ರದೇಶಗಳಲ್ಲಿಯೂ । **ನಿ ದಧಾನಾಃ**—ಆಚರಿಸತಕ್ಕ ಕವಿಗಳು । **ಕ್ಷತ್ರಾಯ**—ಶಕ್ತಿವೃದ್ಧಿಗಾಗಿ । **ರೋದಸೀ**—ದ್ಯಾವಾಪೃಥಿವಿಗಳನ್ನು । **ಸಮಂಜನ್**—ಓಷಧ್ಯಾದಿಗಳಿಂದ ತುಂಬಿದರು । **ಮಾತ್ರಾಭಿಃ**—ಪರ್ವತವೇ ಮುಂತಾದ ಸಾಮುಗ್ರಿಗಳಿಂದ । **ಸಂ ಮಿಮಿರೇ**—ಅವುಗಳನ್ನು ಪರಿಷ್ಕರಿಸಿದರು । **ಸಮೃತೇ**—ಅವು ಪರಸ್ಪರವಾಗಿ ಸೇರಿಕೊಂಡಿರಲು । **ಉರ್ವೀ**—ವಿಸ್ತೃತವಾದವೂ । **ಮಹೀ**—ಮಹತ್ಸರೂಪವುಳ್ಳವೂ ಆದ ದ್ಯಾವಾಪೃಥಿವಿಗಳನ್ನು । **ಯೇಮುಃ**—ನಿಯಮನದಲ್ಲಿಟ್ಟರು । **ಅಂತಃ**—ಅವುಗಳ ನಡುವೆ । **ಧಾಯಸೇ**—ಅವುಗಳನ್ನು ದೃಢವಾಗಿ ಧರಿಸಲು । **ಧುಃ**—ಅಂತರಿಕ್ಷವನ್ನು ನಿರ್ಮಿಸಿದರು.

ಭಾವಾರ್ಥ

ಈ ಭೂಲೋಕದಲ್ಲಿ ಗಹನವಾದ ಕರ್ಮಗಳನ್ನು ಸಕಲಪ್ರದೇಶಗಳಲ್ಲಿಯೂ ಆಚರಿಸತಕ್ಕ ಕವಿಗಳು ಸಕಲ ಭೂತಗಳ ಶಕ್ತಿವೃದ್ಧಿಗಾಗಿ ದ್ಯಾವಾಪೃಥಿವಿಗಳನ್ನು ಓಷಧ್ಯಾದಿಗಳಿಂದ ತುಂಬಿದರು, ಪರ್ವತವೇ ಮುಂತಾದ ಸಾಮುಗ್ರಿಗ

ಗಳಿಂದ ಅವುಗಳನ್ನು ಪರಿಷ್ಕರಿಸಿದರು, ಅವು ಪರಸ್ಪರವಾಗಿ ಸೇರಿಕೊಂಡಿರಲು ವಿಸ್ತೃತವಾದವೂ, ಮಹತ್ತ್ವರೂಪವುಳ್ಳವೂ ಆದ ದ್ಯಾವಾಪೃಥಿವಿಗಳನ್ನು ನಿಯಮನದಲ್ಲಿಟ್ಟರು. ಅವುಗಳ ನಡುವೆ ಅವುಗಳನ್ನು ದೃಢವಾಗಿ ಧರಿಸಲು ಅಂತರಿಕ್ಷವನ್ನು ನಿರ್ಮಿಸಿದರು.

## English Translation

Comprehending hidden (mysteries) here on earth, they have, through their power, made manifest (the things of heaven and earth; they have set limits to them by their elements; they connected them both mutually united, wide-spread and vast, and fixed the intermediate (firmament) to sustain them.

### ಸಂಹಿತಾಪಾಠಃ

ಆತಿಷ್ಠಂತಂ ಪರಿ ವಿಶ್ವೇ ಅಭೂಷಞ್ಛ್ರಿಯೋ ವಸಾನಶ್ಚರತಿ ಸ್ವರೋಚಿಃ ।
ಮಹತ್ತದ್ವೃಷ್ಣೋ ಅಸುರಸ್ಯ ನಾಮಾ ವಿಶ್ವರೂಪೋ ಅಮೃತಾನಿ ತಸ್ಥೌ ॥ ೪ ॥

### ಪದಪಾಠಃ

ಆಽತಿಷ್ಠಂತಂ । ಪರಿ । ವಿಶ್ವೇ । ಅಭೂಷನ್ । ಶ್ರಿಯಃ । ವಸಾನಃ । ಚರತಿ । ಸ್ವಽರೋಚಿಃ ।
ಮಹತ್ । ತತ್ । ವೃಷ್ಣಃ । ಅಸುರಸ್ಯ । ನಾಮ । ಆ । ವಿಶ್ವಽರೂಪಃ । ಅಮೃತಾನಿ । ತಸ್ಥೌ ॥ ೪ ॥

### ಸಾಯಣಭಾಷ್ಯಂ

ವಿಶ್ವೇ ಸರ್ವೇ ಕವಯೋ ರಥಮಾತಿಷ್ಠಂತಮಿಂದ್ರಂ ಪರ್ಯಭೂಷನ್ । ಪರಿತೋಽಲಮಕುರ್ವನ್ । ಸ್ವರೋಚಿಃ । ಸ್ವಮೇವ ರೋಚಿರ್ಯಸ್ಯಾಸೌ ಸ್ವರೋಚಿಃ । ಸ್ವಪ್ರಭಯೈವ ದೀಪ್ಯಮಾನ ಇತ್ಯರ್ಥಃ । ಅತ ಏವ ಶ್ರಿಯೋ ದೀಪ್ತೀರ್ವಸಾನ ಆಚ್ಛಾದಯನ್ ಸೋಽಯಮಿಂದ್ರಶ್ಚರತಿ । ಸರ್ವತ್ರ ವರ್ತತೇ । ವೃಷ್ಣಃ ಕಾಮಾನಾಂ ವರ್ಷಿತುರಸುರಸ್ಯ । ಅಸ್ಯತಿ ಪ್ರೇರಯತಿ ಸರ್ವಾನಂತರ್ಯಾಮಿತಯೇತ್ಯಸುರಃ । ತಸ್ಯೇಂದ್ರಸ್ಯ ತತ್ತಾದೃಶಮನುಭೂತಪೂರ್ವಂ ನಾಮ। ನಮಯತಿ ಸರ್ವಾನನೇನ ಶತ್ರೂನಿತಿ ನಾಮ ಕರ್ಮ। ಯದ್ವಾ ನಮ್ಯತೇ ಸರ್ವೈರ್ನಮಸ್ಕ್ರಿಯತ ಇತಿ ನಾಮೇಂದ್ರಸ್ಯ ಶರೀರಂ ಕರ್ಮ ವಾ । ಮಹದಾಶ್ಚರ್ಯೋಪೇತಂ ವರ್ತತೇ। ತಥಾ ವಿಶ್ವರೂಪೋ ನಾನಾವಿಧರೂಪತಾಂ ಭಜಮಾನಃ ಸ ಇಂದ್ರೋ ವರುಣಾತ್ಮನಾಮೃತಾನಿ ಜಲಾನ್ಯಾ ತಸ್ಥೌ । ಆಧಿತಿಷ್ಠತಿ॥ ವಿಶ್ವೇ । ಜಸಃ ಶೀ। ಅಭೂಷನ್ । ಭೂಷ ಅಲಂಕಾರ ಇತ್ಯಸ್ಯ ಲಙಿ ರೂಪಂ । ವಸಾನಃ । ವಸ ಆಚ್ಛಾದನ ಇತ್ಯಸ್ಯ ಶಾನಚಿ ರೂಪಂ । ತಸ್ಯ ಲಸಾರ್ವಧಾತುಕಸ್ವರೇ ಧಾತುಸ್ವರಃ । ನಾಮ। ಣಮು ಪ್ರಹ್ವತ್ವ ಇತ್ಯಸ್ಮಾನ್ನಾಮನ್ಸೀಮನ್ನಿತ್ಯಾದಿನಾ ಮನಿನ್ಪ್ರತ್ಯಯಾಂತತ್ವೇನ ನಿಪಾತನಾದಾದ್ಯುದಾತ್ತಃ । ವಿಶ್ವರೂಪ ಇತಿ ತಸ್ಯ ಸಂಜ್ಞಾ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ ।

ಅಮೃತಾನಿ | ಕಾಲಾಧ್ವನೋರತ್ಯಂತಸಂಯೋಗ ಇತಿ ದ್ವಿತೀಯಾ | ತಸ್ಥೌ | ತಿಷ್ಠತೇರ್ಲಿಟಿ ಐಲಿ ರೂಪಂ ||

ಪ್ರತಿಪದಾರ್ಥ

ವಿಶ್ವೇ—ಸಮಸ್ತವಾದ ಕವಿಗಳೂ ಸಹ | ಅತಿಷ್ಠಂತಂ—ರಥದಲ್ಲಿ ಆಸೀನನಾಗಿರುವ ಇಂದ್ರನನ್ನು | ಪರಿ ಅಭೂಷನ್—ಅಲಂಕರಿಸಿದರು | ಸ್ವರೋಚಿಃ—ಸ್ವತಂತ್ರವಾದ ತೇಜಸ್ಸುಳ್ಳವನೂ | ಶ್ರಿಯಃ—ಅತಿಶಯವಾದ ಕಾಂತಿಯನ್ನು | ವಸಾನಃ—ಹೊಂದಿರುವವನೂ ಆದ ಇಂದ್ರನು | ಚರತಿ—ಸರ್ವತ್ರ ವ್ಯಾಪಿಸಿ ಸಂಚರಿಸುತ್ತಾನೆ | ವೃಷ್ಣಃ—ಕಾಮವರ್ಷಕನೂ | ಅಸುರಸ್ಯ—ಸಕಲ ಚೇತನಗಳಿಗೂ ಪ್ರೇರಕನೂ ಆದ ಇಂದ್ರನ | ತತ್ ನಾಮ—ಪ್ರಸಿದ್ಧವಾದ ಕರ್ಮಗಳು | ಮಹತ್—ಅತ್ಯದ್ಭುತವಾಗಿವೆ | ವಿಶ್ವರೂಪಃ—ನಾನಾ ವಿಧವಾದ ರೂಪಗಳನ್ನು ಧರಿಸುವ ಇಂದ್ರನು | ಅಮೃತಾನಿ—ಉದಕಗಳಿಗೆ | ಆ ತಸ್ಥೌ—ಅಧಿಪತಿಯಾಗಿ ನಿಂತನು.

ಭಾವಾರ್ಥ

ಸಮಸ್ತವಾದ ಕವಿಗಳೂ ಸಹ ರಥದಲ್ಲಿ ಆಸೀನನಾಗಿರುವ ಇಂದ್ರನನ್ನು ಅಲಂಕರಿಸಿದರು. (ಸ್ತುತಿಸಿದರು). ಸ್ವತಂತ್ರವಾದ ತೇಜಸ್ಸುಳ್ಳವನೂ, ಅತಿಶಯವಾದ ಕಾಂತಿಯನ್ನು ಹೊಂದಿರುವವನೂ ಆದ ಇಂದ್ರನು ಸರ್ವತ್ರ ವ್ಯಾಪಿಸಿ ಸಂಚರಿಸುತ್ತಾನೆ. ಕಾಮವರ್ಷಕನೂ, ಸಕಲ ಚೇತನಗಳಿಗೂ ಪ್ರೇರಕನೂ ಆದ ಇಂದ್ರನ ಪ್ರಸಿದ್ಧವಾದ ಕರ್ಮಗಳು. ಅತ್ಯದ್ಭುತವಾಗಿವೆ. ನಾನಾವಿಧವಾದ ರೂಪಗಳನ್ನು ಧರಿಸುವ ಇಂದ್ರನು ಉದಕಗಳಿಗೆ ಅಧಿಪತಿಯಾಗಿ ನಿಂತನು.

English Translation

They all ornamented (Indra) standing (in his car); and, clothed in beauty, he proceeds self-radiant: wonderful are the acts of that showerer (of benefits), the influencer (of consciences), who omniform, presides over the ambrosial (waters).

ಸಂಹಿತಾಪಾಠಃ

ಅಸೂತ ಪೂರ್ವೋ ವೃಷಭೋ ಜ್ಯಾಯಾನಿಮಾ ಅಸ್ಯ ಶುರುಧಃ ಸಂತಿ ಪೂರ್ವೀಃ |
ದಿವೋ ನಪಾತಾ ವಿದಥಸ್ಯ ಧೀಭಿಃ ಕ್ಷತ್ರಂ ರಾಜಾನಾ ಪ್ರದಿವೋ ದಧಾಥೇ || ೫ ||

ಪದಪಾಠಃ

ಅಸೂತ | ಪೂರ್ವಃ | ವೃಷಭಃ | ಜ್ಯಾಯಾನ್ | ಇಮಾಃ | ಅಸ್ಯ | ಶುರುಧಃ | ಸಂತಿ | ಪೂರ್ವೀಃ |
ದಿವಃ | ನಪಾತಾ | ವಿದಥಸ್ಯ | ಧೀಭಿಃ | ಕ್ಷತ್ರಂ | ರಾಜಾನಾ | ಪ್ರದಿವಃ | ದಧಾಥೇ ಇತಿ || || ೫ ||

ಸಾಯಣಭಾಷ್ಯಂ

ವೃಷಭಃ ಕಾಮಾನಾಂ ವರ್ಷಕಃ ಪೂರ್ವಶ್ಚಿರಂತನೋಽತ ಏವ ಜ್ಯಾಯಾನಿಂದ್ರೋಽಸೂತ | ಅಪಃ ಸಸರ್ಜ | ಪೂರ್ವೀರ್ಬಹ್ವ್ಯ ಇಮಾ ಅನೇನ ಸೃಷ್ಟಾ ಆಪೋಽಸ್ಯ ಶುರುಧಃ ಸಂತಿ | ಶುಚಃ ಪಿಪಾಸಾಯಾ

ರೋಧಯಿತ್ರ್ಯೋ ಭವಂತಿ । ದಿವೋ ನಪಾತಾ ದಿವೋ ನ ಪಾತಯಿತಾರೌ ಹೇ ರಾಜಾನಾವಿಂದ್ರಾವರುಣೌ ಪ್ರದಿವಃ ಪ್ರಕರ್ಷೇಣ ದ್ಯೋತಮಾನಸ್ಯ ವಿದಥಸ್ಯ ಯಜ್ಞಕಾರಿಣಃ ಸ್ತೋತುರ್ಧೀಭಿಃ ಸ್ತುತಿಭಿಃ ಕ್ಷತ್ರಂ ಧನಂ ದಧಾಥೇ। ಅಸ್ಮಭ್ಯಂ ದಾತುಂ ಧಾರಯೇಥೇ ॥ ಅಸೂತ । ಷೂಙ್ ಪ್ರಾಣಿಗರ್ಭವಿಮೋಚನ ಇತ್ಯಸ್ಯ ಲಙಿ ರೂಪಂ। ಅಡಾಗಮಸ್ಸ್ವರಃ। ಜ್ಯಾಯಾನ್। ಪ್ರಶಸ್ಯಶಬ್ದಾದೀಯಸುನಿ ಜ್ಯ ಚೇತಿ ಜ್ಯಾದೇಶಃ। ಜ್ಯಾದಾದೀಯಸ ಇತೀಯಸ ಆದೇರಾಕಾರಾದೇಶಃ। ನಿತ್ತ್ವಾದಾದ್ಯುದಾತ್ತಃ। ಶುರುಧಃ। ಪೃಷೋದರಾದಿಃ। ನಪಾತಾ। ನಭ್ರಾಣ್ನಪಾದಿತಿ ನಿಪಾತನಾನ್ನ ಞಃ ಪ್ರಕೃತಿಭಾವಃ। ಆಮಂತ್ರಿತತ್ವಾನ್ನಿಘಾತಃ। ಧೀಭಿಃ। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ। ರಾಜಾನಾ। ಆಮಂತ್ರಿತತ್ವಾನ್ನಿಘಾತಃ। ದಧಾಥೇ। ದಧಾತೇರ್ಲಟಿ ರೂಪಂ। ನಿಘಾತಃ॥ ॥ ೨೩ ॥

ಪ್ರತಿಪದಾರ್ಥ

**ವೃಷಭಃ**—ಕಾಮವರ್ಷಕನೂ। **ಪೂರ್ವಃ**—ಪ್ರಾಚೀನನೂ। **ಜ್ಯಾಯಾನ್**—ಹಿರಿಯವನೂ ಆದ ಇಂದ್ರನು। **ಅಸೂತ**—(ಉದಕಗಳನ್ನು) ಸೃಷ್ಟಿಸಿದನು। **ಪೂರ್ವೀಃ**—ಪ್ರಭೂತಗಳಾದ। **ಇಮಾಃ**—ಈ ಉದಕಗಳು। **ಅಸ್ಯ**—ಈ ಇಂದ್ರನ। **ಶುರುಧಃ**—ದಾಹವನ್ನು ಅಡಗಿಸುವುವಾಗಿ। **ಸಂತಿ**—ಇರುತ್ತವೆ। **ದಿವಃ ನಪಾತಾ**—ದೇವಲೋಕವನ್ನು ಎತ್ತಿಹಿಡಿದಿರುವ ಇಂದ್ರಾವರುಣರು। **ಪ್ರದಿವಃ**—ಅತಿಶಯವಾಗಿ ಪ್ರಕಾಶಿಸುವ। **ವಿದಥಸ್ಯ**—ಯಜ್ಞಕರ್ತನಾದ ಸ್ತೋತೃವಿನ। **ಧೀಭಿಃ**—ಸ್ತುತಿಗಳಿಂದ (ಹೃಷ್ಟರಾಗಿ)। **ಕ್ಷತ್ರಂ**—ಧನವನ್ನು। **ದಧಾಥೇ**—(ನಮಗೆ ಕೊಡಲು) ಹಿಡಿದಿದ್ದಾರೆ.

ಭಾವಾರ್ಥ

ಕಾಮವರ್ಷಕನೂ, ಪ್ರಾಚೀನನೂ, ಹಿರಿಯವನೂ ಆದ ಇಂದ್ರನು ಉದಕಗಳನ್ನು ಸೃಷ್ಟಿಸಿದನು. ಪ್ರಭೂತಗಳಾದ ಈ ಉದಕಗಳು ಇಂದ್ರನ ದಾಹವನ್ನು ಅಡಗಿಸುತ್ತವೆ. ದೇವಲೋಕದ ನಪ್ತೃಗಳಾದ ಇಂದ್ರಾವರುಣರು ಅತಿಶಯವಾಗಿ ಪ್ರಕಾಶಿಸುವ ಸ್ತೋತೃವಿನ ಸ್ತುತಿಗಳಿಂದ ಹೃಷ್ಟರಾಗಿ ನಮಗೆ ಧನವನ್ನು ಕೊಡಲು ಹಿಡಿದಿದ್ದಾರೆ.

## English Translation

The showerer (of benefits), the preceder and elder (of the gods), generated (the waters): they are the abundant allayers of his thirst: sovereign Indra and Varuna, grandsons of heaven, you possess the wealth (that is to be acquired) by the rites of the splendid sacrifice.

ಸಂಹಿತಾಪಾಠಃ

ತ್ರೀಣಿ ರಾಜಾನಾ ವಿದಥೇ ಪುರೂಣಿ ಪರಿ ವಿಶ್ವಾನಿ ಭೂಷಥಃ ಸದಾಂಸಿ ।
ಅಪಶ್ಯಮತ್ರ ಮನಸಾ ಜಗನ್ವಾನ್ವ್ರತೇ ಗಂಧರ್ವಾँ ಅಪಿ ವಾಯುಕೇಶಾನ್ ॥ ೬ ॥

ಪದಪಾಠಃ

ತ್ರೀಣಿ । ರಾಜಾನಾ । ವಿದಥೇ । ಪುರೂಣಿ । ಪರಿ । ವಿಶ್ವಾನಿ । ಭೂಷಥಃ । ಸದಾಂಸಿ ।
ಅಪಶ್ಯಂ । ಅತ್ರ । ಮನಸಾ । ಜಗನ್ವಾನ್ । ವ್ರತೇ । ಗಂಧರ್ವಾನ್ । ಅಪಿ । ವಾಯುಽಕೇಶಾನ್ ॥ ೬ ॥

ಸಾಯಣಭಾಷ್ಯಂ

ಹೇ ರಾಜಾನಾವಿಂದ್ರಾವರುಣೌ ವಿದಥೇಽಸ್ಮಿನ್ಯಜ್ಞೇ ವಿಶ್ವಾನಿ ವ್ಯಾಪ್ತಾನಿ ಪುರೂಣಿ ಯಜನೀಯೈಃ ಸೋಮಾದಿಭಿಃ ಪೂರ್ಣಾನಿ ತ್ರೀಣಿ ಸದಾಂಸಿ ಸವನಾನಿ ಪರಿ ಭೂಷಥಃ । ಸರ್ವತೋಽಲಂಕುರುಥಃ । ಹೇ ಇಂದ್ರ ತ್ವಂ ಜಗನ್ವಾನ್ । ಯಜ್ಞಂ ಪ್ರತಿ ಗತವಾನಸಿ । ಅಪಿ ಸಂಭಾವನಾಯಾಂ । ಯತೋಽಹಮತ್ರ ವ್ರತೇ ಯಜ್ಞೇ ವಾಯುಕೇಶಾನ್ ವಾಯುವಚ್ಚಲನರಶ್ಮೀನ್ ಗಂಧರ್ವಾನ್ ಸೋಮರಕ್ಷಕಾನ್ ಸ್ವಾನಭ್ರಾಜಾದೀನ್ ಮನಸಾಪಶ್ಯಂ । ತೇ ಚ ಸ್ವಾನಭ್ರಾಜಾದಯಸ್ತೈತ್ತಿರೀಯಕೇ ಸ್ಪಷ್ಟಮಭಿಹಿತಾಃ । ಸ್ವಾನ ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನವೇತೇ ವಃ ಸೋಮಕ್ರಯಣಾಸ್ತಾನ್ರಕ್ಷಧ್ವಂ ಮಾ ವೋ ದಭನ್ । ಸ. ೧-೨-೭ । ಇತಿ ॥ ಭೂಷಥಃ । ಭೂಷ ಅಲಂಕಾರ ಇತ್ಯಸ್ಯ ಲಟಿ ರೂಪಂ । ಅಪಶ್ಯಂ । ದೃಶಿರ್ ಪ್ರೇಕ್ಷಣ ಇತ್ಯಸ್ಯ ಲಙಿ ರೂಪಂ । ಪಾದಾದಿತ್ವಾದನಿಘಾತಃ । ಜಗನ್ವಾನ್ । ಗಮೇಃ ಕ್ವಸೌ ವಿಭಾಷಾ ಗಮಹನವಿದವಿಶಾಮಿತೀಟೋ ವಿಕಲ್ಪಿತತ್ವಾದತ್ರೇಡಭಾವಃ । ಮೋ ನೋ ಧಾತೋರ್ನ್ವೋಶ್ಚೇತಿ ಮಕಾರಸ್ಯ ನಕಾರಃ । ಪ್ರತ್ಯಯಸ್ವರಃ ಗಂಧರ್ವಾನ್ । ಧೃಞ್ ಧಾರಣ ಇತ್ಯಸ್ಯ ಗೋಶಬ್ದ ಉಪಪದೇ ಗವಿ ಗನ್ ಧೃಞೋ ವ ಇತಿ ವಪ್ರತ್ಯಯಃ । ತತ್ಸಂನಿಯೋಗೇನ ಗೋಶಬ್ದಸ್ಯ ಗನಾದೇಶಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ರಾಜಾನಾ—ಪ್ರಭುಗಳಾದ ಎಲೈ ಇಂದ್ರಾವರುಣರೇ। **ವಿದಥೇ**—ಈ ಯಜ್ಞದಲ್ಲಿ। **ವಿಶ್ವಾನಿ**—ಸಮಸ್ತವಾದ । **ಪುರೂಣಿ**—ಎಲ್ಲಾ ಯಜ್ಞಸಾಮಗ್ರಿಗಳನ್ನೂ । **ತ್ರೀಣಿ ಸದಾಂಸಿ**—ಸವನತ್ರಯದಲ್ಲೂ ಸಹ । **ಪರಿ ಭೂಷಥಃ**—ಒದಗಿಸಿ ಅಲಂಕರಿಸುತ್ತೀರಿ (ಎಲೈ ಇಂದ್ರನೇ) । **ಜಗನ್ವಾನ್**—ನೀನು ಯಜ್ಞಪ್ರದೇಶಕ್ಕೆ ಆಗಮಿಸಿದ್ದೀಯೆ । **ಅಪಿ**—ಮತ್ತು । **ಅತ್ರ ವ್ರತೇ**—ಈ ಯಜ್ಞದಲ್ಲಿ । **ವಾಯುಕೇಶಾನ್**—ವಾಯುವಿನಂತೆ ಕಂಪಿಸುವ ರಶ್ಮಿರೂಪವಾದ ಕೇಶಗಳುಳ್ಳ । **ಗಂಧರ್ವಾನ್**—ಸೋಮರಕ್ಷಕರಾದ ಗಂಧರ್ವರನ್ನು । **ಮನಸಾ**—ಧ್ಯಾನರೂಪದಿಂದ । **ಅಪಶ್ಯಂ**—ಸಾಕ್ಷಾತ್ಕರಿಸಿದ್ದೇನೆ. (ನೋಡಿದ್ದೇನೆ).

ಭಾವಾರ್ಥ

ಪ್ರಭುಗಳಾದ ಎಲೈ ಇಂದ್ರಾವರುಣರೇ, ಈ ಯಜ್ಞಕ್ಕೆ ಬೇಕಾದ ಸಮಸ್ತಸಾಮಗ್ರಿಗಳನ್ನೂ ಸಹ ಸವನತ್ರಯ ಕಾಲಗಳಲ್ಲೂ ಒದಗಿಸುತ್ತೀರಿ. ಎಲೈ ಇಂದ್ರನೇ, ನೀನು ಯಜ್ಞಪ್ರದೇಶಕ್ಕೆ ಆಗಮಿಸಿದ್ದೀಯೆ. ಮತ್ತು ಈ ಯಜ್ಞದಲ್ಲಿ ವಾಯುವಿನಂತೆ ಕಂಪಿಸುವ ರಶ್ಮಿರೂಪವಾದ ಕೇಶಗಳುಳ್ಳ ಸೋಮರಕ್ಷಕರಾದ ಗಂಧರ್ವರನ್ನು ಧ್ಯಾನರೂಪದಿಂದ ಸಾಕ್ಷಾತ್ಕರಿಸಿದ್ದೇನೆ.

## English Translation

Royal Indra and Varuna, embellish the three universal sacrifices (and make them) full (of all requisites) for this celebration : you have gone

to the rite, for I have beheld in my mind, at this solemnity, the Gandharvas with hair (waving) in the wind.

ವಿಶೇಷವಿಷಯಗಳು

**ಗಂಧರ್ವಾನ್**—ಸೋಮರಕ್ಷಕರಾದ ಗಂಧರ್ವರು ಯಾರು ಎಂಬ ವಿಷಯವು ಯಜುರ್ವೇದತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ—

ಸ್ವಾನ ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನವೇತೇ ವಃ ಸೋಮಕ್ರಯಣಾ-
ಸ್ತಾನ್ರಕ್ಷಧ್ವಂ ಮಾವೋ ದಭನ್ ॥

(ತೈ. ಸಂ. ೧-೨-೭-೧)

ಪೂರ್ವದಲ್ಲಿ ಸೋಮವು ಸ್ವರ್ಗದಲ್ಲಿದ್ದಿತು. ಅದನ್ನು ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪವನ್ನು ಧರಿಸಿ ಭೂಮಿಗೆ ತಂದಿತು. ಸ್ವರ್ಗದಲ್ಲಿದ್ದಾಗ ಅದನ್ನು ರಕ್ಷಿಸುವುದಕ್ಕಾಗಿ ಕೆಲವ ಗಂಧರ್ವರು ನೇಮಿಸಲ್ಪಟ್ಟಿದ್ದರು. ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ ಹಸ್ತ, ಸುಹಸ್ತ, ಕೃಶಾನು ಎಂದು ಆ ಗಂಧರ್ವರ ಹೆಸರುಗಳು. ಅವರನ್ನೇ ಈ ಋಕ್ಕಿನಲ್ಲಿ ನಿರ್ದೇಶಿಸಿದೆ.

ಸಂಹಿತಾಪಾಠಃ

ತದಿನ್ನ್ವಸ್ಯ ವೃಷಭಸ್ಯ ಧೇನೋರಾ ನಾಮಭಿರ್ಮಮಿರೇ ಸಕ್ಮ್ಯಂ ಗೋಃ ।
ಅನ್ಯದನ್ಯದಸುರ್ಯಂ೧ ವಸಾನಾ ನಿ ಮಾಯಿನೋ ಮಮಿರೇ ರೂಪಮಸ್ಮಿನ್ ॥ ೭ ॥

ಪದಪಾಠಃ

ತತ್ । ಇತ್ । ನು । ಅಸ್ಯ । ವೃಷಭಸ್ಯ । ಧೇನೋಃ । ಆ । ನಾಮಭಿಃ । ಮಮಿರೇ । ಸಕ್ಮ್ಯಂ । ಗೋಃ ।
ಅನ್ಯತ್‌ಅನ್ಯತ್ । ಅಸುರ್ಯಂ । ವಸಾನಾಃ । ನಿ । ಮಾಯಿನಃ । ಮಮಿರೇ । ರೂಪಂ । ಅಸ್ಮಿನ್ ॥ ೭ ॥

ಸಾಯಣಭಾಷ್ಯಂ

ಯೇ ಯಜಮಾನಾ ವೃಷಭಸ್ಯಾಭಿಮತಫಲಪ್ರದಾಸ್ಯಾಸ್ಯೇಂದ್ರಸ್ಯಾರ್ಥಂ ಧೇನೋರ್ಗೋರ್ನಾಮಭಿರ್ವಿಶ್ವಾಯುರ್ವಿಶ್ವವ್ಯಚಾ ಇತ್ಯಾದಿಭಿರುಪಲಕ್ಷಿತಾಂ ಗಾಂ ಸಕ್ಮ್ಯಂ ಸಂಭಜನಾರ್ಹಂ ತತ್ಕ್ಷೀರಾದಿಕಂ ಹವಿರ್ನು ಕ್ಷಿಪ್ರಮಾಮಮಿರ ಆದುಹಂತಿ।ಧಾತೂನಾಮನೇಕಾರ್ಥತ್ವಾತ್ । ತೇನ ಚ ಹವಿಷಾ ಯಜ್ಞಮನುಷ್ಠಾಯ ದೇವಭೂಯಂ ಪ್ರಾಪ್ತಾಸ್ತೇ ಕವಯೋಽನ್ಯದನ್ಯನ್ನೂತನಮಸುರ್ಯಮಸುರಾಣಾಂ ಬಲಂ ವಸಾನಾ ಆಚ್ಛಾದಯಂತ ಅತ ಏವ ಮಾಯಿನೋ ಮಾಯಯಾ ಸ್ವೀಕೃತಕಾಮರೂಪಾಃ । ಯದ್ವಾ ಮಾಯಿನಃ ಪ್ರಜ್ಞಾವಂತಃ ಸಂತೋಽಸ್ಮಿನ್ನಿಂದ್ರೇ ರೂಪಂ ಸ್ವಂ ಸ್ವಂ ರೂಪಂ ನಿ ಮಮಿರೇ । ಇಯತ್ತಯಾ ಪರಿಚ್ಛಿದ್ಯ ನಿದಧುಃ ॥ ಇತ್ ಪೂರಣಂ । ಮಮಿರೇ । ಮಾಙ್ ಮಾನೇ । ಲಿಟಿ ರೂಪಂ । ನಿಘಾತಃ । ಸಕ್ಮ್ಯಂ । ಯುಜಿರುಚಿತಿಜಾಂ ಕುಶ್ಚೇತ್ಯತ್ರ ಚಕಾರಸ್ಯಾನುಕ್ತಸಮುಚ್ಚಯಾರ್ಥತ್ವಾತ್ಸಚತೇರ್ಮುಕ್ಪ್ರತ್ಯಯಃ ಕುತ್ವಂ ಚ । ಸಚನಂ ಸಕ್ಮ । ತತ್ರ ಭವ ಇತ್ಯರ್ಥೇ ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾ-

ದ್ಯುದಾತ್ತಃ । ಗೋಃ । ಏಕಾದೇಶಸ್ವರಃ । ಅಸುರ್ಯಂ । ಅಸುರಸ್ಯ ಸ್ವಮಿತ್ಯರ್ಥೇಽಸುರಸ್ಯ ಸ್ವಂ । ಪಾ. ೪-೪-೧೨೩ । ಇತಿ ಯತ್ । ತಿತ್ಸ್ವರಿತಃ । ರೂಪಂ । ರೂಪ ರೂಪಕ್ರಿಯಾಯಾಂ । ಣ್ಯಂತಃ । ಖಷ್ಪಶಿಲ್ಪ-ಶಷ್ಪವಾಷ್ಪರೂಪಪರ್ಪತಲ್ಪಾಃ । ಉ. ३-२೮ । ಇತಿ ಪಪ್ರತ್ಯಯಾಂತತ್ವೇನ ನಿಪಾತನಾತ್ಪಕಾರೋಽಲೋ-ಪೋಽಗುಣತ್ವಂ ಚ । ರೂಪಯತಿ ರೂಪ್ಯತೇ ವೇತಿ ರೂಪಂ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

(ಯಜ್ಞಕರ್ತರಾದ ಕವಿಗಳು) ವೃಷಭಸ್ಯ—ಇಷ್ಟಾರ್ಥಪ್ರದನಾದ । ಅಸ್ಯ—ಇಂದ್ರನಿಗಾಗಿ । ಧೇನೋಃ ಗೋಃ—ಕರೆಯತಕ್ಕ ಗೋವುಗಳನ್ನು । ನಾಮಭಿಃ—ಅನೇಕವಿಧವಾದ ಹೆಸರುಗಳಿಂದ ನಿರ್ದೇಶಿಸಿ । ಸಕ್ಮ್ಯಂ—ಹವಿಸ್ಸಿಗೆ ಯೋಗ್ಯವಾದ ಕ್ಷೀರವನ್ನು । ನು—ಶೀಘ್ರವಾಗಿ । ಆ ಮಮಿರೇ—ಕರೆಯುತ್ತಾರೆ । (ಅದೇ ಕವಿಗಳು)। ಅನ್ಯದನ್ಯತ್—ಹೊಸಹೊಸದಾದ । ಅಸುರ್ಯಂ—ಶಕ್ತಿವಿಶೇಷವನ್ನು । ವಸಾನಾಃ—ಧರಿಸಿದವರಾಗಿಯೂ । ಮಾಯಿನಃ—ಪ್ರಜ್ಞಾವಂತರಾಗಿಯೂ । ಅಸ್ಮಿನ್—ಈ ಇಂದ್ರನಲ್ಲಿ । ರೂಪಂ—ತಮ್ಮ ಸ್ವರೂಪಗಳನ್ನು । ನಿ ಮಮಿರೇ—ಐಕ್ಯಮಾಡಿದರು.

ಭಾವಾರ್ಥ

ಯಜ್ಞಕರ್ತರಾದ ಕವಿಗಳು ಗೋವುಗಳನ್ನು ಅನೇಕವಿಧವಾದ ಹೆಸರುಗಳಿಂದ ನಿರ್ದೇಶಿಸಿ ಇಷ್ಟಾರ್ಥಪ್ರದನಾದ ಇಂದ್ರಾರ್ಥವಾಗಿ ಹವಿಸ್ಸಿಗೆ ಯೋಗ್ಯವಾದ ಕ್ಷೀರವನ್ನು ಕರೆಯುತ್ತಾರೆ. ಅದೇ ಕವಿಗಳು ಹೊಸಹೊಸದಾದ ಶಕ್ತಿವಿಶೇಷವನ್ನು ಧರಿಸಿದವರಾಗಿಯೂ ಪ್ರಜ್ಞಾವಂತರಾಗಿಯೂ ಈ ಇಂದ್ರನಲ್ಲಿ ತಮ್ಮ ಸ್ವರೂಪಗಳನ್ನು ಐಕ್ಯ ಮಾಡಿದರು.

English Translation

Those who, for (the sake of) the showerer (of benefits), milk the agreeable (produce) of the milch cow, (who is known) by (many) names, they invested with the diversified strength (of the Asuras) and practising delusive art, have deposited their own nature in him.

ಸಂಹಿತಾಪಾಠಃ

ತದಿನ್ನ್ವಸ್ಯ ಸವಿತುರ್ನಕಿರ್ಮೇ ಹಿರಣ್ಯಯೀಮಮತಿಂ ಯಾಮಶಿಶ್ರೇತ್ ।

ಆ ಸುಷ್ಟುತೀ ರೋದಸೀ ವಿಶ್ವಮಿನ್ವೇ ಅಪೀವ ಯೋಷಾ ಜನಿಮಾನಿ ವವ್ರೇ ॥ ೮ ॥

ಪದಪಾಠಃ

ತತ್ । ಇತ್ । ನು । ಅಸ್ಯ । ಸವಿತುಃ । ನಕಿಃ । ಮೇ । ಹಿರಣ್ಯಯೀಂ । ಅಮತಿಂ । ಯಾಂ । ಅಶಿಶ್ರೇತ್ ।

ಆ । ಸುಽಸ್ತುತೀ । ರೋದಸೀ ಇತಿ । ವಿಶ್ವಮಿನ್ವೇ ಇತಿ । ವಿಶ್ವಂಽಇನ್ವೇ । ಅಪಿಽಇವ । ಯೋಷಾ । ಜನಿಮಾನಿ । ವವ್ರೇ ॥ ೮ ॥

ಸಾಯಣಭಾಷ್ಯಂ

ತತ್ತಸ್ಯಾತ್ಸವಿತುಃ ಸರ್ವಸ್ಯ ಜಗತೋಽಂತರ್ಯಾಮಿತಯಾ ಪ್ರೇರಯಿತುರಸ್ಯೇಂದ್ರಸ್ಯ ಮೇ ಮಮ ಹಿರಣ್ಯಯೀಂ ಸುವರ್ಣಮಯೀಮಮತಿಂ ದೀಪ್ತಿಂ ನಕಿಃ ಕೋ ವಾ ಪರಿಚ್ಛಿನತ್ತಿ ಖಲು । ಯಾಂ ಮದೀಯಾಂ ದೀಪ್ತಿಮಶಿಶ್ರೇತ್ ಯ ಆಶ್ರಯತಿ ಸ ಸುಷ್ಟುತೀ ಶೋಭನಯಾ ಸ್ತುತ್ಯಾ ಸ್ತುತಃ ಸನ್ ವಿಶ್ವಮಿನ್ವೇ ಸರ್ವಸ್ಯ ಸಂತರ್ಪಯಿತ್ರ್ಯೌ ರೋದಸೀ ದ್ಯಾವಾಪೃಥಿವ್ಯಾವಾ ವವ್ರೇ । ಸ್ವಕೀಯತಯಾ ಸರ್ವತೋ ವೃಣುತೇ । ತತ್ರ ದೃಷ್ಟಾಂತಃ । ಅಪೀವ ಯೋಷಾ ಜನಿಮಾನಿ । ಯಥಾ ಯೋಷಾ ಸ್ತ್ರೀ ಜನಿಮಾನಿ ಜಾತಾನ್ಯಪತ್ಯಾನಿ ವೃಣೋತಿ ತದ್ವತ್ ॥ ನಕಿಃ ನಿಪಾತಃ । ಹಿರಣ್ಯಯೀಂ । ಹಿರಣ್ಯಸ್ಯ ವಿಕಾರಾರ್ಥೇ ಮಯಡ್ವೈತಯೋರಿತಿ ಮಯಟ್। ಋತ್ವ್ಯವಾಸ್ತ್ವ್ಯವಾಸ್ತ್ವಮಾಧ್ವೀಹಿರಣ್ಯಯಾನಿ ಛಂದಸೀತಿ ನಿಪಾತನಾನ್ಮಯಟೋ ಮಕಾರಲೋಪಃ । ಟಿತ್ವಾಟ್ಟಿಡ್ಢಾಣಞಿತಿ ಙೀಪ್ । ಪ್ರತ್ಯಯಸ್ವರಃ। ಅಮತಿಂ। ಅಮ ಗತ್ಯಾದಿಷು। ಅಮೇರತಿರಿತ್ಯತಿಪ್ರತ್ಯಯಃ। ಪ್ರತ್ಯಯಸ್ವರಃ। ಅಶಿಶ್ರೇತ್ । ಶ್ರಯತೇರ್ಲಙಿ ಬಹುಲಂ ಛಂದಸೀತಿ ಶಪಃ ಶ್ಲುಃ । ಯದ್ವೃತ್ತಯೋಗಾದನಿಘಾತಃ । ಸುಷ್ಟುತೀ । ಸುಪಾಂ ಸುಲುಗಿತಿ ತೃತೀಯಾಯಾಃ ಸವರ್ಣದೀರ್ಘಃ । ವಿಶ್ವಮಿನ್ವೇ । ಇವಿ ವ್ಯಾಪ್ತಿಪ್ರೀಣನಯೋರಿತ್ಯಸ್ಮಾತ್ಕರ್ಮಣ್ಯಣ್ । ಇದಿತ್ವಾನ್ನುಮ್ । ತತ್ಪುರುಷೇ ಕೃತಿ ಬಹುಲಮಿತಿ ದ್ವಿತೀಯಾಯಾ ಅಲುಕ್ । ಕೃದುತ್ತರಪದಸ್ವರಃ । ಯೋಷಾ । ಯೌತೇರ್ಮಿಶ್ರೀಭಾವಕರ್ಮಣೋ ವೃತೃವದಿಹನಿಕಮಿಕಷಿಯುಮುಚಿಭ್ಯಃ ಸ ಇತಿ ಸಪ್ರತ್ಯಯಃ । ಗ್ರಾಮಾದಿತ್ವಾದಾದ್ಯುದಾತ್ತಃ । ಜನಿಮಾನಿ । ಜನೀ ಪ್ರಾದುರ್ಭಾವೇ । ಹೃಜನಿಭ್ಯಾಮಿಮನಿನ್ನಿತೀಮನಿನ್ಪ್ರತ್ಯಯೋ ಭೂತಕಾಲೇ । ನಿತ್ವಾದಾದ್ಯುದಾತ್ತಃ । ವವ್ರೇ । ವೃಞ್ ವರಣ ಇತಸ್ಯ ಲಿಟಿ ರೂಪಂ ॥

ಪ್ರತಿಪದಾರ್ಥ

ತತ್ ಇನ್ನು—ಆ ಮಹತ್ಕಾರಣದಿಂದಲೇ । ಸವಿತುಃ—ಜಗತ್ಪ್ರೇರಕನಾದ ಇಂದ್ರನ ಕಾಂತಿಗೂ । ಮೇ—ನನ್ನ । ಹಿರಣ್ಯಯೀಂ—ಸುವರ್ಣಮಯವಾದ । ಅಮತಿಂ—ಕಾಂತಿಗೂ । ನ ಕಿಃ—ಯಾರೂ ಸಹ ವ್ಯತ್ಯಾಸವನ್ನು ಕಂಡುಹಿಡಿಯಲಾರರು । ಯಾಂ—ಯಾವ ಈ ಕಾಂತಿಯನ್ನು । ಅಶಿಶ್ರೇತ್—ಆಶ್ರಯಿಸಿರುವ ಪುರುಷನು । ಸುಷ್ಟುತೀ—ಉತ್ತಮವಾದ ಸ್ತುತಿಗಳಿಂದ ಪ್ರಶಂಸಿತನಾಗಿ । ಯೋಷಾ—ಮಾತೆಯು । ಜನಿಮಾನಿ ಅಪೀವ—ತನ್ನ ಶಿಶುಗಳನ್ನು ಲಾಲಿಸಿ ಅಪ್ಪಿಕೊಳ್ಳುವಂತೆ । ವಿಶ್ವಮಿನ್ವೇ—ಜಗತ್ತಿಗೆಲ್ಲಾ ತೃಪ್ತಿಕಾರಕರಾದ । ರೋದಸೀ—ದ್ಯಾವಾಪೃಥಿವಿಗಳನ್ನು । ಆ ವವ್ರೇ—ವ್ಯಾಪಿಸಿರುತ್ತಾನೆ.

ಭಾವಾರ್ಥ

ಜಗತ್ಪ್ರೇರಕನಾದ ಇಂದ್ರನ ಕಾಂತಿಗೂ ಸುವರ್ಣಮಯವಾದ ನನ್ನ ಕಾಂತಿಗೂ ಯಾರೂ ವ್ಯತ್ಯಾಸವನ್ನು ಕಂಡುಹಿಡಿಯಲಾರರು. ಈ ಕಾಂತಿಯನ್ನು ಆಶ್ರಯಿಸಿರುವ ಪುರುಷನು ಉತ್ತಮವಾದ ಸ್ತುತಿಗಳಿಂದ ಪ್ರಶಂಸಿತನಾಗಿ ಮಾತೆಯು ತನ್ನ ಶಿಶುಗಳನ್ನು ಲಾಲಿಸಿ ಅಪ್ಪಿಕೊಳ್ಳುವಂತೆ ಜಗತ್ತಿಗೆಲ್ಲಾ ತೃಪ್ತಿಕಾರಕರಾದ ದ್ಯಾವಾಪೃಥಿವಿಗಳನ್ನು ವ್ಯಾಪಿಸಿರುತ್ತಾನೆ.

## English Translation.

No one (distinguishes) my golden lustre from that of this Savitri, in which (lustre) he has taken refuge : gratified by pious praise, he cherishes the all-fostering heaven and earth as a woman cherishes her offspring.

ಸಂಹಿತಾಪಾಠಃ

ಯುವಂ ಪ್ರತ್ನಸ್ಯ ಸಾಧಥೋ ಮಹೋ ಯದ್ದೈವೀ ಸ್ವಸ್ತಿಃ ಪರಿ ಣಃ ಸ್ಯಾತಂ |
ಗೋಪಾಜಿಹ್ವಸ್ಯ ತಸ್ಥುಷೋ ವಿರೂಪಾ ವಿಶ್ವೇ ಪಶ್ಯಂತಿ ಮಾಯಿನಃ ಕೃತಾನಿ || ೯ ||

ಪದಪಾಠಃ

ಯುವಂ | ಪ್ರತ್ನಸ್ಯ | ಸಾಧಥಃ | ಮಹಃ | ಯತ್ | ದೈವೀ | ಸ್ವಸ್ತಿಃ | ಪರಿ | ನಃ | ಸ್ಯಾತಂ |
ಗೋಪಾಜಿಹ್ವಸ್ಯ | ತಸ್ಥುಷಃ | ವಿऽರೂಪಾ | ವಿಶ್ವೇ | ಪಶ್ಯಂತಿ | ಮಾಯಿನಃ | ಕೃತಾನಿ || ೯ ||

ಸಾಯಣಭಾಷ್ಯಂ

ಹೇ ಇಂದ್ರಾವರುಣೌ ಯುವಂ ಯುವಾಂ ಪ್ರತ್ನಸ್ಯ ಸ್ತೋತುರ್ಮಹಸ್ತಾದೃಶಂ ಶ್ರೇಯಃ ಸಾಧಥಃ | ಸಾಧಯಥಃ | ಕೀದೃಶಂ ತದಿತ್ಯತ ಆಹ | ಯದ್ದೈವೀ ಸ್ವಸ್ತಿರ್ಯದಿದಂ ದೇವಸಂಬಂಧಿ ಶ್ರೇಯಃ ಸ್ವರಾಜ್ಯಲಕ್ಷಣಂ | ಕಿಂಚ ಯುವಾಂ ನೋऽಸ್ಮಾನ್ಪರಿ ಪರಿತಃ ಸ್ಯಾತಂ | ರಕ್ಷಕೌ ಭವೇತಂ | ವಿಶ್ವೇ ಸರ್ವೇ ಮಾಯಿನೋ ದೇವಾ ಗೋಪಾಜಿಹ್ವಸ್ಯ | ಗೋಪ್ತ್ರೀ ಜಿಹ್ವಾ ಮಾ ಬಿಭೀತೇತ್ಯೇತಾದೃಶೀ ವಾಗ್ಯಸ್ಯ ಸ ತಥೋಕ್ತಃ | ತಸ್ಥುಷಃ ಸ್ಥಿರತರಸ್ಯೇಂದ್ರಸ್ಯ ವಿರೂಪಾ ನಾನಾವಿಧಾನಿ ವೃತ್ರಹನನಾದೀನಿ ಕೃತಾನಿ ಕರ್ಮಾಣಿ ಪಶ್ಯಂತಿ | ಏವಮಿಂದ್ರಸ್ಯ ವಿಶ್ವರೂಪತ್ವಮುಕ್ತಂ || ಯುವಂ | ಯುಷ್ಮಚ್ಛಬ್ದಸ್ಯ ದ್ವಿವಚನೇ ಯುವಾವೌ ದ್ವಿವಚನ ಇತಿ ಯುವಾದೇಶಃ | ಙೇಪ್ರಥಮಯೋರಮಿತಿ ಸುಪೋऽಮಾದೇಶಃ | ಸಾಧಥಃ | ಸಾಧ ಸಂಸಿದ್ಧಾವಿತ್ಯಸ್ಯ ಣ್ಯಂತಸ್ಯ ಲಟಿ ರೂಪಂ | ಬಹುಲಮನ್ಯತ್ರಾಪೀತಿ ಣೇರ್ಲುಕ್ | ನಿಘಾತಃ | ದೈವೀ | ದೇವಾದ್ಯಞಞಾವಿತ್ಯಞ್ಪ್ರತ್ಯಯಃ | ಞಿತ್ಸ್ವರಃ | ಸ್ಯಾತಂ | ಅಸ್ತೇರ್ಲಿಙಿ ರೂಪಂ | ಗೋಪಾಜಿಹ್ವಸ್ಯ | ಗುಪೂ ರಕ್ಷಣ ಇತ್ಯಸ್ಯಾಯಪ್ರತ್ಯಯಾಂತಸ್ಯ ಕ್ವಿಪ್ಯತೋಲೋಪಯಲೋಪಯೋಃ ಕೃತಯೋ ರೂಪಂ ಗೋಪಾ ಇತಿ | ಬಹುವ್ರೀಹೌ ಪೂರ್ವಪದಸ್ವರಃ | ತಸ್ಥುಷಃ | ಷ್ಠಾ ಗತಿನಿವೃತ್ತಾವಿತ್ಯಸ್ಯ ಕ್ವಸೌ ವಸ್ವೇಕಾಜಾದ್ಘಸಾಮಿತಿ ಪ್ರಾಪ್ತಸ್ಯೇಟಃ ಸಂಪ್ರಸಾರಣಂ | ಸಂಪ್ರಸಾರಣಾಶ್ರಯಂ ಚ ಬಲೀಯ ಇತಿ ಸಂಪ್ರಸಾರಣಸ್ಯ ಬಲೀಯಸ್ತ್ವಾನ್ನಿವೃತ್ತಿಃ | ವಸೋಃ ಸಂಪ್ರಸಾರಣಂ | ಪ್ರತ್ಯಯಸ್ವರಃ | ಪಶ್ಯಂತಿ | ದೃಶಿರ್ ಪ್ರೇಕ್ಷಣೇ ನಿಘಾತಃ ||

ಪ್ರತಿಪದಾರ್ಥ

(ಎಲೈ ಇಂದ್ರಾವರುಣರೇ) **ಯುವಂ**—ನೀವಿಬ್ಬರೂ ಸಹ | **ಪ್ರತ್ನಸ್ಯ**—ಸ್ತೋತೃವಿಗೆ | **ಮಹಃ**—ಮಹತ್ತಾದುದೂ | **ಯದ್ದೈವೀ ಸ್ವಸ್ತಿಃ**—ದೇವಸಂಬಂಧಿಯೂ ಸ್ವಾರಾಜ್ಯರೂಪವುಳ್ಳದ್ದೂ ಆದ ಶ್ರೇಯಸ್ಸನ್ನು | **ಸಾಧಯಃ**—ಸಾಧಿಸಿಕೊಡುತ್ತೀರಿ (ಮತ್ತು) | **ನಃ**—ನಮ್ಮನ್ನು | **ಪರಿ**—ಸುತ್ತುವರಿದು | **ಸ್ಯಾತಂ**—ರಕ್ಷಕರಾಗಿರಿ | **ವಿಶ್ವೇ**—ಸಮಸ್ತವಾದ | **ಮಾಯಿನಃ**—ದೇವತೆಗಳೂ ಸಹ | **ಗೋಪಜಿಹ್ವಸ್ಯ**—ರಕ್ಷಕವಾದ ಭರವಸೆಯನ್ನು ಕೊಡುವ ವಾಕ್ಕುಳ್ಳವನೂ | **ತಸ್ಥುಷಃ**—ಸ್ಥಿರವಾದ ಸ್ಥಿತಿಯುಳ್ಳವನೂ ಆದ ಇಂದ್ರನ | **ವಿರೂಪಾ**—ನಾನಾ ವಿಧವಾದ | **ಕೃತಾನಿ**—ಕರ್ಮಗಳನ್ನು | **ಪಶ್ಯಂತಿ**—ನೋಡುತ್ತಾರೆ.

ಭಾವಾರ್ಥ

ಎಲೈ ಇಂದ್ರಾವರುಣರೇ, ನೀವಿಬ್ಬರೂ ಸಹ ಸ್ತೋತೃವಿಗೆ ಮಹತ್ತಾದುದೂ, ದೇವಸಂಬಂಧಿಯೂ ಸ್ವಾರಾಜ್ಯ ರೂಪವುಳ್ಳದ್ದೂ ಆದ ಶ್ರೇಯಸ್ಸನ್ನು ಸಾಧಿಸಿಕೊಡುತ್ತೀರಿ. ಮತ್ತು ನಮ್ಮನ್ನು ಸುತ್ತುವರೆದು ನಮ್ಮ ರಕ್ಷಕರಾಗಿರಿ. ಸಮಸ್ತವಾದ ದೇವತೆಗಳೂ ಸಹ ರಕ್ಷಕವಾದ ಭರವಸೆಯನ್ನು ಕೊಡುವ ವಾಕ್ಕುಳ್ಳವನೂ, ಸ್ಥಿರವಾದ ಸ್ಥಿತಿಯುಳ್ಳವನೂ ಆದ ಇಂದ್ರನ ನಾನಾವಿಧವಾದ ಕರ್ಮಗಳನ್ನು ನೋಡುತ್ತಾರೆ.

English Translation

You two secure the great felicity of the ancient (worshipper), that which is happiness in heaven : do you (therefore) be ever about us : all those who exercise illusion, contemplate the manifold exploits of the everlasting and blandly-speaking Indra.

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಂ ।

ಪದಪಾಠಃ

ಶುನಂ । ಹುವೇಮ । ಮಘऽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃऽತಮಂ । ವಾಜऽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ऽಸು । ಘ್ನಂತಂ । ವೃತ್ರಾಣಿ । ಸಂऽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ । ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋಽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾಭಾವಶ್ಛಾಂದಸಃ । ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ

ಕೃತೇ ಚ ಲಿಜು ರೂಪಂ | ನಿಘಾತಃ | ಭರೇ | ಭೃಞ್ ಭರಣೇ | ಘಃ | ವೃಷಾದಿತ್ವಾದಾದ್ಯುದಾತ್ತಃ | ವಾಜಸಾತೌ | ಷಣು ದಾನೇ | ಭಾವೇ ಕ್ತಿನ್ | ಜನಸನೇತ್ಯಾದಿನಾನುನಾಸಿಕಸ್ಯಾತ್ವಂ | ಬಹುವ್ರೀಹೌ ಪೂರ್ವಪದಸ್ವರಃ | ಸಮತ್ಸು | ಅದ ಭಕ್ಷಣೇ | ಸಂಪೂರ್ವಾತ್ ಕ್ವಿಪ್ | ಸಂಭಕ್ಷಯಂತಿ ಯೋದ್ಧ್ವಾಣಾಮಾಯೂಂಷೀತಿ ಸಮದಃ ಸಂಗ್ರಾಮಾಃ | ಕೃದುತ್ತರಪದಸ್ವರಃ | ಘ್ನಂತಂ | ಹನ ಹಿಂಸಾಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ | ಹೋ ಹಂತೇರಿತಿ ಘುತ್ವಂ | ಸಂಜಿತಂ | ಜಿ ಜಯೇ | ಕ್ವಿಪ್ ||

ಪ್ರತಿಪದಾರ್ಥ

ವಾಜಸಾತೌ—ಅನ್ನಾರ್ಥವಾಗಿ ನಡೆಯತಕ್ಕ | ಅಸ್ಮಿನ್ ಭರೇ—ಈ ಯುದ್ಧದಲ್ಲಿ | ಶುನಂ—ಉತ್ಸಾಹಭರಿತನೂ | ಮಘವಾನಂ—ಧನವಂತನೂ | ಇಂದ್ರಂ—ಪ್ರಭುವಾದವನೂ | ನೃತಮಂ—ಮಾರ್ಗದರ್ಶಕನೂ | ಶೃಣ್ವಂತಂ—ನಮ್ಮ ಸ್ತುತಿಯನ್ನು ಕೇಳತಕ್ಕವನೂ | ಉಗ್ರಂ—ಶತ್ರುಗಳಿಗೆ ಭಯಂಕರನೂ | ಸಮತ್ಸು—ಸಂಗ್ರಾಮಗಳಲ್ಲಿ | ವೃತ್ರಾಣಿ—ಶತ್ರುಗಳನ್ನು | ಘ್ನಂತಂ—ನಾಶಮಾಡುವವನೂ | ಧನಾನಾಂ—ಶತ್ರುಧನಗಳನ್ನು | ಸಂಜಿತಂ—ಪೂರ್ಣವಾಗಿ ಜಯಿಸುವವನೂ ಆದ ಇಂದ್ರನನ್ನು | ಊತಯೇ—ರಕ್ಷಣಾರ್ಥವಾಗಿ | ಹುವೇಮ—ಕರೆಯುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ಅನ್ನಲಾಭಾರ್ಥವಾಗಿ ನಡೆಯುತಕ್ಕ ಈ ಯುದ್ಧದಲ್ಲಿ ಶಕ್ತಿಯನ್ನು ತೋರಿಸಿ ಸಹಾಯಕನಾಗಿರತಕ್ಕವನೂ, ಧನವಂತನೂ, ಐಶ್ವರ್ಯಕ್ಕೆಲ್ಲಾ ಪ್ರಭುವಾಗಿರತಕ್ಕವನೂ ಜಗತ್ತಿಗೆ ಅತ್ಯುತ್ತಮವಾದ ಮಾರ್ಗದರ್ಶಕನೂ, ನಮ್ಮ ಸ್ತುತಿಯನ್ನು ಆಲಿಸಿ ಕೇಳುವವನೂ ಶತ್ರುಗಳಿಗೆ ಭಯಂಕರನೂ ಸಂಗ್ರಾಮಗಳಲ್ಲಿ ಶತ್ರುಗಳನ್ನು ಹಿಂಸಿಸುವವನೂ, ಶತ್ರುಗಳ ಧನವನ್ನು ಪೂರ್ಣವಾಗಿ ಜಯಿಸುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ.

English Translation

We invoke for our protection the opulent Indra, distinguished in this combat, the leader in the food-bestowing (strife), hearing (our praises), terrible in battles, the destroyer of foes, the conqueror of wealth.



# ಮೂವತ್ತೊಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

ಅಥ ಚತುರ್ಥೇಽನುವಾಕೇ ಪಂಚದಶಸೂಕ್ತಾನಿ | ತತ್ರೇಂದ್ರಂ ಮತಿರಿತಿ ನವರ್ಚಂ ಪ್ರಥಮಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ | ಇಂದ್ರಂ ಮತಿರ್ನವೇತ್ಯನುಕ್ರಾಂತಂ | ಸೂಕ್ತವಿನಿಯೋಗೋ ಲಿಂಗಾದವಗಂತವ್ಯಃ ||

ಮೂರನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹದಿನೈದು ಸೂಕ್ತಗಳಿರುವವು. ಅವುಗಳಲ್ಲಿ ಇಂದ್ರಂ ಮತಿಃ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು

ಭಾವಾರ್ಥ

ಎಲೈ ಇಂದ್ರಾವರುಣರೇ, ನೀವಿಬ್ಬರೂ ಸಹ ಸ್ತೋತೃವಿಗೆ ಮಹತ್ತಾದುದೂ, ದೇವಸಂಬಂಧಿಯೂ ಸ್ವಾರಾಜ್ಯ ರೂಪವುಳ್ಳದ್ದೂ ಆದ ಶ್ರೇಯಸ್ಸನ್ನು ಸಾಧಿಸಿಕೊಡುತ್ತೀರಿ. ಮತ್ತು ನಮ್ಮನ್ನು ಸುತ್ತುವರೆದು ನಮ್ಮ ರಕ್ಷಕರಾಗಿರಿ. ಸಮಸ್ತವಾದ ದೇವತೆಗಳೂ ಸಹ ರಕ್ಷಕವಾದ ಭರವಸೆಯನ್ನು ಕೊಡುವ ವಾಕ್ಕುಳ್ಳವನೂ, ಸ್ಥಿರವಾದ ಸ್ಥಿತಿಯುಳ್ಳವನೂ ಆದ ಇಂದ್ರನ ನಾನಾವಿಧವಾದ ಕರ್ಮಗಳನ್ನು ನೋಡುತ್ತಾರೆ.

English Translation

You two secure the great felicity of the ancient (worshipper), that which is happiness in heaven : do you (therefore) be ever about us : all those who exercise illusion, contemplate the manifold exploits of the everlasting and blandly-speaking Indra.

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಂ ।

ಪದಪಾಠಃ

ಶುನಂ । ಹುವೇಮ । ಮಘऽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃऽತಮಂ । ವಾಜऽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ऽಸು । ಘ್ನಂತಂ । ವೃತ್ರಾಣಿ । ಸಂऽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ । ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋಽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮುಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾಭಾವಶ್ಛಾಂದಸಃ । ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ

ಕೃತೇ ಚ ಲಿಙ್ಗಂ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾಗತ್ಯೋಃ । ಅಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥

ಪ್ರತಿಪದಾರ್ಥ

ವಾಜಸಾತೌ—ಅನ್ನಾರ್ಥವಾಗಿ ನಡೆಯತಕ್ಕ । ಅಸ್ಮಿನ್ ಭರೇ—ಈ ಯುದ್ಧದಲ್ಲಿ । ಶುನಂ—ಉತ್ಸಾಹಭರಿತನೂ । ಮಘವಾನಂ—ಧನವಂತನೂ । ಇಂದ್ರಂ—ಪ್ರಭುವಾದವನೂ । ನೃತಮಂ—ಮಾರ್ಗದರ್ಶಕನೂ । ಶೃಣ್ವಂತಂ—ನಮ್ಮ ಸ್ತುತಿಯನ್ನು ಕೇಳತಕ್ಕವನೂ । ಉಗ್ರಂ—ಶತ್ರುಗಳಿಗೆ ಭಯಂಕರನೂ । ಸಮತ್ಸು—ಸಂಗ್ರಾಮಗಳಲ್ಲಿ । ವೃತ್ರಾಣಿ—ಶತ್ರುಗಳನ್ನು । ಘ್ನಂತಂ—ನಾಶಮಾಡುವವನೂ । ಧನಾನಾಂ—ಶತ್ರುಧನಗಳನ್ನು । ಸಂಜಿತಂ—ಪೂರ್ಣವಾಗಿ ಜಯಿಸುವವನೂ ಆದ ಇಂದ್ರನನ್ನು । ಊತಯೇ—ರಕ್ಷಣಾರ್ಥವಾಗಿ । ಹುವೇಮ—ಕರೆಯುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ಅನ್ನಲಾಭಾರ್ಥವಾಗಿ ನಡೆಯತಕ್ಕ ಈ ಯುದ್ಧದಲ್ಲಿ ಶಕ್ತಿಯನ್ನು ತೋರಿಸಿ ಸಹಾಯಕನಾಗಿರತಕ್ಕವನೂ, ಧನವಂತನೂ, ಐಶ್ವರ್ಯಕ್ಕೆಲ್ಲಾ ಪ್ರಭುವಾಗಿರತಕ್ಕವನೂ ಜಗತ್ತಿಗೆ ಅತ್ಯುತ್ತಮವಾದ ಮಾರ್ಗದರ್ಶಕನೂ, ನಮ್ಮ ಸ್ತುತಿಯನ್ನು ಆಲಿಸಿ ಕೇಳುವವನೂ ಶತ್ರುಗಳಿಗೆ ಭಯಂಕರನೂ ಸಂಗ್ರಾಮಗಳಲ್ಲಿ ಶತ್ರುಗಳನ್ನು ಹಿಂಸಿಸುವವನೂ, ಶತ್ರುಗಳ ಧನವನ್ನು ಪೂರ್ಣವಾಗಿ ಜಯಿಸುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ.

English Translation

We invoke for our protection the opulent Indra, distinguished in this combat, the leader in the food-bestowing (strife), hearing (our praises), terrible in battles, the destroyer of foes, the conqueror of wealth.



# ಮೂವತ್ತೊಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

ಅಥ ಚತುರ್ಥೇಽನುವಾಕೇ ಪಂಚದಶಸೂಕ್ತಾನಿ । ತತ್ರೇಂದ್ರಂ ಮತಿರಿತಿ ನವರ್ಚಂ ಪ್ರಥಮಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ । ಇಂದ್ರಂ ಮತಿರ್ನವೇತ್ಯನುಕ್ರಾಂತಂ । ಸೂಕ್ತವಿನಿಯೋಗೋ ಲಿಂಗಾದವಗಂತವ್ಯಃ ॥

ಮೂರನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹದಿನೈದು ಸೂಕ್ತಗಳಿರುವವು. ಅವುಗಳಲ್ಲಿ ಇಂದ್ರಂ ಮತಿಃ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು

ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಇಂದ್ರಂ ಮತಿರ್ನವ ಎಂದು ಹೇಳಿರುವುದು. ಸೂಕ್ತವಿನಿಯೋಗವು ಆಯಾಮಂತ್ರಗಳ ಅನುಸಾರವಾಗಿರುವುದು.

## ಸೂಕ್ತ—೩೯

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೩೯ ॥
ಅಷ್ಟಕ—೩ ॥ ಅಧ್ಯಾಯ—೨ ॥ ವರ್ಗ—೨೫, ೨೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

ಋಷಿಃ—ವಿಶ್ವಾಮಿತ್ರಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಇಂದ್ರಂ ಮತಿರ್ಹೃದ ಆ ವಚ್ಯಮಾನಾಚ್ಛಾ ಪತಿಂ ಸ್ತೋಮತಷ್ಟಾ ಜಿಗಾತಿ ।
ಯಾ ಜಾಗೃವಿರ್ವಿದಥೇ ಶಸ್ಯಮಾನೇಂದ್ರ ಯತ್ತೇ ಜಾಯತೇ ವಿದ್ಧಿ ತಸ್ಯ ॥ ೧ ॥

ಪದಪಾಠಃ

ಇಂದ್ರಂ । ಮತಿಃ । ಹೃದಃ । ಆ । ವಚ್ಯಮಾನಾ । ಅಚ್ಛ । ಪತಿಂ । ಸ್ತೋಮsತಷ್ಟಾ । ಜಿಗಾತಿ ।
ಯಾ । ಜಾಗೃವಿಃ । ವಿದಥೇ । ಶಸ್ಯಮಾನಾ । ಇಂದ್ರ । ಯತ್ । ತೇ । ಜಾಯತೇ । ವಿದ್ಧಿ । ತಸ್ಯ ॥ ೧ ॥

ಸಾಯಣಭಾಷ್ಯಂ

ವಿಶ್ವಾಮಿತ್ರಃ ಸ್ತೌತಿ । ಹೇ ಇಂದ್ರ ಹೃದೋ ಹೃದಯಾದ್ವಚ್ಯಮಾನೋಚ್ಯಮಾನಾ ಸ್ತೋಮತಷ್ಟಾ ಸ್ತೋಮಕಾರಿಭಿಃ ಕೃತಾ ಮತಿಃ ಸ್ತುತಿಃ ಪತಿಂ ಸರ್ವಸ್ಯ ಜಗತಃ ಸ್ವಾಮಿನಂ ತ್ವಾಮಚ್ಛಾಭಿಲಕ್ಷ್ಯಾ ಜಿಗಾತಿ । ಸಮಂತಾದ್ಗಚ್ಛತು । ಯಾ ಮದೀಯಾ ಸ್ತುತಿರ್ಜಾಗೃವಿಃ ಸ್ತುತ್ಯಸ್ಯ ತವ ಜಾಗರಣಂ ಕುರ್ವಾಣಾ ವಿದಥೇ ಯಜ್ಞೇ ಶಸ್ಯಮಾನಾ ಭವತಿ । ಹೇ ಇಂದ್ರ ತೇ ತ್ವದರ್ಥಂ ಯತ್ಸ್ತೋತ್ರಂ ಮತ್ತೋ ಜಾಯತೇ ತದ್ವಿದ್ಧಿ । ಜಾನೀಹಿ । ತಸ್ಯೇತಿ ದ್ವಿತೀಯಾರ್ಥೇ ಷಷ್ಠೀ ॥ ಮತಿಃ । ಮಂತ್ರೇ ವೃಷೇತ್ಯಾದಿನಾ ಕ್ತಿನ್ನುದಾತ್ತಃ । ಹೃದಃ । ಹೃದಯಶಬ್ದಸ್ಯ ಪದ್ದನ್ನೋಮಾಸಿತ್ಯಾದಿನಾ ಹೃದಾದೇಶಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ವಚ್ಯಮಾನಾ । ವಚ ಪರಿಭಾಷಣ ಇತ್ಯಸ್ಯ ಕರ್ಮಣಿ ಯಕ್ । ಸಂಪ್ರಸಾರಣಾಭಾವಶ್ಛಾಂದಸಃ । ಪ್ರತ್ಯಯಸ್ವರಃ । ಸ್ತೋಮತಷ್ಟಾ । ತಕ್ಷೂ ತ್ವಕ್ಷೂ ತನೂಕರಣ ಇತ್ಯಸ್ಯ ಕರ್ಮಣಿ ನಿಷ್ಠಾ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಜಿಗಾತಿ । ಗಾ ಸ್ತುತೌ ಛಂದಸೀತಿ ಜುಹೋತ್ಯಾದಿಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ನಿಘಾತಃ । ಜಾಯತೇ । ಜನೀ ಪ್ರಾದುರ್ಭಾವ ಇತ್ಯಸ್ಯ ಲಟಿ ರೂಪಂ । ಯದ್ವೃತ್ತಯೋಗಾದನಿಘಾತಃ । ವಿದ್ಧಿ । ವಿದ ಜ್ಞಾನ ಇತ್ಯಸ್ಯ ಲೋಟಿ ಹೇರ್ಹುರ್ಝಲ್ಭ್ಯೋ ಹೇರ್ಧಿರಿತಿ ಧ್ಯಾದೇಶಃ । ವಾಕ್ಯಭೇದಾದನಿಘಾತಃ ॥

ಪ್ರತಿಪದಾರ್ಥ

**ಹೃದಃ**—ಮನಃಪೂರ್ವಕವಾಗಿ | **ವಚ್ಯಮಾನಾ**—ಪಠಿಸಲ್ಪಟ್ಟುದೂ | **ಸ್ತೋಮತಷ್ಟಾ**—ಸ್ತೋತೃಗಳಿಂದ ನಿರ್ಮಿತವಾದುದೂ ಆದ | **ಮತಿಃ**—ಈ ಸ್ತುತಿಯು | **ಪತಿಂ**—ಜಗತ್ತಿಗೆಲ್ಲಾ ಸ್ವಾಮಿಯಾದ ನಿನ್ನನ್ನು | **ಅಚ್ಛ**—ಅಭಿಮುಖವಾಗಿಟ್ಟುಕೊಂಡು | **ಆ ಜಿಗಾತಿ**—ಬಂದು ಸೇರಲಿ | **ಯಾ**—ಯಾವ ಸ್ತುತಿಯು | **ಜಾಗೃವಿಃ**—ನಿನಗೆ ಪ್ರಬೋಧಕವಾಗಿ | **ವಿದಥೇ**—ಯಜ್ಞದಲ್ಲಿ | **ಶಸ್ಯಮಾನಾ**—ಪಠಿಸಲ್ಪಡುವುದೋ (ಆ ಸ್ತುತಿಯು ನಿನ್ನನ್ನು ಸೇರಿಕೊಳ್ಳಲಿ) | **ಇಂದ್ರ**—ಎಲೈ ಇಂದ್ರನೇ | **ತೇ**—ನಿನ್ನ ತೃಪ್ತಿಗಾಗಿ | **ಯತ್**—ಯಾವ ಸ್ತುತಿಯು | **ಜಾಯತೇ**—ನನ್ನಿಂದ ಉತ್ಪನ್ನವಾಗುತ್ತದೆಯೋ | **ತಸ್ಯ**—ಅದನ್ನು | **ವಿದ್ಧಿ**—ತಿಳಿ.

ಭಾವಾರ್ಥ

ಎಲೈ ಇಂದ್ರನೇ, ಮನಃಪೂರ್ವಕವಾಗಿ ಪಠಿಸಲ್ಪಡುವುದೂ, ಸ್ತೋತೃಗಳಿಂದ ನಿರ್ಮಿತವಾದುದೂ, ಯಜ್ಞಗೃಹದಲ್ಲಿ ನಿನಗೆ ಪ್ರಬೋಧಕವಾಗಿರುವಂತೆ ಪಠಿಸಲ್ಪಡುವುದೂ ಆದ ಸ್ತುತಿಯು ಜಗತ್ತಿಗೆಲ್ಲಾ ಸ್ವಾಮಿಯಾದ ನಿನ್ನನ್ನು ಬಂದು ಸೇರಿಕೊಳ್ಳಲಿ. ನಿನ್ನ ತೃಪ್ತಿಗಾಗಿ ನಾನು ಯಾವ ಸ್ತುತಿಯನ್ನು ನಿರ್ಮಿಸಿದ್ದೇನೆಯೋ ಅದನ್ನು ತಿಳಿ.

English Translation

The praise that is prompted by the heart, and is uttered by the reciters of sacred hymns, proceeds to the presence of the lord, and is his awakener when repeated at the sacrifice: be cognizant Indra, of this praise, which is born for you.

ಸಂಹಿತಾಪಾಠಃ

ದಿವಶ್ಚಿದಾ ಪೂರ್ವ್ಯಾ ಜಾಯಮಾನಾ ವಿ ಜಾಗೃವಿರ್ವಿದಥೇ ಶಸ್ಯಮಾನಾ ।
ಭದ್ರಾ ವಸ್ತ್ರಾಣ್ಯರ್ಜುನಾ ವಸಾನಾ ಸೇಯಮಸ್ಮೇ ಸನಜಾ ಪಿತ್ರ್ಯಾ ಧೀಃ ॥ ೨ ॥

ಪದಪಾಠಃ

ದಿವಃ । ಚಿತ್ । ಆ । ಪೂರ್ವ್ಯಾ । ಜಾಯಮಾನಾ । ವಿ ಜಾಗೃವಿಃ । ವಿದಥೇ । ಶಸ್ಯಮಾನಾ ।
ಭದ್ರಾ । ವಸ್ತ್ರಾಣಿ । ಅರ್ಜುನಾ । ವಸಾನಾ । ಸಾ । ಇಯಂ । ಅಸ್ಮೇ ಇತಿ । ಸನಜಾ । ಪಿತ್ರ್ಯಾ । ಧೀಃ ॥

ಸಾಯಣಭಾಷ್ಯಂ

ಹೇ ಇಂದ್ರ ದಿವಶ್ಚಿತ್ ದ್ಯೋತಮಾನಾತ್ಸೂರ್ಯಾದಪಿ ಪೂರ್ವ್ಯಾ ಪೂರ್ವಕಾಲೇ ಭವೋಷಃಕಾಲಸಂಬಂಧಿನ್ಯಾ ಜಾಯಮಾನಾ ಯಾ ಸ್ತುತಿಲಕ್ಷಣಾ ವಾಗ್ವಿಭವತಿ ಸೇಯಂ ವಾಗ್ವಿದಥೇ ಯಜ್ಞೇ ಶಸ್ಯಮಾನಾ ಜಾಗೃವಿಃ ಸ್ತುತ್ಯಸ್ಯ ತವ ಜಾಗರಣಂ ಕುರ್ವಾಣಾ ಭದ್ರಾ ಕಲ್ಯಾಣಾನ್ಯರ್ಜುನಾ ಶುಕ್ಲವರ್ಣಾನಿ ವಸ್ತ್ರಾಣಿ ಯೋಗ್ಯತಯಾ ತೇಜಾಂಸಿ ವಸಾನಾನ್ಯೇ ಅಸ್ಮಾಕಂ ಪಿತ್ರ್ಯಾ ಪಿತೃಕ್ರಮಾಗತಾ ಅತ ಏವ ಸನಜಾ

ಪುರಾತನೀ ಸತೀ ಧೀಸ್ತವ ಸ್ತುತಿರ್ಭವತಿ ॥ ದಿವಃ। ದಿವೇಃ ಕ್ವಿಪ್ | ಊಡಿದಮಿತಿ ವಿಭಕ್ತೇರುದಾತ್ತತ್ವಂ | ಅರ್ಜುನಾ ॥ ಅರ್ಜೇರ್ಣಿಲುಕ್ಚೇತ್ಯುನನ್ | ನಿತ್ಸ್ವರಃ | ಸನಜಾ | ಜನೇರನ್ಯೇಭ್ಯೋಽಪಿ ದೃಶ್ಯತ ಇತಿ ಡಃ| ಪ್ರತ್ಯಯಸ್ವರಃ | ಪಿತ್ರ್ಯಾ | ಪಿತೃಶಬ್ದಾತ್ತತ ಆಗತ ಇತ್ಯರ್ಥೇ ಪಿತುರ್ಯಚ್ಚೇತಿ ಯತ್ಪ್ರತ್ಯಯಃ। ರೀಙೃತ ಇತಿ ರೀಙಾದೇಶಃ | ಯಸ್ಯೇತಿ ಲೋಪಃ | ಯತೋಽನಾವ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ದಿವಶ್ಚಿತ್**—ಪ್ರಕಾಶಮಾನನಾದ ಸೂರ್ಯನಿಗಿಂತಲೂ। **ಪೂರ್ವ್ಯಾ**—ಪೂರ್ವಭಾವಿಯಾಗಿ ಉಷಃಕಾಲದಲ್ಲಿ | **ಆ ಜಾಯಮಾನಾ**- ನಿರ್ಮಿತವಾದುದೂ | **ಅಸ್ಮೇ**—ನಮ್ಮ। **ಪಿತ್ರ್ಯಾ**—ಪಿತೃಸಂಬಂಧವಾದುದೂ | **ಸನಜಾ**—ಪುರಾತನವಾದುದೂ ಆದ | **ಸೇಯಂ ಧೀಃ**—ಈ ಸ್ತುತಿಯು | **ವಿದಥೇ**—ಯಜ್ಞದಲ್ಲಿ | **ಶಸ್ಯಮಾನಾ**—ಪಠಿಸಲ್ಪಟ್ಟು | **ಜಾಗೃವಿಃ**—ನಿನಗೆ ಪ್ರಬೋಧಕವಾಗಿಯೂ (ಮತ್ತು) | **ಭದ್ರಾ**—ಕಲ್ಯಾಣಾತ್ಮಕವಾದುದೂ | **ಅರ್ಜುನಾ**—ಶುಕ್ಲವರ್ಣವುಳ್ಳ | **ವಸ್ತ್ರಾಣಿ**—ತೇಜೋರೂಪವಾದ ವಸ್ತ್ರವನ್ನು | **ವಸಾನಾ**—ಧರಿಸಿರುವುದೂ (ಆಗಿರುತ್ತದೆ).

ಭಾವಾರ್ಥ

ಎಲೈ ಇಂದ್ರನೇ, ಪ್ರಕಾಶಮಾನನಾದ ಸೂರ್ಯನಿಗಿಂತಲೂ ಪೂರ್ವಭಾವಿಯಾಗಿ ಉಷಃಕಾಲದಲ್ಲಿ ನಿರ್ಮಿತವಾದುದೂ, ನಮ್ಮ ಪಿತೃಸಂಬಂಧವಾದುದೂ ಪುರಾತನವಾದುದೂ ಆದ ಈ ಸ್ತುತಿಯು ಯಜ್ಞದಲ್ಲಿ ಪಠಿಸಲ್ಪಟ್ಟು ನಿನಗೆ ಪ್ರಬೋಧಕವಾಗಿಯೂ ಮತ್ತು ಕಲ್ಯಾಣಾತ್ಮಕವಾದುದೂ, ಶುಕ್ಲವರ್ಣವುಳ್ಳ ತೇಜೋರೂಪವಾದ ವಸ್ತ್ರವನ್ನು ಧರಿಸಿರುವುದೂ ಆಗಿರುತ್ತದೆ.

## English Translation

That praise which is begotten before (the dawn) of day is the awakener of Indra, when repeated at the (morning) sacrifice: auspicious and clothed in white raiment is this our ancient and paternal hymn.

ಸಂಹಿತಾಪಾಠಃ

ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ ಪತದಾ ಹ್ಯಸ್ಥಾತ್ ।
ವಪೂಂಷಿ ಜಾತಾ ಮಿಥುನಾ ಸಚೇತೇ ತಮೋಹನಾ ತಪುಷೋ ಬುಧ್ನ ಏತಾ ॥ ೩ ॥

ಪದಪಾಠಃ

ಯಮಾ | ಚಿತ್ | ಅತ್ರ | ಯಮಽಸೂಃ | ಅಸೂತ | ಜಿಹ್ವಾಯಾಃ | ಅಗ್ರಂ | ಪತತ್ | ಆ | ಹಿ | ಅಸ್ಥಾತ್ |

ವಪೂಂಷಿ | ಜಾತಾ | ಮಿಥುನಾ | ಸಚೇತೇ ಇತಿ | ತಮಃಽಹನಾ | ತಪುಷಃ | ಬುಧ್ನೇ | ಆಽಇತಾ ॥ ೩ ॥

ಸಾಯಣಭಾಷ್ಯಂ

ಪ್ರಸಂಗಾದುಷಃಕಾಲಂ ಪ್ರಶಂಸತಿ । ಯಮಸೂಃ । ಯಮೌ ಯಮಲೌ ಸೂತ ಇತಿ ಯಮಸೂರುಷೋಽಭಿಮಾನಿನೀ ದೇವತಾ । ಸಾ ಯಮಾ ಯಮಲಾವಶ್ವಿನಾವತ್ರೋಽಷಃಕಾಲೇಽಸೂತ । ಅಶ್ವಿನೋಽಸ್ತತ್ರ ಶಸ್ಯಮಾನತ್ವಾತ್ತಾವಶ್ವಿನೌ ಸ್ತೋತುಂ ಮಮ ಜಿಹ್ವಾಯಾ ಅಗ್ರಂ ಪತತ್ಚಂಚಲಮಾಸ್ಥಾದ್ಧಿ । ತಿಷ್ಠತಿ ಖಲು । ತಮೋಹನಾ ತಮಸೋ ಹಂತಾರೌ ತಪುಷಃ ॥ ತಪತ್ಯಸ್ಮಿನ್ಸೂರ್ಯ ಇತಿ ತಪುರ್ದಿವಸಃ । ತಸ್ಯ ಬುಧ್ನೇ ಮೂಲ ಏತಾ ಏತಾವಾಗತೌ ಮಿಥುನಾ ಪರಸ್ಪರಂ ಸಂಗತೌ ತಾವಶ್ವಿನಾ ಜಾತೋತ್ಪನ್ನಾವಿ ವಪೂಂಷಿ । ಉಪ್ಯಂತೇ ಸಿಧ್ಯಂತ ಇತಿ ವಪೂಂಷ್ಯುಷಃಕಾಲೇ ಕ್ರಿಯಮಾಣಾನಿ ಶಸ್ತ್ರಾದೀನಿ ಕರ್ಮಾಣಿ । ಸಚೇತೇ । ಸಂಗಚ್ಛತಃ ॥ ಯಮಸೂಃ । ಷೂಙ್ ಪ್ರಾಣಿಗರ್ಭವಿಮೋಚನ ಇತ್ಯಸ್ಯ ಕ್ವಿಪ್ । ಕೃದುತ್ತರಪದಸ್ವರಃ । ಅಸೂತ । ತಸ್ಯೈವ ಧಾತೋರ್ಲಙ್ಯದಾದಿತ್ವಾಚ್ಛಪೋ ಲುಕ್ । ನಿಘಾತಃ । ಪತತ್ । ಪತ್ಲೃ ಗತೌ । ಶತುರ್ಲಸಾರ್ವಧಾತುಕಸ್ವರೇ ಧಾತುಸ್ವರಃ । ಅಸ್ಥಾತ್ । ಷ್ಠಾ ಗತಿನಿವೃತ್ತೌ । ಲುಙಿ ರೂಪಂ । ಹಿಯೋಗಾದನಿಘಾತಃ । ವಪೂಂಷಿ । ಡುವಪ್ ಬೀಜಸಂತಾನೇ । ಅರ್ತಿಪೃವಪಿಯಜಿತನಿಧನಿತಪಿಭ್ಯೋ ನಿದಿತ್ಯುಸಿಪ್ರತ್ಯಯಃ । ನಿಚ್ಚೇತ್ಯುಕ್ತತ್ವಾದಾದ್ಯುದಾತ್ತಃ । ಸಚೇತೇ । ಷಚ । ಸಮವಾಯ ಇತ್ಯಸ್ಯ ಲಟಿ ರೂಪಂ । ತಪುಷಃ । ತಪ ಸಂತಾಪೇ । ಅರ್ತಿಪೃವಪೀತ್ಯಾದಿನಾ ಉಸಿಃ । ಬುಧ್ನೇ । ಬಂಧ ಬಂಧನೇ । ಬಂಧೇರ್ಬ್ರಧಿಬುಧೀ ಚ । ಉ. ೩ ೫ । ಇತಿ ನಕ್ಪ್ರತ್ಯಯಃ । ಬ್ರಧಿಬುಧೀ ಏತಾವಾದೇಶೌ ಧಾತೋಃ । ಪ್ರತ್ಯಯಸ್ವರಃ । ಏತಾ । ಇಣ್ ಗತಾವಿತ್ಯಸ್ಯ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಸ್ವರಃ ॥

ಪ್ರತಿಪದಾರ್ಥ

**ಯಮಸೂಃ**— ಯುಗ್ಮರೂಪರಾದ ಪುತ್ರರನ್ನು ಹಡೆದ ಉಷೋದೇವತೆಯು । **ಯಮಾ**— ಯಮಳರಾದ ಅಶ್ವಿನೀದೇವತೆಗಳನ್ನು । **ಅತ್ರ**— ಈ ಉಷಃಕಾಲದಲ್ಲಿ । **ಅಸೂತ**— ಹಡೆದಳು (ಇದೇ ಅಶ್ವಿನೀದೇವತೆಗಳನ್ನು ಸ್ತುತಿಸಲು) । **ಜಿಹ್ವಾಯಾಃ**— ನನ್ನ ಜಿಹ್ವೆಯ । **ಅಗ್ರಂ**— ಅಗ್ರಭಾಗವು । **ಪತತ್**— ತವಕಪಡುತ್ತಾ । **ಆ ಅಸ್ಥಾತ್ ಹಿ**— ಸಿದ್ಧವಾಗಿ ಕಾದೇ ಇದೆ । **ತಮೋಹನಾ**— ತಮಸ್ಸನ್ನು ನಾಶಮಾಡತಕ್ಕ ಇವರು । **ತಪುಷಃ**— ದಿವಸದ । **ಬುಧ್ನೇ**— ಮೂಲಭಾಗವಾದ ಉಷಃಕಾಲದಲ್ಲಿಯೇ । **ಏತಾ**— ಬಂದು । **ಮಿಥುನಾ**— ಒಟ್ಟಿಗೆ ಸೇರಿಕೊಂಡು । **ಜಾತಾ**— ನಿರ್ಮಿತಗಳಾದ । **ವಪೂಂಷಿ**— ಕರ್ಮಗಳೊಡನೆ । **ಸಚೇತೇ**— ಐಕ್ಯರಾಗುತ್ತಾರೆ.

ಭಾವಾರ್ಥ

ಯುಗ್ಮರೂಪರಾದ ಪುತ್ರರನ್ನು ಹಡೆದ ಉಷೋದೇವತೆಯು ಯಮಳರಾದ ಅಶ್ವಿನೀದೇವತೆಗಳನ್ನು ಈ ಉಷಃಕಾಲದಲ್ಲಿ ಹಡೆದಳು. ಇದೇ ಅಶ್ವಿನೀದೇವತೆಗಳನ್ನು ಸ್ತುತಿಸಲು ನನ್ನ ಜಿಹ್ವೆಯ ಅಗ್ರಭಾಗವು ತವಕಪಡುತ್ತಾ ಕಾದಿದೆ. ತಮೋನಾಶಕರಾದ ಇವರು ದಿವಸದ ಮೂಲಭಾಗವಾದ ಉಷಃಕಾಲದಲ್ಲಿಯೇ ಬಂದು ಒಟ್ಟಿಗೆ ಸೇರಿಕೊಂಡು ಅಲ್ಲಿ ನಿರ್ಮಿತಗಳಾದ ಕರ್ಮಗಳೊಡನೆ ಐಕ್ಯರಾಗುತ್ತಾರೆ.

## English Translation.

The parent of twins (the dawn), has brought ſorth the twin (Aswins) on this occasion, (in the praise of whom) the tip of my tongue remains tremulous: they two, the dispersers of darkness, combine, assuming bodies as a pair (of twins) at the origin of the day.

ಸಂಹಿತಾಪಾಠಃ

ನಕಿರೇಷಾಂ ನಿಂದಿತಾ ಮರ್ತ್ಯೇಷು ಯೇ ಅಸ್ಮಾಕಂ ಪಿತರೋ ಗೋಷು ಯೋಧಾಃ।

ಇಂದ್ರ ಏಷಾಂ ದೃಂಹಿತಾ ಮಾಹಿನಾವಾನುದ್ಗೋತ್ರಾಣಿ ಸಸೃಜೇ ದಂಸನಾವಾನ್ ॥

ಪದಪಾಠಃ

ನಕಿಃ । ಏಷಾಂ । ನಿಂದಿತಾ । ಮರ್ತ್ಯೇಷು । ಯೇ । ಅಸ್ಮಾಕಂ । ಪಿತರಃ । ಗೋಷು । ಯೋಧಾಃ ।

ಇಂದ್ರಃ । ಏಷಾಂ । ದೃಂಹಿತಾ । ಮಾಹಿನಽವಾನ್ । ಉತ್ । ಗೋತ್ರಾಣಿ । ಸಸೃಜೇ । ದಂಸನಾಽವಾನ್ ॥

ಸಾಯಣಭಾಷ್ಯಂ

ಹೇ ಇಂದ್ರ ಸತ್ರೇ ಪ್ರವೃತ್ತಾನಾಮಸ್ಮಾಕಂ ಯೇ ಪಿತರೋಽಂಗಿರಸೋ ಗೋಷು ಪಣಿಭಿರಪಹೃತೇಷು ತನ್ನಿಮಿತ್ತಂ ಯೋಧಾ ಯೋದ್ಧಾರೋ ವರ್ತಂತೇ ತೇಷಾಮೇಷಾಂ ಮರ್ತ್ಯೇಷು ನಿಂದಿತಾ ದೂಷಕೋ ನಕಿರ್ನ ಕಶ್ಚಿದಸ್ತಿ । ಕುತ ಇತ್ಯತ ಆಹ । ಮಾಹಿನಾವಾನ್ಮಹಿಮೋಪೇತೋ ದಂಸನಾವಾನ್ವೃತ್ರಹನನಾದಿಕರ್ಮವಾನಿಂದ್ರ ಏಷಾಮಂಗಿರಸಾಂ ದೃಂಹಿತಾನಿ ಸಮೃದ್ಧಾನಿ ಗೋತ್ರಾಣಿ ಗವಾಂ ವೃಂದಾನ್ಯುತ್ಸಸೃಜೇ। ತೇಭ್ಯೋಽಂಗಿರೋಭ್ಯೋ ದದೌ॥ ನಿಂದಿತಾ। ಣಿದಿ ಕುತ್ಸಾಯಾಮಿತ್ಯಸ್ಯ ತೃಚಿ ರೂಪಂ । ಮರ್ತ್ಯೇಷು । ವಸ್ವಾದಿತ್ವಾತ್ಸ್ವಾರ್ಥಿಕೋ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಯೋಧಾಃ । ಯುಧ ಸಂಪ್ರಹಾರ ಇತ್ಯಸ್ಯ ಪಚಾದ್ಯಚಿ ರೂಪಂ । ದೃಂಹಿತಾ । ದೃಹ ದೃಹಿ ವೃದ್ಧಾವಿತ್ಯಸ್ಯ ನಿಷ್ಠಾಯಾಂ ರೂಪಂ । ಮಹಿನಾವಾನ್ । ಮಹೇರಿನಣ್ಣ್ಚೇತೀನಣ್ಪ್ರತ್ಯಯಃ । ತದಸ್ಯಾಸ್ತೀತಿ ಮತುಪ್ । ಮಾಹಿನಾವಾನಿತಿ ತಸ್ಯ ಸಂಜ್ಞಾ । ಮತೌ ಬಹ್ವಚೋಽನಜಿರಾದೀನಾಮಿತಿ ಸಂಹಿತಾಯಾಂ ದೀರ್ಘಃ । ಗೋತ್ರಾಣಿ । ಗವಾಂ ಸಮೂಹ ಇತ್ಯರ್ಥೇ ಖಲಗೋರಥಾದಿತ್ಯನುವೃತ್ತಾವಿನಿತ್ರಕಟ್ಯಚಶ್ಚೇತಿ ಗೋಶಬ್ದಾತ್ತ್ರಪ್ರತ್ಯಯಃ । ಪ್ರತ್ಯಯಸ್ವರಃ । ಸಸೃಜೇ । ಸೃಜ ವಿಸರ್ಗ ಇತ್ಯಸ್ಯ ಲಿಟಿ ರೂಪಂ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ಅಸ್ಮಾಕಂ**— ನಮಗೆ । **ಯೇ**—ಯಾರು । **ಪಿತರಃ**—ಪಿತೃಪಿತಾಮಹರೂಪರೂ । **ಗೋಷು**—(ಪಣಿಗಳಿಂದ ಅಪಹೃತವಾದ) ಗೋವುಗಳ ನಿಮಿತ್ತವಾಗಿ । **ಯೋಧಾಃ**—ಯುದ್ಧಮಾಡುವವರೂ ಆಗಿದ್ದಾರೋ । **ಏಷಾಂ**—ಅಂತಹ ಅಂಗಿರಸ್ಸುಗಳ । **ನಿಂದಿತಾಃ**—ದೂಷಕರು । **ಮರ್ತ್ಯೇಷು**—ಮಾನವರ ಗುಂಪಿನಲ್ಲಿ । **ನ ಕಿಃ**—ಯಾರೂ ಇಲ್ಲ । **ಮಾಹಿನಾವಾನ್**—ಮಹಿಮೆಯಿಂದ ಕೂಡಿದವನೂ । **ದಂಸನಾವಾನ್**—ಕರ್ಮಯುಕ್ತನೂ ಆದ । **ಇಂದ್ರಃ**—ಇಂದ್ರನು । **ಏಷಾಂ**—ಈ ಅಂಗಿರಸ್ಸುಗಳಿಗೆ । **ದೃಂಹಿತಾ**—ಸಮೃದ್ಧಗಳಾದ । **ಗೋತ್ರಾಣಿ**—ಗೋವುಗಳ ಸಮೂಹಗಳನ್ನು । **ಉತ್ ಸಸೃಜೆ**—ಬಿಡಿಸಿಕೊಡುತ್ತಾನೆ.

ಭಾವಾರ್ಥ

ನಮಗೆ ಯಾರು ಪಿತೃಪಿತಾಮಹರೂಪರೂ, ಪಣಿಗಳಿಂದ ಅಪಹೃತವಾದ ಗೋವುಗಳ ನಿಮಿತ್ತವಾಗಿ ಯುದ್ಧ ಮಾಡುವವರೂ ಆಗಿದ್ದಾರೋ ಅಂತಹ ಅಂಗಿರಸ್ಸುಗಳ ದೂಷಕರು ಮಾನವರ ಗುಂಪಿನಲ್ಲಿ ಯಾರೂ ಇಲ್ಲ. ಮಹಿಮೆ

ಯಿಂದ ಕೂಡಿದವನೂ ಕರ್ಮಯುಕ್ತನೂ ಆದ ಇಂದ್ರನು ಈ ಅಂಗಿರಸ್ಸುಗಳಿಗೆ ಸಮೃದ್ಧಗಳಾದ ಗೋವುಗಳ ಸಮೂಹಗಳನ್ನು ಬಿಡಿಸಿಕೊಡುತ್ತಾನೆ.

## English Translation

There are no revilers amongst men of those who were our progenitors and combatants for (the recovery of) the cattle; for the mighty Indra, the achiever of great deeds, liberated for them the numerous herds.

### ಸಂಹಿತಾಪಾಠಃ

ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।
ಸತ್ಯಂ ತದಿಂದ್ರೋ ದಶಭಿರ್ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಂ ॥ ೫ ॥

### ಪದಪಾಠಃ

ಸಖಾ । ಹ । ಯತ್ರ । ಸಖಿಽಭಿಃ । ನವಽಗ್ವೈಃ । ಅಭಿಽಜ್ಞು । ಆ । ಸತ್ವಽಭಿಃ । ಗಾಃ । ಅನುಽಗ್ಮನ್ ।
ಸತ್ಯಂ । ತತ್ । ಇಂದ್ರಃ । ದಶಽಭಿಃ । ದಶಽಗ್ವೈಃ । ಸೂರ್ಯಂ । ವಿವೇದ । ತಮಸಿ । ಕ್ಷಿಯಂತಂ ॥ ೫ ॥

### ಸಾಯಣಭಾಷ್ಯಂ

ದಶಮೇಽಹನಿ ನಿಷ್ಕೇವಲ್ಯೇ ನಿವಿದ್ಧಾನೀಯಸ್ಯ ಪುರಸ್ತಾತ್ಸಖಾ ಹ ಯತ್ರೇತ್ಯೇಷಾ । ಸೂತ್ರಿತಂ ಚ । ಸಖಾ ಹ ಯತ್ರ ಸಖಿಭಿರ್ನವಗ್ವೈರಿತಿ ನಿವಿದ್ಧಾನೀಯಯೋರಾದ್ಯೇ । ಆ. ೯-೩ । ಇತಿ ॥

ಸಖಿಭಿಃ ಸಮಾನಖ್ಯಾನೈಃ । ಸತ್ವಭಿರಿಂದ್ರಮಭಿತಃ ಸೀದದ್ಭಿರ್ನವಗ್ವೈಃ । ಮೇಧಾತಿಥಿಪ್ರಭೃತಯೋಽಂಗಿರಸಃ ಕೇಚಿನ್ನವ ಮಾಸಾನ್ಸತ್ರಮನುಷ್ಠಾಯ ಫಲಂ ಲೇಭಿರೇ ಕೇಚಿದ್ದಶ ಮಾಸಾನನುಷ್ಠಾಯೇತಿ। ತತ್ರ ಯೇ ನವ ಮಾಸಾನ್ ಸತ್ರಮನುಷ್ಠಾಯ ಲಬ್ಧಫಲಾ ಉದತಿಷ್ಠನ್ ತೇ ನವಗ್ವಾಃ । ತೈಃ ಸತ್ವಭಿರಂಗಿರೋಭಿಃ ಸಖಾ ಸಮಾನಖ್ಯಾನ ಇಂದ್ರೋ ಯತ್ರ ಯಸ್ಮಿನ್ಬಿಲೇ ಪಣಿಭಿರ್ನಿರುದ್ಧಾ ಗಾ ಅಭಿಲಕ್ಷ್ಯಾಭಿಜ್ಞು ಅಭಿಗತಜಾನುಕಂ ಯಥಾ ಭವತಿ ತಥಾನುಗ್ಮನ್ ಅನುಗಚ್ಛನ್ನಿಂದ್ರಸ್ತತ್ರತ್ರ ಬಿಲೇ ದಶಗ್ವೈಃ । ಯೇ ದಶ ಮಾಸಾನ್ಸತ್ರಮನುಷ್ಠಾಯ ಲಬ್ಧಫಲಾ ಉದತಿಷ್ಠನ್ ತೇ ದಶಗ್ವಾಃ।ದಶಭಿರ್ದಶಸಂಖ್ಯಾಕೈರಂಗಿರೋಭಿಃ ಸಹಿತಃ ಸನ್ ತಮಸಿ ಬಿಲವರ್ತಿನ್ಯಂಧಕಾರೇ ಕ್ಷಿಯಂತಂ ನಿವಸಂತಂ ಸತ್ಯಂ ಯಥಾರ್ಥಪ್ರಕಾಶಂ ಸೂರ್ಯಂ ವಿವೇದ । ಲೇಭೇ । ತತೋ ಲಬ್ಧಪ್ರಕಾಶಃ ಸ ಇಂದ್ರಸ್ತಾ ಗಾ ಆನೀಯಾಂಗಿರೋಭ್ಯಃ ಪ್ರಾದಾದಿತಿ ಭಾವಃ ॥ ಸಖಾ । ಖ್ಯಾ ಪ್ರಕಥನೇ । ಸಮಾನೇ ಖ್ಯಃ ಸ ಚೋದಾತ್ತ ಇತೀಣ್ಪ್ರತ್ಯಯಃ । ಡಿಚ್ಚ । ಸಮಾನಸ್ಯ ಛಂದಸೀತಿ ಸಮಾನಸ್ಯ ಸಭಾವಃ । ಉದಾತ್ತ ಇತ್ಯುಕ್ತೇನ ಸಾಮರ್ಥ್ಯಾದುಪಪದಸ್ಯೇತಿ ಗಮ್ಯತೇ । ಆದ್ಯುದಾತ್ತಃ । ನವಗ್ವೈಃ। ಗಮೇರೌಣಾದಿಕೋ ಡ್ವಪ್ರತ್ಯಯಃ। ಬಹುವ್ರೀಹೌ ಪೂರ್ವಪದಸ್ವರಃ । ಅಭಿಜ್ಞು । ಪ್ರಸಂಭ್ಯಾಂ ಜಾನುನೋರ್ಜ್ಞುರಿತಿ ವಿಧೀಯಮಾನೋ ಜ್ಞುರಭೇರುತ್ತರಸ್ಯ ವ್ಯತ್ಯಯೇನ ಭವತಿ । ಸತ್ವಭಿಃ । ಷದ್ಲೃ.

ವಿಶರಣಗತ್ಯವಸಾದನೇಷ್ವಿತ್ಯಸ್ಮಾತ್ ಈರಸದ್ಯೋಸ್ತುಟ್ ಚೇತಿ ಕ್ವನಿಪ್ಪ್ರತ್ಯಯಃ । ತುಡಾಗಮಃ । ನಿತ್ತ್ವಾದಾದ್ಯುದಾತ್ತಃ । ಅನುಗ್ಮನ್ । ಗಮೇಃ ಶತರಿ ಬಹುಲಂ ಛಂದಸೀತಿ ಶಪೋ ಲುಕಿ ಕೃತೇ ಗಮಹನೇತ್ಯಾದಿನೋಪಧಾಲೋಪಃ । ಪ್ರಾದಿಸಮಾಸಃ । ಕೃತ್ಸ್ವರಃ । ವಿವೇದ । ವಿದ ಜ್ಞಾನ ಇತ್ಯಸ್ಮಾಲ್ಲಿಟಿ ಣಲಿ ರೂಪಂ । ಕ್ಷಿಯಂತಂ । ಕ್ಷಿ ನಿವಾಸಗತ್ಯೋರಿತ್ಯಸ್ಯ ಶತರಿ ರೂಪಂ ॥ ॥ ೫ ॥

ಪ್ರತಿಪದಾರ್ಥ

**ಸಖಿಭಿಃ**—ಮಿತ್ರರೂ । **ಸತ್ವಭಿಃ**—(ಇಂದ್ರನ) ಸುತ್ತಲೂ ಸೇರಿಕೊಂಡಿರುವವರೂ । **ನವಗ್ವೈಃ**—ನವಮಾಸಸತ್ರವನ್ನಾಚರಿಸಿ ಫಲವನ್ನು ಪಡೆದವರೂ ಆದ ಅಂಗಿರಸ್ಸುಗಳೊಂದಿಗೆ । **ಸಖಾ**—ಸೇರಿಕೊಂಡ । **ಇಂದ್ರಃ**—ಇಂದ್ರನು । **ಯತ್ರ**—ಯಾವ ಬಿಲದಲ್ಲಿ । **ಗಾಃ**—ಗೋವುಗಳ ಅಭಿಮುಖವಾಗಿ ಹೋಗಿ । **ಅಭಿಜ್ಞು**—ಅವುಗಳು ಕಾಲಿನಮೇಲೆ ಬಗ್ಗಿ ನಡೆಯುವಂತೆ ಮಾಡಿ । **ಅನುಗ್ಮನ್**—ಅವುಗಳನ್ನು ಹಿಂಬಾಲಿಸಿ । **ತತ್**—ಅದೇ ಬಿಲದಲ್ಲಿ । **ದಶಭಿಃ ದಶಗ್ವೈಃ**—ದಶಮಾಸದ ಸತ್ರವನ್ನಾಚರಿಸಿದ ಹತ್ತುಜನ ಅಂಗಿರಸ್ಸುಗಳೊಂದಿಗೆ ಕೂಡಿ । **ತಮಸಿ**—ಅಂಧಕಾರದಲ್ಲಿ । **ಕ್ಷಿಯಂತಂ**—ವಾಸಿಸುತ್ತಿದ್ದ । **ಸತ್ಯಂ**—ಸತ್ಯಪ್ರಕಾಶರೂಪನಾದ । **ಸೂರ್ಯಂ**—ಸೂರ್ಯನನ್ನು । **ವಿವೇದ**—ಪಡೆದನು.

ಭಾವಾರ್ಥ

ಮಿತ್ರರೂ, ಇಂದ್ರನ ಸುತ್ತಲೂ ಸೇರಿಕೊಂಡಿರುವವರೂ, ನವಮಾಸದ ಸತ್ರವನ್ನಾಚರಿಸಿ ಫಲವನ್ನು ಪಡೆದವರೂ ಆದ ಅಂಗಿರಸ್ಸುಗಳೊಂದಿಗೆ ಸೇರಿಕೊಂಡ ಇಂದ್ರನು ಯಾವ ಬಿಲದಲ್ಲಿ ಗೋವುಗಳ ಅಭಿಮುಖವಾಗಿ ಹೋಗಿ ಅವುಗಳು ಕಾಲಿನಮೇಲೆ ಬಗ್ಗಿ ನಡೆಯುವಂತೆ ಮಾಡಿ ಅವುಗಳನ್ನು ಹಿಂಬಾಲಿಸಿ ಅದೇ ಬಿಲದಲ್ಲಿ ದಶಮಾಸದ ಸತ್ರವನ್ನಾಚರಿಸಿ ಫಲವನ್ನು ಪಡೆದ ಹತ್ತುಜನ ಅಂಗಿರಸ್ಸುಗಳೊಡಗೂಡಿ ಅಂಧಕಾರದಲ್ಲಿ ವಾಸಿಸುತ್ತಿದ್ದ ಸತ್ಯಪ್ರಕಾಶರೂಪನಾದ ಸೂರ್ಯನನ್ನು ಪಡೆದನು.

## English Translation

A friend, accompanied by the faithful friends who had celebrated the nine months' rite, and tracking the cows upon their knees, and in like manner accompanied by those ten who had accomplished the ten months' rite, Indra made manifest the true (light of the sun dwelling in (the) darkness (of the cave).

ಸಂಹಿತಾಪಾಠಃ

ಇಂದ್ರೋ ಮಧು ಸಂಭೃತಮುಸ್ರಿಯಾಯಾಂ ಪದ್ವದ್ವಿವೇದ ಶಫವನ್ನಮೇ ಗೋಃ ।
ಗುಹಾ ಹಿತಂ ಗುಹ್ಯಂ ಗೂಳ್ಹಮಪ್ಸು ಹಸ್ತೇ ದಧೇ ದಕ್ಷಿಣೇ ದಕ್ಷಿಣಾವಾನ್ ॥ ೬ ॥

ಪದಪಾಠಃ

ಇಂದ್ರಃ । ಮಧು । ಸಂಽಭೃತಂ । ಉಸ್ರಿಯಾಯಾಂ । ಪತ್ಽವತ್ । ವಿವೇದ । ಶಫಽವತ್ । ನಮೇ । ಗೋಃ ।
ಗುಹಾ । ಹಿತಂ । ಗುಹ್ಯಂ । ಗೂಳ್ಹಂ । ಅಪ್ಽಸು । ಹಸ್ತೇ । ದಧೇ । ದಕ್ಷಿಣೇ । ದಕ್ಷಿಣಽವಾನ್ ॥ ೬ ॥

ಸಾಯಣಭಾಷ್ಯಂ

ಇಂದ್ರ ಉಸ್ರಿಯಾಯಾಂ ಕ್ಷೀರದಧ್ಯಾದಿಕ್ರಮೇಣೋತ್ಸ್ರಾವಿಣ್ಯಾಂ ಭೋಗವತ್ಯಾಂ ಗವಿ ಸಂಭೃತಂ ಸಂಪಾದಿತಂ ಮಧು ಕ್ಷೀರಾದಿ ವಿವೇದ । ಅಜ್ಞಾಸೀತ್ । ತತಸ್ತದರ್ಥಂ ಪದ್ವತ್ಪಾದಯುಕ್ತಂ ಶಫವತ್ಖುರೋಪೇತಂ ಗೋಧನಂ ವಿವೇದ । ಲೇಭೇ । ಕಥಂ ಲಬ್ಧವಾನಿತಿ ತದುಚ್ಯತೇ । ನಮೇ ಗೋಃ । ಗೋರಿತಿ ದ್ವಿತೀಯಾರ್ಥೇ ಷಷ್ಠೀ । ಪಣಿನಾಮಕೈರಸುರೈರಪಹೃತಾಂ ಗಾಂ ನಮೇ । ಆನೀತಾಮಕರೋತ್ । ತಥಾ ದಕ್ಷಿಣಾವಾನೌದಾರ್ಯವಾನ್ಸಮರ್ಥಃ ಸ ಇಂದ್ರೋ ಗುಹಾ ಗುಹಾಯಾಂ ಹಿತಂ ಗುಹ್ಯಂ ಪ್ರಚ್ಛನ್ನಂ ಅತ ಏವಾಪ್ಸ್ವಂತರಿಕ್ಷೇ ಗೂಢಂ ಗೂಢಚಾರಿಣಂ ಮಾಯಿನಮಸುರಂ ದಕ್ಷಿಣೇ ಹಸ್ತೇ ದಧೇ । ದಧಾರ । ಅಗ್ರಹೀದಿತ್ಯರ್ಥಃ ॥ ದ್ವಿತೀಯಾಷ್ಟಕೇ । ೨-೬-೩ । ಶ್ರುಧೀ ಹವಮಿತ್ಯಸ್ಮಿನ್ಸರ್ಗೇ ಗುಹಾ ಹಿತಮಿತ್ಯೇತತ್ಸವ್ಯಾಗಭ್ಯಧಾಯಿ । ಉಸ್ರಿಯಾಯಾಂ ಪ್ರಕ್ರಿಯಾ ಸಮ್ಯಕ್ ಪೂರ್ವಮೇವಾವಾದಿ ॥ ವಿವೇದ । ವಿದ ಜ್ಞಾನೇ ವಿದ್ಲೃ ಲಾಭೇ । ಏತಯೋರ್ಲಿಟಿ ರೂಪಂ । ಶಫವತ್ । ಶಫೋಽಸ್ಯಾಸ್ತೀತಿ ಮತುಪ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ನಮೇ । ಣಮು ಪ್ರಹ್ವತ್ವೇ ಇತ್ಯಸ್ಯ ಲಿಟಿ ರೂಪಂ । ದ್ವಿರ್ವಚನಸ್ಯ ಛಂದಸಿ ವಿಕಲ್ಪಿತತ್ವಾದತ್ರ ದ್ವಿರ್ವಚನಾಭಾವಃ । ವಾಕ್ಯಭೇದಾದನಿಘಾತಃ । ಗುಹ್ಯಂ । ಗುಹೂ ಸಂವರಣ ಇತ್ಯಸ್ಮಾಚ್ಛಂಸಿಗುಹಿದುಹಿಭ್ಯೋ ವೇತಿವಕ್ತವ್ಯಮಿತಿ ಕ್ಯಪ್ । ಕಿತ್ತ್ವಾದಗುಣಃ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ದಧೇ । ದಧಾತೇರ್ಲಿಟಿ ರೂಪಂ । ದಕ್ಷಿಣಾವಾನ್ । ದಕ್ಷ ವೃದ್ಧೌ । ದ್ರುದಕ್ಷಿಭ್ಯಾಮಿನನ್ನಿತೀನನ್ಪ್ರತ್ಯಯಃ । ತದಸ್ಯಾಸ್ತೀತಿ ಮತುಪ್ । ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘಃ । ಸಿತ್ಸ್ವರಃ ॥

ಪ್ರತಿಪದಾರ್ಥ

**ಇಂದ್ರಃ**—ಇಂದ್ರನು । **ಉಸ್ರಿಯಾಯಾಂ**—ಭೋಗಸಾಧನವನ್ನು ಒದಗಿಸತಕ್ಕ ಗೋವಿನಲ್ಲಿ । **ಸಂಭೃತಂ**—ಸಂಪಾದಿತವಾದ । **ಮಧು**—ಕ್ಷೀರಾದಿ ಮಧುರದ್ರವ್ಯವನ್ನು । **ವಿವೇದ**—ತಿಳಿದುಕೊಂಡನು । **ಪದ್ವತ್**—ಪಾದಯುಕ್ತವಾದುದೂ । **ಶಫವತ್**—ಗೊರಸಿನಿಂದ ಕೂಡಿದುದೂ ಆದ ಗೋಸಂಪತ್ತನ್ನು ಪಡೆದನು । **ಗೋಃ**—ಅದೇ ಗೋವುಗಳನ್ನು । **ನಮೇ**—ಕರೆತಂದನು । **ದಕ್ಷಿಣಾವಾನ್**—ಸಮರ್ಥನಾದ ಇಂದ್ರನು । **ಗುಹಾ**—ಗುಹೆಯಲ್ಲಿ । **ಗುಹ್ಯಂ ಹಿತಂ**—ಗುಪ್ತವಾಗಿರುವವನೂ । **ಅಪ್ಸು**—ಅಂತರಿಕ್ಷದಲ್ಲಿ । **ಗೂಹ್ಯಂ**—ಗುಪ್ತವಾಗಿ ಸಂಚರಿಸುತ್ತಿದ್ದವನೂ ಆದ ಅಸುರನನ್ನು । **ದಕ್ಷಿಣೇ ಹಸ್ತೇ**—ಬಲಗೈಯಲ್ಲಿ । **ದಧೇ**—ಹಿಡಿದುಕೊಂಡನು.

ಭಾವಾರ್ಥ

ಇಂದ್ರನು ಭೋಗಸಾಧನವಾದ ಕ್ಷೀರಾದಿಗಳನ್ನು ಒದಗಿಸತಕ್ಕ ಗೋವಿನಲ್ಲಿ ಸಂಪಾದಿತವಾದ ಕ್ಷೀರಾದಿಮಧುರದ್ರವ್ಯವನ್ನು ತಿಳಿದುಕೊಂಡನು. ಪಾದಯುಕ್ತವಾದುದೂ, ಗೊರಸಿನಿಂದ ಕೂಡಿದುದೂ ಆದ ಗೋಸಂಪತ್ತನ್ನು ಪಡೆದನು.

ಅದೇಗೋವುಗಳನ್ನು ಅಸುರರಿಂದ ಬಿಡಿಸಿಕೊಂಡು ಬಂದನು. ಸಮರ್ಥನಾದ ಇಂದ್ರನು ಗುಹೆಯಲ್ಲಿ ಗುಪ್ತವಾಗಿರುವವನೂ, ಅಂತರಿಕ್ಷದಲ್ಲಿ ಗುಪ್ತವಾಗಿ ಸಂಚರಿಸುತ್ತಿದ್ದವನೂ ಆದ ಅಸುರನನ್ನು ಬಲಗೈಯಲ್ಲಿ ಹಿಡಿದುಕೊಂಡನು.

### English Translation

Indra discovered the sweet milk secreted in the milch-cow, and thereupon, brought forth (from their concealment) the herd (of cattle) having feet and hoofs; munificent (in gifts), he held in his right hand that which had been hidden in the cavern, which was concealed in the waters.

ಸಂಹಿತಾಪಾಠಃ

ಜ್ಯೋತಿರ್ವೃಣೀತ ತಮಸೋ ವಿಜಾನನ್ನಾರೇ ಸ್ಯಾಮ ದುರಿತಾದಭೀಕೇ ।
ಇಮಾ ಗಿರಃ ಸೋಮಪಾಃ ಸೋಮವೃದ್ಧ ಜುಷಸ್ವೇಂದ್ರ ಪುರುತಮಸ್ಯ ಕಾರೋಃ ॥

ಪದಪಾಠಃ

ಜ್ಯೋತಿಃ । ವೃಣೀತ । ತಮಸಃ । ವಿಽಜಾನನ್ । ಆರೇ । ಸ್ಯಾಮ । ದುಃಽಇತಾತ್ । ಅಭೀಕೇ ।
ಇಮಾಃ । ಗಿರಃ । ಸೋಮಽಪಾಃ । ಸೋಮಽವೃದ್ಧ । ಜುಷಸ್ವ । ಇಂದ್ರ । ಪುರುಽತಮಸ್ಯ । ಕಾರೋಃ ॥

ಸಾಯಣಭಾಷ್ಯಂ

ತಮಸೋ ರಾತ್ರೇಃ ಸಕಾಶಾದ್ವಿಜಾನನ್ವಿಶೇಷೇಣ ಜಾನನ್ ಪ್ರಾದುರ್ಭವನ್ಸೂರ್ಯಾತ್ಮಕ ಇಂದ್ರೋ ಜ್ಯೋತಿರ್ವೃಣೀತ । ಜಗದ್ವ್ಯವಹಾರನಿರ್ವಾಹಕಂ ಪ್ರಕಾಶಂ ಸಮಭಕ್ತ । ಯದ್ವಾ ತಮಸಸ್ತಮೋರೂಪಾದ್ವೃತ್ರಾದೇರ್ವಿಜಾನನ್ ಪ್ರಾದುರ್ಭವನ್ । ವೃತ್ರಂ ಹತ್ವಾ ಪ್ರಕಾಶಮವೃಣೀತ । ವಯಂ ದುರಿತಾತ್ಪಾಪಾದಾರೇ ದೂರೇ ಪಾಪವರ್ಜಿತಾಃ ಸಂತೋಽಭೀಕೇ ಭಯರಹಿತೇ ಸ್ಥಾನೇ ಸ್ಯಾಮ । ಭವೇಮ । ಸೋಮಪಾಃ ಸೋಮಸ್ಯ ಪಾತರತ ಏವ ಸೋಮವೃದ್ಧ ಸೋಮಪಾನೇಷು ವೃದ್ಧ ಹೇ ಇಂದ್ರ ಪುರುತಮಸ್ಯ । ಪುರೂನ್ಬಹೂಞ್ಶತ್ರೂನ್ ತಾಮಯತಿ ಗ್ಲಾಪಯತೀತಿ ಪುರುತಮಃ । ತಾದೃಶಸ್ಯ ಕಾರೋಃ ಸ್ತೋತ್ರಂ ಕುರ್ವಾಣಸ್ಯ ಋತ್ವಿಜ ಇಮಾಃ ಸ್ತುತಿಲಕ್ಷಣಾ ಗಿರೋ ವಾಚೋ ಜುಷಸ್ವ । ಸೇವಸ್ವ ॥ ವೃಣೀತ । ವೃಙ್ ಸಂಭಕ್ತಾವಿತ್ಯಸ್ಯ ಲಙಿ ರೂಪಂ । ವಿಜಾನನ್ । ಜ್ಞಾ ಅವಬೋಧನೇ । ವಿಶೇಷೇಣ ಜ್ಞಾನಂ ಪ್ರಕಾಶಃ । ಪ್ರತ್ಯಯಸ್ವರಃ । ಅಭೀಕೇ । ನ ವಿದ್ಯತೇ ಭೀರ್ಯಸ್ಮಿನ್ । ತತಃ ಶೇಷಾದ್ವಿಭಾಷಾ । ಪಾ. ೫-೪-೧೫೪ । ಇತಿ ಕಪ್ರತ್ಯಯಃ । ನಞ್ಸುಭ್ಯಾಮಿತ್ಯಂತೋದಾತ್ತತ್ವೇ ಪ್ರಾಪ್ತೇ ಕಪಿ ಪೂರ್ವಂ । ಪಾ. ೬-೨-೧೭೩ । ಇತಿ ಪೂರ್ವಸ್ಯಾಂತೋದಾತ್ತತ್ವಂ । ಪುರುತಮಸ್ಯ । ತಮು ಗ್ಲಾನ ಇತ್ಯಸ್ಮಾಣ್ಣ್ಯಂತಾತ್ಪಚಾದ್ಯಚಿ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ವಿಜಾನನ್**—(ತಮಸ್ಸಿನ ಸ್ವರೂಪವನ್ನು) ತಿಳಿದ ಇಂದ್ರನು | **ತಮಸಃ**—ಅಂಧಕಾರದಿಂದ | **ಜ್ಯೋತಿಃ**—ಪ್ರಕಾಶವನ್ನು | **ವೃಣೀತ**—ಬೇರೆಮಾಡಿದನು (ನಾವೂ ಸಹ) | **ದುರಿತಾತ್**—ಪಾಪದಿಂದ | **ಆರೇ**—ದೂರವಾಗಿದ್ದು | **ಅಭೀಕೇ**—ಭಯರಹಿತವಾದ ಸ್ಥಾನದಲ್ಲಿ | **ಸ್ಯಾಮ**—ಇರೋಣ | **ಸೋಮಪಾಃ**—ಸೋಮರಸದ ಪಾನ ಮಾಡುವವನೂ | **ಸೋಮವೃದ್ಧಃ**—ಸೋಮಪಾನದಿಂದಲೇ ವೃದ್ಧಿಯನ್ನು ಹೊಂದುವವನೂ ಆದ | **ಇಂದ್ರ**—ಎಲೈ ಇಂದ್ರನೇ | **ಪುರುತಮಸ್ಯ**—ಅನೇಕ ಶತ್ರುಗಳನ್ನು ನಾಶಮಾಡುವ ನಿನ್ನನ್ನು | **ಕಾರೋಃ**—ಪ್ರಶಂಸಿಸುವ ಸ್ತುತಿ ಕರ್ತನ | **ಇಮಾಃ ಗಿರಃ**—ಸ್ತುತಿರೂಪವಾದ ಈ ವಾಕ್ಕುಗಳನ್ನು | **ಜುಷಸ್ವ**—ಸೇವಿಸು.

ಭಾವಾರ್ಥ

ಅಂಧಕಾರದ ಸ್ವರೂಪವನ್ನು ತಿಳಿದ ಇಂದ್ರನು ಅಂಧಕಾರದಿಂದ ಪ್ರಕಾಶವನ್ನು ಬೇರೆಮಾಡಿದನು. ನಾವೂ ಸಹ ಪಾಪದಿಂದ ದೂರವಾಗಿದ್ದು ಭಯರಹಿತವಾದ ಸ್ಥಾನದಲ್ಲಿ ಇರೋಣ. ಸೋಮರಸದ ಪಾನಮಾಡುವವನೂ, ಸೋಮಪಾನದಿಂದಲೇ ವೃದ್ಧಿಯನ್ನು ಹೊಂದುವವನೂ ಆದ ಎಲೈ ಇಂದ್ರನೇ, ಅನೇಕ ಶತ್ರುಗಳನ್ನು ನಾಶಮಾಡುವ ನಿನ್ನನ್ನು ಪ್ರಶಂಸಿಸುವ ಸ್ತುತಿಕರ್ತನ ಸ್ತುತಿರೂಪವಾದ ಈ ವಾಕ್ಕುಗಳನ್ನು ಸೇವಿಸು.

English Translation

The discriminating (Indra)has seperated the light from the darkness; may we, removed afar from evil be ever in security; Indra, drinker of the Soma Juice, you are nourished by the beverage, be pleased with these praises of your worshipper who is the discomfiter of his foes.

ಸಂಹಿತಾಪಾಠಃ

ಜ್ಯೋತಿರ್ಯಜ್ಞಾಯ ರೋದಸೀ ಅನು ಷ್ಯಾದಾರೇ ಸ್ಯಾಮ ದುರಿತಸ್ಯ ಭೂರೇಃ ।
ಭೂರಿ ಚಿದ್ಧಿ ತುಜತೋ ಮರ್ತ್ಯಸ್ಯ ಸುಪಾರಾಸೋ ವಸವೋ ಬರ್ಹಣಾವತ್ ॥ ೮ ॥

ಪದಪಾಠಃ

ಜ್ಯೋತಿಃ । ಯಜ್ಞಾಯ । ರೋದಸೀ ಇತಿ । ಅನು । ಸ್ಯಾತ್ । ಆರೇ । ಸ್ಯಾಮ । ದುಃಽಇತಸ್ಯ । ಭೂರೇಃ ।
ಭೂರಿ । ಚಿತ್ । ಹಿ । ತುಜತಃ । ಮರ್ತ್ಯಸ್ಯ । ಸುಽಪಾರಾಸಃ । ವಸವಃ । ಬರ್ಹಣಾಽವತ್ ॥

ಸಾಯಣಭಾಷ್ಯಂ

ಹೇ ಇಂದ್ರ ಜ್ಯೋತಿರ್ಜಗತ್ಪ್ರಕಾಶಕಃ ಸೂರ್ಯೋ ಯಜ್ಞಾಯಾಗ್ನಿಹೋತ್ರಾದಿಕರ್ಮಕರಣಾಯ ರೋದಸೀ ದ್ಯಾವಾಪೃಥಿವ್ಯಾವನು ಷ್ಯಾತ್ । ಅನುಭವತು । ಪ್ರಕಾಶಯತು। ವಯಂ ಭೂರೇಃ ಪ್ರಭೂತಸ್ಯ

ದುರಿತಸ್ಯ ಪಾಪಸ್ಯಾರೇ ದೂರೇ ಸ್ಯಾಮ | ಭವೇಮ | ಹೇ ವಸವಃ ಸರ್ವಸ್ಯ ವಾಸಯಿತಾರ ಇಂದ್ರಾದಯಃ ಸುಪಾರಾಸಃ ಸುಪಾರಾಃ ಶೋಭನಪಾರಾಃ ಸ್ತುತ್ಯಾಭಿಮುಖೀಕರ್ತುಂ ಶಕ್ಯಾ ಯೂಯಂ ಭೂರಿ ಚಿದತಿಪ್ರಭೂತಂ ಬರ್ಹಣಾವತ್ಸಮೃದ್ಧಿಯುಕ್ತಂ ಧನಂ ತುಜತೋ ಭೂರಿಪ್ರದಸ್ಯ ಮರ್ತ್ಯಸ್ಯ ಪ್ರಯಚ್ಛಥ | ಅತ್ರ ಯೋಗ್ಯಕ್ರಿಯಾಧ್ಯಾಹಾರಃ || ಸ್ಯಾತ್ | ಅಸ್ತೇರ್ಲಿಙಿ ರೂಪಂ | ಸಂಹಿತಾಯಾಮನೋರುತ್ತರಸ್ಯಾಸ್ತೇರುಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್‌ಪರ ಇತಿ ಷತ್ವಂ | ನಿಘಾತಃ | ತುಜತಃ | ತುಜಿ ಪಿಜಿ ಲಜಿ ಹಿಂಸಾದಾನನಿಕೇತನೇಷು | ಶತುರನುಮ ಇತಿ ವಿಭಕ್ತೇರುದಾತ್ತತ್ವಂ | ಬರ್ಹಣಾವತ್ | ವೃಹಿ ವೃದ್ಧಾವಿತ್ಯಸ್ಯ ಭಾವ ಔಣಾದಿಕೋ ಯುಪ್ರತ್ಯಯಃ | ಪ್ರತ್ಯಯಸ್ವರಃ ||

ಪ್ರತಿಪದಾರ್ಥ

**ಜ್ಯೋತಿಃ**—ಜಗತ್ಪ್ರಕಾಶಕನಾದ ಸೂರ್ಯನು | **ಯಜ್ಞಾಯ**—ಯಜ್ಞಕರ್ಮಗಳ ಸಹಾಯಕ್ಕಾಗಿ | **ರೋದಸೀ**—ದ್ಯಾವಾಪೃಥಿವಿಗಳನ್ನು | **ಅನು ಷ್ಯಾತ್**—ಪ್ರಕಾಶಪಡಿಸಲಿ (ನಾವೂ ಸಹ) | **ಭೂರೇಃ**—ಅಧಿಕವಾದ | **ದುರಿತಸ್ಯ**—ಪಾಪಕ್ಕೆ | **ಆರೇ**—ದೂರವರ್ತಿಗಳಾಗಿ | **ಸ್ಯಾಮ**—ಇರುವಂತಾಗಲಿ | **ವಸವಃ**—ಎಲೈ ಇಂದ್ರಾದಿಗಳೇ | **ಸುಪಾರಾಸಃ**—ಸುಖದ ಅಂತವನ್ನು ಮುಟ್ಟಿಸತಕ್ಕ ನೀವು | **ಭೂರಿ ಚಿತ್**—ಅತ್ಯಧಿಕವಾದುದೂ | **ಬರ್ಹಣಾವತ್**—ಸಮೃದ್ಧಿಯಿಂದ ಕೂಡಿದುದೂ ಆದ ಧನವನ್ನು | **ತುಜತಃ**—ನಿಮಗೆ ಉದಾರವಾಗಿ ಹವಿಸ್ಸನ್ನು ಅರ್ಪಿಸುವ | **ಮರ್ತ್ಯಸ್ಯ**—ಮಾನವನಿಗೆ (ಕೊಡಿರಿ).

ಭಾವಾರ್ಥ

ಜಗತ್ಪ್ರಕಾಶಕನಾದ ಸೂರ್ಯನು ಯಜ್ಞಕರ್ಮಗಳ ಸಹಾಯಕ್ಕಾಗಿ ದ್ಯಾವಾಪೃಥಿವಿಗಳನ್ನು ಪ್ರಕಾಶಪಡಿಸಲಿ. ನಾವೂ ಸಹ ಅಧಿಕವಾದ ಪಾಪದಿಂದ ದೂರವರ್ತಿಗಳಾಗಿರೋಣ. ಎಲೈ ಇಂದ್ರಾದಿಗಳೇ, ಸುಖಕಾರಿಗಳಾದ ನೀವು ಅತ್ಯಧಿಕವಾದುದೂ ಸಮೃದ್ಧಿಯಿಂದ ಕೂಡಿದುದೂ ಆದ ಧನವನ್ನು ನಿಮಗೆ ಉದಾರವಾಗಿ ಹವಿಸ್ಸನ್ನು ಅರ್ಪಿಸುವ ಮಾನವನಿಗೆ ಕೊಡಿರಿ.[1]

## English Translation

May light be spreed throughout heaven and earth for (the promotion of the) sacrifice; may we be far removed from exceeding ill; Vasus, who are to be rendered present (by pious praise), bestow increasing affluence upon the man who is liberal of gifts.

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ |
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಂ |

ಪದಪಾಠಃ

ಶುನಂ । ಹುವೇಮ । ಮಘಽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃಽತಮಂ । ವಾಜಽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ಽಸು । ಘ್ನಂತಂ । ವೃತ್ರಾಣಿ । ಸಂಽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ । ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋಽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮ್ಯಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾಭಾವಶ್ಛಾಂದಸಃ । ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚ ಲಿಙಿ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘುತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥

ಪ್ರತಿಪದಾರ್ಥ

**ವಾಜಸಾತೌ**—ಅನ್ನಾರ್ಥವಾಗಿ ನಡೆಯತಕ್ಕ । **ಅಸ್ಮಿನ್ ಭರೇ**—ಈ ಯುದ್ಧದಲ್ಲಿ । **ಶುನಂ**—ಉತ್ಸಾಹಭರಿತನೂ । **ಮಘವಾನಂ**—ಧನವಂತನೂ । **ಇಂದ್ರಂ**—ಪ್ರಭುವಾದವನೂ । **ನೃತಮಂ**—ಮಾರ್ಗದರ್ಶಕನೂ । **ಶೃಣ್ವಂತಂ**—ನಮ್ಮ ಸ್ತುತಿಯನ್ನು ಕೇಳತಕ್ಕವನೂ । **ಉಗ್ರಂ**—ಶತ್ರುಗಳಿಗೆ ಭಯಂಕರನೂ । **ಸಮತ್ಸು**—ಸಂಗ್ರಾಮಗಳಲ್ಲಿ । **ವೃತ್ರಾಣಿ**—ಶತ್ರುಗಳನ್ನು । **ಘ್ನಂತಂ**—ನಾಶಮಾಡುವವನೂ । **ಧನಾನಾಂ**—ಶತ್ರುಧನಗಳನ್ನು । **ಸಂಜಿತಂ**—ಪೂರ್ಣವಾಗಿ ಜಯಿಸುವವನೂ ಆದ ಇಂದ್ರನನ್ನು । **ಊತಯೇ**—ರಕ್ಷಣಾರ್ಥವಾಗಿ । **ಹುವೇಮ**—ಕರೆಯುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ಅನ್ನಲಾಭಾರ್ಥವಾಗಿ ನಡೆಯತಕ್ಕ ಈ ಯುದ್ಧದಲ್ಲಿ ಶಕ್ತಿಯನ್ನು ತೋರಿಸಿ ಸಹಾಯಕನಾಗಿರತಕ್ಕವನೂ, ಧನವಂತನೂ, ಐಶ್ವರ್ಯಕ್ಕೆಲ್ಲಾ ಪ್ರಭುವಾಗಿರತಕ್ಕವನೂ ಜಗತ್ತಿಗೆ ಅತ್ಯುತ್ತಮವಾದ ಮಾರ್ಗದರ್ಶ

ಕನೂ, ನಮ್ಮ ಸ್ತುತಿಯನ್ನು ಆಲಿಸಿ ಕೇಳುವವನೂ ಶತ್ರುಗಳಿಗೆ ಭಯಂಕರನೂ ಯುದ್ಧಗಳಲ್ಲಿ ಶತ್ರುಗಳನ್ನು ಹಿಂಸಿಸುವವನೂ, ಶತ್ರುಗಳ ಧನವನ್ನು ಪೂರ್ಣವಾಗಿ ಜಯಿಸುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ.

## English Translation

We invoke for our protection the opulent Indra, distinguished in this combat, the leader in the food-bestowing (strife), hearing (our praises), terrible in battles, the destroyer of foes, the conqueror of wealth.

### ವಿಶೇಷವಿಷಯಗಳು

ಈ ಋಕ್ಕು ಋಗ್ವೇದದ ಈ ಮಂಡಲದ ೩೦, ೩೧, ೩೨, ೩೪, ೩೫, ೩೬, ೩೮, ೩೯, ೪೩, ೪೮, ೪೯, ೫೦ ನೇ ಸೂಕ್ತಗಳಲ್ಲಿಯೂ, ೧೦ ನೇ ಮಂಡಲದ ೮೯, ೧೦೪ ನೇ ಸೂಕ್ತಗಳಲ್ಲಿಯೂ ಕೊನೆಯ ಋಕ್ಕಾಗಿ ಪುನಃಪುನಃ ಪಠಿತವಾಗಿದೆ. ಮತ್ತು ಸಾಮವೇದ. ೩೨೯ ; ಅಥರ್ವವೇದ. ೨೦-೧೧-೧೧ ; ತೈ. ಬ್ರಾ. ೨-೪-೪-೩ ಈ ಸ್ಥಳಗಳಲ್ಲಿಯೂ ಪಠಿತವಾಗಿದೆ.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲ-
ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ತೃತೀಯಾಷ್ಟಕೇ
ದ್ವಿತೀಯೋಽಧ್ಯಾಯಃ ಸಮಾಪ್ತಃ

॥ ಓಂ ತತ್ಸತ್ ॥

ಇಲ್ಲಿಗೆ ಸಾಯಣಭಾಷ್ಯಸಹಿತವೂ ಕರ್ಣಾಟಕಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯ
ಮೂರನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥







ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ ಮೈಸೂರು.